# ಸ್ಕಂದ ಮಹಾಪುರಾಣ

ಭಾಗ-೩

## ಬ್ರಹ್ಮ ಖಂಡ, ಬ್ರಹ್ಮೋತ್ತರ ಖಂಡ, ಕಾಶೀಖಂಡ , ಪ್ರಭಾಸಖಂಡ





ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಸ್ಕಂದ ಮಹಾಪುರಾಣ

## ಭಾಗ – ೩

* ಬ್ರಹ್ಮ ಖಂಡ, ಬ್ರಹ್ಮೋತ್ತರ ಖಂಡ

ಕಾಶೀಖಂಡ ಪೂರ್ವಾರ್ಧ-ಉತ್ತರಾರ್ಧ, ಪ್ರಭಾಸ ಖಂಡ

(* ಬ್ರಹ್ಮ ಖಂಡ ಭಾಗ - ೨ ರಿಂದ ಮುಂದುವರೆದಿದೆ)

ಅನುವಾದ-ಲೇಖಕರು ಮಹಾಮಹೋಪಾಧ್ಯಾಯ

**ಪಂ. ಪಂಢರೀನಾಥಾಚಾರ್ಯ ಗಲಗಲಿ** ರು

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ

ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತ

–: ಪ್ರಕಾಶಕರು :–

**ಖೋಡೇ ಫೌಂಡೇಶನ್**

ಗ್ರಂಥ ಪ್ರಕಟಣಾ ವಿಭಾಗ

ನಂ. 9, ಶೇಷಾದ್ರಿರಸ್ತೆ, ಅಗ್ನಿಶಾಮಕದ ಎದುರು,

ಗಾಂಧಿನಗರ, ಬೆಂಗಳೂರು - 560 009

ದೂರವಾಣಿ : 22956573, 22956505

ಫ್ಯಾಕ್ಸ್ : 0091-80-22956570, 22956508

SKANDA MAHAAPURAANA Part-3 Bhagavan Sri Vedavyasa Maharshi, edited and translated in to Kannada by Rajyaprashasti, Rashtraprashasti, Ramakrishna Dhalmia Lakshmi Shreevani Alankarana Prashasti Puraskrutha Panditha Sri Pandarinathacharya Galagali, Vishveshwara Nagara, Shanthi Colony, Hubli-580032 Ph : (0836) 2250250

First Edition : 1967

Second Edition : 2007

No. of Pages : x + 591

No. of Copies : 1,000



Price : Rs. 162 = 00

Printed at : SRI VENKATESHWARA PRINTERS
No. 3, Yellappa Road, Susheela Road Cross
Chickmavalli, Lalbagh Crumbigal Road Cross
BANGALORE-560 004
Phone : 26573001

# ಪ್ರಸ್ತಾವನೆ

ಭಾರತೀಯಧರ್ಮ, ಸಂಸ್ಕೃತಿ ಹಾಗೂ ಇತಿಹಾಸ ದೃಷ್ಟಿಯಿಂದ ಪುರಾಣಗಳಿಗೆ ವಿಶಿಷ್ಟಸ್ಥಾನವಿದೆ. ವೇದ, ಸ್ಮೃತಿಗಳ ಅನಂತರ ಪುರಾಣಗಳೇ ಭಾರತೀಯರ ಆಚಾರ, ವಿಚಾರ, ಸಂಪ್ರದಾಯಗಳಿಗೆ ಆಧಾರಭೂತವಾದ ಪ್ರಮಾಣಗ್ರಂಥಗಳಾಗಿವೆ. **''ಇತಿಹಾಸ-ಪುರಾಣಾಭ್ಯಾಂ ವೇದ ಸಮುಪ ಬೃಹಂಯೇತ್''** ಎಂದು ಹೇಳಿದ ಪ್ರಕಾರ ವೈದಿಕದರ್ಶನಕ್ಕೆ ನಿದರ್ಶನಗಳನ್ನು ಪುರಾಣಗಳು ಪ್ರದರ್ಶನ ಮಾಡುತ್ತವೆ. ವೇದಾರ್ಥಗಳು ವೇದ್ಯವಾಗುವುದು ಪುರಾಣಗಳಿಂದಲೇ.

ಮಹಾತ್ಮರಾದ ಭಗವಾನ್ ವೇದವ್ಯಾಸರು ರಚಿಸಿದ ಹದಿನೆಂಟು ಮಹಾಪುರಾಣಗಳಲ್ಲಿ ಅತ್ಯಂತ ದೊಡ್ಡದು ಸ್ಕಂದಮಹಾಪುರಾಣ, ಪರಮೇಶ್ವರನ ವರಕುಮಾರನಾದ ಕುಮಾರ ಸ್ವಾಮಿ ಅರ್ಥಾತ್ ಸ್ಕಂದದೇವನ ಚರಿತ್ರೆಯನ್ನು ನಿರೂಪಿಸ ಹೊರಟ ಈ ಮಹಾಮಹತ್ತರವಾದ ಪುರಾಣದಲ್ಲಿ ಶಿವ-ವಿಷ್ಣು ಮುಂತಾದ ಬೇರೆ ಎಲ್ಲ ದೇವಧಿದೇವತೆಗಳ ಚಾರುಚರಿತ್ರೆಗಳೂ ಚೇತೋಹಾರಿಯಾದ ಶೈಲಿಯಲ್ಲಿ ರಸಾಳವಾಣಿ ಯಿಂದ ಚಿತ್ರಿತವಾಗಿವೆ. ಅನೇಕಾನೇಕ ರಾಜವಂಶ, ಮುನಿಕುಲ, ಶ್ರೀಸಾಮಾನ್ಯರ ಬದುಕಿನ ಬಗೆಬಗೆಯ ಬವಣೆ, ಸೈರಣೆ, ಉತ್ಥಾನ-ಪತನ, ಪುರೋಗತಿ-ಪರಾಗತಿ, ಸುಖ-ದುಃಖ, ಕಷ್ಟ-ನಷ್ಟ, ಸಂಸ್ಕೃತಿ-ವಿಕೃತಿ, ಸಂತಾಪ-ಸಂತಸ ಮುಂತಾದ ಅವಸ್ಥಾಂತಗಳನ್ನು ಸುರುಳಿ ಬಿಚ್ಚಿ ತೋರಿಸುತ್ತ ಈ ಪುರಾಣವು ಮನುಕುಲವು ನಡೆದುಬಂದ ದಾರಿಯ ಗೆರೆ ಗುರುತುಗಳನ್ನು ನಿಚ್ಚಳವಾಗಿ ಕಾಣಿಸುತ್ತದೆ. ದೇವ, ಮುನಿ, ಋಷಿ, ರಾಜರಂತೆ ದೀನ- ದಲಿತರ ಯಾತನಾಮಯವಾದ ದಾರುಣ ಜೀವನದ ಹೋರಾಟ ಅಪಾಯ ಉಪಾಯ ಉದ್ಧಾರ ಉತ್ಕರ್ಷಗಳ ಚಿತ್ರಮಾಲೆಗಳನ್ನು ಕಣ್ಣೆದುರು ಬಿಡಿಸಿ ಎಲ್ಲರೂ ಕೈವಲ್ಯದತ್ತ ಅನಿರ್ಬಂಧವಾಗಿ ಸಾಗಿ ಸಿದ್ಧಿಪಡೆಯುವ ಸತ್ಯದ ಸತ್ಪಥ ಮುಕ್ತಿಯಮಂದಿರ ಮುಕ್ತದ್ವಾರವಾಗಿದೆ. ಸ್ಕಂದಮಹಾಪುರಾಣ ಎಲ್ಲಾ ಜಾತಿಜನಾಂಗದವರಿಗೂ ಎಂದು ಉದ್ಘೋಷಿಸುತ್ತದೆ.

ಈ ಪುರಾಣದ ಮುಖ್ಯ ಪ್ರತಿಪಾದ್ಯ, ದೇವತೆ ಸ್ಕಂದ ಹಾಗೂ ಅವನ ತಂದೆ ಪರಶಿವ. ಮಹಾಭಾರತದಂತೆ ಒಂದು ಲಕ್ಷ ಶ್ಲೋಕಾತ್ಮಕವಾದ ಈ ಬೃಹದ್ಗ್ರಂಥದಲ್ಲಿ ಆಧ್ಯಾತ್ಮ, ನೀತಿ-ನಿಯಮ, ದೈವವಾದ, ಪೌರುಷವಾದ, ಪ್ರಯತ್ನ-ಪ್ರಾಧಾನ್ಯ, ವಿಧಿವಿಲಾಸ, ದುರಾಚಾರದ ದುಷ್ಪರಿಣಾಮ, ಸದಾಚಾರದ ಮಧುರಫಲ, ಸತ್ಯ ಅಹಿಂಸೆ ಮುಂತಾದವುಗಳು ಒಳ್ಳೊಳ್ಳೆ ದೃಷ್ಟಾಂತ ಹಾಗೂ ನೀತಿ ವಚನಗಳ ಮೂಲಕ ಜನಮನದಲ್ಲಿ ಬಿಂಬಿಸುವಂತೆ ನಿರೂಪಿಸಲ್ಪಟ್ಟಿದೆ.

ಸ್ಕಂದಮಹಾಪುರಾಣ ಭಾಗ-2ರ ಪ್ರಸ್ತಾವನೆಯಲ್ಲಿ ಕೆಲವು ಖಂಡಗಳ ವಿಷಯಸಾರವನ್ನು ಸಂಕ್ಷಿಪ್ತವಾಗಿ ಮುದ್ರಿಸಿದೆ.

ಮಹಾಮಹೋಪಾಧ್ಯಾಯ
**ಶ್ರೀ ಪಂಢರೀನಾಥಾಚಾರ್ಯ ಗಲಗಲಿ**
ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ-580 032

22-4-2007
ಹುಬ್ಬಳ್ಳಿ

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**

**ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥**

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಶ್ರೀಹರಿಖೋಡೆಯವರು. ಶ್ರೀ ವೇದವ್ಯಾಸಮಹರ್ಷಿಗಳಿಂದ ರಚಿತವಾದ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಸುಂದರ ಮುದ್ರಣ ಮತ್ತು ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದಾರ ಪರ್ವತವನ್ನು ಹೊತ್ತಂತೆ, ಶ್ರೀಹರಿಖೋಡೆಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನೆ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಒದಗಿಸಿಕೊಡುತ್ತಿದ್ದಾರೆ.

ಈ ಸ್ಕಂದಮಹಾಪುರಾಣ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮಾಡಿರುವ ಶ್ರೀ ವೆಂಕಟೇಶ್ವರ ಪ್ರಿಂಟರ್ಸ್, ನಂ.3, ಯಲ್ಲಪ್ಪರಸ್ತೆ, ಚಿಕ್ಕಮಾವಳ್ಳಿ (ಸುಶೀಲರಸ್ತೆ ಕ್ರಾಸ್) ಬೆಂಗಳೂರು-560 004 ಮಾಲೀಕರಾದ ಮುದ್ರಣಪ್ರಶಸ್ತಿ ವಿಜೇತ ಕೆ. ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ ಹಾಗೂ ಶ್ರೀಮತಿ ಮತ್ತು ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮೂವತ್ತೇಳು ವರ್ಷದ ಅನುಭವ ಇಲ್ಲಿ ವ್ಯಕ್ತವಾಗಿದೆ. ಹಾಗೂ ಈಗಿನ ಕಂಪ್ಯೂಟರ್ (ಡಿ.ಟಿ.ಪಿ.) ಅಕ್ಷರ ಜೋಡಣೆಯ ಅನುಕೂಲತೆಯ ಜೊತೆ, ಮಾಡುವ ಪ್ರತಿ ಕೆಲಸದಲ್ಲಿನ ವೈಯಕ್ತಿಕ ಶ್ರದ್ಧೆ ಮತ್ತು ಮುದ್ರಣ ಮಾಡುವ ಎಲ್ಲಾ ಕೆಲಸಗಳು ಅಚ್ಚುಕಟ್ಟಾಗಿರಬೇಕೆಂಬ ಸಂಕಲ್ಪದಿಂದ ಈ ಗ್ರಂಥ ಮುದ್ರಣ ಮಾಡಿದ್ದಾರೆ. ರಕ್ಷಾಪುಟ ವಿನ್ಯಾಸವನ್ನು ಕಲಾವಿದರಾದ ಶ್ರೀ ಎಂ. ಮೋಹನ್, ತ್ಯಾಗರಾಜ ನಗರ, ಮೊಬೈಲ್ : 9342889827 ಬೆಂಗಳೂರು ಇವರು ಬಹಳ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಚಿತ್ರಿಸಿದ್ದಾರೆ. ಶ್ರೀಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆರೋಗ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ, ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ. ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

ಮಹಾಮಹೋಪಾಧ್ಯಾಯ
**ಪಂಢರೀನಾಥಾಚಾರ್ಯ ಗಲಗಲಿ**
ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ-580 032

22-4-2007
ಹುಬ್ಬಳ್ಳಿ

# ಸ್ಕಂದಮಹಾಪುರಾಣ ಭಾಗ-೩

## ಬ್ರಹ್ಮಖಂಡ, ಬ್ರಹ್ಮೋತ್ತರ ಖಂಡ

## ಕಾಶೀಖಂಡ ಪೂರ್ವಾರ್ಧ, ಕಾಶೀಖಂಡ ಉತ್ತರಾರ್ಧ, ಪ್ರಭಾಸಖಂಡ

## ಕಾಶೀಖಂಡ ಪೂರ್ವಾರ್ಧ

## ಕಾಶೀಖಂಡ ಉತ್ತರಾರ್ಧ

## ಪ್ರಭಾಸ ಖಂಡ

—○—

# ಸ್ಕಂದಮಹಾಪುರಾಣ

## ಭಾಗ - ೩

## ಬ್ರಹ್ಮಖಂಡ

ಸ್ಕಂದಮಹಾಪುರಾಣ ಭಾಗ-೨ ರಿಂದ ಬ್ರಹ್ಮಖಂಡ ಇಲ್ಲಿ ಮುಂದುವರೆದಿದೆ

## ಚಾತುರ್ಮಾಸ್ಯ ಮಾಹಾತ್ಮ್ಯ

### ಅಧ್ಯಾಯ - ೭೩

**ನಾರದ:-** ದೇವತೆಗಳಿಗೂ ಒಡೆಯನಾದ ಬ್ರಹ್ಮದೇವ, ಚಾತುರ್ಮಾಸ್ಯ ವ್ರತದ ಮಹಿಮೆಯನ್ನು ಕೇಳಬೇಕೆಂದು ನನ್ನ ಅಪೇಕ್ಷೆ. ದಯವಿಟ್ಟು ಅದರ ಮಹಿಮೆಯನ್ನು ನನಗೆ ವಿವರಿಸು.

**ಬ್ರಹ್ಮದೇವ:-** ದೇವರ್ಷಿಯೇ, ಈ ಪ್ರಪಂಚದಲ್ಲಿ ಮೋಕ್ಷವನ್ನು ಕೊಡುವ ದೇವರು ಒಬ್ಬನೇ, ಅವನೇ ಸಾಕ್ಷಾತ್ ವಿಷ್ಣು. ಅವನ ಹೊರತು ಬೇರೆ ಯಾವ ದೇವತೆಯೂ ಮುಕ್ತಿಯನ್ನು ಕೊಡಲಾರ ಆ ನಾರಾಯಣನನ್ನು ನೆನೆಸಿದ ಮಾತ್ರಕ್ಕೆ ಮೊದಲು ಪಾಪದಿಂದ ಮುಕ್ತಿ. ಅನಂತರ ಅವನಲ್ಲಿ ಅತಿಶಯವಾದ ಭಕ್ತಿ, ಅವನನ್ನು ವೇದಶಾಸ್ತ್ರೋಕ್ತ ಮಾರ್ಗದಿಂದ ಆರಾಧಿಸಿದರೆ ಸಂಸಾರದಿಂದ ಮುಕ್ತಿ. ಅದೇ ಭಕ್ತಿಯಿಂದ ಮುಂದೆಯೂ ನಿರಂತರ್ಯವಾಗಿ ಭಗವದೇಕನಿಷ್ಠವಾಗಿ ಭಜಿಸಿದರೆ ಪೂರ್ಣ ಮುಕ್ತಿ. ಅದೇ ನಿಜವಾದ ಭಗವತ್ಪ್ರಾಪ್ತಿ. ಈ ಪ್ರಪಂಚದಲ್ಲಿ ಮಾನವನಾಗಿ ಹುಟ್ಟುವುದು ಪರಮ ದುರ್ಲಭ. ಸಜ್ಜನರ ಸಹವಾಸವಿಲ್ಲದೇ ವಿಷ್ಣುಭಕ್ತಿ ಬೆಳೆಯಲಾರದು. ಭಕ್ತಿ ಇಲ್ಲದೇ ಆಚರಿಸಿದ ಯಾವುದೇ ವ್ರತ, ಉಪವಾಸ, ಅನುಷ್ಠಾನಗಳು ಫಲವನ್ನು ನೀಡಲಾರವು. ಆದ್ದರಿಂದ ಮಾನವರು ಯಾವುದೇ ವ್ರತವನ್ನು ಮಾಡಲಿ ಭಕ್ತಿಯಿಂದ ಮಾಡಬೇಕು.

ವಿಶೇಷತಃ ಚಾತುರ್ಮಾಸ್ಯದಲ್ಲಿ ಭಕ್ತಿಯಿಂದ ವಿಷ್ಣುವಿನ ವ್ರತ ಮಾಡುವುದು ಉತ್ತಮ. ಆಷಾಢ ಶುಕ್ಲ ಏಕಾದಶಿಯಿಂದ ಆರಂಭಿಸಿ ಕಾರ್ತೀಕ ಶುಕ್ಲ ದ್ವಾದಶಿವರೆಗೆ ನಾಲ್ಕು ತಿಂಗಳ ಕಾಲ ಚಾತುರ್ಮಾಸ್ಯ ಎಂಬ ಪುಣ್ಯಕಾಲ. ಈ ಪುಣ್ಯಕಾಲದಲ್ಲಿ ಭಕ್ತಿಯಿಂದ ಶ್ರೀಹರಿಗೆ ವಂದನೆಗೈದು ಚಾತುರ್ಮಾಸ್ಯ ವ್ರತವನ್ನು ಕೈಕೊಳ್ಳಬೇಕು. ಈ ಚಾತುರ್ಮಾಸ್ಯ ಕಾಲದಲ್ಲಿ ನದಿ, ಕೆರೆ, ಬಾವಿ, ಎಲ್ಲಿಯಾದರೂ ಪ್ರಾತಃಸ್ನಾನ ಮಾಡಿ ಶ್ರೀಹರಿಯನ್ನು ಆರಾಧಿಸಿದರೆ ಸರ್ವಪಾಪ ಪರಿಹಾರ. ವಿಶೇಷವಾಗಿ ಪುಷ್ಕರ, ಪ್ರಯಾಗ, ನರ್ಮದೆ, ಭಾಸ್ಕರಕ್ಷೇತ್ರ, ಸರಸ್ವತಿ, ಗಂಗೆ, ಯಮುನೆ, ಕಾವೇರಿ ನದೀ ಸಂಗಮ, ಮುಂತಾದ ಪುಣ್ಯತೀರ್ಥಗಳಲ್ಲಿ ಮಿಂದು ಭಗವಂತನನ್ನು ಭಕ್ತಿಯಿಂದ ಪೂಜಿಸಿದವರಿಗೆ ಪಾಪಲೇಪ ಲೇಶಮಾತ್ರವೂ ಇಲ್ಲ.

ನರ್ಮದಾ ನದಿಯಲ್ಲಿ ಚಾತುರ್ಮಾಸ್ಯದ ಮೂರು ದಿನ, ಗೋದಾವರಿಯಲ್ಲಿ ಹದಿನೈದು ದಿನ, ಗಂಗಾನದಿಯಲ್ಲಿ ಒಂದು ದಿನವಾದರೂ ಸ್ನಾನಮಾಡುವವರ ಪಾದಕರ್ಮಗಳೆಲ್ಲವೂ ಪರಿಹಾರವಾಗುವುದು. ಶ್ರೀಹರಿಯ ಪಾದೋದಕವನ್ನು ತಲೆಯ ಮೇಲೆ ಧರಿಸುವುದರಿಂದ ಅತ್ಯಂತ ಪುಣ್ಯ. ಚಾತುರ್ಮಾಸ್ಯ ಕಾಲದಲ್ಲಿ ನಾರಾಯಣನು ಜಲಶಾಯಿಯಾಗಿ ಪವಡಿಸಿರುತ್ತಾರೆ, ಆದ್ದರಿಂದ ಈ ಕಾಲದಲ್ಲಿ ಜಲಸ್ನಾನ ಅಧಿಕಪುಣ್ಯಪ್ರದ.

''ಸ್ನಾನೇನ ಸತ್ಯಮಾಪ್ನೋತಿ ಸ್ನಾನಂ ಧರ್ಮಃ ಸನಾತನಃ
ಧರ್ಮಾನ್ ಮೋಕ್ಷಫಲಂ ಪ್ರಾಪ್ಯ ಪುನಃ ನೈವಾವಸೀದತಿ'' ॥

ಸ್ನಾನಮಾಡುವುದರಿಂದ ಮಾನವನು ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವ ಶ್ರೀಹರಿಯ ಅನುಗ್ರಹ ಪಡೆಯುತ್ತಾನೆ ಮಾನವನಿಗೆ ಸ್ನಾನವು ಹೊರಒಳಗಿನ ಮಾಲಿನ್ಯವನ್ನು ದೂರ ಮಾಡುವ ಒಂದು ಮುಖ್ಯ ಧರ್ಮ ಮತ್ತು ಕರ್ಮ. ನಿತ್ಯ ಸ್ನಾನದಿಂದ ಮನುಷ್ಯನು ಪೂಜಾ ಧ್ಯಾನಶ್ರವಣಾದಿ ಸಾಧನೆ ಮಾಡಿಕೊಂಡು ಭಗವಂತನನ್ನು ಆರಾಧಿಸಿ ಭಕ್ತಿಯಿಂದ ವಿಧಿಪೂರ್ವಕವಾಗಿ ಭಗವತ್ ಕೈಂಕರ್ಯವನ್ನು ಆಚರಿಸಿದರೆ ಮೋಕ್ಷವನ್ನು ಪಡೆಯುತ್ತಾನೆ.

ಸ್ನಾನವನ್ನು ಮುಂಜಾವು ಹಾಗೂ ಮಧ್ಯಾಹ್ನದಲ್ಲಿ ಮಾತ್ರ ಮಾಡಬೇಕು. ಗ್ರಹಣ, ಪರ್ವಕಾಲ ಅಥವಾ ಅಶುಚಿ ದೋಷ ಮುಂತಾದವುಗಳು ಇದ್ದರೆ ಮಾತ್ರ ಸಂಧ್ಯಾಕಾಲದಲ್ಲಿ ಸ್ನಾನಮಾಡಬೇಕು. ಇದಾಯಾವುದೂ ಇಲ್ಲದಿದ್ದರೆ ಸಂಜೆ ಹಾಗೂ ರಾತ್ರಿಕಾಲದಲ್ಲಿ ತಣ್ಣೀರಿನಿಂದಾಗಲೀ, ಬಿಸಿನೀರಿನಿಂದಾಗಲೀ ಸ್ನಾನಮಾಡಬಾರದು. ಬೆಳಗಿನ ಸ್ನಾನವನ್ನು ಮಾತ್ರ ಎಂದೂ ಮಾಡದೇ ಇರಬಾರದು. ರೋಗಾದಿಗಳಿಂದ ದೇಹವು ಅಶಕ್ತವಾಗಿದ್ದರೆ ಮಧ್ಯಾಹ್ನದಲ್ಲಿ ಸ್ನಾನಮಾಡಬೇಕು. ಹೆಚ್ಚಿನ ಅಶಕ್ತತೆ, ಬೇನೆಗಳಿಂದ ದೇಹದಲ್ಲಿ ಅನಾರೋಗ್ಯ ಬೆಳೆದಿದ್ದರೆ ಭಸ್ಮಸ್ನಾನ; ಮಂತ್ರ ಸ್ನಾನಗಳಿಂದಲೂ ಹಾಗೂ ವಿಷ್ಣುವಿನ ಪಾದೋದಕದ ಪ್ರೋಕ್ಷಣೆಯಿಂದ ಮಾನವನು ಪರಿಶುದ್ಧನಾಗುತ್ತಾನೆ. ಈ ಚಾತುರ್ಮಾಸ್ಯಕಾಲದಲ್ಲಿ ಪ್ರತಿದಿನವೂ ಸ್ನಾನದ ನಂತರ ಶ್ರದ್ಧೆಯಿಂದ ಪಿತೃಗಳ ತರ್ಪಣ, ಜಪ, ಹೋಮ, ಭಗವತ್‌ಪೂಜೆ, ದಾನ, ಪಾರಾಯಣ, ಸ್ತೋತ್ರ ಪಠಣಾದಿಗಳಿಂದ ಅನಂತಫಲಪ್ರಾಪ್ತಿ. ಈ ಚಾತುರ್ಮಾಸ್ಯಕಾಲದಲ್ಲಿ ಕೆಳಗೆ ಹೇಳಿದ ಈ ಹತ್ತು ಕಾರ್ಯಗಳು ಮುಖ್ಯವಾಗಿ ಧರ್ಮಸಾಧನ ಎಂದು ಕರೆಯಲ್ಪಡುತ್ತವೆ.

''ಸತ್ಸಂಗೋ ದ್ವಿಜಭಕ್ತಿಶ್ಚ ಗುರುದೇವಾಗ್ನಿ ತರ್ಪಣಂ।
ಗೋ ಪ್ರದಾನಂ ವೇದಪಾಠಃ ಸತ್‌ಕ್ರಿಯಾ ಸತ್ಯ ಭಾಷಣಂ।
ಗೋ ಭಕ್ತಿಃ ದಾನಭಕ್ತಿಶ್ಚ ಸದಾ ಧರ್ಮಸ್ಯ ಸಾಧನಂ'' ॥

ಸಜ್ಜನರ ಸಹವಾಸ, ಜ್ಞಾನಗಳಲ್ಲಿ ಭಕ್ತಿ, ಗುರು, ದೇವತೆ ಹಾಗೂ ಅಗ್ನಿಗಳ ತರ್ಪಣ, ಅರ್ಪಣ, ಗೋದಾನ, ವೇದಾಧ್ಯಯನ, ವಿಹಿತ ಕರ್ಮಗಳ ಆಚರಣೆ, ಸತ್ಯವಚನ, ಗೋವಿನ ಸೇವೆ, ಸತ್ಪಾತ್ರರಿಗೆ ದಾನ, ಶ್ರೀಹರಿಯಲ್ಲಿ ಭಕ್ತಿ. ಇವು ಹತ್ತು ಚಾತುರ್ಮಾಸ್ಯ ಕಾಲದಲ್ಲಿ ಪರಮ ಮುಖ್ಯ ಧರ್ಮಗಳಾಗಿರುತ್ತವೆ. ಮಾನವನು ಭಗವಂತನಲ್ಲಿ ಭಕ್ತಿಯಿಟ್ಟು ಚಾತುರ್ಮಾಸ್ಯದಲ್ಲಿ ಯೋಗಾಭ್ಯಾಸವನ್ನು ಮಾಡಬೇಕು. ಮನಸ್ಸನ್ನು ತನ್ನ ಅಂಕಿತದಲ್ಲಿ ಇಟ್ಟುಕೊಂಡು, ಇಂದ್ರಿಯಗಳನ್ನೆಲ್ಲ ತನ್ನ ವಶದಲ್ಲಿರಿಸಿ ಸದಾಸರ್ವದಾ ಅಧ್ಯಾತ್ಮ ನಿಷ್ಠನಾಗಿ ಇರಬೇಕು. ಸತ್ಯವನ್ನೇ ನುಡಿಯಬೇಕು.

**"ಸತ್ಯಮೇಕಂ ಪರೋ ಧರ್ಮಃ।**
**ಸತ್ಯಮೇಕಂ ಪರಂ ತಪಃ ॥**
**ಸತ್ಯಮೇಕಂ ಪರಂ ಜ್ಞಾನಂ।**
**ಸತ್ಯೇ ಧರ್ಮಃ ಪ್ರತಿಷ್ಠಿತಃ" ॥**

ಸತ್ಯವನ್ನು ನುಡಿಯುವುದೇ ಶ್ರೇಷ್ಠ ಧರ್ಮ. ಜಗತ್ತಿನಲ್ಲಿ ಹುಟ್ಟು ಉಳಿವು, ಅಳಿವುಗಳಿಗೆ ಕಾರಣನಾದುದರಿಂದ ಸತ್ಯಶಬ್ದ ವಾಚ್ಯನಾದ ಶ್ರೀಹರಿಯನ್ನು ಆರಾಧಿಸುವುದೇ ತಪಸ್ಸು. ಆ ಭಗವಂತನನ್ನು ಜಗತ್‌ಸ್ವಾಮಿ ಎಂದು ತಿಳಿಯುವುದೇ ಜಗತ್ ಜ್ಞಾನ. ಹೀಗೆ ತಿಳಿದು ಅವನ ಆಜ್ಞಾರೂಪವಾದ ವೇದಶಾಸ್ತ್ರಗಳಲ್ಲಿ ಹೇಳಿದ ಕರ್ಮಗಳನ್ನು ಆಚರಿಸುವುದರಲ್ಲಿಯೇ ನಿಜವಾದ ಶ್ರೇಷ್ಠ ಧರ್ಮದ ಮರ್ಮವು ಅಡಗಿರುತ್ತದೆ. ಈ ಸನಾತನ ಧರ್ಮಕ್ಕೆ ಅಹಿಂಸೆಯೇ ಮೂಲಾಧಾರ. ಯಾವ ಪ್ರಾಣಿಯನ್ನೂ ಹಿಂಸಿಸಬಾರದು. ಇದು ವೇದದ ಮೊಟ್ಟ ಮೊದಲ ಆದೇಶ.

**"ಧರ್ಮ ಮೂಲಮಹಿಂಸಾ ಚ ಮನಸಾ ತಾಂ ಚ ಚಿಂತಯನ್।**
**ಕರ್ಮಣಾ ಚ ತಥಾ ವಾಚಾ ತತ ಏತಾಂ ಸಮಾಚರೇತ್" ॥**

ಧರ್ಮಕ್ಕೆ ಅಹಿಂಸೆಯೇ ಮೂಲಾಧಾರ. ಅಹಿಂಸೆಯ ಪ್ರವೃತ್ತಿಯು ಮಾನವನ ಮನಸ್ಸಿನಲ್ಲಿಯೇ ಮೊದಲು ಮೂಡಿರಬೇಕು. ಮಾತಿನಿಂದ ಯಾರನ್ನೂ ನೋಯಿಸದೇ ಇರುವುದು ವಾಚಿಕ ಅಹಿಂಸೆ. ಕೃತಿಯಿಂದ ಯಾವ ಪ್ರಾಣಿಯನ್ನೂ ದುಃಖ ಗೊಳಿಸದಿರುವುದು ಕಾಯಕ ಅಹಿಂಸೆ, ಬೇರೆಯವರಿಗೆ ಕೆಡಕನ್ನು ಚಿಂತಿಸದಿರುವುದು ಮಾನಸಿಕ ಅಹಿಂಸೆ. ಮೂರು ಬಗೆಯ ಅಹಿಂಸೆಯನ್ನು ಪಾಲಿಸುವುದೇ ಮುಖ್ಯಧರ್ಮ. ಚಾತುರ್ಮಾಸ್ಯದಲ್ಲಿ ದೇವಸ್ವ, ಧರ್ಮಸ್ವ ಹಾಗೂ ಸ್ತ್ರೀಧನಗಳನ್ನು ಎಂದೂ ಅಪಹರಿಸಬಾರದು. ನಾಲ್ಕು ತಿಂಗಳ ಮಟ್ಟಿಗಾದರೂ ವ್ರತ ಎಂದು ಬಗೆದು ಕಾಮವನ್ನು ಬಿಡಬೇಕು. ಕ್ರೋಧವನ್ನು ತ್ಯಜಿಸಬೇಕು. ಅಹಂಕಾರವನ್ನು ವರ್ಜಿಸಬೇಕು. ಈರ್ಷೆಯನ್ನು ತೊರೆಯಬೇಕು. ಪ್ರಾಣಿಗಳ ದ್ರೋಹವನ್ನು ಸರ್ವಥಾ ಮಾಡಕೂಡದು. ಎಲ್ಲ ಪ್ರಾಣಿಗಳ ಅಂತರಂಗದಲ್ಲಿಯೂ ನಾರಾಯಣ ನೆಲೆಸಿದ್ದಾನೆ. ಪ್ರಾಣಿಗಳಿಗೆ ನೋವನ್ನುಂಟುಮಾಡಿದರೆ ಅಂತರ್ಯಾಮಿಯಾದ ನಾರಾಯಣನೇ ನೊಂದುಕೊಳ್ಳುತ್ತಾನೆ. ಪ್ರಾಣಿಗಳಿಗೆ ಪೀಡೆಯನ್ನು ಅಥವಾ ಹಿಂಸೆಯನ್ನು ಮಾಡುವುದು ಎಂದರೆ ಪರಮಾತ್ಮನನ್ನೇ ಪೀಡಿಸಿ ಅವಮಾನಿಸಿದಂತೆ. ಆದ್ದರಿಂದ ಎಲ್ಲ ಪ್ರಾಣಿಗಳಮೇಲೆಯೂ ದಯೆಯನ್ನು ತೋರುವುದು ಹಾಗೂ ಪರೋಪಕಾರ ಮಾಡುವುದು ಚಾತುರ್ಮಾಸ್ಯ ಕಾಲದ ಮುಖ್ಯಧರ್ಮ. ಎಲ್ಲ ಧರ್ಮಗಳಲ್ಲಿ ದಾನ ಧರ್ಮವು ಶ್ರೇಷ್ಠ. ಅದರಲ್ಲಿಯೂ ಅನ್ನದಾನವು ಎಲ್ಲಕ್ಕಿಂತ ಮಿಗಿಲು. ಅನ್ನವೇ ಬ್ರಹ್ಮ ಎಂದಿದ್ದಾರೆ ವೇದಗಳಲ್ಲಿ.

**"ಅನ್ನಂ ಬ್ರಹ್ಮ ಇತಿ ಪ್ರೋಕ್ತ ಮನ್ನೇ ಪ್ರಾಣಾಃ ಪ್ರತಿಷ್ಠಿತಾಃ।**
**ತಸ್ಮಾದ್ ಅನ್ನಪ್ರದೋ ನಿತ್ಯಂ ವಾರಿದಶ್ಚ ಭವೇನ್ನರಃ" ॥**

ಅನ್ನ (ಆಹಾರ ಸೇವನೆಯಿಂದ) ಪ್ರಾಣಿಗಳನ್ನು ಜೀವಂತವಾಗಿಟ್ಟಿರುತ್ತದೆ. ಬಾಳಿಸುವುದು ಅನ್ನ. ಮೂಲತಃ ಬದುಕಿಸುವುದು ಭಗವಂತನ ಧರ್ಮ. ಅನ್ನ ಅದನ್ನು ಮಾಡುವುದರಿಂದ ಆ ಅನ್ನವನ್ನೇ ಬ್ರಹ್ಮ ಎಂದು ಕರೆದಿದ್ದಾರೆ ಹಿಂದಿನ ಹಿರಿಯರು. ಜೀವಿಗಳ ಪಂಚ ಪ್ರಾಣಗಳು

ಅನ್ನದಲ್ಲಿಯೇ (ಆಹಾರದಲ್ಲಿಯೇ) ಪ್ರತಿಷ್ಠಿತವಾಗಿವೆ. ಈ ಪ್ರಪಂಚವೆಲ್ಲವೂ ಅನ್ನಗತ ಪ್ರಾಣ. ಆದರಿಂದ ಮಾನವರು ನಿತ್ಯವೂ ಹಸಿದವರಿಗೆ ಅನ್ನವನ್ನು, ಬಾಯಾರಿದವರಿಗೆ ನೀರನ್ನು ಕೊಡಬೇಕು. ರತ್ನ, ಮುತ್ತು, ಬೆಳ್ಳಿ, ಬಂಗಾರ ಮುಂತಾದ ವಸ್ತುಗಳ ದಾನಕ್ಕಿಂತ ಅನ್ನದಾನವು ಶ್ರೇಷ್ಠಾದನ. ಆದ್ದರಿಂದ ಚಾತುರ್ಮಾಸ್ಯ ಕಾಲದಲ್ಲಿ ಅನ್ನದಾನ, ಜಲದಾನಗಳನ್ನು ಮಾಡಬೇಕು. ಇದರಂತೆ ಈ ಕಾಲದಲ್ಲಿ ಗೋದಾನ, ವಿದ್ಯಾದಾನ, ವೇದಪಾಠ, ಹೋಮ, ಹವನ, ಸತ್ಕಥಾಶ್ರವಣ, ಸಜ್ಜನರಸೇವೆ, ದೊಡ್ಡವರದರ್ಶನ, ತ್ರಿಮೂರ್ತಿ ಪೂಜೆ ಮುಂತಾದವುಗಳನ್ನು ಚಾತುರ್ಮಾಸ್ಯ ಕಾಲದಲ್ಲಿ ಅವಶ್ಯವಾಗಿ ಮಾಡಬೇಕೆಂದು ಈ ಕೆಳಗಿನ ಪುರಾಣ ವಚನದಲ್ಲಿ ಆದೇಶಿದ್ದಾರೆ.

**"ಸದ್ಧರ್ಮಃ ಸತ್ಕಥಾ ಚೈವ ಸತ್‌ಸೇವಾ ದರ್ಶನಂ ಸತಾಂ।**
**ವಿಷ್ಣುಪೂಜಾ ರತಿರ್ದಾನೇ, ಚಾತುರ್ಮಾಸ್ಯೇ ಸುದುರ್ಲಭಾಃ" ॥**

ಜಲದಾನ ಅನ್ನದಾನಗಳಂಥ ಅಕ್ಷಯಸುಖವನ್ನು ಮತ್ತು ಸಂಪೂರ್ಣ ತೃಪ್ತಿಯನ್ನು ಕೊಡುವ ದಾನಗಳಿಗಿಂತ ಮಿಗಿಲಾದುದು ಭೂತ ಭವಿಷ್ಯಕಾಲದಲ್ಲಿ ಬೇರಾವುದು ಇಲ್ಲ. ಭವಿಷ್ಯ ಕಾಲದಲ್ಲಿಯೇ ಬೇರೆ ಇಲ್ಲ.

**"ವಾರಿದಃ ತೃಪ್ತಿಮಾಯಾತಿ ಸುಖಮಕ್ಷಯ್ಯ ಮನ್ನದಃ।**
**ವಾರ್ಯನ್ನಯೋಃ ಸಮಂ ದಾನಂ ನ ಭೂತಂ ಭವಿಷ್ಯತಿ" ॥**

ಇದರಂತೆ ಮುತ್ತು, ರತ್ನ, ಬೆಳ್ಳಿ ಬಂಗಾರಗಳ ದಾನಕ್ಕಿಂತ ಅನ್ನದಾನವು ಮಿಗಿಲಾದ ದ್ದೆಂದು ಋಷಿಗಳು ಹೇಳಿದ್ದಾರೆ.

**"ಮಣಿರತ್ನ ಪ್ರವಾಲಾನಾಂ ರೂಪ್ಯ ಹಾಟಕ ವಾಸಸಾಂ।**
**ಅನ್ಯೇಷಾಮಪಿ ದಾನಾನಾಂ ಅನ್ನದಾನಂ ವಿಶಿಷ್ಯತೇ" ॥**

ಬಂಗಾರ, ಬೆಳ್ಳಿ, ಮುತ್ತು, ರತ್ನ, ನಗನಾಣ್ಯಗಳನ್ನು ಎಷ್ಟು ಕೊಟ್ಟರೂ ಸಾಕು ಎನಿಸುವುದಿಲ್ಲ. ಆದರೆ ಅನ್ನ-ನೀರುಗಳನ್ನು ಒಮ್ಮೆ ಹೊಟ್ಟೆತುಂಬ ನೀಡಿಬಿಟ್ಟರೆ ಎಂಥವರಾದರೂ "ಸಾಕು-ಸಾಕು" ಎನ್ನುತ್ತಾನೆ. ಆದುದರಿಂದ ತೃಪ್ತಿಪಡಿಸುವ ದಾನ ಎಂದರೆ ಅನ್ನ ನೀರುಗಳ ದಾನವೇ.

ಈ ನಾಲ್ಕು ತಿಂಗಳುಗಳಲ್ಲಿ ಹಾಲು, ಮೊಸರು, ಕೆನೆ, ಬೆಣ್ಣೆ, ವಸ್ತ್ರ, ಚಂದನ, ಅಗರು, ಧೂಪ, ದೀಪ, ಹಣ್ಣು, ಕಾಯಿ, ಎಳ್ಳು, ಉಪ್ಪು, ಎಣ್ಣೆ ಮಸಾಲೆ ಪದಾರ್ಥ ಮುಂತಾದವುಗಳನ್ನು ದಾನಮಾಡುವವರು ಹಾಗೂ ಶ್ರೀಹರಿಯ ಪ್ರೀತ್ಯರ್ಥವಾಗಿ ಗೋದಾನ, ಭೂದಾನ, ಧನದಾನ ಮುಂತಾದವುಗಳನ್ನು ದಾನಮಾಡುವವರು, ಹೋಮ, ಹವನ, ದೇವಬ್ರಾಹ್ಮಣರ ಆರಾಧನೆ, ಪರೋಪಕಾರ ಮುಂತಾದ ಧರ್ಮಕಾರ್ಯಗಳನ್ನು ಮಾಡುವವರು ಪಾಪಗಳಿಂದ ಮುಕ್ತರಾಗಿ ಮುಕ್ತಿಯನ್ನು ಹೊಂದುತ್ತಾರೆ.

## ಚಾತುರ್ಮಾಸ್ಯದಲ್ಲಿ ಪಾಲಿಸಬೇಕಾದ ನಿಯಮ

**ಬ್ರಹ್ಮ:-** ಮಾನವನಿಗೆ ಆಸೆಯು ಬಹಳ. ಸಂಸಾರದಲ್ಲಿ ಮಾನವನನ್ನು ಬಂಧಿಸಿಡಲು ಚಾತುರ್ಮಾಸ್ಯಕಾಲದಲ್ಲಿ ಅನೇಕ ವಸ್ತುಗಳ ಆಸೆಯೇ ಒಂದು ಪಾಶವಾಗಿ ಪರಿಣಮಿಸುವುದು. ತನಗೆ ಅತ್ಯಂತ ಇಷ್ಟವಾದ ಪ್ರೀತಿಯ ಪದಾರ್ಥಗಳ ಮೇಲಿನ

ಆಸೆಯನ್ನು ನಿಯಮಪಾಲನೆಯ ದೃಷ್ಟಿಯಿಂದ ತೊರೆದು ಸಂಪೂರ್ಣ ಅಶಾತ್ಯಾಗಕ್ಕೆ ಪೀಠಿಕೆ ಹಾಕಬೇಕು. ಮನುಷ್ಯನಿಗೆ ಅನೇಕ ಪದಾರ್ಥಗಳ ಮೇಲೆ ಅಪೇಕ್ಷೆ. ಮತ್ತು ಬಗೆಬಗೆಯ ಮೃಷ್ಟಾನ್ನ ಪಕ್ವಾನ್ನಗಳನ್ನು ತಿನ್ನುವ ವಿಷಯದಲ್ಲಿ ಬಲವತ್ತರವಾದ ಬಯಕೆ ಮತ್ತು ನಾನಾ ಬಗೆಯ ಸುಖೋಪಭೋಗಗಳ ಹವ್ಯಾಸವೂ ಹುಟ್ಟಿನಿಂದ ಹತ್ತಿಕೊಂಡೇ ಬಂದಿರುತ್ತದೆ. ಅವುಗಳನ್ನೆಲ್ಲ ಒಂದೊಂದಾಗಿ ಚಾತುರ್ಮಾಸ್ಯದಲ್ಲಿ ಬಿಡಲು ಪ್ರಯತ್ನಿಸಬೇಕು. ಈ ನಾಲ್ಕುತಿಂಗಳು ಬೆಳ್ಳಿ, ಕಂಚಿನ ಪಾತ್ರೆಗಳಲ್ಲಿ ಊಟ ಮಾಡಬೇಕು. ಆಲದ ಗಿಡದ ಎಲೆಯಲ್ಲಿ ಊಟ ಮಾಡುವುದು ಚಾತುರ್ಮಾಸ್ಯದಲ್ಲಿ ಪುಣ್ಯಕರ, ರೇಶ್ಮೆಬಟ್ಟೆ, ಮೆಣಸು, ಮೆಣಸಿನಕಾಯಿ, ಕಡಲೆ, ಉದ್ದು, ಕಪ್ಪುಬಟ್ಟೆ, ಕೇಶರ, ಮುಂತಾದವುಗಳನ್ನು ಪರಿತ್ಯಾಗ ಮಾಡಬೇಕು. ಹಾಸಿಗೆಯ ಮೇಲೆ ಮಲಗದೇ ಚಾಪೆ ಮೇಲೆಯೇ ಮಲಗಬೇಕು. ಅಸತ್ಯವನ್ನು ನುಡಿಯಬಾರದು. ಪರನಿಂದೆಯನ್ನು ಮಾಡಬಾರದು.

**''ಪರನಿಂದಾ ಮಹಾಪಾಪಂ ಪರನಿಂದಾ ಮಹಾಭಯಂ।**
**ಪರನಿಂದಾ ಮಹತ್ ದುಃಖಂ ನ ತಸ್ಯಾಃ ಪಾತಕಂ ಪರಂ'' ॥**

ಹೆರವರನ್ನು ನಿಂದಿಸುವುದು ಮಹಾಪಾಪ. ಪರರನ್ನು ನಿಂದಿಸುವುದು ಇಹದಲ್ಲಿಯೂ ಪರದಲ್ಲಿಯೂ ನರಕಾದಿ ಭಯಕ್ಕೆ ಕಾರಣ. ಪರರ ನಿಂದೆಯಿಂದ ಈ ಲೋಕದಲ್ಲಿ ನಿಂದೆಗೆ ಪಾತ್ರನಾದವನಿಗೆ ದುಃಖ. ಪರಲೋಕದಲ್ಲಿ ನಿಂದೆ ಮಾಡಿದವನಿಗೆ ದುಃಖ. ಪರನಿಂದೆಗಿಂತ ಹೆಚ್ಚಿನ ಪಾತಕವಿಲ್ಲ. ಕರ್ಕಸಂಕ್ರಾತಿಯ ದಿನ ವಿಷ್ಣುವಿನ ಪೂಜೆಮಾಡಿ ನೇರಳೆಯ ಹಣ್ಣಿನೊಂದಿಗೆ ಪರಮಾತ್ಮನಿಗೆ ಅರ್ಘ್ಯವನ್ನು ನೀಡಬೇಕು. ಈ ಕಾಲದಲ್ಲಿ ಶ್ರೀಹರಿಯ ಸೇವೆ ಮಾಡಿದವನು ಅಧಿಕಾರಿಯಾಗುವನು, ಜೀವನದಿಂದ ಮುಕ್ತಿ ಹೊಂದುತ್ತಾನೆ.

**''ವಿಷ್ಣೋಃ ಕಥಾ ವಿಷ್ಣುಪೂಜಾ ಧ್ಯಾನಂ ವಿಷ್ಣೋ ರ್ನತಿಸ್ತಥಾ।**
**ಸರ್ವಮೇವ ಹರಿಪ್ರೀತ್ಯಾ ಯಃ ಕರೋತಿ ಸ ಮುಕ್ತಿ ಭಾಕ್'' ॥**

ವಿಷ್ಣುವಿನ ಕಥಾಶ್ರವಣ ಅಥವಾ ಪ್ರವಚನ ಪಾರಾಯಣ ಹಾಗೂ ತಂತ್ರಾಸಾರೋಕ್ತ ಪದ್ಧತಿಯಿಂದ ವಿಷ್ಣುವಿನ ಪೂಜೆ, ಧ್ಯಾನ, ನಮಸ್ಕಾರ, ಸ್ತೋತ್ರ ಮುಂತಾದವುಗಳನ್ನು ಶ್ರೀಹರಿಯ ಮೇಲಿನ ವಿಶೇಷ ಭಕ್ತಿಯಿಂದ ಚಾತುರ್ಮಾಸ್ಯ ಕಾಲದಲ್ಲಿ ಮಾಡುವವನು ಮುಕ್ತಿಗೆ ಹಕ್ಕುದಾರನಾಗುತ್ತಾನೆ. ಶ್ರೀಹರಿಯ ಶಯನ ಮಾಡಿದ ಈ ಚಾತುರ್ಮಾಸ್ಯ ಕಾಲದಲ್ಲಿ ಬ್ರಹ್ಮಚರ್ಯಪಾಲನೆ ಹಾಗೂ ಧರ್ಮಾನುಸಾರಣೆ, ಕಥಾಶ್ರವಣಗಳು, ಪರಮಪುಣ್ಯಕಾರಕ. ಇವೇ ಮುಖ್ಯ ಧರ್ಮಗಳು. ಅಗ್ನಿಹೋತ್ರ, ಧರ್ಮ, ಶ್ರದ್ಧೆ, ಸತ್ಸಂಗ, ಸತ್ಯಭಾಷಣ, ಪ್ರಾಣಿದಯೇ, ವೇದಪಾಠ, ಇಂದ್ರಿಯ ನಿಗ್ರಹ, ಕಾಮಕ್ರೋಧ ಲೋಭಾದಿಗಳ ತ್ಯಾಗ, ವೇದೋಕ್ತ ಕರ್ಮಾನುಷ್ಠಾನ, ಮುಂತಾದವುಗಳನ್ನು ಮಾಡಿ ಪರಮಾತ್ಮನಲ್ಲಿ ಸರ್ವಕರ್ಮ ಸಮರ್ಪಣವನ್ನು ಮಾಡಿದವನು ಜೀವನ್ಮುಕ್ತ ಎನಿಸುತ್ತಾನೆ.

## ಚಾತುರ್ಮಾಸ್ಯದಲ್ಲಿ ಶ್ರೀಹರಿಯ ಷೋಡಶೋಪಚಾರ ಪೂಜೆ

**ಬ್ರಹ್ಮ**:- ಹದಿನಾರು ಬಗೆಯ ಉಪಚಾರಗಳಿಂದ ಪ್ರತಿನಿತ್ಯವೂ ವಿಷ್ಣುವಿನಪೂಜೆ ಮಾಡುವುದು ಒಂದು ತಪಸ್ಸು. ಚಾತುರ್ಮಾಸ್ಯ ಕಾಲದಲ್ಲಿ ಇದೇ ಷೋಡಶೋಪಚಾರ ಪೂಜೆಯು ಮಹಾತಪಸ್ಸೆನ್ನಿಸುವುದು. ಇದರಂತೆ ಹರಿಪೂಜೆ, ನೈವೇದ್ಯ, ವೈಶ್ವದೇವ,

ಬಲಿಹರಣ, ಅತಿಥಿಭೋಜನ, ಪಿತೃತರ್ಪಣ, ಸ್ವಾಧ್ಯಾಯ ಮುಂತಾದ ಪಂಚಮಹಾ ಯಜ್ಞಗಳ ಅನುಷ್ಠಾನಗಳು ಒಂದು ಮಹಾತಪಸ್ಸು. ಹೀಗೆಯೇ ಋತುಕಾಲದಲ್ಲಿ ಸ್ವಸ್ತ್ರೀ ಸಮಾಗಮ, ಸತ್ಯವಚನ, ವೈರಭಾವ ತ್ಯಾಗ, ವಿಷ್ಣು, ಶಿವ, ಶಕ್ತಿ, ಗಣಪತಿ, ಸೂರ್ಯ ಈ ಪಂಚಾಯತನ ಪೂಜೆ, ಪರ್ವಕಾಲದಾನ, ಅಹಿಂಸಾವ್ರತ ಇವು ಚಾತುರ್ಮಾಸ್ಯಕಾಲದ ವಿಶಿಷ್ಟ ತಪಸ್ಸುಗಳು ಚಾತುರ್ಮಾಸ್ಯಕಾಲದಲ್ಲಿ ಎರಡು ವಿಧವಾದ ಶುದ್ಧತೆಯನ್ನು ಸಾಧಿಸಬೇಕು. ಇದಕ್ಕೆ ಶೌಚಗ್ರಹಣ ಎಂದು ಕರೆಯುವರು. ಈ ಶುದ್ಧೀಕರಣವು ಬಾಹ್ಯ ಶೌಚ, ಅಂತರಿಕ ಶೌಚ ಎಂದು ಎರಡು ವಿಧ. ನೀರಿನಲ್ಲಿ ಸ್ನಾನಮಾಡಿ ಮಡಿಯಾಗುವುದು ಬಾಹ್ಯಶೌಚ, ಧರ್ಮಶ್ರದ್ಧೆ, ಪ್ರಾಣಿದಯೆ, ಭಗವತ್‌ಧ್ಯಾನ ಮುಂತಾದವುಗಳಿಂದ ಅಂತಃಕರಣವನ್ನು ಶುದ್ಧಗೊಳಿಸುವುದು ಆಂತರಿಕ ಶೌಚ. ಚಾತುರ್ಮಾಸ್ಯದಲ್ಲಿ ಇಂದ್ರಿಯಗಳ ಚಂಚಲತೆಯನ್ನು ದೂರಮಾಡಿ ಮನಸ್ಸನ್ನು ವಶದಲ್ಲಿಟ್ಟುಕೊಳ್ಳುವುದು ಒಂದು ಮಹಾತಪಸ್ಸು. ಇದರಂತೆ ಮಾನವನ ಮೂಲಭೂತ ವೈರಿಗಳಾದ ಕಾಮ, ಕ್ರೋಧ, ಲೋಭ, ದಂಭ, ಅಸೂಯೆ, ಸ್ವಾರ್ಥ, ಅಹಂಕಾರ, ಮುಂತಾದವುಗಳನ್ನು ಗೆದ್ದು ಮನಸ್ಸನ್ನು ಭಗವಂತನಲ್ಲಿ ಕೇಂದ್ರಿಕರಿಸುವುದು ಇನ್ನೊಂದು ದೊಡ್ಡತಪಸ್ಸು. ಈ ಎಲ್ಲ ಆರು ವೈರಿಗಳನ್ನು ಗೆದ್ದು ಮಾನವನು ಪರಿಶುದ್ಧ ಮನಸ್ಕನಾಗ ಬೇಕಾದರೆ ಮೊದಲು ಕೆಲವೊಂದು ವ್ರತ, ನಿಯಮಗಳನ್ನು ಪಾಲಿಸಿ ಮನಸ್ಸನ್ನು ಸನ್ಮಾರ್ಗದಲ್ಲಿಟ್ಟುಕೊಳ್ಳಬೇಕು. ಚಾತುರ್ಮಾಸ್ಯ ಕಾಲದಲ್ಲಿ ಒಪ್ಪತ್ತೇ ಊಟ ಮಾಡಬೇಕು. ಅಥವಾ ನಾಲ್ಕೂ ತಿಂಗಳ ಕಾಲ ಹಾಲನ್ನು ಮಾತ್ರ ಕುಡಿದು ಪಯೋವ್ರತವನ್ನು ಮಾಡಬೇಕು. ಅಷ್ಟು ಮಾಡಲು ಆಗದಿದ್ದರೆ ಪ್ರತಿದಿನವೂ ಕ್ಲುಪ್ತವಾಗಿ ಪರಿಮಿತವಾಗಿ ಊಟಮಾಡಬೇಕು. ಊಟದಲ್ಲಿ ಉಪ್ಪು ಖಾರವನ್ನು ತೊರೆಯಬೇಕು. ಸಾಧ್ಯವಿದ್ದರೆ ಕೇವಲ ಹಣ್ಣುಹಾಲು ಮಾತ್ರ ಸೇವನೆಮಾಡಿ ವ್ರತನಿಷ್ಠೆಯಿಂದಿರಬೇಕು ಕೇವಲ ನೀರು ಕುಡಿದು ಜಲವ್ರತವನ್ನು ಮಾಡಿದರೆ ಹರಿಪ್ರೀತಿಗೆ ಪಾತ್ರನಾಗುವನು.

**ನಾರದ:-** ಹದಿನಾರು ಉಪಚಾರಗಳಿಂದ ಪರಮಾತ್ಮನ ಪೂಜೆ ಮಾಡಬೇಕೆಂದು ತಾವು ಅಪ್ಪಣೆ ಕೊಡಿಸಿದಿರಿ. ನೀವು ಹೇಳಿದ ಆ ಷೋಡಶೋಪಚಾರ ಪೂಜೆಯನ್ನು ಮಾಡುವ ಬಗೆ ಹೇಗೆ?

## ಪುರುಷಸೂಕ್ತದಿಂದಲೇ ಎಲ್ಲಾ ಪೂಜೆ

**ಬ್ರಹ್ಮ:-** ಮಾನವರು ಮಾಡುವ ಭಗವಂತನ ಎಲ್ಲಾ ಪೂಜೆಯೂ ವೇದಮಂತ್ರಗಳಿಂದಲೇ ನೆರವೇರಿಸಲ್ಪಡಬೇಕು. ಎಲ್ಲಾ ಮಂತ್ರಗಳನ್ನು ಹೇಳಿ ಪ್ರತಿನಿತ್ಯವೂ ವಿಷ್ಣುವಿನ ಪೂಜೆಯನ್ನು ಮಾಡಲಾಗುವುದಿಲ್ಲ. ಆದ್ದರಿಂದ ಶಾಸ್ತ್ರದಲ್ಲಿ ಎಲ್ಲಾ ವೇದಮಂತ್ರಗಳಿಂದ ಪೂಜೆ ಮಾಡಲು ಒಂದು ಕ್ರಮವಿದೆ. ವೇದಗಳಲ್ಲಿ ಬರುವ '**ಸಹಸ್ರ ಶೀರ್ಷಾಪುರುಷ**' ಎಂಬ ಪುರುಷಸೂಕ್ತವು ಸರ್ವವೇದಗಳಿಗೂ ಮೂಲಮಂತ್ರವಾಗಿದೆ. ಸರ್ವವೇದರಾಶಿಯೂ ಈ ಪುರುಷಸೂಕ್ತದ ವ್ಯಾಖ್ಯಾನರೂಪ. ಸರ್ವವೇದಾರ್ಥಗಳ ಸಾರೋದ್ಧಾರರೂಪವಾದ ಈ ಪುರುಷಸೂಕ್ತದಿಂದ ದೇವರಿಗೆ ಹದಿನಾರೂ ಉಪಚಾರಗಳನ್ನು ಅರ್ಪಿಸಿ ಪೂಜೆಮಾಡಿದರೆ ಎಲ್ಲ ವೇದಮಂತ್ರಗಳಿಂದ ವಿಧಿಪೂರ್ವಕವಾಗಿ ಭಗವಂತನಿಗೆ ಷೋಡಶೋಪಚಾರ ಪೂಜೆಯನ್ನು ಸಮರ್ಪಿಸಿದಂತಾಗುವುದು. ಯಜುರ್ವೇದದಲ್ಲಿ ಬರುವ ಈ ಮಹಾಸೂಕ್ತವು ನಾರಾಯಣಮಯವೇ ಆಗಿರುತ್ತದೆ. ಇದರ ಪಠಣ ಮಾತ್ರದಿಂದಲೇ ಪಾಪ-ಕರ್ಮಗಳು ದೂರವಾಗುತ್ತವೆ. ಸ್ಮೃತಿ ಗ್ರಂಥಗಳಲ್ಲಿ ಹೇಳಿದ ವಿಧಾನದಿಂದ ಈ ಪುರುಷಸೂಕ್ತದ ಹದಿನಾರು ಋಚಾಗಳನ್ನು ತನ್ನ ಶರೀರದಲ್ಲಿ ಪೂಜಕನು ಮೊದಲು ನ್ಯಾಸಮಾಡಿಕೊಳ್ಳಬೇಕು. ಅನಂತರ ಭಗವಂತನ ಪ್ರತಿಮೆ, ಸಾಲಿಗ್ರಾಮ ಶಿಲೆಯಲ್ಲಿ ವಿಶೇಷ ರೂಪದಿಂದ ನ್ಯಾಸ ಮಾಡಬೇಕು.

ವೈಕುಂಠದಲ್ಲಿ ವಿರಾಜಿಸುವ, ಶಂಖ, ಚಕ್ರಗದಾಪದ್ಮಗಳನ್ನು ಧರಿಸಿದ, ಕೌಸ್ತುಭ ಹಾಗೂ ವನಮಾಲಾಗಳಿಂದ ಮಂಡಿತನಾದ ಪೀತಾಂಬರಧಾರಿ ಶ್ರೀಹರಿಯನ್ನು ಆವಾಹನ ಮಾಡಿ, ಮನಸ್ಸಿನಲ್ಲಿ ಧ್ಯಾನಮಾಡಬೇಕು. ಆವಾಹನೆ ಮಾಡುವಾಗ ಪುರುಷಸೂಕ್ತದ ಮೊದಲನೇಯ ಋಚೆಗೆ ಓಂಕಾರವನ್ನು ಜೋಡಿಸಿ **'ಓಂ ಸಹಸ್ರ ಶೀರ್ಷಾ ಪುರುಷಃ'** ಎಂಬ ಮಂತ್ರದಿಂದ ತನ್ನ ಎದುರು ಇರುವ ವಿಷ್ಣು ಪ್ರತಿಮೆ ಅಥವಾ ಸಾಲಿಗ್ರಾಮ ಶಿಲೆಯಲ್ಲಿ ಶ್ರೀಹರಿಯನ್ನು ಆವಾಹನೆ ಮಾಡಬೇಕು. ಎರಡನೇಯ **''ಪುರುಷ ಏವೇದಂ''** ಎಂಬ ಋಚೆಯಿಂದ ಪಾರ್ಷದನಿಂದ ಸಹಿತನಾದ ಶ್ರೀಹರಿಗೆ ಆಸನವನ್ನು ಸಮರ್ಪಿಸಬೇಕು. ಮೂರನೇಯ ಋಚೆಯಿಂದ ಭಗವಂತನಿಗೆ ಗಂಗೆಯನ್ನು ನೆನೆದು **ಪಾದ್ಯವನ್ನು** ಕೊಡಬೇಕು. ನಾಲ್ಕನೇಯ ಋಚೆಯಿಂದ **ಅರ್ಘ್ಯ**, ಐದನೇಯ ಋಚೆಯಿಂದ **ಆಚಮನವನ್ನು** ಸಮರ್ಪಿಸಬೇಕು. ಆರನೇಯ **'ಯತ್ ಪುರುಷೇಣ ಹವಿಷಾ'** ಎಂಬ ಋಚೆಯಿಂದ ಕಲಶದಲ್ಲಿಯ ನೀರಿನಿಂದ ಭಗವಂತನಿಗೆ **ಶಂಖದ ದ್ವಾರಾದಿಂದ** ಸ್ನಾನವನ್ನು ಮಾಡಿಸಬೇಕು ಏಳನೇಯ ಋಚೆಯಿಂದ ವಸ್ತ್ರವನ್ನು, ಎಂಟನೇಯದರಿಂದ **ಯಜ್ಞೋಪವೀತವನ್ನು**, ಒಂಭತ್ತನೇಯ ಋಚೆಯಿಂದ ಶ್ರೀಹರಿಗೆ **ಚಂದನವನ್ನು**, ಹತ್ತನೇಯದರಿಂದ **ಹೂಗಳನ್ನು**, ಹನ್ನೊಂದನೇಯದಿಂದ **ಧೂಪವನ್ನು**, ಹನ್ನೆರಡನೇಯದರಿಂದ **ದೀಪವನ್ನು**, ಹದಿಮೂರನೇಯದರಿಂದ **ನೈವೇದ್ಯವನ್ನು** ವಿವಿಧ ಭಕ್ಷ್ಯ ಭೋಜ್ಯ ಪದಾರ್ಥಗಳ ನಿವೇದನ ಪೂರ್ವಕವಾಗಿ ಸಮರ್ಪಿಸಬೇಕು. ಹದಿನಾಲ್ಕನೇ ಋಚೆಯಿಂದ ದೇವರಿಗೆ **ಮಂಗಳಾರತಿಯನ್ನು** ಬೆಳಗಬೇಕು. ಹದಿನೈದನೇಯದರಿಂದ ಭಗವಂತನಿಗೆ ನಾಲ್ಕು ಸಲ ಪ್ರದಕ್ಷಿಣೆ ಹಾಕಬೇಕು. ಹದಿನಾರನೇಯದರಿಂದ ''ನಾನು ನಿನ್ನ ಭಕ್ತ. ನಿನ್ನ ಕಿಂಕರ. ನನ್ನ ಆತ್ಮವೆಲ್ಲವೂ ನಿನ್ನದೇ'' ಎಂದು ಪರಮಾತ್ಮನಿಗೆ ಆತ್ಮಸಮರ್ಪಣೆ ಮಾಡಬೇಕು. ಹೀಗೆ ಹದಿನಾರು ಪೌರುಷ ವೇದ ಮಂತ್ರಗಳಿಂದ ಹದಿನಾರು ಬಗೆಯ ಪೂಜೆಯ ಉಪಚಾರಗಳನ್ನು ಸಮರ್ಪಿಸಿ ಶ್ರೀಹರಿಯ ಷೋಡಶೋಪಚಾರ ಪೂಜೆಯನ್ನು ಮಾಡಿ ಪ್ರಸನ್ನ ಮನಸ್ಕನಾಗಬೇಕು.

## ಸಾಲಿಗ್ರಾಮ ಪೂಜೆಯ ಮಹತ್ವ

**ಬ್ರಹ್ಮ**:- ಸೃಷ್ಟಿಯ ಆದಿಕಾಲದಲ್ಲಿ ಶ್ರೀಹರಿಯು ಯೋಗನಿದ್ರೆಯಿಂದ, ಜಾಗೃತನಾದ ಬಳಿಕ ನಾನು ಉತ್ಪನ್ನನಾದೆ. ನಾನು ಜನಿಸಿದಾಗ ಪ್ರಪಂಚದ ತುಂಬೆಲ್ಲ ನೀರೇ - ನೀರು. ಆ ಹರಿಯ ಹೊಕ್ಕಳ ಹೊಂದಾವರೆಯಿಂದ ನಾನು ಮೊಟ್ಟಮೊದಲು ಹುಟ್ಟಿಬಂದೆ ನಂತರ ನಾನು ನನ್ನನ್ನು ಸೃಷ್ಟಿಸಿದ ಆ ಪರಮಾತ್ಮನನ್ನು ಕಾಣಬೇಕೆಂಬ ತವಕದಿಂದ ನನ್ನ ಎಂಟೂ ಆರಳುಂಗಗಳಿಂದ ಎಲ್ಲಡೆಗೂ ಹುಡುಕಿದೆ. ಅಪರಂಪಾರವಾದ ಸಾಗರದ ನೀರಿನ ಹೊರತು ನನಗೇನೂ ಗೋಚರಿಸಲಿಲ್ಲ. ಆಗ ನಾನು ಹುಟ್ಟಿಬಂದ ಆ ಕಮಲದ ನಾಳದೊಳಗೇ ಇಳಿದೆ. ಪರಮಾತ್ಮನ ಉದರದಲ್ಲಿಯೇ ಪ್ರವೇಶ ಮಾಡಿದೆ. ಅಲ್ಲಿ ನನಗೆ ಕೋಟಿ ಕೋಟಿ ಬ್ರಹ್ಮಾಂಡಗಳ ದರ್ಶನವಾಯಿತು. ಶ್ರೀವಿಷ್ಣುವಿನ ವಿರಾಟ್ ಶಕ್ತಿ ದರ್ಶನವಾಯಿತು ಚಕಿತ ಚಮತ್ಕೃತನಾದೆ. ಮತ್ತೆ ಅದೇ ಕಮಲದ ಮೂಲ ನಾಳದಿಂದ ಮೇಲೆದ್ದು ಬಂದೆ. ಅಲ್ಲಿಯೇ ತೇಲಾಡುತ್ತಿರುವ ನಾರಾಯಣನ ನಾಭೀಯ ಮೇಲೆಯೇ ಕುಳಿತು. ಮುಂದೆ 'ಏನು ಮಾಡಬೇಕು' ಎಂದು ತಿಳಿಯದೇ ಯೋಚನಾಮಗ್ನನಾಗಿರುವಾಗ. ಆಗ ಆಕಸ್ಮಿಕವಾಗಿ ಆಕಾಶವಾಣಿ 'ತಪತಪ ತಪ' ಎಂದು ನಭೋವಾಣಿ ಮೂಲಕ ಹರಿಯ ಸಂದೇಶ ಹರಿದು ಬಂದಿತು . ನನ್ನ ನಾಲ್ಕೂ ತಲೆಗಳಿಂದ ವಂದಿಸಿದೆ. ಆ ಜಗದೀಶನ ಅಣತಿಯನ್ನು ತಲೆಯಲ್ಲಿ ಹೊತ್ತು ಹತ್ತುಸಾವಿರ ವರ್ಷ ಶಿರಸಾವಹಿಸಿ ತಪಸ್ಸನ್ನಾಚರಿಸಿದೆ. ಆಗ ನನ್ನ ಮಾನಸ ಸೃಷ್ಟಿಯಿಂದ ಮರೀಚ ಮೊದಲಾದ ಮುನೀಶ್ವರರು ಭೂಮಿಗೆಬಂದರು. ನಾರದನೇ ನನ್ನ ಮೊಟ್ಟ ಮೊದಲ ಮಾನಸಸೃಷ್ಟಿಯು. ಕೊನೆಯಲ್ಲಿ ಹುಟ್ಟಿದವನು ನೀನು ನನ್ನ ಮಾನಸಪುತ್ರರಾದ ಆ ಎಲ್ಲ ಮಹಾಮಹರ್ಷಿಗಳು ವೇದವೇದಾಂತ ಪಾರಂಗತರು. ಕರ್ಮನಿಷ್ಠರು, ಅಹಂಕಾರ ಶೂನ್ಯರು.

ಬಲಿಹರಣ, ಅತಿಥಿಭೋಜನ, ಪಿತೃತರ್ಪಣ, ಸ್ವಾಧ್ಯಾಯ ಮುಂತಾದ ಪಂಚಮಹಾ ಯಜ್ಞಗಳ ಅನುಷ್ಠಾನಗಳು ಒಂದು ಮಹಾತಪಸ್ಸು. ಹೀಗೆಯೇ ಋತುಕಾಲದಲ್ಲಿ ಸ್ವಸ್ತ್ರೀ ಸಮಾಗಮ, ಸತ್ಯವಚನ, ವೈರಭಾವ ತ್ಯಾಗ, ವಿಷ್ಣು, ಶಿವ, ಶಕ್ತಿ, ಗಣಪತಿ, ಸೂರ್ಯ ಈ ಪಂಚಾಯತನ ಪೂಜೆ, ಪರ್ವಕಾಲದಾನ, ಅಹಿಂಸಾವ್ರತ ಇವು ಚಾತುರ್ಮಾಸ್ಯಕಾಲದ ವಿಶಿಷ್ಟ ತಪಸ್ಸುಗಳು ಚಾತುರ್ಮಾಸ್ಯಕಾಲದಲ್ಲಿ ಎರಡು ವಿಧವಾದ ಶುದ್ಧತೆಯನ್ನು ಸಾಧಿಸಬೇಕು. ಇದಕ್ಕೆ ಶೌಚಗ್ರಹಣ ಎಂದು ಕರೆಯುವರು. ಈ ಶುದ್ಧೀಕರಣವು ಬಾಹ್ಯ ಶೌಚ, ಅಂತರಿಕ ಶೌಚ ಎಂದು ಎರಡು ವಿಧ. ನೀರಿನಲ್ಲಿ ಸ್ನಾನಮಾಡಿ ಮಡಿಯಾಗುವುದು ಬಾಹ್ಯಶೌಚ, ಧರ್ಮಶ್ರದ್ಧೆ, ಪ್ರಾಣಿದಯೆ, ಭಗವತ್‌ಧ್ಯಾನ ಮುಂತಾದವುಗಳಿಂದ ಅಂತಃಕರಣವನ್ನು ಶುದ್ಧಗೊಳಿಸುವುದು ಆಂತರಿಕ ಶೌಚ. ಚಾತುರ್ಮಾಸ್ಯದಲ್ಲಿ ಇಂದ್ರಿಯಗಳ ಚಂಚಲತೆಯನ್ನು ದೂರಮಾಡಿ ಮನಸ್ಸನ್ನು ವಶದಲ್ಲಿಟ್ಟುಕೊಳ್ಳುವುದು ಒಂದು ಮಹಾತಪಸ್ಸು. ಇದರಂತೆ ಮಾನವನ ಮೂಲಭೂತ ವೈರಿಗಳಾದ ಕಾಮ, ಕ್ರೋಧ, ಲೋಭ, ದಂಭ, ಅಸೂಯೆ, ಸ್ವಾರ್ಥ, ಅಹಂಕಾರ, ಮುಂತಾದವುಗಳನ್ನು ಗೆದ್ದು ಮನಸ್ಸನ್ನು ಭಗವಂತನಲ್ಲಿ ಕೇಂದ್ರಿಕರಿಸುವುದು ಇನ್ನೊಂದು ದೊಡ್ಡತಪಸ್ಸು. ಈ ಎಲ್ಲ ಆರು ವೈರಿಗಳನ್ನು ಗೆದ್ದು ಮಾನವನು ಪರಿಶುದ್ಧ ಮನಸ್ಕನಾಗ ಬೇಕಾದರೆ ಮೊದಲು ಕೆಲವೊಂದು ವ್ರತ, ನಿಯಮಗಳನ್ನು ಪಾಲಿಸಿ ಮನಸ್ಸನ್ನು ಸನ್ಮಾರ್ಗದಲ್ಲಿಟ್ಟುಕೊಳ್ಳಬೇಕು. ಚಾತುರ್ಮಾಸ್ಯ ಕಾಲದಲ್ಲಿ ಒಪ್ಪತ್ತೇ ಊಟ ಮಾಡಬೇಕು. ಅಥವಾ ನಾಲ್ಕೂ ತಿಂಗಳ ಕಾಲ ಹಾಲನ್ನು ಮಾತ್ರ ಕುಡಿದು ಪಯೋವ್ರತವನ್ನು ಮಾಡಬೇಕು. ಅಷ್ಟು ಮಾಡಲು ಆಗದಿದ್ದರೆ ಪ್ರತಿದಿನವೂ ಕ್ಲುಪ್ತವಾಗಿ ಪರಿಮಿತವಾಗಿ ಊಟಮಾಡಬೇಕು. ಊಟದಲ್ಲಿ ಉಪ್ಪು ಖಾರವನ್ನು ತೊರೆಯಬೇಕು. ಸಾಧ್ಯವಿದ್ದರೆ ಕೇವಲ ಹಣ್ಣುಹಾಲು ಮಾತ್ರ ಸೇವನೆಮಾಡಿ ವ್ರತನಿಷ್ಠೆಯಿಂದಿರಬೇಕು ಕೇವಲ ನೀರು ಕುಡಿದು ಜಲವ್ರತವನ್ನು ಮಾಡಿದರೆ ಹರಿಪ್ರೀತಿಗೆ ಪಾತ್ರನಾಗುವನು.

**ನಾರದ:-** ಹದಿನಾರು ಉಪಚಾರಗಳಿಂದ ಪರಮಾತ್ಮನ ಪೂಜೆ ಮಾಡಬೇಕೆಂದು ತಾವು ಅಪ್ಪಣೆ ಕೊಡಿಸಿದಿರಿ. ನೀವು ಹೇಳಿದ ಆ ಷೋಡಶೋಪಚಾರ ಪೂಜೆಯನ್ನು ಮಾಡುವ ಬಗೆ ಹೇಗೆ?

## ಪುರುಷಸೂಕ್ತದಿಂದಲೇ ಎಲ್ಲಾ ಪೂಜೆ

**ಬ್ರಹ್ಮ:-** ಮಾನವರು ಮಾಡುವ ಭಗವಂತನ ಎಲ್ಲಾ ಪೂಜೆಯೂ ವೇದಮಂತ್ರಗಳಿಂದಲೇ ನೆರವೇರಿಸಲ್ಪಡಬೇಕು. ಎಲ್ಲಾ ಮಂತ್ರಗಳನ್ನು ಹೇಳಿ ಪ್ರತಿನಿತ್ಯವೂ ವಿಷ್ಣುವಿನ ಪೂಜೆಯನ್ನು ಮಾಡಲಾಗುವುದಿಲ್ಲ. ಆದ್ದರಿಂದ ಶಾಸ್ತ್ರದಲ್ಲಿ ಎಲ್ಲಾ ವೇದಮಂತ್ರಗಳಿಂದ ಪೂಜೆ ಮಾಡಲು ಒಂದು ಕ್ರಮವಿದೆ. ವೇದಗಳಲ್ಲಿ ಬರುವ **'ಸಹಸ್ರ ಶೀರ್ಷಾಪುರುಷ'** ಎಂಬ ಪುರುಷಸೂಕ್ತವು ಸರ್ವವೇದಗಳಿಗೂ ಮೂಲಮಂತ್ರವಾಗಿದೆ. ಸರ್ವವೇದರಾಶಿಯೂ ಈ ಪುರುಷಸೂಕ್ತದ ವ್ಯಾಖ್ಯಾನರೂಪ. ಸರ್ವವೇದಾರ್ಥಗಳ ಸಾರೋದ್ಧಾರರೂಪವಾದ ಈ ಪುರುಷಸೂಕ್ತದಿಂದ ದೇವರಿಗೆ ಹದಿನಾರೂ ಉಪಚಾರಗಳನ್ನು ಅರ್ಪಿಸಿ ಪೂಜೆಮಾಡಿದರೆ ಎಲ್ಲ ವೇದಮಂತ್ರಗಳಿಂದ ವಿಧಿಪೂರ್ವಕವಾಗಿ ಭಗವಂತನಿಗೆ ಷೋಡಶೋಪಚಪಾರ ಪೂಜೆಯನ್ನು ಸಮರ್ಪಿಸಿದಂತಾಗುವುದು. ಯಜುರ್ವೇದದಲ್ಲಿ ಬರುವ ಈ ಮಹಾಸೂಕ್ತವು ನಾರಾಯಣಮಯವೇ ಆಗಿರುತ್ತದೆ. ಇದರ ಪಠಣ ಮಾತ್ರದಿಂದಲೇ ಪಾಪ-ಕರ್ಮಗಳು ದೂರವಾಗುತ್ತವೆ. ಸ್ಮೃತಿ ಗ್ರಂಥಗಳಲ್ಲಿ ಹೇಳಿದ ವಿಧಾನದಿಂದ ಈ ಪುರುಷಸೂಕ್ತದ ಹದಿನಾರು ಋಚಾಗಳನ್ನು ತನ್ನ ಶರೀರದಲ್ಲಿ ಪೂಜಕನು ಮೊದಲು ನ್ಯಾಸಮಾಡಿಕೊಳ್ಳಬೇಕು. ಅನಂತರ ಭಗವಂತನ ಪ್ರತಿಮೆ, ಸಾಲಿಗ್ರಾಮ ಶಿಲೆಯಲ್ಲಿ ವಿಶೇಷ ರೂಪದಿಂದ ನ್ಯಾಸ ಮಾಡಬೇಕು.

ವೈಕುಂಠದಲ್ಲಿ ವಿರಾಜಿಸುವ, ಶಂಖ, ಚಕ್ರಗದಾಪದ್ಮಗಳನ್ನು ಧರಿಸಿದ, ಕೌಸ್ತುಭ ಹಾಗೂ ವನಮಾಲಾಗಳಿಂದ ಮಂಡಿತನಾದ ಪೀತಾಂಬರಧಾರಿ ಶ್ರೀಹರಿಯನ್ನು ಆವಾಹನ ಮಾಡಿ, ಮನಸ್ಸಿನಲ್ಲಿ ಧ್ಯಾನಮಾಡಬೇಕು. ಆವಾಹನೆ ಮಾಡುವಾಗ ಪುರುಷಸೂಕ್ತದ ಮೊದಲನೇಯ ಋಚೆಗೆ ಓಂಕಾರವನ್ನು ಜೋಡಿಸಿ '**ಓಂ ಸಹಸ್ರ ಶೀರ್ಷಾ ಪುರುಷ**' ಎಂಬ ಮಂತ್ರದಿಂದ ತನ್ನ ಎದುರು ಇರುವ ವಿಷ್ಣು ಪ್ರತಿಮೆ ಅಥವಾ ಸಾಲಿಗ್ರಾಮ ಶಿಲೆಯಲ್ಲಿ ಶ್ರೀಹರಿಯನ್ನು ಆವಾಹನೆ ಮಾಡಬೇಕು. ಎರಡನೇಯ "**ಪುರುಷ ಏವೇದಂ**" ಎಂಬ ಋಚೆಯಿಂದ ಪಾರ್ಷದನಿಂದ ಸಹಿತನಾದ ಶ್ರೀಹರಿಗೆ ಆಸನವನ್ನು ಸಮರ್ಪಿಸಬೇಕು. ಮೂರನೇಯ ಋಚೆಯಿಂದ ಭಗವಂತನಿಗೆ ಗಂಗೆಯನ್ನು ನೆನೆದು **ಪಾದ್ಯವನ್ನು** ಕೊಡಬೇಕು. ನಾಲ್ಕನೇಯ ಋಚೆಯಿಂದ **ಅರ್ಘ್ಯ**, ಐದನೇಯ ಋಚೆಯಿಂದ **ಆಚಮನವನ್ನು** ಸಮರ್ಪಿಸಬೇಕು. ಆರನೇಯ '**ಯತ್ ಪುರುಷೇಣ ಹವಿಷಾ**' ಎಂಬ ಋಚೆಯಿಂದ ಕಲಶದಲ್ಲಿಯ ನೀರಿನಿಂದ ಭಗವಂತನಿಗೆ **ಶಂಖದ ದ್ವಾರಾದಿಂದ** ಸ್ನಾನವನ್ನು ಮಾಡಿಸಬೇಕು ಏಳನೇಯ ಋಚೆಯಿಂದ ವಸ್ತ್ರವನ್ನು, ಎಂಟನೇಯದರಿಂದ **ಯಜ್ಞೋಪವೀತವನ್ನು**, ಒಂಭತ್ತನೇಯ ಋಚೆಯಿಂದ ಶ್ರೀಹರಿಗೆ **ಚಂದನವನ್ನು**, ಹತ್ತನೇಯದರಿಂದ **ಹೂಗಳನ್ನು**, ಹನ್ನೊಂದನೆಯದಿಂದ **ಧೂಪವನ್ನು**, ಹನ್ನೆರಡನೇಯದರಿಂದ **ದೀಪವನ್ನು**, ಹದಿಮೂರನೇಯದರಿಂದ **ನೈವೇದ್ಯವನ್ನು** ವಿವಿಧ ಭಕ್ಷ್ಯ ಭೋಜ್ಯ ಪದಾರ್ಥಗಳ ನಿವೇದನ ಪೂರ್ವಕವಾಗಿ ಸಮರ್ಪಿಸಬೇಕು. ಹದಿನಾಲ್ಕನೇ ಋಚೆಯಿಂದ ದೇವರಿಗೆ **ಮಂಗಳಾರತಿಯನ್ನು** ಬೆಳಗಬೇಕು. ಹದಿನೈದನೇಯದರಿಂದ ಭಗವಂತನಿಗೆ ನಾಲ್ಕು ಸಲ ಪ್ರದಕ್ಷಿಣೆ ಹಾಕಬೇಕು. ಹದಿನಾರನೇಯದರಿಂದ "ನಾನು ನಿನ್ನ ಭಕ್ತ. ನಿನ್ನ ಕಿಂಕರ. ನನ್ನ ಆತ್ಮವೆಲ್ಲವೂ ನಿನ್ನದೇ" ಎಂದು ಪರಮಾತ್ಮನಿಗೆ ಆತ್ಮಸಮರ್ಪಣೆ ಮಾಡಬೇಕು. ಹೀಗೆ ಹದಿನಾರು ಪೌರುಷವೇದ ಮಂತ್ರಗಳಿಂದ ಹದಿನಾರು ಬಗೆಯ ಪೂಜೆಯ ಉಪಚಾರಗಳನ್ನು ಸಮರ್ಪಿಸಿ ಶ್ರೀಹರಿಯ ಷೋಡಶೋಪಚಾರ ಪೂಜೆಯನ್ನು ಮಾಡಿ ಪ್ರಸನ್ನ ಮನಸ್ಕನಾಗಬೇಕು.

## ಸಾಲಿಗ್ರಾಮ ಪೂಜೆಯ ಮಹತ್ವ

**ಬ್ರಹ್ಮ**:- ಸೃಷ್ಟಿಯ ಆದಿಕಾಲದಲ್ಲಿ ಶ್ರೀಹರಿಯು ಯೋಗನಿದ್ರೆಯಿಂದ, ಜಾಗೃತನಾದ ಬಳಿಕ ನಾನು ಉತ್ಪನ್ನನಾದೆ. ನಾನು ಜನಿಸಿದಾಗ ಪ್ರಪಂಚದ ತುಂಬೆಲ್ಲ ನೀರೇ - ನೀರು. ಆ ಹರಿಯ ಹೊಕ್ಕಳ ಹೊಂದಾವರೆಯಿಂದ ನಾನು ಮೊಟ್ಟಮೊದಲು ಹುಟ್ಟಿಬಂದೆ ನಂತರ ನಾನು ನನ್ನನ್ನು ಸೃಷ್ಟಿಸಿದ ಆ ಪರಮಾತ್ಮನನ್ನು ಕಾಣಬೇಕೆಂಬ ತವಕದಿಂದ ನನ್ನ ಎಂಟೂ ಅರಳುಂಗಗಳಿಂದ ಎಲ್ಲಡೆಗೂ ಹುಡುಕಿದೆ. ಅಪರಂಪಾರವಾದ ಸಾಗರದ ನೀರಿನ ಹೊರತು ನನಗೇನೂ ಗೋಚರಿಸಲಿಲ್ಲ. ಆಗ ನಾನು ಹುಟ್ಟಿಬಂದ ಆ ಕಮಲದ ನಾಳದೊಳಗೇ ಇಳಿದೆ. ಪರಮಾತ್ಮನ ಉದರದಲ್ಲಿಯೇ ಪ್ರವೇಶ ಮಾಡಿದೆ. ಅಲ್ಲಿ ನನಗೆ ಕೋಟಿ ಕೋಟಿ ಬ್ರಹ್ಮಾಂಡಗಳ ದರ್ಶನವಾಯಿತು. ಶ್ರೀವಿಷ್ಣುವಿನ ವಿರಾಟ್ ಶಕ್ತಿದರ್ಶನವಾಯಿತು ಚಕಿತ ಚಮತ್ಕೃತನಾದೆ. ಮತ್ತೆ ಅದೇ ಕಮಲದ ಮೂಲ ನಾಳದಿಂದ ಮೇಲೆದ್ದು ಬಂದೆ. ಅಲ್ಲಿಯೇ ತೇಲಾಡುತ್ತಿರುವ ನಾರಾಯಣನ ನಾಭೀಯ ಮೇಲೆಯೇ ಕುಳಿತು. ಮುಂದೆ 'ಏನು ಮಾಡಬೇಕು' ಎಂದು ತಿಳಿಯದೇ ಯೋಚನಾಮಗ್ನನಾಗಿರುವಾಗ. ಆಗ ಆಕಸ್ಮಿಕವಾಗಿ ಆಕಾಶವಾಣಿ 'ತಪತಪ ತಪ' ಎಂದು ನಭೋವಾಣಿ ಮೂಲಕ ಹರಿಯ ಸಂದೇಶ ಹರಿದು ಬಂದಿತು . ನನ್ನ ನಾಲ್ಕೂ ತಲೆಗಳಿಂದ ವಂದಿಸಿದೆ. ಆ ಜಗದೀಶನ ಅಣತಿಯನ್ನು ತಲೆಯಲ್ಲಿ ಹೊತ್ತು ಹತ್ತುಸಾವಿರ ವರ್ಷ ಶಿರಸಾವಹಿಸಿ ತಪಸ್ಸನ್ನಾಚರಿಸಿದೆ. ಆಗ ನನ್ನ ಮಾನಸ ಸೃಷ್ಟಿಯಿಂದ ಮರೀಚ ಮೊದಲಾದ ಮುನೀಶ್ವರರು ಭೂಮಿಗೆಬಂದರು. ನಾರದನೇ ನನ್ನ ಮೊಟ್ಟ ಮೊದಲ ಮಾನಸಸೃಷ್ಟಿಯು. ಕೊನೆಯಲ್ಲಿ ಹುಟ್ಟಿದವನು ನೀನು ನನ್ನ ಮಾನಸಪುತ್ರರಾದ ಆ ಎಲ್ಲ ಮಹಾಮಹರ್ಷಿಗಳು ವೇದವೇದಾಂತ ಪಾರಂಗತರು. ಕರ್ಮನಿಷ್ಠರು, ಅಹಂಕಾರ ಶೂನ್ಯರು.

ಅನಂತರ ನಾನು ದೈಹಿಕ ಸೃಷ್ಟಿಯನ್ನು ಪ್ರಾರಂಭಿಸಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಉತ್ಪನ್ನರಾದರು. ಮುಂದೆ ಅನುಲೋಮ ವಿಲೋಮ ಕ್ರಮದಿಂದ ಇನ್ನೂ ಅನೇಕ ಜನಾಂಗದ ಜನರು ನನ್ನ ಚರಣತಲದಿಂದಲೇ ಭೂಮಿಗೆಬಂದರು. ಇವರಲ್ಲಿ ವೇದಪಾಠ, ವಿಷ್ಣುಪೂಜೆ, ಬ್ರಹ್ಮಜ್ಞಾನ, ಸದಾಚಾರ, ಮುಂತಾದ ಸದ್ಗುಣಗಳಿಂದ ಮಂಡಿತನಾದವನು ಬ್ರಾಹ್ಮಣನು. ಸ್ತ್ರೀ, ಬಾಲಕ, ಗೋವು, ಬ್ರಾಹ್ಮಣ ಹಾಗೂ ಭೂಮಿಯ ರಕ್ಷಣೆಗಾಗಿ ಸದಾ ಸರ್ವದಾ ಶಸ್ತ್ರಾಸ್ತ್ರ ಹಿಡಿದು ಸನ್ನದ್ಧನಾದವನು ಕ್ಷತ್ರಿಯ. ಪಶುರಕ್ಷಣೆ, ಕೃಷಿ - ಕರ್ಮ, ವ್ಯಾಪಾರ, ಉದ್ಯೋಗಗಳಿಂದ ರಾಷ್ಟ್ರದ ಸಾಂಪತ್ತಿನ ಪರಿಸ್ಥಿತಿಯನ್ನು ಸುಧಾರಿಸುವವನೇ ವೈಶ್ಯ. ವೇದಮಂತ್ರಗಳ ಉಚ್ಚಾರಣೆ ಇಲ್ಲದೇ ಶೂದ್ರನಿಗೆ ಲೋಕಸೇವೆಯಿಂದಲೇ ಮೋಕ್ಷ ದೊರಕುತ್ತದೆ.

## ಬ್ರಹ್ಮನ ಬಾಯಿಂದ ಶೂದ್ರನ ಕತೆ

ಪೂರ್ವಕಾಲದಲ್ಲಿ ಅಂದರೆ ತ್ರೇತಾಯುಗದಲ್ಲಿ ಪೈಜವನ ಎಂಬ ಶೂದ್ರನಿದ್ದನು. ಅವನು ಧರ್ಮನಿಷ್ಠ, ದೇವಬ್ರಾಹ್ಮಣರ ಆರಾಧಕ. ನ್ಯಾಯದಿಂದಲೇ ಅವನು ಸಾಕಷ್ಟು ಧನವನ್ನು ಸಂಪಾದನೆ ಮಾಡಿದ. ಅವನು ತನ್ನ ವಿಶ್ವಾಸಿಗಳಾದ ಸೇವಕರನ್ನು ಸ್ವದೇಶದಲ್ಲಿಯೂ ಪರದೇಶದಲ್ಲಿಯೂ ನೇಮಿಸಿ ವ್ಯಾಪಾರವನ್ನು ಮಾಡಿಸುತ್ತಲಿದ್ದ. ಸತ್ಯವಾದಿಯಾದ ಆ ಪೈಜವನನಿಗೆ ಸದಾಚಾರ ಸಂಪನ್ನಳಾದ ಪರಮ ಪತಿವ್ರತೆಯಾದ ಮಡದಿ ಇದ್ದಳು. ಅವನ ಇಬ್ಬರು ಮಕ್ಕಳು ಪಿತೃಭಕ್ತಿ ಪಾರಾಯಣರು. ವ್ಯವಹಾರದಲ್ಲಿಯೂ ಕುಶಲರು. ಇಷ್ಟೆಲ್ಲಾ ಸಂತಾನ ಸಂಪತ್ತು ಸೌಭಾಗ್ಯಗಳು ಅವನ ಸೊತ್ತಾಗಿದ್ದರೂ ಅವನಲ್ಲಿ ಅಹಂಕಾರವಿರಲಿಲ್ಲ. ಪೈಜವನನ ಇಬ್ಬರು ಸೊಸೆಯಂದಿರು ಕೂಡ ಅತ್ತೆ ಮಾವಂದಿರ ಸೇವೆಮಾಡುತ್ತಾ ಪತಿನಿಷ್ಠರಾಗಿ ಆದರ್ಶ ಜೀವನ ಮಾಡುತ್ತಿದ್ದರು.. ಅವರ ಮನೆಯಲ್ಲಿ ಧನಧಾನ್ಯಗಳ ಕೊರತೆಯಿಲ್ಲ. ಅತಿಥಿಗಳ ಪರಂಪರೆ ಎಂದೂ ವಿಚ್ಛಿನ್ನವಾಗುತ್ತಿರಲಿಲ್ಲ. ಆವರೂ ಮನೆಗೆ ಬಂದ ಅತಿಥಿ ಅಭ್ಯಾಗತರಿಗೆ ಅವರಲ್ಲಿ ಆದರ ಉಪಚಾರ ಆತಿಥ್ಯ ಸತ್ಕಾರ ಮಧುರ ಮಾತುಗಳಿಗೆ ಎಂದೂ ಲೋಪವು ಬರುತ್ತಿರಲಿಲ್ಲ. ಆ ಪೈಜವನನು ಮಳೆಗಾಲದಲ್ಲಿ ಮನೆಗೆ ಬಂದ ಅಥಿತಿಗಳ ಉಟೋಪಚಾರ ನೇರವೇರಿಸಿದ ಬಳಿಕ - ಹೊರಡಲ ನುವಾದವರಿಗೆ ವಸ್ತ್ರಾಭರಣ ವಿಷೇಶವಾಗಿ ಮಳೆಯಿಂದ ರಕ್ಷಿಸಿಕೊಳ್ಳಲು ಕಂಬಳಿ ಮುಂತಾದವುಗಳನ್ನು ಧಾರಾಳವಾಗಿ ದಾನ ಮಾಡುತ್ತಿದ್ದರು. ದೇಶದ ಬೇರೆ ಬೇರೆ ಭಾಗಗಳಲ್ಲಿ ಕೆರೆ, ಕಾಲುವೆ, ಭಾವಿ, ಹೊಂಡ, ಹೊಕ್ಕರಣೆಗಳನ್ನು ತೋಡಿಸಿದ್ದ. ಅನೇಕ ಮಠ ಮಂದಿರ ದೇವಾಲಯಗಳನ್ನು ಕಟ್ಟಿಸಿದ್ದ. ಧರ್ಮ ಕಾರ್ಯಗಳನ್ನು ನಿರಂತರವೂ ನೆರವೇರಿಸುತಲಿದ್ದ. ಚಾತುರ್ಮಾಸ್ಯದಲ್ಲಿ ವಿಶೇಷ ಪೂಜೆ ಏರ್ಪಡಿಸುತ್ತಿದ್ದರು.

ಒಂದು ದಿನ ಬ್ರಹ್ಮಜ್ಞಾನಿಗಳಾದ ಗಾಲವ ಮುನಿಗಳು ಆ ಪೈಜವನ ಆಗಮಿಸಿದರು. ಮಹರ್ಷಿಗಳ ಈ ಆಕಸ್ಮಿಕ ಆಗಮನದಿಂದ ಪೈಜವನನಿಗೆ ಪರಮಾನಂದವಾಯಿತು. ಆ ಸಂಭ್ರಮದಿಂದ ಸ್ವಾಗತಿಸಿದ. ಸಂತೋಷದಿಂದ ಸತ್ಕರಿಸಿದ. ಭಕ್ತಿಯಿಂದ ಪೂಜಿಸಿದ. ಆ ಮುನಿಪುಂಗವರು ಪರಮ ಪ್ರಸನ್ನರಾದರು ಶೂದ್ರನ ಆ ಅತ್ಯಾದರದ ಸತ್ಕಾರದಿಂದ. ಮುನಿಗಳು ಅವನನ್ನು ಪ್ರೀತಿಯಿಂದ ಮಾತನಾಡಿಸಿ.

**ಗಾಲವ:-** ಸೌಮ್ಯ ಸ್ವಭಾವದ ಪೈಜವನನೇ! ನೀನು ಕ್ಷೇಮದಿಂದ ಇರುವಿಯಷ್ಟೇ? ಶ್ರೀಹರಿಯ ಪಾದೋದಕವನ್ನು ಪ್ರತಿದಿನವೂ ತಲೆಯಮೇಲೆ ಧರಿಸುವಿಯಲ್ಲವೆ? ಚಾತುರ್ಮಾಸ್ಯ ಕಾಲದಲ್ಲಿ ವಿಷ್ಣುವಿನ ಭಜನೆ, ಹರಿಕಥಾ, ಶ್ರವಣ, ಪಠಣ, ಧ್ಯಾನ, ವಿಷ್ಣುಸ್ತೋತ್ರ, ವಿಷ್ಣು ನಮಸ್ಕಾರ, ಮುಂತಾದವುಗಳನ್ನು ಅಧಿಕ ಪ್ರಮಾಣದಲ್ಲಿ ಮಾಡುತ್ತಲಿರುವಿಯಷ್ಟೆ?

**ಪೈಜವನ:-** ಪೂಜ್ಯರೇ, ತಮ್ಮ ದಯೆಯಿಂದ ನನ್ನಲ್ಲಿ ಹರಿಭಕ್ತಿ ಅನುದಿನವೂ ವರ್ಧಮಾನ. ಪಾಲಿಸಬೇಕೆಂಬುದೇ ಇದು ತಮ್ಮ ಕೃಪೆ. ಈಗ ತಮ್ಮ ಉಪದೇಶಾಮೃತವನ್ನು ಮಾಡಬೇಕೆಂಬುದೇ ನಮ್ಮ ಹೆಬ್ಬಯಕೆ. ತಾವು ಈಗ ಕಾರಣವನ್ನು ದಯವಿಟ್ಟು ತಿಳಿಸಿ.

**ಗಾಲವ:-** ನಾನು ತೀರ್ಥಯಾತ್ರೆಗೆ ಹೋಗಿದ್ದೆ. ಅನೇಕ ತೀರ್ಥಕ್ಷೇತ್ರಗಳ ಯಾತ್ರೆಯನ್ನು ಮಾಡಿಕೊಂಡು ಬಂದೆ. ಈಗ ಚಾತುರ್ಮಾಸ್ಯ ಕಾಲ ಸನ್ನಿಹಿತವಾಗಿರುವುದರಿಂದ ಸ್ವಗೃಹದಲ್ಲಿಯೇ ಚಾತುರ್ಮಾಸ್ಯ ವ್ರತವನ್ನು ಆರಂಭಿಸಬೇಕೆಂದಿದ್ದೇನೆ. ಈಗ ನನ್ನ ಮನೆಯಲ್ಲಿಯೇ ಆಷಾಢ ಶುದ್ಧ ಏಕಾದಶಿಯಿಂದ ಚಾತುರ್ಮಾಸ್ಯವ್ರತದನಿಯಮಗ್ರಹಣಮಾಡುತ್ತೇನೆ.

**ಪೈಜವನ:-** ಸ್ವಾಮಿ, ನೀವು ನನ್ನ ಮೇಲೆ ಅನುಗ್ರಹಗೈದು ನನಗೆ ಜ್ಞಾನೋಪದೇಶ ವನ್ನು ಮಾಡಬೇಕು. ನಾನು ಜಾತಿಯಿಂದ ಶೂದ್ರ. ನನಗೆ ವೇದಾಧಿಕಾರವು ಇರುವುದಿಲ್ಲ ವೇದ ಮಂತ್ರಗಳ ಜಪವನ್ನು ಮಾಡಲು ಶೂದ್ರನಾದ ನನಗೆ ಸಾಧ್ಯವಿಲ್ಲ. ಆದುದರಿಂದ ಈ ಚಾತುರ್ಮಾಸ್ಯ ಕಾಲದಲ್ಲಿ ಶೂದ್ರರಿಗೂ ಮೋಕ್ಷಪ್ರಾಪ್ತಿಗೆ ಉಪಯುಕ್ತವಾದ ಕ್ರಮವನ್ನು ತಿಳಿಸಿರಿ.

**ಗಾಲವ:-** ಚಾತುರ್ಮಾಸ್ಯದಲ್ಲಿ ಸಾಲಿಗ್ರಾಮದಲ್ಲಿ ನಿತ್ಯ ಸನ್ನಿಹಿತವಾದ ಶ್ರೀಹರಿಯನ್ನು ಪೂಜೆಮಾಡಬೇಕು. ಸಾಲಿಗ್ರಾಮ, ಹಾಗೂ ದ್ವಾರಕೆಯ ಚಕ್ರಾಂಕಿತ, ಎರಡನ್ನೂ ಚಾತುರ್ಮಾಸ್ಯದಲ್ಲಿ ಪೂಜೆ ಮಾಡುವವರಿಗೆ ಮೋಕ್ಷವು ಬಲು ಸಮೀಪ. ಸಾಲಿಗ್ರಾಮ ಶಿಲೆ ಇದ್ದ ಸ್ಥಳದ ಸುತ್ತ ಮುತ್ತಲಿನ ಹನ್ನೆರಡು ಮೈಲು ದೂರದ ಪ್ರದೇಶವೆಲ್ಲವೂ ಪುಣ್ಯಕ್ಷೇತ್ರ ವೆನಿಸುತ್ತದೆ. ಸಾಲಿಗ್ರಾಮದಲ್ಲಿಯ, ಶ್ರೀಹರಿಯ ದರ್ಶನ ಮಾತ್ರದಿಂದಲೇ ಸರ್ವ ಪಾಪಗಳು ಪರಿಹಾರವಾಗುತ್ತದೆ. ಬ್ರಾಹ್ಮಣ, ವೈಶ್ಯ, ಶೂದ್ರ ಎಲ್ಲರಿಗೂ ಸಾಲಿಗ್ರಾಮ ಪೂಜೆಮಾಡುವ ಅವಕಾಶವಿದೆ.

**ಪೈಜವನ:-** ಮಹರ್ಷಿಗಳೇ ತಾವು ವೇದ-ವೇದಾಂತಗಳಲ್ಲಿ ಪರಿಣತರು. ಧರ್ಮಶಾಸ್ತ್ರದಲ್ಲಿ ಮಹಾಪಂಡಿತರು. ತಮ್ಮ ಕಾಯಕನಿಷ್ಠೆ ನಿಮ್ಮ ಆಜ್ಞೆಯೇ ನಮಗೆ ವೇದದ ಆಜ್ಞೆ ತಾವು ಶೂದ್ರರಿಗೂ ಸಾಲಿಗ್ರಾಮ ಪೂಜಿಸುವ ಅಧಿಕಾರ ಇರುತ್ತದೆ. ಎಂದು ಅಪ್ಪಣೆ ಕೊಡಿಸಿದಿರಿ. ಆದರೆ ಸ್ತ್ರೀಯರಿಗೂ ಶೂದ್ರರಿಗೂ ಸಾಲಿಗ್ರಾಮವನ್ನು ಮುಟ್ಟಿ ಪೂಜಿಸಲಿಕ್ಕೆ ಅಧಿಕಾರವೇ ಇಲ್ಲ ಎಂದು ಶಾಸ್ತ್ರದ ನಿಷೇಧ ಇದೆ ಎಂದು ಪೂಜೆಯನ್ನು ಹೇಗೆ ಮಾಡುವುದು?

**ಗಾಲವ:-** ತಮ್ಮ ಕಾಯಕನಿಷ್ಠೆ ಕ್ರಮವಾಗಿ ಭಗವಂತನ ಆರಾಧನೆ ಮಾುವ ಚಾತುರ್ಮಾಸದಲ್ಲಿ ವ್ರತಾಚರಣೆ ಮಾಡುವ ಶೂದ್ರ ಸಾಲಿಗ್ರಾಮ ಪೂಜಿಸು ಬಹುದು. ಚಾತುರ್ಮಾಸ್ಯ ಕಾಲದಲ್ಲಿ ಸಾಲಿಗ್ರಾಮದ ಮುಂದೆ ದೀಪಹಚ್ಚಿ ಪೂಜಿಸಿದ ಸಾಲಿಗ್ರಾಮ ಶಿಲೆಯಲ್ಲಿ ಸನ್ನಿಹಿತನಾದ ಶ್ರೀಹರಿಯನ್ನು ಪಂಚಾಮೃತದಿಂದ ಸ್ನಾನಮಾಡಿಸಿ ಶ್ರೀಗಂಧ, ತುಳಸಿ, ಪುಷ್ಪಗಳನ್ನು ಪೂಜಿಸುವವರು ಶ್ರೀಹರಿಯ ಪರಮಾನುಗ್ರಹಕ್ಕೆ ಪಾತ್ರರಾಗುತ್ತಾರೆ.

## ಇಪ್ಪತ್ತುನಾಲ್ಕು ಬಗೆಯ ಸಾಲಿಗ್ರಾಮ

ಈ ಸಾಲಿಗ್ರಾಮ ಶಿಲೆಗಳು ಇಪ್ಪತ್ನಾಲ್ಕು ಬಗೆಯಾಗಿರುತ್ತವೆ. ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷಿಕೇಶ, ಪದ್ಮನಾಭ, ದಾಮೋದರ, ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ನಾರಸಿಂಹ, ಅಚ್ಯುತ, ಜನಾರ್ದನ, ಉಪೇಂದ್ರ, ಹರಿ, ಶ್ರೀಕೃಷ್ಣ ಹೀಗೆ ಇಪ್ಪತ್ನಾಲ್ಕು ಬಗೆಯಾದ ಸಾಲಿಗ್ರಾಮಗಳು ಇರುತ್ತವೆ. ಈ ಎಲ್ಲ ಸಾಲಿಗ್ರಾಮಗಳು ಭಕ್ತಿಯಿಂದ ಪೂಜಿಸಿ ಆವಾಹನವೇ ಮುಂತಾದ ಷೋಡಶೋ ಉಪಚಾರ

ಗಳಿಂದ ಅರ್ಚನೆ ಮಾಡಿದರೆ. ಶೂದ್ರನೇ ಮೊದಲಾದ ಎಲ್ಲ ಜಾತಿ ಜನಾಂಗದವರಿಗೂ ಮುಕ್ತರಾಗುವರು. ಸಂದೇಹವಿರುವುದಿಲ್ಲ ಒಂದು ವರ್ಷದಲ್ಲಿ ಬರುವ ಇಪ್ಪತ್ನಾಲ್ಕು ಏಕಾದಶೀ ದಿನದಂದು ಈ ಇಪ್ಪತ್ನಾಲ್ಕು ಸಾಲಿಗ್ರಾಮ ಗಳನ್ನು ಪೂಜಿಸಬೇಕು. ಚಾತುರ್ಮಾಸ್ಯ ಕಾಲದಲ್ಲಿ ಏಕಾದಶೀ ದಿನದಂದು ಯಾವುದೇ ಒಂದು ಸಾಲಿಗ್ರಾಮವನ್ನು ಪೂಜಿಸಿದರೆ ಅಕ್ಷಯ ಪುಣ್ಯಫಲವು ಪ್ರಾಪ್ತವಾಗುತ್ತದೆ.

## ಹರಿಹರ ರೂಪದದಿಂದ ಮಹಾದೇವರ ಪ್ರಾದುಭಾವ ಸಾಲಿಗ್ರಾಮದ ಮಹತ್ವ

**ಗಾಲವ:-** ಭಗವಾನ್ ವಿಷ್ಣುವು ಸಾಲಿಗ್ರಾಮ ರೂಪದಿಂದ ನಿಂತು ಕೊಂಡಿದ್ದಾನೆ ಈ ಲಿಂಗಪೂಜೆಯನ್ನು ಮಾಡಿದವರಿಗೆ ಪರಮಲೋಕ ಪ್ರಾಪ್ತಿ ನಿಶ್ಚಿತ. ಪರಮೇಶ್ವರನು ಲಿಂಗರೂಪದಿಂದ ನಿಂತುಕೊಂಡ ವೃತ್ತಾಂತವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಬ್ರಹ್ಮದೇವರ ಹೆಬ್ಬೆರಳಿನಿಂದ ದಕ್ಷಪ್ರಜಾಪತಿಯು ಜನಿಸಿದ. ಅವನ ಅನೇಕ ಕನ್ನೆಯರಲ್ಲಿ ಸತೀದೇವಿಯೂ ಒಬ್ಬಳು. ಅವಳು ಸ್ವಭಾವದಿಂದ ಸ್ವಾಧಿ. ಅವಳ ವಿವಾಹ ಶಂಕರನೊಂದಿಗೆ ವೇದೋಕ್ತ ವಿಧಿಯಿಂದ. ಮದುವೆಯಾದ ಬಳಿಕ ಮಾವನಿಗೆ ಬುದ್ಧಿಭ್ರಂಶ. ಮಹಾದೇವರಲ್ಲಿ ದ್ವೇಷ. ದಕ್ಷಪ್ರಜಾಪತಿಯಿಂದ ಒಂದು ಮಹಾಯಜ್ಞದ ಪ್ರಾರಂಭ. ಎಲ್ಲ ದೇವಾಧಿದೇವತೆಗಳಿಗೂ ಆಹ್ವಾನ ದಕ್ಷ ಪ್ರಜಾಪತಿಯೀದ ಆದರೆ ಅಳಿಯ ಪರಮೇಶ್ವರನಿಗೆ ಮಾತ್ರ ಆಹ್ವಾನವಿಲ್ಲ. ಆದರೂ ತವರು ಮನೆಗೆ ಬಂದಳು ಗಿರಿಜೆ. ತಾಯಿಯ ಮನೆಯ ಬಗೆಗೆ ಇನ್ನಿಲ್ಲದ ಅಭಿಮಾನ ಪ್ರೇಮ ಆದರಗಳು ಆ ಸತೀದೇವಿಯ ಹೃದಯದಲ್ಲಿ ದಕ್ಷಪ್ರಜಾಪತಿಯಿಂದ ಪರಮೇಶ್ವರನ ಧಿಕ್ಕಾರ. ಕಟುಭಾಷೆಯಲ್ಲಿ ಈಶ್ವರನಿಂದೆ ಇದರಿಂದ ಸತೀಮಣಿಗೆ ಮಹಾಕೋಪ. ಆ ಕ್ರೋಧಾಗ್ನಿಯು ಆತ್ಮಾಗ್ನಿ ರೂಪದಲ್ಲಿ ಪರಿಣಿತವಾಯಿತು. ಆ ಯೋಗಾಗ್ನಿಯಲ್ಲಿಯೇ ಸತೀದೇವಿಯ ಆತ್ಮಾಹುತಿ ಮರಣ ಕಾಲದಲ್ಲಿ ಸತೀದೇವಿಗೆ ತಂದೆಯ ಬಗೆಗೆ ಕೋಪ ಬಂದಿದ್ದರೆ, ಪತಿಯ ಬಗೆಗೆ ಮಾತ್ರ ಸ್ನೇಹ ಶೀತಲವಾಗಿತ್ತು. ಅವಳ ಹೃದಯ ಹಿಮಾಲಯದಂತೆ ತಣ್ಣಗಿನ ಮನಸ್ಸಿನಿಂದ ತನ್ನ ಪತಿಯನ್ನು ಸ್ನೇಹ ಶೀತಳಾಗಿಯೇ ನೆನೆದಳು. ಆ ವಾಸನೆಯ ಪ್ರಭಾವದಿಂದ ಅವಳು ಮರುಜನ್ಮದಲ್ಲಿ ಹಿಮಾಲಯ ಪರ್ವತದಿಂದಲೇ ಹೊಸಹುಟ್ಟನ್ನು ಪಡೆದು ಪಾರ್ವತಿಯಾಗಿ ಮೈದಾಳಿ ಬಂದಳು. ಪರಮೇಶ್ವರನನ್ನು ಕುರಿತು ಹಿಮಗಿರಿಯ ಅಂಚಿನಲ್ಲಿ ಕುಳಿತು ಆರಂಭವಾಯಿತು. ಆ ಅಬಲೆಯ ಪ್ರಚಂಡ ತಪಸ್ಸು. ಅವಳ ತಪಸ್ಸಿನ ಉಗ್ರತೆ ದೇವತೆಗಳ ಮನಸ್ಸಿನ ವ್ಯಗ್ರತೆಗೆ ಕಾರಣವಾಯಿತು. ಮೂರು ಲೋಕಗಳೂ ಆಕಂಪಿತ ಶಂಕರನ ಹೃದಯವೂ ಅನುಕುಪಿತ. ಕೂಡಲೇ ಶಿವ ಒಲಿದುಬಂದ. ಒಲಿದುನಿಂದ ಪ್ರೀತಿಯಿಂದ ಅವಳ ಪ್ರಾಣಿಗ್ರಹಣ ಮಾಡಿದ. ''ದೇವಿ, ನೀನು ನಿನ್ನ ತಪಸ್ಸಿನಿಂದ ನನ್ನನ್ನು ಗೆದ್ದುಕೊಂಡಿರುವೆ ನಿನಗಾಗಿ ಏನು ಮಾಡಲಿ ಹೇಳು'' ಎಂದು ನಲುಮೆದುಂಬಿ ಕೇಳಿದ. ಆಗ ಪಾರ್ವತಿಯು ಲಜ್ಜೆಯಿಂದ ಹೇಳಿದಳು- ''ದೇವ ತಾವು ನನ್ನನ್ನು ಮದುವೆ ಮಾಡಿ ಕೊಡಲು ನನ್ನ ತಂದೆಯನ್ನು ಕೇಳಿರಿ. ಅವರು ಧಾರೆಯೆರೆದು ಕೊಟ್ಟ ಬಳಿಕ ನಾನು ನಿಮ್ಮವಳೇ' ಎಂದು ನುಡಿದಳು.

ಸತೀದೇವಿಯ ಮಾತಿನಂತೆ ಪರಮೇಶ್ವರನು ಸಪ್ತರ್ಷಿಗಳನ್ನು ಹಿಮಾಲಯನ ಬಳಿ ಕಳಿಸಿದ. ವಿವಾಹದ ನಿಶ್ಚಿತಾರ್ಥವನ್ನು ಮಾಡಿಸಿದ. ಹಿಮ-ಪ್ರಸ್ಥದಲ್ಲಿ ಪಾರ್ವತಿ ಪರಮೇಶ್ವರರ ಮದುವೆ ಸಮಾರಂಭವು ವೈಭವದಿಂದ ನೆರವೇರಿತು. ಮದುವೆ ಆದಬಳಿಕ ಮಹಾದೇವನು ಮಡದಿಯನ್ನು ಕರೆದುಕೊಂಡು ತನ್ನ ಸುಂದರ ಮಂದಿರವಾದ

ಮಂದರಾಚಲಕ್ಕೆ ಬಂದ. ಅಲ್ಲಿ ಆ ಗಂಗಾಧರನ ಆಜ್ಞೆಯಂತೆ ಅತ್ಯುತ್ತಮವಾದ ಮಣಿಮಯ ಮಂದಿರವನ್ನು ವಿಶ್ವಕರ್ಮನು ನಿರ್ಮಾಣ ಮಾಡಿದ. ಶಿವಸತಿಯರು ತಮ್ಮ ಆ ನವ ನಿರ್ಮಿತವಾದ ಮಂದಿರದಲ್ಲಿ ಉಲ್ಲಾಸದಿಂದಿರುವಾಗ ಅಲ್ಲಿಗೆ ವಾಯುರೂಪವನ್ನು ಧರಿಸಿ ಕಾಮನು ಆಗಮಿಸಿದ. ಮಹಾದೇವರಿಗೆ ಸಾಷ್ಟಾಂಗ ವಂದಿಸಿ ವಿನಂತಿಸಿಕೊಂಡ. ''ವೃಷಭಧ್ವಜನೇ, ನಿನಗೆ ನಮಸ್ಕಾರ. ದೇವ-ದೇವ, ನೀನು ನನ್ನನ್ನು ರಕ್ಷಿಸು, ರಕ್ಷಿಸು, ನನ್ನ ಮೇಲೆ ಅನುಗ್ರಹ ಮಾಡು ನಿನ್ನ ಕೋಪಾಗ್ನಿಯಲ್ಲಿ ನನ್ನ ದೇಹವೆಲ್ಲವೂ ಸುಟ್ಟು ಬೂದಿಯಾಗಿದೆ. ಈಗ ನಾನು ಅನಂಗನಾಗಿ ಕುಳಿತಿದ್ದೇನೆ. ನನಗೆ ಕರುಣೆಯಿಂದ ದೇಹದಾನವನ್ನು ಮಾಡು. ನಾನು ಮೊದಲಿನಂತೆ ಸುಂದರವಾದ ಶರೀರವನ್ನು ಹೊಂದಿ ಆನಂದಪಡುವಂತೆ ಅನುಗ್ರಹಿಸು.

**ಶಂಕರ:-** ''ಕಾಮದೇವ, ನಾನು ಹಿಂದೆ ನಿನ್ನನ್ನು ಪಾರ್ವತಿಯ ಎದುರು ಸುಟ್ಟು ಬೂದಿ ಮಾಡಿದ್ದೆ. ಈಗ ನೀನು ಮತ್ತೆ ನಾನು ಕೊಡಲಿರುವ ಈ ದಿವ್ಯ ಶರೀರವನ್ನು ಧರಿಸಿ ಅವಳ ಎದುರು ಹೋಗು. ಅವಳ ಸೇವೆಯನ್ನು ಮಾಡು. ನಿನ್ನನ್ನು ಸುಟ್ಟಿದ್ದಕ್ಕಾಗಿ ಸಿಟ್ಟಾದ ಅವಳಿಗೆ ಸಮಾಧಾನವಾಗಲಿ.''

ಹೀಗೆ ಕರುಣಾಳುವಾದ ಆ ತ್ರಿಶೂಲಿಯು ಮನ್ಮಥನಿಗೆ ಮನಮೋಹಕವಾದ ದಿವ್ಯ ದೇಹವನ್ನು ಮತ್ತೆ ದಯಪಾಲಿಸಿದ. ಅದರಿಂದ ಕಾಮನು ಕೃತಾರ್ಥನಾಗಿ ಮೊದಲಿಗಿಂತ ಇಮ್ಮಡಿಯಾದ ಕಮನೀಯತೆಯಿಂದ ಕಂಗೊಳಿಸತೊಡಗಿದ.

## ಶಿವ ವಿಷ್ಣುಗಳ ಐಕ್ಯ

ಪ್ರಾಚೀನಕಾಲದಲ್ಲಿ ದೇವದಾನವರ ನಡುವೆ ಒಂದು ಘೋರ ಹೋರಾಟವಾಯಿತು. ಆಗ ಗೆಲುವು ದೈತ್ಯರ ಕೊರಳಿಗೆ ಮಾಲೆ ಹಾಕಿತು. ದೇವತೆಗಳಿಗೆಲ್ಲ ಸೋಲು, ಸಾವು ಬದುಕುಳಿದವರಿಗೆ ಮೈ ಮನಗಳಲ್ಲಿ ನೋವು, ಅವರೆಲ್ಲರೂ ಸತ್ಯಲೋಕಕ್ಕೆ ಪಯಣಿಸಿದರು. ಅಲ್ಲಿ ಬ್ರಹ್ಮದೇವರ ಸಾಕ್ಷಾತ್ಕಾರ. ದೇವತೆಗಳಿಂದ ನಮಸ್ಕಾರ. ಅವರ ಪ್ರಾರ್ಥನೆಯನ್ನು ಕೇಳಿ ಬ್ರಹ್ಮದೇವರ ಪ್ರತ್ಯುತ್ತರ.

**ಚತುರ್ಮುಖ:-** ''ಸುರೋತ್ತಮರೇ, ಇದೊಂದು ಪೂರ್ವಕಾಲದಲ್ಲಿ ನಡೆದ ವೃತ್ತಾಂತ. ಹಿಂದೆ ಒಮ್ಮೆ ಶಿವಭಕ್ತರಲ್ಲೂ, ವಿಷ್ಣುಭಕ್ತರಲ್ಲೂ ಕಲಹ ಪ್ರಾರಂಭ. ವಿಷ್ಣುಶ್ರೇಷ್ಠ ಎಂದು ಕೆಲವರು ಶಿವನೇಶ್ರೇಷ್ಠ ಎಂದು ಹಲವರು ಇಬ್ಬರೂ ವಾದ ಹೂಡಿದರು. ವಾದ ವಿಕೋಪಕ್ಕೆ ಹೋಗಿ ರಣಭೂಮಿಯಾಗಿ ಮಾರ್ಪಟ್ಟಿತು. ಆಗ ಶಿವ ಮತ್ತು ವಿಷ್ಣು ಇಬ್ಬರೂ ಏಕೀಭೂತರಾಗಿ ದೇವತೆಗಳ ಎದುರು ಹರಿಹರ ಸ್ವರೂಪದಿಂದ ಬಂದುನಿಂತುಕೊಂಡರು. ಅದರ ಅರ್ಧ ಶರೀರವು ಶಿವ. ಅರ್ಧ ಶರೀರಿಂದ ವಿಷ್ಣು. ಒಂದು ಕಡೆ ವಿಷ್ಣು ಶಂಖ ಚಕ್ರಾದಿಗಳು ಇನ್ನೊಂದೆಡೆ ಶಿವನ ತ್ರಿಶೂಲಾದಿಗಳು. ಒಂದು ಕಡೆ ಗರುಡ ಮತ್ತೊಂದೆಡೆ ನಂದಿ ಒಂದು ಭಾಗ ಮೋಡದಂತೆ ಕಪ್ಪು. ಇನ್ನೊಂದು ಭಾಗ ಕರ್ಪೂರದಂತೆ ಬಿಳುಪು ಹೀಗೆ ಸ್ಪಷ್ಟವಾಗಿಯೇ ಹರಿಹರರು ತಮ್ಮ ತಮ್ಮ ವರ್ಣ, ವಾಹನ, ಲಾಂಛನ, ಲಕ್ಷಣಗಳಿಂದ ಹೊಂದಿಕೊಂಡು ಒಂದೇ ಶರೀರದಲ್ಲಿ ಏಕೀಭೂತರಾಗಿ ಹರಿಹರ ಸ್ವರೂಪದಿಂದ ಪ್ರಕಟವಾಗಿ ನಿಂತುಕೊಂಡಿದ್ದನ್ನು ಕಂಡು 'ಹರ ಸರ್ವೋತ್ತಮ' 'ಹರಿಸರ್ವೋತ್ತಮ' ಎಂದು ಬಡಿದಾಡುವ ಭಕ್ತರು ತಮ್ಮ ತಮ್ಮಲ್ಲಿಯ ಭೇದ ಭಾವವನ್ನು ಮರೆತು ಒಮ್ಮನಸ್ಸಿನಿಂದ ಆ ಹರಿ ಹರೇಶ್ವರನನ್ನು ವಂದಿಸಿದರು. ಅಂದಿನಿಂದ ಎಲ್ಲರೂ

ಹರಿಹರರಲ್ಲಿ ಇರುವ ಸಾಮರಸ್ಯವನ್ನು ಮನಗಂಡು ವೇದಶಾಸ್ತ್ರಗಳ ರಹಸ್ಯವೇ ಈ ಹರಿಹರಾದ್ವೈತ ಎಂದು ತಿಳಿದು ಆ ಹರಿಹರೇಶ್ವರರನ್ನು ಉಪಾಸನೆಮಾಡಿ ಎಲ್ಲರೂ ಮುಕ್ತರಾದರು. ಆ ಮಂದಾರ ಪರ್ವತದಲ್ಲಿ ಆ ಮೂರ್ತಿಯು ಭಕ್ತರ ಮೇಲೆ ಅನುಗ್ರಹ ಮಾಡಲಿಕ್ಕಾಗಿ ನೆಲೆ ನಿಂತಿದೆ. ನೀವು ಆ ಹರಿಹರೇಶ್ವರನಿಗೆ ಶರಣು ಹೋಗಿರಿ.''

ಹೀಗೆ ಹೇಳಿ ಬ್ರಹ್ಮದೇವರು ಅಂತರ್ಧಾನರಾದರು. ಅನಂತರ ಅಗ್ನಿಯೇ ಮೊದಲಾದ ದೇವತೆಗಳು ಮಂದಾರ ಪರ್ವತಕ್ಕೆ ಆಗಮಿಸಿದರು. ಅಲ್ಲಿ ಆ ಹರಿಹರೇಶ್ವರರನ್ನು ಹುಡುಕಿದರು. ಚಾತುರ್ಮಾಸ್ಯ ಪೂರ್ಣವಾಗುವವರೆಗೆ ಆ ಹರಿಹರೇಶ್ವರ ದೇವರನ್ನು ಮನದಲ್ಲಿಯೇ ಧ್ಯಾನಮಾಡಿದರು. ಅವರ ಧ್ಯಾನರೂಪ ತಪಸ್ಸಿನಿಂದ ಪ್ರಸನ್ನನಾಗಿ ಪರಮೇಶ್ವರನು ತನ್ನ ದರ್ಶನವನ್ನು ಕರುಣಿಸಿದನು. ಮತ್ತು ಹೇಳಿದನು- ''ದೇವೋತ್ತಮರೇ, ನಿಮ್ಮನ್ನು ಪೀಡಿಸಿ ಕಾಡಿಸಿದ ದುರುಳ ದಾನವರನ್ನೆಲ್ಲ ನಾನು ವಧಿಸಿದ್ದೇನೆ. ನೀವು ನಿಮ್ಮ ನಿಮ್ಮ ಲೋಕಗಳಿಗೆ ಹೋಗಿರಿ. ನಿಮ್ಮ ನಿಮ್ಮ ಅಧಿಕಾರ ಸ್ಥಾನಮಾನಗಳನ್ನು ಮೊದಲಿನಂತೆ ಹೊಂದಿ ಸುಖದಿಂದ ನಿಮ್ಮ ಪದವಿಗಳಲ್ಲಿ ಆಸೀನರಾಗಿರಿ. ಹೀಗೆ ಪರಶಿವನಿಂದ ಅನುಗೃಹೀತರಾದ ದೇವತೆಗಳು ತಮ್ಮ ತಮ್ಮ ತಾಣಗಳಿಗೆ ತೆರಳಿ ಅಧಿಕಾರಗಳನ್ನು ಸ್ವೀಕರಿಸಿ ಸಂತೋಷದಿಂದ ತಮ್ಮ ಪುಣ್ಯ ಪದಗಳಲ್ಲಿ ಪುನಃ ಪ್ರತಿಷ್ಠಿತರಾದರು.

ಹಿಂದೆ ಮತ್ತೊಂದು ಸಮಯದಲ್ಲಿ ಶಿವ ವಿಷ್ಣು ಮತ್ತು ಉಳಿದೆಲ್ಲ ದೇವತೆಗಳು ಪಾರ್ವತಿಗೆ ವಿರುದ್ಧವಾಗಿ ನಡೆದರು. ಅದರಿಂದ ಆ ತಾಯಿಗೆ ಕೋಪಬಂದಿತು. ಅವಳು ಎಲ್ಲ ದೇವತೆಗಳಿಗೂ ''ನೀವೆಲ್ಲರೂ ಭೂಲೋಕದಲ್ಲಿ ಕಲ್ಲಿನ ಬೊಂಬೆಗಳಾಗಿರಿ'' ಎಂದು ಶಪಿಸಿದಳು. ವಿಷ್ಣುವಿಗೆ ದುಂಡಾದ ಕಲ್ಲಾಗಿ ಬೀಳು ಎಂದು ಶಾಪಕೊಟ್ಟಳು. ಅದರಂತೆ ತನ್ನ ಪತಿಯಾದ ಪರಮೇಶ್ವರನಿಗೂ ಕೂಡ 'ನೀನು ಬ್ರಾಹ್ಮಣರ ಶಾಪದಿಂದ ಲಿಂಗಾಕಾರ ಕಲ್ಲಾಗಿ ಬೀಳು' ಎಂದು ಶಾಪ ಹಾಕಿದಳು. ಆಗ ಪಾರ್ವತಿಯು ಕೈಜೋಡಿಸಿ ತನ್ನನ್ನು ಪ್ರಾರ್ಥಿಸುತ್ತಿರುವ ವಿಷ್ಣುವಿನ ಮೇಲೆ ಪ್ರಸನ್ನಳಾಗಿ ಹೇಳಿದಳು. 'ಜನಾರ್ದನಾ, ಬ್ರಹ್ಮದೇವರ ಪ್ರೀತಿಯ ಪುತ್ರಿಯಾದ ಗಂಡಕೀ ನದಿಯು ಭೂಲೋಕದಲ್ಲಿ ಹರಿಯುತ್ತಲಿದೆ. ಅದರ ನಿರ್ಮಲವಾದ ನೀರಿನಲ್ಲಿ ಶಿಲಾರೂಪದಿಂದ ನೀನು ಇರಬೇಕು. ಪುರಾಣವನ್ನು ಬಲ್ಲವರು ಕೇಶವ ನಾರಾಯಣ ಇಪ್ಪತ್ನಾಲ್ಕು ರೂಪಗಳಿಂದ ನಿನ್ನನ್ನು ಕಲ್ಲಿನಲ್ಲಿ ಕಾಣಬೇಕು. ನಿನ್ನ ಮುಖದಲ್ಲಿ ಸುವರ್ಣವಿರುವುದು ಸಾಲಿಗ್ರಾಮವೆಂದು ನಿನಗೆ ಹೆಸರು ಬರುವುದು. ಗೋಲಾಕಾರದ ತೇಜೋಮಯವಾದ ಶರೀರದಿಂದ ಯುಕ್ತವಾದ ಸಾಲಿಗ್ರಾಮದಲ್ಲಿ ನೀನು ನಿತ್ಯವೂ ಸನ್ನಿಹಿತನಾಗಿ ಭಕ್ತರಿಗೆಲ್ಲ ಮೋಕ್ಷವನ್ನು ಕರುಣಿಸು. ಮತ್ತು ಸಾಲಿಗ್ರಾಮ ಶಿಲೆಯಲ್ಲಿ ವ್ಯಾಪ್ತನಾದ ನಿನ್ನನ್ನು ಪೂಜೆಮಾಡುವವರ ಕಷ್ಟನಷ್ಟಗಳನ್ನು ಪರಿಹರಿಸಿ ಅವರೆಲ್ಲರ ಇಷ್ಟಾರ್ಥಗಳನ್ನು ಈಡೇರಿಸು.

## ಸಾಲಿಗ್ರಾಮ ಪೂಜೆ, ದ್ವಾದಶಾಕ್ಷರ ಮಂತ್ರ ಮತ್ತು ರಾಮನಾಮದ ಮಹಿಮೆ

**ಗಾಲವ:-** ಗಂಡಕೀ ನದಿಯಲ್ಲಿ ಸಾಲಿಗ್ರಾಮ ರೂಪದಿಂದ ಶ್ರೀವಿಷ್ಣುವು ಪ್ರಕಟನಾಗುತ್ತಾನೆ. ನರ್ಮದಾ ನದಿಯಲ್ಲಿ ನರ್ಮದೇಶ್ವರರೂಪದಿಂದ ಶಿವನು ಆವಿರ್ಭವಿಸುತ್ತಾನೆ. ಇವೆರಡೂ ಹರಿಹರರ ಸ್ವಯಂವ್ಯಕ್ತರೂಪಗಳು. ಸಾಲಿಗ್ರಾಮಶಿಲೆಯಲ್ಲಿ ವ್ಯಾಪ್ತನಾದ ಶ್ರೀಹರಿಯು ಕೇಶವಾದಿ ಇಪ್ಪತ್ತನಾಲ್ಕು ರೂಪಗಳಿಂದ ಉಪಲಬ್ಧನಾಗಿರುತ್ತಾನೆ. ಆದರೆ ಶಿವನು ಮಾತ್ರ ನರ್ಮದೆಯಿಂದ ಒಂದೇ ರೂಪದಿಂದ

ಲಿಂಗಾಕಾರವಾಗಿ ವ್ಯಕ್ತನಾಗುತ್ತಾನೆ. ಸಾಲಿಗ್ರಾಮ ಶಿಲೆಗಳು ದೊರಕುವ ಗಂಡಕೀನದಿಯ ನಿರ್ಮಲವಾದ ನೀರಿನಲ್ಲಿಮಿಂದು ಮಾನವರು ಮುಕ್ತಿ ಮಾರ್ಗಮಿಗಳಾಗುತ್ತಾರೆ. ಗಂಡಕಿಯಲ್ಲಿ ಪ್ರಕಟವಾದ ಸಾಲಿಗ್ರಾಮ ಶಿಲೆಯಲ್ಲಿ ವಿಷ್ಣುವಿನ ಪೂಜೆಯು ಸರ್ವಪಾಪ ಪರಿಹಾರಕ. ಚಾತುರ್ಮಾಸ್ಯ ಕಾಲದಲ್ಲಿ ಸಾಲಿಗ್ರಾಮದಲ್ಲಿರುವ ವಿಷ್ಣುವಿನ ಅರ್ಚನೆಯಿಂದ ಸೌಭಾಗ್ಯಪ್ರಾಪ್ತಿ. ಬಲಮುರಿಶಂಖ, ಲಕ್ಷ್ಮೀನಾರಾಯಣ ಸಾಲಿಗ್ರಾಮ, ತುಳಸೀಗಿಡ, ದ್ವಾರಕೆಯ ಚಕ್ರಾಂಕಿತ, ಈ ನಾಲ್ಕು ಎಲ್ಲಿ ಪೂಜಿಸಲ್ಪಡುವವೋ ಅಲ್ಲಿ ಐಶ್ವರ್ಯ, ವಿಜಯ, ವಿಷ್ಣುಭಕ್ತಿ ಮತ್ತು ಸಂಸಾರಮುಕ್ತಿ ಈ ನಾಲ್ಕು ಸುಲಭವಾಗಿ ದೊರಕುತ್ತವೆ.

ಹಿಂದೆ ಒಂದು ದಿನ ಪಾರ್ವತಿದೇವಿಯು ತನ್ನ ಪತಿ ಪರಮೇಶ್ವರನನ್ನು ಕುರಿತು ಪ್ರಶ್ನೆ ಮಾಡಿದಳು.

**ಪಾರ್ವತಿ:-** ಪೂಜ್ಯ ಪರಮೇಶ್ವರ, ತಾವು ಕೈಯಲ್ಲಿ ರುದ್ರಾಕ್ಷಿಮಾಲೆಹಿಡಿದು ಯಾವಾಗಲೂ ಯಾವುದೋ ಮಂತ್ರವನ್ನು ಜಪಿಸುತ್ತೀರಿ. ನೀವೇ ದೇವೋತ್ತಮ. ಆದುದರಿಂದಲೇ ನಿಮಗೆ ಹೆಸರು ಮಹಾದೇವ ಎಂದು. ನೀವು ಬೇರೆ ಯಾವ ದೇವರನ್ನು ಧ್ಯಾನ ಮಾಡುತ್ತೀರಿ? ನಿಮಗಿಂತಲೂ ಶ್ರೇಷ್ಠರಾದ ದೇವರು ಯಾರಿದ್ದಾರೆ? ನೀವು ಮನಸ್ಸಿನಲ್ಲಿ ಧ್ಯಾನಮಾಡಿ ರುದ್ರಾಕ್ಷಿಮಾಲೆಯಿಂದ ಜಪಿಸುತ್ತಿರುವ ಆ ಸರ್ವಶ್ರೇಷ್ಠ ಮಂತ್ರ ಯಾವುದು?

**ಪರಮೇಶ್ವರ:-** ಪ್ರಿಯೆ ಪಾರ್ವತಿ! ಪ್ರಪಂಚದಲ್ಲಿ ಎಲ್ಲಾ ಮಂತ್ರಗಳಲ್ಲಿ ವಿಷ್ಣು ಸಹಸ್ರನಾಮವು ಪರಮಶ್ರೇಷ್ಠ. ವೇದೋಕ್ತವಾದ ಆ ವಿಷ್ಣುವಿನ ಗುಣಗಳೆಲ್ಲವೂ ಈ ಸಾವಿರನಾಮಗಳಿಂದ ಪ್ರತಿಪಾದಿತವಾಗಿರುತ್ತವೆ. ಆ ವಿಷ್ಣು ಸಹಸ್ರನಾಮದ ಸಾರಭೂತವಾದ ರಾಮಮಂತ್ರವನ್ನು ನಾನು ಜಪಮಾಲೆಯನ್ನು ಹಿಡಿದು ಯಾವಾಗಲೂ ಜಪಿಸುತ್ತೇನೆ. ಈ ರಾಮಮಂತ್ರವು ಸಾಕ್ಷಾತ್ ಸಾರತರವಾದುದು. ಪ್ರಭು ಶ್ರೀರಾಮಚಂದ್ರನ ಅವತಾರವು ಸರ್ವಜನರ ಉದ್ಧಾರಕ್ಕಾಗಿಯೇ ಆಗಿತ್ತು. ಅವನ ಈ ರಾಮಮಂತ್ರವೂ ಸಹ ಲೋಕೋದ್ಧಾರಕ್ಕಾಗಿಯೇ ಇರುತ್ತದೆ. **"ಓಂ ನಮೋ ಭಗವತೇ ವಾಸುದೇವಾಯ"** ಎಂಬ ದ್ವಾದಶಾಕ್ಷರ ಮಂತ್ರವು ಭವತಾರಕವಾಗಿರುತ್ತದೆ. ಅಕಾರ, ಉಕಾರ, ಮಕಾರ, ಈ ಮೂರು ಅಕ್ಷರಗಳಿಂದೊಡಗೂಡಿದ, ಓಂಕಾರ ರೂಪ ಪ್ರಣವ ಮಂತ್ರದಿಂದ ಪುರಸ್ಕೃತವಾದ ಈ ವಾಸುದೇವ ದ್ವಾದಶಾಕ್ಷರ ಮಂತ್ರವು ಸಂಪೂರ್ಣ ಜಗತ್ತಿಗೆ ಆಧಾರಭೂತವಾಗಿದ್ದು ಚಾತುರ್ಮಾಸ್ಯ ಕಾಲದಲ್ಲಿ ಈ ಮಂತ್ರಜಪವು ಬ್ರಹ್ಮಪ್ರಾಪ್ತಿಗೆ ಕಾರಣವಾಗಿರುತ್ತದೆ.

ಎಂದರೆ ರಾಮಮಂತ್ರ. ದ್ವಾದಶಾಕ್ಷರ, ಅಷ್ಟಾಕ್ಷರ, ಪಂಚಾಕ್ಷರ, ಮುಂತಾದ ಎಲ್ಲ ವೇದಶಾಸ್ತ್ರೋಕ್ತ ಮಂತ್ರಗಳಿಗಿಂತ ಕೋಟಿಕೋಟಿಪಟ್ಟು ಪುಣ್ಯಫಲವನ್ನು ಕೊಡುವ, ಮೋಕ್ಷಾದಿಪುರುಷಾರ್ಥಗಳನ್ನು ನೀಡುವ ಏಕೈಕ ಮಂತ್ರವೆಂದರೆ ಶ್ರೀರಾಮಮಂತ್ರ. ಮನುಷ್ಯನು **"ರಾಮ"** ಈ ಎರಡಕ್ಷರದ ಮಂತ್ರವನ್ನು ನಿಂತಾಗ, ಕುಳಿತಾಗ, ಮಲಗುವಾಗ, ನಡೆದಾಡುವಾಗ, ಯಾವಾಗಲಾದರೂ ಪಠಿಸುತಿರಬೇಕು. ಚಾತುರ್ಮಾಸ್ಯಕಾಲದಲ್ಲಿ ವಿಶೇಷವಾಗಿ ಶ್ರೀರಾಮಮಂತ್ರವನ್ನು ಜಪಿಸುವುದರಿಂದ, ಸಂಸಾರದಿಂದ ಮುಕ್ತರಾಗಿ ವಿಷ್ಣುವಿನ ಪಾರ್ಷದರಾಗುವ ಭಾಗ್ಯ ಪಡೆಯುತ್ತಾರೆ. ಮೂವತ್ತಮೂರು ಕೋಟಿ ದೇವತೆಗಳೆಲ್ಲರೂ ಈ ರಾಮನಾಮಾಮೃತವನ್ನು ಪಾನಮಾಡುತ್ತಿರುತ್ತಾರೆ. ನಾನೂ ಸಹ ಪರಮ ಪವಿತ್ರವಾದ ವಿಷ್ಣು ಸಹಸ್ರನಾಮದ ಸಾರರೂಪವಾದ ಈ ರಾಮನಾಮದ ಮಂತ್ರವನ್ನು ಜಪಿಸುತ್ತೇನೆ. ಪಾರ್ವತಿ, ನೀನು ಕೂಡ ಸಮಸ್ತ ಸ್ಥಾವರ ಜಂಗಮ

ಪ್ರಾಣಗಳಲ್ಲಿ ಆತ್ಮಾರಾಮ ರೂಪದಿಂದ ಅಂತರ್ಯಾಮಿಯಾಗಿರುವ ಶ್ರೀರಾಮಚಂದ್ರನ 'ರಾಮ' ಎಂಬ ಎರಡು ಅಕ್ಷರದ ಮಂತ್ರವನ್ನು ಜಪಮಾಡುವುದರಿಂದ ವಿಷ್ಣು ಸಹಸ್ರನಾಮವನ್ನು ಜಪಿಸಿದ್ದಕ್ಕಿಂತ ಅತ್ಯಧಿಕವಾದ ಪುಣ್ಯಫಲ ಲಭಿಸುತ್ತದೆ.

## ಮಹಾದೇವನು ನರ್ಮದೇಶ್ವರ ಶಿವಲಿಂಗ ರೂಪನಾದುದು

**ಮಹಾದೇವ:-** ಪಾರ್ವತಿ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ಜಾತಿಯವರಿಗೆ ದ್ವಿಜ ಎಂದು ಹೆಸರು. ದ್ವಿಜರಿಗೆ ಓಂಕಾರ ಸಹಿತವಾದ **'ಓಂ ನಮೋ ಭಗವತೇ ವಾಸು ದೇವಾಯ'** ಎಂಬ ದ್ವಾದಶಾಕ್ಷರ ಮಂತ್ರದ ಜಪವು ಅವಶ್ಯ ಕರ್ತವ್ಯ. ಸ್ತ್ರೀಯರಿಗೆ **'ಓಂ'** ಎಂಬ ಪ್ರಣವ ಮಂತ್ರವನ್ನು ಉಚ್ಚರಿಸಲು ಅಧಿಕಾರ ಇರುವುದಿಲ್ಲ. ಆದುದರಿಂದ ಅವರು **'ನಮೋ ಭಗವತೇ ಶ್ರೀ ವಾಸುದೇವಾಯ'** ಎಂದು ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ಜಪಿಸಬೇಕು. ಸುಕರ ಜಾತಿಯವರೂ ಅಂತ್ಯಜಾತಿ ವರ್ಣ ಬಾಹಿರರೂ **'ಶ್ರೀರಾಮಾಯ ನಮಃ'** ಎಂಬ ರಾಮ ಷಡಕ್ಷರ ಮಂತ್ರವನ್ನು ಜಪಿಸಬೇಕು. ಪಾರ್ವತಿ, ಸ್ತ್ರೀಯರಿಗೆ ಪ್ರಣವ ಮಂತ್ರವನ್ನು ಉಚ್ಚರಿಸುವ ಅಧಿಕಾರವಿರುವುದಿಲ್ಲ. ನೀನು ಕೂಡ ಒಬ್ಬ ಸ್ತ್ರೀ. ಲೋಕದೃಷ್ಟಿಯಿಂದ ವಿಚಾರಿಸಿದಾಗ ನಿನಗೂ ಪ್ರಣವ ಮಂತ್ರವನ್ನು ಉಚ್ಚರಿಸುವ ಅಧಿಕಾರವಿರುವುದಿಲ್ಲ.

**ಪ್ರಣವಸ್ಯಾಧಿಕಾರೋ ನ ತವಾಸ್ತಿ ವರವರ್ಣಿನಿ ।**
**ನಮೋ ಭಗವತೇ ವಾಸುದೇವಾಯೇತಿ ಜಪಃ ಸದಾ ॥**

ನೀನು ಈಗ **'ಓಂ'ಕಾರ ರಹಿತವಾದ 'ನಮೋ ಭಗವತೇ ಶ್ರೀ ವಾಸುದೇವಾಯ'** ಎಂಬ ಮಂತ್ರವನ್ನು ಚಾತುರ್ಮಾಸ್ಯ ಕಾಲದಲ್ಲಿ ಭಕ್ತಿಯಿಂದ ಜಪಿಸು. ಇದರಿಂದ ನಿನಗೆ 'ಓಂ'ಕಾರ ಸಹಿತವಾದ **'ಓಂ ನಮೋ ಭಗವತೇ ವಾಸುದೇವಾಯ'** ಎಂಬ ದ್ವಾದಶಾಕ್ಷರ ಮಂತ್ರವನ್ನು ಜಪಮಾಡುವ ಅಧಿಕಾರ ಬರುತ್ತದೆ. ಅದರಿಂದ ನಿನ್ನ ತಪಸ್ಸು ವಿಷ್ಣುಭಕ್ತಿ ದಿನದಿನವೂ ಅಭಿವೃದ್ಧಿಯಾಗುತ್ತವೆ. ಈ ನಿನ್ನ ಮಂತ್ರ ಜಪದಿಂದ ಪರಿತುಷ್ಟನಾದ ಆ ಪರಮಾತ್ಮನು ನಿನಗೆ ದಿವ್ಯವಾದ ಬ್ರಹ್ಮಜ್ಞಾನವನ್ನು ಪ್ರಧಾನ ಮಾಡುತ್ತಾನೆ. ಮಹಾದೇವರ ಅಪ್ಪಣೆಯ ಪ್ರಕಾರ ಸ್ವಾಧ್ವೀ ಮಣಿಯಾದ ಪಾರ್ವತೀದೇವಿಯು ಹಿಮಾಲಯದ ಶಿಖರದಲ್ಲಿ ಚಾತುರ್ಮಾಸ್ಯ ಕಾಲದಲ್ಲಿ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ಜಪಿಸುತ್ತ ತಪಸ್ಸನ್ನು ಮಾಡುತ್ತಾ. ತ್ರಿಕಾಲದಲ್ಲಿ ತ್ರಿಸಂಧ್ಯೆಗಳಲ್ಲಿ ಪರಮಾತ್ಮನ ಹರಿಹರ ಸ್ವರೂಪವನ್ನು ಧ್ಯಾನಿಸತೊಡಗಿದಳು.

ಅತ್ತ ಪಾರ್ವತಿಯು ತಪೋನುಷ್ಠಾನದಲ್ಲಿ ಮಗ್ನಳಾಗಿರುವುದನ್ನು ನೋಡಿ ಗಂಗಾಧರನು ತಾನು ಪೃಥ್ವೀ ಪ್ರದಕ್ಷಿಣೆಗೆ ಹೊರಟನು. ಅವನು ಕೈಲಾಸದಿಂದಿಳಿದು ಭರತ ಭೂಖಂಡದಲ್ಲಿ ಮುಂದೆ ಸಾಗಿದಾಗ ದಾರಿಯಲ್ಲಿ ಯಮುನಾನದಿಯನ್ನು ನೋಡಿದನು. ತರಲ ತರಂಗ ಮಾಲೆಗಳಿಂದ ಕಂಗೊಳಿಸುವ ಆ ಪುಣ್ಯಪಯಸ್ವಿನಿಯನ್ನು ನೋಡಿ ಅದರಲ್ಲಿ ಸ್ನಾನಮಾಡಬೇಕೆಂಬ ಅಪೇಕ್ಷೆಯಾಯಿತು. ಅವಗಾಹನೆಗಾಗಿ ಅವನು ಪ್ರವಾಹ ಮಧ್ಯದಲ್ಲಿ ಇಳಿದ ಕೂಡಲೇ ಅವನ ದೇಹದ ದಿವ್ಯ ಅಗ್ನಿತೇಜದಿಂದ ಆ ಯಮುನೆಯ ನೀರೆಲ್ಲ ಕಪ್ಪಾಗಿ ಹೋಯಿತು. ಯಮುನೆ ಕೃಷ್ಣೆಯಾದಳು. ಅನಂತರ ಆ ಯಮುನಾವಾಹಿನಿಯು ದಿವ್ಯರೂಪವನ್ನು ಧರಿಸಿ ತನ್ನ ಶ್ಯಾಮ ಸುಂದರ ಸ್ವರೂಪದಿಂದ ಪರಮೇಶ್ವರನ ಎದುರು ಪ್ರತ್ಯಕ್ಷಳಾದಳು. ಮತ್ತು ಕೈಜೋಡಿಸಿ ''ದೇವೇಶ್ವರ, ನೀನು ನನ್ನ ಮೇಲೆ ಪ್ರಸನ್ನನಾಗು'' ಎಂದು ವಿನಂತಿಸಿದಳು.

**ಮಹಾದೇವ:-** ''ಯಮುನೆ, ನಾನು ಅವಗಾಹನ ಮಾಡಿದ ನಿನ್ನ ಈ ಪುಣ್ಯತೀರ್ಥವು ಇನ್ನು ಮುಂದೆ **'ಹರ ತೀರ್ಥ'** ಎಂದು ಪ್ರಸಿದ್ಧವಾಗುವುದು. ಇಲ್ಲಿ ಸ್ನಾನ ಹಾಗೂ ಧ್ಯಾನ ಮಾಡಿದವರ ಪಾಪಗಳೆಲ್ಲವೂ ಹೋಗುವವು.''

ಹೀಗೆ ಯಮುನೆಗೆ ಆಶೀರ್ವಾದಮಾಡಿ ಪರಮೇಶ್ವರನು ಒಂದು ಸುಂದರವಾದ ರೂಪವನ್ನು ಧರಿಸಿದ. ಕೈಯಲ್ಲಿ ವಾದ್ಯ, ಹಣೆಯ ಮೇಲೆ ತ್ರಿಪುಂಡ್ರ, ಮುಖದಲ್ಲಿ ಸಂಗೀತ, ಚರಣಗಳಲ್ಲಿ ನೃತ್ಯ ಭಂಗಿ ವಿವಿಧ ನೃತ್ಯ ಭಂಗಿಯಲ್ಲಿ ನರ್ತನ ಮಾಡುತ್ತಿರುವ ಆ ಗೌರೀಪತಿಯನ್ನು ಕಂಡು ಗುಹಾವಾಸಿಗಳಾದ ಋಷಿಮುನಿಗಳಿಗೆಲ್ಲ ಕೋಪ ಬಂದಿತು. ''ನೀನು ಲಿಂಗರೂಪನಾಗು'' ಎಂದು ಆ ಮುನಿಗಳು ಪರಮೇಶ್ವರನಿಗೆ ಶಾಪಕೊಟ್ಟರು. ಆ ಮುನಿಗಳ ಶಾಪದಿಂದ ಮಹಾದೇವನು ಅಮರಕಂಟಕ ಪರ್ವತರೂಪದ ಒಂದು ಬೃಹದಾಕಾರ ಲಿಂಗ ರೂಪದಿಂದ ಅಭಿವ್ಯಕ್ತನಾದ. ನರ್ಮದಾ ನದಿಯು ಹುಟ್ಟಿ ಹರಿದದ್ದು ಲಿಂಗರೂಪಿಯಾದ ಈ ಅಮರಕಂಟಕ ಪರ್ವತದಿಂದಲೇ. ನರ್ಮದೆಯಲ್ಲಿ ಸ್ನಾನಮಾಡಿ ಪಿತೃಗಳ ತರ್ಪಣ ಹಾಗೂ ನರ್ಮದಾ ತೀರದಲ್ಲಿ ಇರುವ ಶಿವಲಿಂಗಗಳ ಪೂಜೆ, ಚಾತುರ್ಮಾಸ್ಯ ಕಾಲದಲ್ಲಿ ರುದ್ರಮಂತ್ರ ಜಪ, ಶಿವಲಿಂಗಗಳಿಗೆ ಪಂಚಾಮೃತ ಅಭಿಷೇಕ, ದೀಪದಾನ ಮುಂತಾದವುಗಳನ್ನು ಮಾಡಿದವರು ಶಿವಸ್ವರೂಪಿಗಳಾಗಿ ಕೈಲಾಸ ಪರ್ವತಕ್ಕೆ ಹೋಗುತ್ತಾರೆ.

**ಗಾಲವ:-** ಸಾಲಿಗ್ರಾಮ ರೂಪನಾದ ಶ್ರೀವಿಷ್ಣುವಿನ ಹಾಗೂ ಲಿಂಗರೂಪಿಯಾದ ಪರಮೇಶ್ವರನ ಪೂಜೆಯನ್ನು ಚಾತುರ್ಮಾಸ್ಯ ಕಾಲದಲ್ಲಿ ಭಕ್ತಿಯಿಂದ ಮಾಡಿದವರು ಯಮಯಾತನೆಯನ್ನಾಗಲೀ ಸಂಸಾರಿಕ ದುಃಖವನ್ನಾಗಲೀ ಅನುಭವಿಸುವ ಪ್ರಸಂಗವೇ ಬರುವುದಿಲ್ಲ. ಹರಿಹರರಲ್ಲಿ ಭೇದವನ್ನೆಣಿಸದೇ ಭಕ್ತಿಯಿಂದ ಪೂಜೆಮಾಡಿದರೆ, ಸ್ವರ್ಗ ಮೋಕ್ಷಾದಿ ಪುರುಷಾರ್ಥಗಳು ದೊರಕುವವು. ಆದರಿಂದ ಅವರಿಗೆ ದಿವ್ಯಗತಿಯು ಪ್ರಾಪ್ತವಾಗುವುದು. ಹೀಗೆ ಗಾಲವ ಮಹರ್ಷಿಗಳು ಹರಿಹರ ಭಕ್ತನಾದ ಆ ಸದಾಚಾರಿ ಶೂದ್ರಪೈಜವನನ ಮನೆಗೆ ತಾವಾಗಿ ಬಂದು ಸಾಲಿಗ್ರಾಮ, ಶಿವಲಿಂಗ, ದ್ವಾದಶಾಕ್ಷರ ಮಂತ್ರ, ರಾಮಮಂತ್ರಾದಿ ಮಹಿಮೆಯನ್ನು ಉಪದೇಶಿಸಿದರು. ಆಗ ಪರಮಾನಂದ ಭರಿತನಾದ ಪೈಜವನು ಭಕ್ತಿಯಿಂದ ಮಹರ್ಷಿಗಳನ್ನು ಪೂಜೆಮಾಡಿದ. ಅವನ ಪೂಜೆಯನ್ನು ಸ್ವೀಕರಿಸಿ ಗಾಲವರು ತಮ್ಮ ಆಶ್ರಮಕ್ಕೆ ತೆರಳಿದರು. ಪೈಜವನ ಹಾಗೂ ಗಾಲವ ಮುನಿಗಳ ಬೋದಪ್ರದವಾದ ಈ ಸಂವಾದವನ್ನು ಭಕ್ತಿಯಿಂದ ಶ್ರವಣ ಮಾಡಿದವರು ಮತ್ತು ಹೇಳಿದವರು ಹರಿಹರರ ಪರಮಾನುಗ್ರಹಕ್ಕೆ ಪಾತ್ರರಾಗುತ್ತಾರೆ.

## ಧ್ಯಾನಯೋಗ ಹಾಗೂ ಜ್ಞಾನಯೋಗಗಳ ನಿರೂಪಣೆ

**ಪಾರ್ವತಿ:-** ಪ್ರಭು, ಧ್ಯಾನಯೋಗವನ್ನು ಪಡೆದು ಜ್ಞಾನಯೋಗವನ್ನು ಸಾಧಿಸುವ ಉಪಾಯವನ್ನು ನಿರೂಪಿಸಿರಿ.

**ಮಹಾದೇವ:-** ಸುಂದರಿ, ನಾನು ನಿನಗೆ ಈಮೊದಲು ಉಪದೇಶ ನೀಡಿದ ಓಂಕಾರಯುಕ್ತವಾದ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ನೀನು ಜಪಮಾಡಬೇಕು. ಆ ಮಂತ್ರದ ಮೊದಲು ಇರುವ ಪ್ರಣವವು ಸರ್ವವೇದಗಳ ಮೂಲಾಕ್ಷರ. ಸರ್ವಶಾಸ್ತ್ರಗಳ ಸಾರಭೂತವೂ ಆಗಿದೆ. ಆ ಪ್ರಣವ ಮಂತ್ರಕ್ಕೆ ಮಧುಚ್ಛಂದ ಬ್ರಹ್ಮಾ ಋಷಿ, ಪರಮಾತ್ಮನೇ ದೇವತಾ, ಗಾಯತ್ರೀ ಛಂದಸ್ಸು, ದ್ವಾದಶ ಲಿಂಗಮಯವಾದ ಹನ್ನೆರಡು ಅಕ್ಷರಗಳಿಂದ ಕೂಡಿದ ಈ ವಾಸುದೇವ ದ್ವಾದಶಾಕ್ಷರ ಮಂತ್ರವು ಕೂರ್ಮಚಕ್ರದಲ್ಲಿ ಸ್ಥಿರವಾಗಿರುತ್ತದೆ. ಶುಕ್ಲವರ್ಣದ ಇದನ್ನು ಸರ್ವಕಾಲದಲ್ಲಿಯೂ ವಿನಿಯೋಗ ಮಾಡಬಹುದು. ವಿನಿಯೋಗ ಸಹಿತವಾಗಿ ಇದರ ವರ್ಣ, ಋಷಿ, ಬೀಜ ಛಂಧ, ದೇವತಾ ಮುಂತಾದವುಗಳ ಧ್ಯಾನ

ಪೂರ್ವಕ ಜಪ ಹಾಗೂ ಪೂಜೆ ಮಾಡುವುದರಿಂದ ಭಕ್ತರ ಪಾಪಗಳೆಲ್ಲವೂ ಪರಿಹಾರವಾಗಿ ಮೋಕ್ಷಮಾರ್ಗದಲ್ಲಿ ಮುನ್ನಡೆಯುವಂತಾಗುತ್ತದೆ. ಈ ಮಂತ್ರದ ಧ್ಯಾನಯೋಗದಿಂದ ಸರ್ವಪಾಪಗಳೂ ಪರಿಹೃತವಾಗುತ್ತವೆ.

"ಧ್ಯಾನೇನ ಸರ್ವಮಾಪ್ನೋತಿ ಧ್ಯಾನೇ ನಾಪ್ನೋತಿ ಶುದ್ಧತಾಂ ।
ಧ್ಯಾನೇನ ಪರಮಂ ಬ್ರಹ್ಮ ಮೂರ್ತೌ ಯೋಗಸ್ತು ಧ್ಯಾನಜಃ" ॥

ಈ ಧ್ಯಾನದಿಂದ ಮಾನವರು ಎಲ್ಲವನ್ನೂ ಹೊಂದುತ್ತಾರೆ. ಶುದ್ಧಿ ಯಾಗುವುದು ಧ್ಯಾನದಿಂದ. ಪರಬ್ರಹ್ಮ ಪ್ರಾಪ್ತಿಯೂ ಈ ಧ್ಯಾನದಿಂದಲೇ. ತನ್ನ ಉಪಾಸ್ಯ ಮೂರ್ತಿಯಲ್ಲಿ ಬ್ರಹ್ಮ ಸಾಕ್ಷಾತ್ಕಾರವಾಗುವುದು ಈ ಧ್ಯಾನದ ಉತ್ಕಟತೆಯಿಂದಲೇ. ಈ ಧ್ಯಾನಯೋಗವು ಸಾಲಂಬ, ನಿರಾಲಂಬ ಎಂದು ಎರಡು ವಿಧವಾಗಿದೆ. ಶ್ರೀ ಮನ್ನನಾರಾಯಣನ ಸುಗುಣ ಸಾಕಾರ ವಿಗ್ರಹದ ದರ್ಶನವು ಸಾಲಂಬ ಧ್ಯಾನವೆನಿಸುತ್ತದೆ. ಜ್ಞಾನಯೋಗದಿಂದ ಅಂತರಂಗದಲ್ಲಿ ಉದಿಸುವ ಭಗವಂತನ ಬಿಂಬಾಪರೋಕ್ಷವು ನಿರಾಲಂಬವೆನಿಸುವುದು. ಧ್ಯಾನಯೋಗದಲ್ಲಿ ಶ್ರೀವಿಷ್ಣುವಿನ ವಿರಾಟ್‌ರೂಪವನ್ನು ಚಿಂತಿಸಬೇಕು. ವಿರಾಟ್‌ರೂಪಿಯಾದ ಶ್ರೀಮನ್ನಾರಾಯಣನಿಗೆ ಸೂರ್ಯನೇ ಮಸ್ತಕ. ಪೃಥ್ವೀಲೋಕವೇ ಹೃದಯ ರಸಾತಲ ಲೋಕವು ಚರಣ ಶ್ರೀಮನ್ನಾನಾರಾಯಣನು ಮೂರ್ತಾ ಮೂರ್ತ ಸ್ವರೂಪದಿಂದ ಸಂಪೂರ್ಣ ಬ್ರಹ್ಮಾಂಡವನ್ನೇ ವ್ಯಾಪಿಸಿ ನಿಂತುಕೊಂಡಿದ್ದಾನೆ. ಭಗವಾನ್ ಶ್ರೀ ವಿಷ್ಣುವೇ ಪರಬ್ರಹ್ಮರೂಪದಿಂದ ಈ ಜ್ಞಾನಯೋಗ ಹಾಗೂ ಧ್ಯಾನಯೋಗಗಳಿಗೆ ಮುಖ್ಯ ಗುರಿ ಹಾಗೂ ಗಂತವ್ಯ ಮತ್ತು ಮಂತವ್ಯನಾಗಿದ್ದಾನೆ. ಚರಾಚರ ಪ್ರಪಂಚದ ಸೃಷ್ಟಿ ಸ್ಥಿತಿ, ಸಂಹಾರ ಮಾಡುವ ಆ ವಿಷ್ಣುವು ಹನ್ನೆರಡು ತಿಂಗಳುಗಳು ಅಧಿಪತಿಯು, ದಿನ, ಮಾಸ, ವರ್ಷ, ಯುಗಾತ್ಮಕ ಯುಗರೂಪಕ ಕಾಲಾತ್ಮಕನೂ ಆಗಿದ್ದಾನೆ. ಅವನೇ ಸರ್ವದೇವಮಯ. ಆ ಶ್ರೀ ಹರಿಯ ಸ್ಮರಣೆಮಾಡಿದವರು ಸಂಸಾರ ಬಂಧನದಿಂದ ಮುಕ್ತರಾಗುತ್ತಾರೆ. ಚಾತುರ್ಮಾಸ್ಯ ಕಾಲದಲ್ಲಿ ವಿಶೇಷವಾಗಿ ಭಗವತ್ ಚಿಂತನ ರೂಪವಾದ ಜ್ಞಾನಯೋಗ ಮತ್ತು ಧ್ಯಾನಯೋಗ ಮಾಡುವವರು ಯೋಗಿ ಎನಿಸುತ್ತಾರೆ. ಯಾವ ಯೋಗಿಯು ಎರಡುಗಳಿಗೆಯಾದರೂ ತನ್ನ ಬಾಹ್ಯ ಇಂದ್ರಿಯ ಕಾರ್ಯಗಳನ್ನೆಲ್ಲ ನಿಲ್ಲಿಸಿ ಅಂತರ್ಮುಖಿಯಾಗಿ ತನ್ನ ಮನಸ್ಸನ್ನು ಬ್ರಹ್ಮರಂಧ್ರದಲ್ಲಿ ಸ್ಥಾಪಿತಗೊಳಿಸುವನೋ ಅವನು ಸರ್ವಪಾಪಗಳಿಂದ ಮುಕ್ತನಾಗುತ್ತಾನೆ. ಅವನು ಬ್ರಾಹ್ಮಣ ಯೋಗಿಯಾಗಿದ್ದರೆ ಅವನ ದರ್ಶನದಿಂದಲೇ ಉಳಿದ ಜನರ ಉದ್ಧಾರವಾಗುತ್ತದೆ. ಅವನು ಬ್ರಹ್ಮನಿಷ್ಠನಾದ ಶೂದ್ರನಾಗಿದ್ದರೆ ಅವನು ತನ್ನ ದರ್ಶನಮಾಡಿಕೊಂಡ ಜನರನ್ನು ಉದ್ಧರಿಸುವುದಲ್ಲದೇ ಸ್ವಯಂ ತಾನು ಸ್ವಾಯುಜ್ಯಮೋಕ್ಷವನ್ನು ಹೊಂದಿ ಆ ವಿಷ್ಣು ಸ್ವರೂಪದಲ್ಲಿಯೇ ಲೀನನಾಗಿ ಹೋಗುತ್ತಾನೆ.

## ಷಣ್ಮುಖನ ಸೇನಾಪತಿತ್ವ ಹಾಗೂ ಕೌಮಾರ ವ್ರತ

**ಬ್ರಹ್ಮ**:- ಪೂರ್ವಕಾಲದಲಿ ಮಹಾಬಲಿಷ್ಠನಾದ ತಾರಕಾಸುರನ ಭಯದಿಂದ ತಲ್ಲಣಿಸಿ ಹೋದರು. ದೇವಲೋಕದವರು ದೇವತೆಗಳೆಲ್ಲರೂ ಶಂಕರನಿಗೆ ಶರಣು ಹೋದರು. ಅವನು ತನ್ನ ಕುಮಾರ 'ಕಾರ್ತಿಕೇಯನನ್ನು ನಿಮ್ಮ ಸೇನಾಪತಿಯನ್ನಾಗಿ ಮಾಡಿರಿ' ಎಂದು ಅಪ್ಪಣೆ ನೀಡಿದ. ಗೌರೀಪತಿಯ ಅಣತಿಯಂತೆ ದೇವತೆಗಳು ಸ್ಕಂದನನ್ನು ಸುರಸೇನೆಯ ದಂಡನಾಯಕನ ಪದವಿಯಲ್ಲಿ ಅಭಿಷೇಕಗೈದರು. ದೇವಾಸುರರಲ್ಲಿ ನಿರ್ಣಾಯಕ ಸಮರ ಶುರುವಾಯಿತು. ತಾರಕಾಸುರನ ನಿಮಿತ್ತವಾಗಿ ಮೊದಲಾದ ಈ ಭೀಕರ ಸಂಗ್ರಾಮದಲ್ಲಿ ದೇವಪಕ್ಷದ ಸ್ಕಂದ, ದೈತ್ಯ ಪಕ್ಷಬಲದಲ್ಲಿ ತಾರಕಾಸುರರೂ ಸ್ವಯಂ ಮುಂಚೂಣಿಯಲ್ಲಿ

ನಿಂತು ಹೋರಾಟ ನಡೆಸಿದರು. ವಿಷ್ಣುವಿನ ಚಕ್ರದಿಂದ ಸಹಸ್ರಾರು ದೈತ್ಯರು ಭಿನ್ನಭಿನ್ನಾಂಗರಾಗಿ ರಣರಂಗದಲ್ಲಿ ಪ್ರಾಣಕಳೆದುಕೊಂಡರು. ದೇವಸೇನಾಪತಿ ಸ್ಕಂದನ ವಿಷದಿಗ್ಧವಾದ ಬಾಣಗಳು ಅಸಂಖ್ಯ ದಾನವರ ಪ್ರಾಣಾಪಹಾರವನ್ನು ಯಶಸ್ವಿಯಾಗಿ ಮಾಡಿದವು. ಕೊನೆಗೆ ವಿಷ್ಣುವಿನ ಪ್ರೇರಣೆಯಂತೆ ಸ್ಕಂದನು ತನ್ನ ಅಮೋಘವಾದ ಶಕ್ತ್ಯಾಯುಧವನ್ನು ಪ್ರಯೋಗಿಸಿಅತಾರಕಾಸುರನನ್ನು ಕೊಂದು ಹಾಕಿದ ಆ ತಾರಕಾಸುರನನ್ನು. ದೇವತೆಗಳು ವಿಜಯಿಗಳಾಗಿ ಕುಮಾರಸ್ವಾಮಿಯನ್ನು ಮತ್ತೆ ತಮ್ಮ ಶಾಶ್ವತ ಸೇನಾಪತಿಯೆಂದು ಸುಸ್ಥಿರವಾದ ಶಾಶ್ವತ ಸುರಸೇನಾನಿ ಪದದಲ್ಲಿ ಪಟ್ಟಾಭಿಷೇಕ ಗೈದರು. ಹುಟ್ಟಿದ ಏಳನೇ ದಿನವೇ ಬಾಲಕನಾದ ಸ್ಕಂದ ಸ್ವಾಮಿಯು ತಾರಕಾಸುರನನ್ನು ಕೊಂದು ಮಂದರಾಚಲ ಪರ್ವತಕ್ಕೆ ಹೋಗಿ ಅಲ್ಲಿರುವ ತನ್ನ ತಂದೆ ತಾಯಿಗಳಿಗೆ ಸಂತೋಷವುಂಟು ಮಾಡಿದ. ಮಗನ ಗೆಲುವು ನೋಡಿ ಸುಪ್ರೀತರಾದ ಪಾರ್ವತಿ ಪರಮೇಶ್ವರರು ನಲುಮೆದುಂಬಿ ಬೆನ್ನಮೇಲೆ ಕೈಯಾಡಿಸಿ ಸ್ಕಂದನಿಗೆ ಹೇಳಿದರು. 'ವತ್ಸ! ನಿನಗೆ ಈಗ ವಿವಾಹಕ್ಕೆ ತಕ್ಕ ಸಮಯ. ಮದುವೆ ಮಾಡಿಕೊಂಡು ಮಡದಿಯೊಂದಿಗೆ ಗೃಹಸ್ಥಾಶ್ರಮ ಧರ್ಮವನ್ನು ಪರಿಪಾಲಿಸು.'

**ಸ್ಕಂದ:-** ''ಪೂಜ್ಯರೇ, ಈ ಜಗತ್ತಿನಲ್ಲಿರುವ ಎಲ್ಲ ಸ್ತ್ರೀಯರಲ್ಲಿಯೂ ನನಗೆ ನನ್ನ ತಾಯಿಯಾದ ಪಾರ್ವತಿಯ ರೂಪವೇ ಕಾಣುತ್ತದೆ. ಈ ಪ್ರಪಂಚದಲ್ಲಿ ಎಲ್ಲ ಸ್ತ್ರೀಯರೂ ನನಗೆ ಮಾತೃಸ್ವರೂಪರು. ಪಾರ್ವತಿ ಸಮಾನರು ಪುರುಷರೆಲ್ಲರೂ ಪರಮೇಶ್ವರ ಸ್ವರೂಪರು. ಆದುದರಿಂದ ನಾನು ನನ್ನ ಜನನೀಸ್ವರೂಪರಾದ ಜಗತ್ತಿನ ಹೆಣ್ಣು ಮಕ್ಕಳಲ್ಲಿ ಮಡದಿಯೆಂದು ಯಾರನ್ನು ವರಿಸಲಿ? ಆದುದರಿಂದ ನೀವು ನನಗೆ ಮದುವೆಯ ವಿಷಯದಲ್ಲಿ ಆಗ್ರಹ ಮಾಡಬೇಡಿರಿ. ನನಗೆ ನೀವು ಆ ಪರಮಾತ್ಮನ ಪ್ರಾಪ್ತಿಗೆ ಮುಖ್ಯ ಉಪಾಯ ಭೂತವಾದ ಧ್ಯಾನಯೋಗವನ್ನು ಹಾಗೂ ಜ್ಞಾನಯೋಗವನ್ನು ಬೋಧಿಸಿರಿ. ನನ್ನ ತಪಸ್ಸು, ಮಂತ್ರಜಪ ಮುಂತಾದವುಗಳು ಯಶಸ್ವಿಯಾಗುವಂತೆ ಅನುಗ್ರಹಿಸಿರಿ'' ಎಂದು ಹೇಳಿ ತನ್ನ ತಾಯಿ ತಂದೆಯರಾದ ಶಿವ ಪಾರ್ವತಿಯರಿಗೆ ನಮಸ್ಕರಿಸಿ. ಅವರಿಂದ ಬ್ರಹ್ಮೋಪದೇಶವನ್ನು ಪಡೆದ. ಕ್ರಾಂಚ ಪರ್ವತಕ್ಕೆ ತೆರಳಿದ ಆ ಷಣ್ಮುಖನು ಅಲ್ಲಿಯ ಒಂದು ಪರಮಪವಿತ್ರವಾದ ಆಶ್ರಮದಲ್ಲಿ ನಿಂತುಕೊಂಡು ಪರಮೇಶ್ವರನು ತನಗೆ ಉಪದೇಶಿಸಿದ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ಧ್ಯಾನಯೋಗದಿಂದ ಅಖಂಡವಾಗಿ ಜಪಿಸಿದ. ಇಂದ್ರಿಯಗಳನ್ನು ಸಂಪೂರ್ಣವಾಗಿ ತನ್ನ ವಶದಲ್ಲಿಟ್ಟುಕೊಂಡು ಮನಸ್ಸನ್ನು ಧ್ಯಾನಯೋಗದಲ್ಲಿ ಲೀನನಾಗಿಸಿ ಮಂತ್ರಜಪದಿಂದ ಭಗವಂತನ ಧ್ಯಾನಯೋಗ ರೂಪವಾದ ಬಿಂಬಾಪರೋಕ್ಷವನ್ನು ಸಾಧಿಸಿಕೊಂಡ. ಅವನೆದುರು ಅನಿಷ್ಟ ಸಿದ್ಧಿಗಳು ಬಂದು ಕೈಮುಗಿದು ನಿಂತುಕೊಂಡವು. ಅವುಗಳನ್ನೆಲ್ಲ ಧಿಕ್ಕರಿಸಿದ. ಭಗವತ್ ಸಾಕ್ಷಾತ್ಕಾರವಾಗುವವರೆಗೆ ಅಸಂಪ್ರಜ್ಞಾತ ಸಮಾಧಿಯಲ್ಲಿ ನಿಂತುಕೊಂಡು ಆ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ಜಪಿಸಿದ. ಚಾತುರ್ಮಾಸ್ಯ ಕಾಲದಲ್ಲಿ ನಾಲ್ಕು ತಿಂಗಳ ಕಾಲ ತಾನು ಮಾಡಿದ ಈ ಅಪೂರ್ವ ಜ್ಞಾನ ಯೋಗ ಹಾಗೂ ಧ್ಯಾನ ಯೋಗ ಸಾಧನೆಯಿಂದ ಕೊನೆಗೆ ಸಿದ್ಧಿಯನ್ನು ಪಡೆದ. ಈ ಚಾತುರ್ಮಾಸ್ಯ ಕಾಲದಲ್ಲಿ ಭಕ್ತರಾದವರು ಹರಿಹರರನ್ನು ಪೂಜೆಮಾಡಿ, ದ್ವಾದಶಾಕ್ಷರಮಂತ್ರ, ರಾಮಮಂತ್ರಗಳನ್ನು ಧ್ಯಾನಯೋಗದಿಂದ ಜಪಿಸಿ ಆವರ್ತನೆ ಮಾಡಿದರೆ, ಭಗವಂತನ ಸಾಕ್ಷಾತ್ಕಾರ ರೂಪವಾದ ಜ್ಞಾನದ ಯೋಗವನ್ನು ಹೊಂದಿ ಸರ್ವಶ್ರೇಷ್ಠರಾಗುವರು.

*ಚಾತುರ್ಮಾಸ್ಯ ಮಾಹಾತ್ಮ್ಯ ಸಂಪೂರ್ಣ*

# ಬ್ರಹ್ಮೋತ್ತರ ಖಂಡ

ಅಧ್ಯಾಯ - ೭೪

## ಶಿವಪಂಚಾಕ್ಷರೀ ಮಂತ್ರ ಹಾಗೂ ಶಿವಷಡಕ್ಷರ ಮಂತ್ರಗಳ ಮಹಿಮೆ. ದಾಶಾರ್ಹರಾಜ ಮತ್ತು ಕಲಾವತೀ ರಾಣಿಯ ವೃತ್ತಾಂತ.

**ಜ್ಯೋತಿ ರ್ಮಾತ್ರ ಸ್ವರೂಪಾಯ ನಿರ್ಮಲಜ್ಞಾನಚಕ್ಷುಷೇ ।**
**ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥**

ಜ್ಯೋತಿರೂಪ ಆ ಪರ ಶಿವ. ದಿವ್ಯವಾದ ಜ್ಞಾನದೃಷ್ಟಿಯುಳ್ಳ ಅವನ ಅನುಗ್ರಹದಿಂದ ಭಕ್ತರಿಗೆಲ್ಲ ಪರಾ ಪರತತ್ವ ಜ್ಞಾನದ ದಿವ್ಯ ದರ್ಶನವನ್ನು ಮಾಡಿಸುವ ಜ್ಞಾನಚಕ್ಷುಸ್ಸು ಉನ್ಮೀಲಿತವಾಗುವುದು. ಇಂಥ ಶಾಂತರೂಪಿಯಾದ, ಲಿಂಗಮೂರ್ತಿಯಾದ ಶಿವರೂಪಿ ಬ್ರಹ್ಮನಿಗೆ ನಮಸ್ಕಾರ.

**ಋಷಿಗಳು:-** ಸೂತರೇ, ನೀವು ಈವರೆಗೆ ವಿಷ್ಣುವಿನ ಮಹಿಮೆಯನ್ನು ವಿಷ್ಣು ಸನ್ನಿಧಾನದಿಂದೊಡಗೂಡಿದ ಸಾಲಿಗ್ರಾಮ ಶಿಲಾಮಹತ್ವವನ್ನು ತಿಳಿಸಿ ಹೇಳಿದಿರಿ. ಈಗ ನಾವು ತ್ರಿಪುರಾಸುರನನ್ನು ಸಂಹರಿಸಿದ ಪರಮೇಶ್ವರನ ಮಹಿಮೆಯನ್ನು ಮತ್ತು ಅವನ ಮಂತ್ರಗಳ ಪ್ರಭಾವವನ್ನು ಕೇಳಲು ಬಯಸುತ್ತೇವೆ.

**ಸೂತ:-** ಮುನಿಗಳೇ, ನೀವು ಪುಣ್ಯವಂತರು. ಭಗವದ್ಭಕ್ತರು. ಆದುದರಿಂದಲೇ ನಿಮಗೆ ಈಗ ಶಂಕರನ ಕಥೆಯನ್ನು ಕೇಳಬೇಕೆಂದು ಭಕ್ತಿಭಾವವು ಉದಿತವಾಗಿದೆ.

**ಏತಾವದೇವ ಮರ್ತ್ಯಾನಾಂ ಪರಂ ಶ್ರೇಯಃ ಸನಾತನಂ ।**
**ಯದೀಶ್ವರ ಕಥಾಯಾಂ ವೈ ಜಾತಾ ಭಕ್ತಿರಹೈತುಕೀ ॥**

ಮಾನವರಿಗೆ ಆ ಜಗದೀಶ್ವರ ಕಥೆಯಲ್ಲಿ ಯಾವ ಫಲಾಪೇಕ್ಷೆಯೂ ಇಲ್ಲದೇ ಸ್ವಾಭಾವಿಕವಾದ ಭಕ್ತಿ ಹುಟ್ಟಿದರೆ ಅದು ಅವರ ಅತ್ಯಂತಿಕ ಶ್ರೇಯಸ್ಸಿಗೆ ಕಾರಣವಾಗುತ್ತದೆ.

**ಸರ್ವೇಷಾಂ ಅಪಿ ಪುಣ್ಯಾನಾಂ ಸರ್ವೇಷಾಂ ಶ್ರೇಯಸಾಂ ಅಪಿ ।**
**ಸರ್ವೇಷಾಂ ಅಪಿ ಯಜ್ಞಾನಾಂ ಜಪಯಜ್ಞಃರಸ್ಮೃತಃ ॥**

ಎಲ್ಲ ಪುಣ್ಯಕರ್ಮಗಳಲ್ಲಿಯೂ, ಎಲ್ಲ ಶ್ರೇಯಸ್ಸಾಧನಗಳಲ್ಲೂ ಮತ್ತು ಎಲ್ಲ ಯಜ್ಞ ಯಾಗಾದಿಗಳಲ್ಲೂ ಪರಮೇಶ್ವರನ ಜಪರೂಪವಾದ ಯಜ್ಞವು ಅತ್ಯಂತ ಶ್ರೇಷ್ಠವಾಗಿರುತ್ತದೆ.

ಎಲ್ಲ ದೇವತೆಗಳಲ್ಲಿ ಮಹಾದೇವನು ಸರ್ವಶ್ರೇಷ್ಠ. ಅದರಂತೆ ಎಲ್ಲ ಮಂತ್ರಗಳಲ್ಲಿ 'ಓಂ ನಮಃ ಶಿವಾಯ' ಎಂಬ ಶಿವಷಡಕ್ಷರ ಮಂತ್ರವು ಸರ್ವಶ್ರೇಷ್ಠ. ಓಂಕಾರವನ್ನು ತ್ಯಜಿಸಿದರೆ ಅದೇ ಶಿವಪಂಚಾಕ್ಷರೀ ಮಂತ್ರವಾಗುತ್ತದೆ. ಈ ಶಿವಪಂಚಾಕ್ಷರೀ ಮಂತ್ರದ ಅಕ್ಷರ ಅಕ್ಷರಗಳಲ್ಲಿ ಸಾಕ್ಷಾತ್ ಶಿವನ ಸಂಪೂರ್ಣ ಸನ್ನಿಧಾನ. ಈ ಮಂತ್ರರಾಜವು ಉಪನಿಷತ್ತುಗಳು ಆತ್ಮ. ಈ ಮಂತ್ರಜಪದಿಂದ ಪೂರ್ವಕಾಲದ ಬ್ರಹ್ಮರ್ಷಿಗಳು ಪರಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡಿದ್ದಾರೆ. ಈ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸಿದ ಬಳಿಕ ಮಾನವನ ಉದ್ಧಾರಕ್ಕಾಗಿ. ಯಾವುದೇ ಮಂತ್ರ, ತೀರ್ಥ, ತಪಸ್ಸು ಯಜ್ಞಯಾಗಗಳ ಆವಶ್ಯಕತೆಯೇ ಇಲ್ಲ.

**'ಕಿಂ ತಸ್ಯ ಬಹುಭಿರ್ಮಂತ್ರೈಃ ಕಿಂ ತೀರ್ಥೈಃ ಕಿಂ ತಪೋಽಧ್ವರೈಃ ।**
**ಯಸ್ಯೋ ನಮಃ ಶಿವಾಯೇತಿ ಮಂತ್ರೋ ಹೃದಯಗೋಚರಃ' ॥**

'ಓಂ ನಮಃ ಶಿವಾಯ' ಎಂಬ ಮಂತ್ರವು ಯಾರ ಹೃದಯದಲ್ಲಿ ಪ್ರತಿಷ್ಠಿತವಾಗಿದೆಯೋ, ಅವರ ಆತ್ಮೋದ್ಧಾರಕ್ಕಾಗಿ ಬೇರೆ ಮಂತ್ರ, ತೀರ್ಥ, ತಪಸ್ಸು, ಹೋಮ, ಹವನಗಳ ಅವಶ್ಯಕತೆ ಇಲ್ಲ. ಈ ಶಿವಪಂಚಾಕ್ಷರೀ ಮಂತ್ರವು ಕೇವಲ ಬ್ರಾಹ್ಮಣಾದಿ ವಿಶಿಷ್ಟ ವರ್ಗದ ಜನರಿಗೆ ಮಾತ್ರ ಮೀಸಲಾಗಿಲ್ಲ. ಇದು ಸರ್ವಾಧಿಕಾರಕ. ಮೋಕ್ಷವನ್ನು ಅಪೇಕ್ಷಿಸುವ ಯಾರಾದರೂ ಈ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸಬಹುದು.

**ತಸ್ಮಾತ್ ಸರ್ವಪ್ರದೋ ಮಂತ್ರಃ ಸೋಽಯಂ ಪಂಚಾಕ್ಷರಃ ಸ್ಮೃತಃ ।**
**ಸ್ತ್ರೀಭಿಃ ಶೂದ್ರೈಶ್ಚ ಸಂಕೀರ್ಣೈರ್ಧಾಯತೇ ಮುಕ್ತಿಕಾಂಕ್ಷಿಭಿಃ ॥**
**ನಾಸ್ಯ ದೀಕ್ಷಾ ನ ಹೋಮಶ್ಚ ನ ಸಂಸ್ಕಾರೋ ನ ದರ್ಪಣಂ ।**
**ನ ಕಾಲೋ ನೋಪದೇಶಶ್ಚ ಸದಾಶುಚಿರಯಂ ಮನುಃ ॥**

ಈ ಶಿವಪಂಚಾಕ್ಷರೀ ಮಂತ್ರವು ಭಕ್ತರ ಅಭಿಷ್ಟಗಳನ್ನೆಲ್ಲ ಪೂರೈಸುವ ದಿವ್ಯಮಂತ್ರವಾಗಿದೆ. ಮುಕ್ತಿಯ ಬಯಕೆಯುಳ್ಳ ಎಲ್ಲಮಾನವರೂ ಇದನ್ನು ಭಕ್ತಿಯಿಂದ ಜಪಿಸಬೇಕು. ಬೇರೆ ಮಂತ್ರಗಳ ಜಪಕ್ಕೆ ಗುರುಗಳಿಂದ ಉಪದೇಶ, ದೀಕ್ಷಾಧಾರಣ, ಹೋಮ ಹವನ, ತರ್ಪಣ ಮುಂತಾದವು ಅತ್ಯಾವಶ್ಯಕ. ಅವಿಲ್ಲದಿದ್ದರೆ ಆ ಮಂತ್ರಜಪದಿಂದ ಫಲ ಬರುವುದಿಲ್ಲ. ಆದರೆ 'ನಮಃ ಶಿವಾಯ' ಎಂಬ ಈ ಶಿವಮಂತ್ರ ಜಪಕ್ಕೆ ಮಾತ್ರ ಯಾವ ಗುರುವಿನ ಉಪದೇಶವೂ ಬೇಡ. ಶಿವದೀಕ್ಷೆಯನ್ನು ತೊಟ್ಟಬಳಿಕವೇ ಜಪಿಸಬೇಕೆಂಬ ನಿರ್ಬಂಧವೂ ಇಲ್ಲ. ಉಪನಯನ, ಉಪದೇಶ, ಮುಂತಾದ ಸಂಸ್ಕಾರಗಳ ಅವಶ್ಯಕತೆಯೂ ಇಲ್ಲ. ಈ ಜಪಕ್ಕೆ ಅರ್ಥಾತ್ ಈ ಜಪಸಂಖ್ಯೆಗೆ ಅನುಗುಣವಾದ ದಶಾಂಶ ಅಥವಾ ಶತಾಂಶ ತರ್ಪಣ, ಹೋಮಹವನಗಳ ಅವಶ್ಯಕತೆಯೂ ಇರುವುದಿಲ್ಲ. ಮತ್ತು ಪ್ರಾತಃಕಾಲ, ಸಂಧ್ಯಾಕಾಲ, ಪರ್ವಕಾಲ, ಪುಣ್ಯಕಾಲಗಳಲ್ಲಿ ಮಾತ್ರ ಪಠಿಸಬೇಕು ಎಂಬ ನಿರ್ಬಂಧವೂ ಇಲ್ಲ ಈ ಶಿವಪಂಚಾಕ್ಷರೀ ಮಂತ್ರಕ್ಕೆ ಬೇಕಾದವರು, ಬೇಕಾದಾಗ, ಬೇಕಾದಲ್ಲಿ, ಬೇಕಾದಂತೆ, ಬೇಕಾದಷ್ಟು ಸಲ 'ನಮಃ ಶಿವಾಯ, ನಮಃ ಶಿವಾಯ' ಎಂದು ಜಪಿಸಿದರೆ ಸಾಕು. ಪ್ರಭೂತಪುಣ್ಯ, ಮೋಕ್ಷಾದಿ ಪುರುಷಾರ್ಥಗಳು ಲಭಿಸುತ್ತವೆ.

ಆದರೆ ಈ ಶಿವಪಂಚಾಕ್ಷರೀ ಮಂತ್ರವನ್ನು ಉಪದೇಶ ನೀಡುವ ಗುರುಗಳು ಮಾತ್ರ ಸದಾಚಾರಿಗಳಾಗಿರಬೇಕು. ಜಿತೇಂದ್ರಿಯನೂ ಮಿತಭಾಷಿಯೂ, ಕಾಮಕ್ರೋಧರಹಿತನೂ, ಆದ ಜ್ಞಾನಿಗುರುವು ಈ ಶಿವಪಂಚಾಕ್ಷರೀ ಮಂತ್ರವನ್ನು ಭಕ್ತಿ ಪೂರ್ವಕವಾಗಿ ಶಿಷ್ಯನಿಗೆ ಉಪದೇಶಿಸಿದರೆ ಈ ಮಂತ್ರವು ಬೇಗ ಸಿದ್ಧಿಸುವುದು. ಅದರಲ್ಲಿಯೂ ಪ್ರಮಾಣ, ಪುಷ್ಕರ, ಸೇತುಬಂಧ, ಕೇದಾರ, ಗೋಕರ್ಣ, ನೈಮಿಷಾರಣ್ಯ ಮುಂತಾದ ಪುಣ್ಯಕ್ಷೇತ್ರಗಳಲ್ಲಿ ಈ ದಿವ್ಯಮಂತ್ರವನ್ನು ಪಠಿಸಿದರೆ ಸಿದ್ಧಿ ಸಮೃದ್ಧಿ ಎರಡೂ ಕರಗತವಾಗುವವು.

ಪೂರ್ವಕಾಲದಲ್ಲಿ ಮಥುರಾನಗರಿಯಲ್ಲಿ ಓರ್ವರಾಜ. ಅವನ ಹೆಸರು ದಾಶಾರ್ಹ. ಆ ರಾಜರ್ಷಿ ಯದುಕುಲದಲ್ಲಿಯೇ ಸರ್ವಶ್ರೇಷ್ಠ. ಶಾಸ್ತ್ರಗಳಲ್ಲಿ ಪ್ರಾವೀಣ್ಯ ನೀತಿಗಳಲ್ಲಿ ನೈಪುಣ್ಯ, ಆ ರಾಜನು ಅಷ್ಟೇ ಶೂರನೂ ಹೌದು. ಧೈರ್ಯ ಚಾತುರ್ಯಗಳು ಅವನ ಸ್ವಭಾವ ಧರ್ಮ. ರೂಪ, ಕಾಂತಿ, ಶೌರ್ಯ, ಸದ್ಗುಣ, ಔದಾರ್ಯ ಮುಂತಾದ ಗುಣಗಳೆಲ್ಲವೂ ಮೇಳವಿಸಿದ ಆ

ದಾಶಾರ್ಹದ ದೊರೆ, ಕಾಶೀರಾಜ ಕುಮಾರಿಯಾದ ಕಲಾವತಿಯ ಕೈಹಿಡಿದ ಆ ದಾಂಪತ್ಯ ಅನುರೂಪವಾಗಿತ್ತು. ವಿವಾಹ ಮಾಡಿಕೊಂಡು ಅರಮನೆಗೆ ಬಂದ ಬಳಿಕ ಮಹಾರಾಜನ ಶೈಯ್ಯಗೃಹವು ಸುಂದರವಾಗಿ ಸಿಂಗರಿಸಲ್ಪಟ್ಟಿತು. ಹಂಸತುಪ್ಪಳದ ಹಾಸಿಗೆಯ ಮೇಲೆ ಒಂದು ಶುಭದಿನದ ರಾತ್ರಿಯಂದು ಮಹಾರಾಜನು ಆಸೀನನಾಗಿದ್ದ. ನವವಧು ಕಲಾವತಿಯು ಮುತ್ತು, ರತ್ನ, ಬಂಗಾರದ, ಆಭರಣಗಳಿಂದ ಶೃಂಗಾರಿತಳಾಗಿ ಲಜ್ಜಾನಿವಿತೆ ಮುಖಿಯಾಗಿ ಆ ಏಕಾಂತ ಮಂದಿರದಲ್ಲಿ ನಿಂತುಕೊಂಡಿದ್ದಳು. ರಾಜನು ತನ್ನ ಮನದನ್ನೆಯನ್ನು ಕಣ್ತುಂಬ ನೋಡಿ ತಾನು ಕುಳಿತ ರಂಗಮಂಚಕ್ಕೆ ಬರಬೇಕೆಂದು ವಿನಂತಿಸಿದ.

ನವವಧುವಾದ ಕಲಾವತಿಯು ಮಹಾರಾಜನ ಆ ಪ್ರೇಮದ ಕರೆಯನ್ನು ನಯವಿನಯದಿಂದ ತಿರಸ್ಕರಿಸಿ ಅಲ್ಲಿಯೇ ನಿಂತುಕೊಂಡಳು. ತನ್ನ ಒಲವಿನ ಕರೆಯನ್ನು ಮನ್ನಿಸದೇ ನಿಂತಲ್ಲಿಯೇ ನಿಂತುಕೊಂಡ ಆ ಕಾಂತೆಯನ್ನು ತಾನಾಗಿ ಕೈಹಿಡಿದು ಕರೆತರಬೇಕೆಂದು ಸುಪ್ಪತ್ತಿಗೆಯಿಂದ ಆ ರಾಜಕುಮಾರ ಎದ್ದುನಿಂತ. ಅದನ್ನು ಕಂಡು ಉದ್ವೇಗಗೊಂಡ ರಾಜಕುವರಿಯು ಮಹಾರಾಜನಿಗೆ ಕೈ ಮುಗಿದು ''ಮಹಾರಾಜ, ನಾನು ವ್ರತಸ್ಥಳಾಗಿದ್ದೇನೆ. ತಾವು ನನ್ನನ್ನು ಸ್ಪರ್ಶಮಾಡಕೂಡದು. ಧರ್ಮಾಧರ್ಮಗಳ ಪರಿಜ್ಞಾನ ತಮಗೆ ಚೆನ್ನಾಗಿದೆ. ನಾನು ಅಬಲೆ. ನನ್ನ ಮೇಲೆ ತಾವು ಬಲಪ್ರಯೋಗವನ್ನು ಮಾಡಕೂಡದು. ಪತಿಪತ್ನಿಯರು ಪರಸ್ಪರ ಒಲಿದು ಪ್ರೀತಿಯಿಂದ ಕೂಡಿದರೆ ಮಾತ್ರ ಇಬ್ಬರಿಗೂ ಸುಖ, ಸಮಾಧಾನ, ಬಲಾತ್ಕಾರದಿಂದ ಇಚ್ಛೆಯಿಲ್ಲದ ನಾರಿಯನ್ನು ಭೋಗಿಸಿದರೆ ಯಾರಿಗೆ ಸುಖ? ಪ್ರೇಮವನ್ನು ಮಾಡದೆ, ಗರ್ಭಿಣಿಯಾದ, ರೋಗಿಷ್ಠಳಾದ, ಅಥವಾ ವ್ರತವನ್ನು ಅಂಗೀಕರಿಸದೆ ಅಥವಾ ಇಚ್ಛೆಯಿಲ್ಲದ ನಾರಿಯೊಡನೆ ಬಲವಂತದಿಂದ ಸಮಾಗಮವನ್ನು ಮಾಡಲು ವಿವೇಕಿ ಪುರುಷರು ಎಂದೂ ಪ್ರಯತ್ನಿಸಬಾರದು.'' ಎಂದು ವಿನಯದಿಂದ ಖಚಿತವಾದ ಧ್ವನಿಯಲ್ಲಿ ಬಿನ್ನವಿಸಿಕೊಂಡಳು.

ಮಹಾರಾಜನು ಮಹಾರಾಣಿಯ ರೂಪ ಉನ್ಮಾದಕ. ಆ ರೂಪರಾಣಿಯು ಮಾಡಿಕೊಂಡ ಬಿನ್ನಹವನ್ನು ಕೇಳುವ ಅವಸಾನ, ಔಚಿತ್ಯ ಪ್ರಜ್ಞೆ, ತಾಳ್ಮೆ ಯಾವುದೂ ಆ ತರುಣ ರಾಜಕುಮಾರನಲ್ಲಿ ಇರಲಿಲ್ಲ ಪ್ರೇಮಾಂಧನಾದ ಆ ದಾಶಾರ್ಹ ದೊರೆ ರಾಣಿಯ ಬಳಿಗೆ ಬಂದ. ಭರದಿಂದ ಬಿಗಿದಪ್ಪಿದ. ಕೂಡಲೇ ಅವನ ದೇಹವೆಲ್ಲವೂ ಬೆಂಕಿಯ ಬೊಂಬೆಯನ್ನು ತಬ್ಬಿಕೊಂಡಂತೆ ಕಾದಕಬ್ಬಿಣದಂತೆ ಸುಡುತ್ತಲಿತ್ತು ಆ ರಾಣಿಯ ದೇಹ ಮಹಾರಾಜನ ಮೈಯೆಲ್ಲವೂ ಉರಿಯತೊಡಗಿತು. ಗಾಬರಿಯಾಗಿ ಅವಳನ್ನು ಬಿಟ್ಟು ದೂರ ಸಿಡಿದು ನಿಂತ ಆ ''ಸುಂದರಿ, ಈ ನಿನ್ನ ದೇಹ ಕುಸುಮ ಕೋಮಲ, ಇಂಥ ನಿನ್ನ ಪುಷ್ಪ ಕೋಮಲವಾದ ಶರೀರ ಸ್ಪರ್ಶಮಾಡಿದರೇ, ಅಗ್ನಿಯಂತೆ ಸುಡುತ್ತಲಿದೆ ಇದಕ್ಕೆ ಏನು ಕಾರಣ? ಈ ನಿನ್ನ ಕೋಮಲ ಶರೀರವು ಅಗ್ನಿಶಿಖೆಯಂತೆ ಜ್ವಲಂತವಾಗಿ ಉರಿಯುತ್ತಿರುವುದು ಹೇಗೆ ಮತ್ತು ಏಕೆ?

**ಕಲಾವತಿ:-** ಮಹಾರಾಜ, ಇದೊಂದು ನನ್ನ ಬಾಲ್ಯದ ಘಟನೆ. ನನ್ನ ತಂದೆಯ ಮನೆಯಲ್ಲಿ ನಾನು ಚಿಕ್ಕವಳಾಗಿದ್ದಾಗ ಒಂದು ದಿನ ದೂರ್ವಾಸರ ಆಗಮನವಾಯಿತು. ಆ ಮುನಿಪುಂಗವರನ್ನು ನಮ್ಮ ತಂದೆ ಪರಿಪರಿಯಿಂದ ಸತ್ಕರಿಸಿದ. ಅನುಗ್ರಹ ಯಾಚಿಸಿದ. ಚಂಡಕೋಪರಾದ ಆ ಮುನಿಮಾರ್ತಂಡ ನಮ್ಮ ತಂದೆಯ ಸೇವೆಯಿಂದ ಸಂತುಷ್ಟರಾದರು.

ನನ್ನ ತಂದೆ ಕೆಲವು ದಿನ ಅರಮನೆಯಲ್ಲೇ ಇದ್ದು ರಾಜಕುಟುಂಬದ ಸೇವೆಯನ್ನು ಸ್ವೀಕರಿಸಬೇಕು ಮುನಿಗಳಿಗೆ ಎಂದು ಕೇಳಿಕೊಂಡ. ನಮ್ಮಗೆಲ್ಲ ಭಯ. ದೂರ್ವಾಸ ಒಂದು ಬೆಂಕಿಬೆಟ್ಟ, ಸೇವೆಯಲ್ಲಿ ಏನಾದರೂ ಕೊರತೆಯಾದರೆ ಸಿಡಿದೇಳಲು ತಡವಾಗುವುದಿಲ್ಲ. ಆ ಅಗ್ನಿಪರ್ವತಕ್ಕೆ ಅರೆದು ತಂದ ಮೂಗಿನ ಮೇಲೆ ಕೋಪ. ಇಂಥವರನ್ನು ನಾವು ಬಹುಜಾಗರೂಕತೆಯಿಂದಲೇ ಸತ್ಕರಿಸಿದೆವು. ಆ ಮುನಿ ನಮ್ಮ ಸೇವೆಯಿಂದ ಸುಪ್ರಸನ್ನನಾದ ನಾನಂತೂ ಮೈತುಂಬಾ ಕಣ್ಣುಮಾಡಿಕೊಂಡು ಆ ಮುನಿಯ ಸೇವೆಯಲ್ಲಿ ಎಲ್ಲಿಯೂ ಚ್ಯುತಿ ಬಾರದಂತೆ ಭಕ್ತಿಯಿಂದ ಅವರ ಸೇವೆಮಾಡಿದೆ. ನನ್ನ ಮೇಲೆ ಅತ್ಯಂತ ಪರಿತುಷ್ಟರಾಗಿ ಆ ಮುನೀಶ್ವರರು ನನಗೆ ಶಿವ ಪಂಚಾಕ್ಷರೀ ಮಂತ್ರವನ್ನು ಉಪದೇಶಮಾಡಿದರು. ಅವರಿಂದ ಉಪದಿಷ್ಟವಾದ ಪಂಚಾಕ್ಷರಿಯನ್ನು ನಾನು ಭಕ್ತಿಯಿಂದ ಶ್ರದ್ಧೆಯಿಂದ ಹಗಲಿರುಳು ಜಪಿಸಿದೆ. ಅದೇ ಒಂದು ದೊಡ್ಡ ತಪಸ್ಸು ಎಂದು ಸತತವೂ ಜಪವನ್ನು ಮಾಡುತ್ತ ತಪಂಗೈದೆ. ಆ ಮಂತ್ರ ಪ್ರಭಾವದಿಂದ ನನ್ನ ಜನ್ಮ ಜನ್ಮಾಂತರದ ಪಾಪರಾಶಿಗಳೆಲ್ಲ ದಗ್ಧವಾಗಿ ಹೋದವು. ನನ್ನ ದೇಹ ಅಡಿಯಿಂದ ಮುಡಿಯವರೆಗೆ ನಿಷ್ಪಾಪವಾಗಿ ಪರಿಶುದ್ಧಾಯಿತು. ಪಂಚಾಕ್ಷರೀ ಜಪದಿಂದ ಪರಿಪೂತವಾದ ಈ ನನ್ನ ಪವಿತ್ರ ದೇಹವನ್ನು ಪಾಪಿಗಳೂ ಯಾರೂ ಮುಟ್ಟಲಾರರು ಮುಟ್ಟಿದರೆ ಸುಟ್ಟು ಹೋಗುವರು. ಈ ನನ್ನ ದೇಹ ವಾಸ್ತವಿಕವಾಗಿ ಕುಸುಮಕೋಮಲ. ಹಿಮಶೀತಲ ಆದರೆ ಪಾಪಿಗಳಿಗೆ ಮಾತ್ರ ಇದರ ಸ್ಪರ್ಶ, ಅಗ್ನಿಸ್ಪರ್ಶ.

ಮಹಾರಾಜರೇ, ತಾವು ಸ್ವಭಾವದಿಂದ ಸಜ್ಜನರಲ್ಲ. ನಿಷಿದ್ಧವಾದ ಮಧ್ಯಪಾನ ನಿಮಗೊಂದು ವ್ಯಸನ. ನೀವು ನಿಮ್ಮ ಆಯುಷ್ಯದಲ್ಲಿ ಒಂದು ದಿನವೂ 'ಓಂ ನಮಃ ಶಿವಾಯ' ಎಂದು ಜಪಿಸಲಿಲ್ಲ. ಶಂಕರನನ್ನು ಆರಾಧಿಸಲಿಲ್ಲ. ಅಂದಬಳಿಕ ಶಿವಪಂಚಾಕ್ಷರಿಯ ಸತತ ಜಪದಿಂದ ಪೂತಾದಾತವಾದ ನನ್ನ ದೇಹವನ್ನು ಹೇಗೆ ಸ್ಪರ್ಶಿಸಬಲ್ಲಿರಿ? ನಿಮಗೆ ನನ್ನ ದೇಹವು ಒಂದು ಉರಿಯುವ ಅಗ್ನಿಕುಂಡ. ಇದರ ಸ್ಪರ್ಶದಿಂದ ನಿಮ್ಮ ದೇಹವೆಲ್ಲವೂ ದಾಹದ ಅನುಭವವನ್ನು ಪಡೆದದ್ದು ಆಶ್ಚರ್ಯವಲ್ಲ.

**ದಾಶಾರ್ಹ:-** ಸುಂದರಿ, ನೀನು ಹೇಳಿದಂತೆ ನಾನು ಆಯುಷ್ಯದಲ್ಲಿ ಒಮ್ಮೆಯೂ ಶಿವನಾಮವನ್ನೂ ಜಪಿಸಲಿಲ್ಲ ಶಿವಪಂಚಾಕ್ಷರಿಯನ್ನು ನನಗೀಗ ನನ್ನ ಪಶ್ಚಾತ್ತಾಪವಾಗಿದೆ. ನಿನ್ನಿಂದ ನನ್ನ ಕಣ್ಣುತೆರೆಯಿತು. ನೀನೇ ಇಂದುನನಗೆ ಗುರುವಾಗು. ಶಿವಪಂಚಾಕ್ಷರೀ ಮಂತ್ರವನ್ನು ಉಪದೇಶ ಮಾಡು.

**ರಾಣಿ:-** ''ಪತಿದೇವ, ನೀವು ನನಗೆ ಪೂಜ್ಯರು. ಏನಿದ್ದರೂ ಹೇಗಿದ್ದರೂ ನನಗೆ ಮಾಂಗಲ್ಯ ಸೂತ್ರಕಟ್ಟಿದ ತಾವು ನನಗೆ ದೇವರು. ನೀವೇ ನನಗೆ ಗುರುಗಳು, ಆದುದರಿಂದ ನಾನು ತಮಗೆ ಹೇಗೆ ಉಪದೇಶ ಮಾಡಬಲ್ಲೆ? ಆದುದರಿಂದ ತಾವು ದಯೆಮಾಡಿ ಗರ್ಗಾಚಾರ್ಯರ ಬಳಿಗೆಹೋಗಿರಿ. ಮಂತ್ರ ಬಲ್ಲವರಲ್ಲಿ ಆ ಗರ್ಗ ಗುರುವಿಗೆ ಸಮಾನರಾದ ಆಚಾರ್ಯರು ಇನ್ನೊಬ್ಬರಿಲ್ಲ. ನಾನೂ ನಿಮ್ಮೊಡನೆ ಬರುತ್ತೇನೆ ನಡೆಯಿರಿ. ಎಂದು ಹೇಳಿ ಮಹಾರಾಣಿಯು ತನ್ನ ಪತಿ ದಾಶಾರ್ಹ ರಾಜನನ್ನು ಕರೆದುಕೊಂಡು ಮಹರ್ಷಿ ಗರ್ಗರ ತಣ್ಣ ಕುಬೇರಕ್ಕೆ ಬಂದಳು. ವಿನಯದಿಂದ ದಾಶಾರ್ಹರಾಜ ನುಡಿದ. ''ಗುರುದೇವ! ತಮ್ಮ ಹೃದಯದಲ್ಲಿ ಸತತವೂ ದಯೋದಯ ಭಗವಂತನೆ ನೆಲೆಸಿರುವನು. ತಾವೂ ಭಕ್ತವತ್ಸಲರು. ಭಕ್ತಿಯಿಂದ ತಮ್ಮನ್ನು ಪ್ರಾರ್ಥಿಸುತ್ತಿದ್ದೇನೆ. ದಯಮಾಡಿ ನನಗೆ ಮಹಾದೇವನ ಮಂತ್ರವನ್ನು

ಉಪದೇಶಿಸಿರಿ. ಗರ್ಗರು ರಾಜನ ಬೇಡಿಕೆಯನ್ನು ಆಲಿಸಿದರು. ಹೃದಯತುಂಬಿ ಅನುಮೋದಿಸಿದರು. ರಾಜದಂಪತಿಗಳನ್ನು ಕರೆದುಕೊಂಡು ಯಮುನೆಯ ತೀರಕ್ಕೆ ತೆರಳಿ ಅಲ್ಲಿ ಒಂದು ಪವಿತ್ರವಾದ ಮರದಡಿಯಲ್ಲಿ ಆಸಿನರಾದರು ಗುರು ಗರ್ಗರು. ಅರಸನು ಅಂದು ಉಪವಾಸಗೈದ. ತೀರ್ಥಜಲದಲ್ಲಿ ಮಿಂದ. ಮೂಡಲಕ್ಕೆ ಮುಖಮಾಡಿಕೊಂಡು ಕುಳಿತುಕೊಳ್ಳಲು ಆಜ್ಞೆ ನೀಡಿದರು ಆಚಾರ್ಯವರ್ಯರು. ಶಿವನನ್ನು ಧ್ಯಾನಮಾಡುತ್ತ ಮನದಲ್ಲಿಯೇ ವಂದಿಸಿ ಕೈ ಜೋಡಿಸಿ ದಾಶಾರ್ಹದೊರೆ ಗುರುವಿನ ಬಳಿಯಲ್ಲಿ ಕುಳಿತುಕೊಂಡ. ತಲೆಯ ಮೇಲೆ ಗರ್ಗಾಚಾರ್ಯರು ತಮ್ಮ ಕೈ ಇರಿಸಿದರು. ಶಿವಪಂಚಾಕ್ಷರೀ ಮಂತ್ರವನ್ನು ಗುಟ್ಟಾಗಿ ಉಪದೇಶಿಸಿದರು. ಏಕಾಗ್ರಚಿತ್ತದಿಂದ ದಾಶಾರ್ಹಧರಣೀಪತಿಯು ಗುರೂಪದಿಷ್ಟವಾದ ಆ ಶಿವಮಂತ್ರವನ್ನು ಸ್ವೀಕರಿಸಿದ. ಮರುಕ್ಷಣದಲ್ಲಿಯೇ ಅವನ ಜನ್ಮಜನ್ಮಾಂತರದ ಪಾಪಗಳೆಲ್ಲವೂ ಕಾಗೆಗಳ ವೇಷತೊಟ್ಟು ಹಾರಿಹೋದವು.

**ಗರ್ಗಾಚಾರ್ಯ:-** ಅರಸನೇ, ಪ್ರಪಂಚದಲ್ಲಿಯೇ ಸರ್ವಶ್ರೇಷ್ಠ ಈ ಪಂಚಾಕ್ಷರೀ ಮಂತ್ರ. ಇದು ನಿನ್ನ ಕಿವಿಯಿಂದ ಹೃದಯಕ್ಕೆ ಇಳಿದು, ನಾಲಿಗೆಯಿಂದ ಉಚ್ಚರಿತವಾಗಿ, ಕಂಠನಾಳದಿಂದ ಹೊರಹೊಮ್ಮಿದ ತಕ್ಷಣವೇ ನಿನ್ನ ಕೋಟಿ ಕೋಟಿ ಪಾಪಗಳೆಲ್ಲವೂ ಕಾಗೆಯ ರೂಪದಿಂದ ಹೊರಟು ಹೋದವು. ಶಿವಪಂಚಾಕ್ಷರೀ ಮಂತ್ರದಿಂದ ಮಾನವರ ಅನೇಕ ಕೋಟಿ ಜನ್ಮಾರ್ಜಿತವಾದ ದುರಿತಗಳೆಲ್ಲವೂ ದಗ್ಧವಾಗಿ ಹೋಗುವವು. ನಿನ್ನ ಪಾಪ ರಾಶಿಯೆಲ್ಲವೂ ಈಗ ಹೋಗಿದೆ. ಇನ್ನು ಮೇಲೆ ನೀನು ಈ ಮಹಾರಾಣಿ ಯೊಂದಿಗೆ ಆನಂದದಿಂದ ವಿಹರಿಸು.

ಹೀಗೆ ನುಡಿದು ಆ ದಂಪತಿಗಳೊಂದಿಗೆ ಗರ್ಗಾಚಾರ್ಯರು ತಮ್ಮ ಗುಡಿಸಲಿಗೆ ಮರಳಿದರು. ಅನಂತರ ಗುರುಗಳ ಅನುಮೋದನೆ ಪಡೆದು ರಾಜರಾಣಿಯರು ತಮ್ಮ ಅರಮನೆಗೆ ತೆರಳಿದರು. ಈ ಶಿವಪಂಚಾಕ್ಷರೀ ಮಂತ್ರವು ವೇದಗಳ ಸಾರ. ಉಪನಿಷತ್ತುಗಳ ರಹಸ್ಯ. ಪುರಾಣಗಳ ತಿರುಳು. ಶಾಸ್ತ್ರಗಳ ಶಿರೋಭೂಷಣ. ಇದರ ಪಠನದಿಂದ ಪಾಪನಾಶ. ಇದರ ಜಪದಿಂದ ಸರ್ವಸಿದ್ಧಿಗಳ ಸಮೃದ್ಧಿ. ಇದು ಪಂಚಾಕ್ಷರೀಮಂತ್ರದ ವಿರಾಟ್ ಪ್ರಭಾವದ ಸಂಕ್ಷೇಪಕಥಾ.

## ಮಿತ್ರಸಹ ರಾಜನಿಗೆ ವಶಿಷ್ಠರಶಾಪ. ಅವನಿಗೆ ಬ್ರಹ್ಮಹತ್ಯಾ ಪಾಪ.

**ಸೂತ:-** ಮಾಘಮಾಸದ ಕೃಷ್ಣಪಕ್ಷ ಚತುರ್ದಶೀದಿನವು ಶಿವರಾತ್ರಿ ಎಂದು ಕರೆಯಲ್ಪಡುತ್ತದೆ. ಅಂದು ಉಪವಾಸಮಾಡುವುದು ಶಿವ ಪ್ರೀತಿಕರ. ಅದರಲ್ಲೂ ಆ ಶಿವರಾತ್ರಿಯಂದು ರಾತ್ರಿಕಾಲದಲ್ಲಿ ಶಂಕರನ್ನು ಹಾಡಿ ಪಾಡಿ ಕೊಂಡಾಡುತ್ತ ಜಾಗರೋತ್ಸವವನ್ನು ಮಾಡುವುದು ಮಾನವಮಾತ್ರರಿಗೆ ದುರ್ಲಭ. ಮತ್ತು ದುರಿತನಾಶಕ. ಶಿವರಾತ್ರಿಯಂದು ಶಿವಲಿಂಗ ದರ್ಶನದಿಂದ ಸಮಸ್ತ ಪಾಪಗಳಿಗೂ ವಿನಾಶ. ಅಂದು ಶಿವಲಿಂಗದ ಪೂಜೆಯ ಲಾಭವು ಪರಮದುರ್ಲಭ. ಹತ್ತು ಜನ್ಮಗಳಲ್ಲಿ ಮಾಡಿದ ಪುಣ್ಯರಾಶಿಯ ಪ್ರಭಾವದಿಂದ ಶಿವರಾತ್ರಿಯಂದು ಶಂಕರನ ಲಿಂಗಕ್ಕೆ ಬಿಲ್ವಪತ್ರದಿಂದ ಪೂಜೆಮಾಡುವ ಅವಕಾಶ ಒದಗಿಬರುವುದು. ಗಂಗಾ ಜಲದಲ್ಲಿ ಸ್ನಾನಮಾಡುವುದರಿಂದ ಬರುವಷ್ಟು ಪುಣ್ಯವನ್ನು ಒಂದು ಸಲ ಬಿಲ್ವಪತ್ರದಿಂದ ಗೌರೀಪತಿಯ ಪೂಜೆ ಮಾತ್ರದಿಂದಲೇ ಪಡೆಯಬಹುದು. ಶಿವರಾತ್ರಿಯಂದು ಉಪವಾಸ ಹಾಗೂ ಶಿವಸ್ತುತಿ ಮಾಡಿ ಯಜ್ಞಗಳಿಗಿಂತ ಮಿಗಿಲಾದ ಪುಣ್ಯಫಲವು ಪ್ರಾಪ್ತಿಯಾಗುವುದು.

ಈ ವಿಷಯದಲ್ಲಿ ನಿನಗೆ ಒಂದು ಉದ್ಬೋಧಕವಾದ ಪ್ರಸಂಗ ಹೇಳುತ್ತೇನೆ ಕೇಳು : ಇಕ್ಷ್ವಾಕು ವಂಶದಲ್ಲಿ ಮಿತ್ರಸಹ ಎಂಬ ಒಬ್ಬ ರಾಜ. ಬಿಲ್ಲಾಳುಗಳಲ್ಲಿ ಎಲ್ಲರಿಗಿಂತ ಶ್ರೇಷ್ಠ. ಶಾಸ್ತ್ರಗಳಲ್ಲಿ ಪರಿಣತ. ವೇದಗಳಲ್ಲಿ ಪಾರಂಗತ. ದಯಾಗುಣದ ಸಮುದ್ರ. ಆದರೆ ಅವನಿಗೆ ಒಂದು ವ್ಯಸನ. ಯಾವಾಗಲೂ ಕಾಡಿನಲ್ಲಿ ಬೇಟೆಯಲ್ಲಿ ಅವನಿಗೊಂದು ಚೆಲ್ಲಾಟ. ಒಂದು ದಿನ ಬೇಟೆಗಾಗಿ ಮಹಾರಾಜನ ಸಿದ್ಧಿಕೆ. ತನ್ನ ಸೇನೆಯೊಂದಿಗೆ ಗೊಂಡಾರಣ್ಯದಲ್ಲಿ ಪ್ರವೇಶ. ತನ್ನ ತೀಕ್ಷ್ಣವಾದ ತಲವಾರದಿಂದ ಹೂಂಕರಿಸುವ ಹುಲಿಗಳನ್ನು ಹೊಡೆದ. ಹಂದಿಗಳನ್ನು ಕೊಂದ. ಸಿಂಹಗಳನ್ನು ಸಂಹರಿಸಿದ. ಕೆಲವೇ ಗಂಟೆಗಳಲ್ಲಿ ಅನೇಕ ಘೋರ ಪ್ರಾಣಿಗಳ ಸಂಹಾರಮಾಡಿದ. ಪರಿಸರದ ಭೀಕರ ಪ್ರಾಣಿಗಳನ್ನೆಲ್ಲ ಕೊಚ್ಚಹಾಕಿ ಮಹಾರಾಜ ತನ್ನ ರಥದಲ್ಲಿ ಕುಳಿತು ವನಪ್ರಾಂತವನ್ನೆಲ್ಲ ಸುತ್ತಿದ. ದಾರಿಯಲ್ಲಿ ಅವನ ಕಣ್ಣಿಗೆ ಬಿದ್ದ ಓರ್ವ ಘೋರ ರಕ್ಕಸ. ಕಂಡ ಕೂಡಲೇ ತುಂಡರಿಸಿಹಾಕಿದ. ದೂರದಿಂದಲೇ ಇದನ್ನು ನಿಂತು ನೋಡಿದ ಆ ದೈತ್ಯನ ಸೋದರ. ಅಣ್ಣನ ಈ ಆಕಸ್ಮಿಕ ಶಿರಚ್ಛೇದದಿಂದ ಭಯಭ್ರಾಂತನಾದ ಈ ಸೋದರದೈತ್ಯ ಅಲ್ಲಿಯೇ ಕಾಡುಕಂಟಿಯೊಂದರ ಹಿಂದೆ ಕ್ರೋಧದಿಂದ ಅಡಗಿಕೊಂಡ. ಆ ದೈತ್ಯನು ತನ್ನ ಅಣ್ಣನ ಮರಣವನ್ನು ಕಣ್ಣಾರೆ ಕಂಡು ಪರಿತಪಿಸಿದ. ಮತ್ತು ಯೋಚಿಸಿದ- "ಈ ಮಿತ್ರಸಹ ಶತ್ರುಗಳಿಗೆ ದುಸ್ಸಹ. ಇವನನ್ನು ಗೆಲ್ಲುವುದು ಅಶಕ್ಯ. ಕೊಲ್ಲುವುದೂ ಅಸಾಧ್ಯ. ಕಪಟದಿಂದಲೇ ಹೇಗಾದರೂ ಮಾಡಿ ಇವನನ್ನು ಗೆಲ್ಲಬೇಕು". ಹೀಗೆ ಮೆಲ್ಲನೇ ತನ್ನಲ್ಲಿಯೇ ಆ ದೈತ್ಯ ನುಡಿದು ನಿಶ್ಚಯಿಸಿದ. ಕೂಡಲೇ ಮಾನವ ದೇಹವನ್ನು ಧರಿಸಿ ರಾಜನ ಸಮೀಪಕ್ಕೆ ಆಗಮಿಸಿದ. ಮಹಾರಾಜನಿಗೆ ವಿನಯದಿಂದ ಕೇಳಿಕೊಂಡ. "ಮಹಾರಾಜ, ನಾನು ತಮ್ಮ ಸೇವೆಯನ್ನು ಮಾಡಬೇಕೆಂದು ಬಂದಿದ್ದೇನೆ. ನನಗೆ ಸೇವೆಯ ಅವಕಾಶವನ್ನು ಕಲ್ಪಿಸಿಕೊಡಿ."

ಆವನ ನುಡಿಯನ್ನು ಮಹಾರಾಜ ನಿಜವೆಂದೇ ನಂಬಿದ. ನಯವಿನದಿಂದ ತನ್ನ ಬಳಿಗೆ ಬಂದ ಈ ತೇಜಸ್ವಿ ಪುರುಷನನ್ನು ರಾಜನು ಅಡಿಗೆ ಮನೆಯ ಮೇಲ್ವಿಚಾರಕನಾಗಿ ಮಾಡಿದ. ಮಹಾರಾಜ ಮಿತ್ರಸಹನ ಮಡದಿಯ ಹೆಸರು ಮದಯಂತಿ. ನಳರಾಜನ ನಾರೀಮಣಿ ದಮಯಂತಿಯ ಶೀಲ-ಸದ್ಗುಣ, ಚಾರಿತ್ರ್ಯ ಪಾವಿತ್ರ್ಯಗಳೆಲ್ಲವೂ ಇದ್ದುದರಿಂದ ಮದಯಂತಿ ಎಂಬ ಹೆಸರು ಇವಳಿಗೆ ಸಾರ್ಥಕವಾಗಿತ್ತು ಮದಯಂತಿ ಎಂಬ ಹೆಸರು. ಹೊಸದಾಗಿ ಮಹಾರಾಜನು ನಿಯಮಿಸಿದ ಮೇಲ್ವಿಚಾರಕ ಎಲ್ಲ ಬಗೆಯ ರಸಪಾಕಗಳಲ್ಲಿ ಪಳಗಿದಂತೆ ತೋರಿದ. ಅಡಿಗೆ ಮನೆಯ ಹೊಣೆಗಾರಿಕೆಯನ್ನೆಲ್ಲ ಮಹಾರಾಣಿಯು ಈ ಹೊಸ ಅಡುಗೆಯವನಿಗೆ ಒಪ್ಪಿಸಿ ತಾನು ಬೇರೆ ಧರ್ಮಕಾರ್ಯ, ಅತಿಥಿಸೇವೆ, ಅರಮನೆ ಅಂತಃಪುರಗಳ ಮೇಲ್ವಿಚಾರಣೆಯಲ್ಲಿ ತೊಡಗಿದಳು. ಒಂದು ದಿನ ಮಿತ್ರಸಹನ ಅರಮನೆಯಲ್ಲಿ ಪಿತೃಕಾರ್ಯ. ಶ್ರಾದ್ಧಭೋಜನಕ್ಕೆ ಬ್ರಹ್ಮರ್ಷಿ ವಸಿಷ್ಠರಿಗೆ ಆಮಂತ್ರಣ. ಸಕಾಲದಲ್ಲಿ ಮಹರ್ಷಿಗಳ ಆಗಮನ. ಮಹಾರಾಜನಿಂದ ಸಂಭ್ರಮದ ಸ್ವಾಗತ. ಅರ್ಘ್ಯಪಾದ್ಯಗಳಿಂದ ಪೂಜೆ, ಪಿಂಡಪ್ರದಾನಾದಿ ಶ್ರಾದ್ಧಕಾರ್ಯ ಕಲಾಪಗಳ ನಿರ್ವಿಘ್ನ ಪರಿಸಮಾಪ್ತಿ. ಅನಂತರ ಬ್ರಾಹ್ಮಣ ಭೋಜನ ಪ್ರಾರಂಭ. ಅಗ್ರಪಂಕ್ತಿಯಲ್ಲಿ ವಸಿಷ್ಠರಿಗೆ ಮಣೆ. ಅವರೊಟ್ಟಿಗೆ ತೇಜೋಭಾಸುರರಾದ ಅನೇಕ ಭೂಸುರರು ಅವರ ಪಂಕ್ತಿಯಲ್ಲಿ. ಬಗೆಬಗೆಯ ಭಕ್ಷ್ಯಭೋಜ್ಯ ಪಕ್ವಾನ್ನಗಳ ಪರಿವೇಷಣ. ಮಧ್ಯದಲ್ಲಿ ಪಕ್ವಾನ್ನಗಳ ನಡುವೆ ಮನುಷ್ಯ ಮಾಂಸಮಿಶ್ರಣ. ಮೃಷ್ಟಾನ್ನಗಳಲ್ಲಿ ಮಿಲಿತವಾದ ಮಾನವ ಮಾಂಸವನ್ನು ಕಂಡಕೂಡಲೇ ಕೆಂಡದ ಉಂಡೆಯಾದರು ವಶಿಷ್ಠರು. ಕೋಪತಪ್ತರಾಗಿ ಮಿತ್ರಸಹನನ್ನು ಕುರಿತು ನುಡಿದರು. "ಮಹಾರಾಜ, ಧಿಕ್ಕಾರ! ಧಿಕ್ಕಾರ ನಿನ್ನ ಆತಿಥ್ಯಕ್ಕೆ. ನನ್ನಂಥ ಮಹರ್ಷಿಗಳ ಎಲೆಯಲ್ಲಿ ಮನುಷ್ಯರ ಮಾಂಸವನ್ನು ಬಡಿಸಲಿಕ್ಕೆ ನಿನಗೆ ಹೇಗೆ ಧೈರ್ಯ ಬಂದಿತು? ಮಾಂಸ ತಿನ್ನಲು ನಾನೇನು ರಾಕ್ಷಸನೇ? ಕಂದಮೂಲ ಫಲಗಳನ್ನು ತಿನ್ನುವ ನಮಗೆ ಶ್ರಾದ್ಧದಿನ ಮನುಷ್ಯ ಮಾಂಸವನ್ನು ಬಡಿಸಿದ ನೀನು ರಕ್ಕಸನೇ ಆಗು."

ಋಷಿಗಳ ಈ ಶಾಪಾಕ್ಷರಗಳನ್ನು ಕೇಳಿ ಆ ಪೃಥ್ವೀಪತಿ ತಲ್ಲಣಿಸಿಹೋದ. ಅವನ ದೈನ್ಯತೆ ಹಾಗೂ ಭಯಭ್ರಾಂತಿಗಳನ್ನು ಕಂಡು ತಿಳಿದುಹೋಯಿತು ವಶಿಷ್ಠರಿಗೆ ಇವನು ನಿರಪರಾಧಿ ಎಂದು. ತಮ್ಮ ದಿವ್ಯ ದೃಷ್ಟಿಯಿಂದ ಅವರು ಕೆದಕಿ ನೋಡಿದರು ಭೂತಾರ್ಥವನ್ನು. ಇದೆಲ್ಲವೂ ಮಿತ್ರಸಹ ರಾಜನು ಕಾನನದಲ್ಲಿ ಕೊಂದು ಹಾಕಿದ ದೈತ್ಯನ ತಮ್ಮನಾದ ದುರುಳ ದಾನವನ ಕುಟಿಲ ಕಾರಸ್ಥಾನ ಎಂದು ಅವರಿಗೆ ನಿಶ್ಚಿತವಾಯಿತು. ಆಗ ಅವರು ಮಹಾರಾಜನಿಗೆ ತಾವು ಕೊಟ್ಟ ಶಾಪವನ್ನು ೧೨ ವರ್ಷಗಳಿಗೆ ಸೀಮಿತಗೊಳಿಸಿದರು. ಆದರೆ ಇದರಿಂದ ಮಹಾರಾಜ ಮಿತ್ರಸಹನಿಗೆ ಮಾತ್ರ ಮೈ ಉರಿದುಹೋಯಿತು. ''ಇಧರಲ್ಲಿ ನನ್ನದೇನೂ ತಪ್ಪಿಲ್ಲ. ಅಡುಗೆಯವನಿಗೆ ಶ್ರಾದ್ಧಕ್ಕೆ ಸಿದ್ಧಪಡಿಸಿದ ಭಕ್ಷ್ಯಗಳಲ್ಲಿ ಮಾನವಮಾಂಸವನ್ನು ಸೇರಿಸಲು ನಾನೆಂದೂ ಹೇಳಲಿಲ್ಲ. ಯಾವನೋ ದೈತ್ಯಾಧಮ ನನಗೆ ಗೊತ್ತಾಗದಂತೆ ಶ್ರಾದ್ಧ ಪಾಕದಲ್ಲಿ ಮಾಂಸವನ್ನು ಬೆರೆಸಿದರೆ ನನ್ನದೇನು ತಪ್ಪು? ನನಗೇಕೆ ರಾಕ್ಷಸನಾಗು ಎಂದು ಋಷಿಗಳು ಶಾಪಕೊಡಬೇಕು? ಅಪರಾಧವಿಲ್ಲದೇ ನನ್ನ ಮೇಲೆ ಕೋಪಶಾಪಗಳನ್ನು ಪ್ರಯೋಗಿಸಿದ ಈ ಗುರುವಿಗೆ ನಾನು ತಿರುಮಂತ್ರ ಹೇಳುತ್ತೇನೆ? ಎಂದು ನಿರ್ಧರಿಸಿ, ವಶಿಷ್ಠರನ್ನು ಶಪಿಸಲು ಕೈಯಲ್ಲಿ ಶಾಪಜಲವನ್ನು ಎತ್ತಿದ. ಇದನ್ನು ಕಂಡು ಮಹಾರಾಣಿ ಮದಯಂತಿಯು ಧಾವಿಸಿಬಂದಳು. ಪತಿಯ ಪಾದಗಳಿಗೆ ವಂದಿಸಿ ''ಗುರುಗಳೂ-ಬ್ರಹ್ಮರ್ಷಿಗಳೂ ಆದ ವಸಿಷ್ಠರಿಗೆ ಶಾಪಕೊಡಬೇಡಿರಿ'' ಎಂದು ಅಂಗಲಾಚಿದಳು. ಅವಳ ಮಾತನ್ನು ಮನ್ನಿಸಿದ ಮಹಾರಾಜ. ಶಾಪಕೊಡಲು ಕೈಯಲ್ಲಿ ಹಿಡಿದ ನೀರನ್ನು ತನ್ನ ಎರಡೂ ಕಾಲುಗಳ ಮೇಲೆ ಚೆಲ್ಲಿಕೊಂಡ. ಇದರಿಂದ ಅವನ ಎರಡೂ ಕಾಲುಗಳು ಕಪ್ಪಾಗಿ ಹೋದವು. ಅಂದಿನಿಂದ ಅವನ ಕಲ್ಮಾಷಪಾದ ಎಂದು ಇತಿಹಾಸದಲ್ಲಿ ಪ್ರಸಿದ್ಧನಾದ. ಗುರುಗಳ ಶಾಪದಿಂದ ಆ ಮಿತ್ರಸಹ ಮಹಾರಾಜನಿಗೆ ರಕ್ಕಸರೂಪ ಬಂದಿತು. ಘೋರ ಕಾಡು ಮೇಡುಗಳಲ್ಲಿ ದಾರುಣದೈತ್ಯನಾಗಿ ಅಲೆದಾಡಿದ. ಕಂಡ ಮಾನವರನ್ನೆಲ್ಲ ಕೊಂದು ಹಾಕಿದ. ಸಿಕ್ಕಿದ ಪ್ರಾಣಿಗಳನ್ನು ಹೊಡೆದು ಮಾಂಸ ಭಕ್ಷಣ ಮಾಡತೊಡಗಿದ.

ಒಂದು ದಿನ ವಿಜನವನಾಂತ ಏಕಾಂತದಲ್ಲಿ ಒಂದು ರಮಣೀಯ ಸ್ಥಳ. ಅಲ್ಲಿ ನವವಿವಾಹಿತರಾದ ಮುನಿಕುಮಾರ ಇಬ್ಬರೂ ಸತಿ ಪತಿಯರು ಕಾಮಕೇಳೀವಿಲಾಸಮಗ್ನರು, ನರಭಕ್ಷಕನಾದ ಈ ರಾಜರಾಕ್ಷಸ ಅವರಿಬ್ಬರನ್ನೂ ನೋಡಿದ. ಕೊಂದು ತಿಂದುಬಿಡಬೇಕೆಂದು ವಿಚಾರ ಮಾಡಿದ. ತರುಣ ಮುನಿಕುಮಾರನನ್ನು ಹಿಡಿದು ಕೊಂಡ, ಹೆಬ್ಬುಲಿ ಹುಲ್ಲೆಯನ್ನು ಹಿಡಿಯುವಂತೆ ಹಿಡಿದುಕೊಂಡ. ಅದನ್ನು ಕಂಡು ಹೆದರಿ ಹೌಹಾರಿದಳು ಆ ಮುನಿಮಾನಿನಿ. ಆ ಮುನಿಪತ್ನಿಯು ಒಳ್ಳೆ ಜ್ಞಾನಿನಿಯೂ ಆಗಿದ್ದಳು. ಅವಳು ಈ ರಕ್ಕಸನ ಎದುರು ಮಂಡೆಯೂರಿ ಬೇಡಿಕೊಂಡಳು. ''ರಾಕ್ಷಸ, ನೀನು ನಿಜವಾದ ರಾಕ್ಷಸನಲ್ಲ. ಇಕ್ಷ್ವಾಕು ವಂಶದ ದೀಪದ ಕುಡಿ. ಧರ್ಮಾತ್ಮನಾದ ಮಿತ್ರಸಹ ಮಹಾರಾಜನೇ ನೀನು ಎಂಬುದನ್ನು ನೆನಪುಮಾಡಿಕೋ. ಸೂರ್ಯವಂಶದ ದೊರೆಯಾದ ನೀನು ಈ ಬ್ರಹ್ಮಹತ್ಯಾ ಪಾಪವನ್ನು ದಯಮಾಡಿ ಮಾಡಬೇಡ. ಅಯೋಧ್ಯೆಯ ಅರಸನಾದ ನೀನು ಮದಯಂತಿಯ ಪತಿ ಎಂಬುದನ್ನು ಮರೆಯಬೇಡ. ನೀನು ಇಕ್ಷ್ವಾಕು ವಂಶದ ಮಹಾರಾಜನಾಗಿ ಇರುವವರೆಗೆ ಶರಣು ಬಂದವರನ್ನೆಲ್ಲ ರಕ್ಷಿಸುತ್ತಿದ್ದೆ. ಕರುಣೆಯ ಕೈವಾರಿಯೂ ಆಗಿದ್ದೆ. ಅದನ್ನೆಲ್ಲ ಇಷ್ಟು ಬೇಗ ಮರೆತು ಬಿಟ್ಟೆಯಾ? ನಾನು ಈಗ ನಿನಗೆ ಶರಣು ಬಂದಿದ್ದೇನೆ. ಇವನು ನನ್ನ ಪ್ರೀತಿಯ ಪತಿ. ಹೊಸತಾಗಿ ನಮ್ಮ ವಿವಾಹವಾಗಿದೆ.

ನ್ಯಾಯವೇದಾಂತಗಳಲ್ಲಿ ಪರಿನಿಷ್ಠಿತ ಪಂಡಿತ ಈ ನನ್ನ ಪತಿದೇವ. ಮಹಾತಪಸ್ವಿ, ಬ್ರಹ್ಮವರ್ಚಸ್ವಿ, ಶಮದಮಾದಿ ಸಂಪನ್ನ. ಶ್ರೋತ್ರಿಯ ಬ್ರಾಹ್ಮಣ ಈ ನನ್ನ ಮನದನ್ನ. ಇಂಥ ತಾಪಸೋತ್ತಮರನ್ನು ಕೊಂದು ಮುನಿಕನ್ನಿಕೆಯಾದ ನನ್ನ ಜೀವನವನ್ನು ಹಾಳುಮಾಡಬೇಡ. ನಿನ್ನ ಮಗಳಂತಿರುವ ಈ ಬ್ರಾಹ್ಮಣ ವಧುವಿನ ಮೇಲೆ ಕೃಪೆ ತೋರು. ನನ್ನ ಪತಿಗೆ ಪ್ರಾಣ ದಾನವನ್ನು ನೀಡು. ಇದರಿಂದ ನಿನಗೆ ಮಹಾಪುಣ್ಯ ಬರುವುದು. ಈ ಕ್ರೂರವಾದ ರಕ್ಕಸ ಜನ್ಮದಿಂದ ಬೇಗನೆ ಬಿಡುಗಡೆಯೂ ಆಗುವುದು.''

ಬ್ರಾಹ್ಮಣ ಪತ್ನಿಯ ಈ ಕರುಣಾಕ್ರಂದನಕ್ಕೆ ಕಿವಿಗೊಡಲಿಲ್ಲ ಆ ದುಷ್ಟ ರಕ್ಕಸ. ಮಹಾರಾಜನಲ್ಲಿ. ಮನುಷ್ಯ ಮಾಂಸದ ರುಚಿ ಹತ್ತಿ ಬಿಟ್ಟಿತ್ತು. ಆ ಹೊಸ ರಕ್ಕಸ ಎರಗಿ ಬಿಟ್ಟ ಮುನಿ ಕುಮಾರನನ್ನು ಸಂಹಾರಮಾಡಿದ. ಅದನ್ನು ನೋಡಿ ತಲ್ಲಣಿಸಿ ಹೋದ ಆ ತಾಪಸ ತರುಣಿಸಿ ಕಂಗೆಟ್ಟು ವಿಲಪಿಸಿದಳು. ನಿರ್ಮಾನುಷವಾದ ಘೋರಾರಣ್ಯದಲ್ಲಿ ಅವಳ ಆ ದುರಂತ ರೋದನವನ್ನು ಕೇಳಿ ಕಾಡಿನ ಖಗ ಮೃಗಗಳೆಲ್ಲವೂ ಕಣ್ಣೀರಿಟ್ಟವು. ಬಹಳ ಹೊತ್ತಿನವರೆಗೆ ಅತ್ತು ಸುಸ್ತಾದ ಆ ಸ್ವಾಧೀಮಣಿಯು ತಾನೇ ಆ ಕಾಡಿನಲ್ಲಿ ಸುತ್ತಾಡಿ ಒಣಗಿದ ಕಟ್ಟಿಗೆಯ ತುಂಡುಗಳನ್ನು ಆಯ್ದು ತಂದು ಚಿತೆಯನ್ನು ತಯಾರು ಮಾಡಿದಳು. ಅದನ್ನು ತನ್ನ ಕೈಯಿಂದಲೇ ಹೊತ್ತಿಸಿ ಉದ್ದೀಪಿತವಾದ ಆ ಚಿತಾಗ್ನಿಯಲ್ಲಿ ಪತಿಯ ಮೂಳೆಗಳನ್ನು ಹಿಡಿದುಕೊಂಡು ತಾನು ಪ್ರವೇಶ ಮಾಡಿದಳು. ಅವಳು ಅಗ್ನಿ ಪ್ರವೇಶ ಮಾಡುವಾಗ ತನ್ನ ಜೀವನದ ದುರಂತಕ್ಕೆ ಕಾರಣನಾದ ರಾಕ್ಷಸರೂಪಿ ರಾಜನಿಗೆ ಶಾಪಕೊಟ್ಟಳು- ''ಪಾಪಿಯೇ, ನನ್ನ ಪತಿಯನ್ನು ಕೊಂದುತಿಂದೆ. ವಿಲಾಸ ಕೇಳೀ ಸಮಯದಲ್ಲಿ ಮಗ್ನರಾಗಿದ್ದ ನಮ್ಮ ಮಧುರ ಜೀವನವನ್ನು ನಾಶಗೊಳಿಸಿದೆ. ಆದರಿಂದ ನಿನಗಾದರೂ ನಿನ್ನ ಸ್ತ್ರೀ ಸಮಾಗಮ ಕಾಲದಲ್ಲಿಯೇ ಮರಣ ಸಂಭವಿಸಲಿ'' ಹೀಗೆ ನುಡಿದು ಅಗ್ನಿಯಲ್ಲಿ ಆತ್ಮಾಹುತಿ ಮಾಡಿಕೊಂಡಳು.

ಹಲವಾರು ವರ್ಷಗಳವರೆಗೆ ಗುರು ವಶಿಷ್ಠರ ಶಾಪದಿಂದ ಮಿತ್ರಸಹ ಮಹಾರಾಜನು ಘೋರ ರಾಕ್ಷಸನಾಗಿ ಅಲೆದಾಡಿದ. ಕರುಣಾಳುಗಳಾದ ವಶಿಷ್ಠರು ತಮ್ಮ ಶಾಪಕ್ಕೆ ಹನ್ನೆರಡು ವರ್ಷಗಳ ಗಡುವು ಇಟ್ಟಿದ್ದರು. ಅದರಂತೆ ಆ ಮದಯಂತಿಯ ಪತಿಯು ದ್ವಾದಶ ವಾರ್ಷಿಕವಾದ ದೈತ್ಯ ಜನ್ಮದ ದುಃಖ ದುರವಸ್ಥೆ ದಾರುಣ ದುರ್ದಶೆಗಳನ್ನು ಅನುಭವಿಸಿದ. ಹನ್ನೆರಡು ವರ್ಷದ ಅವಧಿ ಮುಗಿದ ಬಳಿಕ ಮತ್ತೆ ಮೊದಲಿನ ಮಾನವ ರೂಪವನ್ನು ಧರಿಸಿ ಅಯೋಧ್ಯ ರಾಜಧಾನಿಗೆ ಮರಳಿದ. ಮಂತ್ರಿ ಸೇನಾಪತಿಗಳು, ಪ್ರಜಾ ಪುರೋಹಿತರು ಮತ್ತಿತರ ಮಾನ್ಯ ಮಹನೀಯರು ಮಾಂಡಲಿಕ ಮಹಾರಾಜರು ಮೊದಲಿನಂತೆ ಅವನನ್ನು ಮಹಾರಾಜನನ್ನಾಗಿ ಮನ್ನಿಸಿದರು. ರಾಜ್ಯಾಧಿಕಾರ ಸೂತ್ರಗಳನ್ನು ಕೈಯಲ್ಲಿ ಧರಿಸಿ ಆ ಅಯೋಧ್ಯೆಯ ರಾಜನು ಮದಯಂತಿಯ ಅಂತಃಪುರಕ್ಕೆ ಆಗಮಿಸಿದ. ಮನಮೋಹಕವಾಗಿ ರೂಪರಾಣಿಯಂತಿದ್ದ ಮದಯಂತಿಯ ಮನಮೋಹಕವಾಗಿ ಆ ಮಿತ್ರಸಹ ಮಹಾರಾಜನಿಗೆ ಕಂಡಿತು. ಅವನು ಪ್ರೇಮಾಂಧನಾಗಿ ತನ್ನ ಮನದನ್ನೆಯ ಬಳಿಗೆ ಧಾವಿಸಿಬಂದ. ಪರಮ ಪತಿವ್ರತೆಯಾದ ಮದಯಂತಿಯು ತನ್ನ ಒಳಗಣ್ಣಿನ ಪ್ರಭಾವದಿಂದ ಈ ಮೊದಲೇ ಬ್ರಾಹ್ಮಣಿಯ ಶಾಪವನ್ನು ತಿಳಿದು ಕೊಂಡಿದ್ದಳು. ತನ್ನ ಮೈ ಮುಟ್ಟಿದ್ದರೆ ತನ್ನ ಪತಿಯು ಸತ್ತು ಹೋಗುವನು ಎಂದು ಅವಳಿಗೆ ತಿಳಿದು ಹೋಗಿತ್ತು. ಆದುದರಿಂದ ಅವಳು ಪತಿಗೆ ಸಾಷ್ಟಾಂಗ ವಂದನೆಗೈದು ಬೇಡಿಕೊಂಡಳು. ಕಾಡಿನಲ್ಲಿ ಮಿತ್ರಸಹನು ಕ್ರೌರ್ಯದಿಂದ ಕೊಂದು ತಿಂದು

ಹಾಕಿದ ಮುನಿಯ ಮಡದಿಯ ಕೊಟ್ಟ ಶಾಪವನ್ನು ನೆನಪಿಗೆ ತಂದುಕೊಟ್ಟಳು. ''ಪತ್ನಿಯ, ದೇಹ ಸ್ಪರ್ಶ ನಿಮಗೆ ಪ್ರಾಣಾಂತಕ. ಆದುದರಿಂದ ದಯವಿಟ್ಟು ನೀವು ನನ್ನನ್ನು ಮುಟ್ಟ ಬೇಡಿರಿ. ನನ್ನನ್ನು ಬಿಟ್ಟು ನೀವು ಸುಖವಾಗಿ ಬಾಳಿ ಬದುಕಿರಿ.'' ಎಂದು ಪ್ರಾರ್ಥಿಸಿದಳು. ಇದರಿಂದ ಮಿತ್ರಸಹ ಮಹಾರಾಜನಿಗೆ ವೈರಾಗ್ಯವು ಹುಟ್ಟಿತು. ತಾನು ರಕ್ಕಸ ರೂಪದಲ್ಲಿ ಮಾಡಿದ ತಪ್ಪಿಗೆ ಘೋರ ಪಶ್ಚಾತ್ತಾಪವಾಯಿತು. ಕೂಡಲೇ ಅವನು ತನ್ನ ಅರಮನೆ ರಾಜ ಪದವಿತೊರೆದ. ಪತ್ನಿಯನ್ನು ತ್ಯಜಿಸಿದ. ರಾಜ್ಯೈಶ್ವರ್ಯವನ್ನು ಬಿಟ್ಟ. ರಾಜಧಾನಿ ಅಯೋಧ್ಯೆಯನ್ನು ಬಿಟ್ಟು ಕಾಡಿಗೆ ನಡೆದ. ತಪೋವನಕ್ಕೆ ಸಾಗಿದ. ಅನೇಕ ತೀರ್ಥಕ್ಷೇತ್ರ ಯಾತ್ರೆ ಕೈಕೊಂಡ. ಆದರೆ ಅವನು ಹೋದಲ್ಲೆಲ್ಲ ಅವನ ಬೆನ್ನ ಹಿಂದೆ ಒಂದು ಘೋರ ಪಿಶಾಚಿಯು ಬೆನ್ನಟ್ಟಿ ಬರುತ್ತಿತ್ತು. ಅದೇ ಅವನು ಮಾಡಿದ ಘೋರ ಬ್ರಹ್ಮಹತ್ಯೆ. ಅವನು ಹೋದಲ್ಲೆಲ್ಲ ಆ ಬ್ರಹ್ಮಹತ್ಯೆ ಬೆನ್ನಟ್ಟಿ ಬರುತ್ತಿತ್ತು. ಭೂಮಂಡಲದ ಎಲ್ಲ ಕ್ಷೇತ್ರಗಳನ್ನು ಸುತ್ತಿದ. ತೀರ್ಥಗಳಲ್ಲಿ ಮಿಂದ, ಆದರೂ ಆ ಪಿಶಾಚಿ ತೊಲಗಲಿಲ್ಲ. ಕೊನೆಗೆ ಅವನು ಮಿಥಿಲಾ ಪಟ್ಟಣಕ್ಕೆ ಬಂದ ಅಲ್ಲಿ ಅವನಿಗೆ ಮಹಾತ್ಮರಾದ ಗೌತಮಮುನಿಗಳ ದರ್ಶನವಾಯಿತು. ಆ ಮುನಿ ಪುಂಗವರ ಪಾದ ಗಟ್ಟಿಯಾಗಿ ಹಿಡಿದುಕೊಂಡ ಆ ಅಯೋಧ್ಯೆಯ ಅರಸ. ಅವರಿಗೆ ಸಶಿರಸಾಷ್ಟಾಂಗವಂದಿಸಿ ಕೈ ಮುಗಿದು ವಿಜ್ಞಾಪಿಸಿದ.

**ಮಿತ್ರಸಹ:-** ''ಪೂಜ್ಯರೇ, ವಶಿಷ್ಠರ ಶಾಪದಿಂದ ನನಗೆ ರಾಕ್ಷಸಭಾವ ಬಂದಿತ್ತು. ಆಗ ನಾನೊಬ್ಬ ಕಟುಕ. ಕರುಣೆಯಿಲ್ಲದೇ ಮುನಿಕುಮಾರನನ್ನು ಕೊಂದೆ. ಆ ಬ್ರಹ್ಮಹತ್ಯಾ ಪಾಪವು ಈ ಪಿಶಾಚಿಕೆಯ ರೂಪದಿಂದ ನನ್ನನ್ನು ಬೆನ್ನಟ್ಟಿದೆ. ಎಷ್ಟು ತೀರ್ಥಕ್ಷೇತ್ರ ಯಾತ್ರೆ ಮಾಡಿದರೂ ನನ್ನ ಬಿಡಲೊಲ್ಲದು. ಇದಕ್ಕೆ ಏನು ಪರಿಹಾರ? ನಾನು ಎಲ್ಲ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡಾಗಿದೆ. ಆದಾವುದೂ ನನಗೆ ಈ ಪಿಶಾಚಿಯಿಂದ ಮುಕ್ತಿಯನ್ನು ನೀಡಿಲ್ಲ. ತಾವು ಜ್ಞಾನಿಗಳು. ವೇದವೇದಾಂತ ಧರ್ಮಶಾಸ್ತ್ರಗಳನ್ನೆಲ್ಲ ಬಲ್ಲವರು ನನಗೆ ಪಿಶಾಚಮೋಚನಕ್ಕೆ ಏನಾದರೂ ಒಂದು ಪರಿಹಾರತೋರಿಸಿ.

**ಗೌತಮ:-** ಮಹಾರಾಜಾ! ಎಲ್ಲ ಪ್ರಾಯಶ್ಚಿತ್ತಗಳಿಗೂ ಮೀರಿ ನಿಂತಿದೆ ಈ ನಿನ್ನ ಘೋರ ಪಾಪ. ಇದಕ್ಕೆ ಯಾವ ಪರಿಹಾರವೂ ಇಲ್ಲ. ತಪಸ್ವಿ ಹತ್ಯೆಯಿಂದ ನಿನ್ನನ್ನು ಬೆನ್ನಟ್ಟಿದ ಈ ಪಿಶಾಚ ಅನಿರ್ಮೋಚ. ಆದರೂ ನಾನು ನಿನಗೆ ಒಂದು ಪರಿಹಾಸ ಸೂಚಿಸುತ್ತೇನೆ. ಸರ್ವಪ್ರಾಯಶ್ಚಿತ್ತಗಳಿಗೂ ಮೀರಿ ನಿಂತ ಮಹಾಪಾಪಗಳಿಗೆ ಶಂಕರನ ಚಾರು ಚರಣಗಳೇ ಶರಣು. ಪರಮ ಕರುಣಾಳು ಆ ಕೈಲಾಸ ಪತಿ. ಎಂಥ ಭಯಂಕರ ಪಾಪಗಳಿಗೂ ಪರಿಹಾರಕನಾಗಿದ್ದಾನೆ. ಸರ್ವಲೋಕ ಶಿವಂಕರ ಆ ಶಂಕರ. ಆದಕಾರಣ ಆ ಗೌರೀ ಪತಿಗೆ ಶರಣು ಹೋಗು. ಭೂಲೋಕದಲ್ಲಿ ಗೋಕರ್ಣಕ್ಷೇತ್ರ. ಕೈಲಾಸದಷ್ಟೇ ಪರಮ ಪವಿತ್ರ ಅಲ್ಲಿ ಮಹಾಬಲೇಶ್ವರ ಎಂಬ ಹೆಸರಿನಿಂದ ಶಂಕರನ ನಿತ್ಯ ನಿವಾಸ. ಈ ಪರಮೇಶ್ವರ ಸಂಹಾರಮಾಡಿದ್ದು ತ್ರಿಪುರಾಸುರನನ್ನು. ಆದರಿಂದ ಅವನಿಗೆ ತ್ರಿಪುರಾಂತಕ ಎಂಬ ಹೆಸರು. ಹಣೆಯಲ್ಲಿ ಕಣ್ಣಿರುವುದರಿಂದoooooooooooooo ಅವನು ತ್ರಿಲೋಚನ. ಅವನು ಮೂರು ಸ್ಥಾನಗಳಲ್ಲಿ ನೆಲಿಸಿರುವುದರಿಂದ ತ್ರಿಧಾಮ ಕೈಲಾಸ, ಕಾಶಿ, ಗೋಕರ್ಣ ಇವೇ ಮೂರು ಪರಮೇಶ್ವರನ ದಿವ್ಯಧಾಮಗಳು. ರಾವಣ ಎಂಬ ರಾಕ್ಷಸನು ಹಿಂದೆ ಆಚರಿಸಿದ ಉಗ್ರ ತಪಸ್ಸನ್ನು ಆದರಿಂದ ಆತ್ಮ ಲಿಂಗವನ್ನು ಪಡೆದ. ಅದನ್ನು ತೆಗೆದುಕೊಂಡು ತನ್ನ ಲಂಕಾರಾಜಧಾನಿಗೆ ಹೊರಟ್ಟಿದ್ದ. ದಾರಿಯಲ್ಲಿ ಲಘುಶಂಕೆಗೆಂದು ಹೋಗುವ ಪ್ರಸಂಗ ಬಂದಾಗ ಗಣಪತಿಯು ಕೈಯಲ್ಲಿ

ಆ ಲಿಂಗವನ್ನು ಇರಿಸಿದ. ಲೋಕಕ್ಷೇಮಕ್ಕಾಗಿ ಗಣಾಧಿಪತಿಯು ಅದನ್ನು ಗೋಕರ್ಣ ಕ್ಷೇತ್ರದಲ್ಲಿ ಸ್ಥಾಪಿಸಿದ. ಸನಕ ಸನಂದನ ದುರ್ವಾಸ ಮಾರ್ಕಂಡೇಯ ಮುಂತಾದ ಮಹಾ ಮುನಿಗಳು ಮೃಗಚರ್ಮಾಬರಧಾರಿಗಳಾಗಿ ಆ ಗೋಕರ್ಣದ ಮಹಾಬಲೇಶ್ವರ ನನ್ನು ನಿತ್ಯವೂ ಉಪಾಸನೆ ಮಾಡುತ್ತಲಿದ್ದಾರೆ. ಭೂಮಂಡಲದಲ್ಲಿ ಪವಿತ್ರವಾದ ಕ್ಷೇತ್ರಗಳಲ್ಲಿ ಗೋಕರ್ಣವು ಒಂದು. ಮಹಾತ್ಮರಾದ ಅಗಸ್ತ್ಯರು ಈ ಗೋಕರ್ಣ ಕ್ಷೇತ್ರದಲ್ಲಿ ನಿಂತು ಘೋರತಪಸ್ಸನ್ನು ಮಾಡಿ ಸಿದ್ಧಿ ಪಡೆದರು. ಬ್ರಹ್ಮ, ವಿಷ್ಣು, ಸ್ಕಂದ ಗಣಪತಿ ಮುಂತಾದ ಎಲ್ಲ ದೇವತೆಗಳೂ ಇಲ್ಲಿ ನಿತ್ಯವೂ ಸನ್ನಿಹಿತರು. ಗೋಕರ್ಣ ತೀರ್ಥದಲ್ಲಿರುವ ಶಿವಲಿಂಗಗಳ ಸಂಖ್ಯೆ ಒಂದು ಅಪಾರ. ಹೆಜ್ಜೆ ಹೆಜ್ಜೆಗೆ ಅಸಂಖ್ಯ ತೀರ್ಥಗಳು ಅಡಿಗಡಿಗೆ ಅನೇಕ ಲಿಂಗಗಳು. ಸತ್ಯಯುಗದಲ್ಲಿ ಇಲ್ಲಿಯ ಮಹಾಬಲೇಶ್ವರನಿಗೆ ಬಿಳಿಯ ಬಣ್ಣ. ತ್ರೇತಾಯುಗದಲ್ಲಿ ಇಲ್ಲಿಯ ಶಿವಲಿಂಗ ರಕ್ತವರ್ಣ ದ್ವಾಪರಯುಗದಲ್ಲಿ ಗೋಕರ್ಣೇಶ್ವರ ಪೀತವರ್ಣ. ಕಲಿಯುಗದಲ್ಲಿ ಶ್ಯಾಮವರ್ಣ. ಪೂರ್ವಯುಗಗಳಲ್ಲಿ ಭಯಂಕರನಾದ ಈ ಮಹಾಬಲೇಶ್ವರ ಕಲಿಯುಗ ಬಂದ ಬಳಿಕ ಕೋಮಲ ಭಾವಹೊಂದಿ ಸರ್ವಲೋಕ ಶಿವಂಕರವಾದ ಶಂಕರರೂಪವನ್ನು ತಾಳಿದ್ದಾನೆ. ದಕ್ಷಿಣ ಸಮುದ್ರ ತೀರದ ಗೋಕರ್ಣಕ್ಷೇತ್ರದಲ್ಲಿ ನೆಲೆಸಿದ ಈ ಮಹಾಬಲೇಶ್ವರ ಸೇವೆಯನ್ನು ಇಲ್ಲಿಯ ತೀರ್ಥಗಳಲ್ಲಿ ಸ್ನಾನಮಾಡಿ ಭಕ್ತಿಯಿಂದ ಮಾಡಿದವರ ಬ್ರಹ್ಮಹತ್ಯಾದಿ ಪಾಪಗಳೆಲ್ಲವೂ ಪರಿಹಾರವಾಗುವುದು. ರವಿವಾರ, ಸೋಮವಾರ, ಬುಧವಾರ, ಅಮವಾಸ್ಯೆ, ತಿಥಿ, ಪುಷ್ಯ, ನಕ್ಷತ್ರ ಹಾಗೂ ಗ್ರಹಣ, ಪುಣ್ಯ ದಿನ ಪರ್ವಕಾಲಗಳಲ್ಲಿ ಇಲ್ಲಿಯ ಸಮುದ್ರದಲ್ಲಿ ಸ್ನಾನ ಮಾಡಿ ಪಿತೃತರ್ಪಣ, ಶಿವಪೂಜೆ, ಜಪಹೋಮ, ವ್ರತ ಮುಂತಾದವುಗಳನ್ನು ಮಾಡಿದವರು ಶಿವರೂಪವನ್ನು ಹೊಂದುವರು. ಪ್ರದೋಷಕಾಲದಲ್ಲಿ ಈ ಕ್ಷೇತ್ರದಲ್ಲಿ ಮಾಡಿದ ಶಿವಪೂಜೆ ಮೋಕ್ಷಪ್ರದ. ಮಾಘ ಕೃಷ್ಣಪಕ್ಷ, ಚತುರ್ದಶಿ ಶಿವರಾತ್ರಿದಿನದಂದು ಹಗಲು ಇಲ್ಲಿಯ ತೀರ್ಥಗಳಲ್ಲಿ ಮಿಂದು ಬಿಲ್ವಪತ್ರಗಳಿಂದ ಶಿವನನ್ನು ಪೂಜಿಸಿ ಹಗಲು ಉಪವಾಸ, ರಾತ್ರಿ ಜಾಗರಣೆ, ಶಿವನಾಮ ಸ್ಮರಣೆ, ಶಿವಧ್ಯಾನಗಳಿಂದ ಮಾನವನು ಶಿವಸಾಯುಜ್ಯ ಪಡೆಯುವನು.

ಮಹಾರಾಜ, ನಾನುಕೂಡ ಈಗ ಆ ಗೋಕರ್ಣ ಕ್ಷೇತ್ರಯಾತ್ರೆ ಮಾಡಿಕೊಂಡು ಮರಳಿ ಬರುತ್ತಲಿದ್ದೇನೆ. ಶಿವರಾತ್ರಿಯಂದು ಅಲ್ಲಿಯ ಉತ್ಸವ ನೋಡಿಕೊಂಡು ಶಿವನನ್ನು ಪೂಜಿಸಿ ಭಕ್ತಿಯಿಂದ ಧ್ಯಾನಮಾಡಿ ಕೃತಾರ್ಥನಾದೆ. ಗೋಕರ್ಣದಲ್ಲಿ ಶಿವರಾತ್ರಿಯಂದು ದೊಡ್ಡ ಉತ್ಸವ ಅದನ್ನು ನೋಡಲು ಎಲ್ಲ ಕಡೆಯಿಂದಲೂ ಜನಸೇರುವರು. ಮಹಾಬಲೇಶ್ವರನನ್ನು ಪೂಜಿಸಿ.

**ಮಿತ್ರಸಹ:-** ಮಹರ್ಷಿಗಳೇ, ನೀವು ಹೇಳುವ ಆ ಶಿವಲೋಕವು ಹಾಗಿರುತ್ತದೆ. ದಯೆಮಾಡಿ ಆ ಶಿವಲೋಕದ ಲಕ್ಷಣಗಳನ್ನು ಹೇಳಿರಿ.

**ಗೌತಮ:-** ಬ್ರಹ್ಮಾದಿ ದೇವತೆಗಳಿಗೂ ದುರ್ಲಭವಾದ ಪರಮಾನಂದವು ಯಾವ ಲೋಕದಲ್ಲಿ ಪಾಮರರಾದ ಶ್ರೀಸಾಮಾನ್ಯರಿಗೂ ಲಭ್ಯವಾಗಿದೆಯೋ ಅದೇ ಪರಮೇಶ್ವರನ ಶಿವಲೋಕ. ಎಲ್ಲ ಲೋಕಗಳನ್ನು ದಾಟಿ ಅಲ್ಲಿಗೆ ಹೋಗಬೇಕಾಗುವುದು. ಅಲ್ಲಿ ಕತ್ತಲೆಯಿಲ್ಲ, ಅವಿದ್ಯೆಯಿಲ್ಲ, ಅಜ್ಞಾನವಿಲ್ಲ, ಲೇಶಮಾತ್ರವೂ ಕ್ಲೇಶವಿಲ್ಲ. ಆ ಶಿವಲೋಕದ ತುಂಬ ಬೆಳಕೇ ಬೆಳಕು. ಎಲ್ಲೆಡೆಗೂ ದಿವ್ಯ ಜ್ಞಾನದ ಚಿತ್‌ಪ್ರಕಾಶ. ಅಲ್ಲಿ ಕಾಮ, ಕ್ರೋಧ, ಲೋಭ ಮುಂತಾದ ವಿಕಾರಗಳ ಯಾವ ಒಂದು ಪ್ರಕಾರಗಳೂ ನೋಡಲು ಸಿಗಲಾರವು. ವೇದವೇದಾಂತ ವಿದ್ಯೆಗಳ ಪ್ರಧಾನ ಕ್ಷೇತ್ರವೇ ಆ ಶಿವಲೋಕ. ಅಲ್ಲಿಗೆ ಹೋಗಲು ಯೋಗಿಗಳು ತಪಸ್ವಿಗಳು ಅಷ್ಟಾಂಗ ಯೋಗ ಸಾಧನಗಳನ್ನು

ಮಾಡುತ್ತಲೇ ಇರುತ್ತಾರೆ. ಈ ಲೋಕದಲ್ಲಿರುವಾಗ ಭಕ್ತಿಯಿಂದ ಶಿವಪಂಚಾಕ್ಷರಿ ಮಂತ್ರವನ್ನು ಜಪಿಸಿ ಶಂಕರನ ದಿವ್ಯವಾದ ಕಥೆಯನ್ನು ಆನಂದದಿಂದ ಕೇಳಿ, ಸರ್ವ ಪ್ರಾಣಿಗಳಲ್ಲಿಯೂ ದಯಾಶೀಲರಾಗಿ, ಮೋಹ ಮಮತೆಗಳನ್ನು ತೊರೆದು ಶಿವಧ್ಯಾನ ಲೀನರಾದವರು ಈ ಸಂಸಾರ ಚಕ್ರವನ್ನು ದಾಟಿ ಈ ಶಂಕರನ ಈ ದಿವ್ಯ ಧಾಮಕ್ಕೆ ಪ್ರಯಾಣ ಮಾಡುವರು.

"ರಾಜಶ್ರೇಷ್ಠನೇ, ನೀನು ಕೂಡ ಈಗ ಮೊದಲು ಗೋಕರ್ಣ ಕ್ಷೇತ್ರಕ್ಕೆ ಹೋಗು. ಅಲ್ಲಿಯ ತೀರ್ಥಗಳಲ್ಲಿ ಸ್ನಾನಮಾಡು. ಶಿವರಾತ್ರಿಯ ದಿನ ಉಪವಾಸಮಾಡು. ಅಂದು ರಾತ್ರಿ ಜಾಗರಣೆ ಮಾಡುತ್ತಾ ಶಿವನಿಗೆ ಬಿಲ್ವಪತ್ರಗಳಿಂದ ಭಕ್ತಿಯಿಂದ ಪೂಜಿಸು. ಇದರಿಂದ ನಿನಗೂ, ಶಿವಲೋಕ ನಿಶ್ಚಿತವಾಗಿ ದೊರಕುವುದು." ಹೀಗೆ ಹೇಳಿ ಮಿತ್ರಸಹ ಮಹಾರಾಜನಿಗೆ ಗೌತಮ ಮಹರ್ಷಿಗಳು ಗೋಕರ್ಣ ಕ್ಷೇತ್ರದಲ್ಲಿ ಶಿವಪೂಜೆಯ ಮಹತ್ವವನ್ನು ವಿವರಿಸಿ ತಾವು ಪ್ರಸನ್ನ ಮನಸ್ಸಿನಿಂದ ಮಿಥಿಲಾ ಪಟ್ಟಣಕ್ಕೆ ತೆರಳಿದರು.

ಇತ್ತ ಮಹಾರಾಜ ಗೌತಮ ಮಹರ್ಷಿಗಳ ಆಜ್ಞೆಯಂತೆ ಗೋಕರ್ಣ ಕ್ಷೇತ್ರಕ್ಕೆ ಆಗಮಿಸಿದ. ಅಲ್ಲಿ ಮಹಾಬಲೇಶ್ವರನ ದರ್ಶನ ಮಾಡಿಕೊಂಡ. ಬಹುಭಕ್ತಿಯಿಂದ ಗುರು ಗೌತಮರು ಹೇಳಿದ ರೀತಿಯಲ್ಲಿ ಶಿವರಾತ್ರಿಯ ದಿನ ಉಪವಾಸ, ರಾತ್ರಿಜಾಗರಣೆ, ಹಾಗೂ ಬಿಲ್ವಪತ್ರದಿಂದ ಶಿವಾರ್ಚನೆ ಮಾಡಿ ಧನ್ಯನಾದ. ಅದರಿಂದ ಬ್ರಹ್ಮಹತ್ಯಾದೋಷಮುಕ್ತನಾದ. ಅಳಿದುಳಿದ ಪ್ರಾರಬ್ಧವೂ ಕೂಡ ಅಖಂಡ ಶಿವೋಪಾಸನೆಯಿಂದ ಸವೆದು ಶೀರ್ಣವಾಯಿತು. ಹೀಗೆ ಹಲವು ಕಾಲದ ನಿತ್ಯ ನಿರಂತರ ಶಿವಾರ್ಚನೆ, ಶಿವಧ್ಯಾನ, ಶಿವಪೂಜೆ, ಶಿವೋಪಾಸನೆ, ಶಿವಾರಾಧನೆಗಳಿಂದ ಆ ಮಿತ್ರ ಸಹ ಮಹಾರಾಜನು ಶಿವ ಸಾಯುಜ್ಯವನ್ನು ಪಡೆದ. ಈ ಶಂಕರ ಹಾಗೂ ಶಿವಭಕ್ತರ ದಿವ್ಯ ಕಥೆಯನ್ನು ಕೇಳಿದವರು ಕೃತಾರ್ಥರಾಗುತ್ತಾರೆ.

## ಶಿವಭಕ್ತನಾದ ಚಂದ್ರಸೇನ ಮಹಾರಾಜ ಮತ್ತು ಶ್ರೀಕರ ಗೋಪನ ವೃತ್ತಾಂತ

**ಸೂತ:**- ಶೌನಕಾದಿಗಳೇ, ಈ ಲೋಕದಲ್ಲಿ ಜನಿಸಿದ ಜೀವಿಗಳಿಗೆಲ್ಲ ಸಂತಾರಕ ದೇವನೆಂದರೆ ಸಾಕ್ಷಾತ್ ಶಿವನೊಬ್ಬನೇ. ಆಪದ್ಬಾಂಧವನೆಂದರೆ ಆ ಚಂದ್ರಚೂಡನೊಬ್ಬನೇ. ಅವನ ಹೊರತು ಬೇರೆ ಗುರು, ದೇವ, ಬಂಧು ಯಾರೂ ಇಲ್ಲ.

**"ಶಿವೋ ಗುರುಃ ಶಿವೋ ದೇವಃ ಶಿವೋ ಬಂಧುಃ ಶರೀರಿಣಾಮ್ ।**
**ಶಿವ ಆತ್ಮಾ ಶಿವೋ ಜೀವಃ ಶಿವಾದನ್ಯನ್ನ ಕಿಂಚನ" ॥**

ಶಿವನೇ ಗುರು, ಶಿವನೇ ದೇವರು ದೇಹ ಧಾರಿಗಳಿಗೆಲ್ಲ ನಿಜವಾದ ಬಂಧು ಎಂದರೆ ಶಿವನೇ, ಶಿವನೇ ನಿಜವಾದ ಪರಮಾತ್ಮ. ಈ ಜೀವನಲ್ಲಿದ್ದು ಅವನಿಂದ ಎಲ್ಲ ಕಾರ್ಯಗಳನ್ನು ತಾನೇ ನಿಂತು ಮಾಡಿಸಿ ತಾನೇ ಜೀವಶಬ್ದವಾಚ್ಯನು ಆಗಿದ್ದಾನೆ. ಆ ಶಿವನನ್ನು ಬಿಟ್ಟು ಜಗತ್ತಿನಲ್ಲಿ ಬೇರೆ ಯಾವುದೂ ಇಲ್ಲ. ಶಿವನನ್ನು ಉದ್ದೇಶಿಸಿ ಮಾಡಿದ ಧ್ಯಾನ, ದಾನ, ಗಾನ, ಜಪ, ತಪ, ಹೋಮ ಹವನ ಮುಂತಾದವುಗಳಿಗೆಲ್ಲ ಅನಂತ ಪುಣ್ಯ, ವಾಂಛಿತ ಫಲ, ಇದೇ ಸರ್ವಶಾಸ್ತ್ರಗಳ ನಿರ್ಣಯ. ಮನುಷ್ಯನು ತನ್ನ ಮಡದಿ ಮಕ್ಕಳು, ಮನೆಮಾರು, ದುಡ್ಡು ಕಾಸುಗಳ ಮೇಲೆ ಮಾಡುವ ಪ್ರೀತಿಯನ್ನು ಶಿವನಲ್ಲಿ ಮಾಡಿದರೆ ಉದ್ಧಾರ ಹೊಂದುವನು. ಶಂಕರನನ್ನು ಭಜಿಸುವ ನಾಲಿಗೆಯೇ ಸಫಲ. ಶಿವಪೂಜೆ ಮಾಡುವ ಕೈ, ಶಿವಕಥಾ ಶ್ರವಣ ಮಾಡುವ ಕಿವಿ, ಶಿವಲಿಂಗವನ್ನು ನೋಡುವ ಕಣ್ಣು ಎಲ್ಲವೂ ಸಾರ್ಥಕ ಸಫಲ ಮತ್ತು ಧನ್ಯ.

**"ಸಾ ಜಿಹ್ವಾ ಯಾ ಶಿವಂ ಸ್ತೌತಿ ತನ್ಮನೋ ಧ್ಯಾಯತೇ ಶಿವಮ್ ।**
**ತೌ ಕರ್ಣೌ ತತ್ಕಥಾಲೋಲೌ ತೌ ಹಸ್ತೌ ತಸ್ಯ ಪೂಜಕೌ" ॥**
**ತೇ ನೇತ್ರೇ ಪಶ್ಯತಃ ಪೂಜಾಂ ತಚ್ಛಿರಃ ಪ್ರಣತಂ ಶಿವೇ ।**
**ತೌ ಪಾದೌ ಯೌ ಶಿವಕ್ಷೇತ್ರಂ ಭಕ್ತ್ಯಾ ಪರ್ಯಟತಃ ಸದಾ ॥**
**ಯಸ್ಯೇಂದ್ರಿಯಾಣಿ ಸರ್ವಾಣಿ ವರ್ತಂತೇ ಶಿವಕರ್ಮಸು ।**
**ಸ ನಿಸ್ತರತಿ ಸಂಸಾರಂ ಮುಕ್ತಿಂ ಭುಕ್ತಿಂ ಚ ವಿಂದತಿ ॥**
**ಶಿವಭಕ್ತಿಯುತೋ ಮರ್ತ್ಯಃ ಶ್ವಾಂಡಾಲಃ ಪುಲ್ಕಸೋಪಿ ಚ ।**
**ನಾರೀ ನರೋ ವಾ ಷಂಢೋ ವಾ ಸದ್ಯೋ ಮುಚ್ಯೇತ ಸಂಸೃತೇಃ ॥**

ಶಿವನನ್ನು ಸ್ತುತಿಸಿದ ನಾಲಿಗೆಯೇ ನಿಜವಾದ ಜಿಹ್ವೆ ಎನಿಸುವುದು. ಅವನನ್ನು ಎಂದರೆ ಶಿವನನ್ನು ಧ್ಯಾನಿಸಿದ ಮನಸ್ಸೇ ನಿಜವಾದ ಮನಸ್ಸು. ಅವನ ಕಥೆಯನ್ನು ಕೇಳುವ ಕಿವಿಗಳೇ ಸಾರ್ಥಕ ಕಿವಿಗಳು. ಅವನ ಪೂಜೆಯಿಂದಲೇ ಕೈಗಳಿಗೆ ಸಾರ್ಥಕ. ಅವನನ್ನು ನೋಡಿದ ಕಣ್ಣು, ಅವನಿಗೆ ನಮಸಿದ ತಲೆ, ಶಿವಕ್ಷೇತ್ರಕ್ಕೆ ಪ್ರದಕ್ಷಿಣೆ ಹಾಕಿದ ಕಾಲು ನಿಜವಾಗಿಯೂ ಪುಣ್ಯಾಂಗಗಳು. ಯಾವ ಮನುಷ್ಯನ ಎಲ್ಲ ಇಂದ್ರಿಯಗಳು ಶಿವರಾಧನೆಯಲ್ಲಿಯೇ ಲೀನವಾಗಿರುವುವೋ ಅವನು ಸಂಸಾರದಲ್ಲಿ ಲೀಲೆಯಿಂದ ದಾಟುತ್ತಾನೆ. ಅವನು ಮೋಕ್ಷದಲ್ಲಿ ಅತ್ಯಧಿಕವಾದ ಸುಖಾನುಭೂತಿಯನ್ನು ಹೊಂದುತ್ತಾನೆ. ಚಂಡಾಲನಾಗಲಿ ಶಿವಭಕ್ತರಲ್ಲಿ ಜಾತಿ, ಮತ, ಉಚ್ಚ-ನೀಚತೆ, ಹೆಣ್ಣು, ಗಂಡು, ಬಡವ, ಬಲ್ಲಿದ ಎಂಬ ಭೇದವೇ ಇರುವುದಿಲ್ಲ. ಶಿವಭಕ್ತರಾದ ಎಲ್ಲರಿಗೂ ಮುಂದೆ ಶಾಶ್ವತವಾದ ಮುಕ್ತಿ.

ಪೂರ್ವಕಾಲದಲ್ಲಿ ಉಜ್ಜಯಿನಿಯಲ್ಲಿ ಒಬ್ಬ ಮಹಾರಾಜ. ಹೆಸರು ಚಂದ್ರಸೇನ. ಆ ಉಜ್ಜಯಿನಿ ನಗರದಲ್ಲಿ ನಿತ್ಯವೂ ಪಾರ್ವತೀ ಪತಿಯ ಸನ್ನಿಧಾನ. ಮಹಾಕಾಲೇಶ್ವರ ಅಲ್ಲಿಯ ಕ್ಷೇತ್ರದೇವತೆ. ಚಂದ್ರಸೇನದೊರೆಯು ಪ್ರತಿನಿತ್ಯವೂ ಉಜ್ಜಯನಿಯಲ್ಲಿ ನೆಲಿಸಿರುವ ಮಹಾಕಾಲೇಶ್ವರ ಎಂಬ ಹೆಸರಿನ ಪರಮೇಶ್ವರನನ್ನು ಭಕ್ತಿಯಿಂದ ಪೂಜಿಸುತ್ತಿದ್ದನು. ಈ ಮಹಾಕಾಲೇಶ್ವರನ ಪಾರ್ಷದಲ್ಲಿರುವ ಮಣಿಭದ್ರನು ಅಗ್ರಗಣ್ಯ. ಅಮಂಗಲಗಳನ್ನೆಲ್ಲ ಗೆದ್ದು ವಿಶ್ವವಂದಿತನಾದ ಈ ಮಣಿಭದ್ರನಿಗೂ ಚಂದ್ರಸೇನ ಮಹಾರಾಜನಿಗೂ ಉತ್ತಮ ಸ್ನೇಹ. ಗಾಢ ಮೈತ್ರಿ. ಒಂದು ದಿನ ಶಿವಭಕ್ತನಾದ ಮಣಿಭದ್ರನು ಚಂದ್ರಸೇನ ಮಹಾರಾಜನ ಬಗ್ಗೆ ಅತ್ಯಂತ ಸುಪ್ರಸನ್ನನಾದ. ತಮ್ಮಿಬ್ಬರ ಮಧುರಮೈತ್ರಿಯ ಕಾಣಿಕೆಯೆಂದು ಚಂದ್ರಸೇನದೊರೆಗೆ 'ಚಿಂತಾಮಣಿ' ಎಂಬ ರತ್ನವನ್ನು ಕೊಟ್ಟ. ಕೌಸ್ತುಭರತ್ನದಂತೆ ಕಾಂತಿಯುಕ್ತ. ಸೂರ್ಯನಂತೆ ದೇದೀಪ್ಯಮಾನ ಆ ಚಿಂತಾಮಣಿ. ಅದನ್ನು ಒಮ್ಮೆ ಕಂಡರೂ ಸಾಕು ಕೇಳಿದರೂ ಸರಿ. ನೆನೆದರಂತೂ ಆಯಿತು. ಮನಸ್ಸಿನಲ್ಲಿ ಬಯಸಿದ್ದೆಲ್ಲ ಬಂದು ಬಿಡುತ್ತಿತ್ತು. ಚಂದ್ರಸೇನ ಮಹಾರಾಜನು ತನ್ನ ಆಪ್ತಮಿತ್ರ ಮಹಾರಾಜನಿಂದ ಬಳುವಳಿಯಾಗಿ ಬಂದ ಆ ಚಿಂತಾಮಣಿ ರತ್ನವನ್ನು ಕೊರಳಿನಲ್ಲಿ ಧರಿಸಿ ಸಿಂಹಾಸನದ ಮೇಲೆ ವಿರಾಜಮಾನನಾಗುತ್ತಿದ್ದ. ಅವನೊಬ್ಬ ಮರಿಸೂರ್ಯ ಎಂದೇ ಜನರು ಭಾವಿಸುವಂತಾಗುತ್ತಿತ್ತು. ರಾಜನ ಕೊರಳಲ್ಲಿ ಇಂತಹ ಅನರ್ಘ್ಯವಾದ ರತ್ನವನ್ನು ಕಂಡು ಉಳಿದ ರಾಜರಿಗೆಲ್ಲ ಹೊಟ್ಟೆಯುರಿ. ಎಲ್ಲರ ಮನಸ್ಸಿನಲ್ಲಿಯೂ ಆ ಚಿಂತಾಮಣಿಯನ್ನು ತಾವು ಪಡೆಯಬೇಕೆಂಬ ಹಂಬಲ. ಅದಕ್ಕಾಗಿ ದೇಶದ ಎಲ್ಲ ಮಹಾರಾಜರೂ ಚಿಂತಾಮಣಿಯನ್ನು ಚಂದ್ರಸೇನನಿಂದ ಕಸಿದುಕೊಳ್ಳಲಿಕ್ಕಾಗಿ

ಒಗ್ಗಟ್ಟಾಗಿ ನುಗ್ಗಿ ಬಂದರು. ಉಜ್ಜಯಿನಿಯ ನಾಲ್ಕೂ ಹೆಬ್ಬಾಗಿಲುಗಳಿಗೆ ಮುತ್ತಿಗೆ ಹಾಕಿದರು. ಪರರಾಜರ ಈ ಆಕಸ್ಮಿಕ ದಾಳಿಯಿಂದ ತಲ್ಲಣಿಸಿದ ಚಂದ್ರಸೇನ. ಮಹಾಕಾಲೇಶ್ವರನಿಗೆ ಶರಣು ಹೋದ. ಇಡೀ ದಿನ ಉಪವಾಸಮಾಡಿ ಅಂದು ರಾತ್ರಿ ಬೆಳಗಾಗುವವರೆಗೆ ಶಿವಾರ್ಚನೆ, ಶಿವಧ್ಯಾನ, ಶಿವೋಪಾಸನೆಗಳನ್ನು ಮಾಡಿದ.

ಆ ಉಜ್ಜಯಿನಿಯಲಿ ಶಿವಭಕ್ತಳಾದ ಓರ್ವ ಗೊಲ್ಲಸ್ತ್ರೀ ಇದ್ದಳು. ಅವಳು ವಿಧವೆ. ಅವಳಿಗೆ ಒಬ್ಬನೇ ಮಗ. ತನ್ನ ಮಗನನ್ನು ಕರೆದುಕೊಂಡು ಅವಳು ಮಹಾಕಾಲನ ಮಂದಿರಕ್ಕೆ ಹೋದಳು. ಚಂದ್ರಸೇನ ಮಹಾರಾಜನು ಅಂದು ಮಹಾಕಾಲೇಶ್ವರನ ವಿಶೇಷ ಪೂಜೆಯನ್ನು ಮಾಡಿಸಿದ್ದ. ಅವನ ಅಣತಿಯಂತೆ ಅರ್ಚಕರು ಮಹಾಕಾಲೇಶ್ವರನಾದ ಮಹಾದೇವನನ್ನು ಅಲಂಕರಿಸಿದ್ದರು. ವೈಭವದಿಂದ ಆ ಮಹಾದೇವರ ಮಹಾಪೂಜೆಯನ್ನು ಆಚರಿಸಿದ್ದರು. ಅದೆಲ್ಲವನ್ನೂ ವಿಧವೆಯಾದ ಆ ಗೊಲ್ಲವನಿತೆಯು ತನ್ನ ಐದುವರ್ಷದ ಮಗನೊಂದಿಗೆ ಭಕ್ತಿಯಿಂದ ನಿಂತು ನೋಡಿದಳು. ಆ ಎಳೆಯ ಮಗುವೂ ಅಂದಿನ ಆ ಶಿವಾರ್ಚನೆಯ ವೈಖರಿಯನ್ನು ತದೇಕ ದೃಷ್ಟಿಯಿಂದ ನೋಡಿ ಆನಂದಪಟ್ಟಿತು. ಪೂಜೆಮುಗಿದ ಬಳಿಕ ಆ ಗವಳಗಿತ್ತಿ ತನ್ನ ಮಗನೊಂದಿಗೆ ಮನೆಗೆ ಮರಳಿದಳು. ಆ ಎಳೆಯ (ಹುಡುಗ) ಮನೆಗೆ ಬಂದ ಬಳಿಕ ತನ್ನ ಆಟಪಾಟಗಳನ್ನು ಬಿಟ್ಟಿತು. ದೇವಾಲಯದಲ್ಲಿ ತಾನು ಕಂಡಂತೆ ಮನೆಯಲ್ಲಿ ಶಿವಪೂಜೆಯನ್ನು ಪ್ರಾರಂಭಿಸಿತು. ಒಂದು ಸುಂದರವಾದ ಕಲ್ಲನ್ನು ತೆಗೆದುಕೊಂಡು ಬಂದು ತನ್ನ ಮನೆಯ ಬಳಿಯ ಏಕಾಂತ ಸ್ಥಳದಲ್ಲಿ ಅದನ್ನು ಇಟ್ಟು ಅದನ್ನೇ ಶಿವಲಿಂಗ ಎಂದು ತಿಳಿದು ಭಕ್ತಿಯಿಂದ ಅದರಲ್ಲಿ ಪರಮೇಶ್ವರನನ್ನು ಆವಾಹಿಸಿದ ಆ ಬಾಲಕ. ತನ್ನ ಕೈಗೆ ಸಿಲುಕಿದ ಹೂಗಳನ್ನು ತೆಗೆದುಕೊಂಡು ಬಂದ. ಸ್ನಾನಮಾಡಿ ಭಕ್ತಿಯಿಂದ ಪೂಜಿಸಿದ. ಅಲಂಕಾರ ಚಂದನ, ಧೂಪ, ದೀಪ, ಅಕ್ಷತಾ ಮುಂತಾದ ಉಳಿದೆಲ್ಲ ಉಪಚಾರಗಳನ್ನು ಮಾನಸಿಕವಾಗಿ ಮಾಡಿ ಪರಮಾತ್ಮನಿಗೆ ದಿವ್ಯ ವಸ್ತುಗಳ ನೈವೇದ್ಯವನ್ನು ಸಮರ್ಪಿಸಿದ. ತಾನು ದೇವಸ್ಥಾನದಲ್ಲಿ ನೋಡಿದಂತೆ ಎಲ್ಲ ಪೂಜೆಯನ್ನು ಸಾಂಗವಾಗಿ ನೆರವೇರಿಸಿದ. ಕೊನೆಗೆ ನೃತ್ಯ ಗಾನ ಸೇವೆಯನ್ನು ಸಲ್ಲಿಸಿದ. ಹೀಗೆ ಅನನ್ಯ ಚಿತ್ತದಿಂದ ಗೌರೀಪತಿಯ ಆರಾಧನೆಯನ್ನು ಮಾಡುತ್ತಲಿರುವ ತನ್ನ ಮಗನನ್ನು ಬಹಳ ಹೊತ್ತಿನ ನಂತರ ಅವನ ತಾಯಿಯಾದ ಗವಳಗಿತ್ತಿಯು ಭೋಜನಕ್ಕಾಗಿ ಪ್ರೀತಿಯಿಂದ ಕರೆದಳು. ಆದರೆ ಶಿವಪೂಜೆಯಲ್ಲಿಯೇ ತಲ್ಲೀನನಾದ ಆ ಮಗು ಪೂಜೆ ಬಿಟ್ಟೇಳಲಿಲ್ಲ. ಊಟಕ್ಕೆ ಬರಲಿಲ್ಲ. ಭೋಜನಕ್ಕೆ ಬರಲು ತಾಯಿ ಮತ್ತೆ ಮತ್ತೆ ಬಂದು ಅವನನ್ನು ಒತ್ತಾಯ ಪಡಿಸಿದಳು. ಆದರೆ ಆ ಮಗುವಿಗೆ ಇತ್ತ ಲಕ್ಷ್ಯವೇ ಇರಲಿಲ್ಲ. ಕಣ್ಣು ಮುಚ್ಚಿ ಶಿವಧ್ಯಾನಮಾಡುತ್ತ ನಿಶ್ಚಲವಾಗಿ ಕುಳಿತುಬಿಟ್ಟಿತ್ತು ಆ ಕೂಸು ಮೈ ಹಿಡಿದು ಅಲುಗಾಡಿಸಿದಳು ಕೈ ಹಿಡಿದು ಜಗ್ಗಿದಳು. ಆದರೂ ಆ ಮಗು ಏಳಲಿಲ್ಲ. ಅವಳಿಗೆ ಕೋಪಬಂದಿತು. ಮಗನನ್ನು ಹೊಡೆದಳು. ಆಚೀಚೆ ಕಿವಿ ಕೈ ಕಾಲು ಹಿಡಿದು ಜಗ್ಗಾಡಿದಳು. ಇಷ್ಟಾದರೂ ಆ ಮಗುವಿನ ಧ್ಯಾನ ಸಮಾಧಿ ಮುರಿಯಲಿಲ್ಲ. ಮುಚ್ಚಿದ ಕಣ್ಣು ತೆರೆಯಲಿಲ್ಲ. ಪೂಜೆಯ ಸ್ಥಾನ ಬಿಟ್ಟೇಳಲಿಲ್ಲ. ಇದನ್ನುಕಂಡು ಮತ್ತಷ್ಟು ಕೆರಳಿದ ಆ ತಾಯಿ ಹುಡುಗನು ಪೂಜಿಸುವ ಶಿವಲಿಂಗವನ್ನೆತ್ತಿ ದೂರಎಸೆದಳು. ಅವನು ಮುಂದೆ ಇಟ್ಟುಕೊಂಡಿದ್ದ ಎಲ್ಲ ಪೂಜೆಯ ಸಲಕರಣೆಗಳನ್ನು ಒಡೆದು ಒಡೆದಾಕಿದಳು. ಅದರಿಂದ ಆ ಮಗುವಿನ ಧ್ಯಾನ ಸಮಾಧಿ ಭಗ್ನವಾಗಿ ಕಣ್ಣು ತೆರೆಯಿತು. ಅವನ ಶಿವಲಿಂಗವು ಅಲ್ಲಿರಲಿಲ್ಲ. ಪೂಜಾ ಸಾಮಗ್ರಿಗಳೆಲ್ಲವೂ ಛಿನ್ನ ವಿಚ್ಛಿನ್ನ. ಅದರಿಂದ ಆ ಮಗುವಿಗೆ ಬಹು ದುಃಖವಾಗಿ

ಅಳತೊಡಗಿತು. ಆಗ ತಾಯಿಯು ಇನ್ನಷ್ಟು ಕೆರಳಿ ಕೆಂಡವಾಗಿ ಧಪದಪನೇ ಬಡಿದಳು ಆ ಶಿವನ ಕರುಣೆಯ ಕೂಸನ್ನು. ಸಿಟ್ಟಿನಿಂದ ಮನೆಯ ಒಳಗೆ ಕೆಲಸಕ್ಕೆ ಹೊರಟು ಹೋದಳು. ತನ್ನ ತಾಯಿಯಿಂದಲೇ ತಾನು ಮಾಡುವ ಶಿವಪೂಜೆ ಹಾಳಾದದ್ದುಕಂಡು ಆ ಹುಡುಗನಿಗೆ ದುಃಖೋದ್ರೇಕವಾಗಿ ಮೂರ್ಛೆ ಹೊಯಿತು. ಎರಡು ಗಳಿಗೆಯ ಮೇಲೆ ಅವನಿಗೆ ತಾನಾಗಿಯೇ ಎಚ್ಚರ. ಎರಡೂ ಕಣ್ಣುಗಳೂ ನಿಚ್ಚಳವಾಗಿ ಬಿಚ್ಚಿಕೊಂಡವು. ಕಣ್ದೆತ್ತಿ ನೋಡಿದಾಗ ಎದುರಿನ ದೃಶ್ಯವೇ ಬದಲು. ತಾನು ಪೂಜೆ ಮಾಡುವ ಸ್ಥಳದಲ್ಲಿ ಒಂದು ಸುಂದರ ಶಿವಮಂದಿರ, ರತ್ನದ ಕಂಬಗಳು, ಮುತ್ತಿನ ಕಿಟಕಿಗಳು, ರತ್ನದ ಫಲಕಗಳು, ಬಂಗಾರದ ಗೋಡೆ, ಇಂದ್ರನೀಲ ಮಣಿಯ ನೆಲಗಟ್ಟಣೆ. ಅಲ್ಲಲ್ಲಿ ಹೀರಕ ಮಣಿಯ ಜಗುಲಿಗಳು. ಅದರ ಮಧ್ಯದಲ್ಲಿ ದಿವ್ಯವಾದ ಶಿವಲಿಂಗ. ಅದನ್ನು ಕಂಡು ಮಗು ಎದ್ದು ನಿಂತಿತು. ಇದೆಲ್ಲವೂ ತಾನು ಮಾಡಿದ ಶಿವಪೂಜೆಯ ಪ್ರಭಾವ ಎಂದು ತಿಳಿದು ಕೊಂಡಿತು. ಮಹಾದೇವನಿಗೆ ಸಾಷ್ಟಾಂಗ ಸಮಸ್ಕರಿಸಿ ಪ್ರಾರ್ಥಿಸಿತು- ''ದೇವ, ದೇವ ಮಹಾದೇವ, ನನ್ನ ತಾಯಿಯ ಅಪರಾಧ ಕ್ಷಮಿಸು. ಅವಳು ಮೂಢಳು. ನಿನ್ನ ಮಹಾಮಹಿಮೆಯನ್ನು ಅರಿಯಳು. ನೀನು ನನ್ನ ಮೇಲೆ ಪ್ರಸನ್ನನಾಗು.ನನ್ನಲ್ಲಿ ನಿಜವಾಗಿ ಶಿವಭಕ್ತಿಯಿದ್ದರೆ ಆ ಶಿವ ಭಕ್ತಿಯಿಂದ ಏನಾದರೂ ಪುಣ್ಯ ಬಂದಿದ್ದರೆ, ನೀನು ನಮ್ಮ ತಾಯಿಯ ಮೇಲೆ ಪ್ರಸನ್ನನಾಗು. ನಿನ್ನ ಪೂರ್ಣದಯೆ ನನ್ನ ತಾಯಿಯ ಮೇಲಿರಲಿ.'' ಈ ರೀತಿಯಾಗಿ ಆ ಬಾಲಕನು ಮಹಾದೇವರನ್ನು ಸ್ತುತಿಸಿದ. ಪ್ರಸನ್ನಗೊಳಿಸಿದ. ಅವನ ಚರಣಗಳ ಮೇಲೆ ತನ್ನ ತಲೆಯನ್ನಿರಿಸಿದ. ಹೊತ್ತು ಹೊರಳುವ ಹೊತ್ತಿಗೆ ಆ ಶಿವಾಲಯದಿಂದ ಹೊರಬಿದ್ದ. ತನ್ನ ಮನೆಯ ಕಡೆ ನೋಡಿದ. ಅಲ್ಲಿಯೂ ಆಶ್ಚರ್ಯಕರವಾದ ಬದಲಾವಣೆ. ತನ್ನ ಹಳೆಯ ಮುರುಕು ಮನೆ ಮೇಲುಪ್ಪರಿಗೆಯ ಮಹಡಿಯ ಮನೆಯಾಗಿ ಮಾರ್ಪಟ್ಟಿತ್ತು. ಮನೆಯ ಒಳಗೆ ಪ್ರವೇಶಿಸಿದ ಕುತೂಹಲ ಭರಿತನಾದ ಆ ಬಾಲಕ. ಅಲ್ಲಿ ಒಂದು ರತ್ನದ ಮಂಚ. ಅದರ ಮೇಲೆ ಒಂದು ಹಂಸದುಪ್ಪಳದ ಹಾಸು, ಅಲ್ಲಿ ಮಹಾರಾಣಿಯಂತೆ ಪವಡಿಸಿದ್ದಾಳೆ ತನ್ನ ತಾಯಿ, ಗಾಢನಿದ್ದೆ ಆ ತನ್ನ ತಾಯಿಗೆ. ಇಂಥ ರಾಜೋಚಿತವಾದ ರತ್ನಪರ್ಯಂಕದಲ್ಲಿ ಒರಗಿದ ಮಹಿಳೆ ತನ್ನ ಮಾತೆಯೋ ಅಥವಾ ಬೇರೆ ಮಹಿಷಿಯೋ ಎಂದು ಒಂದು ಕ್ಷಣ ಆ ಮಗುವಿಗೆ ಸಂದೇಹ. ಒಂದು ಕ್ಷಣ ತಬ್ಬಿಬ್ಬಾಗಿ ನಿಂತ. ಮತ್ತೆ ಮತ್ತೆ ನಿರುಕಿಸಿದ. ಕಣ್ತೆರೆದು ಪರಿಕ್ಷಿಸಿದ. ಕೊನೆಗೆ ನಿಶ್ಚಯಿಸಿದ ಇವಳು ಇದೀಗ ತನ್ನನ್ನು ಹೊಡೆದು ಬಡಿದು ಬಂದ ಹಡೆದ ತಾಯಿಯೇ ಎಂದು. ಮತ್ತೆಗೆ ಅವಳಬಳಿ ಕುಳಿತ. ಪ್ರೀತಿಯಿಂದ ಅವಳ ಚರಣವನ್ನು ಒತ್ತಿದ. ಎಚ್ಚರವಾಯಿತು. ಜನನಿಗೆ. ಎದ್ದು ಅವಳು ಆಚೀಚೆ ನೋಡಿದಳು. ತನ್ನ ಮನೆ ತನ್ನ ಕೋಣೆ ಎಲ್ಲವೂ ಒಮ್ಮೆಲೇ ಬದಲಾಗಿ ಇಂದ್ರಭವನದಂತೆ ಶೃಂಗಾರಿತವಾದದ್ದನ್ನು ಕಂಡು ಅವಳಿಗೆ ಪರಮಾನಂದವಾಯಿತು. ಮಗನ ಮುಖದ ಮೇಲೆಯೂ ಶಿವಪ್ರಸಾದದಿಂದ ಅಪೂರ್ವವಾದ ಕಳೆಕಾಂತಿಉಕ್ಕುತ್ತಿತ್ತು ''ಇದೆಲ್ಲವೂ ಗೌರೀಪತಿಯ ಪರಮಾನುಗ್ರಹದ ಫಲ'' ಎಂದು ಬಾಲಕನು ತನ್ನ ತಾಯಿಗೆ ಶಿವಾನುಗ್ರಹದ ಪ್ರಭಾವವನ್ನು ತಿಳಿ ಹೇಳಿದ. ಇದನ್ನೆಲ್ಲ ಕೇಳಿ ಆ ಹೆಣ್ಣುಮಗಳು ಅಲ್ಲಿಯೇ ಮಹಾಕಾಲೇಶ್ವರನ ಮಹಾಪೂಜೆ ಮಾಡುತ್ತಲಿರುವ ಚಂದ್ರಸೇನ ಮಹಾರಾಜನ ಬಳಿಗೆ ಬಂದಳು. ಶಿವಕೃಪೆಯ ಪವಾಡ ಹೇಳಿದಳು. ಆ ಗೋಪಕುಮಾರನ ಮೇಲೆ ಹರಿದುಬಂದ ಶಂಕರನ ಕೃಪಾದೃಷ್ಟಿಧಾರೆಯನ್ನು ಕೇಳಿ ಮಹಾರಾಜನಿಗೆ ಪರಮಾಶ್ಚರ್ಯ. ಅವನು ಪ್ರದೋಷ ಪೂಜೆಯನ್ನು ಮುಗಿಸಿಕೊಂಡು ಆ ಗೋಪವನಿತೆಯ

ಮನೆಗೆ ಬಂದ. ಮಹಾದೇವನ ಪ್ರಸಾದ ವಿಶೇಷದಿಂದ ಮಣ್ಣಿನ ಮುರುಕು ಮನೆ ಬಂಗಾರದ ಮಹಾಪ್ರಾಸಾದವಾಗಿ ಕಂಗೊಳಿಸುವುದನ್ನು ಕಂಡ. ಚಂದ್ರಸೇನ ಮಹಾರಾಜನ ಸೇನಾಪತಿ ಮಂತ್ರಿ ಮಾನ್ಯರೆಲ್ಲರ ಕೌತುಕಕ್ಕೆ ಕೊನೆಯೇ ಇಲ್ಲ. ಮಹಾರಾಜನು ಎದ್ದು ಬಂದು ಪರಮೇಶ್ವರನ ಪ್ರಸಾದಕ್ಕೆ ಪಾತ್ರನಾದ ಆ ಗೋಪಕುಮಾರರನ್ನು ಚಾಚಿದ ತೋಳಿನಿಂದ ತಬ್ಬಿಕೊಂಡ. ಆನಂದದಿಂದ ಆ ಗೋಪಾಲ ನಂದನನ್ನು ಅಭಿನಂದಿಸಿದ.

ಯುದ್ಧಕ್ಕಾಗಿ ನಗರದ ನಾಲ್ಕು ನಿಟ್ಟನಲ್ಲಿ ಮುತ್ತಿಗೆ ಇಟ್ಟು ಲಗ್ಗೆ ಹಾಕಿದ ವೈರಿ ರಾಜರೆಲ್ಲರೂ ಈ ಕುಮಾರನ ಮೇಲೆ ಪರಮೇಶ್ವರನು ಮಾಡಿದ ಅನುಗ್ರಹದ ಕೌತುಕದ ಕತೆಯನ್ನು ಕೇಳಿ ಆಶ್ಚರ್ಯಪಟ್ಟರು. ಇಂಥ ಭಗವದ್‌ಭಕ್ತನು ಇರುವ ರಾಜಧಾನಿಗೆ ದಾಳಿ ಇಡುವುದು ಪರಮ ಅನ್ಯಾಯ ಎಂದು ತಮ್ಮ ಅಸ್ತ್ರಗಳನ್ನೆಲ್ಲಾ ಕೆಳಗಿಟ್ಟರು. ಮುತ್ತಿಗೆಯನ್ನು ಹಿಂತೆಗೆದುಕೊಂಡರು. ಚಂದ್ರಸೇನ ಮಹಾರಾಜನಿಗೆ ತಾವೆಲ್ಲರೂ ಶರಣು ಬಂದಿರುವುದಾಗಿ ಹೇಳಿಕಳಿಸಿದರು. ರಾಜನ ಅಪ್ಪಣೆಯಿಂದ ಒಳಗೆ ಬಂದು ಮಹಾಕಾಲೇಶ್ವರನಿಗೆ ಭಕ್ತಿಯಿಂದ ಪ್ರಣಮಿಸಿದರು. ದೇವರ ದರ್ಶನಮಾಡಿ ಆ ಗೋಪಾಲ ಬಾಲಕನ ಮನೆಗೆ ಆಗಮಿಸಿದರು. ಬಾಲಕನ ಮೇಲೆ ಅನುಗ್ರಹ ಮಾಡುವಸಲುವಾಗಿ ಆ ಮನೆಯಲ್ಲಿ ಸ್ವತಃ ಪರಮೇಶ್ವರನು ಶಿವಲಿಂಗ ರೂಪದಿಂದ ಪ್ರಾದುರ್ಭೂತನಾಗಿದ್ದನು. ಅಲ್ಲಿಯೇ ಒಂದು ಶಿವಾಲಯ ಕಟ್ಟಲಾಯಿತು. ಆ ಶಿವಲಿಂಗದ ದರ್ಶನ ಮಾಡಿಕೊಂಡು ಶಿವಭಕ್ತನಾದ ಗೋಪಲನನ್ನು ಅವರೆಲ್ಲರೂ ಅಭಿನಂದಿಸಿದರು. ಅದೇ ಸಮಯದಲ್ಲಿ ರಾಮಭಕ್ತನಾದ ಹನುಮಂತನು ಅಲ್ಲಿಗಾಗಮಿಸಿದನು. ಅವನನ್ನು ಕಂಡಕೂಡಲೇ ಎಲ್ಲ ರುಜರೂ ಭಕ್ತಿಯಿಂದ ಎದ್ದು ನಿಂತರು. ವಿನಯದಿಂದ ಕೈಜೋಡಿಸಿದರು. ಬದ್ಧಾಂಜಲಿ ಪುಟರಾಗಿ ಪ್ರಣಾಮ ಮುದ್ರೆಯಲ್ಲಿ ಕೈ ಮುಗಿದು ನಿಂತ ಆ ಎಲ್ಲ ರಾಜ ಮಹಾರಾಜರಿಗೆ ಹನುಮಂತನು ಹೇಳಿದನು- ರಾಜರೇ, ಮಾನವರಿಗೆ ಶಿವಪೂಜೆಯ ಹೊರತು ಆತ್ಮೋದ್ಧಾರಕ್ಕೆ ಬೇರೆ ಮಾರ್ಗವಿಲ್ಲ. ಈ ಗೋಪಾಲನಂದನನು ಶನಿವಾರ ದಿನ ಪ್ರದೋಷ ಕಾಲದಲ್ಲಿ ಯಾವ ಮಂತ್ರ ತಂತ್ರದ ಪರಿಜ್ಞಾನವಿಲ್ಲದೇ ಕೇವಲ ಭಕ್ತಿಯಿಂದ ಪೂಜೆಮಾಡಿದ. ಕೇವಲ ಅವನ ಭಕ್ತಿಯಿಂದಲೇ ಪ್ರಸನ್ನನಾದ ಪರಮೇಶ್ವರ. ಶನಿವಾರ ಪ್ರದೋಷ ಕಾಲದಲ್ಲಿ ವಿಧಿಪೂರ್ವಕವಾಗಿ ಶಿವಾರ್ಚನೆಯು ವಿಶೇಷ ಪುಣ್ಯಪ್ರದ. ಗೋಪಾಲಕ ವಂಶದ ಕೀರ್ತಿಯನ್ನೂ ಈ ಬಾಲಕ ಬೆಳೆಸಿದ್ದಾನೆ. ಇವನು ಈಗ ಶ್ರೇಷ್ಠ ಶಿವಭಕ್ತರಲ್ಲಿ ಪರಿಗಣಿತ ಇವನ ವಂಶದಲ್ಲಿ ಎಂಟನೇಯ ತಲೆಯವನಾಗಿ ನಂದಗೋಪನು ಜನಿಸುವನು ಅವನ ಹೊಟ್ಟೆಯಿಂದ ಭಗವಾನ್‌ನಾರಾಯಣನು ಶ್ರೀಕೃಷ್ಣ ರೂಪದಿಂದ ಅವತಾರ ತಾಳುವನು. ಇಂದಿನಿಂದ ಈ ಶಿವಭಕ್ತನಾದ ಗೋಪಾಬಾಲಕನು "ಶ್ರೀಕರ" ಎಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆಯುವನು. ಅಂಜನಾಕುಮಾರನಾದ ಮಾರುತಿಯು ಅಲ್ಲಿ ನೆರೆದ ರಾಜರನ್ನುದ್ದೇಶಿಸಿ ಹೀಗೆ ನುಡಿದು ಗೋಪಕುಮಾರನಿಗೆ ಶಿವೋಪಾಸನೆಯ ಆಚಾರ, ವಿಚಾರ, ರೀತಿ, ಸಂಪ್ರದಾಯಗಳನ್ನೆಲ್ಲ ತಿಳಿಸಿಕೊಟ್ಟು ಅನುಗ್ರಹನಾದನು ಅಂತರ್ಧಾನ. ಅಲ್ಲಿಗೆ ಬಂದ ಮಹಾರಾಜರೆಲ್ಲರೂ ಅಲ್ಲಿ ಸಾಕ್ಷಾತ್ ವಾಯುಕುಮಾರನ ಮುಖದಿಂದ ಬಂದ ಜ್ಞಾನಕಾಂಡ ಆಚಾರಕಾಂಡ ಹಾಗೂ ಜ್ಞಾನಯೋಗ ಭಕ್ತಿಯೋಗ ಕರ್ಮಯೋಗಗಳ ಉಪದೇಶವನ್ನು ಕೇಳಿ ಹರ್ಷ ಚಿತ್ತಾರಾದರು. ಮತ್ತು ಚಂದ್ರಸೇನ ಮಹಾರಾಜನ ಅಪ್ಪಣೆ ಪಡೆದು ತಮ್ಮ ತಮ್ಮ ಊರಿಗೆ ತೆರಳಿದರು. ಮಹಾತೇಜಸ್ವಿಯಾಗಿ ಶ್ರೀಕರ ಎಂಬ ಹೊಸ ಹೆಸರನ್ನು ಹನುಮಂತನಿಂದ ಪಡದ ಆ ಗೋಪಾಲನು ಅದೇ ಹನುಮಂತನಿಂದ ತಾನು ಕೇಳಿ ತಿಳಿದ ಶಿವಾರ್ಚನೆಯ ಕ್ರಮದಿಂದ

ಧರ್ಮಜ್ಞರಾದ ಬ್ರಾಹ್ಮಣರೊಂದಿಗೆ ಶಿವಾರ್ಚನೆಯನ್ನು ವಿಧಿಪೂರ್ವಕವಾಗಿ ಮಾಡತೊಡಗಿದ. ಅವನೊಟ್ಟಿಗೆ ಚಂದ್ರಸೇನ ಮಹಾರಾಜನೂ ವಿಧ್ಯುಕ್ತಪ್ರಕಾರದಿಂದ ಚಂದ್ರಚೂಡನನ್ನು ಆರಾಧಿಸಿ ಆ ಗೋಪಕುಮಾರನೊಂದಿಗೆ ಪರಮಪದವನ್ನು ಪಡೆದ. ಈ ಶಿವಭಕ್ತನ ಉಪಾಖ್ಯಾನವನ್ನು ಭಕ್ತಿಯಿಂದ ಕೇಳಿದವರು ಹೇಳಿದವರು ದಿವ್ಯಗತಿಯನ್ನು ಹೊಂದುವರು.

## ಪ್ರದೋಷಕಾಲದಲ್ಲಿ ಶಿವಪೂಜೆಯನ್ನು ತಿರಸ್ಕರಿಸಿದ ವಿದರ್ಭರಾಜನ ಆಖ್ಯಾನ

**ಸೂತ:-** ತ್ರಯೋದಶಿಯ ದಿನ (ದ್ವಾದಶಿ) ಸಾಯಂಕಾಲಕ್ಕೆ ಪ್ರದೋಷ ಕಾಲ ಎನ್ನುವರು. ಪ್ರದೋಷಕಾಲದಲ್ಲಿ ಮಹಾದೇವರು ತನ್ನ ಕೈಲಾಸಪರ್ವತದ ರಜತಭವನದಲ್ಲಿ ತಾಂಡವ ನೃತ್ಯವನ್ನು ಮಾಡುವನು. ದೇವತೆಗಳು ಆ ಕಾಲದಲ್ಲಿ ಅವನ ಗುಣಗಾನ ಮಾಡುತ್ತಲಿರುವರು. ಆದುದರಿಂದ ಧರ್ಮ, ಅರ್ಥ, ಕಾಮ, ಮೋಕ್ಷ ಎಂದು ನಾಲ್ಕು ವಿಧ ಪುರುಷಾರ್ಥಗಳನ್ನು ಬಯಸುವವರು ಈ ಪ್ರದೋಷಕಾಲದಲ್ಲಿ ಶಿವನ ಗುಣಗಾನ, ಧ್ಯಾನ ನಾಮಸಂಕೀರ್ತನೆಗಳನ್ನು ಹಾಗೂ ಹೋಮ, ಹವನ ಮುಂತಾದವುಗಳನ್ನೂ ಮಾಡಬೇಕು. ಇದರಿಂದ ಶಿವನು ಸುಪ್ರಸನ್ನನಾಗಿ ಮಾನವರ ಕಡುಬಡತನವನ್ನು ತೊಡೆದು ಹಾಕುವನು. ಸಂಪತ್ತು ಸೌಭಾಗ್ಯಗಳನ್ನು ಕರುಣಿಸುವನು.

ಪೂರ್ವಕಾಲದಲ್ಲಿ ವಿದರ್ಭದೇಶದಲ್ಲಿ ಒಬ್ಬರಾಜ. ಸತ್ಯರಥ ಎಂದು ಅವನಿಗೆ ಹೆಸರು. ಪರಮ ಧರ್ಮಾತ್ಮ ಆ ರಾಜ ಒಳ್ಳೆಯ ನಡತೆಗೆ ಅವನು ಆ ಕಾಲದಲ್ಲಿ ಹೆಸರು ವಾಸಿಯಾಗಿದ್ದ. ಮಾಡಿದ ಪ್ರತಿಜ್ಞೆಯನ್ನು ಎಂದೂ ಮುರಿಯಲಿಲ್ಲ. ಕೊಟ್ಟ ವಚನಕ್ಕೆ ಎಂದೂ ತಪ್ಪಲಿಲ್ಲ. ಸತ್ಯವಿಲ್ಲದ ಮಾತುಗಳನ್ನು ಎಂದೂ ನುಡಿಯುತ್ತಿರಲಿಲ್ಲ. ದಾನಧರ್ಮ ಮಾಡದೇ ಒಂದು ದಿನವೂ ಇರಲಿಲ್ಲ. ಹೀಗೆ ಧರ್ಮಸಾಮ್ರಾಜ್ಯವನ್ನು ಅನೂಚಾನವಾಗಿ ಆಳುತ್ತಲಿರುವಾಗ ಬಹುಕಾಲವುರುಳಿತು. ಸುಖ ಸಮಾಧಾನದಲ್ಲಿ ಆ ಧರ್ಮಿಷ್ಠ ಮಹಾರಾಜನ ಬಹುಕಾಲ ಆಯುಷ್ಯವು ಪೂರೈಸಿತು.

ಮುಂದೆ ಒಂದು ದಿನ ಸಾಲ್ವ ದೇಶದ ಮಹಾರಾಜನು ಹಲವಾರು ಮಾಂಡಲಿಕ ರಾಜರೊಂದಿಗೆ ಕೂಡಿಕೊಂಡು ವಿದರ್ಭದೇಶದ ಮೇಲೆ ದಾಳಿಯಿಟ್ಟ. ಇಬ್ಬರೂ ರಾಜರೂ ಜೀವದ ಹಂಗು ತೊರೆದು ತಮ್ಮ ಪ್ರಚಂಡ ಸೇನಾ ಸನ್ನಾಹದೊಂದಿಗೆ ಹಣಾಹಣಿ ಹೋರಾಡಿದರು. ಶಾಲ್ವರಾಜನದೇ ಮೇಲುಗೈ ಜಯಮಾಲೆ ಶಾಲ್ವನ ಕೊರಳಿಗೆ. ವಿದರ್ಭರಾಜನ ಪಾಲಿಗೆ ಸೋಲು ಸಾವು ನೋವು. ವೈರಿಗಳ ಕೈಯಲ್ಲಿ ಸಿಕ್ಕು ವಿದರ್ಭದ ದೊರೆ ಮರಣವನ್ನು ಅಪ್ಪಿದ. ಸೈನಿಕರೆಲ್ಲರೂ ರಣಾಂಗಣದಿಂದ ಓಡಿಹೋದರು. ವಿದರ್ಭರಾಜನಾದ ಸತ್ಯರಥನು ಪರಮಪತಿವ್ರತೆಯಾದ ರಾಜಮಹಿಷಿಯು ಧಾರಾತೀರ್ಥದಲ್ಲಿ ಪತಿಯು ದೇಹವಿಟ್ಟ ಸಮಾಚಾರವನ್ನು ಕೇಳಿ ಬೆಂಕಿಯಲ್ಲಿ ಬಿದ್ದಂತೆ ಪರಿತಪಿಸಿದಳು. ವೈರಿರಾಜರ ಕೈಗೆ ತಾನು ಸಿಕ್ಕಬಾರದು ಎಂದು ಅರಮನೆಯಿಂದ ನಿರ್ಗಮಿಸಿದಳು. ಪಡುವಲದ ಕಗ್ಗಾಡಿನ ದಾರಿ ಹಿಡಿದು ದೂರ ದೂರ ಧಾವಿಸಿದಳು. ಆಗ ಅವಳು ತುಂಬು ಗರ್ಭಿಣಿ. ಬಸಿರಿನ ಭಾರದಿಂದ ಬೇಸಾಗಿ ಹೆಜ್ಜೆ ಹಾಕಲೂ ಆಗುತ್ತಿರಲಿಲ್ಲ ಆ ಅರಸಿಗೆ. ಆದರೆ ರಿಪುರಾಜದೂತರು ಬೆನ್ನಟ್ಟಿ ಬರುವ ಭೀತಿ ಭೂತಾಕಾರವಾಗಿ ಆ ತುಂಬು ಬಸಿರಿಯನ್ನು ಓಡುವಂತೆ ಮಾಡಿತು. ನಸುಕು ಮುಸುಕು ತೆಗೆಯುವವರೆಗೆ ಕಾಡಿನ ಕಗ್ಗ ದಾರಿಯನ್ನು ತುಳಿಯುತ್ತ ಅವಳು ಬಹುದೂರ ಸಾಗಿಬಂದಿದ್ದಳು. ಆ ವನವೀಥಿಯಲ್ಲಿ ದೂರದ ಅಂತರವನ್ನು ಕ್ರಮಿಸಿದ ಬಳಿಕ ಅಲ್ಲಿ ಬಂದು ತಿಳಿನೀರಿನ

ಸರೋವರ. ಅದರ ಇಕ್ಕೆಲಗಳಲ್ಲಿಯೂ ದಟ್ಟ ನೆರಳನ್ನು ನೆಲದುದ್ದ ಚಾಚಿ ನಿಂತ ಸಾಲು ಸಾಲು ಹೆಮ್ಮರಗಳು. ನಡೆನಡೆದು ದಣಿದು ಹೋದ ಆ ರಾಜ ಮಹಿಷಿಯು 'ಇಷ್ಟು ದೂರ ಯಾವ ವೈರಿಗಳೂ ತನ್ನನುಅಟ್ಟಿಸಿ ಬರಲಾರರು' ಎಂದು ಭಾವಿಸಿ ಒಂದು ಗಿಡದ ಅಡಿಯಲ್ಲಿ ಕುಳಿತುಕೊಂಡಳು. ಬಹುದೂರ ದಾರಿಯಲ್ಲಿ ಭಯಭ್ರಾಂತಿಯಿಂದ ಓಡುತ್ತ ಬಂದ ಆ ಗರ್ಭಿಣಿಗೆ ಅತೀ ಆಯಾಸವಾಗಿತ್ತು. ಆ ಮರದಡಿಯಲ್ಲಿ ವಿಶ್ರಮಿಸಿದ ಕೂಡಲೇ ಪ್ರಾರಂಭವಾಯಿತು ಪ್ರಸವ ವೇದನೆ. ಆ ವೃಕ್ಷಮೂಲದ ಸಾಂದ್ರಛಾಯೆಯಲ್ಲಿಯೇ ಏಕಾಕಿನಿಯಾದ ಆ ಅಭಾಗಿನಿಯು ಒಂದು ಗಂಡುಮಗುವಿಗೆ ಜನ್ಮವಿತ್ತಳು. ಸುಂದರವಾದ ಕೂಸು. ಬಂಗಾರದ ಬಣ್ಣ. ಮುದ್ದಾದ ಕಣ್ಣು ಮೂಗು ಚಕ್ರವರ್ತಿ ಲಕ್ಷಣಗಳೆಲ್ಲವೂ ಆ ಪುಟ್ಟ ಮಗುವಿನ ಸುಂದರ ಮುಖದ ಹೊಂದಾವರೆಯಲ್ಲಿ. ಮಗು ಹುಟ್ಟಿದ ಒಂದೆರಡು ಗಳಿಗೆಯ ನಂತರ ಅವಳಿಗೆ ಇನ್ನಿಲ್ಲದ ಬಾಯಾರಿಕೆ. ಹುಟ್ಟಿದ ಮಗುವಿನ ಹುಣ್ಣಿಮೆಯ ಚಂದ್ರನಂಥ ಮುಖ ನೋಡಿ ಮೊದಲು ಅವಳ ಹಸಿವೆ ಹಿಂಗಿತ್ತು. ಬಾಯಾರಿಕೆ ಇಂಗಿತ್ತು. ಮಗುವಿನ ಮುಗ್ಧ ಮುಖವನ್ನು ಕಂಡಾಗ ಆದ ಹಿಗ್ಗು ತನ್ನ ಈಗಿನ ಈ ದಯನೀಯ ಪರಿಸ್ಥಿತಿಯನ್ನು ನೆನೆದು ಕುಗ್ಗಿ ಹೋಗುತ್ತಿತ್ತು. ಅರಮನೆಯ ರತ್ನದ ತೊಟ್ಟಿಲಲ್ಲಿ ಲಾಲಿಸಿ ಕೊಳ್ಳಬೇಕಾದ ಮಗುವು ಅಡವಿಯಲ್ಲಿ ಅನಾಥವಾಗಿ ಕಾಡಿನ ಗಿಡದಡಿಯ ಹುಲ್ಲು ಹಾಸಿನಲ್ಲಿ ಮಲಗಬೇಕಾದ ಪ್ರಸಂಗವನ್ನು ನೆನೆದು ಆ ತಾಯಿಕರುಳು ಕಣ್ಣೀರಿನ ಕೋಡಿ ಹರಿಸಿತು. ಹುಟ್ಟಿದ ಮಗುವಿಗೆ ಮೈ ತೊಳೆದು ತಾನು ಕೂಡಾ ಅಂಗಾಂಗಗಳನ್ನು ತೊಳೆದುಕೊಂಡು ನೀರು ಕುಡಿಯಲೆಂದು ಅವಳು ಜಲಾಶಯದ ಬಳಿಗೆ ಸಾರಿದಳು. ಹೆರಿಗೆಯ ವೇದನೆಯಿಂದ ನೀರಿನ ಬಳಿಗೆ ನಡೆದು ಹೋಗಲು ಆಗಲಿಲ್ಲ ಆ ಸುಕುಮಾರ ರಾಜಮಹಿಷಿಗೆ. ಆದರೂ ಅವಳು ತನ್ನ ಬಾಯಾರಿಕೆ ಇಂಗಿಸಿಕೊಂಡು ಮಗುವಿಗೆ ನೀರು ತರಲೆಂದು ತೀರಕ್ಕೆ ತೆವಳುತ್ತ ಬಂದಳು. ನೀರಿನಲ್ಲಿ ಇಳಿದಳು. ದುರ್ದೈವ ಅವಳನ್ನು ಬೇಟೆಯಾಡಲು ಹೊಂಚು ಹಾಕಿತ್ತು. ಆ ಜಲಾಶಯದ ಮಡುವಿನಲ್ಲಿ ಮಲಗಿದ ಮೊಸಳೆಯೊಂದು ನೀರಿಗಿಳಿದ ಆ ನರಪತಿಯ ನಾರಿಯನ್ನು ಒಳಗೆ ಸೆಳೆದುಕೊಂಡಿತು. ಮೊಸಳೆ ಬಾಯಿಗೆ ಬಿದ್ದು ಆ ಬಾಣಂತಿಯು ಹತಳಾದಳು. ಇತ್ತ ತೀರದಲ್ಲಿ ಆ ಅನಾಥವಾದ ಮಗು ಚೀರುತ್ತಲೇ ಇತ್ತು. ಹಸಿವು ಬಾಯಾರಿಕೆಯಿಂದ ಗಟ್ಟಿಯಾಗಿ ಚೀರಿ ಒದರಿ ರೋದಿಸುತ್ತಲಿರುವ ಆ ಎಳೆಯ ಕಂದನ ಕರುಣಾಕ್ರಂದನ ಆ ನಿರ್ಮಾನುಷವಾದ ಅರಣ್ಯದಲ್ಲಿ ನಿಜವಾದ ಅರಣ್ಯರೋದನವೇ ಆಯಿತು. ಆ ರಾಜಕುಮಾರನ ರೋದನದ ಧ್ವನಿಯು ಆ ವನಪ್ರಾಂತದಲ್ಲಿ ಪ್ರತಿಧ್ವನಿತವಾಯಿತು. ಅದನ್ನು ಕೇಳಿ ದೂರದಲ್ಲಿ ಆ ಕಾಂತಾರ ಪಥದಲ್ಲಿ ಸುತ್ತುತ್ತಲಿರುವ ಓರ್ವಬ್ರಾಹ್ಮಣ ವಿಧವೆಯು ಅಲ್ಲಿಗೆ ಧಾವಿಸಿ ಬಂದಳು. ಅವಳ ಕೈಯಲ್ಲಿಯೂ ಒಂದು ವರ್ಷದ ಮಗು. ಬಡತನದ ಬವಣೆಯಲ್ಲಿಯೇ ಬೆಳೆದು ಬಂದ ಆ ಬ್ರಾಹ್ಮಣ ಸ್ತ್ರೀಗೆ ಮಗು ಹುಟ್ಟಿದ ಕೂಡಲೇ ಅವಳ ಗಂಡ ಸತ್ತು ಹೋಗಿದ್ದ. ಗಂಡ ಇದ್ದಾಗಲೂ ಅವಳಿಗೆ ದಟ್ಟ ದಾರಿದ್ರ್ಯ. ಈಗಂತೂ ತಿರುಪೆ ಬೇಡುವುದೇ ಅವಳಿಗೆ ಬದುಕುವ ದಾರಿಯಾಗಿತ್ತು. ಮನೆ ಮನೆ ತಿರುಗಿ ಭಿಕ್ಷೆ ಬೇಡಿ ತನ್ನ ಹಾಗೂ ಮಗುವಿನ ಹೊಟ್ಟೆಯನ್ನು ಹೇಗೋ ತುಂಬಿಸುತ್ತಿದ್ದಳು. ನಾಡಿನಲ್ಲಿ ಭಿಕ್ಷೆಯ ದೊರಕದಾದಾಗ ಕಾಡಿನಲ್ಲಿ ನುಗ್ಗಿ ಹಣ್ಣು, ಕಾಯಿ, ಗೆಡ್ಡೆ, ಗೆಣಸು ತಿಂದು ಕಾಲ ನೂಕುತ್ತಿದ್ದಳು. ಅಂದು ಆಕಸ್ಮಿಕವಾಗಿ ಆ ಬೆಂಗಾಡಿನಲ್ಲಿ ದೂರದಿಂದಲೇ ಎಳೆ ಕೂಸಿನ ಚೀರುವ ಧ್ವನಿಯನ್ನು ಕೇಳಿ ಅಲ್ಲಿಗೇ ಹುಡುಕಿಕೊಂಡು ಬಂದಳು. ಅವಳ ಹೆಸರು ಉಮೆ. ವಿಧವೆಯಾದರೂ ಸಾಧ್ವಿ. ಹುಟ್ಟಿನಿಂದ ದರಿದ್ರಳಾದರೂ ಮನಸ್ಸಿನಿಂದ ಶ್ರೀಮಂತಳು. ತನ್ನ ಬಗಲಲ್ಲಿ ಮುದ್ದಿನ ಮಗು

ಕುಳಿತುಕೊಂಡಿದ್ದರೂ ಬೇರೊಬ್ಬ ಮಗುವಿನ ರೋದನವನ್ನು ಕೇಳಿ ಅದರ ಕಣ್ಣೀರನ್ನು ಒರಸಲಿಕ್ಕಾಗಿ ವನಾಂತರದಲ್ಲಿ ಹುಡುಕುತ್ತ ಬಂದಳು.

ಅವಳು ಆ ಅರ್ಭಕನ ಬಳಿ ಬಂದು ನೋಡಿದಾಗ ಅವಳ ಮನಸ್ಸು ವಿಚಾರದ ಚಕ್ರಾರೂಢವಾಗಿ ಚಾಂಚಲ್ಯದ ಚಂಕ್ರಮಣವನ್ನು ನಡೆಸಿತ್ತು- "ಓಹೋ! ಇದೇನು ಅಚ್ಚರಿ? ಇದೇನು ಆಶ್ಚರ್ಯ? ಈ ಗೊಂಡಾರಣ್ಯದಲ್ಲಿ ಇದೀಗ ಹುಟ್ಟಿದ ಈ ಎಳೆಕೂಸು! ಹೊಕ್ಕಳದ ಹುರಿಯನ್ನು ಕೂಡ ಇನ್ನು ಕತ್ತರಿಸಿಲ್ಲ. ಇದರ ಹಡೆದವ್ವ ಎಲ್ಲಿ ಹೋಗಿರಬಹುದು? ಹಡೆದ ಅಪ್ಪ ಯಾರಿರಬಹುದು? ಇದೇನು ಹೊಲೆಯನಿಂದ ಹುಟ್ಟಿದ್ದೋ? ಕ್ಷತ್ರಿಯ ಬೀಜವೋ? ವೈಶ್ಯನ ಸಂತಾನವೊ? ಬ್ರಾಹ್ಮಣನ ಮಗುವೊ? ಇದನ್ನು ನಿರ್ಧರಿಸುವುದಾದರೂ ಹೇಗೆ? ಇದರ ಜಾತಿ ನಿರ್ಧಾರವಾಗದೆ ನಾನು ಈ ಕೂಸನ್ನು ಮುಟ್ಟುವುದು ಎಂತು? ಬೆಳೆಸುವ ಬಗೆ ಹೇಗೆ? ಹೀಗೆ ಆ ಬ್ರಾಹ್ಮಣ ವನಿತೆಯು ಯೋಚಿಸುತ್ತಲಿರುವಾಗಲೇ ಅಲ್ಲಿಗೆ ಐತಂದರು ಓರ್ವ ಮಹಾತ್ಮರಾದ ಸನ್ಯಾಸಿಗಳು. ಆ ಯತಿಪುಂಗವರ ಮುಖವನ್ನು ನೋಡಿದರೇ ಸಾಕು, ಸಾಕ್ಷಾತ್ ಶಂಕರನೇ ಮುನಿ ವೇಷತೊಟ್ಟು ಇಲ್ಲಿಗೆ ಬಂದಂತೆ ತೋರುತ್ತಿತ್ತು. ಆ ಸನ್ಯಾಸಿಯು ಸಂದೇಹದ ಆಂದೋಲಿಕೆಯಲ್ಲಿ ತೂಗಾಡುತ್ತಲಿರುವ ಆ ತರುಣಿ ವಿಧವೆಯನ್ನು ಕುರಣಭಾವದಿಂದ ನೋಡಿ ಹೇಳಿದನು- "ಬ್ರಾಹ್ಮಣಿಯೇ, ಚಿಂತೆ ಮಾಡಬೇಡ, ದುಃಖಪಡಬೇಡ. ನಿನ್ನ ಹೃದಯದಲ್ಲಿರುವ ಸಂಶಯ ಭಾವನೆಯನ್ನೆಲ್ಲ ತೊಡೆದು ಹಾಕು. ಅತ್ಯಂತ ಸುಂದರವಾದ ಈ ಕಂದನನ್ನು ಯಾವ ಸಂಶಯವೂ ಇಲ್ಲದೇ ನೀನು ರಕ್ಷಣೆ ಮಾಡು. ಇದರಿಂದ ನಿನಗೆ ಮುಂದೆ ಪರಮ ಕಲ್ಯಾಣವು ಆಗುವುದು."

ಆಕಸ್ಮಿಕವಾಗಿ ಅಲ್ಲಿ ಬಂದ ಯತಿಪುಂಗವರು ಹೀಗೆ ಸಂತೈಸುವ ಹಾಗೂ ಮಾರ್ಗದರ್ಶಕವಾದ ಮಾತು ಆಡಿದ್ದನ್ನು ಕೇಳಿ ಆ ಬ್ರಾಹ್ಮಣ ವಿಧವೆಗೆ ತುಂಬ ಸಂತೋಷ. ಪ್ರೀತಿಯಿಂದ ಮಗುವನ್ನು ಎತ್ತಿಕೊಂಡಳು. ತನ್ನ ಮನೆಗೆ ತಂದಳು. ಅತ್ತ ಈ ಅನಾಥ ಭೂಸರ ವಿಧವೆಗೆ ಮಾರ್ಗದರ್ಶನ ಮಾಡಿ ಆ ಮಹರ್ಷಿಗಳು ಅಲ್ಲಿಂದ ಹೊರಟು ಹೋದರು. ಅನಂತರ ಆ ಬ್ರಾಹ್ಮಣಿಯು ಅನಾಥ ಶಿಶುವನ್ನು ಎತ್ತಿಕೊಂಡು ಮನೆಗೆ ತಂದ ಬಳಿಕ ಆ ಮಗುವನ್ನು ರಾಜಕುಮಾರ ಎಂದು ತಿಳಿದೇ ಆತ್ಮಾದರದಿಂದ ಪಾಲಿಸಿ ಪೋಷಿಸಿ ಪಾಲಿಸುತ್ತಿದ್ದಳು. ಆ ಭೂಸರ ವಿಧವೆಯ ಮನೆ ಏಕಚಕ್ರಾ ನಗರದಲ್ಲಿ. ಹತ್ತು ಮನೆ ಬಿಕ್ಷೆ ಬೇಡಿ ಬಂದ ಅನ್ನದಿಂದ ತನ್ನ ಹೊಟ್ಟೆಯ ಕಂದನನ್ನೂ ಈ ರಾಜಕುಮಾರನನ್ನೂ ಪ್ರೀತಿಯಿಂದಲೇ ಸಲಹುತ್ತಿದ್ದಳು ಆ ಬ್ರಾಹ್ಮಣಿ. ಅವಳ ಬಿನ್ನಹದಂತೆ ಆ ಊರಲ್ಲಿಯ ಪುರೋಹಿತರು ಬಂದು ಆ ಇಬ್ಬರೂ ಕುಮಾರರಿಗೆ ಉಚಿತ ಸಂಸ್ಕಾರ ಮಾಡಿಸಿದರು. ಶುಕ್ಲ ಪಕ್ಷದ ಚಂದ್ರಾಮನಂತೆ ಅವರಿಬ್ಬರ ಬೆಳವಣಿಗೆ. ಅವರಿಬ್ಬರಲ್ಲೂ ಸಮಾನ ಪ್ರೀತಿ ಆ ತಾಯಿಗೆ. ಸೋದರರಷ್ಟೇ ಆತ್ಮೀಯತೆ ಹಾಗೂ ಸ್ನೇಹ ಸಲಿಗೆ ಆ ಇಬ್ಬರೂ ಬಾಲಕರಲ್ಲಿ. ಊರ ಜನರಿಗೆಲ್ಲ ಆ ಅನಾಥ ಮಕ್ಕಳ ಮೇಲೆ ಯಾವಾಗಲೂ ಉಕ್ಕುವ ಅಕ್ಕರತೆ. ಪುರೋಹಿತರಿಗೂ ಮಿಕ್ಕುವ ಕಕ್ಕುಲಾತಿ. ಅವರಿಂದ ಸಕಾಲದಲ್ಲಿ ಇಬ್ಬರಿಗೂ ಉಪನಯನ ಸಂಸ್ಕಾರ. ತಾಯಿಯೊಡನೆ ಆ ಇಬ್ಬರೂ ಬಾಲಕರು ಅನುದಿನವೂ ಭಿಕ್ಷೆಗೆ ಹೋಗುತ್ತಿದ್ದರು.

ಒಂದು ದಿನ ಆ ವಿಧವಾ ವನಿತೆಯು ತನ್ನ ಮಕ್ಕಳೊಡನೆ ಭಿಕ್ಷೆ ಬೇಡಿಕೊಂಡು ಅದೇ ಊರಲ್ಲಿರುವ ಒಂದು ದೇವಾಲಯಕ್ಕೆ ಬಂದಳು. ಅಲ್ಲಿ ಎಷ್ಟೋ ವಯೋವೃದ್ಧರು ಅನೇಕ ಜ್ಞಾನವೃದ್ಧರು. ಹಲವಾರು ತಪೋವೃದ್ಧರು. ಅವರಲ್ಲಿ ಶಾಂಡಿಲ್ಯ ಮಹರ್ಷಿ ಅಂತ

ದೃಷ್ಟಿಯುಳ್ಳ ಮಹಾಮಹಿಮ. ಆ ಮುನಿಪುಂಗವನು ಆ ಇಬ್ಬರೂ ಬಾಲಕರನ್ನು ನಿರುಕಿಸಿದ ಅಡಿಯಿಂದ ಮುಡಿಯವರೆಗೆ. ಕೂಡಲೇ ಹೊಳೆದು ಹೋಯಿತು, ರಹಸ್ಯ, ತಿಳಿದು ಹೋಯಿತು ಸತ್ಯಾಂಶ. ಅವರ ಬಾಯಿಂದ ತಾನಾಗಿಯೇ ಉದ್ಗಾರ ಹೊರಟಿತು- "ಓಹ್! ದೈವದ ಲೀಲೆ ವಿಚಿತ್ರ. ವಿಧಿಯ ನಿಯಮವನ್ನು ಮೀರಿ ಯಾರು ಹೋಗಬಲ್ಲರು? ಇವರಿಬ್ಬರಲ್ಲಿಯ ಈ ಮಗು ಇವಳ ಮಗು ಅಲ್ಲ. ಬೇರೆ ತಾಯಿಯ ಆಶ್ರಯ ಪಡೆದು ಬಿಕ್ಷೆ ಬೇಡಿ ಬದುಕುತ್ತಲಿದೆ. ಈ ಬಡ ಬ್ರಾಹ್ಮಣ ವಿಧವೆಯ ಪದರಿನಲ್ಲಿ ಬಿದ್ದು ಭಿಕ್ಷಾನ್ನವನ್ನು ತಿಂದು ಇವನೂ ಬ್ರಾಹ್ಮಣನೇ ಆಗಿಬಿಟ್ಟಿದ್ದಾನೆ."

ಮುನಿ ಮಂಡದಲ್ಲಿಯೇ ಮಾನನೀಯರು ಆ ಶಾಂಡಿಲ್ಯ ಮಹರ್ಷಿ. ಹುಸಿ ನುಡಿದು ಗೊತ್ತಿಲ್ಲ ಆ ನಾಲಿಗೆಗೆ ಅವರು ನುಡಿದದ್ದೇ ಸತ್ಯ. ಅವರು ಉಸಿರಿದ್ದೆ ತಥ್ಯ. ಅವರ ತುಟಿ ಮೀರಿ ಬಂದ ಈ ಮಾತುಗಳನ್ನು ಕೇಳಿ ನೆರೆದ ಮುನಿ ಮಹರ್ಷಿಗಳೆಲ್ಲರೂ ಬೆಕ್ಕಸ ಬೆರಗಾದರು. ಆಗ ಆ ಬ್ರಾಹ್ಮಣಿಗೆ ಮಾತ್ರ ತನ್ನ ಕೌತುಕ ಜಿಜ್ಞಾಸೆಯನ್ನು ಅದುಮಿಡಲು ಆಗಲಿಲ್ಲ. ಅವಳು ಧೈರ್ಯದಿಂದ ಆ ಸಭೆಯಲ್ಲಿಯೇ ಎದ್ದು ಬಂದು ಮಹರ್ಷಿಗಳ ಅಡಿದಾವರೆಗಳಿಗೆ ವಂದಿಸಿ ಕೇಳಿದಳು- "ಪೂಜ್ಯರೇ, ಹಿಂದೊಮ್ಮೆ ಗಡ್ಡೆ ಗೆಣಸು ಆಯ್ದುಕೊಂಡು ಬರಲು ನಾನು ಕಾಡಿಗೆ ಹೋಗಿದ್ದೆ. ಅಲ್ಲಿ ಈ ಮಗು ಅದೇ ಹುಟ್ಟಿ ಅನಾಥವಾಗಿ ರೋದಿಸುತ್ತಿತ್ತು. ಅದನ್ನು ಮುಟ್ಟಲೋ ಬೇಡವೋ ಎಂದು ನಾನು ಮೀನ ಮೇಷ ಮಾಡುತ್ತಿದ್ದೆ. ಆಗ ಓರ್ವ ಯತೀಶ್ವರರು ಅಲ್ಲಿ ಬಂದರು. "ಈ ಮಗುವನ್ನು ನಿನ್ನ ಮಗು ಎಂದು ರಕ್ಷಿಸು" ಎಂದು ಅಜ್ಞಾಪಿಸಿದರು. ತಲೆಯಲ್ಲಿ ಹೊತ್ತೆ ಅವರ ಅಣತಿಯನ್ನು. ಕೈಯಲ್ಲಿ ಹೊತ್ತೆ ಈ ಮಗುವನ್ನು. ಹೊಟ್ಟೆಯಲ್ಲಿ ಹೆತ್ತು ಹೊತ್ತ ಈ ನನ್ನ ಕೂಸಿನೊಂದಿಗೆ ಅಂದಿನಿಂದ ಇಂದಿನವರೆಗೆ ನನ್ನ ಹೊಟ್ಟೆಯ ಮಗನೆಂದೇ ಯಾವ ಭೇದ ಭಾವವಿಲ್ಲದೇ ಇವರಿಬ್ಬರನ್ನೂ ಲಾಲಿಸಿದೆ, ಪಾಲಿಸಿದೆ, ಪೋಷಿಸಿದೆ. ನನಗೆ ಈವರೆಗೂ ತಿಳಿದಿಲ್ಲ ಇದು ಯಾರು ಮಗು ಎಂದು. ತಾವು ದೊಡ್ಡವರು, ದಿವ್ಯಜ್ಞಾನಿಗಳು ಅಂತರ್ದೃಷ್ಟಿ ಯುಳ್ಳವರು. ದಯವಿಟ್ಟು ನನಗೆ ತಿಳಿಸಿರಿ. ಇದು ಯಾರ ಮಗು? ಇದರ ತಂದೆ ಯಾರು? ತಾಯಿ ಯಾರು? ಇದು ಜನಿಸಿದ ಕುಲ ಯಾವುದು?

**ಶಾಂಡಿಲ್ಯ:-** 'ಇವನು ವಿದರ್ಭ ದೇಶದ ಮಹಾರಾಜನ ಚೊಚ್ಚಲು ಗಂಡು ಮಗು'.

ಎಂದು ಹೇಳಿ ವಿದರ್ಭದ ದೊರೆ ಸತ್ಯರಥ ರಾಜ ಹಾಗೂ ಶಾಲ್ವರಾಜರ ಯುದ್ಧ, ವಿದರ್ಭ ರಾಜನ ಸೋಲು, ಸಾವು, ರಾಣಿಯ ವನವಾಸ, ಮರದ ಬುಡದಲ್ಲಿ ರಾಜಪುತ್ರನ ಜನನ, ಮೊಸಳೆಯಿಂದ ಮಹಾರಾಣಿಯ ಮರಣ ಮುಂತಾದ ಎಲ್ಲ ಸಮಾಚಾರವನ್ನು ಮಹರ್ಷಿಗಳು ವಿವರವಾಗಿ ತಿಳಿಸಿ ಹೇಳಿದರು.

**ಬ್ರಾಹ್ಮಣ ವಿಧವೆ:-** ಪೂಜ್ಯರೇ, ಶೂರ ವೀರನಾದ ಆ ಸತ್ಯರಥ ರಾಜನು ರಣಾಂಗಣದಲ್ಲಿ ಏಕೆ ಮರಣಕ್ಕೆ ಈಡಾದ? ಈ ರಾಜಕುಮಾರನಿಗೆ ಇಂಥ ದುರವಸ್ಥೆ ಏಕೆ ಬಂದಿತು? ಮುಂದೆ ಈ ಅರಸು ಕುಮಾರನಿಗೆ ತನ್ನ ರಾಜ್ಯವು ಮರಳಿ ದೊರಕುವ ಬಗೆ ಹೇಗೆ? ಇವನನ್ನು ಅಟ್ಟಿಸಿಕೊಂಡು ಬಂದ ಈ ದಟ್ಟದಾರಿದ್ರ್ಯವು ಈ ರಾಜಕುಮಾರನನ್ನು ಬಿಟ್ಟು ಹೋಗಲು ಏನಾದರೂ ಉಪಾಯವುಂಟೆ? ಇದಕ್ಕೆ ತಾವೇ ಮಾರ್ಗದರ್ಶನ ಮಾಡಬೇಕು?

**ಶಾಂಡಿಲ್ಯ:-** ಇದೊಂದು ದೊಡ್ಡ ರಾದ್ಧಾಂತ. ಶಾಲ್ವ ರಾಜನ ಕೈಯಲಿ ಸೋಲು ಸಾವನ್ನು ಅನುಭವಿಸಿದ ಈ ವಿದರ್ಭರಾಜ ಪೂರ್ವ ಜನ್ಮದಲ್ಲಿ ಪಾಂಡ್ಯದೇಶದ ಅಧಿಪತಿ. ಧರ್ಮದ ಮರ್ಮವನ್ನು ಅರಿತವ ಆ ಪಾಂಡ್ಯದೇಶದ ಅರಸ. ಅವನು ಮಾಡುತ್ತಲಿದ್ದ

ಅವನಿಯ ಅನುಶಾಸನ ಧರ್ಮಪೂರ್ವಕ. ಅವನು ಪಾಲಿಸುವ ಭೂಮಿಗೆ ನಾಲ್ಕು ಸಾಗರಗಳೇ ಮೇರೆ. ಒಂದು ದಿನ ಪ್ರದೋಷಕಾಲ. ಆ ಸಂಧ್ಯಾಕಾಲದಲ್ಲಿ ಆ ಪಾಂಡ್ಯ ದೇಶದ ದೊರೆ ಶಂಕರನನ್ನು ಪೂಜಿಸುತ್ತಿದ್ದ. ಆಗ ಒಮ್ಮೆಲೇ ರಾಜಧಾನಿಯಲ್ಲಿ ಕೋಲಾಹಲ. ಎಲ್ಲೆಡೆಗೂ ಗುಲ್ಲು ಕವಳವಳ, ಸದ್ದು ಗದ್ದಲ. ಅದನ್ನು ಕೇಳಿದ ಕೂಡಲೇ ಮಹಾರಾಜನು ತಾನು ಕೈಕೊಂಡ ಶಿವಪೂಜೆಯನ್ನು ಅರ್ಧಕ್ಕೆ ತ್ಯಜಿಸಿ ಹೊರಬಂದ. ಈ ಗುಲ್ಲು ಗಲಾಟೆಗಳು ನಗರದ ಉಳಿದ ಭಾಗಗಳಿಗೂ ಹಬ್ಬಬಹುದು ಎಂದು ತಾನು ಅರಮನೆಯಿಂದ ಹೊರಬಿದ್ದು ರಾಜಾಂಗಣದಲ್ಲಿ ಬಂದು ನಿಂತುಕೊಂಡ. ಮಹಾಬಲಿಷ್ಠ ಆ ಪಾಂಡ್ಯರಾಜನ ಮಂತ್ರಿಸೇನಾಪತಿಯ ಸಹಾಯದಿಂದ ಪ್ರಕ್ಷೋಭಕಾರಕರಾದ ಶತ್ರುಗಳನ್ನು ಹಿಡಿದು ರಾಜನ ಎದುರು ತಂದು ನಿಲ್ಲಿಸಿದ. ಮಹಾರಾಜನು ಕ್ರೋಧತಪ್ತನಾಗಿ ವಿದ್ರೋಹಕಾರಿ ವೈರಿಗಳ ರುಂಡ ಚೆಂಡಾಡಿ ದಂಡಿಸಿದ. ಅನಂತರ ರಾಜಧಾನಿಯಲ್ಲಿ ಭಾರೀ ವಿಜಯೋತ್ಸವ ಅದ್ದೂರಿಯಿಂದ ಮಹಾರಾಜನ ಮೆರವಣಿಗೆ. ಓಣಿ ಓಣಿಗೆ ಆರತಿ. ಮನೆ ಮನೆಗೆ ಪುಷ್ಪ. ಮೆರವಣಿಗೆ ಮರಳಿ ಮನೆಗೆ ಬರುವಾಗ ಸರಿರಾತ್ರಿ ವಿಜಯೀ ವೀರರಿಗೆಲ್ಲ ಅರಮನೆಯಲ್ಲಿಯೇ ಔತಣ ವಿಜಯೋನ್ಮಾದದಲ್ಲಿದ್ದ ಪಾಂಡ್ಯ ದೇಶದ ದೊರೆ ತಾನು ಪೂಜೆ ಮಾಡಿದ ಶಿವಾಲಯಕ್ಕೆ ಮರಳಿ ಬರಲೇ ಇಲ್ಲ. ಅರ್ಧಕ್ಕೆ ಬಿಟ್ಟ ಪರಮೇಶ್ವರನ ಪ್ರದೋಷ ಪೂಜೆಯನ್ನು ಪೂರ್ಣಮಾಡಲೇ ಇಲ್ಲ. ವಿಜಯದ ವೈಭವದಲ್ಲಿ ಎಲ್ಲ ಮರೆತು ಮಹಾರಾಜನು ಮೃಷ್ಟಾನ್ನ ಭೋಜನಮಾಡಿದ ಶಿವಪೂಜೆಯನ್ನು ಮರೆತು ಮಲಗಿ ಸುಖ ನಿದ್ರೆಮಾಡಿದ.

ಆ ಪಾಂಡ್ಯ ದೇಶದ ರಾಜನೇ ಜನ್ಮಾಂತರದಲ್ಲಿ ವಿದರ್ಭದೇಶದ ಸತ್ಯರಥ ಎಂಬ ಅರಸನಾಗಿ ಹುಟ್ಟಿ ಬಂದ. ಕಳೆದ ಜನ್ಮದಲ್ಲಿ ಶಿವಪೂಜೆಯನ್ನು ಅರ್ಧದಲ್ಲಿಯೇ ಮಾಡಿಬಿಟ್ಟು ಬಂದುದರಿಂದ ಮತ್ತೆ ಅಲ್ಲಿಗೇ ಹೋಗದೇ ಮೃಷ್ಟಾನ್ನ ಭೋಜನದಲ್ಲಿ ಮೈಮರೆತದ್ದರಿಂದ ಅವನು ಈ ಜನ್ಮದಲ್ಲಿ ಸುಖೀ ಜೀವನದ ಅರ್ಧದಲ್ಲಿಯೇ ಮರಣ ಹೊಂದಬೇಕಾಯಿತು. ಕಳೆದ ಜನ್ಮದಲ್ಲಿ ಅವನ ಪುತ್ರನಾಗಿ ಇದ್ದ ರಾಜಕುಮಾರನು ಈ ಜನ್ಮದಲ್ಲಿಯೂ ಅವನ ಮಗನಾಗಿ ತಾಯಿ ತಂದೆಗೆ ಸುಖಕ್ಕೆ ಎರವಾಗಬೇಕಾಯಿತು. ಈ ಜನ್ಮದ ದಾರಿದ್ರ್ಯ ದುರವಸ್ಥೆಗೆ ಜನ್ಮಾಂತರದ ಶಿವಪೂಜಾ ವಿಚ್ಛೇದನವೇ ಕಾರಣ. ಈ ಮಗುವಿನ ಈ ಜನ್ಮದ ತಾಯಿಯು ಹಿಂದಿನ ಜನ್ಮದಲ್ಲಿ ತನ್ನ ಸವತಿಯನ್ನು ಕೊಲ್ಲಿಸಿದ್ದಳು. ಆ ಪಾಪದಿಂದ ಈ ಜನ್ಮದಲ್ಲಿ ಅವಳು ಮೊಸಳೆಯ ಬಾಯಿಗೆ ಬಿದ್ದು ಮರಣವನ್ನು ಹೊಂದಬೇಕಾಯಿತು. ಆದುದರಿಂದ ಮಾನವರು ಮನುಷ್ಯ ದೇಹ ಬಂದಾಗ ಎಚ್ಚರಿಂದ ನಡೆಯಬೇಕು. ತಮ್ಮ ಧರ್ಮಪ್ರಜ್ಞೆಯನ್ನು ಜಾಗರೂಕವಾಗಿ ಇಟ್ಟುಕೊಳ್ಳಬೇಕು. ನನಗೆ ಸುಳ್ಳು ಮಾತನಾಡಿ ಗೊತ್ತಿಲ್ಲ. ನಾನು ನುಡಿಯುವುದು ಸತ್ಯ, ಹೇಳುವುದ ಹಿತ. ಉಪದೇಶಿಸುವುದು ಕಲ್ಯಾಣ. ಸರ್ವಶಾಸ್ತ್ರಗಳ ಸಾರವನ್ನು, ಉಪನಿಷತ್ತುಗಳ ಅಂತರಾರ್ಥವನ್ನು, ಎಲ್ಲ ಪುರಾಣಗಳ ಮಥಿತಾರ್ಥವನ್ನು ಒಂದೇ ಮಾತಿನಲ್ಲಿ ನಿಮಗೆ ಹೇಳುತ್ತೇನೆ ಕೇಳಿರಿ. ''ಈ ಪ್ರಪಂಚದಲ್ಲಿ ಪರಮೇಶ್ವರನ ಚರಣಾರವಿಂದಗಳ ಅನನ್ಯ ಭಾವದ ಸೇವೆಯೇ ಸಾರಾತ್ ಸಾರತರ. ಪ್ರದೋಷ ಕಾಲದಲ್ಲಿ ಅತ್ಯಂತ ಭಕ್ತಿಯುತರಾಗಿ ಈಶ್ವರನನ್ನು ಪೂಜಿಸುವವರು ಈ ಸಂಸಾರದಲ್ಲಿ ಮಡದಿ ಮಕ್ಕಳು ಹೊನ್ನು ರನ್ನ ಹಣ ಗುಣ ಸೌಭಾಗ್ಯ ಸಂಪದ ಎಲ್ಲವನ್ನೂ ಅತಿಶಯವಾಗಿ ಹೊಂದುವರು. ಬ್ರಾಹ್ಮಣಿಯೇ! ನಿನ್ನ ಔರಸ ಮಗನು ಕೂಡ ಹಿಂದಿನ ಜನ್ಮದಲ್ಲಿ ವಿದ್ವಾನ್ ಬ್ರಾಹ್ಮಣ. ಇವನು ತನ್ನ ಇಡೀ ಆಯುಷ್ಯವನ್ನೆಲ್ಲ ದಾನವನ್ನು ಕೊಳ್ಳುವುದರಲ್ಲಿಯೇ ಕಳೆದ. ಇನ್ನೊಬ್ಬರಿಗೆ ಕಾಸು

ಕೊಟ್ಟೇ ಗೊತ್ತಿಲ್ಲ ಈ ಕಂಜೂಷನಿಗೆ. ಆದುದರಿಂದ ಈ ನಿನ್ನ ಮಗನಿಗೂ ಕೂಡ ಈ ಜನ್ಮದಲ್ಲಿ ದಟ್ಟ ದಾರಿದ್ರ್ಯ ಇವನನ್ನು ಅಟ್ಟಿಸಿಕೊಂಡು ಬಂದಿದೆ. ಈ ದುಃಖ ದಾರಿದ್ರ್ಯ ದೌರ್ಭಾಗ್ಯಗಳು ನಿವಾರಣೆಯಾಗಬೇಕಾದರೆ ಕರುಣೆಯ ಕೈವಾರಿಯಾದ ಪಾರ್ವತೀ ಪರಮೇಶ್ವರರನ್ನೇ ಶರಣುಹೋಗಬೇಕು.

## ಪ್ರದೋಷ ವ್ರತದ ವಿಧಾನ, ದಾರಿದ್ರ್ಯನಾಶ, ಸಂಪತ್ ಪ್ರಾಪ್ತಿ.

**ಸೂತ:-** ಶಾಂಡಿಲ್ಯ ಮುನಿಗಳ ಈ ಮಾತನ್ನು ಕೇಳಿ ಆ ಬ್ರಾಹ್ಮಣ ವಿಧವೆಗೆ ಪರಮಾಶ್ಚರ್ಯ, ಮತ್ತೊಮ್ಮೆ ವಂದಿಸಿದಳು ಭಕ್ತಿಯಿಂದ ಆ ಮುನಿ ಮಾರ್ತಂಡರನ್ನು. ಪ್ರದೋಷ ಕಾಲದಲ್ಲಿ ಪರಮೇಶ್ವರ ಪೂಜೆಯ ವಿಧಿವಿಧಾನಗಳು ಹೀಗೆ ಏನು ಎಂಬುದನ್ನು ತಿಳಿಸಿರಿ ಎಂದು ಕೇಳಿದಳು.

**ಶಾಂಡಿಲ್ಯ:-** ಶುಕ್ಲಪಕ್ಷ ಹಾಗೂ ಕೃಷ್ಣಪಕ್ಷ ತ್ರಯೋದಶಿಯ ದಿನ ಭಕ್ತರು ಉಪವಾಸವಿರಬೇಕು. ಸೂರ್ಯಾಸ್ತಕ್ಕಿಂತ ಮೂರುಗಳಿಗೆ ಮುಂಚೆ ಸ್ನಾನಮಾಡಬೇಕು. ಬಿಳಿ ಬಟ್ಟೆವುಟ್ಟು ಸಂಧ್ಯಾವಂದನೆ ಜಪ ಮುಂತಾದ ನಿತ್ಯ ಕರ್ಮಾನುಷ್ಠಾನಗಳನ್ನು ಪೂರೈಸಬೇಕು. ಅನಂತರ ಶಾಸ್ತ್ರೋಕ್ತ ವಿಧಿಯಿಂದ ಶಿವಪೂಜೆಯನ್ನು ಪ್ರಾರಂಭಿಸಬೇಕು. ದೇವರ ಮೂರ್ತಿಯ ಎದುರಿನ ಭೂಮಿಯನ್ನು ಅದೇ ಆಗ ತುಂಬಿಕೊಂಡು ಬಂದ ಶ್ರಾದ್ಧ ಜಲದಿಂದ ಥಳಿಹಾಕಿ ಗೋಮಯದಿಂದ ಸಾರಿಸಿ ಮಂಡಲವನ್ನು ಮಾಡಬೇಕು. ಅದರ ಸುತ್ತಲೂ ಒಗೆದು ಶುದ್ಧ ಮಾಡಿದ ಮಡಿಬಟ್ಟೆಗಳಿಂದ ಆಚ್ಛಾದಿಸಬೇಕು. ಮೇಲಿನಿಂದ ನವಿಲುಗರಿಗಳ ಚಂದ್ರಾಕೃತಿಯ ಚಿಕ್ಕಚಪ್ಪರವನ್ನು ಮಾಡಿ ನಿಲ್ಲಿಸಿ ಅದನ್ನು ಬಗೆ ಬಗೆಯ ಹೂಗಳಿಂದಲೂ ತಳಿರು ಚಿಗುರು ಹಣ್ಣು ಕಾಯಿಗಳಿಂದಲೂ ಹಸಿರು ಮುರಿಯುವ ಹುಲ್ಲು ಗರಿಕೆಗಳಿಂದಲೂ ಬೇರೆ ಬೇರೆ ಪುಷ್ಪಾಂಕುರಗಳಿಂದಲೂ ಅಲಂಕರಿಸಬೇಕು. ಮಂಡಲದ ಮಧ್ಯ ಭಾಗದಲ್ಲಿ ಪಂಚರಂಗೀ ಪದ್ಮ ಪುಷ್ಪವನ್ನು ಬರೆದು ಅದರ ಮೇಲೆ ಉತ್ತಮ ಆಸನ ಬಿಡಿಸಬೇಕು. ಅದರ ಮೇಲೆ ತಾನು ಕುಳಿತುಕೊಂಡು ಭಕ್ತಿಭಾವದಿಂದ ಯುಕ್ತನಾಗಿ ಪೂಜಾ ಸಾಮಗ್ರಿಗಳನ್ನೆಲ್ಲ ತನ್ನ ಕೈಗೆ ನೆಲುಕುವಂತೆ ಇಟ್ಟುಕೊಳ್ಳಬೇಕು. ಅನಂತರ ಪವಿತ್ರ ಭಾವನೆಯಿಂದ ಶಾಸ್ತ್ರೋಕ್ತ ಮಂತ್ರಗಳಿಂದ ಪೀಠ ಪೂಜೆ ಅವರಣ ಪೂಜೆ ಮಂಟಪಪೂಜೆಗಳನ್ನು ಮಾಡಬೇಕು. ಅನಂತರ ಆತ್ಮ ಶುದ್ಧಿ, ಹಾಗೂ ಭೂತ ಶುದ್ಧಿ ಮಾಡಿಕೊಂಡು ಮೂರು ಬಾರಿ ಪ್ರಾಣಾಯಾಮ ಮಾಡಬೇಕು. ಬಳಿಕ ಬಿಂದುಯುಕ್ತ ಬೀಜಾಕ್ಷರಗಳ ದ್ವಾರಾ ವಿಧಿಪೂರ್ವಕವಾಗಿ ಮಾತೃಕಾನ್ಯಾಸ ಮಾಡಿ ದೇವಾತ ಧ್ಯಾನಗೈಯಬೇಕು. ಅನಂತರ ಪರಶಿವನನ್ನು ಧ್ಯಾನಮಾಡುತ್ತ ತನ್ನ ಹೃದಯಕಮಲದ ಕರ್ಣಿಕಾಗ್ರದಲ್ಲಿ ಕೋಟಿ ಚಂದ್ರರಿಗೆ ಸಮಾನಕಾಂತಿಯುಳ್ಳ ಉಮಾಪತಿಶಂಕರನು ಕುಳಿತಿದ್ದಾನೆ ಎಂದು ಚಿಂತಿಸಬೇಕು. ಶಿವನ ನೊಸಲಿನ ನಟ್ಟ ನಡುವೆ ಮೂರನೇ ಕಣ್ಣು, ಮಸ್ತಕದಲ್ಲಿ ಚಂದ್ರ ಮುಕುಟ, ಜಟಾಜೂಟದಲ್ಲಿ ಗಂಗೆ, ಕೊರಳಿನಲ್ಲಿ ಗರಳಲಾಂಛನ, ಕೈಗಳಲ್ಲಿ ಸರ್ಪ ಕಂಕಣ, ನಾಗಗಳ ಕೇಯೂರ ಮೈಮೇಲೆ ಹುಲಿದೊಗಲು, ಕುಳಿತುಕೊಳ್ಳಲು ರತ್ನ ಸಿಂಹಾಸನ, ಎಡಭಾಗದಲ್ಲಿ ಗಿರಿರಾಜ ನಂದಿನಿ. ಇಂಥ ಪಾರ್ವತೀ ಪರಮೇಶ್ವರರು ನನ್ನ ಎದೆಯಲ್ಲಿ ಅಧಿಷ್ಠಿತರಾಗಿದ್ದಾರೆ ಎಂದು ಭಾವಿಸಬೇಕು. ಈ ಪಾರ್ವತೀ ಪರಮೇಶ್ವರರಿಗೆ ಐದು ವೈದಿಕ ಮಂತ್ರಗಳಿಂದ ಗಂಧ, ಪುಷ್ಪ, ಅಕ್ಷತೆ, ಧೂಪ, ದೀಪ, ನೈವೇದ್ಯ, ಮಂತ್ರಪುಷ್ಪ ಮುಂತಾದ ಉಪಚಾರಗನ್ನು ಅರ್ಚಿಸಿ ಮಾನಸ ಪೂಜೆಯನ್ನು

ಮಾಡಬೇಕು. ಮತ್ತೆ ಮೂಲ ಮಂತ್ರದಿಂದ ಮೂರು ಸಲ ಪುಷ್ಪಾಂಜಲಿಯನ್ನು ಹೃದಯ ಪೀಠಸ್ಥರಾದ ಮಹಾದೇವ ದಂಪತಿಗಳಿಗೆ ಸಮರ್ಪಿಸಬೇಕು. ಅನಂತರ ಆ ಪಾರ್ವತೀ ಪರಮೇಶ್ವರರನ್ನು ತನ್ನ ಹೃದಯ ಪೀಠದಿಂದ ಎಬ್ಬಿಸಿ ತನ್ನ ಕಣ್ಣೆದುರಿಗಿರುವ ಮಂಟಪದಲ್ಲಿ ಮಂಡಿಸಿದ ಮೂರ್ತಿಗಳಲ್ಲಿ ಆವಾಹಿಸಬೇಕು. ಆವಾಹಿಸಿ ಬಾಹ್ಯ ಪೂಜೆಯನ್ನು ಆಚಮನ ಪ್ರಾಣಾಯಾಮ ಸಂಕಲ್ಪಪೂರ್ವಕವಾಗಿ ಪ್ರಾರಂಭಿಸಬೇಕು. ಕೈ ಜೋಡಿಸಿ ಶಿವನ ಧ್ಯಾನ ಮಾಡುತ್ತ ಆವಾಹನೆಗೈಯಬೇಕು- ''ಭಗವಾನ್ ಶಂಕರನೇ, ನೀನು ನನ್ನ ಮೇಲೆ ಪ್ರಸನ್ನನಾಗು ನನ್ನ ಪಾಪ, ದೌರ್ಭಾಗ್ಯ, ದಾರಿದ್ರ್ಯ, ಸಾಲ, ಸಾವು, ನೋವು, ಮುಂತಾದವುಗಳೆಲ್ಲವೂ ದೂರವಾಗಿ ಸೌಭಾಗ್ಯ ಪ್ರಾಪ್ತವಾಗುವಂತೆ ಅನುಗ್ರಹ ಮಾಡು. ನನ್ನನ್ನು ರಕ್ಷಿಸು. ನೀನು ಈಗ ಇಲ್ಲಿಗೆ ದಯಮಾಡಿಸು. ನಾನು ಮಾಡಲಿರುವ ಈ ಪೂಜೆಯನ್ನು ಇಲ್ಲಿ ಬಂದು ನಿಂತು ಪಾರ್ವತೀದೇವಿಯೊಂದಿಗೆ ನೀನು ಸ್ವೀಕರಿಸು.'' ಹೀಗೆ ಆವಾಹಿಸಿ ಪೂಜೆಮಾಡಬೇಕು. ರುದ್ರಸೂಕ್ತವನ್ನು ಪಠಿಸುತ್ತ ಪಂಚಾಮೃತದಿಂದ ಎಂದರೆ ಹಸುವಿನ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ, ಹಣ್ಣು ಇವುಗಳಿಂದ ಅಭಿಷೇಕ ಮಾಡಿ ಅನಂತರ ಅರ್ಘ್ಯ, ಪಾದ್ಯ, ಆಸನ ಮುಂತಾದ ಎಲ್ಲ ಪೂಜೋಪಚಾರಗಳನ್ನು ಸಮರ್ಪಿಸಬೇಕು. ಶುದ್ಧೋದಕದಿಂದ ಸ್ನಾನಮಾಡಿಸಿ ಯಜ್ಞೋಪವೀತ ವಸ್ತ್ರ, ಅಲಂಕಾರ, ಚಂದನ ಮುಂತಾದವುಗಳನ್ನು ದೇವರಿಗೆ ಏರಿಸಬೇಕು. ಬಳಿಕ ಬಿಲ್ವ, ಪಾರಿಜಾತ, ಕೆಂಪು, ಕಮಲ, ಕಣಗಿಲೆ, ಮಲ್ಲಿಗೆ, ತುಳಸಿ, ಜಾಜಿ, ಸಂಪಿಗೆ, ಕಡಹ, ಹೊಂಗೆ, ಕರವೀರ, ಅಶೋಕ, ದರ್ಭ, ಸೇವಂತಿಗೆ, ನಂದ್ಯಾವರ್ತ, ಬಕುಲ, ಗುಲಾಬಿ ಮುಂತಾದ ಹೂಗಳನ್ನು ಏರಿಸುತ್ತ ಪಾರ್ವತೀ ಪರಮೇಶ್ವರರಿಗೆ ಪುಷ್ಪಾರ್ಚನೆಯನ್ನು ಭಕ್ತಿಯಿಂದ ಮಾಡಬೇಕು. ಧೂಪ ದೀಪಗಳನ್ನು ಸಮರ್ಪಿಸಿದ ಬಳಿಕ ಕೈ ತೊಳೆದುಕೊಂಡು ಬಗೆಬಗೆಯ ತರಕಾರಿ ವ್ಯಂಜನ, ಪಕ್ವಾನ್ನ, ಮೃಷ್ಟಾನ್ನ, ಪಾಯಸ, ಹಾಲು, ಮೊಸರು, ಜೇನುತುಪ್ಪ, ನೀರು ಎಲ್ಲವನ್ನೂ ಮುಂದೆಯಿಟ್ಟು ಪರಮೇಶ್ವರನಿಗೆ ನೈವೇದ್ಯ ಸಮರ್ಪಣ ಮಾಡಬೇಕು. ಮೊಸರು ಜೇನುತುಪ್ಪ, ನೀರು ಬೆರೆಸಿ ಪಾಯಸ ಮಾಡಿ ಪ್ರಜ್ವಲಿತವಾದ ಯಜ್ಞಾಗ್ನಿಯಲ್ಲಿ ಆ ಖೀರಿನಿಂದ ಆಹುತಿಯನ್ನು ಹಾಕಬೇಕು. ಮತ್ತು ನೈವೇದ್ಯವನ್ನು ಸಮರ್ಪಿಸಬೇಕು.

ಮುಖ ಶುದ್ಧಿಗಾಗಿ ತಾಂಬೂಲ, ಧೂಪ, ಆರತಿ, ಛತ್ರ, ಚಾಮರ, ಕನ್ನಡಿ ಮುಂತಾದವುಗಳನ್ನೆಲ್ಲ ಮಂತ್ರೋಚ್ಚಾರ ಪೂರ್ವಕವಾಗಿ ಭಗವಂತನಿಗೆ ನಿವೇದಿಸಬೇಕು. ಇಷ್ಟೆಲ್ಲ ಮಾಡಲು ತನಗೆ ಶಕ್ತಿಯಿಲ್ಲದಿದ್ದರೆ, ಹಣದ ಕೊರತೆಯಿದ್ದರೆ, ತನ್ನ ಶಕ್ತ್ಯಾನುಸಾರ ಇದ್ದ ವಸ್ತುಗಳಿಂದಲೇ ಭಗವಂತನ ಪೂಜೆ ಮಾಡಬೇಕು. ಪರಮೇಶ್ವರನಿಗೆ ಭಕ್ತಿಯಿಂದ ಒಂದು ಪುಷ್ಪವನ್ನು ಕೊಟ್ಟರೂ ಸಾಕು ಸಂತುಷ್ಟನಾಗುತ್ತಾನೆ. ಇಷ್ಟಾರ್ಥಗಳನ್ನು ಪ್ರದಾನ ಮಾಡುತ್ತಾನೆ. ಅನಂತರ ಬೇರೆ ಬೇರೆ ಸ್ತೋತ್ರಗಳಿಂದ ಪರಮೇಶ್ವರನನ್ನು ಸ್ತುತಿಸಿ ಪ್ರದಕ್ಷಿಣೆ ಹಾಕಿ ಸಾಷ್ಟಾಂಗ ನಮಸ್ಕಾರ ಮಾಡಬೇಕು. ಅನಂತರ ವಿಧಿಪೂರ್ವಕವಾಗಿ ಮಹಾದೇವರ ಸ್ತೋತ್ರವನ್ನು ಮಾಡಬೇಕು.

ಜಯ ದೇವ ಜಗನ್ನಾಥ ಜಯ ಶಂಕರ ಶಾಶ್ವತ ।<br>
ಜಯ ಸರ್ವಸುರಾಧ್ಯಕ್ಷ ಜಯ ಸರ್ವಸುರಾರ್ಚಿತ ॥<br>
ಜಯ ಸರ್ವಗುಣಾತೀತ ಜಯ ಸರ್ವವರಪ್ರದ ।<br>
ಜಯ ನಿತ್ಯ ನಿರಾಧಾರ ಜಯ ವಿಶ್ವಂಭರಾವ್ಯಯ ॥<br>
ಜಯ ವಿಶ್ವೈಕವೇದ್ಯೇಶ ಜಯ ನಾಗೇಂದ್ರಭೂಷಣ ।<br>
ಜಯ ಗೌರೀಪತೇ ಶಂಭೋ ಜಯ ಚಂದ್ರಾರ್ಧಶೇಖರ ॥

ಜಯ ಕೋಟ್ಯರ್ಕಸುಕಾಶ ಜಯಾನಂತ ಗುಣಾಶ್ರಯ ।
ಜಯ ರುದ್ರ ವಿರೂಪಾಕ್ಷ ಜಯಾಚಿಂತ್ಯ ನಿರಂಜನ ॥
ಜಯ ನಾಥ ಕೃಪಾಸಿಂಧೋ ಜಯ ಭಕ್ತಾರ್ತಿ ಭಂಜನ ।
ಜಯ ದುಸ್ತರಸಂಸಾರ ಸಾಗರೋತ್ತಾರಣ ಪ್ರಭೋ ॥
ಪ್ರಸೀದ ಮೇ ಮಹಾದೇವ ಸಂಸಾರಾರ್ತಸ್ಯ ಖಿದ್ಯತಃ ।
ಸರ್ವ ಪಾಪಭಯಂ ಹೃತ್ವಾ ರಕ್ಷ ಮಾಂ ಪರಮೇಶ್ವರ ॥
ಮಹಾದಾರಿದ್ರ್ಯ ಮಗ್ನಸ್ಯ ಮಹಾಪಾಪಹತಸ್ಯ ಚ ।
ಮಹಾಶೋಕ ವಿನಷ್ಟಸ್ಯ ಮಹಾರೋಗಾತುರಸ್ಯ ಚ ॥
ಋಣಬಾರ ಪರೀತಸ್ಯ ದಹ್ಯಮಾನಸ್ಯ ಕರ್ಮಭಿಃ ।
ಗ್ರಹೈಃ ಪ್ರಪೀಡ್ಯಮಾನಸ್ಯ ಪ್ರಸೀದ ಮಮ ಶಂಕರ ॥

''ಜಗದೊಡೆಯನಾದ ಶಂಕರದೇವ! ನಿನಗೆ ಜಯವಾಗಲಿ. ನೀನು ಎಲ್ಲ ಸುರರ ಅಧ್ಯಕ್ಷ ಮತ್ತು ಅವರಿಂದ ಪೂಜಿತ ಎಲ್ಲರಿಗೂ ವರಗಳನ್ನು ನೀಡುವ ನೀನು ಎಲ್ಲ ಪ್ರಾಕೃತ ಗುಣಗಳನ್ನು ಮೀರಿ ನಿಂತಿರುವಿ. ನಿತ್ಯ ಸತ್ಯಸ್ವರೂಪಿಯಾದ ನಾಗಭೂಷಣನೇ, ಈ ವಿಶ್ವವನ್ನೆಲ್ಲ ನೀನು ಧರಿಸಿರುವಿ. ಆದರೆ ನಿನಗೆ ಬೇರೆ ಆಧಾರವಿಲ್ಲ. ನಾಶವೂ ಇಲ್ಲ. ಈ ಚರಾಚರ ಪ್ರಪಂಚವನ್ನೆಲ್ಲ ಸರಿಯಾಗಿ ತಿಳಿದು ನಿಯಮಿಸುವ ಗೌರೀಪತಿಯಾದ ಚಂದ್ರಶೇಖರನೇ, ನಿನಗೆ ಜೈಜೈಕಾರ. ಅನಂತಗುಣಗಳಿಗೆ ಆಶ್ರಯನಾದ ನಿನ್ನ ಕಾಂತಿ ಕೋಟಿ ಸೂರ್ಯರಿಗೆ ಸಮ, ದೋಷರಹಿತನೂ ಅಚಿಂತ್ಯಾದ್ಭುತ ಶಕ್ತಿಯುಳ್ಳವನೂ ಕೃಪಾಸಮುದ್ರನೂ, ಜಗನ್ನಾಥನೂ ಭಕ್ತರ ದುಃಖವನ್ನು ಕಳೆಯುವವನೂ ಆದ ವಿರೂಪಾಕ್ಷ ನಿನಗೆ ಗೆಲುವಾಗಲಿ. ದಾಟಲು ಅಶಕ್ಯವಾದ ಸಂಸಾರಸಾಗರದಲ್ಲಿ ಬಿದ್ದು ಒದ್ದಾಡುತ್ತಿರುವ ನನ್ನ ಪಾಪಗಳನ್ನೆಲ್ಲ ಕಳೆದುಬಿಡು. ಅಭಯ ನೀಡು. ನನ್ನನ್ನು ರಕ್ಷಣೆ ಮಾಡು. ಮಹತ್ತರವಾದ ಪಾಪಕರ್ಮಗಳ ಫಲವಾಗಿ ದಟ್ಟ ದಾರಿದ್ರ್ಯದಲ್ಲಿ ಮುಳುಗಿ, ರೋಗ, ರುಜಿನಗಳಿಂದ ಬಳಲಿ, ಸಾಲದ ಹೊರೆಯಿಂದ ಕುಸಿದು ಗ್ರಹಗಳ ಬಾಧೆಗೆ ಒಳಗಾಗಿ, ಮಾಡಿದ ದುಷ್ಕರ್ಮಗಳಿಂದ ದುಃಖಾಗ್ನಿಯಲ್ಲಿ ಬೇಯುತ್ತಿರುವ ನನ್ನ ಮೇಲೆ ಪ್ರಸನ್ನನಾಗು. ಶಂಕರನೇ, ನೀನು ನನ್ನ ಮೇಲೆ ದಯೆ ತೋರು.''

ಹೀಗೆ ದರಿದ್ರನಾದ ಮನುಷ್ಯನು ಆ ಮುಕ್ಕಣ್ಣನನ್ನು ಪ್ರತಿದಿನವೂ ಪ್ರದೋಷ ಕಾಲದಲ್ಲಿ ಪೂಜೆಯ ನಂತರ ಭಕ್ತಿಯಿಂದ ಪ್ರಾರ್ಥನೆ ಮಾಡಬೇಕು. ಇದರಿಂದ ಭಕ್ತರ ದುಃಖದಾರಿದ್ರ್ಯಗಳೆಲ್ಲವೂ ದೂರಾಗುವವು ಇದರಂತೆ ಧನಸಂಪನ್ನರಾದ ಸಿರಿವಂತರು ರಾಜಮಹಾರಾಜರೂ ಕೂಡ ಪ್ರದೋಷಕಾಲದಲ್ಲಿ ಆ ಭವಾನೀಪತಿಯನ್ನು ಭಕ್ತಿ ಉದ್ರೇಕದಿಂದ ಪೂಜಿಸಿ ಅನಂತರ ಹೀಗೆ ಪ್ರಾರ್ಥನೆಯನ್ನನು ಮಾಡಿಕೊಳ್ಳಬೇಕು- ''ಹರಹರ ಮಹಾದೇವ, ನಿನ್ನ ಅನುಗ್ರಹದಿಂದ ನನಗೆ ಈ ಜನ್ಮದಲ್ಲಿ ಸದಾ ಆನಂದವು ದೊರೆಯಲಿ. ನನ್ನ ಗ್ರಾಮದಲ್ಲಿ ಕಳ್ಳಕಾಕರು ಬರದೇ ಇರಲಿ. ಈ ಭೂಲೋಕದಲ್ಲಿ ಎಲ್ಲ ಜನರೂ ರೋಗ, ಅಕಾಲಮರಣ ಮೊದಲಾವುಗಳಲ್ಲದೆ ಶಾಂತಿ ಸಂತಸದ ಜೀವನವನ್ನು ನಡೆಸಲಿ. ಈ ನಮ್ಮ ಸಾಮ್ರಾಜ್ಯದಲ್ಲಿ ಎಲ್ಲೆಡೆಗೂ ಸುಖ ಸಾಮ್ರಾಜ್ಯವು ನೆಲೆಸಲಿ.''

ಹೀಗೆ ದೀನರು, ದರಿದ್ರರು, ದುಃಖಿತರು ಅದರಂತೆ ಧನಿಕರು ದೊರೆಗಳು, ಧುರೀಣರು, ಅಧಿಕಾರಿಗಳು ಎಲ್ಲರೂ ಪ್ರತಿದಿನವೂ ಪ್ರದೋಷಕಾಲದಲ್ಲಿ ವಿಶೇಷವಾಗಿ ಮಾಘ ಕೃಷ್ಣಪಕ್ಷ

ಶಿವರಾತ್ರಿ ದಿನದಂದು ಪರಮೇಶ್ವರನನ್ನು ಪೂಜಿಸಿ ಶ್ರದ್ಧೆಯಿಂದ ಪ್ರಾರ್ಥನೆಯನ್ನು ಸಲ್ಲಿಸಬೇಕು. ಶಿವಪೂಜೆ, ಶಿವಾರಾಧನೆಗಳನ್ನು ತಪ್ಪದೇ ಮಾಡಬೇಕು. ಶಿವಭಕ್ತರಿಗೆ ಇಷ್ಟಾ ಭೋಜನ ಮಾಡಿಸಿ, ದಕ್ಷಿಣೆ ಕೊಟ್ಟು ಸಂತೋಷ ಪಡಿಸಬೇಕು. ಶಿವಪೂಜೆಯು ಎಲ್ಲ ಮಹಾಪಾತಕ, ಉಪಪಾತಕಗಳನ್ನು ಸಾಮೂಹಿಕವಾಗಿ ನಾಶಮಾಡುವುದು. ಈ ಇಬ್ಬರೂ ಬಾಲಕರೂ ಹೀಗೆ ಮುಂದೆ ಪ್ರತಿದಿನವೂ ಪ್ರದೋಷ ಕಾಲದಲ್ಲಿ ಪೂಜೆಯನ್ನು ಮಾಡುತ್ತಲಿದ್ದರೆ ಒಂದು ವರ್ಷದಲ್ಲಿ ಅವರಿಗೆ ಉತ್ತಮವಾದ ಸಿದ್ಧಿಯು ಲಭಿಸುವುದು.

ಶಾಂಡಿಲ್ಯ ಮುನಿಗಳ ಈ ಮಾತನ್ನು ಕೇಳಿ ಆ ಬ್ರಾಹ್ಮಣವನಿತೆಯು ತನ್ನ ಇಬ್ಬರೂ ಬಾಲಕರೊಂದಿಗೆ ಆ ಮುನಿವರೇಣ್ಯರ ಚರಣಗಳಿಗೆ ತಲೆಬಾಗಿ ವಂದಿಸಿದಳು. ಮತ್ತು ಕೈ ಮುಗಿದು ಕೇಳಿಕೊಂಡಳು.

**ಬ್ರಾಹ್ಮಣ ಸ್ತ್ರೀ:-** "ಪೂಜನೀಯ ಮಹಾಮುನಿಗಳೇ, ಇಂದು ನಾನು ತಮ್ಮ ದರ್ಶನದಿಂದಲೇ ಕೃತಾರ್ಥಳು. ಇಂದಿನಿಂದ ಇದೋ ಈ ನನ್ನ ಎರಡೂ ಬಾಲಕರು ತಮ್ಮ ಚರಣಗಳಿಗೆ ಶರಣು. ಈ ಇಬ್ಬರೂ ಬಾಲಕರಲ್ಲಿ ನನ್ನ ಮಗನ ಹೆಸರು ಶುಚಿವ್ರತ. ಈ ರಾಜಕುಮಾನ ಹೆಸರು ಧರ್ಮಗುಪ್ತ. ಇಂದಿನಿಂದ ಇಬ್ಬರೂ ನಿಮ್ಮ ಪಾದದಾಸರು. ನಾವು ದಾರಿದ್ರ್ಯ ಸಮುದ್ರದ ಆಳದಲ್ಲಿಯೇ ಮುಳುಗಿದ್ದೇವೆ. ನಮ್ಮನ್ನು ಇನ್ನು ಮುಂದೆ ಉದ್ಧರಿಸುವ ಭಾರ ತಮ್ಮದು."

ಹೀಗೆ ತಮಗೆ ಶರಣುಬಂದ ಆ ಬ್ರಾಹ್ಮಣಿಯ ದೀನ ಪ್ರಾರ್ಥನೆಯನ್ನು ಮನ್ನಿಸಿದರು ಮಹಾಮುನಿ ಶಾಂಡಿಲ್ಯರು. ತಮ್ಮ ಮೃದಮಧುರವಾದ ವಾಣಿಯ ಅಮೃತಸಿಂಚನದಿಂದ ಆಶ್ವಾಸನೆ ನೀಡಿದರು ಆ ಅನಾಥೆಗೆ. ಅವಳ ಪ್ರಾರ್ಥನೆಯನ್ನು ಮನ್ನಿಸಿ ಇಬ್ಬರೂ ಬಾಲಕರಿಗೆ ಶಂಕರನನ್ನು ಆರಾಧಿಸುವ ಮಂತ್ರ ವಿದ್ಯೆಯನ್ನು ಉಪದೇಶ ಕೊಟ್ಟರು. ಆತ್ಮ ಶುದ್ಧಿ ಹಾಗೂ ವಾಕ್‌ಸಿದ್ಧಿ ಎರಡೂ ಕರಗತವಾಗಿರುವ ಆ ಮಹಾತ್ಮರಿಂದ ಶಿವೋಪಾಸನೆಯ ಮಂತ್ರವಿದ್ಯೆಯ ಉಪದೇಶವನ್ನು ಪಡೆದು ಧನ್ಯರಾದರು ಆ ಬ್ರಾಹ್ಮಣಿಯ ಇಬ್ಬರೂ ಕುಮಾರರು. ವಿದ್ಯಾಗುರುಗಳಾದ ಶಾಂಡಿಲ್ಯ ಮಹರ್ಷಿಗಳಿಗೂ ಪಡೆದ ತಾಯಿಗೂ ಭಕ್ತಿಯಿಂದ ವಂದಿಸಿದರು. ತಾವು ಕೈಕೊಳ್ಳಲು ಬಯಸಿದ ಶಿವಾರಾಧನೆಗೆ ಅನುಮತಿ ಕೇಳಿದರು. ತಾಯಿ ಗುರು ಇವರಿಬ್ಬರ ಸಮ್ಮತಿಯನ್ನೂ ಅನುಗ್ರಹ ಆಶೀರ್ವಾದವನ್ನೂ ಪಡೆದು ಶಿವಾರಾಧನೆಗೆಂದು ಅಲ್ಲಿಂದ ಹೊರಟರು. ಮುನಿವರ್ಯ ಶಾಂಡಿಲ್ಯರ ಉಪದೇಶ ಅವರಿಗೆ ವೇದವಾಕ್ಯ. ಅವರ ಆದೇಶದಂತೆ ಪ್ರತಿಯೊಂದು ಪ್ರದೋಷವ್ರತದ ದಿನದಂದು ಪಾರ್ವತೀವಲ್ಲಭನ ಆರಾಧನೆಯನ್ನು ಮಾಡತೊಗಿದರು. ಹೀಗೆ ಭಕ್ತಿಯಿಂದ ಶಿವಪೂಜೆ, ಶಿವಾರಾಧನೆ, ಶಿವೋಪಾಸನೆಗಳನ್ನು ಮಾಡುತ್ತಲಿರುವ ಆ ಕುಮಾರ ಚಾತುರ್ಮಾಸ್ಯ ವ್ರತವು ಯಥಾಸಾಂಗ ಸಮಾಪ್ತಿಯಾಯಿತು.

ಒಂದು ದಿನ ಆ ಬ್ರಾಹ್ಮಣಕುಮಾರನು ಒಬ್ಬನೇ ನದೀತೀರಕ್ಕೆ ಸ್ನಾನಕ್ಕೆ ತೆರಳಿದ್ದ. ಸ್ನಾನ ಮಾಡುವುದಕ್ಕಿಂತ ಮೊದಲು ನಿಸರ್ಗಸುಂದರವಾದ ನದೀತೀರದ ಪರಿಸರದಲ್ಲಿರುವ ಪುಲಿನ ಪ್ರದೇಶದಲ್ಲಿ ಅತ್ತಿತ್ತ ಓಡಾಡಿದ ಜಲಪ್ರವಾಹದ ಹೆದ್ದೆರಗಳ ಕೊರೆತದಿಂದ ಅಲ್ಲಿ ಒಂದೆಡೆ ಭೂಭಾಗವು ಪದರು ಬಿಟ್ಟಿತ್ತು. ಅದರ ಒಳಗೆ ಒಂದು ದೊಡ್ಡದಾದ ನಿಧಿ ತುಂಬಿದ ಕಲಶವು ಥಳಥಳ ಮಿಂಚುತ್ತಿತ್ತು. ಬ್ರಾಹ್ಮಣಕುಮಾರನಿಗೆ ಅದು ದೂರದಿಂದಲೇ ಕಣ್ಣಿಗೆ ಬಿತ್ತು. ನೆಲದ ಎದೆಯೊಳಗೆ ಮಣ್ಣಿನ ಮುಸುಕು ಸರಿಸಿ ಸೂರ್ಯಕಿರಣಗಳಿಂದ ಲಕಲಕಿಸುವ ಆ ಐಶ್ವರ್ಯದ ನಿಧಿಯನ್ನು ಕಂಡು ಪರಮ ಸಂತೋಷವಾಯಿತು. ಬ್ರಾಹ್ಮಣಕುಮಾರನು ಇದೊಂದು ದೇವತಾ

ಪ್ರಸಾದವೆಂದು ಬಗೆದು ಅದರ ಬಳಿಗೆ ತೆರಳಿದ ಆ ನಿಧಿಯ ಕಲಶವನ್ನು ತಲೆಯ ಮೇಲಿಟ್ಟು ಕೊಂಡು ಮನೆಗೆ ತಂದ. ತನ್ನ ತಾಯಿಯ ಎದುರು ಆ ನಿಧಿ ತುಂಬಿದ ಕೊಡವನ್ನು ಇಟ್ಟು ಹಿಗ್ಗಿನಿಂದ ಹೇಳಿದ- "ತಾಯೀ, ಇದನ್ನು ನೋಡು ಭಗವಂತನು ನನಗೆ ಈ ನಿಧಿಯನ್ನು ದೃಷ್ಟಿಗೋಚರ ಆಗುವಂತೆ ಮಾಡಿದ್ದಾನೆ. ಇದು ಅವನ ಪ್ರಸಾದಿಂದಲೇ ಪ್ರಾಪ್ತ ಎಂದು ನಾನು ಇದನ್ನು ನದೀತೀರದಿಂದ ಹೊತ್ತು ತಂದಿದ್ದೇನೆ.

**ಬ್ರಾಹ್ಮಣ ಸ್ತ್ರೀ:-** "ವತ್ಸ, ನಿನಗೆ ನಿಧಿ ದೊರೆತದ್ದು ಸಂತೋಷ. ಆದರೆ ನೀನು ಇದನ್ನು ಒಬ್ಬನೇ ತೆಗೆದುಕೊಳ್ಳಬೇಡ. ನಿನ್ನ ಸೋದರನಾದ ರಾಜಕುಮಾರನಿಗೂ ತೋರಿಸು. ನೀವಿಬ್ಬರೂ ಇದನ್ನು ಸರಿಯಾಗಿ ಹಂಚಿಕೊಳ್ಳಿ."

ತಾಯಿಯ ಅಪ್ಪಣೆಯನ್ನು ಕೇಳಿ ಆ ಬ್ರಾಹ್ಮಣಕುಮಾರ ರಾಜಕುಮಾರನನ್ನು ಕರೆತಂದ. ಅವನಿಗೆ ತಾನು ನದೀತಾಟಕದಿಂದ ಎತ್ತಿತಂದ ನಿಧಿಯನ್ನು ತೋರಿಸಿದ. ನಂತರ ಬ್ರಾಹ್ಮಣಿಯೂ ರಾಜಕುಮಾರನಿಗೆ. - "ನದೀತೀರದಲ್ಲಿ ದೊರಕಿದ ಒಂದು ದೊಡ್ಡ ಕೊಡ ತುಂಬ ಇರುವ ನಿಧಿಯನ್ನು ನೀವಿಬ್ಬರೂ ಸಮನಾಗಿ ಹಂಚಿಕೊಳ್ಳಿರಿ" ಎಂದು ಆಜ್ಞಾಪಿಸಿದಳು. ಅದಕ್ಕೆ ಬ್ರಾಹ್ಮಣಕುಮಾರನು ಸಂತೋಷದಿಂದ ಸಮ್ಮತಿಸಿದ. ಅದಕ್ಕೆ ರಾಜಕುಮಾರನು ಮಾತ್ರ ಸಮ್ಮತಿಸದೇ ಅಳುಕುತ್ತ ನುಡಿದ.

**ರಾಜಕುಮಾರ:-** ಅಮ್ಮಾ, ಈ ನಿಧಿಯು ನಿನ್ನ ಆ ಪುತ್ರನಿಗೆ ಅವನ ಪೂರ್ವಪುಣ್ಯ ದಿಂದಲೇ ದೊರಕಿದೆ. ಇದರಲ್ಲಿ ನನ್ನದೇನು ಅಧಿಕಾರ? ನಾನೇಕೆ ಇದರಲ್ಲಿ ಪಾಲು ಗೊಳಬೇಕು? ಅವನ ಪುಣ್ಯದಿಂದ ಲಭಿಸಿದುದನ್ನು ಅವನೇ ಭೋಗಿಸಲಿ. ಭಗವಾನ್ ಶಂಕರನಿಗೆ ಮನಸ್ಸು ಬಂದರೆ ನನ್ನ ಮೇಲೆಯೂ ಅವನು ಕೃಪೆಯನ್ನು ಮಾಡಬಹುದು.

ಹೀಗೆ ಹೇಳಿ ರಾಜಕುಮಾರನು ನಿಧಿಯಲ್ಲಿ ಯಾವ ಭಾಗವನ್ನೂ ಪರಿಗ್ರಹಿಸಲಿಲ್ಲ. ಇಬ್ಬರೂ ಕುಮಾರರ ಶಿವಾರಾಧನೆಯು ಯಥಾಪ್ರಕಾರ ನಡೆದಿತ್ತು. ಹಗಲಿರುಳು ಅವರಿಬ್ಬರೂ ಸರ್ವವಿಧದಿಂದಲೂ ಶಿವೋಪಾಸನೆಯನ್ನು ಏಕಾಗ್ರಚಿತ್ತದಿಂದ ಮಾಡುತ್ತಲೇ ಇದ್ದರು. ಹೀಗೆ ಒಂದು ವರ್ಷ ಕಳೆಯಿತು.

ಒಂದು ದಿನ ರಾಜಕುಮಾರನು ಆ ಬ್ರಾಹ್ಮಣ ಕುಮಾರನೊಂದಿಗೆ ಅರಣ್ಯದಲ್ಲಿ ದೇವರಪೂಜೆಗೆ ಹೂ ತುಳಸಿ ತರಲುಹೋಗಿದ್ದ ಆಗ ವಸಂತಕಾಲ. ಕಾನನದ ಕಾವಣದಲ್ಲಿ ಮರಬಳ್ಳಿಗಳೆಲ್ಲವೂ ಹೂತು ಕಾತು ಕಂಪಿಂಪು ಸೂಸುತ್ತಿದ್ದವು. ನೋಡಿದಲ್ಲೆಲ್ಲ ಬನದೆದೆಯಲ್ಲಿ ಚಿಗುರು ಹೊಗರು. ವನಾಂತರದಲ್ಲಿ ಎಲ್ಲೆಡೆಗೂ ಮರಿಕೋಗಿಲೆಗಳ ಪಂಚಮದ ಇಂಚರ. ಇಂಥ ನಿಸರ್ಗ ರಮಣೀಯ ತಾಣದಲ್ಲಿ ಆ ತರುಣ ಕುಮಾರರಿಬ್ಬರೂ ತುಸುದೂರ ತೆರಳಿದ ಬಳಿಕ ಅವರಿಗೆ ಒಂದು ಸುಂದರ ದೃಶ್ಯ ಕಣ್ಣಿಗೆ ಬಿದ್ದಿತು. ಪ್ರಕೃತಿ ಸೌಂದರ್ಯದ ಆ ರಮಣೀಯ ವನಾಂತರದಲ್ಲಿ ನೂರಾರು ಗಂಧರ್ವ ಕನ್ಯೆಯರು ಲೀಲಾವಿನೋದಗೈಯುತ್ತಿದ್ದರು. ಅತ್ತ ಕಡೆ ನೋಡಿದ ಕೂಡಲೇ ಬ್ರಾಹ್ಮಣ ಕುಮಾರನು ರಾಜಕುಮಾರನಿಗೆ ಹೇಳಿದ-

**ಬ್ರಾಹ್ಮಣಕುಮಾರ:-** "ಮಿತ್ರ, ನಾವು ಇಲ್ಲಿಂದಲೇ ಮನೆಗೆ ಮರಳೋಣ. ಇಲ್ಲಿಂದ ಮುಂದೆ ಹೋಗುವುದು ಸರಿಯಲ್ಲ. ಅಲ್ಲಿ ಲೀಲಾಲೋಲರಾದ ಅನೇಕ ಲಲನೆಯರು ವಿಹಾರ ವಿಲಾಸಲಾಲಸರಾಗಿ ಪರಸ್ಪರ ಕ್ರೀಡೆ ಆಡುತ್ತಿದ್ದಾರೆ. ವಿವೇಕಿಯಾದ ಪುರುಷರು ಯುವತಿಯರು ಬಳಿಗೆ ಹೋಗಬಾರದು. ಅಲ್ಲಿ ಖೇಲಾಲೀಲಾರತರಾದ ರಮಣೀಯರೆಲ್ಲರೂ ತರುಣಿಯರು.

ಚಂಚಲ ದೃಷ್ಟಿ ಮಾತ್ರದಿಂದಲೇ ಅವರು ಮರುಳು ಮಾಡಬಲ್ಲರು ಪುರುಷರನ್ನು ಅವರು ಮಧುರಮಾತುಗಳನ್ನು ಆಡಿ, ಕುಟಿಲ ಕಟಾಕ್ಷಗಳನ್ನು ಬೀರಿ, ಹವಳ ತುಟಿಗಳಲ್ಲಿ ಮಂದಹಾಸವನ್ನು ತೇಲಿಸಿ ಪುರುಷರನ್ನು ಮೋಹಗೊಳಿಸಲು ನಿಪುಣರು. ಆದ್ದರಿಂದ ನಮ್ಮಂಥ ಬ್ರಹ್ಮಚಾರಿಗಳು ಅಲ್ಲಿ ಹೋಗುವುದು ಉಚಿತವಲ್ಲ ಅವರೊಡನೆ ಮಾತನಾಡುವುದು ಸರಿಯಲ್ಲ'' ಹೀಗೆ ಹೇಳಿ ಬ್ರಾಹ್ಮಣಕುಮಾರನು ಅಲ್ಲಿಂದಲೇ ಹಿಂದಿರುಗಿ ಬಿಟ್ಟನು. ಆದರೆ ರಾಜಕುಮಾರನು ಮಾತ್ರ ಮಿತ್ರನ ಮಾತಿಗೆ ಕಿವಿಗೊಡಲಿಲ್ಲ. ಚೈತ್ರದ ಚೆಲುವು ಚೆಲ್ಲುವರಿದ ಆ ವನಪ್ರಾಂತದಲ್ಲಿ ಕುತೂಹಲದಿಂದ ಮುಂದುವರೆದ ಆ ರಾಜಕುಮಾರ. ಅಲ್ಲಿ ಆ ಗಂಧರ್ವಕನ್ಯೆಯರು ಸ್ವಚ್ಛಂದವಾಗಿ ಆಟವಾಡುತ್ತಲಿದ್ದರು. ಅವರಲ್ಲಿ ಓರ್ವ ಅಪ್ಸರೆಯು ರಾಜಕುಮಾರನ ಸುಂದರವಾದ ಶರೀರಕಾಂತಿಯನ್ನು ಕಂಡು ಮುಗ್ಧಳಾದಳು. ತನ್ನ ಗೆಳತಿಯರಿಗೆ ಹೇಳಿದಳು.

**ಗಂಧರ್ವ ಕನ್ಯೆ:-** ಸಖಿಯರೇ, ಇಲ್ಲಿಂದ ತುಸು ದೂರದಲ್ಲಿ ಒಂದು ನಿಬಿಡವಾದ ವನವು ಇದೆ ಅಲ್ಲಿ ಸಂಪಿಗೆ, ಅಶೋಕ, ಬಕುಲ, ಪುನ್ನಾಗ, ಮುಂತಾದ ಅನೇಕ ಹೂಗಳು ಬಿದ್ದು ನಿಂತಿವೆ. ಇಲ್ಲಿಯವರೆಗೂ ಸೂಸಿ ಬರುತ್ತಿದ್ದ ಅವುಗಳ ಕಂಪಿಂಪು, ಆ ಎಲ್ಲ ಹೂಗಳನ್ನು ಆಯ್ದು ಕೊಯ್ದು ಸಂಗ್ರಹಿಸಿ ತೆಗೆದುಕೊಂಡು ಬನ್ನಿರಿ. ಅಲ್ಲಿಯವರೆಗೆ ನಾನು ಇಲ್ಲಿಯೇ ಕುಳಿತಿರುತ್ತೇನೆ.

ಆ ಗಂಧರ್ವಕನ್ಯೆಯ ಆದೇಶದಂತೆ ಸಖಿಯರೆಲ್ಲರೂ ಮುಂದಿನ ವನಾಂತರಕ್ಕೆ ತೆರಳಿದರು. ಅವರು ಹೋದಬಳಿಕ ಆ ಬಾಲೆಯು ರಾಜಕುಮಾರನತ್ತ ತನ್ನ ದೃಷ್ಟಿಯನ್ನು ಹೊರಳಿಸಿದಳು. ರಾಜಕುಮಾರನು ಎವೆ ಪಿಳುಕಿಸದೇ ಗಂಧರ್ವ ಕುವರಿಯನ್ನೇ ನಿರುಕಿಸುತ್ತಿದ್ದ. ಅವನ ದೃಷ್ಟಿ ತೆಗೆಯದೇ ನೋಡುತ್ತ ನಿಂತ ಆ ಯುವಕನನ್ನು ಕಂಡು ಅವಳು ನಾಚಿ ನೀರಾದಳು ಅವನ ದೃಷ್ಟಿಪಾತವನ್ನು ತಪ್ಪಿಸಲಿಕ್ಕಾಗಿ ಅಲ್ಲಿಂದ ಎದ್ದು ಆಚೀಚೆ ಹೋಗಿ ಪೇಲವ ಪಲ್ಲವಗಳನ್ನು ಆಯ್ದುಕೊಂಡು ಬಂದಳು. ಚಂದವಾದ ಹೊಂದಳಿರನ್ನು ತೆಗೆದುಕೊಂಡು ಬಂದು ಒಂದು ಗಿಡದ ನೆರಳಿನಲಿನಲ್ಲಿ ಹಾಸಿ ಆಸನವನ್ನು ಅಣಿಗೊಳಿಸಿದಳು. ಮತ್ತು ಬಾಗಿ ಬಳುಕುತ್ತ ವೈಯಾರದಿಂದ ನುಡಿದಳು.

**ಗಂಧರ್ವಕನ್ಯೆ:-** ತಾವರೆಕಣ್ಣಿನ ತರುಣ! ನೀನು ಯಾರು? ಎಲ್ಲಿಂದ ಬಂದೆ? ನಿಮ್ಮ ತಂದೆಯ ಹೆಸರು ಏನು? ನಿನ್ನ ದೇಶ ಯಾವುದು?

**ರಾಜಕುಮಾರ:-** ನಾನು ವಿದರ್ಭದೇಶದ ರಾಜಕುಮಾರ. ನನ್ನ ಎಳಮೆಯಲ್ಲಿಯೇ ಮಡಿದರು ನನ್ನ ತಾಯಿ ತಂದೆಗಳು. ವೈರಿ ರಾಜರು ಅಪಹರಿಸಿದರು ನಮ್ಮ ಸಾಮ್ರಾಜ್ಯವನ್ನು. ನಾನು ಈಗ ಬೇರೆಯವರ ಮನೆಯಲ್ಲಿ ಬದುಕನ್ನು ನೂಕುತ್ತಲಿದ್ದೇನೆ. ಆದರೆ ಸುಂದರಿ, ನೀನು ಯಾರು? ಈ ಗಿರಿಗರ್ಭದಲ್ಲಿ ನಿಮ್ಮಂಥ ತರಳೆಯರಿಗೆ ಏನು ಕೆಲಸ? ನಿಮ್ಮ ಹಡೆದ ತಾಯಿ ಯಾರು? ಪಡೆದ ತಂದ ಯಾರು? ಜನಿಸಿದ ಕುಲ ಯಾವುದು? ನೆಲಿಸಿದ ಊರು ಯಾವುದು?

**ಗಂಧರ್ವಕನ್ಯೆ:-** ರಾಜಕುಮಾರ, ನನ್ನ ತಂದೆ ಓರ್ವ ಗಂಧರ್ವ. ದ್ರವಿಕ ಎಂದು ಅವನ ಹೆಸರು. ಅಂಶುಮತಿ ಎಂದು ನನ್ನನ್ನು ಕರೆಯುತ್ತಾರೆ. ನನ್ನ ಸಖಿಯರನ್ನೆಲ್ಲ ಆಚೆಯ ಪುಷ್ಪವನಕ್ಕೆ ಕಳಿಸಿ ನಾನು ಇಲ್ಲಿ ಏಕಾಕಿನಿಯಾಗಿ ಕುಳಿತಿದ್ದೇನೆ. ನಿನಗೆ ಏನು ಬೇಕು ಎನ್ನುವದನ್ನು ನಿನ್ನ ಕಣ್ಣುಗಳು ಹೇಳುತ್ತವೆ. ನಿನ್ನ ಕಣ್ಣಿನ ಭಾಷೆಯನ್ನೂ ಹೃದಯದ ಆಶೆಯನ್ನೂ ನಾನು ಚೆನ್ನಾಗಿ ಬಲ್ಲೆ. ನನ್ನದೂ ನಿನ್ನ ಪಾಡೇ ನಿನ್ನನ್ನು ಕಂಡಾಗಿನಿಂದ ನಿನ್ನ ರೂಪಕ್ಕೆ ನನ್ನ ಮನಸ್ಸು ಮಾರುಹೋಗಿದೆ. ಅದಕ್ಕಾಗಿಯೇ ಎಂದರೆ ನಿನ್ನನ್ನು ಏಕಾಂತದಲ್ಲಿ ಸಂಧಿಸಲು ನನ್ನ ಪ್ರಾಣ ಸಖಿಯರನ್ನು ವನಾಂತರಕ್ಕೆ ಅಟ್ಟಿದ್ದೇನೆ. ನೀನು ನನ್ನವನಾಗಬೇಕು. ನಾನು ನಿನ್ನವಳಾಗಬೇಕು. ನಮ್ಮ ಪ್ರೀತಿಗೆ ಎಂದೂ ಭಂಗ ಬರಬಾರದು. ಒಪ್ಪಿಗೆಯಷ್ಟೆ!

ಗಂಧರ್ವಕುವರಿಯ ಈ ಪ್ರೇಮಭಿಕ್ಷೆ ರಾಜಕುಮಾರನಿಗೆ ಆಪ್ಯಾಯನ. ಅವನು ಮನದಲ್ಲಿ ಬಯಸಿದ್ದನ್ನು ಬಾಯಿಂದ ಹೇಳದಿದ್ದರೂ ಗಂಧರ್ವಕನ್ಯೆಯು ತಾನಾಗಿ ತಿಳಿದು ನೀಡಿದ್ದಳು. ಅವನಿಗೆ ಧನ್ಯತೆ ಎನಿಸಿತು. ತುಟಿಯ ಮಂದಹಾಸ, ಕಣ್ಣಿನಲ್ಲಿಯ ಮಿಂಚು, ಮುಖದಲ್ಲಿಯ ಉಲ್ಲಾಸ, ಅವನ ಸಂಪೂರ್ಣ ಸಮ್ಮತಿಯನ್ನು ಸಾರಿದವು. ಕೂಡಲೇ ಧಿಟ್ಟೆಯಾದ ಆ ಗಂಧರ್ವಕನ್ಯೆಯು ತನ್ನ ಕೊರಳೊಳಗಿರುವ ಭಾರೀ ಬೆಲೆಯುಳ್ಳ ಮುತ್ತಿನ ಹಾರವನ್ನು ತನ್ನ ಪ್ರೇಮದ ಕಾಣಿಕೆಯೆಂದು ರಾಜಕುಮಾರನಿಗೆ ನೀಡಿದಳು. ಕಾಂತಿಯ ಕಿರಣಗಳನ್ನು ಎಲ್ಲೆಡೆಗೂ ಚೆಲ್ಲುತ್ತಲಿದ್ದ ಆ ಮುತ್ತಿನ ಮಾಲೆಯನ್ನು ನೋಡಿ ಒಂದು ಕ್ಷಣ ಅಪ್ರತಿಭನಾದ ರಾಜಕುವರ. ಸಂಕೋಚದಿಂದಲೇ ಕೇಳಿದ. ''ಚಿಗುರುಗಂಗಳ ಚಲವಿಯೇ! ಮೊದಲು ನಾನು ಹೇಳುವ ಮಾತನ್ನು ಕೇಳು ನಾನು ಹುಟ್ಟಿನಿಂದ ಮಾತ್ರ ರಾಜಕುಮಾರ ಇಂದು ದಟ್ಟದರಿದ್ರ. ನಿನ್ನಂಥ ಗಂಧರ್ವಕುವರಿಯು ಈ ನಿರ್ಭಾಗ್ಯನ ಕೈ ಹಿಡಿಯಲು ಏಕೆ ತವಕಿಸುವೆ? ನೀನೇನು ಮೂರ್ಖಳೇ? ಏತಕ್ಕಾಗಿ ತಂದೆಯ ಆಜ್ಞೆಯನ್ನು ಮೀರಿ ರಾಜ್ಯಹೀನನೂ, ಅಧಿಕಾರ ರಹಿತನೂ ಆಗಿ ಐಶ್ವರ್ಯ ವಂಚಿತನಾದ ನನ್ನನ್ನು ವರಿಸುವಿ? ಮತ್ತೊಮ್ಮೆ ವಿಚಾರಿಸಿ ನೋಡು. ಈ ಮುತ್ತಿನಹಾರ ನಿನ್ನ ಬಳಿಯಲ್ಲಿಯೇ ಇರಲಿ.

**ಗಂಧರ್ವಕನ್ಯೆ:-** ಪ್ರಿಯಕರ, ನೀನು ಹೇಳುವುದು ಸರಿ. ನಾನು ನಮ್ಮ ತಂದೆಯ ಆಜ್ಞೆಗೆ ವಿರುದ್ಧವಾಗಿ ವರ್ತಿಸುವುದಿಲ್ಲ. ಈಗ ನೀನು ನಿಮ್ಮ ಮನೆಗೆ ಹೋಗು. ನಾಡದು ಮುಂಜಾವಿನಲ್ಲಿ ಮತ್ತೆ ಇದೇ ಸ್ಥಳಕ್ಕೆ ಬಾ. ನಿನ್ನ ಬಳಿ ತುಸು ಕೆಲಸವಿದೆ.

ಇಷ್ಟರಲ್ಲಿ ಅವಳ ಸಖಿಯರು ಹೂಗಳನ್ನು ಹರಿದುಕೊಂಡು ಅಲ್ಲಿಗೆ ಬಂದರು. ಗಂಧರ್ವ ಕನ್ಯೆಯು ಮತ್ತೊಮ್ಮೆ ರಾಜಕುಮಾನ ಕಡೆಗೆ ಕುಡಿನೋಟವನ್ನು ಎಸೆದು ಗೆಳತಿಯರೊಂದಿಗೆ ಅಲ್ಲಿಂದ ತೆರಳಿದಳು. ಇತ್ತ ರಾಜಕುಮಾರನು ಅಲ್ಲಿಂದ ಎದ್ದು ಬ್ರಾಹ್ಮಣ ಕುಮಾರನು ಇದ್ದಲ್ಲಿಗೆ ಬಂದ. ಸಂತಸದಿಂದ ಅವನ ಮುಖ ಉತ್ಪುಲ್ಲಕಲ್ಹಾರವಾಗಿತ್ತು. ಬ್ರಾಹ್ಮಣಕುಮಾರನಿಗೆ ನಡೆದ ಸಮಾಚಾರವನ್ನೆಲ್ಲ ತಿಳಿಸಿದ. ಇಬ್ಬರೂ ಕೂಡಿ ಮನೆಗೆ ಬಂದರು. ತನ್ನ ತಾಯಿಯ ಎದುರು ರಾಜಕುಮಾರ ಈ ಎಲ್ಲ ಸಮಾಚಾರವನ್ನು ಅರುಹಿದ. ಅಂದು ಹಾಗೂ ಮರುದಿನ ಅವನು ಹೇಗೋ ಆ ಗಂಧರ್ವ ರಾಜಕುಮಾರಿಯನ್ನು ನೆನೆಯುತ್ತಲೇ ಕಾಲಕಳೆದ. ನಿರ್ದಿಷ್ಟ ಸಮಯಕ್ಕೆ ಬ್ರಾಹ್ಮಣಕುಮಾರನೊಂದಿಗೆ ರಾಜಕುಮಾರ ಅಲ್ಲಿಗೆ ಐತಂದ. ಅಲ್ಲಿ ಗಂಧರ್ವರಾಜನಾದ ದ್ರವಿಕ ತನ್ನ ಕನ್ಯೆಯೊಂದಿಗೆ ನಿಂತುಕೊಂಡಿದ್ದ. ಅವನು ಈ ಇಬ್ಬರೂ ಕುಮಾರರಿಗೆ ಆಸನವಿತ್ತು ಉಪಚರಿಸಿದ. ಮತ್ತು ಆದರದಿಂದ ನುಡಿದ.

**ದ್ರವಿಕ:-** ವಿದರ್ಭ ರಾಜಕುಮಾರ, ನಾನು ನಿನ್ನೆ ಕೈಲಾಸ ಪರ್ವತಕ್ಕೆ ಹೋಗಿದ್ದೆ. ಪಾರ್ವತೀ ಪರಮೇಶ್ವರರ ದರ್ಶನವನ್ನು ತೆಗೆದುಕೊಂಡೆ. ನನ್ನ ಉಪಾಸ್ಯದೇವನಾದ ಮಹಾದೇವ ನಿಜವಾಗಿಯು ಕರುಣಾಮೃತದ ಒಂದು ಹೆಗ್ಗಡಲು. ನಾನು ಅಲ್ಲಿಗೆ ಹೋದಾಗ ಆ ಪ್ರಭು ನನ್ನನ್ನು ತನ್ನ ಹತ್ತಿರ ಬರಮಾಡಿಕೊಂಡ ನನ್ನ ಕಿವಿಯಲ್ಲಿ ಅಮೃತವನ್ನು ಎರೆದ.

**ಮಹಾದೇವ:-** ''ದ್ರವಿಕ ಭೂಲೋಕದಲ್ಲಿ ಈಗ ಧರ್ಮಗುಪ್ತ ಎಂಬ ರಾಜಕುಮಾರನು ಇರುತ್ತಾನೆ. ಈಗ ಅವನು ನಿಜವಾಗಿಯೂ ಗುಪ್ತನೇ ಆದಂತೆ ಇದ್ದಾನೆ. ಅವನ ರಾಜ್ಯವನ್ನು ವೈರಿಗಳು ಕಿತ್ತುಕೊಂಡರು ಹಿತಶತ್ರುಗಳೇ ಅವನ ಐಶ್ವರ್ಯವನ್ನೆಲ್ಲ ದೋಚಿದರು. ಈಗ ಅವನು ನಿಶ್ಕಿಂಚನ ಕಡುಬಡವ. ಆದರೆ ನನ್ನ ಏಕಾಂತಭಕ್ತ. ಸರ್ವದಾ ಶಿವರಾಧನೆಯಲ್ಲಿಯೇ ತಲ್ಲೀನ. ಆದುದರಿಂದ ಅವನಿಗೆ ನೀನು ಈಗ ಸಹಾಯಮಾಡು. ಬಹುಬೇಗನೇ ಅವನು ತನ್ನ ಪರಾಕ್ರಮದಿಂದ ವೈರಿಗಳನ್ನೆಲ್ಲ ಓಡಿಸಿ ಸಿಂಹಾಸನರೂಢನು ಆಗಲಿರುವನು.''

ಮಹಾದೇವರು ಹೀಗೆ ಆಜ್ಞೆಯನ್ನು ಮಾಡಿದ ಬಳಿಕ ನಾನು ಕೈಲಾಸದಿಂದ ಮರಳಿ ಮನೆಗೆ ಬಂದೆ. ಮನೆಯಲ್ಲಿ ನನ್ನ ಮಗಳು ನಿನ್ನನ್ನು ವರಿಸಬೇಕೆಂದು ನಿರ್ಧರಿಸಿ ನನ್ನ ದಾರಿ ಕಾಯುತ್ತಲಿದ್ದಳು. ಇವೆಲ್ಲವೂ ಆ ಶಿವನ ಪ್ರೇರಣೆಯಿಂದಲೇ ಒದಗಿ ಬಂದಿದೆ. ನಿನ್ನನ್ನು ಮನಸ್ಸಿನಿಂದಲೇ ವರಿಸಿದ ಈ ನನ್ನ ಮಗಳಾದ ಅಂಶುಮತಿಯನ್ನು ನಿನಗೆ ಮದುವೆ ಮಾಡಿ ಕೊಡುತ್ತೇನೆ. ಶಿವನ ಆಜ್ಞೆಯಿಂದ ನಿನ್ನ ವೈರಿಗಳನ್ನೆಲ್ಲ ಗೆದ್ದು ನಿನ್ನನ್ನು ರಾಜ್ಯದ ಮೇಲೆ ಕೂಡಿಸುತ್ತೇನೆ. ನೀನು ಪಟ್ಟಾಭಿಷಕ್ತನಾಗಿ ಈ ನಿನ್ನ ಧರ್ಮಪತ್ನಿಯೊಂದಿಗೆ ಹತ್ತು ಸಾವಿರ ವರ್ಷ ಚಕ್ರವರ್ತಿಯಾಗಿ ಭೂಮಂಡಲದಲ್ಲಿ ಧರ್ಮಶಾಸನಗೈದು ಮುಂದೆ ಶಿವಲೋಕವನ್ನು ಪಡೆಯುವಿ. ಹೀಗೆ ಹೇಳಿ ಆ ಗಂಧರ್ವರಾಜನು ವಿದರ್ಭ ರಾಜಕುಮಾರನೊಂದಿಗೆ ಅಂಶುಮತಿಯ ವಿವಾಹವನ್ನು ಒಳ್ಳೆ ವೈಭವದಿಂದ ನೇರವೇರಿಸಿದನು. ವರದಕ್ಷಿಣೆ ಲೋಪವಾಗಿ ಅಸಂಖ್ಯ ರತ್ನಗಳನ್ನೂ, ಚಂದ್ರನಂತೆ ಚಮಕಿಸುವ ಚೂಡಾಮಣಿಯನ್ನೂ ಥಳಥಳಿಸುವ ಮುತ್ತಿನ ಹಾರಗಳನ್ನೂ ಅನೇಕಾನೇಕ ಬಟ್ಟೆ, ಬಂಗಾರ, ಭೂಷಣ, ಅಲಂಕಾರಗಳನ್ನೂ ನೀಡಿದನು. ಹತ್ತು ಸಾವಿರ ಆನೆ, ಒಂದು ಲಕ್ಷ ಕುದುರೆ, ಒಂದು ದಿವ್ಯ ರಥ, ಸಾವಿರಾರು ಶಸ್ತ್ರಾಸ್ತ್ರಗಳು ಬಂಗಾರದ ಅಭೇದ್ಯ ಕವಚ ಹಾಗೂ ವೈರಿಗಳನ್ನು ಸಂಹಾರಮಾಡುವ ಶಕ್ತ್ಯಾಯುಧ ಇವುಗಳನ್ನು ಸಮರ್ಪಿಸಿದನು. ಮಗಳ ಜೊತೆ ಐದುಸಾವಿರ ದಾಸಿಯರನ್ನು ಪುತ್ರಿಯ ಸೇವೆಗೆಂದು ಕಳಿಸಿಕೊಟ್ಟನು. ಹೀಗೆ ಆ ರಾಜಕುಮಾರನು ಅಪರಂಪಾರ ಐಶ್ವರ್ಯವನ್ನೂ ಅಧಿಕಾರವನ್ನೂ ಸ್ಥಾನಮಾನವನ್ನೂ ಒಮ್ಮೆ ಪಡೆದು ಧರ್ಮಪತ್ನಿಯೊಂದಿಗೆ ಪ್ರೀತಿಪ್ರಸನ್ನ ನಾದನು. ಮಗಳ ಮದುವೆಯನ್ನು ಮಾಡಿ ದ್ರವಿಕ ಗಂಧರ್ವನು ತನ್ನ ಎಲ್ಲ ಪರಿವಾರದೊಂದಿಗೆ ಸ್ವರ್ಗಲೋಕಕ್ಕೆ ತೆರಳಿದನು. ಮದುವೆಯಾದ ಬಳಿಕ ಧರ್ಮಗುಪ್ತನು ಗಂಧರ್ವ ಸೇನೆಯೊಂದಿಗೆ ತನ್ನ ರಾಜಧಾನಿಯ ಕಡೆಗೆ ನಡೆದನು. ಅಲ್ಲಿ ಬಹುಕಾಲದಿಂದ ಬೀಡು ಬಿಟ್ಟ ವೈರಿರಾಜರೆಲ್ಲರನ್ನೂ ಸಮರಾಂಗಣದಲ್ಲಿ ಸೋಲಿಸಿ ಹೊಡೆದು ಓಡಿಸಿದನು. ಆಗ ಬ್ರಾಹ್ಮಣರೂ, ಮಂತ್ರಿಗಳೂ ಕೂಡಿ ಧರ್ಮಗುಪ್ತನಿಗೆ ವಿದರ್ಭ ಸಾಮ್ರಾಜ್ಯದಲ್ಲಿ ಪಟ್ಟಾಭೀಷೇಕ ಮಾಡಿದರು. ರಾಜಕುಮಾರನು ಅಂಶುಮತಿಯೊಂದಿಗೆ ವಿದರ್ಭದೇಶದ ರತ್ನ ಸಿಂಹಾಸನವನ್ನು ಆರೋಹಣಮಾಡಿ ಪ್ರಜೆಗಳನ್ನೆಲ್ಲ ತನ್ನ ಮಕ್ಕಳಂತೆ ಪಾಲನೆ ಮಾಡಿದನು. ಹೀಗೆ ಭಗವಾನ್ ಶ್ರೀ ಪಾರ್ವತೀಪತಿಯ ಆರಾಧನೆಯಿಂದ ಧರ್ಮಗುಪ್ತನು ವಿದರ್ಭದೇಶದ ದೊರೆ ಆದನು. ಇದರಂತೆ ಪ್ರದೋಷ ದಿನದಂದು ಪ್ರದೋಷ ಕಾಲದಲ್ಲಿ ಭಕ್ತಿಯಿಂದ ಗಿರಿಜಾಪತಿಯನ್ನು ಆರಾಧನೆ ಮಾಡಿದರೆ ಮನೋಭೀಷ್ಟವಾದ ಫಲವನ್ನು ಪಡೆಯುವರು ಮಾನವರು.

**ಸೂತ**:- ಪ್ರದೋಷ ವ್ರತದ ಮಹಾತ್ಮೆ ಅತ್ಯದ್ಭುತ. ಈ ವ್ರತದ ದಿನದಂದು ಶಿವಪೂಜೆಯ ನಂತರ ಇದನ್ನು ಕೇಳಬೇಕು ಏಕಾಗ್ರಚಿತ್ತದಿಂದ. ಪಠಿಸಬೇಕು ಭಕ್ತಿಯಿಂದ. ಇದರ ಪಠಣ ಶ್ರವಣಮಾಡಿದವರು ನೂರುಜನ್ಮಗಳವರೆಗೆ ದರಿದ್ರರಾಗುವುದಿಲ್ಲ. ಕೊನೆಗೆ ಅವರಿಗೆ ಕಟ್ಟಿಟ್ಟದ್ದು ಗೌರೀಪತಿಯ ದಿವ್ಯಧಾಮ.

## ಸೋಮವಾರ ವ್ರತದ ಪ್ರಭಾವದಿಂದ ಸೀಮಂತಿನಿಗೆ ಮರಳಿ ಸೌಭಾಗ್ಯ ಪ್ರಾಪ್ತಿ.

**ಸೂತ**:- ಮಾನವನು ವಿರಕ್ತನಾಗಿ ಆನಂದಮಯನಾದ. ಅನಾದಿ ಶಾಂತ ನಿರ್ವಿಕಲ್ಪ ಪರತತ್ವಭೂತನಾದ ಶಿವನಲ್ಲಿ ಫಲಾಪೇಕ್ಷೆ ಇಲ್ಲದೇ ಭಕ್ತಿಯನ್ನು ಇಡಬೇಕು. ಅದರಿಂದ ಮೋಕ್ಷಪ್ರಾಪ್ತಿ ಸುಲಭ. ಪ್ರದೋಷಯುಕ್ತವಾದ ಸೋಮವಾರ ದಿನ ಉಪವಾಸ ಮಾಡಿ, ಇಂದ್ರಿಯಗಳನ್ನು ಅಂಕಿತದಲ್ಲಿ ಇಟ್ಟುಕೊಂಡು ವೇದೋಕ್ತ ಅಥವಾ ಪುರಾಣೋಕ್ತ

ಮಂತ್ರಗಳಿಂದ ವಿಧಿಪೂರ್ವಕವಾಗಿ ಉಮಾಮಹೇಶ್ವರರನ್ನು ಪೂಜೆಮಾಡಬೇಕು. ಇದಕ್ಕೆ ಜಾತಿ-ಮತಗಳ ಕಟ್ಟಳೆ ಇಲ್ಲ. ಬ್ರಹ್ಮಚಾರಿ, ಗೃಹಸ್ಥ, ಕನ್ಯೆ, ವಿಧವೆ, ಮುತ್ತೈದೆ, ಬ್ರಾಹ್ಮಣ, ಶೂದ್ರ, ಯಾರೇ ಆಗಲಿ ಶಿವಭಕ್ತರೆಲ್ಲರೂ ಈ ಸೋಮವಾರ ವ್ರತಕ್ಕೆ ಅಧಿಕಾರಿಗಳು. ಈ ವಿಷಯದಲ್ಲಿ ನಿಮಗೆ ಒಂದು ಕಥೆ ಹೇಳುತ್ತೇನೆ.

ಆರ್ಯಾವರ್ತದಲ್ಲಿ ಹಿಂದೆ ಚಿತ್ರವರ್ಮ ಎಂಬ ಪ್ರಸಿದ್ಧ ರಾಜ. ಅವನು ದುಷ್ಟರನ್ನು ದಂಡಿಸುವಲ್ಲಿ ಚಂಡಯಮ. ಸತ್ಯದಲ್ಲಿ ಹರಿಶ್ಚಂದ್ರ ನ್ಯಾಯನೀತಿಯಲ್ಲಿ ಧರ್ಮರಾಜ. ಹರಿಹರರಲ್ಲಿ ಅವನಿಗೆ ಪರಾಭಕ್ತಿ. ಅನೇಕ ಗಂಡುಮಕ್ಕಳು ಆ ರಾಜರ್ಷಿಗೆ. ಎಲ್ಲರೂ ಶೂರರೂ ಭೀಮನಂತೆ. ಎಲ್ಲರೂ ಸುಂದರರು ಕಾಮನಂತೆ. ಗಂಡುಮಕ್ಕಳು ಹಲವರಾದರೂ ಹೆಣ್ಣು ಮಾತ್ರ ಒಂದೇ ಒಂದು. ಒಳ್ಳೇ ಸುಂದರಿ ಆ ರಾಜಕನ್ಯೆ. ಒಂದು ದಿನ ರಾಜ ಜೋತಿಷ್ಕರನ್ನು ತನ್ನ ಆಸ್ಥಾನಕ್ಕೆ ಬರಮಾಡಿಕೊಂಡ. ಅವರಿಗೆ ತೋರಿಸಿದ ತನ್ನ ಏಕಮಾತ್ರಪುತ್ರಿಯ ಜನ್ಮಕುಂಡಲಿಯನ್ನು. ಅದನ್ನು ಅಮೂಲಾಗ್ರ ಓದಿದರು ಆ ಜೋತಿರ್ಮಾರ್ತಂಡರು ಅವರ ಹಣೆ ನಿರಿಗೆ ಗಟ್ಟಿತು. ಅವರಲ್ಲಿ ಒಬ್ಬ ಜೋತಿರ್ಮಾರ್ತಂಡ ಬಾಯಿ ತೆರೆದ- ''ಮಹಾರಾಜ! ಈ ನಿನ್ನ ಕನ್ಯೆ ನಿಜವಾಗಿಯೂ ಧನ್ಯೆ! ಧನ್ಯೆ! ಸೀಮಂತಿನಿ ಇವಳು ಪ್ರಸಿದ್ಧಿ ಆಗುವಳು ಲೋಕದಲ್ಲಿ. ಇವಳು ಪಾರ್ವತಿಯಂತೆ ಸರ್ವಮಂಗಳೆ. ದಮಯಂತಿಯಂತೆ ಸುಂದರಿ ಸರಸ್ವತಿಯಂತೆ ಸರ್ವವಿದ್ಯಾಪರಿಣತೆ ಲಕ್ಷ್ಮಿಯಂತೆ ಸದ್ಗುಣಶಾಲಿನಿ. ಇವಳು ತನ್ನ ಪತಿಯೊಡನೆ ಹತ್ತುಸಾವಿರ ವರ್ಷ ಸುಖಸೌಭಾಗ್ಯಗಳನ್ನು ಅನುಭವಿಸುವಳು. ಇವಳಿಗೆ ಎಂಟು ಮಂದಿ ಮಕ್ಕಳು ಹುಟ್ಟುವರು.'' ದೈವಜ್ಞನ ಮಾತು ಕೇಳಿ ಪರಮಹರ್ಷ ಮಹಾರಾಜನಿಗೆ. ಆದರೆ ಕೂಡಲೇ ಅಲ್ಲಿಯೇ ಕುಳಿತ ಮತ್ತೊಬ್ಬ ಜೋತಿರ್ವಿದ್ವಾಂಸ ನಿಷ್ಠುರವಾಗಿ ನುಡಿದ- ''ರಾಜನ್, ಈ ನಿನ್ನ ಮಗಳು ಹದಿನಾಲ್ಕನೇ ವರ್ಷದಲ್ಲಿ ವಿಧವೆ ಆಗುವಳು. ಒಮ್ಮೆಲೇ ಈ ಮಾತಿನಿಂದ ಬರಸಿಡಿಲು ಬಡಿದಂತಾಯಿತು ಮಹಾರಾಜನಿಗೆ. ಒಂದು ಗಳಿಗೆಯಷ್ಟು ಸಮಯವೆ ಹತ್ತಿತು ಮಹಾರಾಜನಿಗೆ ಈ ಭವಿಷ್ಯವಚನದ ಆಘಾತದಿಂದ ಚೇತರಿಸಿಕೊಳ್ಳಲು. ಅನಂತರ ಅವನು ಆ ಭವಿಷ್ಯ ಪಂಡಿತರನ್ನೆಲ್ಲ ಗೌರವಿಸಿ ಬೀಳ್ಕೊಟ್ಟ. 'ಭಾಗ್ಯಾನುಸಾರ ಬಂದದ್ದು ಬರಲಿ' ಎಂದು ಚಿಂತೆ ಕಡಿಮೆ ಮಾಡಲು ಪ್ರಯತ್ನಿಸಿದ. ಬಹಳ ಪ್ರೀತಿಯಿಂದ ಲಾಲಿಸಿದ ಆ ಮಗಳನ್ನು. ಹಗಲಿರುಳೂ ರಾಜ ದಂಪತಿಗಳು ಆ ತಮ್ಮ ಏಕಮಾತ್ರ ಕುಮಾರಿಯನ್ನು ತೋಳಿನಿಂದ ತೊಡೆ, ತೊಡೆಯಿಂದ ತೋಳಿಗೆ ಓಲಾಡಿಸುತ ಪ್ರೀತಿಯ ತೊಟ್ಟಿಲಲ್ಲಿ ತೂಗುತ್ತಲೇ ಇದ್ದರು. ರಾಜಕುಮಾರಿ ಕ್ರಮೇಣ ಬೆಳೆದಳು. ತನಗೆ ಹದಿನಾಲ್ಕನೇ ವಯಸಿನಲ್ಲಿ ಬರುವ ವೈಧವ್ಯದ ಭವಿಷ್ಯವನ್ನು ತಿಳಿದುಕೊಂಡಳು ಅವಳಿಗೂ ಆರಂಭವಾಯಿತು ಚಿಂತೆಯ ಕೊರಗು. ಒಂದು ದಿನ ಆ ಕನ್ಯಾಮಣಿ ಸೀಮಂತಿನಿಯು ಯಾಜ್ಞವಲ್ಕ್ಯ ಮುನಿಪುಂಗವರ ಮಡದಿಯ ಬಳಿಗೆ ಬಂದಳು. ಪರಮ ಪತಿವ್ರತೆ ಆ ಋಷಿಪತ್ನಿ ಮೈತ್ರೇಯಿ. ವೇದವೇದಾಂತಗಳು ಕರತಾಮಲಕ ಆ ಮುನಿಮಾನಿನಿಗೆ ಗೀತೋಪನಿಷತ್ತುಗಳು ಕಂಠಗತ ಭಕ್ತಿವಿರಕ್ತಿಗಳು ಹೃದಯಗತ. ಸೀಮಂತಿನಿಯು ಆ ಋಷಿರಮಣಿಯ ಅಡಿದಾವರೆಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ದೈನ್ಯದಿಂದ ಬೇಡಿಕೊಂಡಳು.

**ಸೀಮಂತಿನಿ:-** ಪೂಜ್ಯ ಮಾತೆಯೇ, ನಾನು ಶರಣು ಬಂದಿದ್ದೇನೆ. ನಿಮ್ಮ ಪವಿತ್ರ ಚರಣಗಳಿಗೆ. ನನಗೆ ಅಖಂಡ ಸೌಭಾಗ್ಯ ಅಭಿವೃದ್ಧಿ ಆಗುವಂತೆ ಸತ್ಕರ್ಮದ ಉಪದೇಶ ನೀಡಿರಿ.

**ಮೈತ್ರೇಯಿ:-** ಶುಭಾಂಗಿ! ನೀನು ಶಂಕರ ಸಹಿತಳಾದ ಪಾರ್ವತೀ ದೇವಿಯ ಪಾದಗಳಿಗೆ ಶರಣುಹೋಗು. ಸೋಮವಾರದಂದು ಸ್ನಾನಮಾಡಿ ಉಪವಾಸಪೂರ್ವಕವಾಗಿ ಮಡಿಬಟ್ಟೆ ಉಟ್ಟು ಏಕಾಗ್ರಚಿತ್ತದಿಂದ ಶಿವಪಾರ್ವತಿಯರನ್ನು ಪೂಜಿಸು. ಸೋಮವಾರದ ದಿನ ಸೋಮೇಶ್ವರನಾದ (ಸ+ಉಮಾ+ಈಶ್ವರ=ಸೋಮೇಶ್ವರ) ಎಂದರೆ ಉಮಾದೇವಿ ಯಿಂದ ಸಹಿತನಾದ ಈಶ್ವರನನ್ನು ಅರ್ಥಾತ್ ಮಹಾದೇವರನು ಭಕ್ತಿಯಿಂದ ಪೂಜೆಮಾಡಿದರೆ ಎಂಥ ಆಪತ್ತು ಬಂದರೂ ಅದರಿಂದ ನೀನು ಪಾರಾಗುವಿ. ಎಂಥದೇ ಕಷ್ಟ. ಆಪತ್ತು, ಸಂಕಟ ಬಂದರೂ ಶಿವಪೂಜೆಯನ್ನು ಮಾತ್ರ ಬಿಡಕೂಡದು. ಆ ಶಿವ ಪಾರ್ವತಿಯರ ಆರಾಧನೆಯಿಂದ ನಿನಗೆ ಬಂದ, ಬರಲಿರುವ ಕುತ್ತು ಆಪತ್ತುಗಳು ತಮ್ಮಷ್ಟಕ್ಕೆ ತಾವೇ ದೂರಾಗುವವು. ನೀನು ಕೂಡ ಸಂಕಟದಿಂದ ಪಾರಾಗುವಿ.

ಆ ಮುನಿಮಹಿಳೆಯ ಆದೇಶವನ್ನು ಆನಂದದಿಂದ ತಲೆಯಮೇಲೆ ಹೊತ್ತಳು ರಾಜಕುಮಾರಿ ಸೀಮಂತಿನಿ. ಅಂದಿನಿಂದಲೇ ಪ್ರಾರಂಭಿಸಿದಳು. ಪಾರ್ವತೀ ಪರಮೇಶ್ವರರ ಪೂಜೆಯನ್ನು. ನಿಷಧ ದೇಶದಲ್ಲಿ ನಳದಮಯಂತಿಯರ ಗರ್ಭದಿಂದ ಇಂದ್ರಸೇನ ಎಂಬ ಸತ್ಪುತ್ರ ಜನಿಸಿದ್ದ. ಆ ಇಂದ್ರಸೇನನಿಗೆ ಚಂದ್ರಾಂಗದ ಮಗ. ಚಿತ್ರವರ್ಮ ಮಹಾರಾಜನು ನಳಕುಮಾರ ಇಂದ್ರಸೇನ ಮಹಾರಾಜನ ಬಳಿಗೆ ಬಂದು ತನ್ನ ಮಗಳಾದ ಸೀಮಂತಿನಿಯನ್ನು ಸೊಸೆಯನ್ನಾಗಿ ಸ್ವೀಕರಿಸಬೇಕೆಂದು ಬಿನ್ನವಿಸಿದ. ಆನಂದದಿಂದ ಸಮ್ಮತಿಸಿದ ಇಂದ್ರಸೇನ. ಅವನ ಮಗನಾದ ಚಂದ್ರಾಂಗದ ಚಂದ್ರನಂತೆ ಸುಂದರ, ಮೇಲೆ ಮಹಾ ಪರಾಕ್ರಮಿ, ಗುಣ, ಶೀಲ, ಸೌಂದರ್ಯಗಳಿಂದ ಸೀಮಂತಿನಿಯು ಅವನಿಗೆ ತಕ್ಕ ಹೆಣ್ಣು ಎಂದು ನಿರ್ಧರಿಸಿ ಇಂದ್ರಸೇನ ಅವಳನ್ನು ತನ್ನ ಸೊಸೆಯನ್ನಾಗಿ ಸ್ವೀಕರಿಸಿದ. ಇಬ್ಬರೂ ದೊರೆಗಳು ಧಾರಾಳಿಗಳು. ಧರ್ಮಿಷ್ಠರು. ಒಳ್ಳೇ ವಿಜೃಂಭಣೆಯಿಂದ ನಡೆಯಿತು ಮಂಗಳ ವಿವಾಹ. ಲೋಕಕ್ಕೆಲ್ಲ ಈ ಎರಡು ರಾಜಮನೆತನಗಳ ಮಧ್ಯೆ ನಡೆದ ಅದ್ದೂರಿಯ ಮದುವೆಯು ಒಂದು ಮಹಾಮಹೋತ್ಸವವೇ ಆಯಿತು. ಬಂದವರಿಗೆಲ್ಲ ಬಡವ ಬಲ್ಲಿದರಿಗೆಲ್ಲ ಹೊಟ್ಟೆ ತುಂಬ ಮೃಷ್ಟಾನ್ನ. ಕೈ ತುಂಬ ದಕ್ಷಿಣೆ, ಸಾಕಷ್ಟು ಉಡುಗೊರೆ ಬಂಧುಗಳು ಮಾತ್ರವಲ್ಲ. ಬಂದವರೆಲ್ಲರೂ ಹೃದಯತುಂಬ ಹರಿಸಿದರು "ಚಿರಸೌಭಾಗ್ಯವತಿ ಆಗು" ಎಂದು ಆ ಸೀಮಂತಿನಿಯನ್ನು. ಆದರೆ ದೈವಸಂಕಲ್ಪ ಬೇರೆಯೇ ಆಗಿತ್ತು. ದುರ್ಭಾಗ್ಯಕಾದಿತ್ತು. ವಿಧಿ ಹೊಂಚು ಹಾಕಿತ್ತು. ಮದುವೆಯ ನಂತರ ರಾಜಕುಮಾರ ಚಂದ್ರಾಂಗದನು ಮಾವನ ಆಗ್ರಹದ ಮೇರೆಗೆ ಅತ್ತೆಯ ಮನೆಯಲ್ಲಿಯೇ ಕೆಲವು ದಿನ ಉಳಿದುಕೊಂಡ ಒಂದು ದಿನ ರಾಜಕುಮಾರ ಚಂದ್ರಾಂಗದನು ತನ್ನ ಕೆಲವು ಮಿತ್ರರೊಂದಿಗೆ ಯಮುನಾ ನದಿ ದಾಟಲೆಂದು ನೌಕೆಯಲ್ಲಿ ಕುಳಿತುಕೊಂಡ ತುಂಬಿಹರಿಯುತ್ತಿದ್ದಳು ಕಾಲಿಂದಿ. ರಾಜಪರಿವಾರವನ್ನು ಹೊತ್ತು ತೆರೆಗಳ ತೊಟ್ಟಿಲಲ್ಲಿ ತೂಗಾಡುತ್ತ ನಡೆದ ನೌಕೆಯು ನದಿಯ ಪ್ರವಾಹದ ಮಧ್ಯದಲ್ಲಿ ತೇಲಿ ಆಡುತ್ತಿತ್ತು. ಒಮ್ಮೆಲೇ ಬಿರುಗಾಳಿ. ನದಿ ಎಲ್ಲವೂ ಅಲ್ಲೋಲಕಲ್ಲೋಲ. ಬೆಟ್ಟದಂತಹ ತೆರೆಗಳು ನೌಕೆಗೆ ಬಂದು ಅಪ್ಪಳಿಸಿದವು. ಒಮ್ಮೆಲೇ ಬುಡಮೇಲು ಆಯಿತು ಮಿತ್ರಸಹಿತ ರಾಜಕುಮಾರನನ್ನು ಹೊತ್ತ ಆ ನೌಕೆ. ದಿಟ್ಟತನದಿಂದ ಹುಟ್ಟುಹಾಕುತ್ತಿದ್ದ ನಾವಾಡಿಗರೂ, ರಾಜಕುಮಾರನೂ, ಅವನ ಗೆಳೆಯರೂ ಎಲ್ಲರೂ ಸೆಳೆವಿನ ಸುಳಿಯಲ್ಲಿ ಸಿಕ್ಕು ಮುಳುಗಿ ಹೋದರು. ಝುಂಝಾವಾತದಿಂದ ಎದ್ದು ಬಿದ್ದೇಳುತ್ತಿರುವ ನದಿಯ ಪೆರ್ದೆರೆಗಳು ಈಸಲು ಬಂದವರನ್ನೂ, ಬಾರದವರನ್ನೂ ಅಪ್ಪಳಿಸಿ ಕುಪ್ಪಳಿಸಿ ಹೊಡೆದು ಪ್ರವಾಹ ಮಧ್ಯದಲ್ಲಿ ಎಲ್ಲರೂ ಜಲಸಮಾಧಿ ಹೊಂದುವಂತೆ ಮಾಡಿದವು. ನದಿಯ ಎರಡೂ ದಂಡೆಗಳ ಮೇಲೆ

ಹಿಂಡು ಹಿಂಡು ಜನ. ಅಸಹಾಯಕರಾಗಿ ಈ ದುರಂತವನ್ನು ನೋಡುತ್ತಲಿದ್ದ ತೀರವಾಸಿಗಳು ಚೀರತೊಡಗಿದರು. ಭೀಕರ ಪ್ರವಾಹದಲ್ಲಿ ಬಿದ್ದು ಸಾಯುತ್ತಲಿರುವ ಆ ದುರ್ದೈವಿ ಪಯಣಿಗರನ್ನು ಮೂಕಪ್ರೇಕ್ಷಕರಾಗಿ ನೋಡುತ್ತ ನಿಂತುಕೊಂಡಿತು ಅಸಹಾಯಕ ಜನಸ್ತೋಮ. ಅವರ ಚೀತ್ಕಾರದ ಆರ್ತ ಧ್ವನಿಯಿಂದ ಹಾಗೂ ರೋದನದ ಹಾಹಾಕಾರ ಧ್ವನಿಯಿಂದ ಆಕಾಶಮಂಡಲವೆಲ್ಲವೂ ಪ್ರತಿಧ್ವನಿತನಾಯಿತು.

ಈ ವಾರ್ತೆಯನ್ನು ಕೇಳಿ ಚಿತ್ರವರ್ಮ ಮಹಾರಾಜನು ದುಃಖಿತಪ್ತನಾಗಿ ಓಡಿ ಬಂದ ಯಮುನೆಯ ತೀರಕ್ಕೆ ತೀರಿಹೋದ ಅಳಿಯನನ್ನು ಕಂಡು ಆ ತೀರದಲ್ಲೇ ಮೂರ್ಛೆ ಹೋಗಿ ಬಿದ್ದ. ಸುದ್ದಿ ಕೇಳಿದ ಸೀಮಂತಿಯು ಅರಮನೆಯಲ್ಲಿಯೇ ಸಿಡಿಲು ಎರಗಿದ ಬಳ್ಳಿಯಂತೆ ಕುಸಿದು ಬಿದ್ದಳು. ಇಂದ್ರಸೇನ ಮಹಾರಾಜನಿಗಂತೂ ಮೈ ಮೇಲೆ ಮುಗಿಲು ಕಡಿದುಕೊಂಡು ಬಿದ್ದಂತೆ ಆಘಾತವಾಯಿತು. ಕೆಲಹೊತ್ತಿನ ಬಳಿಕ ಚಿತ್ರವರ್ಮ ಮಹಾರಾಜನು ಚೇತರಿಸಿಕೊಂಡು ಮೆಲ್ಲನೆ ರಾಜಧಾನಿಯ ಬಳಿ ಬಂದ. ಅರಮನೆಯಲ್ಲಿ ನೆಲಕಚ್ಚಿ ಬಿದ್ದ ಸೀಮಂತಿನಿಯನ್ನು ಸಂತೈಸಿದ. ಚಿತ್ರವರ್ಮ ಮಹಾರಾಜನು ನದೀ ಪ್ರವಾಹದಲ್ಲಿ ಮುಳುಗಿ ಮರಣಹೊಂದಿದ ಅಳಿಯನ ಔರ್ಧ್ವದೇಹಿಕ ಕಾರ್ಯಗಳನ್ನು ಅಲ್ಲಿಗೆ ಬಂದ ಸಂಬಂಧಿಕರ ಕಡೆಯಿಂದ ಮಾಡಿಸಿದ. ಪರಮ ಪತಿವ್ರತೆಯಾದ ಸೀಮಂತಿನಿಯು ಚಿತಾರೋಹಣವನ್ನು ಮಾಡಿ ಪತಿಯೊಡನೆ ಸಹಗಮನ ಮಾಡಬೇಕು ಎಂದು ಹಟ ಹಿಡಿದಳು. ಆದರೆ ತಂದೆ ತಾಯಿ ಹಾಗೂ ಬಂಧು ಬಾಂಧವರು ಅವಳನ್ನು ಬಲವಂತದಿಂದ ಸಹಗಮನ ಬಿಡಿಸಿ ಮನೆಯಲ್ಲಿಯೇ ಕೂಡಿಸಿದರು. ಹಗಲಿರುಳೂ ಕಣ್ಣೀರಿನ ಕೋಡಿ ಹರಿಸುತ್ತ ಪತ್ಯಂತರ್ಗತನಾದ ಪರಮೇಶ್ವರನನ್ನು ನಿರಂತರವೂ ನೆನೆಯುತ್ತಲಿದ್ದಳು. ಋಷಿಪತ್ನಿ ಮೈತ್ರೇಯಿಯು ನಿರ್ದೇಶಿಸಿದ ಸೋಮವಾರ ವ್ರತವನ್ನು ಮಾತ್ರ ಒಮ್ಮೆಯೂ ಬಿಡಲಿಲ್ಲ. ವಿಧವೆಯಾದರೂ ಸದಾಚಾರ ಸಂಪನ್ನಳಾಗಿ ಅತ್ಯಂತ ಭಕ್ತಿಯಿಂದ ಯಾವ ವಿಧಿಗೂ ಲೋಪಬಾರದಂತೆ ಶಿವಪಾರ್ವತಿಯರ ಸತತ ಉಪಾಸನೆಯನ್ನು ಅವಿಚ್ಛಿನ್ನವಾಗಿ ಆಚರಿಸಿದಳು. ಕುಳಿತಾಗ, ನಿಂತಾಗ, ಓಡಾಡುವಾಗ, ಮೀಯುವಾಗ, ಮಲಗುವಾಗ, ಉಣ್ಣುವಾಗ, ಅವಳಿಗೆ ಪಾರ್ವತಿ ಪರಮೇಶ್ವರರದೇ ಧ್ಯಾಸ. ಶಿವಶಕ್ತಿಯರದೇ ಧ್ಯಾನ. ಸತತವೂ ಅವರದೇ ಚಿಂತನೆ. ಹೀಗೆ ಶಿವಾರಾಧನೆಯನ್ನು ಭಕ್ತ ಚಿತ್ತಳಾಗಿ ಆ ರಾಜಕುಮಾರಿಯು ಮಾಡುತ್ತಿದ್ದಂತೆಯೇ ಮೂರುವರ್ಷ ಕಳೆದವು.

ಅತ್ತ ಇಂದ್ರಸೇನ ಮಹಾರಾಜನು ಪುತ್ರಶೋಕದಿಂದ ವಿಹ್ವಲನಾಗಿ ನೆಲಕ್ಕೆ ಬಿದ್ದಿದ್ದ. ಮಗನ ಮರಣ ಅವನ ಅರಮನೆ ಅಂತಃಪುರಗಳಲ್ಲಿ ಮಸಣದ ಕರಿನೆರಳನ್ನು ಹಾಸಿತ್ತು. ಮಹಾರಾಜನಿಗೆ ಜೀವನದಲ್ಲಿಯೇ ಜಿಗುಪ್ಸೆ. ಬದುಕಿನಲ್ಲಿಯೇ ಜಿಹಾಸೆ. ಎಲ್ಲದರಲ್ಲಿಯೂ ಔದಾಸೀನ್ಯ. ರಾಜಕಾರಣದಲ್ಲಿ ಚಿತ್ತವಿಲ್ಲ. ರಾಜ್ಯಶಾಸನದಲ್ಲಿ ಮನಸ್ಸಿಲ್ಲ. ಇದನ್ನು ಅರಿತ ಸಂಧಿಸಾಧಕರಾದ ವೈರಿಗಳು. ವೀರವರೇಣ್ಯನಾದ ಇಂದ್ರಸೇನ ರಾಜರ್ಷಿಯನ್ನು ಸದೆಬಡಿಯಲು ಸದವಕಾಶ ಇದು ಒಂದೇ ಎಂದು ಬಗೆದರು. ಅವನ ಕೆಲವು ದಾಯಾದಿಗಳು ಮಹಾರಾಜನಿಗೆ ದ್ರೋಹ ಬಗೆದರು. ಎಲ್ಲರೂ ದಂಡೆತ್ತಿ ಬಂದರು. ನಿಷಧದೇಶಕ್ಕೆ ಮುತ್ತಿಗೆ ಹಾಕಿದರು. ಪುತ್ರಶೋಕದಿಂದ ಸಂತಪ್ತನಾದ ಮಹಾರಾಜ ತನ್ನ ಸೋದರರೂ ಜ್ಞಾತಿಗಳೂ ವೈರಿಗಳನ್ನು ಕೂಡಿಕೊಂಡು ಬಂದುದನ್ನು ನೋಡಿ ಪ್ರತೀಕಾರವನ್ನೇ ಮಾಡಲಿಲ್ಲ. ಸುಲಭವಾಗಿಯೇ ಅವನನ್ನು ಆ ದಾಯಾದಿಗಳು ಕೈವಶ ಮಾಡಿಕೊಂಡು

ರಾಜ್ಯವನ್ನೆಲ್ಲ ಆಕ್ರಮಿಸಿದರು. ರಾಜದಂಪತಿಗಳನ್ನು ಕಾರಾಗೃಹದಲ್ಲಿ ಇರಿಸಿದರು. ವಿಶಾಲವಾದ ನಳನ ಸಾಮ್ರಾಜ್ಯವನ್ನು ಕಬಳಿಸಿದರು. ಅತ್ತ ದೋಣಿಯ ದುರಂತದಲ್ಲಿ ನೀರಿನ ಸೆಳೆವಿನ ಸಿಕ್ಕ ರಾಜಕುಮಾರ ಚಂದ್ರಾಂಗದನು ಯಮುನೆಯ ಆಳ ನೀರಿನಲ್ಲಿ ಕೆಳಗೆ ಒತ್ತಲ್ಪಟ್ಟ. ಆ ಕಾಲಿಂದಿಯ ನೀರಿಗೆ ನೆಲೆಯೇ ಇರಲಿಲ್ಲ. ನದೀಪ್ರವಾಹದ ಮಧ್ಯದಲ್ಲಿ ಅತ್ಯಂತ ಆಳವಾದ ಒಂದು ಮಡುವು. ಅಲ್ಪಸ್ವಲ್ಪವಲ್ಲ ಅದರ ಆಳ. ಪಾತಾಳದವರೆಗೂ ಆಳ. ಆ ಮಡುವಿನಲ್ಲಿ ತೆರೆಗಳ ಒತ್ತಡದಿಂದ ತಳ್ಳಲ್ಪಟ್ಟ ಚಂದ್ರಾಂಗದ ಕೆಳಕೆಳಗೆ ಇಳಿದ. ಮತ್ತೂ ಇಳಿದ. ಇಳಿದೇ ಇಳಿದ. ಆ ಆಳದಲ್ಲಿ ಒಂದು ಆಶ್ಚರ್ಯ. ಅಲ್ಲಿ ನಾಗಕನ್ನಿಕೆಯರು ಜಲಕ್ರೀಡೆಯಲ್ಲಿ ಲೀಲಾಲೋಲರಾಗಿ ತೇಲುತ್ತಿದ್ದರು. ಆ ಸುಂದರ ದೃಶ್ಯವನ್ನು ಕಂಡು ರಾಜಕುಮಾರ ಚಂದ್ರಾಂಗದನಿಗೆ ಇನ್ನಿಲ್ಲದ ಅಚ್ಚರಿ. ಇದಕ್ಕಿಂತ ಹೆಚ್ಚು ಆಶ್ಚರ್ಯ ಜಲಕ್ರೀಡೆ ಆಡುತ್ತಿರುವ ಆ ಜಲಜಾಕ್ಷಿಯರಿಗೆ. ಚೆಲುವಿನ ಚಂದ್ರಾಮನಂತಿದ್ದ ಆ ಚಂದ್ರಾಂಗದನ ಚಿತ್ತಾರದಲ್ಲಿ ಬರೆದಂತಿದ್ದ ಚಾರುರೀಶರವನ್ನು ಕಂಡು ಆನಂದ ತುಂದಿಲರೂ, ವಿಸ್ಮಯಸ್ತಿಮಿತರೂ, ಆಶ್ಚರ್ಯಚಕಿತರೂ ಆದರು ಆ ಪನ್ನಗಲೋಕದ ಪ್ರಮದೆಯರು. ಅವನನ್ನು ಪಾತಾಳಲೋಕದ ತಮ್ಮ ತಕ್ಷಕ ನಗರಕ್ಕೆ ಕರೆದುಕೊಂಡು ಹೋದರು. ಅದ್ಭುತವಾಗಿದ್ದಿತು ಆ ಪಾತಾಳಪುರಿ, ಆ ನಾಗನಗರದಲ್ಲಿ ಇಂದ್ರಭವನಕ್ಕಿಂತ ಸುಂದರವಾದ ಒಂದು ಅರಮನೆ. ಅದರ ಮಧ್ಯದಲ್ಲಿ ಒಂದು ಸಭಾಮಂಟಪ. ಅದರ ನಟ್ಟ ನಡುವೆ ಒಂದು ರತ್ನಸಿಂಹಾಸನ. ಅದರಲ್ಲಿ ನಾಗಾಧುರೀಣ ತೇಜಸ್ವಿ ತಕ್ಷಕ. ಆ ನಾಗನಾಯಕನನ್ನು ಕಂಡು ಪ್ರಣಮಿಸಿದ ರಾಜಪುತ್ರ! ತೇಜಃಪುಂಜನಾದ ತಕ್ಷಕನ ದಿವ್ಯಕಾಂತಿಯನ್ನು ಕಂಡು ಚಕಿತಚಿತ್ತನಾದ ಚಂದ್ರಾಂಗದ. ನಾಗಾಧಿಪತಿಯಾದ ತಕ್ಷಕನೂ ಕೂಡ ಸುಂದರ ಸುಕುಮಾರನಾದ ರಾಜಕುಮಾರನನ್ನು ಕಂಡು ಕುತೂಹಲಗೊಂಡ. ತನ್ನ ಬಳಿ ಬಂದ ನಾಗಿಣಿಯರನ್ನು ಕೇಳಿದ- "ಈ ಯುವಕನು ಯಾರು? ಎಲ್ಲಿಂದ ಬಂದ?

**ಸರ್ಪಸುಂದರಿಯರು:-** ನಾವು ಈ ಪಾತಾಳ ಲೋಕದಿಂದ ಜಲವಿಹಾರದಲ್ಲಿ ಈಜುತ್ತ ಭೂಲೋಕದ ಯಮುನಾ ನದಿಯ ಮಡುವಿನವರೆಗೆ ಹೋಗಿದ್ದೆವು. ಅದರ ಆಳದಲ್ಲಿ ಈ ತರುಣನು ಇಳಿದಿಳಿದು ಬರುತ್ತಿದ್ದ. ಅವನು ಯಾರು ಎಂಬುದು ನಮಗೆ ತಿಳಿಯದು. ಅವನ ಕುಲವನ್ನು ಅರಿಯೆವು. ಅವನ ಹೆಸರಿನ ಗುರುತು ಪರಿಚಯ ನಮಗೆ ಇಲ್ಲವಾದುದರಿಂದಲೇ ತಮ್ಮ ಬಳಿಗೆ ಅವನನ್ನು ಕರೆತಂದಿದ್ದೇವೆ.

**ತಕ್ಷಕ:-** ಕುಮಾರ, ನೀನು ಯಾರು? ನಿನ್ನ ತಂದೆಯ ಹೆಸರೇನು? ನಿನ್ನ ದೇಶದ ಹೆಸರು ಯಾವುದು? ನೀನು ಇಲ್ಲಿಗೆ ಹೇಗೆ ಬಂದೆ?

**ಚಂದ್ರಾಂಗದ:-** ಭೂಮಂಡಲದಲ್ಲಿ ಪುಣ್ಯಶ್ಲೋಕನಾದ ನಳರಾಜನ ಹೆಸರನ್ನು ಕೇಳಿರುವಿರಷ್ಟೆ? ಅವರ ಮಗನೇ ಇಂದ್ರಸೇನ. ಇಂದ್ರಸೇನ ಮಹಾರಾಜನ ಪುತ್ರನೇ ನಾನು. ನನ್ನ ಹೆಸರು ಚಂದ್ರಾಂಗದ. ಇದೀಗ ಕೆಲವು ದಿನಗಳ ಹಿಂದೆ ನನ್ನ ಮದುವೆ ಆಯಿತು. ನಾನು ಕೆಲವು ದಿನ ಮಾವನ ಮನೆಯಲ್ಲಿ ಉಳಿದಿದ್ದೆ. ಯಮುನೆಯ ತರಂಗಾಂತರಂಗದಲ್ಲಿ ನೌಕಾವಿಹಾರ ಮಾಡುತ್ತಲಿರುವಾಗ ನಮ್ಮ ದೋಣಿ ಮುಗುಚಿಕೊಂಡಿತು ಜಲಪ್ರವಾಹದಲ್ಲಿ. ವೀಚೀತರಂಗಗಳ ಒತ್ತಡದಿಂದ ಮಹಾಮಡುವಿನ ಕೆಳಕ್ಕೆ ತಳ್ಳಲ್ಪಟ್ಟ ನಾನು ಅದರ ಆಳನಿರಾಳಕ್ಕೆ ಇಳಿದಿಳಿದು ಬಹಳ ಕೆಳಗೆ ಬಂದೆ. ಅಲ್ಲಿ ಜಲವಿಹಾರಕ್ಕೆಂದು ಬಂದ ನಿಮ್ಮ ಲೋಕದ. ಈ ಸರ್ಪಸುಂದರಿಯರು ನನ್ನನ್ನು ತಮ್ಮಲ್ಲಿಗೆ ಕರೆತಂದಿದ್ದಾರೆ. ನನ್ನ ಜನ್ಮಾಂತರದ ಪುಣ್ಯಪ್ರಭಾವದಿಂದಲೇ ಪನ್ನಗಪತಿಯಾದ ತಮ್ಮ ಪಾದದರ್ಶನ ಇಂದು ಆಗಿದೆ. ಇಂದು ನಾನು ಧನ್ಯ. ನನ್ನ ತಾಯಿ ತಂದೆಗಳು ಕೃತಾರ್ಥರು. ನನ್ನ ಜನ್ಮ ಸಾರ್ಥಕ.

**ತಕ್ಷಕ:-** ರಾಜಕುಮಾರ, ಹೆದರಬೇಡ. ಧೈರ್ಯತಾಳು ನೀನು ಯಾವ ದೇವತೆಯನ್ನು ಪೂಜಿಸುವಿ?

**ರಾಜಕುಮಾರ:-** ದೇವತೆಗಳಲ್ಲಿ ಸರ್ವಶ್ರೇಷ್ಠ ದೇವತೆ ಎಂದರೆ ಕೈಲಾಸ ಪತಿಯಾದ ಪರಮೇಶ್ವರ. ಆದುದರಿಂದಲೇ ಅವನಿಗೆ ಹೆಸರು ಮಹಾದೇವ ಎಂದು. ಆ ಉಮಾ ಪತಿಯಾದ ಶಂಕರನ ಉಪಾಸನೆಯನ್ನು ನಾನು ಮಾಡುತ್ತಲಿದ್ದೇನೆ. ಆ ಶ್ರೇಷ್ಠ ದೇವನೇ ನನಗೆ ಇಷ್ಟದೇವ. ದೇವನದಿ ಗಂಗೆ ಯಾರ ಮಸ್ತಕದಲ್ಲಿ, ಚಂದ್ರ ಜಡೆಯಲ್ಲಿ, ಜಗದಂಬೆ ಅರ್ಧಾಂಗದಲ್ಲಿ, ತಕ್ಷಕ ವಾಸುಕಿಗಳು ಕರ್ಣಕುಂಡಲದಲ್ಲಿ ವಾಸಮಾಡುವರೋ ಅಂಥ ಮಹಾರುದ್ರನೇ ನನ್ನ ಪರದೈವ. ವೇದವೇದಾಂತಗಳು ಬಂದಿಮಾಗಧರಂತೆ ಯಾವನ ಗುಣಗಣಗಳನ್ನು ಕೊಂಡಾಡುವವೋ ಅಂಥ ಯೋಗಿ ಹೃದಯವಾಸಿಯಾದ ಸದ್ಗುಣಗಳ ಸಾಕಾರಮೂರ್ತಿ ಶಿವದೇವನು ನನ್ನ ಉಪಾಸ್ಯ ದೇವ. ಕಾಲಚಕ್ರವನ್ನು ಮೀರಿ ನಿಂತ, ವೇದಗಳಿಗೆ ಸಿಲುಕದ, ಸರ್ವಸಾಕ್ಷಿಯಾದ ಕ್ಷೇತ್ರಜ್ಞ, ಕೂಟಸ್ಥ, ತುರೀಯ, ಎಂದು ಹಲವಾರು ನಾಮಗಳಿಂದ ಕರೆಯಲ್ಪಡುವ ಮನೋವಾಚಾಮಗೋಚರನಾದ ಅಚಿಂತ್ಯಾದ್ಭುತವಾದ ಪರತತ್ವವೆನಿಸಿದ ಚಿದಾನಂದ ರೂಪಿಯಾದ ಆ ಪ್ರಭು ಪರಮೇಶ್ವರನನ್ನೇ ನಾನು ಭಕ್ತಿಯುಕ್ತವಾದ ಅಂತಃಕರಣದಿಂದ ಹಗಲಿರುಳೂ ಪೂಜೆ ಮಾಡುತ್ತ ಇರುತ್ತೇನೆ.

**ತಕ್ಷಕ:-** ರಾಜೇಂದ್ರನಂದನ, ಪರಮಸಂತೋಷ, ಪರಮಸಂತೋಷ. ನಿನ್ನ ಶಿವ ಭಕ್ತಿಯನ್ನು ಮೆಚ್ಚಿದೆ. ನೀನು ಬಾಲಕನಾದರೂ ಶಿವತತ್ವದ ರಹಸ್ಯವನ್ನು ಚೆನ್ನಾಗಿ ಅರಿತಿರುವೆ. ಇದರಿಂದ ನಾನು ನಿನ್ನ ಮೇಲೆ ಸುಪ್ರಸನ್ನ. ನಿನ್ನ ಕಣ್ಣುಗಳನ್ನು ತೆರೆದು ಇತ್ತ ನೋಡು. ಇದು ರತ್ನಮಯ ಲೋಕ. ಇಲ್ಲಿ ರತಿರಂಭೆಯರನ್ನೂ ನಾಚಿಸುವ ಸೌಂದರ್ಯ ಶಾಲಿನಿಯರಾದ ಲಲನೆಯರು ನಿಂತಿದ್ದಾರೆ. ಅಗೋ ಅಲ್ಲಿ ನೋಡು. ಅದು ಕಲ್ಪವೃಕ್ಷ. ಬೇಡಿದ್ದನ್ನು ನೀಡುವ ದೇವವೃಕ್ಷ. ಇತ್ತ ಕಡೆ ಕಣ್ಣುಹಾಯಿಸು. ಇವೆಲ್ಲವೂ ಅಮೃತವನ್ನು ತುಂಬಿ ಇಟ್ಟ ಸುಧಾಕಲಶಗಳು ಇದು ನಾಗಲೋಕ. ಇಲ್ಲಿ ಸಾವಿನ ಭಯ ಇಲ್ಲ. ನೋವಿನ ನೆರಳು ಇಲ್ಲ. ಮುಪ್ಪು ಇಲ್ಲಿ ಹಣಿಕೆ ಹಾಕುವುದೂ ಇಲ್ಲ. ದುಃಖಕ್ಕೆ ಇಲ್ಲಿ ಅವಕಾಶವೇ ಇಲ್ಲ. ಇದೊಂದು ಭೋಗ ಭೂಮಿ. ಇಲ್ಲಿ ಯಥೇಚ್ಛವಾಗಿ ನೀನು ವಿಹರಿಸು. ಆನಂದದಿಂದ ರಮಿಸು. ನಿನಗೆ ಬೇಕುಬೇಕಾದ ಸುಖೋಪಭೋಗಗಳನ್ನು ಅನುಭವಿಸು.

**ಚಂದ್ರಾಂಗದ:-** ನಾಗರಾಜ, ನಾನು ಕೆಲವೇ ದಿನಗಳ ಹಿಂದೆ ಮದುವೆ ಮಾಡಿಕೊಂಡೆ. ನನ್ನ ಮಡದಿಯಾದ ಸೀಮಂತಿನಿಯು ಶಿವಪಾರ್ವತಿಯರ ಸೇವಿಕಿ. ನಿತ್ಯವೂ ಅವರ ಚರಣೋಪಾಸಿಕಿ. ಪಾರ್ವತೀಪರಮೇಶ್ವರರ ನಿರಂತರ ಆರಾಧಿಕಿ. ನನ್ನ ಆಕಸ್ಮಿಕ ಮರಣದಿಂದ ಅಘಾತವನ್ನು ಹೊಂದಿದ ಅವಳು ದುಃಖದ ದಳ್ಳುರಿಯಲ್ಲಿ ಬೇಯುತ್ತಲಿದ್ದಾಳೆ. ನನ್ನ ತಾಯಿ ತಂದೆಯರಿಗೆ ನಾನು ಏಕಮಾತ್ರ ಪುತ್ರ. ಅವರೆಲ್ಲರೂ ನಾನು ಮರಣ ಹೊಂದಿದ್ದೇನೆಂದು ಭಾವಿಸಿ ದುಃಖಸಮುದ್ರದಲ್ಲಿಯೇ ಮುಳುಗಿದ್ದಾರೆ. ಆದ್ದರಿಂದ ನಾನು ಇಲ್ಲಿ ನಿಲ್ಲಲಾರೆ. ದಯಮಾಡಿ ತಾವು ನನ್ನನ್ನು ಆ ಮನುಷ್ಯ ಲೋಕಕ್ಕೆ ಮುಟ್ಟಿಸಿ.

**ತಕ್ಷಕ:-** ರಾಜಕುಮಾರ, ನಿನ್ನ ಅಪೇಕ್ಷೆಯಂತೆಯೇ ಆಗಲಿ. ನೀನು ನನ್ನನ್ನು ನೆನೆದಾಗಲೆಲ್ಲ ನಾನು ನಿನ್ನ ಎದುರು ಪ್ರಕಟವಾಗುವೆ, ಬೇಕು ಎಂದಾಗ ನನ್ನನ್ನು ಸ್ಮರಿಸು. ಎಂದಿನಂತೆ ನಿನ್ನ ಇಷ್ಟದೇವನಾದ ಆ ಶಿವನಲ್ಲಿಯೇ ಮನಸ್ಸನ್ನು ಇರಿಸು.

ಹೀಗೆ ಹೇಳಿ ಆ ಸರ್ಪರಾಜನು ರಾಜಕುಮಾರನಿಗೆ ಒಂದು ಸುಂದರವಾದ ಕುದುರೆಯನ್ನು ಕಾಣಿಕೆಯಾಗಿ ಕೊಟ್ಟ. ಮತ್ತು ಅನೇಕ ಪಾತಾಳಲೋಕದ ರತ್ನಾಭರಣಗಳನ್ನೂ ದಿವ್ಯ ವಸ್ತುಗಳನ್ನೂ ಅಲಂಕಾರಗಳನ್ನೂ ಉಡುಗೊರೆಯಾಗಿ ಚಂದ್ರಾಂಗದನಿಗೆ ತನ್ನ ಕೈಯಿಂದಲೇ ನೀಡಿದ. ಅದರಿಂದ ಆನಂದ ತುಂದಿಲನಾದ ಆ ರಾಜಕುಮಾರ. ಅತ್ಯದ್ಭುತವಾದ ಆ ಆಶ್ವರೋಹಣಮಾಡಿದ. ಅದೊಂದು ವಿಚಿತ್ರವಾದ ಕುದುರೆ. ಯಥೇಚ್ಛಗಾಮಿ. ಬಯಸಿದಲ್ಲೆಲ್ಲಾ ಅರೆಕ್ಷಣದಲ್ಲಿ ಹೋಗಬಲ್ಲ ಶಕ್ತಿ ಅದಕ್ಕೆ, ಸಮುದ್ರ, ದ್ವೀಪ, ಅಂತರೀಕ್ಷ, ಪಾತಾಳ, ಭೂಲೋಕ ಎಲ್ಲ ಕಡೆಗಳಲ್ಲಿಯೂ ಅಪ್ರತಿಹತ ವಾದಗತಿ ಆ ಅಶ್ವಕ್ಕೆ. ಇದನ್ನೆಲ್ಲ ಆ ರಾಜಕುಮಾರನಿಗೆ ತಿಳಿಸಿಕೊಟ್ಟು ನಾಗರಾಜ ತಕ್ಷಕನು ಮತ್ತು ಎಲ್ಲ ಆ ನಾಗಸುಂದರಿಯರು ಆ ಅಶ್ವಾರೂಢನಾದ ಸುಂದರಾಂಗನನ್ನು ಅಲ್ಲಿಂದ ಆನಂದದಿಂದ ಬೀಳ್ಕೊಟ್ಟರು. ಆ ದಿವ್ಯ ತುರಂಗವನ್ನು ಸವಾರಿ ಮಾಡಿದ ಆ ರಾಜಕುಮಾರನು ಕೆಲವೇ ಸಮಯದಲ್ಲಿ ಪಾತಾಳದಿಂದ ಮೇಲಕ್ಕೆ ಹಾರಿದ. ಆ ಯಮುನೆಯ ಮಡುವಿನಿಂದ ಮೇಲಕ್ಕೆ ಎದ್ದು ಬಂದ. ಮತ್ತು ಆ ಕಾಲಿಂದಿಯ ತೀರಪ್ರಾಂತದಲ್ಲಿ ಆ ತನ್ನ ಚಪಲಚರಣವುಳ್ಳ ಕುದುರೆಯನ್ನು ಕುಣಿಸುತ್ತ ಅತ್ತಿತ್ತ ಓಡಾಡತೊಡಗಿದ. ಅದೇ ಸಮಯದಲ್ಲಿ ಅಲ್ಲಿ ಸೀಮಂತಿನಿಯ ಆಗಮನ. ಅವಳ ಸುತ್ತುಮುತ್ತಲೂ ಚಿಗರೆಗಂಗಳ ಚೆಲುವೆಯರ ಬಳಗ. ಎಲ್ಲರ ಮುಖದಲ್ಲಿ ಉಲ್ಲಾಸ. ಮೈಯಲ್ಲಿ ಮಿಂಚು. ಚಪಲ ಕಂಗಳಲ್ಲಿ ಚಿಮ್ಮುವ ಉತ್ಸಾಹ ಎಲ್ಲ ತರಳೆಯರಿಗೂ ಯಮುನೆಯ ತೊರೆಯಲ್ಲಿ ಜಲಕೇಳಿಯಾಡುವ ತವಕ. ಅವರೆಲ್ಲರೂ ಆ ಯಮುನೆಯ ತೀರದಲ್ಲಿ ಲೀಲಾಲೋಲತೆಯಿಂದ ಅಲೆದಾಡುವ ರಾಜಕುಮಾರ ಚಂದ್ರಾಂಗದನ ಮೇಲೆ ದೃಷ್ಟಿಯನ್ನು ಕೇಂದ್ರೀಕರಿಸಿದರು. ಆ ರಾಜಕುಮಾರನೊಡನೆ ಇಬ್ಬರು ಹಾವಿನ ಜಾತಿಯ ಹರೆಯದ ಹುಡುಗರು. ಚಂದ್ರಾಂಗದನು ರಾಜಕುಮಾರಿ ಸೀಮಂತಿನಿಯ ಕಡೆ ಬೊಗಸೆಗಂಗಳನ್ನು ಹೊರಳಿಸಿದ ನಿಟ್ಟಿಸಿ ನೋಡಿದ. ಅವನಿಗೆ ಈ ಸೀಮಂತಿನಿಯನ್ನು ಎಲ್ಲಿಯೋ ನೋಡಿದ ನೆನಪು ಆ ಸಿಹಿ ನೆನಪು ಅವನಿಗೆ ಬಾಯಿ ಮೂಡಿಸಿತು. ಕುದುರೆಯ ಮೇಲೆ ಕುಳಿತೇ ಕನ್ಯೆಯ ಬಳಿ ಸಾರಿದ. ತಾನು ಮೊದಲು ಅಶ್ವದಿಂದ ಕೆಳಗೆ ಇಳಿದ. ಎಳೆದರೆಯದ ಆ ಬಾಲೆಯನ್ನು ಕೇಳಿದ- ''ನೀನು ಯಾರು? ಯಾರ ಮಗಳು? ಯಾರ ಮಡದಿ?'' ಈ ರಾಜಕುಮಾರನ ನೇರಪ್ರಶ್ನೆಯಿಂದ ನಾಚಿ ನೀರಾದಳು ಆ ರಾಜಕುಮಾರಿ. ಅವಳ ಮುಖದಿಂದ ಮಾತೇ ಹೊರಡಲಿಲ್ಲ ಮೌನ ಗೌರಿಯಾಗಿ ರಾಜಕುಮಾರನನ್ನು ನಿರುಕಿಸುತ್ತ ನಿಂತುಕೊಂಡಳು. ಆಗ ಮುಂದೆ ಬಂದವಳು ಅವಳ ಗೆಳತಿ. ದಿಟ್ಟತನದಿಂದ ಚಂದ್ರಾಂಗನ ಪ್ರಶ್ನೆಗೆ ಉತ್ತರ ಕೊಟ್ಟಳು.

**ಗೆಳತಿ:-** ''ಇವಳು ನಮ್ಮ ಗೆಳತಿ. ಮಹಾರಾಜ ಚಿತ್ರವರ್ಮನ ಮಗಳು. ನಿಷಧರಾಜನಾದ ಇಂದ್ರಸೇನನ ಸೊಸೆ. ಯುವರಾಜ ಚಂದ್ರಾಂಗದನ ಪಟ್ಟದರಾಣಿ. ದುರ್ದೈವದಿಂದ ಇವಳ ಪತಿ ಚಂದ್ರಾಂಗದ ಯಮುನೆಯ ಮಡುವಿನಲ್ಲಿ ಮುಳುಗಿದ. ವೈಧವ್ಯದ ದುಃಖ ಈ ರಾಜಕುಮಾರಿಗೆ ದಾಂಪತ್ಯ ಜೀವನದ ಪ್ರಾರಂಭದ ಮಧುರ ಪ್ರಸಂಗದಲ್ಲಿಯೇ ಇವಳ ಮೇಲೆ ಬರಸಿಡಿಲು. ಅದಕ್ಕಾಗಿ ಈ ರಾಜಕುಮಾರಿಯ ಕೊರಗು. ಆ ಚಿಂತಾಸಂತಾಗಳೇ ಇವಳ ಶರೀರ ಶೋಷಣೆಯ ಕಾರಣ ಮೂರು ವರ್ಷಗಳಿಂದ ಆ ಪತಿ ವಿರಹದ ದಳ್ಳುರಿಯಲ್ಲಿ ಬೇಯುತ್ತಲಿದ್ದಾಳೆ ಈ ರಾಜವಧು. ಇಂದು ಸೋಮವಾರ ತಾನೆ? ಯಮುನೆಯಲ್ಲಿ ಮೀಯಬೇಕೆಂದು ನಾವೆಲ್ಲ ಗೆಳತಿಯರೊಂದಿಗೆ ಇಲ್ಲಿಗೆ ಬಂದದ್ದು. ವಿಧಿ ಅವಳ ಮೇಲೆ ಮುನಿದಿದೆ. ಅವಳ ಮನೆತನವನ್ನೇ ತಿಕ್ಕಿ ಮುಕ್ಕುತ್ತಲಿದೆ. ಇವರ ಮಾವನನ್ನೂ ಬಿಟ್ಟಿಲ್ಲ ಆ ನಿಷ್ಠುರವಾದ ನಿಯತಿ. ನಿಷಧ ದೇಶದ ದೊರೆಯಾದ ಇಂದ್ರಸೇನನು ಈಗ ವೈರಿ ವೃಂದದಿಂದ ಪರಾಜಿತ

ಅವನ ಸಾಗರದವರೆಗೆ ಚಾಚಿದ ಸಾಮ್ರಾಜ್ಯವೆಲ್ಲ ಶತ್ರುಗಳಿಂದ ಆಕ್ರಾಂತ. ಆದರಿಂದ ರಾಜಕುಟುಂಬವೇ ಇಂದು ಚಿಂತಾಕ್ರಾಂತ. ರಾಜ ರಾಣಿ ಹಾಗೂ ಪರಿವಾರದವರೆಲ್ಲರೂ ಇಂದು ಪರಕೀಯ ರಾಜರ ಕೈದುಖಾನೆಯಲ್ಲಿ. ಏಕಚ್ಛತ್ರಾಧಿಪತಿಯಾಗಿ ಮೆರೆದ ಆ ಮಹಾರಾಜರ ಬಳಗವೆಲ್ಲವೂ ಇಂದು ಬಂದೀಖಾನೆಯಲ್ಲಿ ಬೆಂದು ನೊಂದಿ ನವೆಯುತ್ತಲಿದೆ ಇಷ್ಟಾದರೂ ಈ ರಾಜಕುಮಾರಿಯು ತನ್ನ ಧರ್ಮಾಚರಣೆಯನ್ನು ಬಿಟ್ಟಿಲ್ಲ. ದೈವೀಪೂಜೆಯನ್ನು ತಪ್ಪಿಸಿಲ್ಲ ಪ್ರತಿ ಸೋಮವಾರವೂ ಈ ಸೀಮಂತಿನಿಯು ಭಕ್ತಿಯಿಂದ ಆ ಉಮಾಮಹೇಶ್ವರನನ್ನು ಪೂಜೆ ಮಾಡುತ್ತಲೇ ಇರುತ್ತಾಳೆ ಅವಳ ದುಖದ ದಿನಗಳನ್ನು ಮರೆಸಬೇಕೆಂದು ನಾವು ಜಲಕ್ರೀಡೆ ಬೇರೆ ಆಟಪಾಟ ಆಡುತ್ತೇವೆ ಆದರೆ ಅವಳು ಮಾತ್ರ ಅಂತರ್ಮುಖಿ, ದುಃಖತಪ್ತಳು. ಗೌರೀಪೂಜೆಗಾಗಿ ಮಾತ್ರ ಅವಳು ಇಲ್ಲಿಗೆ ಬಂದದ್ದು. ಗೆಳತಿಯು ತನ್ನ ದಾರುಣ ವೃತ್ತಾಂತವನ್ನು ಅರುಹುತ್ತಲಿದ್ದಾಗ ಸೀಮಂತಿನಿಯು ಅಪಲಕ ನೇತ್ರಗಳಿಂದ ನಿರುಕಿಸುತ್ತಲೇ ಇದ್ದಳು ಆ ಚಲುವಿನ ಚಂದ್ರಾಂಗದನನ್ನು. ಆ ವ್ಯಕ್ತಿಯನ್ನು ಹಿಂದೆ ನೋಡಿದ ನೆನಪು ಅವಳ ಮನದಲ್ಲಿ ದಟ್ಟವಾಗುತ್ತಲಿತ್ತು. ಮತ್ತೆ ಮತ್ತೆ ಅಡಿಯಿಂದ ಮುಡಿಯವರೆಗೆ ಆ ರಾಜಕುಮಾರನ ಮೇಲೆ ತನ್ನ ದೃಷ್ಟಿಯಿಂದ ನೀರಾಜನಗೈದು ದಿಟ್ಟತನದಿಂದ ತಾನೇ ತಟ್ಟನೇ ಮುಂದೆ ಬಂದು ಕೇಳಿದಳು.

**ಸೀಮಂತಿನಿ:-** 'ಪುಣ್ಯಾತ್ಮ, ತಾವು ಯಾರು? ನಿಮ್ಮ ಎಡಬಲದಲ್ಲಿರುವ ಈ ಇಬ್ಬರೂ ತರುಣರು ಯಾರು? ನನ್ನ ಬಗೆಗೆ ನಿಮಗೇಕೆ ಈ ಕುತೂಹಲ? ನಿಮ್ಮ ಪ್ರಶ್ನೆಯಲ್ಲಿಯೇ ಏನೋ ಒಂದು ಆತ್ಮೀಯತೆಯ ಹೊಳವು. ನನಗೂ ನಿಮ್ಮನ್ನು ನೋಡಿ ಸ್ಮೃತಿ ಸಾಂದ್ರ ವಾಗುತ್ತಲಿದೆ. ನೀವು ನಮ್ಮವರು ಎಂಬ ಅರಿವು ಅಂತರಂಗದಲ್ಲಿ ಹೆಪ್ಪುಗಟ್ಟುತ್ತಲಿದೆ.

ಹೀಗೆ ನುಡಿಯುತ್ತಲಿರುವಾಗ ಅವಳ ಕಂಗಳಿಂದ ಕಣ್ಣೀರು ಕೋಡಿಗಟ್ಟಿ ಹರಿಯಿತು. ಬಿಕ್ಕಿ ಬಿಕ್ಕಿ ದುಃಖಿಸಿದಳು ಆ ರಾಜಕುಮಾರಿ. ಒಮ್ಮೆಲೇ ಅವಳಿಗೆ ಮೂರ್ಛೆ ಬಂದಿತು. ನೆಲದ ಮೇಲೆ ಉರುಳಿ ಬಿದ್ದಳು. ರಾಜಕುಮಾರ ಚಂದ್ರಾಂಗದನಿಗೂ ದುಃಖದ ಒತ್ತಡ. ಒಂದು ಗಳಿಗೆ ಅವನೂ ಸಿಗ್ಧಮುಗ್ಧ. ದುಃಖಸಂಭೃತ. ಕೆಲನಿಮಿಷಗಳಲ್ಲಿಯೇ ರಾಜಕುಮಾರಿ ಚೇತರಿಸಿಕೊಂಡಳು. ಕಣ್ದಾವರೆಗಳು ಪಕಳೆದರೆದವು. ಮತ್ತೊಮ್ಮೆ ರಾಜಕುಮಾರನ ದೇಹ ಯಷ್ಟಿಯನ್ನು ನೆಟ್ಟದೃಷ್ಟಿಯಿಂದ ನಿರೀಕ್ಷಿಸಿದಳು. ಅವನ ಅದೇ ರೂಪ, ಅದೇ ರಂಗ, ಅಂದಿನದೇ ರಮಣೀಯತೆ. ಅದೇ ದೇಹದ ನಿಲುವು. ಅವನ ಚಾರು ಚೆಲುವುಗಳನ್ನೆಲ್ಲ ತೂಗಿ ವಿಮರ್ಶೆಮಾಡಿ ಒಂದು ನಿರ್ಧಾರಕ್ಕೆ ಬಂದಳು. 'ಇವನು ನಿಶ್ಚಿತವಾಗಿಯೂ ನನ್ನ ಮನದನ್ನನೇ. ನನ್ನ ಕೊರಳಿಗೆ ಮಂಗಳಸೂತ್ರವನ್ನು ಕಟ್ಟಿದ ನನ್ನ ಭಾಗ್ಯ ದೇವತೆಯೇ ಇವನು ನನ್ನ ಪತಿಯೆನ್ನುವ ವಿಷಯದಲ್ಲಿ ಸಂದೇಹವಿಲ್ಲ. ಇಲ್ಲದಿದ್ದರೆ ಸಂಸ್ಕಾರ ಸಂಪನ್ನವಾದ ನನ್ನ ಹೃದಯವು ಇವನಲ್ಲಿ ಹೀಗೆ ರಾಗಾನುರಾಗಗಳನ್ನುಹೇಗೆ ತಳೆದೀತು? ನನ್ನ ಪ್ರೇಮ ಪ್ರವಾಹವು ಹರಿದು. ಇಲ್ಲಿ ಮಡುಗಟ್ಟಬೇಕಾದರೆ ಇವನು ನನ್ನ ಪತಿ ಪರಮೇಶ್ವರನೇ ಆಗಿರಬೇಕು. ಆದರೆ ದುರ್ವಿಧಿಯ ವಶಳಾದ ಈ ಅಭಾಗಿನಿಗೆ ಮರಣ ಹೊಂದಿದ ಪತಿದೇವನ ದರ್ಶನದ ಭಾಗ್ಯವು ಇಂದು ಒದಗಿಬಂದದ್ದು ನಿಜವೆ? ಇದೇನು ಕನಸೊ? ಬುದ್ಧಿಭ್ರಾಂತಿಯೋ? ಅಥವಾ ಮುನಿಪತ್ನಿಯಾದ ಮೈತ್ರೇಯಿಯು ನನಗೆ ಉಪದೇಶಿಸಿದ ಗೌರೀ ಪೂಜೆಯ ಪುಣ್ಯಫಲದ ಪರಿಣಾಮವೋ? ನನಗೆ ಆ ಋಷಿ ರಮಣಿಯು ಹೇಳಿದಂತೆ ಎಂಥ ಕುತ್ತು ಆಪತ್ತುಗಳು ಬಂದರೂ ನಾನು ತಪ್ಪದೇ ಆ ಉಮಾಮಹೇಶ್ವರರ ಪೂಜೆಯನ್ನು ಆಚರಿಸುತ್ತಲೇ ಬಂದಿದ್ದೇನೆ. ವ್ಯರ್ಥ ಹೇಗೆ ಆದೀತು ಆ ಗೌರಿ ಪೂಜೆ? ಸತ್ಯ ಸಂಧರಾದ ಓರ್ವ ಬ್ರಾಹ್ಮಣ ಶ್ರೇಷ್ಠರು ಹತ್ತು ಸಾವಿರ ವರ್ಷ ನನಗೆ

ಸೌಭಾಗ್ಯ ಪ್ರದಾನವನ್ನು ಆಶೀರ್ವಾದಮಾಡಿ ಹರಿಸಿದ್ದಾರೆ. 'ವಿಪ್ರವಾಕ್ಯೋ ಜನಾರ್ದನಃ' ಎಂಬ ನುಡಿ ಅವ್ಯಭಿಚರಿತವಲ್ಲವೆ? ಆ ಶ್ರೇಷ್ಠ ಬ್ರಾಹ್ಮಣನ ವಚನದ ಸತ್ಯ ಸ್ವರೂಪವೇ ನನ್ನ ಎದುರು ಈ ನನ್ನ ಸೌಭಾಗ್ಯ ದೇವತೆಯ ರೂಪದಿಂದ ಸಾಕಾರವಾಗಿ ನಿಂತುಕೊಂಡಿದೆ. ನನಗೆ ಇತ್ತೀಚಿನ ದಿನಗಳಲ್ಲಿ ಮಂಗಳ ಸೂಚಕವಾದ ಅನೇಕ ಶುಭಶಕುನಗಳು ಕಂಡುಬರುತ್ತಿವೆ. ಪಾರ್ವತೀಪ್ರಾಣನಾಥನಾದ ಪರಮೇಶ್ವರನು ಪ್ರಸನ್ನನಾದ ಬಳಿಕ ಯಾವುದು ತಾನೇ ಅಪ್ರಾಪ್ಯ? ಮೃತ್ಯುಂಜಯನ ಪರಮಾನುಗ್ರಹ ಪ್ರಭಾವದಿಂದ, ನನ್ನ ಗೌರೀಪೂಜೆಯ ಪುಣ್ಯದಿಂದ ಮೃತನಾದ ನನ್ನ ಪತಿ ಇವನೇ ಆಗಿ ಬಂದಿರ ಬಹುದಲ್ಲವೆ?'' ಎಂದು ಮತ್ತೆ ಮತ್ತೆ ಮನದಲ್ಲಿಯೇ ವಿಚಾರಿಸಿ ತನ್ನ ನಿರ್ಣಯ ಸರಿಯಾದುದು ಎಂದು ಅಂತರಂಗದಲ್ಲಿಯೇ ನಿರ್ಧರಿಸಿಕೊಂಡಳು. ಎದುರು ನಿಂತುಕೊಂಡವ ತನ್ನ ಪ್ರಾಣಪ್ರಿಯ ಪತಿಯೇ ಎಂದು ನಿಶ್ಚಯವಾದ ಬಳಿಕ ಅವನ ಕಡೆ ನೋಡಲು ಅವಳಿಗೆ ನಾಚಿಕೆ ಎನಿಸಿತು. ಆ ಲಜ್ಜೆಯಯಿಂದ ಅವಳು ಮುಖವನ್ನು ತಗ್ಗಿಸಿ ಉಗುರಿನ ತುದಿಯಿಂದ ನೆಲವನ್ನು ಕೆದುರುತ್ತ ನಿಂತುಕೊಂಡಳು. ಆಗ ರಾಜಕುಮಾರನು ಅವಳನ್ನು ಸಂತೈಸುತ್ತ ನುಡಿದ.

**ಚಂದ್ರಾಂಗದ:-** ಸುಂದರಿ, ನಾನು ಮೊದಲು ಶೋಕಸಂತಪ್ತರಾದ ನನ್ನ ತಾಯಿ ತಂದೆಗಳ ಬಳಿಗೆ ಹೋಗಿ ಈ ಸಮಾಚಾರವನ್ನು ತಿಳಿಸುತ್ತೇನೆ. ನಿನಗೆ ಕಲ್ಯಾಣವಾಗಲಿ. ನಿನ್ನ ಪತಿ ನಿನಗೆ ಬೇಗನೆ ದೊರೆಯಲಿರುವನು. ಹೀಗೆ ಹೇಳಿ ಅಶ್ವಾರೂಢನಾದ ಅರಸುಕುಮಾರ ಚಂದ್ರಾಂಗದ. ಅವನ ಇಬ್ಬರು ಪ್ರಿಯಮಿತ್ರರು ಅವನ ಹಿಂಬಡ ತುಳಿಯುತ್ತಲೇ ಹಿಂದಿನಿಂದ ಹೊರಟರು. ನೇರವಾಗಿ ಅವನು ತನ್ನ ರಾಜ್ಯಕ್ಕೆ ಬಂದ. ಅಲ್ಲಿಂದ ಮೂವರೂ ರಾಜಧಾನಿಗೆ ಆಗಮಿಸಿದರು. ಅದರ ಬಾಹ್ಯೋದ್ಯಾನದ ಬಳಿಯಲ್ಲಿ ಚಂದ್ರಾಂಗದನು ತಾನು ನಿಂತುಕೊಂಡ. ತನ್ನ ಮಿತ್ರನಾದ ತಕ್ಷಕ ಕುಮಾರನನ್ನು ತನ್ನ ವೈರಿ ರಾಜನ ಕಡೆಗೆ ಕಳುಹಿಸಿಕೊಟ್ಟ. ಆ ನಾಗಕುಮಾರನು ಇಂದ್ರಸೇನ ಮಹಾರಾಜನ ಸಿಂಹಾಸನವನ್ನು ಆಕ್ರಮಿಸಿಕೊಂಡು ಕುಳಿತ ಇವರ ದಾಯಾದಿ ಆದ ಆ ಹೊಸ ದೊರೆಯ ಬಳಿಗೆ ಬಂದ. ಮತ್ತು ಎಚ್ಚರಿಕೆಯ ಗಂಟೆ ಬಾರಿಸಿದಂತೆ ಆಜ್ಞಾಪನೆಯ ಧಾಟಿಯಲ್ಲಿ ಧೈರ್ಯದಿಂದ ನುಡಿದ. ''ಅಧಿಕಾರಿಗಳೇ, ನೀವೆಲ್ಲರೂ ಇಂದ್ರಸೇನ ಮಹಾರಾಜನ ರಾಜ್ಯವನ್ನು ಆಕ್ರಮಿಸಿಕೊಂಡದ್ದು ಘೋರ ಅನ್ಯಾಯ. ಮಹಾಅಪರಾಧ, ಮಹಾರಾಜ ಇಂದ್ರಸೇನನನ್ನು ಬಂದೀಖಾನೆಯಲ್ಲಿ ಇರಿಸಿದ್ದಂತೂ ಅಕ್ಷಮ್ಯ ಅಪರಾಧ. ಈಗಲೇ ಬಿಡಗುಡೆ ಮಾಡಿರಿ ಆ ಮಹಾರಾಜನನ್ನು. ಕೂಡಲೇ ಈ ಸಿಂಹಾಸನವನ್ನು ಬಿಟ್ಟು ಬಿಡಿರಿ. ಇಲ್ಲವೇ ಪ್ರಾಣವನ್ನು ಬಿಟ್ಟುಬಿಡಿರಿ. ಚಂದ್ರಾಂಗದನು ಇದೀಗ ಪಾತಾಳ ಲೋಕದಿಂದ ಮರಳಿ ಬಂದಿದ್ದಾನೆ. ನಾವಿಬ್ಬರೂ ನಾಗಕುಮಾರರು ಅವನ ಬೆಂಬಲಿಗರಾಗಿ ಅವನಿಗೆ ಸಹಾಯ ಸಲ್ಲಿಸಲೆಂದೇ ಇಲ್ಲಿಗೆ ಬಂದಿದ್ದೇವೆ. ಚಂದ್ರಾಂಗದನು ಯಮುನೆಯ ಮಡುವಿನಲ್ಲಿ ಮುಳುಗಿ ಮರಣ ಹೊಂದಲಿಲ್ಲ. ಮಡುವಿನ ಆಳಕ್ಕೆ ಇಳಿದ. ನಾಗ ಕನ್ಯೆಯರು ಅವನನ್ನು ಪಾತಾಳಲೋಕದ ತಕ್ಷಕ ಗೃಹಕ್ಕೆ ಕರೆದೊಯ್ದುರು. ಅಲ್ಲಿ ತಕ್ಷಕ ನಾಗನ ಸಂಪೂರ್ಣ ಸಹಾಯ ಸಹಕಾರಗಳನ್ನು ಪಡೆದು ಅವನು ತನ್ನ ಸಾಮ್ರಾಜ್ಯವನ್ನು ಮರಳಿ ಪಡೆಯುವುದಕ್ಕಾಗಿ ಈ ರಾಜಧಾನಿಯ ಬಾಹ್ಯೋಧ್ಯಾನದ ಬಳಿಯಲ್ಲಿ ಬಂದು ನಿಂತುಕೊಂಡಿದ್ದಾನೆ. ನೀವು ಒಳ್ಳೆಯ ಮಾತಿನಿಂದ ಅವನ ರಾಜ್ಯವನ್ನು ಅವನಿಗೆ ಮರಳಿ ಒಪ್ಪಿಸದಿದ್ದರೆ ಈ ಕ್ಷಣದಲ್ಲಿಯೇ ಅವನ ಹಸಿದ ಹದನವಾದ ಬಾಣಗಳು ನಿಮ್ಮ ಪ್ರಾಣ ತೆಗೆದುಕೊಳ್ಳದೇ ಬಿಡಲಾರವು.'' ತಕ್ಷಕ ಕುಮಾರನ ಈ ಮಾತು ಕೇಳಿ ಭಯ ಭ್ರಾಂತರಾದರು ವೈರಿ ವೀರರು. ನಾಗ ವೀರರ ಹಾಗೂ ತರುಣ ರಾಜಕುಮಾರ ಚಂದ್ರಾಂಗದನ

ದಾಳಿಯ ಭಯದಿಂದ ಗದಗುಟ್ಟಿ ನಡುಗ ತೊಡಗಿದರು. ತಕ್ಷಕ ಕುಮಾರನ ಅಪ್ಪಣೆಯನ್ನು ತಲೆಬಾಗಿ 'ಹಾಗೇ ಆಗಲಿ ನೀವು ಹೇಳಿದಂತೆ ನಡೆಯುತ್ತೇವೆ' ಎಂದು ಹೇಳಿ ಸಿಂಹಾಸನದಿಂದ ಕೆಳಗೆ ಇಳಿದು ಚಂದ್ರಾಂಗದನಿಗೆ ಶರಣು ಬಂದರು. ಸಾಮ್ರಾಜ್ಯ, ಸಿಂಹಾಸನ, ಅಧಿಕಾರ, ಐಶ್ವರ್ಯಗಳನ್ನೆಲ್ಲ ಮರಳಿ ಚಂದ್ರಾಂಗದನಿಗೆ ಒಪ್ಪಿಸಿದರು. ಮತ್ತು ತಾವಾಗಿಯೇ ಹೋಗಿ ಬಂದಿಮನೆಯಲ್ಲಿ ಸೆರೆಯಿಟ್ಟ ಇಂದ್ರಸೇನ ಕುಟುಂಬದವರನ್ನು ಬಿಡುಗಡೆ ಮಾಡಿದರು. ಅವನಿಗೆ ಮಗನು ಮರಳಿ ಬಂದ ಸಮಾಚಾರವನ್ನು ತಿಳಿಸಿ ಸಾಮ್ರಾಜ್ಯಾಧಿಪತ್ಯವನ್ನು ಮರಳಿ ತಾವೇ ಸ್ವೀಕರಿಸಬೇಕೆಂದು ಬಿನ್ನವಿಸಿಕೊಂಡರು.

ಮಗನು ಯಮುನೆಯ ಮಡಿಲಲ್ಲಿ ಅಳುಮಡುವಿನಲ್ಲಿ ಮುಳುಗಿ ಹೋಗಿದ್ದಾನೆಂದು ಮಿಡುಕುತ್ತಲಿರುವ ಆ ರಾಜದಂಪತಿಗಳಿಗೆ ಆ ಮಗನು ಮರಣ ಹೊಂದದೇ ಬದುಕಿ ಬಂದಿದ್ದಾನೆ ಎಂಬ ಸಮಾಚಾರ ಕೇಳಿಯೇ ಪರಮಾನಂದವಾಯಿತು. ಮಗನೀರಿನಲ್ಲಿ ಮುಳುಗಿಲ್ಲ ಎಂಬ ಸಂತಸದ ಸುದ್ದಿ ಆ ದಂಪತಿಗಳನ್ನು ಆನಂದಸಾಗರದಲ್ಲಿ ಮುಳುಗಿಸಿತು. ಎಲ್ಲ ನಾಗರಿಕರೂ ಮಂತ್ರಿ ಪುರೋಹಿತರೂ ಪ್ರಜಾಪರಿವಾರದವರೂ ನಗರವನದಲ್ಲಿ ನಿಂತುಕೊಂಡ ಚಂದ್ರಾಂಗದನನ್ನು ಭೇಟಿಮಾಡಿದರು. ಪ್ರೀತಿಯಿಂದ ತಬ್ಬಿಕೊಂಡರು. ಪ್ರೀತಿಯಿಂದ ಆದರಿಸಿ ಅವನನ್ನು ಮಹಾರಾಜನ ಬಳಿಗೆ ಕರೆದುಕೊಂಡು ಬಂದರು.

ಚಂದ್ರಾಂಗದನು ತಾಯಿ ತಂದೆಗಳ ಚರಣವನ್ನು ತನ್ನ ಹರ್ಷಾಶ್ರುಗಳಿಂದ ತೊಳೆದ. ಪಾದಪ್ರಣತನಾದ ಪುತ್ರನನ್ನು ಕೈ ಹಿಡಿದು ಎಬ್ಬಿಸಿ ಇಂದ್ರಸೇನ ಅಂತಃಕರಣದಿಂದ ಆಲಿಂಗಿಸಿಕೊಂಡ. ಅವನ ತಾಯಿಯು ಪರಮೇಶ್ವರನ ಪ್ರಸಾದದಿಂದ ಮೃತ್ಯು ಮುಖದಿಂದ ಎದ್ದು ಬಂದ ಆ ಮಗನನ್ನು ಮೈದಡವಿ, ನೆತ್ತಿ ಮೂಸಿ 'ಆಯುಷ್ಮಂತನಾಗು' ಎಂದು ಹೃದಯತುಂಬಿ ಹರಿಸಿದಳು. ನಂತರ ಚಂದ್ರಾಂಗದನು ಎಲ್ಲ ಪರಿವಾರ ವರ್ಗದವರನ್ನು ಭೇಟಿಮಾಡಿ, ಸಂತೈಸಿ, ಸತ್ಕರಿಸಿ ರಾಜಸಭೆಯಲ್ಲಿ ತಾನು ಯಮುನೆಯ ಆಳದಲ್ಲಿ ಇಳಿದಂದಿನಿಂದ ಇಲ್ಲಿಯವರೆಗೆ ಎಲ್ಲ ಸಮಾಚಾರವನ್ನು ತಿಳಿಸಿದ. ಮತ್ತು ನಾಗರಾಜ ತಕ್ಷಕನ ಜೊತೆಗೆ ಇತ್ತೀಚೆಗೆ ಕುದುರಿದ ತನ್ನ ಮಿತ್ರತ್ವದ ಸಮಾಚಾರವನ್ನೂ ತಿಳಿಸಿದ.

ಪಾತಾಳದವರೆಗೂ ತನ್ನ ಪ್ರೀತಿಯ ಸಾಮ್ರಾಜ್ಯ ವಿಸ್ತರಿಸಿ. ನಾಗಲೋಕದ ಜನರ ಹೃದಯವನ್ನು ಗೆದ್ದು ಬಂದ ತನ್ನ ಪುತ್ರನ ಪುನರ್ಜೀವನ ಹಾಗೂ ಮನೋದಿಗ್ವಿಜಯದ ವಾರ್ತೆಯನ್ನು ಕೇಳಿ ಹರ್ಷ ವಿಹ್ವಲರಾದರು ಇಂದ್ರಸೇನ ದಂಪತಿಗಳು. ಮಡಿದು ಹೋಗಿದ್ದಾನೆ ಎಂದು ನಂಬಿದ್ದ ತನ್ನ ಮಗನು ಮತ್ತೆ ಮರಳಿ ಹೊಸ ಹುಟ್ಟು ಪಡೆದಂತೆ ಮೃತ್ಯುಂಜಯನಾಗಿ, ಸರ್ವೇಶ್ವರನಿಂದ ಸತ್ಕಾರವನ್ನು ಹೊಂದಿ, ಆಯುಷ್ಮಂತನಾಗಿ ಬಂದದ್ದು ತನ್ನ ಸೊಸೆ ಸೀಮಂತಿನಿಯು ಅವಿರತವಾಗಿ ಅನುಷ್ಠಾನಗೈದ ಉಮಾಮಹೇಶ್ವರರ, ಪೂಜೆಯ ಪರಿಣಾಮವೇ ಎಂದು ಅವರು ನಿಶ್ಚಯ ಮಾಡಿಕೊಂಡರು. ಈ ಮಂಗಳಕ ವಾರ್ತೆಯನ್ನು ಚಂದ್ರಾಂಗದನ ಮಾವನಾದ ಚಿತ್ರವರ್ಮ ಮಹಾರಾಜನಿಗೆ ದೂತರ ಮುಖಾಂತರ ತಲುಪಿಸಿದರು. ಚಿತ್ರವರ್ಮ ಮಹಾರಾಜನಿಗೆ ಅಳಿದು ಹೋದ ಅಳಿಯನು ತನ್ನ ಮಗಳು ಮಾಡಿದ ಗೌರೀಪೂಜೆಯ ಮಹಿಮೆಯಿಂದ ಪುನಃ ಸಂಜೀವಿತನಾಗಿ ಬಂದದ್ದನ್ನು ಕೇಳಿ ಆನಂದಕ್ಕಿಂತ ಆಶ್ಚರ್ಯ ಆಯಿತು. ಆಶ್ಚರ್ಯಕ್ಕಿಂತ ಧನ್ಯತೆ ಎನಿಸಿತು. ಧನ್ಯತೆಗಿಂತ ಕೃತಕೃತ್ಯತೆ ಮೂಡಿತು. ಕೃತಕೃತ್ಯತೆಗಿಂತ ಪರಮೇಶ್ವರನಲ್ಲಿ ಭಕ್ತಿ ಉದಿಸಿತು. ಗೌರೀ ದೇವಿಯನ್ನು ಶ್ರದ್ಧೆಯಿಂದ ಪೂಜಿಸಿದ ಸೊಸೆಯ ವಿಷಯದಲ್ಲಿ ಪ್ರೀತಿ, ಅನುಕಂಪ, ಆದರ ಮುಂತಾದ ಭಾವನೆಗಳು ಅಂತರಂಗದಲ್ಲಿ ಅವರಿಗೆ ಉತ್ತರಂಗಿತವಾದವು. ಈ ಸಿಹಿ ಸುದ್ದಿ ತಂದ ಸಂದೇವಾಹಕರಿಗೆ ಧನ ಕನಕ ಮಣಿ ಮುಕ್ತಾಹಾರಗಳನ್ನು ಕೊಟ್ಟು ಸತ್ಕರಿಸಿದರು.

ತನ್ನ ಮಗಳಾದ ಸೀಮಂತಿನಿಯನ್ನು ಕರೆದು ವೈಧವ್ಯದ ವೇಷ ತೆಗೆಯಿಸಿ ಇಷ್ಟು ದಿನ ಅವಳು ಪರಿತ್ಯಾಗ ಮಾಡಿದ ಮಾಂಗಲ್ಯದ ವಸ್ತು ವಡವೆಗಳನ್ನೆಲ್ಲ ಇಡಿಸಿದನು. ಬೆಲೆಬಾಳುವ ಬಟ್ಟೆ ಪೀತಾಂಬರಗಳನ್ನು ಉಡಿಸಿದನು. ಬಗೆ ಬಗೆಯ ರತ್ನಾಭರಣಗಳನ್ನು ತೊಡಿಸಿ ಅವಳನ್ನು ಶೃಂಗಾರಗೊಳಿಸಿದನು. ಅಲಂಕೃತಳಾದ ತನ್ನ ಪುತ್ರಿಯನ್ನು ಸಡಗರದಿಂದ ತಂದು ಚಂದ್ರಾಂಗದನಿಗೆ ಒಪ್ಪಿಸಿದನು. ಚಂದ್ರಾಂಗದನು ನಾಗಲೋಕಾಧೀಶ್ವರನಾದ ತಕ್ಷಕನಿಂದ ಕಾಣಿಕೆ ರೂಪವಾಗಿ ಪಡೆದುತಂದ ಮುತ್ತು ರತ್ನಗಳ ಸರಮಾಲೆ ಹಾಗೂ ಆಭರಣಗಳನ್ನು ಸೀಮಂತಿನಿಗೆ ಇಡಿಸಿ ತೊಡಿಸಿ ಆನಂದಪಟ್ಟನು. ಪತಿಯೊಡನೆ ಪುನರ್ಮಿಲನ ಹೊಂದಿದ ಪತಿವ್ರತೆಯಾದ ಸೀಮಂತಿನಿಯು ಅಂದು ತನ್ನ ಅಂಗಾಂಗಗಳಿಗೆ ಲೇಪಿಸಿಕೊಂಡ ಅಂಗರಾಗಗಳ ಸೌಗಂಧವು ನೂರಾರು ಮೈಲುಗಳ ವರೆಗೆ ಪರಿಮಳಿಸುತ್ತಿತ್ತು ಸೌರಭವನ್ನು ಸೂಸುತ್ತ. ಹೀಗೆ ಶೃಂಗಾರಿತಳಾದ ತನ್ನ ವಧುವನ್ನು ಕರೆದುಕೊಂಡು ಮಾವನ ಅಪ್ಪಣೆಪಡೆದು ಅಂತಃಪುರದಲ್ಲಿರುವ ತನ್ನ ತಾಯಿ ತಂದೆಗಳಿಗೆ ಚಂದ್ರಾಂಗದ ಪ್ರಣಾಮಗೈದ. ಮುಂದೆ ಇಂದ್ರಸೇನ ಮಹಾರಾಜ ತನ್ನ ಸದ್ಗುಣ ಮಂಡಿತನಾದ ಪುತ್ರನನ್ನು ಉತ್ತರಾಧಿಕಾರಿಯನ್ನಾಗಿ ನಿಯಮಿಸಿ ರಾಜಗದ್ದುಗೆಯ ಮೇಲೆ ಕೂಡಿಸಿ ಪಟ್ಟಾಭಿಷೇಕಗೈದ. ಅನಂತರ ತಾನು ತಪೋನುಷ್ಠಾನಗಳಿಂದ ಶ್ರೀಕಂಠನ ಪರಮ ಪ್ರಸಾದವನ್ನು ಪಡೆಯಲು ಅರಣ್ಯಕ್ಕೆ ತೆರಳಿದ. ಅಲ್ಲಿ ವನಾಂತದ ಏಕಾಂತದಲ್ಲಿ ಕುಳಿತು ಶಿವೋಪಾಸನೆಗೈದು ಉತ್ತಮ ಗತಿಯನ್ನು ಐದಿದ. ಇತ್ತ ಮಹಾರಾಜ ಚಂದ್ರಾಂಗದ ತನ್ನ ಧರ್ಮಪತ್ನಿ ಸೀಮಂತಿನಿಯೊಂದಿಗೆ ಹತ್ತುಸಾವಿರ ವರ್ಷ ರಾಜ್ಯ ಆಳಿದ ನಿಷ್ಕಂಟಕವಾಗಿ. 'ಅಷ್ಟಪುತ್ರ ಸೌಭಾಗ್ಯವತೀಭವ' ಎಂಬ ಹಿರಿಯರ ಹರಕೆ ಹುಸಿಯಾಗಲಿಲ್ಲ ಆ ಮಹಾಪತಿವ್ರತೆಯ ವಿಷಯದಲ್ಲಿ. ಎಂಟು ಮಕ್ಕಳು ಜನಿಸಿದರು. ಸೀಮಂತಿನಿಯ ಪ್ರತಿರೂಪದಂತಿರುವ ಓರ್ವ ಕನ್ಯಾಮಣಿಯೂ ಹುಟ್ಟಿದಳು. ಸೀಮಂತಿನಿಗೆ ಬೇಡಿದ ಬಯಸಿದ ಭೋಗ್ಯಭಾಗ್ಯಗಳೆಲ್ಲ ಬಂದರೂ ಸುಖಸಮೃದ್ಧಿಯ ಭೋಗ್ಯಭಾಗ್ಯಗಳಲ್ಲಿ ಅವಳು ಓಲಾಡುತ್ತಿದ್ದರೂ ಒಂದು ದಿನವೂ ತಪ್ಪಲಿಲ್ಲ ಅವಳ ಪರಮೇಶ್ವರ ಪೂಜೆ ಒಂದು ಸೋಮವಾರವೂ ಪಾರ್ವತೀ ಪೂಜೆಯನ್ನು ಅವಳು ಬಿಡಲಿಲ್ಲ. ಈ ಪಾರ್ವತೀ ಪರಮೇಶ್ವರರ ಸತತ ಆರಾಧನೆಯ ಫಲವಾಗಿ ಅವಳ ಭಾಗ್ಯ ಸೌಭಾಗ್ಯಗಳು ಅಭಿವೃದ್ಧಿ ಹೊಂದುತ್ತಲೇ ಇದ್ದವು. ಸುಖ ಸಂಪದಗಳು ತುಳುಕುತ್ತಲೇ ಇದ್ದವು ಅವಳ ಬಾಳಿನುದ್ದಕ್ಕೂ, ಹೀಗೆ ಸೋಮವಾರ ವ್ರತದ ಪ್ರಭಾವದಿಂದ ಕಳೆದುಹೋದ ತನ್ನ ಸೌಭಾಗ್ಯವನ್ನು ಮರಳಿ ಪಡೆದು ಆದರ್ಶ ಮಹಿಳೆ ಎನಿಸಿದಳು ಆ ಸೀಮಂತಿನಿ.

## ಅಡವೀಪಾಲಾದ ಅರಸಿ ಹಾಗೂ ಅರಸು ಕುಮಾರನಿಗೆ ಶಿವಯೋಗಿನಿಂದ ಧರ್ಮೋಪದೇಶ

**ಸೂತ:-** ದಶಾರ್ಣ ದೇಶದಲ್ಲಿ ಓರ್ವ ವಿಕ್ಷಿಪ್ತ ರಾಜ. ವಜ್ರಬಾಹು ಅವನ ಹೆಸರು. ಅವನಿಗೆ ಸುಮತಿ ಎಂಬ ಓರ್ವ ಸಾಧ್ವೀಮಣಿ ಧರ್ಮಪತ್ನಿ. ಒಂದು ಗಂಡುಮಗು ಹುಟ್ಟಿತು ಆ ರಾಜದಂಪತಿಗಳಿಗೆ. ಕೆಲವುದಿನ ಕಳೆದವು ಯಾವುದೋ ಒಂದು ಭೀಕರ ರೋಗ ಆವರಿಸಿತು ಆ ತಾಯಿ ಮಕ್ಕಳನ್ನು. ಮಹಾರಾಜನಿಗೆ ಮಡದಿ ಹಾಗೂ ಮಗನ ಮೈಗೆ ತಗುಲಿದ ರೋಗ ಕಂಡು ಜಿಗುಪ್ಸೆ ಅಂತಃಪುರದ ಅನೇಕ ಬಣ್ಣದ ಬೀಸಣಿಕೆಗಳು ಜಾತಕ ಹಕ್ಕಿಯಂತೆ ಅವನ ಪ್ರೀತಿಯ ಹನಿಗಾಗಿ ಕಾತರಿಸಿದ್ದವು. ಅವರಲ್ಲಿ ಮೋಹ ಸ್ವಾರ್ಥಿ ದೊರೆಗೆ. ನಿಷ್ಕರುಣೆಯಿಂದ ಶುಷ್ಕವಾಗಿತ್ತು. ರಾಣಿಯ ಬಗ್ಗೆ ಅವನ ಅಂತಃಕರಣ. ಆ ಕಲ್ಲು ಮನಸ್ಸಿನ ದಶಾರ್ಣದ ದೊರೆ ಬಿಟ್ಟು ಬಿಟ್ಟ ಆ ಮಡದಿ ಹಾಗೂ ಮಗುವನ್ನು ಅರಣ್ಯದಲ್ಲಿ. ಕಾಡಿನಲ್ಲಿ ದುರ್ಬುದ್ಧಿಯ ಮಹಾರಾಜನಿಂದ

ತ್ಯಜಿಸಲ್ಪಟ್ಟ ಆ ರಾಣಿಯು ತನ್ನ ಮಗುವನ್ನು ಹೊತ್ತುಕೊಂಡು ಕಲ್ಲುಮುಳ್ಳು ತುಳಿಯುತ್ತ ನಡೆದಳು. ಅರಣ್ಯದ ದಾರಿ ಮುಂದೆ ಹೋದಂತೆ ದುರ್ಗಮವಾಗಿತ್ತು. ಆ ಬೆಂಗಾಡನ್ನು ಸೀಳಿಕೊಂಡು ಆ ರಾಜಾಂಗನೆಯು ಮುಂದೆ ನಡೆದಾಗ ಅಲ್ಲಿ ಒಂದು ನಗರವು ಕಾಣಿಸಿತು. ಅದೊಂದು ವೈಶ್ಯಪುರಿ. ಪದ್ಮಾಕರ ಎಂಬ ಹೆಸರಿನ ದೊಡ್ಡ ವೈಶ್ಯ ಆ ನಗರ ರಕ್ಷಕ. ಕುಬೇರನಿಗೆ ಕಡಿಮೆ ಇರಲಿಲ್ಲ ಅವನ ಐಶ್ವರ್ಯ ಕೋಶ. ಅದೇ ವೇಳೆಯಲ್ಲಿ ಆ ವೈಶ್ಯರಾಜನ ಅಂತಃಪುರದಲ್ಲಿ ಪರಿಚಾರಿಕೆಯಾಗಿ ಸೇವೆ ಮಾಡುವ ಓರ್ವ ದಾಸಿಯು ಅದೇ ದಾರಿಯಿಂದ ರಾಜಭವನಕ್ಕೆ ಹೊರಟಿದ್ದಳು. ಅವಳು ದಾರಿಯಲ್ಲಿ ಈ ದಶಾರ್ಣ ದೇಶದ ರಾಜಮಹಿಷಿಯನ್ನು ದೂರಿಂದಲೇ ನೋಡಿದಳು. ಅವಳನ್ನು ನೋಡಿದ ಕೂಡಲೇ ತಿಳಿದುಹೋಯಿತು ಆ ದುರ್ದೈವಿ ರಾಜಪತ್ನಿಯ ದುಃಖ ದುರವಸ್ಥೆಯ ದೌರ್ಭಾಗ್ಯ. ಸ್ನೇಹಾರ್ದ್ರ ಸ್ವರದಲ್ಲಿ ಆ ದಾಸಿಯು ಈ ರಾಜಮಹಿಷಿಯನ್ನು ಸಂತೈಸಿ ಅವಳನ್ನು ವೈಶ್ಯರಾಜನ ಅಂತಃಪುರಕ್ಕೆ ಕರೆದೊಯ್ದಳು. ವೈಶ್ಯರಾಜನ ಆ ವನಿತಾ ಮಣಿಯು ಈ ರಾಣಿಯ ದುಃಖ ದುಮ್ಮಾನಗಳನ್ನರಿತು ಮರುಕಗೊಂಡಳು. ಅವಳಿಗೂ ಅವಳ ಮಗನಿಗೂ ತಗುಲಿದ ರೋಗವನ್ನು ತನ್ನ ಪತಿಯ ಕಣ್ಣಿಗೆ ಹಾಕಿದಳು. ಅದನ್ನು ಕಂಡು ಕೆಡುಕೆನಿಸಿತು ವೈಶ್ಯ ರಾಜನಿಗೆ ಅವನ ಹೃದಯ ಹಿಂಡಿತು. ರೋಗಗ್ರಸ್ತಳಾದ ರಾಣಿಯನ್ನು ತಾನಾಗಿ ಕೇಳಿದ. ಎಲ್ಲ ವೃತ್ತಾಂತವನ್ನು ಅವಳಿಂದ ತಿಳಿದುಕೊಂಡ. ಆ ರಾಣಿ ಹಾಗೂ ರಾಜಪುತ್ರರನ ಶೋಚನಿಯ ಪರಿಸ್ಥಿತಿಯನ್ನು ತಿಳಿದು ತನ್ನ ಮನೆಯ ಬಳಿಯಲ್ಲಿಯೇ ಒಂದು ಏಕಾಂತ ಗೃಹದಲ್ಲಿ ಅವರನ್ನು ಇರಿಸಿದ. ಅವರಿಗೆ ಬೇಕಾದ ಅನ್ನ, ವಸ್ತ್ರ, ನೀರು, ಆಸನ, ಹಾಸಿಗೆ, ಹೊದಿಕೆ ಎಲ್ಲದಕ್ಕೂ ಸರಿಯಾಗಿ ಏರ್ಪಾಡು ಮಾಡಿದ. ತನ್ನ ತಾಯಿಯಂತೆಯೇ ಆ ರಾಜರಮಣಿಗೆ ಗೌರವಾದರಗಳನ್ನು ಸಲ್ಲಿಸಿದ. ಅನೇಕ ರಾಜವೈದ್ಯರನ್ನು ಕರೆಸಿ ಅವರಿಂದ ಉಪಚಾರ ಮಾಡಿಸಿದ. ಹಲವಾರು ದಿನಗಳು ಹೀಗೇ ಉರುಳಿದವು. ವೈಶ್ಯರಾಜನು ವೈದ್ಯರಿಂದ ಎಷ್ಟು ಉಪಚಾರ ಮಾಡಿಸಿದರೂ ಅವಳ ರೋಗ ವಾಸಿಯಾಗಲಿಲ್ಲ. ವೈದ್ಯಕೀಯ ಚಿಕಿತ್ಸೆಗೆ ಮಣಿಯದಷ್ಟು ಉಲ್ಬಣಿಸಿತ್ತು ಆ ರಾಜಪುತ್ರನ ರೋಗ ರಾಜಕುಮಾರ ಮರಣ ಹೊಂದಿದ. ಮಗನ ಮರಣ ಆ ಅನಾಥಮಾತೆಯ ಬಾಳಿನಲ್ಲಿ ಒಂದು ದೊಡ್ಡ ವಜ್ರಪಾತ. ಬುಡಕಡಿದ ಬಳ್ಳಿಯಂತೆ ನೆಲದ ಮೇಲೆ ಉರುಳಿಬಿದ್ದಳು ಆ ನಿರ್ಗತಿಕ ನಾರಿ. ಮೂರ್ಛೆ ತನ್ನ ಸೆರಗು ಹೊಚ್ಚಿತು ಅವಳ ಮೇಲೆ ಆ ವೈಶ್ಯನ ವನಿತೆ ಹಾಗೂ ಪರಿಚಾರಿಕೆಯರು ಪರಿಪರಿಯಿಂದ ಸಂತೈಸಿದರು ಆ ಮಾತೆಯನ್ನು. ಆದರೂ ಅವಳ ದುಃಖ ಕುದಿಯುವ ಕಡಲು. ಸಂತೈಸಿದಷ್ಟು ದುಃಖ ಉಕ್ಕರಿಸುತ್ತಿತ್ತು. ಹೀಗೆ ಶೋಕಾರ್ತಳಾಗಿ ರಾಣಿ ರೋದಿಸುತ್ತಲಿರುವಾಗ ಅಲ್ಲಿಗೆ ಓರ್ವ ಶಿವಯೋಗಿಯ ಆಗಮನ. ವೃಷಭ ಎಂಬ ಹೆಸರಿನಿಂದ ಅವನು ಲೋಕಪ್ರಸಿದ್ಧಿ. ವೈಶ್ಯ ರಾಜನಿಂದ ಅವನಿಗೆ ಆದರದ ಸತ್ಕಾರ. ಅರ್ಘ್ಯದಾನ, ಪಾದ್ಯಸಮರ್ಪಣ. ಮಧುಪರ್ಕ ನಿವೇದನ, ಆಸನಪ್ರದಾನ. ಆ ವೃಷಭಯೋಗಿಗೆ ಲಕ್ಷ್ಯವಿಲ್ಲ. ಈ ವೈಶ್ಯನ ಸ್ವಾಗತ ಸತ್ಕಾರಗಳ ಕಡೆಗೆ. ಅವನು ನೇರವಾಗಿ ವಿಲಪಿಸುವ ಆ ರಾಜಮಾತೆಯ ಬಳಿಗೆ ಬಂದ ಮೃದುಮಧುರವಾದ ಧ್ವನಿಯಲ್ಲಿ ನುಡಿದ.

**ವೃಷಭಯೋಗಿ:-** "ವತ್ಸೆ! ನೀನು ಇಷ್ಟೇಕೆ ವಿಲಪಿಸುವಿ? ಈ ಸಂಸಾರದಲ್ಲಿ ಹುಟ್ಟಿ ಬಂದವರಲ್ಲಿ ಯಾರು ಮೃತ್ಯುಪಾಶದಿಂದ ಪಾರಾಗಬಲ್ಲರು? ಈ ಮಾನವದೇಹದಲ್ಲಿ ನೋಡಲು ಮಾತ್ರ ಮಿಂಚಿನ ಮೆರಗು. ವಾಸ್ತವಿಕವಾಗಿ ಇದೊಂದು ನೀರ ಮೇಲಿನ ಬುರುಗು. ಮಾನವನ ಬಾಳು ಮಂಜಿನ ಹನಿ ಇದ್ದಂತೆ. ಮಂಜು ಕರಗಿದರೆ ಯಾರಾದರೂ ಶೋಕಿಸುವರೆ? ಇದನ್ನು ಅರಿತ ಪುರುಷರು ಮರಣ ಹೊಂದಿದವರನ್ನು ಕುರಿತು ರೋದಿಸುವುದಿಲ್ಲ. ಚಿರಂಜೀವಿಯಾಗಿ ಒಂದು ಕಲ್ಪಾಯುಷ್ಯ ಪಡೆದವರ ಜೀವನದಲ್ಲಿಯೂ ಎಷ್ಟೋ ಅನಿಷ್ಟವಾದ ಏರುಪೇರುಗಳು. ದೇವತೆಗಳ

ಬಾಳೂ ಕೂಡ ಒಮ್ಮೊಮ್ಮೆ ಗೋಳು ಗಂಡಾಂತರಗಳ ಗಾಥೆ ಆಗುವುದುಂಟು. ಅಂದ ಬಳಿಕ ಬೇನೆಗಳಿಗೆ ಬಲಿಯಾಗಿ, ದುಃಖಗಳಿಗೆ ಪಕ್ಕಾಗಿ, ಚಿಂತೆಗಳಿಗೆ ಈಡಾಗಿ ಸಂತಾಪಗಳಿಂದ ಕುದಿಯುತ್ತಲಿರುವ ಮಾನವರ ಬಗೆಗೆ ಹೇಳುವುದೇನು? ಹಲವರು ಹೊಟ್ಟೆಯಲ್ಲಿ ಮೂಡಿದಾಗಲೇ ಕರಗುವರು. ಕೆಲವು ಜೀವಿಗಳು ಭ್ರೂಣರೂಪದಲ್ಲಿಯೇ ಗಲಿತವಾಗುವುವು ಇನ್ನು ಕೆಲಚೇತನಗಳು ನೆಲಕಚ್ಚಿದ ಚಕ್ಷದಲ್ಲಿಯೇ ಮೃತ್ಯುವಶವಾಗುವುವು. ಉಳಿದ ಎಷ್ಟೋ ಚೇತನಗಳು ಬಾಲ್ಯದಲ್ಲಿಯೇ ವಿಧಿವಶರಾಗುವರು. ಹುಟ್ಟಿನ ಹೊಸ್ತಿಲಲ್ಲಿ ಯಮನಪುರಿಗೆ ತೆರಳುವವರು ಅನೇಕ ಜೀವಿಗಳು. ಮುಪ್ಪಿನಿಂದ ಮರಣವನ್ನು ಹೊಂದುವವರಿಗೂ ಕೊರತೆಯಿಲ್ಲ. ಒಟ್ಟಿನಲ್ಲಿ ಕರ್ಮಾನುಗುಣವಾಗಿ ಜೀವಿಗಳಿಗೆ ಸುಖದುಃಖ, ಸಾವು ನೋವು, ಕಾಲಕಾಲಕ್ಕೆ ಒಂದು ಒದಗುವವು. ಹಣೆಯ ಮೇಣೆಯ ಮೇಲೆ ವಿಧಿ ಬರೆದಂತೆ ಪ್ರಾಣಿಯು ಜೀವನ ಪಥದಲ್ಲಿ ಹೆಜ್ಜೆಹಾಕುವುದು. ಕರ್ಮದ ಗತಿಯನ್ನು ಯಾರೂ ಮೀರಿ ನಿಲ್ಲಲಾರರು. ಈ ಪ್ರಪಂಚದಲ್ಲಿ ಎಲ್ಲ ಪದಾರ್ಥಗಳೂ ಅನಿತ್ಯ, ಅಶಾಶ್ವತ. ಆದುದರಿಂದ ಈ ವಿಷಯದಲ್ಲಿ ಯಾರೂ ಶೋಕವನ್ನು ಮಾಡಕೂಡದು.

**"ಕಃಸ್ವಪ್ನೇ ನಿಯತಂ ಸ್ಥೈರ್ಯಂ ಇಂದ್ರಜಾಲೇ ಕ್ವ ಸತ್ಯತಾ ।**
**ಕ್ವ ನಿತ್ಯತಾ ಶರನ್ಮೇಘೇ ಶಶ್ವತ್ವ ಕ್ವ ಕಲೇವರೇ" ॥**

ಕನಸಿನಲ್ಲಿ ಕಂಡ ವಸ್ತು ಸ್ಥಿರವಾಗಿ ಉಳಿಯ ಬಲ್ಲದೇ? ಇಂದ್ರಜಾಲದಲ್ಲಿ ತೋರಿದ ವಸ್ತು ಸತ್ಯವಾಗಲು ಉಂಟೆ? ಮಳೆಗಾಲ ಮುಗಿದ ಬಳಿಕ ಮೋಡಗಳು ಮುಗಿಲಲ್ಲಿ ಸ್ಥಿರವಾಗಿ ನಿಲ್ಲಬಲ್ಲವೇ? ಅಶಕ್ಯ. ಅದರಂತೆ ಈ ಮಾನವದೇಹದಲ್ಲಿ 'ಶಾಶ್ವತ ಅಸ್ತಿತ್ವ' ಎಂದರೆ ಎಂದೂ ಸಾಯದೇ ಉಳಿಯುವುದು ಅಶಕ್ಯ ಅಸಂಭಾವಿತ.

ರಾಜಪತ್ನಿ, ನೀನು ಈಗ ನೂರಾರು ಕೋಟಿ ಜನ್ಮಗಳಲ್ಲಿ ತಿರುಗಿ ಬಂದಿರುವೆ. ಈಗ ನೀನೇ ಹೇಳು. ನೀನು ಯಾವನಿಗೆ ಮಗಳು? ಯಾವನಿಗೆ ತಾಯಿ? ಯಾವ ಒಬ್ಬನ ಮಡದಿ? ಈ ದೇಹ ಪಂಚಭೂತಗಳ ಸೃಷ್ಟಿ. ರಕ್ತಮಾಂಸಗಳ ಪಿಂಡದ ಮೇಲೆ ಒಂದು ತೊಗಲಿನ ಆವರಣ. ದೇಹ ಎಂದರೆ ಇಷ್ಟೇ. ಇದರ ಒಳಗೆ ಇರುವುದು ಮೇದಸ್ಸು ಮಜ್ಜೆ ಹಾಗೂ ಮೂಳೆಗಳ ರಾಶಿ. ಈ ಪ್ರಾಣಿಗಳ ದೇಹ ಎಂದರೆ ಒಂದು ಮೂತ್ರಕುಂಡ. ಮಲದ ತೊಟ್ಟಿ, ಕಫದ ಪೀಕದಾಣಿ, ಇದಕ್ಕಾಗಿ ಶೋಕಿಸುವುದರಲ್ಲಿ ಏನು ಜಾಣತನ? ಇಲ್ಲಿ ಇದೀಗ ಸತ್ತು ಬಿದ್ದಿರುವ ವ್ಯಕ್ತಿ ಅಥವಾ ಜೀವ ನಿನ್ನ ಮಗ ಎಂದು ಶೋಕಿಸುತ್ತಲಿರುವಿ. ಇಲ್ಲಿ ನಿನ್ನ ಮುಂದೆ ಬಿದ್ದ ಹೆಣ ನಿನ್ನ ಮಗನಲ್ಲ. ನಿನ್ನ ದೇಹದಿಂದ ಹೊರಬಿದ್ದ 'ಮಲ' ಎಂದೇ ತಿಳಿ.

**ತಪಸಾ ವಿದ್ಯಯಾ ಬುದ್ಧ್ಯಾ ಮಂತ್ರೌಷಧಿ ರಸಾಯನೈಃ ।**
**ಅತಿಯಾತಿ ಪರಂ ಮೃತ್ಯುಂ ನ ಕಶ್ಚಿದಪಿ ಪಂಡಿತಃ ॥**

ಎಂಥ ಪಂಡಿತನೇ ಇರಲಿ. ಮೃತ್ಯುವನ್ನು ಮೀರಿ ನಿಲ್ಲಲಾರ. ಯಾವ ವಿದ್ಯೆಯಿಂದಲೂ ಯಾರೂ ತಪ್ಪಿಸಲಾರರು ಸಾವನ್ನು, ವಿದ್ಯೆ, ಬುದ್ಧಿ, ಮಂತ್ರ, ಔಷಧ, ರಸಾಯನ ಮುಂತಾದ ಯಾವ ಸಾಧನೆಯಿಂದಲೂ ಮೃತ್ಯುವನ್ನು ಯಾವನೂ ಅತಿ ಕ್ರಮಿಸಲಾರ. ಇಂದು ಒಂದು ಜೀವ ಮರಣ ಹೊಂದಿದರೆ ಹತ್ತು ಜೀವ ಹುಟ್ಟಿ ಬಂದಿರುತ್ತವೆ. ಹುಟ್ಟು, ಸಾವು, ಬಾಳಿನ ಎರಡು ಮುಖಗಳು. ಅದಕ್ಕಾಗಿ ಶೋಕಿಸುವುದು ಅಜ್ಞತೆಯ ಕುರುಹು. ಮೇಲಾಗಿ ಅಪ್ರಯೋಜಕ ಕಾರ್ಯ. ಈ ಜನನ ಮರಣದ ಜಾಲದಿಂದ ಪಾರು ಆಗಲು ನಿಜವಾಗಿಯೂ

ಬಯಸುತ್ತಿದ್ದರೆ ಮೃತ್ಯುಂಜಯನಾದ ಆ ಗೌರೀಪತಿಯ ಚರಣಗಳಿಗೆ ಶರಣು ಹೋಗು. ಸಂಸಾರದಲ್ಲಿ ಬಗೆ ಬಗೆಯ ಬವಣೆ ಬಟ್ಟು, ಬಾಳಿನಲ್ಲಿ ಜಿಗುಪ್ಸೆ ಮೂಡಿದಾಗಲಾದರೂ ಮಾನವನು ಮಹೇಶ್ವರನ ಧ್ಯಾನವನ್ನು ಮಾಡತಕ್ಕದ್ದು, ಶಿವನ ಧ್ಯಾನರೂಪ ಅಮೃತಪಾನ ಮಾಡಿದವನು ಈ ಸಂಸಾರದಲ್ಲಿ ವಿಷಯರೂಪಿಯಾದ ಮದ್ಯವನ್ನು ಎಂದೂ ಕುಡಿಯಲಾರ. ನಿಜವಾಗಿ ವಿಚಾರಿಸಿದರೆ ಮಾನವನ ಮನಸ್ಸು ಇರುವುದು ಮಹಾದೇವನ ಧ್ಯಾನಸಾಧನೆಗಾಗಿ ಮಾತ್ರ. ಅಂಥ ಮನಸ್ಸನ್ನು ಶೋಕಮೋಹಗಳ ಸಾಗರದಲ್ಲಿ ಮುಳುಗಿಸ ಬೇಡ. ಮನದ ಅಳನ್ನು ಈಗಲೇ ಆಚೆಗೆ ದೂಡು ಹಗಲಿರುಳೂ ಶಿವನ ಭಜನೆ ಮಾಡು.''

ಶಿವಯೋಗಿಯ ಈ ತತ್ತ್ವೋಪದೇಶ ಮಹಾರಾಣಿಯ ಮನದಮೇಲೆ ಚೆನ್ನಾಗಿ ಬಿಂಬಿಸಿತು. ಋಷಿಗಳಿಗೆ ವೃಷಭನಾದ ಆ ವೃಷಭದೇವನನ್ನು ತನ್ನ ಗುರು ಎಂದು ಮನ್ನಿಸಿದಳು ಆ ಮಹಾರಾಣಿ. ಪುನಃ ಪುನಃ ಆ ಗುರುವಿನ ಅಡಿದಾವರೆಗಳಿಗೆ ಪ್ರಾರ್ಥಿಸಿಕೊಂಡಳು.

**ಮಹಾರಾಣಿ:-** ಗುರುವೇ, ಇದ್ದ ಒಬ್ಬ ಮಗ ಬಯಲಾದ, ಬಂಧುಗಳೆಲ್ಲರೂ ಎಂದೋ ತೊರೆದು ಬಿಟ್ಟಿದ್ದಾರೆ. ತಾಳಿ ಕಟ್ಟಿದ ಗಂಡ ಕಾಡಿಗಟ್ಟಿದ. ಈ ದೇಹದಲ್ಲಿ ರೋಮರೋಮಗಳಿಗೆ ಒಂದೊಂದು ರೋಗ. ಇದು ನನ್ನ ಪಾಡು. ಇಂಥ ಅಭಾಗಿನಿಗೆ ಮರಣದ ಹೊರತುಬೇರೆ ಯಾವುದಿದೆ ಗತಿ? ಆದ್ದರಿಂದ ನಾನು ಈ ಜನ್ಮದ ಈ ನನ್ನ ಮಗುವಿನೊಂದಿಗೆ ಮೃತ್ಯುವನ್ನು ಪಡೆಯಬೇಕೆಂದು ಬಯಸಿದ್ದೇನೆ. ಈ ಮರಣ ಸಮಯದಲ್ಲಿ ತಾವು ನನಗೆ ದರ್ಶನವನ್ನು ಕರುಣಿಸಿದಿರಿ. ಇದರಿಂದ ನಾನು ಕೃತಾರ್ಥಳು.

ರಾಣಿಯ ಈ ಮಾತನ್ನು ಕೇಳಿ ಕುಳಿತಲ್ಲಿಯೇ ಕರಗಿ ಹೋದ ಆ ಶಿವಯೋಗಿ. ಎದ್ದು ಹೋಗಿ ಆ ರಾಜಕುಮಾರನ ಹೆಣದ ಬಳಿ ಬಂದು ನಿಂತ. ಆ ಶವದ ಬಾಯಿ ತೆರೆದು ಶಿವಮಂತ್ರದಿಂದ ಅಭಿಮಂತ್ರಿಸಿದ ಬೂದಿಯನ್ನು ಮುಖದಲ್ಲಿ ಹಾಕಿದ. ಕೌತುಕಕ್ಕೆ ಕವಲು ಒಡೆದಂತೆ ಆಗ ಅಲ್ಲಿ ಒಂದು ವಿಚಿತ್ರ ಘಟನೆ. ಬಾಯಲ್ಲಿ ಬೂದಿ ಹಾಕಿದ ಮರುಕ್ಷಣದಲ್ಲಿ ಆ ರಾಜಕುಮಾರನಲ್ಲಿ ಪ್ರಾಣಸಂಚಾರ. ಮೆಲ್ಲಮೆಲ್ಲನೇ ಉಸಿರಿನ ತಿದಿಯಲ್ಲಿ ಮಂದ ಮಂದ ಸ್ಪಂದನ. ಮುಂಜಾವಿನ ತಾವರೆಯ ದಳದಂತೆ ನಯನಾಂಚಲಗಳ ಉನ್ಮೀಲನ ಆ ಮಗುವಿನ ದೇಹದ ನರನಾಡಿಗಳಲೆಲ್ಲ ಹೊಸ ಚೈತನ್ಯದ ಪರಿಸ್ಫುರಣ. ಹೊಸ ಹುಟ್ಟು ಪಡೆದಂತೆ, ಅದೀಗ ತಾಯಿಯ ಗರ್ಭದಿಂದ ಆವಿರ್ಭವಿಸಿದಂತೆ ಮಗು ಹಾಲು ಕುಡಿಯಲು ರೋದಿಸತೊಡಗಿತು. ಮಗುವಿನ ರೋದನದ ಕಣ್ಣೀರು ತಾಯಿಯ ಆನಂದಾಶ್ರುಗಳಿಗೆ ಕಾರಣವಾಯಿತು. ಹರುಷಾಶ್ರುಗಳನ್ನು ಉದುರಿಸಿ ಮಹಾರಾಣಿಯು ಧಾವಿಸಿಬಂದು ಮಗುವನ್ನು ತೊಡೆಯ ಮೇಲೆ ಕರೆದುಕೊಂಡು ಹೃದಯಕ್ಕೆ ಒತ್ತಿಕೊಂಡಳು. ತೋಳ ತೊಟ್ಟಿಲಲ್ಲಿ ಒಂದು ಕ್ಷಣ ತೂಗಿ ತಟ್ಟಿದಳು. ಮತ್ತೆ ಮತ್ತೆ ಅದರ ಮುದ್ದು ಮುಖ, ಮೈ ಕೈ ಮುಟ್ಟಿದಳು. ಆನಂದ ಸಾಗರದಲ್ಲಿ ಮುಳುಗಿದಳು. ಆಗ ಆ ಶಿವಯೋಗಿಯು ತಾಯಿ ಹಾಗೂ ಆ ಮಗುವಿನ ವ್ಯಾಧಿಗ್ರಸ್ತವಾದ ಅಂಗಾಂಗಳಿಗೆಲ್ಲ ತನ್ನ ಕೈಯಿಂದ ಭಸ್ಮವನ್ನು ಲೇಪಿಸಿದ. ಉಲ್ಬಣರೋಗಗಳಿಂದ ಕಡಿದು ಬೀಳುವಂತಾದ ಆ ಮಾತಾ ಹಾಗೂ ಮಗುವಿನ ಅವಯವಗಳೆಲ್ಲವೂ ಆ ಯೋಗಿರಾಜನ ಸಿದ್ಧ ಭಸ್ಮಸ್ಪರ್ಶ ಮಾತ್ರದಿಂದ ರೋಗಮುಕ್ತವಾಗಿ ದಿವ್ಯಕಾಂತಿಯಿಂದ ತಳತಳಿಸತೊಡಗಿದವು. ಆಗ ಆ ವೃಷಭಯೋಗಿಯು ಮೇಘಗಂಭೀರ ಧ್ವನಿಯಲ್ಲಿ ರಾಣಿಗೆ ಹೇಳಿದ.

**ವೃಷಭಯೋಗಿ:-** ''ಮಗಳೇ, ನೀನು ಬಹುಕಾಲ ಬಾಳು. ಈ ಪ್ರಪಂಚದಲ್ಲಿ ನೀನು ಬದುಕಿ ಇರುವವರೆಗೆ ಅಪ್ಪಿತಪ್ಪಿ ಕೂಡ ಮುಪ್ಪು ನಿನ್ನ ಸಮೀಪ ಬರಬಾರದು. ಈ ನಿಮ್ಮ ಮಗನು ಭದ್ರಾಯು ಎಂಬ ಹೆಸರಿನಿಂದ ಪ್ರಸಿದ್ಧನಾಗುವನು. ಈ ಜಗತ್ತಿನಲ್ಲಿ

ಈ ಸತ್ಪುತ್ರನು ಪೂರ್ಣಜ್ಞಾನಿ ಆಗುವವರೆಗೆ ನೀನು ಇಲ್ಲಿಯೇ ನೆಲೆಸು ಈ ವೈಶ್ಯರಾಜನ ಮನೆಯಲ್ಲಿ'' ಹೀಗೆ ನುಡಿದು ಸತ್ತು ಬಿದ್ದ ರಾಜಕುಮಾರನನ್ನು ಮತ್ತೆ ಬದುಕಿಸಿ ತನ್ನ ಇಚ್ಛಾನುಸಾರವಾಗಿ ಹೊರಟುಹೋದ ಆ ಯೋಗೀಶ್ವರ.

ಆ ಗುರುವಿನ ಅಣತಿಯಂತೆ ವೈಶ್ಯರಾಜನ ಅರಮನೆಯಲ್ಲಿಯೇ ಬೆಳೆಯತೊಡಗಿದ ಭದ್ರಾಯು. ಆ ವೈಶ್ಯನಿಗೂ ಒಬ್ಬ ಮಗ. ಅವನ ಹೆಸರು ಸುನಯ. ಈ ರಾಜಕುಮಾರನಿಗೂ ಆ ವೈಶ್ಯಕುಮಾರನಿಗೂ ಒಳ್ಳೇ ಘನಿಷ್ಠ ಗೆಳೆತನ. ಇಬ್ಬರಿಗೂ ಸಮಾನ ವಯಸ್ಸು. ಸಮಾನ ಕಾಂತಿ. ಆದ್ದರಿಂದ ಮೊದಲಿನಿಂದಲೂ ಮೂಡಿಬಂತು ಅವರಿಬ್ಬರ ಮಧುರ ಮೈತ್ರಿ. ವೈಶ್ಯರಾಜನು ವಿದ್ವಾನ್ ಬ್ರಾಹ್ಮಣರಿಂದ ಆ ರಾಜಕುಮಾರನಿಗೂ ತನ್ನ ಮಗ ಸುನಯನಿಗೂ ಉಚಿತ ಸಂಸ್ಕಾರ ಮಾಡಿಸಿದ ಇಬ್ಬರಿಗೂ ಸಕಾಲದಲ್ಲಿ ಉಪನಯನ ಸೂಕ್ತ ಸಮಯದಲ್ಲಿ ಗುರುಕುಲಕ್ಕೆ ಗಮನ. ಆಶ್ರಮದಲ್ಲಿ ಇಬ್ಬರಿಂದಲೂ ನಿರಲಸ ವೃತ್ತಿಯಿಂದ ಗುರುಸೇವೆ ಭದ್ರಾಯು ಹಾಗೂ ಸುನಯರು ವಿನಯಪೂರ್ವಕವಾಗಿ ಗುರುವಿನ ಅಡಿ ಎಡೆಯಲ್ಲಿ ಕುಳಿತು ಸಂಪಾದಿಸಿದ ವಿದ್ಯೆ ಅಪಾರ ಗಳಿಸಿದ ಜ್ಞಾನ ಅಮೂಲ್ಯ. ವಿದ್ಯಾಧ್ಯನವನ್ನು ಮುಗಿಸಿಕೊಂಡು ರಾಜಕುಮಾರನು ಮನೆಗೆ ಬಂದಾಗ ಅವನಿಗೆ ಹದಿನಾರು ವರ್ಷದ ಪ್ರಾಯ. ಆ ಸಮಯದಲ್ಲಿ ಮತ್ತೆ ಯೋಗೀಶ್ವರನಾದ ಋಷಭರಾಜನ ಪುನರಾಗಮನ. ರಾಣಿಗೆ ಪರಮಾನಂದ. ಭದ್ರಾಯುವಿಗೆ ಪರಮೋತ್ಸಾಹ. ಇಬ್ಬರಿಂದಲೂ ಗುರುವಿನ ಅಡಿದಾವರೆಗಳಿಗೆ ಸಾಷ್ಟಾಂಗ ಪ್ರಣಾಮ. ಯಥಾಯೋಗ್ಯ ಪೂಜೆ, ಅವರ ಸತ್ಕಾರ, ನಮಸ್ಕಾರಗಳಿಂದ ಪರಮಪೀತ ಆ ಯೋಗಿನಾಥ. ಪ್ರಸನ್ನನಾಥ ವೃಷಭರಾಜನ ಕುಶಲಪ್ರಶ್ನೆ. ರಾಜಕುಮಾರನ ವಿದ್ಯಾಧ್ಯಯನದ ವಿಷಯದಲ್ಲಿ ಕೆಲವೊಂದು ಪ್ರಶ್ನೆಗಳು. ಕೊನೆಗೆ ರಾಜಕುಮಾರನಿಗೆ ಒಂದು ನೇರ ಪ್ರಶ್ನೆ ಆ ವೃಷಭಯೋಗಿಯಿಂದ. ''ಮಗು, ನಿನಗೆ ಕಳೆದು ಹೋದ ಪ್ರಾಣಗಳನ್ನು ಮರಳಿ ತಂದುಕೊಟ್ಟು ಪುನರ್ಜನ್ಮ ಕರುಣಿಸಿದ ಗುರುವಿನ ಸ್ಮರಣೆಯನ್ನು ನೀನು ಎಂದಾದರೂ ಮಾಡವಿಯೊ?''

ಯೋಗಿರಾಜರ ಈ ಪ್ರಶ್ನೆಯನ್ನು ಕೇಳಿ ಮಹಾರಾಣಿಯು ಕೈಮುಗಿದು ತನ್ನ ಮಗನನ್ನು ತಂದು ಆ ಗುರುವಿನ ಪಾದಗಳ ಮೇಲೆ ಹಾಕಿದಳು ಮತ್ತು ವಿನಯದಿಂದ ಹೇಳಿದಳು.

**ರಾಣಿ:-** ಗುರುದೇವ, ಇವನು ನನ್ನ ಮಗನಲ್ಲ. ತಮ್ಮ ಪುತ್ರ. ಇವನಿಗೆ ಜೀವ ಕೊಟ್ಟವರು ನೀವು. ಸತ್ತುಹೋದ ಇವನನ್ನು ಈ ಸಂಸಾರದಲ್ಲಿ ಮರುಹುಟ್ಟು ಕೊಟ್ಟು ಮರಳಿ ತಂದು ಇಟ್ಟವರು ನೀವು. ಇವನು ನಿಮ್ಮ ಭೃತ್ಯ, ಪುತ್ರ, ಶಿಷ್ಯ ಮೂರೂ ಆಗಿದ್ದಾನೆ. ಇವನ ಮೇಲೆ ತಮ್ಮ ಪೂರ್ಣ ಅನುಗ್ರಹ ಇರಬೇಕು. ಇವನಿಗೆ ಮುಂದೆ ಒಳ್ಳೆಯ ದಾರಿ ತೋರಿಸಿ ಉಪದೇಶ ನೀಡಿರಿ.

**ವೃಷಭ:-** ವೇದ, ಸ್ಮೃತಿ, ಪುರಾಣಗಳಲ್ಲಿ ಹೇಳಿದ್ದೇ ಸನಾತನ ಧರ್ಮ. ಪ್ರತಿಯೊಬ್ಬರೂ ತಮ್ಮ ತಮ್ಮ ವರ್ಣ ಹಾಗೂ ಆಶ್ರಮಕ್ಕೆ ವಿಹಿತವಾದ ಶಾಸ್ತ್ರೋಕ್ತ ಧರ್ಮವನ್ನು ಆಚರಿಸಬೇಕು. ಬಾಳ! ನೀನು ಸಾಧುಸಂತರು ನಡೆದ ದಾರಿಯನ್ನು ಹಿಡಿದು ಈ ಬಾಳಿನಲ್ಲಿ ಮುಂದೆ ನಡೆ. ಸದಾಚಾರ ಸಂಪನ್ನನಾಗಿ ಬದುಕು. ಹಸು, ಗುರು, ದೇವತೆ ಹಾಗೂ ಬ್ರಾಹ್ಮಣರ ಬಗೆಗೆ ಭಕ್ತಿಭಾವವನ್ನು ಬೆಳೆಸು. ಅತಿಥಿರೂಪದಿಂದ ಮನೆಗೆ ಚಾಂಡಾಲ ಬಂದರೂ ಅವನಿಗೆ ಸತ್ಕಾರ ಮಾಡು. ಎಂಥ ಪ್ರಾಣ ಸಂಕಟ ಬಂದರೂ ಸತ್ಯವನ್ನು ತೊರೆಯಬೇಡ. ಪರಸ್ತ್ರೀ, ಪರಧನ, ದೇವಸ್ವ ಬ್ರಹ್ಮಸ್ವಗಳನ್ನು ಎಂದೂ ಬಯಸಬೇಡ. ಸ್ನಾನ, ಜಪ, ಹೋಮ, ಸ್ವಾಧ್ಯಾಯ, ಪಿತೃತರ್ಪಣ ಗೋ ಪೂಜೆ ದೇವಪೂಜೆ, ಅತಿಥಿ ಪೂಜೆಗಳನ್ನು ಮಾಡುವಲ್ಲಿ ಎಂದೂ ಆಲಸ್ಯವನ್ನು ತೋರಿಸಬೇಡ. ನಿಷ್ಕಾರಣ ದ್ವೇಷ,

ವ್ಯರ್ಥವಾದ ವಿವಾದ, ಪರದ್ರೋಹ, ಪರನಿಂದೆ ಈ ನಾಲ್ಕನ್ನೂ ಸಂಪೂರ್ಣ ಬಿಟ್ಟು ಬಿಡು ಬೇಟೆ, ಜೂಜಾಟ, ಮದ್ಯಾಪನ, ಹಾಗೂ ವ್ಯಭಿಚಾರ ಈ ನಾಲ್ಕು ವ್ಯಸನಗಳು ಅಂಟಿಕೊಂಡಿರುವ ಮನುಷ್ಯನ ಸಹವಾಸವನ್ನು ಮಾಡಬೇಡ. ಅತೀ ಭೋಜನ, ಅತೀ ಪರಿಶ್ರಮ, ಅತಿಯಾದ ಮಾತುಕತೆ, ಅತಿಶಯವಾದ ಕೀರ್ತಿಯ ಲಾಲಸೆ, ಅತೀ ಆಟ, ಅತೀ ವಿಲಾಸಗಳನ್ನು ಬಿಟ್ಟುಬಿಡು. ಇವೆಲ್ಲವುಗಳನ್ನೂ ಮಿತಿಯಲ್ಲಿಯೇ ಇಟ್ಟುಕೊಂಡು ಬಳಸು. ಮಿತಿಯಲ್ಲಿ ಇದ್ದಾಗ ಇವೆಲ್ಲವುಗಳೂ ಮನುಷ್ಯನ ವ್ಯಕ್ತಿತ್ವ ವಿಕಾಸಕ್ಕೆ ಕಾರಣವಾಗುವವು. ಇವು ಅಧಿಕಾಧಿಕವಾದರೆ ಮಾನವನಿಗೆ ಬಾಧಕ. ಆದರೆ ಅಧಿಕ ವಿದ್ಯೆ, ಅಧಿಕ ಶ್ರದ್ಧೆ, ಅಧಿಕ ಪುಣ್ಯ, ಅಧಿಕ ಉತ್ಸಾಹ, ಅಧಿಕಾಧಿಕವಾದ ದೇವತಾರಾಧನೆಗಳನ್ನು ಮಾಡಿದರೆ ಬಾಧಕವಿಲ್ಲ. ಸಾಧಕ ಉಂಟು. ಕಾಮಕ್ರೋಧಾದಿಗಳನ್ನು ಕೂಡ. ಕೈವಶಮಾಡಿಕೊ ಮಡದಿಯ ಮೇಲೆ ಕಾಮಪ್ರೇಮಗಳು ಬೇಕಾದಷ್ಟು ಇರಲಿ. ಶತ್ರುಗಳ ಮೇಲೆ ಕೋಪ ಇರಲಿ. ಪುಣ್ಯರಾಶಿಯನ್ನು ಸಂಗ್ರಹಿಸುವ ವಿಷಯದಲ್ಲಿ ಲೋಭ ಇರಲಿ. ಪಾಪಿಗಳ ಬಗ್ಗೆ ಅಸೂಯೆ ಇರಲಿ. ಪಾಖಂಡಿಗಳ ಮೇಲೆ ದ್ವೇಷ, ಸಜ್ಜನರ ಮೇಲೆ (ಪ್ರೀತಿ), ರಾಗ, ಇರಲಿ. ಯಾರಾದರೂ ನಿನಗೆ ಕೇಡು ಬಯಸಿ ಕೆಟ್ಟ ಸಲಹೆ ಕೊಟ್ಟರೆ ಅದನ್ನು ತಿಳಿಯಲಾರದಷ್ಟು ಮೂರ್ಖನಾಗು. ಚಾಡಿಯ ಮಾತುಗಳಿಗೆ ಕಿವುಡನಾಗು. ಪಾಪಕೃತ್ಯಗಳನ್ನು ನೋಡುವಾಗ ಕುರುಡನಾಗು. ದುಷ್ಟರನ್ನು ಹೊಗಳುವ ವಿಷಯದಲ್ಲಿ ಮೂಕನಾಗು. ವೇದಶಾಸ್ತ್ರ ಬಲ್ಲ ಬ್ರಾಹ್ಮಣ, ಜಿತೇಂದ್ರಿಯನಾದ ಸನ್ಯಾಸಿ, ಸದಾಚಾರ ಸಂಪನ್ನನಾದ ವಿದ್ವಾಂಸ. ಈ ಮೂವರನ್ನೂ ಕಂಡಲ್ಲೆಲ್ಲ ನಮಸ್ಕಾರ ಮಾಡು, ಮತ್ತು ಪುಣ್ಯನದೀ, ತೀರ್ಥ, ಹಸು, ಪತಿವ್ರತಾ ಸ್ತ್ರೀ ಇವರನ್ನು ನೋಡಿದಾಗಲೂ ನೆನೆದಾಗಲೂ, ಹಣೆ ಮಣೆದು ನಮಸ್ಕಾರ ಮಾಡು.

ಪ್ರತಿದಿನವೂ ಬೆಳಗಿನ ಬ್ರಾಹ್ಮ ಮುಹೂರ್ತದಲ್ಲಿ ಏಳು. ಹರಿಹರಗುರು ಹಿರಿಯರನ್ನು ಪ್ರತಿದಿನವೂ ವಂದಿಸು. ಗಂಧ, ಹೂವು, ತಾಂಬೂಲ, ಕಾಯಿಪಲ್ಲೆ, ಹಣ್ಣು ಹಂಪಲ, ಭಕ್ಷ್ಯ, ಭೋಜ್ಯ ಮೊದಲಾದವುಗಳನ್ನು ಮೊದಲು ಶಿವನಿಗೆ ಅರ್ಪಣೆಮಾಡಿ ಅದರ ಪ್ರಸಾದವನ್ನು ನೀನು ಉಪಭೋಗ ಮಾಡು. ನೀನು ಯಾವುದೇ ದಾನ ಧರ್ಮ, ಸತ್ಕರ್ಮ, ಜಪ, ಸ್ನಾನ, ಹೋಮ, ಧ್ಯಾನ ಏನೇ ಮಾಡಿದರೂ ಅದೆಲ್ಲವನ್ನೂ ಪರಮಾತ್ಮನಿಗೆ ಸಮರ್ಪಿಸು. ಉಣ್ಣುವಾಗ, ತಿನ್ನುವಾಗ, ಮಲಗುವಾಗ, ತಿರುಗುವಾಗ, ನೋಡುವಾಗ, ಕೇಳುವಾಗ, ಮಾತನಾಡುವಾಗ, ಒಟ್ಟು ಯಾವಾಗಲೂ ಪರಮಾತ್ಮನ ಚಿಂತನೆಮಾಡು. ಪ್ರತಿದಿನವೂ ಮಂತ್ರರಾಜ ಎಂದು ಕರೆಯಲ್ಪಡುವ ಶಿವಪಂಚಾಕ್ಷರಿ ಮಂತ್ರವನ್ನು ಧ್ಯಾನಮಾಡುತ್ತ ಶಿವಚರಣಗಳಲ್ಲಿಯೇ ಸದಾ ದತ್ತಚಿತ್ತನಾಗು. ಇದೇ ನಾನು ನಿನಗೆ ಮಾಡಿದ ಸಂಕ್ಷಿಪ್ತವಾದ ಧರ್ಮೋಪದೇಶ.

## ಶಿವಯೋಗಿಯಿಂದ ಶಿವಕವಚದ ಉಪದೇಶ, ಭದ್ರಾಯುವಿನ ವಿಜಯ ಮತ್ತು ವಿವಾಹ

**ಋಷಭಯೋಗಿ:-** ವತ್ಸಾ ಭದ್ರಾಯು! ನಿನಗೆ ಶಿವಕವಚದ ಉಪದೇಶವನ್ನು ನೀಡುತ್ತೇನೆ. ಭಕ್ತಿಯಿಂದ ಪರಿಗ್ರಹಿಸು. ಪವಿತ್ರ ಸ್ಥಾನದಲ್ಲಿ ಯೋಗ್ಯವಾದ ಆಸನವನ್ನು ಬಿಡಿಸಿ ಕುಳಿತುಕೊಳ್ಳಬೇಕು. ಇಂದ್ರಿಯವನ್ನು ನಿಗ್ರಹಿಸಿ ಪ್ರಾಣಾಯಾಮಗೈದು ಅವಿನಾಶಿ ತತ್ವವಾದ ಭಗವಾನ್ ಶಿವನನ್ನು ಧ್ಯಾನಮಾಡಬೇಕು. ಹೃದಯಕಮಲದ ಕರ್ಣಿಕಾಗ್ರದಲ್ಲಿ ಪರಮಾನಂದ ಸ್ವರೂಪನಾದ ಭಗವಾನ್ ಮಹೇಶ್ವರನು ವಿರಾಜಮಾನ ನಾಗಿದ್ದಾನೆ. ಅವನ ತೇಜಸ್ಸಿನಿಂದ ಗಗನ ಮಂಡಲವೆಲ್ಲ ಭಾಸಮಾನ. ಇಂಥಚಿದಾನಂದ ಮಯನಾದ ಸದಾಶಿವನನ್ನು ಚಿತ್ತದಲ್ಲಿ ಧ್ಯಾನಮಾಡುತ್ತ 'ಓಂ ನಮಃ ಶಿವಾಯ' ಎಂಬ ಶಿವಷಡಕ್ಷರಮಂತ್ರದ ನ್ಯಾಸದಿಂದ ಮನಸ್ಸನ್ನು ಏಕಾಗ್ರಮಾಡಿಕೊಂಡು ಈ ಶಿವಕವಚದ ಮುಖಾಂತರ ತನ್ನನ್ನು ರಕ್ಷಿಸಿಕೊಳ್ಳಬೇಕು.

## ಶಿವಕವಚ

ಸರ್ವದೇವಮಯನಾದ ಮಹಾದೇವನು ಸಂಸಾರಕೂಪದಲ್ಲಿ ಉರುಳಿಬಿದ್ದ ನನ್ನನ್ನು ರಕ್ಷಿಸಲಿ. ಅವನ ದಿವ್ಯ ನಾಮವು ನನ್ನ ಎಲ್ಲ ಪಾಪಗಳನ್ನು ಕಳೆಯಲಿ. ಸೂಕ್ಷ್ಮಾತಿ ಸೂಕ್ಷ್ಮನೂ ಮಹಾಶಕ್ತಿ ಸಂಪನ್ನನೂ ಆದ ಆ ಈಶ್ವರನು ನನ್ನ ಎಲ್ಲ ಭಯಗಳನ್ನು ಕಳೆಯಲಿ. ಪೃಥ್ವೀರೂಪದಿಂದ ವಿಶ್ವವನ್ನು ಧರಿಸಿದ ಗಿರೀಶನು ಪೃಥ್ವಿಯಿಂದ ನನ್ನನ್ನು ರಕ್ಷಿಸಲಿ. ಜಲರೂಪದಿಂದ, ಜೀವಿಗಳಿಗೆಲ್ಲ ಜೀವನ ದಾನ ನೀಡುವ ಆ 'ಮಹಾದೇವನು' ಜಲದಿಂದ ನನ್ನನ್ನು ರಕ್ಷಿಸಲಿ. ಕಲ್ಪಾಂತ ಕಾಲದಲ್ಲಿ ಎಲ್ಲ ಲೋಕಗಳನ್ನು, ಸಂಹರಿಸಿ ಸುಟ್ಟು ಆನಂದ ತಾಂಡವಗೈವ 'ಕಾಲರುದ್ರನು' ದಳ್ಳುರಿ ಬಿರುಗಾಳಿಗಳ ತಾಪಗಳಿಂದ ನನ್ನನ್ನು ರಕ್ಷಿಸಲಿ.

ವಿದ್ಯಾ, ವರ, ಅಭಯ ಮುದ್ರೆ, ಹಾಗೂ ಕಂಠಾರಗಳನ್ನು ಕೈಗಳಲ್ಲಿ ಧರಿಸಿರುವ ತ್ರಿಲೋಚನನು 'ಸತ್ಪುರುಷ' ರೂಪದಿಂದ ಪೂರ್ವದಿಕ್ಕಿನಲ್ಲಿ ನನ್ನನ್ನು ರಕ್ಷಿಸಲಿ. 'ಅಘೋರ' ಎಂಬ ಹೆಸರಿನಿಂದ ಕುಠಾರ, ವೇದ, ಅಂಕುಶ, ಪಾಶ, ಶೂಲ, ಕಪಾಲ ರುದ್ರಾಕ್ಷಮಾಲೆ ಧರಿಸಿದ ಮುಕ್ಕಣ್ಣನು ದಕ್ಷಿಣ ದಿಕ್ಕಿನಲ್ಲಿ ನನ್ನನ್ನು ರಕ್ಷಿಸಲಿ. ಕುಂದ, ಚಂದ್ರ, ಶಂಖ, ಸ್ಫಟಿಕಗಳಂತೆ ಕಾಂತಿಯುಳ್ಳ ಮತ್ತು ವೇದ ರುದ್ರಾಕ್ಷಮಾಲೆ ಹಾಗೂ ಅಭಯಮುದ್ರೆಗಳಿಂದ ಶೋಭಿಸುವ 'ಸದ್ಯೋಧಿಜಾತ' ಎಂಬ ಮಹಾದೇವರು ಪಶ್ಚಿಮ ದಿಕ್ಕಿನಲ್ಲಿ ನನ್ನನ್ನು ರಕ್ಷಿಸಲಿ. ಹಾಗೂ ಕೈಗಳಲ್ಲಿ ವರ ಅಭಯ ಮುದ್ರೆ ಹಾಗೂ ರುದ್ರಾಕ್ಷ ಮಾಲೆಗಳನ್ನು ಹಿಡಿದು ಕಮಲ ಕಿಂಜಲ್ಕ ಸಮಾನ ಕಾಂತಿಯಿಂದ ಶೋಭಿಸುವ ಭಗವಾನ್ 'ವಾಮದೇವನು' ಉತ್ತರದಿಕ್ಕಿನಲ್ಲಿ ನನ್ನನ್ನು ರಕ್ಷಿಸಲಿ. ಪರಮ ಪ್ರಕಾಶರೂಪನಾದ 'ಈಶಾನ' ಎಂಬ ಹೆಸರುಳ್ಳ ಪಂಚಮುಖಿ ಪರಮೇಶ್ವರನು ಮೇಲಿನಿಂದ ನನ್ನನ್ನು ರಕ್ಷಿಸಲಿ. ಭಗವಾನ್ 'ಚಂದ್ರಮೌಳಿಯು' ನನ್ನ ತಲೆಯನ್ನು ರಕ್ಷಿಸಲಿ. 'ಭಾಲನೇತ್ರನು' ಹಣೆಯನ್ನು, 'ಭಗನೇತ್ರಹಾರಿಯು' ನನ್ನ ಕಣ್ಣುಗಳನ್ನು, 'ವಿಶ್ವನಾಥನು' ಮೂಗನ್ನು, 'ಶ್ರುತ ಗೀತ ಕೀರ್ತಿಯು' ಕಿವಿಗಳನ್ನು, 'ಪಂಚಮುಖಿ'ನು ಮುಖವನ್ನು ವೇದಜಿಹ್ವ'ನು ನನ್ನ ನಾಲಿಗೆಯನ್ನು,' 'ಗಿರೀಶನು' ಕೊರಳನ್ನು 'ನೀಲಕಂಠ'ನು ಎರಡು ಕೈಗಳನ್ನು, 'ಧರ್ಮಬಾಹು'ವು ನನ್ನ ಎರಡು ಹೆಗಲು ಗಳನ್ನು, 'ದಕ್ಷಯಜ್ಞ ವಿಧ್ವಂಸಿಯು' ವಕ್ಷಸ್ಥಳವನ್ನು, 'ಗಿರೀಂದ್ರಧನ್ವ'ನು ಹೊಟ್ಟೆಯನ್ನು, ಕಾಮವೈರಿಯು ನಡುವನ್ನು 'ಗಣೇಶ ಪಿತ'ನು ನನ್ನ ಹೊಕ್ಕಳವನ್ನು, 'ಧೂರ್ಜಟಿ'ಯು ಸೊಂಟವನ್ನು 'ಕುಬೇರಮಿತ್ರ'ನು ನನ್ನ ಎರಡೂ ಮೀನಖಂಡಗಳನ್ನು 'ಜಗದೀಶ್ವರನು' ಎರಡೂ ಮೊಣಕಾಲು ಮಂಡೆಗಳನ್ನು, 'ಪುಂಗವ ಕೇತು'ವು ನನ್ನ ಎರಡೂ ತೊಡೆಗಳನ್ನು ''ಸುರವಂದ್ಯ ಚರಣ'ನು ಎರಡೂ ಕಾಲುಗಳನ್ನು ರಕ್ಷಿಸಲಿ. ದಿನದ ಮೊದಲನೇ ಪ್ರಹರದಲ್ಲಿ 'ಮಹೇಶ್ವರ'ನು, ಮಧ್ಯಪ್ರಹರದಲ್ಲಿ 'ವಾಮದೇವ'ನು ಮೂರನೇ ಪ್ರಹರದಲ್ಲಿ 'ತ್ರ್ಯಂಬಕ'ನು, ಕೊನೆಯ ಪ್ರಹರದಲ್ಲಿ 'ವೃಷಭ ಧ್ವಜನು' ನನ್ನನ್ನು ರಕ್ಷಿಸಲಿ. ರಾತ್ರಿಯ ಮೊದಲನೇಯ ಪ್ರಹರದಲ್ಲಿ 'ಶಶಿಶೇಖರನು' ಎರಡನೇ ಪ್ರಹರದಲ್ಲಿ 'ಗಂಗಾಧರ'ನೂ, ಮೂರನೇ ಪ್ರಹರದಲ್ಲಿ 'ಗೌರೀಪತಿ'ಯೂ, ಕೊನೆಯಲ್ಲಿ ಸರ್ವಕಾಲದಲ್ಲೂ 'ಮೃತ್ಯುಂಜಯ'ನು ನನ್ನನ್ನು ರಕ್ಷಿಸಲಿ. 'ಶಂಕರ'ನು ನನ್ನನು ಒಳಗೆ ರಕ್ಷಿಸಲಿ. 'ಸ್ಥಾಣ'ವು ನನ್ನನ್ನು ಹೊರಗೆ ರಕ್ಷಿಸಲಿ. 'ಪಶುಪತಿ'ಯು ವಂಧ್ಯದಲ್ಲಿ 'ಸದಾಶಿವ'ನು ಎಲ್ಲೆಡೆಗೆ ನನ್ನನ್ನು ರಕ್ಷಿಸಲಿ. ಎದ್ದುನಿಂತಾಗ 'ಭುವನೈಕನಾಥ' ನಡೆದಾಡುವಾಗ 'ಪ್ರಮಥನಾಥ', ಕುಳಿತು ಕೊಂಡಾಗ 'ವೇದಾಂತ ವೇದ್ಯ', ಮಲಗಿದಾಗ 'ಅವಿನಾಶಿ' ಶಿವನು ನನ್ನನ್ನು ರಕ್ಷಿಸಲಿ. ದಾರಿಯಲ್ಲಿ 'ನೀಲಕಂಠ', ವನದುರ್ಗಗಳಲ್ಲಿ 'ತ್ರಿಪುರಾರಿ', ಅಡವಿಯಲ್ಲಿ 'ಮೃಗವ್ಯಾಧ'ನು ನನ್ನನ್ನು ರಕ್ಷಿಸಲಿ. ವೈರಿಭಯದಿಂದ 'ವೀರಭದ್ರ', ಶತ್ರುಸಂಕಟದಲ್ಲಿ 'ಮೃಡ', ಕ್ರೂರ ಪಶುಪಕ್ಷಿ ಹಾಗೂ ಘೋರ

ಶಸ್ತ್ರಾಸ್ತ್ರಗಳಿಂದ 'ತ್ರಿಪುರಾಂತಕ'ನು ನನ್ನನ್ನು ರಕ್ಷಿಸಲಿ. ಕೆಟ್ಟ ಕನಸು, ಅಪಶಕುನ, ದುರ್ಗತಿ ದುರ್ಭಾವನೆ, ದುರ್ಭಿಕ್ಷ, ಅಪಕೀರ್ತಿ, ಅಪವಾದ, ಉತ್ಪಾತ, ಸಂತಾಪ, ಪಾಪಗ್ರಹ, ಹಾಗೂ ಸಮಸ್ತ ರೋಗಗಳಿಂದ 'ಮೃತ್ಯುಂಜಯ'ನಾದ ಆ ಮಹೇಶ್ವರನು ನನ್ನನ್ನು ರಕ್ಷಿಸಲಿ.

''ಎಲ್ಲ ವೇದ ವೇದಾಂತಗಳ ರಹಸ್ಯರೂಪನು, ಪರಾತ್ಪರ ಪರತತ್ವ ಸ್ವರೂಪನು ಪ್ರಕಾಶಮಯನು ಹಾಗೂ ಉಪಮಾರಹಿತವಾದ ನಿರ್ಗುಣ ನಿರಾಕಾರ. ನಿರಾಮಯ ನಿಷ್ಪ್ರಪಂಚ, ನಿಷ್ಕಳಂಕ, ನಿರ್ದ್ವಂದ್ವ, ನಿಸ್ಸಂಗ, ನಿರ್ಮಲ, ನಿತ್ಯ ಸತ್ಯ ಸ್ವರೂಪ, ಸಚ್ಚಿದಾನಂದ ಘನ, ನಿತ್ಯ ಶುದ್ಧ ಬುದ್ಧ ಭಗವಾನ್ ಸದಾಶಿವನಿಗೆ ನಮಸ್ಕಾರ''.

''ಹೇ ಮಹಾರುದ್ರ ವಿಶ್ವೇಶ್ವರ ನಿನಗೆ ಜಯ ಜಯವಾಗಲಿ'' ''ನೀನೇ ನನ್ನನ್ನು ರಕ್ಷಿಸು, ರಕ್ಷಿಸು'' ''ನನ್ನ ಮೃತ್ಯು ಭಯವನ್ನು ಸುಟ್ಟು ಹಾಕು. ಸುಟ್ಟು ಹಾಕು.'' ''ನನ್ನ ಅಪಮೃತ್ಯುವನ್ನು ನಾಶಮಾಡು. ನಾಶಮಾಡು'' ರೋಗಭಯವನ್ನು ದೂರ ದೂರಮಾಡು ನನ್ನ ಕಾಮಕ್ರೋಧಾಧಿ ಅಂತಃಶತ್ರುಗಳನ್ನು ದಮನಮಾಡು ದಮನಮಾಡು. ಬಹಿಃಶತ್ರುಗಳನ್ನು ನಿನ್ನ ಶೂಲ ಕುಠಾರಗಳಿಂದ ಬಾಣ ಮುಂತಾದವುಗಳಿಂದ ಕಡಿದು ಹಾಕು. ಕಡಿದು ಹಾಕು. ನನ್ನನ್ನು ಹಿಂಸಿಸುವ ಭೂತ, ಪ್ರೇತ, ಪಿಶಾಚ, ರಾಕ್ಷಸ ಮುಂತಾದವುಗಳನ್ನು ಧ್ವಂಸಗೊಳಿಸು. ಧ್ವಂಸಗೊಳಿಸು. ನನಗೆ ಅಭಯ ನೀಡು ಅಭಯನೀಡು. ನರಕ ಭಯದಿಂದ ನನ್ನನ್ನು ಉದ್ಧರಿಸು ಉದ್ಧರಿಸು. ನನಗೆ ಜೀವದಾನ ಮಾಡು. ಜೀವದಾನ ಮಾಡು. ನನ್ನ ಹಸಿವೆ ಬಾಯಾರಿಕೆಗಳನ್ನು ಪರಿಹರಿಸು ಪರಿಹರಿಸು. ದುಃಖಾತುರನಾದ ನನಗೆ ಆನಂದವನ್ನು ಕೊಡು ಆನಂದವನ್ನು ಕೊಡು. ಶಿವನೇ ನಿನಗೆ ಜಯವಾಗಲಿ. ಈ ನಿನ್ನ ಶಿವಕಚವನ್ನು ನನಗೆ ತೊಡಿಸು. ನನಗೆ ತೊಡಿಸು. ತ್ರ್ಯಂಬಕ ಮಹಾದೇವ, ಸದಾಶಿವ ನಿನಗೆ ನನ್ನ ನಮಸ್ಕಾರ, ನಿನಗೆ ನನ್ನ ನಮಸ್ಕಾರ. ನಿನಗೆ ನನ್ನ ನಮ್ರ ನಮಸ್ಕಾರ.''

ಭದ್ರಾಯು, ಇದೇ ಪರಮರಹಸ್ಯವಾದ ಶಿವಕವಚ. ಇದು ಸರ್ವಭಯ ಪರಿಹಾರಕ, ಸರ್ವಮಂಗಳ ಪ್ರದಾಯಕ, ಅಪೇಕ್ಷಿತ ವರದಾಯಕ. ಇಂಥ ಪರಮರಹಸ್ಯವಾದ ಶಿವಕವಚವನ್ನು ನಾನು ನಿನಗೆ ಉಪದೇಶಿಸಿ ನೀಡಿದ್ದೇನೆ, ಈ ಶಿವಕವಚವು ಅತ್ಯಂತ ಗೋಪನೀಯ ವಸ್ತು. ಅತ್ಯುತ್ತಮವಾದ ಈ ಶಿವಕವಚವನ್ನು ಧಾರಣಾಮಾಡಿದವರಿಗೆ ಶಂಕರನ ಕೃಪೆಯಿಂದ ಯಾವುದೇ ತೆರನಾದ. ಭಯಾಪಾಯಗಳು ಬರುವುದಿಲ್ಲ. ರೋಗಿಗಳು ಮುಮೂರ್ಷುಗಳು ಈ ಶಿವಕವಚದ ಧಾರಣೆಯಿಂದ ಆರೋಗ್ಯವಂತರಾಗಿ ದೀರ್ಘಾಯುಷ್ಯವನ್ನು ಪಡೆಯುವರು. ''ವತ್ಸ! ನಾನು ನಿನಗೆ ನೀಡಿದ ಈ ಉತ್ತಮವಾದ ಶಿವಕವಚವನ್ನು ಶ್ರದ್ಧೆಯಿಂದ ನೀನು ಧಾರಣೆಮಾಡು. ಇದರಿಂದ ನಿನಗೆ ಕಲ್ಯಾಣವಾಗುವುದು.''

ಹೀಗೆ ಹೇಳಿ ಆ ಋಷಭಯೋಗಿಯು ರಾಜಕುಮಾರ ಭದ್ರಾಯುವಿಗೆ ಒಂದು ಶಂಖವನ್ನೂ ಶತ್ರುನಾಶಕವಾದ ಒಂದು ಖಡ್ಗವನ್ನೂ ಕೊಟ್ಟ. ಮತ್ತು ಭಸ್ಮವನ್ನು ಅಭಿಮಂತ್ರಣ ಮಾಡಿ ಆ ರಾಜಕುಮಾರನ ಎಲ್ಲ ಅವಯವಗಳಿಗೂ ಲೇಪಿಸಿದ. ಹಾಗೂ ಹನ್ನೆರಡು ಸಾವಿರ ಆನೆಯ ಬಲವನ್ನು ಅವನಿಗೆ ಕರುಣಿಸಿದ. ಅನಂತರ ಇಷ್ಟೆಲ್ಲ ಕೊಟ್ಟು ಆ ಋಷಭ ಯೋಗಿಯು ರಾಜಕುಮಾರ ಭದ್ರಾಯುವನ್ನು ಅನುಗ್ರಹಿಸಿ ಪ್ರೋತ್ಸಾಹಿಸುತ್ತ ನುಡಿದ.

**ಋಷಭಯೋಗಿ:-** ''ಕುಮಾರ, ನಾನು ನಿನಗೆ ನೀಡಿದ ಈ ತಲವಾರದ ಧಾರೆ ಬಹಳ ತೀಕ್ಷ್ಣ. ಇದನ್ನು ಒಮ್ಮೆ ವೈರಿ ವೃಂದದಲ್ಲಿ ಝಳಪಿಸಿದರೆ ಸಾಕು. ಶತ್ರುಗಳೆಲ್ಲರೂ ಸಮೂಲ ನಷ್ಟರಾಗಿ ಹೋಗುವರು. ನಾನು ನಿನಗೆ ಕೊಟ್ಟ ಈ ಶಂಖ ಅತ್ಯುತ್ಭುತ ಇದರ ಧ್ವನಿಯಿಂದ ಬ್ರಹ್ಮಾಂಡವೇ ಬೊಬ್ಬಿರಿದಂತಾಗುವುದು. ಈ ಶಂಖಧ್ವನಿಯನ್ನು ಕೇಳಿದ

ಕೂಡಲೇ ವೈರಿಗಳೆಲ್ಲರೂ ಕೈಯಲ್ಲಿಯ ಶಸ್ತ್ರಾಸ್ತ್ರಗಳನ್ನು ಒಗೆದು ಮೂರ್ಛಿತರಾಗಿ ನೆಲಕ್ಕೆ ಉರುಳುವರು. ನಾನು ನಿನಗೆ ಕರುಣೆಯಿಂದ ಕೊಡಮಾಡಿದ ಈ ಶಿವಕವಚದ ಮಹಿಮೆ ಹಾಗೂ ಹನ್ನೆರಡು ಸಾವಿರ ಆನೆಗಳ ಮಹಾಬಲ ಮತ್ತು ಈ ದಿವ್ಯವಾದ ಶಂಖ, ಖಡ್ಗ ಹಾಗೂ ನಾನು ನಿನ್ನ ಮೈಗೆ ಬಳಿದ ಭಸ್ಮ ಲೇಪನ ಇವೆಲ್ಲವುಗಳ ಪ್ರಭಾವದಿಂದ ನೀನು ನಿನ್ನ ವೈರಿಗಳನ್ನು ಕೊಲ್ಲುವಿ. ಅಖಂಡ ಭೂಮಂಡಲವನ್ನೆಲ್ಲ ಗೆಲ್ಲುವಿ ವಿಶ್ವವಿಜಯೀ ಆಗುವಿ. ತಂದೆಯ ಸಿಂಹಾಸನವನ್ನು ಪುನಃ ಪಡೆಯುವಿ. ಚತುಸ್ಸಾಗರದ ವರೆಗೆ ಚಾಚಿದ ಈ ವಿಶಾಲ ಪೃಥ್ವೀವಲಯವನ್ನು ಸಾರ್ವಭೌಮ ಸಾಮ್ರಾಟನಾಗಿ ನೀನು ರಕ್ಷಣೆ ಮಾಡುವಿ.'' ಹೀಗೆ ಭದ್ರಾಯು ರಾಜಕುಮಾರನನ್ನೂ ಅವನ ತಾಯಿಯನ್ನೂ ತನ್ನ ದಿವ್ಯ ಉಪದೇಶ ಹಾಗೂ ಆಶ್ವಾಸನೆ, ಅಭಯದಾನ, ಅಸ್ತ್ರದಾನ, ಶಂಖದಾನ, ಭಸ್ಮದಾನ, ಮುಂತಾದವುಗಳಿಂದ ಅನುಗ್ರಹಿಸಿ ಅವರಿಂದ ಭಕ್ತ್ಯುದ್ರೇಕದಿಂದ ಪರಿಪೂಜಿತನಾಗಿ ತನ್ನ ಇಚ್ಛಾನುಸಾರ ಅಲ್ಲಿಂದ ಹೊರಟು ಹೋದನು ಆ ಋಷಭನಾಮಕನಾದ ಶಿವಯೋಗಿ.

ಇತ್ತ ಮಗಧದೇಶದ ರಾಜನಾದ ವಜ್ರಬಾಹುವು ಪರಸ್ತ್ರೀ ಲಂಪಟನಾಗಿ ತನ್ನ ಪಟ್ಟದರಾಣಿಯನ್ನೂ ಮಗನೊಂದಿಗೆ ಕಾಡಿಗೆ ಅಟ್ಟಿದ ಬಳಿಕ ದುರವಿಧಿ ಅವನನ್ನು ಬೆನ್ನಟ್ಟಿತು. ಕೆಲವೇ ವರ್ಷಗಳಲ್ಲಿ ಮಂತ್ರಿಗಳಲ್ಲಿ ಒಡಕು. ರಾಜಪ್ರಜೆಗಳ ಭಾವನೆಯಲ್ಲಿ ಬಿರುಕು. ಸಾಮಂತರಾಜರ ಬಂಡಾಯ. ಸಾಮ್ರಾಜ್ಯದಲ್ಲಿ ಎಲ್ಲ ಕಡೆ ಅಶಾಂತಿ, ಅಂತಃಕಲಹ, ಅರಾಜಕತೆ. ಇದನ್ನೇ ಕಾಯುತ್ತಿದ್ದರು ವೈರಿರಾಜರು. ದಶಾರ್ಣದೇಶವು ಅನೇಕ ಬಗೆಯ ಅಂತಶ್ಛಿದ್ರಗಳಿಂದ ದುರ್ಬಲಗೊಂಡುದನ್ನು ಕಂಡು ಅದರ ಮೇಲೆ ಆಕ್ರಮಣಮಾಡಿದ ಮಗಧ ದೇಶದ ದೊರೆ. ಆ ಘನಘೋರ ಸಂಗ್ರಾಮದಲ್ಲಿ ಸೋಲುಗಳ ಸರಮಾಲೆಯೇ ಕೊರಳಿಗೆ ಉರುಳಾಗಿ ಬಿದ್ದಿತು ವಜ್ರಬಾಹುವಿಗೆ ವಜ್ರಬಾಹುವನ್ನು ಸಂಗ್ರಾಮದಲ್ಲಿ ಸೋಲಿಸಿ ಅವನ ಅಂತಃಪುರದ ಸ್ತ್ರೀಯರನ್ನೂ ಹಿಂಡು ಹಿಂಡು ಹಸುಗಳನ್ನೂ ಮಗಧರಾಜನು ಗೆದ್ದುಕೊಂಡು ನಡೆದ. ಮತ್ತು ಪರಾಜಿತನಾದ ವಜ್ರಬಾಹುವನ್ನು ಬಂಧಿಸಿ ರಥದಲ್ಲಿ ಹಾಕಿಕೊಂಡು ಕೈದಿಯನ್ನಾಗಿ ತನ್ನ ನಗರಕ್ಕೆ ಕರೆದುಕೊಂಡು ಹೋದ. ಹೀಗೆ ತನ್ನ ಸಾಮ್ರಾಜ್ಯವೆಲ್ಲ ವೈರಿರಾಜರ ಪದಾಕ್ರಾಂತನಾಗಿ ನಷ್ಟಭ್ರಷ್ಟನಾವಾದ ಸಮಾಚಾರವನ್ನು ಪ್ರಬುದ್ಧನಾದ ಬಳಿಕ ಭದ್ರಾಯುಚಾರರಿಂದ ಕೇಳಿ ತಿಳಿದ. ತನ್ನ ತಂದೆ ಹಾಗೂ ತಾಯಂದಿರನ್ನು ಸೆರೆ ಹಿಡಿದು ರಿಪುರಾಜರು ಕೊಂಡೊಯ್ದದ್ದು ಕೇಳಿ ಅವನ ಅಭಿಮಾನಕ್ಕೆ ಕೆಂಡವಿಟ್ಟಂತಾಯ್ತು. ಕೂಡಲೇ ಅವನು ಸಿಂಹದಂತೆ ಗರ್ಜನೆ ಮಾಡಿ ಗುಡುಗಿದ. ಶಿವಯೋಗಿಯು ತನಗೆ ಕೊಟ್ಟ ದಿವ್ಯಶಂಖ ಹಾಗೂ ಖಡ್ಗಗಳನ್ನು ಧರಿಸಿದ. ಕವಚಗಳನ್ನು ಕೊಟ್ಟು ಉತ್ತುಂಗವಾದ ಒಂದು ತುರಂಗವನ್ನು ಏರಿದ. ತನ್ನ ತಂದೆ ಕಳೆದುಕೊಂಡ ರಾಜಧಾನಿಗೆ ಓಡಿಬಂದ. ಅಲ್ಲಿ ಮಗಧಸೇನೆ ಬೇಹುಗಾರರಿಂದ ಮುಂಚಿತವಾಗಿಯೇ ಸುದ್ದಿ ತಿಳಿದು ಯುದ್ಧ ಸನ್ನದ್ಧವಾಗಿ ನಿಂತುಕೊಂಡಿತ್ತು. ಮಗಧಸೇನೆ ಅಪರಂಪಾರ. ಮೇಲೆ ಭೀಕರ ಶಸ್ತ್ರಾಸ್ತ್ರ ಸಂಪನ್ನ. ಯುದ್ಧದಲ್ಲಿ ಪಳಗಿದ ಅನೇಕ ಪ್ರಬುದ್ಧ ಸೇನಾಪತಿಗಳು. ಆದರೆ ರಾಜಕುಮಾರ ಭದ್ರಾಯು ಏಕೈಕ ವೀರ ಯಾವ ಸೈನ್ಯ ಸನ್ನಾಹ ಇಲ್ಲ ಅವನಿಗೆ ಸಹಾಯಕರೆಂದರೆ ವೈಶ್ಯಕುಮಾರನೊಬ್ಬನೇ. ಆದರೂ ಬೆದರಲಿಲ್ಲ ಭದ್ರಾಯು. ಶಿವಯೋಗಿಯು ರಕ್ಷಾಕವಚ ಅವನಿಗೆ ವಜ್ರಪಂಜರವಾಗಿತ್ತು. ಆದ್ದರಿಂದ ನಿರ್ಭಯವಾಗಿ ಅವನು ಮಗಧ ಸೇನೆಯಲ್ಲಿ ಹೊಕ್ಕು, ಕುರಿಹಿಂಡಿನಲ್ಲಿ ಹುಲಿ ಹೊಕ್ಕಂತೆ. ಹೆದೆಯೇರಿಸಿ ಹಗ್ಗ

ಜಗ್ಗಿ ಪುಂಖಾನುಪುಂಖವಾಗಿ ಬಾಣಗಳನ್ನು ಎಸೆದ. ಬೆಂಕಿ ಉಗುಳುವ ಅವನ ಅಸ್ತ್ರಗಳಿಂದ ಶತ್ರುಸೈನ್ಯದಲ್ಲಿ ಒಮ್ಮೆಲೇ ಕೋಲಾಹಲ. ಭಯಭ್ರಾಂತಿಯಿಂದ ಕಂಪಿಸಿಹೋಯಿತು ಮಗಧಸೇನೆ. ವೈರಿಸೇನಾಪತಿಗಳೆಲ್ಲರೂ ರೊಚ್ಚಿಗೆದ್ದು ಒಮ್ಮೆಲೇ ಎರಗಿದರು ಭದ್ರಾಯುವಿನ ಮೇಲೆ. ಅವರಲ್ಲಿಯ ಓರ್ವ ರಥಿಕನನ್ನು ಭದ್ರಾಯು ಹೊಡೆದು ಕೊಂದ. ಅವನ ರಥವನ್ನು ಆಕ್ರಮಿಸಿದ. ವೈಶ್ಯಕುಮಾರ ಸಾರಥ್ಯವಹಿಸಿದ ಭದ್ರಾಯು ರಥಾರೂಢನಾಗಿ ವಿಷದಿಗ್ಧವಾದ ಬಾಣಗಳ ಜಡಿಮಳೆ ಅಸ್ತ್ರಗಳ ಸುರಿಮಳೆಯನ್ನು ವೈರಿಸೈನಿಕರದಲ್ಲಿ ಸುರಿಸಿದ. ಆಗ ವೈರಿ ಸೇನಾನಿಗಳೆಲ್ಲರ ಒಮ್ಮುಖದ ಪ್ರಯತ್ನ. ಸಾಮೂಹಿಕವಾಗಿ ಭೀಕರ ಶಸ್ತ್ರಾಸ್ತ್ರಗಳನ್ನು ತೂರುತ್ತ ಭದ್ರಾಯುವಿನ ಮೇಲೆ ಗುಂಪುಗಟ್ಟಿ ಮುಗಿಬಿದ್ದರು. ಆಗ ತರುಣರಾಜಕುಮಾರ ಭದ್ರಾಯುವಿಗೆ ಉತ್ಸಾಹದ ಮಹಾಪೂರ. ಮೈಯಲ್ಲಿ ವೀರಾವೇಶ ಸಂಚಾರ. ಬಾಹುಗಳಲ್ಲಿ ಮಿಂಚಿನ ಹೊಳೆಯ ತುಳುಕಾಟ. ಒಮ್ಮೆಲೇ ಯೋಗಿ ಕೊಟ್ಟ ದಿವ್ಯ ಖಡ್ಗವನ್ನು ಒರೆಯಿಂದ ಹಿರಿದ. ಕೈಯಲ್ಲಿ ಹಿಡಿದು ವೈರಿಗಳ ಎದುರು ಝಳಪಿಸಿದ ಮಿಂಚಿನಂತೆ ಎಲ್ಲೆಡೆಗೂ ಅದು ಬೀಸಿತು. ಯಮದಂಡವನ್ನು ಬೀಸಿದಂತಾಯಿತು. ಹಿಂಡು ಹಿಂಡಾಗಿ ಸೇನಾಪತಿಗಳ ರುಂಡಗಳು ನೆಲಕ್ಕೆ ಇಳಿದವು. ಅರಗಳಿಗೆಯಲ್ಲೇ ವೈರಿಗಳ ಸೇನಾಸಾಗರವೆಲ್ಲವೂ ಶವಸಾಗರವಾಗಿ ಮಾರ್ಪಟ್ಟಿತು. ವಿಜಯೋತ್ಸಾಹದಿಂದ ಭದ್ರಾಯು ಗರ್ಜನೆ ಮಾಡಿ ಶಿವಯೋಗಿ ಕೊಟ್ಟ ದಿವ್ಯ ಶಂಖವನ್ನು ತನ್ನ ತುಟತಟಕ್ಕೆ ಇಟ್ಟ. ಉತ್ಸಾಹದ ಉಸಿರು ತುಂಬಿದ. ಆದರ ಭಯಂಕರ ಶಂಖಧ್ವನಿಯು ಬ್ರಹ್ಮಾಂಡ ಭಿತ್ತಿಯಲ್ಲಿ ಪ್ರತಿಧ್ವನಿಸಿತು. ತಮ್ಮ ಸೇನಾನಿಗಳ ಮರಣದಿಂದ ಚಿಂತಾಕ್ರಾಂತರಾದ ಎಲ್ಲ ಸೈನಿಕರೂ ಈ ಭೀಕರ ಶಂಖಧ್ವನಿ ಕೇಳಿ ಮೂರ್ಛಿತರಾಗಿ ಧರೆಗೆ ಉರುಳಿದರು. ಮುಂದೆ ಕೆಲನಿಮಿಷಗಳ ಮೇಲೆ ಗಾಳಿಯು ಸುಳಿಯಿಂದ ಚೇತರಿಸಿಕೊಂಡು ಎದ್ದ ಅವರಾರನ್ನೂ ಕೊಲ್ಲಲಿಕ್ಕೆ ಹೋಗಲಿಲ್ಲ ಕರುಣಾಶಾಲಿಯಾದ ಆ ಭದ್ರಾಯು.

ವೈರಿಗಳನ್ನೆಲ್ಲ ಗೆದ್ದು ಆ ರಾಜಕುಮಾರನು ಮೊದಲು ಬಂದದ್ದು ವೈರಿಗಳ ರಾಜಧಾನಿಗೆ ಅಲ್ಲಿ ಬಂದೀಖಾನೆಯಲ್ಲಿ ಕೈದಿಯಾಗಿಟ್ಟ ತನ್ನ ತಂದೆ ತಾಯಿ ಹಾಗೂ ಪರಿವಾರ ವರ್ಗದವರನ್ನು ಬಂಧಮುಕ್ತಮಾಡಿದ. ಸೆರೆಹಿಡಿದ ಅಂತಃಪುರದ ನಾರಿಯರನ್ನೂ ಹಸುಗಳ ಹಿಂಡನ್ನೂ ಬಿಡಿಸಿದ. ಬಂಧಮುಕ್ತನಾದ ಭದ್ರಾಯುವಿನ ತಂದೆ ವಜ್ರಬಾಹುವಿಗೆ ಆಶ್ಚರ್ಯ. ತಮ್ಮನ್ನು ಬಂಧನದಿಂದ ಬಿಡಿಸಿ, ದಶಾರ್ಣ ದೇಶವನ್ನು ಗೆದ್ದು, ಮಗಧರಾಜನನ್ನೂ ಸೋಲಿಸಿದ ಈ ರಾಜಕುಮಾರನು ಯಾರಾಗಿರಬಹುದು? ಎಂಬುದು ಅವನಿಗೆ ತಿಳಿಯದಾಯಿತು. ಆದರೂ ತನ್ನನ್ನೂ ತನ್ನ ಪರಿವಾರವನ್ನೂ ಬಂಧಮುಕ್ತ ಮಾಡಿದ ಈ ರಾಜಕುಮಾರನಿಗೆ ತನ್ನ ಕೃತಜ್ಞತೆಯನ್ನು ಸಲ್ಲಿಸಲು ಅವನು ಭದ್ರಾಯು ಇದ್ದಲ್ಲಿಗೆ ಬಂದ. ಕೂಡಲೇ ರಾಜಕುಮಾರ ಭದ್ರಾಯು ಎದ್ದುನಿಂತು ಆ ವಜ್ರಬಾಹು ಮಹಾರಾಜನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ. ಆಗ ಆಶ್ಚರ್ಯ ಹಾಗೂ ಆನಂದದ ಮಹಾಪೂರದಲ್ಲಿ ಮುಳುಗಿದ ವಜ್ರಬಾಹು ಆನಂದಬಾಷ್ಪಗಳನ್ನು ಉದುರಿಸುತ್ತ ಆ ರಾಜಕುಮಾರನ್ನು ಕೇಳಿದ.

**ವಜ್ರಬಾಹು:-** ಪುಣ್ಯಾತ್ಮ, ನೀನು ಯಾರು? ನೀನು ಮನುಷ್ಯನೋ ಅಥವಾ ದೇವತೆಯೋ ಅಥವಾ ಗಂಧರ್ವನೋ! ನಿನ್ನ ತಾಯಿತಂದೆ ಯಾರು? ನಿನ್ನ ದೇಶ ಯಾವುದು? ಹೆಸರು ಏನು? ನನ್ನನ್ನೂ ನನ್ನ ಅಂತಃಪುರ ಪರಿವಾರವನ್ನೂ ಬಂಧನದಿಂದ ಬಿಡುಗಡೆ ಮಾಡಲು, ಏನು ಕಾರಣ? ನೀನು ಮಾಡಿದ ಈ ಉಪಕಾರದ ಋಣವನ್ನು ನಾನು ಬಂಧುಬಾಂಧವ ಸಹಿತವಾಗಿ ಜನ್ಮಜನ್ಮಾಂತರಗಳಲ್ಲಿ ನಿನ್ನ ಸೇವೆಮಾಡಿಯೂ ತೀರಸಲಾರೆ.

**ಭದ್ರಾಯು:-** ''ರಾಜನೇ, ಇವನು ನನ್ನ ಗೆಳೆಯ ವೈಶ್ಯಕುಮಾರ. 'ಸುನಯ' ಎಂದು ಇವನ ಹೆಸರು. ನಾನು ಇವನ ಮನೆಯಲ್ಲಿಯೇ ನನ್ನ ತಾಯಿಯೊಡನೆ ವಾಸಮಾಡುತ್ತೇನೆ. ನನ್ನ ಹೆಸರು ಭದ್ರಾಯು. ನನ್ನ ಉಳಿದ ವೃತ್ತಾಂತವನ್ನು ಆ ಮೇಲೆ ನಿಮಗೆ ತಿಳಿಸುತ್ತೇನೆ. ಈಗ ನೀವು ನಿಮ್ಮ ಅಂತಃಪುರ ಪರಿವಾರ ಮಡದಿ ಮಿತ್ರ ಮಂತ್ರಿ ಜನರೊಂದಿಗೆ ನಿಮ್ಮ ರಾಜಧಾನಿಯಲ್ಲಿ ಪ್ರವೇಶಮಾಡಿರಿ. ನಿಮ್ಮನ್ನು ಈ ವರೆಗೆ ಬಂದೀಖಾನೆಯಲ್ಲಿ ಇರಿಸಿದ ವೈರಿರಾಜ್ಯದ ಅನೇಕ ಮಂತ್ರಿ, ಸೇನಾನಿ, ಅಧಿಕಾರಿಗಳನ್ನು ನಾನು ಸೆರೆಹಿಡಿದು ತಂದಿದ್ದೇನೆ. ನಾನು ಒಂದು ಅವಶ್ಯ ಕಾರ್ಯದ ಸಲುವಾಗಿ ಈ ವೈಶ್ಯಕುಮಾರನ ಮನೆಗೆ ಹೋಗುತ್ತೇನೆ. ನಾನು ತಿರುಗಿ ಬರುವವರೆಗೂ ನಾನು ಸೆರೆಹಿಡಿದು ತಂದಿಟ್ಟ ಕೈದಿಗಳಲ್ಲಿ ಯಾರನ್ನೂ ಬಿಡಬೇಡಿರಿ.'' ಹೀಗೆ ಹೇಳಿ ರಾಜಕುಮಾರ ಭದ್ರಾಯು ತನ್ನ ಮನೆಗೆ ಬಂದ. ತಾಯಿಯನ್ನು ಭೇಟಿಮಾಡಿದ. ನಡೆದ ಘಟನೆಯನ್ನೆಲ್ಲ ವಿವರಿಸಿದ ತನ್ನ ಹಡೆದವ್ವನಿಗೆ. ಆನಂದ ಸಾಗರದಲ್ಲಿ ಮುಳುಮುಳುಗಿ ಎದ್ದ ಅನುಭವ ಆ ಮಹಾರಾಣಿಗೆ. ಅವಳ ಹೃದಯ ಪ್ರಸನ್ನ. ಅಂತಃಕರಣ ಹರ್ಷಿತ ದೇಹ ಪುಳಕಿತ ಮಗನನ್ನು ಬರಸೆಳೆದು ಬಿಗಿದಪ್ಪಿದಳು. ನೆತ್ತಿ ಮೂಸಿದಳು. ವೈಶ್ಯರಾಜನು ಕೂಡ ಪ್ರೀತಿಯಿಂದ ರಾಜಕುಮಾರನನ್ನು ಆಲಿಂಗಿಸಿದ. ಎಲ್ಲರೂ ''ಇದೆಲ್ಲವೂ ಶಿವಯೋಗಿಯಾದ ಆ ವೃಷಭನಾಥನ ಪ್ರಭಾವ'' ಎಂದು ಮನದಲ್ಲಿಯೇ ವಂದಿಸಿದರು ಆ ಮಹಾಯೋಗಿಗೆ.

ಇತ್ತ ವಜ್ರಬಾಹು ಮಹಾರಾಜನು ತನ್ನ ಮಡದಿ ಮಕ್ಕಳು ಹಾಗೂ ಮಂತ್ರಿ ಸೇನಾಪತಿಗಳೊಂದಿಗೆ ಅರಮನೆಯನ್ನು ಪ್ರವೇಶಮಾಡಿದ. ತನ್ನ ಎಲ್ಲ ವೈಭವವು ಮರಳಿ ತನಗೆ ದೊರೆತದ್ದನ್ನು ಕಂಡು ಅವನಿಗೆ ಪರಮಾನಂದವಾಯಿತು.

ಮರುದಿನ ಬೆಳಗಾದ ಬಳಿಕ ಯೋಗಿಶ್ರೇಷ್ಠನಾದ ವೃಷಭಮುನಿಯು ಮಹಾರಾಣಿ ಸೀಮಂತಿನಿಯ ಪತಿಯಾದ ಚಂದ್ರಾಂಗದ ರಾಜನ ಅರಮನೆಗೆ ಆಗಮಿಸಿದ ಆ ವೃಷಭ ಯೋಗಿಯನ್ನು ಕಂಡು ಚಂದ್ರಾಂಗದನಿಗೆ ಭಕ್ತಿ ಉಕ್ಕೇರಿತು. ರಾಜದಂಪತಿಗಳು ಭಕ್ತಿಯಿಂದ ಬಾಗಿ ನಮಿಸಿದರು ಆ ಯೋಗಿಯ ಪಾದಪಲ್ಲವಗಳಿಗೆ. ಅವರ ಮಗಳಾದ ಕೀರ್ತಿಮಾಲಿಯು ಭಕ್ತಿಯಿಂದ ವಂದಿಸಿದಳು ಆ ವೃಷಭ ಮುನಿಯ ಅಡಿದಾವರೆಗಳಿಗೆ. ಆಗ ಆ ಯೋಗೀಶ್ವರನು ಆ ರಾಜಕುಟುಂಬದವರನ್ನೆಲ್ಲರನ್ನೂ ಕರುಣಾಪೂರ್ಣ ದೃಷ್ಟಿಯಿಂದ ನಿರೀಕ್ಷಿಸಿ ಪ್ರೇಮದಿಂದ ರಾಜಕುಮಾರ ಭದ್ರಾಯುವಿನ ಉತ್ಪತ್ತಿ. ಬೆಳವಣಿಗೆ, ಗುರು ಅನುಗ್ರಹ ಹಾಗೂ ಅಲೌಕಿಕ ಪರಾಕ್ರಮಗಳನ್ನು ವರ್ಣಿಸಿ ಪ್ರೇಮಪೂರ್ವಕವಾಗಿ ಹೇಳಿದ- ''ರಾಜನ್, ಈ ನಿನ್ನ ಮಗಳಾದ ಕೀರ್ತಿಮಾಲಿನಿಯು ಈಗ ಉಪವರಳು ಆಗಿದ್ದಾಳೆ. ಈಗ ಅವಳಿಗೆ ವಿವಾಹಕ್ಕೆ ಯೋಗ್ಯವಯಸ್ಸು. ಅವಳನ್ನು ರಾಜಕುಮಾರ ಭದ್ರಾಯುವಿಗೆ ಮದುವೆ ಮಾಡಿಕೊಡು ಇದರಿಂದ ನಿಮ್ಮ ಎರಡೂ ಕುಲಗಳಿಗೂ ಕಲ್ಯಾಣ.'' ಹೀಗೆ ಹೇಳಿ ಚಂದ್ರಾಂಗದನಿಗೆ ವಿವಾಹದ ಆದೇಶ ನೀಡಿ ಹೊರಟು ಹೋದ ಆ ಯೋಗಿರಾಜ, ಅದರಂತೆ ಚಂದ್ರಾಂಗದನು ಭದ್ರಾಯುವನ್ನು ತನ್ನ ರಾಜಧಾನಿಗೆ ಕರೆಸಿ ಕೊಂಡ. ಯೋಗೀಶ್ವರರ ಆದೇಶವನ್ನು ತಿಳಿಸಿದ. ತನ್ನ ಪುತ್ರಿಯಾದ ಕೀರ್ತಿಮಾನಿಯನ್ನು ಪರಿಗ್ರಹಿಸಲು ಕೇಳಿಕೊಂಡ. ತನ್ನ ಮಗಳನ್ನು ತೋರಿಸಿದ ಭದ್ರಾಯುವಿಗೆ.

ಕೀರ್ತಿಮಾಲಿನಿ ಸೀಮಂತಿನಿಯು ಔರಸಪುತ್ರಿ, ತಾಯಿಯದು ರತಿಯ ರೂಪವಾದರೆ, ಮಗಳದು ಊರ್ವಶಿಯ ಸೌಂದರ್ಯ. ಸ್ತ್ರೀ ಸೌಂದರ್ಯದ ಸಂಪೂರ್ಣ ವಿಕಾಸಕ್ಕೆ ಇಂಬಾಗಿತ್ತು ಅವಳ ತುಂಬಿದ ದೇಹ. ಅವಳ ರೂಪಸಿರಿಯನ್ನು ಕಂಡಾಗ

ಋಷಭಯೋಗಿಯು ತನ್ನ ಮೇಲೆ ಇನ್ನೊಂದು ಕರುಣಾವೃಷ್ಟಿಯನ್ನೇ ಕರೆದಿದ್ದಾನೆ. ಎಂದು ಕೃತಜ್ಞತೆಯಿಂದ ಮನದಲ್ಲಿಯೇ ವಂದಿಸಿದ ಆ ಯೋಗಿ ವೃಂದಾರಕನನ್ನು. ವೈಭವದಿಂದ ನೆರವೇರಿತು ಭದ್ರಾಯು ಹಾಗೂ ಕೀರ್ತಿಮಾಲಿನಿಯರ ಮದುವೆಯ ಮಂಗಳ ಮಹೋತ್ಸವ, ಆ ಮದುವೆಗೆ ಚಂದ್ರಾಂಗದ ಮಹಾರಾಜನು ವಜ್ರಬಾಹು ಮಹಾರಾಜನನ್ನು ಮಂತ್ರಿ ಪರಿವಾರ ಸಹಿತವಾಗಿ ಬರಮಾಡಿಕೊಂಡ. ಅವರಿಗೆಲ್ಲ ಅತ್ಯಾದರದ ಸ್ವಾಗತ ಸತ್ಕಾರಗಳು ಆದವು. ವಧೂವರರೀರ್ವರೂ ವಜ್ರಬಾಹುವಿನ ಬಳಿಗೆ ಬಂದು ವಿನಯದಿಂದ ವಂದಿಸಿದರು. ಆಗ ಆನಂದ ತುಂದಿಲಿತನಾದ ವಜ್ರಬಾಹು ಚಂದ್ರಾಂಗದನ್ನು ಕೇಳಿದ.

**ವಜ್ರಬಾಹು:-** ಚಂದ್ರಾಂಗದ, ಈ ನಿನ್ನ ಅಳಿಯ ಮಹಾಬಲಿಷ್ಠ ಮಹಾಸುಂದರ, ಮಹಾಪಂಡಿತ, ವಿದ್ಯೆ, ವಯಸ್ಸು, ವಿತ್ತ, ವಂಶ, ವಿನಯ, ವೀರ್ಯ, ವೈಭವ, ಎಲ್ಲದರಿಂದಲೂ ಅಸಾಮಾನ್ಯ ಈ ನಿನ್ನ ಅಳಿಯ. ಈ ವೀರವರೇಣ್ಯನಾದ ಭದ್ರಾಯುವಿನ ವಂಶ ಹಾಗೂ ಜನ್ಮವೃತ್ತಾಂತವನ್ನು ಕೇಳಬೇಕೆಂದು ನನಗೆ ತವಕ. ಇದನ್ನೆಲ್ಲ ನನಗೆ ಸಾದ್ಯಂತನಾಗಿ ವಿವರಿಸು.

ಆಗ ಚಂದ್ರಾಂಗದ ಮಹಾರಾಜನು ನಸುನಗುತ್ತ ಭದ್ರಾಯುವಿನ ಜೀವನದ ಗುಟ್ಟಿನ ಗೌಪ್ಯಸ್ಫೋಟವನ್ನು ಮಾಡುತ್ತ ನುಡಿದ- "ಮಹಾರಾಜಾ, ಈ ಭದ್ರಾಯು ಬೇರೆ ಯಾರೂ ಅಲ್ಲ. ಇವನು ನಿನ್ನ ಮಗನೇ. ಇವನು ಚಿಕ್ಕ ಮಗು ಇದ್ದಾಗ ನೀನು ರೋಗಗ್ರಸ್ತರು ಎಂದು ಇವನನ್ನೂ ಇವನ ತಾಯಿಯನ್ನೂ ಕಾಡಿಗೆ ಅಟ್ಟಿದ್ದೆ. ಅವಳು ಪಟ್ಟದರಾಣಿ ಯಾಗಿದ್ದರೂ ಬೇರೆ ಸ್ತ್ರೀಯರ ರೂಪಮುಗ್ಧನಾದ ನೀನು ಅವಳನ್ನೂ ಅವಳ ಈ ಮಗನನ್ನೂ ತೊರೆದು ಕೈ ತೊಳೆದುಕೊಂಡೆ. ಭಗ್ನಪ್ರೇಮಳಾದ ಆ ನಿನ್ನ ಪಟ್ಟದರಾಣಿಯು ಅನಾಥಳಾಗಿ ಅಡವಿ ಅಡವಿ ತಿರುಗುತ್ತ ಈ ತನ್ನ ಚಿಕ್ಕ ಮಗುವಿನೊಂದಿಗೆ ಓರ್ವ ವೈಶ್ಯನ ಮನೆಗೆ ತಲುಪಿದಳು. ನಿಜವಾಗಿಯೂ ಪುಣ್ಯಾತ್ಮ ಆ ವೈಶ್ಯ ಗೃಹಸ್ಥ. ಋಗ್ಣಭುಗ್ನರಾದ ಈ ತಾಯಿ ಮಗನನ್ನು ಮನೆಯಲ್ಲಿ ಇಟ್ಟುಕೊಂಡ ಅನಾಥರೆಂದು ಅಸಡ್ಡೆಯಿಲ್ಲ. ದೀನದರಿದ್ರರೆಂದು ಧಿಕ್ಕಾರವಿಲ್ಲ. ರೋಗಿಷ್ಠರೆಂದು ಜಿಗುಪ್ಸೆಯಿಲ್ಲ ತನ್ನ ಮಗ ಸುನಯನಿಗೂ ಈ ಅನಾಥ ರಾಜಕುಮಾರನಿಗೂ ಪಕ್ಷಪಾತವನ್ನು ಮಾಡದೇ. ಅವನಂತೆಯೇ ಅದೇ ಅಂತಃಕರಣದಿಂದ ಇವನನ್ನೂ ಬೆಳೆಸಿದ. ಮಹಾರಾಣಿಯನ್ನು ಪೋಷಿಸಿದ. ಆದರೆ ದುರ್ದೈವದಿಂದ ರೋಗಪೀಡಿತವಾದ ಈ ಮಗು ಬಾಲ್ಯದಲ್ಲಿಯೇ ಸತ್ತು ಹೋಗಿತ್ತು. ಆಗ ಋಷಭ ಎಂಬ ಹೆಸರಿನ ಶಿವಯೋಗಿಯು ಬಂದು ಈ ರಾಜಕುಮಾರನನ್ನು ತನ್ನ ಮಂತ್ರದ ಪ್ರಭಾವದಿಂದ ಬದುಕಿಸಿದ. ಆ ಶಿವಯೋಗಿಯ ದೈವೀ ಶಕ್ತಿಯ ಪ್ರಭಾವದಿಂದ ನಿನ್ನ ಮಡದಿಯಾದ ಈ ರೋಗಿಷ್ಠ ರಾಣಿಗೂ, ಸತ್ತುಬಿದ್ದ ಈ ನಿನ್ನ ಮಗನಿಗೂ ದಿವ್ಯ ಕಾಂತಿ, ದಿವ್ಯ ರೂಪ, ದಿವ್ಯ ಶಕ್ತಿ ಪ್ರಾಪ್ತವಾದವು. ಆ ಶಿವಯೋಗಿಯು ಕೊಟ್ಟ ಶಂಖ, ಖಡ್ಗ ಹಾಗೂ ಶಿವಕವಚಗಳಿಂದ ಶಿಕ್ಷಿತರಕ್ಷಿತನಾದ ಈ ಭದ್ರಾಯು ಲೀಲಾಜಾಲವಾಗಿ ವೈರಿಗಳನ್ನು ಗೆದ್ದ. ನಿನ್ನನ್ನು ಬಂದಿ ಮನೆಯಿಂದ ಬಿಡುಗಡೆ ಮಾಡಿದ. ಕಳೆದು ಹೋದ ನಿನ್ನ ಸಾಮ್ರಾಜ್ಯವನ್ನೆಲ್ಲ ಮರಳಿ ಗಳಿಸಿದ. ಹನ್ನೆರಡು ಸಾವಿರ ಆನೆಗಳ ಬಲ ಇವನ ಜೋಡುದೋಳುಗಳಲ್ಲಿ. ಎಲ್ಲ ವಿದ್ಯೆಗಳಲ್ಲಿಯೂ ಪರಿಣಿತ. ಎಲ್ಲ ಕಲೆಗಳಲ್ಲಿಯೂ ಪಾರಂಗತ. ಇಂಥ ಭದ್ರಪುರುಷ ಭದ್ರಾಯುವು ನಿನ್ನ ಮಗ. ಈಗ ನನ್ನ ಅಳಿಯ. ಈಗ ನೀನು ಮಗ ಮತ್ತು ಸೊಸೆಯನ್ನೂ ಇವನ ಪತಿವ್ರತೆಯಾದ ತಾಯಿಯನ್ನೂ ಕರೆದುಕೊಂಡು ನಿನ್ನ ರಾಜಧಾನಿಗೆ ಹೋಗು."

ಹೀಗೆ ಹೇಳಿ ಚಂದ್ರಾಂಗದನು ತನ್ನ ರಾಣೀವಾಸದಲ್ಲಿರುವ ವಜ್ರಬಾಹುವಿನಿಂದ ಪರಿತ್ಯಕ್ತಳಾದ ಅವನ ಹಿಂದಿನ ರಾಣಿಯನ್ನು ಕರೆದುಕೊಂಡು ಬಂದ. ದಿವ್ಯವಾದ ವಸ್ತ್ರಾಭರಣಗಳಿಂದ ವಿಭೂಷಿತಳಾದ ಆ ರಾಣಿಯು ದೇವತಾ ಸ್ತ್ರೀಯಂತೆ ವಜ್ರಬಾಹುವಿಗೆ

ತೋರಿದಳು. ಅವಳು ಬಂದು ಭಕ್ತಿಯಿಂದ ತನ್ನ ಪತಿಗೆ ವಂದಿಸಿದಳು. ಅವಳನ್ನು ತೊರೆದದ್ದಕ್ಕಾಗಿ ಪಶ್ಚತ್ತಾಪವಾಗಿ ವಜ್ರಬಾಹುವಿನ ಕಣ್ಣಲ್ಲಿ ನೀರಾಡಿತು. ಅವನು ಆನಂದದಿಂದ ಆ ಮಹಾರಾಣಿಯನ್ನು ಸ್ವೀಕರಿಸಿದ. ಆಗ ಅವಳು ತನ್ನ ಸೋದರಿಯಾದ ವಜ್ರಬಾಹುವಿನ ಇತರ ರಾಣಿಯರನ್ನೆಲ್ಲ ಭೇಟಿಮಾಡಿದಳು. ಅವರೆಲ್ಲರನ್ನೂ ಪ್ರೀತಿಯಿಂದ ಮಾತನಾಡಿಸಿದಳು. ಮಹಾಲಕ್ಷ್ಮಿಯಂತಿದ್ದ ಇಂಥ ಮಹಾರಾಣಿಯನ್ನು ಮನೆ ಬಿಟ್ಟು ಹೊರಕ್ಕೆ ಹಾಕಿದ್ದಕ್ಕೆ ಮತ್ತೆ ಮತ್ತೆ ಪರಿತಪಿಸಿದ ವಜ್ರಬಾಹು. ಇನ್ನೆಂದೂ ಇಂಥ ಹೇಯ ಕೃತ್ಯ ಮಾಡುವುದಿಲ್ಲ ಎಂದು ಪ್ರತಿಜ್ಞೆಗೈದ. ನಿಷಧರಾಜ ಚಂದ್ರಾಂಗದನು ತಂದೆ ಮಡದಿ ಮಕ್ಕಳ ಪುನರ್ಮಿಲನದ ಮಧುರ ಪ್ರಸಂಗ ನೋಡಿ ಆನಂದಪಟ್ಟು ಅವರೆಲ್ಲರನ್ನೂ ಸತ್ಕರಿಸಿದ ಸಂತೋಷದಿಂದ ಅನಂತರ ವಜ್ರಬಾಹುವು ತನ್ನ ಹಿರಿಯ ಮಹಾರಾಣಿ, ರಾಜಕುಮಾರ ಭದ್ರಾಯು, ತನ್ನ ಸೊಸೆಯಾದ ಕೀರ್ತಿಮಾಲಿನಿ ಮೂವರನ್ನೂ ಕರೆದುಕೊಂಡು ತನ್ನ ಪರಿವಾರ ಸಮೇತನಾಗಿ ರಾಜಧಾನಿಗೆ ಬಂದ. ತನ್ನ ಮೆಚ್ಚಿನ ಮಡದಿ ನೆಚ್ಚಿನ ಮಗ ಹಾಗೂ ಪ್ರೀತಿಯ ಪರಿವಾರದೊಂದಿಗೆ ಸಮಸ್ತ ಭೋಗ್ಯ ಭಾಗ್ಯಗಳನ್ನೆಲ್ಲ ಬಹುಕಾಲ ಅನುಭವಿಸುತ್ತ ವಾಸಮಾಡಿದ. ಕೊನೆಗೆ ಮುಪ್ಪಿನ ಕಾಲದಲ್ಲಿ ವಜ್ರಬಾಹು ಶಿವನಾಮ ಸ್ಮರಣ ಮಾಡುತ್ತ ಸ್ವರ್ಗವಾಸಿಯಾದ. ಅನಂತ ಅದ್ಭುತಪರಾಕ್ರಮಿ ಯಾದ ಭದ್ರಾಯುವು ಸಮುದ್ರವಲ ಯಾಂಕಿತವಾದ ಪೃಥ್ವೀಮಂಡಲವನ್ನೆಲ್ಲ ಶಾಸನಗೈದ. ಮತ್ತು ಮಗಧರಾಜ ಹೇಮರಥನೊಂದಿಗೆ ಮೈತ್ರಿಯನ್ನು ಬೆಳೆಸಿ ಅವನನ್ನೂ ಬಂಧನದಿಂದ ಬಿಡುಗಡೆ ಮಾಡಿದ.

## ಭದ್ರಾಯು ದಂಪತಿಗಳ ಭಕ್ತಿ ಪರೀಕ್ಷೆ. ಮತ್ತು ಶಿವಪ್ರಸಾದ

**ಸೂತ:-** ಮಹಾರಾಜ ಭದ್ರಾಯುವು ಸಿಂಹಾಸನಾರೋಹಣಮಾಡಿದ ಬಳಿಕ ಮೊದಲು ತನ್ನ ಸಾಮ್ರಾಜ್ಯದಲ್ಲಿ ಶಾಂತಿ ಸುಖ ಸಮಾಧಾನಗಳು ನೆಲಿಸುವಂತೆ ವ್ಯವಸ್ಥೆಯನ್ನು ಏರ್ಪಡಿಸಿದ. ರಾಜ್ಯದಲ್ಲಿ ಸ್ಥಿರತೆ, ಪ್ರಜೆಗಳ ಮನದಲ್ಲಿ ನೆಮ್ಮದಿ, ಅಧಿಕಾರಿಗಳಲ್ಲಿ ವಿಶ್ವಾಸ, ಎಲ್ಲ ಜನರಲ್ಲಿಯೂ ಸಂತಸ ಸದ್ಭಾವನೆಗಳು ಬೇರೂರುವಂತೆ ಮಾಡಿದ. ಹೀಗೆ ಪರಕೀಯ ಆಡಳಿತದಿಂದ ಅಸ್ತವ್ಯಸ್ತವಾಗಿದ್ದ ಜನಜೀವನವನ್ನು ಸುಖ ಸಮೃದ್ಧಿಯಿಂದ ನಲಿದಾಡುವಂತೆ ಮಾಡಿದ. ಬಳಿಕ ಅವನು ತನ್ನ ವೈಯ್ಯಕ್ತಿಕ ಜೀವನದಲ್ಲಿ ಸುಖೋಪಭೋಗಗಳನ್ನು ಅನುಭವಿಸಲು ಮನಸ್ಸು ಹಾಕಿದ.

ಒಂದು ದಿನ ಅವನು ತನ್ನ ಮನದನ್ನೆಯಾದ ಕೀರ್ತಿಮಾಲಿನಿಯೊಂದಿಗೆ ವನವಿಹಾರ ಗೈಯಬೇಕೆಂದು ರಮಣೀಯವಾದ ಕಾಂತಾರ ಪ್ರದೇಶಕ್ಕೆ ತೆರಳಿದ. ಅಲ್ಲಿ ಎಲ್ಲೆಡೆಗೂ ವಸಂತ ಸುಗ್ಗಿ. ಚೈತ್ರ ಚುಂಬನದಿಂದ ಚಿಗುರು ಹೊಗರೇರಿ ಹೊಳೆಯುವ ಆ ಬನ ಪ್ರಾಂತವೆಲ್ಲ ಕಾತು ಹೂತು ಕಾನನ ಕಾವಣವಾಗಿ ನಿಂತುಕೊಂಡಿತ್ತು. ನಿಸರ್ಗ ಸೌಂದರ್ಯ ಬೆಟ್ಟ ಬಯಲುಗಳಲ್ಲಿ ತನ್ನ ಚಲುವಿಕೆಯನ್ನು ಸೂರೆಗೊಳಿಸಿತ್ತು. ತಂಪು ತೀಡುವ ತಂಗಾಳಿ ಕಂಪಿನಂಜಲಿಯೆತ್ತಿ, ಅನುರಾಗ ಗೀತೆಯನ್ನು ಮಿಡಿಯುತ್ತಲಿತ್ತು. ಇಂಥ ರಮಣೀಯ ಪ್ರದೇಶದಲ್ಲಿ ರಸಿಕರಾಜನಾದ ಭದ್ರಾಯು ತನ್ನ ರಮಣೀ ಮಣಿಯೊಂದಿಗೆ ವನವಿಹಾರ ಗೈಯುತ್ತಿದ್ದ. ಅಷ್ಟರಲ್ಲಿ ಅಲ್ಲಿ ಒಂದು ದುರ್ಘಟನೆಯ ಅವರಿದ್ದ ತಾಣದಿಂದ ತುಸು ದೂರದಲ್ಲಿ ಓರ್ವ ವಿಪ್ರವನಿತೆ ತನ್ನ ಪತಿಯೊಂದಿಗೆ ಕೂಗುತ್ತ ಚೀರುತ್ತ ಓಡುತ್ತಲಿದ್ದಳು. ಒಂದು ಹೆಬ್ಬುಲಿ ಅವರನ್ನು ಬೆನ್ನುಹತ್ತಿತ್ತು. ಹುಲಿಯ ಹೆದರಿಕೆಯಿಂದ ಹೌಹಾರಿದ ಆ ಬ್ರಾಹ್ಮಣ ದಂಪತಿಗಳು ಕಂಗೆಟ್ಟು ದಿಕ್ಕೆಟ್ಟು ಓಡುತ್ತ ಕೂಗುತ್ತಲಿದ್ದರು. ''ಮಹಾರಾಜಾ, ನಮ್ಮನ್ನು ರಕ್ಷಿಸು''. ಎಂದು ಈ ದೀನ ದಂಪತಿಗಳ ಆರ್ತ ಧ್ವನಿಯನ್ನು ಕೇಳಿದ ಕೂಡಲೇ ಭದ್ರಾಯುವಿನಲ್ಲಿಯ ಪೌರುಷ ಜಾಗ್ರತವಾಯಿತು.

ತಕ್ಷಣದಲ್ಲಿಯೇ ಅವನು ಬಿಲ್ಲನ್ನು ಎತ್ತಿದ. ಹೆದೆ ಎಳೆದ ಬಾಣ ಹೂಡಿದ. ಧನುಸ್ಸನ್ನು ಠೇಂಕರಿಸಿದ. ಆದರೆ ಅಷ್ಟರಲ್ಲಿ ಆ ಹುಲಿ ಹಾರಿ ಹಿಡಿದುಕೊಂಡಿತು. ಆ ಬ್ರಾಹ್ಮಣ ಸ್ತ್ರೀಯನ್ನು. "ಅಯ್ಯೋ ಸತ್ತೆ. ನಾಥ! ಪ್ರಾಣವಲ್ಲಭ! ರಕ್ಷಿಸು, ಶಿವ ಶಿವ ಮಹಾದೇವ, ಈ ಕ್ರೂರ ಮೃಗದಿಂದ ಕಾಪಾಡು. ಕಾಪಾಡು" ಹೀಗೆ ಚೀತ್ಕರಿಸುತ್ತ ಆ ಸ್ತ್ರೀ ಅಳತೊಡಗಿದಳು. ಬಹಳ ಭೀಕರವಾಗಿದ್ದಿತು ಆ ಹೆಬ್ಬುಲಿ. ಅದು ಒಮ್ಮೆ ರಾಜನೆಡೆ ನೋಡಿ ಆ ಬ್ರಾಹ್ಮಣಿಯ ದೇಹವನ್ನು ತನ್ನ ಪಂಜರದಲ್ಲಿರಿಸಿ ಗುಡುಗು ಹಾಕಿತು. ಅದರಿಂದ ಕಾಡು ಮೇಡುಗಳೆಲ್ಲ ವೂ ಪ್ರತಿಧ್ವನಿತಗೊಂಡವು. ಆಗಲೇ ಭದ್ರಾಯು ತನ್ನ ಹದನವಾದ ಬಾಣವನ್ನು ಒಂದರಮೇಲೊಂದರಂತೆ ಅದರ ಮೇಲೆ ಎಸೆದ. ಅನೇಕ ಬಾಣಗಳನ್ನು ಬಿಟ್ಟರೂ, ಬಿಟ್ಟ ಬಾಣಗಳೆಲ್ಲ ಬಡೆದರೂ ಆ ವ್ಯಾಘ್ರಕ್ಕೆ ಏನೂ ಆಗಲಿಲ್ಲ ನಿರಾತಂಕವಾಗಿ ಅದು ಆ ಬ್ರಾಹ್ಮಣ ಸತಿಯನ್ನು ಎಳೆದುಕೊಂಡು ತುಸು ದೂರ ಹೋಯಿತು. ಆ ದೈತ್ಯ ವ್ಯಾಘ್ರದ ಉಗುರು ಪಂಜಿನಲ್ಲಿ ಸಿಕ್ಕು ಎಳೆಯಲ್ಪಡುವ ತನ್ನ ಕಾಂತೆಯನ್ನು ಕಂಡು ಕೈಕಾಲು ಕಳೆದುಕೊಂಡು ಆ ಬ್ರಾಹ್ಮಣ ಕಂಗೆಟ್ಟು ಅರಚಿದ. "ಅಯ್ಯೋ ಪ್ರಿಯೆ? ನನ್ನೊಬ್ಬನನ್ನೇ ಬಿಟ್ಟು ನೀನೊಬ್ಬಳೇ ಹುಲಿಗೆ ಬಲಿಯಾಗುತ್ತ ಲಿದ್ದೀಯಾ! ನನ್ನ ಕಣ್ಣೆದುರೇ ನಿನ್ನನ್ನು ಕೊಲ್ಲುತ್ತಲಿದೆ ಈ ದುಷ್ಟ ವ್ಯಾಘ್ರ. ನಿನ್ನನ್ನು ಹೇಗೆ ಬಿಡಿಸಲಿ? ನೀನಿಲ್ಲದೆ ನಾನು ಹೇಗೆ ಬದುಕಲಿ? ನಾನು ಬರುತ್ತೇನೆ ನಿಲ್ಲು. ಇಬ್ಬರನ್ನೂ ತಿಂದು ಮುಗಿಸಲಿ ಆ ಕ್ರೂರ ಪ್ರಾಣಿ. ಅದರ ಹಲ್ಲಿಗೆ ನಾನೇನು ಹೆಚ್ಚಾಗುವುದಿಲ್ಲ" ಎಂದು ಬೊಬ್ಬಿರಿದು ರಾಜನೆಡೆಗೆ ತಿರುಗಿದ. "ರಾಜನೇ, ನಿನ್ನ ಆ ಭೀಕರವಾದ ಶಸ್ತ್ರಾಸ್ತ್ರಗಳು ಎಲ್ಲಿ ಹೋದವು? ಹನ್ನೆರಡು ಸಾವಿರ ಆನೆ ಬಲ ನಿನಗೆ ಉಂಟು ಎಂದು ಹೇಳುತ್ತಿದ್ದೆಯಲ್ಲವೆ? ಒಂದು ಹುಲಿಯನ್ನು ಹೊಡೆಯಲಾಗದ ನಿನ್ನ ಆ ಶಕ್ತಿಸಾಮರ್ಥ್ಯಗಳಿಂದ ಏನು ಪ್ರಯೋಜನ? ಯೋಗೀಶ್ವರನು ಕೊಟ್ಟ ಆ ದಿವ್ಯ ಖಡ್ಗವು ಇಂದು ನಿನ್ನ ಪಾಲಿಗೆ ಮೊಂಡಾಯಿತೆ? ಆ ನಿನ್ನ ಶಂಖ ಅಪ್ರಯೋಜಕವೆ? ಸಂಕಟದಲ್ಲಿದ್ದವರನ್ನು ರಕ್ಷಿಸುವುದು ಕ್ಷತ್ರಿಯರ ಧರ್ಮ. ಧರ್ಮನಿಷ್ಠರಾದ ಕ್ಷತ್ರಿಯ ರಾಜರು ತನ್ನ ಪ್ರಾಣ ಕೊಟ್ಟಾದರೂ ಶರಣು ಬಂದ ದೀನ ದುಃಖಿತರನ್ನು ರಕ್ಷಿಸುತ್ತಾರೆ. ಮೊರೆಯಿಟ್ಟವರನ್ನು ಪೊರೆಯದ ದೊರೆಗಳು ಬದುಕುವುದಕ್ಕಿಂತ ಸತ್ತು ಹೋಗುವುದೇ ಲೇಸು."

ಬ್ರಾಹ್ಮಣನ ಈ ಆಕ್ರೋಶ ಹಾಗೂ ತನ್ನ ಸಾಮರ್ಥ್ಯದ ನಿಂದೆಯನ್ನು ಕೇಳಿ ರಾಜನು ಕ್ರೋಧ ತಪ್ತನೂ ದುಃಖತಪ್ತನೂ ಆದ ಅವನಿಗೆ ಆಶ್ಚರ್ಯದ ಆಘಾತ. ತನ್ನ ಹದನವಾದ, ವೈರಿಗಳ ರುಂಡಗಳನ್ನು ಚೆಂಡಾಡುವ ತೀಕ್ಷ್ಣ ಬಾಣಗಳು ನಿಷ್ಕ್ರಿಯ ವಾಗಿದ್ದವು. ತನ್ನ ಖಡ್ಗ ಬಾಣಗಳ ಪ್ರಹಾರಗಳಿಂದ ಆ ಹುಲಿಗೆ ಯಾವ ಪೆಟ್ಟೂ ತಗಲಿಲ್ಲ. ಅವನ ಅದ್ಭುತವಾದ ಪರಾಕ್ರಮವೆಲ್ಲವೂ ನಷ್ಟವಾಗಿ ಹೋಗಿತ್ತು. ಆ ಹುಲಿಯ ಮುಂದೆ ಅವನ ಆಟ ಸಾಗದೇ ಅಂತರಂಗದಲ್ಲಿ ಸಂತಾಪವು ಕುದಿಯತೊಡಗಿತ್ತು. ಅವನಿಗೆ ತನ್ನ ಮೇಲೆಯೇ ಸಿಟ್ಟು 'ಇಂಥ ದುರ್ಬಲನಾದ ನನಗೆ ಧಿಕ್ಕಾರ. ನನ್ನ ಪರಾಕ್ರಮಕ್ಕೆ ಧಿಕ್ಕಾರ' ಎಂದು ತನ್ನನ್ನು ತಾನೇ ಬೈಯ್ದುಕೊಂಡ. ಅನಂತರ ಆ ಬ್ರಾಹ್ಮಣನ ಬಳಿಗೆ ಬಂದು ಅವನ ಪಾದದ ಮೇಲೆ ಬಿದ್ದು ಕೇಳಿಕೊಂಡ- 'ಪೂಜ್ಯರೇ, ಕ್ಷಮಿಸಿರಿ. ನನ್ನ ಶಕ್ತಿ ಕ್ಷೀಣವಾಗಿದೆ. ನಾನು ಹುಲಿಯ ಮೇಲೆ ಬಿಟ್ಟ ಬಾಣಗಳೆಲ್ಲವೂ ವ್ಯರ್ಥವಾದವು. ಕ್ಷತ್ರಿಯಾಧಮನಾದ ನನ್ನನ್ನು ಕ್ಷಮಿಸಿರಿ. ಈ ವ್ಯಾಘ್ರನಿಗ್ರಹವೊಂದನ್ನು ಬಿಟ್ಟು ಏನು ಬೇಕಾದುದನ್ನು ಬೇಡಿರಿ ನೀವು ಬಯಸಿದ್ದನ್ನು ನೀಡುತ್ತೇನೆ. ಈ ನಿನ್ನ ವಿಶಾಲವಾದ ಸಾಮ್ರಾಜ್ಯ, ಮೆಚ್ಚಿನ ಮಡದಿ ಕೀರ್ತಿಶಾಲಿನಿ, ಈ ನನ್ನ ಸ್ವಂತ ದೇಹ ಇವೆಲ್ಲವೂ ಈ ಕ್ಷಣದಿಂದ ನಿಮ್ಮ ಆಧೀನ. ನಿಮಗೆ ಏನು ಕೊಡಲಿ, ಹೇಳಿರಿ.

**ಬ್ರಾಹ್ಮಣ:-** 'ರಾಜನೇ, ಕುರುಡರಿಗೆ ಕನ್ನಡಿಯಿಂದ ಏನು ಕೆಲಸ? ಭಿಕ್ಷೆ ಬೇಡುವವನಿಗೆ ನಗರದ ಪ್ರಾಸಾದ ಪಂಕ್ತಿಗಳಿಂದ ಏನು ಲಾಭ? ನಿರಕ್ಷರಕುಕ್ಷಿಗೆ ಪುಸ್ತಕವನ್ನು ಕೊಟ್ಟರೆ ಏನು ಉಪಯೋಗ? ಮಡದಿಯಿಲ್ಲದ ಮನುಷ್ಯನಿಗೆ ಐಶ್ವರ್ಯಕೊಟ್ಟರೆ ಏನು ಲಾಭ? ನನ್ನ ಹೆಂಡತಿ ಕೈ ಬಿಟ್ಟಳು. ಸಾವಿನ ಪಂಜರದಲ್ಲಿ ಸಿಲುಕಿ ನರಳಿ ಚೀರಿ ಪ್ರಾಣ ನೀಗುತ್ತಲಿದ್ದಾಳೆ. ಅವಳೇ ಹೋದ ಬಳಿಕ ನೀನು ಏನು ಐಶ್ವರ್ಯ ಕೊಟ್ಟರೂ ನನ್ನ ಕಾಮ ಸುಖವನ್ನು ಉಪಭೋಗಿಸಲು ಬರಲಾರದು. ನನಗಿನ್ನೂ ಹರೆಯದ ವಯಸ್ಸು. ಕಾಮ ವಾಸನೆ ಇಂಗಿಲ್ಲ. ಸ್ತ್ರೀ ಸುಖದ ಬಯಕೆ ಹಿಂಗಿಲ್ಲ. ಆದುದರಿಂದ ನಿನಗೆ ನನಗೆ ಹೆಂಡತಿಯನ್ನು ಹುಲಿಯ ಹಿಡಿತದಿಂದ ಬಿಡಿಸಲು ಆಗದಿದ್ದರೆ ನಿನ್ನ ಹೆಂಡತಿಯನ್ನೇ ನನಗೆ ಕೊಟ್ಟು ಬಿಡು. ನನ್ನ ಮಡದಿಯ ಮರಣದಿಂದ ಅತೃಪ್ತವಾದ ಕಾಮದಾಹವನ್ನು ನಿನ್ನ ಧರ್ಮಪತ್ನಿಯ ಮುಖಾಂತರ ತೀರಿಸಿಕೊಳ್ಳುವೆ.

**ಭದ್ರಾಯು:-** ಬ್ರಾಹ್ಮಣ, ನೀನು ಏನು ಮಾತನಾಡತೊಡಗಿರುವೆ? ನೀನು ಆಡುವ ಮಾತಿನ ಅರ್ಥ ನಿನಗೆ ತಿಳಿದಿದೆಯಷ್ಟೆ? ಅದರಿಂದ ಆಗುವ ಅನರ್ಥದ ಕಲ್ಪನೆ ನಿನಗೆ ಇದೆಯೆ? ನಿನ್ನ ಗುರು ವೃಷಭಯೋಗಿಯು ನಿನಗೆ ಪರಸ್ತ್ರೀ ಭೋಗವನ್ನೇ ಧರ್ಮ ಎಂದು ಉಪದೇಶ ನೀಡಿದ್ದಾನೆಯೆ? ಪರಸ್ತ್ರೀ ಸ್ಪರ್ಶದಿಂದ ಎಂಥ ಘೋರ ಪಾಪ ಬರುವುದು ಎಂದು ನೀನು ತಿಳಿದಿಲ್ಲವೆ? ವ್ಯಭಿಚಾರದಿಂದ ಬರುವ ಘೋರ ಪಾಪವನ್ನು ಸಾವಿರಾರು ಪ್ರಾಯಶ್ಚಿತ್ತಗಳಿಂದಲೂ ತೊಳೆಯಲುಬರಲಾರದು.

**ಬ್ರಾಹ್ಮಣ:-** ''ರಾಜನ್! ನಾನು ಮಹಾತಪಸ್ವಿ. ನನ್ನ ಅತ್ಯದ್ಭುತವಾದ ತಪಃಶಕ್ತಿಯಿಂದ ಬ್ರಹ್ಮಹತ್ಯಾಪಾಪವನ್ನೂ ತೊಳೆಯಬಲ್ಲೆ. ಮದ್ಯಪಾನದ ಪಾತಕವನ್ನೂ ಕಳೆಯಬಲ್ಲೆ. ಅಂದಬಳಿಕ ಈ ಪರಸ್ತ್ರೀ ಸಂಗದ ಪಾಪವು ನನಗೆ ಏನು ಮಾಡೀತು? ಈ ವ್ಯಭಿಚಾರ ದೋಷವು ನನಗೆ ಲೆಕ್ಕವೇ ಇಲ್ಲ. ಇಂಥ ನೂರು ಪಾಪಗಳನ್ನು ಮೂರು ದಿನಗಳ ತಪಸ್ಸಿನಿಂದಲೇ ಸಂಪೂರ್ಣವಾಗಿ ನಾನು ತೊಡೆದು ಹಾಕಬಲ್ಲೆ. ನಿನಗೇಕೆ ಯೋಚನೆ? ತಪಸ್ವಿಗಳ ಯೋಗ್ಯತೆ ನಿನಗೆ ಗೊತ್ತಿಲ್ಲ. ಅಸಾಧಾರಣವಾದ ನನ್ನ ತಪಃಶಕ್ತಿಗಳಿಂದ ನಾನು ಎಂಥ ಪಾಪಗಳನ್ನೂ ದಕ್ಕಿಸಿಕೊಳ್ಳಬಲ್ಲೆ. ನೀನು ಮೊದಲೇ ನಿನ್ನ ಹೆಂಡತಿ, ರಾಜ್ಯ ಎಲ್ಲವನ್ನೂ ನನ್ನ ಅಧೀನ ಮಾಡಲು ಒಪ್ಪಿಕೊಂಡಿರುವೆ. ಈಗ ನಾನು ಕೇಳಿದ ಬಳಿಕ ನಿನ್ನ ಕಾಂತೆ ಕೀರ್ತಿಶಾಲಿನಿಯನ್ನು ನನಗೆ ಕೊಡದಿದ್ದರೆ ದಾರುಣವಾದ ನರಕದಲ್ಲಿ ಬಿದ್ದು ನೀನು ಒದ್ದಾಡುವೆ. ನೀನು ವಿಚಾರಿಸು.''

ಬ್ರಾಹ್ಮಣನ ಈ ಮಾತು ಬೆಂಕಿಯನ್ನೇ ಹೊತ್ತಿಸಿತು ಭದ್ರಾಯುವಿನ ಹೃದಯ ಕುಂಡದಲ್ಲಿ. ಕುದಿಯುವ ಕಡಾಯಿಯಲ್ಲಿ ಬಿದ್ದ ಅನುಭವ ಅವನಿಗೆ, ಏನು ಮಾಡಲೂ ತಿಳಿಯದು. ಈಗ ಮತ್ತೆ ಮತ್ತೆ ಅವನು ಮನದಲ್ಲಿಯೇ ವಿಚಾರಿಸಿದ- 'ಈ ಬ್ರಾಹ್ಮಣ ಸ್ತ್ರೀಯನ್ನು ರಕ್ಷಿಸದೇ ಇದ್ದದ್ದು ಕ್ಷತ್ರಿಯನಾದ ನನ್ನ ಅಕ್ಷಮ್ಯ ಅಪರಾಧ. ಈಗ ಈ ಬ್ರಾಹ್ಮಣನು ನನ್ನ ಪ್ರಾಣಪ್ರಿಯೆಯನ್ನು ಅದಕ್ಕೆ ಬದಲಾಗಿ ಕೇಳುತ್ತಿದ್ದಾನೆ. ಕೊಡದಿದ್ದರೆ ಮತ್ತೆ ಶಾಪಕೊಡುತ್ತಾನೆ. ಈ ಬ್ರಾಹ್ಮಣನ ಕೋಪ ಶಾಪಗಳಿಗೆ ತುತ್ತು ಆಗುವುದಕ್ಕಿಂತ ನನ್ನ ಧರ್ಮಪತ್ನಿಯನ್ನು ಇವನಿಗೆ ಒಪ್ಪಿಸುವುದೇ ಮೇಲು. ಆದರೆ ನನ್ನನ್ನೇ ನಂಬಿ ನಿಂತ ಪತ್ನಿಯನ್ನು ಹೆರವರಿಗೆ ಒಪ್ಪಿಸುವುದು ಮಹಾಪಾಪ. ಅದಕ್ಕಾಗಿ ಈ ಬ್ರಾಹ್ಮಣನಿಗೆ ನನ್ನ ಮಡದಿಯನ್ನು ಒಪ್ಪಿಸಿ ನಾನು ಅಗ್ನಿ ಪ್ರವೇಶಮಾಡಿ ಬಿಡುವೆನು.'

ಹೀಗೆ ಮನದಲ್ಲಿ ನಿರ್ಧರಿಸಿದ, ಅಲ್ಲಿಯೇ ಒಂದು ಚಿತೆಯನ್ನು ತಯಾರಿಸಿದ. ಒಣ ಕಟ್ಟಿಗೆ ಹುಲ್ಲನ್ನು ಒಟ್ಟಿ ಅದಕ್ಕೆ ತಾನೇ ಆ ಆತ್ಮಚಿತೆಗೆ ಕೊಳ್ಳಿಇಟ್ಟ. ಮತ್ತು ತಾನು ಆ ಬ್ರಾಹ್ಮಣನ ಬಳಿಗೆ ಬಂದು "ನನ್ನ ಧರ್ಮಪತ್ನಿಯಾದ ಕೀರ್ತಿಮಾಲಿನಿಯನ್ನು ನಿನಗೆ ಕೊಟ್ಟಿದ್ದೇನೆ" ಎಂದು ಹೇಳಿ ಅವನಿಗೆ ತಿಳಿಸಿದ. ಅನಂತರ ತಾನು ಸ್ನಾನ ಮಾಡಿಬಂದು ಶಿವಧ್ಯಾನ ಮಾಡಿದ. ಅಗ್ನಿಗೆ ಎರಡು ಸುತ್ತು ಪ್ರದಕ್ಷಿಣೆ, ಒಮ್ಮೆ ದೀರ್ಘದಂಡ ನಮಸ್ಕಾರ ಹಾಕಿದ. ಅನಂತರ ಮತ್ತೊಮ್ಮೆ ಏಕಾಗ್ರ ಚಿತ್ತದಿಂದ ಶಿವನನ್ನು ಪ್ರಾರ್ಥಿಸಿದ. ಅಂತರಂಗದಲ್ಲಿ ಅತ್ಯುತ್ಕಟ ಭಕ್ತ್ಯುದ್ರೇಕದಿಂದ ಪರಶಿವನನ್ನು ಧ್ಯಾನಮಾಡಿದ. ಅನಂತರ ಉರಿಯುವ ಜ್ವಾಲೆಗಳ ನಾಲಿಗೆ ಚಾಚಿ ಧಗಧಗಿಸಿ ಉರಿಯುತ್ತಲಿರುವ ಪ್ರಜ್ವಲಿತವಾದ ಆ ಚಿತಾಗ್ನಿಯಲ್ಲಿ ಆತ್ಮಾಹುತಿಯನ್ನು ನೀಡಲು ಹೊರಟ. "ಓಂ ನಮಃ ಶಿವಾಯ, ಶಿವಾಯ ಸ್ವಾಹಾ, 'ಅಗ್ನ್ಯಂತರ್ಗತ ಶಿವಾಯ ಇದಂ ನ ಮಮ' ಎಂದು ನುಡಿದವನೇ ಶಂಕರನಿಗೆ ಕೈಮುಗಿದು ಬೆಂಕಿಯಲ್ಲಿ ಬೀಳಹೊರಟ. ಕೂಡಲೇ ಅವನ ಕಣ್ಣೆದುರು ಪ್ರಕಟನಾದ ಪರಮೇಶ್ವರ ಭದ್ರಾಯುವಿನ ಸಾಕ್ಷಾತ್ಕಾರಕ್ಕೆ ಆ ಕ್ಷಣದಲ್ಲಿ ಗೋಚರನಾದ ವಿಶ್ವನಾಥನಿಗೆ ಐದು ಮುಖ. ಆ ಪಂಚಮುಖಿ ಪರಮೇಶ್ವರನ ಜಟಾಘಂಟಿತವಾದ ಮುಕುಟದಲ್ಲಿ ಚಂದ್ರಕೋರ. ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಮೃಗ ಕುಠಾರ, ಪಿನಾಕ ಮುಖದ ಮೇಲೆ ಕೋಟಿ ಸೂರ್ಯರ ಕಾಂತಿ. ಕಣ್ಣಿನಲ್ಲಿ ಮಿಂಚಿನ ಹೊಳಪು ಮುಖದಲ್ಲಿ ಮಂದ ಹಾಸದ ಮಿಣುಕು. ಎತ್ತಿನ ಮೇಲೆ ಹತ್ತಿಕುಳಿತುಕೊಂಡ ನೀಲಕಂಠನು ಭದ್ರಾಯುವಿಗೆ ತನ್ನ ಪ್ರತ್ಯಕ್ಷ ದರ್ಶನವನ್ನು ಕರುಣಿಸಿದ. ಆಗ ಭಕ್ತಿಭಾವದಿಂದ ಗದ್ಗದಿತಕಂಠನಾದ ಭದ್ರಾಯುವು ಕೈ ಜೋಡಿಸಿದ, ವಿಸ್ಖಲಿತವಾದ ತನ್ನ ವಾಣಿಯ ಒಂದೊಂದು ಅಕ್ಷರಗಳನ್ನೂ ಪ್ರಯತ್ನದಿಂದ ಕೂಡಿಸಿದ. ತಲೆಬಾಗಿಸಿದ. ಸ್ತೋತ್ರವನ್ನು ಮಾಡಿದ.

**ಭದ್ರಾಯು:-** "ಜಗದೊಡೆಯನಾದ ಮೃಡದೇವ. ನಿನಗೆ ನನ್ನ ಅನಂತ ನಮಸ್ಕಾರಗಳು. ನೀನು ಜಗತ್ಸ್ವಾಮಿ ನಿನಗೆ ಬೇರೆ ಸ್ವಾಮಿ ಇಲ್ಲ. ನೀನು ಸರ್ವರ ಅಂತರ್ಯಾಮಿ. ಆದರೂ ನೀನು ತಪಸ್ಸಾಧನೆಯಿಲ್ಲದೇ ಯಾರಿಗೂ ಗೋಚರ ನಾಗುವುದಿಲ್ಲ. ಮಹಾಮಹಾ ಯೋಗಿಗಳೂ ಮುನಿಗಳೂ, ಸಾಧಕರೂ ತಮ್ಮ ಚಿತ್ತ ವೃತ್ತಿಗಳನ್ನು ನಿರೋಧಿಸಿ ಯೋಗ ಸಾಧನೆಗಳ ಮುಖಾಂತರ ನಿನ್ನನ್ನು ಆರಾಧಿಸುತ್ತಾರೆ. ಪರಂಜ್ಯೋತಿ ಪರಮಾತ್ಮ ಎಂದರೆ ನೀನೆ. ಕಲ್ಯಾಣಮಯನಾದ ಚಂದ್ರಶೇಖರ, ಶಾಂತಮೂರ್ತಿಯಾದ ಗೌರೀಪತೇ, ಸೂರ್ಯ, ಚಂದ್ರ, ಅಗ್ನಿಯೆಂಬ ಮೂರು ಕಣ್ಣುಳ್ಳ ಗಂಗಾಧರ, ಅಂಧಕಾಸುರನನ್ನು ನಾಶಮಾಡಿದ ಭೂತನಾಥ, ಕೈಲಾಸ ಪರ್ವತದ ಮೇಲೆ ನೆಲಿಸಿದ ಮಹಾದೇವ, ನಿನಗೆ ನನ್ನ ನಮಸ್ಕಾರ, ಪುನಃ ಪುನಃ ನಮಸ್ಕಾರ."

ರಾಜನ ಈ ದಿವ್ಯ ಸ್ತೋತ್ರವನ್ನು ಕೇಳಿ ಪರಮೇಶ್ವರನು ಪ್ರೀತನಾದ. ಅವನ ಪಕ್ಕದಲ್ಲಿಯೇ ನಿಂತುಕೊಂಡ ಮಹಾಸತೀ ಪಾರ್ವತಿಯು ಕೂಡ ಪ್ರಸನ್ನವದನಳು ಆದಳು. ಆಗ ಆ ಕೈಲಾಸಪತಿಯು ಕರುಣಾಪೂರ್ಣ ದೃಷ್ಟಿಯಿಂದ ಆ ಭದ್ರಾಯುವಿನ ಕಡೆಗೆ ನೋಡುತ್ತ ಪ್ರೀತಿಪೂರ್ವಕವಾಗಿ ಮಾತನಾಡಿದ.

**ಕೈಲಾಷತಿ:-** ಮಹಾರಾಜಾ, ನೀನು ಇಷ್ಟುದಿನ ಅನನ್ಯ ಚಿತ್ತದಿಂದ ನನ್ನ ಪೂಜೆ ಮಾಡಿರುವಿ. ನಿನ್ನ ನಿತ್ಯ ನಿರಂತರವಾದ ಆ ಭಕ್ತಿಯುಕ್ತ ಶಿವೋಪಾಸನೆಯಿಂದ ನಾನು ಯಾವಾಗಲೂ ನಿನ್ನ ಮೇಲೆ ಸಂತುಷ್ಟ ಚಿತ್ತ. ಇದೀಗ ನೀನು ಮಾಡಿದ ನನ್ನ ಸ್ತೋತ್ರ

ದಿಂದಲೂ ನನಗೆ ಪರಮಾನಂದ ಆಗಿದೆ. ನಿನ್ನ ಭಕ್ತಿಭಾವವನ್ನು ಪರೀಕ್ಷಿಸಬೇಕೆಂದು ನಾನೇ ಬ್ರಾಹ್ಮಣನಾಗಿ ಇಲ್ಲಿಗೆ ಬಂದಿದ್ದೆ. ಈ ಹೆಬ್ಬುಲಿಯು ಹಾರಿ ಹಿಡಿದ ಹಾರುವ ಜಾತಿಯ ಹೆಣ್ಣು ಬೇರೆ ಯಾರೂ ಅಲ್ಲ ನನ್ನ ಮಡದಿ ಈ ಮೃಡಾನಿಯೇ. ಗಿರಿರಾಜ ನಂದಿನಿಯಾದ ಈ ಉಮಾದೇವಿ ಹಾಗೂ ನಾನು ನಿನ್ನ ಸತ್ವಪರೀಕ್ಷೆಗಾಗಿ ಈ ಗಹನಾರಣ್ಯದ ಗೂಢ ವನ ಪ್ರಾಂತದಲ್ಲಿ ಬ್ರಾಹ್ಮಣ ಬ್ರಾಹ್ಮಣಿಯರ ವೇಷದಿಂದ ನಿಂತುಕೊಂಡಿದ್ದೆವು. ನಿನ್ನ ಪ್ರಾಣಾಂತಕವಾದ ಬಾಣಪ್ರಹಾರಕ್ಕೂ ಮಣಿಯದ, ಖಡ್ಗ ಪ್ರಹಾರಕ್ಕೂ ಹಣಿಯದ ಆ ಘೋರ ಹುಲಿಯು ನನ್ನ ಮಾಯಾ ನಿರ್ಮಿತ. ನಿನ್ನ ಧೈರ್ಯವನ್ನು ಪರೀಕ್ಷಿಸಲಿಕ್ಕಾಗಿ ನಾನೇ ನಿನ್ನ ಮಡದಿಯನ್ನು ಕೇಳಿದ್ದೆ. ನೀವಿಬ್ಬರೂ ಪತಿಪತ್ನಿಯರ ಧೈರ್ಯದಿಂದ ನಾನು ಮುದಿತನಾದೆ. ನಿನ್ನ ಹಾಗೂ ಈ ಕೀರ್ತಿಮಾಲಿನಿಯ ಶಿವರಾಧನೆಯಿಂದ ನಾನು ಹಾಗೂ ಪಾರ್ವತಿ ಇಬ್ಬರೂ ಪರಮ ಪ್ರಮೋದ ಭರಿತರಾಗಿದ್ದೇವೆ. ನಿಮಗೆ ಬೇರೆ ಏನಾದರೂ ಬೇಕಾಗಿದ್ದರೆ ವರವನ್ನು ಕೇಳಿರಿ. ಎಂಥ ದುರ್ಲಭ ವರವನ್ನಾದರೂ ನಿಮಗೆ ಕೊಡಲು ಬಂದು ನಿಂತಿದ್ದೇವೆ.

**ಭದ್ರಾಯು:-** ''ದೇವ ದೇವ, ನೀನು ಸಾಕ್ಷಾತ್ ಪರಮೇಶ್ವರ. ಸಂಸಾರ ಸಾಗರದ ಬಗೆ ಬಗೆಯ ವೇದನಾ ವ್ಯೂಹಗಳ ವಿಷವರ್ತುಲದಲ್ಲಿ ಸಿಕ್ಕು ಮುಳುಗುತ್ತಲಿರುವ ನನ್ನಂಥ ಮಾನವಾಧಮನಿಗೆ ನೀನು ಪ್ರತ್ಯಕ್ಷ ದರ್ಶನವನ್ನು ನೀಡಿದ್ದೇ ನನ್ನ ಪಾಲಿಗೆ ದೊಡ್ಡ ವರ ಇದಕ್ಕಿಂತ ದೊಡ್ಡವರ. ಯಾವುದಿದೆ? ಆದರೂ ನಿನ್ನ ಆಜ್ಞೆಯನ್ನು ಮೀರಲಾರದೆ ಒಂದು ವರವನ್ನು ಕೇಳುತ್ತೇನೆ. ಕರುಣಿಸು. ನಾನು ನನ್ನ ಪ್ರೀತಿಯ ಧರ್ಮಪತ್ನಿಯಾದ ಕೀರ್ತಿಮಾಲಿನಿ ಹಾಗೂ ನನ್ನ ತಾಯಿ ತಂದೆ ಮತ್ತು ಪದ್ಮಾಕರ ವೈಶ್ಯ. ಅವನ ಪುತ್ರ ಸುನಯ ನಾವು ಇಷ್ಟು ಜನರೆಲ್ಲರೂ ನಿನ್ನ ಅಕ್ಕ ಪಕ್ಕದಲ್ಲಿ ನಿಂತು ಸೇವೆ ಮಾಡುವ ಶಿವ ಪರಿಚಾರಕತ್ವದ ಸೌಭಾಗ್ಯವನ್ನು ನಮಗೆ ನೀಡು.''

ಅನಂತರ ಮಹಾರಾಣಿ ಕೀರ್ತಿಮಾಲಿನಿಯು ರುದ್ರದೇವರಿಗೆ ಸಾಷ್ಟಾಂಗ ವಂದನೆ ಮಾಡಿದಳು. ಭಕ್ತ್ಯುದ್ರೇಕದಿಂದ ಕೊರಳು ಕಟ್ಟಿದ್ದರೂ ಗದ್ಗದ ಸ್ವರದಲ್ಲಿ ಸ್ತೋತ್ರ ಮಾಡಿದಳು. ಅವಳ ಸ್ತೋತ್ರದಿಂದ ಸುಪ್ರಸನ್ನನಾದ ಶಂಕರ. ಬೇಕಾದ ವರ ಬೇಡು ಎಂದು ಆಜ್ಞಾಪಿಸಿದ. ಆಗ ಕೀರ್ತಿಮಾಲಿನಿಯು ಕೈ ಮುಗಿದು ಕೇಳಿಕೊಂಡಳು.

**ಕೀರ್ತಿಮಾಲಿನಿ:-** ''ಪ್ರಭು ಪರಮೇಶ್ವರ! ನನ್ನ ತಂದೆ ಚಂದ್ರಾಂಗದ ಹಾಗೂ ತಾಯಿ ಸೀಮಂತಿನಿ ಇವರಿಬ್ಬರೂ ನಿನ್ನ ಅಚ್ಚಿನ್ನ ಭಕ್ತರು. ಸದಾ ಸರ್ವದಾ ಶಿವಸೇವೆಯಲ್ಲಿಯೇ ಅನುರಕ್ತರು. ಅವರಿಬ್ಬರಿಗೂ ನಿನ್ನ ಪಾರ್ಷದರಾಗಿ ಅನವರತವೂ ಗೌರಿ ಗಂಗಾಧರರನ್ನು ಸೇವಿಸುವ ಸೌಭಾಗ್ಯ ದೊರಕಲಿ.''

ಭದ್ರಾಯು ದಂಪತಿಗಳ ಈ ಎರಡೂ ಬೇಡಿಕೆಗಳಿಗೆ 'ಅಸ್ತು' ಎಂದರು ಆ ಪರಮೇಶ್ವರ ದಂಪತಿಗಳು, ಭದ್ರಾಯು ಹಾಗೂ ಕೀರ್ತಿಮಾಲಿನಿಯರಿಗೆ ಅಪೇಕ್ಷಿತವಾದ ವರಗಳನ್ನು ಕರುಣಿಸಿ ಅಲ್ಲಿಯೇ ಅಂತರ್ಧಾನ ಹೊಂದಿದರು ಪಾರ್ವತಿ ಪರಮೇಶ್ವರರು.

ಇತ್ತ ಭದ್ರಾಯು ಮಹಾರಾಜನು ಭವಭವಾನಿಯರ ದಿವ್ಯ ಪ್ರಸಾದವನ್ನು ಪಡೆದು ತಮ್ಮ ರಾಜಧಾನಿಗೆ ಮರಳಿದನು. ಭೂಲೋಕದಲ್ಲಿ ಲಭ್ಯವಾದ ಸಕಲ ಸಂಸಾರಿಕ ಸುಖೋಪ ಭೋಗಗಳನ್ನು ಅನುಭೋಗಿಸಿದರು. ಹತ್ತುಸಾವಿರ ವರ್ಷ ಧರ್ಮಚಕ್ರವನ್ನು ಈ ಭೂಲೋಕದಲ್ಲಿ ಅವಿಚ್ಛಿನ್ನವಾಗಿ ಪ್ರವರ್ತಿಸಿದರು. ಕೊನೆಗೆ ಅವರಿಗೆ ಈ ಸಾಂಸಾರಿಕ ವಿಷಯಗಳಲ್ಲಿ ವೈರಾಗ್ಯ ಉದಿಸಿತು. ತಮ್ಮ ಮಗನಿಗೆ ಸಿರಿ ಸಾಮ್ರಾಜ್ಯಗಳ ಅಧಿಕಾರ ಒಪ್ಪಿಸಿ

ಅರಣ್ಯಕ್ಕೆ ತೆರಳಿದರು. ಭಕ್ತ ಶರಣ್ಯನೂ, ದೇವವರೇಣ್ಯನೂ ಆದ ಪರಮೇಶ್ವರನ ಸಂತತ ಚಿಂತನೆಯಿಂದ ಈ ಜನ್ಮವನ್ನು ನೀಗಿದರು. ದಿವ್ಯ ಸದ್ಗತಿಯನ್ನು ಹೊಂದಿದರು. ಶಿವಧಾಮದಲ್ಲಿ ಸಾಕ್ಷಾತ್ ಆಗಿಯೇ ಶಿವಶಿವೆಯರ ಸೇವೆಗೈಯುತ್ತ ನಿರಂತರವಾಗಿ ನೆಲೆಸಿದರು. ಈ ಶಿವ, ಶಿವಯೋಗಿ ಹಾಗೂ ಶಿವಭಕ್ತರ ಚರಿತ್ರ ರೂಪವಾದ ಗುಣಾನುವಾದವು ವಿಚಿತ್ರವಿದ್ದಷ್ಟೇ ಪವಿತ್ರವೂ ಆಗಿದೆ. ಪಾಪನಾಶಕವಾದಂತೆ ಪುಣ್ಯದಾಯಕವೂ ಆಗಿದೆ. ಇದನ್ನು ಹೇಳಿದ ಪಂಡಿತ, ಕೇಳಿದ ಪಾಮರ, ಶುದ್ಧ ಚಿತ್ತದಿಂದ ಪಠಿಸಿದ ಬಲ್ಲಿದ, ಪಾರಾಯಣ ಮಾಡಿದ ಶ್ರೀಸಾಮಾನ್ಯ, ಎಲ್ಲರು ಇಲ್ಲಿರುವವರೆಗೆ ಭೋಗೈಶ್ವರ್ಯವನ್ನು ಹೊಂದುವರು. ಮರಣೋತ್ತರದಲ್ಲಿ ಕೈಲಾಸ ಪರ್ವತದಲ್ಲಿ ಶಿವನ ಸೇವಕರಾಗಿ ನಲಿದಾಡುವರು.

## ಭಸ್ಮದ ಪ್ರಭಾವ; ಬ್ರಹ್ಮರಾಕ್ಷಸರ ಉದ್ಧಾರ

**ಸೂತ:-** ವಾಮದೇವ ಎಂಬ ಹೆಸರಿನ ಶಿವಯೋಗಿ. ಪೂರ್ವಕಾಲದಲ್ಲಿ ಅವನೊಬ್ಬ ಅವಧೂತ. ಸುಖವೂ ಅಷ್ಟೇ ದುಃಖವೂ ಅಷ್ಟೇ. ನಿರ್ದ್ವಂದ್ವ ಆ ಯೋಗೀಶ್ವರ ಮನೆಯಿಲ್ಲ ಮಡದಿ ಇಲ್ಲ. ಮಕ್ಕಳಿಲ್ಲ ಮಮತೆ ಇಲ್ಲ. ನಿಸ್ಸಂಗ ಆತ್ಮಾರಾಮ. ಕಾಮ ಗೆದ್ದಿದ್ದ. ಕ್ರೋಧ ಜಯಿಸಿದ್ದ. ಲೋಭ, ಈರ್ಷೆ, ಅಸೂಯೆ ಎಂದೂ ಆ ಬಾಲ ಬ್ರಹ್ಮಚಾರಿಯ ಬಳಿ ಸುಳಿದಿರಲಿಲ್ಲ. ಎಲ್ಲ ಪ್ರಾಣಿಗಳ ಮೇಲೆಯೂ ದಯಾದೃಷ್ಟಿ ಆ ಮಹಾತ್ಮನಿಗೆ. ಒಂದು ದಿನ ಸ್ವೇಚ್ಛಾನುಸಾರವಾಗಿ ತಿರುಗುತ್ತ ಆ ಮಹಾತ್ಮನು ಕ್ರೌಂಚಾರಣ್ಯವನ್ನು ತಲುಪಿದ. ಆ ಘೋರಾರಣ್ಯದಲ್ಲಿ ಒಂದು ಭಯಂಕರ ಬ್ರಹ್ಮರಾಕ್ಷಸ ಬಂದವರನ್ನೆಲ್ಲ ಬಡಿದು ಬಾಯಿಯಲ್ಲಿ ಹಾಕಿಕೊಳ್ಳುತ್ತಿತ್ತು. ಇಂದಂತೂ ಅದಕ್ಕೆ ಯಾವ ಆಹಾರವೂ ಸಿಕ್ಕಿರಲಿಲ್ಲ. ಹಸಿದು ಹೊಂಚು ಹಾಕಿಕೊಂಡು ಕುಳಿತ ಆ ಬ್ರಹ್ಮರಾಕ್ಷಸಕ್ಕೆ ಕಣ್ಣಿಗೆ ಬಿದ್ದ ಈ ಅವಧೂತ ವಾಮದೇವ. ಹಾರಿ ಬಂದು ಹಿಡಿಯಿತು ಈ ಯೋಗಿಯನ್ನು ಆ ಕ್ರೂರ ರಕ್ಕಸ. ವಿಕಾರವೇಷದ ವಿಕರಾಳಮುಖದ ಈ ರಾಕ್ಷಸನನ್ನು ಕಂಡರೂ ಹೆದರಲಿಲ್ಲ ಆ ಸತ್ಪುರುಷ. ಬಾಯ್ದೆರೆದು ನುಂಗಬಂದ ಆ ಭೂತವನ್ನು ನೋಡಿಯೂ ಒಂದು ಹೆಜ್ಜೆಯನ್ನು ಹಿಂದಿಡಲಿಲ್ಲ ಆ ಬಾಲಬ್ರಹ್ಮಚಾರಿ. ಓಡಿಬಂದು ಆ ಬ್ರಹ್ಮರಾಕ್ಷಸವು ವೇಗದಿಂದ ವಾಮದೇವನನ್ನು ಹಿಡಿದುಕೊಂಡಿತು. ಆದರೆ ಆ ಸಂತಪುರುಷನ ಮೈ ಮುಟ್ಟಿದ ಕೂಡಲೇ ಆ ಬ್ರಹ್ಮರಾಕ್ಷಸದ ಪಾಪದರಾಶಿಗಳೆಲ್ಲವೂ ಸುಟ್ಟು ನಷ್ಟವಾಗಿ ಹೋದವು. ಆ ಕ್ಷಣದಲ್ಲಿಯೇ ಅದಕ್ಕೆ ಜನ್ಮಾಂತರದ ಸ್ಮರಣೆಯು ಉದಿಸಿ ಬಂದಿತು.

> **ಯಥಾ ಚಿಂತಾಮಣಿಂ ಸ್ಪೃಷ್ಟ್ವಾ ಲೋಹಃ ಕಾಂಚನತಾಂ ವ್ರಜೇತ್ ।**
> **ಯಥಾ ಜಂಬೂನದೀಂ ಪ್ರಾಪ್ಯ ಮೃತ್ತಿಕಾ ಸ್ವರ್ಣತಾಂ ವ್ರಜೇತ್ ॥**
>
> **ಯಥಾ ಮಾನಸಮಭ್ಯೇತ್ಯ ವಾಯಸಾ ಯಾಂತಿ ಹಂಸತಾಂ ।**
> **ಯಥಾಮೃತಂ ಸಕೃತ್ ಪೀತ್ವಾ ನರೋ ದೇವತ್ವಮಾಪ್ನುಯಾತ್ ॥**
>
> **ತಥೈವ ಹಿ ಮಹಾತ್ಮಾನೋ ದರ್ಶನ ಸ್ಪರ್ಶನಾದಿಭಿಃ ।**
> **ಸದ್ಯಃ ಪುನಂತ್ಯಘೋಪೇತಾನ್ ಸತ್ಸಂಗೋ ದುರ್ಲಭಃ ಸ್ಮೃತಃ ॥**

ಒಳ್ಳೆಯವರ ಸಹವಾಸ ಅತ್ಯಂತ ದುರ್ಲಭ. ಒಳ್ಳೆ ವಸ್ತುವಿನ ಸಂಪರ್ಕದಿಂದ ಕೆಟ್ಟ ವಸ್ತುಗಳೂ ಒಳ್ಳೆಯವಾಗಿ ಮಾರ್ಪಡುತ್ತವೆ. ಚಿಂತಾಮಣಿ ಎಂಬ ರತ್ನಕ್ಕೆ ತಗಲಿಸಿದರೆ ಕಬ್ಬಿಣವೂ ಚಿನ್ನವಾಗುವುದು. ಜಂಬೂನದಿಯಲ್ಲಿ ಬಿದ್ದ ಮಣ್ಣು ಬಂಗಾರ ಆಗುವುದು.

ಮಾನಸ ಸರೋವರದಲ್ಲಿ ಮುಳುಗಿದರೆ ಕಾಗೆ ಹಂಸವಾಗುವುದು. ಒಮ್ಮೆ ಅಮೃತವನ್ನು ಕುಡಿದರೂ ಸಾಕು ಮನುಷ್ಯನು ದೇವತ್ವವನ್ನು ಹೊಂದುವನು. ಮಹಾತ್ಮರ ದರ್ಶನ, ದೊಡ್ಡವರ ದೇಹಸ್ಪರ್ಶಗಳಿಂದ ಪಾಪಿಗಳ ಪಾಪವೆಲ್ಲವೂ ಲೋಪವಾಗುವವು. ಆದರೆ ಇಂಥ ಸಜ್ಜನರೂ ಅಂಥ ಶ್ರೇಷ್ಠ ವಸ್ತುಗಳೂ ದೊರಕುವುದು ಮಾತ್ರ ದುರ್ಲಭ.

ಇಷ್ಟು ದಿನ ಹಸಿವು ಬಾಯಾರಿಕೆಗಳಿಂದ ಬಳಲಿ ಘೋರರೂಪ ಧರಿಸಿ ಅಡವಿಯಿಂದ ಅಡವಿಗೆ ಅಲೆದಾಡುವ ಆ ಬ್ರಹ್ಮರಾಕ್ಷಸವು ವಾಮದೇವ ಯೋಗಿಗಳ ದೇಹಸ್ಪರ್ಶ ಮಾತ್ರದಿಂದ ಒಮ್ಮೆಲೇ ಪಾಪಮುಕ್ತ ಆಯಿತು ತನ್ನ ರಾಕ್ಷಸ ರೂಪ ತ್ಯಜಿಸಿ ದಿವ್ಯ ದೇಹ ಧರಿಸಿತು. ಪೂರ್ಣಾನಂದ ಸ್ವರೂಪವನ್ನು ಪಡೆಯಿತು. ಆ ಯೋಗಿತಿಲಕರ ಅಡಿದಾವರೆಗಳಿಗೆ ವಂದಿಸಿ ನುಡಿಯಿತು- ''ಮಹಾಯೋಗಿಗಳೇ, ನನ್ನ ಮೇಲೆ ಪ್ರಸನ್ನರಾಗಿರಿ. ನಾನೊಬ್ಬ ಪ್ರಾಣಿಭಯಂಕರನಾದ ದೈತ್ಯಾಪಸದ ತಾವು ದಯಾಘನರಾದ ಮಹಾತ್ಮರು. ನಿಮ್ಮ ಸಂಪರ್ಕ ಹಾಗೂ ದೇಹಸ್ಪರ್ಶ ನನಗೆ ಒದಗಿದ್ದು ಜನ್ಮಾಂತರದ ಪುಣ್ಯ. ಈ ಜನ್ಮದ ಭಾಗ್ಯ.''

**ವಾಮದೇವ:-** ಇಂಥ ಕರಾಳ ರಾಕ್ಷಸ ರೂಪ ಧರಿಸಿ. ಈ ಗಹನವನ ವೀಥಿಯಲ್ಲಿ ಅಂಡಲೆಯುವ ದುರ್ದೈವಿಯೇ, ನೀನು ಯಾರು? ನಿನಗೆ ಇಂಥ ಘೋರ ರಕ್ಕಸ ಜನ್ಮ ಬರಲು ಕಾರಣವೇನು?

**ರಾಕ್ಷಸ:-** ಪೂಜ್ಯರೇ, ಈ ಜನ್ಮದ ಹಿಂದಿನ ಐವತ್ತನೇ ಜನ್ಮದಲ್ಲಿ ನಾನು ಪವನರಾಷ್ಟ್ರದ ರಕ್ಷಕನಾಗಿ ಇದ್ದೆ. ಆಗ ನನ್ನ ಹೆಸರು ದುರ್ಜಯ. ನಾನು ಮಹಾಪಾಪಿ. ಸ್ವೈರಾಚಾರಿ, ಸ್ವಚ್ಛಂದ ವಿಹಾರಿ, ಮಹಾಕಾಮುಕ. ಅತ್ಯಂತ ಲಂಪಟ. ಹೊಸ ಹೊಸ ಹೆಣ್ಣಿನ ರುಚಿ ನೋಡುವುದು ನನಗೊಂದು ವ್ಯಸನ ಆ ಜನ್ಮದಲ್ಲಿ. ಪ್ರತಿದಿನವೂ ಕಣ್ಣಿಗೆ ಬಿದ್ದ ಹೊಸ ಹರೆಯದ ಹೆಣ್ಣುಗಳನ್ನು ಅಪಹರಿಸಿ ಬಿಡುತ್ತಿದ್ದೆ. ಅವರನ್ನು ಎತ್ತಿಕೊಂಡು ನನ್ನ ಮನೆಗೆ ಬಂದು ಭೋಗಿಸಿ ಅವರನ್ನು ಅಲ್ಲಿಯೇ ಸೆರೆಯಲ್ಲಿ ಇಡುತ್ತಿದ್ದ. ಮತ್ತೆ ಹೊಸ ಹೆಣ್ಣಿನ ಬೇಟೆ. ನಾನು ಭೋಗಿಸಿ ಬಿಟ್ಟ ನಾರಿಯರೆಲ್ಲರೂ ನನ್ನ ಬಂದೀ ಮನೆಯಲ್ಲಿ ಕೈದಿಗಳಾಗಿ ಹಗಲಿರುಳು ಕಣ್ಣೀರಿನ ಕಡಲಲ್ಲಿ ಕುದಿಯುತ್ತಲಿದ್ದರು. ಆಗ ನನ್ನ ರಾಜ್ಯದಲ್ಲಿ ಇದ್ದ ಬ್ರಾಹ್ಮಣರೆಲ್ಲರೂ ತಮ್ಮ ಮಡದಿ, ಮಾತ್ರಾ ಸೋದರಿಯರ, ಮಕ್ಕಳ, ಶೀಲ ಸೌಭಾಗ್ಯಗಳನ್ನು ಉಳಿಸಿಕೊಳ್ಳಲಿಕ್ಕಾಗಿ ನನ್ನ ರಾಜ್ಯ ಬಿಟ್ಟು ಓಡಿಹೋದರು ದೂರದೇಶಕ್ಕೆ. ತಮ್ಮ ಹೆಣ್ಣು ಮಕ್ಕಳನ್ನು ಕಟ್ಟಿಕೊಂಡು. ನನಗೆ ದೊರೆತ ಸಧವಾ ವಿಧವಾ, ಕುಮಾರಿ ಅಥವಾ ರಜಸ್ವಲಾ ಯಾವುದೇ ಸ್ತ್ರೀ ಇರಲಿ. ಅವರನ್ನು ಬಲಾತ್ಕಾರದಿಂದ ತಂದು ನಡೆಸುತ್ತಿದ್ದೆ ನನ್ನ ದುರ್ವ್ಯಾಪಾರವನ್ನು. ಹೀಗೆ ಸೆರೆಕುಡಿದು, ವಿಷಯಲಂಪಟತೆಯಿಂದ ಬೀದಿಯ ಬೆಲೆವೆಣ್ಣುಗಳನ್ನು ಕೂಡ ಬಿಡದೇ ವ್ಯಭಿಚಾರ ನಿರತನಾದ ನನಗೆ ಕ್ಷಯ ಹಿಡಿಯಿತು. ರೋಗಿಷ್ಠನಾದ ನನ್ನನ್ನು ಮಂತ್ರಿಗಳು ತ್ಯಜಿಸಿದರು. ಸೇವಕರು ದೂರ ಸರಿದರು. ಜನರು ಅಸಹ್ಯಪಟ್ಟುಕೊಂಡರು. ಕೊನೆಗೆ ನನ್ನ ದುಷ್ಕರ್ಮಗಳ ಕಾರಣದಿಂದಲೇ ನಾನು ಮರಣಹೊಂದಿದೆ.

**ಆಯುರ್ವಿನಶ್ಯತ್ಯಯಶೋ ವಿವರ್ಧತೇ ।**
**ಭಾಗ್ಯಂ ಕ್ಷಯಂ ಯಾತ್ಯತಿದುರ್ಗತಿಂ ವ್ರಜೇತ್ ॥**
**ಸ್ವರ್ಗಾಚ್ಚ್ಯವಂತೇ ಪಿತರಃ ಪುರಾತನಾಃ ।**
**ಧರ್ಮವ್ಯಪೇತಸ್ಯ ನರಸ್ಯ ನಿಶ್ಚಿತಂ ॥**

ಧರ್ಮವನ್ನು ತೊರೆದ ಮನುಷ್ಯನ ಆಯುಷ್ಯವು ಕ್ಷೀಣಿಸುವುದು. ಅಪಕೀರ್ತಿ ವರ್ಧಿಸುವುದು. ಸೌಭಾಗ್ಯವು ಕ್ಷಯಹೊಂದುವುದು. ಘೋರನರಕ ಪ್ರಾಪ್ತಿ ಆಗುವುದು. ಆ ಮನೆತನದಲ್ಲಿ ಒಬ್ಬನಾದರೂ ಧರ್ಮದ್ರೋಹಿ ಆದರೆ ಅವನ ಹಿಂದಿನ ತಲೆಮಾರಿನ ಪಿತೃಗಳೆಲ್ಲರೂ ಸ್ವರ್ಗದಿಂದ ಉರುಳಿ ಬೀಳುತ್ತಾರೆ. ಇದು ನಿಶ್ಚಿತ.

ಈ ಹಿಂದಿನವರ ಹೇಳಿಕೆ ನನ್ನ ವಿಷಯದಲ್ಲಿ ಅಪ್ಪಟ ಸತ್ಯವಾಯಿತು. ನಾನು ಎಂದೋ ಧರ್ಮ ಬಿಟ್ಟಿದ್ದೆ. ಅಧರ್ಮದ ಕಾರ್ಯಗಳನ್ನು ಲೆಕ್ಕವಿಲ್ಲದಷ್ಟು ಮಾಡಿದ್ದೆ. ಆದರಿಂದ ಆಯುಷ್ಯ ವಿನಾಶವೇ ಮೊದಲಾದ ಧರ್ಮಶಾಸ್ತ್ರದಲ್ಲಿ ಹೇಳಿದ ಎಲ್ಲ ಅನರ್ಥಗಳೂ ಒದಗಿ ಬಂದವು. ನಡುಹರೆಯದಲ್ಲಿಯೇ ನನ್ನ ಆಯುಷ್ಯವು ಕ್ಷೀಣವಾಯಿತು. ಅಪಕೀರ್ತಿ ಬೆಳೆಯಿತು ನನ್ನ ಭಾಗ್ಯಚಕ್ರಕ್ಕೆ ಕ್ಷಯ ಬಡಿದುಕೊಂಡಿತು. ನಾನು ನರಕಕ್ಕೆ ಹೋಗುವುದು ನಿಶ್ಚಯವಾಯಿತು. ಮರಣಾನಂತರ ಯಮದೂತರು ಬಂದು ನನ್ನನ್ನು ಸೆಳೆದೊಯ್ದರು ಯಮಲೋಕಕ್ಕೆ. ಭಯಂಕರವಾದ ನರಕಕುಂಡದಲ್ಲಿ ಒಗೆದರು. ಆ ಯಮಕುಂಡದಲ್ಲಿ ಯಮದೂತರಿಂದ ಬಗೆಬಗೆಯ ಪೀಡೆಗೆ ಒಳಗಾಗಿ, ನೋವು ನರಳಿಕೆಗಳಿಂದ ನವೆಯುತ್ತ, ಮೂವತ್ತು ಸಾವಿರ ವರ್ಷಗಳವರೆಗೆ ಯಮಯಾತನೆಗಳನ್ನು ಅನುಭವಿಸಬೇಕಾಯಿತು. ಅನಂತರ ನಾನು ನರಕವನ್ನು ಭೋಗಿಸಿಯೂ ಉಳಿದುಕೊಂಡ ಮಹಾಪಾಪದಿಂದ ಹಸಿವು ನೀರಡಿಕೆಗಳಿಂದ ಕಂಗೆಟ್ಟು ತಿರುಗುವ ಪಿಶಾಚನಾಗಿ ಅಲೆದಾಡಿದ್ದೆ. ಪಿಶಾಚ ಜನ್ಮದಲ್ಲಿ ಬಂದು ನೂರು ವರ್ಷ ಕಳೆದೆ. ಅನಂತರದ ಎರಡನೇ ಜನ್ಮದಲ್ಲಿ ನಾನು ಘೋರ ಹುಲಿಯಾಗಿ ಹುಟ್ಟಿದೆ. ಮೂರನೇ ಜನ್ಮದಲ್ಲಿ ಅಜಗರ ಹಾವು ಆಗಿ ಜನಿಸಿದೆ. ನಾಲ್ಕನೆಯ ಜನ್ಮದಲ್ಲಿ ಕುರಿ. ಐದನೆಯ ಜನ್ಮದಲ್ಲಿ ಹಂದಿ. ಆರನೇ ಜನ್ಮದಲ್ಲಿ ಓತೀಕ್ಯಾತ. ಏಳನೇಯದಲ್ಲಿ ನಾಯಿ, ಎಂಟನೆಯದರಲ್ಲಿ ನರಿ, ಒಂಭತ್ತರಲ್ಲಿ ಗವಯ. ಹತ್ತನೆಯ ಜನ್ಮದಲ್ಲಿ ಕಾಡುಮಿಕ. ಹನ್ನೊಂದನೇ ಜನ್ಮದಲ್ಲಿ ಕೋತಿ, ಹನ್ನೆರಡನೆಯದರಲ್ಲಿ ಹದ್ದು. ಹದಿಮೂರನೆಯದರಲ್ಲಿ ಕರಡಿ. ಹದಿನಾಕನೆಯದರಲ್ಲಿ ಕಾಡುಕೋಳಿ, ಹದಿನೇಳರಲ್ಲಿ ಕತ್ತೆ. ಹದಿನೆಂಟನೆಯದರಲ್ಲಿ ಬೆಕ್ಕು, ಹತ್ತೊಂಭತ್ತನೆಯ ಜನ್ಮದಲ್ಲಿ ಟಗರು, ಇಪ್ಪಮ್ತೂರನೆಯದರಲ್ಲಿ ಏಡಿ, ಇಪ್ಪತ್ತೊಂದನೆಯದರಲ್ಲಿ ಮೀನು. ಇಪ್ಪತ್ತೆರಡರಲ್ಲಿ ಇಲಿ, ಇಪ್ಪತ್ತೊರನೆಯದರಲ್ಲಿ ಗೂಗೆ, ಇಪ್ಪತ್ನಾಲ್ಕನೆಯ ಜನ್ಮದಲ್ಲಿ ಕಾಡಾನೆಯಾಗಿ ಹುಟ್ಟಿ ಬಂದೆ. ಇದೇ ನನ್ನದು ಇಪ್ಪತ್ತೈದನೆಯ ಜನ್ಮ.

ಈಗ ಬ್ರಹ್ಮರಾಕ್ಷಸನಾಗಿ ಜನಿಸಿ ಬಂದಿದ್ದೇನೆ. ಈ ಜನ್ಮದಲ್ಲಿ ಮಾತ್ರ ನನ್ನ ಸುದೈವದಿಂದ ತಮ್ಮ ಪರಮ ಪಾವನವಾದ ದೇಹದ ಸ್ಪರ್ಶವು ಒದಗಿ ಬಂದಿತು. ಅದರಿಂದ ನನಗೆ ಈ ಹಿಂದೆ ಇಪ್ಪತ್ತೈದು ಜನ್ಮಗಳ ಮೊದಲು ಮಾಡಿದ ಪಾಪ, ಅನುಭವಿಸಿದ ನರಕ ಯಾತನೆ ಮತ್ತು ಅನಂತರದಲ್ಲಿಯೂ ಅವಶಿಷ್ಟ ಪಾಪಗಳ ಫಲವಾಗಿ ಇಪ್ಪತ್ನಾಲ್ಕು ನೀಚಯೋನಿಗಳಲ್ಲಿ ಪಟ್ಟ ಬವಣೆ ಎಲ್ಲವೂ ನೆನಪಿಗೆ ಬಂದವು. ತಮ್ಮ ಅಂಗಸಂಗದಿಂದ ನನಗೆ ಸದ್ಬುದ್ಧಿ ಹುಟ್ಟಿದೆ. ವೈರಾಗ್ಯವು ಉದಿಸಿದೆ ಮನಸ್ಸಿನಲ್ಲಿ ಪ್ರಸನ್ನತೆ ಮೂಡಿದೆ. ನನ್ನ ಪಾಲಿಗೆ ತಾವು ಒಂದು ಸ್ಪರ್ಶಮಣಿ. ನಿಮ್ಮ ಶರೀರದ ಯಾವುದೇ ಭಾಗವು ನಮ್ಮಂಥ ಪಾಪಿಗಳಿಗೆ ತುಸುತಗಲಿದರೂ ಸಾಕು. ತಕ್ಷಣವೇ ಸರ್ವಪಾಪ ಪರಿಹಾರ. ನೀಚಯೋನಿಯಿಂದ ಉದ್ಧಾರ. ಮಹಾತ್ಮರೇ, ತಮ್ಮಲ್ಲಿ ಇಂಥ ವಿಚಿತ್ರ ಶಕ್ತಿ ಹಾಗೂ ಅಸಾಧಾರಣ ಪ್ರಭಾವವು ಬರಲು ಕಾರಣವೇನು? ತಿಳಿಸಿರಿ.

**ವಾಮದೇವ:-** ಇದೆಲ್ಲವೂ ನಾನು ನನ್ನ ಮೈಗೆ ಲೇಪಿಸಿಕೊಂಡ ದಿವ್ಯ ಭಸ್ಮದ ಪ್ರಭಾವ. ಈ ಭಸ್ಮದ ಅದ್ಭುತ ಶಕ್ತಿಯನ್ನು ಭಗವಾನ್ ಶಂಕರನ ಹೊರತು ಬೇರೆ ಯಾರೂ ಅರಿಯಲಾರರು.

ಮಹಾದೇವರಂತೆಯೇ ಈ ಭಸ್ಮದ ಮಹಿಮೆಯೂ ಅಗಾಧ ಅಪರಿಮಿತ ಈ ಭಸ್ಮದ ಸಂಪರ್ಕದಿಂದಲೇ ನಿನ್ನ ಪಾಪಗಳೆಲ್ಲವೂ ಲೋಪವಾದವು. ನಿನ್ನ ಮನಸ್ಸಿನಿಂದ ದುರ್ವಿಚಾರಗಳು ದೂರಾದವು. ಸದ್ಬುದ್ಧಿಯು ಉದ್ಬುದ್ಧವಾಯಿತು. ಆದ್ದರಿಂದ ನೀನು ಕೂಡ ಈ ಭಸ್ಮದಿಂದ ಹಣೆಯಮೇಲೆ ಶ್ರದ್ಧೆಯಿಂದ ತ್ರಿಪುಂಡ್ರವನ್ನು ಧಾರಣೆಮಾಡು. ಹೀಗೆ ಹೇಳಿ ಮಹರ್ಷಿ ವಾಮದೇವರು ಭಸ್ಮವನ್ನು ಅಭಿಮಂತ್ರಿಸಿ ಆ ಬ್ರಹ್ಮರಾಕ್ಷಸಕ್ಕೆ ಕೊಟ್ಟರು. ಕೂಡಲೇ ಆ ಬ್ರಹ್ಮರಾಕ್ಷಸವು ಸ್ನಾನಮಾಡಿ ವಾಮದೇವರು ಹೇಳಿದ ರೀತಿಯಲ್ಲಿ ತನ್ನ ಲಲಾಟದಲ್ಲಿ ತ್ರಿಪುಂಡ್ರ ಭಸ್ಮವನ್ನು ಧಾರಣೆ ಮಾಡಿತು. ಕೂಡಲೇ ಅದರಲ್ಲಿ ಒಂದು ಅದ್ಭುತ ಬದಲಾವಣೆ ಕಂಡುಬಂದಿತು. ಆ ಬ್ರಹ್ಮರಾಕ್ಷಸನ ಅ ಕರಾಳ ವಿಕರಾಳ ಶರೀರವು ಮಾಯವಾಗಿ ಅದಕ್ಕೆ ಬದಲಾಗಿ ಒಂದು ದಿವ್ಯ ಸುಂದರವಾದ ಸ್ವರೂಪವು ಪ್ರಾಪ್ತವಾಯಿತು. ಆಗ ಆ ದಿವ್ಯಪುರುಷನು ತನಗೆ ಈ ದಿವ್ಯ ದೇಹವನ್ನು ದಯಪಾಲಿಸಿದ ಬ್ರಹ್ಮರ್ಷಿ ವಾಮದೇವನಿಗೆ ಸಾಷ್ಟಾಂಗ ವಂದನೆಮಾಡಿ ಮೂರು ಪ್ರದಕ್ಷಿಣೆ ಹಾಕಿದನು. ಅಷ್ಟರಲ್ಲಿಯೇ ಅದನ್ನು ಕರೆದೊಯ್ಯಲು ವೈಕುಂಠ ಲೋಕದಿಂದ ವಿಮಾನವು ಬಂದಿತು. ತನ್ನ ಸ್ವರೂಪೋದ್ಧಾರಕ ಗುರುಗಳಾದ ವಾಮದೇವರನ್ನು ಮತ್ತೊಮ್ಮೆ ವಂದಿಸಿ ಅವರ ಅನುಮತಿ ಪಡೆದು ಆ ಬ್ರಹ್ಮರಾಕ್ಷಸವು ವಿಮಾನಾರೋಹಣಮಾಡಿ ವಿಷ್ಣುಲೋಕಕ್ಕೆ ತೆರಳಿತು. ಇತ್ತ ಮುನಿವರೇಣ್ಯರಾದ ವಾಮದೇವರು ಶಿವಧ್ಯಾನಗ್ನೆಯುತ್ತ ಶಿವಭಕ್ತರನ್ನು ಉದ್ಧರಿಸುತ್ತ ಲೋಕಸಂಚಾರ ಕೈಕೊಂಡರು.

**ಸೂತ:-** ಮಾನವರು ಎಲ್ಲ ಧರ್ಮಕಾರ್ಯಗಳನ್ನು ಶ್ರದ್ಧೆಯಿಂದಲೇ ಮಾಡಬೇಕು. ಶ್ರದ್ಧೆಯೇ ಸರ್ವಧರ್ಮಗಳ ಮೂಲಾಧಾರ. ಅಶ್ರದ್ಧೆಯಿಂದ ಮಾಡಿದ ಯಾವ ಕಾರ್ಯವೂ ಫಲಿಸಲಾರದು.

**"ಶ್ರದ್ಧೈವ ಸರ್ವಧರ್ಮಸ್ಯ ಚಾತೀವ ಹಿತಕಾರಿಣೀ ।**
**ಶ್ರದ್ಧಯೈವ ನೃಣಾಂ ಸಿದ್ಧಿಃ ಜಾಯತೇ ಲೋಕಯೋರ್ದ್ವಯೋಃ ॥"**

ಎಲ್ಲ ಧರ್ಮಗಳಿಗೂ ಶ್ರದ್ಧೆ ಅಥವಾ ವಿಶ್ವಾಸವೇ ಹಿತಕರವು. ಮಾನವರು ಇಹಲೋಕ ಹಾಗೂ ಪರಲೋಕಗಳ ಸಿದ್ಧಿಯನ್ನು ಪಡೆಯುವುದು ಶ್ರದ್ಧೆಯಿಂದಲೇ.

**ಶ್ರದ್ಧಯಾ ಭಜತಃ ಪುಂಸಃ ಶಿಲಾಪಿ ಫಲದಾಯಿನೀ ।**
**ಮೂರ್ಖೋಽಪಿ ಪೂಜಿತೋ ಭಕ್ತ್ಯಾ ಗುರುರ್ಭವತಿ ಸಿದ್ಧಿತಃ ॥**

ಶ್ರದ್ಧೆಯಿಂದ ಪೂಜಿಸಿದರೆ ಕಲ್ಲು ಕೂಡ ಫಲಕೊಡುತ್ತದೆ. ಭಕ್ತಿಯಿಂದ ಆರಾಧಿಸಿದರೆ ಅಜ್ಞಾನಿಯಾದ ಗುರುವು ಕೂಡ ಫಲಪ್ರದನು ಆಗುತ್ತಾನೆ.

**ಶ್ರದ್ಧಯಾ ಪಠಿತೋ ಮಂತ್ರ ಸ್ತ್ವಬದ್ಧೋಽಪಿ ಫಲಪ್ರದಃ ।**
**ಶ್ರದ್ಧಯಾ ಪೂಜಿತೋ ದೇವೋ ನೀಚಸ್ಯಾಪಿ ಫಲಪ್ರದಃ ॥**

ಶ್ರದ್ಧೆಯಿಂದ ಜಪಮಾಡಿದ ಮಂತ್ರವು ಅಪದ್ಧವಾಗಿದ್ದರೂ, ಎಂದರೆ ಉಚ್ಚರಿಸುವಾಗ ಅಕ್ಷರ ವ್ಯತ್ಯಾಸವಾಗಿದ್ದರೂ ಫಲದಾಯಕವಾಗಿರುತ್ತದೆ. ಎಂಥ ಅಧಮ ಮನುಷ್ಯನೇ ಆಗಿರಲಿ ಶ್ರದ್ಧೆಯಿಂದ ಪೂಜಿಸಿದರೆ ದೇವರು ಅವನಿಗೆ ಫಲವನ್ನು ನೀಡುತ್ತಾನೆ.

**ಅಶ್ರದ್ಧಯಾ ಕೃತಾ ಪೂಜಾ ದಾನಂ ಯಜ್ಞಃ ತಪೋ ವ್ರತಂ ।**
**ಸರ್ವಂ ನಿಷ್ಫಲತಾಂ ಯಾತಿ ಪುಷ್ಪಂ ವಂಧ್ಯತರೋರಿವ ॥**

ಶ್ರದ್ಧೆ ಇಲ್ಲದೇ ಮಾಡಿದ ಪೂಜೆ, ದಾನ, ಯಜ್ಞ, ತಪಸ್ಸು, ವ್ರತ ಎಲ್ಲವೂ ವ್ಯರ್ಥವೇ ಆಗುತ್ತವೆ ಬಂಜೆ ಗಿಡಕ್ಕೆ ಎಷ್ಟು ಹೂ ಬಿಟ್ಟರೇನು? ಒಂದೂ ಹಣ್ಣು ಕಾಯಿ ಹುಟ್ಟುವುದಿಲ್ಲ.

**ಸರ್ವತ್ರ ಸಂಶಯಾವಿಷ್ಟಃ ಶ್ರದ್ಧಾಹೀನೋಽತಿ ಪಂಚಲಃ ।**
**ಪರಮಾರ್ಥಾತ್ ಪರಿಭ್ರಷ್ಟಃ ಸಂಸೃತೇ ರ್ನಹಿ ಮುಚ್ಯತೇ ॥**

ದೇವ ಧರ್ಮಗಳಲ್ಲಿ ಶ್ರದ್ಧೆ ಇಲ್ಲದೇ ಸರ್ವತ್ರ ಸಂಶಯ ತಾಳಿ, ಚಂಚಲಚಿತ್ತದಿಂದ ಏನನ್ನೂ ವಿಶ್ವಾಸದಿಂದ ಮಾಡದೇ ಇರುವ ಮನುಷ್ಯನು ಅಧ್ಯಾತ್ಮ ಮಾರ್ಗದಿಂದ ಭ್ರಷ್ಟನಾಗುತ್ತಾನೆ. ಅವನು ಎಂದಿಗೂ ಸಂಸಾರದಿಂದ ಮುಕ್ತನಾಗಲಾರ.

**ಮಂತ್ರೇ ತೀರ್ಥೇ ದ್ವಿಜೇ ದೇವೇ ದೈವಜ್ಞೇ ಭೇಷಜೇ ಗುರೌ ।**
**ಯಾದೃಶೀ ಭಾವನಾ ಯಸ್ಯ ಸಿದ್ಧಿಃ ಭವತಿ ತಾದೃಶೀ ॥**

ಮಂತ್ರ, ತೀರ್ಥ, ಬ್ರಾಹ್ಮಣ, ದೇವರು, ಜ್ಯೋತಿಷಿ, ಔಷಧ, ಗುರು ಇವರಲ್ಲಿ ಹೇಗೆ ಭಾವನೆಯನ್ನು ತಾಳುವರೋ ಅದರಂತೆಯೇ ಸಿದ್ಧಿ ಆಗುವುದು.

ಈ ವಿಷಯದಲ್ಲಿ ನಿಮಗೆ ಒಂದು ಆಖ್ಯಾನವನ್ನು ಹೇಳುತ್ತೇನೆ ಕೇಳಿರಿ. ಪೂರ್ವಕಾಲದಲ್ಲಿ ಪಾಂಚಾಲದೇಶದ ದೊರೆಗೆ ಸಿಂಹಕೇತು ಎಂಬ ಒಬ್ಬ ಪುತ್ರ. ಅವನಲ್ಲಿ ಎಲ್ಲ ಸದ್ಗುಣಗಳೂ ಮೂರ್ತೀಭವಿಸಿದ್ದವು. ಕ್ಷತ್ರಿಯ ಧರ್ಮದಲ್ಲಿ ವಿಶೇಷ ಆಸಕ್ತಿ ಆ ರಾಜಕುಮಾರನಿಗೆ ಒಂದು ದಿನ ಮಹಾಬಲಿಷ್ಠನಾದ ಆ ಸಿಂಹಕೇತುವು ತನ್ನ ಹಲವಾರು ಸೇವಕರೊಂದಿಗೆ ಕಾಡಿಗೆ ತೆರಳಿದ ಬೇಟೆಯಾಡಲು. ಆ ಘೋರಾರಣ್ಯದ ಅಂತಃಪ್ರಾಂತದಲ್ಲಿಯೇ ನುಗ್ಗಿ ಬೇಟೆಗಳನ್ನು ಹುಡುಕುತ್ತ ಅವನು ಆ ಚೇಟೆ ತಿರುಗಿದ ಆ ವನಗರ್ಭದಲ್ಲಿ. ಅವನ ಪರಿವಾರದಲ್ಲಿದ್ದ ಓರ್ವ ಶಬರಯುವಕ ಇನ್ನೂ ಒಳಗೆ ತೂರಿದ. ಅಲ್ಲಿ ಒಂದು ಜೀರ್ಣಶೀರ್ಣವಾದ ಹಳೆಯ ಮುರುಕು ದೇವಾಲಯವನ್ನು ನೋಡಿದ. ಆ ದೇವಾಲಯದ ಮಧ್ಯಭಾಗದಲ್ಲಿ ಒಂದು ಜಗುಲಿ ಅದ ಮಧ್ಯದಲ್ಲಿ ಒಂದು ಶಿವಲಿಂಗ. ಅದರ ಝಲಾರಿ ಒಂದು ಕಡೆ ಲಿಂಗ ಇನ್ನೊಂದು ಕಡೆ. ಆದರೆ ಆ ಶಿವಲಿಂಗವು ಮಾತ್ರ ಅವಿಚ್ಛಿನ್ನವಾಗಿ ಸರಳವೂ, ಸುಂದರವೂ, ಸೂಕ್ಷ್ಮವೂ ಆಗಿದ್ದಿತು. ಈ ಕಾನನದ ಮಧ್ಯದಲ್ಲಿ ಶಿವಲಿಂಗದ ದರ್ಶನವು ತನ್ನ ಒಂದು ಸೌಭಾಗ್ಯವೆಂದೇ ಭಾವಿಸಿದ. ಅದನ್ನು ಮೊಟ್ಟಮೊದಲು ನೋಡಿದ ಆ ಬೇಡರ ತರುಣ, ಪೂರ್ವಕರ್ಮವು ಅವನನ್ನು ಪ್ರೇರಿಪಿಸುತ್ತಲಿತ್ತು. ಅವನು ಹೋಗಿ ಆ ಶಿವಲಿಂಗಕ್ಕೆ ಮೊದಲು ಪ್ರದಕ್ಷಿಣೆ ಹಾಕಿ ನಮಸ್ಕಾರಗೈದ. ಮೆಲ್ಲನೇ ಅದನ್ನು ಎತ್ತಿದ. ಅದನ್ನು ರಾಜಕುಮಾರ ಸಿಂಹಕೇತುವಿಗೆ ತಂದು ತೋರಿಸಿದ ಮತ್ತು ವಿನಯದಿಂದ ನುಡಿದ.

**ಶಬರಯುವಕ:-** ಪ್ರಭು, ನೋಡಿದಿರಾ? ಈ ಶಿವಲಿಂಗವು ಎಷ್ಟು ಸುಂದರವಾಗಿದೆ! ಇದೋ ನನಗೆ ಇದು ಇಲ್ಲಿಯೇ ಕಂಡಿತು. ನಾನು ಭಕ್ತಿಯಿಂದ ಇದನ್ನು ಪೂಜಿಸಬಹುದೇ? ಆದರೆ ನಾನು ಅಜ್ಞ. ಶಿವಪೂಜೆಯ ವಿಧಿವಿಧಾನಗಳನ್ನು ಅರಿಯೆ. ದಯಮಾಡಿ ತಾವು ಪರಮೇಶ್ವರನ ಲಿಂಗಪೂಜೆಯ ಪ್ರಕಾರವನ್ನು ನನಗೆ ತಿಳಿಸಿಕೊಡುವಿರಾ? ನಮ್ಮಂಥ ಪಾಮರ ಜನರು ಮಾಡಿದ ಪೂಜೆಯನ್ನು ಕೂಡ ಆ ಶಿವಸ್ವಾಮಿಯು ಅನುಗ್ರಹ ಮಾಡಿ ಸ್ವೀಕರಿಸುವನು.

ನಿಷಾದ ಕುಮಾರನ ಈ ಪ್ರಶ್ನೆಯನ್ನು ಕೇಳಿ ರಾಜಕುಮಾರ ಸಿಂಹಕೇತು ನಸುನಕ್ಕ. ಪರಿಹಾಸ ಕುಶಲನಾದ ಆ ರಾಜಕುಮಾರ ನಗುತ್ತ ನುಡಿದ-

**ಸಿಂಹಕೇತು:-** "ಶಿವಲಿಂಗವನ್ನು ಶುದ್ಧವಾದ ಆಸನದ ಮೇಲೆ ಸ್ಥಾಪಿಸಬೇಕು. ಅನಂತರ ಆಚಮನ ಮಾಡಿ ಸಂಕಲ್ಪಪೂರ್ವಕವಾಗಿ ಪೂಜೆಯನ್ನು ಪ್ರಾರಂಭಿಸಬೇಕು.

ನಿರ್ಮಲ ನೀರಿನಿಂದ ಮೊದಲು ಅಭಿಷೇಕ ಅನಂತರ ಗಂಧಾಕ್ಷತೆ ಸಮರ್ಪಣೆ. ಅದೇ ವನದಲ್ಲಿ ಹರಿದು ತಂದ ಹೂ, ಎಳೆ, ಬಿಲ್ವಪತ್ರಗಳಿಂದ ಆರ್ಚನೆ. ಧೂಪದರ್ಶನ, ದೀಪಾರಾಧನೆಗಳ ದ್ವಾರಾ ಪೂಜೆಯನ್ನು ಸಲ್ಲಿಸಬೇಕು. ಚಿತಾಭಸ್ಮವನ್ನು ಶಿವಲಿಂಗದ ಮೇಲೆ ಏರಿಸಬೇಕು. ತಾನು ಉಣ್ಣುವ ಅನ್ನವನ್ನು ಪರಮಾತ್ಮನಿಗೆ ನೈವೇದ್ಯ ಇಟ್ಟು ಎಡೆ ನೀಡಬೇಕು. ನಂತರ ಮತ್ತೆ ಧೂಪ ಬೆಳಗಿ ಮಂಗಳಸ್ತೋತ್ರ, ಮುಂತಾದ ಸೇವೆಗಳನ್ನು ಸಲ್ಲಿಸಬೇಕು. ಕೊನೆಗೆ ಭಕ್ತಿಯಿಂದ ನಮಸ್ಕಾರಗೈದು ಭಗವಂತನಿಗೆ ನಿವೇದಿತವಾದ ಪ್ರಸಾದವನ್ನು ತಾನು ಸ್ವೀಕರಿಸಬೇಕು. ಇದೇ ಪೂಜೆಯ ಸಂಕ್ಷಿಪ್ತ ವಿಧಿ.''

ಹೀಗೆ ರಾಜಕುಮಾರನು ಉಪದೇಶಮಾಡಿದ ಬಳಿಕ ಚಂಡಕ ಎಂಬ ಹೆಸರಿನ ಆ ಶಬರ ಯುವಕನು ಅದನ್ನು ಶಿರಸಾಮಾನ್ಯ ಮಾಡಿ, ಆ ಶಿವಲಿಂಗವನ್ನು ತನ್ನ ಮನೆಗೆ ತೆಗೆದು ಕೊಂಡು ಬಂದ. ಪ್ರತಿದಿನವೂ ರಾಜಕುಮಾರನು ಹೇಳಿದ ವಿಧಿಯಿಂದ ಲಿಂಗಪೂಜೆ ಮಾಡತೊಡಗಿದ. ಚಿತಾಭಸ್ಮವನ್ನು ಪೂಜೆಯ ಕಾಲಕ್ಕೆ ತಂದು ಅನುದಿನವೂ ಆ ಲಿಂಗಕ್ಕೆ ನಿವೇದಿಸುತ್ತಿದ್ದ. ತನಗೆ ಪ್ರೀತಿಯದಾದ ಆಹಾರ ಪದಾರ್ಥಗಳನ್ನೂ ಗಂಧ, ಪುಷ್ಪ, ಅಕ್ಷತೆ, ಧೂಪದೀಪಾದಿಗಳನ್ನೂ ನಿವೇದಿಸಿದ ನಂತರ ನೈವೇದ್ಯವಿಟ್ಟು ಅದನ್ನು ಶಿವಪ್ರಸಾದವೆಂದು ತಾನು ಸ್ವೀಕರಿಸುತ್ತಿದ್ದ. ಆ ಚಂಡಕನ ಪತ್ನಿಯೂ ಅಷ್ಟೇ ಶಿವಭಕ್ತಳು. ಪತಿಯೊಡನೆ ಆ ಶಿವಲಿಂಗಪೂಜೆಯಲ್ಲಿ ಅವಳದೂ ಸಂಪೂರ್ಣ ಸಹಕಾರ. ಆ ಲಿಂಗಪೂಜೆಗೆ ಎಲ್ಲ ಸಲಕರಣೆಗಳನ್ನು ಸಿದ್ಧಗೊಳಿಸಿ ಒದಗಿಸುತ್ತಿದ್ದಳು. ಅವನು ಪೂಜೆ ಮಾಡುವಾಗ ಭಕ್ತಿಯಿಂದ ತಾನು ನೋಡುತ್ತ ನಿಲ್ಲುತ್ತಿದ್ದಳು. ಹೀಗೆ ಆ ಶಬರ ದಂಪತಿಗಳು ಬಹುವರ್ಷ ಭಕ್ತಿಯಿಂದ ಆ ಭಗವತಲಿಂಗವನ್ನು ಪೂಜಿಸಿದರು. ಒಂದು ದಿನ ಆ ಚಂಡಕ ಶಬರನು ಶಿವಪೂಜೆಗೆಂದು ಆಸನದ ಮೇಲೆ ಮಂಡಿಸಿದ. ಪೂಜೆಯ ಸಲಕರಣೆಗಳೆಲ್ಲವೂ ಅವನ ಎದುರು ಸಿದ್ಧವಾಗಿಯೇ ಇದ್ದವು. ಆದರೆ ಭಸ್ಮ ಪಾತ್ರವು ಮಾತ್ರ ಖಾಲಿ. ಚಿತಾಭಸ್ಮವು ಅದರಲ್ಲಿ ಇನಿತೂ ಇರಲಿಲ್ಲ. ಪ್ರತಿದಿನವೂ ಚಿತಾಭಸ್ಮವನ್ನು ಶಿವಲಿಂಗಕ್ಕೆ ಸಮರ್ಪಿಸುವುದು ಅವನ ಸಂಪ್ರದಾಯ. ಇಂದು ಪೂಜಾಪಾತ್ರೆಯಲ್ಲಿ ಚಿತಾಭಸ್ಮ ಇಲ್ಲದ್ದನ್ನು ಕಂಡು ಅವನು ಹೊರಹೊರಟ. ಚಿತಾಭಸ್ಮವನ್ನು ಹುಡುಕುತ್ತ ಎಲ್ಲೆಡೆಗೂ ಓಡಾಡಿದ. ಆದರೆ ಎಷ್ಟು ಹುಡುಕಿದರೂ ಅಂದು ಅವನಿಗೆ ಚಿತೆಯ ಬೂದಿಯೇ ದೊರಕಲಿಲ್ಲ. ಎಲ್ಲಿ ಹುಡುಕಿದರೂ ಸುಡುಗಾಡು ಗಟ್ಟಿಗಳಲ್ಲಿ ಹೆಣಸುಡುವ ಚಿತೆಗಳೇ ಅವನಿಗೆ ಗೋಚರಿಸಲಿಲ್ಲ. ಎಲ್ಲ ಸ್ಮಶಾನಗಳೂ ಶೂನ್ಯವಾಗಿದ್ದವು. ಇದ್ದ ಬಿದ್ದ ಬೂದಿ ಎಲ್ಲವೂ ಗಾಳಿಗೆ ಹಾರಿ ಹೋಗಿದ್ದಿತು. ಹೀಗಾಗಿ ಎಲ್ಲಿಯೂ ಚಿತ್ತಾಭಸ್ಮ ದೊರಕದೇ ಅವನು ಬರಿಗೈಯಿಂದ ಮನೆಗೆ ಮರಳಿದ. ತನ್ನ ಭಾರ್ಯೆಯನ್ನು ಕರೆದು ಹೇಳಿದ.

**ಚಂಡಕ ಶಬರ:-** ಪ್ರಿಯೆ, ಎಷ್ಟು ಪ್ರಯತ್ನಿಸಿದರೂ ಇಂದು ನನಗೆ ಶಿವಪೂಜೆಗಾಗಿ ಚಿತೆಯ ಬೂದಿ ದೊರಕಲಿಲ್ಲ. ದೈನಂದಿನ ಶಿವಪೂಜೆಗೆ ಇಂದು ದೊಡ್ಡ ವಿಘ್ನ. ಈಗ ನಾನು ಏನು ಮಾಡಲಿ? ಪೂಜೆಯನ್ನು ಬಿಟ್ಟು ಒಂದು ಕ್ಷಣವೂ ನಾನು ಜೀವಿಸಲಾರೆ.

**ಶಬರಸ್ತ್ರೀ:-** ನಾಥ, ನಿನಗೆ ಚಿಂತೆಬೇಡ. ನಿನ್ನ ಪ್ರತಿದಿನದ ಶಿವಪೂಜೆ ಏನಾದರೂ ತಡೆದು ನಿಲ್ಲಬಾರದು. ಅದಕ್ಕೆ ನಾನೊಂದು ಉಪಾಯ ಹೇಳುತ್ತೇನೆ ಕೇಳು. ಈ ನಮ್ಮ ಮನೆ ಹೇಗೋ ಹಳೆಯದಾಗಿದೆ. ಇದಕ್ಕೆ ಇಂದು ಬೆಂಕಿ ಹಚ್ಚಿ ಬಿಡಿರಿ. ಈ ಉರಿಯುವ ಗೃಹದ ಅಗ್ನಿಯಲ್ಲಿ ನಾನು ಪ್ರವೇಶಮಾಡಿಬಿಡುತ್ತೇನೆ. ಅದರಲ್ಲಿ ನನ್ನ ದೇಹವು ಸುಟ್ಟು ಹೋದಾಗ ನಿನ್ನ ಶಿವಪೂಜೆಗೆ ವಿಪುಲವಾಗಿ ಚಿತಾಭಸ್ಮವು ದೊರಕುವುದು.

**ಚಂಡಕ ಶಬರ:-** ಪ್ರಿಯೆ, ಈ ಮಾನವ ಶರೀರವು ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳಿಗೆ ಮುಖ್ಯ ಸಾಧನ. ಇಂಥ ಪುರುಷಾರ್ಥ ಸಾಧನವಾದ ಹಾಗೂ ನವಯೌವನ ಸಂಪನ್ನವಾದ ಈ ನಿನ್ನ ಸುಂದರ ದೇಹವನ್ನು ಬೆಂಕಿಯಲ್ಲಿ ಏಕೆ ಹಾಕುವಿ? ತಾರುಣ್ಯ, ಲಾವಣ್ಯ ತುಳುಕಾಡುವ ಈ ನಿನ್ನ ಕುಸುಮ ಕೋಮಲ ದೇಹದಿಂದ ನೀನು ಸುಖಪಡಬಹುದು. ನಾನೂ ಆನಂದ ಅನುಭವಿಸಬಹುದು. ಇಂಥ ಪೇಲವ ಪ್ರಕೃತಿಯ ಶರೀರವನ್ನು ಈಗಲೇ ಅಗ್ನಿಗೆ ಆಹುತಿಯಾಗಿ ಕೊಡಬೇಡ.

**ಶಬರಸ್ತ್ರೀ:-** ಎರಡನೆಯವರ ಸಲುವಾಗಿ ಪ್ರಾಣತ್ಯಾಗ ಮಾಡುವುದರಲ್ಲಿಯೇ ಜೀವನದ ಸಾಫಲ್ಯ ಅಡಗಿರುತ್ತದೆ. ಅದರಲ್ಲಿಯೂ ಸಾಕ್ಷಾತ್ ಶಿವನಿಗಾಗಿ ಪ್ರಾಣತ್ಯಾಗ ಮಾಡುವುದು ಒಂದು ದೊಡ್ಡ ಸೌಭಾಗ್ಯವೇ ಸರಿ. ಪರಮೇಶ್ವರನ ಪೂಜೆಗಾಗಿ ಅಗ್ನಿಯಲ್ಲಿ ಆತ್ಮಾಹುತಿ ನೀಡುವುದು ಜನ್ಮಾಂತರದ ಪುಣ್ಯದ ಫಲವೇ ಎಂದು ನಾನು ಭಾವಿಸುತ್ತೇನೆ. ದಯಮಾಡಿ ತಾವು ನಾನು ಶಿವಪೂಜೆಗಾಗಿ ಶಿವಾರ್ಪಣ ಬುದ್ಧಿಯಿಂದ ಸಲ್ಲಿಸಲಿರುವ ಈ ಆತ್ಮಾಹುತಿಯ ಪರಮೇಶ್ವರ ಪೂಜೆಗೆ ವಿಘ್ನಮಾಡಬೇಡಿ. ಮಡದಿಯ ಈ ದೃಢ ನಿರ್ಧಾರವನ್ನು ಹಾಗೂ ಶಿವಭಕ್ತಿಯ ದಾರ್ಢ್ಯವನ್ನು ಕೇಳಿ ನೋಡಿ ಆ ಚಂಡಕ ಶಬರನಿಗೆ ಬೇಡ ಎನ್ನಲು ಬಾಯಿ ಎತ್ತಲಿಲ್ಲ. ತನ್ನ ಧರ್ಮಪತ್ನಿಯು ಸ್ವಯಂಪ್ರೇರಣೆಯಿಂದ ಮಾಡಹೊರಟ ಶಿವಾರ್ಪಣೆಯ ಆತ್ಮಾಹುತಿಯ ಸತ್ ಸಂಕಲ್ಪಕ್ಕೆ ಅವರು ಅಡ್ಡಿಯನ್ನು ಒಡ್ಡದೇ 'ತಥಾಸ್ತು' ಎಂದು ಹೇಳಿದ. ಪತಿಯ ಆಜ್ಞೆಯನ್ನು ಪಡೆದು ಆ ಸ್ವಾಧೀಮಣಿಯು ಸ್ನಾನಮಾಡಿ ಅಲಂಕಾರವನ್ನು ಮಾಡಿಕೊಂಡಳು. ಪ್ರತಿನಿತ್ಯದ ತನ್ನ ಶಿವಪೂಜೆಯನ್ನು ಮಾಡಿ ದಂಪತಿಗಳಿಬ್ಬರೂ ಹೊರಗೆ ಬಂದರು ತಲೆಮಾರುಗಳಿಂದ ಬಿಸಿಲು ಗಾಳಿಗಳಿಗೆ ಒಣಗಿ ನಿಂತ ಆ ಜೀರ್ಣಗೃಹಕ್ಕೆ ಶಬರಿಯು ತನ್ನ ಕೈಯಿಂದಲೇ ಉರಿಹಚ್ಚಿದಳು. ಒಮ್ಮೆಲೇ ಆ ಜೀರ್ಣಗೃಹವು ಬೆಂಕಿ ಹತ್ತಿ ಪ್ರಜ್ವಲಿತವಾಗಿ ದಹಿಸಿ ಉರಿಯತೊಡಗಿತು. ಆಗ ಆ ಶಬರ ಸೀಮಂತಿನಿಯು ತನ್ನ ಹೃದಯದಲ್ಲಿ ಸದಾಶಿವನನ್ನು ಧ್ಯಾನಮಾಡಿ, ತನ್ನ ಪತಿಯ ಪಾದಪಲ್ಲವಗಳಿಗೆ ವಂದಿಸಿ ಅಗ್ನಿಪ್ರವೇಶಕ್ಕೆ ಉದ್ಯಕ್ತಳಾದಳು. ಹೃದಯದಲ್ಲಿ ಮಹಾದೇವನನ್ನು ಧ್ಯಾನಮಾಡುತ್ತ ಎರಡೂ ಕೈಗಳನ್ನು ಜೋಡಿಸಿ ಪರಮೇಶ್ವರನನ್ನು ಹೀಗೆ ಸ್ತೋತ್ರ ಮಾಡಿದಳು.

**''ಪುಷ್ಪಾಣಿ ಸಂತು ತವ ದೇವ ಮಮೇಂದ್ರಿಯಾಣಿ ।**
**ಧೂಪೋಽ ಗುರುರ್ವಪುರಿದಂ ಹೃದಯಂ ಪ್ರದೀಪಃ'' ॥**

**ಪ್ರಾಣಾಂಹವೀ ಷಿ ಕರಣಾನಿ ತವಾಕ್ಷತಾಶ್ಚ ।**
**ಪೂಜಾಫಲಂ ವ್ರಜತು ಸಾಂಪ್ರತಮೇಷ ಜೀವಃ ॥**

ದೇವ ದೇವ, ಮಹಾದೇವ, ನನ್ನ ಹತ್ತೂ ಇಂದ್ರಿಯಗಳು ಇಂದು ನಿನ್ನ ಪೂಜೆಗೆ ಹೂವುಗಳಾಗಲಿ ಈ ನನ್ನ ದೇಹವೇ ನಿನ್ನ ಪೂಜೆಗೆ ಧೂಪವಾಗಲಿ. ಅಗುರು ಚಂದನವಾಗಲಿ. ನನ್ನ ಹೃದಯ ದೀಪದಿಂದ ನಿನಗೆ ಮಂಗಳಾರತಿಯಾಗಲಿ ನನ್ನ ಪಂಚಪ್ರಾಣಗಳನ್ನೇ ನಿನಗೆ ಇಂದು ಹವಿಸ್ಸನ್ನಾಗಿ ಅರ್ಪಿಸುತ್ತೇನೆ. ಈ ನನ್ನ ಕರ್ಮೇಂದ್ರಿಯಗಳು ನಿನ್ನ ಪೂಜೆಯ ಅಕ್ಷತೆಗಳು. ಈ ನನ್ನ ಆತ್ಮಾರ್ಪಣೆಯ ಪೂಜೆಯಿಂದ ಪ್ರಸನ್ನನಾಗು. ಈ ನನ್ನ ಜೀವವು ನಿನ್ನ ಪೂಜೆಯ ಪೂರ್ಣ ಫಲವನ್ನು ಪಡೆಯಲಿ.

**ವಾಂಛಾಮಿ ನಾಹಮಪಿ ಸರ್ವಧನಾಧಿಪತ್ಯಂ ।**
**ನ ಸ್ವರ್ಗ ಭೂಮಿಮಚಲಾಂ ನ ಪದಂ ವಿಧಾತುಃ ॥**
**ಭೂಯೋ ಭವಾಮಿ ಯದಿ ಜನ್ಮನಿ ಜನ್ಮನಿ ಸ್ಯಾಮ್ ।**
**ತ್ವತ್ ಪಾದ ಪಂಕಜ ಲಸನ್ ಮಕರಂದ ಭೃಂಗೀ ॥**

ಸ್ವಾಮೀ, ನಾನು ಐಶ್ವರ್ಯವನ್ನಾಗಲೀ ಬಡತನವನ್ನಾಗಲೀ ಅಪೇಕ್ಷಿಸುವುದಿಲ್ಲ. ನನಗೆ ಸ್ವರ್ಗವೂ ಬೇಡ. ಭೂಮಿಯ ಇಚ್ಛೆಯೂ ನನಗೆ ಇಲ್ಲ. ಬ್ರಹ್ಮಪದವಿಯನ್ನೂ ನಾನು ಒಲ್ಲೆ. ನಾನು ಮತ್ತೆ ಈ ಸಂಸಾರದಲ್ಲಿ ಹುಟ್ಟುವುದಾದರೆ ನನಗೆ ಒಂದು ದುಂಬಿಯ ಜನ್ಮವನ್ನು ಕರುಣಿಸು. ಆದರೆ ಅದು ಸಾಮಾನ್ಯವಾದ ದುಂಬಿಯಲ್ಲ. ಕೇವಲ ನಿನ್ನ ಚರಣವೆಂಬ ತಾವರೆಯಿಂದ ಜಿನುಗುವ ಇನಿಜೇನನ್ನು ಉಂಡು ತೃಪ್ತಿಯಿಂದ ಹಾಡುವ ಒಂದು ಭೃಂಗಾಂಗನೆಯ ಜನ್ಮವನ್ನು ನನಗೆ ದಯಪಾಲಿಸು.

**ಜನ್ಮಾನಿ ಸಂತು ಮಮ ದೇವ ಶತಾಧಿಕಾನಿ ।**
**ಮಾಯಾ ನ ಮೇ ವಿಶತು ಚಿತ್ತಮಮೋಘಹೇತುಃ ॥**

**ಕಿಂಚಿತ್ ಕ್ಷಣಾರ್ಧಮಪಿ ತೇ ಚರಣಾರಮಿದಾತ್ ।**
**ನಾ ಪೈತು ಮೇ ಹೃದಯಮೀಶ ನಮೋಽನಮಸ್ತೇ ॥**

ಶಿವದೇವ, ನನಗೆ ಎಷ್ಟಾದರೂ ಜನ್ಮ ಬರಲಿ ನಾನು ಬೇಡವೆನ್ನುವುದಿಲ್ಲ ನೂರಕ್ಕಿಂತ ಹೆಚ್ಚಿನ ಜನ್ಮ ನನಗೆ ಬಂದರೂ ಬರಲಿ. ಆದರೆ ಅಜ್ಞಾನಕ್ಕೆ ಕಾರಣವಾದ ಮಾಯೆಯು ಮಾತ್ರ ನನ್ನ ಮನದಲ್ಲಿ ಪ್ರವೇಶಿಸುವುದು ಬೇಡ. ಆದರೆ ನನ್ನ ಹೃದಯವು ನಿನ್ನ ಚರಣಾರವಿಂದದಿಂದ ಅರೆಕ್ಷಣವೂ ಕದಲದೇ ಇರಲಿ. ನನ್ನ ಚಿತ್ತವು ನಿನ್ನ ಚರಣದಲ್ಲಿ ಯಾವಾಗಲೂ ರಕ್ತಾನುರಕ್ತವಾಗಿಯೇ ಇರಲಿ. ಇದೇ ನನ್ನ ಹೆಬ್ಬಯಕೆ. ಇದನ್ನು ದಯಪಾಲಿಸು ಎಂದು ನಾನು ನಿನ್ನನ್ನು ಮತ್ತೆ ಮತ್ತೆ ಬೇಡಿಕೊಳ್ಳುತ್ತೇನೆ. ನಿನಗೆ ನನ್ನ ನಮಸ್ಕಾರ. ನಮೋ ನಮಃ ಈ ರೀತಿಯಾಗಿ ದೇವದೇವೋತ್ತಮನಾದ ಭಗವಾನ್ ಶಂಕರನನ್ನು ಪ್ರಾರ್ಥಿಸಿ, ಪ್ರಸನ್ನಗೊಳಿಸಿ, ಧೃಡನಿಶ್ಚಯದ ಆ ಶಬರ ಸುಂದರಿಯು ಪ್ರಜ್ವಲಿತವಾದ ಆ ತನ್ನ ಮನೆಯ ಅಗ್ನಿಯಲ್ಲಿ ಶಿವನನ್ನು ನೆನೆಯುತ್ತ ಧುಮುಕಿ ಹಾರಿಕೊಂಡಳು. ಅರೆಚಣದಲ್ಲಿ ಸುಟ್ಟುಬೂದಿಯಾಗಿ ಹೋಯಿತು. ಅದೇ ಅರಳಿದ ಹೊಂದಾವರೆಯ ಹೂವಿನಂತಿದ್ದ ಹರೆಯದ ಆ ಹೆಣ್ಣು ದೇಹ. ಆಗ ಅದನ್ನೆಲ್ಲ ಅಲ್ಲಿಯೇ ನೋಡುತ್ತ ನಿಂತಿದ್ದ ಅವಳ ಪತಿ ಚಂಡಕಶಬರನು ತನ್ನ ಪತ್ನಿಯು ಆತ್ಮಾರ್ಪಣೆಯಿಂದ ತಯಾರು ಪಡಿಸಿದ ಚಿತಾಭಸ್ಮವನ್ನು ತೆಗೆದುಕೊಂಡು ಆ ಮನೆಯ ಸಮೀಪದಲ್ಲಿಯೇ ಒಂದು ಗಿಡದ ಬಳಿ ಕುಳಿತುಕೊಂಡು ತನ್ನ ಶಿವಪೂಜೆಯನ್ನು ಮುಗಿಸಿದ. ಪೂಜೆ ಮುಗಿದ ಬಳಿಕ ಅವನಿಗೆ ನಿತ್ಯವೂ ಪೂಜಾವಸಾನದಲ್ಲಿ ಪ್ರಸಾದವನ್ನು ತೆಗೆದುಕೊಳ್ಳಲು ಬರುವ ಪತ್ನಿಯ ನೆನಪಾಯಿತು. ಅದೇ ಸಂಸ್ಕಾರದಿಂದ ಅವನು ತನ್ನ ಪತ್ನಿಯನ್ನು "ಶಿವಪ್ರಸಾದ ತೆಗೆದುಕೊಳ್ಳಲು ಬಾ" ಎಂದು ಮನದಲ್ಲಿಯೇ ಕರೆದ. ಪತಿ ಕರೆದ ನಂತರ ಆ ಪತಿವ್ರತೆಯು ಎಂದಿನಂತೆ ಅವನ ಮುಂದೆ ಬಂದು ನಿಂತಳು. ಪರಮಾಶ್ಚರ್ಯ ಆಯಿತು ಆ ಶಬರ ಯುವಕನಿಗೆ, ತನ್ನ ಕಣ್ಣೆದುರು ಎಂದಿನಂತೆ ಸುಂದರಮುಖದಿಂದ ಮಂದಹಾಸ ಮಾಡುತ್ತ ತನ್ನ ಪತ್ನಿ ಎದುರು ಬಂದು ನಿಂತಿದ್ದಾಳೆ. ಇತ್ತ ಅಗ್ನಿಜ್ವಾಲೆಗಳಿಂದ ಅವಳ ದೇಹವನ್ನು ಕಬಳಿಸಿ ಬೂದಿಯಾಗಿ ಬಿದ್ದ ತನ್ನ ಹಳೆಯ ಮನೆ ಅದರ ಭಸ್ಮ ಎಲ್ಲವೂ ಹಾಗೆಯೇ ಇದೆ.

ಅವನು ಮನದಲ್ಲಿಯೇ ವಿಚಾರಿಸಿದ- 'ಅಗ್ನಿಯು ತನ್ನ ಜ್ವಾಲೆಗಳಿಂದ ವಸ್ತುವನ್ನು ಸುಡುತ್ತದೆ. ಸೂರ್ಯನು ಕಿರಣಗಳಿಂದ ದಹಿಸುತ್ತಾನೆ. ರಾಜನು ದಂಡಗಳಿಂದ ಅಪರಾಧಿಗಳನ್ನು ದಂಡಿಸುತ್ತಾನೆ. ಬ್ರಾಹ್ಮಣನು ತನ್ನ ಮನಸ್ಸಿನಿಂದಲೇ ಬೇಡದವರನ್ನು ಸುಟ್ಟು ಹಾಕುತ್ತಾನೆ. ಆದರೆ ಈ ನನ್ನ ಪತ್ನಿಯು ನನ್ನ ಸಮಕ್ಷಮವೇ ಅಗ್ನಿಯಲ್ಲಿ ಸುಟ್ಟುಹೋಗಿದ್ದಾಳೆ. ಈಗ ಇವಳು ಮತ್ತೆ ಹೇಗೆ ಬದುಕಿ ಬಂದಳು. ಇದು ಕನಸೊ? ನನಸೊ? ಭ್ರಮೆಯೊ? ಮಾಯೆಯೊ? ಏನು ಇರಬಹುದು? ಎಷ್ಟು ಯೋಚಿಸಿದರೂ ಅವನಿಗೆ ಯಾವುದೂ ಬಗೆಹರಿಯಲಿಲ್ಲ. ಒಗಟು ಒಡೆಯಲಿಲ್ಲ. ಅವನು ಎದುರು ನಿಂತ ತನ್ನ ಹೆಂಡತಿಯನ್ನೇ ಕೇಳಿದ- "ಪ್ರಿಯೇ, ನೀನು ಕೆಲನಿಮಿಷಗಳ ಹಿಂದೆ ಅಗ್ನಿ ಪ್ರವೇಶ ಮಾಡಿದೆ. ಬೆಂಕಿಯಲ್ಲಿ ಬೆಂದು ಹೋದೆ. ಬೂದಿ ಆದೆ. ಭಸ್ಮೀಭೂತಳಾದ ನೀನು ಮತ್ತೆ ಬದುಕಿ ಬಂದದ್ದು ಹೇಗೆ? ಮತ್ತೆ ಮೊದಲಿನಂತೆ ಸುಂದರಾತಿ ಸುಂದರವಾಗಿ ಕಳೆಕಾಂತಿಗಳಿಂದ ನಳನಳಿಸುತ್ತ ನಿಂತುಕೊಂಡಿರುವುದು ಹೇಗೆ!

**ಶಬರಸುಂದರಿ:-** ನಾಥ! ನಾನು ನಿಮಗೂ ಅಗ್ನಿಗೂ ಪ್ರದಕ್ಷಿಣೆ ಹಾಕಿ ಮನದಲ್ಲಿ ಮಹಾದೇವರನ್ನು ನೆನೆಯುತ್ತ ಬೆಂಕಿಗೆ ಬಿದ್ದದ್ದು ಒಂದೇ ನೆನಪು. ಅದರ ಮುಂದೆ ನನಗೆ ಎಚ್ಚರವೇ ಇಲ್ಲ ಬೆಂಕಿಯ ಜ್ವಾಲೆಗಳ ಝಳ ನನಗೆ ತಾಕಲೇ ಇಲ್ಲ. ನಾನು ಅಗ್ನಿಯಿಂದ ಉರಿಯುತ್ತಿರುವ ಆ ಕಿಚ್ಚಿನಲ್ಲಿ ಪ್ರವೇಶಿಸಿದಾಗ ತಣ್ಣೀರಿನ ತಂಪಿನ ತಾಣದಲ್ಲಿ ಪ್ರವೇಶ ಮಾಡಿದ ಅನುಭವ ನನಗೆ ಆಯಿತು. ನಾನು ಕೆಲವು ನಿಮಿಷ ಗಾಢ ನಿದ್ರೆಯಲ್ಲಿ ಮಲಗಿದಂತೆ ಆಗಿದ್ದಿತು. ಮುಂದೆ ಕ್ಷಣಾರ್ಧದಲ್ಲಿ ನಾನು ಎಚ್ಚರವಾಗಿ ಎದ್ದೆ. ಎದ್ದ ಕೂಡಲೇ ನಾನು ನೋಡಿದೆ. ನನ್ನ ದೇಹವು ಸುಟ್ಟಿಲ್ಲ. ಆದ್ದರಿಂದ ನಾನು ಪ್ರತಿದಿನದಂತೆ ಪರಮೇಶ್ವರನ ಪ್ರಸಾದಕ್ಕಾಗಿ ತಮ್ಮ ಬಳಿ ಬಂದು ನಿಂತಿದ್ದೇನೆ.

ಹೀಗೆ ಆ ದಂಪತಿಗಳಿಬ್ಬರೂ ಪ್ರೇಮಪೂರ್ವಕವಾಗಿ ತಮ್ಮ ತಮ್ಮಲ್ಲಿ ಮಾತನಾಡುತ್ತಲಿರುವಾಗಲೇ ಅಲ್ಲಿ ಒಂದು ದಿವ್ಯ ವಿಮಾನ ಪ್ರಕಟವಾಯಿತು. ಅದರಲ್ಲಿ ನಾಲ್ಕು ಶಿವಸೇವಕರು ಕುಳಿತಿದ್ದರು. ಈ ನಿಷಾದ ದಂಪತಿಗಳ ಕೈ ಹಿಡಿದು ಆ ಶಿವಪಾರ್ಷದರು ವಿಮಾನದಲ್ಲಿ ಕುಳ್ಳಿರಿಸಿಕೊಂಡರು. ಆ ಶಂಕರ ಕಿಂಕರರ ದೇಹಸ್ಪರ್ಶವಾದ ಮರುಕ್ಷಣದಲ್ಲಿಯೇ ಈ ಶಬರ ದಂಪತಿಗಳ ಶರೀರವು ಕೂಡಲೇ ದಿವ್ಯ ದೇಹವಾಗಿ ಮಾರ್ಪಟ್ಟಿತು. ಆ ನಿಷಾದ ದಂಪತಿಗಳನ್ನು ಶಿವವಿಮಾನದಲ್ಲಿ ಕೂಡಿಸಿಕೊಂಡು ಆ ಹರದೂತರು ಕೈಲಾಸಲೋಕಕ್ಕೆ ಕರೆದುಕೊಂಡು ಹೋದರು.

ಆದ್ದರಿಂದ ಮಾನವರು ಯಾವುದೇ ಧರ್ಮ ಕರ್ಮವನ್ನು ಮಾಡಿದರೂ ಶ್ರದ್ಧೆಯಿಂದಲೇ ಮಾಡಬೇಕು ಈ ಶ್ರದ್ಧೆಯ ಬಲದಿಂದಲೇ ಆ ಕೀಳುಜಾತಿಯ ಶಬರ ದಂಪತಿಗಳು ಉದ್ಧೃತರಾಗಿ ಶಿವಸಾಯುಜ್ಯವನ್ನು ಪಡೆದರು. ಶಿವಶ್ರದ್ಧೆಯು ಯಾವನ ಚಿತ್ತಭಿತ್ತಿಯಲ್ಲಿ ಅಚ್ಚೊತ್ತಿ ನಿಂತಿದೆಯೋ ಅವನಂಥಧನ್ಯಾತ್ಮರೂ, ಪುಣ್ಯಾತ್ಮರೂ ಮೂರು ಲೋಕದಲ್ಲಿ ಯಾರು ಇರುತ್ತಾರೆ?

## ಉಮಾಮಹೇಶ್ವರ ವ್ರತದ ಮಹಿಮೆ

**ಸೂತ:-** ಒಂದಾನೊಂದು ಕಾಲದಲ್ಲಿ ಆನರ್ತ ದೇಶದಲ್ಲಿ ವೇದರಥ ಎಂಬ ಹೆಸರಿನ ಬ್ರಾಹ್ಮಣ. ಉಚ್ಚ ಕುಲದಲ್ಲಿ ಅವನ ಜನ್ಮ. ಸರ್ವಶಾಸ್ತ್ರಗಳಲ್ಲಿ ನೈಪುಣ್ಯ. ಭಗವತ್ ಪಾದಾರವಿಂದಗಳಲ್ಲಿ ಅವನಿಗೆ ಮನಸ್ಸಿನ ಪ್ರಾವಣ್ಯ. ಸಂತಾನ, ಸಂಪತ್ತು, ಒಳ್ಳೆ ಮಡದಿ ಇದು

ಅವನಿಗೆ ಭಗವಂತ ಕೊಟ್ಟ ಭಾಗ್ಯ. ಕೊನೆಗೆ ಅವನಿಗೆ ಒಂದು ಕನ್ಯಾಮಣಿ ಜನಿಸಿದಳು. ಶಾರದೆ ಎಂದು ಅವಳ ನಾಮಧೇಯ ಶೀಲ ಗುಣ ಸಂಪನ್ನಳು ಆ ಕನ್ಯೆ. ರತಿಯ ರೂಪ ಶಾರದೆಯ ಬುದ್ಧಿ. ಸತಿಯ ಸಾತ್ವಿಕತೆ ಮೂರರ ಮಿಲನ ಆ ಬ್ರಾಹ್ಮಣ ಪುತ್ರಿಯಲ್ಲಿ. ಹನ್ನೆರಡರ ಎಳೆವಯಸ್ಸಿನಲ್ಲಿಯೇ ಅವಳಲ್ಲಿ ಸೌಂದರ್ಯದ ಅರಳಿ ನಿಂತಿತ್ತು. ಪದ್ಮನಾಭ ಎಂಬ ಓರ್ವ ಬ್ರಾಹ್ಮಣ ಅವನ ಮನೆಗೆ ಬಂದ. ಅತಿಥಿ ಆಗಿ ಒಂದೆರಡು ದಿನ ಅಲ್ಲಿ ಉಳಿದುಕೊಂಡ. ಅವನಿಗೆ ಮನೆಯಲ್ಲಿ ಎಲ್ಲ ಕೆಲಸಗಳನ್ನು ಚುರುಕಾಗಿ ಮಾಡುವ ಆ ಬ್ರಾಹ್ಮಣ ಕುಮಾರಿ ಕಣ್ಣು ತುಂಬಿದಳು. ಶಾರದಾ ಎಂದು ಅವಳ ಹೆಸರು. ಹೆಸರಿಗೆ ತಕ್ಕಂತೆ ಈ ಶಾರದೆ ಸರ್ವ ವಿದ್ಯಾ ವಿಶಾರದೆ. ಅತಿಥಿಯಾಗಿ ಒಂದು ಪದ್ಮನಾಭನಿಗೆ ಆಗಲೇ ಪ್ರೌಢ ವಯಸ್ಸು. ಅವನಿಗೆ ಈ ಮೊದಲೇ ಮದುವೆಯಾಗಿದ್ದಿತು. ದುರ್ದೈವದಿಂದ ಮಡಿದು ಹೋಗಿದ್ದಳು ಆ ಮೊದಲನೆಯ ಮಡದಿ. ಈಗ ಅವನಿಗೆ ಎರಡನೆಯ ಮದುವೆಯ ಚಪಲ. ವೇದರಥನ ಮಗಳು ಶಾರದೆಯನ್ನು ಮದುವೆಯಾಗಬೇಕೆಂದು ಅವನಿಗೆ ಆಶೆ. ಬಾಯಿ ಬಿಟ್ಟು ಕೇಳಿ ಬಿಟ್ಟ ವೇದರಥ. ಈ ನಿನ್ನ ಮಗಳನ್ನು ನನಗೆ ಕೊಡು ಎಂದು. ಪದ್ಮನಾಭನಿಗೆ ವಯಸ್ಸಾಗಿತ್ತು ಆದುದರಿಂದ ಕನ್ನೆಯನ್ನು ಕೊಡಲು ವೇದರಥನಿಗೆ ಇಚ್ಛೆ ಇರಲಿಲ್ಲ. ಪದ್ಮನಾಭನಲ್ಲಿ ಐಶ್ವರ್ಯಕ್ಕೆ ಕೊರತೆ ಇಲ್ಲ. ಪ್ರತಿಷ್ಠೆ, ಗೌರವ, ರಾಜಮಹಾರಾಜರ ಮೇಲೆ ವರ್ಚಸ್ಸು ಎಲ್ಲವೂ ಸ್ಪೃಹಣೀಯವಾಗಿತ್ತು. ಆದರೆ ವಯಸ್ಸು ನಲವತ್ತರ ಅಂಚಿಗೆ ತಲಪಲಿದ್ದ ಅವನಿಗೆ ಹನ್ನೆರಡು ವರ್ಷದ ಮಗಳನ್ನು ಕೊಡಲು ವೇದರಥನ ಮನಸ್ಸು ಹಿಂಜರಿಯ ತೊಡಗಿತು. ಆದರೆ ಆ ಅತಿಥಿ ಬ್ರಾಹ್ಮಣ ಶಾರದೆಯನ್ನು ಕೊಡು ಎಂದು ಒತ್ತಿ ಒತ್ತಿ ಒತ್ತಾಯದಿಂದ ಕೇಳಿದ್ದರಿಂದ ವೇದರಥ ನೀರುಪಾಯನಾದ. ಯಾಚನಾಭಂಗದ ಭೀತಿಯಿಂದ ತನ್ನ ಕುಮಾರಿಯನ್ನು ಆ ಪದ್ಮನಾಭನಿಗೆ ಧಾರೆಯೆರೆದು ಕೊಟ್ಟ.

ವೈಭವ ಸಂಪನ್ನವಾಗಿಯೇ ನೆರವೇರಿತು ಮದುವೆಯ ಮಂಗಳ ಮಹೋತ್ಸವ. ಮಧ್ಯಾಹ್ನ ಎರಡು ಗಂಟೆಯ ಹೊತ್ತಿಗೆ ವಿವಾಹದ ಅಕ್ಷತಾರೋಪಣ ಮುಗಿಯಿತು. ಸಾಯಂಕಾಲ ಒಳಗಾಗಿ ವೈವಾಹಿಕ ಹೋಮ, ಹವನ, ಲಾಜಾಹೋಮ ಎಲ್ಲವೂ ಪರಿಸಮಾಪ್ತಿಯಾಯಿತು. ಸಾಯಂಕಾಲವಾದ ಬಳಿಕ ಸಂಧ್ಯಾವಂದನೆ ಮಾಡಬೇಕು ಎಂದು ಮಧುಮಗನಾದ ಪದ್ಮನಾಭನು ಊರ ಹೊರಗೆ ಇರುವ ಒಂದು ಸರೋವರಕ್ಕೆ ಹೋದ. ಆ ತಿಳಿನೀರಿನ ಪುಷ್ಕರಣೀಯದಲ್ಲಿ ಸಾಯಂಕಾಲೀನ ಸಂಧ್ಯಾವಂದನೆಯನ್ನು ವಿಧಿಪೂರ್ವಕವಾಗಿ ಮಾಡಿದ. ಪ್ರತಿದಿನ ಸಾಯಂಕಾಲದಲ್ಲಿ ತಾನು ಪಠಿಸಬೇಕಾದ ದೇವತಾ ಸ್ತುತಿ ಸ್ತೋತ್ರಾದಿಗಳನ್ನು ಪಠಿಸಿದ. ತನ್ನ ಸಾಯಂಸಧ್ಯೋಪಾಸನೆಯನ್ನು ಮುಗಿಸಿಕೊಂಡು ಮನೆಯ ಕಡೆಗೆ ಹೊರಟ. ಆಗಲೇ ರಾತ್ರಿಯಾಯಿತು. ಸುತ್ತು ಮುತ್ತಲೂ ಕತ್ತಲೆ ಮುಸುಕಿತು. ಹೋಗುವಾಗ ನೋಡಿದ ದಾರಿಯಿಂದ ಪದ್ಮನಾಭ ಅವಸರದಿಂದ ಮನೆಯ ಕಡೆ ಹೊರಟ. ದಾರಿಯಲ್ಲಿ ಭೀಕರ ಹೆಬ್ಬಾವು. ಪದ್ಮನಾಭನನ್ನು ರೊಚ್ಚಿಗೆದ್ದು ಕಚ್ಚಿಬಿಟ್ಟಿತು. ತಕ್ಷಣದಲ್ಲಿ ವಿಷ ಭೇದಿಸಿ ಮರಣ ಹೊಂದಿದ ಪದ್ಮನಾಭ. ಮದುವೆಯ ಮಂಟಪದಲ್ಲಿಯೇ ಮದುಮಗನ ಮೃತ್ಯು. ಮನೆಯ ಜನರೆಲ್ಲರು ಶೋಕೋದ್ರೇಕಕ್ಕೆ ಕಾರಣವಾಯಿತು ಅವನ ನಿಧನ. ಅತ್ತೆ, ಮಾವ, ಬಂಧು ಬಳಗ ಮದುಮಗಳು ಮೊದಲಾಗಿ ಎಲ್ಲರೂ ಬಿಕ್ಕಿ ಬಿಕ್ಕಿ ದುಃಖಿಸಿ ಅತ್ತು ಗೋಗರೆದರು. ನೆರೆದ ಬಂಧುಮಿತ್ರರು ಮೃತನ ದಹನ ಸಂಸ್ಕಾರಮಾಡಿ ತಮ್ಮ ತಮ್ಮ ಮನೆಗೆ ಹೋದರು. ವಿಧವೆಯಾದ ಶಾರದೆಯು ತಂದೆಯ ಮನೆಯಲ್ಲಿಯಿ ಉಳಿದುಕೊಂಡಳು.

ಒಂದು ದಿನ ನೈಧ್ರುವ ಎಂಬ ಓರ್ವ ಮುನಿ ಶಿಷ್ಯನ ಕೈ ಹಿಡಿದು ಶಾರದೆಯ ಮನೆಗೆ ಆಗಮಿಸಿದ ಅವನೊಬ್ಬ ಹುಟ್ಟುಗುರುಡ. ಆದರೂ ಮಹಾವಿದ್ವಾಂಸ, ವೇದಗಳಲ್ಲಿ ವೈದುಷ್ಯ. ಶಾಸ್ತ್ರಗಳಲ್ಲಿ ಪಾಂಡಿತ್ಯ, ಉಪನಿಷತ್ತುಗಳಲ್ಲಿ ಪ್ರಾವೀಣ್ಯ, ಅಧ್ಯಾತ್ಮದಲ್ಲಿ ಪರಿಣತಿ. ಇವು ಆ ಅಂಧಮುನಿಯ ಸತತ ಪ್ರಯತ್ನದಿಂದ ಸಿದ್ಧಿಸಿದ್ದವು. ಜ್ಞಾನಿಗಳ ಬಾಯಿಂದ ಶ್ರವಣಮಾಡಿ ಮಾಡಿ ಇಂಥ ಅಸಾಧಾರಣ ವೇದ, ವೇದಾಂತ ವಿದ್ವತ್ತನ್ನು ಆ ಕುರುಡು ಬ್ರಾಹ್ಮಣ ಸಾಧಿಸಿದ್ದು ಅವನ ವೈಶಿಷ್ಟ್ಯವಾಗಿದ್ದಿತು. ಮೇಲಾಗಿ ಮಹಾ ಕರ್ಮಠ ಆ ಅಂಧಯೋಗಿ, ದಿನದ ಬಹುಭಾಗ ಜಪತಪೋನುಷ್ಠಾನ, ಪೂಜೆ ಪಾರಾಯಣ, ಪಾಠ ಪ್ರವಚನಗಳಲ್ಲಿಯೇ ಅವನು ಕಳೆಯುತ್ತಿದ್ದ. 'ವಾಙ್ಮಯಂ ತಪಉಚ್ಚತೇ'ಎಂಬ ಭಗವದ್ ವಾಕ್ಯದಲ್ಲಿ ಆ ಅಂಧ ಆಚಾರ್ಯನಿಗೆ ಅಚಲ ವಿಶ್ವಾಸ. ಆದುದರಿಂದ ಆ ಕುರುಡು ತಾಪಸನು ತನ್ನ ಜೀವನದ ಬಹುಭಾಗವನ್ನು ಅಧ್ಯಾತ್ಮ ಸಾಧನೆಯಲ್ಲಿಯೇ ಸವಿಸಿದ್ದ. ಆದ್ದರಿಂದ ಅವನಿಗೆ ಮಂತ್ರಸಿದ್ಧಿ ವಾಕ್ ಸಿದ್ಧಿ ಎರಡೂ ಸುಸಂಪನ್ನವಾಗಿದ್ದವು. ಇಂಥ ವಯೋವೃದ್ಧನೂ, ತಪೋವೃದ್ಧನೂ ಆದ ಆ ಅಂಧ ಮುನಿಯು ಬೇರೆಯವರ ಸಹಾಯದಿಂದ ಶಾರದೆಯು ಇದ್ದಲ್ಲಿಗೆ ಬಂದ. ಆಗ ಮನೆಯಲ್ಲಿ ಶಾರದೆಯ ಸೋದರರು ಯಾರೂ ಇರಲಿಲ್ಲ. ಸ್ವಯಂ ಶಾರದೆಯೇ ಮುನಿಗಳ ಬಳಿಗೆ ಬಂದಳು. ಆದರದಿಂದ ಮಾತನಾಡಿದಳು. ''ಪೂಜ್ಯರೇ, ನಿಮಗೆ ಸುಸ್ವಾಗತ. ತಾವು ನಮ್ಮ ಮನೆಗೆ ಬಂದದು ನಮ್ಮ ಸುದೈವ. ತಮ್ಮ ಸೇವೆಯು ನಮಗೆ ದೊರಕಿದ್ದು ನಮ್ಮೆಲ್ಲರ ಅಹೋ ಭಾಗ್ಯ. ಈ ಆಸನದ ಮೇಲೆ ತಾವು ಕುಳಿತುಕೊಳ್ಳಬೇಕು. ಮುನಿಮಂಡಲದ ಅಧಿಪತಿಗಳಂತಿದ್ದ ತಮಗೆ ನನ್ನ ನಮಸ್ಕಾರ. ನಾನು ತಮ್ಮ ಯಾವ ಸೇವೆಯನ್ನು ಮಾಡಬೇಕೆಂದು ಅಪ್ಪಣೆಮಾಡಬೇಕು.'' ಹೀಗೆ ನುಡಿದು ಶಾರದೆಯು ಆ ಕುರುಡು ಬ್ರಾಹ್ಮಣನ ಪಾದಗಳನ್ನು ತೊಳೆದಳು. ಬೀಸಣಿಕೆಯಿಂದ ಬೀಸಿದಳು. ತುಸು ಹೊತ್ತು ವಿಶ್ರಮಿಸಿದ ಬಳಿಕ ಅವರಿಗೆ ಸ್ನಾನ ಹಾಗೂ ದೇವರ ಪೂಜೆ ಮತ್ತು ನಿತ್ಯಾನುಷ್ಠಾನಗಳಿಗೆ ಸರ್ವ ವಿಧದಿಂದ ಸೌಕರ್ಯವನ್ನು ಮಾಡಿಕೊಟ್ಟಳು ಅನಂತರ ಅವರಿಗೆ ಅತ್ಯಾದರದಿಂದ ಉತ್ತಮವಾದ ಮೃಷ್ಟಾನ್ನ ಭೋಜನವನ್ನು ಮಾಡಿಸಿದಳು. ಊಟದಲ್ಲಿ ಬಗೆಬಗೆಯ ಭಕ್ಷ್ಯ ಭೋಜ್ಯಗಳ ಪಕ್ವಾನ್ನ ಮೃಷ್ಟಾನ್ನಗಳ ಸೇವನೆಯಿಂದ ಆನಂದ ತುಂದಿಲರಾದರು ಆ ಅಂಧ ಮುನಿಗಳು. ಆ ಶಾರದೆಗೆ ಹೃದಯ ತುಂಬಿ ಆಶೀರ್ವಾದ ಮಾಡಿದರು.

**ಅಂಧಮುನಿ:-** ಕಲ್ಯಾಣೀ, ನಿನ್ನ ಅತ್ಯಪೂರ್ವವಾದ ಈ ಅತಿಥ್ಯ ಹಾಗೂ ಷಡ್ರೋಸೋಪೇತವಾದ ಭೋಜನದಿಂದ ನಾನು ಸಂಪೂರ್ಣ ತುಷ್ಟ ಮತ್ತು ಅತ್ಯಂತ ಪರಿತೃಪ್ತ. ನನ್ನ ಆಶೀರ್ವಾದದ ಬಲದಿಂದ ನೀನು ನಿನ್ನ ಪತಿಯೊಡನೆ ಸುಖ ವಿಹಾರವನ್ನು ಆನಂದದಿಂದ ಮಾಡು ನಿನಗೆ ಸರ್ವಗುಣ ಸಂಪನ್ನನಾದ ಶ್ರೇಷ್ಠ ಸತ್ಪುತ್ರನು ಜನಿಸಲಿ. ಈ ಪ್ರಪಂಚದಲ್ಲಿ ಅನೇಕಪುಣ್ಯಕಾರ್ಯಗಳನ್ನು ಮಾಡಿ ಪುಣ್ಯಶಾಲಿನಿಯಾಗು ಎಲ್ಲ ದೇವತೆಗಳೂ ನಿನ್ನ ಮೇಲೆ ಪೂರ್ಣಾನುಗ್ರಹ ಮಾಡಲಿ.

ಅಂಧ ಮಹರ್ಷಿಗಳಾದ 'ನೈಧ್ರುವ' ಯೋಗಿಗಳ ಈ ಹೃತ್ಪೂರ್ವಕವಾದ ಈ ಆಶೀರ್ವಾದವನ್ನು ಕೇಳಿ ವಿಧವೆ ಶಾರದೆಗೆ ಹರ್ಷೋದ್ರೇಕವೂ, ದುಃಖೋದ್ರೇಕವೂ ಉಂಟಾಯಿತು. ಆಶ್ಚರ್ಯದೊಂದಿಗೆ ಆಗ ಅವಳು ಕೈಜೋಡಿಸಿ ಮುನೀಶ್ವರರಿಗೆ ಬಿನ್ನವಿಸಿಕೊಂಡಳು.

**ಶಾರದಾ:-** ಬ್ರಹ್ಮಜ್ಞಾನಿಗಳೇ, ತಾವು ಸಿದ್ಧಪುರುಷರು. ತಮ್ಮ ಬಾಯಿಂದ ಬಂದ ಮಾತು ಎಂದೂ ಹುಸಿಯಾಗಲಾರದು. ವಾಕ್‌ಸಿದ್ಧಿ ಹಾಗೂ ಮಂತ್ರಸಿದ್ಧಿ ಎರಡನ್ನೂ ಪಡೆದ

ತಾವು ಇದೀಗ ನನಗೆ ಪತಿಸೌಖ್ಯ ಹಾಗೂ ಪುತ್ರ ಲಾಭ ಎರಡೂ ಆಗಲಿ ಎಂದು ಆಶೀರ್ವಾದ ಮಾಡಿದಿರಿ. ಆದರೆ ಇದು ಸತ್ಯವಾಗುವ ಬಗೆ ಹೇಗೆ? ನಾನೊಬ್ಬ ಬಾಲವಿಧವೆ. ಮದುವೆಯ ದಿನದಂದೇ ಮಂಗಳ ಸೂತ್ರ ಕಟ್ಟಿದ ಪತಿಯನ್ನು ಕಳೆದುಕೊಂಡ ಅಭಾಗಿನಿ. ನನ್ನಂಥ ದುರ್ದೈವಿ ಹೆಣ್ಣಿಗೆ ತಾವು ಮಾಡಿದ ಆಶೀರ್ವಾದ ಹೇಗೆ ಸಫಲವಾದೀತು?

**ಅಂಧಮುನಿ:-** ಶುಭಾಂಗಿ, ನಾನಂತೂ ಜನ್ಮಾಂಧ, ನಾನು ನಿನ್ನನ್ನು ನೋಡದೇ ಆಶೀರ್ವಾದ ಮಾಡಿಬಿಟ್ಟೆ. ಆ ಪರಮೇಶ್ವರನು ನನ್ನ ಬಾಯಿಂದ 'ಸೌಭಾಗ್ಯವತಿಯಾಗು' ಪುತ್ರವತಿಯಾಗು' ಎಂದು ಆಶೀರ್ವಾದ ಮಾಡಿಸಿದ್ದಾನೆ. ನನ್ನಲ್ಲಿ ನಿಂತು ನುಡಿಸಿದವ ಆ ಪರಮೇಶ್ವರ. ಆ ಭಗವದ್ ವಾಕ್ಯವನ್ನು ಸತ್ಯವನ್ನಾಗಿಸುವುದು ನನ್ನ ಕರ್ತವ್ಯ. ಈಗ ನೀನು ನನ್ನ ಆಜ್ಞೆಯನ್ನು ಪಾಲಿಸು. 'ಉಮಾಮಹೇಶ್ವರ ವ್ರತ' ಎಂಬ ವ್ರತವನ್ನು ನಾನು ಹೇಳಿದ ರೀತಿಯಲ್ಲಿ ಆಚರಿಸು. ಅದರಿಂದ ನಿನಗೆ ಕಲ್ಯಾಣವಾಗುವುದು.

**ಶಾರದಾ:-** ಬ್ರಹ್ಮನ್, ತಾವು ಹೇಳಿದ ಮಾತು ನನಗೆ ಶಿರಸಾಮಾನ್ಯ. ಆ ವ್ರತವು ಎಷ್ಟೇ ಕಠಿಣವಿರಲಿ. ಪ್ರಯತ್ನ ಪೂರ್ವಕವಾಗಿ ನಾನು ಅದನ್ನು ಪಾಲಿಸುತ್ತೇನೆ ತಾವು ದಯವಿಟ್ಟು ನನಗೆ ಆ ವ್ರತದ ವಿಧಿವಿಧಾನವನ್ನು ವಿಸ್ತಾರಪೂರ್ವಕವಾಗಿ ಅರುಹಿರಿ.

**ಅಂಧಮುನಿ:-** ಕಲ್ಯಾಣಿ, ಚೈತ್ರ ಅಥವಾ ಮಾರ್ಗಶೀರ್ಷ ಮಾಸದ ಶುಕ್ಲಪಕ್ಷದಲ್ಲಿ ಒಂದು ಶುಭದಿನದಂದು ಈ ಉಮಾಮಹೇಶ್ವರ ವ್ರತವನ್ನು ಪ್ರಾರಂಭಿಸಬೇಕು. ಅಷ್ಟಮೀ, ಚತುರ್ದಶೀ, ಅಮವಾಸ್ಯೆ, ಪೂರ್ಣಿಮಾ ದಿನಗಳಂದು ವಿಧಿಪೂರ್ವಕವಾಗಿ ಸಂಕಲ್ಪ ಮಾಡಿ ಪ್ರಾತಃಕಾಲ ಸ್ನಾನಮಾಡಬೇಕು. ಅನಂತರ ದೇವತೆಗಳಿಗೂ ಪಿತೃಗಳಿಗೂ ತರ್ಪಣ ನೀಡಬೇಕು. ಬಳಿಕ ಮನೆಗೆ ಬಂದು ಒಂದು ಸುಂದರವಾದ ಚಿಕ್ಕ ಚಪ್ಪರದ ಮಂಟಪವನ್ನು ಮಾಡಬೇಕು. ಅದನ್ನು ಅರ್ಧಚಂದ್ರಾಕೃತಿಯಲ್ಲಿ ನವಿಲು ಗರಿಗಳಿಂದಲೂ ಹಣ್ಣು, ಹೂ, ಚಿಗುರು, ಕುಡಿ, ಮಿಡಿ, ತಳಿರು, ತೋರಣಗಳಿಂದ ಅಲಂಕರಿಸಬೇಕು. ಮಧ್ಯದಲ್ಲಿ ಪಂಚರಂಗಿಯ ಕಮಲಗಳನ್ನು ಬಿಡಿಸಬೇಕು. ಅದರ ಮಧ್ಯೇ ಧಾನ್ಯ ಅಥವಾ ಅಕ್ಕಿಯ ರಾಶಿ ಹಾಕಿ ಅದರ ಮೇಲೆ ದರ್ಭೆ ಹಾಸಬೇಕು. ದರ್ಭೆಯ ಮೇಲೆ ನೀರು ತುಂಬಿದ ಜಲಕಲಶವನ್ನು ಇರಿಸಬೇಕು. ಅದಕ್ಕೆ ಕೆಂಪು ಬಟ್ಟೆಯನ್ನು ಸುತ್ತಬೇಕು. ವಸ್ತ್ರದ ಮೇಲೆ ಪಾರ್ವತೀ ಪರಮೇಶ್ವರರ ಚಿನ್ನದ ಎರಡು ಪ್ರತಿಮೆಗಳನ್ನು ಸ್ಥಾಪಿಸಬೇಕು. ಭಕ್ತಿಯಿಂದ ಆ ಶಿವಪಾರ್ವತಿಯರನ್ನು ಶಕ್ತ್ಯಾನುಸಾರ ಪೂಜೆಗೈಯಬೇಕು. ಪಂಚಾಮೃತದಿಂದ ಸ್ನಾನಮಾಡಿಸಿ ಅನಂತರ ಶುದ್ಧೋದಕದಿಂದ ಅಭಿಷೇಕಗೈಯಬೇಕು. ಏಕಾದಶ, ರುದ್ರಮಂತ್ರದ ಜಪಮಾಡಿ ನೂರಾಎಂಟು ಸಲ 'ನಮಃ ಶಿವಾಯ' ಎಂಬ ಪಂಚಾಕ್ಷರ ಮಂತ್ರದಿಂದ ಅಭಿಮಂತ್ರಿರಸಬೇಕು. ಮತ್ತೆ ಆ ಉಮಾಮಹೇಶ್ವರ ಮೂರ್ತಿಗಳನ್ನು ಸಿಂಹಾಸನದ ಮೇಲೆ ಸ್ಥಾಪಿಸಿ ಪೂಜೆಮಾಡಬೇಕು. ಪೂಜೆಮಾಡುವವನು ಮೊದಲು ವಿಧಿಪೂರ್ವಕವಾಗಿ ಸ್ನಾನಮಾಡಿ, ಬಿಳಿಬಟ್ಟೆ ಉಟ್ಟು, ಶುದ್ಧ ಆಸನದ ಮೇಲೆ ಕುಳಿತುಕೊಳ್ಳಬೇಕು. ಆಚಮನ, ಪ್ರಾಣಾಯಾಮ ಮಾಡಿ ಶಿವಭಗವಂತನ ಎದುರು ಕೈಮುಗಿದುಕೊಂಡು 'ಉಮಮ ಜನ್ಮಜನ್ಮಾಂತರ ಸಂಚಿತ ಭಯಂಕರ ಮಹಾ ಪಾಪಾರಾಶಿ ಪ್ರಕ್ಷಾಳನಾರ್ಥಂ' ಸೌಭಾಗ್ಯ ವಿಜಯ ಆರೋಗ್ಯ ಧರ್ಮ ಐಶ್ವರ್ಯಾದ್ಯಭಿವೃದ್ಧ್ಯರ್ಥಂ, ಉಮಾಮಹೇಶ್ವರ ಪೂಜಾಖ್ಯಂ ಕರ್ಮ ಕರಿಷ್ಯೇ ಎಂದು ಸಂಕಲ್ಪವನ್ನು ಮಾಡಬೇಕು. ಅನಂತರ ಅಂಗನ್ಯಾಸಮಾಡಿ ಶಿವಪಾರ್ವತಿಯರ ಧ್ಯಾನ ಮಾಡಬೇಕು. ತನ್ನ ಹೃದಯ ಕಮಲ

ಕರ್ಣಿಕೆಯ ತುದಿಯಲ್ಲಿ ಜಗತ್ತಿನ ತಂದೆ ತಾಯಿಗಳಾದ ಶಿವಶಕ್ತಿಯರನ್ನು ಧ್ಯಾನಗೈದು ಶಿವಮಂತ್ರವನ್ನು ಜಪಮಾಡಬೇಕು. ಜಪದ ನಂತರ ಬಾಹ್ಯಪೂಜೆಯನ್ನು ಪ್ರಾರಂಭಿಸಬೇಕು. ಎರಡು ಬಂಗಾರದ ಪ್ರತಿಮೆಗಳಲ್ಲಿ ಸತೀ ಶಂಕರನನ್ನು ಆವಾಹಿಸಿ ಅವರಿಗೆ ಈ ಕೆಳಗಿನ ಮಂತ್ರದಿಂದ ಅರ್ಘ್ಯವನ್ನು ನೀಡಬೇಕು.

ನಮಸ್ತೇ ಪಾರ್ವತೀನಾಥ ತ್ರೈಲೋಕ್ಯ ವರದರ್ಷಭ ।
ತ್ರ್ಯಂಬಕೇಶ ಮಹಾದೇವ ಗೃಹಾಣಾರ್ಘ್ಯಂ ನಮೋಽಸ್ತು ತೇ ॥
ನಮಸ್ತೇ ದೇವದೇವೇಶಿ ಪ್ರಪನ್ನಭಯ ಹಾರಿಣಿ ।
ಅಂಬಿಕೆ ವರದೇ ದೇವಿ ಗೃಹಾಣಾರ್ಘ್ಯಂ ಶಿವಪ್ರಿಯೆ ॥

ಹೀಗೆ ಮಂತ್ರವನ್ನು ಉಚ್ಚರಿಸಿ ಮೂರು ಸಲ ಶಿವಾಶಿವೆಯರಿಗೆ ಅರ್ಘ್ಯವನ್ನು ನೀಡಬೇಕು. ವಿಧಿಪೂರ್ವಕವಾಗಿ ಗಂಧ, ಹೂವು, ಅಕ್ಷತೆ, ಧೂಪ ದೀಪಗಳನ್ನು ಸಮರ್ಪಿಸಿ ಪಾಯಸ ಹಾಗೂ ತುಪ್ಪದಿಂದ ತಯಾರಿಸಿ ವಿವಿಧ ಭಕ್ಷ್ಯ ಭೋಜ್ಯಗಳನ್ನು ನೈವೇದ್ಯ ತೋರಿಸಬೇಕು. ತದನಂತರ ಮೂಲಮಂತ್ರದಿಂದ ನೂರಾಎಂಟು ಆಹುತಿಗಳನ್ನು ನೀಡಬೇಕು. ಕೊನೆಗೆ ಮಂಗಳಾರತಿ, ತಾಂಬೂಲ ಸಮರ್ಪಣಮಾಡಿ, ಪ್ರದಕ್ಷಿಣ ನಮಸ್ಕಾರಗಳನ್ನು ಹಾಕಬೇಕು. ಹೀಗೆ ಶಾಸ್ತ್ರೋಕ್ತವಾಗಿ ಗೌರೀ ಗಂಗಾಧರರ ಪೂಜೆಯನ್ನು ಮಾಡಿ ಬ್ರಾಹ್ಮಣ ದಂಪತಿಗಳ ಭೋಜನ ಮಾಡಿಸಬೇಕು. ಅನಂತರ ಅವರಿಗೆ ದಾನ ದಕ್ಷಿಣೆಗಳನ್ನು ನೀಡಬೇಕು. ಇದೇ ರೀತಿಯಾಗಿ ಸಾಯಂಕಾಲದಲ್ಲಿಯೂ ಶಿವಪಾರ್ವತಿಯರ ಪೂಜೆಮಾಡಿ, ಬ್ರಾಹ್ಮಣರ ಅನುಮತಿ ಪಡೆದು ರಾತ್ರಿ ಮೌನದಿಂದ ಹಾಲಿನಲ್ಲಿ ಸಿದ್ಧಪಡಿಸಿದ ಹವಿಷ್ಯ ಪದಾರ್ಥಗಳನ್ನು ಭೋಜನಮಾಡಬೇಕು. ಹೀಗೆ ಸಮಗ್ರ ಒಂದು ವರ್ಷದವರೆಗೆ ಈ ವ್ರತವನ್ನು ಪಾಲನಮಾಡಬೇಕು. ವರ್ಷ ಮುಗಿದ ಬಳಿಕ ಇದರ ಉದ್ಯಾಪನೆಯನ್ನು ಆಚರಿಸಬೇಕು. ಶತರುದ್ರ ಪಾರಾಯಣಮಾಡಿ, ಆ ಎರಡೂ ಪ್ರತಿಮೆಗಳಿಗೆ ನೀರಿನಿಂದ ಸ್ನಾನಮಾಡಿಸಬೇಕು. ಆಗ ಮೋಕ್ತ ಮಂತ್ರಗಳಿಂದ ಆ ಸತೀ ಶಂಕರರನ್ನು ಭಕ್ತಿಯಿಂದ ಪೂಜಿಸಬೇಕು. ಕೊನೆಯಲ್ಲಿ ವಸ್ತ್ರ, ಸುವರ್ಣ, ಪ್ರತಿಮೆ ಸಹಿತವಾಗಿ ಕಲಶವನ್ನು ಸದಾಚಾರಿಯಾದ ಆಚಾರ್ಯನಿಗೆ ದಾನ ಕೊಡಬೇಕು. ಅವರಿಗೆ ಹಸು, ಬಂಗಾರ, ಬಟ್ಟೆ ಮುಂತಾದವುಗಳನ್ನು ಕೊಟ್ಟು ಭೋಜನ ಮಾಡಿಸಿ ದಕ್ಷಿಣೆಕೊಟ್ಟು ಅವರ ಅಪ್ಪಣೆ ಪಡೆದುಕೊಂಡು, ತನ್ನ ಬಂಧು ಇಷ್ಟಮಿತ್ರರೊಂದಿಗೆ ತಾನೂ ಭೋಜನ ಮಾಡಬೇಕು. ಈ ವ್ರತದ ಆಚರಣೆಯಿಂದ ಮಾನವನ ಹಿಂದಿನ ಇಪ್ಪತ್ತೊಂದು ಕುಲಗಳು ಉದ್ಧಾರವನ್ನು ಹೊಂದುವವು ಇದನ್ನು ಆಚರಿಸಿದವರು ಇಂದ್ರಾದಿಲೋಕಪಾಲಕರ ದಿವ್ಯಲೋಕಗಳಲ್ಲಿ ರಮರಮಾಣರಾಗಿ, ಅಂತ್ಯ ಕಾಲದಲ್ಲಿ ಶಿವಸಾಯುಜ್ಯ ಶಿವನನ್ನು ಹೊಂದುತ್ತಾರೆ. ನಾನು ಹೇಳಿದ ಈ ಮಹಾವ್ರತವನ್ನು ನೀನು ಭಕ್ತಿಯಿಂದ ಅನುಷ್ಠಾನಮಾಡು. ಇದರಿಂದ ನಿನ್ನ ಎಲ್ಲ ಮನೋರಥಗಳು ಪೂರ್ಣವಾಗುತ್ತವೆ.

ಮುನೀಶ್ವರರಾದ ನೈಧ್ರುವರ ಈ ಆದೇಶವನ್ನು ಮತ್ತು ಸಂದೇಶವನ್ನು ಉಪದೇಶವನ್ನು ಪಡೆದ ಬಳಿಕ, ಶಾರದೆಯು ವಿಶ್ವಾಸದಿಂದ ಅವರ ಆಜ್ಞೆಯನ್ನು ಗ್ರಹಣಮಾಡಿದಳು. ಅನಂತರ ಅವನ ತಾಯಿ ತಂದೆ ಅಣ್ಣತಂಗಿಯರು ಹೊರಗಿನಿಂದ ಮನೆಗೆ ಬಂದರು. ಮುನಿಗಳು ಭೋಜನಮಾಡಿ ಸುಖಾಸಿಕೆಯಲ್ಲಿ ಕುಳಿತದ್ದನು ಎಲ್ಲರೂ

ನೋಡಿದರು. ಅವರೆಲ್ಲರೂ ಬಂದು ಆ ಮಹಾತ್ಮರ ಚರಣಗಳಿಗೆ ನಮಿಸಿ ಪೂಜೆಗೈಯ್ದರು. "ಸ್ವಾಧೀ ಶಾರದೆಯು ಆ ಮುನಿಶ್ರೇಷ್ಠರ ಪೂಜೆಯನ್ನು ಮಾಡಿ ಅವರಿಂದ ಅನುಗ್ರಹ ಪೂರ್ವಕವಾಗಿ ವ್ರತದ ಉಪದೇಶವನ್ನು ಪಡೆದಿದ್ದಾಳೆ." ಎಂಬುದನ್ನು ಕೇಳಿ ಅವರೆಲ್ಲರಿಗೂ ಬಹಳ ಹಿಗ್ಗಾಯಿತು. ಅವರೆಲ್ಲರೂ ಕೈ ಜೋಡಿಸಿ ಹೇಳಿದರು- "ಮಹಾ ಮುನಿಗಳೇ ಇಂದು ನಿಮ್ಮ ಆಗಮನದಿಂದ ಎಲ್ಲ ಜನರೂ ಧನ್ಯರಾಗಿದ್ದಾರೆ ನಮ್ಮ ಕುಲವು ಪವಿತ್ರವಾಗಿದೆ. ನೀವು ನಮ್ಮ ಮನೆಯ ಹತ್ತಿರವೇ ವಾಸಮಾಡಿರಿ. ಇಲ್ಲಿ ಸ್ನಾನ ಪೂಜೆಗಳಿಗೆ ಸಕಲ ಸೌಕರ್ಯವೂ ಇರುತ್ತದೆ. ಇದು ಸ್ನಾನ ಪೂಜೆ ನಿತ್ಯಾಹ್ನಿಕಗಳಿಗೆ ಬಹಳ ಉಪಯುಕ್ತವಾಗಿರುತ್ತದೆ. ಆದ್ದರಿಂದ ತಾವು ಇಲ್ಲಿಯೇ ಇರಬೇಕು." ಹೀಗೆ ಪ್ರಾರ್ಥನೆಯನ್ನು ಮಾಡಿದ ಬಳಿಕ ಆ ಮುನಿಶ್ರೇಷ್ಠರು ಹಾಗೆಯೇ ಆಗಲಿ ಎಂದು ಹೇಳಿ ಆ ಬ್ರಾಹ್ಮಣನು ಉತ್ತಮವಾದ ಮಠದಲ್ಲಿಯೇ ವಾಸಮಾಡಿದರು. ಹೀಗೆ ಆ ಮುನಿಗಳ ಬಳಿಯಲ್ಲಿಯೇ ವ್ರತ ನಿಯಮಗಳನ್ನು ಸರಿಯಾಗಿ ಪಾಲಿಸುತ್ತ ಶಾರದೆಯು ಒಂದು ವರ್ಷವನ್ನು ಪೂರ್ತಿಯಾಗಿ ಕಳೆದಳು. ವರ್ಷಾಂತ್ಯದಲ್ಲಿ ಅವಳ ತಂದೆಯ ಮನೆಯಲ್ಲಿಯೇ ಬ್ರಾಹ್ಮಣ ಭೋಜನ ಪೂರ್ವಕವಾಗಿ ವ್ರತದ ಉದ್ಯಾಪನೆ ಮಾಡಿದಳು. ಬಂದ ಬ್ರಾಹ್ಮಣರಿಗೆಲ್ಲ ಯಥಾಶಕ್ತಿ ದಕ್ಷಿಣೆಕೊಟ್ಟು ನಮಸ್ಕರಿಸಿ ಬೀಳ್ಕೊಟ್ಟಳು. ಶಾರದೆಯು ಆ ದಿನವೂ ಪೂರ್ಣ ಉಪವಾಸಮಾಡಿ ನೈಧ್ರುವರ ಉಪದೇಶಿಸಿದ ಮಂತ್ರಗಳನ್ನು ಜಪಮಾಡತೊಡಗಿದಳು. ಅನಂತರ ಪ್ರದೋಷಕಾಲ ಬಂದ ಬಳಿಕ ಮಹಾದೇವರ ಪೂಜೆಯನ್ನು ಮಾಡಿದಳು. ಮನೆಯ ಪಕ್ಕದಲ್ಲಿರುವ ಮಠದಲ್ಲಿ ಭಗವಾನ್ ಶಿವನ ಧ್ಯಾನ ಮಾಡುತ್ತ ಆ ಶಾರದೆಯು ಶಂಕರನ ಸಮೀಪದಲ್ಲಿಯೇ ಎಚ್ಚರ ಕುಳಿತಳು. ಶಾರದೆಯ ಭಕ್ತಿ, ಮುನಿಯ ತಪಸ್ಸುಗಳಿಂದ ಪ್ರೀತಳಾಗಿ ಪಾರ್ವತೀದೇವಿಯು ಅವಳ ಮುಂದೆ ಪ್ರಕಟಳಾದಳು.

ಮಹಾದೇವಿಯು ಪ್ರಕಟಳಾದ ಕೂಡಲೇ ಆ ಕುರುಡು ಮುನಿಗೆ ಎರಡೂ ಕಣ್ಣು ಬಂದವು. ತಮ್ಮ ಎದುರು ಪ್ರಕಟಳಾದ ಜಗನ್ಮಾತೆಯನ್ನು ಕಣ್ತುಂಬ ನೋಡಿ, ದರ್ಶನ ಮಾಡಿಕೊಂಡು ಆ ಮಹಾಮುನಿ ಹಾಗೂ ಈ ಬ್ರಾಹ್ಮಣ ಕನ್ಯೆ ಇಬ್ಬರೂ ತಾಯಿಯ ಅಡಿದಾವರೆಗಳ ಮೇಲೆ ಉರುಳಿದರು ಅವರಿಬ್ಬರನ್ನು ಎಬ್ಬಿಸಿ ಪಾರ್ವತೀದೇವಿಯು ಅತ್ಯಂತ ಪ್ರೇಮದಿಂದ ಹೇಳಿದಳು- "ನಿಮ್ಮಿಬ್ಬರ ಭಕ್ತಿ ವಿಶ್ವಾಸ ಹಾಗೂ ನಿರಂತರ ಆರಾಧನೆಗಳಿಂದ ನಾನು ಪ್ರೀತಿ ಪ್ರಸನ್ನಳಾಗಿದ್ದೇನೆ. ಈಗ ಹೇಳಿರಿ ನಿಮಗೆ ಏನು ಬೇಕು? ನಿಮ್ಮಿಬ್ಬರಿಗೂ ನಾನು ಯಾವ ವರವನ್ನು ಕೊಡಲಿ? ಬಯಸಿದ್ದನ್ನು ಕೇಳಿರಿ.

**ನೈಧ್ರುವಮುನಿ:-** ಜಗದಂಬೇ, ಒಂದು ವರ್ಷಕಾಲ, ನಿನ್ನನ್ನು ಸೇವೆಮಾಡಿದ ಶಾರದಾ ಎಂಬ ಕನ್ಯಾಮಣಿಯು ದುರ್ದೈವದಿಂದ ವಿಧವೆಯಾಗಿದ್ದಾಳೆ. ನಾನು ಮೊದಲೇ ಕುರುಡ. ನನಗೆ ಏನೂ ಕಾಣುವುದಿಲ್ಲ. ನಾನು ನೋಡದೆ ವಿಚಾರ ಮಾಡದೇ ಇವಳಿಗೆ ಆಶೀರ್ವಾದ ಮಾಡಿಬಿಟ್ಟೆ. "ನೀನು ನಿನ್ನ ಪತಿಯೊಡನೆ ಬಹುಕಾಲ ಸುಖವಿಹಾರ ಮಾಡಿ ಉತ್ತಮ ಪುತ್ರನನ್ನು ಪಡೆ ಎಂದು" ತಾಯೀ, ನಾನು ತಿಳಿಯದೇ ಆಡಿದ ಈ ಮಾತನ್ನು ಹಾಗೂ ಈ ಕನ್ಯಾಮಣಿಗೆ ನೀಡಿದ ಆಶೀರ್ವಚನವನ್ನು ಸತ್ಯ ಮಾಡುವುದು ನಿನ್ನ ಹೊಣೆ. ಇದಕ್ಕಾಗಿ ನಿನ್ನನ್ನು ಮತ್ತೆ ಮತ್ತೆ ನಮಿಸಿ ಬೇಡಿಕೊಳ್ಳುತ್ತೇನೆ.

**ಪಾರ್ವತೀ:-** ಬ್ರಹ್ಮನ್! ಈ ಶಾರದೆಯು ಪೂರ್ವಜನ್ಮದಲ್ಲಿ ಓರ್ವ ದ್ರಾವಿಡ ಬ್ರಾಹ್ಮಣನ ಎರಡನೆಯ ಹೆಂಡತಿ ಆಗಿದ್ದಳು. ಆಗ ಇವಳ ಹೆಸರು ಭಾಮಿನಿ ಸೌಂದರ್ಯದಲ್ಲಿ ಅವಳೊಂದು ಜೀವಂತ ಸೌದಾಮಿನಿ. ಕಾಮನ ಕಾಮಿನಿಯಾದ ರತಿಗಿಂತ

ಕಮನೀಯವಾಗಿತ್ತು ಇವಳ ಕಾಯ ಕಾಂತಿ. ಈ ಹೊಸ ಹೆಂಡತಿಯ ರಸ ರೂಪವನ್ನು ಕಂಡು ಮರುಳಾಗಿ ಹೋಗಿದ್ದ ಆ ಬ್ರಾಹ್ಮಣ. ಈ ಭಾಮಿನಿಯು ತನ್ನ ಮಾತಿನ ಮಾಧುರಿಯಿಂದಲೂ, ಸೌಂದರ್ಯದ ಆಕರ್ಷಣೆಯಿಂದಲೂ ಮೊದಲೇ ಮುಗ್ಧನಾದ ಪತಿಯನ್ನು ಇನ್ನೂ ಹಲವಾರು ಕಪಟಗಳಿಂದ ತನ್ನ ವಶದಲ್ಲಿ ಇರಿಸಿಕೊಂಡಿದ್ದಳು. ಈ ದ್ವಿತೀಯ ಪತ್ನಿಯ ಹಾವ ಭಾವ ವಿಹಾರ ವಿಭ್ರಮಗಳಿಂದ ಹಾಗೂ ಅವಳ ವಶೀಕರಣ ವಿದ್ಯೆಯಿಂದ ಮೋಹಗ್ರಸ್ತನಾದ ಆ ಬ್ರಾಹ್ಮಣನು ತನ್ನ ಹಿರಿಯ ಹೆಂಡತಿಯ ಬಳಿಗೆ ಒಮ್ಮೆಯೂ ಹೋಗಲಿಲ್ಲ. ಪತಿಯ ದರ್ಶನವನ್ನು ಕಾಣದೇ ಆ ಸಾಧ್ವೀಮಣಿಯು ಗಂಡನ ವಿರಹ ವೇದನೆಯಿಂದ ದಗ್ಧಮುಗ್ಧಳಾಗಿ ಅನುದಿನವೂ ಕಣ್ಣೀರಿನ ಕೋಡಿ ಹರಿಸುತ್ತಿದ್ದಳು. ಪತಿಸಮಾಗಮದಿಂದ ವಂಚಿತಳಾದ ಅವಳಿಗೆ ಮಕ್ಕಳೇ ಆಗಲಿಲ್ಲ. ಆದ್ದರಿಂದ ಹಾಗೂ ಪತಿಯ ಉದಾಸೀನತೆಯಿಂದ ಮನದಲ್ಲಿಯೇ ಮರಗಿ, ಸೊರಗಿ ಆ ಪರಮಪತಿವ್ರತೆಯಾದ ಅವನ ಪ್ರಥಮ ಪತ್ನಿಯು ಮೃತಳಾದಳು. ಭಾಮಿನಿಯ ಮನೆಯ ಪಕ್ಕದಲ್ಲಿ ಓರ್ವ ಬ್ರಾಹ್ಮಣನು ನೆಲೆಸಿದ್ದ. ಭಾಮಿನಿಯ ರೂಪ ಸೌಂದರ್ಯ ಹಾಗೂ ಬೆಡಗು ಬಿನ್ನಾಣಗಳನ್ನು ಕಂಡು ಆ ತರುಣ ಬ್ರಾಹ್ಮಣ ಮರುಳಾಗಿ ಹೋಗಿದ್ದ. ಭಾಮಿನಿಯು ಮಧುರ ಮಾತುಗಳಿಂದ ಆ ಯುವಕನ ಮನಸನ್ನು ಸೂರೆಗೂಡು. ಅವನಲ್ಲಿದ್ದ ಐಶ್ವರ್ಯವನ್ನೆಲ್ಲ ಕಸಿದು ಕಿತ್ತುಕೊಂಡು ಅವನನ್ನು ಅಲ್ಲಿಂದ ಓಡಿಸಿ ಬಿಟ್ಟಳು. ಆ ಬ್ರಾಹ್ಮಣ ಯುವಕ ಈ ಹೆಣ್ಣಿನ ಮೋಹಕ್ಕೆ ಬಿದ್ದು ಕೈಯಲ್ಲಿನ ಹಣವನ್ನು ಕೂಡ ಕಳೆದುಕೊಂಡು ಭಿಕ್ಷೆ ಬೇಡಿ ಹೊಟ್ಟೆ ತುಂಬಿಕೊಳ್ಳುತ್ತ ಭಾಮಿನಿಯ ಚಿಂತೆಯಲ್ಲಿಯೇ ಒಂದು ದಿನ ದುರಂತ ಮರಣವನ್ನಪ್ಪಿದ.

ಈ ಭಾಮಿನಿಯು ಮಾಟಮದ್ದುಗಳಿಂದ ಪತಿಯನ್ನು ವಶೀಕರಣ ಮಾಡಿಕೊಂಡು, ಅವನ ಹಿರಿಯ ಹೆಂಡತಿಯನ್ನು ಮನೆ ಬಿಟ್ಟು ಹೊರಗೆ ಹಾಕಿಸಿ, ನೆರೆಮನೆಯ ಬ್ರಾಹ್ಮಣ ಯುವಕನ ಸಂಪತ್ತನೆಲ್ಲ ದೋಚಿಕೊಂಡು, ಅವರಿಬ್ಬರ ಮರಣಕ್ಕೆ ಕಾರಣಳಾಗಿದ್ದರಿಂದ ಈ ಜನ್ಮದಲ್ಲಿಶಾರದಾ ಎಂಬ ಹೆಸರಿನಿಂದ ವಿಧವೆಯಾಗಿ ಹುಟ್ಟಿದ್ದಾಳೆ. ಯಾವ ಸ್ತ್ರೀಯು ಈ ಪ್ರಪಂಚದಲ್ಲಿ ಗಂಡ ಹೆಂಡದಿರನ್ನು ಆಗಲಿಸುವಳೋ ಅಥವಾ ಪತಿಪತ್ನಿಯರ ಪ್ರೀತಿ ಸಂಬಂಧವನ್ನು ಕೆಡಿಸಿ, ಮನಸ್ತಾಪವನ್ನುಂಟುಮಾಡಿ, ಅವರಿಬ್ಬರೂ ನಿರಂತರ ಬೇರೆ ಬೇರೆಯಾಗಿರುವಂತೆ ಮಾಡುವಳೋ, ಅವಳು ಇಪ್ಪತ್ತೊಂದು ಜನ್ಮ ದಾರಿದ್ರ್ಯವನ್ನೂ, ವೈಧವ್ಯವನ್ನೂ ಅನುಭವಿಸಬೇಕಾಗುವುದು. ಕಳೆದ ಜನ್ಮದಲ್ಲಿ ಭಾಮಿನಿಯ ರೂಪ ಸೌಂದರ್ಯದಿಂದ ಮುಗ್ಧನಾಗಿ ಅವಳಿಗೆ ತನ್ನ ಸರ್ವಸ್ವವನ್ನೂ ಅರ್ಪಿಸಿ, ಅವಳ ಚಿಂತೆ ಯಲ್ಲಿಯೇ ಮರಣ ಹೊಂದಿದ ಆ ನೆರೆಮನೆಯ ಬ್ರಾಹ್ಮಣನು ಈ ಜನ್ಮದಲ್ಲಿ ಇವಳ ಪತಿಯಾಗಿ ಕೆಲವೇ ದಿನಗಳಲ್ಲಿ ಮೃತ್ಯುವಶನಾಗಿದ್ದಾನೆ. ಪೂರ್ವಜನ್ಮದಲ್ಲಿ ಇವಳ ಪತಿಯಾಗಿ ಇವಳ ವಶೀಕರಣ ವಿದ್ಯೆಯಿಂದ ಮುಗ್ಧನಾಗಿ. ಇವಳ ಅನುಸರಣೆ ಮಾಡಿದ ಪತಿಯು ಈಗ ಪಾಂಡ್ಯದೇಶದಲ್ಲಿ ಶ್ರೇಷ್ಠ ಬ್ರಾಹ್ಮಣನಾಗಿ ಹುಟ್ಟಿದ್ದಾನೆ. ಅವನ ಬಳಿಯಲ್ಲಿ ಬೇಕಾದಷ್ಟು ಐಶ್ವರ್ಯವಿದೆ. ಸುಖಭೋಗಸಾಮಗ್ರಿಗಳೂ ಇವೆ. ಅವನ ಸ್ವಪ್ನಕಾಲೀನ ಸುದರ್ಶನ, ಸಮಾಗಮ, ಸಂಭಾಷಣ ಸಹವಾಸಗಳಿಂದಲೇ ಇವಳಿಗೆ ಈ ಜನ್ಮದಲ್ಲಿ ತೃಪ್ತಿ ಹಾಗೂ ಪುತ್ರಪ್ರಾಪ್ತಿ. ಕಳೆದ ಜನ್ಮದಲ್ಲಿ ಮಾಡಿದ ಪತಿವ್ರತೆಯ ದ್ರೋಹ ಹಾಗೂ ಪತಿ ದ್ರೋಹಗಳಿಂದ ಇವಳಿಗೆ ಈ ಜನ್ಮದಲ್ಲಿ ಜಾಗ್ರತ ಅವಸ್ಥೆಯಲ್ಲಿ ಪತಿಯೊಂದಿಗೆ ಮಿಲನವು ಇರುವುದಿಲ್ಲ. ಆದರೆ ಈ ಜನ್ಮದಲ್ಲಿ ಮಾಡಿದ ಈ ಉಮಾಮಹೇಶ್ವರ ವ್ರತದ ಪ್ರಭಾವದಿಂದ. ಇವಳಿಗೆ ಸ್ವಪ್ನಕಾಲಿಕವಾದ ಪತಿಸಮಾಗಮದಿಂದ ಪರ್ಯಾಪ್ತವಾದ ಆನಂದ ಪ್ರಾಪ್ತಿ ಹಾಗೂ ಪುತ್ರ

ಲಾಭ ಎರಡೂ ನನ್ನ ಅನುಗ್ರಹದಿಂದ ದೊರೆಯುವವು. ಸ್ವಪ್ನಾವಸ್ಥೆಯಲ್ಲಿ ನಡೆಯುವ ಪತಿಸಮಾಗಮದಿಂದಲೇ ಇವಳಿಗೆ ವೇದವೇದಾಂತ ಪಾರಂಗತನಾದ ಪಂಡಿತ ಪುತ್ರನು ಉತ್ಪನ್ನನಾಗುವನು. ಆ ಬ್ರಾಹ್ಮಣನು ಸ್ವಪ್ನ ಸಹವಾಸ ಜನ್ಯನಾದ ತನ್ನ ಪುತ್ರನ ಯೋಗಕ್ಷೇಮವನ್ನು ನೋಡಿಕೊಳ್ಳುವನು. ಮುನೀಶ್ವರ, ಇವಳು ಈ ಜನ್ಮದಲ್ಲಿ ಭಕ್ತಿಯಿಂದ ಮಾಡಿದ ಈ ವ್ರತದಿಂದ ನಾನು ಪ್ರಕಟಳಾಗಿ ಇವಳಿಗೆ ಆಶೀರ್ವಾದ ಮಾಡಿದ್ದೇನೆ.

''ವತ್ಸೇ ಶಾರದೆ! ಈಗ ನಾನು ನಿನ್ನ ಕಲ್ಯಾಣಕ್ಕಾಗಿ ಹೇಳುವ ಮಾತನ್ನು ಕೇಳು. ನೀನು ನಿನ್ನ ಸ್ವಪ್ನ ದೃಷ್ಟನಾದ ಪತಿಯನ್ನು ಭಕ್ತಿಯಿಂದ ಧ್ಯಾನ ಮಾಡುತ್ತಯಿರು. ಅವನು ಎಂದಾದರೂ ಒಂದು ದಿನ ದೇಶಾಂತರದಲ್ಲಿ ನಿನ್ನ ಕಣ್ಣಿಗೆ ಬೀಳುವನು. ಆಗ ನೀನು ಇವನೇ ನನ್ನ ಜನ್ಮಾಂತರದ ಪತಿ ಎಂದು ಗುರುತಿಸು. ಆ ಬ್ರಾಹ್ಮಣನೂ ನಿನ್ನನ್ನು ಗುರುತಿಸುವನು. ಆಗ ನೀನು ಈ ಸ್ವಪ್ನ ಸಮಾಗಮದಿಂದ ಜನಿಸಿದ ವಿದ್ವಾನ್ ಮಗನನ್ನು ಅವನಿಗೆ ಸಮರ್ಪಿಸು. ಆಗ ನಿಮ್ಮಿಬ್ಬರಲ್ಲಿ ಬಗೆ ಬಗೆಯ ಸರಸಾಲಾಪಗಳು ನಡೆಯುವವು. ನೀನು ಅವನ ಸಾಕ್ಷಾತ್ ದರ್ಶನವಾದ ಬಳಿಕ ಅವನಿಗೆ ನಿನ್ನ ಮಗನನ್ನು ಒಪ್ಪಿಸಿ. ಅವನ ಅಧೀನಳಾಗಿಯೇ ಅವನ ಸೇವೆಯನ್ನು ಮಾಡಿಕೊಂಡರು. ನೀನು ಎಂದಿಗೂ ಆ ಬ್ರಾಹ್ಮಣನ ಶಾರೀರಿಕ ಸಂಗವನ್ನು ಬಯಸತಕ್ಕದ್ದಲ್ಲ. ಕೇವಲ ಸ್ವಪ್ನ ಸಮಾಗಮದಿಂದಲೇ ತೃಪ್ತಳಾಗಿ ಜನ್ಮಾವಧಿ ಅವನ ಸೇವೆ ಮಾಡುತ್ತ ನಿನ್ನ ದೇಹವನ್ನು ಸವೆಯಿಸು. ಮುಂದೆ ಆ ಬ್ರಾಹ್ಮಣನು ಮುಪ್ಪಿನಿಂದ ಮರಣವನ್ನು ಹೊಂದಿದಾಗ ನೀನು ಅವನ ಶವವನ್ನು ತೊಡೆಯ ಮೇಲಿರಿಸಿಕೊಂಡು ಚಿತಾರೋಹಣಮಾಡಿ ಅಗ್ನಿನಾರಾಯಣನಿಗೆ ಆತ್ಮಾರ್ಪಣೆ ಮಾಡು.''

ಹೀಗೆ ಹೇಳಿ ಜಗದಂಬೆಯಾದ ಪಾರ್ವತಿಯು ಅಂತರ್ಧಾನವನ್ನು ಹೊಂದಿದಳು. ಕನ್ಯಾಮಣಿಯಾದ ಶಾರದೆಗೆ ಪಾರ್ವತಿಯ ಈ ಮಾತು ವರದಾನವೆನಿಸಿತು. ರಾತ್ರಿ ಕಳೆದ ಬಳಿಕ ಹೊಸತಾಗಿ ಹೊಸಗಣ್ಣು ಹೊಂದಿದ ಆ ಮುನಿಯು ಶಾರದೆಯ ತಾಯಿ ತಂದೆಗಳಿಗೆ ಎಲ್ಲ ಸಮಾಚಾರವನ್ನು ತಿಳಿಸಿ ಹೇಳಿದ. ಅನಂತರ ಆ ಮುನಿಯು ಅಲ್ಲಿಂದ ಹೊರಟು ಹೋದ.

ಹೀಗೆ ಕೆಲವು ದಿನಗಳು ಕಳೆದ ಬಳಿಕ ಶಾರದೆಗೆ ಪಾರ್ವತಿಯ ಮಾತಿನಂತೆ ಸ್ವಪ್ನದಲ್ಲಿ ಪೂರ್ವಜನ್ಮದ ಪತಿಯ ಸಂದರ್ಶನ, ಸಂಭಾಷಣ, ಸಮಾಗಮ, ಸಹವಾಸ, ಸುಖ ಪ್ರಾಪ್ತವಾಯಿತು. ಪಾರ್ವತೀದೇವಿಯ ವರದಿಂದ ಅವಳು ಗರ್ಭಿಣಿ ಆದಳು. ವಿಧವೆಯಾಗಿಯೂ ಗರ್ಭವತಿ ಆದುದನ್ನು ಕೇಳಿ ಜನರೆಲ್ಲರೂ 'ಜಾರಿಣಿ' ಎಂದು ಜರಿದರು. 'ಕುಲಟೆ' ಎಂದು ನಿಂದಿಸಿದರು. ಅವಳ ಅಲ್ಪಾಯುಷಿಯಾಗಿ ಮರಣ ಹೊಂದಿದ ಈ ಜನ್ಮದ ಪತಿಯ ಸಹೋದರ ಬಂಧುಗಳು ಆ ಘೋರ ಸಮಾಚಾರವನ್ನು ಕೇಳಿ ಶಾರದೆಯ ತಂದೆಯ ಮನೆಗೆ ಬಂದರು. ಊರೊಳಗಿನ ಬಲ್ಲಿದರು, ಗೌರವದ ಗೃಹಸ್ಥರು, ಶಾರದೆಯ ಪತೀಗೃಹದಲ್ಲಿ ನೆರೆದರು. ಗ್ರಾಮದ ಹಿರಿಯ ಜನರೆಲ್ಲರೂ ಕೂಡಿ ಶಾರದೆಯ ಪ್ರಕರಣವನ್ನು ಚರ್ಚಿಸಿದರು. ನಾಚಿಕೆಯಿಂದ ತಲೆ ತಗ್ಗಿಸಿ ಏನನ್ನೂ ಮಾತನಾಡದೇ ನಿಂತುಕೊಂಡ, ಗರ್ಭಿಣಿಯಾದ ಶಾರದೆಯನ್ನು ಕರೆದು ಎಲ್ಲರೂ ಮನಸೋಕ್ತ ಬೈದರು ನಿಷ್ಠುರ ನುಡಿಯಿಂದ ನಿರ್ಭತ್ಸನೆಗೈದರು. ಅಲ್ಲಿ ಕೂಡಿದ ಸ್ತ್ರೀ ಪುರುಷರೆಲ್ಲರೂ ಅವಳನ್ನು ತೆಗಳಿ ಬಾಯಿಗೆ ಬಂದಂತೆ ಬೈದು ಅಲ್ಲಿಂದ ಎದ್ದು ಹೋದರು.

ಕೆಲವು ಕ್ರೂರ ಗ್ರಾಮವೃದ್ಧರು ಕಡುಕೋಪದಿಂದ ಅರ್ಭಟಿಸಿದರು- ''ಈ ಪಾಪಿ ಹೆಣ್ಣು ಎರಡೂ ಕುಲಗಳಿಗೂ ಘಾತಕಿ. ಇವಳ ತಲೆಯನ್ನು ಮುಂಡನ ಮಾಡಿ ಮೂಗು

ಕೊಯ್ದು, ಕಿವಿ ಹರಿದು, ಗ್ರಾಮ ಬಹಿಷ್ಕಾರ ಹಾಕಿ ಈ ಊರಿನಿಂದ ಹೊರಗೆ ಅಟ್ಟಬೇಕು'' ಆ ಮೂರ್ಖ ಮುದುಕರ ಮಾತು ಸಮ್ಮತವಾಯಿತು ಅಲ್ಲಿ ನೆರೆದ ನರನಾರಿಯರಿಗೆಲ್ಲ. ಆದರಂತೆ ಅವಳಿಗೆ ಶಾಸನಮಾಡಲು ಕೆಲವು ತರುಣರು ಎದ್ದು ನಿಂತರು. ಅಷ್ಟರಲ್ಲಿ ಆಕಾಶವಾಣಿ ಆಯಿತು- ''ಈ ಕನ್ಯೆಯು ಯಾವ ಪಾಪವನ್ನೂ ಮಾಡಿಲ್ಲ. ಅವಳ ಪಾತಿವ್ರತ್ಯ ಭಂಗವೂ ಆಗಿಲ್ಲ. ಇವಳು ಸಾಧ್ವೀಮಣಿ ಇರುತ್ತಾಳೆ. ಪರಮೇಶ್ವರಿಯ ಅನುಗ್ರಹದಿಂದ ಇವಳು ತನ್ನ ನಿಯತ ಪತಿಯೊಂದಿಗೆ ಸ್ವಪ್ನ ಸಮಾಗಮದಿಂದ ಗರ್ಭಧಾರಣೆ ಮಾಡಿದ್ದಾಳೆ. ಪಾರ್ವತಿಯ ಪರಮಭಕ್ತಳಾದ ಇವಳು ಜಾರಣಿಯೂ ಅಲ್ಲ. ಸ್ವೈರಣಿಯೂ ಅಲ್ಲ. ಸದಾಚಾರ ಸಂಪನ್ನಳಾದ ಪತಿವ್ರತಾ ಶಿರೋಮಣಿ ಇವಳಿಗೆ ಕುಲಟೆ, ವ್ಯಭಿಚಾರಿಣಿ ಎಂದೂ ಯಾರಾದರೂ ಜರಿದು ನುಡಿದರೆ ಅವರ ನಾಲಿಗೆ ಈ ಕ್ಷಣದಲ್ಲಿಯೇ ಸೀಳಿ ಹೋಗುವುದು'' ಈ ಪ್ರಕಾರ ಆಕಾಶವಾಣಿಯ ಗರ್ಜನೆಯನ್ನು ಕೇಳಿ ಶಾರದೆಗೂ ಅವಳ ತಾಯಿ ತಂದೆಯರಿಗೂ ಪರಮಾನಂದವಾಯಿತು. ಆದರೆ ಈ ಮಾತನ್ನು ನಂಬದ ಕೆಲವು ಕುಹಕಿಗಳು ಆ ಆಕಾಶವಾಣಿಯು ಶುದ್ಧ ಸುಳ್ಳು. ಈ ಹೆಣ್ಣು ನಿಜವಾಗಿಯೂ ಜಾರಿಣೀ, ಸ್ವೈರಿಣೀ, ಇದರಲ್ಲಿ ಸಂದೇಹವೇ ಇಲ್ಲ. ಹೀಗೆ ನುಡಿದ ತಕ್ಷಣ ಆ ಕುಹಕಿಗಳ ಬಾಯಿ ಬಿದ್ದು ಹೋಯಿತು. ನಾಲಿಗೆ ಸೀಳಿ ಹೋಯಿತು. ಅದನ್ನು ನೋಡಿ ಆ ಊರಿನ ಎಲ್ಲ ಜನರಿಗೂ ಆಕಾಶವಾಣಿಯ ಸತ್ಯತೆಯ ಅರಿವಾಯಿತು. ಅವರೆಲ್ಲರೂ ಶಾರದೆಯ ಪಾರ್ವತೀಭಕ್ತಿಯನ್ನೂ, ಪಾತೀವ್ರತ್ಯವನ್ನೂ ದೇವತಾ ಆರಾಧನೆಯನ್ನೂ ಪ್ರಶಂಶಿಸಿದರು.

ಅನಂತರ ಹಲವಾರು ಊರಿನ ವೃದ್ಧ ಸ್ತ್ರೀಯರು ಏಕಾಂತದಲ್ಲಿ ಶಾರದೆಗೆ ಬಂದು ಅವಳ ಸ್ವಪ್ನ ಸಮಾಗಮದ ಸಮಾಚಾರವನ್ನು ಕೇಳಿದರು. ಆಗ ಶಾರದೆಯು ತಾನು ಆನರ್ತ ದೇಶದ ವೇದರಥ ಬ್ರಾಹ್ಮಣನ ಮಗಳಾಗಿ ಹುಟ್ಟಿ ಹನ್ನೊಂದು ವರ್ಷದವಳಿದ್ದಾಗ ಪದ್ಮನಾಭ ಎಂಬ ಬ್ರಾಹ್ಮಣನಿಂದ ಯಾಚಿತಳಾಗಿ, ಅವನನ್ನು ಮದುವೆಯಾದದ್ದನ್ನೂ, ಪದ್ಮನಾಭನು ತನ್ನ ಅತ್ತೆಯ ಮನೆಯಲ್ಲಿ ಸರ್ಪಕಡಿದು ಮರಣ ಹೊಂದಿದ್ದನ್ನೂ, ಬಾಲ್ಯದಲ್ಲಿಯೇ ವಿಧವೆಯಾಗಿ ತಾನು ಒಂದು ದಿನ ತಮ್ಮ ಮನೆಗೆ ಬಂದ ನೈಧ್ರುವ ಎಂಬ ಕುರುಡು ಮುನಿಗಳಿಗೆ ನಮಸ್ಕರಿಸಿದ್ದನ್ನೂ, ಮತ್ತು ಅವರಿಗೆ ಸ್ನಾನ ಭೋಜನ ಮಾಡಿಸಿ ಸಂತೋಷಪಡಿಸಿದ್ದನ್ನೂ, ಆಗ ಅವರು ಒಳ್ಳೇ ಪತಿ ಹಾಗೂ ಪುತ್ರರನ್ನು ಪಡೆ ಎಂದು ಆಶೀರ್ವಾದ ಮಾಡಿದ್ದನ್ನೂ, ಅವರಿಗೆ ನಿಜಸ್ಥಿತಿ ತಿಳಿದ ಬಳಿಕ ಉಮಾಮಹೇಶ್ವರ ವ್ರತವನ್ನು ತನಗೆ ಮಾಡಹೇಳಿದ್ದನ್ನೂ ಅದರಂತೆ ತಾನು ಆ ವ್ರತವನ್ನು ಆಚರಿಸಿದ್ದರಿಂದ ಪ್ರತ್ಯಕ್ಷಳಾದ ಪಾರ್ವತೀದೇವಿಯಿಂದ ತನಗೆ ತನ್ನ ಜನ್ಮಾಂತರದ ಪತಿಯ ಸ್ವಪ್ನ ಸಮಾಗಮ, ಪುತ್ರಲಾಭಾದಿ ವರಪ್ರದಾನವನ್ನೂ ಅದರಂತೆ ತಾನೀಗ ಗರ್ಭವತೀ ಆದ ಸಮಾಚಾರವನ್ನೂ ಸಾದ್ಯಂತವಾಗಿ ತಿಳಿಸಿ ಹೇಳಿದಳು. ಅದನ್ನು ಕೇಳಿ ಆ ಎಲ್ಲ ಹಿರಿಯ ಮುತ್ತೈದೆಯರು ಉಮಾಮಹೇಶ್ವರ ವ್ರತ ಹಾಗೂ ಪಾರ್ವತೀದೇವಿಯ ಪರಮಾನುಗ್ರಹ ಪ್ರಭಾವವನ್ನು ಪ್ರಶಂಶಿಸುತ್ತ ಶಾರದೆಯನ್ನು ಸತ್ಕರಿಸಿ, ಪ್ರಶಂಶಿಸಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಮುಂದೆ ನವಮಾಸ ತುಂಬಿದ ಬಳಿಕ ಆ ಶಾರದೆಯು ಬಾಲಸೂರ್ಯನಂತೆ ತೇಜಸ್ವಿಯಾದ ಒಂದು ಗಂಡು ಮಗುವಿಗೆ ಜನ್ಮವಿತ್ತಳು. ಬಾಲ್ಯದಲ್ಲಿಯೇ ಆ ಮಗು ಬುದ್ಧಿವಂತ. ಅವನ ಗುರುಗಳು ಆ ಬಾಲಕನಿಗೆ ಐದು ವರ್ಷಕ್ಕೆ ಉಪನಯನ ಮಾಡಿದರು. 'ಶಾರದೇಯ' ಎಂದು ಅವನ ಹೆಸರು. ಆ ಬಾಲಕನು ಎಂಟನೆಯ ವರ್ಷದಲ್ಲಿ ಋಗ್ವೇದ,

ಒಂಭತ್ತನೆಯ ವರ್ಷದಲ್ಲಿ ಯಜುರ್ವೇದ, ಹತ್ತನೆಯ ವರ್ಷದಲ್ಲಿ ಸಾಮವೇದವನ್ನು ಪೂರ್ಣವಾಗಿ ಅಧ್ಯಯನ ಮಾಡಿದನು. ಮುಂದೆ ಒಂದು ದಿನ ಶಿವರಾತ್ರಿ ಬಂದಾಗ ಆ ದೇಶದ ಜನರೆಲ್ಲರೂ ಗೋಕರ್ಣ ಕ್ಷೇತ್ರಕ್ಕೆ ಹೊರಟರು. ಆಗ ಶಾರದೆಯು ಕೂಡ ತನ್ನ ಮಗ ಶಾರದೇಯನೊಂದಿಗೆ ಗೋಕರ್ಣಕ್ಕೆ ಆಗಮಿಸಿದಳು. ಅಲ್ಲಿ ಆಗ ಅವಳಿಗೆ ತಾನು ತನ್ನ ಕನಸಿನಲ್ಲಿ ಪ್ರತಿದಿನವೂ ಕಂಡ ವಿಹರಿಸುತ್ತಲಿರುವ ಪೂರ್ವಜನ್ಮದ ಪತಿ ಪದ್ಮನಾಭನ ಭೇಟಿಯಾಯಿತು. ಕಂಡ ಕೂಡಲೇ ಇಬ್ಬರಿಗೂ ಗುರುತು ಹತ್ತಿತ್ತು. ಇಬ್ಬರಲ್ಲಿಯೂ ಪ್ರೇಮಾಂಕುರವು ಉದಿಸಿತು. ದೂರದಿಂದಲೇ ಒಬ್ಬರನ್ನೊಬ್ಬರು ಪ್ರೇಮಪೂರ್ಣ ದೃಷ್ಟಿಯಿಂದ ನೋಡುತ್ತ ನಿಂತುಕೊಂಡರು. ಆ ಬ್ರಾಹ್ಮಣನಿಗಾದರೂ ತಾನು ಕನಸಿನಲ್ಲಿ ಪ್ರತಿದಿನವೂ ನೋಡಿ, ಕೂಡಿ ರಮಿಸುತ್ತಲಿರುವ ಜನ್ಮಾಂತರದ ಮಡದಿಯನ್ನೂ, ಸ್ವಪ್ನದಲ್ಲಿಯೇ ಅವಳಿಗೆ ತನ್ನಿಂದ ಹುಟ್ಟಿ ಈಗ ಸಾಕ್ಷಾತ್ ಆಗಿ ಬಂದು ಎದುರಿಗೆ ನಿಂತುಕೊಂಡ ತನ್ನ ಪುತ್ರನನ್ನೂ ನೋಡಿ ಅತ್ಯಾಶ್ಚರ್ಯವಾಯಿತು. ಆಗ ಅವನು ತಾನಾಗಿ ಶಾರದೆ ಇದ್ದಲ್ಲಿಗೆ ಬಂದು ಬಾಯಿ ಬಿಟ್ಟು ಕೇಳಿದ- "ಕಲ್ಯಾಣೀ, ನೀನು ಯಾರು? ಯಾರ ಮನೆಯ ಹೆಣ್ಣು ಮಗಳು? ನಿನ್ನ ದೇಶ ಯಾವುದು? ಈ ಮಗು ಯಾರದು? ಅವನ ಈ ಪ್ರಶ್ನೆಗಳನ್ನು ಕೇಳಿ ಶಾರದೆಯು ತನಗೆ ವೈಧವ್ಯ ಬಂದಂದಿನಿಂದ ಇಂದಿನವರೆಗೆ ನಡೆದ ಸಮಾಚಾರವನ್ನೆಲ್ಲ ಹೇಳಿದಳು. ಅದನ್ನು ಕೇಳಿ ಆ ಬ್ರಾಹ್ಮಣನು ಮತ್ತೆ ಪ್ರಶ್ನೆ ಮಾಡಿದನು- "ದೇವೀ, ಚಂದ್ರನಂತೆ ಸುಂದರನಾದ ಈ ಮಗನು ಯಾರು? ಇವನನ್ನು ನೀನು ಹೇಗೆ ಗರ್ಭದಲ್ಲಿ ಧಾರಣಮಾಡಿದೆ?

**ಶಾರದಾ:-** ಸ್ವಾಮಿ ಇವನು ನನ್ನ ಮಗ. ಇವನು ಎಲ್ಲ ವಿದ್ಯೆಗಳಲ್ಲಿ ವಿಶಾರದ. ಇವನ ಹೆಸರು ಶಾರದೇಯ.

**ಬ್ರಾಹ್ಮಣ:-** ಶುಭಾಂಗಿ, ನಿನ್ನ ಈ ಜನ್ಮದ ಪತಿಯು ನಿನ್ನನ್ನು ಮದುವೆಯಾದ ಬಳಿಕ ಕೂಡಲೇ ಮರಣ ಹೊಂದಿದ. ನೀನಂತೂ ಮಹಾಪತಿವ್ರತೆ. ಅಂದಬಳಿಕ ನಿನಗೆ ಈ ಪುತ್ರನ ಜನನ ಹೇಗೆ ಆಯಿತು? ಇದರ ಕಾರಣವನ್ನು ಹೇಳು.

ಮುಗುಳುನಗೆಯನ್ನು ತುಟಿಯ ತುದಿಯಲ್ಲಿ ಅರಳಿಸಿ ಮಂದಹಾಸ ಸುಂದರನಾಗಿ ಮಾತನಾಡುತ್ತಿರುವ ಆ ಬ್ರಾಹ್ಮಣನ ಪ್ರಶ್ನೆ ಕೇಳಿ ಶಾರದೆಯು ದಿಟ್ಟತನದಿಂದ ಉತ್ತರಿಸಿದಳು.

**ಶಾರದಾ:-** ಪೂಜ್ಯರೇ, ಬರೀ ಪರಿಹಾಸದಿಂದ ಏನು ಪ್ರಯೋಜನ? ನಾನು ಯಾರು ಎಂಬುದು ನಿಮಗೆ ತಿಳಿದಿದೆ. ನೀವು ಯಾರು ಎಂಬುದು ನಾನು ಕನಸಿನಲ್ಲಿಯೇ ಕಂಡುಕೊಂಡಿದ್ದೇನೆ. ನಮ್ಮಿಬ್ಬರ ಸ್ವಪ್ನಸಂದರ್ಶನಗಳೇ ಪರಸ್ಪರರನ್ನು ಪರಿಚಯ ಮಾಡಿಸಿಕೊಟ್ಟವೆ. ಮಹಾತಾಯಿ ಪಾರ್ವತಿದೇವಿಯ ಹೇಳಿಕೆಯಂತೆ ನಮ್ಮಿಬ್ಬರಿಗೂ ಸ್ವಪ್ನಸಮಾಗಮವಾಗಿ ಈ ಪುತ್ರನು ಜನಿಸಿದ್ದಾನೆ. ಪಾರ್ವತಿಯ ಆ ಆಶೀರ್ವಚನವನ್ನು ಆಕಾಶವಾಣಿಯು ಪುನರುಚ್ಚರಿಸಿ ನನ್ನನ್ನು ಗ್ರಾಮಬಹಿಷ್ಕಾರದಿಂದ ಪಾರುಮಾಡಿತು. ಇದೋ ಈ ನಿಮ್ಮ ಮಗನನ್ನು ನಿಮ್ಮ ಅಡಿದಾವರೆಗಳ ಮೇಲೆ ಹಾಕಿದ್ದೇನೆ. ನನ್ನನ್ನೂ ಈ ಮಗನೊಂದಿಗೆ ಪುರಾತನ ಪತಿಯಾದ ನಿಮಗೆ ಅರ್ಪಿಸಿಕೊಂಡಿದ್ದೇನೆ. ಪಾರ್ವತಿಯ ಆದೇಶದಂತೆ ಈ ಜನ್ಮದಲ್ಲಿ ನಮ್ಮ ಶಾರೀರಿಕ ಮಿಲನ ಸ್ವಪ್ನಗಳಿಗೆ ಮಾತ್ರ ಸೀಮಿತವಾಗಿರಲಿ. ಉಳಿದೆಲ್ಲ ವಿಧವಾದ ನಿಮ್ಮ ಸೇವೆಗೆ ನಾನು ಸದಾ ಸಿದ್ಧಳು. ನೀವು ಕಾಲಿನಿಂದ ತೋರಿದ್ದನ್ನು ತಲೆಯ ಮೇಲೆ ಹೊತ್ತು ನಡೆಸಲು ಈ ನಿಮ್ಮ ದಾಸಿ ಒಂಟಿಗಾಲ ಮೇಲೆ ಯಾವಾಗಲೂ

ಉತ್ಕಂಠಿತಳು. ನಿಮ್ಮ ಸೇವೆಯ ಭಾಗ್ಯವನ್ನು ಕರುಣಿಸಿ ಈ ನಿಮ್ಮ ಪಾದಕಿಂಕರಿಯನ್ನು ಅನುಗ್ರಹಿಸಿರಿ. ಪಾರ್ವತಿಯ ವಚನವನ್ನು ಸತ್ಯಮಾಡಿರಿ.

ಆಗ ಆ ಬ್ರಾಹ್ಮಣನು ತಾನು ಸ್ವಪ್ನದಲ್ಲಿ ಕಂಡ ಕನಸಿನ ಕೆಳದಿಯನ್ನು ಹಾಗೂ ತನ್ನ ಸ್ವಪ್ನ ಸುಂದರ ಸುಕುಮಾರನನ್ನು ಕಂಡು ಆನಂದಭರಿತನಾಗಿ ತನ್ನ ಮನೆಗೆ ಕರೆದುಕೊಂಡು ಹೋದ. ಶಾರದೆಯು ತನ್ನ ತಾಯಿ ತಂದೆಗಳಿಗೆ ನೈಧ್ರುವ ಮುನಿಗಳ ಆದೇಶದಂತೆ ತಾನು ಗೈದ ಉಮಾಮಹೇಶ್ವರ ವ್ರತದಿಂದ ತುಷ್ಟಳಾಗಿ ಪಾರ್ವತಿದೇವಿಯು ಪ್ರತ್ಯಕ್ಷಳಾಗಿ ಕರುಣಿಸಿದ ವರದ ವೃತ್ತಾಂತವನ್ನೂ, ಅದರಂತೆ ತನಗೆ ಜನ್ಮಾಂತರದ ಪತಿಯಾದ ಪದ್ಮನಾಭ ಬ್ರಾಹ್ಮಣನಿಂದ ಸ್ವಪ್ನ ಸಮಾಗಮವನ್ನೂ, ಅದರಿಂದ ಶಾರದೇಯ ಎಂಬ ಪುತ್ರನ ಜನನವನ್ನೂ ತಿಳಿಸಿ ಹೇಳಿ ಅವರ ಸಮ್ಮತಿ ಪಡೆದು ಪತಿಯ ಮನೆಗೆ ಶಾರದೇಯನೊಂದಿಗೆ ಹೋಗಿ ಅಲ್ಲಿಯೇ ಇರತೊಡಗಿದಳು. ಶಾರದೆಯ ಹೇಳಿಕೆಗೆ ಸಂವಾದಿಯಾದ ತನ್ನ ಸ್ವಂತ ಸ್ವಪ್ನ ಸಮಾಗಮದ ಅನುಭವದಿಂದ ಇವರೇ ತನ್ನ ಮಡದಿ ಮಕ್ಕಳು ಎಂದು ನಿರ್ಧರಿಸಿ ಆ ವಿಪ್ರನು ಅವರನ್ನು ತನ್ನ ಮನೆಗೆ ಕರೆದುಕೊಂಡು ಬಂದ ನಂತರ ಶಾರದೆಯು ಹಲವಾರು ವರ್ಷಗಳವರೆಗೆ ಆ ಬ್ರಾಹ್ಮಣನ ಮನೆಯಲ್ಲಿ ಪ್ರಿಯ ಪತ್ನಿಯಂತೆ ಇದ್ದು ದೇಹ ಸಂಬಂಧವನ್ನು ಹೊಂದದೇ ಅನನ್ಯಭಕ್ತಿಯಿಂದ ಪತಿಯ ಸೇವೆಗೈದಳು. ಕೆಲವು ವರ್ಷಗಳ ನಂತರ ವಾರ್ಧಕ್ಯದಿಂದ ಆ ಬ್ರಾಹ್ಮಣನು ಮರಣಾಧೀನನಾದನು. ಆಗ ಆ ಸತೀಮಣಿಯು ತನ್ನ ಪತಿಯೊಡನೆ ಚಿತಾರೋಹಣ ಮಾಡಿ, ಸತಿ ಹೋಗಿ, ಅಗ್ನಿಸ್ನಾನ ಗೈದು ಲೋಕ ವಂದ್ಯಳಾದಳು. ಅನಂತರ ಅವರಿಬ್ಬರೂ ದಿವ್ಯ ದಂಪತಿಗಳು ದೇವಲೋಕದ ದಿವ್ಯ ವಿಮಾನದಲ್ಲಿ ಕುಳಿತು ಪರಮೇಶ್ವರನ ಲೋಕಕ್ಕೆ ಪ್ರಯಾಣ ಮಾಡಿದರು.

ಶೌನಕಾದಿ ಮುನಿಗಳೇ, ನೀವೆಲ್ಲರೂ ಭಾಗ್ಯಶಾಲಿಗಳು, ನೀವು ಯಾವಾಗಲೂ ಪರಮೇಶ್ವರನ ದಿವ್ಯವಾದ ಕಥಾಮೃತ ರಸದ ಸೇವನೆಯನ್ನು ಮಾಡುವಿರಿ. ಪ್ರತಿದಿನವೂ ಭಗವತ್ ಸಂಬಂಧಿ ಉತ್ತಮ ಕಥೆಯ ಶ್ರವಣ ಮಾಡುವುದರಿಂದ ಮನುಷ್ಯನಿಗೆ ಉತ್ತಮ ಗತಿಯು ಪ್ರಾಪ್ತವಾಗುವುದು.

*ಬ್ರಹ್ಮಖಂಡದಲ್ಲಿ ಬ್ರಹ್ಮೋತ್ತರಖಂಡ ಸಮಾಪ್ತ*

—o—

# ಕಾಶೀಖಂಡ

## ಪೂರ್ವಾರ್ಧ

ಅಧ್ಯಾಯ - ೭೫

## ಮೇರುಗಿರಿಯೊಡನೆ ಸ್ಪರ್ಧಿಸಿ ವಿಂಧ್ಯಾಚಲದಿಂದ ಸೂರ್ಯನ ಮಾರ್ಗ ಪ್ರತಿಬಂಧ

**ಭೂಮಿಷ್ಠಾಪಿನಽಯಾತ್ರ ಭೂಸ್ತ್ರಿದಿವತೋಽ ಪುಚ್ಚೈರಧಸ್ಥಾಪಿ ಯಾ**
**ಯಾ ಬದ್ಧಾ ಭುವಿ ಮುಕ್ತಿದಾ ಸ್ಯುರಮೃತಾ ಯಸ್ಯಾಂ ಮೃತಾ ಜಂತವಃ**
**ಯಾ ನಿತ್ಯಂ ತ್ರಿಜಗತ್ ಪವಿತ್ರ ತಟನೀ ತೀರೇ ಸುರೈಃ ಸೇವ್ಯತೇ**
**ಸ್ಯಾ ಕಾಶೀ ತ್ರಿಪುರಾರಿ ರಾಜನಗರೀ ಪಾಯಾದಪಾಯಾಜ್ಜಗತ್**

ಪರಮೇಶ್ವರನ ರಾಜಧಾನಿಯಾದ ಕಾಶೀಪಟ್ಟಣವು ಜಗತ್ತನ್ನೆಲ್ಲ ಅಪಾಯದಿಂದ ರಕ್ಷಿಸಲಿ. ಈ ಕಾಶಿಯು ಭೂಮಿಯಲ್ಲಿದ್ದರೂ ಅದು ಭೂಲೋಕದ ಭಾಗವಲ್ಲ. ಅದು ನೆಲದ ಮೇಲಿದ್ದರೂ ಸ್ವರ್ಗಕ್ಕಿಂತ ಮಿಗಿಲಾಗಿದೆ. ಅದು ಈ ಭೂಲೋಕದ ಸಂಬದ್ಧವಾಗಿದ್ದರೂ ಮುಕ್ತಿಯನ್ನು ಕೊಡುತ್ತದೆ. ಈ ಕಾಶಿಯಲ್ಲಿ ಮರಣ ಹೊಂದಿದ ಪ್ರಾಣಿಗಳು ಅಮೃತರಾಗುತ್ತಾರೆ. ಅರ್ಥಾತ್ ಅಜರಾಮರರಾದ ದೇವತೆಗಳು ಆಗುತ್ತಾರೆ. ಮೂರು ಲೋಕಗಳಲ್ಲಿ ಪವಿತ್ರವಾದ ಗಂಗೆಯ ತಡಿಯಲ್ಲಿ ಇರುವ ಈ ಕಾಶೀಪಟ್ಟಣವನ್ನು ದೇವತೆಗಳು ಕೂಡ ಸೇವಿಸುತ್ತಾರೆ.

**ವೇದವ್ಯಾಸ:-** ಒಂದಾನೊಂದು ಕಾಲದಲ್ಲಿ ನಾರದ ಮಹರ್ಷಿಗಳು ನರ್ಮದೆಯಲ್ಲಿ ಮಿಂದು ಓಂಕಾರೇಶ್ವರನನ್ನು ಪೂಜಿಸಿ ಮುಂದುವರೆದರು. ದಾರಿಯಲ್ಲಿಯೇ ವಿಂಧ್ಯಾದ್ರಿ. ಬಾನುದ್ದ ಬೆಳೆದ ಬೆಟ್ಟ. ನರ್ಮದೆ ತರಲ ತರಂಗಗಳು ಆ ಪರ್ವತದ ಪ್ರತ್ಯಂತ ಪ್ರದೇಶಗಳನ್ನು ತೀಡುತ್ತಲಿವೆ. ಗಗನ ಮಾರ್ಗದಿಂದ ದಾರಿಗುಂಟ ತೇಜೋವಲಯಗಳನ್ನು ನಿರ್ಮಿಸುತ್ತ ಬರುವ ನಾರದರನ್ನು ಕಂಡು ವಿಂಧ್ಯಗಿರಿಯು ಭಕ್ತಿನಮ್ರವಾಗಿ ನಮಿಸಿತು. ವಿಂಧ್ಯಾಚಲವೇ ತಮ್ಮನ್ನು ಸ್ವಾಗತಿಸಲು ಬಂದದ್ದನ್ನು ನೋಡಿ ಪರಮ ಹರ್ಷವಾಯಿತು ನಾರದರಿಗೆ. ತಮ್ಮ ಪಾದೋಪಾಂತ ಪ್ರಣಿತವಾದ ಆ ವಿಂಧ್ಯ ಶೈಲವನ್ನು ತಮ್ಮ ಎರಡೂ ಕೈಯಿಂದ ಎತ್ತಿ ಹಿಡಿದು ಆಶೀರ್ವದಿಸಿ ಪ್ರಸನ್ನ ಚಿತ್ತರಾದ ನಾರದರು. ಆ ಶೈಲರಾಜನು ನೀಡಿದ ಆಸನದ ಮೇಲೆ ಆಸೀನರಾದರು. ಆಗ ಆ ಪರ್ವತ ಪತಿಯು ನಾರದರಿಗೆ ಅರ್ಘ್ಯಪಾದ್ಯಾದಿಗಳನ್ನಿತ್ತು ಸತ್ಕರಿಸಿ ಅವರ ಕಮಲ ಕೋಮಲವಾದ ಎರಡೂ ಪಾದಗಳನ್ನು ಮೆಲ್ಲನೇ ನೀವತೊಡಗಿದನು. ಆ ಪರ್ವತೇಶ್ವರನ ಶ್ರದ್ಧಾಯುಕ್ತವಾದ ಸೌಜನ್ಯ ಪೂರ್ಣವಾದ ಈ ಸೇವೆಯನ್ನುಕಂಡು ನಾರದರು ನಿಡಿದಾದ ಉಸಿರನ್ನು ಬಿಟ್ಟರು. ಮಹಾಮುನಿಯು ನಿಟ್ಟುಸಿರು ಬಿಡುವುದನ್ನುಕಂಡು ಕುತೂಹಲ ಭರಿತನಾದ ಆ ಗಿರಿರಾಜ. ಕೈ ಮುಗಿದು ಕೇಳಿದ ''ಪೂಜ್ಯರೇ, ನೀವು ನಿಟ್ಟುಸಿರು ಬಿಟ್ಟು ಏನೋ ಚಿಂತೆ ಮಾಡುತ್ತಿರುವಂತೆ ತೋರುವುದು. ನಿಮ್ಮ ಚಿಂತೆಗೆ ಕಾರಣವೇನು? ದಯವಿಟ್ಟು ಹೇಳಿರಿ.''

**ನಾರದ:-** ''ಶೈಲ ಸಮ್ರಾಟನೇ, ಪರ್ವತಗಳಲ್ಲಿ ಮೇರು ಪರ್ವತ ಸರ್ವಶ್ರೇಷ್ಠ. ಆದರೆ ಅವನು ನಿನ್ನನ್ನು ಅವಮಾನ ಪಡಿಸುತ್ತಿದ್ದಾನೆ ಇದು ಏಕೆ? ಇದೇ ಮುಖ್ಯ ಕಾರಣ ನನ್ನ ಚಿಂತೆಗೆ. ನಿನಗೆ ಕಲ್ಯಾಣವಾಗಲಿ''. ಹೀಗೆ ನುಡಿದು ಮುಗಿಲು ಮಾರ್ಗದಿಂದ ಮುನ್ನಡೆದರು ಆ ಮಹಾಮುನಿಗಳು.

ಆ ನಾರದ ಮುನಿ ತೆರಳಿದ ಬಳಿಕ ಶುರುವಾಯಿತು. ಈ ಬೆಟ್ಟಕ್ಕೆ ಹೊಟ್ಟೆಯ ಉರಿ. ಕಠಿಣ ಹೃದಯದ ಆ ಕಲ್ಲಿನ ಬೆಟ್ಟದ ಹೃದಯವನ್ನು ಚಿಂತೆಯ ಉರಿ ಸುಡತೊಡಗಿತು. ಏನು ಮಾಡಿದರೂ ಎಂತು ಯೋಚಿಸಿದರೂ ಸಮಾಧಾನವೇ ಇಲ್ಲ ಆ ಶ್ರೀಶೈಲಕ್ಕೆ. ಮನದಲ್ಲಿ ನೊಂದು ಹೃದಯದಲ್ಲಿ ಬೆಂದು ದೇಹದಲ್ಲಿ ಕಂದಿಹೋದ ಆ ವಿಂಧ್ಯಗಿರಿಯು ಚಿಂತಾಚಕ್ರದಲ್ಲಿ ಸಿಲುಕಿ. ತನ್ನ ಮನದಲ್ಲಿಯೇ ಯೋಚಿಸಿತು:-

**ಚಿಂತಾಜ್ವರೋ ಮನುಷ್ಯಾಣಾಂ ಕ್ಷುಧಾಂ ನಿದ್ರಾಂ ಬಲಂ ಹರೇತ್ ।**
**ರೂಪಮುತ್ಸಾಹ ಬುದ್ಧಿಂ ಶ್ರೀ ಜೀವಿತಂ ಚ ನ ಸಂಶಯಃ ॥**

**ಜ್ವರೇ ವ್ಯತೀತೇ ಸಪ್ತಾಹೇ ಜೀರ್ಣಜ್ವರ ಇಹೋಚ್ಯತೇ ।**
**ಅಸೌ ಚಿಂತಾಜ್ವರಸ್ತೀವ್ರಃ ಪ್ರತ್ಯಹಂ ನವತಾಂ ವ್ರಜೇತ್ ॥**

''ಈ ಚಿಂತೆ ಮನುಷ್ಯನಿಗೆ ದೊಡ್ಡ ರೋಗ. ಚಿಂತೆಯೆಂಬುದು ಒಂದು ಜ್ವರವಿದ್ದಂತೆ. ಮನುಷ್ಯರ ಹಸಿವೆಯನ್ನು ನಿದ್ದೆಯನ್ನು ಶಕ್ತಿಯನ್ನು ಅಪಹರಿಸಿ ಬಿಡುತ್ತದೆ. ಈ ಚಿಂತಾರೂಪ ಜ್ವರದಿಂದ ಮಾನವನ ರೂಪ, ಕಾಂತಿ, ಉತ್ಸಾಹ, ಬಲ ಎಲ್ಲವೂ ನಷ್ಟವಾಗುತ್ತವೆ. ಒಮ್ಮೊಮ್ಮೆ ಪ್ರಾಣಕ್ಕೇ ಸಂಚಕಾರವನ್ನು ತರುತ್ತದೆ. ಈ ಚಿಂತೆ ಜ್ವರವು ಆರು ದಿನಗಳ ನಂತರ ಜೀರ್ಣಜ್ವರ ಎನಿಸಿಕೊಳ್ಳುತ್ತದೆ. ಅದರ ವೇಗವು ಕಡಿಮೆಯಾಗುತ್ತದೆ. ಆದರೆ ಈ ಚಿಂತಾಜ್ವರವು ಎಂದೂ ಜೀರ್ಣವಾಗುವುದೇ ಇಲ್ಲ. ದಿನಗಳೆದಂತೆ ಅದು ನಿತ್ಯನೂತನವಾಗುತ್ತ ಹೋಗುತ್ತದೆ. ಉಳಿದ ಜ್ವರಗಳು ಪಥ್ಯ ಔಷಧ ಸೇವನೆಯಿಂದ ದೂರವಾಗುವವು. ಆದರೆ ಈ ಚಿಂತಾಜ್ವರವನ್ನು ಮಾತ್ರ ಯಾವ ಧನ್ವಂತರಿಯೂ ಎಂಥ ಔಷಧದಿಂದಲೂ ಕಡಿಮೆ ಮಾಡಲಾರ. ನನ್ನನ್ನು ಅವಮಾನ ಪಡಿಸುತ್ತಿರುವ ಮೇರು ಗಿರಿಯನ್ನು ನಾನು ಸೋಲಿಸುವ ಬಗೆ ಎಂತು? ಏನು ಮಾಡಲಿ? ಎಲ್ಲಿ ಹೋಗಲಿ? ಮೇರುಗಿರಿಯ ಮದವನ್ನು ಇಳಿಸುವ ಉಪಾಯವನ್ನು ನನಗೆ ಯಾರು ಹೇಳಿಕೊಡುವರು? ನನ್ನ ಅಂತರಂಗದ ಚಿಂತೆಯನ್ನು ದೂರಮಾಡುವ ಪುಣ್ಯಾತ್ಮರು ಯಾರು? ಆ ಪರಮೇಶ್ವರನ ಹೊರತು ಬೇರೆ ಯಾರೂ ನನಗೆ ಗತಿ ಇಲ್ಲ. ಆ ಗೌರೀನಾಥನ ಚರಣಗಳಿಗೇ ಶರಣು ಹೋಗುವೆನು. ಅವನೇ ಈ ವಿಷಯದಲ್ಲಿ ನನಗೆ ಸದ್ಬುದ್ಧಿಯನ್ನು ನೀಡಲಿ. ಗ್ರಹ ನಕ್ಷತ್ರ ತಾರಾಗಣಗಳೊಂದಿಗೆ ಸ್ವಯಂ ಸೂರ್ಯನು ಆ ಮೇರುಪರ್ವತವನ್ನು ಸ್ವಯಂ ಪ್ರದಕ್ಷಿಣೆ ಹಾಕುವನು. ಅದರಿಂದ ಆ ಪರ್ವತದ ಗರ್ವಕ್ಕೆ ಕೋಡು ಮೂಡಿದಂತಾಗಿದೆ. ನೋಡುವಾ''.

ಹೀಗೆ ವಿಚಾರಮಾಡಿ ಆ ಬೆಟ್ಟವು ಭರದಿಂದ ಬೆಳೆಯತೊಡಗಿತು. ಬೆಳೆಯಿತು, ಬೆಳೆಯಿತು, ಬೆಳೆದೇ ಬೆಳೆಯಿತು. ಭೂತಾಕಾರವಾಗಿ ಬೃಹದಾಕಾರವಾಗಿ ಬೆಳೆದು ಸೂರ್ಯನ ಗತಿಗೆ ಪ್ರತಿಬಂಧವಾಗುವಷ್ಟು ಬೆಳೆದು ನಿಂತಿತು. ಉದಯಾಚಲದಿಂದ ಪೃಥ್ವೀ ಪ್ರದಕ್ಷಿಣೆಗೆ ಹೊರಟ ಸೂರ್ಯನ ರಥ ಮುಂದೆ ಹೋಗದೇ ನಿಂತಿತು. ಅವನ ತೇಜಗಳು ತಡೆದು ನಿಂತವು. ರಥದ ಮುಂಭಾಗದಲ್ಲಿ ಕುಳಿತ ಅವನ ಸಾರಥಿ ಅರುಣ ಹಿಂಬದಿಗೆ ಹೊರಳಿ ಭಾನುದೇವಿಗೆ ಬಿನ್ನವಿಸಿಕೊಂಡ:-'' ಭಗವನ್, ಅಭಿಮಾನದಿಂದ ಈ ವಿಂಧ್ಯಾ ಚಲವು ಬಾನುದ್ದ ಬೆಳೆದು ನಿಂತಿದೆ. ಮೇರುಪರ್ವತಕ್ಕೂ ಈ ವಿಂಧ್ಯಗಿರಿಗೂ ಆಗುವುದಿಲ್ಲ. ನೀವು

ಅನುದಿನವೂ ಮೇರುಪರ್ವತದ ಪ್ರದಕ್ಷಿಣೆಯ ಮಾಡುವುದನ್ನು ಸಹಿಸದೇ ಈ ವಿಂಧ್ಯಾದ್ರಿಯು ನೀವು ಮೇರುಶೈಲವನ್ನು ಸುತ್ತುಹಾಕದಂತೆ ಅಡ್ಡ ನಿಂತುಕೊಂಡಿದೆ.'' ತನ್ನ ಸಾರಥಿಯ ಮಾತು ಕೇಳಿ ಅಚ್ಚರಿಯಾಯಿತು ಆದಿತ್ಯದೇವನಿಗೆ. ಬಾನಿನ ದಾರಿಯ ಪ್ರತಿಬದ್ಧವಾಗುವುದೇ? ಗಗನಮಾರ್ಗ ನಿರುದ್ಧವಾದದ್ದು ಅತ್ಯಾಶ್ಚರ್ಯ.

ಇತ್ತ ಜೀವಲೋಕದಲ್ಲಿ ಹಾಹಾಕಾರ. ಭೂತದಲ್ಲಿ ಸೂರ್ಯನಿಲ್ಲದೇ ಯಜ್ಞಯಾಗ ಎಲ್ಲವೂ ಲುಪ್ತ. ಮೂರು ಲೋಕಗಳೆಲ್ಲವೂ ಸ್ತಬ್ಧ. ಸೂರ್ಯ ತಡೆಹಿಡಿದ ಭಾಗದಲ್ಲಿ ಉಷ್ಣಾಂಶದ ಆಧಿಕ್ಯದಿಂದ ಅಸಂಖ್ಯ ಪ್ರಾಣಿಗಳು ಮೃತ್ಯುಗ್ರಸ್ತ. ಇನ್ನೊಂದೆಡೆ ಕತ್ತಲೆಯಿಂದ ಜೀವಿಗಳೆಲ್ಲರೂ ಕುತ್ತಿಸುರು ಬಿಡತೊಡಗಿದರು. ಮಾನವರೆಲ್ಲರೂ ಭಯಭ್ರಾಂತ. ದೇವತೆಗಳೆಲ್ಲರೂ ದುಃಖಾಕ್ರಾಂತ. ಚರಾಚರ ಪ್ರಪಂಚವೇ ಅಪಾಯದ ಅಂಚಿನಲ್ಲಿ. ಸುರಸತ್ತಮರೆಲ್ಲರೂ ಚತುರ್ಮುಖನಿಗೆ ಶರಣು.

**ದೇವತೆಗಳು:-** ''ಬ್ರಹ್ಮನ್, ಈ ಕತ್ತಲೆಯ ವಿಪತ್ತಿನಿಂದ ಜಗತ್ತನ್ನು ಉಳಿಸು. ಇತಿಮಿತಿಯಿಲ್ಲದೇ ಬೆಳೆಯುತ್ತಿರುವ ಈ ಬೆಟ್ಟದ ಬೆಳವಣಿಗೆಯಿಂದ ಸೂರ್ಯನನ್ನು ಮುಕ್ತಮಾಡು. ತಡೆದು ನಿಂತ ಯಜ್ಞಯಾಗಗಳು ನಡೆಯುವಂತೆ ಮಾಡು. ಲೋಕಕ್ಕೆಲ್ಲ ಬೆಳಗಿನ ಭಾಗ್ಯವನ್ನು ಕರುಣಿಸು.''

**ಬ್ರಹ್ಮ:-** ನನಗೆ ಗೊತ್ತು ನಿಮ್ಮ ಈ ಎಲ್ಲ ಆಪತ್ತು. ಇದಕ್ಕೆಲ್ಲ ಒಂದೇ ಉಪಾಯ. ನೀವೆಲ್ಲರೂ ಅಗಸ್ತ್ಯ ಮುನಿಗೆ ಶರಣು ಹೋಗಿರಿ. ಮಿತ್ರಾವರಣರ ಪುತ್ರರಾದ ಆ ಮಹರ್ಷಿಯು ಸರ್ವಸಮರ್ಥ. ಮಹಾತಪಸ್ವಿ, ಅವರು ಈಗ ಕಾಶೀ ಕ್ಷೇತ್ರದಲ್ಲಿ ವಿಶ್ವನಾಥನ ಆರಾಧನೆಯಲ್ಲಿ ನಿರತ. ಅವಿಮುಕ್ತ ಕ್ಷೇತ್ರವಾದ ಕಾಶಿಯಲ್ಲಿ ಪರಶಿವನನ್ನು ಮೆಚ್ಚಿಸಲು ಉಗ್ರತಪೋನುಷ್ಠಾನದಲ್ಲಿ ತಲ್ಲೀನ ಆ ಮುನೀಶ್ವರ. ಅವರಿಗೇ ಶರಣು ಹೋಗಿರಿ. ಅವರನ್ನೇ ಯಾಚಿಸಿರಿ. ನಿಮ್ಮನ್ನು ಈ ಭಯಾಪಾಯದಿಂದ ಪಾರುಮಾಡಲು ಕೊಡಗೂಸಾದ ಆ ಮಹಾಮುನಿ ಒಬ್ಬರೇ ಸಮರ್ಥ.'' ದೇವತೆಗಳಿಗೆಲ್ಲ ಪರಮಮಹರ್ಷ. ಕಾಶೀಕ್ಷೇತ್ರದ ಹೆಸರನ್ನು ಕೇಳಿಯೇ ಅವರ ಮೈ ರೋಮಾಂಚಿತ. ಈ ವಾರಾಣಸಿಯು ಒಂದು ಭೂಕೈಲಾಸ. ಈ ಕಲ್ಯಾಣ ನಗರಿಯನ್ನು ಕಾಣುವ ಭಾಗ್ಯ ತಾನಾಗಿ ಒದಗಿ ಬಂದದ್ದು ಅವರಿಗೆ ಒಂದು ಮಂಗಳ ಪ್ರಸಂಗವೇ ಎನಿಸಿರಬೇಕು. ಅವಿಮುಕ್ತ ಕ್ಷೇತ್ರ ಎಂದು ಪ್ರಸಿದ್ಧವಾದ ಆ ಪುಣ್ಯನಗರಿಯಲ್ಲಿ ನೆಲೆಸಿದ ವಿಶ್ವನಾಥನ ದರ್ಶನ ತಮಗೊಂದು ಭಾಗ್ಯೋದಯದ ಪರ್ವಕಾಲ ಎಂದೇ ಭಾವಿಸಿದರು ಆ ಅಮರಾವತಿಯ ನಾಗರಿಕರು. ಅವರೆಲ್ಲರೂ ಉತ್ಸಾಹದಿಂದ ಸುರಲೋಕದಿಂದ ಕೆಳಗೆ ಇಳಿದರು. ಆನಂದದಿಂದ ಐತಂದರು ಆ ಕಾಶೀಪಟ್ಟಣಕ್ಕೆ.

ಅನೇಕ ದೇವರ್ಷಿಗಳು ಬಂದಿದ್ದರು ಆ ಸುರಶ್ರೇಷ್ಠರನ್ನು ಬೆಂಬಲಿಸಿ, ಮುನಿಗಳೂ ಸುರಪುಂಗವರೂ ಎಲ್ಲರೂ ಕಾಶಿಯ ಮಣಿಕರ್ಣಿಕಾ ತೀರ್ಥದಲ್ಲಿ ಸ್ನಾನ, ಸಂಧ್ಯೆ, ಜಪ, ಹಾಗೂ ವಿಶ್ವನಾಥನ ದರ್ಶನ ಮಾಡಿಕೊಂಡು ಅಗಸ್ತ್ಯಮುನಿ ತಂಗಿದಲ್ಲಿಗೆ ಆಗಮಿಸಿದರು. ಆ ಕುಂಭಸಂಭವಮುನಿಗಳು ತಾವೇ ಸ್ಥಾಪಿಸಿದ ಅಗಸ್ತ್ಯೇಶ್ವರನ ಎದುರು ಹೋಮಕುಂಡವನ್ನು ನಿರ್ಮಿಸಿ ಶತರುದ್ರಿಯ ಸೂಕ್ತದ ಜಪಮಾಡತೊಡಗಿದ್ದರು. ಅವರೆಲ್ಲರೂ ಆ ಮಹಾಮುನಿಗೆ ನಮಸ್ಕರಿಸಿ ಅವರು ತೋರಿದ ಆಸನದ ಮೇಲೆ ಕುಳಿತು ಕೊಂಡರು. ಮುನಿಗಳು ಸ್ವಯಂ ಎದ್ದು ನಿಂತು ಅವರಿಗೆ ಸ್ವಾಗತ ಸತ್ಕಾರ ಮಾಡಿ ಕುಶಲ ಪ್ರಶ್ನೆಯನ್ನು ಕೇಳಿ ಬಂದ ಕಾರಣವೇನು ಎಂದು ವಿಚಾರಿಸಿದರು.

ಆಗ ದೇವತೆಗಳು ತಮ್ಮ ಗುರುಗಳಾದ ಬೃಹಸ್ಪತ್ಯಾಚಾರ್ಯರ ಕಡೆಗೆ ಸಾಭಿಪ್ರಾಯವಾಗಿ ನೋಡಿದರು. ಅವರ ಭಾವವನ್ನು ತಿಳಿದು ಬುದ್ಧಿವಂತರಾದ ಬೃಹಸ್ಪತ್ಯಾಚಾರ್ಯರು ಮೇಘದಂತೆ ಗಂಭೀರ ಧ್ವನಿಯಿಂದ ನುಡಿದರು:- ಮುನಿ ಪುಂಗವರೇ, ನೀವು ಮಹಾತ್ಮರು ನೀವು ಒಂದು ತಪಶ್ಚರ್ಯೆಯ ಸಂಪತ್ತು. ಬ್ರಹ್ಮತೇಜದ ಸೊತ್ತು. ಪುಣ್ಯದ ಶೋಭೆ. ಭೂಲೋಕದ ಭಾಗ್ಯ. ನಿಮ್ಮ ಭಾಗ್ಯ ನಿಮ್ಮ ಧರ್ಮಪತ್ನಿಯಾದ ಈ ಲೋಪಾಮುದ್ರೆ. ಇವಳೊಂದು ಸ್ತ್ರೀ ಕುಲದ ಅಹೋಪುರುಷಿಕೆ. ಸತೀತ್ವದ ಮಂಗಳ ಮುಕುಟಮಣಿ. ನೀವು ತಿರುಳು, ಈ ಮಹಾತಾಯಿ ನಿಮ್ಮ ನೆರಳು, ನೀವು ಪ್ರಣವ. ಲೋಪಾಮುದ್ರೆ ಶ್ರುತಿ. ನೀವು ತಪಸ್ಸು ಇವಳು ಕ್ಷಮೆ, ನೀವು ಫಲ. ಇವಳು ಸತ್ಕ್ರಿಯೆ, ಲೋಪಾಮುದ್ರೆ ಎಂದರೆ ಮೂರ್ತಿವಂತ ಪಾತಿವ್ರತ್ಯ. ಸತೀಧರ್ಮದ ಸಾಕಾರ ರೂಪವೇ ಈ ಪ್ರಮದಾಮಣಿ. ಇವಳ ದಿನಚರಿಯೇ ಉಳಿದ ಪತಿವ್ರತೆಯರಿಗೆ ಆದರ್ಶಸಂಹಿತೆ. ಇವಳಿಗೆ ಆಲಸ್ಯದ ಪರಿಚಯ ಇಲ್ಲ. ಸಿಟ್ಟು ಆಶೆ, ಅಸೂಯೆಗಳನ್ನು ತಿಲಮಾತ್ರವೂ ಅರಿಯದ ಹಸುಳೆ ಈ ಮಹಿಳೆ. ನೀವು ಹೇಳದೇ ಯಾವ ಕಾರ್ಯವನ್ನೂ ಇವಳು ಮಾಡುವುದಿಲ್ಲ. ಆದರೆ ನಿಮ್ಮ ಸೇವೆಯನ್ನು ಎಂದೂ ಹೇಳಿಸಿಕೊಂಡು ಮಾಡುವುದಿಲ್ಲ. ಪತಿಯ ಭೋಜನವಾಗದೇ ಎಂದೂ ಉಣ್ಣುವುದಿಲ್ಲ. ಏನೂ ತಿನ್ನುವುದಿಲ್ಲ. ಅವರ ಭೋಜನೋತ್ತರವೂ ಅತಿಥಿ, ಸೇವಕರು, ಭಿಕ್ಷುಕರು ಹಸುಗಳು ಇವುಗಳಿಗೆ ನೀಡದೇ ತಾನು ಊಟ ಮಾಡುವುದಿಲ್ಲ. ಇವಳು ವ್ರತ ಉಪವಾಸ ನಿಷ್ಠಳಾದರೂ ಪತಿಯ ಆಜ್ಞೆಯಿಲ್ಲದೇ ಯಾವ ಉಪವಾಸವನ್ನೂ ಮಾಡುವುದಿಲ್ಲ. ಯಾವ ವ್ರತವನ್ನೂ ಕೈಗೊಳ್ಳುವುದಿಲ್ಲ. ಗುಂಪುಗೂಡಿ ಮಾಡುವ ಉತ್ಸವ, ತೀರ್ಥಯಾತ್ರೆ, ಮದುವೆ, ಮುಂಜಿವೆ ಮುಂತಾದ ಯಾವ ಮಂಗಳ ಕಾರ್ಯಕ್ಕೂ ಇವಳು ಹೋಗುವುದಿಲ್ಲ. ಪತಿ ನಿಂದಕಳಾದ ನಾರಿಯೊಡನೆ ಎಂದೂ ಮಾತನಾಡುವುದಿಲ್ಲ. ಅರಿಷಿಣ, ಕುಂಕುಮ, ಕಾಡಿಗೆ ಕುಬುಸ, ಮಂಗಳಸೂತ್ರ, ಪತಿಯ ಪಾದೋದಕ ಪಾನ ಮುಂತಾದವುಗಳನ್ನು ಎಂದೂ ಬಿಟ್ಟು ಇರುವುದಿಲ್ಲ. ಪತಿಯು ಊರಲ್ಲಿ ಇದ್ದಾಗ ಕೇಶಾಲಂಕಾರ ಕರ್ಣಾಭರಣ ಮುಂತಾದ ಅಲಂಕಾರಗಳನ್ನು ಧರಿಸದೇ ಇರುವುದಿಲ್ಲ. ಒರಳು, ಒನಿಕೆ, ಬೀಸೇಕಲ್ಲು, ಪೊರಕೆ, ಹೊಸ್ತಿಲು, ಗುಂಡುಕಲ್ಲು, ಮುಂತಾದವುಗಳ ಮೇಲೆ ಎಂದೂ ಕೂಡುವುದಿಲ್ಲ. ತೀರ್ಥಸ್ನಾನ ಮಾಡಬೇಕೆಂದು ಈ ಮಹಾಸತಿಗೆ ಅಪೇಕ್ಷೆಯಾದಾಗ ಪತಿಯ ಪಾದೋದಕವನ್ನು ಇವಳು ತೀರ್ಥ ಎಂದು ಪಾನಮಾಡುವಳು. ಇವಳಿಗೆ ಇವಳ ಪತಿ ಪರಮೇಶ್ವರನಿಗಿಂತ ಮಿಗಿಲು. ಗಂಡ ಇವಳಿಗೆ ಗೋವಿಂದನಿಗಿಂತ ಹೆಚ್ಚು. ಪತಿಯ ಅಪ್ಪಣೆ ಮೀರಿ ವ್ರತ ಉಪವಾಸ ಮಾಡುವ ಮಡದಿಯು ಗಂಡನ ಆಯುಷ್ಯವನ್ನು ನಾಶಮಾಡುತ್ತಾಳೆ. ಸತ್ತ ಬಳಿಕ ನರಕದಲ್ಲಿ ಬೀಳುತ್ತಾಳೆ. ಸ್ತ್ರೀಯರಿಗೆ ಪತಿಯೇ ದೇವರು, ಪತಿಯೇ ಗುರು, ಪತಿಯೇ ತೀರ್ಥ, ಪತಿಯೇ ಧರ್ಮ, ಪತಿಯೇ ವ್ರತ, ಆದುದರಿಂದ ಸ್ತ್ರೀಯರು ಎಲ್ಲ ಪೂಜೆ, ವ್ರತ, ಉಪವಾಸ, ಧರ್ಮಕರ್ಮಗಳನ್ನು ಬಿಟ್ಟು ಪತಿಯ ಪೂಜೆಗಳನ್ನೇ ಮುಖ್ಯವಾಗಿ ಮಾಡಬೇಕು. ನಾವು ಭೂಲೋಕಕ್ಕೆ ಬಂದು ಈ ಕಾಶೀತೀರದ ಗಂಗೆಯಲ್ಲಿ ಮಿಂದು ವಿಶ್ವನಾಥನ ದರ್ಶನ ಮಾಡಿಕೊಂಡು ಬಂದದ್ದರ ಪುಣ್ಯಫಲವೇ ನಿಮ್ಮಂತಹ ಪವಿತ್ರ ದಂಪತಿಗಳ ದರ್ಶನ. ಈ ದೇವತೆಗಳು ತಮ್ಮಲ್ಲಿಗೆ ಆಗಮಿಸಿದ ಕಾರಣ ತಮಗೆ ವಿದಿತವೇ. ನಿಮಿತ್ತ ಮಾತ್ರ ನನ್ನ ಹೇಳಿಕೆ. ಭೂಲೋಕದಲ್ಲಿ ವಿಂಧ್ಯ ಎಂಬ ಬೆಟ್ಟವು ಮೇರು ಗಿರಿಯ ಜೊತೆ ಹಗೆತನವನ್ನು

ಸಾಧಿಸಲು ಮುಗಿಲಿನವರೆಗೆ ನೆಗೆದು ಬೆಳೆದಿದೆ. ಆದ್ದರಿಂದ ಸೂರ್ಯನ ಮಾರ್ಗಕೆ ಅವಿರುದ್ಧ ಅಡ್ಡಿಯಾಗಿದೆ. ಭೂಲೋಕದ ಯಜ್ಞಯಾಗಾದಿ ಕಾರ್ಯಗಳೆಲ್ಲವೂ ಪ್ರತಿಬದ್ಧ. ಇನ್ನೂ ಬೆಳೆಯುತ್ತಲೇ ಇದೆ ಆ ಬೃಹತ್‌ಬೆಟ್ಟ. ಆ ಬೃಹದ್ ಬೆಟ್ಟದ ಎತ್ತರಬಿತ್ತರವನ್ನು ದಯವಿಟ್ಟು ತಾವು ತಡೆಯಬೇಕು .

ದೇವತೆಗಳ ಬಿನ್ನಹವನ್ನು ಬೃಹಸ್ಪತಿಯ ಮುಖಾಂತರ ಕೇಳಿ ತಿಳಿದುಕೊಂಡರು ಪೂಜನೀಯ ಅಗಸ್ತ್ಯರು. ಒಂದು ಕ್ಷಣ ಅವರ ಎರಡೂ ಕಣ್ಣುಗಳು ಅರ್ಧನಿಮೀಲಿತ. ಐದು ನಿಮಿಷಗಳ ಅನಂತರ ಅವರ ತಾವರೆ ಮೊಗ ಉನ್ಮೀಲಿತವಾಗಿ. 'ತಥಾಸ್ತು, ನಿಮ್ಮ ಕಾರ್ಯಮಾಡುವೆ'. ಮುತ್ತಿನಂಥ ಎರಡೇ ಮಾತು. ದೇವತೆಗಳ ಹೃದಯ ಸಂತೃಪ್ತ. ಅಪಾಯದ ಮೊಳಕೆ ಇದ್ದಲ್ಲಿಯೇ ನಾಶವಾಯಿತು. ಸಂತಸದ ಈಜುಗೊಳದಲ್ಲಿ ಹೃದಯ ಮೀನದ ಹಗುರಾದ ಹಾರಾಟ. ಮುನಿಯ ಅಪ್ಪಣೆ ಪಡೆದು ಸುರಮುನಿಗಳು ತೆರಳಿದರು. ಅಗಸ್ತ್ಯರು ಅದನ್ನೇ ಯೋಚಿಸುತ್ತ ಸುದೀರ್ಘ ಧ್ಯಾನಾವಸ್ಥರಾದರು.

## ಕಾಶಿಯಿಂದ ಅಗಸ್ತ್ಯರ ಪ್ರಸ್ಥಾನ, ವಿಂಧ್ಯ ಪರ್ವತಕ್ಕೆ ಆದೇಶ, ಮಹಾಲಕ್ಷ್ಮಿಯ ಸ್ತೋತ್ರ

ದೇವತೆಗಳ ಬಿನ್ನಹವನ್ನು ಮನ್ನಿಸಿ ಕಾಶಿಯಿಂದ ಹೊರಟರು ಅಗಸ್ತ್ಯಮುನಿಗಳು ಲೋಪಾಮುದ್ರೆಯೊಂದಿಗೆ. ಮುಕ್ತಿಕ್ಷೇತ್ರವಾದ ಕಾಶಿಯನ್ನು ಬಿಡಲು ಅವರಿಗೆ ತಿಲಮಾತ್ರವೂ ಇಚ್ಛೆಯಿಲ್ಲ. ಆದರೆ ಏನು ಮಾಡುವುದು. ದೇವತೆಗಳ ಬೇಡಿಕೆಯನ್ನು ಅಲ್ಲಗಳೆಯುವಂತಿಲ್ಲ. ಬಹುಕಾಲ ತಾವು ನೆಲೆನಿಂತು ಭಕ್ತಿಯಿಂದ ಜಪಿಸಿ, ತಪಿಸಿ, ಅರ್ಚಿಸಿ, ಉಪಾಸಿಸಿ, ಆರಾಧಿಸಿದ ಆ ವಿಶ್ವನಾಥ, ಮಂಗಳ ತರಂಗಿಣಿಯಾದ ಗಂಗೆ, ಅಲ್ಲಿಯ ಶಿವಭಕ್ತರು, ಆ ಅವಿಮುಕ್ತ ಕ್ಷೇತ್ರ, ಇದನ್ನೆಲ್ಲ ಬಿಟ್ಟು ಹೊರಡಲು ಅವರಿಗೆ ಬಹಳ ದುಃಖ. ಹೃದಯ ತುಂಬಿ ಬಂದಿತು. ಮರಣಕಾಲದಲ್ಲಿ ಸ್ವಯಂ ಶಂಕರನು ಎಲ್ಲ ಪ್ರಾಣಿಗಳಿಗೂ ಕಿವಿಯಲ್ಲಿ ಶ್ರೀರಾಮ ಎಂಬ ತಾರಕ ಮಂತ್ರವನ್ನು ಉಪದೇಶಿಸಿ ಮುಕ್ತರನ್ನಾಗಿ ಮಾಡುವ ಈ ಕಾಶಿಯ ದಿವ್ಯಧ್ಯಾಸ್ಥಾನವನ್ನು ಬಿಟ್ಟು ಹೇಗೆ ಹೊರಡಲಿ? ಎಂದು ಅವರು ಮನದಲ್ಲಿ ಮಿಡುಕಿತು, ಹೃದಯದಲ್ಲಿ ಹೊಯ್ದಾಡಿ, ನನ್ನನ್ನು ಕಾಶಿಬಿಟ್ಟು ಹೊರಗೆ ಹಾಕುವೆಯಾ? ಎಂದು ಕಾಲ ಭೈರವನ ಎದುರು ನಿಂತು ಅತ್ತು ಕೊನೆಗೆ ಲೋಕಕ್ಷೇಮಕ್ಕಾಗಿ ಮನಸ್ಸನ್ನು ಗಟ್ಟಿಮಾಡಿ ಹೊರಟೇ ಬಿಟ್ಟರು. ಅರೆಕ್ಷಣದಲ್ಲಿ ಮನೋವೇಗದಿಂದ ಅವರು ವಿಂಧ್ಯ ಪರ್ವತ ನೆಲವನ್ನು ಮೆಟ್ಟಿ, ಮುಗಿಲನ್ನು ಮುಟ್ಟಿ, ಗಟ್ಟಿಯಾಗಿ ಸೆಳೆದು ನಿಂತಿರುವ ಸ್ಥಾನಕ್ಕೆ ಬಂದರು. ಪತ್ನೀಸಹಿತರಾಗಿ ತಾನಿದ್ದಲ್ಲಿಗೆ ಆಗಮಿಸಿದ ಈ ಮುನಿಮಾರ್ತಾಂಡರನ್ನು ಕಂಡು ನಡುಗಿ ಹೋದ ವಿಂಧ್ಯಪರ್ವತ. ಅವರ ಕೋಪಕಷಾಯಿತವಾದ ಆರಕ್ತ ದೃಷ್ಟಿಪಾತದಿಂದ ಗಾಬರಿಗೊಂಡು ಭಯದಿಂದ ಚಿಕ್ಕರೂಪವನ್ನು ಸ್ವೀಕರಿಸಿ ಮುನಿಗಳಲ್ಲಿ ಬಿನ್ನವಿಸಿದ.

**ವಿಂಧ್ಯ ಪರ್ವತ:-** ಪೂಜ್ಯರೇ, ನಾನು ನಿಮ್ಮ ಸೇವಕ. ತಮ್ಮ ಅಪ್ಪಣೆಯನ್ನು ನಾನು ತಲೆಯ ಮೇಲೆ ಹೊತ್ತು ನಡೆಸುತ್ತೇನೆ. ತಾವು ದಯವಿಟ್ಟು ನಾನು ನಿಮ್ಮ ಯಾವ ಸೇವೆಯನ್ನು ಮಾಡಬೇಕು ತಿಳಿಸಿರಿ.

**ಅಗಸ್ತ್ಯ:-** ''ವಿಂಧ್ಯ, ನೀನು ನಿಜವಾಗಿಯೂ ಸಜ್ಜನ, ಬುದ್ಧಿವಂತ, ಸತ್ಪುರುಷ. ನಾನು ಒಂದು ಅತ್ಯಾವಶ್ಯಕ ಕಾರಣಕ್ಕಾಗಿ ದಕ್ಷಿಣಕ್ಕೆ ಹೊರಟಿದ್ದೇನೆ. ನಾನು ತಿರುಗಿ ಬರುವವರೆಗೆ ನೀನು ಇದೇ ಲಘುರೂಪದಲ್ಲಿಯ ಚಿಕ್ಕವನಾಗಿ ಇರು. ನಾನು ತಿರುಗಿ ಬರುವವರೆಗೆ ನೀನು ಬೆಳೆಯಕೂಡದು'' ಹೀಗೆ ಹೇಳಿ ಅಗಸ್ತ್ಯರು ಲೋಪಾಮುದ್ರೆಯೊಂದಿಗೆ ದಕ್ಷಿಣಾ ಪಥದಲ್ಲಿ ಹೆಜ್ಜೆ ಇರಿಸಿದರು. ಅವರ ಪುಣ್ಯೋತಮವಾದ ಪಾದರ್ಪಣದಿಂದ ದಕ್ಷಿಣದ ದಂಡಕಾರಣ್ಯದ ಬೆಂಗಾಡು ಎಲ್ಲವೂ ಪುಣ್ಯಾರಣ್ಯವಾಯಿತು. ಈ ದಕ್ಷಿಣದ ದೇಶದ ಅಭ್ಯುದಯಕ್ಕೆ ಅಂದೇ ನಾಂದಿ ಆಯಿತು.

ಅಗಸ್ತ್ಯ ದಂಪತಿಗಳು ಹೊರಟು ಹೋದ ಬಳಿಕ ವಿಂಧ್ಯ ಶೈಲವು ತನ್ನ ಮನದಲ್ಲಿಯೇ ಯೋಚಿಸಿತು:- "ಚಂಡಕೋಪನಾದ ಈ ಮನೀಷೀ ಮುನಿಯು ನನ್ನ ಮೇಲೆ ಕೋಪ ಮಾಡಲಿಲ್ಲ. ಶಾಪ ನೀಡಲಿಲ್ಲ. ಇಷ್ಟೇ ನನ್ನ ಪುಣ್ಯ. ನಾನು ಈ ಬೆಟ್ಟರೂಪದಿಂದ ಮತ್ತೆ ಹುಟ್ಟಿ ಬಂದಂತೆ. ಈಗ ನಾನು ಮುನಿಯ ಅಪ್ಪಣೆಯಂತೆ ಈ ಗಿಡ್ಡ ಲಘುರೂಪದಲ್ಲಿ ಇರದೇ ಮತ್ತೆ ಬಾನುದ್ದ ಬೆಳೆದು ನಿಂತರೆ ಆ ಮುನಿ ಈ ನನ್ನ ಬೆಟ್ಟದ ಬೃಹತ್ ಕಾಯವನ್ನು ನೇತ್ರಾಗ್ನಿಯಿಂದಲೇ ಸುಟ್ಟು ಹಾಕುವನು. ಆ ಮಹರ್ಷಿ ಮರಳಿ ಬರುವವರೆಗೆ ಸಾಗಲಿ ಈ ಸೂರ್ಯನ ಮೇರುಪ್ರದಕ್ಷಿಣೆ. ಅವರು ತಿರುಗಿ ಬಂದ ಕೂಡಲೆ ಮತ್ತೆ ನಾನು ತ್ರಿವಿಕ್ರಮನ ಪಾದದಂತೆ ಗಗನ ಗೋಪುರದ ತುದಿಯವರೆಗೆ ಬೆಳೆದು ಈ ಸೂರ್ಯನ ಮೇರು ಪ್ರದಕ್ಷಿಣೆಯನ್ನು ಪ್ರತಿಬಂಧಿಸುತ್ತೇನೆ. ಆದರೆ ಎಂದು ಬರುವನೋ ಏನೋ ಆ ಮಹಾಮುನಿ". ಎಂದು ಅಗಸ್ತ್ಯದಂಪತಿಗಳ ಪುನರಾಗಮನದ ದಾರಿ ಕಾಯುತ್ತ ನಿಂತು ಕೊಂಡಿದೆ ವಿಂಧ್ಯ ಮಹೇಂದ್ರ. ಸೂರ್ಯನ ಸಂಚಾರ, ಬೆಳಕಿನ ಪ್ರಸಾರ, ಯಜ್ಞಮಾರ್ಗದ ಪ್ರಚಾರ ಯಥಾಕ್ರಮವಾಗಿ ನಡೆದಿದೆ ಈ ಪ್ರಪಂಚದಲ್ಲಿ ಅಗಸ್ತ್ಯರ ಪುಣ್ಯದಿಂದ ಅವರು ಮರಳಿ ಬರಲಿಲ್ಲ. ಸೂರ್ಯಸ್ಯಂದನಕ್ಕೆ ಪ್ರತಿಬಂಧ ಆಗಲಿಲ್ಲ.

ಅಗಸ್ತ್ಯ ದಂಪತಿಗಳು ದಕ್ಷಿಣಕ್ಕೆ ಬಂದು ಗೋದಾವರೀ ತೀರದಲ್ಲಿ ಸಂಚರಿಸಿದರು. ಆದರೆ ಕಾಶಿಯ ನೆನಪು ಅವರ ಎದೆಯ ಬದಿಯನ್ನು ಇನ್ನೂ ತಿವಿಯುತ್ತಲೇ ಇತ್ತು. ಎಲ್ಲಿ ಹೋದರೂ ಅವರ ಚಿತ್ತಕ್ಕೆ ನೆಮ್ಮದಿಯಿಲ್ಲ. ಆತ್ಮಕ್ಕೆ ಶಾಂತಿಯಿಲ್ಲ. ಮನಸ್ಸಿಗೆ ಸಮಾಧಾನವಿಲ್ಲ. ಕೊನೆಗೆ ಅವರು ದಕ್ಷಿಣದ ಸಹ್ಯಾದ್ರಿ ಕಂದರದಲ್ಲಿ ಮಹಾಲಕ್ಷ್ಮಿಯನ್ನು ಕಣ್ಣಾರೆ ಕಂಡರು. ವೈಕುಂಠ ಲೋಕದಿಂದ ಭಕ್ತರ ಉದ್ಧಾರಕ್ಕಾಗಿ ಇಳಿದುಬಂದ ಆ ನಾರಾಯಣನ ಕುಟುಂಬಿನಿಯನ್ನು ನೋಡಿ ಅವರ ಹೃದಯ ಸಮುದ್ರ ಭಕ್ತಿರಸದಿಂದ ಉತ್ತರಂಗಿತ. ಲಕ್ಷ್ಮೀದೇವಿಯ ದಿವ್ಯದರ್ಶನದಿಂದ ಕುಣಿದಾಡಿತು ಅವರ ಮನೋ ಮಯೂರ, ವೈಕುಂಠದಲ್ಲಿ ಶ್ರೀ, ಭೂಲೋಕದಲ್ಲಿ ರುಕ್ಮಿಣಿ, ವಿಷ್ಣುವಿನ ವಕ್ಷಸ್ಥಳದಲ್ಲಿ ಲಕ್ಷ್ಮೀರೂಪದಿಂದ ಇರುವ ಆ ಮಹಾತಾಯಿಯನ್ನು ಭಕ್ತಿಭಾವಯುಕ್ತರಾಗಿ ವಂದಿಸಿ ಹೃದಯ ತುಂಬಿ ಅವಳನ್ನು ಸ್ತೋತ್ರ ಮಾಡಿದರು.

## ಅಗಸ್ತ್ಯಕೃತ ಲಕ್ಷ್ಮೀ ಸ್ತೋತ್ರ

**ಅಗಸ್ತಿರುವಾಚ :**

ಮಾತರ್ನಮಾಮಿ ಕಮಲೇ ಕಮಲಾಯತಾಕ್ಷಿ
ಶ್ರೀ ವಿಷ್ಣುಹೃತ್ಕಮಲವಾಸಿನಿ ವಿಶ್ವಮಾತಃ ।
ಕ್ಷೀರೋದಜೇ ಕಮಲ ಕೋಮಲ ಗರ್ಭಗೌರಿ
ಲಕ್ಷ್ಮಿ ಪ್ರಸೀದ ಸತತಂ ನಮತಾಂ ಶರಣ್ಯೇ ॥

ತ್ವಂ ಶ್ರೀರುಪೇಂದ್ರಸದನೇ ಮದನೈಕಮಾತಃ
ಜ್ಯೋತ್ಸ್ನಾ ಚಾರುತರ ಚಂದ್ರಮನೋಹರಾಸ್ಯೇ ।
ಸೂರ್ಯ ಪ್ರಭಾಸಿ ಚ ಜಗತ್ರಿತಯೇ ಪ್ರಭಾಸಿ
ಲಕ್ಷ್ಮಿ ಪ್ರಸೀದ ಸತತಂ ನಮತಾಂ ಶರಣ್ಯೇ ॥

ತ್ವಂ ಜಾತವೇದಸಿ ಸದಾ ದಹನಾತ್ಮಶಕ್ತಿ:
ವೇಧಾಸ್ತ್ವಯಾ ಜಗದಿದಂ ವಿವಿಧಂ ವಿದಧ್ಯಾತ್।
ವಿಶ್ವಂಭರೋಪಿ ಬಿಭೃಯಾದಖಿಲಂ ಭವತ್ಯಾ
ಲಕ್ಷ್ಮಿ ಪ್ರಸೀದ ಸತತಂ ನಮತಾಂ ಶರಣ್ಯೇ ॥

ತ್ವತ್ತ್ಯಕ್ತಮೇತದ ಖಿಲಂ ಹರತೇ ಹರೋಽಪಿ
ತ್ವಂ ಪಾಸಿ ಹಂಸಿ ವಿದಧಾಸಿ ಪರಾಪರಾಸಿ।
ಈಡ್ಯೋ ಬಭೂವ ಹರಿರಪ್ಯಾಖಿಲೈಸ್ತದಾಪ್ಯಾ
ಲಕ್ಷ್ಮಿ ಪ್ರಸೀದ ನತತಂ ಸಮತಾಂ ಶರಣ್ಯೇ ॥

ಶೂರಃ ಸ ಏವ ಗುಣೀ ಸಂ ಬುಧಃ ಸ ಧನ್ಯೋ
ಮಾನ್ಯಃ ಸ ಏವ ಕುಲಶೀಲ ಕಲಾಕಲಾಪ್ಯೈಃ।
ಏಕಃ ಶುಚಿಃ ಸ ಹಿ ಪುಮಾನ್ ಸಕಲೇಽಪಿ ಲೋಕೇ
ಸಶ್ರೀಕಲೆಸುಯಖಿಃ ಪರಿಶುದ್ಧಿಸಧೀ ॥

ತ್ವತ್‌ಸ್ಪೃಷ್ಟಮೇವ ಸಕಲಂ ಶುಚಿತಾಂ ಲಭೇತ
ತ್ವತ್ತ್ಯಕ್ತ ಮೇವ ಸಕಲಂ ತ್ವಶುಚೀಹ ಲಕ್ಷ್ಮಿ।
ತ್ವನ್ನಾಮ ಯತ್ರ ಚ ಸುಮಂಗಲ ಮೇವ ತತ್ರ
ಶ್ರೀ ವಿಷ್ಣುಪತ್ನಿ ಕಮಲೇ ಕಮಲಾಲಯೆತಿ ॥

ಲಕ್ಷ್ಮೀಂ ಶ್ರಿಯಂ ಚ ಕಮಲಾಂ ಕಮಲಾಲಯಾಂ ಚ
ಪದ್ಮಾಂ ರಮಾಂ ನಲಿನಯುಗ್ಮಕಲಾಂ ಚ ಮಾಂ ಚ।
ಕ್ಷಿರೋಧಿಜಾಮ ಮೃತ ಕುಂಭಕರಾ ಪ್ರಿಯಾಂ ಚ
ವಿಷ್ಣುಪ್ರಿಯಾಮಿತಿ ಸದಾ ಜಪತಾಂ ಕ್ವ ದುಃಖಮ್ ॥

ಯತ್ರಾಪತೇತ್ತವ ಶುಭೇ ಕರುಣಾಕಟಾಕ್ಷಃ ॥
ಯಸ್ಮಿನ್ ವಸೇ ಕ್ಷಣಮಹೋ ಪುರುಷೇ ಗಜ್ಯೆಶ್ವ
ಸ್ತ್ರೀಣೇ ತೃಣೇ ಸರಿಸಿ ದೇವಕುತೀ ಗೃಹೇನ್ಯೋ।
ರತ್ನೇ ಪತತ್ರಿಣೆ ಪಶೌ ಶಯನೇ ಧರಾಯಾಂ

ತಾವರೆಯಂತೆ ಅಗಲಗಣ್ಣಿನ ಕಮಲಾದೇವಿ ನೀನೇ ನನ್ನ ತಾಯಿ. ನಿನಗೆ ನನ್ನ ವಂದನೆ. ವಿಷ್ಣುವಿನ ಹೃದಯ ಕಮಲದಲ್ಲಿ ನೆಲೆಸಿರುವ ನೀನು ಜನನಿ. ನೀನು ಜಗತ್ತಿಗೇ ಜನನಿ. ಹುಟ್ಟಿದ್ದು ಹಾಲುಗಡಲಿನಲ್ಲಿ. ಕಮಲಕೋಶದ ಒಳಭಾಗದಂತೆ ಗೌರವರ್ಣ ನಿನ್ನದು. ಭಕ್ತಿಯಿಂದ ನಮಿಸಿದವರನ್ನು ಪೊರೆಯುವ ಮಹಾಲಕ್ಷ್ಮಿಯೇ ನನ್ನ ಮೇಲೆ ಪ್ರಸನ್ನಳಾಗು.

ಕಾಮನನ್ನು ಹೆತ್ತವಳು ನೀನು. ಹರಿನಿವಾಸದ ಸಿರಿಯೇ ನೀನು. ನಿನ್ನ ಮುಖಚಂದ್ರದಂತೆ ಸುಂದರ. ಚಂದ್ರನಲ್ಲಿ ನೀನೇ ಬೆಳದಿಂಗಳಾಗಿ ಬೆಳಗುವೆ. ಸೂರ್ಯನಲ್ಲಿ ನಿನ್ನದೇ ಪ್ರಕಾಶ. ಮೂರು ಲೋಕದ ತುಂಬ ನಿನ್ನ ಬೆಳಕೇ ಬೆಳಕು. ಪ್ರಸನ್ನರಾದವರನ್ನು ಪಾಲಿಸುವ ಮಹಾಲಕ್ಷ್ಮಿಯೇ ನನ್ನ ಮೇಲೆ ಪ್ರಸನ್ನಳಾಗು.

ಅಗ್ನಿಯಲ್ಲಿ ಇರುವ ದಾಹ ಶಕ್ತಿಯು ನೀನು. ಆ ಬ್ರಹ್ಮನು ಬಗೆಬಗೆಯ ಪ್ರಪಂಚದ ರಚನೆಯನ್ನು ಮಾಡುವುದು ನಿನ್ನ ದಯೆಯಿಂದಲೇ. ಶ್ರೀಹರಿಯು ನಿನ್ನ ಮುಖಾಂತರವೇ ಜಗತ್ತಿನ ರಕ್ಷಣೆಯನ್ನು ಮಾಡುವನು. ಶರಣು ಬಂದವರನ್ನು ರಕ್ಷಿಸುವ ಮಹಾತಾಯಿಯೇ, ಪ್ರಸನ್ನಳಾಗು.

ನೀನು ಕೈಬಿಟ್ಟಾಗ ಮಹಾದೇವನು ಎಲ್ಲ ಪ್ರಪಂಚವನ್ನು ಸಂಹರಿಸುವನು. ಎಲ್ಲ ಪ್ರಾಣಿಗಳನ್ನು ನೀನೇ ಹುಟ್ಟಿಸುತ್ತಿ. ರಕ್ಷಿಸುತ್ತಿ. ಕೊನೆಗೆ ಸಂಹಾರ ಮಾಡುತ್ತಿ. ನಿನ್ನನ್ನು ಹೊಂದಿ ಹರಿ ಹಿರಿಮೆಯನ್ನು ಹೊಂದ್ದಿದಾನೆ. ಅವನ ಹೊಗಳಿಕೆಗೆ ಮುಖ್ಯ ಕಾರಣ ನೀನು. ಪೊಡಮೊಟ್ಟವರನ್ನು ಪೊರೆಯುವ ಲಕ್ಷ್ಮೀದೇವಿ, ನೀನು ಸರ್ವದಾ ನನ್ನ ಮೇಲೆ ಪ್ರಸನ್ನಳಾಗು.

ಮಂಗಳಪ್ರದವಾದ ಮಹಾಲಕ್ಷ್ಮಿ, ಕರುಣೆದುಂಬಿದ ನಿನ್ನ ಕಟಾಕ್ಷವು ಯಾರ ಮೇಲೆ ಬೀಳುವುದೋ ಅವನೇ ಶೂರ. ಅವನೇ ಸದ್ಗುಣಿ. ಮಹಾಪಂಡಿತ, ಧನ್ಯ, ಮಾನ್ಯ. ಕುಲ ಶೀಲ ನಡತೆ ಕಲೆ ಕೌಶಲ್ಯ ಮುಂತಾದವುಗಳಿಂದ ಅವನು ಎಲ್ಲೆಡೆ ಮನ್ನಣೆಯನ್ನು ಪಡೆಯುವನು. ಎಲ್ಲಕಡೆಗೆ ಅವನೇ ಪರಿಶುದ್ಧ ಎನಿಸುವನು.

ನೀನು ಅರೆನಿಮಿಷ ಎಲ್ಲಿ ನೆಲಿಸುವೆಯೋ ಅದು ಆ ಕ್ಷಣದಲ್ಲಿಯೇ ಮಹಾಐಶ್ವರ್ಯ ಸಂಪನ್ನನಾಗಿಬಿಡುವುದು. ಪುರುಷ, ಆನೆ, ಕುದುರೆ, ಸ್ತ್ರೀಕುಲ, ಹುಲ್ಲು, ಸರೋವರ, ದೇವತಾ ಗಣ, ಮನೆ, ರತ್ನ ಹಕ್ಕಿ, ಪಶು, ಹಾಸಿಗೆ, ನೆಲ ಯಾವುದೇ ಇರಲಿ, ನಿನ್ನ ಸನ್ನಿಧಾನ ಮಾತ್ರದಿಂದ ಸಂಪನ್ನವಾಗಿ ಶ್ರೀಮಂತವಾಗಿ ಬಿಡುವುದು.

ವಿಷ್ಣುಪತ್ನಿಯಾಗಿ ತಾವರೆಯಲ್ಲಿ ತಂಗಿದ ಕಮಲಾದೇವಿಯೇ, ನೀನು ಮುಟ್ಟಿದ್ದೆಲ್ಲ ಪವಿತ್ರ. ನೀನು ಬಿಟ್ಟಿದ್ದೆಲ್ಲ ಅಪವಿತ್ರ. ನಿನ್ನ ನಾಮದ ನೆನೆಯುವಿಕೆ ನಡೆದಲ್ಲಿ ಸರ್ವದಾ ಮಂಗಳ. ಕಮಲದಲ್ಲಿ ನೆಲೆಸಿದ ಲಕ್ಷ್ಮೀ, ಶ್ರೀ, ಕಮಲಾ, ಕಮಲಾಲಯಾ, ಪದ್ಮಾ, ರಮಾ, ಎಂದೂ ಹಾಲು ಕಡಲಿನ ಕುವರಿ, ಅಮೃತ ಕಲಶ ಧಾರಿಣಿ, ವಿಷ್ಣು ಪ್ರಿಯಾ ಎಂದೂ ಜಪಿಸುವವರಿಗೆ ದುಃಖ ಎಲ್ಲಿ ಬಂದೀತು? ಈ ರೀತಿಯಾಗಿ ಶ್ರೀಹರಿಯ ಪರಮ ಪ್ರೇಯಸಿಯಾದ ಲಕ್ಷ್ಮೀದೇವಿಯ ಸ್ತೋತ್ರಮಾಡಿ ಅಗಸ್ತ್ಯ ದಂಪತಿಗಳು ನೆಲದ ಮೇಲೆ ಅಡ್ಡಬಿದ್ದು ಸಾಷ್ಟಾಂಗ ವಂದನೆಯನ್ನು ಮಾಡಿದರು ಭಕ್ತಿಭರಿತರಾಗಿ.

**ಮಹಾಲಕ್ಷ್ಮಿ:-** ಮಿತ್ರಾವರುಣ ಪುತ್ರನಾದ ಮಹಾಮುನಿಯೇ, ಏಳು. ಲಲನಾ ಮಣಿಯಾದ ಲೋಪಾಮುದ್ರೆಯೇ ಏಳು. ಈ ಲೋಕದಲ್ಲಿ ನೀನು ಪರಮ ಪತಿವ್ರತೆ. ಹಾಗೂ ವ್ರತಶೀಲೆ. ನೀವಿಬ್ಬರೂ ಮಾಡಿದ ಈ ಸ್ತೋತ್ರದಿಂದ ನಾನು ಪ್ರಸನ್ನಚಿತ್ತಳು. ನಿಮಗೆ ಯಾವ ವರಗಳನ್ನು ನೀಡಲಿ?

ಹೀಗೆ ನುಡಿದು ಮಹಾಲಕ್ಷ್ಮಿಯು ಮುನಿ ಮಾನಿನಿಯಾದ ಲೋಪಾಮುದ್ರೆಯನ್ನು ತನ್ನ ನಿಡಿದೋಳುಗಳನ್ನು ಚಾಚಿ ತಬ್ಬಿಕೊಂಡಳು. ಹಾಗೂ ಅಮೂಲ್ಯವಾದ ಅನೇಕ ಸೌಭಾಗ್ಯ ಸೂಚಕವಾದ ಮಂಗಳಾಭರಣಗಳನ್ನು ಆ ಮಹರ್ಷಿಯ ಮುತ್ತೈದೆಗೆ ತೊಡಿಸಿ, ಬಗೆ ಬಗೆಯ ಬಟ್ಟೆಗಳನ್ನು ಉಡಿಸಿ, ಅನುಗ್ರಹಿಸಿದಳು. ಅನಂತರ ಮುನಿಯ ಕಡೆ ತಿರುಗಿ ಅಗಸ್ತ್ಯರನ್ನು ಕುರಿತು ನುಡಿದಳು.

**ಮಹಾಲಕ್ಷ್ಮಿ:-** ಕುಂಭಸಂಭವ, ನಾನು ಚೆನ್ನಾಗಿ ಅರಿತಿರುವೆ ನಿನ್ನ ಅಂತರಂಗಿಕ ಸಂತಾಪದ ಕಾರಣವನ್ನು. ನಿನಗೆ ಏನಾದರೂ ವರ ಬೇಕಾಗಿದ್ದರೆ ಕೇಳು.

**ಅಗಸ್ತ್ಯ:-** ಮಹಾತಾಯಿ, ವರನೀಡಲು ನಾನು ಅರ್ಹ ಎಂದು ನಿನಗೆ ಅನಿಸಿದರೆ ಒಂದು ವರವನ್ನು ಕರುಣಿಸು. ನಾನು ನನ್ನ ಇಷ್ಟದೇವತೆಯಾದ ಕಾಶಿಯ ವಿಶ್ವನಾಥನನ್ನು ಅಗಲಿ ದಕ್ಷಿಣಕ್ಕೆ ಬಂದಿದ್ದೇನೆ. ಆದರೆ ನನ್ನ ಚಿತ್ತ ಮಾತ್ರ ಯಾವಾಗಲೂ ಕಾಶಿಯಲ್ಲಿಯೇ ಅನುರಕ್ತ. ವಿಶ್ವೇಶ್ವರನಲ್ಲಿಯೇ ಆಸಕ್ತ. ಆದ್ದರಿಂದ ತಾವು ನನಗೆ ಪುನಃ ಆ ಕಾಶಿಯ ಪ್ರಾಪ್ತಿ ಆಗುವಂತೆ ಅನುಗ್ರಹಿಸು.

**ಲಕ್ಷ್ಮಿ:-** ವಿಪ್ರೋತ್ತಮ, ನೀನು ನುಡಿದಂತೆ ಆಗಲಿ. ನಿನ್ನ ಮನೋರಥವೆಲ್ಲವೂ ಪೂರ್ಣವಾಗುವುದು. ಮುಂದೆ ಬರಲಿರುವ ಇಪ್ಪತ್ತೊಂಬತ್ತನೇಯ ದ್ವಾಪರಯುಗದಲ್ಲಿ ನೀನೆ ವ್ಯಾಸ ಪದವಿಗೆ ಬರುವಿ. ಆ ಕಾಲದಲ್ಲಿ ಕಾಶಿಗೆ ಹೋಗಿ ವೇದಪುರಾಣಗಳನ್ನು ವಿಸ್ತರಿಸಿ ನಿಜವಾದ ಸನಾತನ ಧರ್ಮದ ಉಪದೇಶಗೈದು ನೀನು ನಿನ್ನ ಅಭೀಷ್ಟ ಸಿದ್ಧಿಯನ್ನು ಪಡೆ. ಈಗ ನೀನು ಇಲ್ಲಿಯೇ ತುಸು ಸಮೀಪದಲ್ಲಿ ಇರುವ ಸ್ಕಂದಸ್ವಾಮಿಯ ದರ್ಶನವನ್ನು ಮಾಡಿಕೊ. ಆ ಕುಮಾರ ಕಾರ್ತಿಕೆಯನು ನಿನಗೆ ಕಾಶೀ ಕ್ಷೇತ್ರದ ರಹಸ್ಯವನ್ನೆಲ್ಲ ತಿಳಿಸಿ ಹೇಳುವನು. ಹೀಗೆ ಮಹಾಲಕ್ಷ್ಮಿಯಿಂದ ವರವನ್ನು ಪಡೆದುಕೊಂಡು ಅವಳ ಅಡಿದಾವರೆಗಳಿಗೆ ಪ್ರಣಮಿಸಿ ಅಗಸ್ತ್ಯ ದಂಪತಿಗಳು ಆ ಭಗವದ್ ಭಾಮಿನಿಯ ಆದೇಶದಂತೆ ಕಾರ್ತಿಕೆಯ ಸ್ವಾಮಿಯು ಸನ್ನಿಹಿತನಾದ ಸ್ಥಳಕ್ಕೆ ಹೊರಟರು.

## ಮಾನಸ ತೀರ್ಥ ಹಾಗು ಕಾಶಿಯ ಶ್ರೇಷ್ಠತೆ

**ವೇದವ್ಯಾಸ:-** **''ಅಷ್ಟಾದಶ ಪುರಾಣಾನಾಂ ಸಾರಭೂತಮಿದಂ ವಚಃ ।**
**ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ'' ॥**

ಹದಿನೆಂಟು ಪುರಾಣಗಳ ಸಾರವನ್ನು ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಹೀಗೆ ಹೇಳಬಹುದು. ಪರೋಪಕಾರವು ಮಹಾ ಪುಣ್ಯಜನಕ. ಪರಪೀಡೆಯು ಮಹಾ ಮಹಾಪಾಪ. ಹೆರವರಿಗೆ ಉಪಕಾರ ಮಾಡಿದಾಗ ಬರುವಷ್ಟು ಪುಣ್ಯವು ತೀರ್ಥ ಸ್ನಾನಮಾಡುವುದರಿಂದ ಬಗೆ ಬಗೆಯ ದಾನ ನೀಡುವುದರಿಂದಲೂ ಕಠೋರ ತಪಸ್ಸನ್ನು ಆಚರಿಸುವುದರಿಂದಲೂ ಬರಲಾರದು. ಹಿಂದೆ ಒಮ್ಮೆ ಬ್ರಹ್ಮದೇವರು ವೇದೋಕ್ತವಾದ ಎಲ್ಲ ದಾನ ಧರ್ಮ ಪೂಜಾದಿ ಸತ್ಕರ್ಮಗಳನ್ನು ಒಂದು ಪರಡಿಯಲ್ಲಿ ಇಟ್ಟರು. ಮತ್ತೊಂದರಲ್ಲಿ ಪರೋಪಕಾರವನ್ನು ಇರಿಸಿದರು. ತೂಗಿ ನೋಡಿದಾಗ ಪರೋಪಕರಾವೇ ಭಾರ ಭೂತವಾದದ್ದು ಮತ್ತು ಮಹತ್ವದ್ದು ಎಂದು ನಿರ್ಣಯವಾಯಿತು. ಈ ಅಗಸ್ತ್ಯ ದಂಪತಿಗಳು ತಮ್ಮ ಜೀವನದಲ್ಲಿ ಮಾಡಿದ ಪರೋಪಕಾರವು ಅಸಂಖ್ಯ. ತಮ್ಮ ಕೈಲಾದ ಎಲ್ಲ ರೀತಿಯಿಂದಲೂ ಹೆರವರಿಗೆ ನೆರವಾಗಿ ಅವರಿಗೆ ಎಲ್ಲ ರೀತಿಯಿಂದಲೂ ಸಹಾಯ ಸಹಾನುಭೂತಿ ಸಹಕಾರಗಳನ್ನು ನೀಡಿ ಪರರಿಗೆ ತಮ್ಮ ಕೈಲಾದಷ್ಟು ಉಪಕಾರ ಮಾಡುವುದು ಅವರ ಮುಖ್ಯ ವ್ರತ ಆಗಿರುವುದು. ಈ ಪರೋಪಕಾರ ಜನಿತ ಪುಣ್ಯದ ಪ್ರಭಾವದಿಂದಲೇ ಅವರಿಗೆ ಸಾಕ್ಷಾತ್ ಮಹಾಲಕ್ಷ್ಮೀದೇವಿಯ ದರ್ಶನ ಭಾಗ್ಯ ಒದಗಿ ಬಂದಿತು. ಅವಳ ದರ್ಶನ ಪಡೆದು ಕೃತಾರ್ಥರಾದ ಆ ಅಗಸ್ತ್ಯ ದಂಪತಿಗಳು ಕೊಲ್ಹಾಪುರದಿಂದ ಮುಂದೆ ಹೊರಟರು. ಅವರಿಗೆ ಮೊಟ್ಟ ಮೊದಲು ಆ ಪ್ರಯಾಣದಲ್ಲಿ ಕಂಡದ್ದು ಶ್ರೀಪರ್ವತ. ಅದನ್ನು ದೂರದಿಂದಲೇ ನೋಡಿ ಅಗಸ್ತ್ಯರ ಮನಸ್ಸು ಸುಪ್ರಸನ್ನ. ಅವರು ತಮ್ಮ ಪಯಣವನ್ನು ಮುಂದುವರಿಸಿದಾಗ ಅವರಿಗೆ ಶ್ರೀ ಶೈಲ ಶಿಖರವನ್ನು ಪತ್ನಿಗೆ ತೋರಿಸಿ ನುಡಿದರು- ಪ್ರಿಯೇ, ಎಂಬತ್ನಾಕು ಯೋಜನ ವಿಸ್ತಾರವಾದ ಆ ಶ್ರೀಶೈಲವು ಸರ್ವವೂ ಶಿವಮಯ. ಅದಕ್ಕೆ ನಾವು ಪ್ರದಕ್ಷಿಣೆಯನ್ನು ಅವಶ್ಯವಾಗಿ ಹಾಕಬೇಕು. ಈ ಗಿರಿಗೆ ನಮಿಸಿ ಪ್ರದಕ್ಷಿಣೆ ಹಾಕಿದರೆ ಪುನರ್ಜನ್ಮವಿಲ್ಲ.

**ಲೋಪಾಮುದ್ರಾ:-** ಪ್ರಾಣನಾಥಾ, ತಮ್ಮ ಅಪ್ಪಣೆಯಾದರೆ, ನಾನು ಒಂದು ಮಾತು ಕೇಳುತ್ತೇನೆ ಪತಿಯ ಅಪ್ಪಣೆಯಿಲ್ಲದೆ ಸತಿಯು ಮಾತನಾಡಿದರೆ ಅವಳು ಧರ್ಮ ಭ್ರಷ್ಟಳು ಎನಿಸುವಳು.

**ಅಗಸ್ತ್ಯ:-** ನೀನು ಹೇಳಬೇಕೆಂದು ಬಯಸಿದ್ದುದನ್ನು ಹೇಳಿಬಿಡು. ನಿನ್ನಂಥ ಸಾಧ್ವೀ ಸ್ತ್ರೀಯರ ಮಾತು ಪತಿಗೆ ಎಂದೂ ಖೇದವನ್ನುಂಟುಮಾಡಲಾರದು.

**ಲೋಪಾಮುದ್ರಾ:-** ಶ್ರೀಶೈಲದ ದರ್ಶನದಿಂದ ಮಾನವನಿಗೆ ಪುನರ್ಜನ್ಮವಿಲ್ಲ ಎಂದು ತಾವು ಅಪ್ಪಣೆ ಕೊಡಿಸಿದಿರಿ. ಈ ಮಾತು ನಿಜವಾದರೆ ತಾವು ಕಾಶಿಗೆ ಹೋಗಬೇಕು ಎಂದು ಏಕೆ ಅಪೇಕ್ಷೆ ಮಾಡುವಿರಿ?

**ಅಗಸ್ತ್ಯ:-** ಶುಭಾಂಗಿ, ತತ್ವನಿರ್ಣಯವನ್ನು ಮಾಡಲು ಸಮರ್ಥರಾದ ಪ್ರಾಚೀನ ಮಹರ್ಷಿಗಳು ಈ ಭೂಲೋಕದಲ್ಲಿ ಕೆಲವು ಸ್ಥಾನಗಳನ್ನು ಮುಕ್ತಿಸ್ಥಾನ ಎಂದು ನಿರ್ಣಯ ಮಾಡಿದ್ದಾರೆ. ಅವುಗಳಲ್ಲಿ ಪ್ರಪ್ರಥಮ ಮುಕ್ತಿಸ್ಥಾನ ತೀರ್ಥರಾಜವಾದ ಪ್ರಯಾಗ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಬಗೆಯ ಪುರುಷಾರ್ಥಗಳನ್ನು ನೀಡುವ ಕ್ಷೇತ್ರ ಎಂದರೆ ಗಂಗಾ ಯಮುನಾ ಸಂಗಮದ ದಿವ್ಯ ಕ್ಷೇತ್ರವಾದ ಪ್ರಯಾಗ. ಇದರಂತೆ ನೈಮಿಷಾರಣ್ಯ, ಕುರುಕ್ಷೇತ್ರ, ಗಂಗಾದ್ವಾರ (ಹರಿದ್ವಾರ), ಅವಂತಿ, ಅಯೋಧ್ಯಾ, ಮಥುರಾ, ದ್ವಾರಕಾ, ಅಮರಾವತಿ, ಸರಸ್ವತಿ, ಸಮುದ್ರ ಸಂಗಮ, ಗಂಗಾಸಾಗರ ಸಂಗಮ, ಕಾಂಚೀಪುರಿ, ತ್ರ್ಯಂಬಕ ತೀರ್ಥ, ಸಪ್ತಗೋದಾವರಿ ತಟ, ಪ್ರಭಾಸ ಕ್ಷೇತ್ರ, ಬದರಿಕಾಶ್ರಮ, ಮಹಾವಲಯ, ಓಂಕಾರಕ್ಷೇತ್ರ, ಜಗನ್ನಾಥಪುರಿ, ಗೋಕರ್ಣ, ಭೃಗುತುಂಗ, ಪುಷ್ಕರ, ವೆಂಕಟಾದ್ರಿ, ಶ್ರೀಶೈಲ, ಧಾರಾತೀರ್ಥ, ಮತ್ತು ಮಾನಸ ತೀರ್ಥ ಇವೆಲ್ಲವೂ ಹಾಗೂ ಕಾಶೀಕ್ಷೇತ್ರವು ಗಯಾ ಕ್ಷೇತ್ರವು ಮುಕ್ತಿಕ್ಷೇತ್ರ ಎನಿಸುತ್ತವೆ.

**ಲೋಪಮುದ್ರಾ:-** ಪೂಜ್ಯರೇ, ತಾವು ಮುಕ್ತಿದಾಯಕ ತೀರ್ಥಗಳಲ್ಲಿ ಮಾನಸ ತೀರ್ಥವೂ ಒಂದು ಎಂದು ಹೇಳಿದಿರಿ. ಅದು ಯಾವುದು? ಅದನ್ನು ತಿಳಿಸಿರಿ.

**ಅಗಸ್ತ್ಯ:-** ಕಲ್ಯಾಣಿ, ಸತ್ಯವನ್ನೇ ನುಡಿಯುವುದು, ಸತ್ಯತೀರ್ಥ ಎನಿಸುವುದು. ಕ್ಷಮೆಯೂ ಒಂದು ತೀರ್ಥ. ಇಂದ್ರಿಯ ನಿಗ್ರಹವೂ ತೀರ್ಥವೇ. ಪ್ರಾಣಿಗಳ ಮೇಲೆ ದಯೆ ಇನ್ನೊಂದು ತೀರ್ಥ. ಮನಸ್ಸಿನ ನಿಗ್ರಹ ಮಗದೊಂದು ತೀರ್ಥ. ಬ್ರಹ್ಮಚರ್ಯ, ದಾನ, ಪ್ರಿಯವಚನ, ಜ್ಞಾನವಚನ ಮುಂತಾದವುಗಳೆಲ್ಲವೂ ಒಂದೊಂದು ತೀರ್ಥಗಳೇ. ಬರೀ ದೇಹವನ್ನು ನೀರಿನಲ್ಲಿ ಅದ್ದಿ ಅದ್ದಿ ತೆಗೆದರೆ ಸ್ನಾನ ಎನ್ನಿಸಲಾರದು. ಇಂದ್ರಿಯ ನಿಗ್ರಹರೂಪವಾದ 'ದಮ' ತೀರ್ಥದಲ್ಲಿ ಸ್ನಾನಮಾಡಿ ಮನಸ್ಸಿನ ಮಲವನ್ನು ತೊಳೆದವನು ನಿಜವಾದ ತೀರ್ಥಯಾತ್ರೆ ಮಾಡಿದಂತೆ, ಲೋಭಿ, ಚಾಡಿಕೋರ, ಕ್ರೂರ, ಪಾಖಂಡಿ, ವಿಷಯ ಲಂಪಟ, ಪರಪೀಡಕ, ಪರದ್ರೋಹಿ, ಅನಾಚಾರಿ ಪುರುಷನು ಎಲ್ಲ ತೀರ್ಥಕ್ಷೇತ್ರಗಳಿಗೆ ಹೋಗಿ ಸ್ನಾನಮಾಡಿ ಬಂದರೂ ಪಾಪಿಯಾಗಿಯೇ ಉಳಿಯುತ್ತಾನೆ. ತೀರ್ಥಸ್ನಾನ ಮಾತ್ರದಿಂದ ಶುದ್ಧರಾಗುವುದಾದರೆ ಆ ತೀರ್ಥಜಲದಲ್ಲಿ ಇರುವ ಮೀನು, ಮೊಸಳೆ, ಏಡಿ, ಆಮೆ ಮುಂತಾದ ಜಲಚರ ಪ್ರಾಣಿಗಳೆಲ್ಲವೂ ಮೋಕ್ಷಕ್ಕೆ ಹೋಗಬೇಕಾದೀತು. ಮಾನವನ ಮನಸ್ಸು ಪಾಪವಿಚಾರ ಮತ್ತು ಅಧರ್ಮದಿಂದ ವರ್ಜಿತವಾಗಿದ್ದರೆ ಕೇವಲ ತೀರ್ಥಸ್ನಾನದಿಂದ ಪರಿಶುದ್ಧವಾಗಲಾರದು. ಹೆಂಡತುಂಬಿದ ಗಡಿಗೆಯನ್ನು ನೀರಿನಲ್ಲಿ ಎಷ್ಟುಸಲ ಅದ್ದಿ ತೆಗೆದರೂ ಶುದ್ಧ ಎನಿಸಲಾರದು. ಅದರಂತೆ ಭಾವಶುದ್ಧಿ ಕ್ರಿಯಾ ಶುದ್ಧಿ, ಮನಃಶುದ್ಧಿ, ಇಲ್ಲದ ಮಾನವನು ಕೇವಲ ತೀರ್ಥಸ್ನಾನ ಮಾಡಿದರೆ ಎಂದೂ ಶುದ್ಧನಾಗಲಾರ. ಅವನಿಗೆ ಯಾತ್ರೆಯ ಪುಣ್ಯವೂ ಲಭಿಸಲಾರದು.

**ಧ್ಯಾನಪೂತೇ ಜ್ಞಾನಜಲೇ, ರಾಗದ್ವೇಷ ಮಲಾಪಹೇ ।**
**ಯಃಸ್ನಾತಿ ಮಾನಸೇ ತೀರ್ಥೇ, ಸ ಯಾತಿ ಪರಮಾಂ ಗತಿಮ್ ॥**

ಪವಿತ್ರವಾದ ಧ್ಯಾನದಿಂದ ಜ್ಞಾನರೂಪವಾದ ಜಲದಿಂದ ತುಂಬಿದ, ರಾಗದ್ವೇಷಾದಿ ಮಲವನ್ನು ತೊಳೆದು ಹಾಕುವ ಮಾನಸ ತೀರ್ಥದಲ್ಲಿ ಸ್ನಾನಮಾಡಿದ ಪುರುಷನು ಉತ್ತಮ ಗತಿಯನ್ನು ಹೊಂದುತ್ತಾನೆ. ಎಲ್ಲ ಇಂದ್ರಿಯಗಳನ್ನು ತನ್ನ ವಶದಲ್ಲಿ ಇಟ್ಟುಕೊಂಡ ಪುಣ್ಯಪುರುಷನು, ನೆಲಿಸಿದಲ್ಲಿಯೇ ಕುರುಕ್ಷೇತ್ರ, ನೈಮಿಷಾರಣ್ಯ, ಪುಷ್ಕರ ಮುಂತಾದ ಎಲ್ಲ ತೀರ್ಥಗಳು ಸನ್ನಿಹಿತವಾಗಿರುತ್ತವೆ. ಎಲ್ಲ ತೀರ್ಥಗಳಿಗಿಂತಲೂ ಮಾನಸತೀರ್ಥವು ಶ್ರೇಷ್ಠವಾದದ್ದು. ಮಾನವರು ಪ್ರತಿದಿನವೂ ಭೂಮಂಡಲದ ಬೇರೆ ಬೇರೆ ತೀರ್ಥದಲ್ಲಿ ಸ್ನಾನಮಾಡಿದಂತೆ ಮಾನಸ ತೀರ್ಥದಲ್ಲಿಯೂ ಸ್ನಾನಮಾಡಬೇಕು. ಕೈ ಕಾಲು ಮನಸ್ಸು ವಿದ್ಯೆ ತಪಸ್ಸು ಕೀರ್ತಿ ಎಲ್ಲವನ್ನೂ ತನ್ನ ಸಂಯಮದಿಂದ ಭಗವತ್ಪರವಾಗಿ ಉಪಯೋಗಿಸುವ ಮನುಷ್ಯನು ತೀರ್ಥಯಾತ್ರೆಯ ಪೂರ್ಣಫಲವನ್ನು ಪಡೆಯುತ್ತಾನೆ. ಇನ್ನೊಬ್ಬರು ಕೊಟ್ಟ ದಾನವನ್ನು ಸ್ವೀಕರಿಸದ, ಅಹಂಕಾರ, ಡಂಭಾಚಾರ, ವಿಷಯಾಸಕ್ತಿ, ಕಾಮ, ಕ್ರೋಧ, ಹಿಂಸೆ, ದೇವಧರ್ಮ ದ್ರೋಹ, ಅನಾಚಾರಗಳುಳ್ಳ ಮನುಷ್ಯನು ತೀರ್ಥಯಾತ್ರೆಯ ಪುಣ್ಯವನ್ನು ಎಂದೂ ಪಡೆಯಲಾರ. ನಾಸ್ತಿಕರೂ ದೇವ ಧರ್ಮಗಳ ಅಸ್ತಿತ್ವದಲ್ಲಿ ಸಂಶಯವುಳ್ಳವರೂ ಶುಷ್ಕ ತರ್ಕವನ್ನು ಮಾಡುವ ಪಂಡಿತ ಮಾನ್ಯರೂ ತೀರ್ಥ ಸೇವನೆಯ ಪುಣ್ಯಾಬಾಗಿಗಳು ಆಗುವುದಿಲ್ಲ. ತೀರ್ಥಯಾತ್ರೆಗೆ ಹಾಗೂ ಆ ಯಾತ್ರೆಯ ಪುಣ್ಯಪ್ರಾಪ್ತಿಗೆ ಮುಖ್ಯವಾದ ಅವಶ್ಯ ಗುಣವೆಂದರೆ, ದೇವರಲ್ಲಿ ಶ್ರದ್ಧೆ, ವೇದಶಾಸ್ತ್ರ ಪುರಾಣಗಳಲ್ಲಿ ವಿಶ್ವಾಸ, ಧರ್ಮದಲ್ಲಿ ಶ್ರದ್ಧೆ. ಹೀಗೆ ದೇವ ಧರ್ಮಗಳಲ್ಲಿ ಶ್ರದ್ಧೆಯುಳ್ಳ ಮನುಷ್ಯರು ಮಾತ್ರ ತೀರ್ಥಯಾತ್ರೆ ಕೈ ಕೊಳ್ಳಬೇಕು.

ತೀರ್ಥಯಾತ್ರೆ ಕೈಕೊಳ್ಳಬಯಸುವ ಮನುಷ್ಯನು ತನ್ನ ಮನೆಯಲ್ಲಿ ಗಣಪತಿ ಮತ್ತು ತನ್ನ ಕುಲದೇವತೆಗಳ ಪೂಜೆಯನ್ನು ಯಥಾಶಕ್ತಿ ಮಾಡಬೇಕು. ಅನಂತರ ಪಿತೃಗಳ, ಸಾಧು ಪುರುಷರ ಪೂಜೆಯನ್ನು ಮಾಡಿ ಪಾರಣೆಗೈದು ಯಾತ್ರೆಗೆ ಹೊರಡಬೇಕು. ತೀರ್ಥ ಯಾತ್ರೆಯಲ್ಲಿ ಇಂದ್ರಿಯ ನಿಗ್ರಹ ಮಾಡಿಕೊಂಡು ಯಮ ನಿಯಮಗಳನ್ನು ಪಾಲಿಸುತ್ತ, ದೇವತಾ ಪಿತೃ ಅತಿಥಿ ಪೂಜೆಗಳನ್ನು ಮಾಡುತ್ತ ಹೋಗಬೇಕು. ತೀರ್ಥಕ್ಷೇತ್ರಗಳಲ್ಲಿ ಕ್ಷೇತ್ರವಾಸಿಗಳ ವಿದ್ಯೆ ಪರೀಕ್ಷೆಯನ್ನು ಎಂದೂ ಮಾಡಬಾರದು. ಹಸಿದು ಬಂದವರಿಗೆಲ್ಲ ಅನ್ನ ನೀಡಬೇಕು. ಪಿತೃಗಳನ್ನು ಕುರಿತು ಶ್ರಾದ್ಧವನ್ನು ಕಾಲವನ್ನು ವಿಚಾರಿಸದೇ ಹೋದಾಗಲೆಲ್ಲಾ ಶ್ರಾದ್ಧ, ತರ್ಪಣ, ಅತಿಥಿ, ಸತ್ಕಾರ, ದಾನ, ಧರ್ಮಗಳನ್ನು ಅವಶ್ಯವಾಗಿ ಮಾಡಬೇಕು. ತೀರ್ಥಗಳಲ್ಲಿ ಕ್ಷೌರ ಉಪವಾಸಗಳನ್ನು ಮೊದಲು ಮಾಡಿ ಅನಂತರ ಶ್ರಾದ್ಧ ದಾನ ದಕ್ಷಿಣೆ ದೇವತಾ-ಕಾರ್ಯಗಳನ್ನು ಮಾಡಬೇಕು.

**ಕಾಶೀ ಕಾಂಚೀ ಚ ಮಾಯಾಖ್ಯಾ ತ್ವಯೋಧ್ಯಾ ದ್ವಾರವತ್ಯಪಿ ।**
**ಮಥುರಾऽ ವಂತಿಕಾ ಚೈತಾಃ ಸಪ್ತಪುರ್ಯೋತ್ರ ಮೋಕ್ಷದಾಃ ॥**

ಕಾಶೀ, ಕಂಚಿ, ಮಾಯಾವತಿ (ಲಕ್ಷ್ಮಣಝೂಲಾದಿಂದ ಕನಖಲದವರೆಗಿನ ಪ್ರದೇಶ) ಅಯೋಧ್ಯಾ, ದ್ವಾರಕಾ, ಮಥುರಾ, ಅವಂತಿ ಈ ಏಳು ಕ್ಷೇತ್ರಗಳು ಮೋಕ್ಷದಾಯಕ ಆಗಿರುತ್ತವೆ. ಅದರಂತೆ ಶ್ರೀಶೈಲ ಪರ್ವತವೂ ಕೂಡ ಮೋಕ್ಷಪ್ರದ. ಶ್ರೀಶೈಲಕ್ಕಿಂತ ಕೇದಾರ ತೀರ್ಥವು ಶ್ರೇಷ್ಠ. ಈ ಶ್ರೀಶೈಲ ಕೇದಾರಗಳಿಗಿಂತ ಪ್ರಯಾಗ ತೀರ್ಥವು ಶ್ರೇಷ್ಠತರ. ಆ ಪ್ರಯಾಗಕ್ಕಿಂತ ಕಾಶೀ ಕ್ಷೇತ್ರವು ಸರ್ವಶ್ರೇಷ್ಠ ಆಗಿರುತ್ತದೆ. ಆದುದರಿಂದಲೇ ಅದಕ್ಕೆ ಮುಕ್ತಿಕ್ಷೇತ್ರವೆನಿಸಿದೆ. ಮಹಾದೇವನು ಕಾಶಿಯನ್ನು ಬಿಟ್ಟು ಎಲ್ಲಿಗೂ ಹೋಗುವುದಿಲ್ಲ. ಆದುದರಿಂದ ಅದು ಅವಿಮುಕ್ತ ಕ್ಷೇತ್ರ ಎನಿಸಿದೆ.

## ಶಿವಶರ್ಮನ ಸಪ್ತಕ್ಷೇತ್ರ ಯಾತ್ರೆ

**ಅಗಸ್ತ್ಯ:-** ಪುಣ್ಯಪುರಿಯಾದ ಮಥುರಾದಲ್ಲಿ ಓರ್ವ ಬ್ರಾಹ್ಮಣನಿದ್ದ. ಅವನು ಜ್ಞಾನದಿಂದ ಶ್ರೇಷ್ಠ. ಕರ್ಮಗಳಿಂದ ಗರಿಷ್ಠ. ಅವನ ಮಗ ಶಿವಶರ್ಮ. ಅವನೂ ತಂದೆಯಂತೆ ಮಹಾ ತೇಜಸ್ವಿ. ಸರ್ವಶಾಸ್ತ್ರಗಳಲ್ಲಿ ಅಭೋಧ ಪಂಡಿತ. ಅವನ ಯೌವನ ಕಳೆಯಿತು. ಮುಪ್ಪು ಅವನ ದೇಹವನ್ನು ಅಪ್ಪಿ ಹಿಡಿಯಿತು. ದೇಹವೆಲ್ಲ ಜರಾಜೀರ್ಣವಾದ ಬಳಿಕ ಆ ಶಿವಶರಣನಿಗೆ ಚಿಂತೆ. ''ನನ್ನ ಆಯುಷ್ಯವೆಲ್ಲ ಅಧ್ಯಯನ ಹಾಗೂ ದ್ರವ್ಯ ಸಂಪಾದನೆಯಲ್ಲೇ ಕಳೆದು ಹೋಯಿತು. ನಾನು ಭಕ್ತಿಯಿಂದ ಒಮ್ಮೆಯೂ ಹರಿಯನ್ನು ಆರಾಧಿಸಲಿಲ್ಲ. ಹರನನ್ನು ಪೂಜಿಸಲಿಲ್ಲ. ಆತ್ಮ ಸಾಧನೆ ಮಾಡಿಕೊಳ್ಳಲಿಲ್ಲ. ಇನ್ನಾದರೂ ನಾನು ಪರಲೋಕದ ಸಾಧನೆಯನ್ನು ಮಾಡಿಕೊಳ್ಳಬೇಕು.'' ಎಂದು ನಿರ್ಧರಿಸಿ ತೀರ್ಥಯಾತ್ರೆಗೆ ಹೊರಟ ಶಿವಶರ್ಮ. ದಾರಿಯಲ್ಲಿ ಮತ್ತೆ ಅವನ ಮನಸ್ಸಿನಲ್ಲಿ ವಿಚಾರಚಕ್ರ ಉರುಳುತಿತ್ತು. ''ಈ ಭೂಲೋಕದಲ್ಲಿ ತೀರ್ಥಗಳು ಅನಂತ. ಕ್ಷೇತ್ರಗಳು ಅಪರಿಮಿತ. ನನ್ನ ಆಯುಷ್ಯ ಅಲ್ಪ. ಜೀವನ ಅಸ್ಥಿರ. ಆದುದರಿಂದ ನಾನು ಮೊದಲು ಯಾವ ತೀರ್ಥಯಾತ್ರೆಯನ್ನು ಮಾಡಬೇಕು? ಸರಿ. **''ಸಪ್ತೈತಾಃ ಮೋಕ್ಷದಾಯಕಾಃ''** ಎಂದು ಹಿರಿಯರು ಹೇಳಿರುವರಲ್ಲವೆ? ಅದರಂತೆ ಅಯೋಧ್ಯಾ, ಮಥುರಾ, ಮಾಯಾ, ಕಾಶಿ, ಕಂಚಿ, ಅವಂತಿಕಾ, ಜಗನ್ನಾಥಪುರಿ, ದ್ವಾರಕಾ ಎಂಬ ಏಳು ದಿವ್ಯ ಕ್ಷೇತ್ರಗಳ ಯಾತ್ರೆಯನ್ನೇ ಮಾಡುತ್ತೇನೆ'' ಎಂದು ನಿರ್ಧರಿಸಿ ಮೊಟ್ಟ ಮೊದಲು ಶ್ರೀರಾಮನ ಜನ್ಮಭೂಮಿಯಾದ ಅಯೋಧ್ಯಾಪುರಿಗೆ ಬಂದನು. ಸರಯೂ ನದಿಯಲ್ಲಿ ಮಿಂದನು. ಅಲ್ಲಿಯ ಬೇರೆ ಬೇರೆ ತೀರ್ಥಗಳಲ್ಲಿ ಸ್ನಾನ, ಪಿಂಡದಾನ, ಪಿತೃತರ್ಪಣಗಳನ್ನು ಮಾಡಿ ಶ್ರೀರಾಮನನ್ನು ಆರಾಧಿಸಿ ಅನಂತರ ಪ್ರಯಾಗಕ್ಷೇತ್ರಕ್ಕೆ ಬಂದನು.

ಅಲ್ಲಿಯ ಗಂಗಾ ಯಮುನಾ ಸಂಗಮ ತೀರ್ಥದಲ್ಲಿ ಸ್ನಾನ ಮಾಡಿ ಅಲ್ಲಿಂದ ಕಾಶೀ ಪಟ್ಟಣಕ್ಕೆ ಬಂದನು. ಅಲ್ಲಿಯ ಮಣಿಕರ್ಣಿಕಾ ತೀರ್ಥದಲ್ಲಿ ಸ್ನಾನಮಾಡಿ ಉತ್ತರ ವಾಹಿನಿಯಾದ ಗಂಗೆಯಲ್ಲಿ ಅವಗಾಹನದಿಂದ ಪೂತಾತ್ಮನಾಗಿ ಶ್ರಾದ್ಧ, ತರ್ಪಣಾದಿಗಳನ್ನು ಮಾಡಿದನು. ಕಾಶಿಯ ಪಂಚತೀರ್ಥಗಳಲ್ಲಿ ಸ್ನಾನಮಾಡಿ ವಿಶ್ವನಾಥನನ್ನು ಪೂಜಿಸಿ ಅವಂತಿ ಅಥವಾ ಉಜ್ಜಯಿನಿ ಪಟ್ಟಣಕ್ಕೆ ಬಂದನು. ಅಲ್ಲಿಯ ಮಹಾಕಾಲನ ಆರಾಧನೆ ಮಾಡಿ ದಕ್ಷಿಣದ ಕಾಂಚೀಪುರಿಗೆ ಹೋದನು. ಅಲ್ಲಿ ಶ್ರೀ ಮಹಾವಿಷ್ಣುವಿನ ದರ್ಶನಮಾಡಿ ದ್ವಾರಕಾ ಪಟ್ಟಣಕ್ಕೆಬಂದನು. ದ್ವಾರಕಾ ಯಾತ್ರೆಯನ್ನು ವಿಧಿ ಪೂರ್ವಕವಾಗಿ ಮಾಡಿಕೊಂಡು ಹರಿದ್ವಾರ ಮೋಕ್ಷದ್ವಾರ ಗಂಗಾದ್ವಾರ ಎಂದು ಹೆಸರಾದ ಮಾಯಾಪುರಿಗೆ ಬಂದನು. ಅಲ್ಲಿ ಮೊದಲು ದಿನ ಉಪವಾಸ ಕ್ಷೌರ ಮಾಡಿಸಿಕೊಂಡು ಗಂಗಾನದಿಯಲ್ಲಿ ಸ್ನಾನಮಾಡಿ ದೇವ ಋಷಿ ಪಿತೃತರ್ಪಣವನ್ನು ನೀಡಿ ತಾನೂ ಪಾರಣೆ ಮಾಡಬೇಕೆನ್ನುವಷ್ಟರಲ್ಲಿ ಅವನಿಗೆ ಶೀತಜ್ವರ ಹಿಡಿಯಿತು. ಮೈಯಲ್ಲಿ ಕೆಂಡದಂಥ ಜ್ವರ. ಇಷ್ಟಾದರೂ ಶಿವಶರ್ಮ ಹೆದರಲಿಲ್ಲ. ಮನಸ್ಸಿನಲ್ಲಿ ಭಗವಾನ್ ಶ್ರೀಹರಿಯನ್ನು ಹಾಗೂ ಶಿವನನ್ನು ನಿರಂತರ ಧ್ಯಾನ ಮಾಡುತ್ತಲೇ ಇದ್ದನು. ''ಮುಕ್ತಿಕ್ಷೇತ್ರ ಎಂದು ಹೆಸರಾದ ಏಳು ಮೋಕ್ಷದಾಯಕ ತೀರ್ಥಕ್ಷೇತ್ರಗಳ ಯಾತ್ರೆ ಮಾಡಿ ಬಂದು, ಹರಿದ್ವಾರ ಗಂಗೆಯಲ್ಲಿ ಮಿಂದು ಹರಿಹರರ ಧ್ಯಾನಮಾಡುತ್ತಲಿರುವ ನನಗೆ ಇಂಥ ಪುಣ್ಯಕ್ಷೇತ್ರದಲ್ಲಿ ಮರಣ ಬಂದರೆ ಅದೊಂದು ಭಗದನುಗ್ರಹವೇ ಸರಿ. ದೇವರ ದಯೆಯಿಂದ ಈ ಮುಕ್ತಿಪುರಿಯಲ್ಲಿ ನನ್ನ ನಿರ್ವಾಣ ಮಹೋತ್ಸವವು ನೆರವೇರಲಿ'' ಎಂದು ಭಗವಂತನನ್ನು ಕೈ ಮುಗಿದು ಕೇಳಿಕೊಂಡನು. ಹೀಗೆ

ಗಂಗಾ ದ್ವಾರದಲ್ಲಿ ಹದಿನಾಲ್ಕು ದಿನಗಳವರೆಗೆ ರೋಗಗ್ರಸ್ತನಾದ ಶಿವಶರ್ಮನು ದೇವರ ಧ್ಯಾನ ಮಾಡುತ್ತ ಗಂಗಾ ತಟಾಕದಲ್ಲಿಯೇ ಬಿದ್ದು ಕೊಂಡಿದ್ದನು. ಅಲ್ಲಿಯೇ ಅವನಿಗೆ ಮರಣ ಬಂದಿತು. ಕೂಡಲೇ ಅವನನ್ನು ಕರೆದೊಯ್ಯಲು ಆಗಮಿಸಿತು ವೈಕುಂಠ ವಿಮಾನ, ಅದರಲ್ಲಿ ಪುಣ್ಯಶೀಲ ಸುಶೀಲ ಎಂಬ ವಿಷ್ಣುಪಾರ್ಷದರು ಚತುರ್ಭುಜರಾಗಿ ಕುಳಿತುಕೊಂಡಿದ್ದರು. ಶಿವಶರ್ಮನಾದರೂ ಅಂತ್ಯಕಾಲದಲ್ಲಿ ನಾರಾಯಣನ ಸ್ಮರಣೆಯಿಂದ ದಿವ್ಯದೇಹವನ್ನು ಧರಿಸಿ ಚತುರ್ಭುಜನಾಗಿ ಪೀತಾಂಬರ ಉಟ್ಟು ದಿವ್ಯ ಆಭರಣಗಳಿಂದ ಹೊಳೆಯುತ್ತ ಆ ವಿಮಾನದಲ್ಲಿ ಕುಳಿತುಕೊಂಡು ವೈಕುಂಠಲೋಕಕ್ಕೆ ಹೊರಟನು.

## ಶಿವಶರ್ಮ ಹಾಗೂ ವಿಷ್ಣುಪಾರ್ಷದರ ಸಂವಾದ

**ಶಿವಶರ್ಮ:-** ವಿಷ್ಣುಪಾರ್ಷದರೇ, ಭಗವಂತನ ಸೇವೆಯಲ್ಲಿ ಶರೀರವನ್ನು ಸವೆಯಿಸುವ ನೀವು ಧನ್ಯರು. ಪುಣ್ಯಪುರುಷರು ನಿಮಗೆ ನನ್ನ ವಂದನೆ. ನಿಮ್ಮ ಹೆಸರನ್ನು ನಾನು ಅರಿಯೆ. ಆದರೆ ಪುರಾಣಗಳಲ್ಲಿ ನಾನು ಕೇಳಿದಂತೆ ನಿಮ್ಮ ಆಕಾರಗಳಿಂದ ಪುಣ್ಯಶೀಲ ಸುಶೀಲ ಎಂಬ ಹೆಸರಿನ ವಿಷ್ಣುಪಾರ್ಷದರು ನೀವೇ ಇರಬಹುದು. ಇದು ಕೇವಲ ನನ್ನ ತರ್ಕ ಮಾತ್ರ.

**ವಿಷ್ಣುಪಾರ್ಷದ:-** ನಿನ್ನ ಊಹೆ ಸರಿಯಾಗಿದೆ. ನೀನು ತರ್ಕಿಸಿದ್ದೇ ನಮ್ಮಿಬ್ಬರ ಹೆಸರು.

**ಶಿವಶರ್ಮ:-** ಪೂಜ್ಯರೇ, ನಮ್ಮ ಊರ್ಧ್ವಪ್ರಯಾಣದಲ್ಲಿ ಈಗ ಇಲ್ಲಿ ಕಾಣುತ್ತಿರುವ ಈ ಲೋಕವು ಯಾವುದು?

**ವಿಷ್ಣುಪಾರ್ಷದರು:-** ಇದು ಪಿಶಾಚಿ ಲೋಕ. ಇದರಲ್ಲಿ ಮಾಂಸ ತಿನ್ನುವ ಜೀವಿಗಳು ನೆಲೆಸಿರುತ್ತಾರೆ. ದಾನ ನೀಡಿ ಪಶ್ಚಾತ್ತಾಪ ಪಡುವವರು, ಮನಸ್ಸಿಲ್ಲದೇ ಒತ್ತಾಯದಿಂದ ದಾನ ಕೊಡುವವರು, ಎಂದಾದರೂ ಒಂದು ದಿನ ಶಿವಪೂಜೆ ಮಾಡಿ ಮನದಲ್ಲಿ ಯಾವಾಗಲೂ ದುರ್ವಿಚಾರ ತುಂಬಿಕೊಂಡಿರುವವರು, ಪುಣ್ಯವೆಲ್ಲ ಸವೆದು ಪಾಪದ ರಾಶಿ ಒಟ್ಟೈಸಿದವರು ಈ ಲೋಕದಲ್ಲಿ ಪಿಶಾಚಿಗಳಾಗಿ ಇರುತ್ತಾರೆ.

ಹೀಗೆ ಅವರು ಮಾತನಾಡುತ್ತಲಿರುವಾಗಲೇ ಆ ವೈಕುಂಠ ವಿಮಾನವು ಗಗನ ಮಾರ್ಗದಲ್ಲಿ ಮುಂದುವರೆಯಿತು. ಅಲ್ಲಿ ದಾರಿಯಲ್ಲಿ ಒಂದು ಸುಂದರಲೋಕ. ಮೈ ಕೈ ತುಂಬಿಕೊಂಡ ಸುಂದರಾಕಾರದ ಗಂಡುಹೆಣ್ಣುಗಳ ತರುಣ ಜೋಡಿಗಳ ಸ್ವಚ್ಛಂದ ಸಂಚಾರ; ಸಾನಂದ ವಿಹಾರ; ಆ ಲೋಕದಲ್ಲಿ. ಅವರನ್ನು ಕಂಡು ಶಿವಶರ್ಮನ ಪ್ರಶ್ನೆ: ಪುಣ್ಯಾತ್ಮರೇ, ಇದು ಯಾವ ಲೋಕ? ಇಂಥ ಭೋಗಭೂಮಿಗೆ ಬರಲು ಇವರು ಮಾಡಿದ ಪುಣ್ಯವಾದರೂ ಯಾವುದು?

**ವಿಷ್ಣುಪಾರ್ಷದವರು:-** ಇದು ಗುಹ್ಯಕಲೋಕ. ಇಲ್ಲಿ ಇರುವವರೆಲ್ಲರೂ ಮುಕ್ತರು. ಇವರು ಭೂಲೋಕದಲ್ಲಿ ಇದ್ದಾಗ ಪೂಜ್ಯರಿಗೂ ಪುರೋಹಿತರಿಗೂ ಬ್ರಾಹ್ಮಣರಿಗೂ ವಿಪುಲವಾಗಿ ಗೋದಾನವನ್ನು ನೀಡುತ್ತಿದ್ದರು. ಕಾಮ, ಕ್ರೋಧ ಮುಂತಾದ ಮಾನವ ಸಹಜವಾದ ದುರ್ಗುಣಗಳನ್ನು ತೊರೆದಿದ್ದರು. ನ್ಯಾಯಮಾರ್ಗದಿಂದಲೇ ಹಣವನ್ನುಗಳಿಸಿ ಸನ್ಮಾರ್ಗದಲ್ಲಿ ನಡೆದು ಸಿರಿವಂತರಾಗಿ ಶೂದ್ರರೊಂದಿಗೆ ವ್ಯವಹರಿಸುತ್ತಿದ್ದರು. ಆ ಜನ್ಮದಲ್ಲಿ ಮಾಡಿದ ದಾನದ ಪುಣ್ಯದಿಂದ ಈ ಯಕ್ಷಲೋಕದಲ್ಲಿ ದೇವತೆಗಳಂತೆ ಸ್ವರ್ಗಸುಖವನ್ನು ಅನುಭವಿಸುತ್ತಲಿದ್ದಾರೆ. ಇಲ್ಲಿಂದ ಮುಂದೆ ಬರುವುದೇ ಗಂಧರ್ವಲೋಕ. ಇಲ್ಲಿ ಇರುವವರು ಸುರಲೋಕದ ಗಾಯಕರಾದ ಗಂಧರ್ವರೇ. ಮಾನವಲೋಕದಲ್ಲಿ ಸಂಗೀತಕಲೆಯನ್ನು ಚೆನ್ನಾಗಿ ಅಧ್ಯಯನ ಮಾಡಿ ನಾದಬ್ರಹ್ಮನ ಸ್ವರ ಸ್ವರೂಪವನ್ನು ಸರಿಯಾಗಿ ಅರಿತುಕೊಂಡು ತಮ್ಮ ಗಾನತಾನಗಳಿಂದ

ಭಗವಂತನನ್ನು ಪೂಜಿಸಿ ಶ್ರಾವಕರನ್ನು ಸಂತೋಷಪಡಿಸುವ ಗಾಯಕರು ಭೂಲೋಕದಲ್ಲಿ ಹಲವಾರು ಜನರು ಇರುವರು. ಇಂಥ ಸಂಗೀತಾಗರರಿಗೆ ರಾಜಮಹಾರಾಜರಿಂದ ಹಾಗೂ ಸಿರಿವಂತರಿಂದ ಸಂಘ ಸಂಸ್ಥೆಗಳಿಂದ ವಿಪುಲವಾಗಿ ಬಟ್ಟೆ, ಬರೆ, ಬಂಗಾರ, ಶೃಂಗಾರ, ನಗನಾಣ್ಯಗಳು ಹರಿದು ಬರುತ್ತವೆ. ಅವುಗಳನ್ನು ಸ್ವಾರ್ಥಕ್ಕಾಗಿ ಉಪಯೋಗಿಸದೇ ಸದಾಚಾರ ಸಂಪನ್ನ ಪಂಡಿತರಿಗೆ ದಾನ ನೀಡುವವರು ಹಾಗೂ ಭಕ್ತಿಯಿಂದ, ಸಂಗೀತಸೇವೆಯಿಂದ ಮತ್ತು ಬಗೆಬಗೆಯ ವಾದ್ಯ ಸೇವೆಗಳಿಂದ ಶ್ರೀವಿಷ್ಣುವನ್ನು ಸೇವಿಸುವವರು ಈ ಗಂಧರ್ವಲೋಕಕ್ಕೆ ಬರುತ್ತಾರೆ. ಈ ಗಂಧರ್ವಲೋಕವು ಆ ಗುಹ್ಯತರ ಲೋಕಕ್ಕಿಂತ ಮೇಲೆಯೂ ಇದೆ. ಮಿಗಿಲಾಗಿಯೂ ಇದೆ. ಇದರ ನಂತರ ಬರುವ ಸುಂದರವಾದ ಲೋಕವೇ ವಿದ್ಯಾಧರಲೋಕ. ಇವರು ನೆಲದಲ್ಲಿ ತಾವು ಬಾಳುತ್ತಲಿದ್ದಾಗ ವೇದಶಾಸ್ತ್ರ, ಆಯುರ್ವೇದ, ಧನುರ್ವೇದ ಗಾಂಧರ್ವವೇದ, ವೇದಾಂತ ಮೊದಲಾದ ವಿವಿಧ ವಿದ್ಯೆಗಳ ಅಧ್ಯಯನವನ್ನು ಚೆನ್ನಾಗಿ ಮಾಡಿ, ಅನಂತರ ತಾವು ಕಲಿತ ವಿದ್ಯೆಯನ್ನು ವಿದ್ಯಾರ್ಥಿಗಳಿಗೆ ಹೊಟ್ಟೆಬಟ್ಟೆ ಕೊಟ್ಟು ಪಾಠ ಹೇಳಿ ಕಲಿಸಿದ ಪುಣ್ಯದಿಂದ ಈ ವಿದ್ಯಾಧರ ಲೋಕಕ್ಕೆ ಬಂದಿರುತ್ತಾರೆ. ತಾವು ಪಡೆದ ಪಾಂಡಿತ್ಯ ಹಾಗೂ ವಿದ್ಯಾವೈದಗ್ಧ್ಯಗಳಿಗೆ ಅಹಂಭಾವದಿಂದ ಗರ್ವಪಟ್ಟುಕೊಳ್ಳದೇ, ಕುಲದೇವರನ್ನು ಪ್ರತಿದಿನ ಪೂಜೆ ಮಾಡುವವರೂ ಈ ವಿದ್ಯಾಧರ ಲೋಕಕ್ಕೆ ಬರುತ್ತಾರೆ. ಇಲ್ಲಿ ಇರುವವರಿಗೆ ದಿವ್ಯ ಭೋಗ. ಸ್ವರ್ಗಸುಖ, ಚಿಂತೆ, ದುಃಖ ದಾರಿದ್ರ್ಯಗಳ ಸೋಂಕು ಇಲ್ಲಿ ಇದ್ದವರಿಗೆ ಎಂದೂ ಇಲ್ಲ. ಶಿವಶರ್ಮ ಹಾಗೂ ಸುಶೀಲ ಪುಣ್ಯಶೀಲ ಎಂಬ ಪಾರ್ಷದವರು ತಮ್ಮ-ತಮ್ಮಲ್ಲಿ ಸಂಭಾಷಣೆ ಗೈಯುತ್ತ ಅಂತರಿಕ್ಷ ಲೋಕದಲ್ಲಿ ವಿಮಾನಾರೂಢರಾಗಿ ಹಾರುತ್ತಲಿರುವಾಗ ಅಲ್ಲಿಗೆ ಯಮಧರ್ಮನು ಬಂದನು. ಮತ್ತು ನುಡಿದನು.

**ಯಮಧರ್ಮ:-** ಶಿವಶರ್ಮ, ನಿನಗೆ ಧನ್ಯವಾದ. ನೀನು ಮೊದಲು ವೇದಾಧ್ಯಯನ ಮಾಡಿದೆ. ಗುರುಹಿರಿಯರನ್ನು ಸೇವಿಸಿ ಸಂತೋಷಪಡಿಸಿದೆ. ಸ್ಮೃತಿ, ಪುರಾಣ, ಹಾಗೂ ವೇದ ಮತ್ತು ಧರ್ಮಶಾಸ್ತ್ರಗಳಲ್ಲಿ ಪ್ರತಿಪಾದಿತವಾದ ಸನಾತನ ಧರ್ಮಗಳನ್ನು ಚೆನ್ನಾಗಿ ತಿಳಿದೆ. ನಂತರ ಅದನ್ನು ಆಚರಣೆಯಲ್ಲಿ ತಂದು ಮೋಕ್ಷಪ್ರದವಾದ ಏಳು ಪುಣ್ಯಕ್ಷೇತ್ರಗಳ ಯಾತ್ರೆಯನ್ನು ಮಾಡಿದೆ. ದಾನ, ಧರ್ಮ, ಸ್ವಾಧ್ಯಾಯ, ವರ್ಣಾಶ್ರಮೋಚಿತವಾದ ಸತ್ಕರ್ಮಾನುಷ್ಠಾನ, ಹರಿಭಕ್ತಿ, ಗುರುನಿಷ್ಠೆ ಮುಂತಾದ ಸತ್ಕರ್ಮಗಳ ಫಲವಾಗಿ ಲೋಕವೃಂದರಾದ ಈ ವಿಷ್ಣು ಪಾರ್ಷದರೊಂದಿಗೆ ನಿನಗೆ ಮಿತ್ರತ್ವವು ಉಂಟಾಗಿದೆ. ಇಂದು ಈ ವಿಷ್ಣುಪಾರ್ಷದರ ದರ್ಶನವು ನನಗೆ ಆದದ್ದು ನನ್ನ ಸುದೈವ. ಇದಕ್ಕೆ ಕಾರಣನಾದ ನಿನ್ನನ್ನು ನಾನು ಅಭಿನಂದಿಸುತ್ತೇನೆ. ಹೀಗೆ ಹೇಳಿ ಯಮಧರ್ಮನು ಹೊರಟು ಹೋದನು. ಯಮನು ತೆರಳಿದ ಬಳಿಕ ಶಿವಶರ್ಮನು ಪಾರ್ಷದರನ್ನು ಕುರಿತು ನುಡಿದನು

**ಶಿವಶರ್ಮ:-** ಈಗ ಬಂದವ ಸಾಕ್ಷಾತ್ ಯಮಧರ್ಮ. ಆದರೆ ಇವನ ಆಕಾರವು ಮಾತ್ರ ನಾವು ಪುರಾಣದಲ್ಲಿ ಕೇಳಿದಂತೆ ಭೀಕರಾಕಾರವಾಗಿ ಉಳಿದಿಲ್ಲ. ಅತ್ಯಂತ ಸೌಮ್ಯ ಸುಂದರವಾದ ಆಕಾರದಿಂದ ಅವನು ಇಲ್ಲಿ ಶೋಭಿಸುತ್ತಲಿದ್ದಾನೆ. ಇವನ ಹೆಸರನ್ನು ಕೇಳಿ ಪ್ರಾಣಿಗಳು ಭಯಭ್ರಾಂತವಾಗುತ್ತವೆ. ಪುರಾಣಗಳಲ್ಲಿ ಭೀಕರರೂಪದಿಂದ ವರ್ಣಿಸಲ್ಪಟ್ಟ ಯಮಧರ್ಮನಿಗೆ ಇಲ್ಲಿ ಇಂಥ ಶಾಂತ ಸೌಮ್ಯ ಸುಂದರರೂಪವು ಹೇಗೆ ಬಂದಿತು? ತಿಳಿಸಿರಿ.

**ವಿಷ್ಣುಪಾರ್ಷದ:-** ಶಿವಶರ್ಮ, ಧರ್ಮರಾಜನು ಸ್ವಭಾವದಿಂದಲೇ ಸೌಮ್ಯ. ಹೃದಯದಿಂದ ಮೃದು ಮಧುರ. ಆಕಾರದಿಂದ ಶಾಂತ ಸುಂದರ. ಸ್ವರೂಪತಃ ಅವನು

ಧರ್ಮದ ಮೂರ್ತಿ. ಆದರೆ ಪಾಪಿಷ್ಠರ ಪಾಲಿಗೆ ಮಾತ್ರ ಅವನು ಕೋಪಿಷ್ಠ. ಅವನ ಸ್ವರೂಪ ಕ್ರೂರ ಕರಾಳ. ಪಾಪ ಮಾಡಿದವರಿಗೆ ಶಾಸನ ಮಾಡುವಾಗ ಅವನು ಕೋಪ ಕಷಾಯಿತವಾದ ತನ್ನ ಕೆಂಗಣ್ಣುಗಳಿಂದ ಕಿಡಿಗಳನ್ನೂ ಕರಾಳ ಮುಖದಿಂದ ಕಿಡಿನುಡಿಗಳನ್ನೂ ಉದುರಿಸುತ್ತಾ "ಪಾಪಿಗಳನ್ನು ಹೊಡೆಯಿರಿ; ಬಡೆಯಿರಿ; ಕಡಿಯಿರಿ; ಕೊಲ್ಲಿರಿ; ಇರಿಯಿರಿ; ಸೀಳಿರಿ; ಚುಚ್ಚಿರಿ; ನರಕದಲ್ಲಿ ಒಗೆಯಿರಿ;" ಎಂದು ಮುಂತಾಗಿ ಯಮಶಾಸನವನ್ನು ಮಾಡುತ್ತಲಿರುತ್ತಾನೆ. ಆದರೆ ಶ್ರೀಹರಿಯ ಹಾಗೂ ಹರನ ಧ್ಯಾನ ಮಾಡುವ ಭಕ್ತಜನರನ್ನು ಮಾತ್ರ ನೀವು ಮುಟ್ಟಬೇಡಿರಿ ಎಂದು ತನ್ನ ದೂತರಿಗೆ ಕಟ್ಟಪ್ಪಣೆ ಮಾಡಿರುತ್ತಾನೆ.

**ಗೋವಿಂದ ಮಾಧವ ಮುಕುಂದ ಹರೇ ಮುರಾರೇ ।**
**ಶಂಭೋ ಶಿವೇಶ ಶಶಿಶೇಖರ ಶೂಲಪಾಣೇ ॥**
**ದಾಮೋದರಾಚ್ಯುತ ಜನಾರ್ದನ ವಾಸುದೇವ ।**
**ತ್ಯಾಜ್ಯಾ ಭಟಾ ಯ ಇತಿ ಸಂತತಮಾಭಜಂತಿ ॥**

"ಗೋವಿಂದ, ಮಾಧವ, ಮುಕುಂದ, ಹರೇ, ಮುರಾರೇ, ಶಂಭೋ, ಶಿವ, ಈಶ್ವರ ಚಂದ್ರಚೂಡ, ಶೂಲಪಾಣೇ, ದಾಮೋದರ, ಅಚ್ಯುತ, ಜನಾರ್ದನ, ವಾಸುದೇವ ಎಂದು ಮುಂತಾಗಿ ಶಿವಕೇಶವರ ಮಂಗಳನಾಮವನ್ನು ಯಾರು ಅಂತರಂಗದಲ್ಲಿ ನೆನೆದು ಸತತವೂ ಮುಖದಲ್ಲಿ ಉಚ್ಚರಿಸುತ್ತಲಿರುವರೋ ಅಂಥ ಪುಣ್ಯಾತ್ಮರನ್ನು ಮಾತ್ರ ನೀವು ಇಲ್ಲಿಗೆ ಸೆಳೆದು ತರಬೇಡಿರಿ" ಎಂದು ಎಚ್ಚರಿಕೆ ನೀಡುತ್ತಾನೆ.

ಈ ಭೂಲೋಕದಲ್ಲಿ ಪ್ರಜೆಗಳನ್ನೆಲ್ಲ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ಲಾಲನೆ ಪಾಲನೆ ಮಾಡುವ, ನ್ಯಾಯನಿಷ್ಠುರವಾಗಿ ಧರ್ಮಚಕ್ರವನ್ನು ಪ್ರವರ್ತನಗೈಯುವ ರಾಜರ್ಷಿಗಳು ಯಮದೇವರ ಧರ್ಮಸಭೆಯ ಸದಸ್ಯರಾಗುತ್ತಾರೆ. ಶಿಬಿ ಚಕ್ರವರ್ತಿ, ಸುಧನ್ವ, ರಜಿ, ರಿಪುಂಜಯ, ಮಾಂಧಾತ, ನಾಭಾಗ, ಕರಂಧಮ, ಸಹಸ್ರಜಿತ್, ಧರ್ಮಸೇನ, ಪರಾಂತಕ ಮೊದಲಾದ ರಾಜರ್ಷಿಗಳು ಯಮಧರ್ಮನ ಸುಧರ್ಮ ಸಭೆಯಲ್ಲಿ ಕುಳಿತು ಧರ್ಮಾಧರ್ಮದ ಸೂಕ್ಷ್ಮ ರಹಸ್ಯಗಳ ವಿಚಾರಗೈದು ನ್ಯಾಯನಿರ್ಣಯಗಳನ್ನು ಕೊಡುತ್ತಾರೆ.

## ಸೂರ್ಯಲೋಕಗಮನ; ರವಿಯ ಮಹಿಮಾಶ್ರವಣ.

**ಅಗಸ್ತ್ಯ:-** ಹೀಗೆ ವಿಮಾನದಲ್ಲಿ ಕುಳಿತು ಶಿವಶರ್ಮನು ವಿಷ್ಣುಪಾರ್ಷದರೊಂದಿಗೆ ಒಂದೊಂದೇ ಲೋಕಗಳನ್ನು ದಾಟುತ್ತ ಮೇಲೆ ಏರಿದಾಗ ದಾರಿಯಲ್ಲಿ ಬಹು ಎತ್ತರದ ಮೇಲೆ ಸೂರ್ಯಲೋಕವು ಬಂದಿತು. ಸೂರ್ಯನಾರಾಯಣನಿಗೆ ಭಕ್ತಿಯಿಂದ ಕೈ ಜೋಡಿಸಿ ನಮಿಸಿದ ಶಿವಶರ್ಮ. ಸವಿತೃ ದೇವನು ತನ್ನ ಹುಬ್ಬುಹಾರಿಸಿ ಇವನ ನಮಸ್ಕಾರವನ್ನು ಸ್ವೀಕರಿಸಿ ಆರೆಕ್ಷಣದಲ್ಲಿ ಆಕಾಶಮಾರ್ಗದಲ್ಲಿ ಬಹುದೂರ ಹೊರಟು ಹೋಗಿದ್ದ. ಆಗ ಶಿವಶರ್ಮನು ತನ್ನ ಪಕ್ಕದಲ್ಲಿ ಕುಳಿತ ವಿಷ್ಣುದೂತರಿಗೆ- "ಈ ಸೂರ್ಯಲೋಕ ಪ್ರಾಪ್ತಿ ಹೇಗೆ ಆಗುವುದು?" ಎಂದು ಕೇಳಿದನು.

**ವಿಷ್ಣುಪಾರ್ಷದ:-** ಬ್ರಹ್ಮನ್, ಕೇಳು, ಪ್ರತಿದಿವಸ ಸ್ನಾನ, ಸಂಧ್ಯೆ, ಸೂರ್ಯನಿಗೆ ಸಕಾಲದಲ್ಲಿ, ತ್ರಿಕಾಲದಲ್ಲಿ ಅರ್ಘ್ಯಪ್ರದಾನ, ಗಾಯತ್ರೀಜಪ, ಸೂರ್ಯೋಪಸ್ಥಾನ, ಸೂರ್ಯಾರಾಧನೆ ಮಾಡುವವರಿಗೆ ಈ ದಿವ್ಯವಾದ ಸೂರ್ಯಲೋಕಪ್ರಾಪ್ತಿ ಆಗುವುದು. ಮುಂಜಿವೆ ಆದ ಬಳಿಕ ಸಂಧ್ಯೆ, ಗಾಯತ್ರೀ ಜಪ ಮಾಡದಿರುವುದು ಮಹಾ ಅಪರಾಧ.

**ಉಪಲಭ್ಯ ಚ ಸಾವಿತ್ರೀಂ ನೋಪತಿಷ್ಠೇತ ಯಃಪರಾಮ್ ।**
**ಕಾಲೇ ತ್ರಿಕಾಲಂ ಸಪ್ತಾಹಾತ್ ಸ ಪತೇನ್ನಾತ್ರ ಸಂಶಯಃ ॥**

ಗುರು ಅಥವಾ ತಂದೆಯಿಂದ ಗಾಯತ್ರಿ ಉಪದೇಶ ಪಡೆದು ತ್ರಿಕಾಲದಲ್ಲಿ ಸಂಧ್ಯಾ ವಂದನೆ, ಅರ್ಘ್ಯ, ಗಾಯತ್ರೀ ಜಪ, ಸೂರ್ಯೋಪಸ್ಥಾನಗಳನ್ನು ಏಳು ದಿನಗಳವರೆಗೆ ಸತತ ಮಾಡದೆ ಇದ್ದರೆ ಆ ಮನುಷ್ಯನು ಪತಿತನಾಗುತ್ತಾನೆ. ಪ್ರಾತಃಕಾಲದಲ್ಲಿ ಸೂರ್ಯೋದಯ ಕಾಲಕ್ಕೆ ಎದ್ದು ಸ್ನಾನ ಮಾಡಿ ಸೂರ್ಯೋದಯಕ್ಕಿಂತ ಮೊದಲೇ ಸೂರ್ಯನಿಗೆ ಅರ್ಘ್ಯಪ್ರದಾನವನ್ನು ಕೊಟ್ಟು, ಸೂರ್ಯನ ಉದಯವಾಗುವವರೆಗೆ ಗಾಯತ್ರೀ ಮಂತ್ರವನ್ನು ಜಪಮಾಡುತ್ತ, ಎದ್ದು ನಿಂತುಕೊಳ್ಳಬೇಕು. ಮಧ್ಯಾಹ್ನದಲ್ಲಿ ಸೂರ್ಯನ ಕಡೆ ಮುಖ ಮಾಡಿಕೊಂಡು ಅರ್ಘ್ಯಪ್ರದಾನ ಮಾಡಿ, ಗಾಯತ್ರಿಯನ್ನು ಜಪಿಸಬೇಕು. ಸಾಯಂಕಾಲದಲ್ಲಿ ಸೂರ್ಯನು ಅಸ್ತಮಿಸುವ ಮೊದಲೇ ಅರ್ಘ್ಯವನ್ನು ನೀಡಿ ಆಗಸದಲ್ಲಿ ಚಿಕ್ಕೆಗಳು ಮೂಡುವವರೆಗೆ ಗಾಯತ್ರಿಯ ಜಪವನ್ನು ಮಾಡುತ್ತ ಕುಳಿತುಕೊಳ್ಳಬೇಕು. ಸಕಾಲದಲ್ಲಿ ಮಾಡಿದ ಅರ್ಘ್ಯಪ್ರದಾನ ಹಾಗೂ ಗಾಯತ್ರೀ ಜಪಗಳಿಗೆ ಪೂರ್ಣ ಫಲ ಬರುವುದು.

**ಕಾಲಲೋಪೋ ನ ಕರ್ತವ್ಯಃ ತತಃ ಕಾಲಂ ಪ್ರತೀಕ್ಷಯೇತ್**
**ಕಾಲೇ ಫಲಂತ್ಯೋಷಧಯಃ ಕಾಲೇ ಪುಷ್ಪಂತಿ ಪಾದಪಾಃ**
**ವರ್ಷಂತಿ ತೋಯದಾಃ ಕಾಲೇ ತಸ್ಮಾತ್ ಕಾಲಂ ನ ಲಂಘಯೇತ್**

ಸಂಧ್ಯಾಕಾಲವನ್ನು ಮೀರಿ ಸಂಧ್ಯಾವಂದನೆಯನ್ನು ಮಾಡಬಾರದು. ಸರಿಯಾಗಿ ಕಾಲವನ್ನು ಪಾಲಿಸಬೇಕು. ಗಿಡಬಳ್ಳಿಗಳು ನಿಯಮಿತ ಕಾಲದಲ್ಲಿಯೇ ಹೂವು ಕಾಯಿ ಬಿಡುತ್ತವೆ. ಸಕಾಲದಲ್ಲಿ ಕೊಟ್ಟ ಔಷಧವು ಫಲಿಸುತ್ತದೆ. ಮೋಡಗಳು ಕ್ಲಪ್ತಕಾಲದಲ್ಲಿ ಮಾತ್ರ ಮಳೆಗರೆಯುತ್ತವೆ. ಅದರಂತೆ ವಿಹಿತ ಕಾಲದಲ್ಲಿ ಮಾಡಿದ ಜಪಸಂಧ್ಯಾನುಷ್ಠಾನಾದಿಗಳು ಫಲಪ್ರದ ಆಗುತ್ತವೆ. ಪ್ರಾತಃಕಾಲ, ಮಧ್ಯಾಹ್ನ ಹಾಗೂ ಸಾಯಂಕಾಲ ಈ ತ್ರಿಕಾಲದಲ್ಲಿ ತಪ್ಪದೇ ಗಾಯತ್ರೀ ಮಂತ್ರದಿಂದ ಅಭಿಮಂತ್ರಿತವಾದ ಮೂರುಬೊಗಸೆ ನೀರನ್ನು ಸೂರ್ಯನನ್ನು ಉದ್ದೇಶಿಸಿ ಗಾಯತ್ರೀಮಂತ್ರವನ್ನು ಉಚ್ಚರಿಸುತ್ತ ಅರ್ಘ್ಯಪ್ರದಾನ ಮಾಡಿದ ಮನುಷ್ಯನು ಮೂರುಲೋಕಗಳನ್ನು ದಾನಕೊಟ್ಟ ಪುಣ್ಯವನ್ನು ಪಡೆಯುವನು. ಸಕಾಲದಲ್ಲಿ ಸೂರ್ಯೋಪಾಸನೆ ಮಾಡಿದರೆ ಆ ಸೂರ್ಯನಾರಾಯಣನು ಮಾನವರಿಗೆ ಮುಖ್ಯವಾಗಿ ಆಯುಷ್ಯ, ಆರೋಗ್ಯ, ಐಶ್ವರ್ಯ, ಧನ, ಮಿತ್ರಪುತ್ರ, ಮಡದಿ, ಪಶು, ಬಗೆಬಗೆಯ ಕ್ಷೇತ್ರ, ಅಷ್ಟವಿಧ ಭೋಗ, ಸ್ವರ್ಗ, ಮೋಕ್ಷ ಎಲ್ಲವನ್ನು ಕೊಡುವುದು. ಈ ಗಾಯತ್ರಿ ಮಂತ್ರವನ್ನು ಓಂಕಾರ ಸಹಿತವಾಗಿಯೇ ಓಂ ಭೂಃ ಭುವಃ ಸ್ವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋನಃ ಪ್ರಚೋದಯಾತ್। ಎಂದೇ ಪ್ರಣವ ವ್ಯಾಹೃತಿ ಸಹಿತವಾಗಿಯೇ ಜಪಿಸಬೇಕು.

**ದುರ್ಲಭಾ ಸರ್ವಮಂತ್ರೇಷು ಗಾಯತ್ರೀ ಪ್ರಣವಾನ್ವಿತಾ ।**
**ನ ಗಾಯತ್ರ್ಯಧಿಕಂ ಕಿಂಚಿತ್ ತ್ರಯೀಷು ಪರಿಗೀಯತೇ ॥**

ಎಲ್ಲ ಮಂತ್ರಗಳಲ್ಲಿ ಓಂಕಾರ ಸಹಿತವಾದ ಗಾಯತ್ರೀ ಮಂತ್ರವು ಸರ್ವಶ್ರೇಷ್ಠ. ಗಾಯತ್ರಿಗೆ ಮಿಗಿಲಾದ ಮಂತ್ರವು ಮೂರು ವೇದಗಳಲ್ಲಿ ಬೇರೆ ಇಲ್ಲ.

**ನ ಗಾಯತ್ರೀ ಸಮೋ ಮಂತ್ರೋ ನ ಕಾಶೀ ಸದೃಶೀ ಪುರೀ ।**
**ನ ವಿಶ್ವೇಶ ಸಮಂ ಲಿಂಗಂ ಸತ್ಯಂ ಸತ್ಯಂ ಪುನಃ ಪುನಃ ॥**

ಈ ಪ್ರಪಂಚದಲ್ಲಿ ಗಾಯತ್ರಿಗೆ ಸಮನಾದ ಮಂತ್ರವಿಲ್ಲ. ಕಾಶಿಗೆ ಸಮನಾದ ಪಟ್ಟಣವಿಲ್ಲ. ಕಾಶಿಯ ವಿಶ್ವನಾಥನಿಗೆ ಸಮಾನಾದ ಬೇರೆ ಲಿಂಗವಿಲ್ಲ. ಈ ಮಾತು ಸತ್ಯ. ಸತ್ಯ, ಮತ್ತೆ ಮತ್ತೆ ಸತ್ಯ.

**ಗಾಯತ್ರೀ ವೇದಜನನೀ ಗಾಯತ್ರಿ ಬ್ರಾಹ್ಮಣ ಪ್ರಸೂಃ।**
**ಗಾತಾರಂ ತ್ರಾಯತೇ ಯಸ್ಮಾದ್ ಗಾಯತ್ರೀ ತೇನ ಗೀಯತೆ ॥**

ಗಾಯತ್ರಿಯು ವೇದಗಳ ಮಾತೆ. ಬ್ರಾಹ್ಮಣತ್ವವನ್ನು ಎಂದರೆ ಬ್ರಹ್ಮತೇಜಸ್ಸನ್ನು ಕೊಡುವುದು ಗಾಯತ್ರಿಯೇ. ತನ್ನನ್ನು ಗಾನಮಾಡುವ, ತನ್ನ ಮಹಿಮೆಯನ್ನು ಹಾಡುವವರನ್ನು ರಕ್ಷಣೆ ಮಾಡುತ್ತದೆ ಎಂದು ಪರಬ್ರಹ್ಮನಿಗೆ ಗಾಯತ್ರಿ ಎಂದು ಕರೆಯುತ್ತಾರೆ.

**ಗಾಯತ್ರ್ಯೇವ ಪರೋ ವಿಷ್ಣುಃ ಗಾಯತ್ರ್ಯೇವ ಪರಃಶಿವಃ।**
**ಗಾಯತ್ರ್ಯೇವ ಪರೋ ಬ್ರಹ್ಮಾ ಗಾಯತ್ರ್ಯೇವ ತ್ರಯ್ನಿ ತಥಾ ॥**

ಗಾನಮಾಡುವವರನ್ನು ತ್ರಾಣ- ರಕ್ಷಣ ಮಾಡುವ ವಿಷ್ಣುವೇ ಗಾಯತ್ರಿ ಶಬ್ದವಾಚ್ಯ. ಶಿವಬ್ರಹ್ಮರು ಗಾಯತ್ರೀಸ್ವರೂಪರೇ. ಎಲ್ಲ ವೇದವೂ ಗಾಯತ್ರೀಮಂತ್ರದ ಅರ್ಥರೂಪವೇ ಆಗಿದೆ

ಗಾಯತ್ರೀ ಮಂತ್ರದ ಪ್ರಭಾವದಿಂದಲೇ ಕ್ಷತ್ರಿಯನಾದ ವಿಶ್ವಾಮಿತ್ರನು ಬ್ರಹ್ಮರ್ಷಿ ಪದವಿಯನ್ನು ಹೊಂದಿದ. ಸೂರ್ಯನನ್ನು ವಿಶೇಷ ರೂಪದಿಂದ ಒಲಿಸಿಕೊಳ್ಳ ಬಯಸುವವರು ಸೂರ್ಯನ ಎಪ್ಪತ್ತು ವಿಶಿಷ್ಟ ನಾಮಗಳನ್ನು ಉಚ್ಚರಿಸಿ ಅರ್ಘ್ಯಗಳನ್ನು ಕೊಡಬೇಕು. ಅವನ ಪ್ರತಿಯೊಂದು ಹೆಸರಿಗೂ ಮೊದಲು ಓಂಕಾರವನ್ನೂ, ಕೊನೆಗೆ ನಮಃ ಎಂಬ ಶಬ್ದವನ್ನು ಉಚ್ಚರಿಸಿ ಅರ್ಘ್ಯವನ್ನು ನೀಡಬೇಕು. ೧) ಓಂ ಹಂಸಾಯ ನಮಃ ೨) ಓಂ ಭಾನವೆ ನಮಃ ೩) ಓಂ ಸಹಸ್ರಾಂಶವೇ ನಮಃ ೪) ಓಂ ತಪನಾಯ ನಮಃ ೫) ಓಂ ತಾಪನಾಯ ನಮಃ ೬) ಓಂ ರವಯೇ ನಮಃ ಹೀಗೆ ಮೊದಲು ಕೊನೆಗೆ ಓಂ ಮತ್ತು ನಮಃ ಶಬ್ದಗಳನ್ನು ಸೇರಿಸಿ ಮುಂದೆ ಕಾಣಿಸಿದ ಉಳಿದ ಎಲ್ಲ ಸೂರ್ಯನ ಹೆಸರುಗಳಿಗೆ ಸಂಸ್ಕೃತ ಚತುರ್ಥೀ ವಿಭಕ್ತಿಯ ಯ, ನೇ, ವೇ, ಮುಂತಾದ ಪ್ರತ್ಯಯಗಳನ್ನು ಸೇರಿಸಿ ಅರ್ಘ್ಯವನ್ನು ನೀಡಬೇಕು. ೭) ಓಂ ವಿಕರ್ತನಾಯ ನಮಃ ೮) ಓಂ ವಿವಸ್ವತೇ ನಮಃ ೯) ಓಂ ವಿಶ್ವಕರ್ಮಣೇ ನಮಃ ೧೦) ಓಂ ವಿಭಾವಸವೇ ನಮಃ ೧೧) ಓಂ ವಿಶ್ವರೂಪಾಯನಮಃ ೧೨) ಓಂ ವಿಶ್ವಕರ್ತ್ರೆ, ನಮಃ ೧೩) ಓಂ ಮಾರ್ತಂಡಾಯ ೧೪) ಮಿಹಿರಾಯ ೧೫) ಅಂಶುಮತೇ ೧೬) ಆದಿತ್ಯಾ ೧೭) ಉಷ್ಣಗವೇ ೧೮) ಸೂರ್ಯಾಯ ೧೯) ಅರ್ಯಮ್ಣೇ ೨೦) ಬ್ರಧ್ನಾಯ ೨೧) ದಿವಾಕರಾಯ ೨೨) ದ್ವಾದಶಾತ್ಮನೇ ೨೩) ಸಪ್ತಹಯಾಯ ೨೪) ಭಾಸ್ಕರಾಯ ೨೫) ಅಹಸ್ಕರಾಯ ೨೬) ಖಗಾಯ ೨೭) ಸೂರಾಯ ೨೮) ಪ್ರಭಾಕರಾಯ ೨೯) ಶ್ರೀಮತೇ ೩೦) ಲೋಕಚಕ್ಷುಷೇ ೩೧) ಗೃಹೇಶ್ವರಾಯ ೩೨) ತ್ರಿಲೋಕೇಶಾಯ ೩೩) ಲೋಕ ಸಾಕ್ಷಿಣೇ ೩೪) ತಮೋಽರಯೇ ೩೫) ಶಾಶ್ವತಾಯ ೩೬) ಶುಚಯೇ ೩೭) ಗಭಸ್ತಿಹಸ್ತಾಯ ೩೮) ತೀವ್ರಾಂಶವೇ ೩೯) ತರಣಯೇ ೪೦) ಸಮಹೋರಣಯೇ ೪೧) ದ್ಯುಮಣಯೇ ೪೨) ಹರಿದಶ್ವಾಯ ೪೩) ಅರ್ಕಾಯ ೪೪) ಭಾನುಮತೇ ೪೫) ಭಯನಾಶನಾಯ ೪೬) ಭಾಸ್ವತೇ ೪೭) ಪೂಷ್ಣೇ ೪೮) ಪೂಷ್ಣೇ ೪೯) ವೃಷಾಕಪಯೇ ೫೦) ಏಕಚಕ್ರರಥಾಯ ೫೧) ಮಿತ್ರಾಯ ೫೨) ಮಂದೇಹಾರಯೇ ೫೩) ತಮಿಸ್ರರಾಯ ೫೪) ದೈತ್ಯಹಾಯ

೫೫) ಪಾಪಹರ್ತ್ರೇ ೫೬) ಧರ್ಮಾಯ ೫೭) ಧರ್ಮ ಪ್ರಕಾಶಕಾಯ ೫೮) ಹೇಲಿಕಾಯ ೫೯) ಚಿತ್ರಭಾನವೆ ೬೦) ಕಲಿಘ್ನಾಯ ೬೧) ತಾರ್ಕ್ಷ್ಯವಾಹನಾಯ ೬೨) ದಿಕ್ಪತಯೇ ೬೩) ಪದ್ಮಿನೀನಾಥಾಯ ೬೪) ಕುಶೇಶಯ ಕರಾಯ ೬೫) ಹರಯೇ ೬೬) ಘರ್ಮರಶ್ಮಯೇ ೬೭) ದುರ್ನಿರೀಕ್ಷ್ಯಾಯ ೬೮) ಓಂ ಚಂಡಾಂಶವೇ ನಮಃ ೬೯) ಓಂ ಕಶ್ಯಪಾತ್ಮಜಾಯ ನಮಃ ಹೀಗೆ ನುಡಿದು ಅರ್ಘ್ಯವನ್ನು ಕೊಡಬೇಕು.

ಸೂರ್ಯನಿಗೆ ಅರ್ಘ್ಯವನ್ನು ಕೊಡುವ ಕ್ರಮ:- ಒಂದು ನಿರ್ಮಲವಾದ ತಾಮ್ರ ಪಾತ್ರೆಯಲ್ಲಿ ನೀರನ್ನು ತುಂಬಿ ಅದರಲ್ಲಿ ದರ್ಭೆ, ಅಕ್ಷತೆ, ಹೂವು, ರಕ್ತಚಂದನ ಮುಂತಾದವುಗಳನ್ನು ಹಾಕಿ ನೀರು ತುಂಬಿದ ಆ ಅರ್ಘ್ಯ ಪಾತ್ರವನ್ನು ತನ್ನ ತಲೆಯ ಹತ್ತಿರ ತಂದು ಎದ್ದು ನಿಂತು ಅಥವಾ ಮಂಡಿ ಊರಿ ಹಿಂದೆ ಹೇಳಿದ ೭೦ ಸೂರ್ಯ ಹೆಸರುಗಳನ್ನು ಚತುರ್ಥಿ ವಿಭಕ್ತಿಯ ಏಕವಚನಾಂತವಾಗಿ ಓಂ ಕಾರ ಶಿರಸ್ಕವಾಗಿ ನಮಃ ಶಬ್ದ ಪುರಸ್ಸರವಾಗಿ ಉಚ್ಚರಿಸಿ ಒಂದೊಂದೇ ಅರ್ಘ್ಯವನ್ನು ಸೂರ್ಯದೇವನನ್ನು ನೆನೆಯುತ್ತ ನೀಡಬೇಕು. ಸೂರ್ಯೋದಯ ಹಾಗೂ ಸೂರ್ಯಾಸ್ತ ಸಮಯಗಳಲ್ಲಿ ಈ ಎಪ್ಪತ್ತು ಸೂರ್ಯನಾಮಗಳೆಂಬ ರಹಸ್ಯ ಮಂತ್ರಗಳನ್ನು ಪಠಿಸುತ್ತ ಸೂರ್ಯ ನಾರಾಯಣನಿಗೆ ನಮಸ್ಕಾರವನ್ನು ಮಾಡಬೇಕು. ಇದರಿಂದ ಮನುಷ್ಯನ ರೋಗಗಳು ಕೂಡಲೇ ದೂರಾಗುವವು. ದಾರಿದ್ರ್ಯವು ತೊಲಗಿ ಹೋಗುವುದು. ದುಃಖವೆಲ್ಲವೂ ಬಿಟ್ಟು ಹೋಗುವುದು. ಇಲ್ಲಿ ಬದುಕಿ ಇರುವವರೆಗೆ ಅವನಿಗೆ ಪೂರ್ಣ ಆರೋಗ್ಯ, ಐಶ್ವರ್ಯ, ತೇಜ, ಕಾಂತಿ, ಶಕ್ತಿ ಮುಂತಾದವು ಲಭಿಸುವವು. ಮರಣಾನಂತರ ಆ ಮನುಷ್ಯನು ಸೂರ್ಯಲೋಕದಲ್ಲಿ ಸುಪ್ರತಿಷ್ಠಿತನಾಗುವನು. ಹೀಗೆ ಸೂರ್ಯಲೋಕದ ದರ್ಶನ ಮಾಡಿಕೊಂಡ ಬಳಿಕ ಶಿವಶರ್ಮಕುಳಿತ ವೈಕುಂಠ ವಿಮಾನವು ಸೂರ್ಯಲೋಕವನ್ನು ದಾಟಿ ಮುಂದುವರೆಯಿತು. ಅನಂತರದ ದೀರ್ಘ ಅಂತರವನ್ನು ಕ್ರಮಿಸಿದ ಬಳಿಕ ಇಂದ್ರಲೋಕದ ಅಮರಾವತಿಯನ್ನು ಅವರು ತಲುಪಿದರು.

## ಇಂದ್ರಲೋಕ ಹಾಗೂ ಅಗ್ನಿಲೋಕಗಳ ನಿರೂಪಣೆ

**ಶಿವಶರ್ಮ:-** ಪುಣ್ಯಾತ್ಮರೇ, ಅತ್ಯುತ್ತಮವಾದ ಈ ಪುಣ್ಯಪುರಿಯು ಯಾವುದು? ಮತ್ತು ಯಾರದು?

**ವಿಷ್ಣುಪಾರ್ಷದ:-** ಮಹನೀಯ, ಇದು ಇಂದ್ರಪುರಿ. ಸ್ವರ್ಗಲೋಕ. ಅಮರಾವತಿ ಈ ಸುರಲೋಕದ ರಾಜಧಾನಿ. ಈ ಸುರಪುರಿಯಲ್ಲಿ ಬಟ್ಟೆ ಹೊಲೆಯುವ ಸಿಂಪಿಗರು ಇಲ್ಲ. ಆಭರಣ ಮಾಡುವ ಅಕ್ಕಸಾಲಿಗರೂ ಇಲ್ಲ. ಏಕೆಂದರೆ ಇಲ್ಲಿಯ ನಾಕಲೋಕದ ನಾಗರಿಕರಿಗೆ ಬೇಕಾಗುವ ವಸ್ತ್ರಗಳನ್ನು ವಸ್ತು-ಒಡವೆಗಳನ್ನೂ, ಅಲಂಕಾರ ಆಭರಣ ಗಳನ್ನೂ ಇಲ್ಲಿರುವ ಕಲ್ಪವೃಕ್ಷವೇ ಬಯಸಿದಾಕ್ಷಣ ಒದಗಿಸಿ ಬಿಡುವುದು. ಇಲ್ಲಿ ಅಡಿಗೆ ಮಾಡುವ ಪಾಚಕರೂ ಇಲ್ಲ. ಇಲ್ಲಿಯ ಜನರಿಗೆ ಮೂರು ಹೊತ್ತು ಬೇಕಾಗುವ ಭಕ್ಷ್ಯ ಭೋಜ್ಯ ಪಕ್ವಾನ್ನಗಳನ್ನೂ, ಶುಚಿರುಚಿಯಾದ ಮೃಷ್ಟಾನ್ನ ತಿಂಡಿ ತೀರ್ಥ ಪಾನೀಯಗಳನ್ನು ಕಾಮಧೇನುವೇ ಕೊಡುವುದು. ಇದೊಂದು ಭೋಗಪುರಿ. ಸಕಲವಿಧವಾದ ಸುಖಾನುಭವವೇ ಇಲ್ಲಿಯ ಜನರ ಮುಖ್ಯ ಕಾರ್ಯ. ಈ ಲೋಕದ ಒಡೆಯ ಇಂದ್ರ. ಅವನಿಗೆ ಸಾವಿರ ಕಣ್ಣು. ಹಿಂದಿನ ಜನ್ಮದಲ್ಲಿ ನೂರು ಅಶ್ವಮೇಧ ಯಜ್ಞಮಾಡಿ ಇವನು ಪಡೆದಿದ್ದಾನೆ ಇಂಥ ದಿವ್ಯ ಸ್ಥಾನ,

ಭವ್ಯಮಾನ. ಆದ್ದರಿಂದಲೇ ಅವನಿಗೆ ಹೆಸರು ಶತಮನ್ಯು ಎಂದು. ಭೂಲೋಕದಲ್ಲಿ ನೂರು ಅಶ್ವಮೇಧ ಯಜ್ಞಗಳನ್ನು ಯಾವ ವಿಘ್ನವಿಲ್ಲದೇ ಯಶಸ್ವಿಯಾಗಿ ಮಾಡಿದವನು ಇಂದ್ರಪದವಿಯನ್ನು ಹೊಂದುತ್ತಾನೆ. ನೂರು ಅಶ್ವಮೇಧ ಯಜ್ಞಗಳನ್ನು ಮಾಡಿ ಪೂರೈಸಲು ಆಗದೇ ಅರ್ಧಕ್ಕೆ ಬಿಟ್ಟವರೂ, ಜ್ಯೋತಿಷ್ಟೋಮ ಮುಂತಾದ ಯಜ್ಞಗಳನ್ನು ಮಾಡಿದ ವೈದಿಕರೂ ತುಲಾಪುರುಷದಾನವೇ ಮೊದಲಾದ ಹದಿನಾರು ಶಾಸ್ತ್ರೋಕ್ತ ದಾನಧರ್ಮಗಳನ್ನು ಮಾಡಿದವರೂ, ಯುದ್ಧದಲ್ಲಿ ವೈರಿಗಳಿಗೆ ಎಂದೂ ಬೆನ್ನು ತೋರದೇ ಶಸ್ತ್ರ ಹಿಡಿದು ಹೋರಾಡುತ್ತಲೇ ರಣರಂಗದಲ್ಲಿ ದೇಹ ಬಿಟ್ಟವರೂ, ನಿರ್ಮಲ ಮನಸ್ಸಿನಿಂದ ಅಹಂಕಾರವಿಲ್ಲದೇ, ವರ್ಣಾಶ್ರಮ ಉಚಿತವಾದ ಧರ್ಮಕರ್ಮಾನುಷ್ಠಾನವನ್ನು ಮಾಡಿ ಭಕ್ತಿಯಿಂದ ಭಗವಂತನಿಗೆ ಸಮರ್ಪಿಸಿದ ಪುಣ್ಯಾತ್ಮರೂ, ಮರಣೋತ್ತರ ಕಾಲದಲ್ಲಿ ಈ ಸ್ವರ್ಗಲೋಕಕ್ಕೆ ಬಂದು ತಮ್ಮ ಪುಣ್ಯರಾಶಿ ಇರುವವರೆಗೆ ಬಗೆಬಗೆಯ ಸುಖೋಪಭೋಗಗಳನ್ನು ಅನುಭವಿಸುತ್ತ ಇರುತ್ತಾರೆ.

ಈ ಸ್ವರ್ಗದ ಆಗ್ನೇಯ ನಿಟ್ಟಿನಲ್ಲಿ ಕಾಣುವುದೇ ಜ್ಯೋತಿರ್ಮಯವಾದ ವೈಶ್ವಾನರ ಲೋಕ. ಅದರ ರಾಜಧಾನಿ ಅಗ್ನಿಪುರಿ. ಉತ್ತಮೋತ್ತಮವಾದ ಜಪತಪ ವ್ರತಗಳನ್ನು ಆಚರಿಸುವ ಅಗ್ನಿದೇವನ ಉಪಾಸಕರೂ ಅಗ್ನಿಹೋತ್ರ ಇಟ್ಟ ಬ್ರಾಹ್ಮಣರೂ, ಅಗ್ನಿಕಾರ್ಯ ಮಾಡುವ ಬ್ರಹ್ಮಚಾರಿಗಳೂ, ಪಂಚಾಗ್ನಿ ಮಧ್ಯದಲ್ಲಿ ನಿಂತು ತಪಸ್ಸು ಮಾಡುವ ಮಹರ್ಷಿಗಳೂ ಈ ಅಗ್ನಿಲೋಕದಲ್ಲಿ ಒಂದು ವಾಸಿಸುತ್ತಾರೆ. ಯಜ್ಞಮಾಡುವವರಿಗೆ ಉಪಯುಕ್ತವಾದ ಹಣ ಮತ್ತು ಉಳಿದ ಅವಶ್ಯಕ ವಸ್ತುಗಳನ್ನು ಕೊಟ್ಟು ಸಹಾಯ ಮಾಡುವವರೂ, ಅಗ್ನಿ ಮಾಂದ್ಯದಿಂದ ಬದ್ಧಕೋಷ್ಠರಾದ ಜನರಿಗೆ ಅಗ್ನಿದೀಪಕವಾದ ಪಾಚಕ ಔಷಧಕೊಟ್ಟು ಜಠರಾಗ್ನಿಯನ್ನು ಉದ್ದೀಪನ ಗೊಳಿಸುವ ವೈದ್ಯರೂ, ಅರ್ಚಿಷ್ಮತೀ ಎಂದು ಹೆಸರುಳ್ಳ ಈ ಅಗ್ನಿಪುರಿಯಲ್ಲಿ ನೆಲೆಸುವರು. ಎಲ್ಲ ಅಪವಿತ್ರ ವಸ್ತುಗಳು ಅಗ್ನಿಯ ಸ್ಪರ್ಶಮಾತ್ರದಿಂದ ಪವಿತ್ರವಾಗುತ್ತವೆ. ಆದ್ದರಿಂದಲೇ ಪಾವಕ ಎಂದು ಹೆಸರು ಈ ಅಗ್ನಿದೇವನಿಗೆ. ಪರಮೇಶ್ವರನ ಮೂರನೇ ಕಣ್ಣಾಗಿದ್ದಾನೆ ಈ ಅಗ್ನಿ. ಇದೊಂದು ಬಹಳ ಹಳೆಯ ಕಾಲದ ಘಟನೆ. ನರ್ಮದಾನದಿಯ ದಂಡೆಯ ಮೇಲೆ ಒಂದು ನಗರ. ನರ್ಮನಗರ ಎಂದು ಅದರ ಖ್ಯಾತಿ. ಅಲ್ಲಿ ಓರ್ವ ಮುನಿ. ವಿಶ್ವಾನರ ಎಂದು ಅವನ ಹೆಸರು. ಅವನು ಶಿವಭಕ್ತ. ಶಿವ ನಿಷ್ಠನಾದ ಈ ವಿಶ್ವಾನರ ಬ್ರಾಹ್ಮಣನು ಒಂದು ದಿನ ತನ್ನಲ್ಲಿ ತಾನೇ ವಿಚಾರಿಸಿದ.-'' ಬ್ರಹ್ಮಚರ್ಯ, ಗೃಹಸ್ಥಾಶ್ರಮ, ವಾನಪ್ರಸ್ಥ, ಹಾಗೂ ಸನ್ಯಾಸ ಈ ನಾಲ್ಕು ಆಶ್ರಮಗಳಲ್ಲಿ ಯಾವುದು ಶ್ರೇಷ್ಠ? ಯಾವುದು ಕನಿಷ್ಠ? ಯಾವುದು ಸುಲಭ? ಯಾವುದು? ಕಠಿಣ ನಾಲ್ಕು ಆಶ್ರಮಗಳನ್ನು ತೂಗಿ ನೋಡಲಾಗಿ ಗೃಹಸ್ಥಾಶ್ರಮೇ ಶ್ರೇಷ್ಠ ಎನಿಸುವುದು. ಮಿಕ್ಕ ಮೂರು ಆಶ್ರಮದವರು ಅವಲಂಬಿಸಿರುವದು ಮನೆ ಮಾಡಿಕೊಂಡು ಒಂದೆಡೆ ನೆಲೆ ನಿಂತು ಅತಿಥಿ ಅಭ್ಯಾಗತರಿಗೆ ಅನ್ನದಾನ ಮಾಡುವ ಗೃಹಸ್ಥಾಶ್ರಮಿಯನ್ನೇ. ದೇವತೆಗಳು, ಪಿತೃಗಳು ಮನುಷ್ಯರು, ಪಶುಪಕ್ಷಿಗಳು ಕೂಡ ಉಪಜೀವಿಸುವುದು ಗೃಹಸ್ಥಾಶ್ರಮಿಯನ್ನೇ. ಯಾವ ಗೃಹಸ್ಥನು ಸ್ನಾನ, ಹೋಮ, ದಾನ, ದೇವರ ಪೂಜೆ, ನೈವೇದ್ಯ, ವೈಶ್ವದೇವ, ಅತಿಥಿ ಭೋಜನ, ಮುಂತಾದವುಗಳನ್ನು ಮಾಡದೇ ಊಟ ಮಾಡುವನೋ ಅವನು ನರಕದಲ್ಲಿ ಬೀಳುವನು. ಪರಸ್ತ್ರೀ ಪರಿತ್ಯಾಗ, ಸ್ವಸ್ತ್ರೀಯಿಂದ ಸಂತೋಷ ಅತಿಥಿಸೇವೆ, ಪಂಚಮಹಾಯಜ್ಞ ಮುಂತಾದವುಗಳನ್ನು ಮಾಡುವ ಗೃಹಸ್ಥನು ಮದುವೆ ಮಾಡಿಕೊಂಡರೂ ಬ್ರಹ್ಮಚಾರಿ ಎಂದೇ

ಕರೆಯಲ್ಪಡುವನು. ಯಾಚನೆಯನ್ನು ಮಾಡದೇ ಯದೃಚ್ಛಾಲಾಭ ಸಂತುಷ್ಟನಾಗಿ ಸ್ವಧರ್ಮನಿಷ್ಠನಾದ ಗೃಹಸ್ಥನು ಸನ್ಯಾಸಿಗಳಿಗಿಂತ ಪೂಜ್ಯನಾಗಿದ್ದಾನೆ.'' ಹೀಗೆಲ್ಲ ವಿಚಾರ ಮಾಡಿ ಆ ವಿಶ್ವಾನರ ಬ್ರಾಹ್ಮಣನು ತನಗೆ ಯೋಗ್ಯಳಾದ ಓರ್ವ ಕುಲೀನ ಕನ್ಯೆಯನ್ನು ಮದುವೆ ಮಾಡಿಕೊಂಡನು. ವಿವಾಹ ಅನಂತರ ಆ ಬ್ರಾಹ್ಮಣನು ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ ಎಂದು ತನ್ನ ಜಾತಿಗೆ ವಿಹಿತವಾದ ಷಟ್ಕರ್ಮಗಳಲ್ಲಿ ನಿರತನಾಗಿ ದೇವ, ಪಿತೃ, ಗುರು ಅತಿಥಿಗಳ ಆರಾಧನೆ ಮಾಡುತ್ತ ಸುಖದಿಂದ ಇದ್ದನು. ದಂಪತಿಗಳಿಬ್ಬರೂ ಅನ್ಯೋನ್ಯ ಅನುಕೂಲರಾಗಿ ಅತಿಥಿ ಅಭ್ಯಾಗತರ ಸೇವೆ ಮಾಡುತ್ತಿದ್ದರು.

ಒಂದು ದಿವಸ ಅವನು ಪರಮ ಪತಿವ್ರತಾ ಪತ್ನಿಯಾದ ಶುಚಿಷ್ಮತಿಯು ಪತಿಯ ಬಳಿಗೆ ಬಂದು ವಿನಯದಿಂದ ವಂದಿಸಿ ಭಕ್ತಿಯಿಂದ ಬಾಗಿ ನಮ್ರತೆಯಿಂದ ಕೇಳಿಕೊಂಡಳು.- ''ಪೂಜ್ಯ ಪತಿದೇವ, ನಿಮ್ಮಂಥ ಧರ್ಮಮಾರ್ತಂಡರ ಕೈ ಹಿಡಿದು ನಾನು ಧನ್ಯಳು. ಕರ್ಮಕಾಂಡದಲ್ಲಿ ನಿಷ್ಣಾತರಾದ ನಿಮ್ಮ ನಿರಂತರ ಪರಿಚರ್ಯೆಯಿಂದ ನಾನು ಕೃತಾರ್ಥಳು. ನಿಮ್ಮ ದಯೆಯಿಂದ ನಾನು ಭಾಗ್ಯವಂತ ಭಾಮಿನಿಯಿಂದ ನಾನು ಕೃತಾರ್ಥಳು. ನಿಮ್ಮ ದಯೆಯಿಂದ ನಾನು ಭಾಗ್ಯವಂತ ಭಾಮಿನಿಯರು ಅನುಭವಿಸಬಹುದಾದ ಎಲ್ಲ ವಿಧದ ಭೋಗ-ಭಾಗ್ಯಗಳನ್ನು ಅನುಭವಿಸಿದೆ. ಸುಖಾನುಭೂತಿಯನ್ನು ಕಂಡು ಉಂಡು ತೃಪ್ತಿಗೊಂಡೆ. ಆದರೆ ಪ್ರಭು, ನನ್ನ ಬಹುದಿನದ ಒಂದು ಬಯಕೆ ಮಾತ್ರ ಇಂದಿಗೂ ಅಪರಿಪೂರ್ಣ. ಅದರಿಂದ ನನ್ನ ಮನಸ್ಸು ಅತೃಪ್ತ. ತಮ್ಮಲ್ಲಿ ಹೇಳದೇ ಮತ್ತೆ ಯಾರಲ್ಲಿ ಹೇಳಲಿ ನನ್ನ ಮನದ ಅಳಲನ್ನು? ನೀವು ನನಗೆ ಎಲ್ಲ ಭಾಗ್ಯವನ್ನು ಕರುಣಿಸಿದಿರಿ. ಆದರೆ ಸಂತಾನಭಾಗ್ಯವನ್ನು ಮಾತ್ರ ದಯಪಾಲಿಸಲಿಲ್ಲ. ಮಗನ ಮುಖ ಕಾಣುವವರೆಗೆ ತೃಪ್ತಿಯಿಲ್ಲ ಹೆಣ್ಣು ಜೀವಕ್ಕೆ. ಆದರೆ ನನಗೆ ಸಾಮಾನ್ಯ ಪುತ್ರ ಅಥವಾ ಮಾನವಮಾತ್ರನಾದ ಮಗ ಆದರೆ ನಾನು ಒಲ್ಲೆ. ನಿಮ್ಮಂಥ ಮಹರ್ಷಿಯನ್ನು ಪತಿಯಾಗಿ ಪಡೆದ ಬಳಿಕ ಮಹಾದೇವನಂತಹ ಮಗನೇ ನನಗೆ ಆಗಬೇಕು. ಶಂಕರನಿಗೆ ಸಮಾನನಾದ ಸುಪುತ್ರನನ್ನು ಹೆತ್ತು ಎತ್ತಿ ಸಾಕಿ ಸಲುಹುವುದೇ ನನ್ನ ಜೀವನದ ಹೆಗ್ಗುರಿ. ಆಯುಷ್ಯದ ಹೆಬ್ಬಯಕೆ. ನನ್ನ ಬಾಳಿನ ಒಂದೇ ಒಂದಾದ ಈ ಹಿರಿಯಾಸೆಯನ್ನು ತಾವು ಪೂರೈಸುವಿರಿ ಎಂಬ ಭರವಸೆ ನನಗೆ.''

ಮಡದಿಯ ಈ ವಚನವನ್ನು ಕೇಳಿ ಆ ಮುನಿ ಒಂದು ಕ್ಷಣ ದಿಙ್ಮೂಢ. ಎಂಥ ಅಶಕ್ಯ ಅಪೇಕ್ಷೆ! ನನ್ನ ಮಡದಿಯದು; ಕೈಲಾಸಪತಿಯನ್ನು ತನ್ನ ಕೈಕೂಸಾಗಿ ಆಡಿಸಬೇಕೆಂಬ ಅವಳ ಈ ಹೆಬ್ಬಯಕೆ ಚಂದ್ರನನ್ನು ಚೆಂಡನ್ನಾಗಿ ಮಾಡಿ ಆಡಿಸುವಷ್ಟೇ ದುಸಾಧ್ಯ. ಆದರೂ ಈ ಶುಚಿಷ್ಮತಿ ಪರಮಪತಿವ್ರತೆ. ಆ ಭವಾನಿಪತಿಯೇ ಅವಳ ಬಾಯಿಂದ ಹೀಗೆ ನುಡಿಸಿರಬಹುದು. ಪ್ರಯತ್ನ ನನ್ನದು. ಫಲ ಪರಮೇಶ್ವರನದು ಎಂದು ಹೊರಟೇಬಿಟ್ಟ ವಾರಾಣಸಿಗೆ. ಅಲ್ಲಿ ಬಂದ ಬಳಿಕ ಅವನ ತಲೆಯಲ್ಲಿಯೇ ವಿಚಾರಚಕ್ರ- ''ಈ ಮುಕ್ತಿ ಕ್ಷೇತ್ರದಲ್ಲಿ ಶಿವಲಿಂಗ ನೂರಾರು. ದೇವತೆಗಳು ಸಾವಿರಾರು. ಇವುಗಳಲ್ಲಿ ನಾನು ಯಾವ ಲಿಂಗವನ್ನು ಆರಾಧಿಸುವುದು? ಈ ಅವಿಮುಕ್ತ ಕ್ಷೇತ್ರದಲ್ಲಿ ಸಿದ್ಧಿಕ್ಷೇತ್ರವೇ ಪ್ರಧಾನ. ಸಿದ್ಧಿ ರೂಪಣಿಯಾದ ವಿಕಟಾದೇವಿಯು ಪ್ರಕಟವಾದದ್ದು ಇಲ್ಲಿಯೇ. ವಿಘ್ನಗಳನ್ನೆಲ್ಲ ನಿವಾರಿಸುವ ಸಿದ್ಧಿವಿನಾಯಕನು ನೆಲೆಸಿದ್ದು ಇಲ್ಲಿಯೇ. ಇಲ್ಲಿರುವ ವೀರೇಶ್ವರಲಿಂಗಕ್ಕೆ ನಾಗರಾಜ ಶಂಖಚೂಡನು ಪ್ರತಿದಿನವೂ ರಾತ್ರಿ ಕಾಲದಲ್ಲಿ ತನ್ನ ಹೆಡೆಯ ಮೇಲೆರುವ ರತ್ನಗಳಿಂದ ಆರತಿಯನ್ನು ಮಾಡಿ ಸಿದ್ಧಿ ಪಡೆದಿದ್ದಾನೆ. ವಸುದತ್ತ, ರತ್ನದತ್ತ ಎಂಬ ವೈಶ್ಯರು ಒಂದು ವರ್ಷ ಈ ವೀರೇಶ್ವನನ್ನು ಆರಾಧಿಸಿ ಸತ್ಯವತಿಗೆ

ಸಮಳಾದ ಮಗಳನ್ನು ಪಡೆದರು. ನಾನು ಕೂಡ ಇದೇ ಲಿಂಗವನ್ನು ಆರಾಧಿಸಿ ನನ್ನ ಮನದನ್ನೆಯ ಮನೋವಾಂಛಿತ ಮಗನನ್ನು ಪಡೆಯುವೆನು'' ಎಂದು ನಿರ್ಧರಿಸಿ ಅಲ್ಲಿಗೆ ಬಂದನು. ಅಲ್ಲಿಯ ಚಂದ್ರಕೂಪ ತೀರ್ಥದಲ್ಲಿ ಸ್ನಾನ ಮಾಡಿ ತಪೋವ್ರತದ ದೀಕ್ಷೆಯನ್ನು ಗ್ರಹಣ ಮಾಡಿದನು. ಒಂದು ತಿಂಗಳವರೆಗೆ ಒಂದೇ ಹೊತ್ತು ಊಟ ಮಾಡಿ ಪರಮೇಶ್ವರನನ್ನು ಆರಾಧಿಸಿದನು. ಅದೂ ಕೂಡ ರಾತ್ರಿಯಲ್ಲಿ. ಎರಡನೇ ತಿಂಗಳು ದೊರೆತಾಗ ದೊರೆತಷ್ಟನ್ನು ಮಾತ್ರ ಭಕ್ಷಿಸಿ ಶಿವಧ್ಯಾನ. ಮೂರನೇ ತಿಂಗಳು ಅಖಂಡ ಉಪವಾಸ. ನಾಲ್ಕನೇ ತಿಂಗಳು ಬರೀ ಹಾಲು. ಐದನೇ ತಿಂಗಳು ಕೇವಲ ಹಣ್ಣು. ಏಳನೇ ತಿಂಗಳು ಒಂದು ಮುಷ್ಟಿ ಎಳ್ಳು. ಎಂಟನೇ ತಿಂಗಳು ನೀರು ಮಾತ್ರ. ಒಂಭತ್ತನೇ ತಿಂಗಳು ಪಂಚಗವ್ಯ. ಹತ್ತನೇ ತಿಂಗಳು ಚಾಂದ್ರಾಯಣ. ಹನ್ನೊಂದನೇ ತಿಂಗಳು ಕೇವಲ ತೀರ್ಥ ಪ್ರಾಶನ. ಹನ್ನೆರಡನೇ ತಿಂಗಳು ಕೇವಲ ಗಾಳಿ ಕುಡಿದು ತಪಸ್ಸು. ಹದಿಮೂರನೇ ತಿಂಗಳು ಗಂಗಾಸ್ನಾನ ಮಾಡಿ ಪ್ರಾತಃಕಾಲದಲ್ಲಿ ಅವನು ವೀರೇಶ್ವರ ಲಿಂಗದ ಬಳಿ ಹೋದ. ಲಿಂಗವನ್ನು ನೋಡಿದ. ಆಶ್ಚರ್ಯದ ಆಘಾತ ಆ ವಿಶ್ವಾನರ ಬ್ರಾಹ್ಮಣನಿಗೆ. ಆ ಲಿಂಗದ ಮಧ್ಯಭಾಗದಲ್ಲಿ ಎದ್ದು ನಿಂತಿದೆ ಒಂದು ಮುದ್ದು ಮಗು. ಎಂಟು ವರ್ಷ ವಯಸ್ಸು. ಬೊಗಸೆಗಣ್ಣು, ಹವಳತುಟಿ, ಪಿಂಗಲಬಣ್ಣದ ಜಟಾಮಂಡಲ, ಅದರ ಮೇಲೆ ಒಂದು ಮನೋಹರ ಮುಕುಟ, ಬಟ್ಟೆಬರೆ ಇಲ್ಲದ ಹುಟ್ಟಿದ ಮಹರ್ದೆಶೆಯ ನಿಲುವು, ಮುಖದಲ್ಲಿ ಮಂದಹಾಸದ ಮಿನುಗು, ಆ ವಯಸ್ಸಿಗೆ ತಕ್ಕಂಥ ವೇಷಭೂಷಣ, ಮುಖದಲ್ಲಿ ವೈದಿಕ ಮಂತ್ರಭಾಷೆ. ಮಾತುಮಾತಿಗೆ ನಗೆ ಒಟ್ಟಾರೆ ಅದೊಂದು ಏನೋ ವಿಚಿತ್ರ ಬಗೆ. ಮಗುವನ್ನು ನೋಡಿದ ಕೂಡಲೇ ವಿಶ್ವಾನರನ ಮೈ ತುಂಬ ರೋಮಾಂಚ. ಹೃದಯ ತುಂಬ ಆನಂದ ತೆರೆಗಳ ತೂರಾಟ ಗದ್ಗದ ಕಂಠದಲ್ಲಿ ಅವನು ಕೈ ಜೋಡಿಸಿ- ''ಈಶನಿಗೆ ನಮಸ್ಕಾರ, ಮತ್ತೆ ಮತ್ತೆ ನಮಸ್ಕಾರ, ನೀನೇ ಸಾಕ್ಷಾತ್ ಪರಬ್ರಹ್ಮ. ನೀನೇ ಪರಂಜ್ಯೋತಿ ಪರಮಾತ್ಮ. ನಿನ್ನ ಚರಣಕ್ಕೆ ನಾನು ಶರಣು, ನನ್ನ ಪಾದಾರವಿಂದಗಳಲ್ಲಿ ನನ್ನ ಭಕ್ತಿಯುಕ್ತ ಪ್ರಣಾಮಸ್ತೋಮ.''

ವಿಶ್ವಾನರನ ಭಕ್ತಿಭಾವಭರಿತವಾದ ಮಾತು ಕೇಳಿ ಲಿಂಗಾಲಿಂಗಿತನಾದ ಆ ಬಾಲಕ ಗಂಭೀರವಾಗಿ ನುಡಿದ- ''ಭಕ್ತ, ನಿನಗೆ ಬೇಕಾದ ವರವನ್ನು ಬೇಡು. ನಿನ್ನ ಧರ್ಮಪತ್ನಿ ಶುಚಿಷ್ಮತಿಯ ಮನೋರಥವು ನನಗೆ ಸಂಪೂರ್ಣ ವಿದಿತ. ಅವಳ ಅಭಿಲಾಷೆ ಪೂರ್ಣವಾಗುವ ದಿನ ದೂರಿಲ್ಲ. ಶುಚಿಷ್ಮತಿಯ ಗರ್ಭದಿಂದ ನಾನು ನಿನ್ನ ಮಗನಾಗಿ ಬೇಗ ಹುಟ್ಟಿ ಬರುವೆನು. ಆಗ ನನಗೆ ಗೃಹಪತಿ ಎಂದು ಹೆಸರು ಬರುವುದು.'' ಹೀಗೆ ಹೇಳಿ ಬಾಲರೂಪಧಾರಿ ಮಹಾದೇವನು ಅಂತರ್ಧಾನ ಹೊಂದಿದನು.

## ಶಿವನ ಸೇವೆಯಿಂದ ಗೃಹಪತಿಗೆ ದಿಕ್ಪಾಲಕ ಪದವಿ;

**ಅಗಸ್ತ್ಯ:-** ಮಹಾದೇವನ ವರದಂತೆ ಕೆಲವೇ ದಿನಗಳಲ್ಲಿ ಆ ವಿಶ್ವಾನರ ದಂಪತಿಗಳಿಗೆ ಅಗ್ನಿಯಂತೆ ತೇಜಸ್ವಿಯೂ ಚಂದ್ರನಂತೆ ಸುಂದರನೂ ಆದ ಪುತ್ರನು ಜನಿಸಿದ. ಸ್ವಯಂ ಬ್ರಹ್ಮದೇವರೇ ಬಂದು ಜಾತಕರ್ಮ ಸಂಸ್ಕಾರವನ್ನು ಮಾಡಿ ಆ ಮಗುವನ್ನು 'ಗೃಹಪತಿ' ಎಂದು ಕರೆದರು. ಐದನೇಯ ವರ್ಷದಲ್ಲಿ ಆ ಮಗುವಿಗೆ ಉಪನಯನ ಮಾಡಿ ವಿಶ್ವಾನರನು ಸಾಂಗ ವೇದ ಹಾಗೂ ಶಾಸ್ತ್ರ ಹೇಳಿ ಪಾಠ ಪ್ರವಚನ ಮಾಡಿಸಿ ಪಂಡಿತ ಪ್ರಕಾಂಡನನ್ನಾಗಿ ಮಾಡಿದನು.

ಒಮ್ಮೆ ಒಂಭತ್ತನೇ ವರ್ಷದಲ್ಲಿ ಗೃಹಪತಿಯು ತಾಯಿ ತಂದೆಗಳ ಸೇವೆಯನ್ನು ಮಾಡುತ್ತಲಿದ್ದಾಗ ನಾರದಮುನಿಗಳು ವಿಶ್ವಾನರನ ಪರ್ಣಶಾಲೆಗೆ ಬಂದರು. ಮತ್ತು ಪ್ರಶ್ನೆ ಕೇಳಿದರು- ''ಮಹಾನುಭಾವರಾದ ವಿಶ್ವಾನರ ದಂಪತಿಗಳೇ, ನಿಮ್ಮ ಮಗನಾದ ಈ ಗೃಹ ಪತಿಯು ನಿಮ್ಮಿಬ್ಬರ ಆಜ್ಞೆಯನ್ನು ಪಾಲಿಸುತ್ತಾನಷ್ಟೇ!? ಮಕ್ಕಳಿಗೆ ತಾಯಿ ತಂದೆಗಳ ಆಜ್ಞೆ

ಪಾಲನೆ ಮಾಡುವುದರ ಹೊರತು ಬೇರೆ ತೀರ್ಥವಿಲ್ಲ. ಬೇರೆ ಧರ್ಮವಿಲ್ಲ. ಹೊಟ್ಟೆಯಲ್ಲಿ ಒಂಭತ್ತು ತಿಂಗಳು ಹೊತ್ತು ಹೆತ್ತು ಎತ್ತಿ ಮುದ್ದಾಡಿ ಲಾಲನೆಪಾಲನೆ ಪೋಷಣೆ ಮಾಡಿದ ತಾಯಿಯ ಉಪಕಾರವನ್ನು ಯಾರೂ ಏನು ಮಾಡಿಯೂ ತೀರಿಸಲು ಸಾಧ್ಯವಿಲ್ಲ. ಸರ್ವಸಂಗ ಪರಿತ್ಯಾಗ ಮಾಡಿದ ಸನ್ಯಾಸಿಗೆ ತಂದೆಯು ನಮಸ್ಕರಿಸಬೇಕು. ಆದರೆ ತಾಯಿಗೆ ಮಾತ್ರ ಸನ್ಯಾಸಿಯು ಸ್ವಯಂ ತಾನೇ ನಮಸ್ಕಾರವನ್ನು ಮಾಡಬೇಕು.

**ಸನ್ಯಸ್ತಾಖಿಲ ಕರ್ಮಾಪಿ ಪಿತುರ್ವಂದ್ಯೋ ಹಿ ಮಸ್ಕರೀ**
**ಸರ್ವವಂದ್ಯೇನ ಯತಿನಾ ಪ್ರಸೂರ್ವಂದ್ಯಾ ಪ್ರಯತ್ನತಃ ॥**

ವಿಶ್ವವಂದ್ಯನಾದರೂ ಯತಿಯು ತಾಯಿಗೆ ಹೇಗಾದರೂ ಮಾಡಿ ಇದ್ದಲ್ಲಿಗೆ ಹೋಗಿ ಹುಡುಕಿ ವಂದನೆ ಮಾಡಬೇಕು.

**ಇದಮೇವ ತಪೋಽತ್ಯುಗ್ರಮಿದಮೇವ ಪರಮಂ ವ್ರತಮ್ ।**
**ಅಯಮೇವ ಪರೋ ಧರ್ಮೋ ಯತ್ ಪಿತ್ರೋಃ ಪರಿತೋಷಣಂ ॥**

ತಂದೆತಾಯಿಗಳ ಸೇವೆ ಮಾಡಿ ಸಂತೋಷಪಡಿಸುವುದೇ ದೊಡ್ಡ ತಪಸು. ಇದೇ ಶ್ರೇಷ್ಠ ಪರಮವ್ರತ. ವಿಶ್ವಾರಕುಮಾರನಾದ ಬಾಲಕ ಗೃಹಪತಿಯೇ, ಇತ್ತ ನನ್ನ ಕಡೆ ಬಾ. ನನ್ನ ತೊಡೆಯ ಮೇಲೆ ಕೂಡು. ನಿನ್ನ ಬಲಗೈ ತೋರಿಸು. ನಿನ್ನ ಹಸ್ತರೇಖೆಯನ್ನು ನೋಡುವೆನು. ನಿನ್ನ ಭಾವೀಜೀವನದ ಆಗುಹೋಗುಗಳನ್ನೆಲ್ಲ ಗುರುತಿಸುವೆನು.

ದೇವರ್ಷಿನಾರದರ ಮಾತು ಕೇಳಿ ಗೃಹಪತಿಯು ತಂದೆ ತಾಯಿಗಳ ಆಜ್ಞೆ ಪಡೆದು ನಾರದರ ಬಳಿಗೆ ಹೋದ. ಭಕ್ತಿಯಿಂದ ನಮಿಸಿದ. ನಮ್ರನಾಗಿ ವಿನೀತಭಾವದಿಂದ ಅವರ ಬಳಿಯಲ್ಲಿ ಕುಳಿತುಕೊಂಡ. ನಾರದರು ಚೆನ್ನಾಗಿ ಪರೀಕ್ಷಿಸಿದರು ಅವನ ಕೈಯನ್ನು ನೋಡಿ ನುಡಿದರು.

**ನಾರದ:-** ವಿಶ್ವಾನರ ಈ ನಿನ್ನ ಚಿರಂಜೀವಿ ಬಹು ಭಾಗ್ಯವಂತ. ಅಖಂಡ ಭೂಮಂಡಲವನ್ನೆಲ್ಲ ಅಧಿರಾಜನಾಗಿ ಆಳುವ ದಿವ್ಯ ಯೋಗ ಇವನಿಗೆ. ಸಾರ್ವಭೌಮ ನಾಗುವ ಎಲ್ಲ ಲಕ್ಷಣಗಳೂ ಇವನ ಕರತಲದ ರೇಖೆಗಳಲ್ಲಿ ಸ್ಪಷ್ಟ ದೃಶ್ಯ. ಒಳ್ಳೊಳ್ಳೆ ಲಕ್ಷಣಗಳೆಲ್ಲವೂ ವಿಲಕ್ಷಣ ರೀತಿಯಲ್ಲಿ ಈ ನಿನ್ನ ಬಾಲಕನಲ್ಲಿ ಮೇಳವಿಸಿವೆ. ಆದರೂ ಆಕಸ್ಮಿಕ ನಿಪಾತದ ಅಪಾಯವು ಗುರುತು ತೋರುತ್ತಿದೆ. ಹದಿನಾರು ಕಲೆಗಳಿಂದ ಪೂರ್ಣನಾಗಿದ್ದರೂ ಚಂದ್ರನು ಕ್ಷೀಣಿಸುವುದಿಲ್ಲವೆ? ಅದರಂತೆ, ಮಹಾಪ್ರಯತ್ನದಿಂದ ಈ ಶಿಶುವಿನ ರಕ್ಷಣೆ ಅವಶ್ಯ ಕಾರ್ಯ. ಹನ್ನೊಂದನೆಯ ವಯಸ್ಸಿಗೆ ಇವನಿಗೆ ಸಿಡಿಲಿನಿಂದ ಭಯ. ಬೆಂಕಿಯಿಂದ ಅಪಾಯ.

ಹೀಗೆ ಹೇಳಿ ನಾರದರು ಬಂದ ದಾರಿಯಿಂದ ಮರಳಿ ಹೋದರು. ನಾರದರ ಎಚ್ಚರಿಕೆಯ ನುಡಿಯಿಂದ ತಾಯಿತಂದೆಗಳಿಬ್ಬರೂ ಶೋಕಾವರ್ತದ ಸುಳಿಯಲ್ಲಿ. ತಾಯಿ ಖಿನ್ನ. ತಂದೆ ವಿಷಣ್ಣ. ಮನೆಯ ವಾತಾವರಣವೆಲ್ಲವೂ ನಿರ್ವಿಣ್ಣ. ಆದರೆ ಬಾಲಕ ಗೃಹಪತಿ ಮಾತ್ರ ಧೈರ್ಯಮೇರು. ಅವನೊಬ್ಬನನ್ನು ಬಿಟ್ಟು ಮನೆಯ ಜನರೆಲ್ಲರೂ ಮೃತ್ಯುಭೀರು. ದಿಟ್ಟ ಬುದ್ಧಿಯ ಆ ಪುಟ್ಟ ಬಾಲಕ ತಂದೆ ತಾಯಿಗಳನ್ನು ಕುರಿತು ಧೈರ್ಯದಿಂದ ಹೇಳಿದ- "ಪೂಜ್ಯರೇ, ನೀವು ಇಷ್ಟೇಕೆ ಭಯಪಡುವಿರಿ? ನಿಮ್ಮ ಕಾಲಿನ ಧೂಳಿನ ಕಣಗಳು ನನಗೆ ವಜ್ರಕವಚ. ಮೃತ್ಯು ಕಣ್ಣೆತ್ತಿ ಕೂಡ ನೋಡಲಾರದು ನನ್ನ ಕಡೆಗೆ. ಈ ಮಿಂಚು ನನ್ನನ್ನು ಹೇಗೆ ಮುಟ್ಟೀತು? ಸಿಡಿಲು ನನ್ನನ್ನು ಹೇಗೆ ಸುಟ್ಟೀತು? ಆಣೆಯಿಟ್ಟು ಹೇಳುತ್ತೇನೆ. ನಾನು

ನಿಮ್ಮ ನಿಜವಾದ ಮಗನಾಗಿದ್ದರೆ ನನ್ನನ್ನು ನೋಡಿ ಆ ಸಿಡಿಲೇ ಸಿಡಿದು ಹೋಗುವುದು. ಅಗ್ನಿಯೇ ದಗ್ಧವಾಗುವುದು. ಮೃತ್ಯುಂಜಯನ ಆರಾಧನೆ ಮಾಡಿ ನಾನು ಭಯಾಪಾಯಗಳನ್ನೆಲ್ಲ ಮೆಟ್ಟಿ ನಿಲ್ಲುವೆನು.'' ಬಾಲಕ ಗೃಹಪತಿಯ ಮಾತು ಕೇಳಿ ತಾಯಿತಂದೆಗಳಿಗೆ ತುಸು ಸಮಾಧಾನ ಎನಿಸಿತು. ಶಿವಚರಣಗಳಿಗೆ ಶರಣುಹೋಗಲು ಅವರು ಅಪ್ಪಣೆ ನೀಡಿದರು ತಮ್ಮ ಪ್ರೀತಿಯ ಪುತ್ರನಿಗೆ. ತಾಯಿ ತಂದೆಗಳ ಆಜ್ಞೆ ಪಡೆದು ಕಾಶಿಗೆ ತೆರಳಿದ ಗೃಹಪತಿ. ಅಲ್ಲಿ ಪ್ರತಿದಿನ ಗಂಗಾಸ್ನಾನ ಮಾಡಿ ನೂರೆಂಟು ಕೊಡ ಗಂಗೆಯ ನೀರಿನಿಂದ ವಿಶ್ವನಾಥನಿಗೆ ಅಭಿಷೇಕ ಮಾಡಿಸುತ್ತಿದ್ದ. ಹೀಗೆ ಶತಕುಂಭ ಸ್ನಾನ ಮಾಡಿಸಿ ಸಾವಿರದಾಎಂಟು ನೀಲಕಮಲ ಮಾಲೆಗಳನ್ನು ಶಿವಲಿಂಗಕ್ಕೆ ಏರಿಸುತ್ತಿದ್ದ. ಹದಿನೈದು ದಿನಗಳಿಗೊಮ್ಮೆ ಕಂದಮೂಲ ಫಲಗಳ ಆಹಾರ. ಹೀಗೆ ಆರು ತಿಂಗಳು ತಂಪಗೈದ. ಮುಂದೆ ಆರು ತಿಂಗಳು ತರೆಗೆಲೆ ತಿಂದು ತಪಸ್ಸು. ಅದರ ನಂತರ ಆರುತಿಂಗಳು ಒಂದೊಂದು ಹನಿ ಜಲಪಾನ ಮಾತ್ರ. ಅದರ ನಂತರದ ಆರುತಿಂಗಳಕಾಲ ಬರಿ ವಾಯುಸೇವನೆ. ಹೀಗೆ ಆ ಮಗು ಎರಡು ವರುಷ ತಪಸ್ಸು ಮಾಡಿದ ಬಳಿಕ ದೇವೇಂದ್ರ ಅವನ ಬಳಿಗೆ ಬಂದ. ''ಮಗು, ನಿನ್ನ ಮನೋವಾಂಛಿತವಾದ ವರವನ್ನು ಬೇಡು. ನಾನು ಕೊಟ್ಟು ಬಿಡುತ್ತೇನೆ'' ಎಂದ.

**ಗೃಹಪತಿ:-** ದೇವೇಂದ್ರ, ನೀನು ಸುರಪತಿ ಎಂಬುದನ್ನು ನಾನು ಚೆನ್ನಾಗಿ ಬಲ್ಲೆ. ನಿನ್ನ ಕೃಪಾದೃಷ್ಟಿ ನನಗೆ ಬೇಕು. ಆದರೆ ನಿನ್ನ ವರ ಮಾತ್ರ ನನಗೆ ಬೇಡ. ನನಗೆ ವರ ನೀಡುವ ಸುರಪ್ರವರ ಮಹಾದೇವ ಮಾತ್ರ.

**ಇಂದ್ರ:-** ಬಾಲಕ, ನಾನು ದೇವತೆಗಳಿಗೆಲ್ಲ ದೇವತೆ. ದೇವಲೋಕದ ಸುರರೆಲ್ಲರೂ ನನ್ನ ಕಿಂಕರರು, ನನ್ನ ಹೊರತು ಬೇರೆ ಶಂಕರಾರಿದ್ದಾರೆ! ಈ ಮೂಢತೆಯನ್ನು ತೊರೆದು ನನ್ನ ವರ ಬೇಡು.

**ಗೃಹಪತಿ:-** ನನ್ನ ಪಾಲಿಗೆ ಶಿವನೊಬ್ಬನೇ ದೇವರು. ಅವನೇ ಜಗತ್ಪತಿ. ಅವನ ಹೊರತು ಬೇರೆ ಯಾರನ್ನೂ ಯಾಚನೆ ಮಾಡಲಾರೆ.

ಅವನ ಮಾತುಗಳನ್ನು ಕೇಳಿ ಆ ಮಹೇಂದ್ರನ ಸಾವಿರ ಕಣ್ಣುಗಳು ಕೆಂಡಕಾರುವ ಅಗ್ನಿಕುಂಡಗಳಾದವು. ತನ್ನ ಭಯಂಕರವಾದ ವಜ್ರವನ್ನು ಎತ್ತಿದ. ಆ ಸಿಡಿಲಿನ ಆಯುಧದಿಂದ ಸಾವಿರಾರು ಮಿಂಚಿನ ಗೊಂಚಲುಗಳು ಜ್ವಾಲೆಯ ಮಾಲೆಗಳಾಗೆ ಸಿಡಿಯುತ್ತಲಿದ್ದವು. ಅದನ್ನು ನೋಡಿ ಬಾಲಕ ಗ್ರಹಪತಿಗೆ ದೇವರ್ಷಿ ನಾರದರ ಮಾತು ನೆನಪಿನ ಸುಳಿಯಲ್ಲಿ ಹೊಳೆಯಿತು. ಕೂಡಲೇ ಭಯಭೀತನಾದ ಆ ಬಾಲಕ ಮೂರ್ಛಿತನಾದ. ಅದೇ ಸಮಯದಲ್ಲಿ ಭಗವಾನ್ ಗೌರೀಪತಿಯು ತಕ್ಷಣ ಅಲ್ಲಿ ಪ್ರಕಟನಾದ. ಅವನ ಹಸ್ತಸ್ಪರ್ಶದಿಂದ ಮೈಯಲ್ಲಿ ನವಜೀವನದ ಸಂಚಾರ. ನರನಾಡಿಗಳಲ್ಲೆಲ್ಲ ಚೈತನ್ಯದ ಚಿದ್ರಸದ ಹರಿದಾಟ. ಕೂಡಲೇ ಶಂಕರನಿಂದ ಅಭಯ.

**ಆಶ್ವಾಸನೆ:-** ''ವತ್ಸ, ಗೃಹಪತಿ, ಏಳು ಏಳು. ನಿನಗೆ ಕಲ್ಯಾಣವಾಗಲಿ'' ಧೂರ್ಜಟಿಯ ಆ ದಿವ್ಯಧ್ವನಿಯನ್ನು ಕೇಳಿ ಆ ಗೃಹಪತಿಯ ನಿದ್ದೆ (ಕಳೆದು ಎಚ್ಚವಾದಂತೆ) ಎದ್ದು ಕುಳಿತ. ಮುಚ್ಚಿದ ಕಣ್ಣನ್ನು ಬಿಡಿಸಿ ನೋಡಿದ. ಕಣ್ಣೆದುರೇ ಕೈಲಾಸಪತಿ. ಸಾವಿರ ಸೂರ್ಯರಿಗೆ ಸವಾಲು ಒಡ್ಡುವ ದಿವ್ಯದೀಪ್ತಿ. ಜಟಾಜೂಟದ ಮುಕುಟದಲ್ಲಿ ಚಂದ್ರಕೋರ. ಒಂದು ಕೈಯಲ್ಲಿ ತ್ರಿಶೂಲ, ಇನ್ನೊಂದರಲ್ಲಿ ಆಜಗವ ಬಿಲ್ಲು. ಕರ್ಪೂರದಂತೆ ಬೆಳಗ್ಗಿನ ಬಣ್ಣ. ತನ್ನ ಮುಂದೆ ಬಂದು ನಿಂತ ಚಂದ್ರಚೂಡನನ್ನು ನೋಡಿ ಗೃಹಪತಿಯ ಕಣ್ಣುಗಳಿಂದ ಆನಂದಬಾಷ್ಪಗಳ ಆಧಾರಾಪ್ರವಾಹ. ಮೈಯೆಲ್ಲ ಪುಲಕಿತ, ಕಂಠ ಗದ್ಗದಿತ. ಮಾತು ಸೋತು ವಾಕು ಮೂಕ.

''ಆಗ ಸ್ವಯಂ ಶಂಭುಲಿಂಗೇಶ್ವರನು ನಕ್ಕು ನುಡಿದ'' ವತ್ಸ, ಗೃಹಪತಿ, ಹೆದರಬೇಡ. ಇಂದ್ರನಾಗಲೀ ಅವನ ವಜ್ರಾಯುಧವಾಗಲಿ ನಿನಗೆ ಏನೂ ಮಾಡಲಾರದು. ಮೃತ್ಯು ಕೂಡ

ನನ್ನ ಭಕ್ತನಿಗೆ ಇನಿತೂ ಅಪಾಯವನ್ನು ಉಂಟುಮಾಡಲಾರದು. ನಿನ್ನನ್ನು ಪರೀಕ್ಷೆ ಮಾಡಲಿಕ್ಕಾಗಿ ನಾನೇ ಇಂದ್ರ ರೂಪದಿಂದ ಬೆದರಿಸಿದ್ದೆ. ನಾನು ನಿನಗೆ ಈಗ ವರವನ್ನು ನೀಡುತ್ತೇನೆ. ನೀನು ಇಂದಿನಿಂದ ಇಂದ್ರಪದವಿಗೆ ಅರ್ಹ. ಅಗ್ನಿಪಟ್ಟ ಪದವಿಯಲ್ಲಿ ಅಭಿಷಿಕ್ತ. ಎಲ್ಲದೇವತೆಗಳಿಗೂ ಮುಖ್ಯ. ನಿನಗೆ ಅಗ್ನಿಯೆಂದೇ ಇಂದಿನಿಂದ ಹೆಸರು. ನೀನು ಎಲ್ಲ ಪ್ರಾಣಿಗಳ ದೇಹದಲ್ಲಿ ಬೆಳಗು. ಇಂದ್ರನು ಪಾಲಿಸುವ ಪೂರ್ವದಿಕ್ಕು ಹಾಗೂ ಯಮಧರ್ಮನು ಪಾಲಿಸುವ ದಕ್ಷಿಣದಿಕ್ಕುಗಳ ನಡುವೆ ನಿನ್ನ ದಿಕ್ಕು ಆಗ್ನೇಯ ದಿಶೆ ಎಂದು ಪ್ರಸಿದ್ಧವಾಗುವುದು. ನೀನು ದಿಕ್ಪಾಲಕನಾಗಿ ನಿನ್ನ ಆಗ್ನೇಯ ಕೋಣದ ರಾಜ್ಯವನ್ನು ಗ್ರಹಣ ಮಾಡು. ನೀನು ಇಲ್ಲಿ ಸ್ಥಾಪನೆ ಮಾಡಿದ ಶಿವಲಿಂಗವು ಅಗ್ನೀಶ್ವರ ಎಂದು ಪ್ರಖ್ಯಾತವಾಗಿ ತೇಜೋವರ್ಧಕವಾಗಿ ಬೆಳಗುವುದು. ಸರ್ವಸಮೃದ್ಧಿಯನ್ನು ದಯಪಾಲಿಸುವ ಈ ಅಗ್ನೀಶ್ವರನ ಪೂಜೆಯನ್ನು ಮಾಡಿದವರು ಕಾಶೀ ಬಿಟ್ಟು ಬೇರೆಡೆ ಮರಣ ಹೊಂದಿದರೂ ಅಗ್ನಿಲೋಕದಲ್ಲಿ ಪ್ರತಿಷ್ಠಿತರಾಗುವರು.'' ಹೀಗೆ ಹೇಳಿ ಗೃಹಪತಿಯನ್ನು ಅಗ್ನಿಯನ್ನಾಗಿ ಮಾಡಿ ಆಗ್ನೇಯ ಕೋಣದ ದಿಕ್ಪಲಕಾನನ್ನಾಗಿ ನೇಮಿಸಿ ಭಗವಾನ್ ಉಮಾಪತಿಯು ಆ ಅಗ್ನೀಶ್ವರ ಲಿಂಗದಲ್ಲಿ ಲೀನನಾದನು.

## ನೈಋತ್ಯ ಲೋಕ ಹಾಗೂ ವರುಣ ಲೋಕಗಳು

**ಶಿವಶರ್ಮ:-** ಪೂಜ್ಯರೇ, ಈಗ ತಾವು ನಮಗೆ ನೈಋತ್ಯ ಮೊದಲಾದ ಲೋಕಗಳ ಸ್ಥಿತಿಗತಿಗಳನ್ನು ವಿಶದೀಕರಿಸಿರಿ.

**ವಿಷ್ಣುಪಾರ್ಷದರು:-** ಮಹಾನುಭಾವನೇ, ಯಮದೇವರು ರಾಜಧಾನಿಯಾದ ಸಂಯಮನೀಪುರದ ಮುಂದೆ ನೈಋತ್ಯ ಲೋಕ. ನಿರತ ಎಂಬುವವ ಅಲ್ಲಿ ದಿಕ್ಪಾಲಕ. ಅಲ್ಲಿ ಇರುವ ನಾಗರಿಕರೆಲ್ಲ ರಾಕ್ಷಸರು. ಆದರೆ ಅವರು ಭೂಲೋಕದ ರಕ್ಕಸರಂತೆ ಅಲ್ಲ. ಕ್ರೌರ್ಯ ಕೌಟಿಲ್ಯಗಳು ಅವರಿಂದ ದೂರ. ಪರದ್ರೋಹದ ಪರಿಚಯವೇ ಇಲ್ಲ. ಈ ನೈಋತ್ಯ ಲೋಕದ ರಾಕ್ಷಸರಿಗೆ ಅವರೆಲ್ಲರೂ ಪ್ರತಿನಿತ್ಯವೂ ತೀರ್ಥಸ್ನಾನ, ದೇವಪೂಜೆ, ಅತಿಥಿಸೇವೆ, ಶಮದಮ, ಶೌಚ, ಇಂದ್ರಿಯನಿಗ್ರಹ ಮೊದಲಾದ ಗುಣಗಳಿಂದ ತುಂಬಿದವರು. ನಿಜವಾಗಿಯೂ ಈ ನಿರತಲೋಕದ ರಾಕ್ಷಸರು ಪುಣ್ಯಪುರುಷರೇ. ಆದ್ದರಿಂದಲೇ ಅವರಿಗೆ ಪುಣ್ಯಜನ ಎಂದೂ ಹೆಸರು. ಕಾಶಿಯ ಹೊರತು ಬೇರೆ ಉತ್ತಮ ತೀರ್ಥಗಳಲ್ಲಿ ಮರಣ ಹೊಂದಿದ ಸತ್ಯಸಂಧರಾದ ಸದಾಚಾರ ಸಂಪನ್ನರಾದ ಮ್ಲೇಂಛರೂ, ಪರೋಪಕಾರ ಪರಾಯಣರೂ ದೇವಭಕ್ತರೂ ಆದ ಚಂಡಾಲರೂ ಮರಣೋತ್ತರ ಕಾಲದಲ್ಲಿ ಈ ನೈಋತ್ಯಲೋಕದಲ್ಲಿ ಬಂದು ನೆಲೆಸುತ್ತಾರೆ.

ಪೂರ್ವಕಾಲದಲ್ಲಿ ವಿಂಧ್ಯಾಚಲದ ಗೊಂಡಾರಣ್ಯದಲ್ಲಿ ಪಿಂಗಾಕ್ಷ ಎಂಬ ಹೆಸರಿನ ಒಬ್ಬ ಬೇಡ. ನಿರ್ವಿಂಧ್ಯಾ ನದಿಯ ತಟಾಕದಲ್ಲಿ ಅವನ ಮನೆ. ಅವನು ಮಹಾಶೂರ. ಶ್ರೇಷ್ಠವೀರ. ಆದರೆ ಕ್ರೂರ ಅಲ್ಲ. ದಾರಿಹೋಕರನ್ನು ಹೊಡೆದು ಸುಲಿಗೆ ಮಾಡುವ ದರೊಡೆಗಾರರನ್ನು ಅವನು ಹಿಡಿದು ಹೊಡೆದು ಶಾಸನ ಮಾಡುತ್ತಿದ್ದ. ಪ್ರಾಣಿಗಳ ಜೀವಕ್ಕೆ ಅಪಾಯ ಒಡ್ಡುವ ಹಿಂಸ ಪ್ರಾಣಿಗಳನ್ನು ಮಾತ್ರ ಸಂಹಾರ ಮಾಡುತ್ತಿದ್ದ. ಅವನ ಮನೆಯ ಸಮೀಪದಲ್ಲಿ ಅವನ ಕಕ್ಕ ಇರುತ್ತಿದ್ದ. ಒಂದು ದಿನ ದೊಡ್ಡ ಯಾತ್ರಿಕರ ಒಂದು ಗುಂಪು ಅದೇ ದಾರಿಯಿಂದ ತೀರ್ಥಯಾತ್ರೆಗೆ ಹೊರಟಿತ್ತು. ಆ ಯಾತ್ರಿಕರಲ್ಲಿ ವಿಪುಲವಾದ ಧನರಾಶಿ ಇದ್ದುದನ್ನು ಪಿಂಗಾಕ್ಷನ ಕಕ್ಕನಾದ ದುಷ್ಟ ಬೇಡನು ಹೇಗೋ ಪತ್ತೆಹಚ್ಚಿದ. ಕಾಡಿನ

ಇಕ್ಕಟ್ಟಿನ ಕಣಿವೆಯಲ್ಲಿ ಅಡಗಿ ಅವರನ್ನು ಹೊಡೆದು ಅವರ ಬಳಿಯಿದ್ದ ಹೇರಳವಾದ ಹಣವನ್ನು ದೋಚಬೇಕೆಂದು ಆ ಕಾಡು ಕಿರಾತನ ಹಂಚಿಕೆ. ಅದಕ್ಕಾಗಿ ಆ ಮಾರ್ಗದ ಆಯಕಟ್ಟಿನ ತಾಣದಲ್ಲಿ ಎಲ್ಲ ಮಾರ್ಗಗಳನ್ನು ಆಕ್ರಮಿಸಿ ಹೊಂಚು ಹಾಕಿದ್ದ. ಅಂದು ರಾತ್ರಿ ಅದೇ ಮಾರ್ಗದ ಸಮೀಪದಲ್ಲಿ ಒಂದೆಡೆ ಅವನು ತಂಗಿದ್ದ.

ಆ ರಾತ್ರಿಯ ಕೊನೆಯ ಪ್ರಹರ. ಸುತ್ತಲೂ ಗಾಢಾಂಧಕಾರ. ಒಮ್ಮೆಲೇ ಯಾತ್ರಿಕರ, ಹಾಹಾಕಾರ. ಆರ್ತನಾದದ ಚೀತ್ಕಾರ, ಆಗ ಕತ್ತಲೆಯ ಎದೆ ಸೀಳಿ ಒಂದು ಧ್ವನಿ ಕೇಳಿಬಂದಿತು- "ವೀರರೇ, ಎಲ್ಲರನ್ನು ಹೊಡೆದುಹಾಕಿರಿ. ಕೆಳಗೆ ಬೀಳಿಸಿರಿ. ಅವರ ಬಟ್ಟೆ ಬಯಲು ಮಾಡಿ ಬಚ್ಚಿಟ್ಟ ರತ್ನ ಮುತ್ತು ನಗ ನಾಣ್ಯಗಳನ್ನು ಶೋಧಿಸಿ ಕಸಿದುಕೊಳ್ಳಿರಿ. ಅವರು ತಮ್ಮಲ್ಲಿ ಇದ್ದುದನ್ನು ಕೊಡಲು ಒಪ್ಪದಿದ್ದರೆ ಕಡಿದು ಹಾಕಿರಿ. ಈ ಕಳ್ಳರ ದಾಳಿಗೆ ತುತ್ತಾದ ಯಾತ್ರಿಕರ ಗುಂಪಿನಿಂದ ಒಮ್ಮೆಲೆ ಕರುಣೆಯ ಕಿಂಕಾರ- "ಅಯ್ಯೋ, ಸತ್ತೆವು, ಕಳ್ಳರೇ, ದಯವಿಟ್ಟು ಹೊಡೆಯಬೇಡಿರಿ. ನಮ್ಮನ್ನು ಕೊಲ್ಲಬೇಡಿರಿ. ನಾವು ಯಾತ್ರಿಕರು. ನಮ್ಮಲ್ಲಿ ಇದ್ದುದನ್ನೆಲ್ಲ ನಾವು ನಾವಾಗಿಯೇ ನಿಮಗೆ ಒಪ್ಪಿಸಿಬಿಡುತ್ತೇವೆ. ನಮ್ಮನ್ನು ಮಾತ್ರ ಹೊಡೆದು ಕೊಲ್ಲಬೇಡಿರಿ. ಪಿಂಗಾಕ್ಷ ಬೇಡನು ನಮ್ಮನ್ನು ಯಾತ್ರೆಯಲ್ಲಿ ರಕ್ಷಿಸುವನು ಎಂಬ ಭರವಸೆಯಿಂದ ನಾವು ಈ ಯಾತ್ರೆಯನ್ನು ಕೈಗೊಂಡಿದ್ದೇವೆ. ಆದರೆ ನಮ್ಮ ದುರ್ದೈವದಿಂದ ಆ ಪುಣ್ಯಾತ್ಮನಾದ ಕಿರಾತನು ಎಲ್ಲಿಯೋ ದೂರದಲ್ಲಿದ್ದಾನೆ. ಅವನು ಈಗ ಇಲ್ಲಿ ಇದ್ದರೆ ನಿಮಗೆ ನಮ್ಮನ್ನು ತಡೆಯುವ ಅಥವಾ ಹೊಡೆಯುವ ಹಾಗೂ ನಮ್ಮ ಹಣವನ್ನು ಕದಿಯುವ ಧೈರ್ಯ ಆಗುತ್ತಿರಲಿಲ್ಲ. ಆದರೆ ಈಗ ಮಾತ್ರ ನಾವು ನಮ್ಮಲ್ಲಿ ಇದ್ದ ನಗ-ನಾಣ್ಯ ಬಂಗಾರ ಆಭರಣಗಳನ್ನೆಲ್ಲ ನಿಮಗೆ ಕೊಟ್ಟು ಬಿಡುತ್ತೇವೆ. ಅದನ್ನು ತೆಗೆದುಕೊಂಡಾದರೂ ನೀವು ನಮ್ಮನ್ನು ಹೊಡೆಯದೇ ಜೀವಂತ ಬಿಟ್ಟುಬಿಡಿರಿ." ಯಾತ್ರಿಕರ ಈ ಕರುಣೆಯ ಆಕ್ರೋಶ ಆ ರಾತ್ರಿ ಅಲ್ಲೇ ತಂಗಿದ್ದ ಪಿಂಗಾಕ್ಷನಿಗೆ ಕೇಳಿಸಿತು. ಅವನು ಯಾತ್ರಿಕರ ಯಾಚನೆ, ರೋದನ, ಹಾಗೂ ಬೇಡಿಕೆಗಳನ್ನು ಕೇಳಿ ಇದ್ದಲ್ಲಿಂದ ಅಲ್ಲಿಗೆ ಹಾರಿ ಬಂದು ಖಡ್ಗ ಹಿಡಿದು ನಿಂತುಕೊಂಡ. ಮತ್ತು ಯಾತ್ರಿಕರಿಗೆ ಮುತ್ತಿಗೆ ಹಾಕುವ ಕಳ್ಳರನ್ನೆಲ್ಲ ಗದರಿಸುತ್ತ ಗರ್ಜಿಸಿ ನುಡಿದ - "ಪಿಂಗಾಕ್ಷನಾದ ನಾನು ಬದುಕಿ ಇರುವಾಗ ಯಾತ್ರಿಕರನ್ನು ಸುಲಿಗೆ ಮಾಡುವ ದುಷ್ಟ ದುರಾತ್ಮರು ಯಾರು? ದಾರಿಹೋಕರನ್ನು ದೋಚುವ ಆ ದುರುಳ ದರೋಡೆ ಖೋರರನ್ನು ಇಂದು ನನ್ನ ಖಡ್ಗಕ್ಕೆ ಗುರಿ ಮಾಡಿ ಅವರನ್ನು ಈಗಲೇ ಯಮಪಟ್ಟಣಕ್ಕೆ ಅಟ್ಟುತ್ತೇನೆ."

ಪಿಂಗಾಕ್ಷನ ಕಕ್ಕನಾದ ಕಳ್ಳರ ನಾಯಕ ತಾರಾಕ್ಷನು ಅಲ್ಲಿಯೇ ಅಡಗಿದ್ದ. ಅವನು ಸಿಟ್ಟಿನಿಂದ ಸಿಡಿದು ಹೋಗಿ ತನ್ನ ಸೇವಕರಿಗೆ ಆಜ್ಞೆಗೈದ- "ಮೊದಲು ನಮ್ಮ ಕಾರ್ಯಕ್ಕೆ ಅಡ್ಡ ಬಂದ ಈ ಪಿಂಗಾಕ್ಷನನ್ನೇ ಕಡಿದು ಹಾಕಿರಿ. ಅನಂತರ ಈ ಯಾತ್ರಿಕರನ್ನು ಸುಲಿಗೆ ಮಾಡಿರಿ." ಇದನ್ನು ಕೇಳಿ ಆ ಎಲ್ಲ ದುರಾಚಾರಿ ಬೇಡರು ಒಗ್ಗೂಡಿ ಪಿಂಗಾಕ್ಷನ ಮೇಲೆ ಏರಿ ಬಂದರು. ಪಿಂಗಾಕ್ಷನು ಒಬ್ಬಂಟಿಗ. ದರೋಡೆಖೋರರದು ದೊಡ್ಡ ಗುಂಪು. ಆದರೂ ಏಕಾಂಗಿಯಾಗಿ ತನ್ನ ಖಡ್ಗವನ್ನು ಝಳಪಿಸುತ್ತ ಆ ಕಳ್ಳರನ್ನೆಲ್ಲ ತಡೆದು ಕಡಿದು ಹಾಕುತ್ತ ಪಿಂಗಾಕ್ಷನು ಆ ಎಲ್ಲ ಯಾತ್ರಿಕರನ್ನು ಜನಿಸಿ ಬಿಡವಾದ ಒಂದು ಪಟ್ಟಣಕ್ಕೆ ಸುರಕ್ಷಿತ ಹೋಗಲು ಅವಕಾಶ ಒದಗಿಸಿದ. ಎಲ್ಲ ಆ ಕಳ್ಳ ಕದೀಮರೊಂದಿಗೆ ತಾನು ಕಾದುತ್ತ ಯಾತ್ರಿಕರಿಗೆ ತಡೆಯಲು ಅವಕಾಶವಾಗದಂತೆ ಕಳ್ಳರೊಡನೆ ತಾನೇ ಕಲಿತನದಿಂದ ಕಾದುತ್ತ ನಿಂತುಕೊಂಡ. ಯಾತ್ರಿಕರೆಲ್ಲರೂ ಸುರಕ್ಷಿತಸ್ಥಾನಕ್ಕೆ ಮುಟ್ಟಿದ್ದನ್ನು ನೋಡಿ ಕಳ್ಳರಿಗೆ ಇನ್ನೂ ನಿರಾಶೆಯಾಯಿತು. ಅವರು ಪಿಂಗಾಕ್ಷನ ಮೇಲೆ ಮತ್ತಿಷ್ಟು ಸಿಟ್ಟಾಗಿ ತಮಗೆ ದೊರಕಬೇಕಾದ ಭಾಗ್ಯ ನಿಧಿಯನ್ನು ತಪ್ಪಿಸಿದ

ಎಂದು ಸಿಟ್ಟಿನಿಂದ ಅವನೊಡನೆ ಹಣಾಹಣಿ ಹೋರಾಡಿ ಅವನನ್ನು ಹಣಿಯಲು ಮೊದಲು ಮಾಡಿದರು. ಶಸ್ತ್ರಾಸ್ತ್ರಸಂಪನ್ನರಾದ ಆ ಕಳ್ಳ ಹಂತಕರ ಕೈಯಲ್ಲಿ ಸಿಕ್ಕು ಒಬ್ಬಂಟಿಗನಾಗಿ ಬಹಳ ಹೊತ್ತು ಕಾದು ಕೊನೆಗೆ ಪಿಂಗಾಕ್ಷನು ರಣಭೂಮಿಯಲ್ಲಿಯೇ ಪ್ರಾಣ ಬಿಟ್ಟ. ಆ ಪಿಂಗಾಕ್ಷನೇ ಈಗ ನೈಋತ್ಯ ಲೋಕದಲ್ಲಿ ನಿರತಿ ಎಂಬ ಹೆಸರಿನ ರಾಕ್ಷಸನಾಗಿ ದಿಕ್ಪಾಲಕ ಪಟ್ಟದಲ್ಲಿ ಅಭಿಷಿಕ್ತನಾಗಿದ್ದಾನೆ. ನೈಋತ್ಯಪುರಿಯ ಉತ್ತರಕ್ಕೆ ವರುಣಲೋಕ. ನ್ಯಾಯಮಾರ್ಗದಿಂದ ಧನವನ್ನು ಗಳಿಸಿ, ಕೆರೆಕಾಲುವೆ ಕಟ್ಟಿಸಿ, ಜನರಿಗೆ ನೀರು ದೊರಕುವಂತೆ ಮಾಡಿದವರೂ, ಕಲಶ ಕಮಂಡಲ, ಬಿಂದಿಗೆ ಮೊದಲಾದ ಜಲಪೂರ್ಣಪಾತ್ರೆಗಳನ್ನು ದಾನ ನೀಡುವವರೂ ಬೀದಿಯ ಇಬ್ಬದಿಗಳಲ್ಲಿ ನೆರಳು ಮರಗಳನ್ನು ಹಚ್ಚಿ ಬೆಳಸುವವರೂ, ಯಾತ್ರಿಕರಿಗಾಗಿ ಧರ್ಮಶಾಲೆ ಕಟ್ಟಿಸುವವರೂ, ಮರಣ ಶಿಕ್ಷೆಯಾದವರನ್ನು ಪಾರುಮಾಡುವವರೂ, ಮರಣಾನಂತರ ಈ ವರುಣಲೋಕದಲ್ಲಿ ವಾಸಮಾಡುವರು.

## ವಾಯು, ಕುಬೇರ ಈಶಾನ ಚಂದ್ರಾದಿ ಲೋಕಗಳ ಸ್ಥಿತಿಗತಿ

**ವಿಷ್ಣುಪಾರ್ಷದ:-** ವಿಪ್ರವರ್ಯ ವರುಣಪುರಿಯ ಉತ್ತರಭಾಗದಲ್ಲಿ ಇದ್ದದ್ದೇ ವಾಯುದೇವನ ರಾಜಧಾನಿ. ಗಂಧವತಿ ಎಂಬ ಪಟ್ಟಣ. ಇಲ್ಲಿ ದೇವೋತ್ತಮನ ಆರಾಧನೆಯಿಂದ ದಿಕ್ಪಾಲ ಪದವಿಯನ್ನು ಪಡೆದ ವಾಯುದೇವನ ಅವಸ್ಥಿತಿ. ಹಿಂದಿನ ಕಾಲದಲ್ಲಿ ಸರ್ವಪ್ರಾಣಿಗಳ ಪ್ರಾಣಸ್ವರೂಪನಾದ ಪ್ರಭಂಜನ ಎಂಬ ಹೆಸರುಳ್ಳ ವಾಯುದೇವನು ಪೂರ್ವಜನ್ಮದಲ್ಲಿ ಕಶ್ಯಪ ಋಷಿಯ ಮಗನಾಗಿ ಪೂತಾತ್ಮ ಎಂದು ಪ್ರಖ್ಯಾತನಾಗಿದ್ದನು. ಅವನು ಕಾಶಿಯಲ್ಲಿದ್ದು ಹತ್ತು ಲಕ್ಷ ವರ್ಷ ಉಗ್ರ ತಪಸ್ಸನ್ನು ಮಾಡಿ ಮಹಾದೇವರನ್ನು ಒಲಿಸಿಕೊಂಡನು. ತಪಸ್ಸಿಗೆ ಪ್ರಸನ್ನನಾದ ಮಹೇಶ್ವರನು ಆ ಪ್ರಭಂಜನವಾಯುವಿಗೆ ಪ್ರೀತಿಯಿಂದ ಬೇಕಾದ ವರಬೇಡು ಎಂದು ಹೇಳಿದನು.

**ಪೂತಾತ್ಮ:-** ದೇವಾಧಿದೇವ, ನನಗೆ ಲೋಕೋಪಕಾರ ಮಾಡುವ ಶಕ್ತಿಯನ್ನು ಕೊಡು. ನಿನಗೆ ನನ್ನ ನಮಸ್ಕಾರ ಎಂದು ಕೇಳಿದನು.

**ಮಹಾದೇವ:-** ಪ್ರಭಂಜನ, ನೀನು ಒಳ್ಳೆ ತತ್ವಜ್ಞಾನಿ ಆಗುವಿ. ಸರ್ವಜನರ ಪ್ರಾಣನೇ ಆಗಿ ಲೋಕೋಪಕಾರ ಮಾಡುವಿ. ನೀನು ಪ್ರತಿಷ್ಠೆ ಮಾಡಿದ ಈ ಶಿವಲಿಂಗವು ಮುಂದೆ ಪವನೇಶ್ವರ ಎಂದು ಪ್ರಖ್ಯಾತವಾಗುವುದು. ಇದರ ದರ್ಶನದಿಂದ ಮಾನವರು ಮುಕ್ತರಾಗಿ ಸಕಲ ವಿಧವಾದ ಭೋಗ ಭಾಗ್ಯಗಳನ್ನು ಪಡೆಯುವರು.

ಈ ಗಂಧವತೀಪುರಿಯ ಪೂರ್ವಭಾಗದಲ್ಲಿ ಕುಬೇರನ ಅಲಕಾಪಟ್ಟಣ ಇರುತ್ತದೆ. ಇದರ ಒಡೆಯನಾದ ಕುಬೇರನು ಸ್ವಯಂ ಭಕ್ತಿಭಾವದ ಪ್ರಕೃಷ್ಟವಾದ ಪ್ರಭಾವದಿಂದ ಪರಮೇಶ್ವರನ ಒಳ್ಳೇ ಪ್ರೀತಿಯ ಮಿತ್ರನಾಗಿದ್ದಾನೆ. ಮತ್ತು ಈ ಶಿವಪೂಜೆಯ ಬಲದಿಂದಲೇ ಅವನು ಪದ್ಮವೇ ಮೊದಲಾದ ನವನಿಧಿಗಳ ದಾತಾರನೂ ಭೋಕ್ತಾರನೂ ಆಗಿದ್ದಾನೆ. ಅಲಕಾಪುರಿಯ ಪೂರ್ವಭಾಗದಲ್ಲಿ ಮಹಾದೇವನ ಈಶಾನಪುರಿ ಶೋಭಿಸುತ್ತದೆ. ಭೂಲೋಕದಲ್ಲಿ ಶಿವಪೂಜೆ, ಶಿವವ್ರತ, ಶಿವಧ್ಯಾನ ಮಾಡುವ ಹಾಗೂ ತಮ್ಮ ಸರ್ವಕರ್ಮಗಳನ್ನು ಶಿವಾರ್ಪಣೆಗೈಯುವ ಶಿವಭಕ್ತರು ಈ ಈಶಾನಪುರಿ ಎಂಬ ರುದ್ರಪುರಿಯಲ್ಲಿ ವಾಸಮಾಡುತ್ತಾರೆ. ಈ ಈಶಾನ ಪುರಿಯಲ್ಲಿ ಅಜೈಕಪಾತ್, ಅಹಿರ್ಬುಧ್ನ್ಯ ಮುಂತಾದ ಹನ್ನೊಂದು ರುದ್ರರು. ಇವರು ಈ ಎಂಟು ದಿಕ್‌ಪಾಲಕರ ಪಟ್ಟಣಗಳನ್ನು

ರಕ್ಷಣ ಮಾಡುತ್ತಾರೆ. ಇವರು ಕಾಶೀ ಪಟ್ಟಣದಲ್ಲಿ ಈಶಾನೇಶವರನ ಪ್ರತಿಷ್ಠೆ ಮಾಡಿ ತಪಂಗೈದು ಈ ಈಶಾನ್ಯಕೋಣದಲ್ಲಿ ದಿಕ್‌ಪಾಲಕರಾಗಿ ಮಂಡಿತರಾಗಿದ್ದಾರೆ. ಈ ಈಶಾನ್ಯ ಲೋಕದ ಮುಂದೆ ಇರುವುದೇ ಚಂದ್ರಲೋಕ. ಬ್ರಹ್ಮದೇವರ ಮಾನಸ ಪುತ್ರನಾದ ಅತ್ರಿ ಮುನಿಯು ಮೂರು ಸಾವಿರ ದಿವ್ಯ ವರ್ಷಗಳ ಕಾಲ ತಪಸ್ಸು ಮಾಡಿ ಚಂದ್ರನನ್ನು ಹಡೆದ. ಸ್ವಯಂ ಬ್ರಹ್ಮದೇವನೇ ಅವನ ಪಾಲನ ಪೋಷಣಗೈದ. ಮುಂದೆ ಆ ಚಂದ್ರನು, ಬಹುಕಾಲ ತಪಸ್ಸು ಮಾಡಿ ಕಾಶಿಯಲ್ಲಿ ಚಂದ್ರೇಶ್ವರ ಮೂರ್ತಿಯನ್ನು ಪ್ರತಿಷ್ಠಾಪಿಸಿದ. ಮಹಾದೇವರ ದಯೆಯಿಂದ ಬೀಜ, ಔಷಧ, ನೀರು, ಮತ್ತು ಬ್ರಾಹ್ಮಣರಿಗೆ ಅಧಿರಾಜನಾದ ಚಂದ್ರ ಅಮೃತೋದ ಎಂಬ ಸರೋವರವನ್ನು ನಿರ್ಮಿಸಿದ. ಅವನ ತಪಸ್ಸಿನಿಂದ ಸುಪ್ರಸನ್ನನಾದ ಪರಮೇಶ್ವರನು ಚಂದ್ರನಿಗೆ ದಿವ್ಯಕಾಂತಿಯನ್ನೂ ಜಗದ ಅಲ್ಹಾದಕತ್ವವನ್ನೂ ನೀಡಿ ಆ ಚಂದ್ರನ ಒಂದು ಕಲೆಯನ್ನು ತನ್ನ ತಲೆಯಮೇಲೆ ಧರಿಸಿದ. ಮುಂದೆ ದಕ್ಷಪ್ರಜಾಪತಿಯ ಶಾಪದಿಂದ ಚಂದ್ರನು ಕ್ಷೀಣನಾಗಿ ಹೋದರೂ ಮಹಾದೇವರು ತನ್ನ ಶಿರಸಾ ಧಾರಣ ಮಾಡಿದ ಆ ಒಂದು ಕಲೆಯ ಮುಖಾಂತರ ಮತ್ತೆ ವೃದ್ಧಿಯನ್ನು ಪಡೆದು ಪರಿಪೂರ್ಣನಾಗುತ್ತಾನೆ. ಕಾಶಿಯಲ್ಲಿರುವ ಚಂದ್ರೇಶ್ವರನ ಪೂಜೆ, ಸೋಮವಾರ ವ್ರತ, ಸೋಮಯಾಗ, ಸೋಮರಸಪಾನ ಮಾಡುವವರು ಈ ಚಂದ್ರಲೋಕದಲ್ಲಿ ನೆಲಿಸುವರು.

## ಬುಧಲೋಕ ಹಾಗೂ ಶುಕ್ರಲೋಕಗಳ ಪ್ರಯಾಣ

**ಶಿವಶರ್ಮ:-** ಪಾರ್ಷದರೇ, ಇಲ್ಲಿ ಮತ್ತೊಂದು ಚಂದ್ರಲೋಕದಷ್ಟೇ ಉಜ್ವಲವಾದ ಲೋಕಾಂತರವೊಂದು ಗೋಚರವಾಗುತ್ತದೆ.

**ಪಾರ್ಷದರು:-** ಶಿವಶರ್ಮ, ಇದು ಚಂದ್ರನ ಮಗನಾದ ಬುಧನ ಲೋಕ. ಇವನು ಕಾಶಿಗೆ ಹೋಗಿ ಬುಧೇಶ್ವರ ಲಿಂಗದ ಪ್ರತಿಷ್ಠೆಗೈದು ಹತ್ತು ಸಾವಿರ ವರ್ಷ ಉಗ್ರ ತಪಸ್ಸನ್ನು ಆಚರಿಸಿದ. ಅದರಿಂದ ಸುಪ್ರಸನ್ನನಾದ ಪರಮೇಶ್ವರನು ಬುಧನಿಗೆ ಈ ಉಜ್ವಲ ನಕ್ಷತ್ರ ಲೋಕದಲ್ಲಿ ಈ ವಿಶಾಲವಾದ ರಾಜ್ಯದ ಅಧಿಪತ್ಯವನ್ನು ಕರುಣಿಸಿದ್ದಾನೆ. ಕಾಶಿಯಲ್ಲಿರುವ ಈ ಎಲ್ಲ ಈಶ್ವರ ಲಿಂಗಗಳ ದರ್ಶನದಿಂದ ಮಾನವರ ಪಾಪಕರ್ಶನ ಆಗುತ್ತದೆ. ಈ ಬುಧ ಲೋಕದ ಮೇಲೆ ಶುಕ್ರಲೋಕ. ದೈತ್ಯ ಗುರು ಶುಕ್ರಾಚಾರ್ಯರು ಸಾವಿರ ವರ್ಷ ತಪಸ್ಸು ಮಾಡಿ ಪಡೆದ ಸಂಜೀವಿನಿ ವಿದ್ಯೆಯನ್ನು ದೇವತೆಗಳ ಆಚಾರ್ಯನಾದ ಬೃಹಸ್ಪತಿಯು ಕೂಡ ಅರಿತಿಲ್ಲ. ಭೃಗುವಂಶ ಲಲಾಮನಾದ ಈ ಶುಕ್ರನು ಕಾಶಿಯಲ್ಲಿ ಈ ಶುಕ್ರೇಶ್ವರಲಿಂಗವನ್ನು ಸ್ಥಾಪಿಸಿ ಐದು ಸಾವಿರದ ವರ್ಷ ತಪಸ್ಸನ್ನು ಮಾಡಿ ಆ ತನ್ನ ತಪಸ್ಸಿನ ಫಲವನ್ನೆಲ್ಲ ಆ ಪರಮೇಶ್ವರನ ಪಾದಗಳಿಗೆ ಸಮರ್ಪಿಸಿದ. ಅವನ ಭಕ್ತಿಯಿಂದ ಪ್ರಸನ್ನನಾದ ಮಹಾದೇವನು ಶುಕ್ರಾಚಾರ್ಯನಿಗೆ ಅಮೃತಸಂಜೀವಿನಿ ಎಂಬ ವಿದ್ಯೆಯನ್ನು ಉಪದೇಶ ಮಾಡಿದನು. ಈ ಪರಮೇಶ್ವರನ ಪ್ರಸಾದದಿಂದಲೇ ಶುಕ್ರಗ್ರಹವು ಎಲ್ಲ ನಕ್ಷತ್ರಗಳಿಗಿಂತಲೂ ಪ್ರಕಾಶಮಾನ ಎಂದು ಗ್ರಹಣಗಳಲ್ಲಿ ಪರಿಗಸಲ್ಪಡುತ್ತದೆ. ಹಾಗೂ ಶುಕ್ರ ಉದಯ ಆದಾಗಲೇ ಮದುವೆ ಮೊದಲಾದ ಮಂಗಳ ಕಾರ್ಯಗಳು ನೆರವೇರುವವು. ಪ್ರತಿ ಶುಕ್ರವಾರವೂ ಹಗಲು ಉಪವಾಸವಿದ್ದು ರಾತ್ರಿಕಾಲ ಮಾತ್ರ ಭೋಜನ ಮಾಡಿ ಒಂದು ವರ್ಷದವರೆಗೆ ಶುಕ್ರ ಕೂಪ ಸ್ನಾನ ಶುಕ್ರೇಶ್ವರ ಪೂಜೆ ಮಾಡುವವರಿಗೆ ಪರಮೇಶ್ವರನು ಸಕಲ ವಿಧವಾದ ಭೋಗ್ಯ ಭಾಗ್ಯಗಳನ್ನು ಕರುಣಿಸುವನು. ಶುಕ್ರೇಶ್ವರನ ಭಕ್ತರು ಶುಕ್ರಲೋಕದಲ್ಲಿ ವಾಸಿಸುವರು.

## ಮಂಗಳ, ಬೃಹಸ್ಪತಿ, ಶನಿಲೋಕಗಳ ಸ್ಥಿತಿ

**ಶಿವಶರ್ಮ:-** ಪಾರ್ಷದರೇ, ನಾವು ವೇಗಗಾಮಿಯಾದ ವಿಮಾನದಲ್ಲಿ ಕುಳಿತು ಮೇಲೆ ಮೇಲೆ ನಡೆದಾಗ ಶುಕ್ರಲೋಕದ ಅನಂತರ ಮತ್ತೊಂದು ಲೋಕವು ಕಾಣುತ್ತದೆ. ಅದು ಯಾವುದು?

ಎಂದು ಸಿಟ್ಟಿನಿಂದ ಅವನೊಡನೆ ಹಣಾಹಣಿ ಹೋರಾಡಿ ಅವನನ್ನು ಹಣಿಯಲು ಮೊದಲು ಮಾಡಿದರು. ಶಸ್ತ್ರಾಸ್ತ್ರಸಂಪನ್ನರಾದ ಆ ಕಳ್ಳ ಹಂತಕರ ಕೈಯಲ್ಲಿ ಸಿಕ್ಕು ಒಬ್ಬಂಟಿಗನಾಗಿ ಬಹಳ ಹೊತ್ತು ಕಾದು ಕೊನೆಗೆ ಪಿಂಗಾಕ್ಷನು ರಣಭೂಮಿಯಲ್ಲಿಯೇ ಪ್ರಾಣ ಬಿಟ್ಟ. ಆ ಪಿಂಗಾಕ್ಷನೇ ಈಗ ನೈಋತ್ಯ ಲೋಕದಲ್ಲಿ ನಿರತಿ ಎಂಬ ಹೆಸರಿನ ರಾಕ್ಷಸನಾಗಿ ದಿಕ್ಪಾಲಕ ಪಟ್ಟದಲ್ಲಿ ಅಭಿಷಿಕ್ತನಾಗಿದ್ದಾನೆ. ನೈಋತ್ಯಪುರಿಯ ಉತ್ತರಕ್ಕೆ ವರುಣಲೋಕ. ನ್ಯಾಯಮಾರ್ಗದಿಂದ ಧನವನ್ನು ಗಳಿಸಿ, ಕೆರೆಕಾಲುವೆ ಕಟ್ಟಿಸಿ, ಜನರಿಗೆ ನೀರು ದೊರಕುವಂತೆ ಮಾಡಿದವರೂ, ಕಲಶ ಕಮಂಡಲ, ಬಿಂದಿಗೆ ಮೊದಲಾದ ಜಲಪೂರ್ಣಪಾತ್ರೆಗಳನ್ನು ದಾನ ನೀಡುವವರೂ ಬೀದಿಯ ಇಬ್ಬದಿಗಳಲ್ಲಿ ನೆರಳು ಮರಗಳನ್ನು ಹಚ್ಚಿ ಬೆಳಸುವವರೂ, ಯಾತ್ರಿಕರಿಗಾಗಿ ಧರ್ಮಶಾಲೆ ಕಟ್ಟಿಸುವವರೂ, ಮರಣ ಶಿಕ್ಷೆಯಾದವರನ್ನು ಪಾರುಮಾಡುವವರೂ, ಮರಣಾನಂತರ ಈ ವರುಣಲೋಕದಲ್ಲಿ ವಾಸಮಾಡುವರು.

## ವಾಯು, ಕುಬೇರ ಈಶಾನ ಚಂದ್ರಾದಿ ಲೋಕಗಳ ಸ್ಥಿತಿಗತಿ

**ವಿಷ್ಣುಪಾರ್ಷದ:-** ವಿಪ್ರವರ್ಯ ವರುಣಪುರಿಯ ಉತ್ತರಭಾಗದಲ್ಲಿ ಇದ್ದದ್ದೇ ವಾಯುದೇವನ ರಾಜಧಾನಿ. ಗಂಧವತಿ ಎಂಬ ಪಟ್ಟಣ. ಇಲ್ಲಿ ದೇವೋತ್ತಮನ ಆರಾಧನೆಯಿಂದ ದಿಕ್ಪಾಲ ಪದವಿಯನ್ನು ಪಡೆದ ವಾಯುದೇವನ ಅವಸ್ಥಿತಿ. ಹಿಂದಿನ ಕಾಲದಲ್ಲಿ ಸರ್ವಪ್ರಾಣಿಗಳ ಪ್ರಾಣಸ್ವರೂಪನಾದ ಪ್ರಭಂಜನ ಎಂಬ ಹೆಸರುಳ್ಳ ವಾಯುದೇವನು ಪೂರ್ವಜನ್ಮದಲ್ಲಿ ಕಶ್ಯಪ ಋಷಿಯ ಮಗನಾಗಿ ಪೂತಾತ್ಮ ಎಂದು ಪ್ರಖ್ಯಾತನಾಗಿದ್ದನು. ಅವನು ಕಾಶಿಯಲ್ಲಿದ್ದು ಹತ್ತು ಲಕ್ಷ ವರ್ಷ ಉಗ್ರ ತಪಸ್ಸನ್ನು ಮಾಡಿ ಮಹಾದೇವರನ್ನು ಒಲಿಸಿಕೊಂಡನು. ತಪಸ್ಸಿಗೆ ಪ್ರಸನ್ನನಾದ ಮಹೇಶ್ವರನು ಆ ಪ್ರಭಂಜನವಾಯುವಿಗೆ ಪ್ರೀತಿಯಿಂದ ಬೇಕಾದ ವರಬೇಡು ಎಂದು ಹೇಳಿದನು.

**ಪೂತಾತ್ಮ:-** ದೇವಾಧಿದೇವ, ನನಗೆ ಲೋಕೋಪಕಾರ ಮಾಡುವ ಶಕ್ತಿಯನ್ನು ಕೊಡು. ನಿನಗೆ ನನ್ನ ನಮಸ್ಕಾರ ಎಂದು ಕೇಳಿದನು.

**ಮಹಾದೇವ:-** ಪ್ರಭಂಜನ, ನೀನು ಒಳ್ಳೆ ತತ್ವಜ್ಞಾನಿ ಆಗುವಿ. ಸರ್ವಜನರ ಪ್ರಾಣನೇ ಆಗಿ ಲೋಕೋಪಕಾರ ಮಾಡುವಿ. ನೀನು ಪ್ರತಿಷ್ಠೆ ಮಾಡಿದ ಈ ಶಿವಲಿಂಗವು ಮುಂದೆ ಪವನೇಶ್ವರ ಎಂದು ಪ್ರಖ್ಯಾತವಾಗುವುದು. ಇದರ ದರ್ಶನದಿಂದ ಮಾನವರು ಮುಕ್ತರಾಗಿ ಸಕಲ ವಿಧವಾದ ಭೋಗ ಭಾಗ್ಯಗಳನ್ನು ಪಡೆಯುವರು.

ಈ ಗಂಧವತೀಪುರಿಯ ಪೂರ್ವಭಾಗದಲ್ಲಿ ಕುಬೇರನ ಅಲಕಾಪಟ್ಟಣ ಇರುತ್ತದೆ. ಇದರ ಒಡೆಯನಾದ ಕುಬೇರನು ಸ್ವಯಂ ಭಕ್ತಿಭಾವದ ಪ್ರಕೃಷ್ಟವಾದ ಪ್ರಭಾವದಿಂದ ಪರಮೇಶ್ವರನ ಒಳ್ಳೇ ಪ್ರೀತಿಯ ಮಿತ್ರನಾಗಿದ್ದಾನೆ. ಮತ್ತು ಈ ಶಿವಪೂಜೆಯ ಬಲದಿಂದಲೇ ಅವನು ಪದ್ಮವೇ ಮೊದಲಾದ ನವನಿಧಿಗಳ ದಾತಾರನೂ ಭೋಕ್ತಾರನೂ ಆಗಿದ್ದಾನೆ. ಅಲಕಾಪುರಿಯ ಪೂರ್ವಭಾಗದಲ್ಲಿ ಮಹಾದೇವನ ಈಶಾನಪುರಿ ಶೋಭಿಸುತ್ತದೆ. ಭೂಲೋಕದಲ್ಲಿ ಶಿವಪೂಜೆ, ಶಿವವ್ರತ, ಶಿವಧ್ಯಾನ ಮಾಡುವ ಹಾಗೂ ತಮ್ಮ ಸರ್ವಕರ್ಮಗಳನ್ನು ಶಿವಾರ್ಪಣೆಗೈಯುವ ಶಿವಭಕ್ತರು ಈ ಈಶಾನಪುರಿ ಎಂಬ ರುದ್ರಪುರಿಯಲ್ಲಿ ವಾಸಮಾಡುತ್ತಾರೆ. ಈ ಈಶಾನ ಪುರಿಯಲ್ಲಿ ಅಜೈಕಪಾತ್, ಅಹಿರ್ಬುಧ್ನ್ಯ ಮುಂತಾದ ಹನ್ನೊಂದು ರುದ್ರರು. ಇವರು ಈ ಎಂಟು ದಿಕ್‌ಪಾಲಕರ ಪಟ್ಟಣಗಳನ್ನು

ರಕ್ಷಣ ಮಾಡುತ್ತಾರೆ. ಇವರು ಕಾಶೀ ಪಟ್ಟಣದಲ್ಲಿ ಈಶಾನೇಶವರನ ಪ್ರತಿಷ್ಠೆ ಮಾಡಿ ತಪಂಗೈದು ಈ ಈಶಾನ್ಯಕೋಣದಲ್ಲಿ ದಿಕ್‌ಪಾಲಕರಾಗಿ ಮಂಡಿತರಾಗಿದ್ದಾರೆ. ಈ ಈಶಾನ್ಯ ಲೋಕದ ಮುಂದೆ ಇರುವುದೇ ಚಂದ್ರಲೋಕ. ಬ್ರಹ್ಮದೇವರ ಮಾನಸ ಪುತ್ರನಾದ ಅತ್ರಿ ಮುನಿಯು ಮೂರು ಸಾವಿರ ದಿವ್ಯ ವರ್ಷಗಳ ಕಾಲ ತಪಸ್ಸು ಮಾಡಿ ಚಂದ್ರನನ್ನು ಹಡೆದ. ಸ್ವಯಂ ಬ್ರಹ್ಮದೇವನೇ ಅವನ ಪಾಲನ ಪೋಷಣಗೈದ. ಮುಂದೆ ಆ ಚಂದ್ರನು, ಬಹುಕಾಲ ತಪಸ್ಸು ಮಾಡಿ ಕಾಶಿಯಲ್ಲಿ ಚಂದ್ರೇಶ್ವರ ಮೂರ್ತಿಯನ್ನು ಪ್ರತಿಷ್ಠಾಪಿಸಿದ. ಮಹಾದೇವರ ದಯೆಯಿಂದ ಬೀಜ, ಔಷಧ, ನೀರು, ಮತ್ತು ಬ್ರಾಹ್ಮಣರಿಗೆ ಅಧಿರಾಜನಾದ ಚಂದ್ರ ಅಮೃತೋದ ಎಂಬ ಸರೋವರವನ್ನು ನಿರ್ಮಿಸಿದ. ಅವನ ತಪಸ್ಸಿನಿಂದ ಸುಪ್ರಸನ್ನನಾದ ಪರಮೇಶ್ವರನು ಚಂದ್ರನಿಗೆ ದಿವ್ಯಕಾಂತಿಯನ್ನೂ ಜಗದ ಅಲ್ಹಾದಕತ್ವವನ್ನೂ ನೀಡಿ ಆ ಚಂದ್ರನ ಒಂದು ಕಲೆಯನ್ನು ತನ್ನ ತಲೆಯಮೇಲೆ ಧರಿಸಿದ. ಮುಂದೆ ದಕ್ಷಪ್ರಜಾಪತಿಯ ಶಾಪದಿಂದ ಚಂದ್ರನು ಕ್ಷೀಣನಾಗಿ ಹೋದರೂ ಮಹಾದೇವರು ತನ್ನ ಶಿರಸಾ ಧಾರಣ ಮಾಡಿದ ಆ ಒಂದು ಕಲೆಯ ಮುಖಾಂತರ ಮತ್ತೆ ವೃದ್ಧಿಯನ್ನು ಪಡೆದು ಪರಿಪೂರ್ಣನಾಗುತ್ತಾನೆ. ಕಾಶಿಯಲ್ಲಿರುವ ಚಂದ್ರೇಶ್ವರನ ಪೂಜೆ, ಸೋಮವಾರ ವ್ರತ, ಸೋಮಯಾಗ, ಸೋಮರಸಪಾನ ಮಾಡುವವರು ಈ ಚಂದ್ರಲೋಕದಲ್ಲಿ ನೆಲಿಸುವರು.

## ಬುಧಲೋಕ ಹಾಗೂ ಶುಕ್ರಲೋಕಗಳ ಪ್ರಯಾಣ

**ಶಿವಶರ್ಮ:-** ಪಾರ್ಷದರೇ, ಇಲ್ಲಿ ಮತ್ತೊಂದು ಚಂದ್ರಲೋಕದಷ್ಟೇ ಉಜ್ವಲವಾದ ಲೋಕಾಂತರವೊಂದು ಗೋಚರವಾಗುತ್ತದೆ.

**ಪಾರ್ಷದರು:-** ಶಿವಶರ್ಮ, ಇದು ಚಂದ್ರನ ಮಗನಾದ ಬುಧನ ಲೋಕ. ಇವನು ಕಾಶಿಗೆ ಹೋಗಿ ಬುಧೇಶ್ವರ ಲಿಂಗದ ಪ್ರತಿಷ್ಠೆಗೈದು ಹತ್ತು ಸಾವಿರ ವರ್ಷ ಉಗ್ರ ತಪಸ್ಸನ್ನು ಆಚರಿಸಿದ. ಅದರಿಂದ ಸುಪ್ರಸನ್ನನಾದ ಪರಮೇಶ್ವರನು ಬುಧನಿಗೆ ಈ ಉಜ್ವಲ ನಕ್ಷತ್ರ ಲೋಕದಲ್ಲಿ ಈ ವಿಶಾಲವಾದ ರಾಜ್ಯದ ಅಧಿಪತ್ಯವನ್ನು ಕರುಣಿಸಿದ್ದಾನೆ. ಕಾಶಿಯಲ್ಲಿರುವ ಈ ಎಲ್ಲ ಈಶ್ವರ ಲಿಂಗಗಳ ದರ್ಶನದಿಂದ ಮಾನವರ ಪಾಪಕರ್ಶನ ಆಗುತ್ತದೆ. ಈ ಬುಧ ಲೋಕದ ಮೇಲೆ ಶುಕ್ರಲೋಕ. ದೈತ್ಯ ಗುರು ಶುಕ್ರಾಚಾರ್ಯರು ಸಾವಿರ ವರ್ಷ ತಪಸ್ಸು ಮಾಡಿ ಪಡೆದ ಸಂಜೀವಿನಿ ವಿದ್ಯೆಯನ್ನು ದೇವತೆಗಳ ಆಚಾರ್ಯನಾದ ಬೃಹಸ್ಪತಿಯು ಕೂಡ ಅರಿತಿಲ್ಲ. ಭೃಗುವಂಶ ಲಲಾಮನಾದ ಈ ಶುಕ್ರನು ಕಾಶಿಯಲ್ಲಿ ಈ ಶುಕ್ರೇಶ್ವರಲಿಂಗವನ್ನು ಸ್ಥಾಪಿಸಿ ಐದು ಸಾವಿರದ ವರ್ಷ ತಪಸ್ಸನ್ನು ಮಾಡಿ ಆ ತನ್ನ ತಪಸ್ಸಿನ ಫಲವನ್ನೆಲ್ಲ ಆ ಪರಮೇಶ್ವರನ ಪಾದಗಳಿಗೆ ಸಮರ್ಪಿಸಿದ. ಅವನ ಭಕ್ತಿಯಿಂದ ಪ್ರಸನ್ನನಾದ ಮಹಾದೇವನು ಶುಕ್ರಾಚಾರ್ಯನಿಗೆ ಅಮೃತಸಂಜೀವಿನಿ ಎಂಬ ವಿದ್ಯೆಯನ್ನು ಉಪದೇಶ ಮಾಡಿದನು. ಈ ಪರಮೇಶ್ವರನ ಪ್ರಸಾದದಿಂದಲೇ ಶುಕ್ರಗ್ರಹವು ಎಲ್ಲ ನಕ್ಷತ್ರಗಳಿಗಿಂತಲೂ ಪ್ರಕಾಶಮಾನ ಎಂದು ಗ್ರಹಣಗಳಲ್ಲಿ ಪರಿಗಸಲ್ಪಡುತ್ತದೆ. ಹಾಗೂ ಶುಕ್ರ ಉದಯ ಆದಾಗಲೇ ಮದುವೆ ಮೊದಲಾದ ಮಂಗಳ ಕಾರ್ಯಗಳು ನೆರವೇರುವವು. ಪ್ರತಿ ಶುಕ್ರವಾರವೂ ಹಗಲು ಉಪವಾಸವಿದ್ದು ರಾತ್ರಿಕಾಲ ಮಾತ್ರ ಭೋಜನ ಮಾಡಿ ಒಂದು ವರ್ಷದವರೆಗೆ ಶುಕ್ರ ಕೂಪ ಸ್ನಾನ ಶುಕ್ರೇಶ್ವರ ಪೂಜೆ ಮಾಡುವವರಿಗೆ ಪರಮೇಶ್ವರನು ಸಕಲ ವಿಧವಾದ ಭೋಗ್ಯ ಭಾಗ್ಯಗಳನ್ನು ಕರುಣಿಸುವನು. ಶುಕ್ರೇಶ್ವರನ ಭಕ್ತರು ಶುಕ್ರಲೋಕದಲ್ಲಿ ವಾಸಿಸುವರು.

## ಮಂಗಳ, ಬೃಹಸ್ಪತಿ, ಶನಿಲೋಕಗಳ ಸ್ಥಿತಿ

**ಶಿವಶರ್ಮ:-** ಪಾರ್ಷದರೇ, ನಾವು ವೇಗಗಾಮಿಯಾದ ವಿಮಾನದಲ್ಲಿ ಕುಳಿತು ಮೇಲೆ ಮೇಲೆ ನಡೆದಾಗ ಶುಕ್ರಲೋಕದ ಅನಂತರ ಮತ್ತೊಂದು ಲೋಕವು ಕಾಣುತ್ತದೆ. ಅದು ಯಾವುದು?

**ಪಾರ್ಷದರು:-** ಶಿವಶರ್ಮನ್! ಇದು ಮಂಗಳ ಗ್ರಹ. ಈ ಮಂಗಳ ಗ್ರಹದ ಉತ್ಪತ್ತಿ ಪೃಥ್ವಿಯಿಂದ. ಭೂ ಮಾತೆಯು ಒಳ್ಳೆ ಪ್ರೀತಿಯಿಂದ ಈ ಮಂಗಳನನ್ನು ಬೆಳೆಸಿದಳು. ಈ ಭೂಮಿ ಪುತ್ರನಾದ ಮಂಗಳನು ಕಾಶಿಯಲ್ಲಿ ನಿಂತು ಶಿವನನ್ನು ಉದ್ದೇಶಿಸಿ ಘೋರ ತಪಸ್ಸನ್ನು ಆಚರಿಸಿದ. ಮತ್ತು ಅಲ್ಲಿ ಅಂಗಾರಕೇಶ್ವರ ಎಂಬ ಶಿವಲಿಂಗವನ್ನು ಸ್ಥಾಪನೆ ಮಾಡಿದನು. ಮಂಗಳನು ಘೋರ ತಪವನ್ನು ಆಚರಿಸುತ್ತಲಿರುವಾಗ ಅವನು ದೇಹದಿಂದ ಅಂಗಾರಕದಂಥ ಎಂದರೆ ಉರಿಯುವ ನಿಗಿ ನಿಗಿ ಕೆಂಡದಂತೆ ಕೆಂಬಣ್ಣದ ಕಾಂತಿ ಹೊರಸೂಸಿತು. ಆದರಿಂದ ಇವನಿಗೆ ಅಂಗಾರಕ ಎಂಬ ಹೆಸರು ಬಂದಿತು. ಇದರ ಮುಂದಿನದೇ 'ಬೃಹಸ್ಪತಿ ಲೋಕ. ಅಂಗಿರಸ್ ಪ್ರಜಾಪತಿಯ ಮಗನಾದ ಈ ಬೃಹಸ್ಪತಿಯು ಕಾಶಿಯಲ್ಲಿ ತನ್ನ ಹೆಸರಿನಿಂದಲೇ ಬೃಹಸ್ಪತೀಶ್ವರ ಲಿಂಗವನ್ನು ಸ್ಥಾಪಿಸಿ ಉಗ್ರ ತಪಸ್ಸನ್ನು ಆಚರಿಸಿದ. ಅವನ ಆರಾಧನೆಯಿಂದ ಸುಪ್ರಸನ್ನನಾದ ಪರಮೇಶ್ವರನು:- ''ಬ್ರಹ್ಮನ್, ನೀನು ದೇವತೆಗಳಿಗೆ ಗುರುವಾಗು. ನೀನು ಇಲ್ಲಿ ಬೃಹತ್ ತಪಸ್ಸನ್ನು ಮಾಡಿದೆ. ಆದುದರಿಂದ ನೀನು ಈ ಜಗತ್ತಿನಲ್ಲಿ 'ಬೃಹತ್' ಎಂದರೆ ಶ್ರೇಷ್ಠ. ಸರ್ವೋತ್ಕೃಷ್ಟರಾದ ದೇವತೆಗಳಿಗೆ 'ಪತಿ' ಎಂದರೆ ಪಾಲಕನು ಆಗುವಿ. ನಿನಗೆ ಬೃಹಸ್ಪತಿ ಎಂದು ಹೆಸರಾಗುವುದು.'' ಎಂದು ಆಶೀರ್ವದಿಸಿದ.

**ಅಗಸ್ತ್ಯ:-** ಲೋಪಾಮುದ್ರೆಯೇ, ಹೀಗೆ ವೈಕುಂಠ ವಿಮಾನದಲ್ಲಿ ಕುಳಿತು ಶಿವಶರ್ಮನು ಎಲ್ಲ ಲೋಕಗಳನ್ನು ಮೀರಿ ದಾಟಿ ಶನಿ ಲೋಕವನ್ನು ಕಂಡನು. ಆ ಲೋಕದ ಪರಿಚಯವನ್ನು ಮಾಡಿ ಕೊಡುತ್ತಾ **ವಿಷ್ಣು ಪಾರ್ಷದವರು** ನುಡಿದರು:- ಬ್ರಾಹ್ಮಣ, ಇದು ಶನಿಯ ನಗರ. ಸೂರ್ಯನ ಸೌವರ್ಣಾ ಎಂಬ ಪತ್ನಿಯ ಗರ್ಭದಿಂದ ಶನಿಯ ಉತ್ಪತ್ತಿ. ಅವನು ಕಾಶಿಗೆ ಹೋಗಿ ಶಿವಲಿಂಗದ ಸ್ಥಾಪನೆ ಮಾಡಿ ಬಹುಕಾಲ ತಪಸ್ಸನ್ನು ಮಾಡಿ ಗಗನ ಮಂಡಲದಲ್ಲಿ ಗ್ರಹಪದವಿಯನ್ನು ಪಡೆದ. ಕಾಶಿಯಲ್ಲಿರುವ ಶನೈಶ್ಚರೇಶ್ವರನ ದರ್ಶನ ಮಾಡಿಕೊಂಡು ಶನಿವಾರದ ದಿನ ಅವನ ಪೂಜೆ ಮಾಡಿದರೆ ಶನಿಯ ಬಾಧೆ ಬರುವುದಿಲ್ಲ.

## ಸಪ್ತ ಋಷಿಲೋಕ ಧ್ರುವಲೋಕ ಸ್ಥಿತಿ ಹಾಗೂ ಧ್ರುವನ ತಪಸ್ಸು

**ಶಿವಶರ್ಮ:-** ವಿಷ್ಣುಪಾರ್ಷದರೇ, ಈಗ ನನ್ನ ಮುಂದೆ ಕಾಣುವ ಈ ತೇಜೋಮಯವಾದ ಲೋಕ ಯಾವುದು? ಮತ್ತು ಯಾರದು?

**ವಿಷ್ಣು ಪಾರ್ಷದ:-** ವಿಪ್ರವರ್ಯ, ಇದು ಸಪ್ತರ್ಷಿಲೋಕ, ಮರೀಚಿ, ಅತ್ರಿ, ಪುಲಹ, ಪುಲಸ್ತ್ಯ, ಕೃತು, ಅಂಗಿರಸ್, ಮತ್ತು ವಶಿಷ್ಠ ಮುಂತಾದ ಬ್ರಹ್ಮದೇವರ ಮಾನಸ ಪುತ್ರರು ಇಲ್ಲಿ ತಮ್ಮ ಸಾಧನಾನುಷ್ಠಾನ ಲೀನರಾಗಿ ಇರುತ್ತಾರೆ. ಸಂಭೂತಿ, ಅನಸೂಯಾ, ಕ್ಷಮಾ, ಪ್ರೀತಿ, ಸನ್ನತಿ, ಸ್ಮೃತಿ, ಅರುಂಧತಿ ಇವರು ಏಳು ಜನ ಕ್ರಮವಾಗಿ ಆ ಸಪ್ತರ್ಷಿಗಳ ಧರ್ಮಪತ್ನಿಯರು. ಈ ಸಪ್ತಋಷಿಗಳು ತಮ್ಮ ಮಡದಿಯರೊಂದಿಗೇ ಕಾಶಿಗೆ ಹೋಗಿ ತಮ್ಮ ತಮ್ಮ ಹೆಸರಿನಿಂದ ಒಂದೊಂದು ಶಿವಲಿಂಗವನ್ನು ಪ್ರತಿಷ್ಠೆಗೈದಿದ್ದಾರೆ. ಮತ್ತು ಆ ಶಿವಲಿಂಗದ ಎದುರು ಕುಳಿತು ನಿಂತು ಅತ್ಯಂತ ಉಗ್ರವಾದ ತಪಸ್ಸು ಆಚರಿಸಿ ಶಿವನ ದಯೆಯಿಂದ ಪ್ರಜಾಪತಿ ಕೃಪೆಯನ್ನು ಹೊಂದಿದ್ದಾರೆ. ಕಾಶಿಯಲ್ಲಿ ಈ ಏಳು ಬ್ರಹ್ಮರ್ಷಿಗಳು ಸ್ಥಾಪಿಸಿದ ಶಿವಲಿಂಗಗಳ ದರ್ಶನ ಪೂಜೆ ಮಾಡಿದವರು ಉದ್ಧೃತರಾಗುವರು. ಗೋಕರ್ಣೇಶ್ವರ ಕುಂಡದ ಪಶ್ಚಿಮ ತಟದಲ್ಲಿ ಅತ್ರೀಶ್ವರ ಲಿಂಗವು ಇರುತ್ತದೆ. ಕರ್ಕೋಟಕ ಕುಂಡದ ಈಶಾನ್ಯ ಕೋಣದಲ್ಲಿ ಮರೀಚೀಶ್ವರ ಲಿಂಗ. ಸ್ವರ್ಗದ್ವಾರದ ಪಶ್ಚಿಮದಲ್ಲಿ ಪುಲಹೇಶ್ವರ ಪುಲ್ಲಸ್ತ್ಯೇಶ್ವರ ಲಿಂಗಗಳು. ಹರೀಕೇಶವನದಲ್ಲಿ ಅಂಗಿರಸೇಶ್ವರ ಲಿಂಗ. ವರಣಾ ನದಿಯ

ತೀರದಲ್ಲಿ ವಶಿಷ್ಠೇಶ್ವರ ಲಿಂಗ, ಕೃತ್ತೀಶ್ವರ ಲಿಂಗಗಳು ಇರುತ್ತವೆ. ಈ ಸಪ್ತರ್ಷಿಗಳು ಕಾಶಿಯಲ್ಲಿ ತಾವು ಪ್ರತಿಷ್ಠೆಗೈದ ಈಶ್ವರಲಿಂಗದ ಆರಾಧನೆಯಿಂದ ಸಿದ್ಧಿ ಪಡೆದು ಪರಮೇಶ್ವರ ಪ್ರಸಾದದಿಂದ ಈಗ ನಭೋಮಂಡಲದಲ್ಲಿ ಸಪ್ತರ್ಷಿ ಲೋಕದಲ್ಲಿ ಸುಪ್ರತಿಷ್ಠಿತರಾಗಿರುತ್ತಾರೆ. ಇದೇ ಲೋಕದಲ್ಲಿಯೇ ಮಹಾ ಪತಿವ್ರತೆಯಾದ ಅರುಂಧತಿ ದೇವಿಯು ವಶಿಷ್ಠರ ಸಮೀಪದಲ್ಲಲಿ ಹೊಳೆಯುತ್ತಲಿದ್ದಾಳೆ. ಅರುಂಧತಿಯ ನಾಮಸ್ಮರಣ ಮಾತ್ರದಿಂದ ಗಂಗಾ ಸ್ನಾನದ ಫಲ ಬರುತ್ತದೆ.

ಹೀಗೆ ವಿಷ್ಣುಪಾರ್ಷದರು ಹೇಳುತ್ತಲಿರುವಾಗಲೇ ಅವರ ವಿಮಾನವು ಸಪ್ತರ್ಷಿ ಲೋಕ ದಾಟ ಧ್ರುವ ಲೋಕಕ್ಕೆ ಬಂದಿತು. ಆಗ - ''ಇದು ಯಾವ ಲೋಕ'' ಎಂಬ ಶಿವಶರ್ಮನ ಪ್ರಶ್ನೆಗೆ ಉತ್ತರ ರೂಪವಾಗಿ ಆ ಹರಿ ಪಾರ್ಷದರು ಉತ್ತರಿಸಿದರು.

**ವಿಷ್ಣುಪಾರ್ಷದರು:-** ಧರ್ಮಾತ್ಮನೇ, ಸ್ವಾಯಂಭುವ ಮನುವಿನ ಸತ್ಪುತ್ರನೇ ಉತ್ತಾನ ಪಾದ. ಅವನಿಗೆ ಇಬ್ಬರು ಮಡದಿಯರು. ಸುನೀತಿ ಸುರುಚಿ ಎಂದು. ಸುನೀತಿಯ ಗರ್ಭದಿಂದ ಧ್ರುವ ಎಂಬ ಕುಮಾರನ ಜನನ. ಸುರುಚಿಯ ಗರ್ಭದಿಂದ ಉತ್ತಮನ ಉತ್ಪತ್ತಿ. ಒಂದು ದಿನ ಉತ್ತಾನಪಾದ ರಾಜನು ಸಭೆಯಲ್ಲಿ ಕುಳಿತಾಗ ಸುನೀತಿಯು ತನ್ನ ಮಗನಾದ ಧ್ರುವನನ್ನು ತಂದೆಗೆ ವಂದನೆಯನ್ನು ಮಾಡಿ ಬಾ ಎಂದು ಕಳಿಸಿದಳು. ಮಹಾರಾಜನ ಒಂದು ತೊಡೆಯ ಮೇಲೆ ಆಗಲೇ ಉತ್ತಮ ಕುಳಿತುಕೊಂಡಿದ್ದ. ಇನ್ನೊಂದು ತೊಡೆ ಖಾಲಿ ಇದ್ದಿತು. ಆ ತೊಡೆಯ ಮೇಲೆ ಕೂಡಬೇಕೆಂದು ಧ್ರುವ ಮುಂದೆ ಬಂದ. ತಂದೆಯ ಚರಣಾರವಿಂದಗಳಿಗೆ ಮೊದಲು ಭಕ್ತಿಯಿಂದ ವಂದಿಸಿದ. ಅನಂತರ ತಂದೆಯ ತೊಡೆಯ ಮೇಲೆ ಏರ ಹೊರಟ ಧ್ರುವನನ್ನು ತಡೆದು ರಾಣಿ ಸುರಚಿಯು ಸಿಟ್ಟಿನಿಂದ ಅವನನು ದೂರ ತಳ್ಳಿ ಕೆಂಗಣ್ಣಿನಿಂದ ನೋಡಿ ಧಿಕ್ಕರಿಸಿ ನುಡಿದಳು. ''ದುರ್ದೈವಿ ರಾಣಿಯ ಹೊಟ್ಟೆಯಿಂದ ಹುಟ್ಟಿದ ಧ್ರುವ, ನೀನು ಮಹಾರಾಜರ ಉತ್ಸಂಗದಲ್ಲಿ ಕೂಡುವ ಸಾಹಸವನ್ನು ಸರ್ವಥಾ ಮಾಡಬೇಡ. ಮಹಾರಾಜನ ಅಂಕಾರೋಹಣದ ಪುಣ್ಯವು ನಿನಗಿದ್ದರೆ ಆ ದುರ್ಭಾಗಿನಿಯಾದ ಸುನೀತಿಯ ಹೊಟ್ಟೆಯಲ್ಲಿ ಏಕೆ ಹುಟ್ಟುತ್ತಿದ್ದೆ? ನನ್ನ ಮಗನಾದ ಉತ್ತಮನನ್ನು ನೋಡು. ಅವನು ಭಾಗ್ಯವತಿಯಾದ ನನ್ನ ಹೊಟ್ಟೆಯಲ್ಲಿ ಹುಟ್ಟಿದ್ದಾನೆ. ಆದ್ದರಿಂದಲೇ ಅವನು ಮಹಾರಾಜರ ಅಂಕವನ್ನು ಆನಂದದಿಂದ ಏರಿ ಕುಳಿತಿದ್ದಾನೆ.'' ತುಂಬಿದ ರಾಜಸಭೆಯಲ್ಲಿ ಮಲತಾಯಿಯು ನುಡಿದ ಮಾತಿನಿಂದ ಅಪಮಾನಿತನಾದ ಧ್ರುವನು ತುದಿಕಳಿಸಿ ಬಂದ ಕಣ್ಣೀರನ್ನು ಬಿಗಿ ಹಿಡಿದು ನೇರವಾಗಿ ತಾಯಿಯ ಬಳಿಗೆ ಬಂದು ಏಕಾಂತದಲ್ಲಿ ಎಲ್ಲ ಸಮಾಚಾರವನ್ನು ತಿಳಿಸಿದ. ತಾಯಿಯೆದುರು ಅಳುತ್ತ:- ಅಮ್ಮಾ, ನೀನು ಸುರಚಿ ಇಬ್ಬರೂ ರಾಜನ ಮಡದಿಯರು. ನಾನು ಉತ್ತಮ ಇಬ್ಬರೂ ರಾಜನ ಔರಸ ಮಕ್ಕಳು. ಸುರಚಿಯ ಮಗ ಉತ್ತಮನು ಮಾತ್ರ ಉತ್ತಮನಾಗಿ, ನಾನು ಮಾತ್ರ ಅಧಮನೇ? ತಂದೆ ಉತ್ತಾನಪಾದನು ಸುರುಚಿಯನ್ನು ಮಾತ್ರ ಏಕೆ ಪ್ರೀತಿಸಬೇಕು? ನೀನು ಅವನ ಹೆಂಡತಿಯಲ್ಲವೆ? ತಂದೆಯ ತೊಡೆಯ ಮೇಲೆ ಕೂಡಲು ಉತ್ತಮನಂತೆ ನನಗೇಕೆ ಅಧಿಕಾರವಿಲ್ಲ?

**ಸುನೀತಿ:-** ವತ್ಸ! ಸುರುಚಿಯು ಹೇಳಿದ ಮಾತು ನಿಜ. ಜನ್ಮಾಂತರದಲ್ಲಿ ಅವಳು ತಪಸ್ಸು ಮಾಡಿ ರಾಜನ ಪ್ರೀತಿಯ ಮಡದಿಯಾಗಿದ್ದಾಳೆ. ಉತ್ತಮನು ಹಿಂದಿನ ಜನ್ಮದಲ್ಲಿ ಪುಣ್ಯವನ್ನು ಸಂಪಾದನೆಮಾಡಿ ರಾಜನ ಪ್ರೀತಿ ಪಾತ್ರಳಾದ ಸುರುಚಿಯ ಹೊಟ್ಟೆಯಿಂದ ಹುಟ್ಟಿ ಬಂದಿದ್ದಾನೆ. ನಾನು ಕೂಡ ಕಳೆದ ಜನ್ಮದಲ್ಲಿ ಅತ್ಯಲ್ಪ ತಪಸ್ಸು ಮಾಡಿದ್ದರಿಂದ ಅರಸನ ಪಟ್ಟರಾಣಿಯಾದರೂ ಹೃದಯರಾಣಿಯಾಗಲಿಲ್ಲ. ನನ್ನ ಹೊಟ್ಟೆಯಿಂದ

ಹುಟ್ಟಿದ್ದಕ್ಕಾಗಿ ನೀನು ಕೂಡ ಮಹಾರಾಜನ ಮೆಚ್ಚಿನ ಮಗನಾಗಲಿಲ್ಲ.

**ಧ್ರುವ:-** ಹಾಗಾದರೆ, ನಾನು ಕೂಡ ದೇವರನ್ನು ಕುರಿತು ತಪಸ್ಸು ಮಾಡುತ್ತೇನೆ. ಇತರರಿಗೆ ದುರ್ಲಭವಾದ ಸ್ಥಾನಮಾನ ಐಶ್ವರ್ಯಗಳನ್ನು ಪರಮಾತ್ಮನ ದಯೆಯಿಂದ ಪಡೆದು ಬರುತ್ತೇನೆ. ನೀನು ಅಪ್ಪಣೆ ಕೊಡು.

**ಸುನೀತಿ:-** ಮಗು, ನಿನಗೆ ಇನ್ನೂ ಚಿಕ್ಕ ವಯಸ್ಸು. ಜ್ಞಾನ ಪಕ್ವವಾಗಿಲ್ಲ. ತಪಸ್ಸಿನ ಕಷ್ಟ ನಿಷ್ಠುರಗಳನ್ನು ಸಹಿಸಲು ನಿನ್ನ ಶರೀರವು ಬಲಿತು ಪುಷ್ಟವಾಗಿಲ್ಲ. ಆದರೂ ನಿನ್ನ ಉತ್ಕಟ ಭಕ್ತಿಗೆ ಶ್ರೀಮನ್‌ನಾರಾಯಣನು ಒಲಿದು ಪ್ರಸನ್ನನಾಗುವನು. ನೀನು ತಪಸ್ಸನ್ನು ಮಾಡಿ ದೇವರನ್ನು ಒಲಿಸಿಕೊಂಡು ಬಾ.

ತಾಯಿಯ ಆಜ್ಞೆ ಪಡೆದು ಅವಳ ಚರಣಗಳ ಮೇಲೆ ತನ್ನ ತಲೆಯನ್ನಿಟ್ಟು ನಮಸ್ಕರಿಸಿ ತಪಸ್ಸಿಗೆ ಹೊರಟ ಆ ಧ್ರುವಕುಮಾರ. ವಯಸ್ಸಿನಿಂದ ಕಿರಿಯನಾದರೂ ಅದಮ್ಯವಾದ ಆಕಾಂಕ್ಷೆ ಹಾಗೂ ಧೃಡ ಸಂಕಲ್ಪದಿಂದ ಪ್ರೇರಿತನಾದ ಆ ಬಾಲಕನು ಪ್ರೌಢ ಪುರುಷರಂತೆ ರಾಜಧಾನಿಯನ್ನು ದಾಟಿ, ತಂದೆಯ ರಾಜ್ಯದ ಮೇರೆಯನ್ನು ಮೀರಿ ಕಾಡಿನಲ್ಲಿ ಮುಂದೆ ನಡೆದ. ದುರ್ಗಮವಾದ ಗೊಂಡಾರಣ್ಯದಲ್ಲಿ ಹಸಿವೆ ಬಾಯಾರಿಕೆಗಳ ಪರಿವೆ ಇಲ್ಲದೆ, ಕಲ್ಲು ಮುಳ್ಳು ತೆಗ್ಗು ದಿನ್ನೆಗಳ ಲಕ್ಷ್ಯವಿಲ್ಲದೆ, ಆ ಬೆಂಗಾಡಿನಲ್ಲಿ ಭರದಿಂದ ನಡೆದ. ಆ ವನ ಗರ್ಭದಲ್ಲಿ ಆ ರಾಜಕುಮಾರನೆ ಸಪ್ತರ್ಷಿಗಳ ದರ್ಶನ. ಮುನಿಮಂಡಲವನ್ನು ಕಂಡಕೂಡಲೇ ಧ್ರುವನಿಗೆ ಹೃದಯದಲ್ಲಿ ಸಂತಸ ಉಕ್ಕಿತು. ಅವರಿಗೆಲ್ಲ ಸಾಷ್ಟಾಂಗ ನಮಸ್ಕಾರ ಮಾಡಿ ಆ ಮುದ್ದು ಮಗು ಮುದ್ದಾದ ತೊದಲು ನುಡಿಯಲ್ಲಿ ಹೇಳಿತು:- ''ಮುನೀಶ್ವರರೇ, ರಾಜಸಭೆಯಲ್ಲಿ ನನ್ನ ಮಲತಾಯಿಯು ನನ್ನನ್ನು ಧಿಕ್ಕರಿಸಿ ಅವಮಾನ ಮಾಡಿ ಹಡೆದ ನನ್ನ ತಾಯಿಯನ್ನು ಜರಿದು ನಿಂದಿಸಿದ್ದರಿಂದ ನಾನು ಈಗ ತಪಸ್ಸಿಗೆ ಹೊರಟಿದ್ದೇನೆ. ಆದರೆ ನಾನು ಇನ್ನೂ ಬಾಲಕ. ತಪಸ್ಸಿನ ಕ್ರಮವನ್ನೂ ಭಗವಂತನ ಆರಾಧನೆಯ ಬಗೆಯನ್ನೂ ಅರಿಯೆ. ಈ ಸಂದರ್ಭದಲ್ಲಿ ತಮ್ಮಂಥ ಸಿದ್ಧ ಪುರುಷರ ದರ್ಶನವಾದದ್ದು ನನ್ನ ಸೌಭಾಗ್ಯ. ಆ ಭಗವಂತನನ್ನು ಹೇಗೆ ಆರಾಧಿಸಬೇಕು? ಯಾವ ಮಂತ್ರವನ್ನು ಜಪಿಸಬೇಕು? ತಾವು ನನಗೆ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲು ಮುಖ್ಯ ಸಾಧನವಾದ ಒಂದು ಮಂತ್ರವನ್ನು ಉಪದೇಶಿಸಿರಿ. ನನಗೆ ತಂದೆಯು ನೀಡುವ ಸಿಂಹಾಸನವು ಬೇಡವಾಗಿದೆ. ನನ್ನ ಸ್ವಯಂ ಪೌರುಷದಿಂದ ನನ್ನ ತಂದೆಗಿಂತ ಮಿಗಿಲಾದ ಸಾಮ್ರಾಜ್ಯವನ್ನೂ ಐಶ್ವರ್ಯವನ್ನೂ ಪಡೆಯಬೇಕೆಂದು ನನ್ನ ಆಕಾಂಕ್ಷೆ. ಇದಕ್ಕೆ ಭಗವತ್ ಪ್ರಸಾದವೊಂದೇ ಮುಖ್ಯ ಸಾಧನ. ಆ ಶ್ರೀಹರಿಯ ಪರಮಾನುಗ್ರಹವನ್ನು ನಾನು ಪಡೆಯುವಂತೆ ದಿವ್ಯವಾದ ಮಂತ್ರೋಪದೇಶವನ್ನು ಮಾಡಿರಿ. ತಪಸ್ಸಿನ, ಕ್ರಮವನ್ನು ತಿಳಿಸಿರಿ.

**ಸಪ್ತರ್ಷಿಗಳು:-** ವತ್ಸ! ನಾವು ನಿನಗೆ '' ಓಂ ನಮೋ ಭಗವತೇ ವಾಸುದೇವಾಯ'' ಎಂಬ ದ್ವಾದಶಾಕ್ಷರ ಮಂತ್ರವನ್ನು ಉಪದೇಶಿಸುತ್ತೇವೆ. ಇದನ್ನು ಯಾವಾಗಾದರೊಮ್ಮೆ ಜಪಿಸಿದರೆ ಫಲವೂ ಇಲ್ಲ. ಪ್ರಸಾದವೂ ಇಲ್ಲ. ಯಾವಾಗಲೂ ಭಕ್ತಿಯಿಂದ ಜಪಿಸಬೇಕು.

**''ತಿಷ್ಠತಾ ಗಚ್ಛತಾ ವಾಪಿ ಸ್ವಪತಾ ಜಾಗ್ರತಾ ತಥಾ ।**
**ಶಯಾನೇನೋಪವಿಷ್ಟೇನ ಜಪ್ಯೋ ನಾರಾಯಣಃ ಸದಾ'' ॥**

**ದ್ವಾದಶಾಕ್ಷರ ಮಂತ್ರೇಣ ವಾಸುದೇವಾತ್ಮಕೇನ ಚ ।**
**ಧ್ಯಾಯಂಶ್ಚತುರ್ಭುಜಂ ವಿಷ್ಣುಂ ಜಪ್ತ್ವಾ ಸಿದ್ಧಿಂ ನ ಕೋ ಗತಃ ॥**

ನಿಂತಾಗ ನಡೆಯುವಾಗ ಮಲಗಿದಾಗ ಎಚ್ಚರವಿದ್ದಾಗ ಕುಳಿತಾಗ ಕನಸಿನಲ್ಲಿಯೂ ಕೂಡ ನಾರಾಯಣನನ್ನು ಸದಾ ಸರ್ವಕಾಲವೂ ಜಪಿಸಬೇಕು. ಹನ್ನೆರಡು ಅಕ್ಷರಗಳುಳ್ಳ ವಾಸುದೇವ ಮಂತ್ರದಿಂದ ವಿಷ್ಣುವಿನ ಜಪ ಮಾಡಿ ಧ್ಯಾನಗೈಯುವ ಯಾವ ಮನುಷ್ಯನು ಸಿದ್ಧಿಯನ್ನು ಪಡೆದಿಲ್ಲ? ನಿನ್ನ ಪೂರ್ವಪುರುಷನಾದ ಮನುಮಹಾರಾಜನು ಕೂಡ ಈ ಮಹಾಮಂತ್ರವನ್ನು ಜಪಿಸಿ ಅಖಂಡ ಭೂಮಂಡಲದ ಸಾಮ್ರಾಜ್ಯವನ್ನು ಪಡೆದನು. ನೀನೂ ಅವನಂತೆ ಈ ಮಂತ್ರವನ್ನು ಜಪಿಸಿ ಸಿದ್ಧಿಯನ್ನು ಪಡೆ. ಈ ವಾಸುದೇವ ದ್ವಾದಶಾಕ್ಷರ ಮಂತ್ರ ಜಪದಿಂದ ಮೋಕ್ಷಾದಿ ಪುರುಷಾರ್ಥಗಳೇ ಲಭಿಸುವಾಗ ಹೊನ್ನು, ಹೆಣ್ಣು, ರಾಜ್ಯ, ಅಧಿಕಾರ, ಐಶ್ವರ್ಯ, ಆರೋಗ್ಯ ಮುಂತಾದವುಗಳು ದೊರಕುವುದು ಏನು ಆಶ್ಚರ್ಯ? ನಿನಗೆ ನಮ್ಮೆಲ್ಲ ಸಪ್ತರ್ಷಿಗಳ ಸಂಪೂರ್ಣ ಆಶೀರ್ವಾದದ ಬೆಂಬಲವಿದೆ? ನಿನ್ನ ಭಕ್ತಿಗೆ ಭಗವಂತನು ಬೇಗೆ ಪ್ರಸನ್ನನಾಗುವನು. 'ಯಶಸ್ವೀ ಭವ' ಎಂದು ಆಶೀರ್ವದಿಸಿ ಕಳಿಸಿಕೊಟ್ಟರು.

ಧ್ರುವನನ್ನು ಹೀಗೆ ತುಂಬು ಹೃದಯದಿಂದ ಆಶೀರ್ವದಿಸಿ ಆ ಏಳೂ ಜನ ಮಹಾಮುನಿಗಳು ಅಂತರ್ಧಾನ ಹೊಂದಿದರು. ಧ್ರುವನು ಕೂಡ ಅಲ್ಲಿಂದ ಹೊರಟು ನಿಬಿರಾಡಣ್ಯದ ದುರ್ಗಮ ಮಾರ್ಗವನ್ನು ತುಳಿಯುತ್ತ ಯಮುನಾ ತೀರದ ಮಧುವನಕ್ಕೆ ಬಂದನು. ಯಮುನೆಯಲ್ಲಿ ಸ್ನಾನಮಾಡಿ ಋಷಿಗಳು ಉಪದೇಶಿಸಿದ ವಾಸುದೇವ ಮಂತ್ರವನ್ನು ಭಕ್ತಿಯಿಂದ ಮತ್ತು ಏಕಾಗ್ರಚಿತ್ತದಿಂದ ಜಪಿಸಲು ಮೊದಲು ಮಾಡಿದನು ಆ ರಾಜಪುತ್ರ. ಎಲ್ಲ ದಿಕ್ಕುಗಳಲ್ಲಿಯೂ ಭೂಮಿ, ಆಕಾಶ, ಪಾತಾಳ, ಸರ್ವತ್ರಾಪಿ ಅವನಿಗೆ ವಾಸುದೇವನೇ ತುಂಬಿ ನಿಂತಿದ್ದಾನೆ ಎಂದು ನಿಶ್ಚಿತ ಬುದ್ಧಿಯು ಹುಟ್ಟಿತ್ತು. ಎಲ್ಲ ದೇವತೆಗಳಲ್ಲಿ ಹಾಗೂ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿ ವಾಸಮಾಡಿದ್ದರಿಂದ ಹಾಗೂ ಚರಾಚರ ಪ್ರಪಂಚಕ್ಕೆಲ್ಲ ಆವಾಸಸ್ಥಾನವಾದುದರಿಂದ ಶ್ರೀಹರಿಗೆ 'ವಾಸುದೇವ' ಎಂದು ಹೆಸರು ಬಂದಿದೆ. 'ವಿಶಲೃವ್ಯಾಪ್ತೌ' ಎಂಬ ಧಾತುವಿನಿಂದ ಬಂದ ವಾಸುದೇವ ಮತ್ತು ವಿಷ್ಣು ಈ ಎಡು ಶಬ್ದಗಳಿಗೆ ಸರ್ವತ್ರವೂ ವ್ಯಾಪ್ತವಾಗಿದ್ದಾನೆ ವಿಷ್ಣು ಎಂಬ ಅರ್ಥವನ್ನು ತಿಳಿದುಕೊಂಡ. ಎಲ್ಲ ಇಂದ್ರಿಯಗಳಿಗೆ (ಹೃಷೀಕಗಳಿಗೆ) ಈಶನಾದ ಅರ್ಥಾತ್ ಇಂದ್ರಿಯಗಳ ನಿಯಾಮಕನಾದ ಆ ಸ್ವಾಮಿಯನ್ನು ''ನನ್ನ ಇಂದ್ರಿಯಗಳೆಲ್ಲವೂ ನಿನ್ನನ್ನೇ ನೆನೆಯುವಂತೆ ಪ್ರೇರಿಸು'' ಎಂದು ಬೇಡಿಕೊಂಡ. ''ಅಚ್ಯುತನೇ, ನನ್ನ ಚಿತ್ತವು ಎಂದೂ ನಿನ್ನ ಧ್ಯಾನದಿಂದ ಚ್ಯುತವಾಗದೇ ಇರಲಿ'' ಎಂದು ಪ್ರಾರ್ಥಿಸಿದ. ಹೀಗೆ ಮನಸ್ಸು ಹಾಗೂ ಇಂದ್ರಿಯ ಎರಡನ್ನೂ ಭಗವದೇಕ ನಿಷ್ಠವನ್ನಾಗಿ ಮಾಡಿ ಬಾಹ್ಯ ವಸ್ತುಗಳ ಅರಿವು ಪರಿವೆ ಇಲ್ಲದಂತೆ ಅಂತರ್ಮುಖನಾಗಿ ಅಖಂಡ ಧ್ಯಾನವನ್ನು ಮಾಡತೊಡಗಿದ. ತಪಸ್ಸನ್ನು ಮಾಡಿ ಮಾಡಿದಂತೆ ಅವನ ಮನಸ್ಸು ಸಂಪ್ರಜ್ಞಾತ ಸಮಾಧಿಯಿಂದ ಅಸಂಪ್ರಜ್ಞಾತ ಸಮಾಧಿಯಲ್ಲಿ ಇಳಿಯಿತು. ಹಲವಾರು ದಿನಗಳಿಗೊಮ್ಮೆ ಅವನಿಗೆ ಬಾಹ್ಯ ಪ್ರಜ್ಞೆ ಮರಳುತ್ತಿತ್ತು. ಆಗ ಅವನು ಸ್ನಾನ ಮಾಡಿ ಸಂಧ್ಯೆ, ದೇವತಾರ್ಚನೆಗಳನ್ನು ಮಾಡಿಕೊಂಡು ಮತ್ತೆ ತಪಸ್ಸಿಗೆ ಕೂಡುತ್ತಿದ್ದ. ಧ್ರುವನ ಈ ಅತ್ಯುಗ್ರ ತಪಸ್ಸನ್ನು ನೋಡಿ ಇಂದ್ರನಿಗೆ ಹೆದರಿಕೆಯಾಯಿತು. ತನ್ನ ಇಂದ್ರಪದವಿಯನ್ನು ಅವನು ಕಿತ್ತುಕೊಳ್ಳಬಹುದೆಂಬ ಭೀತಿಯಿಂದ ಧ್ರುವನ ತಪೋಭಂಗಕ್ಕಾಗಿ ಅಪ್ಸರೆಯರ ಹಿಂಡನ್ನೇ ತಪೋವನಕ್ಕೆ ಕಳಿಸಿದ ಆ ಸುರರಾಜ. ಆದರೆ ಆ ಮಗುವಿನ ಮನಸ್ಸಿನ ಮೇಲೆ ಸ್ವರ್ಗದ ಆ ಬೆಲೆವಣ್ಣುಗಳು ಏನೂ ಪರಿಣಾಮ ಬೀರಲಿಲ್ಲ. ಆಗ ಇಂದ್ರನು ಭೂತ ಪಿಶಾಚಿಗಳನ್ನು ಧ್ರುವನನ್ನು ಹೆದರಿಸಲಿಕ್ಕಾಗಿ ಕಳಿಸಿಕೊಟ್ಟ. ಆ ಎಲ್ಲ ಭೂತ ಪಿಶಾಚಿಗಳು ಧ್ರುವನ ಸುತ್ತು ಮುತ್ತು ಕರಾಳ ಆಕಾರದಿಂದ

ಕುಣಿದು ಕುಪ್ಪಳಿಸಿದವು. ಒಂದು ಯಕ್ಷಣಿಯು ಧ್ರುವನ ವಯಸ್ಸಿನ ಒಂದು ಮಗುವನ್ನು ತಂದು ಧ್ರುವನ ಎದುರೇ ಕೊಂದು ಎದೆಸೀಳಿ ರಕ್ತ ಕುಡಿಯಿತು. ಅದರ ಹೊಟ್ಟೆ ಹರಿದು ಮಾಂಸವನ್ನು ಕಚ ಕಚ ತಿಂದಿತು. ಆ ಮಗುವಿನ ಮೂಳೆಯನ್ನು ಚೀಪುತ್ತ ಆ ಯಕ್ಷಿಣಿಯು ಧ್ರುವಿಗೆ ಹೇಳಿತು:- ''ಬಾಲಕ, ನೀನು ಈ ಘೋರ ತಪಸ್ಸಿನಿಂದ ಹಿಂದಿರುಗದಿದ್ದರೆ, ನಿನ್ನನ್ನೂ ಹೀಗೆಯೇ ಕೊಂದು ತಿಂದು ಹಾಕುತ್ತೇನೆ. ಎಚ್ಚರ'' ಆದರೆ ಆ ಬಾಲ ಭಕ್ತನು ಈ ಬಗೆ ಬಗೆಯ ಭೂತ ಚೇಷ್ಟೆಗಳಿಗೆ ಬೆದರಲೂ ಇಲ್ಲ. ಬೆಚ್ಚಲೂ ಇಲ್ಲ. ಇತ್ತ ಲಕ್ಷ್ಯ ಕೊಡದೆ ನಿರಂತರವೂ ನಡೆದೇ ಇತ್ತು ಅವನ ನಾರಾಯಣ ಧ್ಯಾನ. ವಾಸುದೇವ ಮಂತ್ರದ ಜಪ. ಮತ್ತೊಂದು ಪಿಶಾಚಿಯು ಬಿರುಗಾಳಿಯ ರೂಪ ತೆಗೆದುಕೊಂಡು ಹೆಮ್ಮರ ಧ್ರುವನನ್ನು ಅಲುಗಾಡಿಸತೊಡಗಿತು. ಆದರೆ ಈ ಭೂತ ಚೇಷ್ಟೆಯ ಕಡೆಗೆ ಕಣ್ಣೆತ್ತಿ ಕೂಡ ನೋಡದೆ ಚಿತ್ರದ ಗೊಂಬೆಯಂತೆ ಇನಿತೂ ಚಲವಿಚಲನಾಗದೇ ನಿಶ್ಚಲ ಮನಸ್ಸಿನಿಂದ ನಾರಾಯಣನ ಧ್ಯಾನಗೈಯತೊಡಗಿದ ಆ ಧ್ರುವ. ಸುದರ್ಶನ ಚಕ್ರವು ಆ ಬಾಲಕನ ಸುತ್ತ ತಿರುಗುತ್ತಿತ್ತು. ಅದನ್ನು ನೋಡಿದ ಕೂಡಲೇ ಇಂದ್ರನಿಂದ ಕಳಿಸಲ್ಪಟ್ಟ ಭೂತ ಪಿಶಾಚಿಗಳ ಬಳಗವೆಲ್ಲ ಹೆದರಿ ಕಂಗೆಟ್ಟು ಓಡಿ ಹೋಯಿತು. ಆಗ ನಿರಾಶರಾದ ಇಂದ್ರಾದಿ ದೇವತೆಗಳು ನಿರುಪಾಯರಾಗಿ ಬ್ರಹ್ಮದೇವರಿಗೆ ಮೊರೆ ಇಟ್ಟರು.

**ಬ್ರಹ್ಮ**:- ''ಸುರೋತ್ತಮರೆ, ಆ ಧ್ರುವನಿಂದ ನಿಮಗೇನು ಭಯವಿಲ್ಲ. ನಿಮ್ಮ ಸುರಲೋಕವನ್ನು ಅವನು ಬಯಸುವುದಿಲ್ಲ. ಆದರೆ ಆ ಧ್ರುವನು ಪಡೆಯುವ ಸ್ಥಾನದಿಂದ ನಿಮ್ಮ ಲೋಕಗಳೆಲ್ಲ ಸುಸ್ಥಿರವಾಗುವವು'' ಎಂದು ಸಮಾಧಾನ ಪಡಿಸಿ ಕಳಿಸಿದರು.

ಇತ್ತ ಧ್ರುವನ ಆತ್ಯಂತಿಕ ಭಕ್ತಿಗೆ ಮೆಚ್ಚಿ ಹಾಗೂ ಅವನ ಉಗ್ರ ತಪೋನುಷ್ಠಾನದಿಂದ ಸುಪ್ರೀತನಾಗಿ ಭಗವಾನ್ ನಾರಾಯಣನು ಗರುಡಾರೂಢನಾಗಿ ಧ್ರುವನು ತಪಸ್ಸು ಮಾಡುತ್ತಲಿರುವ ಮಧುವನಕ್ಕೆ ಬಂದ. ಧ್ರುವಿಗೆ ತನ್ನ ಸಾಕ್ಷಾತ್ಕಾರವನ್ನು ಕರುಣಿಸಿ ಅವನ ಎದುರು ತನ್ನ ದಿವ್ಯ ರೂಪದಿಂದ ಪ್ರತ್ಯಕ್ಷನಾದ. ಮತ್ತು ಅಂತಃಕರಣ ತುಂಬಿದ ಧ್ವನಿಯಲ್ಲಿ ಪ್ರೀತಿಯಿಂದ ಮಾತನಾಡಿದ:- ''ವತ್ಸ! ಏಳು ಕಣ್ಣು ತೆರೆದು ನೋಡು. ನಿನ್ನ ಭಕ್ತಿಗೆ ಮೆಚ್ಚಿ ನಾನು ಬಂದಿದ್ದೇನೆ. ನಿನಗೆ ಬೇಕಾದ ವರ ಬೇಡು.'' ಭಗವಂತನ ಈ ಅಮೃತವಾಣಿಯನ್ನು ಕೇಳಿ ಧ್ರುವನು ಕಣ್ಣು ತೆರೆದ. ಇಂದ್ರ ನೀಲ ಮಣಿಯಂತೆ ಶ್ಯಾಮ ಸುಂದರನಾದ ಭಗವಾನ್ ಶ್ರೀಹರಿಯು ತೇಜಃಪುಂಜದಂತೆ ಕಣ್ಣೆದುರು ಹೊಳೆಯುತ್ತಿದ್ದಾನೆ. ಅವನ ವಕ್ಷಸ್ಥಳದಲ್ಲಿ ಕೌಸ್ತುಭ, ಕೊರಳಲ್ಲಿ ವನಮಾಲೆ, ಕಟಿಯಲ್ಲಿ ಪೀತಾಂಬರ, ಕರ ಕಮಲಗಳಲ್ಲಿ ಶಂಖ, ಚಕ್ರ, ಗದಾ, ಪದ್ಮ, ಮುಖದಲ್ಲಿ ಮಂದಹಾಸ, ಕಂಗಳಲ್ಲಿ ಅಮೃತವೃಷ್ಟಿ, ಮುಖದಲ್ಲಿ ಪ್ರಸನ್ನ ಮುದ್ರೆ ಶೋಭಿಸುತ್ತಲಿದ್ದವು. ಆ ಭಗವಂತನನ್ನು ಕಂಡ ಕೂಡಲೇ ಆ ಧ್ರುವ ಬಾಲಕನು ದಂಡಪ್ರಣಾಮದಿಂದ ಉದ್ದಂಡ ನಮಸ್ಕಾರ ಹಾಕಿ ಅವನ ಅಡಿಯದಾವರೆ ಹುಡಿಯಲ್ಲಿ ಹೊರಳಾಡತೊಡಗಿದ. ಅವನ ಹೃದಯದಲ್ಲಿ ದುಃಖ ಸಂತೋಷ ಎರಡೂ ಉಕ್ಕಿ ಹರಿದವು. ಅವನು ಬಿಕ್ಕಿಸಿ ಬಿಕ್ಕಿಸಿ ಭಗವಂತನ ಚರಣಗಳನ್ನು ಚುಂಬಿಸಿ ಅಳತೊಡಗಿದ. ಆಗ ಭಗವಂತನಿಗೂ ಭಕ್ತನ ಹೃದಯದಲ್ಲಿ ರೋದನ ರೂಪದಿಂದ ಉದ್ರಿಕ್ತವಾದ ಈ ಭಕ್ತಿರಸದ ಪ್ರವಾಹವನ್ನು ಕಂಡು ಹೃದಯವು ತುಂಬಿ ಬಂದಿತು. ಆಗ ಆ ನಾರಾಯಣನು ತನ್ನ ಎರಡೂ ಕೈಗಳಿಂದ ಆ ಮಗುವನ್ನು ಎತ್ತಿಕೊಂಡು ಮಣ್ಣು ಮೆತ್ತಿದ ಅವನ ಅಂಗಾಂಗಳನ್ನೆಲ್ಲ ಪ್ರೀತಿಯಿಂದ ನೇವರಿಸಿದ. ಶ್ರೀಹರಿಯು ಸ್ಪರ್ಶಮಾತ್ರದಿಂದಲೇ

ಜ್ಞಾನೋದಯವಾಯಿತು ಆ ಧ್ರುವ ಕುಮಾರನಿಗೆ. ಅವನು ಗದ್ಗದ ಕಂಠನಾಗಿ ಕೈ ಮುಗಿದು ತಲೆಯನ್ನು ಅವನ ಕಾಲಿನ ತುದಿಗೆ ತಾಕಿಸಿ ಸ್ತೋತ್ರ ಮಾಡಿದನು. "ವಾಸುದೇವ, ನಿನಗೆ ನಮಸ್ಕಾರ. ದೇವಕಿಯ ನಂದನ, ನಿನಗೆ ನಮಸ್ಕಾರ. ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಕಾರಣನಾದ ಶ್ರೀಹರಿಯೇ, ನಿನಗೆ ನಮಸ್ಕಾರ. ದೇವಕೀ ನಂದನ, ದಾಮೋದರ, ಹೃಷೀಕೇಶ, ಅಚ್ಯುತ, ಗೋವಿಂದ, ಮಾಧವ, ಉಪೇಂದ್ರ, ಮಧುಸೂದನ, ಅಧೋಕ್ಷಜ ನಿನಗೆ ನಮಸ್ಕಾರ ನಮಸ್ಕಾರ. ಹೀಗೆ ಮತ್ತೆ ನನ್ನನ್ನು ಸ್ತುತಿಸಿ ನಮಸ್ಕಾರ ಮಾಡುತ್ತಲಿರುವ ಧ್ರುವನನ್ನು ಪ್ರಸನ್ನ ದೃಷ್ಟಿಯಿಂದ ನೋಡಿ ನಾರಾಯಣ ಹೇಳಿದನು:- "ವತ್ಸ ಧ್ರುವ, ನನಗೆ ನಿನ್ನ ಮನೋರಥಗಳೆಲ್ಲ ತಿಳಿದಿವೆ. ಈ ಜಗತ್ತಿನಲ್ಲಿ ಪ್ರಾಣಿಗಳಿಗೆಲ್ಲ ಜೀವನಾಧಾರ ಅನ್ನ. ಅನ್ನ ಹುಟ್ಟುವುದು ಮಳೆಯಿಂದ ಆ ವೃಷ್ಟಿಗೆ ಕಾರಣ ಸೂರ್ಯ. ಆ ಸೂರ್ಯ ಮಂಡಲಕ್ಕೂ ನೀನು ಆದಾರನಾಗುವಿ. ಆಕಾಶದಲ್ಲಿ ಭ್ರಮಣ ಗೈಯುವ ಎಲ್ಲ ಗ್ರಹ, ತಾರೆ, ನಕ್ಷತ್ರ, ನೀಹಾರಿಕೆ, ಮೊದಲಾದ ಜ್ಯೋತಿರ್ಮಂಡಲಕ್ಕೆಲ್ಲ ನೀನೇ ಆಧಾರನಾಗು. ನಿನಗೆ ನಾನು ಮುಗಿಲು ಮಂಟಪದಲ್ಲಿ ಶಾಶ್ವತವಾದ ಒಂದು ಧ್ರುವ ಪದವಿಯನ್ನು ಕೊಟ್ಟಿದ್ದೇನೆ. ನಿನ್ನ ತಾಯಿ ಸುನೀತಿಯೂ ನಿನ್ನ ಬಳಿಗೆ ಬರುವಳು. ನಿನಗೆ ಕಲ್ಯಾಣವಾಗಲಿ. ಹೀಗೆ ತನ್ನ ಬಾಲ ಭಕ್ತನಾದ ಧ್ರುವಕುಮಾರನಿಗೆ ನಕ್ಷತ್ರ ಲೋಕದಲ್ಲಿ ಶಾಶ್ವತವಾದ ಅಕ್ಷಯ ಸ್ಥಾನವನ್ನಿತ್ತು ಅನುಗ್ರಹಿಸಿ ಆ ಲಕ್ಷ್ಮೀಪತಿಯು ಅಲ್ಲಿಂದ ಅಂತರ್ಹಿತನಾದನು.

## ಭೂಲೋಕದ ಕಾಶೀ ಪ್ರಯಾಗಗಳ ಮಹಿಮೆ

**ವಿಷ್ಣುಪಾರ್ಷದರು:-** ಬ್ರಾಹ್ಮಣೋತ್ತಮ, ಇದು ಮಹರ್ಲೋಕ. ತಪೋಯೋಗ ದಿಂದ ಪಾಪರಾಶಿಯೆಲ್ಲವೂ ತೊಳೆದುಹೋದ ಕಲ್ಪಾಂತ ಜೀವಿಗಳು ಹಾಗೂ ಮಹಾತಪಸ್ವಿ ಗಳು ಇಲ್ಲಿ ನೆಲೆಸಿರುತ್ತಾರೆ. ಇದರ ಅತ್ತಕಡೆಗಿರುವ ಲೋಕವೇ ಜನಲೋಕ. ಇಲ್ಲಿ ನೈಷ್ಠಿಕ ಬ್ರಹ್ಮಚಾರಿಗಳಾದ ಸನಕ, ಸನಂದನ, ಸನಾತನ, ಸನತ್ಕುಮಾರ ಮೊದಲಾದ ಯೋಗೀಶ್ವರರು ತಮ್ಮ ನಿರ್ಮಲವಾದ ಹೃದಯದಿಂದ ಶ್ರೀಹರಿಯನ್ನು ಸತತವು ಧ್ಯಾನ ಮಾಡುತ್ತ ಇಲ್ಲಿ ಇರುವರು. ಇದರ ಮೇಲಿನ ಲೋಕವೇ ತಪೋಲೋಕ. ವೇಗಗಾಮಿಯಾದ ವಿಮಾನದಿಂದ ನಾವು ಈಗಾಗಲೇ ಜನಲೋಕವನ್ನು ದಾಟಿ ತಪೋಲೋಕಕ್ಕೆ ಬಂದಿದ್ದೇವೆ. ಇಲ್ಲಿ ವೈರಾಜ ಎಂಬ ದೇವತೆಗಳು ನೆಲೆ ನಿಂತಿದ್ದಾರೆ. ಇವರ ಜೀವನವೆಲ್ಲವೂ ವಾಸುದೇವಾರ್ಪಿತ. ಇವರಿಗೆ ಬ್ರಹ್ಮದೇವರಷ್ಟು ಆಯುಷ್ಯ. ಇಲ್ಲಿ ಇದ್ದ ತಪಸ್ವಿಗಳೆಲ್ಲರೂ ಚಿರಂಜೀವಿಗಳೇ.

ಹೀಗೆ ಮಾತನಾಡುತ್ತ ಶಿವಶರ್ಮ ಹಾಗೂ ವಿಷ್ಣುಪಾರ್ಷದರು ವಿಮಾನಾರೂಢರಾಗಿ ಮೇಲೆ ಮೇಲೆ ಏರಿದಾಗ ಅವರ ಕಣ್ಣಿಗೆ ಸತ್ಯ ಲೋಕವು ಗೋಚರವಾಯಿತು. ಕೂಡಲೇ ಆ ವಿಷ್ಣುಪಾರ್ಷದರು ವಿಮಾನದಿಂದ ಕೆಳಗೆ ಇಳಿದು ಆ ಸತ್ಯಲೋಕದಲ್ಲಿ ಪ್ರತಿಷ್ಠಿತರಾದ ಆ ನಾಲ್ಕುಮೊಗದ ಬ್ರಹ್ಮನಿಗೆ ಸಾಷ್ಟಾಂಗ ಪ್ರಣಮ ಮಾಡಿದರು. ಬ್ರಹ್ಮದೇವರು ಅವರನ್ನು ಹರಿಸಿ ಮಾತನಾಡಿದರು.

**ಬ್ರಹ್ಮ:-** ಶ್ರೀಹರಿಪಾರ್ಷದರೇ, ನೀವು ಈಗ ಭೂಲೋಕದಿಂದ ಕರೆದು ಕೊಂಡು ಬಂದ ಈ ಶಿವಶರ್ಮನು ವೇದ ವೇದಾಂಗ ಪಾರಂಗತ. ಸ್ಮೃತಿ ಧರ್ಮಶಾಸ್ತ್ರಗಳಲ್ಲಿ ಪ್ರವೀಣ. ಸದಾಚಾರ ಪಾಲನೆಯಲ್ಲಿ ದಕ್ಷ. ವತ್ಸ ಶಿವಶರ್ಮ, ನೀನು ತೀರ್ಥದಲ್ಲಿ ಪ್ರಾಣ ತ್ಯಾಗ ಮಾಡಿ ಬಹಳ ಒಳ್ಳೆಯ ಕಾರ್ಯ ಮಾಡಿದೆ. ನೀನೂ ಈವರೆಗೆ ನೋಡಿದ್ದೆಲ್ಲವೊ ಇನ್ನು ಮೇಲೆ ನಡೆಯಲಿರುವ ನನ್ನ ದೈನಂದಿನ ಪ್ರಳಯದಲ್ಲಿ ನಷ್ಟವಾಗಲಿರುವುದು. ನನ್ನ ಪ್ರತಿಯೊಂದು

ದಿನದ ಕೊನೆಯಲ್ಲಿ ಪ್ರಳಯ. ಉದಯದಲ್ಲಿ ಸೃಷ್ಟಿ. ಸ್ವರ್ಗಾದಿ ಲೋಕಗಳೇ ಈ ನನ್ನ ದೈನಂದಿನ ಪ್ರಳಯಗಳಲ್ಲಿ ನಾಶವಾಗುವಾಗ ಮನುಷ್ಯರ ಮಾತೇನು? ಪ್ರಾಣಿಗಳು ನಾಲ್ಕು ವಿಧ. ಸ್ವೇದಜ, ಉದ್ಭಿಜ, ಜರಾಯುಜ, ಅಂಡಜ. ಬೆವರಿನಿಂದ ಹುಟ್ಟಿದ್ದು, ಬೀಜದಿಂದ ಹುಟ್ಟಿದ್ದು, ಗರ್ಭಕೋಶದಿಂದ ಹುಟ್ಟಿದ್ದು ಮೊಟ್ಟೆ ಒಡೆದು ಹುಟ್ಟಿದ್ದು, ತಗಣಿ, ನೀರು, ಹೇನು ಮುಂತಾದ ಬೆವರಿನಿಂದ ಹುಟ್ಟಿದ ಜೀವಿಗಳು ಸ್ವೇದಜ. ಮರ, ಬಳ್ಳಿ, ವನಸ್ಪತಿಗಳು ಬೀಜದಿಂದ ಹುಟ್ಟುವುದರಿಂದ ಉದ್ಭಿಜ ಎಂದೆನಿಸುತ್ತವೆ. ಗರ್ಭಕೋಶದಿಂದ ಜನಿಸುವ ಮನುಷ್ಯ ಹಾಗೂ ಪಶುಪ್ರಾಣಿಗಳು ಜರಾಯುಜ. ಹಾವು ಮುಂತಾದ ಹರಿಯುವ ಹಾರುವ ಹಕ್ಕಿ ಮುಂತಾದವು ಮೊಟ್ಟೆ ಒಡೆದು ಬಂದವುಗಳು ಅಂಡಜ ಎಂದು ಪ್ರಖ್ಯಾತವಾಗಿವೆ. ಇವುಗಳಲ್ಲಿ ಈ ನಾಲ್ಕು ವಿಧವಾದ ಜೀವಿಗಳು ಮನುಷ್ಯನು ಮಾತ್ರ ಧರ್ಮಸಾಧನೆ ಮಾಡಿಕೊಳ್ಳಬಲ್ಲ. ಅದರಲ್ಲಿಯೂ ಭೂಲೋಕದಲ್ಲಿ ಜನಿಸಿ ಸಾಧನಾನುಷ್ಠಾನಗೈದು ಜೀವಿಗಳು ಇಂದ್ರಿಯಗಳನ್ನು ಗೆದ್ದು ಕಾಮಕ್ರೋಧಾಧಿಗಳನ್ನು ತ್ಯಜಿಸಿ ಭಗವಂತನನ್ನು ಆರಾಧಿಸಿ ಇಂದಿನ ಈ ನನ್ನ ಸತ್ಯಲೋಕಕ್ಕೆ ಬರುತ್ತಾರೆ. ನಾನು ನಿರ್ಮಿಸಿದ ಈ ಸಮಗ್ರ ಬ್ರಹ್ಮಾಂಡದಲ್ಲಿ ಭಾರತದಂಥ ದೇಶವಿಲ್ಲ. ಕಾಶಿಯಂಥ ಪುಣ್ಯಕ್ಷೇತ್ರವಿಲ್ಲ. ವಿಶ್ವನಾಥನಿಗೆ ಸಮಾನವಾದ ಲಿಂಗವಿಲ್ಲ. ಅಪಾರ ಸಮುದ್ರದಲ್ಲಿ ಇರುವ ದ್ವೀಪಗಳು ಅನೇಕ. ಆದರೆ ಅವುಗಳಲ್ಲಿ ಜಂಬೂದ್ವೀಪಕ್ಕೆ ಸಮಾನವಾದ ದ್ವೀಪವಿಲ್ಲ. ಈ ಜಂಬೂದ್ವೀಪದಲ್ಲಿ ಒಂಬತ್ತು ವರ್ಷಗಳು ಒಂಬತ್ತು ಮುಖ್ಯ ಮುಖ್ಯ ಖಂಡಗಳು. ಅವುಗಳಲ್ಲಿ ಭರತಖಂಡ ಸರ್ವಶ್ರೇಷ್ಠ. ಇದೇ ಕರ್ಮಭೂಮಿ. ಇದೇ ಸಾಧನ ಭೂಮಿ. ದೇವತೆಗಳಿಗೂ ಬಲವತ್ತರ ಆಸೆ ಈ ಭಾರತ ಭೂಮಿಯಲ್ಲಿ ಜನಿಸಿಬರಲು. ಕಿಂಪುರುಷ ಖಂಡ ಮೊದಲಾದ ಬೇರೆ ಬೇರೆ ಎಂಟು ದೇವಭೋಗ್ಯವಾದ ಭೂಖಂಡಗಳು ಉಂಟು. ಆದರೆ ಈ ಭರತಖಂಡವೇ ಸಾಧನ ಭೂಮಿಯಾದುದರಿಂದ ದೇವಮುನಿಗಳೆಲ್ಲರೂ ಇಲ್ಲಿ ಹುಟ್ಟಿ ತಮ್ಮ ಸಾಧನೆಯನ್ನು ಮಾಡಿಕೊಳ್ಳುತ್ತಾರೆ. ಈ ಭರತವರ್ಷದಲ್ಲಿಯೂ ಹಿಮಾಚಲ ಹಾಗೂ ವಿಂಧ್ಯಾಚಲದ ನಡುವಿನ ಆರ್ಯಾವೃತ್ತವು ಅತ್ಯಂತ ಪುಣ್ಯದಾಯಕ. ಇದರಲ್ಲಿಯೂ ಗಂಗಾಯಮುನಾ ನದಿಗಳ ನಡುವಿನ ಭಾಗವು ಪೃಥ್ವಿಯ ಅಂತರ್ವೇದಿ ಎಂದು ಕರೆಯಲ್ಪಡುತ್ತದೆ. ಇಲ್ಲಿಯ ಕ್ಷೇತ್ರಗಳಲ್ಲೆಲ್ಲ ಕುರುಕ್ಷೇತ್ರ ಶ್ರೇಷ್ಠ. ಅದಕ್ಕಿಂತ ನೈಮಿಷಾರಣ್ಯ. ಆ ನೈಮಿಷಾರಣ್ಯಕ್ಕಿಂತ ಮತ್ತು ಅದರ ಹೊರತು ಉಳಿದೆಲ್ಲ ತೀರ್ಥಗಳಿಗಿಂತ ಶ್ರೇಷ್ಠತರವಾದ ತೀರ್ಥ ಎಂದರೆ ಪ್ರಯಾಗ. ಅದು ಭೂತಳದಲ್ಲಿ ಇರುವ ಎಲ್ಲ ತೀರ್ಥಗಳಿಗಿಂತ ಅತ್ಯಂತ ಶ್ರೇಷ್ಠವಾದುದರಿಂದ ಆ ಪ್ರಯಾಗವನ್ನು ತೀರ್ಥರಾಜ ಎಂದು ಕರೆಯುತ್ತಾರೆ. ವೇದಗಳಲ್ಲಿ ಹೇಳಿದ ಎಲ್ಲ ಯಾಗಗಳಿಗಿಂತ ಈ ಕ್ಷೇತ್ರವು ಪ್ರಧಾನವಾದುದರಿಂದ ಇಲ್ಲಿ ಸ್ನಾನ ಮಾಡುವುದರಿಂದ ಎಲ್ಲ ಯಜ್ಞಯಾಗಗಳ ಪುಣ್ಯ ಪ್ರಾಪ್ತವಾಗುವುದರಿಂದ ಇದಕ್ಕೆ ಹರಿಹರರು ಕೂಡಿ ಪ್ರಯಾಗ ಎಂದು ನಾಮಕರಣ ಮಾಡಿದರು. ಈ ಪ್ರಯಾಗ ಕ್ಷೇತ್ರದ ಗಂಗಾ ಯಮುನಾ ಸಂಗಮದ ಕರಿಬಿಳಿ ನೀರಿನ ಮಿಲನ ಸ್ಥಾನದಲ್ಲಿ ಸ್ನಾನ ಮಾಡುವುದರಿಂದ ಮಾನವನಿಗೆ ಬಯಸಿದ ಭೋಗ ಸ್ವರ್ಗಾದಿ ಲೋಕ ಪ್ರಾಪ್ತಿ ನಿಶ್ಚಿತ. ನಿಷ್ಕಾಮಬುದ್ಧಿಯಿಂದ ಭಗವಂತನ ಪ್ರೀತಿಯಾಗಲಿ ಎಂದು ಈ ಎರಡೂ ನದಿ ಸಂಗಮದಲ್ಲಿ ಸ್ನಾನ ಮಾಡಿದರೆ ಮೋಕ್ಷವೇ ದೊರಕುತ್ತದೆ.

ತೀರ್ಥರಾಜ ಪ್ರಯಾಗಕ್ಕಿಂತ ಸರ್ವಶ್ರೇಷ್ಠ ತೀರ್ಥವೆಂದರೆ ಕಾಶಿ. ಕಾಶಿಯಲ್ಲಿ ದೇಹಪಾತವಾದರೆ ಆಯಾಸವಿಲ್ಲದೇ ಮುಕ್ತಿ. ಇದರಲ್ಲಿ ಸಂದೇಹವೇ ಇಲ್ಲ. ಸಾಕ್ಷಾತ್ ವಿಶ್ವನಾಥನು ಈ ಕಾಶಿಯ ನಿತ್ಯ ನಿವಾಸಿ. ಇದನ್ನು ಬಿಟ್ಟು ಆಚೀಚೆ ಅಗಲುವುದಿಲ್ಲ ಆ ಪಾರ್ವತೀ

ಪತಿ. ಆದುದರಿಂದಲೇ ಇದಕ್ಕೆ ಅವಿಮುಕ್ತ ಕ್ಷೇತ್ರ ಎಂದು ಹೆಸರು. ಇದು ಮುಕ್ತಿ ಕ್ಷೇತ್ರವೂ ಅಹುದು. ಇದು ಬ್ರಹ್ಮಾಂಡದ ಒಳಗೂ ಇದೆ. ಹೊರಗೂ ಇದೆ. ಇದರ ಉದ್ದ ಹನ್ನೆರಡು ಮೈಲಿ ಪ್ರಳಯ ಕಾಲದಲ್ಲಿ ಸರ್ವಸಮುದ್ರಗಳ ನೀರು ಉಕ್ಕೇರಿ ಏಕಾರ್ಣದ ಜಲರಾಶಿಯ ನೀರಿನ ಮಟ್ಟ ಏರಿದಂತೆ ಪರಮೇಶ್ವರನು ಈ ಕ್ಷೇತ್ರವನ್ನು ಮೇಲೆ ಮೇಲೆ ಎತ್ತುತ್ತಾನೆ. ಈ ಕಾಶಿಯು ನೆಲದಲ್ಲಿಯೂ ಇಲ್ಲ. ಆಕಾಶದಲ್ಲಿಯೂ ಇಲ್ಲ. ಇದು ಇದ್ದುದು ಮಹಾದೇವರ ತ್ರಿಶೂಲದ ಕೊನೆಯ ಮೊನೆಯ ಮೇಲೆ. ಮಂದಮತಿ ಮಾನವರಿಗೆ ಇದರ ರೂಪ ಗೋಚರಿಸುವುದಿಲ್ಲ. ಇಲ್ಲಿ ಯಾವಾಗಲೂ ಸತ್ಯಯುಗ, ಸರ್ವದಾ ಪರ್ವಕಾಲ. ವಿಶ್ವನಾಥ ನೆಲೆನಿಂತ ಈ ಸ್ಥಾನದಲ್ಲಿ ಗ್ರಹಗಳ ಉದಯಾಸ್ತ ಜನಿತ ದೋಷಗಳು ಇಲ್ಲ. ಇಲ್ಲಿ ದಕ್ಷಿಣಾಯಣ ಇಲ್ಲ. ಹನ್ನೆರಡು ತಿಂಗಳು ಉತ್ತರಾಯಣವೇ. ಸರ್ವದಾಪಿ ಮಂಗಳ ಇಲ್ಲಿ. ಸದೈವ ಶುಭ ಈ ಸದಾಶಿವನ ನೆಲೆಯಲ್ಲಿ. ವಿಪ್ರೋತ್ತಮ, ಹದಿನಾಲ್ಕು ಲೋಕಗಳ ಸೃಷ್ಟಿಯನ್ನು ಬ್ರಹ್ಮನಾದ ನಾನು ಮಾಡಿದ್ದೇನೆ. ಆದರೆ ಈ ಕಾಶೀಪಟ್ಟಣವನ್ನು ನಿರ್ಮಾಣ ಮಾಡಿದವ ವಿಶ್ವನಾಥ. ಕಾಶಿಯಲ್ಲಿ ದೇಹತ್ಯಾಗ ಮಾಡುವವರ ನಿಯಂತ್ರಣ ಮಾಡುವವನು ಶಂಕರ. ಯಮಧರ್ಮ ಅಲ್ಲ. ಇಲ್ಲಿ ಇದ್ದು ಪಾಪಮಾಡುವವರನ್ನು ದಂಡಿಸುವವ ಕಾಲಭೈರವ. ಈ ಪುಣ್ಯಕ್ಷೇತ್ರದಲ್ಲಿ ಇದ್ದು ಯಾರೂ ಪಾಪ ಮಾಡತಕ್ಕದಲ್ಲ. ಇಲ್ಲಿದ್ದು ಪಾಪಕೃತ್ಯಗಳನ್ನು ಎಸಗಿದರೆ ನರಕಕ್ಕಿಂತ ಅತ್ಯಧಿಕವಾದ ದಾರುಣವಾದ ರುದ್ರಯಾತನೆಯನ್ನು ಅಪರಾಧಿಯು ಅನುಭವಿಸಬೇಕಾಗುವುದು. ಪರಪುರುಷನಿಂದೆ, ಪರದ್ರೋಹ, ಪರಸ್ತ್ರೀ ಸಹವಾಸ, ಕಪಟದಿಂದ ಪರದ್ರವ್ಯಾಪಹಾರ, ಪರಪೀಡೆ, ಪರಹಿಂಸೆ ಮುಂತಾದ ಪಾಪದ ಕಾರ್ಯಗಳನ್ನು ಮಾಡುವವರು ಸರ್ವಥಾ ಈ ಕಾಶಿಯಲ್ಲಿ ನೆಲೆಸಬಾರದು. ಈ ಭೂಮಂಡಲದಲ್ಲಿ ಜ್ಞಾನವಿಲ್ಲದೇ ಮೋಕ್ಷವಿಲ್ಲ. ಆ ಜ್ಞಾನವು ಕೇವಲ ಚಾಂದ್ರಾಯಣ ಮೊದಲಾದ ವ್ರತಾನುಷ್ಠಾನದಿಂದಾಗಲೀ, ದಾನ ಧರ್ಮಗಳಿಂದಾಗಲೀ, ಅಗ್ನಿ ಹೋತ್ರ, ಮಂತ್ರಜಪ, ಸ್ವಾಧ್ಯಾಯ, ದೇವಪೂಜೆ ತೀರ್ಥಯಾತ್ರೆಗಳಿಂದಲೂ ಅಂಥ ದಿವ್ಯ ಜ್ಞಾನವು ಹುಟ್ಟುವುದಿಲ್ಲ. ಆ ಕಾಶೀ ಮರಣದಿಂದ ಮಾತ್ರ ಮನುಷ್ಯನಿಗೆ ಜನ್ಮಾಂತರದ ವಿಶ್ವನಾಥನ ಅನುಗ್ರಹದಿಂದಲ್ಲೇ ದಿವ್ಯ ಜ್ಞಾನೋದಯವಾಗಿ ಮೋಕ್ಷವು ದೊರಕುವುದು.

## ವೈಕುಂಠ ಹಾಗೂ ಕೈಲಾಸಗಳ ಸ್ಥಿತಿ

**ಅಗಸ್ತ್ಯ:-** ಸತ್ಯಲೋಕದಲ್ಲಿ ಆ ವಿಷ್ಣುಪಾರ್ಷದರು ಬ್ರಹ್ಮದೇವರಿಗೆ ನಮಸ್ಕಾರ ಮಾಡಿ ಮುಂದೆ ಹೊರಟರು ಆ ಶಿವಶರ್ಮನೊಂದಿಗೆ ಅವರು ವೈಕುಂಠಧಾಮವನ್ನು ಸಮೀಪಿಸುತ್ತಿರುವಾಗತ್ತಿರುವಾಗ ಶಿವಶರ್ಮನು ಕೇಳಿದನು:- ವಿಷ್ಣುವಿನ ಪಾರ್ಷ್ವವರ್ತಿಗಳೇ ನಾವು ಈಗ ಎಷ್ಟು ದೂರ ಬಂದಿದ್ದೇವೆ? ಇನ್ನೂ ಎಷ್ಟು ದೂರದ ದಾರಿಯನ್ನು ಕ್ರಮಿಸಬೇಕು?

**ವಿಷ್ಣುಪಾರ್ಷದರು:-** ಬ್ರಹ್ಮನ್, ಸೂರ್ಯಚಂದ್ರರ ಕಿರಣಗಳ ಪ್ರಕಾಶವು ಎಲ್ಲಿಯ ವರೆಗೆ ಬೀಳುತ್ತದೆಯೋ ಅಲ್ಲಿಯವರೆಗೂ ಪೃಥ್ವಿ. ಅದರ ಮೇಲಿನ ಭಾಗ ಆಕಾಶ. ಪೃಥ್ವಿ ಯಿಂದ ಒಂದು ಲಕ್ಷ ಯೋಜನಗಳ ಮೇಲೆ ಸೂರ್ಯಮಂಡಲ. ಭೂಲೋಕದ ಮೇಲೆ ಸೂರ್ಯಲೋಕದ ವರೆಗೆ ಇರುವ ನಡುವಿನ ಪ್ರದೇಶ ಭುವರ್ಲೋಕ ಎನಿಸುವುದು. ಸೂರ್ಯನಿಂದ ಧ್ರುವಲೋಕದವರೆಗೆ ಇರುವ ಅವಕಾಶವೇ ಆ ಸ್ವರ್ಗಲೋಕ. ಪೃಥ್ವಿ

ಮಂಡಲದಿಂದ ಒಂದು ಕೋಟಿ ಯೋಜನ ಎತ್ತರದ ಮೇಲಿರುವುದೇ ಮಹರ್ಲೋಕ. ಎರಡು ಕೋಟಿ ಯೋಜನದ ಮೇಲೆ ಜನಲೋಕ, ನಾಕು ಕೋಟಿ ಯೋಜನದ ಮೇಲೆ ತಪೋಲೋಕ. ಪೃಥ್ವಿಯಿಂದ ಹದಿನಾರು ಕೋಟಿ ಯೋಜನ ಎತ್ತರದ ಮೇಲೆ ಲಕ್ಷ್ಮೀಪತಿಯ ವೈಕುಂಠಲೋಕ. ವೈಕುಂಠದಿಂದ ಮತ್ತೆ ಹದಿನಾರು ಕೋಟಿ ಪಟ್ಟು ಯೋಜನದ ಮೇಲೆ ಅಂದರೆ ಪೃಥ್ವಿಯಿಂದ ಎರಡು ಅಬ್ಜ ಐವತ್ತಾರು ಕೋಟಿ ಯೋಜನ ದೂರದ ಮೇಲೆ ಕೈಲಾಸ ಲೋಕವು ಇರುತ್ತದೆ. ಅಲ್ಲಿ ಪಾರ್ವತಿ, ಗಣೇಶ, ಸ್ಕಂದ, ನಂದಿ, ಹಾಗೂ ತನ್ನ ಶಿವಗಣದೊಂದಿಗೆ ಕಲ್ಯಾಣ ಸ್ವರೂಪಿಯಾದ ಭಗವಾನ್ ವಿಶ್ವನಾಥನು ವಿರಾಜಮಾನನಾಗಿದ್ದಾನೆ. ಈ ಶಿವನೇ ಪರಾತ್ಪರ ಪರಂಜ್ಯೋತಿ, ನಿರಾಕಾರ, ಅನಂತ. ಆದರೂ ಅವನು ತನ್ನ ಐಶ್ವರ್ಯಮಯ ಸ್ವರೂಪದಿಂದ ನಮಗೆ ಸಾಕಾರನಾಗಿ ಗೋಚರ ನಾಗುತ್ತಾನೆ. ಅವನ ಮುಕುಟದಲ್ಲಿ ಅರ್ಧಚಂದ್ರ. ಹಣೆಯ ನಡುವೆ ಕಣ್ಣು. ಅರ್ಧಭಾಗ ನಾರಿ. ಕೈಗಳಲ್ಲಿ ಹಾವಿನ ಕಂಕಣ. ಜಡೆಯಲ್ಲಿ ಗಂಗೆಯ ಪ್ರವಾಹ. ಮೈ ತುಂಬ ಭಸ್ಮ. ಈ ರುದ್ರನೇ ಸಂಪೂರ್ಣ ಜಗತ್ತಿನಲ್ಲಿ ವ್ಯಾಪ್ತಿ ಹೊಂದಿ ವಿಷ್ಣು ಎಂದು ಪ್ರಖ್ಯಾತ ನಾಗಿದ್ದಾನೆ. ಅವನು ನಿರಾಕಾರನೂ ಆಗಿದ್ದಾನೆ. ಸಾಕಾರನೂ ಆಗಿದ್ದಾನೆ. ಅವನೇ ವಿಷ್ಣು, ಅವನೇ ಶಿವ. ಅದರಲ್ಲಿ ಭೇದವಿಲ್ಲ. ಶಿವಶರ್ಮನೇ, ನೀನು ವಿಷ್ಣುಭಕ್ತ. ಆದ್ದರಿಂದ ಈ ವಿಷ್ಣು ಲೋಕದಲ್ಲಿಯೇ ವಾಸಮಾಡು.

**ಅಗಸ್ತ್ಯ:-** ಪ್ರೀತಿಯ ಲೋಪಾಮುದ್ರೆ, ಹೀಗೆ ಆ ಶಿವಶರ್ಮ ಬ್ರಾಹ್ಮಣನು ಮೋಕ್ಷವನ್ನು ಹೊಂದಿದನು. ಈ ಪುಣ್ಯಕಥೆಯನ್ನು ಶ್ರವಣ ಮಾಡಿದವನು ದಿವ್ಯಜ್ಞಾನವನ್ನು ಪಡೆಯುತ್ತಾನೆ.

## ಅಗಸ್ತ್ಯರ ಶ್ರೀಶೈಲ ಪ್ರಯಾಣ. ಸ್ಕಂದ ಸ್ವಾಮಿಯ ಸೇವೆ.

**ವ್ಯಾಸ:-** ದಕ್ಷಿಣದ ದಂಡಕಾರಣ್ಯದ ಭಾಗದಲ್ಲಿ ಪ್ರಯಾಣ ಮಾಡುತ್ತಿದ್ದ ಅಗಸ್ತ್ಯ ಋಷಿಗಳು ಲೋಪಾಮುದ್ರೆಯೊಂದಿಗೆ ಶ್ರೀ ಶೈಲಕ್ಕೆ ಬಂದು ಕುಮಾರಸ್ವಾಮಿಯ ಸುಂದರ ಹಾಗೂ ವಿಶಾಲ ವನವನ್ನು ನೋಡಿದರು. ಅಲ್ಲಿ ಲೋಹಿತ ಎಂಬ ಪರ್ವತವಿದೆ. ಅದರ ಸಮೀಪದಲ್ಲಿ ಅಗಸ್ತ್ಯರು ತಮ್ಮ ಕೈ ಹಿಡಿದ ಕುಟುಂಬಿನಿಯೊಂದಿಗೆ ಆರು ಮುಖದ ಸ್ಕಂದನ ದರ್ಶನವನ್ನು ಮಾಡಿಕೊಂಡರು. ಅನಂತರ ಸಾಷ್ಟಾಂಗ ಪ್ರಣಾಮ ಮಾಡಿದರು. ಆ ಕಾರ್ತಿಕೇಯನ ಅಪ್ಪಣೆಯಂತೆ ಅವನ ಎದುರು ಕುಳಿತುಕೊಂಡರು.

**ಸ್ಕಂದ:-** ಮುನಿಶ್ರೇಷ್ಠರಾದ ಅಗಸ್ತ್ಯರೇ ಕುಶಲವಷ್ಟೇ? ವಾಸ್ತವಿಕವಾಗಿ ಕುಶಲ ಎನ್ನುವುದು ಕಾಶಿಯಲ್ಲಿ ಮಾತ್ರ. ಬ್ರಹ್ಮಾಂಡದಲ್ಲಿಯೇ ಅಂಥ ಪವಿತ್ರಕ್ಷೇತ್ರವಿಲ್ಲ. ಅಲ್ಲಿ ಸತ್ತವರಿಗೆಲ್ಲ ಮುಕ್ತಿಯನ್ನು ಕೊಡಲು ಕೈಯೆತ್ತಿ ನಿಂತಿದ್ದಾನೆ ಪರಮೇಶ್ವರ. ನಾನು ಕೂಡ ಕಾಶಿಕ್ಷೇತ್ರದ ಪ್ರಾಪ್ತಿಗಾಗಿ ಇಲ್ಲಿ ನಿಂತು ತಪಸ್ಸು ಮಾಡುತ್ತಲಿದ್ದೇನೆ. ಈವರೆಗೂ ನನ್ನ ಮನೋರರ್ಥ ಪೂರ್ಣವಾಗಿಲ್ಲ. ಮಹಾದೇವರ ಅನುಗ್ರಹದಿಂದಲೇ ಆ ಕಾಶೀವಾಸವು ಲಭ್ಯವಾಗುವುದು ಪಾಶುಪತಯೋಗ, ಪ್ರಯಾಗ, ಸ್ನಾನ, ಮಂತ್ರಜಪ, ಸ್ವಾಧ್ಯಾಯ, ಅಗ್ನಿಹೋತ್ರ, ವಿಷ್ಣುವಿನ ಆರಾಧನೆ ಅಯೋಧ್ಯಾ, ಮಥುರಾ ಮುಂತಾದ ಕ್ಷೇತ್ರಸೇವೆ ಇವೆಲ್ಲವೂ ಮೋಕ್ಷಕ್ಕೆ ಸಾಧನ ಎಂದು ಶಾಸ್ತ್ರಗಳಲ್ಲಿ ಹೇಳಿದೆ. ಕಾಶೀವಾಸವು ಮೋಕ್ಷಕ್ಕೆ ಸಾಧನ ಎಂದು ಹೇಳಿದೆ. ಇದರಲ್ಲಿ ಯಾವುದು ಸತ್ಯ ಯಾವುದು ಮಿಥ್ಯೆ ಎಂದು ಕೆಲವರಿಗೆ ಸಂದೇಹ. ಆದರೆ ಎರಡೂ ಸತ್ಯ. ಉಳಿದೆಲ್ಲ ಧರ್ಮಕರ್ಮಗಳು ಕ್ಷೇತ್ರಯಾತ್ರೆಗಳು ದೇವತಾ

ಸಾಧನೆಗಳು ಪರಂಪರಾ ಮೋಕ್ಷಕ್ಕೆ ಸಾಧನೆ. ಕಾಶೀ ಸೇವನವು ಮಾತ್ರ ಸಾಕ್ಷಾತ್ ಮೋಕ್ಷಕ್ಕೆ ಸಾಧನ. ವೇದಶಾಸ್ತ್ರ ಪುರಾಣೋಕ್ತವಾದ ಅನ್ಯಮೋಕ್ಷ ಸಾಧನಗಳೆಲ್ಲವೂ ಕಾಶೀ ಮರಣಕ್ಕೆ ಸಾಧನವಾಗುತ್ತವೆ. ಕಾಶಿಯ ಸೇವನೆಯು ಮಾತ್ರ ತಕ್ಷಣದಲ್ಲಿ ಮೋಕ್ಷಪಥ ಧಾಯಕವು ಆಗುತ್ತದೆ. ಮಹರ್ಷಿಯೇ ನಾನಂತು ಕಾಶಿಯ ನಿಟ್ಟಿನಿಂದ ಬೀಸುವ ಗಾಳಿಯ ಸ್ಪರ್ಶವಾದರೂ ಆಗಲಿ ಎಂದು ಬಯಸುತ್ತೇನೆ. ನೀವಂತೂ ಖುದ್ದಾಗಿ ಕಾಶಿಯಲ್ಲಿಯೇ ಇಷ್ಟು ವರ್ಷಗಳ ಕಾಲ ಇದ್ದು ಗಂಗೆಯಲ್ಲಿ ಸ್ನಾನಮಾಡಿ ವಿಶ್ವನಾಥನನ್ನು ಪೂಜಿಸಿ ಜಪ ತಪೋನುಷ್ಠಾನಗಳನ್ನು ಮಾಡಿ ಬಂದಿದ್ದೀರಿ. ನಿಮ್ಮ ಅಂಗ ಸ್ಪರ್ಶವು ಕೂಡ ಪರಮ ಪಾವನ ಎಂದು ನುಡಿದು ಆ ಷಣ್ಮುಖನು ಅಗಸ್ತ್ಯಮುನಿಯ ಅಂಗಾಂಗಗಳನ್ನು ಮುಟ್ಟಿ ತಟ್ಟಿ ಅಮೃತ ಸರೋವರದಲ್ಲಿ ಸ್ನಾನ ಮಾಡಿದಂತೆ ಆನಂದವನ್ನು ಅನುಭವಿಸಿದನು. ಅನಂತರ ಜಯ ವಿಶ್ವನಾಥ, ಜಯ ಗಂಗಾಧರ, ಜಯ ಕಾಶೀಶ್ವರ ಎಂದು ನುಡಿದು ಅಗಸ್ತ್ಯರಿಗೆ ಕೇಳಿದನು. "ಪೂಜ್ಯರೇ, ನೀವು ಮಹಾ ಪ್ರಾಜ್ಞರು ಕಾಶೀವೈಭವದ ಅಭಿಜ್ಞರು. ಆ ದಿವ್ಯ ಕ್ಷೇತ್ರವು ನಿಮ್ಮಗೆ ಪ್ರಿಯ ನಮಗೆ ಪೂಜ್ಯ. ಆದುದರಿಂದ ನನಗೆ ನೀವು ಆ ಕಾಶಿಯ ಮಹಿಮೆಯನ್ನು ಕೇಳಿರಿ.

ಮುನೀಶ್ವರ, ಕಾಶೀಕ್ಷೇತ್ರದ ಈ ಪ್ರಂಚದಲ್ಲಿ ಅತ್ಯಂತ ರಹಸ್ಯಕ್ಷೇತ್ರ. ಅಲ್ಲಿ ಇದ್ದವರಿಗೆ ಸರ್ವವಿಧಸಿದ್ಧಿಗಳು ಸಾಧಿಸಲು ಸುಲಭ. ಅಲ್ಲಿ ಪರಮೇಶ್ವರನ ನಿತ್ಯ ಸನ್ನಿಧಾನ. ತನ್ನ ತುಂಗ ತರಂಗಗಳಿಂದ ಕಾಶಿಯ ತೀರದ ಅಂಗಳವನ್ನು ತೊಳೆದು ಪಾವನಳಾಗಿದ್ದಾಳೆ ದೇವಗಂಗೆ. ಅಲ್ಲಿ ಮರಣ ಹೊಂದುವವರೆಲ್ಲರಿಗೂ ಪರಮೇಶ್ವರನು ಸ್ವತಃ ಬಂದು ತಾರಕ ಮಂತ್ರವನ್ನು ಉಪದೇಶಿಸುತ್ತಾನೆ. ಅದರಿಂದ ಮನುಷ್ಯನಿಗೆ ಅನಾಯಾಸ ಮುಕ್ತಿ. ಮಹಾಪಾಪ ಮಾಡಿದ ಮಾನವರು ಕಾಶಿಯಲ್ಲಿ ನೆಲೆಸಬೇಕು. ಅದರಿಂದ ಪಾಪನಾಶ, ಪುಣ್ಯ ವೃದ್ಧಿ, ಮೋಕ್ಷ ಸಿದ್ಧಿ, ಮೂರು ಪ್ರಯೋಜನ. ಈ ಕಾಶೀ ಕ್ಷೇತ್ರದ ಮಹಿಮೆಯನ್ನು ಆದಿಶೇಷನು ಸಾವಿರಮುಖಗಳಿಂದಲೂ ಹೇಳಲು ಸಮರ್ಥನಾಗಿಲ್ಲ. ಅದನ್ನು ನಾನು ನನ್ನ ಕೇವಲ ಆರು ಮುಖಗಳಿಂದ ಹೇಗೆ ಹೇಳಬಲ್ಲೆನು?

## ಕಾಶಿಯ ಉತ್ಪತ್ತಿ; ಮಣಿಕರ್ಣಿಕೆಯ ಮಹಾತ್ಮ್ಯ

**ಅಗಸ್ತ್ಯ:-** ಪಾರ್ವತೀನಂದನ, ಈ ಕಾಶಿಯು ಭೂಲೋಕದಲ್ಲಿ ಪ್ರಸಿದ್ಧಿ ಪಡೆದದ್ದು ಎಂದಿನಿಂದ? ಇದು ಹೇಗೆ ನೀಡುವುದು ಸಾಕ್ಷಾತ್ ಮೋಕ್ಷವನ್ನು?

**ಸ್ಕಂದ:-** ಮಹಾಮುನಿಯೇ, ಹಿಂದೊಮ್ಮೆ ನನ್ನ ತಾಯಿ ಇದೇ ಪ್ರಶ್ನೆಯನ್ನು ಕೇಳಿದ್ದಳು ನನ್ನ ತಂದೆಗೆ. ಅದಕ್ಕೆ ಪರಮೇಶ್ವರನು ಕೊಟ್ಟ ಉತ್ತರವನ್ನೇ ನಾನು ನಿಮಗೆ ಹೇಳುತ್ತೇನೆ. ಮಹಾಪ್ರಳಯ ಕಾಲದಲ್ಲಿ ನಷ್ಟವಾಗಿ ಹೋಗುತ್ತವೆ ಚರಾಚರ ಪ್ರಾಣಿಗಳು. ಎಲ್ಲೆಡೆಯೂ ಕತ್ತಲೆಯ ಮೊತ್ತ. ಸೂರ್ಯ ಇಲ್ಲ ಚಂದ್ರ ಇಲ್ಲ. ಗ್ರಹ-ನಕ್ಷತ್ರ, ರಾತ್ರಿ ಯಾವುದೂ ಇಲ್ಲ. ಆ ಪ್ರಳಯಕಾಲದಲ್ಲಿ ಇದ್ದುದು ಸತ್‌ಸ್ವರೂಪಿಯಾದ ಪರಬ್ರಹ್ಮ ಮಾತ್ರ. "ಏಕಮೇವ್ಯಾದ್ವಿತೀಯಂ" ಎಂಬ ವೇದವಚನ ವಿಷಯೀಕರಿಸುತ್ತದೆ ಇದೇ ಬ್ರಹ್ಮವನ್ನು. ಅದು ಮನಸ್ಸಿಗೆ ಗೋಚರಿಸುವುದಿಲ್ಲ. ವಾಣಿಗೆ ವಿಷಯವಾಗುವುದಿಲ್ಲ. ಅದಕ್ಕೆ ಯಾವ ಹೆಸರೂ ಇಲ್ಲ. ಬಣ್ಣವೂ ಇಲ್ಲ. ರೂಪವೂ ಇಲ್ಲ. 'ಅದು ಕೇವಲ ಸತ್ಯ ಸ್ವರೂಪಿ. ಜ್ಞಾನಮಯ. ಆನಂದ ಪೂರ್ಣ. ಅನಾದ್ಯನಂತ. ಪ್ರಕಾಶ ರೂಪ, ಮುಂದೆ ಆ ಪರಾತ್ಪರ ವಸ್ತುವಿಗೆ ತಾನು ಅನೇಕ ಆಗಬೇಕು ಎಂದು ಬಯಕೆಯಾಯಿತು. ಅದೇ ಆ ಶುದ್ಧ ವಸ್ತುವು ತನ್ನ ಇಚ್ಛೆಯಿಂದಲೇ

ಮಾಯಾ, ಪ್ರಧಾನ, ಪ್ರಕೃತಿ, ಶಕ್ತಿ ಎಂಬ ಹೆಸರಿನ ತನ್ನ ಅಧೀನವಾದ ಪ್ರಕೃತಿಯನ್ನು ಪ್ರೇರಿಸಿ ಈ ದೃಶಮಾನವಾದ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯ ಮುಂತಾದವುಗಳನ್ನು ಮಾಡಿತು. ಈ ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ಆ ಪ್ರಕೃತಿ ಪುರುಷರ ಲೀಲಾವಿಲಾಸವೇ ಆಗಿದೆ.

ಪ್ರಪಂಚ ಕಾರಣಭೂತನಾದ ಪರಮಪುರುಷನೇ ಈಶ್ವರ ಅರ್ಥಾತ್ ನಾನು. ಆ ಪ್ರಕೃತಿಯೆಂದರೆ ಶಕ್ತಿಸ್ವರೂಪಿಯಾದ ನೀನು ಆ ಶಕ್ತಿ ಮತ್ತು ಈಶ್ವರ ಇಬ್ಬರೂ ತಮ್ಮ ಪರಮಾನಂದ ರೂಪದಿಂದ ಈ ಪರಮಾನಂದ ಕ್ಷೇತ್ರವಾದ ಕಾಶಿಯಲ್ಲಿ ವಿಹರಿಸ ತೊಡಗಿದರು. ಹತ್ತು ಮೈಲಿ ವಿಸ್ತೃತವಾದ ಈ ಕಾಶೀಕ್ಷೇತ್ರವನ್ನು ಆ ಪ್ರಕೃತಿ ಪುರುಷರು ಪ್ರಳಯ ಕಾಲದಲ್ಲಿಯೂ ಬಿಟ್ಟು ಹೋಗುವುದಿಲ್ಲ. ಆದುದರಿಂದಲೇ ಇದಕ್ಕೆ ಅವಿಮುಕ್ತ ಕ್ಷೇತ್ರ ಎಂದು ಹೆಸರು. ಈ ಕಾಶೀ ಕ್ಷೇತ್ರದಲ್ಲಿ ವಾಸಿಸುವುದು, ವಿಹರಿಸುವುದು ಆ ಈಶ್ವರನ ಆನಂದಕ್ಕೆ ಕಾರಣ. ಆದುದರಿಂದ ಇದನ್ನು 'ಆನಂದ ವನ' ಎಂದೇ ಹೆಸರಿಸಿದ್ದನು. ಅನಂತರ ಹರಿಹರೇಶವರ ರೂಪಿಯಾದ ಆ ಶಂಕರನು ಜಗದಂಬೆಯೊಂದಿಗೆ ತನ್ನ ಬಲಬದಿಯ ದೇಹವನ್ನು ಅಮೃತ ವೃಷ್ಟಿಕರೆಯುವ ದೃಷ್ಟಿಯಿಂದ ನೋಡಿದನು. ಆ ಶಿವ ಶರೀರದ ದಕ್ಷಿಣಭಾಗದಿಂದ ಇಂದ್ರನೀಲ ಮಣಿಯಂತೆ ಶ್ಯಾಮಸುಂದರ ವಿಗ್ರಹವುಳ್ಳ ಭಗವಾನ್ ಶ್ರೀ ವಿಷ್ಣುವು ಆವಿರ್ಭವಿಸಿ ನಿಂತುಕೊಂಡನು. ತ್ರಿಭುವನ ಸುಂದರನೂ ಶಾಂತಮೂರ್ತಿಯೂ ಸತ್ವ ಗುಣ ಸಂಪೂರ್ಣನೂ ಆದ ಆ ಶ್ರೀಹರಿಯು ಎಲ್ಲ ಪುರುಷರಿಗಿಂತ ಉತ್ತಮ. ಆದುದರಿಂದಲೇ ಅವನಿಗೆ ಪುರುಷೋತ್ತಮ ಎಂದು ಕರೆಯಲಾಯಿತು. ಆ ವಿಷ್ಣು ಸರ್ವಗುಣಗಳಿಗೂ ಆಶ್ರಯ. ಮಹಾಮಹಿಮೋಪೇತನಾದ ಆ ಪುರುಷೋತ್ತಮನನ್ನು ಕಂಡು ಮಹಾದೇವನು ನುಡಿದನು. ಅಚ್ಯುತ, ನೀನೇ ಮಹಾವಿಷ್ಣು ನಿನ್ನ ಉಸಿರಿನಿಂದಲೇ ಎಲ್ಲ ವೇದಗಳೂ ಪ್ರಕಟವಾದವು. ನೀನು ಎಲ್ಲವನ್ನೂ ತಿಳಿದ ಸರ್ವಜ್ಞಮೂರ್ತಿ, ಹೀಗೆ ಹೇಳಿ ಶಿವನು ಭವಾನಿಯೊಂದಿಗೆ ತನ್ನ ಆನಂದಕಾನನದಲ್ಲಿ ಪ್ರವೇಶಿಸಿದನು.

ಅನಂತರ ಮಹಾವಿಷ್ಣುವು ತನ್ನ ಸುದರ್ಶನ ಚಕ್ರದಿಂದ ಅಗೆದ ಅಲ್ಲಿ ಒಂದು ಸುಂದರವಾದ ಪುಷ್ಕರಣಿಯನ್ನು ನಿರ್ಮಿಸಿದನು. ಅವನ ಸಚ್ಚಿದಾನಂದ ಶರೀರದ ಆನಂದ ರೂಪವಾದ ಸ್ವೇದ ಜಲದಿಂದ ಅದು ತುಂಬಿಹೋಯಿತು. ಆ ಕಾಲದಲ್ಲಿ ವಿಷ್ಣುವಿನ ಮಣಿಮಯ ಕುಂಡಲವು ಅರ್ಥಾತ್ ಮಣಿಜಟಿತವಾದ ಒಂದು ಕರ್ಣಿಕೆ ಕೆಳಗೆ ನೀರಿನಲ್ಲಿ ಬಿದ್ದಿತು. ಅದರಿಂದ ಆ ತೀರ್ಥಕ್ಕೆ ಮಣಿಕರ್ಣಿಕಾ ಎಂಬ ಹೆಸರು ಬಂದಿತು. ಶಿವರೂಪಿಯಾದ ಜ್ಯೋತಿಯು ಅಲ್ಲಿ ನಿರಂತರವೂ ಪ್ರಕಾಶಿತವಾದುದರಿಂದ 'ಕಾಶಿ' ಎಂದು ಅದು ಪ್ರಸಿದ್ಧವಾಯಿತು.

**ವಿಷ್ಣು:-** ಮುಕ್ತಾಮಯವಾದ ಕುಂಡಲವು ಇಲ್ಲಿ ಉದುರಿ ಬಿದ್ದುದರಿಂದ ಇದು ಮುಕ್ತಿಪ್ರಧಾನವಾದ ಕ್ಷೇತ್ರವಾಗಲಿ. ಶಿವಜ್ಯೋತಿಯಿಂದ ಪ್ರಕಾಶಿತವಾದ್ದರಿಂದ ಇದು ಕಾಶಿ. ಈ ಮಣಿಕರ್ಣಿಕಾ ತೀರ್ಥದಲ್ಲಿ ಸ್ನಾನ, ಸಂಧ್ಯೆ, ಜಪ, ಹೋಮ, ವೇದಾಧ್ಯಯನ, ತರ್ಪಣ, ಪಿಂಡದಾನ, ಗೋದಾನ, ಭೂದಾನ, ಸುವರ್ಣ ದಾನ, ಅನ್ನದಾನ, ವಸ್ತ್ರದಾನ, ಕನ್ಯಾದಾನ, ವ್ರತ ಉದ್ಯಾಪನೆ, ಯಜ್ಞ, ಹರಿಹರರ ಮೂರ್ತಿ, ಲಿಂಗ ಸ್ಥಾಪನೆ ಮುಂತಾದ ಶುಭಕರ್ಮ ಮಾಡಿದವರಿಗೆ ಮೋಕ್ಷ. ಈ ಕಾಶಿಯಲ್ಲಿ ಮರಣ ಹೊಂದಿದವರೆಗೂ ಮೋಕ್ಷ. ಈ ಕಾಶೀ ಕ್ಷೇತ್ರದ ಹೆಸರನ್ನು ಉಚ್ಚರಿಸಿದ ಮಾತ್ರಕ್ಕೆ ಎಲ್ಲ ಪಾಪಗಳು ಕ್ಷೀಣಿಸುವವು.

**ಮಹಾದೇವ:-** ಮಹಾಬಾಹುವಾದ ಮಹಾವಿಷ್ಣುವೇ, ನೀನು ಸ್ಥಾವರ ಜಂಗಮಾತ್ಮಕವಾದ ಪ್ರಪಂಚವನ್ನೆಲ್ಲ ಸೃಷ್ಟಿಮಾಡು. ಹಾಗೂ ಸತ್ವ ಸ್ವರೂಪಿಯಾದ ನೀನೇ ಎಲ್ಲರನ್ನೂ ಸಂರಕ್ಷಣೆ ಮಾಡು. ದುರ್ಮಾರ್ಗ ಗಾಮಿಗಳಾದ ದುಷ್ಟರನ್ನು ನೀನೇ ಸಂಕರ್ಷಣ ರೂಪದಿಂದ

ಸಂಹರಿಸು. ಸೃಷ್ಟಿ ಸ್ಥಿತಿ, ಸಂಹಾರಾದಿ ಕಾರ್ಯಗಳನ್ನು ಮಾಡಲು ನೀನೇ ಸರ್ವ ಸಮರ್ಥ. ಪಂಚಕೋಶ ವಿಸ್ತೃತವಾದ ಈ ಕಾಶೀಧಾಮವು ನನಗೆ ಅತ್ಯಂತ ಪ್ರಿಯ. ಇಲ್ಲಿ ನಡೆಯುವುದು ನನ್ನ ಆಜ್ಞೆ ಮಾತ್ರ. ಯಮಶಾಸನವುಲ್ಲ. ಕಾಶಿಯಿಂದ ನೂರು ಯೋಜನದಲ್ಲಿದ್ದ ಮಾನವರು ಮನಸ್ಸಿನಲ್ಲಿ ಕಾಶೀಕ್ಷೇತ್ರದ ಸ್ಮರಣೆ ಮಾಡುವುದರಿಂದ ಪಾಪ ಮುಕ್ತರಾಗುವರು. ಈ ಕಾಶಿಯಲ್ಲಿರುವ ವಿಶ್ವನಾಥನು ಜ್ಯೋತಿರ್ಲಿಂಗ ಸ್ವರೂಪಿಯಾಗಿದ್ದು ಇಲ್ಲಿ ಮರಣ ಹೊಂದಿದವರಿಗೆಲ್ಲ ತಾರಕ ಮಂತ್ರ ಉಪದೇಶಿಸಿ ಎಲ್ಲರೂ ಮೋಕ್ಷಪುರಿಯನ್ನು ಸೇರುವಂತೆ ಮಾಡುತ್ತಾನೆ. ಈ ಕ್ಷೇತ್ರದ ಮಹಿಮೆಯನ್ನು ತಿಳಿಯದೇ ಪ್ರಾಸಂಗಿಕವಾಗಿ ಕಾಶಿಯಲ್ಲಿ ಪ್ರವೇಶಿಸಿ, ಶ್ರದ್ಧೆಯಿಲ್ಲದೆ ಇದ್ದರೂ ಗಂಗೆಯಲ್ಲಿ ಮಿಂದು, ವಿಶ್ವನಾಥನ ದರ್ಶನ ಮಾಡಿಕೊಂಡು ಮಾನವನು ಈ ಕಾಶೀ ಕ್ಷೇತ್ರದಲ್ಲೇ ಮರಣ ಹೊಂದಿದರೆ ಅವನಿಗೆ ಮೋಕ್ಷ ಕಟ್ಟಿಟ್ಟದ್ದು. ಕಾಶಿಯಲ್ಲೇ ಇದ್ದು ಮಹಾಪಾಪ ಕಾರ್ಯ ಮಾಡಿ ಇಲ್ಲಿಯೇ ಮರಣ ಹೊಂದಿದವನು ಮೊದಲು ರುದ್ರ ಪಿಶಾಚನಾಗಿ ಅನಂತರ ಮೋಕ್ಷವನ್ನು ಹೊಂದುತ್ತಾನೆ. ಈ ದೇಹವು ಒಂದು ದಿನ ನಾಶಹೊಂದುವುದು ನಿಶ್ಚಿತು ಆದುದರಿಂದ ಎಲ್ಲಿಯೋ ಸಾಯದೆ, ಕಾಶಿಯಲ್ಲಿ ಬಂದು ಇದ್ದು ಮರಣ ಹೊಂದಿದರೆ ಮಾನವನಿಗೆ ಮತ್ತೊಮ್ಮೆ ಗರ್ಭವಾಸ ದುಃಖವು ಬರುವುದಿಲ್ಲ. ಆದುದರಿಂದ ಬೇರೆ ಕಡೆ ಎಂಥ ಸಿರಿ ಸಾಮ್ರಾಜ್ಯ ಐಶ್ವರ್ಯ ಇದ್ದರೂ ಅದನ್ನೆಲ್ಲ ತೊರೆದು ನರರು ಕಾಶಿಯ ನಾಗರಿಕರಾಗಬೇಕು. ಇನ್ನೂ ನಮಗೆ ಹದಿ ಹರೆಯದ ವಯಸ್ಸು. ಇದೀಗ ನಮಗೆ ತಾರುಣ್ಯ. ಮುಪ್ಪಿನ ಕಾಲ ಬಂದ ಬಳಿಕ ಕಾಶೀ ಕ್ಷೇತ್ರಕ್ಕೆ ಹೋದರಾಯಿತು' ಎಂದು ಯಾವ ಕಾಲಕ್ಕೂ ಮೋಕ್ಷಾಪೇಕ್ಷಿಗಳು ಕಾಶಿವಾಸಕ್ಕೆ ವಿಳಂಬ ಮಾಡಬಾರದು. ಮುಪ್ಪು ಬರುವದರೊಳಗೆ, ದೇಹ ಶಕ್ತಿ ಕುಂಠಿತವಾಗುವ ಮೊದಲೇ ಮನೆ ಮಾರು ತೊರೆದು ಈ ಶಿವ ಪುರಿಯಾದ ಕಾಶಿಯ ಯಾತ್ರೆಯನ್ನು ಅವಶ್ಯವಾಗಿ ಮಾಡಬೇಕು.

## ಗಂಗಾ ಮಹಿಮೆ

**ಮಹಾದೇವ:-** ಸೂರ್ಯವಂಶದ ರಾಜನಾದ ಭಗೀರಥನು ತನ್ನ ತಂದೆಯ ತಂದೆಯರಾದ ಸಗರ ಕುಮಾರರನ್ನು ಉದ್ಧರಿಸಲಿಕ್ಕಾಗಿ ಹಿಮಗಿರಿಗೆ ತೆರಳಿದ. ಕಪಿಲ ಮುನಿಯ ಶಾಪಾಗ್ನಿಯಿಂದ ಸುಟ್ಟು ಬೂದಿಯಾಗಿ ಬಿದ್ದ ಜೀವರನ್ನು ದೇವನದಿಯಾದ ಗಂಗೆಯ ಹೊರತು ಸದ್ಗತಿ ಕಾಣಿಸಲು ಯಾರು ಸಮರ್ಥರು? ಪರಬ್ರಹ್ಮ ಸ್ವರೂಪಿಣಿಯಾದ ಆ ಗಂಗೆಯನ್ನು ನನ್ನ ತಲೆಯ ಮೇಲೆ ಧಾರಣ ಮಾಡುತ್ತೇನೆ. ಈ ಕಲಿಯುಗದಲ್ಲಿ ಕಲುಷಿತ ಚಿತ್ತ, ಕುತ್ಸಿತ ಕಾರ್ಯ, ನಿಷಿದ್ಧ ಕರ್ಮ, ಪರದ್ರೋಹ. ಪರದ್ರವ್ಯಾಪಹಾರ ಮುಂತಾದ ದುಷ್ಕೃತ್ಯಗಳನ್ನು ಮಾಡುವ ಮಾನವರಿಗೆ ಗಂಗೆಯ ಹೊರತು ಬೇರೆ ಗತಿಯೇ ಇಲ್ಲ. ಗಂಗೆಯ ಮಾಹಾತ್ಮ್ಯವನ್ನು ತಿಳಿದು ಗೋವಿಂದನಲ್ಲಿ ಭಕ್ತಿ ಮಾಡುವ ಮಾನವರ ಮೇಲೆ ಗಂಗೆಯು ಸುಪ್ರಸನ್ನಳಾಗುವಳು.

**ಗಚ್ಛಂಸ್ತಿಷ್ಠನ್ ಜಪನ್ ಧ್ಯಾಯನ್ ಭುಂಜನ್ ಜಾಗ್ರತ್ ಸ್ವಪನ್ ವದನ್ ।**
**ಯಃ ಸ್ಮರೇತ್ ಸತತಂ ಗಂಗಾಂ ಸ ಹಿ ಮುಚ್ಯೇತ ಬಂಧನಾತ್ ॥**

ನಡೆದಾಡುವಾಗ, ನಿಂತು ಕೊಂಡಾಗ, ಜಪಮಾಡುವಾಗ, ಧ್ಯಾನಗೈಯುವಾಗ, ಊಟ ಮಾಡುವಾಗ, ಎಚ್ಚರವಿದ್ದಾಗ, ಮಾತನಾಡುವಾಗ ಯಾವನು ಗಂಗೆಯನ್ನು ನೆನೆಯುವನೋ ಅವರ ಸಂಸಾರ ಬಂಧನದಿಂದ ಮುಕ್ತನಾಗುವನು. ಯಾವ ಮನುಷ್ಯನು ಪಿತೃಗಳನ್ನು

ಉದ್ದೇಶಿಸಿ ಭಕ್ತಿಯಿಂದ ಬೆಲ್ಲ, ತುಪ್ಪ, ಎಳ್ಳು, ಜೇನುತುಪ್ಪದಿಂದ ಕೂಡಿದ ಪಾಯಸವನ್ನು ಗಂಗೆಯಲ್ಲಿ ಹಾಕುವನೋ ಅವನ ಪಿತೃಗಳು ಸಂತುಷ್ಟರಾಗಿ ತನ್ನ ಸಂತತಿಯಲ್ಲಿ ಹುಟ್ಟಿದ ಆ ಮನುಷ್ಯನಿಗೆ ಅವನ ಮನೋವಾಂಛಿತವಾದ ವಸ್ತುಗಳನ್ನು ಪ್ರಧಾನ ಮಾಡುವರು.

**ಅನಿಚ್ಛಯಾಪಿ ಸಂಸ್ಪೃಷ್ಟೋ ದಹನೋ ಹಿ ಯಥಾ ದಹೇತ್ ।**
**ಅನಿಚ್ಛಯಾಪಿ ಸಂಸ್ನಾತಾ ಗಂಗಾ ಪಾಪಂ ತಥಾ ದಹೇತ್ ॥**

ಇಚ್ಛೆಯಿಲ್ಲದೇ ಮುಟ್ಟಿದರೆ ಬೆಂಕಿಯು ಸುಡದೇ ಬಿಡುವುದೇ? ಹಾಗೆ ಇಚ್ಛೆಯಿಲ್ಲದೆ ಗಂಗೆಯಲ್ಲಿ ಮಿಂದು ಬಂದರೂ ಆ ಗಂಗೆಯು ಸ್ನಾನಮಾಡಿದವರ ಪಾಪಗಳನ್ನೆಲ್ಲ ಸುಟ್ಟು ಹಾಕುವಳು. ಸಿಟ್ಟಿನಿಂದ ತಪಸ್ಸು, ಕಾಮದಿಂದ ಬುದ್ಧಿ, ಅನ್ಯಾಯದಿಂದ ಲಕ್ಷ್ಮಿ ಅಭಿಮಾನದಿಂದ ವಿದ್ಯೆ, ಕುಟಿಲತೆ ಹಾಗೂ ಕಪಟಗಳಿಂದ ಧರ್ಮವು ನಾಶವಾಗುವುದಲ್ಲವೆ? ಅದರಂತೆ ಗಂಗೆಯ ದರ್ಶನ ಮಾತ್ರದಿಂದ ಜೀವಿಗಳ ಎಲ್ಲ ಪಾಪಗಳೂ ನಷ್ಟವಾಗುತ್ತವೆ. ಮಂತ್ರಗಳಲ್ಲಿ ಓಂಕಾರ, ಧರ್ಮಗಳಲ್ಲಿ ಅಹಿಂಸೆ, ಸುಂದರ ವಸ್ತುಗಳಲ್ಲಿ ಮನ್ಮಥ ಹೇಗೆ ಶ್ರೇಷ್ಠವಾಗಿರುವವೋ ಅದೇ ರೀತಿಯಾಗಿ ವಿದ್ಯೆಗಳಲ್ಲಿ ಆತ್ಮ ವಿದ್ಯೆ, ನಾರಿಯರಲ್ಲಿ ಗೌರೀ ದೇವೀ, ತೀರ್ಥಗಳಲ್ಲಿ ತೀರ್ಥ ಸರ್ವಶ್ರೇಷ್ಠವಾಗಿರುತ್ತದೆ.

ಗ್ರಹಣ, ವ್ಯತೀಪಾತ, ಸಂಕ್ರಮಣಕಾಲಗಳಲ್ಲಿ ಗಂಗಾ ಸ್ನಾನ ಮಾಡಿದರೆ ಸ್ವರ್ಗ ಪ್ರಾಪ್ತಿ. ಸೋಮವಾರ ಚಂದ್ರಗ್ರಹಣ, ರವಿವಾರ ಸೂರ್ಯಗ್ರಹಣ ಬಂದರೆ, ಅದಕ್ಕೆ ಚೂಡಾಮಣಿ ಎಂಬ ಪರ್ವಕಾಲವಾಗುತ್ತದೆ. ಆ ಕಾಲದಲ್ಲಿ ಮಾಡಿದ ಗಂಗಾ ಸ್ನಾನಕ್ಕೆ ಅನಂತ ಪುಣ್ಯ ಫಲ. ಜ್ಯೇಷ್ಠ ಶುದ್ಧ ಹಸ್ತಾ ನಕ್ಷತ್ರಯುಕ್ತವಾದ ದಶಮಿ ತಿಥಿಯಂದು ಭಕ್ತಿಯಿಂದ ಗಂಗೆಯ ಪೂಜೆಮಾಡಿ, ರಾತ್ರಿ ಜಾಗರಣಗೈದು ಹತ್ತು ಬಗೆಯ ಹೂ, ಹತ್ತು ತರಹದ ಹಣ್ಣು, ಹತ್ತು ಪಕ್ವಾನ್ನ, ಹತ್ತು ಅಂಗಗಳಿಂದ (ದಶಾಂಗ) ಸಹಿತವಾದ ಧೂಪ, ದೀಪ, ಹತ್ತು ಬತ್ತಿಗಳ ಮಂಗಳಾರತಿಯನ್ನು ಮಾಡಿ ಹತ್ತು ಸಲ ಗಂಗೆಯ ಪೂಜೆಯನ್ನು ಮಾಡಬೇಕು ಮಾನವನು. ಗಂಗೆಯ ನೀರಿನಲ್ಲಿ ಹತ್ತು ಬೊಗಸೆ ಎಳ್ಳು ತುಪ್ಪವನ್ನು ಗಂಗೆಯ ಹೆಸರಿನಿಂದ ಹಾಕಬೇಕು. ಅನಂತರ ಬೆಲ್ಲ ಹಾಗೂ ಹಿಟ್ಟಿನ ಹತ್ತು ಪಿಂಡಗಳನ್ನು ಮಾಡಿ ಗಂಗೆಯಲ್ಲಿ ಬಿಡಬೇಕು. ಮತ್ತು ಗಂಗೆಯ ಧೂಪ ದೀಪ, ನೈವೇದ್ಯ, ಮುಂತಾದ ಪೂಜೆಯನ್ನು ''ಓಂ ನಮಃ ಶಿವಾಯೈ ನಾರಾಯಣ್ಯೈ ದಶಹರಾಯೈ ಸ್ವಾಹಾ । ಎಂಬ ಗಂಗಾ ಮಂತ್ರದಿಂದ ಮಾಡಬೇಕು. ಈ ಗಂಗಾ ಪೂಜೆಗಿಂತ ಮೊದಲು ಶಿವ, ವಿಷ್ಣು, ಬ್ರಹ್ಮ, ಸೂರ್ಯ, ಹಿಮಗಿರಿ, ಭಗೀರಥ ರಾಜ ಇವರೆಲ್ಲರ ವಿಶೇಷ ಪೂಜೆಯನ್ನು ಮಾಡಬೇಕು. ಹತ್ತು ಬ್ರಾಹ್ಮಣರಿಗೆ ಆದರದಿಂದ ಹತ್ತು ಸೇರು ಎಳ್ಳನ್ನು ದಾನ ಕೊಡಬೇಕು. ಹೀಗೆ ವಿಧಿಪೂರ್ವಕವಾಗಿ ಪೂಜೆಯನ್ನು ಮಾಡಿ ಮುಗಿಸಿದ ಮಾನವನು ಮುಂದೆ ನಿರ್ದೇಶಿಸಿದ ಹತ್ತು ಪಾಪಗಳಿಂದ ಮುಕ್ತನಾಗುತ್ತಾನೆ. ಆ ಪಾಪಗಳು ಯಾವವು ಎಂದರೆ ಯಜಮಾನನು ಕೊಡದಿರುವ ವಸ್ತುವನ್ನು ಕದಿಯುವುದು, ನಿಷಿದ್ಧ ಹಿಂಸೆಯನ್ನು ಮಾಡುವುದು, ಪರಸ್ತ್ರೀ ಸಹವಾಸ, ಇವು ಮೂರು ದೈಹಿಕ ಪಾಪ ಎನಿಸುತ್ತದೆ.

**'ಅದತ್ತಾನಾಮುಪಾದಾನಮ್ ಹಿಂಸಾ ಚೈವಾ ವಿಧಾನತಃ ।**
**ಪರದಾರೋಪಸೇವಾ ಚ ಕಾಯಿಕಂ ತ್ರಿವಿಧಂ ಸ್ಮೃತಂ ॥**
ಕಳವು, ಹಿಂಸೆ, ಪರಸ್ತ್ರೀ ಸೇವೆ ಇವು ಮೂರು ದೈಹಿಕ ಪಾಪಗಳು.

ಪಾರುಷ್ಯಮನೃತಂ ಚೈವ ಪೈಶುನ್ಯಂ ಚೈವ ಸರ್ವಶಃ ।
ಅಸಂಬದ್ಧ ಪ್ರಲಾಪಶ್ಚ ವಾಙ್ಮಯಂ ಸ್ಯಾತ್ ಚತುರ್ವಿಧಂ ॥

ಕಠೋರ ವಚನ, ಸುಳ್ಳು ಹೇಳುವುದು, ಚಾಡಿಕೋರತನ, ಅಸಂಬದ್ಧ ಮಾತು ಇವು ನಾಲ್ಕು ಮಾತಿನಿಂದ ಮಾಡಲ್ಪಡುವ ಪಾಪಗಳು.

'ಪರದ್ರವ್ಯೇಷ್ವಭಿಧ್ಯಾನಂ ಮನಸಾನಿಷ್ಟ ಚಿಂತನಂ,
ವಿತಥಾಭಿ ನಿವೇಶಶ್ಚ ಮಾನಸಂ ತ್ರಿವಿಧಂ ಸ್ಮೃತಂ' ॥

ಪರಕೀಯ ಹಣವನ್ನು ಅಪಹರಿಸಲು ಹೊಂಚು ಹಂಚಿಕೆಯನ್ನು ಹಾಕುವುದು, ಹೆರವರಿಗೆ ಮನಸ್ಸಿನಿಂದ ಅನಿಷ್ಟ ಚಿಂತನ ಮಾಡುವುದು, ಮತ್ತು ನಿಷಿದ್ಧ ಕಾರ್ಯಗಳಲ್ಲಿ ಉತ್ಸಾಹದಿಂದ ಆಸಕ್ತಿ ವಹಿಸುವದು ಇವು ಮೂರು ಮನಸ್ಸಿನ ಪಾಪಗಳು. ಹೀಗೆ ಹತ್ತು ವಿಧವಾಗಿವೆ ಪಾಪಗಳು. ಹತ್ತು ಜನ್ಮದಲ್ಲಿ ಪುರುಷನು ಸಂಗ್ರಹಿಸಿದ ಈ ಹತ್ತು ಬಗೆಯ ಪಾಪಗಳು ನಷ್ಟವಾಗಿ ಹೋಗುವವು 'ದಶಹರಾ' ದಿನದಂದು ಗಂಗೆಯ ಸೇವೆ ಆಡುವ ಮನುಷ್ಯರಿಗೆ. ಅನಂತರ ಪೂಜಕರು ಗಂಗೆಯ ಎದುರು ಕುಳಿತು ಭಕ್ತಿಯಿಂದ ಕೆಳಗೆ ಹೇಳಿದ ಗಂಗಾ ಸ್ತೋತ್ರವನ್ನು ಪಠಿಸಿ ಪಾರಾಯಣ ಮಾಡಬೇಕು.

ಓಂ ನಮಃ ಶಿವಾಯೈ ಗಂಗಾಯೈ ಶಿವದಾಯ್ಯೆ ನಮೋ ನಮಃ ।
ನಮಸ್ತೇ ವಿಷ್ಣುರೂಪಿಣ್ಯೈ ಬ್ರಹ್ಮಮೂರ್ತ್ಯೈ ನಮೋಽಸ್ತುತೇ ॥
ನಮಸ್ತೇ ರುದ್ರರೂಪಿಣ್ಯೈ ಶಾಂಕರ್ಯೈ ತೇ ನಮೋ ನಮಃ ।
ಸರ್ವದೇವ ಸ್ವರೂಪಿಣ್ಯೈ ನಮೋ ಭೇಷಜಮೂರ್ತಯೇ ॥
ಸರ್ವೇಷ್ಯಾಂ ಸರ್ವವ್ಯಾಧೀನಾಂ ಭಿಷಕ್‌ಶ್ರೇಷ್ಠ್ಯೈಂ ನಮೋಽಸ್ತು ತೇ ।
ಸ್ಥಾಸ್ನುಜಂಗಮ ಸಂಭೂತವಿಷಹಂತ್ರ್ಯೈ ನಮೋಽಸ್ತು ತೇ ॥
ಸಂಸಾರವಿಷನಾಶಿನ್ಯೈ ಜೀವನಾಯೈ ನಮೋಽಸ್ತು ತೇ ।
ತಾಪತ್ರಿತಯ ಸಂಹಂತ್ರ್ಯೈ ಪ್ರಾಣೇಶ್ಯೈ ತೇ ನಮೋ ನಮಃ ॥
ಶಾಂತಿಸಂತಾನಕಾರಿಣ್ಯೈ ನಮಸ್ತೇ ಶುದ್ಧಮೂರ್ತಯೇ ।
ಸರ್ವಸಂಶುದ್ಧಿಕಾರಿಣ್ಯೈ ನಮಃ ಪಾಪಾರಿಭೂರ್ತಯೇ ॥
ಭುಕ್ತಿಮುಕ್ತಿಪ್ರದಾಯಿನ್ಯೈ ಭದ್ರದಾಯೈ ನಮೋ ನಮಃ ।
ಭೋಗೋಪ ಭೋಗದಾಯಿನ್ಯೈ ಭೋಗವತ್ಯೈ ನಮೋಽಸ್ತು ತೇ ॥
ಮಂದಾಕಿನ್ಯೈ ನಮಸ್ತೇಽಸ್ತು ಸ್ವರ್ಗದಾಯೈ ನಮೋ ನಮಃ ।
ನಮಸ್ತ್ರೈಲೋಕ್ಯಭೂಷಾಯೈ ತ್ರಿಪಥಾಯ್ಯೈ ನಮೋ ನಮಃ ॥
ನಮಸ್ತ್ರಿಶುಕ್ಲಸಂಸ್ಥಾಯೈ ಕ್ಷಮಾವತ್ಯೈ ನಮೋ ನಮಃ ।
ತ್ರಿಹುತಾಶನ ಸಂಸ್ಥಾಯೈ ತೇಜೋವತ್ಯೈ ನಮೋ ನಮಃ ॥
ನಂದಾಯೈ ಲಿಂಗಧಾರಿಣ್ಯೈ ಸುಧಾಧಾರಾತ್ಮನೇ ನಮಃ ।
ನಮಸ್ತೇ ವಿಶ್ವಮುಖ್ಯಾಯೈ ರೇವತ್ಯೈ ತೇ ನಮೋ ನಮಃ ॥

ಬೃಹತ್ಯೈ ತೇ ನಮಸ್ತೇಽಸ್ತು ಲೋಕಧಾತ್ರ್ಯೈ ನಮೋಽಸ್ತುತೇ ।
ನಮಸ್ತೇ ವಿಶ್ವಮಿತ್ರಾಯೈ ನಂದಿನ್ಯೈ ತೇ ನಮೋ ನಮಃ ॥
ಪಾಶಜಾಲ ನಿಕೃಂತಿನ್ಯೈ ಅಭಯಾಯೈ ನಮೋಽಸ್ತುತೇ ।
ಶಾಂತಾಯೈ ಚ ವರಿಷ್ಠಾಯೈ ವರದಾಯೈ ನಮೋ ನಮಃ ॥
ಉಗ್ರಾಯೈ ಸುಖದಾತ್ರ್ಯೈಚ ಸಂಜೀವಿನ್ಯೈ ನಮೋಸ್ತುತೇ ।
ಬ್ರಹ್ಮಿಷ್ಠಾಯೈ ಬ್ರಹ್ಮದಾಯೈ ದುರಿತಘ್ನ್ಯೈ ನಮೋ ನಮಃ ॥
ಪ್ರಣತಾರ್ತಿಪ್ರಭಂಜಿನ್ಯೈ ಜಗನ್ಮಾತ್ರೈ ನಮೋಽಸ್ತು ತೇ ।
ಸರ್ವಾಪತ್ಪ್ರತಿಪಕ್ಷಾಯೈ ಮಂಗಲಾಯೈ ನಮೋ ನಮಃ ॥
ಶರಣಾಗತದೀನಾರ್ತಪರಿತ್ರಾಣ ಪರಾಯಣೇ ।
ಸರ್ವಸ್ಯಾರ್ತಿಹರೇ ದೇವಿ ನಾರಾಯಣಿ ನಮೋಽಸ್ತು ತೇ ॥
ನಿರ್ಲೇಪಾಯೈ ದುರ್ಗಹಂತ್ರ್ಯೈ ದಕ್ಷಾಯೈ ತೇ ನಮೋ ನಮಃ ।
ಪರಾ ಪರಪರಾಯೈ ಚ ಗಂಗೇ ನಿರ್ವಾಣದಾಯಿನಿ ॥
ಗಂಗೇ ಮಮಾಗ್ರತೋ ಭೂಯಾ ಗಂಗೇ ಮೇ ತಿಷ್ಠ ಪೃಷ್ಠತಃ ।
ಗಂಗೇ ಮೇ ಪಾರ್ಶ್ವಯೋರೇಧಿ ಗಂಗೇ ತ್ವಯ್ಯಸ್ತು ಮೇ ಸ್ಥಿತಿಃ ॥
ಆದೌ ತ್ವಮಂತೇ ಮಧ್ಯೆ ಚ ಸರ್ವಂ ತ್ವಂ ಗಾಂ ಗತೇ ಶಿವೇ ।
ತ್ವಮೇವ ಮೂಲ ಪ್ರಕೃತಿಸ್ತ್ವಂ ಪುಮಾನ್ ಪರ ಏವ ಹಿ ।
ಗಂಗೇ ತ್ವಂ ಪರಮಾತ್ಮಾ ಚ ಶಿವಸ್ತುಭ್ಯಂ ನಮಃ ಶಿವೇ ॥

ದಿವ್ಯವಾದ ಈ ಗಂಗಾಸ್ತೋತ್ರವನ್ನು ಕೇಳಿದವರೂ, ಪಠಿಸಿದವರೂ ಹಿಂದೆ ಹೇಳಿದ ಮೂರು ವಿಧ ಕಾಯಿಕಪಾಪ, ನಾಲ್ಕು ವಿಧ ವಾಚಿಕ ಪಾಪ ಹಾಗೂ ಮೂರು ವಿಧ ಮಾನಸಿಕ ಪಾಪ. ಒಟ್ಟು ಹತ್ತು ವಿಧ ಪಾಪಗಳಿಂದ ಮುಕ್ತರಾಗುವರು. ಜ್ಯೇಷ್ಠ ಮಾಸದ ಶುಕ್ಲಪಕ್ಷ ದಶಮಿದಿನ ಹಸ್ತಾನಕ್ಷತ್ರ ಹಾಗೂ ಬುಧವಾರದ ಯೋಗವಿದ್ದಾಗ ಗಂಗಾ ನದಿಯ ನೀರಿನಲ್ಲಿ ನಿಂತು ಈ ಗಂಗಾ ಸ್ತೋತ್ರವನ್ನು ಹತ್ತು ಸಲ ಪಠಿಸಿದರೆ ಶಾಸ್ತ್ರೋಕ್ತ ರೀತಿಯಿಂದ ಗಂಗಾಪೂಜೆಯನ್ನು ಮಾಡಿದ ಪುಣ್ಯವು ಪ್ರಾಪ್ತವಾಗುತ್ತದೆ.

## ಗಂಗಾ ಸಹಸ್ರ ನಾಮ ಸ್ತೋತ್ರ

**ಅಗಸ್ತ್ಯ:-** ಭೂಲೋಕದಲ್ಲಿ ಜನಿಸಿದ ಎಲ್ಲ ಮಾನವರಿಗೂ ಗಂಗಾ ಸ್ನಾನ ಮಾಡಲು ಕದಾಚಿತ್ ಆಗಲಿಕ್ಕಿಲ್ಲ. ಇಂಥ ಸಂದರ್ಭದಲ್ಲಿ ಗಂಗಾ ಸ್ನಾನದ ಫಲ ಹಾಗು ಪುಣ್ಯವು ಮತ್ತೆ ಬೇರೆ ಯಾವುದಾದರೂ ಉಪಾಯಾಂತರದಿಂದ ಲಭಿಸಬಹುದೇ? ಗಂಗೆಯಲ್ಲಿ ಮೀಯದೇ ಗಂಗಾ ಸ್ನಾನಮಾಡಿದ ಫಲವು ದೊರೆಯುವ ಬೇರೆ ಉಪಾಯವನ್ನು ಹೇಳಿರಿ.

**ಸ್ಕಂದ:-** ಪೂಜ್ಯರೇ, ಅದಕ್ಕೆ ಒಂದೇ ಉಪಾಯವಿದೆ. ಆದರೆ ಅದು ಪರಮರಹಸ್ಯ. ಹರಿಹರ ಭಕ್ತರಾಗದವರಿಗೆ ಅದನ್ನು ಹೇಳಬಾರದು. ಮಂತ್ರಸ್ತೋತ್ರಗಳ ಮೇಲೆ ವಿಮರ್ಶೆ ವಿವೇಕ ಇಲ್ಲದವರಿಗೂ ಅದನ್ನು ಉಸಿರಬಾರದು. ಹರಿ, ಗುರು, ಗಂಗಾ ಭಕ್ತರು ಮಾತ್ರ ಉಚ್ಚರಿಸಬೇಕಾದ ಗೌಪ್ಯ ಮಂತ್ರ ಇದು. ಗಂಗಾ ಸಹಸ್ರ ಈ ಉಪಾಯ ಈ ಗಂಗಾ ಸಹಸ್ರನಾಮದ ಸ್ತೋತ್ರವು ನಾಮ ಸ್ತೋತ್ರವೇ ಎಲ್ಲ ಸ್ತೋತ್ರಗಳಲ್ಲಿ ಶ್ರೇಷ್ಠ. ಜಪ

ಮಂತ್ರಗಳಲ್ಲಿ ಗೌಪ್ಯ, ವೇದ ಸೂಕ್ತಗಳಿಗೆ ಸಮಾನ. ಉಪನಿಷತ್ತುಗಳಷ್ಟೇ ಅರ್ಥಪೂರ್ಣ. ಪವಿತ್ರಸ್ಥಳದಲ್ಲಿ ಸ್ನಾನ ಸಂಧ್ಯೆಗಳಿಂದ ಪವಿತ್ರನಾಗಿ ಗಂಗೆಯ ಭಕ್ತರು ಈ ಪವಿತ್ರ ಮಂತ್ರವನ್ನು ಓಂ ನಮೋ ಗಂಗಾ ದೇವ್ಯೈ ಎಂದು ಮೊದಲು ಗಂಗೆಗೆ ವಂದಿಸಿ ಅನಂತರ ಈ ದಿವ್ಯ ಸ್ತೋತ್ರ ಪಾರಾಯಣವನ್ನು ಪ್ರಾರಂಭಿಸಬೇಕು.

## ಕಾಶಿಯ ಮಹಿಮೆ

**ಸ್ಕಂದ:-** ಕುಂಭಸಂಭವ! ಹಿಂದೆ ಇಕ್ಷ್ವಾಕುವಂಶದ ಭಗೀರಥನೆಂಬ ಅರಸು ಆರಾಧಿಸಿದ ಮಹಾದೇವನನ್ನು ಗಂಗೆಯನ್ನು ಪ್ರಸನ್ನಗೊಳಿಸಿದ. ಅವನ ಬೆನ್ನ ಹಿಂದೆ ನಡೆದುಬಂದಳು ದೇವಗಂಗೆ. ಮುಂದೆ ಮುಂದೆ ಭಗೀರಥ, ಅವನ ಹಿಂದೆ ಹರಿದುಬರುವ ಗಂಗೆ. ಭಗೀರಥನು ಪುರಾತನ ತೀರ್ಥಗಳಾದ ಕಾಶಿಯ ಮಣಿಕರ್ಣಿಕಾತೀರ್ಥ ಹಾಗೂ ಶಂಕರನ ನಿವಾಸವಾದ ಆನಂದವನ ಶ್ರೀಹರಿಯು ನಿರ್ಮಿಸಿದ ಚಕ್ರ ಪುಷ್ಕರಣಿ ಮುಂತಾದ ಕಡೆಗಳಲ್ಲಿ ತಾನು ಓಡಾಡಿ ಗಂಗೆಯ ಪ್ರವಾಹವನ್ನು ಈ ಸ್ಥಾನಗಳಲ್ಲಿ ಹರಿದು ಹೊಮ್ಮುವಂತೆ ಮಾಡಿದ. ಮೊದಲೇ ಮೋಕ್ಷಮಾರ್ಗವನ್ನು ಪ್ರಕಾಶಗೊಳಿಸಿ ಕಾಶಿ ಎಂದು ಹೆಸರಾದ ಈ ನಗರ ಮಹಾಪುಣ್ಯಕ್ಷೇತ್ರ ಎಂದು ಲೋಕಪ್ರಸಿದ್ಧಿ. ಇಲ್ಲಿ ಗಂಗೆ ಹರಿದಬಳಿಕ ಈ ಕ್ಷೇತ್ರದ ಮಹಿಮೆ ಮೊದಲಿಗಿಂತ ಎಷ್ಟೋ ಪಟ್ಟು ಮಿಗಿಲಾಯಿತು. ವೇದಾಂತ ಪ್ರತಿಪಾದ್ಯನಾದ ಪರಬ್ರಹ್ಮನ ನಿಧಿಧ್ಯಾಸನ ಮತ್ತು ಸಾಂಖ್ಯಯೋಗ ಮುಂತಾದವುಗಳು ಇಲ್ಲದೇ ಕಾಶಿಯಲ್ಲಿ ಮರಣ ಹೊಂದಿದವನು ಶಂಕರನು ನೀಡಿದ ತಾರಕಮಂತ್ರದ ಉಪದೇಶದಿಂದ ಮುಕ್ತನಾಗಿ ಬಿಡುತ್ತಾನೆ. ಮಾನವರ ದುಷ್ಟಬುದ್ಧಿಯನ್ನು ಕಡಿದು ಹಾಕುವ ಖಡ್ಗದಂತೆ ಇರುವ 'ಅಸಿ' ಎಂಬ ನದಿಯನ್ನೂ, ದುಷ್ಟರನ್ನು ಧೂನನ ಮಾಡುವ 'ಧ್ವನಿ' ಎಂಬ ನದಿಯನ್ನೂ ಈ ಕಾಶಿಯ ಪರಿಸರದಲ್ಲಿ ನಿರ್ಮಾಣ ಮಾಡಿದ್ದಾನೆ ಬ್ರಹ್ಮದೇವ. ಕಾಶಿಯ ದಕ್ಷಿಣ ದೇಶದಲ್ಲಿ 'ಅಸೀ' ಎಂಬ ನದಿ ಉತ್ತರಭಾಗದಲ್ಲಿ ವರಣಾ ನದಿ, ಎರಡೂ ಇಲ್ಲಿ ಸಂಗಮಿಸಿದ್ದರಿಂದ ವಾರಣಾಸಿ ಎಂದು ಮಧ್ಯಂತರ ಈ ಕ್ಷೇತ್ರಕ್ಕೆ ಪ್ರಸಿದ್ಧವಾಗಿದೆ.

ಈ ಕ್ಷೇತ್ರದ ರಕ್ಷಣೆಗಾಗಿ ಭಗವಾನ ಶಂಕರನು (ದೇಹಲಿ) ಹೊಸ್ತಿಲು ವಿನಾಯಕರನ್ನು ನಿಯಮಿಸಿದ್ದಾನೆ. ಈ ವಿಷಯದಲ್ಲಿ ಒಂದು ಪ್ರಾಚೀನ ಇತಿಹಾಸವಿದೆ. ದಕ್ಷಿಣಸಮುದ್ರದ ತೀರದಲ್ಲಿ ಸೇತುಬಂಧ ತೀರ್ಥದ ಸಮೀಪದಲ್ಲಿ ಓರ್ವ ವೈಶ್ಯ. ಧನಂಜಯ ಎಂದು ಅವನ ಹೆಸರು. ಅವನು ತನ್ನ ತಾಯಿಯ ಏಕನಿಷ್ಠಸೇವಕ. ಬಾಗಿಲಿಗೆ ಬಂದ ಭಿಕ್ಷುಕರಿಗೆ ಯಾರಿಗೂ ಇಲ್ಲ ಎನ್ನುತ್ತಿದ್ದಿಲ್ಲ. ಶ್ರೀಕೃಷ್ಣನ ಆರಾಧಕ ಈ ಧನಂಜಯ. ಸ್ವಭಾವದಿಂದ ಅವನೊಂದು ಸದ್ಗುಣಗಳ ಖಣಿ. ಆದರೂ ದೊಡ್ಡವರ ಎದುರು ತನ್ನ ಹಿರಿಮೆಯನ್ನು ತೋರಿಸತ್ತಿದ್ದಿಲ್ಲ ಅವನ ಜೀವನ ವ್ಯಾಪಾರದಿಂದ. ಆದರೂ ಅವನು ಸತ್ಯಸಂಧ. ಅವನ ತಾಯಿ ಜರಾಜೀರ್ಣ, ರೋಗಶೀರ್ಣ ಮುಪ್ಪಿನಿಂದ ಮರಣಹೊಂದಿದಳು. ಈ ಅವನ ತಾಯಿಯು 'ವೃದ್ಧಾನಾರೀಪತಿವ್ರತಾ' ಮುಪ್ಪಿನಿಂದ ಮೈಬಾಗಿ, ದೇಹ ಜರ್ಜರವಾದ ಬಳಿಕ ಸತೀ ಆಗಿದ್ದಳು. ಹರೆಯದ ಕಾಲದಲ್ಲಿ ಎಲ್ಲ ಕಡೆಗೂ ಹರಿದಾಡಿ ಕುಲಟೆ ಎನಿಸಿದ್ದಳು. ಶಾಸ್ತ್ರೋಕ್ತ ವಿಧಿಯಿಂದ ಮದುವೆಯಾದ ಪತಿಯನ್ನೂ, ಸದಾಚಾರವನ್ನೂ ತೊರೆದು ನಟಪುರುಷ ವಿಟಪುರುಷರೊಂದಿಗೆ ಸ್ವೈರ ವಿಹಾರಕ್ಕೆ ಇಳಿದು ಜಾರಿಣೀ ಎನಿಸಿದ್ದಳು. ಆ ಪಾಪದಿಂದ ಅವಳು ಘೋರನರಕದಲ್ಲಿ ಬೀಳ ಬೇಕಾಯಿತು.

ಇತ್ತ ಅವಳ ಮಗನಾದ ಧನಂಜಯನು ಮಾತ್ರ ಎಂದಿನಿಂದಲೂ ಶಿವಭಕ್ತ. ಮಾತೃನಿಷ್ಠ. ತಾಯಿ ನಿಧನ ಹೊಂದಿದ ಬಳಿಕ ಅವನು ಅವಳ ಅಂತ್ಯಸಂಸ್ಕಾರ ಮಾಡಿ

ಮೂಳೆಗಳನ್ನು ತೆಗೆದುಕೊಂಡು ಪಂಚಗವ್ಯದಲ್ಲಿ ತೊಳೆದು, ಹೂಗಳಿಂದ ಪೂಜಿಸಿ, ರೇಷ್ಮೆ ವಸ್ತ್ರದಲ್ಲಿ ಸುತ್ತಿ, ಒಂದು ಚೀಲದಲ್ಲಿ ಇಟ್ಟು, ಕಂಬಳಿ ಸುತ್ತಿ ಒಂದು ತಾಮ್ರದ ಸಂಪುಟದಲ್ಲಿ ಇಟ್ಟುಕೊಂಡು ಗಂಗೆಯಲ್ಲಿ ವಿಸರ್ಜಿಸಲು ಹೊರಟ. ಅವನು ದಾರಿಯಲ್ಲಿ ಯಾರನ್ನೂ ಮುಟ್ಟದೇ ಮಡಿಯಿಂದಲೇ ಕೂಗುತ್ತಿದ್ದ ಹಾಗೂ ಮಲಗುತ್ತಿದ್ದ. ಹಾಸಿಗೆ ಬಟ್ಟೆ ಮುಟ್ಟದೇ ಮೈಲಿಗೆ ಆಗುವುದೆಂದು ನೆಲದ ಮೇಲೆ ಶಯನಮಾಡುತ್ತಿದ್ದ. ಮಾರ್ಗಮಧ್ಯದಲ್ಲಿ ಬಟ್ಟಬಯಲು ಗುಡಿಗುಂಡಾರಗಳಲ್ಲಿ ತಂಪಿಡಿದ ತಣ್ಣಗಿನ ತಾಣಗಳಲ್ಲಿ ಶಯನ. ತ್ರಿಕಾಲದಲ್ಲಿ ತೀರ್ಥಗಳ ಶೀತ ಜಲಗಳಲ್ಲಿ ಸ್ನಾನ. ತೆರೆದ ಮೈಯಿಂದ ಗಾಳಿಯಲ್ಲಿಯೇ ಮುಂಜಾವು, ಸಂಜೆ ಸಂಚಾರಗಳಿಂದ ಆ ಧನಂಜಯನಿಗೆ ಶೀತಜ್ವರ ಹಿಡಿಯಿತು. ಆಗ ಅವನು ಓರ್ವ ಪಲ್ಲಕ್ಕಿ ಹೋರುವ ಬೋವಿಯನ್ನು ಕೂಲಿಯಿಂದ ಕಾಶಿಗೆ ಕರೆದುಕೊಂಡು ಹೋಗಬೇಕೆಂದು ಗೊತ್ತುಮಾಡಿದ. ಅವನ ಸಹಾಯದಿಂದ ಹೇಗೋ ಕಾಶೀಪಟ್ಟಣಕ್ಕೆ ಬಂದು ತಲುಪಿದ. ತನ್ನ ತಾಯಿಯ ಮೊಳೆಗಳನ್ನು ಹಾಕಿ ಬಟ್ಟೆ ಹಾಗೂ ಕಂಬಳಿಸುತ್ತಿದ ತಾಮ್ರ ಸಂಪುಟವನ್ನು ಅಲ್ಲಿಯೇ ಒಂದು ಕಡೆ ಇಟ್ಟು, ಆ ಧನಂಜಯನು ಆ ದೋವಿಗೆ ಕಾಯುತ್ತ ಕುಳ್ಳಿರಲು ಹೇಳಿ, ತಾನು ಕೆಲವು ಅವಶ್ಯಕ ಸಾಮಾನುಗಳನ್ನುತರಲು ಪೇಟೆಗೆ ಹೋದ. ಇತ್ತ ಆ ಬೋವಿಯು ಆ ತಾಮ್ರ ಸಂಪುಟವನ್ನು ಕದ್ದು ಕೊಂಡು ತನ್ನ ಮನೆಗೆ ಹೋದ. ಧನಂಜಯನು ಪದಾರ್ಥಗಳನ್ನು ಕೊಂಡು ತಾನು ಇಳಿದಲ್ಲಿಗೆ ಬಂದ. ಉಳಿದೆಲ್ಲ ಸಾಮಾನುಗಳ ಸುರಕ್ಷಿತವಾಗಿ ಇದ್ದವು. ಆದರೆ ತಾಯಿಯ ಮೂಳೆತುಂಬಿದ ತಾಮ್ರದ ಸಂಪುಟವು ಮಾತ್ರ ಮಾಯವಾಗಿದ್ದಿತು. ಆ ಚೀಚೆ ಎಲ್ಲಕಡೆ ಹುಡುಕಾಡಿದ ಆ ಸಂಪುಟವನ್ನು. ಎಲ್ಲಿಯೂ ಕಾಣಲಿಲ್ಲ. ಆ ಬೋಯಿಯೇ ಸಂಪುಟವನ್ನು ಕದ್ದಿದ್ದಾನೆ ಎಂದು ಅವನಿಗೆ ತಿಳಿದು ಹೋಯಿತು. ಅವನ ಮನೆಯನ್ನು ಹುಡುಕಿಕೊಂಡು ಹೋದ. ಇತ್ತ ಆ ಸಂಪುಟವನ್ನು ಕದ್ದುಕೊಂಡು ಆ ಭೋವಿಯು ಸಮೀಪದ ಅರಣ್ಯಕ್ಕೆ ಹೋದ. ಮನೆಯಲ್ಲಿಯಾದರೆ ಯಾರಾದರೂ ನೋಡಬಹುದು ಎಂದು ನಿರ್ಜನ ವನದ ಏಕಾಂತದಲ್ಲಿ ಕುಳಿತು ಸಂಪುಟದ ಮುಚ್ಚಳವನ್ನು ತೆರೆದ. ಭದ್ರವಾದ ಆ ಸಂಪುಟದಲ್ಲಿ ನಗನಾಣ್ಯ ಮುತ್ತು ರತ್ನ ತುಂಬಿದೆ ಎಂದು ಬಗೆದಿದ್ದ. ಆದರೆ ಅದರ ಬಾಯಿ ತೆರೆದು ಅರಣ್ಯದಲ್ಲಿ ನೋಡಿದಾಗ ಸಂಪುಟದ ತುಂಬ ಮುದುಕಿಯ ಮುರಿದ ಮೂಳೆಗಳು. ನೋಡಿ ನಿರಾಶನಾದ. ತನ್ನ ದುರ್ದೈವವನ್ನು ಹಳಿದು ಅವನ್ನೆಲ್ಲ ಅಲ್ಲಿಯೇ ಒಗೆದು ಮನೆಗೆ ಮರಳಿದ ಆ ಭಾಗ್ಯಹೀನ ಬೋವಿ. ಮನೆಗೆ ಬರುವಷ್ಟರಲ್ಲಿ ಧನಂಜಯ ಆ ಬೋಯಿಯ ಮಡದಿಯನ್ನು ಗದರಿಸುತ್ತಿರುವುದನ್ನು ಕಂಡ "ನಿಜ ಹೇಳು. ನನ್ನ ಸಂಪುಟವನ್ನು ಕದ್ದು ನಿನ್ನ ಗಂಡ ಎಲ್ಲಿ ಹೋಗಿದ್ದಾನೆ? ನನ್ನ ತಾಯಿಯ ಅಸ್ಥಿಗಳನ್ನು ತೆಗೆದುಕೊಂಡು ಓಡಿದ್ದಾನೆ. ಆ ಸಂಪುಟದಲ್ಲಿ ಇದ್ದುದು ಕೇವಲ ನನ್ನ ತಾಯಿಯ ಅಸ್ಥಿ. ಅದೇ ನನ್ನ ಆಸ್ತಿ. ನಿನಗೆ ಬೇಕಾದಷ್ಟು ಹಣಕೊಡುತ್ತೇನೆ. ಎಲ್ಲಿ ಇಟ್ಟಿದ್ದಾನೆ ಅದನ್ನು ತೋರಿಸು."

ಅಷ್ಟರಲ್ಲಿ ಬೋಯಿ ಅಲ್ಲಿಗೆ ಬಂದ. ವನದಲ್ಲಿ ಒಗೆದು ಬಂದೆ ಎಂದು ತಿಳಿಸಿದ. ಆಗ ಧನಂಜಯನು ಅವನಿಗೆ "ಎಲ್ಲಿ ಒಗೆದು ಬಂದಿರುವಿ. ತೋರಿಸು ಬಾ" ಎಂದು ಅವನನ್ನು ಕರೆದುಕೊಂಡು ವನಕ್ಕೆ ಹೋದ? ಇಬ್ಬರೂ ವನವನ ತಿರುಗಿ ಹುಡುಕಿದರು. ಆ ಮೂಳೆಯ ಸಂಪುಟ ಎಲ್ಲಿಯೂ ದೊರಕಲಿಲ್ಲ. ಆ ಬೋಯಿಗೆ ತಾನು ಸಂಪುಟವನ್ನು ಬಿಟ್ಟು ಬಂದ ವನಪ್ರಾಂತದ ದಿಕ್ಕೇ ತಪ್ಪಿಹೋಯಿತು. ತಿರುಗಿ ತಿರುಗಿ ಹುಡುಕಾಡಿ ಬೇಸತ್ತು ಕೊನೆಗೆ

ನಿರಾಶನಾಗಿ ತನ್ನ ಮನೆಗೆ ಹೊರಟು ಹೋದ. ಧನಂಜಯನಾದರೂ ಮೂರು ನಾಲ್ಕು ದಿನಗಳವರೆಗೆ ಕಾಡುಮೇಡುಗಳಲ್ಲೆಲ್ಲ ತಾಯಿಯ ಮೂಳೆಗಳನ್ನು ಹುಡುಕಾಡಿ ಎಲ್ಲಿಯೂ ದೊರಕದೆ ನಿರಾಶನಾಗಿ ಕಾಶಿಗೆ ಮರಳಿ ಬಂದ. ತಾಯಿಯ ಅಸ್ಥಿಗಳನ್ನು ಗಂಗೆಯಲ್ಲಿ ವಿಸರ್ಜಿಸಲು ಆಗದೆ ಶೋಕವಿಹ್ವಲನಾಗಿ ತಾಯಿಗೆ ಕಣ್ಣೀರಿನ ತರ್ಪಣ ನೀಡಿದ. ಅಲ್ಲಿಂದ ಪ್ರಯಾಗಕ್ಕೆ ಹೋಗಿ ಅಲ್ಲಿ ಸ್ನಾನ ಮಾಡಿ ಮಾತ್ರ ಕಾರ್ಯಗಳನ್ನು ಮಾಡಲಿಕ್ಕಾಗದೆ ನಿರಾಶೆಯ ನಿಟ್ಟುಸಿರನ್ನು ಬಿಡುತ್ತ ತನ್ನ ಊರಿಗೆ ಮರಳಿದ.

ಅಗಸ್ತ್ಯ ಮುನಿಯೇ! ನೋಡಿದೆಯಾ ಕಾಶಿಯ ಪ್ರಭಾವವನ್ನು. ವ್ಯಭಿಚಾರಿಣಿಯಾದ ಧನಂಜಯನ ತಾಯಿಯ ಮೂಳೆಗಳನ್ನು ಕಾಶಿಯ ಗಂಗೆಯಲ್ಲಿ ವಿಸರ್ಜಿಸಬೇಕೆಂದು ಅವಳ ಮಗ ಮಹಾಪ್ರಯತ್ನ ಮಾಡಿ ಬಂದರೂ ಕಾಶಿಯ ಪ್ರಭಾವವು ಆ ಪಾಪಿಯ ಮೂಳೆಗಳನ್ನು ತನ್ನ ಕ್ಷೇತ್ರದಲ್ಲಿ ಬರಗೊಡಲಿಲ್ಲ. ಕಾಶಿಯ ಸೀಮೆಯಲ್ಲಿ ಪ್ರವೇಶಿಸಲಿಕ್ಕೆ ಆಗದೆ ಆ ಎಲ್ಲ ಎಲುಬುಗಳು ಎಲ್ಲಿಯೋ ಅಡವಿ ಪಾಲಾಗಿ ಹಾಳಾಗಿ ಹೋದವು. ಯಾವುದೇ ಹಿಂದಿನ ಪುಣ್ಯದಿಂದ ಕಾಶೀನಗರದಲ್ಲಿ ಪಾಪಿ ಜನರು ಪ್ರವೇಶ ಪಡೆದರೂ ಅವರಿಗೆ ಪಶ್ಚಾತ್ತಾಪವಾಗಿರದಿದ್ದರೆ, ಭಕ್ತಿಯಿಂದ ಅವರು ಗಂಗೆಯಲ್ಲಿ ಮಿಂದು ಶಂಕರನನ್ನು ಪೂಜಿಸದಿದ್ದರೆ ಅವರಿಗೆ ಕ್ಷೇತ್ರವಾಸದ ಪುಣ್ಯ ಲಭಿಸುವುದಿಲ್ಲ. ಈ ಅವಿಮುಕ್ತ ಕ್ಷೇತ್ರವನ್ನು ವಾರಣಾಸಿ, ರುದ್ರವಾಸ, ಮಹಾಸ್ಮಶಾನ, ಆನಂದವನ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಇಲ್ಲಿ ಶಿವನ ಆಜ್ಞೆ ಇಲ್ಲದೆ ಯಾವ ಪ್ರಾಣಿಯೂ ಜೀವಂತ ಅಥವಾ ಮೃತ ಅವಸ್ಥೆಯಲ್ಲಿ ಪ್ರವೇಶ ಪಡೆಯಲಾರದು.

## ಶಂಕರನ ಸೇವೆಯಿಂದ ಹರಿಕೇಶ ಯಕ್ಷಣಿಗೆ ದಂಡಪಾಣಿ ಪದ ಪ್ರಾಪ್ತಿ

**ಸ್ಕಂದ:-** ಕಾಶಿಯಲ್ಲಿ ಯಾಚಕರಿಗೆ ನೆಲ್ಲಿಕಾಯಿಯ ಪ್ರಮಾಣದಷ್ಟು ನೀಡಿದ ದಾನಕ್ಕೆ ಮೇರು ಪರ್ವತದಷ್ಟು ಪುಣ್ಯ ಬರುವುದು. ಕಾಶಿಯಲ್ಲಿ ಹಸಿದು ಕಂಗಾಲಾದ ಒಂದು ದರಿದ್ರ ಕುಟುಂಬಕ್ಕೆ ಒಂದು ವರ್ಷದವರೆಗೆ ಯಥೇಚ್ಛ ಭೋಜನ ಮಾಡಲು ಸಾಕಾಗುವಷ್ಟು ಅನ್ನದಾನ ಮಾಡಿದರೆ ಅವನು ಸ್ವರ್ಗಲೋಕದಲ್ಲಿ ಮಹಾದಾನಿ ಎಂದು ಪೂಜಿಸಲ್ಪಡುತ್ತಾನೆ. ಇಲ್ಲಿಯ ಕಪಾಲ ಮೋಚನ ತೀರ್ಥವನ್ನು ಮುಂದೆಮಾಡಿಕೊಂಡು ಭೈರವನು ಭಕ್ತಜನರ ಪಾಪಗಳನ್ನು ಭಕ್ಷಣ ಮಾಡುತ್ತ ನಿಂತುಕೊಂಡಿದ್ದಾನೆ. ಅವನು ಕಾಶಿಯಲ್ಲಿ ವಾಸಿಸಿದವರ ಕಲಿಕಾಲುಷ್ಯವನ್ನು ತನ್ನ ಕಾಲವನ್ನಾಗಿ ಮಾಡಿಕೊಳ್ಳುವನು. ಆದುದರಿಂದಲೇ ಅವನಿಗೆ ಹಸರು ಬಂದಿದೆ ಕಾಲ ಭೈರವ ಎಂದು.

**ಅಗಸ್ತ್ಯ:-** ಕಾರ್ತಿಕೇಯ ನನಗೆ ಹರಿಕೇಶನ ಉತ್ಪತ್ತಿಯ ವೃತ್ತಾಂತವನ್ನು ತಿಳಿಸಿರಿ.

**ಸ್ಕಂದ:-** ಪೂರ್ವಕಾಲದಲ್ಲಿ ಗಂಧಮಾಧನ ಪರ್ವತದ ಮೇಲೆ ಓರ್ವ ಧರ್ಮಾತ್ಮನಾದ ಯಕ್ಷ. ರತ್ನಭದ್ರ ಎಂಬ ಹೆಸರಿನಿಂದ ಅವನ ಪ್ರಸಿದ್ಧಿ. ಅವನು ಮಾಡಿದ ಸುಕರ್ಮಗಳನ್ನು ಎಣಿಸಲು ಸಾವಿರದ ಅಂಕೆಗಳು ಸಾಲುತ್ತಿರಲಿಲ್ಲ. ಲಕ್ಷದವರೆಗೂ ಎಣಿಸಬೇಕಾಗುತ್ತಿತ್ತು ಅವನು ಮಾಡಿದ ಸತ್ಕರ್ಮಗಳನ್ನು. ಅವನು ಒಳ್ಳೆ ಸುದೈವಿ. ಅವನಿಗೆ ತಕ್ಕಂತೆ ಸದ್ಗುಣ ಪೂರ್ಣನಾದ ಮಗನೇ ಅವನಿಗೆ ಜನಿಸಿದ್ದ. 'ಪೂರ್ಣಭದ್ರ' ಎಂಬ ಹೆಸರು ಸಾರ್ಥಕವಾಗಿತ್ತು ಆ ಸತ್ಪುತ್ರನಿಗೆ. ಪೂಣಭದ್ರ ದೊಡ್ಡವನಾದ. ವಯಸ್ಸಿಗೆ ತಕ್ಕಂತೆ ಧರ್ಮಬುದ್ಧಿ ದಾನ ಪ್ರವೃತ್ತಿ, ಪರೋಪಕಾರ, ಮುಂತಾದ ಗುಣಗಳು ಅವನಲ್ಲಿ ಬೆಳೆದು, ಅವನನ್ನು ಗುರು ಹಿರಿಯರ ಪೂರ್ಣಾನುಗ್ರಹಕ್ಕೆ

ಪಾತ್ರನ್ನಾಗಿ ಮಾಡಿದವು. ಮಗನ ಸದಾಚಾರ, ಸದ್ಬುದ್ಧಿ, ಸತ್ಕರ್ಮ ಪ್ರವೃತ್ತಿಗಳನ್ನು ಕಂಡು ಸಂತಸತುಂಬಿದ ರತ್ನ ಭದ್ರ. ಮಗನಿಗೆ ಎಲ್ಲ ಮನೆಯ ಭಾರ ಒಪ್ಪಿಸಿದ. ಶಿವಾರಾಧನೆಗೆ ತನ್ನನ್ನು ತಾನೇ ಅರ್ಪಿಸಿದ. ಕೊನೆಗೆ ಒಂದು ದಿನ ಶಿವನ ಪಾದ ಸೇರಿದ.

ತಂದೆಯ ಮರಣದ ನಂತರ ಪೂರ್ಣಭದ್ರನು ತನ್ನ ತಂದೆಯ ಯಕ್ಷಾನುರೂಪವಾದ ಐಶ್ವರ್ಯಕ್ಕೆಲ್ಲ ಒಬ್ಬನೇ ಅಧಿಕಾರಿ ಆದ. ವೈಭವ ಭೋಗ, ವಿಲಾಸ ಸಾಮಗ್ರಿಗಳೆಲ್ಲವೂ ಅವನ ಅಧೀನದಲ್ಲಿ. ತನ್ನ ಯಕ್ಷ ಜಾತಿಗೆ ಅನುಗುಣವಾಗಿ ಅವನು ಎಲ್ಲ ಸುಖೋಪಭೋಗಗಳನ್ನು ಸೂರೆಗೊಂಡ. ಐಶ್ವರ್ಯವು ಒದಗಿಸಬಹುದಾದ ಆನಂದ ಅನುಭೂತಿಗಳನ್ನೆಲ್ಲ ಪಡೆದ. ಆದರೂ ಅವನ ಮನಸ್ಸಿಗೆ ಒಂದೇ ಕೊರಗು.

ಈ ಪೂರ್ಣಭದ್ರ ಯಕ್ಷನಿಗೆ ಸಂತಾನವೇ ಆಗಲಿಲ್ಲ. ಅರಮನೆಯಂತೆ ವಿಶಾಲವಾದ ಅವನ ಸಿರಿಮನೆಯು ಬಗೆಬಗೆಯ ಅಲಂಕಾರ, ಸುಖೋಪಭೋಗ ಸಾಮಗ್ರಿ, ಹಾಗೂ ವಿವಿಧ ವಿಲಾಸ ವಸ್ತುಗಳಿಂದ ತುಂಬಿತುಳುಕುತ್ತಿದ್ದಿತು. ಆದರೆ ಮಕ್ಕಳಾಟದ ಅಕ್ಕರತೆ ಇಲ್ಲದೆ ಆ ಮನೆಯು ಶೂನ್ಯವಾಗಿದ್ದಿತು. ಸಂತತಿ ಇಲ್ಲದಿರುವಿಕೆಯಿಂದ ಉಂಟಾದ ದುಃಖತತಿಯು ದಳ್ಳುರಿಯಂತೆ ಆ ಯಕ್ಷ ದಂಪತಿಗಳ ಅಂತರಂಗವನ್ನು ಸುಡುತ್ತಲಿತ್ತು. ಅವನ ಕೈ ಹಿಡಿದ ಸೌಭಾಗ್ಯವತಿಯು 'ಕನಕ ಕುಂಡಲಾ'. ಅವಳು ಒಳ್ಳೆ ಪತಿ ನಿಷ್ಠೆ. ಸದಾಚಾರ ಸಂಪನ್ನೆ. ಸಂತಾನವಿಲ್ಲದ್ದರಿಂದ ಅವಳ ಪತಿ ಪಡುವ ಸಂತಾಪವನ್ನು ನೋಡಿ ಅವವು ಮನಸ್ಸು ವಿಹ್ವಲ ಗೊಂಡಿತು. ಅವಳು ಒಂದು ದಿನ ಪುತ್ರ ವೈಧುರ್ಯದ ವ್ಯಥೆಯಿಂದ ದೀನವಾಗಿ ವಿಲಪಿಸುತ್ತ ಇರುವ ತನ್ನ ಪತಿಗೆ ಸಮಾಧಾನದ ಮಾತು ಹೇಳುತ್ತ ನುಡಿದಳು:- ''ನಾಥ, ನೀವು ತಿಳಿದವರು. ಇಷ್ಟೇಕೆ ದುಃಖ ಪಡುವಿರಿ? ನಮ್ಮ ಪೂರ್ವಜನ್ಮದ ಪ್ರಾರಬ್ಧದಿಂದ ನನಗೆ ಈಗ ಬಂಜೆತನ ಬಂದಿದೆ. ಶಿವನ ಹೊರತು ಈ ಪ್ರಾರಬ್ಧವನ್ನು ಬದಲಿಸುವುದು ಯಾರಿಗೂ ಶಕ್ಯವಿಲ್ಲ. ಆದುದರಿಂದ ನೀವು ಆ ಶಂಕರನಿಗೇ ಶರಣು ಹೋಗಿರಿ. ಹಿಂದೆ ಸಂತಾನಹೀನನಾದ ಮಹರ್ಷಿ ಶಿಲಾದನು ಆ ಕೈಲಾಸಪತಿಯ ಕೃಪೆಯಿಂದ ರತ್ನದಂತ ಪುತ್ರನನ್ನು ಪಡೆದನು. ಶ್ವೇತಕೇತುವು ಆ ತ್ರ್ಯಂಬಕನ ಕರುಣೆಯ ಆಲಂಬನದಿಂದ ಕಾಲಪಾಶದಿಂದ ಮುಕ್ತನಾದ ಅಂಧಕಾಸುರನು ಆ ಪರಮೇಶ್ವರನ ಪ್ರಸಾದದಿಂದ ಗಣಗಳಿಗೆಲ್ಲ ಅಧಿಕಾರಿಯಾಗಿ 'ಭೃಂಗೀ' ಎಂಬ ಹೆಸರಿನ ಶಿವಪಾರ್ಷನಾದ. ಆದುದರಿಂದ ಪೂಜ್ಯರೇ, ನೀವು ನಮಗೆ ಶ್ರೇಷ್ಠ ಸಂತಾನವು ಆಗಬೇಕಿದ್ದರೆ ಕರುಣಾ ವರುಣಾಲಯನಾದ ಆ ಗಿರಿಜಾ ರಮಣನಿಗೆ ಶರಣು ಹೋಗಿರಿ. ತನ್ನ ಧರ್ಮಪತ್ನಿಯಾದ ಕರ್ಣಕುಂಡಲೆಯ ಈ ಸಲಹೆ ಸೂಕ್ತವೂ, ಸಕಾಲಿಕವೂ ಎನಿಸಿತು ಆ ಪೂರ್ಣಚಂದ್ರನಿಗೆ. ಯಕ್ಷಜಾತಿಯವನಾದ ಆ ಪೂರ್ಣಭದ್ರನು ಹುಟ್ಟಿನಿಂದಲೇ ಸಂಗೀತ ರಸಿಕ. ಅವನೊಬ್ಬ ಸ್ವರಬ್ರಹ್ಮ. ರಾಗ ರಸಾವತಾರಲ್ಲಿ ಅವನೊಬ್ಬ ಗಾನಗಂಧರ್ವ. ಸಂಗೀತ ಮುಖಾಂತರವೇ ಅವನು ಆರಾಧಿಸಿದ ಆ ಗಂಗಾಧರನನ್ನು. ಸಂಗೀತಾ ಸೇವಾ ಪ್ರಿಯನಾದ ಶಂಕರನು ಅವನ ಗಾಯನ ಸೇವೆಯಿಂದಲೇ ಸಂತುಷ್ಟನಾದ. ಅವನಿಗೆ ಇಷ್ಟ ವರವನ್ನು ಕರುಣಿಸಿದ. ಪರಮೇಶ್ವರನ ಪ್ರಸಾದದಿಂದ ಆ ಪೂರ್ಣಭದ್ರನಿಗೆ ಕರ್ಣಕುಂಡಲೆಯ ಹೊಟ್ಟೆಯಿಂದ ಓರ್ವ ಶ್ರೇಷ್ಠ ಪುತ್ರ ಜನಿಸಿದ. 'ಹರಿಕೇಶ' ಎಂದು ಅವನಿಗೆ ಹೆಸರು ಇಡಲಾಯಿತು. ಶುಕ್ಲಪಕ್ಷದ ಚಂದ್ರನಂತೆ ಬೆಳೆದ ಬಾಲ ಹರಿಕೇಶ. ಆ ಮಗು ಎಂಟು ವರ್ಷದವನಾದಾಗ ಪಾರ್ವತೀ ಪತಿಯಲ್ಲಿ ಪೂರ್ಣಭಕ್ತಿ ಉಂಟಾಯಿತು. ಅವನು ಆಟ ಪಾಠಗಳಲ್ಲಿ ಮೃತ್ತಿಕೆಯಿಂದ ಶಿವನ ಮೂರ್ತಿಮಾಡಿ, ದೂರ್ವಾದಳಗಳನ್ನು ಏರಿಸಿ

ಭಕ್ತಿಯಿಂದ ಪೂಜಿಸುತ್ತಿದ್ದ ಆ ಭವಾನಿ ಪತಿಯನ್ನು. ತನ್ನ ಗೆಳೆಯರನ್ನು ಕೂಡ ಶಿವನ ನಾಮಗಳಾದ ಚಂದ್ರಶೇಖರ, ಮೃತ್ಯುಂಜಯ, ತ್ರಿಲೋಚನ, ಶ್ರೀಕಂಠ, ನೀಲಕಂಠ, ಶಿವ, ಶಂಕರ ಮುಂತಾದ ಹೆಸರುಗಳಿಂದಲೇ ಕರೆಯುತ್ತಿದ್ದ. ಅವನು ಶಿವಾಲಯಕ್ಕೆ ಹೋಗಿ ಶಿವಲಿಂಗದ ಎದುರು ಧ್ಯಾನ ಮಾಡುತ್ತ ಕುಳಿತುಬಿಡುತ್ತಿದ್ದ. ಲೌಕಿಕ ವಿಷಯಗಳಲ್ಲಿ ಒಮ್ಮೆಯೂ ಮನಸ್ಸು ಹಾಕಲಿಲ್ಲ. ಊಟ, ಉಡಿಗೆ, ತಿಂಡಿ, ತಿನಿಸು, ಭಕ್ಷ್ಯ, ಭೋಜ್ಯ, ಮಾತು ನಗೆ, ಹರಟೆ, ಒಂದೂ ಅವನಿಗೆ ಬೇಕಾಗುತ್ತಿರಲಿಲ್ಲ. ಅವನು ಮಾಡುವುದು ಶಿವಧ್ಯಾನ. ಅವನು ನೋಡುವುದು ಶಿವನ ವಿಗ್ರಹ. ಅವನ ನಾಲಿಗೆ ನುಡಿಯುವುದು ಶಿವಪಂಚಾಕ್ಷರಿಯ ದಿವ್ಯ ಮಂತ್ರ. ಅವನ ಮೂಗು ಮೂಸುವುದು ಶಿವಾರ್ಪಿತ ಪುಷ್ಪಗಳ ಸುಗಂಧ, ಅವನ ಕೈಗಳು ಶಿವಸೇವೆಗೆ ಮೀಸಲು. ಮಗನ ಈ ಚರ್ಯೆ ತಂದೆಗೆ ಬೇಸರ ತಂದಿತು. ಒಂದು ದಿನ ತಂದೆ ಪೂರ್ಣಭದ್ರನು. ಮಗ ಹರಿಕೇಶನನ್ನು ಕರೆದು ಹೇಳಿದ.

**ಪೂರ್ಣಭದ್ರ:-** ವತ್ಸ, ನನಗೆ ವಯಸ್ಸಾಯಿತು. ಮನೆಯ ವ್ಯವಹಾರವನ್ನೆಲ್ಲ ನೀನೇ ನೋಡಬೇಕು ಇನ್ನು ಮೇಲೆ ಈ ಅಪಾರ ಐಶ್ವರ್ಯವೆಲ್ಲ ನಿನ್ನದು. ಎಲ್ಲ ತರಹದ ವಿದ್ಯೆಗಳನ್ನು ಅಧ್ಯಯನ ಮಾಡು. ಎಲ್ಲ ತರಹದ ಸುಖೋಪಭೋಗಗಳನ್ನು ಅನುಭವಿಸು ಮುಪ್ಪಿನ ಕಾಲದಲ್ಲಿ ಇದ್ದೇ ಇದೆಯಲ್ಲ ಈ ಶಿವಸೇವೆ. ಮುಪ್ಪು ಬಂದಾಗ ಮಾತ್ರ ಮರೆಯಬಾರದು ಮಾನವ ಮಹೇಶನನ್ನು.

ಎಷ್ಟು ಮಾತ್ರಕ್ಕೂ ಹಿಡಿಸಲಿಲ್ಲ ಹರಿಕೇಶನಿಗೆ ತಂದೆಯ ಈ ವಿಷಯ ಭೋಗದ ಉಪದೇಶ. ಆದರೂ ಕೇಳದೆ ಆ ತಂದೆಯು ಕೊರೆಯುತ್ತಲೇ ಇದ್ದ. ಇವನ ಕಿವಿಯನ್ನು ತಂದೆಯ ಅದೇ ಅದೇ ಉಪದೇಶ ಆ ವೃತ್ತಿ ಅನುವೃತ್ತಿಗಳಿಂದ ರೋಸಿಹೋಯಿತು ಆ ಮಗನ ಮನಸ್ಸು. ಕೊನೆಗೆ ತಂದೆ ಹೇಳಿದ ಮಾತನ್ನು ನಡೆಸಲೂ ಮನಸ್ಸಿಲ್ಲ ಬಿಟ್ಟರೆ ಪಿತೃದ್ರೋಹ ಏನು ಮಾಡಬೇಕು ತಿಳಿಯದೆ, ಮನೆಬಿಟ್ಟು ಹೊರಗೆ ಹೋಗಿಬಿಟ್ಟ. ಮನಸ್ಸಿನಲ್ಲಿ ಶಿವನನ್ನೇ ಏಕಾಗ್ರ ಮನಸ್ಸಿನಿಂದ ಧ್ಯಾನಮಾಡುತ್ತ ಅವನ ಕಾಶೀಪುರಿಗೆ ಬಂದ ಆನಂದವನದಲ್ಲಿ ನಿಂತು ಘೋರ ತಪವನ್ನು ಆಚರಿಸಿದ. ಒಂದು ದಿನ ಶಿವಪಾರ್ವತಿಯರು ಸ್ವೈರ ಸಂಚಾರಗೈಯುತ್ತ ಆನಂದ ವನಕ್ಕೆ ಬಂದರು. ಆಗ ಅಲ್ಲಿಯೇ ಆನಂದವನದ ನಟ್ಟ ನಡುವೆ ಅಶೋಕ ವೃಕ್ಷದ ಕೆಳಗೆ ಬೊಡ್ಡೆಯ ಬಳಿಯಲ್ಲಿಯೇ ಕುಳಿತು ತಪಸ್ಸು ಮಾಡುತ್ತಲಿದ್ದ ಹರಿಕೇಶನನ್ನು ಕರುಣಾಪೂರ್ಣ ದೃಷ್ಟಿಯಿಂದ ನೋಡಿದ ಆ ಪರಮೇಶ್ವರ. ಅವ್ಯಗ್ರ ಮನಸ್ಸಿನಿಂದ ಏಕಾಗ್ರಚಿತ್ತದಿಂದ ಕಣ್ಣುಮುಚ್ಚಿಕುಳಿತುಕೊಂಡು ಅವನು ಜಪಿಸುತ್ತಿದ್ದ ಶಿವಪಂಚಾಕ್ಷರಿಯನ್ನು ಆಚೀಚೆ ಕದಲದೆ ಹೊಟ್ಟೆಗೆ ಏನನ್ನೂ ತಿನ್ನದೆ, ನೀರನ್ನೂ ಕುಡಿಯದೇ, ಬಾಹ್ಯ ವಿಷಯಗಳನ್ನು ಧ್ಯಾನಿಸದೇ ಶಿವೈಕ್ಯ ಧ್ಯಾನಲೀನನಾದ. ಅವನ ತಪಸ್ಸಿನ ಚರ್ಯೆಯನ್ನು ಕಂಡು ಪಾರ್ವತಿಯ ಮನಸ್ಸು ಕರಗಿತು. ಅವಳು ಪ್ರೀತಿಯಿಂದ ಪತಿಗೆ ತಪಃಕೃಶನಾದ ಈ ಭವಭಕ್ತನಿಗೆ ನೀವು ವರವಿತ್ತು ಕರುಣಿಸಿರಿ. ಪರಮೇಶ್ವರನ ಪರಮ ಪ್ರಸಾದಕ್ಕೆ ಇವನು ನಿಜವಾಗಿಯೂ ಅರ್ಹ. ದ್ರಾಕ್ಷಾಯಣಿಯ ಸ್ನೇಹಪೂರ್ಣ ಸಲಹೆಯನ್ನು ಮನ್ನಿಸಿ ಭಗವಾನ್ ಶಂಕರನು ಪ್ರೀತಿಯನ್ನು ಸುರಿಸುತ್ತ ಅಸಂಪ್ರಜ್ಞಾತ ಸಮಾಧಿಯಲ್ಲಿ ಕಣ್ಣು ಮುಚ್ಚಿ ಕುಳಿತುಕೊಂಡ ಹರಿಕೇಶನ ಬಳಿಗೆ ಬಂದ ಅವನ ತಲೆಯ ಮೇಲೆ ತನ್ನ ವರದಹಸ್ತವನ್ನು ಇಟ್ಟ. ಹರನ ಕರ ಸ್ಪರ್ಶಮಾತ್ರದಿಂದ ಹರಿಕೇಶನ ಅಂಗಾಂಗಗಳೆಲ್ಲವೂ ರೋಮಾಂಚಿತ ಕಂಠ ಗದ್ಗದಿತ. ನೇತ್ರ ವಿಸ್ಫಾರತ,

ಕೈಕುಡ್ಮಲಿತ. ವಾಮು ಮುಖರಿತ:- "ಜಯಶಂಭೋ, ಜಯಜಗದೀಶ್ವರ, ಜಯ ಗಿರಿಜಾಪತೇ, ನಮಃಶಂಕರ, ನಮಸ್ತೇ ನಮಸ್ತೇ ಶೂಲಪಾಣೇ ದೇವಾಧಿದೇವಾ, ನಿನ್ನ ಕರಕಮಲ ಸ್ಪರ್ಶದಿಂದ ನಾನು ಧನ್ಯ ಧನ್ಯ.

**ಮಹಾದೇವ:-** ಯಕ್ಷ, ನಿನ್ನ ಭಕ್ತಿಯಿಂದ ಹಾಗೂ ನೀನು ಮಾಡಿ ಸತತ ಧ್ಯಾನ ಸಮಾಧಿಯಿಂದ ನಾನು ಪ್ರೀತ. ನೀನು ಇನ್ನು ಮೇಲೆ ಈ ಕಾಶೀ ಕ್ಷೇತ್ರಕ್ಕೆ ದಂಡ ನಾಯಕನಾಗು. ದಂಡಪಾಣಿಯೆಂದೇ ನೀನು ಪ್ರಥಿತನಾಗುವಿ. ನೀನು ನನ್ನ ಅಪ್ಪಣೆಯಿಂದ ಎಲ್ಲ ಗಣಗಳನ್ನೂ ಶಾಸನ ಮಾಡು. ಸಂಭ್ರಮ ಮತ್ತು ಉದ್ಭ್ರಮ ಎಂಬ ಇಬ್ಬರು ಗಣಾಧೀಶರು ನಿನ್ನ ಅನುಯಾಯಿಗಳಾಗಿ ನೀನು ಕೈಕೊಂಡ ಕಾರ್ಯಗಳಲ್ಲಿ ಸಹಕರಿಸುವರು. ನೀನು ಇನ್ನು ಮುಂದೆ ಕಾಶಿಯಲ್ಲಿ ವಾಸಿಸುವ ಎಲ್ಲ ಪ್ರಾಣಿಗಳಿಗೂ ಅನ್ನದಾತಾ, ಪ್ರಾಣದಾತಾ, ಜ್ಞಾನದಾತಾ ಆಗು. ನಾನು ತಾರಕಮಂತ್ರವನ್ನು ಉಪದೇಶಿಸಿದ ಬಳಿಕ ನನ್ನ ಅಪ್ಪಣೆಯಿಂದ ಮೋಕ್ಷಪ್ರದಾತನೂ ಆಗು. ಪಾಪಿಮಾನವರನ್ನು ಬಗೆಬಗೆಯ ವಿಘ್ನಗಳನ್ನು ಒಡ್ಡಿ ಪೀಡೆ ಕೊಟ್ಟು ಕಾಶೀನಗರ ಬಿಟ್ಟು ಹೊರಗೆ ಹಾಕು. ದೂರದಲ್ಲಿರುವ ಹರಭಕ್ತರನ್ನು ಇಲ್ಲಿಗೆ ತಂದು ಅವರಿಗೆ ಕಾಶೀವಾಸದಿಂದ ಹಾಗೂ ಶಿವಾರಾಧನೆಯಿಂದ ಮೋಕ್ಷ ದೊರಕುವಂತೆ ಮಾಡು. ಯಕ್ಷರಾಜ, ಇಂದಿನಿಂದ ಈ ಕಾಶೀಪಟ್ಟಣವನ್ನೆಲ್ಲ ನಿನಗೇ ಒಪ್ಪಿಸಿದ್ದೇನೆ. ಕಾಶಿಗೆ ಬಂದ ನನ್ನ ಭಕ್ತರೆಲ್ಲರೂ ಮೊದಲು ನಿನ್ನ ಪೂಜೆ ಮಾಡಿ ಅನಂತರ ನನ್ನ ಕಡೆಗೆ ಬರಲಿ. ಯಾತ್ರಿಕರು ಜ್ಞಾನೋದ ತೀರ್ಥದಲ್ಲಿ ಸ್ನಾನ ಮಾಡಿ ತರ್ಪಣ, ದೇವ ಪೂಜಾದಿಗಳನ್ನು ಮಾಡಿಕೊಂಡು ದಂಡಪಾಣಿ ಮಹೇಶನನ್ನು ವಿಧಿಪೂರ್ವಕವಾಗಿ ಅರ್ಚಿಸಿದರೆ ಮಾತ್ರ ನನ್ನ ದಯಾಪಾಲಕರು ಆಗುತ್ತಾರೆ. ಈ ದಕ್ಷಿಣ ದಿಕ್ಕಿನಲ್ಲಿ ಮಾತ್ರ ನನ್ನ ಕಣ್ಣೆದುರು ನೀನು ನಿಂತುಕೊಂಡು ಪಾಪಿಗಳಿಗೆ ದಂಡನವನ್ನು ಭಕ್ತರಿಗೆ ಅಭಯವನ್ನು ನೀನು ಪ್ರಧಾನ ಮಾಡು.

**ಸ್ಕಂದ:-** ಅಗಸ್ತ್ಯಮುನಿಯೇ, ಅಂದಕ ರಿಪುವಾದ ಶಿವನು ದಂಡಪಾಣಿ ಯಕ್ಷನಿಗೆ ಹೀಗೆ ವರವನ್ನು ಕರುಣಿಸಿ ತನ್ನ ವಾಹನವಾದ ನಂದಿಯನ್ನು ಏರಿಕೊಂಡು ಆನಂದಕಾನನದ ಒಳಗಡೆ ನಡೆದನು. ಅಂದಿನಿಂದ ಯಕ್ಷರಾಜ ಹರಿಕೇಶನು ಕಾಶಿಯ ದಂಡನಾಯಕ ಪದದಲ್ಲಿ ಅಭಿಷಿಕ್ತನಾಗಿ ಈ ಪುಣ್ಯಕ್ಷೇತ್ರದ ಶಾಸನವನ್ನು ಮಾಡುತ್ತಲಿದ್ದಾನೆ. ಮಹಾಮುನಿಯೆ, ನಾನು ಕಂಡ ಕಾಶಿಯಲ್ಲಿ ಎಷ್ಟೋ ವರುಷಗಳವರೆಗೆ ಇದ್ದರೂ ಈ ಹರಿಕೇಶನನ್ನು ಒಮ್ಮೆಯೂ ಆದರಿಸಲಿಲ್ಲ, ಪೂಜಿಸಲಿಲ್ಲ. ಅದಕ್ಕಾಗಿಯೇ ಏನೋ ನನಗೆ ಈಗ ಕಾಶಿವಾಸದ ಸದವಕಾಶವು ತಪ್ಪಿ ಹೋಗಿದೆ. ನೀನು ಜಿತೇಂದ್ರಿಯನಾಗಿದ್ದರೂ ಕಾಶೀ ಕ್ಷೇತ್ರದಿಂದ ಹೊರಬೀಳಬೇಕಾಗಿ ಬಂದಿತು. ಇದಕ್ಕೆ ಆ ಹರಿಕೇಶನ ಅಪ್ರಸನ್ನತೆಯೇ ಕಾರಣವಾಗಿರಬಹುದು. ಆದುದರಿಂದ ನಿರ್ವಿಘ್ನವಾಗಿ ಕಾಶೀಯಾತ್ರೆಯನ್ನು ಮಾಡಬಯಸುವ ಯಾತ್ರಿಕರು ದಂಡಪಾಣಿ ಹರಿಕೇಶನನ್ನು ಮೊದಲು ಭಕ್ತಿಯಿಂದ ಪೂಜಿಸಬೇಕು.

## ಜ್ಞಾನವಾಪಿಯ ಮಹತ್ವ ಕಲಾವತಿಯ ದೃಷ್ಟಾಂತ

**ಅಗಸ್ತ್ಯ:-** ಅಗ್ನಿನಂದನ, ಜ್ಞಾನೋದತೀರ್ಥ ಅಥವಾ ಜ್ಞಾನವಾಪಿಯ ಮಹಾತ್ಮ್ಯವನ್ನು ನಮಗೆ ನಿರೂಪಿಸು.

**ಸ್ಕಂದ:-** ಈ ಕಾಶೀ ತೀರ್ಥವು ಅಜ್ಞಾನದ ನಿದ್ರೆಯಲ್ಲಿ ಮಲಗಿದವರಿಗೆ ಜ್ಞಾನವನ್ನು ಸಂಸಾರದಲ್ಲಿ ಬದ್ಧರಾದವರಿಗೆ ಮೋಕ್ಷವನ್ನು ಕೊಡುವ ಮುಕ್ತಿಕ್ಷೇತ್ರ. ಸಂಸಾರ ಸಾಗರದ

ಸುಳಿಯಲ್ಲಿ ಸಿಕ್ಕು ದಿಕ್ಕುಗಾಣದವರಿಗೆ ಒಂದು ನೌಕೆ. ಎಂಬತ್ತು ನಾಕು ಲಕ್ಷ ಯೋನಿಗಳಲ್ಲಿ ತಿರುಗುವವರಿಗೆ ಒಂದು ವಿಶ್ರಾಂತಿ ಸ್ಥಾನ. ಅನೇಕ ಜನ್ಮಗಳಿಂದ ಹುರಿಗೊಂಡ ಕರ್ಮ ಸೂತ್ರಗಳನ್ನು ಕತ್ತರಿಸುವ ಕತ್ತರಿ. ಇಷ್ಟು ಮಾತ್ರವಲ್ಲದೆ, ಈ ಕ್ಷೇತ್ರವು ಸಚ್ಚಿದಾನಂದ ಘನನಾದ ಪರಮೇಶ್ವರನ ದಿವ್ಯಧಾಮ.

ಒಂದು ಸಲ ಈಶಾನಕೋಣದ ಅಧಿಪತಿಯಾದ ಈಶಾನ ಎಂಬ ರುದ್ರನು ಸ್ವೇಚ್ಛೆಯಿಂದ ಸಂಚಾರಗೈಯುತ್ತ ಇಲ್ಲಿಗೆ ಬಂದನು. ವಿಶ್ವೇಶ್ವರಲಿಂಗದ ದಕ್ಷಿಣಕ್ಕೆ ತುಸು ಅಂತರದಲ್ಲಿ ತನ್ನ ತ್ರಿಶೂಲದಿಂದ ಒಂದು ತೀರ್ಥಕುಂಡವನ್ನು ತೋಡಿ ಅದರ ನೀರಿನಿಂದ ವಿಶ್ವನಾಥನಿಗೆ ಅಭಿಷೇಕ ಮಾಡಿಸಿದನು. ಈಶಾನರುದ್ರನ ಈ ಸಹಸ್ರಕುಂಭಾಭಿಷೇಕ ಪೂಜೆಯಿಂದ ಪ್ರಸನ್ನನಾದ ಶಿವ 'ಬೇಕಾದ ವರ ಬೇಡು' ಎಂದು ಹೇಳಿದ.

**ಈಶಾನ:-** ದೇವೇಶ, ನೀನು ನನ್ನ ಮೇಲೆ ಪ್ರಸನ್ನನಾದದ್ದು ನಿಜವಿದ್ದರೆ ಈ ತೀರ್ಥವು ನಿನ್ನ ಹೆಸರಿನಿಂದ ಶಿವತೀರ್ಥಎಂದು ಹೆಸರಾಗಲಿ.

**ವಿಶ್ವನಾಥ:-** ಮೂರು ಲೋಕಗಳಲ್ಲಿ ಇರುವ ಎಲ್ಲ ತೀರ್ಥಗಳಲ್ಲಿ ಈ ಶಿವತೀರ್ಥವು ಪರಮಶ್ರೇಷ್ಠವಾಗುವುದು. ಶಿವ ಎಂದರೆ ಜ್ಞಾನ. ಆ ದಿವ್ಯಜ್ಞಾನವು ತನ್ನ ಮಹಿಮೆಯಿಂದ ಈ ಕುಂಡದಲ್ಲಿ ದ್ರವೀಭೂತವಾಗಿ ಇಲ್ಲಿ ಪ್ರಕಟವಾಗಿದೆ ಆದ್ದರಿಂದ ಇದಕ್ಕೆ ಜ್ಞಾನೋದ ತೀರ್ಥ ಅಥವಾ ಜ್ಞಾನವಾಪಿ ಎಂಬ ಹೆಸರಿಂದ ಲೋಕದಲ್ಲಿ ಪ್ರಸಿದ್ಧಿಯಾಗಿದೆ. ಈ ಜ್ಞಾನ ವಾಪಿಯಲ್ಲಿ ಸೋಮವಾರ ಸ್ನಾನಮಾಡಿ ದೇವಋಷಿ, ಪಿತೃತರ್ಪಣ ಹಾಗೂ ದಾನ ಮಾಡಿದ ಮನುಷ್ಯನು ದಿವ್ಯಜ್ಞಾನವನ್ನು ಪಡೆಯುತ್ತಾನೆ. ಇದಕ್ಕೆ ತಾರಕತೀರ್ಥ, ಮೋಕ್ಷತೀರ್ಥ ಎಂದು ಕರೆಯುತ್ತಾರೆ. ಪೂರ್ವಕಾಲದಲ್ಲಿ ಕಾಶಿಯಲ್ಲಿ ಹರಿಸ್ವಾಮಿ ಎಂಬ ಬ್ರಾಹ್ಮಣನು ಇದ್ದ. ಅವನಿಗೆ ಒಂದು ಕನ್ಯೆ. ಮಹೀಮಂಡಲದಲ್ಲಿಯೇ ಅವಳು ಅನುಪಮ ಸುಂದರಿ. ಶೀಲಸದ್ಗುಣ ಗಳಿಂದ ಅವಳು ಸರ್ವಶ್ರೇಷ್ಠ. ಸದಾಚಾರ ಸಂಪನ್ನೆ. ಎಲ್ಲ ಕಲೆಗಳಲ್ಲಿಯೂ ನಿಪುಣೆ. ಪರಮಶಿವಭಕ್ತೆ. ಅವಳು ಈ ಜ್ಞಾನವಾಪಿಯಲ್ಲಿ ನಿತ್ಯವೂ ಸ್ನಾನಮಾಡಿ ವಿಶ್ವೇಶ್ವರನಿಗೆ ಪ್ರದಕ್ಷಿಣೆ ನಮಸ್ಕಾರ ಹಾಕಿ ಭಕ್ತಿಯಿಂದ ಶಿವನನ್ನು ಸೇವಿಸುತ್ತಿದ್ದಳು. ಅವಳು ಬಾಲ್ಯದಿಂದಲೂ ಶಿವಭಕ್ತೆ. ಒಂದು ದಿನ ಅವಳು ತನ್ನ ಮನೆಯ ಅಂಗಳದಲ್ಲಿ ಮಲಗಿಕೊಂಡಿದ್ದಳು. ಆ ಅಂಗಳಕ್ಕೆ ಮೇಲೆ ಆಚ್ಛಾದನೆ ಇಲ್ಲ. ಮುಗಿಲೇ ಅದಕ್ಕೆ ಮಾಳಿಗೆ. ಅದೇ ವೇಳೆಯಲ್ಲಿ ಆಕಾಶ ಮಾರ್ಗದಿಂದ ಓರ್ವ ವಿಧ್ಯಾಧರನು ಪ್ರಯಾಣ ಮಾಡುತ್ತಿದ್ದ. ಅವನ ಕಣ್ಣಿಗೆ ಬಯಲು ಅಂಗಳದಲ್ಲಿ ಮಲಗಿದ ಈ ಬಾಲೆ ಕಂಡಳು. ತ್ರಿಭುವನ ಸುಂದರಿಯಾದ ಆ ಮೋಹಿನಿಯ ಲಾವಣ್ಯ. ಅವಳ ರೂಪರಾಶಿಯನ್ನು ಕಂಡು ಮುಗ್ಧನಾದ ಗಗನಗಾಮಿಯಾದ ವಿಧ್ಯಾಧರ ಕೂಡಲೇ ಮಲಗಿ ನಿದ್ರಿಸುತ್ತಿದ್ದ ಆ ಕನ್ಯಾಮಣಿಯನ್ನು ಎತ್ತಿಕೊಂಡು ಆಗಸಮಾರ್ಗದಲ್ಲಿ ಭರದಿಂದ ನಡೆದ ಮಲಯಾ ಪರ್ವತದ ಕಡೆಗೆ. ಅದು ರಾತ್ರಿಯ ಸಮಯ ಎಲ್ಲೆಡೆಗೂ ಗಾಢಾಂಧಕಾರ ನೂರಾರು ಮಿಂಚು ಒಮ್ಮೆಲೇ ಮಿಂಚಿದಂತಾದವು. ಈ ಸರಿರಾತ್ರಿಯ ಕತ್ತಲೆಯ ಗರ್ಭವನ್ನು ಸೀಳಿಕೊಂಡು ವಿದ್ಯುನ್ಮಾಲಿ ಎಂಬ ರಕ್ಕಸ ಅಲ್ಲಿಗೆ ಐತಂದ. ಕನ್ಯೆಯನ್ನು ಕದ್ದುಕೊಂಡು ಓಡುತ್ತಲಿರುವ ವಿದ್ಯಾಧರನನ್ನು ತಡೆದು ನಿಲ್ಲಿಸಿದ. ಮೇಘಗಂಭೀರ ಧ್ವನಿಯಿಂದ ಗದರಿಸಿದ- "ವಿಧ್ಯಾಧರ ಕುಮಾರ, ಈ ಹೆಣ್ಣನ್ನು ಹಿಡಿದುಕೊಂಡು ಹೊರಟ ನೀನು ನನ್ನ ಕಣ್ಣಿಗೆ ಬಿದ್ದ ಮೇಲೆ ಪಾರಾಗಲಾರೆ.

ಇವಳನ್ನು ಬಿಡು. ಇಲ್ಲದಿದ್ದರೆ ನಿನ್ನ ತಲೆಯನ್ನು ಕೊಡು ಎಂದು ಹೇಳಿ ತನ್ನ ಕೈಯಲ್ಲಿಯ ತ್ರಿಶೂಲವನ್ನು ಬೀಸಿದ ಮಹಾಬಲಿಷ್ಠ. ಆ ವಿಧ್ಯಾಧರ ಕುಮಾರ ದೈತ್ಯನ ತ್ರಿಶೂಲದ ಏಟನ್ನು ತಪ್ಪಿಸಿಕೊಂಡ. ತನ್ನ ಪ್ರೇಯಸಿಯಾದ ಸುಶೀಲಾ ಎಂಬ ಆ ಕನ್ಯಾಮಣಿಯನ್ನು ಸಂತೈಸಿ, ಆ ರಾಕ್ಷಸನ ಜೊತೆಗೆ ಹೋರಾಡಲು ಅಣಿಯಾಗಿ ನಿಂತ. ವಿಧ್ಯಾಧರ ಕುಮಾರನ ಮಾದಕ ರೂಪ, ಮೋಹಕ ಮಾತುಗಳಿಂದ ಮರುಳಾಗಿದ್ದಳು ಆ ಹರಿಸ್ವಾಮಿ ಕುವರಿ. ವಿಕರಾಳ ರೂಪದ ವಿದ್ಯುನ್ಮಾಲಿಯನ್ನು ಕಂಡನಂತರವಂತೂ ಅವಳಿಗೆ ವಿದ್ಯಾಧರನಲ್ಲಿ ಪತಿಭಾವನೆ ಬೇರೂರಿಬಿಟ್ಟಿತು. ಈ ರಾಕ್ಷಸನ ಬಾಯಿಂದ ತನ್ನನ್ನು ಬದುಕಿಸ ಹೊರಟ ಆ ವಿದ್ಯಾಧರ ತರುಣನು ಆ ಕ್ಷಣದಲ್ಲಿ ಅವಳಿಗೆ ಪರಮದೇವತೆ ಎಂದೇ ತೋರಿತು. ಆ ದಾರುಣ ದೈತ್ಯನೊಡನೆ ತನ್ನ ಮನದನ್ನನನ್ನು ಅವಳು ಹೃದಯ ತುಂಬಿ ಬೀಳ್ಕೊಟ್ಟಳು. ಘನಘೋರವಾದ ಒಂದು ಸಂಗ್ರಾಮವೇ ನಡೆಯಿತು ವಿದ್ಯುದನ್ಮಾಲಿ ಹಾಗೂ ವಿದ್ಯಾಧರರಲ್ಲಿ. ಶೂರಾಗ್ರಣಿಯಾದ ವಿದ್ಯಾಧರ ತನ್ನ ವಜ್ರಸಮಾನವಾದ ಮುಷ್ಟಿಯನ್ನು ಬಿಗಿದು ಆ ದೈತ್ಯಾಧಮನ ನಡುನೆತ್ತಿಗೆ ಬಲವಾಗಿ ಕುಟ್ಟಿದ. ವಜ್ರನಿಷ್ಠುರವಾದ ಆ ತರುಣನ ಭೀಕರ ಮುಷ್ಟಿಪ್ರಹಾರದಿಂದ ರಾಕ್ಷಸ ನೆಲಕ್ಕೆ ಉರುಳಿದ ಆದರೆ ಸಾಯುವಾಗ ತನ್ನ ಕೈಯಲ್ಲಿಯ ಹದನವಾದ ತ್ರಿಶೂಲನವನ್ನು ಗುರಿಯಿಟ್ಟು ವಿದ್ಯಾಧರನ ಮೇಲೆ ತೂರಿದ. ಅದು ಆ ತರುಣ ವಿದ್ಯಾಧರನ ವಜ್ರದೇಹವನ್ನು ಕೊಚ್ಚಿಹಾಕಿತು. ಆದರಿಂದ ಅವನೂ ಆ ರಣರಂಗದಲ್ಲಿಯೇ ಪ್ರಾಣಬಿಟ್ಟ. ಆ ಸುಶೀಲೆಯು ಆ ವಿದ್ಯಾಧರ ಕುಮಾರನನ್ನೆ ತನ್ನ ಪತಿಯೆಂದು ವರಿಸಿಬಿಟ್ಟಿದ್ದಳು. ತನ್ನನ್ನು ರಕ್ಷಿಸಲಿಕ್ಕಾಗಿಯೇ ಅವನು ಪ್ರಾಣಾರ್ಪಣ ಮಾಡಿದ್ದರಿಂದ ಅವಳಿಗೆ ವಜ್ರಾಘಾತ ಆದಂತೆ ಎನಿಸಿತು. ಆ ವಿದ್ಯಾಧರನ ತ್ರಿಶೂಲದಿಂದ ಆ ಹತವಾದ ವಿದ್ಯಾಧರನ ದೇಹವನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡು ಅಗ್ನಿಪ್ರವೇಶ ಮಾಡಿದಳು. ವಿದ್ಯಾಧರ ಕುಮರನಾದರೋ ಮರಣಕಾಲದಲಿ ತನ್ನ ಪ್ರೇಯಸಿ ಸುಶೀಲೆಯನ್ನು ನೆನೆಯುತ್ತಲೆ ಪ್ರಾಣತ್ಯಾಗ ಮಾಡಿದ. ಅದೇ ವಾಸನೆಯಿಂದ ಅವನು ಮಲಯಕೇತುವಿನ ಮನೆಯಲ್ಲಿ ಹೊಸಹುಟ್ಟು ಪಡೆದ. ಪತಿಯ ದೇಹದೊಂದಿಗೆ ಸತಿಹೋದ ಸುಶೀಲೆಯು ಕರ್ನಾಟಕದೇಶದಲ್ಲಿ, ದಕ್ಷಿಣಭಾರತದಲ್ಲಿ ಮರಳಿ ಹುಟ್ಟಿದಳು. ಅವಳಿಗೆ ಕಲಾವತಿ ಎಂದು ಹೆಸರು ಈ ಹೊಸ ಹುಟ್ಟಿನಲ್ಲಿ. ದೈವಸಂಕಲ್ಪದಂತೆ ಕರ್ನಾಟಕದಲ್ಲಿ ಹುಟ್ಟಿದ ಈ ಕಲಾವತಿಯನ್ನು ಅವಳ ತಂದೆತಾಯಿಗಳು ಮಲಯಕೇತುವಿನ ಮಗನಾದ ಮಾಲ್ಯಕೇತುವಿಗೆ ಮದುವೆ ಮಾಡಿ ಕೊಟ್ಟರು. ಕಲಾವತಿಯು ಜನ್ಮಾಂತರ ಸಂಸ್ಕಾರದಿಂದ ಈ ಜನ್ಮದಲ್ಲಿಯೂ ಶಿವನಿಷ್ಠೆ. ಯಾವಾಗಲೂ ಶಿವಪೂಜಾಪರಾಯಣೆ, ರಾಜಕುಮಾರನನ್ನು ಕೈ ಹಿಡಿದ ಆ ಕಲಾವತಿ ಇಂದು ಸಕಲವಿಧ ದಿವ್ಯ ಭೋಗ ಹಾಗೂ ವೈಭವಗಳಿಗೆ ಏಕಮಾತ್ರ ಅಧಿಕಾರಿಣಿ. ಮೂವರು ಮಕ್ಕಳಿಗೆ ಅವಳು ಜನ್ಮ ಕೊಟ್ಟಳು.

ಒಂದು ದಿನ ಉತ್ತರಭಾರತದ ಓರ್ವ ಕುಶಲ ಚಿತ್ರಕಾರನು ಮಾಲ್ಯಕೇತುವಿನ ಆಸ್ಥಾನಕ್ಕೆ ಆಗಮಿಸಿದ. ಅವನು ಮಹಾರಾಜನಿಗೆ ಒಂದು ವಿಚಿತ್ರವಾದ ಚಿತ್ರಪಟವನ್ನು ತೋರಿಸಿದ. ಅತ್ಯದ್ಭುತವಾಗಿದ್ದಿತು ಆ ಚಿತ್ರಪಟ. ಕಾಶೀಕ್ಷೇತ್ರದ ಸಮಗ್ರ ದೃಶ್ಯವು ಸಾಗ್ರಸಮಗ್ರವಾಗಿ ಬಿಡಿಸಲ್ಪಟ್ಟಿದ್ದಿತು ಆ ಚಿತ್ರಪಟದಲ್ಲಿ. ಅಲ್ಲಿಯ ಮುಖ್ಯಸ್ಥಾನದಲ್ಲಿ ಕೈಲಾಸಪತಿಯಾದ ವಿಶ್ವನಾಥ. ಲೋಲಾರ್ಕಕುಂಡದ ಸಮೀಪದಲ್ಲಿಯೇ ಅಸಿ ಗಂಗಾ ನದಿಗಳ ಸಂಗಮ. ಉತ್ತರದಲ್ಲಿ ಕೇಶವನ ಚರಣದ ಬದಿಯಲ್ಲಿಯೇ ವರಣಾ ನದಿ, ಇತ್ತ ಉತ್ತರವಾಹಿನಿ

ಗಂಗೆ, ಮಣಿಕರ್ಣಿಕಾ ತೀರ್ಥ, ಕಾಲಭೈರವ ತೀರ್ಥ, ಕಪಾಲಮೋಚನ ತೀರ್ಥ, ಓಂಕಾರೇಶ್ವರ, ಮಚ್ಛೋದರಿ ತೀರ್ಥ, ಕಾಮೇಶ್ವರ, ಸ್ಕಂದೇಶ್ವರ, ವಿನಾಯಕೇಶ್ವರ, ಇನ್ನೊಂದು ಕಡೆ ಕಾಶೀದೇವಿ, ಅಲ್ಲಿಯೇ ಹತ್ತಿರದಲ್ಲಿ ಪಾರ್ವತೀಶ್ವರ ಮಂದಿರ, ಯಜ್ಞೇಶ್ವರ, ಪುರಾಮೇಶ್ವರ, ಧರ್ಮೇಶ್ವರ, ಸಾರಸ್ವತಲಿಂಗ, ಸಪ್ತತೀರ್ಥೇಶ್ವರಲಿಂಗ, ಶೈಲೇಶ್ವರಲಿಂಗ, ಮನೋಹರಲಿಂಗ, ಮಂತ್ರೇಶ್ವರ, ತ್ರಿಪುರೇಶ್ವರ, ಬಾಣೇಶ್ವರ, ವೈರೋಚನೇಶ್ವರಲಿಂಗ, ಮುಂತಾದ ಅನೇಕ ಈಶ್ವರ ದೇವಸ್ಥಾನಗಳು.

ಇತ್ತ ಬಲಿಕೇಶವ, ಪ್ರಹ್ಲಾದಕೇಶವ, ನಾರದಕೇಶವ, ಆದಿಕೇಶವ, ಆದಿತ್ಯ ಕೇಶವ, ಭೀಷ್ಮಕೇಶವ, ಗದಾಧರ, ದತ್ತಾತ್ರೇಯೇಶ್ವರ, ಭೃಗುಕೇಶವ, ವಾಮನಕೇಶವ, ನರನಾರಾಯಣ, ಯಜ್ಞವರಾಹಕೇಶವ, ವಿದಾರನಾರಸಿಂಹ, ಗೋಪಿಗೋವಿಂದ, ಲಕ್ಷ್ಮೀ ನರಸಿಂಹ, ಶಂಖಮಾಧವ, ಬಿಂದೂಮಾಧವ, ಮೊದಲಾದ ಅನೇಕ ವೈಷ್ಣವ ದೇವಸ್ಥಾನ ಗಳೂ ಕಂಗೊಳಿಸುತ್ತಲಿದ್ದವು. ಲಕ್ಷ್ಮೀಪತಿಯಾದ ಈ ಬಿಂದು ಮಾಧವನನ್ನು ಶ್ರದ್ಧೆಯಿಂದ ಸೇವಿಸಿದವರಿಗೆ ಪರಮ ಪುಣ್ಯ ಫಲ. ಅತ್ತ ಪಂಚಗಂಗಾ, ಮಂಗಳಗೌರಿ, ಗಭಸ್ತೀಶ್ವರ, ಧೂತಪಾಪೇಶ್ವರ, ನಿರ್ವಾಣನೃಸಿಂಹ, ಪ್ರಿಯವ್ರತೇಶ್ವರ, ಕಾಲರಾಜ ಮಂದಿರ, ಗಂಗಾನದೀ, ರತ್ನೇಶ್ವರ, ಕೃತ್ತಿವಾಸೇಶ್ವರ, ಪಿತೃಲಿಂಗ, ಚಿತ್ರಘಂಟೇಶ್ವರೀ, ಘಂಟಾಕರ್ಣ ಸರೋವರ, ಲಲಿತಾಗೌರೀ, ವಿಶಾಲಾಕ್ಷೀ, ಆಶಾವಿನಾಯಕ, ಧರ್ಮಕೂಪ, ವಿಶ್ವಭುಜಾ ದೇವಿ, ವಂದಿದೇವಿ, ದಶಾಶ್ವಮೇಧ ತೀರ್ಥ, ಪ್ರಯಾಗತೀರ್ಥ, ಅಶೋಕ ತೀರ್ಥ, ಗಂಗಾಕೇಶವ, ಮೋಕ್ಷದ್ವಾರತೀರ್ಥ, ಸ್ವರ್ಗದ್ವಾರತೀರ್ಥ, ಹೀಗೆ ಇಡೀ ಕಾಶೀಪಟ್ಟಣ ಸರ್ವ ದೇವತಾಮಯ ಎಲ್ಲ ಶಿವವಿಷ್ಣು ದೇವಸ್ಥಾನಗಳೂ ತೀರ್ಥಕ್ಷೇತ್ರಗಳೂ ವಿರಳ ವಿರಳವಾಗಿ ಬಿಡಿಸಲ್ಪಟ್ಟಿದ್ದವು. ಪರಮ ಪಾವನವಾದ ಆ ಕಾಶೀಕ್ಷೇತ್ರದ ಪುಣ್ಯಸ್ಥಾನಗಳನ್ನೆಲ್ಲ ಬಿಡಿಬಿಡಿಯಾಗಿ ಬಿಚ್ಚಿ ಬರೆದು ಸುಂದರವಾಗಿ ರೇಖಿಸಿದ ಈ ಅದ್ಭುತವಾದ ಚಿತ್ರಪಟವನ್ನು ನೋಡಿ, ಜನ್ಮಾಂತರದ ಸಂಸ್ಕಾರದಿಂದ ಪ್ರಭಾವಿತಳಾದ ಮಹಾರಾಣಿ ಕಲಾವತಿಯ ದೇಹವೆಲ್ಲವೂ ರೋಮಾಂಚಿತವಾಯಿತು. ಅವಳು ಮತ್ತೆ ಮತ್ತೆ ನಿರೀಕ್ಷಿಸಿ ನೋಡಿದಳು. ಚಿತ್ರಪಟದಲ್ಲಿ ಸ್ವರ್ಗದ್ವಾರದ ಎದುರು ಮಣಿಕರ್ಣಿಕಾ ತೀರ್ಥದ ಮೇಲೆ ಅವಳ ಕಣ್ಣು ನೆಟ್ಟಿತು. ಸಂಸಾರರೂಪ ಸರ್ಪದಿಂದ ಕಚ್ಚಲ್ಪಟ್ಟ ಜೀವಿಗಳ ಬಲಗಿವಿಯಲ್ಲಿ ಪರಮೇಶ್ವರನು ತಾರಕಮಂತ್ರವನ್ನು ಉಪದೇಶಿಸುತ್ತಿದ್ದಾನೆ. ಆ ವಿಶ್ವನಾಥನ ದಕ್ಷಿಣ ಭಾಗದಲ್ಲಿ ಅಷ್ಟಮೂರ್ತಿಯಾದ ಮಹಾದೇವರ ಜಲಮಯ ಮೂರ್ತಿಯಿಂದ ತುಂಬಿದ ಜ್ಞಾನವಾಪೀ ತೀರ್ಥವನ್ನು ಅವಳು ನಿರೀಕ್ಷಿಸಿದಳು. ಕೂಡಲೇ ಅವಳ ಮೈತುಂಬ ಪುಲಕೋದ್ಗಮ. ಮೈಯಲ್ಲಿ ನಡುಕ. ಹಣೆಯ ತುಂಬ ಬೆವರು. ಎರಡು ಕಂಗಳಲ್ಲಿ ಆನಂದ ಬಾಷ್ಪ. ಅವಳ ದೇಹವು ಆನಂದ ಮಂಥರವಾಗಿ ಜಡವಾಗತೊಡಗಿತು. ಅವಳ ಕೈಯಲ್ಲಿದ್ದ ಚಿತ್ರಪಟವು ಕೆಳಗೆ ಬಿದ್ದಿತು. ಅವಳಿಗೆ ಮೂರ್ಛೆ ಬಂದಿತು. ದಾಸಿಯರೆಲ್ಲರೂ ಗಾಬರಿಯಾದರು. ಯಾವ ಶೈತ್ಯೋಪಚಾರವೂ ಫಲಕಾರಿಯಾಗಲಿಲ್ಲ. ಆಗ ಬುದ್ಧಿಶರೀರಿಣಿ ಎಂಬ ಅವಳ ಒಬ್ಬ ಗೆಳತಿಯು ನಗುತ್ತ ನುಡಿದಳು.- ''ಮಹಾರಾಣಿಯ ಈ ಸಂತಾಪವನ್ನು ಕಡಿಮೆ ಮಾಡಿ ಈ ಮೂರ್ಛೆಯಿಂದ ಅವಳನ್ನು ಮೇಲೆತರುವ ಉಪಾಯವನ್ನು ನಾನು ಬಲ್ಲೆ. ನೀವೆಲ್ಲರೂ ಸರಿದು ನಿಲ್ಲಿರಿ'' ಎಂದು ಹೇಳಿ ಬುದ್ಧಿಶರೀಣಿಯು ಕೆಳಗೆ ಬಿದ್ದ ಆ ಚಿತ್ರಪಟವನ್ನು ಮತ್ತೆ ಮಹಾರಾಣಿಯ ಮುಂದೆ ಇಟ್ಟು ಹೇಳಿದಳು- ''ಮಹಾರಾಣೀ, ಈ ಚಿತ್ರಪಟವನ್ನು ನೋಡಿರಿ.

ಇದರಲ್ಲಿ ಎಷ್ಟು ಸುಂದರವಾಗಿ ಕಾಣುತ್ತಿದ್ದಾನೆ. ನಿನ್ನ ಇಷ್ಟದೇವನಾದ ಚಂದ್ರದೇವ''. ಹೀಗೆ ನುಡಿದು ಆ ಚಿತ್ರಪಟವನ್ನು ಮಹಾರಾಣಿಯ ಕೈಗೆ ಸ್ಪರ್ಶಮಾಡಿಸಿದಳು. ಕೂಡಲೇ ಕಲಾವತಿಯು ಮೂರ್ಛೆಯಿಂದ ಎದ್ದು ಕುಳಿತಳು. ಕಣ್ಣು ತೆರೆದು ಮತ್ತೊಮ್ಮೆ ಆ ಜೀವಂತಚಿತ್ರ ಪಟವನ್ನೂ ಸೂಕ್ಷ್ಮವಾಗಿ ನೋಡಿದಳು. ಅಲ್ಲಿ ಚತುರತೆಯಿಂದ ಚಿತ್ರಿತವಾದ ಜ್ಞಾನವಾಪಿ ಚಿತ್ರವನ್ನು ಮತ್ತೆ ಮತ್ತೆ ಕಣ್ಣಿನಿಂದ ನೋಡಿ ಕೈಯಿಂದ ಸ್ಪರ್ಶ ಮಾಡಿದಳು. ಆದರಿಂದ ಅವಳ ಮನಸ್ಸಿನಲ್ಲಿ ಜನ್ಮಾಂತರದ ನೆನಪೆಲ್ಲ ನುಗ್ಗಿ ಬಂದಿತು. ಆಗ ಅವಳು ಪ್ರಸನ್ನ ಮನಸ್ಸಿನಿಂದ ಆ ಎಲ್ಲ ದಾಸಿಯರಿಗೆ ತನ್ನ ಜನ್ಮಾಂತರದ ಕತೆ ಹೇಳಿದಳು.

**ಕಲಾವತಿ:-** ಜನ್ಮಾಂತರದಲ್ಲಿ ನಾನು ಓರ್ವ ಬ್ರಾಹ್ಮಣ ಕನ್ಯೆ. ಕಾಶೀಕ್ಷೇತ್ರದ ವಿಶ್ವನಾಥ ಮಂದಿರದ ಸಮೀಪದ ಜ್ಞಾನವಾಪಿ ತೀರ್ಥದ ದಂಡೆಯ ಮೇಲೆಯೇ ಆಟವಾಡುತ್ತಿದ್ದೆ. ಆಗ ನನ್ನ ತಂದೆಯ ಹೆಸರು ಹರಿಸ್ವಾಮಿ. ತಾಯಿ ಪ್ರಿಯಂವದೆ. 'ಸುಶೀಲಾ' ಎಂದು ಆಗ ನನ್ನ ಹೆಸರು. ಈ ಜ್ಞಾನವಾಪಿಯನ್ನು ಕಂಡಕೂಡಲೇ ನನಗೆ ಕಳೆದ ಜನ್ಮದ ನೆನಪು ಎಲ್ಲವೂ ಮರುಕಳಿಸಿ ಬಂದಿದೆ. ಕಲಾವತಿಯ ಈ ಮಾತುಗಳನ್ನು ಕೇಳಿ ಬುದ್ಧಿಶರೀರಿಣಿ ಹಾಗೂ ಉಳಿದೆಲ್ಲ ದಾಸಿಯರಿಗೆ ಆಶ್ಚರ್ಯವೇ ಆಶ್ಚರ್ಯ. ಅವರು ಹರ್ಷಪುಲಕಿತರಾಗಿ ನುಡಿದರು-'' ಏನು ಈ ಕಾಶೀಕ್ಷೇತ್ರದ ಮಹಿಮೆ? ಈ ಜ್ಞಾನವಾಪೀ ತೀರ್ಥದ ಪ್ರಭಾವವು ಎಷ್ಟು ಅದ್ಭುತ? ಈ ತೀರ್ಥದ ಚಿತ್ರದರ್ಶನದಿಂದಲೇ ನಿನಗೆ ಜನ್ಮಾಂತರದ ಜ್ಞಾನ ಉದಯವಾಯಿತಲ್ಲವೆ! ಪ್ರತ್ಯಕ್ಷ ಈ ಜ್ಞಾನವಾಪಿಯ ದರ್ಶನದಿಂದ ಎಂಥ ಜ್ಞಾನೋದಯವಾಗಬೇಡ! ಜನ್ಮಾಂತರದಲ್ಲಿ ಇಂಥ ಪುಣ್ಯತೀರ್ಥದಲ್ಲಿ ಮಿಂದು ವಿಶ್ವೇಶ್ವರನ ದರ್ಶನದಿಂದ ಕೃತಾರ್ಥಳಾದ ಮಹಾರಾಣಿಗೆ ನಮ್ಮ ನಮಸ್ಕಾರ. ಮಹಾರಾಣೀ ದಯವಿಟ್ಟು ನಮಗೂ ಆ ಜ್ಞಾನವಾಪಿಯ ದರ್ಶನ ಮಾಡಿಸುವಿಯಾ?''

ಸಖಿ ಹಾಗೂ ಸಹಚರಿಯರ ಬಿನ್ನಹದಂತೆ ಮಹಾರಾಣಿಯು ಏಕಾಂತದಲ್ಲಿ ಪರ್ಯಂಕದಲ್ಲಿ ಪವಡಿಸಿದ ತನ್ನ ಪ್ರಾಣನಾಥನ ಪಾದಸೇವೆ ಮಾಡಿ ಅವನನ್ನು ಪ್ರಸನ್ನೀಕರಿಸಿಕೊಂಡು ಪ್ರೀತಿಯಿಂದ ನುಡಿದಳು.

**ಕಲಾವತಿ:-** ಆರ್ಯಪುತ್ರ, ನಿಮ್ಮಂಥ ಪತಿಯನ್ನು ಪಡೆದು ನನ್ನ ಜನ್ಮ ಧನ್ಯ. ನನ್ನ ಮನೋರಥಗಳೆಲ್ಲವೂ ಪೂರ್ಣ. ಇನ್ನು ನನ್ನ ಒಂದೇ ಒಂದು ಆಶೆ ಮಾತ್ರ ಅಪೂರ್ಣವಾಗಿ ಉಳಿದಿದೆ. ಅದಕ್ಕಾಗಿ ಈ ನನ್ನ ಪ್ರಾರ್ಥನೆ.

**ಮಾಲ್ಯಕೇತು:-** ಮಹಾರಾಣಿ, ನಿನ್ನ ಯಾವ ಅಪೇಕ್ಷೆಯನ್ನು ನಾನು ಪೂರ್ಣ ಮಾಡಿಲ್ಲ? ನಿನ್ನ ಇಷ್ಟ ನನ್ನ ಪ್ರೇಷ್ಟ. ನಿನ್ನ ಅಪೇಕ್ಷೆಯೇ ನನ್ನ ಅಪೇಕ್ಷೆ. ಅದನ್ನು ಹೇಳಲು ಇಷ್ಟೇಕೆ ಪೀಠಿಕೆ? ಬೇಗ ಹೇಳು ತಕ್ಷಣದಲ್ಲಿಯೇ ಪೂರೈಸಿಬಿಡುವೆ.

**ಕಲಾವತಿ:-** ನಾಥ! ನನಗೆ ಕಾಶೀಯಾತ್ರೆ ಮಾಡಬೇಕು ಎಂಬ ಬಯಕೆಯಾಗಿದೆ, ದಯವಿಟ್ಟು ಅಪ್ಪಣೆಕೊಡಬೇಕು ಮತ್ತು ಸಖಿಯರೊಂದಿಗೆ ನನ್ನನ್ನು ಕಾಶಿಗೆಮುಟ್ಟಿಸಬೇಕು.

**ಮಾಲ್ಯಕೇತು:-** ಪ್ರಿಯೇ, ನೀನು ಕಾಶಿಗೆ ಹೋದ ಬಳಿಕ ನಾನು ಒಬ್ಬನೇ ಇಲ್ಲಿ ಮನೆಯಲ್ಲಿ ಇರುವುದು ಅಶಕ್ಯ. ಒಂದು ಕ್ಷಣವೂ ನಾನು ನಿನ್ನನ್ನು ಬಿಟ್ಟಿರಲಾರೆ. ಆದ್ದರಿಂದ ನಾನೂ ಕಾಶೀಕ್ಷೇತ್ರಕ್ಕೆ ಬರುತ್ತೇನೆ. ಆ ಗಂಗಾತೀರದಲ್ಲಿ ಇದ್ದು ಜ್ಞಾನವಾಪಿಯಲ್ಲಿ ಸ್ನಾನ ಮಾಡಿ ವಿಶ್ವನಾಥನನ್ನು ಸೇವೆಗೈಯ್ಯುತ್ತ ನಮ್ಮ ಶೇಷಾಯುಷ್ಯವನ್ನು ಕಾಶೀಕ್ಷೇತ್ರದಲ್ಲಿಯೇ

ಕಳೆಯೋಣ. ಹೀಗೆ ಹೇಳಿ ಮಾಲ್ಯಕೇತು ಮಹಾರಾಜನು ತನ್ನ ಮೆಚ್ಚಿನ ಮಡದಿಯಾದ ಕಲಾವತಿಯನ್ನು ಸಂತೋಷಪಡಿಸಿದ ಮತ್ತು ತನ್ನ ರಾಜಧಾನಿಯ ಪುರಪ್ರಮುಖರನ್ನು ಮಂತ್ರಿಸೇನಾಪತಿಗಳನ್ನು ಕರೆಸಿ, ತನ್ನ ಮಗನಿಗೆ ಪಟ್ಟಾಭಿಷೇಕ ಮಾಡಿ ಎಲ್ಲ ರಾಜ್ಯಭಾರ ಒಪ್ಪಿಸಿ ತನ್ನ ಪ್ರೀತಿಯ ಪತ್ನಿ ಪರಿವಾರದೊಂದಿಗೆ ಒಡಗೂಡಿ ತಮಗೆ ಬೇಕಾದಷ್ಟು, ಧನ ಧಾನ್ಯ ನಗನಾಣ್ಯ ಮುತ್ತು ರತ್ನ, ಬೆಳ್ಳಿಬಂಗಾರ, ಮುಂತಾದವುಗಳನ್ನು ತೆಗೆದುಕೊಂಡು ಕಾಶೀಪುರಿಗೆ ಪ್ರಸ್ಥಾನ ಹೊರಟ. ರಾಜಪರಿವಾರವೆಲ್ಲವೂ ಆಗಮಿಸಿತು ಆ ಮುಕ್ತಿಕ್ಷೇತ್ರಕ್ಕೆ. ಪರಮಪುಣ್ಯಕರವಾದ ಆ ವಿಶ್ವನಾಥನಗರಿಯ ದರ್ಶನದಿಂದ ತಾನು ಕೃತರ್ಥಾನೆಂದು ಬಗೆದ ಆ ಮಾಲ್ಯಕೇತು ಮಹಾರಾಜ. ಪೂರ್ವಜನ್ಮ ಸಂಸ್ಕಾರ ಬಲದಿಂದ ಮಹಾರಾಣಿ ಕಲಾವತಿಯು ಆ ಪುಣ್ಯಪುರಿಯ ಹಾದಿಬೀದಿಗಳನ್ನೆಲ್ಲ ಗುರುತಿಸಿದಳು. ಯಾರನ್ನೂ ಕೇಳದೇ ನದಿ, ತೀರ, ತೀರ್ಥ, ದೇವಾಲಯ, ಮುಂತಾದಗಳನ್ನೆಲ್ಲ ಚೆನ್ನಾಗಿ ಗುರುತಿಸಿ ಸ್ನಾನಮಾಡಿ ಪ್ರದಕ್ಷಿಣೆ ನಮಸ್ಕಾರ ಹಾಕಿ, ಪೂಜೆ ಮಾಡಿ ಬಂದು, ಮಣಿಕರ್ಣಿಕಾ ತೀರ್ಥಗಳಲ್ಲಿ ರಾಜದಂಪತಿ ಗಳಿಬ್ಬರೂ ಮಿಂದು, ವಿಶ್ವನಾಥನ ಪೂಜೆಗೈದು ಬಗೆಬಗೆಯ ದಾನಧರ್ಮಗಳನ್ನು ನೀಡಿದರು. ವಿಶ್ವನಾಥನ ಪೂಜೆಯ ನಂತರ ಮುಕ್ತಿಮಂಟಪದಲ್ಲಿ ಪ್ರವೇಶ ಮಾಡಿದರು. ಅಲ್ಲಿ ಧರ್ಮಕಥಾವನ್ನು ಕೇಳಿ ಧನಧಾನ್ಯವನ್ನು ನೀಡಿ ಸಾಯಂಕಾಲ ಮಹಾಪೂಜೆ ಮಾಡಿ ರಾತ್ರಿ ಜಾಗರಣೆ ಮಾಡಿದರು. ಅನಂತರ ಮರುದಿನ ಬೆಳಗ್ಗೆ ಪ್ರಾತಃಕಾಲದಲ್ಲಿ ಎದ್ದು ರಾಣಿಯು ತೋರಿದ ಮಾರ್ಗದಿಂದ ಮಹಾರಾಜನು ಜ್ಞಾನವಾಪಿಗೆ ಹೋದನು. ಕಲಾವತಿಯೊಂದಿಗೆ ಸ್ನಾನ, ಪಿಂಡದಾನ, ದೇವತಾಪೂಜೆ, ಇತ್ಯಾದಿಗಳನ್ನು ಮಾಡಿ ಯೋಗ್ಯಬ್ರಾಹ್ಮಣರಿಗೆ ಬೆಳ್ಳಿ ಬಂಗಾರ ದಾನ ನೀಡಿದನು. ದೀನ ದುಃಖಿತರಿಗೂ ಕುರುಡ, ಕುಂಟರಿಗೂ ದರಿದ್ರ ಅನಾಥರಿಗೂ ಧಾರಾಳವಾಗಿ ದಾನ ನೀಡಿ ಸಂತೋಷಪಡಿಸಿ, ಭೂರಿ ಭೋಜನ ಮಾಡಿಸಿ ರಾಜದಂಪತಿಗಳು ಕೊನೆಗೆ ತಾವು ಪಾರಣೆ ಮಾಡಿದರು. ಅನಂತರ ಮಹಾರಾಜನು ಆ ಜ್ಞಾನವಾಪಿಗೆ ಒಳ್ಳೇ ಮಣಿಮಯ ಮೆಟ್ಟಲುಗಳನ್ನು ಮಾಡಿಸಿ ಜೀರ್ಣೋದ್ಧಾರ ಮಾಡಿಸಿದ. ಹೀಗೆ ಮಾಲ್ಯಕೇತು ಮಹಾರಾಜನು ಪಟ್ಟಮಹಿಷಿ ಕಲಾವತಿಯೊಂದಿಗೆ ಜ್ಞಾನವಾಪಿಯಲ್ಲಿ ಸ್ನಾನಮಾಡಿ ವಿಶ್ವನಾಥನನ್ನು ಪೂಜಿಸುತ್ತ ತನ್ನ ಶೇಷಾಯುಷ್ಯವನ್ನೆಲ್ಲ ಕಾಶಿಯಲ್ಲೇ ಕಳೆದನು.

ಒಂದು ದಿನ ಆ ಇಬ್ಬರೂ ದಂಪತಿಗಳು ಜ್ಞಾನವಾಪಿಯಲ್ಲಿ ಸ್ನಾನಮಾಡಿ ಕುಳಿತಿದ್ದರು. ಅಷ್ಟರಲ್ಲಿ ಓರ್ವ ಜಟಾಧಾರಿ ಬಂದು ಅವರ ಕೈಯಲ್ಲಿ ವಿಭೂತಿಯನ್ನು ಕೊಟ್ಟು ಹೇಳಿದ- ''ನಿಮ್ಮಿಬ್ಬರಿಗೂ ಈ ಕ್ಷಣದಲ್ಲಿಯೇ ತಾರಕ ಮಂತ್ರದ ಉಪದೇಶವು ದೊರೆಯಲಿರುವುದು. ಬಂದು ಹೀಗೆ ಆ ತಪಸ್ವಿಯು ನುಡಿಯುವಷ್ಟರಲ್ಲಿ ಆಕಾಶದಿಂದ ತೇಜಸ್ವಿಯಾದ ವಿಮಾನ ಆಗಮಿಸಿತು. ಅದರಿಂದ ಎಲ್ಲ ಜನರೂ ನೋಡು ನೋಡುತ್ತಿರುವಂತೆಯೇ ಭಗವಾನ್ ಶಂಕರನು ಕೆಳಗೆ ಇಳಿದು. ಜ್ಞಾನವಾಪಿಯ ತಟಾಕದಲ್ಲಿ ಶುದ್ಧದೇಹ ಹಾಗೂ ನಿಷ್ಕಲ್ಮಷ ಹೃದಯದಿಂದ ಕುಳಿತುಕೊಂಡ ರಾಜದಂಪತಿಗಳ ಕಿವಿಯಲ್ಲಿ ರಹಸ್ಯವಾಗಿ ತಾರಕ ಮಂತ್ರವನ್ನು ಉಪದೇಶ ಮಾಡಿದ. ಪರಶಿವನಿಂದ ಉಪದಿಷ್ಟರಾದ ಆ ರಾಜದಂಪತಿಗಳಿಬ್ಬರೂ ಮಹಾದೇವರ ಅಪ್ಪಣೆಯಂತೆ ಆ ದಿವ್ಯವಿಮಾನದಲ್ಲಿ ಕುಳಿತು, ಆಕಾಶಮಾರ್ಗದಲ್ಲಿ ಮುನ್ನಡೆದು ದೇವೇಂದ್ರನ ಸ್ವರ್ಗಲೋಕವನ್ನು ಕುರಿತು ಪ್ರಯಾಣ ಮಾಡಿದರು.

## ಸದಾಚಾರ ಮತ್ತು ಅದರ ಮಹಿಮೆ

**ಅಗಸ್ತ್ಯ:-** ಶಿವಕುಮಾರ, ಕಾಶೀ ಎಂಬ ಅವಿಮುಕ್ತ ಕ್ಷೇತ್ರವು ಮುಕ್ತಿಗೆ ಕಾರಣ. ಅದು ಎಲ್ಲ ಕ್ಷೇತ್ರಗಳಲ್ಲಿ ಸರ್ವಶ್ರೇಷ್ಠ. ಗಂಗಾ, ವಿಶ್ವನಾಥ ಹಾಗೂ ಕಾಶೀಕ್ಷೇತ್ರ ಇವು ಮೂರು ಕೂಡಿ ಭಕ್ತರಿಗೆ ಮುಕ್ತಿಯನ್ನು ಸುಲಭವಾಗಿ ದೊರಕಿಸಿಕೊಡುತ್ತವೆ. ಆದರೆ ಈ ಕಾಶೀವಾಸವು ಮಾನವರಿಗೆ ಪ್ರಾಪ್ತವಾಗಬೇಕಾದರೆ ಯಾವ ಯಾವ ಧರ್ಮಗಳ ಆಚರಣೆ ಮಾಡಬೇಕು. ಸದಾಚಾರವಿಲ್ಲದೇ ಸದ್ಗತಿಯಿಲ್ಲ ಎಂದು ನಾನು ನಂಬಿದ್ದೇನೆ.

**ಆಚಾರಃ ಪರಮೋ ಧರ್ಮಃ ಆಚಾರಃ ಪರಮಂ ತಪಃ ।**
**ಆಚಾರಾತ್ ವರ್ಧತೇ ಹ್ಯಾಯುರಾಚಾರಾತ್ ಪಾಪಸಂಕ್ಷಯಃ ॥**

ಎಲ್ಲ ಧರ್ಮಗಳಲ್ಲಿ ಶ್ರೇಷ್ಠ ಧರ್ಮ ಎಂದರೆ ಸದಾಚಾರ. ಒಳ್ಳೇ ಆಚರಣೆಯಿಂದ ಮನುಷ್ಯನ ಆಯುಷ್ಯವು ಬೆಳೆಯುತ್ತವೆ. ಪಾಪಗಳೆಲ್ಲ ಅಳಿಯುವುದು ಸದಾಚಾರದಿಂದಲೇ. ಆದ್ದರಿಂದ ತಾವು ಸದಾಚಾರದ ಬಗ್ಗೆ ನಮಗೆ ಸಂಕ್ಷಿಪ್ತವಾಗಿ ತಿಳುವಳಿಕೆಯನ್ನು ನೀಡಿರಿ.

**ಸ್ಕಂದ:-** ತಮ್ಮ ತಮ್ಮ ವರ್ಣ ಆಶ್ರಮಗಳಿಗೆ ಉಚಿತವಾದ ಕರ್ಮವನ್ನು ಶ್ರುತಿ, ಸ್ಮೃತಿಗಳಲ್ಲಿ ಹೇಳಿದಂತೆ ಆಚರಿಸುವುದೇ ಸದಾಚಾರ ಎನಿಸುತ್ತದೆ. ಇಂಥ ಸ್ವಧರ್ಮವನ್ನು ಎಲ್ಲರೂ ಆಲಸ್ಯವನ್ನು ಬಿಟ್ಟು ಪಾಲನೆ ಮಾಡಲೇಬೇಕು. ದುರಾಚಾರಿ ಮನುಷ್ಯನು ಈ ಸಂಸಾರದಲ್ಲಿ ನಿಂದನೀಯನಾಗುವನು. ಸದಾಚಾರಿಯಾದ ಮನುಷ್ಯನು ಯಮನಿಯಮ ಗಳನ್ನು ಮುಖ್ಯವಾಗಿ ಪಾಲಿಸಬೇಕು. ಸತ್ಯ, ಕ್ಷಮೆ, ಸರಳತೆ, ಧ್ಯಾನ, ದಯೆ, ಅಹಿಂಸೆ, ಇಂದ್ರಿಯನಿಗ್ರಹ, ಪ್ರಸನ್ನತೆ, ಮಧುರತೆ, ಮೃದುತ್ವ, ಇವು ಹತ್ತು ಯಮಗಳೆಂದು ಕರೆಯಲ್ಪಟ್ಟಿವೆ. ಇದರಂತೆ ಸ್ನಾನ, ತಪಸ್ಸು, ದಾನ, ಮೌನ, ಯಜ್ಞ, ಸ್ವಾಧ್ಯಾಯ, ವ್ರತ, ಉಪವಾಸ, ಕಾಮನಿಗ್ರಹ, ಶೌಚ ಇವು ಹತ್ತು ನಿಯಮ ಎನಿಸುತ್ತವೆ. ಮತ್ತು ಕಾಮ, ಕ್ರೋಧ, ಮದ, ಮೋಹ, ಮಾತ್ಸರ್ಯ, ಲೋಭ ಇವು ಆರು ಅಂತಃಶತ್ರುಗಳು- ಈ ಷಡ್ವೈರಿಗಳನ್ನು ಗೆದ್ದು ಆ ಯಮನಿಯಮಗಳನ್ನು ಸಾಧಿಸಿ ಇನ್ನೊಬ್ಬರಿಗೆ ಕಷ್ಟಕೊಡದೇ ಕಾಶೀಕ್ಷೇತ್ರಕ್ಕೆ ಬಂದು, ಇಲ್ಲಿಯ ಗಂಗೆಯಲ್ಲಿ ಮಿಂದು, ವಿಶ್ವನಾಥನನ್ನು ಪೂಜಿಸಿದವರು ಶಿವಸಾನಿಧ್ಯವನ್ನು ಪಡೆಯುತ್ತಾರೆ. ಈ ಭೂಲೋಕದಲ್ಲಿ ಮನುಷ್ಯನು ಶಾಸ್ತ್ರೋಕ್ತವಾದ ಸದಾಚಾರವನ್ನು ಆಚರಿಸಿ ಬದುಕಿ ಇರುವವರೆಗೆ ಧರ್ಮಸಂಗ್ರಹವನ್ನು ಮಾಡಬೇಕು. ಪರಲೋಕದಲ್ಲಿ ಮನುಷ್ಯನಿಗೆ ಮಡದಿ, ಮಕ್ಕಳು, ಮಾತೆ, ಸೋದರ, ಬಂಧು, ಬಾಂಧವ್ಯ, ಮನೆ, ಐಶ್ವರ್ಯ, ಫಲ, ಸಾಮ್ರಾಜ್ಯ ಯಾವುದೂ ಸಹಾಯಕ್ಕೆ ಬರುವುದಿಲ್ಲ. ಧರ್ಮ ಒಂದೇ ಮನುಷ್ಯನಿಗೆ ಪರಲೋಕದಲ್ಲಿ ಸಹಾಯಕವಾಗಿ ಬರುವುದು. ಸದಾಚಾರವೇ ಈ ಧರ್ಮ ಸಾಧನೆಯ ಮುಖ್ಯ ಉಪಾಯ. ಪ್ರತಿದಿನವೂ ಮನುಷ್ಯನು ಪ್ರಾತಃ ಕಾಲದಲ್ಲಿ ಸ್ನಾನ ಮಾಡಿ ಸಂಧ್ಯಾಂಗವಾಗಿ ವ್ಯಾಹೃತಿ ಹಾಗೂ ಓಂಕಾರ ಸಹಿತವಾಗಿ ಹದಿನಾರು ಪ್ರಾಣಾಯಮಗಳನ್ನು ಮಾಡಬೇಕು. ಪ್ರಣವ, ಏಳು ವ್ಯಾಹೃತಿಗಳು ಮತ್ತು ತ್ರಿಪದಾಗಾಯತ್ರೀ ಎಲ್ಲ ಕೂಡಿ ಒಂದು ಪ್ರಾಣಾಯಾಮ ಮಂತ್ರ ಎನಿಸುತ್ತದೆ. ಓಂಕಾರವೇ ಪರಬ್ರಹ್ಮ. ಪ್ರಾಣಾಯಾಮವೇ ತಪಸ್ಸು. ಗಾಯಿತ್ರಿಯೇ ತಾರಕ ಮಂತ್ರ. ಪ್ರಾಣಾಯಾಮ ಪುರಸ್ಸರವಾಗಿ ಓಂಕಾರಯುಕ್ತವಾದ ಗಾಯಿತ್ರೀಮಂತ್ರವನ್ನು ಜಪಿಸಿದವನು ಬ್ರಹ್ಮವರ್ಚಸ್ವಿಯಾಗುತ್ತಾನೆ.

ಪ್ರತಿದಿನವೂ ಪ್ರಾತಃಕಾಲದಲ್ಲಿ ಎರಡುಗಳಿಗೆ ರಾತ್ರಿ ಇರುವಾಗಲೇ ಬ್ರಾಹ್ಮ ಮುಹೂರ್ತದಲ್ಲಿ ಏಳಬೇಕು. ಮಲಮೂತ್ರ ವಿಸರ್ಜನ ದಂತಧಾವನ ಸ್ನಾನಾದಿಗಳಿಂದ ದೇಹಶುದ್ಧಿ ಮಾಡಿಕೊಂಡು ಸಂಧ್ಯಾವಂದನೆಯನ್ನು ಮಾಡಬೇಕು. ಅನಂತರ ದೇವರ ಪೂಜೆಯನ್ನು ಮಾಡಿ ವೇದಶಾಸ್ತ್ರಗಳ ಪರಿಶೀಲನೆ ಹಾಗೂ ಪರಾಮರ್ಶೆ ಮಾಡಬೇಕು. ಬುದ್ಧಿವಂತ ಶಿಷ್ಯರಿಗೆ ಪಾಠ ಹೇಳಬೇಕು. ವೇದಶಾಸ್ತ್ರ ಪುರಾಣ ಗ್ರಂಥಗಳನ್ನು ಅನಂತರ ಮಧ್ಯಾಹ್ನದಲ್ಲಿ ಮತ್ತೆ ಸ್ನಾನಮಾಡಿ ದೇವರಪೂಜೆ ನೈವೇದ್ಯ ವೈಶ್ವದೇವ ಬಲಿಹರಣ, ಅತಿಥಿಪೂಜೆ, ಅತಿಥಿಭೋಜನಗಳನ್ನು ಮಾಡಿಸಬೇಕು. ದಾರಿಹೋಕ, ವಿದ್ಯಾರ್ಥಿ, ಸನ್ಯಾಸಿ, ಬ್ರಹ್ಮಚಾರಿ, ಗುರುಜನರನ್ನು ಪೋಷಣೆ ಮಾಡುವವ, ಕಡು ಬಡವ ಈ ಆರುಜನರು ಧರ್ಮಭಿಕ್ಷುಕರೆಂದು ಕರೆಯಲ್ಪಡುತ್ತಾರೆ. ದಾರಿಕಾರನಿಗೆ ಅತಿಥಿ ಎನ್ನಬೇಕು. ವೇದ ಪಾರಂಗತನಾದ ವಿದ್ವಾಂಸನಿಗೆ ಅನೂಚಾನ ಎಂದು ಕರೆಯುತ್ತಾರೆ. ಇವರಿಬ್ಬರನ್ನು ಗೃಹಸ್ಥಾಶ್ರಮಿಗಳು ಗೌರವಿಸಿ ಭೋಜನ ದಕ್ಷಿಣಾದಿಗಳಿಂದ ಸತ್ಕರಿಸಬೇಕು. ಸಾಯಂಕಾಲದಲ್ಲಿ ಸಂಧ್ಯಾವಂದನೆಗೈದು, ಬಂದ ಅತಿಥಿಗಳಿಗೆ ಅನ್ನನೀಡಿ, ರಾತ್ರಿಯ ಪ್ರಹರದ ನಂತರ ಶಯನ ಮಾಡಬೇಕು. ರಾತ್ರಿಯಲ್ಲಿ ಹೆಚ್ಚು ಊಟ ಮಾಡಬಾರದು.

## ಸಂಸ್ಕಾರಗಳ ಸಂಕ್ಷಿಪ್ತ ಪರಿಚಯ, ಬ್ರಹ್ಮಚರ್ಯಾಶ್ರಮದ ನಿಯಮಗಳು

**ಸ್ಕಂದ:-** ಕುಂಭೋದ್ಭವ ಮುನಿಯೇ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ವರ್ಣದವರು ಮೊದಲು ತಾಯಿತಂದೆ ಹೊಟ್ಟೆಯಿಂದ ಒಂದು ಜನ್ಮಪಡೆದು, ಅನಂತರ ಉಪನಯನ ಸಂಸ್ಕಾರದಿಂದ ಮತ್ತೊಂದು ಹೊಸಹುಟ್ಟು ಪಡೆಯುತ್ತಾರೆ. ಈ ಮೂರೂ ವರ್ಣದವರಿಗೂ ಜನನದಿಂದ ಮರಣದವರೆಗೆ ಎಲ್ಲ ಸಂಸ್ಕಾರಗಳು ವೇದಮಂತ್ರ ಗಳಿಂದಲೇ ಸಂಪನ್ನವಾಗುತ್ತವೆ. ಮೂಲಾ ಹಾಗೂ ಮಘಾ ನಕ್ಷತ್ರಗಳನ್ನು ಬಿಟ್ಟು ಋತುಕಾಲದಲ್ಲಿ ಗರ್ಭಾಧಾನ ಅನಂತರ ಉದರದಲ್ಲಿ ಗರ್ಭವು ಚಲಿಸಲು ಮೊದಲು ಮಾಡಿದಾಗ ಪುಂಸವನ, ಅನಂತರ ಆರು ಅಥವಾ ಎಂಟನೇ ತಿಂಗಳಲ್ಲಿ ಸ್ರೀಮಂತೋನ್ನಯನ, ಮಗು ಹುಟ್ಟಿದ ನಂತರ ಜಾತಕರ್ಮ, ಹನ್ನೊಂದನೇಯದಿನ ನಾಮಕರಣ, ನಾಕನೇ ತಿಂಗಳಲ್ಲಿ ಮಗುವಿನೊಂದಿಗೆ ತಾಯಿಮನೆಬಿಟ್ಟು ಹೊರಗೆ ದೇವರಿಗೆ ಹೋಗುವುದು. ಆರನೇ ತಿಂಗಳಲ್ಲಿ ಅನ್ನಪ್ರಾಶನ, ಒಂದು ವರ್ಷದಲ್ಲಿ ಚೌಲ (ಜಾವಳ) ಮುಂತಾದ ಸಂಸ್ಕಾರಗಳನ್ನು ತಮ್ಮ ದೇಶಾಚಾರಕ್ಕೆ ಅನುಸಾರವಾಗಿ ಮಾಡಬೇಕು. ಹೆಣ್ಣು ಮಕ್ಕಳಿಗೆ ಮಂತ್ರವಿಲ್ಲದೇ ಎಲ್ಲ ಸಂಸ್ಕಾರಗಳನ್ನು ಮಾಡಬೇಕು. ವಿವಾಹ ಸಂಸ್ಕಾರ ಮಾತ್ರ ಸ್ತ್ರೀಯರಿಗೆ ವೇದೋಕ್ತ ಮಂತ್ರಗಳಿಂದ ಮಾಡಬೇಕು. ಬ್ರಾಹ್ಮಣನಿಗೆ ಏಳು ಅಥವಾ ಎಂಟು ಕ್ಷತ್ರಿಯರಿಗೆ ಹನ್ನೊಂದು ಅಥವಾ ಹನ್ನೆರಡನೆಯ ವಯಸ್ಸಿನಲ್ಲಿ ಉಪನಯನ ಮಾಡಬೇಕು. ಗುರುಗಳು ಶಿಷ್ಯನ ಉಪನಯನ ಸಂಸ್ಕಾರ ಮಾಡಿ ಗಾಯತ್ರೀ ಮಂತ್ರ ಉಪದೇಶ ನೀಡಿ ವೇದಪಾಠವನ್ನು ಹೇಳಬೇಕು. ಶಿಷ್ಯರು ಶೌಚ, ಹಾಗೂ ಸದಾಚಾರಗಳನ್ನು ಪಾಲನೆ ಮಾಡಬೇಕು. ಪ್ರಾತಃಕಾಲದಲ್ಲಿ ಸ್ನಾನ, ಸಂಧ್ಯಾವಂದನೆ, ಗಾಯತ್ರೀಜಪ, ಸೂರ್ಯೋಪಸ್ಥಾನ, ದೇವಪೂಜೆ, ಅಗ್ನಿಹೋತ್ರ ಮುಂತಾದ ವಿಹಿತಕರ್ಮಗಳನ್ನೆಲ್ಲ ಮಾಡಿ ಉಳಿದ ವೇಳೆಯಲ್ಲಿ ವೇದಶಾಸ್ತ್ರಗಳನ್ನು ಅಧ್ಯಯನ ಮಾಡಬೇಕು. ಗುರುಹಿರಿಯರನ್ನು ಸೇವಿಸಬೇಕು. ಪಂಡಿತರನ್ನು ವಂದಿಸಬೇಕು.

**ಅಭಿವಾದನ ಶೀಲಸ್ಯ ವೃದ್ಧಸೇವಾರತಸ್ಯ ಚ ।**
**ಆಯುರ್ಯಶೋಬಲಂ ಬುದ್ಧಿಃ ವರ್ಧತೇಽಹರಹೋಽಧಿಕಂ ॥**

ಪೂಜ್ಯರಿಗೆ, ಹರಿಹರ, ಗುರುಗಳಿಗೆ ವಂದಿಸಿ, ಮುದುಕರ ಸೇವೆಯಲ್ಲಿ ಆಸಕ್ತರಾದ ಮನುಷ್ಯರ ಆಯುಷ್ಯವು, ಬುದ್ಧಿಯು ದಿನದಿನಕ್ಕೆ ಅಧಿಕಾಧಿಕವಾಗಿ ಬೆಳೆಯುತ್ತದೆ.

ಶಿಷ್ಯರು ಗುರುಗಳ ಆಜ್ಞೆಯನ್ನು ಪಾಲನೆ ಮಾಡಬೇಕು. ಭಿಕ್ಷೆಯಿಂದ ಉಪಜೀವಿಸ ಬೇಕು. ಯೋಗ್ಯರಾದ ಸಜ್ಜನರ ಮನೆಗೆ ಮಾತ್ರ ಹೋಗಿ ಭಿಕ್ಷೆಬೇಡಿ ತಂದು ಅದನ್ನು ಗುರುಗಳಿಗೆ ಒಪ್ಪಿಸಿ ಅವರ ಅಪ್ಪಣೆ ಪಡೆದು ತಾವು ತಿನ್ನಬೇಕು. ಭಿಕ್ಷೆಯನ್ನು ಬೇಡುವಾಗ 'ಭವತ್' ಶಬ್ದಗಳ ಪ್ರಯೋಗ ಮಾಡಿ 'ಭವತಿ ಭಿಕ್ಷಾಂ ದೇಹಿ', ಎಂದು ಬ್ರಾಹ್ಮಣ ಬಾಲಕರು, 'ಭಿಕ್ಷಾಂ ಭವತಿ ಮೇ ದೇಹಿ' ಎಂದು ಕ್ಷತ್ರಿಯರು, 'ಭಿಕ್ಷಾಂ ಮೇ ದೇಹಿ ಭವತಿ' ಎಂದು ವೈಶ್ಯಬಾಲಕರು, ಹೇಳಬೇಕು. ಬ್ರಹ್ಮಚಾರಿಗಳು ಶ್ರಾದ್ಧ ಅಥವಾ ಅಪತ್ಕಾಲದ ಹೊರತು ಒಂದೇ ವ್ಯಕ್ತಿಯ ಅನ್ನವನ್ನು ಪ್ರತಿನಿತ್ಯ ಭೋಜನ ಮಾಡಬಾರದು. ಅತೀಭೋಜನವನ್ನು ಮಾಡಬಾರದು. ಬ್ರಾಹ್ಮಣರು ಹದಿನಾರು ವರ್ಷ, ಕ್ಷತ್ರಿಯರು ಇಪ್ಪತ್ತೆರಡು ವರ್ಷ, ವೈಶ್ಯರು ಇಪ್ಪತ್ತನಾಲ್ಕು ವರ್ಷಗಳ ಒಳಗಾಗಿ ಉಪನಯನಯವನ್ನು ಮಾಡಿಕೊಳ್ಳಬೇಕು. ಇದ್ಕಕೂ ಹೆಚ್ಚು ವಯಸ್ಸಾದರೆ ಇವರಿಗೆ ಉಪನಯನದ ಅಧಿಕಾರವೇ ಹುಟ್ಟುವುದಿಲ್ಲ. ಮೇಲೆ ಹೇಳಿದ ನಿರ್ದಿಷ್ಟ ವರ್ಷಗಳವರೆಗೆ ಉಫನಯನ ಮಾಡಿಕೊಳ್ಳದ ದ್ವಿಜರು ಧರ್ಮ ಭ್ರಷ್ಟರಾಗುತ್ತಾರೆ. ಅನಿವಾರ್ಯ ಕಾರಣಗಳಿಂದ ಉಪನಯನದ ಈ ವಯಸ್ಸು ಮೀರಿದರೆ 'ವ್ರಾತ್ಯಸ್ತೋಮ' ಎಂಬ ಯಜ್ಞವನ್ನು ಮಾಡಿ ಪಾತಿತ್ಯವನ್ನು ದೂರ ಮಾಡಿಕೊಳ್ಳಬೇಕು. ಗಾಯತ್ರಿ ಮಂತ್ರವನ್ನು ಜಪಮಾಡದೆ ಜನರೊಡನೆ ವಿವಾಹಾದಿ ಶರೀರ ಸಂಬಂಧವನ್ನು ಸರ್ವಥಾ ಮಾಡಕೂಡದು. ಉಪನಯನವಾದ ಬಳಿಕ ವಟು ಮೊದಲು ತಾಯಿ, ತಂದೆತಾಯಿಗಳ ಅಕ್ಕ ತಂಗಿಯರು, ತನ್ನ ಅಕ್ಕಂದಿರು ಮುಂತಾದ ಬಾಂಧವರಿಂದಲೂ ಬೇರೆ ಹಿರಿಯ ಮುತ್ತೈದೆಯರಿಂದಲೂ ಭಿಕ್ಷೆಯನ್ನು ಹಾಕಿಸಿಕೊಳ್ಳಬೇಕು. ವೇದವೇದಾಂತಾದಿ ಶಾಸ್ತ್ರಾಧ್ಯಯನವನ್ನು ಮಾಡುವವರೆಗೆ ಬ್ರಹ್ಮಚಾರಿಯಾಗಿ ವೈದಿಕ ವ್ರತಗಳನ್ನು ಪಾಲನೆ ಮಾಡುತ್ತ ಇರಬೇಕು. ವೇದಾಧ್ಯಯನ ಮುಗಿದ ಬಳಿಕ ಗೃಹಸ್ಥಾ ಶ್ರಮವನ್ನು ಸ್ವೀಕರಿಸಬೇಕು. ವೇದಾಧ್ಯಯನ ಮಾಡುವಾಗ ಪ್ರಾರಂಭದಲ್ಲಿ ಹಾಗೂ ಕೊನೆಯಲ್ಲಿ ಓಂಕಾರವನ್ನು ಉಚ್ಚರಿಸಬೇಕು. ದ್ವಿಜನು ವೇದಾರ್ಥವನ್ನು ತಿಳಿದು ತ್ರಿಕಾಲದಲ್ಲಿಯೂ ಓಂಕಾರಯುಕ್ತ ವ್ಯಾಹೃತಿಸಹಿತ ಗಾಯಿತ್ರೀಮಂತ್ರವನ್ನು ತಪ್ಪದೇ ಜಪಿಸಿದರೆ ಆರೋಗ್ಯವನ್ನು ಪುಣ್ಯವನ್ನೂ ಪಡೆಯುತ್ತಾನೆ. ವಿಧಿಪೂರ್ವಕವಾಗಿ ಮಾಡಿದ ಗಾಯತ್ರೀ ಜಪವು ಜಪಯಜ್ಞ ಎನಿಸುತ್ತದೆ.

**ವಿಧಿಕ್ರತೋಃ ದಶಗುಣಃ ಜಪಕ್ರತುರುದೀರಿತಃ ।**
**ಉಪಾಂಶುಃ ತಚ್ಛತ ಗುಣಃ ಸಹಸ್ರೋ ಮಾನಸಃ ತತಃ ॥**

ವಿಧಿಪೂರ್ವಕವಾಗಿ ಮಾಡಿದ ವೈದಿಕ ಯಜ್ಞಕ್ಕಿಂತ ಜಪಯಜ್ಞದಿಂದ ಹತ್ತುಪಟ್ಟು ಹೆಚ್ಚಿನ ಪುಣ್ಯಬರುತ್ತದೆ. ಅದರಲ್ಲಿಯೂ ಇನ್ನೊಬ್ಬರ ಕಿವಿಗೆ ಕೇಳದಂತೆ ಅತ್ಯಂತ ಸೂಕ್ಷ್ಮ ಸ್ವರದಿಂದ ಉಚ್ಚರಿಸಿ ಮಾಡಿದ ಜಪದಿಂದ ನೂರು ಪಟ್ಟು ಹೆಚ್ಚಿನ ಪುಣ್ಯ. ಉಪಾಂಶು

ಜಪಕ್ಕಿಂತ ಸಾವಿರಪಟ್ಟು ಹೆಚ್ಚು ಪುಣ್ಯ ಮಾನಸ ಜಪದಿಂದ ಬರುವುದು. ಆದ್ದರಿಂದ ಮಾನವರು ಮನ್ನಸಿನಲ್ಲಿಯೇ ಜಪಮಂತ್ರಗಳ ಅರ್ಥ ತಿಳಿದು ಮಂತ್ರಾಕ್ಷರಗಳನ್ನು ಮಾನಸಿಕವಾಗಿಯೇ ಉಚ್ಚರಿಸಿ ಜಪಮಾಡಬೇಕು. ಶಿಷ್ಯನಿಗೆ ಉಪನಯನ ಸಂಸ್ಕಾರವನ್ನು ತಾನೇ ಮಾಡಿ ಅಂಗಸಹಿತವಾದ ವೇದಶಾಸ್ತ್ರಗಳನ್ನು ಪಾಠ ಹೇಳುವ ಪಂಡಿತನು ಆಚಾರ್ಯ ಎಂದು ಕರೆಯಲ್ಪಡುತ್ತಾನೆ. ಉಪಜೀವನಕ್ಕಾಗಿ ಕೇವಲ ಯಾವುದಾದರೂ ಒಂದು ಶಾಖೆಯನ್ನು ಅಥವಾ ವೇದಾಂಗವನ್ನು ಪಾಠ ಹೇಳುವವ ಉಪಾಧ್ಯಾಯ ಎನಿಸುತ್ತಾನೆ. ಶಾಸ್ತ್ರೋಕ್ತವಾದ ಗರ್ಭಾದಾನಾದಿ ಸಂಸ್ಕಾರಗಳನ್ನು ಮಾಡಿಸುವವನು ಗುರು ಎಂದು ಹೇಳಲ್ಪಡುತ್ತಾನೆ. ಯಜಮಾನನಿಂದ ವರಣ ಪಡೆದು ಯಜ್ಞಯಾಗಾದಿ ಕರ್ಮಗಳನ್ನು ಮಾಡುವವ ಋತ್ವಿಜ ಎಂದು ಕರೆಸಿಕೊಳ್ಳುತ್ತಾನೆ.

**ಉಪಾಧ್ಯಾಯಾತ್ ದಶಾಚಾರ್ಯಃ ಆಚಾರ್ಯಾಣ್ಚ ಶತಂ ಪಿತಾ ।**
**ಸಹಸ್ರಂತು ಪಿತುರ್ಮಾತಾ ಗೌರವೇಣಾನಾತಿರಿಚ್ಯತೇ ॥**

ಉಪಾಧ್ಯಾಯರಿಗಿಂತ ಹತ್ತು ಪಟ್ಟು ಹೆಚ್ಚಿನ ಗೌರವಕ್ಕೆ ಆಚಾರ್ಯನು ಅರ್ಹನಾಗಿದ್ದಾನೆ. ನೂರು ಪಟ್ಟು ಆಚಾರ್ಯರಿಗಿಂತ ತಂದೆಯು ಶ್ರೇಷ್ಠನಾಗಿದ್ದಾನೆ. ಆಚಾರ್ಯನಿಗಿಂತ ನೂರು ಪಟ್ಟು ಹೆಚ್ಚಿನ ಗೌರವವನ್ನು ತಂದೆಗೆ ಕೊಡಬೇಕು. ತಂದೆಗಿಂತ ನೂರುಪಟ್ಟು ಗೌರವವನ್ನು ತಾಯಿಗೆ ಕೊಡಬೇಕು. ಬ್ರಾಹ್ಮಣರಲ್ಲಿ ಜ್ಞಾನದಿಂದ ಶ್ರೇಷ್ಠನಾದವನೇ ಹಿರಿಯ. ಕ್ಷತ್ರಿಯರಲ್ಲಿ ಬಲಿಷ್ಠನಾದವನೇ ಶ್ರೇಷ್ಠ. ವೈಶ್ಯರಲ್ಲಿ ಧನಧಾನ್ಯ ಸಂಪನ್ನನಾದವನೇ ಶ್ರೇಷ್ಠ. ಶೂದ್ರರಲ್ಲಿ ಜನ್ಮದಿಂದ ಜ್ಯೇಷ್ಠನಾದವನೇ ಶ್ರೇಷ್ಠ. ಓದು ಬರಹ ಬಾರದ ಬ್ರಾಹ್ಮಣನು ಕಟ್ಟಿಗೆಯ ಆನೆ ಅಥವಾ ತೊಗಲಿನ ಮೃಗ ಇದ್ದಂತೆ. ಗುರುಗಳ ನಿಂದೆಯನ್ನು ಬ್ರಹ್ಮಚಾರಿಗಳು ಎಂದೂ ಕೇಳಬಾರದು. ಯಾರಾದರೂ ಮಾಡಿದರೆ ಕಿವಿ ಮುಚ್ಚಿಕೊಳ್ಳಬೇಕು. ಅಥವಾ ಆ ಸ್ಥಳವನ್ನು ಬಿಟ್ಟು ಎದ್ದು ಹೋಗಬೇಕು. ಗುರುಪತ್ನಿಯ ಪಾದಮುಟ್ಟಿ ಎಂದೂ ನಮಸ್ಕಾರ ಮಾಡಬಾರದು. ತಾಯಿ, ತಂದೆ, ಗುರು, ಈ ಮೂವರ ಸೇವೆಯನ್ನು ಮಾಡಿ ಸಂತೋಷಪಡಿಸಿದರೆ ಅವರಿಗೆ ತಪಸ್ಸಿನ ಪೂರ್ಣಫಲ ದೊರಕುವುದು. ಈ ಮೂವರ ಸೇವೆಯೇ ದೊಡ್ಡ ತಪಸ್ಸು.

ಗೃಹಸ್ಥಾಶ್ರಮದಲ್ಲಿ ಆಗುವಷ್ಟು ಸದಾಚಾರ ಪಾಲನೆಯು ಬೇರೆ ಆಶ್ರಮದಲ್ಲಿ ಸಾಧಿಸಲು ಆಗುವುದಿಲ್ಲ. ಆದ್ದರಿಂದ ವಿದ್ಯಾಧ್ಯಯನ ಪೂರ್ಣಮಾಡಿದ ಬಳಿಕ ಗೃಹಸ್ಥಾಶ್ರಮವನ್ನೇ ಸ್ವೀಕರಿಸಬೇಕು. ಪತ್ನಿಯು ಅಧೀನಳಾಗಿ ಇದ್ದರೆ ಗೃಹಸ್ಥಾಶ್ರಮದಷ್ಟು ಆನಂದದಾಯಕ ಹಾಗೂ ಪುಣ್ಯಸಾಧಕವಾದ ಆಶ್ರಮವು ಬೇರೆ ಯಾವುದೂ ಇಲ್ಲ.

**ದಕ್ಷಾವಪ್ರಜಾಪತೀಸಾಧ್ವಿ ಪ್ರಿಯವಾಕ್ ಚ ವಶಂವದಾ ।**
**ಗುಣ್ಯೈರಭಿ ಸರ್ಯತಾನಾರೀಸಾಶ್ರೀಃ ಸ್ತ್ರೀ ರೂಪ ಧಾರಿಣೀ ॥**

ಮಕ್ಕಳನ್ನು ಹಡೆದು ಗೃಹಕಾರ್ಯದಲ್ಲಿ ದಕ್ಷಳಾಗಿ ಪರಮ ಪತಿವ್ರತೆಯಾಗಿ ಮಧುರ ಮಾತನಾಡುತ್ತ ಪತಿಗೆ ವಶವರ್ತಿನಿಯಾಗಿರುವ ಸರ್ವಗುಣಗಳಿಂದ ಸಂಪನ್ನಳಾದ ನಾರಿಯು ಕೇವಲ ಮಾನವಿಯಳಲ್ಲ. ಸ್ತ್ರೀರೂಪ ಧರಿಸಿದ ಸಾಕ್ಷಾತ್ ಲಕ್ಷ್ಮೀದೇವಿಯೇ. ಇಂಥ ಮಹಿಳೆ ಯೊಡನೆ ವಿವಾಹ ಮಾಡಿಕೊಂಡು ಗೃಹಸ್ಥಾಶ್ರಮಿಯಾಗಿ ದಾನ, ಧರ್ಮ, ಅತಿಥಿ ಸತ್ಕಾರ ಮುಂತಾದ ಕಾರ್ಯಗಳನ್ನೂ, ಧರ್ಮಾಽ ಅವಿರುದ್ಧವಾದ ಸುಖೋಪಭೋಗಗಳನ್ನೂ

ಅನುಭವಿಸುತ್ತ ಅಧ್ಯಾತ್ಮ ಸಾಧನೆಯನ್ನು ಮಾಡಿಕೊಳ್ಳಬೇಕು. ಮದುವೆಯಾಗುವಾಗ ಬಹಳ ವಿಚಾರ ಮಾಡಿ ಮದುವೆಯಾಗಬೇಕು. ಒಂದೇ ಗೋತ್ರದ ಹೆಣ್ಣನ್ನು ಮದುವೆಯಾಗ ಬಾರದು. ಕ್ಷಯ, ಕುಷ್ಠ, ಮೈಲರೋಗ, ಮುಂತಾದ ಅನುವಂಶಿಕ ರೋಗಗಳು ಇದ್ದ ಕುಟುಂಬದ ಕನ್ನೆಯನ್ನು ಮದುವೆಯಾಗಬಾರದು. ಅಪವಾದ ಕಲಂಕ ಹಾಗೂ ಕೆಟ್ಟ ಹೆಸರು ಬಂದ ಕುಟುಂಬದ ಕನ್ಯೆಯನ್ನು ವಿವಾಹವಾಗಬಾರದು. ಯಾವುದೇ ರೋಗವಿಲ್ಲದ ಅಣ್ಣ ತಮ್ಮಂದಿರುಳ್ಳ ತನಗಿಂತ ಎತ್ತರದಲ್ಲಿ ತುಸು ಕಡಿಮೆಯುಳ್ಳ ಸೌಮ್ಯ ಮುಖದ್ದ ಸವಿ ಮಾತನಾಡುವ ಕನ್ಯೆಯನ್ನು ವಿವಾಹವಾಗಬೇಕು. ಗುಡ್ಡ, ಕರಡಿ, ಹಾವು, ಪಕ್ಷಿ, ಆನೆ, ದಾಸ ಮುಂತಾದ ಅರ್ಥವನ್ನು ಬೋಧಿಸುವ ಹೆಸರುಳ್ಳ ಸ್ತ್ರೀಯನ್ನು ಮದುವೆ ಮಾಡಿ ಕೊಳ್ಳಬೇಕು. ಮದುವೆಯಾಗುವ ಕನ್ಯೆಗೆ ಯಾವ ಅಂಗವೂ ಸಾಮಾನ್ಯ ಮನುಷ್ಯರಿಗಿಂತ ಹೆಚ್ಚು ಇರಬಾರದು ಅಥವಾ ಕಡಿಮೆ ಇರಬಾರದು. ಅತೀ ದುರ್ಬಲಳಾದ ಅಥವಾ ಸ್ಥೂಲ ಕಾಯದ ಮೈತುಂಬ ಕೂದಲುಳ್ಳ ಅಥವಾ ಎಲ್ಲಿಯೂ ಕೂದಲುಗಳೇ ಇಲ್ಲದ ಕುಮಾರಿ ಯೊಡನೆ ವಿವಾಹವನ್ನು ಮಾಡಿಕೊಳ್ಳಬಾರದು. ಕನ್ಯೆಯನ್ನು ಮದುವೆಗಿಂತ ಮೊದಲು ಪರೀಕ್ಷೆಮಾಡಿ ವಿವಾಹವಾಗಬೇಕು. ಉತ್ತಮ ಲಕ್ಷಣವುಳ್ಳ ಸದಾಚಾರ ಸಂಪನ್ನಳಾದ ಪತ್ನಿಯು ಪತಿಯ ಆಯುಷ್ಯವನ್ನು ಬೆಳೆಸುತ್ತಾಳೆ. ಆರೋಗ್ಯವನು ಹೆಚ್ಚಿಸುತ್ತಾಳೆ.

## ಗೃಹಸ್ಥಾಶ್ರಮ ಧರ್ಮ, ಪಂಚಯಜ್ಞ ಕಾಶೀ ವಾಸಗಳ ಮಹತ್ವ.

**ಸ್ಕಂದ:-** ಮಹಿಳೆಯು ಶುಭಲಕ್ಷಣ ಸಂಪನ್ನಳಾಗಿದ್ದರೆ ಅವಳನ್ನು ಮದುವೆಯಾದ ಗೃಹಸ್ಥನ ಜೀವನ ಸುಖಮಯವಾಗುವುದು. ಅದಕ್ಕಾಗಿ ವಿವಾಹವಾಗುವಾಗ ಕನ್ಯೆಯ ಲಕ್ಷಣಗಳನ್ನೆಲ್ಲ ಪರೀಕ್ಷಿಸಬೇಕು. ಶರೀರ ನಿಲುವು, ವಾಸನೆ, ಕಾಂತಿ, ಸತ್ವ, ಸ್ವರ, ನಡಿಗೆ ಮತ್ತು ಬಣ್ಣ, ಇವು ಎಂಟು ಸ್ತ್ರೀ ಲಕ್ಷಣ ಪರೀಕ್ಷಿಸಲು ಆಧಾರ ಎಂದು ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಿದ್ದಾರೆ. ವನಿತೆಯರು ಒಳ್ಳೆ ಲಕ್ಷಣ. ಪರಿಶುದ್ಧ ಆಚರಣ, ಪತಿಪ್ರೇಮ ಗಳಿಂದ ಅತಿ ಅಲ್ಪಾಯುವಾಗಿದ್ದರೂ ಅವನ ಆಯುಷ್ಯದ ಅಭಿವೃದ್ಧಿಗೆ ಕಾರಣರಾಗಿರುವರು. ಮತ್ತು ಅವನಿಗೆ ಆರೋಗ್ಯ ಭಾಗ್ಯವು ದೊರಕುವಂತೆ ಮಾಡುವರು.

ಗೃಹಸ್ಥಾಶ್ರಮವನ್ನು ಪಾಲಿಸುವ ಪುರುಷನು ಪ್ರತಿದಿನವೂ ಅನಿವಾರ್ಯವಾಗಿ ಐದು ವಿಧವಾದ ಹಿಂಸೆಯನ್ನು ಮಾಡಲೇಬೇಕಾಗುವುದು. ಒರಳು, ಬೀಸುಕಲ್ಲು, ಒಲೆ, ಪೊರಕೆ, ನೀರಿನ ಕೊಡ, ಇವು ಐದೂ ಒಂದಿಲ್ಲ ಒಂದು ಬಗೆಯಿಂದ ಹಿಂಸೆಯ ಸಾಧನಗಳಾಗಿವೆ. ಈ ಹಿಂಸಾಜನ್ಯ ಪಾಪಗಳ ಪರಿಹಾರಕ್ಕಾಗಿ ಪಂಚ ಮಹಾಯಜ್ಞಗಳನ್ನು ಮಾಡಬೇಕೆಂದು ಶಾಸ್ತ್ರದಲ್ಲಿ ವಿಧಾನ ಮಾಡಿದ್ದಾರೆ. ಬ್ರಹ್ಮಯಜ್ಞ, ಪಿತೃಯಜ್ಞ, ದೇವಯಜ್ಞ, ಭೂತಯಜ್ಞ, ಮನುಷ್ಯಯಜ್ಞ ಮತ್ತು ವೇದಶಾಸ್ತ್ರ ಪುರಾಣಗಳ ಪಠಣ, ಪಾಠಗಳು ಬ್ರಹ್ಮ ಯಜ್ಞ ಎನಿಸುತ್ತವೆ. ಪಿತೃಗಳನ್ನು ಉದ್ದೇಶಿಸಿ ಜಲಾಂಜಲಿಯನ್ನು ತರ್ಪಣರೂಪವಾಗಿ ಕೊಡುವದು ಪಿತೃಯಜ್ಞ, ಹೋಮ, ದೇವರ ಪೂಜೆ, ನೈವೇದ್ಯ, ಮುಂತಾದವುಗಳು ದೇವಯಜ್ಞ, ವೈಶ್ವದೇವ, ಬಲಿಹರಣಗಳು ಭೂತಯಜ್ಞ. ಅತಿಥಿ ಸತ್ಕಾರವು ಮನುಷ್ಯ ಯಜ್ಞ. ಈ ತರಹದ ಪಂಚಯಜ್ಞಗಳನ್ನು ಗೃಹಸ್ಥರು ಅವಶ್ಯವಾಗಿ ಮಾಡಲೇಬೇಕು. ಅತಿಥಿ ಸತ್ಕಾರವು ಗೃಹಸ್ಥಾಶ್ರಮದ ಮುಖ್ಯ ಧರ್ಮ.

**ಅನರ್ಚಿತೋಽತಿಥಿಃ ಗೇಹಾದ್ ಭಗ್ನಾಶೋ ಯಸ್ಯ ಗಚ್ಛತಿ ।**
**ಆಜನ್ಮ ಸಂಚಿತಾತ್ ಪುಣ್ಯಾತ್ ಕ್ಷಣಾತ್ ಸಹಿ ಭವಿರ್ಭವೇತ್ ॥**

ಯಾರ ಮನೆಗೆ ಬಂದ ಅತಿಥಿಯು ಆದರೋಪಚಾರವನ್ನು ಹೊಂದದೆ ನಿರಾಶನಾಗಿ ತಿರುಗಿ ಹೋಗುವನೋ ಆ ಮನುಷ್ಯನು ತನ್ನ ಜನ್ಮಾವಧಿ ಸಂಪಾದನೆ ಮಾಡಿದ ಪುಣ್ಯದಿಂದ ವಂಚಿತನಾಗುತ್ತಾನೆ. ಆದುದರಿಂದ ಮನೆಗೆ ಬಂದ ಅತಿಥಿಗಳಿಗೆ ಮೊದಲು ಪ್ರಸನ್ನ ಮುಖದಿಂದ ಸ್ವಾಗತಮಾಡಿ ಅವರಿಗೆ ಅರ್ಘ್ಯ, ಪಾದ್ಯ, ಆಸನ, ಜಲ ಮುಂತಾದ ವಸ್ತುಗಳನ್ನು ನೀಡಿ ಇಚ್ಛಾಭೋಜನ ಮಾಡಿಸಿ ಅವರ ಮನಸ್ಸನ್ನು ಸಂತೋಷಪಡಿಸಬೇಕು. ಅತಿಥಿ ಊಟ ಮಾಡಿದ ಬಳಿಕ ಉಳಿದ ಅನ್ನವನ್ನು ತಾನು ಪರಿವಾರದೊಂದಿಗೆ ಭಂಜಿಸಬೇಕು. ವೈಶ್ವದೇವ ಕರ್ಮದ ಅನಂತರ ಸೂರ್ಯಾಸ್ತ ಸಮಯದಲ್ಲಿ ಹಸಿದು ಬಂದವನೇ ಅತಿಥಿ.

**'ಕುಮಾರಾಶ್ಚ ಸುವಾಸಿನ್ಯಃ ಗರ್ಭಿಣ್ಯೋಽತಿರುಜಾನ್ವಿತಾಃ ।**
**ಅತಿಥೇಃ ಕಪೂರ್ವಮೇವೇತೇ ಭೋಜ್ಯಾ ನಾಽತ್ರ ವಿಚಾರಣಾ' ॥**

ಚಿಕ್ಕ ಚಿಕ್ಕ ಮಕ್ಕಳು, ಮುದುಕರು, ಮುತ್ತೈದೆಯರು, ಗರ್ಭವತಿಯರು, ಬೇನೆಯವರು, ಇವರಿಗೆ ಅತಿಥಿಗಳಿಗಿಂತ ಮೊದಲು ಊಟಕ್ಕೆ ಹಾಕಿದರೆ ಏನೂ ತಪ್ಪಿಲ್ಲ. ದೇವತೆಗಳಿಗೂ, ಪಿತೃಗಳಿಗೂ ಕೊಟ್ಟು ಊಟ ಮಾಡುವ ಮನುಷ್ಯನು ಅಮೃತ ಭೋಜನ ಮಾಡಿದಂತೆ. ಕೇವಲ ತನ್ನ ಹೊಟ್ಟೆಗಾಗಿಯೇ ಅಡಿಗೆ ಮಾಡುವ ಮನುಷ್ಯನು ಪಾಪವನ್ನೇ ಉಂಡಂತೆ.

**ಪಿತೃದೇವ ಮನುಷ್ಯೇಭ್ಯೋ ದತ್ವಾಽಶ್ನಾತ್ಯಮೃತಂ ಗೃಹೀ ।**
**ಸ್ವಾರ್ಥಂ ಪಚನ್ನಘಂ ಭುಂಕ್ತೇ ಕೇವಲಂ ಸ್ವೋದರಂಭರಿಃ ॥**

ಬುದ್ಧಿವಂತ ಮನುಷ್ಯನು, ರೂಪ ಕುಲ, ಧನಗಳಿಂದ ಹೀನನಾದ ಮನುಷ್ಯನ ಮೇಲೆ ಆಕ್ಷೇಪಮಾಡಬಾರದು. ಮನಸ್ಸು, ವಾಣಿ, ನಾಲಿಗೆಗಳ ವೇಗ ಹಾಗೂ ಅವಸರಗಳನ್ನು ನಿಯಂತ್ರಣ ಮಾಡಬೇಕು. ಲಂಚ, ಜೂಜಾಟ, ದಾಸ್ಯ ಹಾಗೂ ತೊಂದರೆಯಲ್ಲಿದ್ದ ಮನುಷ್ಯನ ಹಣವನ್ನು ಎಂದೂ ಹಿಡಿಯಬಾರದು. ಹೀಗೆ ದೇವ, ಋಷಿ, ಪಿತೃಗಳ ಋಣದಿಂದ ಮುಕ್ತನಾಗಿ, ಮಕ್ಕಳಿಗೆಲ್ಲ ಮನೆಯ ಭಾರ ಒಪ್ಪಿಸಿ ಮನೆಯಲ್ಲಿಯೇ ಅಲಿಪ್ತನಾಗಿ ಇದ್ದು ವೇದ ವೇದಾಂತ ಶಾಸ್ತ್ರಾಭ್ಯಾಸವನ್ನು ಮಾಡಬೇಕು. ಇಲ್ಲವೇ ಮನೆಯಲ್ಲಿದ್ದುಕೊಂಡು ಜ್ಞಾನ ಸಾಧನವನ್ನಾದೂರ ಮಾಡಿಕೊಳ್ಳಬೇಕು. ಅಥವಾ ಕಾಶೀ ಯಾತ್ರೆಯನ್ನಾದರೂ ಮಾಡಬೇಕು. ಮೋಕ್ಷಕ್ಕೆ ಎರಡು ಮಾರ್ಗ. ದಿವ್ಯ ಜ್ಞಾನದಿಂದ ಮತ್ತು ಕಾಶಿಯಲ್ಲಿ ಮರಣದಿಂದ. ಸದಾಚಾರಿ ಮನುಷ್ಯನಿಗೆ ಮಾತ್ರ ಕಾಶೀವಾಸವು ಲಭಿಸುವದು ಆದುದರಿಂದ ಜ್ಞಾನಿಯಾದ ಮನುಷ್ಯನು ಸದಾಚಾರವನು ಪಾಲಿಸಬೇಕು.

ಹಿಂದೆ ಪ್ರಜಾಪತಿಯಾದ ಬ್ರಹ್ಮನು ಈ ಅವಿಮುಕ್ತ ಕ್ಷೇತ್ರದಲ್ಲಿ ನಿಂತು ಇಂದ್ರಿಯಗಳನ್ನು ನಿಗ್ರಹಿಸಿ ತಪಸ್ಸನು ಮಾಡುತ್ತಲಿರುವ ರಿಪುಂಜಯ ಎಂಬ ರಾಜನಿಗೆ ಅವನ ಭಕ್ತಿಗೆ ಪ್ರಸನ್ನನಾಗಿ ಪ್ರತ್ಯಕ್ಷನಾದನು. ಮನುವಂಶದಲ್ಲಿ ಜನಿಸಿದ ಆ ರಾಜನು ಮಹಾಶೂರ ಹಾಗೂ ಧರ್ಮಾತ್ಮನೂ ಆಗಿದ್ದ. ಅವನ ತಪಸ್ಸಿಗೆ ಪ್ರಸನ್ನನಾದ ಬ್ರಹ್ಮದೇವನು ಹೇಳಿದ:- 'ಕೀರ್ತಿವಂತನಾದ ಮಹಾರಾಜಾ, ನೀನು ಸಮುದ್ರವಲಯಾಂಕಿತವಾದ ಪರ್ವತವನ ಸಹಿತವಾದ ಸಮಗ್ರ ಪೃಥ್ವೀ ಮಂಡಲವನ್ನು ಪಾಲನೆ ಮಾಡು. ನಾಗರಾಜ ವಾಸುಕಿಯು ನಿನಗೆ ಅನಂಗ ಮೋಹಿನಿ ಎಂಬ ಕನ್ಯಾರತ್ನವನ್ನು ಮದುವೆ ಮಾಡಿಕೊಡುವನು. ದೇವತೆಗಳೂ ಕೂಡ ನೀನು ಮಾಡುವ ಪ್ರಜಾಪಾಲನೆಯಿಂದ ಸಂತುಷ್ಟರಾಗಿ ಸ್ವರ್ಗಲೋಕದ ರತ್ನ ಹಾಗೂ ಪುಷ್ಪಗಳನ್ನು ಪ್ರದಾನ ಮಾಡುವರು. 'ದಿವೋ ದಾಸ್ಯಂತಿ' ಎಂಬ ಉತ್ಪತ್ತಿಗೆ ಅನುಸಾರವಾಗಿ ದಿವೋದಾಸ ಎಂದು ಆಗುವುದು. ಮತ್ತು ನನ್ನ ಪ್ರಭಾವದಿಂದ ನಿನಗೆ ದಿವ್ಯ ಸಾಮರ್ಥ್ಯವು ಪ್ರಾಪ್ತವಾಗುವುದು.

**ರಿಪುಂಜಯ:-** ಪಿತಾಮಹ, ಮನುಷ್ಯರಿಂದ ತುಂಬಿದ ಈ ಭೂಮಂಡಲದಲ್ಲಿ ಬೇರೆ ಯಾವ ರಾಜನೂ ಇಲ್ಲವೆ? ನನಗೆ ಮಾತ್ರ ಈ ಆಜ್ಞೆ ಏಕೆ?

**ಬ್ರಹ್ಮ:-** ರಾಜನೇ, ನೀನು ಯಜ್ಞವನ್ನು ಮಾಡಿದರೆ, ಇಂದ್ರನು ಈ ಲೋಕದಲ್ಲಿ ಸದಾಸಕಾಲದಲ್ಲಿ ವೃಷ್ಟಿಯನ್ನು ಮಾಡುವನು. ಬೇರೆ ಪಾಪಿಯಾದ ರಾಜನು ರಾಜ್ಯವಾಳುತ್ತಿದ್ದರೆ, ಇಂದ್ರನು ಮಳೆಗರೆಯುವುದಿಲ್ಲ.

**ರಾಜ:-** ಪಿತಾಮಹ, ನೀವು ಸ್ವತಃ ಮೂರು ಲೋಕಗಳನ್ನು ಸಂರಕ್ಷಿಸಲು ಸಮರ್ಥರೇ ಇರುವಿರಿ. ಆದರೂ ಕೂಡ ನೀವು ನನಗೆ ಈ ಕೀರ್ತಿಯನ್ನು ಪ್ರದಾನ ಮಾಡುತ್ತಲಿರುವಿರಿ. ಇದೊಂದು ನನ್ನ ಮೇಲೆ ವಿಶೇಷ ಅನುಗ್ರಹ ನಿಮ್ಮ ಆಜ್ಞೆ ನನಗೆ ಶಿರಸಾಮಾನ್ಯ. ಆದರೆ ತಮ್ಮಲ್ಲಿ ನನ್ನದೊಂದು ಪ್ರಾರ್ಥನೆ.

**ಬ್ರಹ್ಮ:-** ರಾಜನೇ ಕೂಡಲೇ ಹೇಳು ನಿನ್ನ ಮನಸ್ಸಿನೊಳಗಿನ ವಿಚಾರವನ್ನು

**ರಾಜ:-** ಪಿತಾಮಹ, ನಾನು ಪೃಥ್ವಿಗೆ ಅಧಿಪತಿಯಾದರೆ ದೇವಲೋಕದ ನಿವಾಸಿಗಳಾದ ದೇವತೆಗಳು ತಮ್ಮ ಲೋಕದಲ್ಲಿ ನಿಲ್ಲಲಿ. ಅವರು ನಮ್ಮ ಲೋಕಕ್ಕೆ ವಲಸೆ ಬರುವುದು ಬೇಡ. ದೇವತೆಗಳು ದೇವಲೋಕದಲ್ಲಿ, ನಾನು ಪೃಥ್ವೀ ತಲದಲಿ ಯಾವಾಗ ವಾಸಮಾಡುತ್ತೇವೋ ಆಗ ಪ್ರಜಾವರ್ಗಕ್ಕೆಲ್ಲ ಸುಖದ ಪ್ರಾಪ್ತಿ ಆಗುವುದು.

'ತಥಾಸ್ತು' ಎಂದು ಹೇಳಿದ ಆ ಕಮಲಾಸನ. ಅವನ ಪ್ರಾರ್ಥನೆಯನ್ನು ಅಂಗೀಕರಿಸಿದ. ಆಗ ರಾಜನು ಘೋಷಣೆಯನ್ನು ಹೊರಡಿಸಿ ಎಲ್ಲ ಕಡೆಗೂ ಡಂಗುರ ಹೊಡೆಸಿದ. ದೇವತೆಗಳೆಲ್ಲರೂ ಸ್ವರ್ಗಕ್ಕೆ ಹೋದರೆ ನಾಗರು ತಮಗೆ ಎಲ್ಲಿ ಬೇಕೋ ಅಲ್ಲಿ ಹೋಗಲಿ. ಹಾಗಾದರೆ ಮಾತ್ರ ಮಾನವರು ಭೂಲೋಕದಲ್ಲಿ ಸುಖದಿಂದ ಬಾಳುವರು. ಭೂಲೋಕದಲ್ಲಿ ನನ್ನ ಶಾಸನ ಕಾಲದಲ್ಲಿ ದೇವತೆಗಳು ಸ್ವರ್ಗಲ್ಲಿ ಸುಖವಾಗಿ ಇರಲಿ. ಮನುಷ್ಯರು ಪೃಥ್ವಿಯಲ್ಲಿ ನೆಮ್ಮದಿಯಿಂದ ಬಾಳಿ ಬದುಕಲಿ.

## ಗ್ರಹಾಸ್ಥಾಶ್ರಮಿಗೆ ಉಚಿತವಾದ ಆಚಾರ ಹಾಗೂ ಧರ್ಮ

**ಸ್ಕಂದ:-**ಮನುಷ್ಯರಿಗೆ ಮನೋವಾಂಛಿತವಾದ ವಸ್ತು ದೊರಕಬೇಕಾದರೆ ಪುಣ್ಯವನ್ನು ಸಂಪಾದನೆ ಮಾಡಬೇಕು. ಆ ಪುಣ್ಯವು ವೈದಿಕಮಾರ್ಗವನ್ನು ಅನುಸರಿಸುವುದರಿಂದಲೇ, ವೇದೋಕ್ತವಾದ ಸದಾಚಾರ ಹಾಗೂ ನೀತಿಮಾರ್ಗವನ್ನು ಅನೂಚಾನವಾಗಿ ಪಾಲನ ಮಾಡುವವರ ಸ್ಪರ್ಶಮಾತ್ರದಿಂದಲೇ ಕಲಿಯು ನಷ್ಟವಾಗಿ ಹೋಗುತ್ತಾನೆ. ಕಲಿಯು ಶಾಸ್ತ್ರನಿಷಿದ್ಧವಾದ ಕರ್ಮಾಚರಣೆಯನ್ನು ಮಾಡುವವರ ಮೇಲೆಯೇ ತನ್ನ ಗಾಳಿಯನ್ನು ಮಾಡಬಲ್ಲ. ವೇದಮಾರ್ಗವನ್ನು ಸರಿಯಾಗಿ ಪಾಲಿಸುವವರ ಕಡೆಗೆ ಕಣ್ಣೆತ್ತಿ ಕೂಡ ನೋಡುವ ಶಕ್ತಿಯಿಲ್ಲ ಕಲಿ ಪುರುಷನಿಗೆ. ಆದ್ದರಿಂದ ವಿಹಿತಕರ್ಮ ಆಚರಣೆ, ನಿಷಿದ್ಧ ಪದಾರ್ಥ ತ್ಯಾಗ ಇವೆರಡೂ ಅವಶ್ಯ ಕರ್ತವ್ಯ. ಈರುಳ್ಳಿ, ಬೆಳ್ಳುಳ್ಳಿ, ಗೆಜ್ಜರಿ, ಈದ ಬಳಿಕ ಹತ್ತು ದಿನ ಆಗದೇ ಇರುವ ಹಸುವಿನ ಹಾಲು, ಗಿಡದುಂಟು, ದೇವರಿಗೆ ಸಮರ್ಪಿತವಲ್ಲದ ಖಾದ್ಯ, ಒಂಟೆ, ಆಡುಗಳ ಹಾಲು, ಮೀನ, ಹಳಸಿದ ಅನ್ನ, ತುಪ್ಪದಲ್ಲಿ ಕರಿದಿದ್ದರೂ ವಾಸನೆಗೆಟ್ಟ ಪದಾರ್ಥಗಳು, ಮಾಂಸ ಮುಂತಾದವುಗಳನ್ನೆಲ್ಲ ಸರ್ವಥಾ ಬಿಟ್ಟು ಬಿಡಬೇಕು. ರಾತ್ರಿಕಾಲದಲ್ಲಿ ಮೊಸರನ್ನು ತಿನ್ನಕೂಡದು. ಹಿಂಸೆಯನ್ನು ಸರ್ವಥಾ ಮಾಡಕೂಡದು. ಈ ಹಿಂಸೆ ಎಂಟು ವಿಧವಾಗಿದೆ.

**ಯೋ ಜಂತುರಾತ್ಮಪುಷ್ಟ್ಯರ್ಥಂ ಹಿನಸ್ತಿ ಜ್ಞಾನ ದುರ್ಬಲಃ।**
**ದುರಾಚಾರಸ್ಯ ತಸ್ಯೇಹ ನಾಮುತ್ರಾಪಿ ಸುಖಂ ಕ್ವಚಿತ್ ॥**

ತನ್ನ ದೇಹದ ಪುಷ್ಟಿಗಾಗಿ ಯಾವ ಅಜ್ಞಾನಿಯು ಪ್ರಾಣಿಗಳನ್ನು ಹಿಂಸಿಸುತ್ತಾನೋ ಅಂಥ ದುರಾಚಾರಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖ ಇರುವುದಿಲ್ಲ.

**ಭೋಕ್ತಾऽನುಮಂತಾ ಸಂಸ್ಕರ್ತಾ ಕ್ರಯಿ ವಿಕ್ರಯಿ ಹಿಂಸಕಾಃ।**
**ಉಪಹರ್ತಾ ಘಾತೈತಾ ಹಿಂಸಕಾಶ್ಚಾಷ್ಟಧಾಸ್ಮೃತಾಃ ॥**

ಮಾಂಸ ತಿನ್ನುವವನು, ಪ್ರಾಣಿ ಹಿಂಸೆಗೆ ಅನುಮತಿ ಕೊಡುವವನು, ಮಾಂಸದ ಅಡಿಗೆ ಮಾಡುವವನು, ಮಾಂಸವನ್ನು ಖರೀದಿಸುವ ಮಾರಾಟ ಮಾಡುವವನು, ತನ್ನ ಕೈಯಿಂದಲೇ ಪ್ರಾಣಿಗಳಿಗೆ ಚೂರಿ ಹಾಕುವವನು, ಮಾಂಸವನ್ನು ಹಂಚುವವನು ಅಥವಾ ಇನ್ನೊಬ್ಬರಿಗೆ ಒಯ್ದು ಮುಟ್ಟಿಸುವವನು, ಇನ್ನೊಬ್ಬರಿಂದ ಹಿಂಸೆ ಮಾಡಿಸುವವನು ಇವರು ಎಂಟು ಜನರು ಹಿಂಸಕರು ಎನಿಸಿದ್ದಾರೆ.

**ಪ್ರತ್ಯಬ್ದಮಶ್ವಮೇಧೇನ ಶತಂ ವರ್ಷಾಣಿ ಯೋ ಯಜೇತ್।**
**ಅಮಾಂಸ ಭಕ್ಷಕೋ ಯಶ್ಚ ತಯೋರಂತ್ಯೋ ವಿಶಿಷ್ಯತೇ ॥**

ಪ್ರತಿವರ್ಷವೂ ಅಶ್ವಮೇಧಯಾಗವನ್ನು ಮಾಡುತ್ತ ಒಟ್ಟಾರೆ ನೂರು ಅಶ್ವಮೇಧ ಯಜ್ಞಗಳನ್ನು ಮಾಡಿದ ಮನುಷ್ಯ ಮತ್ತು ಎಂದೆಂದೂ ಮಾಂಸವನ್ನು ಸರ್ವಥಾ ತಿನ್ನದೇ ಇರುವ ಮನುಷ್ಯ ಇವರಿಬ್ಬರಲ್ಲಿ ಎರಡನೇಯವನೇ ಶ್ರೇಷ್ಠ. ಎಂದರೆ ಮಾಂಸವರ್ಜನೆ ಮಾಡಿದ ಪುಣ್ಯ ಅಶ್ವಮೇಧ ಯಾಗಕ್ಕಿಂತ ಮಿಗಿಲಾದುದು ಎಂಬುದು ತಾತ್ಪರ್ಯ. ಬ್ರಾಹ್ಮಣ, ಕ್ಷತ್ರಿಯ, ಶೂದ್ರ, ವೈಶ್ಯ, ನಾಲ್ಕೂ ವರ್ಣದವರು ಮೇಲೆ ಹೇಳಿದ ಸಾಮಾನ್ಯ ಧರ್ಮವನ್ನು ಪಾಲಿಸಬೇಕು. ಎಲ್ಲ ಜಾತಿಯವರು ನ್ಯಾಯಮಾರ್ಗದಿಂದ ಗಳಿಸಿದ ಹಣದಿಂದಲೇ ಧರ್ಮಕಾರ್ಯ ಮಾಡಬೇಕು. ಪವಿತ್ರ ಸ್ಥಾನದಲ್ಲಿ ವಿಹಿತಕಾಲದಲ್ಲಿ, ಯೋಗ್ಯ ಪಾತ್ರರಲ್ಲಿ, ಶ್ರದ್ಧೆಯಿಂದ ದಾನ ಕೊಡಬೇಕು. ತನ್ನ ದ್ರವ್ಯದಿಂದ ಅನಾಥ ಮಕ್ಕಳ ಉಪನಯನ ವಿವಾಹಾದಿಗಳನ್ನು ಮಾಡಬೇಕು. ಕರು ಎಂಜಲು ಮಾಡಿದ ಹಸುವಿನ ಹಾಲು ಪವಿತ್ರ. ಪಕ್ಷಿಯು ಕಚ್ಚಿದ ಹಣ್ಣು ಪವಿತ್ರ. ಆಡು ಹಾಗೂ ಕುದುರೆಗಳ ಮುಖ ಪವಿತ್ರ. ಹಸುವಿನ ಬಾಲ ಪವಿತ್ರ. ಬ್ರಾಹ್ಮಣರ ಚರಣ ಪವಿತ್ರ. ಹೆಂಡತಿ ಯಾವಾಗಲೂ ಪವಿತ್ರ.

**ಬಲಾತ್ಕಾರೋಪ ಭುಕ್ತಾ ವಾ ಚೋರಹಸ್ತಗತಾಪಿ ವಾ।**
**ನ ತ್ಯಾಜ್ಯಾ ದಯಿತಾ ನಾರೀ ನ್ಯಾಸ್ಯಾಃ ತ್ಯಾಗೋ ವಿಧೀಯತೇ ॥**

ಮಹಿಳೆಯು ಬಲಾತ್ಕಾರದಿಂದ ಭೋಗಿಸಲ್ಪಟ್ಟಿದ್ದರೆ ಅಥವಾ ಕಳ್ಳರ ಕೈಯಲ್ಲಿ ಬಿದ್ದಿದ್ದರೆ, ಅಂಥ ಸ್ತ್ರೀಯನ್ನು, ಮಡದಿ, ಸೋದರಿ, ಯಾವುದೇ ನಾರಿಯನ್ನು ಬಿಡಬಾರದು. ಅಂಥ ಅನಿಚ್ಛೆಯಿಂದ ಭುಕ್ತಳಾದ ನಾರಿಯ ತ್ಯಾಗವು ಯಾವ ಶಾಸ್ತ್ರದಲ್ಲಿಯೂ ವಿಹಿತವಾಗಿಲ್ಲ. ಒಂದೊಂದು ಪದಾರ್ಥಕ್ಕೆ ಒಂದೊಂದು ತರಹದ ಶುದ್ಧಿ ಹೇಳಲ್ಪಟ್ಟಿದೆ. ತಾಮ್ರಕ್ಕೆ ಹುಣಸೆ ಹುಳಿಯಿಂದ ಶುದ್ಧಿ, ಕಂಚಿಗೆ ಬೂದಿಯಿಂದ, ಸ್ತ್ರೀಯರಿಗೆ ಮಾಸಿಕ ರಜೋ ಧರ್ಮದಿಂದ, ನದಿಗಳಿಗೆ ಪ್ರವಾಹದಿಂದ ಶುದ್ಧಿ ಹಾಗೂ ಪಾವಿತ್ರ್ಯ ಪ್ರಾಪ್ತವಾಗುತ್ತದೆ.

**ಮನಸಾಪಿಹಿ ಯಾ ನೇಹ ಚಿಂತಯೇತ್ ಪುರುಷಾಂತರಮ್।**
**ಸೋಮಯಾ ಸಹ ಸೌಖ್ಯಾನಿ ಭುಂಕ್ತೇ ಚಾऽತ್ರಾऽಪಿ ಕೀರ್ತಿಭಾಕ್ ॥**

ಯಾವ ವನಿತೆಯು ಮನಸ್ಸಿನಿಂದ ಕೂಡ ಪತಿಯ ಹೊರತು ಬೇರೆ ಪುರುಷನನ್ನು ಚಿಂತಿಸುವುದಿಲ್ಲವೋ ಅವಳು ಶಿವಲೋಕದಲ್ಲಿ ಪಾರ್ವತೀದೇವಿಯೊಂದಿಗೆ ಸುಖವನ್ನು ಅನುಭವಿಸುವಳು. ಈ ಲೋಕದಲ್ಲಿ ಕೀರ್ತಿಯನ್ನು ಪಡೆಯುವಳು. ತಂದೆ, ಅಜ್ಜ, ಅಣ್ಣ ಅಥವಾ ತಮ್ಮ ಕುಲದ ಯಾವುದೇ ಹಿರಿಯ ಮನುಷ್ಯನು ಅಥವಾ ತಾಯಿ ಕೂಡ ಒಬ್ಬರಿಲ್ಲದೇ ಇನ್ನೊಬ್ಬರು ಕನ್ಯಾದಾನ ಮಾಡಿಕೊಡಲು ಅಧಿಕಾರಿಗಳಾಗಿದ್ದಾರೆ. ತಮ್ಮ ವಂಶದಲ್ಲಿ ಕನ್ಯಾದಾನ ಮಾಡಿಕೊಡುವವರು ಇಲ್ಲದಿದ್ದರೆ ಅಥವಾ ಇದ್ದವರು ಬಾರದಿದ್ದರೆ ಕನ್ಯೆಯು ತಾನೇ ಯೋಗ್ಯನಾದ ಪತಿಯನ್ನು ಆರಿಸಿಕೊಂಡು ಮದುವೆಯಾಗಬೇಕು. ಇಚ್ಛೆಯಿಲ್ಲದೇ ಬಲಾತ್ಕರಿಸಲ್ಪಟ್ಟ ಸ್ತ್ರೀಯರ ದೋಷವನ್ನು ಮಾನಸಿಕ ಋತು ಸ್ರಾವವೇ ಶುದ್ಧಗೊಳಿಸುವುದು. ಸ್ತ್ರೀಯರಿಗೆ ಉತ್ಸವ ವಿವಾಹಾದಿಗಳಲ್ಲಿ ಅವರು ಬಯಸಿದ ಬಟ್ಟೆ, ಬರೆ, ವಸ್ತು, ಒಡವೆ, ಮುಂತಾದವುಗಳನ್ನು ಕೊಟ್ಟು ಹಾಗೂ ಉತ್ತಮ ಅನ್ನಪಾನಾದಿಗಳನ್ನು ನೀಡಿ ಅವರಿಗೆ ಸತ್ಕಾರದ ಗೌರವವನ್ನು ಸಮರ್ಪಿಸಬೇಕು. ಅನ್ನ, ವಸ್ತ್ರ, ಅಲಂಕಾರಗಳಿಂದ ಪೂಜಿತರಾಗಿ ಸ್ತ್ರೀಯರು ಎಲ್ಲಿ ಪ್ರಸನ್ನ ಮನಸ್ಸಿನಿಂದ ಸಂತುಷ್ಟರಾಗುವರೋ ಅಲ್ಲಿ ಎಲ್ಲದೇವತೆಗಳು ಸಂತೋಷದಿಂದ ನಲಿದಾಡುತ್ತಾರೆ. ಅಲ್ಲಿ ಮಾಡಿದ ಎಲ್ಲ ಕರ್ಮಗಳೂ ಸಫಲವಾಗುತ್ತವೆ.

**ಯತ್ರ ತುಷ್ಯತಿ ಭರ್ತ್ರಾ ಸ್ತ್ರೀ ಸ್ತ್ರೀಯಾ ಭರ್ತಾ ಚ ತುಷ್ಯತಿ ।**
**ತತ್ರ ವೇಶ್ಮನಿ ಕಲ್ಯಾಣಂ ಸಂಪದ್ಯೇತ ಪದೇ ಪದೇ ॥**

ಯಾವ ಮನೆಯಲ್ಲಿ ಪತಿಯಿಂದ ಪತ್ನಿಯು, ಪತ್ನಿಯಿಂದ ಪತಿಯು ಪ್ರೀತಿಯಿಂದ ಸಂತುಷ್ಟರಾಗಿ ಇರುವರೋ ಆ ಮನೆಯಲ್ಲಿ ಹೆಜ್ಜೆ ಹೆಜ್ಜೆಗೂ ಕಲ್ಯಾಣ ಉಂಟಾಗುವುದು.

ಅಹುತ, ಹುತ, ಪ್ರಹುತ, ಪ್ರಾಶಿತ, ಬ್ರಹ್ಮಹುತ, ಎಂದು ಐದು ಬಗೆಯಾದ ಯಜ್ಞಗಳು ಶಾಸ್ತ್ರದಲ್ಲಿ ವಿಹಿತವಾಗಿವೆ. ನಾರಾಯಣ ಅಷ್ಟಾಕ್ಷರ, ಶಿವಪಂಚಾಕ್ಷರ, ಮಂತ್ರ ಜಪಗಳು ಅಹುತಯಜ್ಞ ಎಂದು ಕರೆಯಲ್ಪಡುತ್ತವೆ. ಹೋಮಹವನಗಳು ಹುತಯಜ್ಞ, ವೈಶ್ವದೇವ, ಬಲಿಹರಣಾದಿಗಳು ಪ್ರಹುತಯಜ್ಞ. ವೇದಶಾಸ್ತ್ರಗಳ ಅಧ್ಯಯನ, ಅಧ್ಯಾಪನಗಳು ಹಾಗೂ ವೇದಶಾಸ್ತ್ರಜ್ಞ ವಿದ್ವಾಂಸರಿಗೆ ಉಪಜೀವನವನ್ನು ಕಲ್ಪಿಸಿಕೊಡುವದು ಬ್ರಹ್ಮಯಜ್ಞ ಎನಿಸುತ್ತದೆ.

ಬ್ರಾಹ್ಮಣರು ಭೇಟಿಯಾದಾಗ ಕುಶಲವಷ್ಟೆ? ಎಂದು ಕುಶಲ ಪ್ರಶ್ನೆ ಮಾಡಬೇಕು. ಕ್ಷತ್ರಿಯರನ್ನು ಕಂಡಾಗ ನಿಮ್ಮೆಲ್ಲರಿಗೂ ಆರೋಗ್ಯ ತಾನೇ? ಎಂದು ಆರೋಗ್ಯದ ವಿಷಯವನ್ನುಕೇಳಬೇಕು. ವೈಶ್ಯ ಶೂದ್ರರನ್ನು ಭೇಟಿಯಾದಾಗ ಸುಖದಿಂದ ಇರುವಿರಷ್ಟೆ? ಎಂದು ಸಂತೋಷ ಪ್ರಶ್ನೆ ಮಾಡಬೇಕು. ತನ್ನ ಮೇಲೆಯೇ ಅವಲಂಬಿಸಿದ ತನ್ನ ಕುಟುಂಬದ ಜನ ಹಾಗೂ ಆಳು, ಕಾಳು ಸೇವಕ ಮೊದಲಾದವರ ಪಾಲನೆ ಪೋಷಣೆ ಮಾಡುವುದು ಮಹಾಪುಣ್ಯ. ಮಾಡದೇ ಇರುವುದು ಮಹಾಪಾಪ. ತಂದೆ, ತಾಯಿ, ಗುರು, ಮಡದಿ, ಮಕ್ಕಳು, ಶರಣು ಬಂದ ವ್ಯಕ್ತಿ, ಅಭ್ಯಾಗತ, ಅತಿಥಿ, ಹಾಗೂ ಅಗ್ನಿ ಈ ಒಂಭತ್ತು ಜನರು ಮನೆಯ ಯಜಮಾನನ ಪೋಷ್ಯವರ್ಗದಲ್ಲಿ ಸೇರುತ್ತಾರೆ. ತಾನು ತನ್ನ ಮಡದಿ ಮಕ್ಕಳನ್ನು ಮಾತ್ರ ಪೋಷಣ ಮಾಡುವ ಮನುಷ್ಯನ ಜೀವನವೇ ವ್ಯರ್ಥ. ಬೇರೆ ಬೇರೆ ಪುರುಷರ ಹಾಗೂ ಬೇರೆ ಬೇರೆ ಕುಟುಂಬಗಳ ಹಾಗೂ ವ್ಯಕ್ತಿಗಳ ಉಪಜೀವನವನ್ನು ಕಲ್ಪಿಸಿ ಬಹು ಜನರ ಜೀವನನಿರ್ವಾಹಕ್ಕೆ ಆಧಾರ ಆದ ಮನುಷ್ಯನ ಬದುಕು ಸಾರ್ಥಕ.

## ನವಚಕ್ರ

ಅತಿಥಿ ಅಭ್ಯಾಗತರು ಮನೆಗೆ ಬಂದಾಗ ಈ ಒಂಬತ್ತು ಮಾತುಗಳನ್ನು ಯಜಮಾನನು ಪಾಲಿಸಬೇಕು. ಇವುಗಳಿಗೆ ಗಾರ್ಹಸ್ಥ್ಯ ಜೀವನದ ನವನಿಯಮಗಳು ಎಂದು ಹೆಸರು. ಹೊರಗಿನಿಂದ ಅತಿಥಿ ಅಭ್ಯಾಗತರು ಬಂದಾಗ ಸೌಮ್ಯವಚನ, ಶಾಂತದೃಷ್ಟಿ, ಪ್ರೇಮ ತುಂಬಿದ ಮನಸ್ಸು, ಪ್ರಸನ್ನಮುಖ, ಎದ್ದು ಸ್ವಾಗತಿಸುವುದು, ಬನ್ನಿರಿ, ಕುಳಿತುಕೊಳ್ಳಿರಿ, ಎಂದು ಹೇಳುವುದು, ಪ್ರೀತಿಯಿಂದ ಮಾತನಾಡುವುದು, ಅವರ ಸನಿಹದಲ್ಲಿಯೇ ಕುಳಿತು ಸೇವೆಮಾಡುವುದು, ಅವರು ಮರಳಿ ಹೊರಟಾಗ ಅವರನ್ನು ಬೀಳ್ಕೊಡಲು ತುಸು ದೂರ ಹೋಗಿ ಬೀಳ್ಕೊಡುವುದು. ಇವು ಒಂಬತ್ತು ಗೃಹಸ್ಥರಿಗೆ ಉತ್ಕರ್ಷವನ್ನೂ, ಕೀರ್ತಿಯನ್ನೂ ಪುಣ್ಯವನ್ನೂ ತಂದುಕೊಡುವ ನವಕರ್ತವ್ಯಗಳು. ಬಂದ ಅತಿಥಿಗಳಿಗೆ ಮಾಡುವ ಸ್ವಾಗತ. ಸತ್ಕಾರಗೌರಾವಾದಿಗಳು ಕೂಡ ಒಂಭತ್ತು ಬಗೆಯವಾಗಿವೆ. ಬಂದವರಿಗೆ ಆಸನ ಕೊಡುವುದು, ಅವರ ಕಾಲು ತೊಳೆಯುವುದು, ಅಥವಾ ತೊಳೆಯಲು ನೀರು ಕೊಡುವುದು, ಯಥಾಶಕ್ತಿ ಭೋಜನ ಮಾಡಿಸುವುದು ಅವರಿಗೆ ಕೂಡಲಿಕ್ಕೂ, ನಿಲ್ಲಲಿಕ್ಕೂ, ಆಸನಗಳನ್ನು ಒದಗಿಸುವುದು. ಮಲಗಲಿಕ್ಕೆ ಹಾಸಿಗೆ, ಕೂಡಲು ಚಾಪೆ, ಕುಡಿಯಲು ನೀರು, ಅಭ್ಯಂಗಸ್ನಾನ ಹಾಗೂ ದೀಪ ಇವಿಷ್ಟೂ (ಒಂಭತ್ತು ವಸ್ತುಗಳನ್ನು) ಒದಗಿಸಬೇಕು. ಮುಂದೆ ಹೇಳಲಿರುವ ಒಂಬತ್ತು ದುರ್ಗುಣಗಳನ್ನು ಮನುಷ್ಯರು ಬಿಟ್ಟುಬಿಡಬೇಕು. ಚಾಡಿ, ಪರಸ್ತ್ರೀ ಗಮನ, ಪರದ್ರೋಹ, ಕೋಪ, ಅಸತ್ಯಭಾಷಣ, ಅಪ್ರಿಯ ವಚನ, ದ್ವೇಷ, ಜಂಭ, ಕಪಟ ಇವು ಒಂಬತ್ತು ದುರ್ಗುಣಗಳು ಮಾನವನ ಮುಂದಿನ ಸದ್ಗತಿಗೆ ಪ್ರತಿಬಂಧಕಗಳಾಗಿವೆ. ಇನ್ನು ಮಾನವರು ಅವಶ್ಯ ಮಾಡಬೇಕಾದ ಒಂಬತ್ತು ಧರ್ಮಗಳನ್ನು ಅಥವಾ ವೈದಿಕ ಕರ್ಮಗಳನ್ನು ಹೇಳುತ್ತೇನೆ ಕೇಳು.

**ನವಾವಶ್ಯಕ ಕರ್ಮಾಣಿ ಕಾರ್ಯಾಣಿ ಪ್ರತಿವಾಸರಂ ।**
**ಸ್ನಾನಂ ಸಂಧ್ಯಾ ಜಪೋ ಹೋಮಃ ಸ್ವಾಧ್ಯಾಯೋ ದೇವತಾರ್ಚನಂ ॥**
**ವೈಶ್ವದೇವಂ ತಥಾತಿಥ್ಯಂ ನವಮಂ ಪಿತೃತರ್ಪಣಂ ॥**

ಸ್ನಾನ, ಸಂಧ್ಯಾವಂದನೆ, ಮಂತ್ರಜಪ, ಹೋಮಹವನ ಅಧ್ಯಯನ ಅಧ್ಯಾಪನ, ದೇವರ ಪೂಜೆ, ವೈಶ್ವದೇವ, ಅತಿಥಿಗಳಿಗೆ ಅನ್ನದಾನ ಹಾಗೂ ಪಿತೃಗಳಿಗೆ ತರ್ಪಣ ಈ ಒಂಬತ್ತು ಕಾರ್ಯಗಳನ್ನು ಮಾನವರು ಪ್ರತಿನಿತ್ಯವೂ ತಪ್ಪದೇ ಮಾಡಬೇಕು.

ಮುನಿಯೇ! ಮಾನವರು ಒಂಬತ್ತು ವಿಷಯಗಳನ್ನು ಅತ್ಯಂತ ಗೌಪ್ಯವಾಗಿ ಇಡಬೇಕು. ತನ್ನ ಜನ್ಮ ನಕ್ಷತ್ರ, ಮೈಥುನಕ್ರಮ, ಮಂತ್ರ, ತಮ್ಮ ಮನೆಯ ಜನರ ಮೇಲಿನ ಕಲಂಕ, ತನ್ನ ಆಯುಷ್ಯ, ಸಂಪತ್ತು, ತನಗೆ ಆದ ಅವಮಾನ, ತಾನು ಮೋಸ ಹೋದದ್ದು ಅಥವಾ ಮೋಸ ಮಾಡಿದ್ದು ಈ ಒಂಭತ್ತು ವಿಷಯಗಳನ್ನು ಯಾರ ಮುಂದೆಯೂ ಹೇಳಬಾರದು. ತಾಯಿ, ತಂದೆ, ಗುರು, ಉಪಕಾರಮಾಡಿದವ ಅನಾಥ, ದೀನ, ವಿನೀತ, ಮಿತ್ರ, ಸತ್ಪಾತ್ರ, ಈ ಒಂಭತ್ತು ಜನರಿಗೆ ಏನೇ ನೀಡಿದರೂ ಯಾವುದನ್ನೇ ಕೊಟ್ಟರೂ ಅಕ್ಷಯವಾಗುತ್ತದೆ. ಸವಿಮಾತನಾಡುವ, ಹೊಗಳು ಭಟ್ಟ, ಕಳ್ಳ, ವ್ಯಸನಿ, ದಡ್ಡವೈದ್ಯ, ಧೂರ್ತ, ಕಪಟಿ, ದುಷ್ಟ, ಕುಸ್ತಿ, ಆಡುವವ ಹಾಗೂ ಕೈದಿ, ಇವರಿಗೆ ಕೊಟ್ಟದ್ದು ವ್ಯರ್ಥ. ತನ್ನ ಹೆಂಡತಿ, ನಂಬಿಗೆಯ ಸೇವಕ, ಎರಡನೇಯವರ ನಿಕ್ಷೇಪ (ಠೇವು) ಒತ್ತೆ ಇಟ್ಟುಕೊಂಡ ವಸ್ತು, ತನ್ನ ಉಪಜೀವನದ ಸಾಧನ, ಸ್ತ್ರೀ ಧನ, ಮಕ್ಕಳು, ವಾರಸುದಾರರು ಇದ್ದಾಗ ತನ್ನ ಐಶ್ವರ್ಯ,

ತನ್ನ ಮನೆಯ ದೇವರು, ಈ ಒಂಭತ್ತು ವಸ್ತುಗಳನ್ನು ಅಪತ್ಕಾಲದಲ್ಲಿ ಕೂಡ ಯಾರಿಗೂ ಕೊಡಕೂಡದು. ಸತ್ಯ, ಶೌಚ (ಮಡಿ, ಮೈಲಿಗೆ ಹಾಗೂ ಬಾಹ್ಯ ಅಂತರ ಪರಿಶುದ್ಧ) ಅಹಿಂಸೆ, ಕ್ಷಮಾ, ದಾನ, ದಯೆ, ಇಂದ್ರಿಯ ಸಂಯಮ, ಕಳವು ಮಾಡದೇ ಇರುವುದು, ಮನಸ್ಸಿನ ನಿಗ್ರಹ ಇವು ಒಂಭತ್ತು ಎಲ್ಲರಿಗೂ ಧರ್ಮಕ್ಕೆ ಸಾಧನೆಗಳಾಗಿವೆ.

**ಸತ್ಯಂ ಶೌಚಂ ಅಹಿಂಸಾ ಚ ಕ್ಷಾಂರ್ತಿದಾನಂ ದಯಾ ದಮಃ।**
**ಅಸ್ತೇಯಮಿಂದ್ರಿಯೂಕೋಚಃ ಸರ್ವೇಷಾಂ ಧರ್ಮಸಾಧನಂ**

ಯಾವ ಮನುಷ್ಯನ ನಾಲಿಗೆ, ಹೆಂಡತಿ, ಮಗ ಅಣ್ಣತಮ್ಮಂದಿರು, ಮಿತ್ರ, ಸೇವಕ, ಅಥವಾ ಆಶ್ರಿತ ಮನುಷ್ಯ ಈ ಆರು ವಸ್ತುಗಳು ಅಂಕಿತದಲ್ಲಿದ್ದು ವಿನಯಶೀಲ ವಾಗಿರುವವೋ ಅಂಥ ಮನುಷ್ಯನಿಗೆ ಎಲ್ಲ ಕಡೆಗೂ ಗೌರವ.

ಹೆಂಗಸು ದುಷ್ಟಭ್ರಷ್ಟ ಆಗುವಂತೆ ಮಾಡುವ ಆರು ದುರ್ಗುಣಗಳು ಇರುತ್ತವೆ.

**ಪಾನಂ ದುರ್ಜನ ಸಂಸರ್ಗಃ ಪತ್ಯಾಚ ವಿಹಾರಹೋಽಟನಂ।**
**ಸ್ವಪ್ನೋಽನ್ಯಗ್ರಹವಾಸಶ್ಚ ನಾರೀಣಾಂ ದೂಷಣಾನಿ ಷಟ್॥**

ಮದಿರಾಪಾನ, ದುರ್ಜನರ ಸಹವಾಸ, ಪತಿಯನ್ನು ಬಿಟ್ಟು ಇರುವುದು, ಮನ ಬಂದಲ್ಲಿ ತಿರುಗಾಟ, ಅತೀ ನಿದ್ದೆ, ಹೆರವರ ಮನೆಯಲ್ಲಿ ಇರುವುದು ಇವು ಆರು ಸ್ತ್ರೀಯರ ದೋಷಗಳು. ವೇದಾಧ್ಯಯನ ಮಾಡಿದವರಿಗೆ ನೀಡಿದ ಅನ್ನ ಸಾರ್ಥಕ. ವೇದಜ್ಞಾನ ವಿಲ್ಲದ ದುರಾಚಾರಿ ಬ್ರಾಹ್ಮಣನಿಗೆ ಉಣಬಡಿಸಿದ ಅನ್ನ ವ್ಯರ್ಥ. ವೇದ, ವೇದಾಂತ ಶಾಸ್ತ್ರಾಧ್ಯಯನ ಮಾಡಿ, ಮಾಡಿಸಿಯಾರ ಹೊಟ್ಟೆಯಲ್ಲಿ ಅನ್ನವು ಪಚನವಾಗುವುದೋ ಅಂಥ ವಿದ್ಯೆಯಲ್ಲಿ ಪರಿಶ್ರಮವನ್ನು ಪಡುವವರಿಗೆ ಅನ್ನವನ್ನು ನೀಡಿದರೆ ಹತ್ತು ತಲೆಮಾರಿನ ಅನ್ನದಾನಿಯ ಪಿತೃಗಳು ಉದ್ಧಾರ ಹೊಂದುವರು. ಅಣ್ಣನ ಮದುವೆಯಾಗದೇ ಮೊದಲು ವಿವಾಹ ಮಾಡಿಕೊಂಡು ತಮ್ಮ 'ಪರಿವೇತ್ತಾ' ಎಂದು ಕರೆಯಲ್ಪಡುತ್ತಾನೆ. ವಯಸಿನಲ್ಲಿ ತನಗಿಂತ ಕಿರಿಯನನ್ನು ಕೈ ಹಿಡಿದ ಕನ್ಯೆ, ಮಾಡಿಕೊಂಡ ವರ, ಧಾರೆಯೆರದ ತಂದೆ ತಾಯಿ, ಮದುವೆ ಮಾಡಿಸಿದ ಪುರೋಹಿತ, ಈ ಐವರು ನರಕದಲ್ಲಿ ಬೀಳುತ್ತಾರೆ. ಹಿರಿಯ ಅಣ್ಣನು ನಪುಂಸಕನಾಗಿದ್ದರೆ, ದೇಶಾಂತರದಲ್ಲಿ ಇದ್ದರೆ, ಸನ್ಯಾಸಿ ಆಗಿದ್ದರೆ, ಮೂರ್ಖನಾಗಿದ್ದರೆ, ಅತೀ ಕುಳ್ಳನಾಗಿದ್ದರೆ, ಪತಿತನಾಗಿದ್ದರೆ ಚಿಕ್ಕವರ ಮದುವೆ ಮಾಡಿಕೊಂಡರೆ ದೋಷವಿಲ್ಲ. ಸಂನ್ಯಾಸಿ ಆದ ಬಳಿಕ ಮತ್ತೆ ಸಂಸಾರಕ್ಕೆ ಇಳಿದರೆ ಅರವತ್ತು ಸಾವಿರ ವರ್ಷ ಹೊಲಸಿನಲ್ಲಿ ಕ್ರಿಮಿಯಾಗುತ್ತಾರೆ. ಬ್ರಹ್ಮಸ್ವ ದೇವಸ್ವವನ್ನು ಅಪಹರಿಸಿದವನೂ, ಬ್ರಾಹ್ಮಣರನ್ನು ತಿರಸ್ಕರಿಸಿದವನೂ, ಸಾಲಕೊಟ್ಟದ್ದನ್ನು ಮರಳಿಸದವನೂ, ನರಕಭಾಜನರಾಗುತ್ತಾರೆ. ಯಜ್ಞ ಕರ್ಮದಲ್ಲಿ ದೀಕ್ಷಿತರಾಗಿ ಕುಳಿತವರಿಗೂ, ಸನ್ಯಾಸಿ ಬ್ರಹ್ಮಚಾರಿಗಳಿಗೂ, ಕರ್ಮಕಾಂಡದಲ್ಲಿ ತೊಡಗಿದ ಋತ್ವಿಜರಿಗೂ ಸೂತಕ ಇರುವುದಿಲ್ಲ. ಸ್ಮಶಾನದಲ್ಲಿ ಇರುವ ಗಿಡ, ಚಿತೆ, ಮಾಂಸ ಭೋಜನ ಮಾಡುವವ, ವೇದ ಮಾರಾಟ ಮಾಡುವವ, ಇವರನ್ನು ಮುಟ್ಟಿದರೆ ಸ್ನಾನ ಮಾಡಬೇಕು. ಅಗ್ನಿಶಾಲೆ, ಗೋಶಾಲೆ, ದೇವಾಲಯ, ಭೋಜನಶಾಲೆ, ಹಾಗೂ ಬ್ರಾಹ್ಮಣರ ಸಮೀಪದಲ್ಲಿ ಹೋಗುವಾಗ ಪಾದರಕ್ಷೆಗಳನ್ನು ತೆಗೆದಿಟ್ಟು ಹೋಗಬೇಕು. ನೀಲಿ ಬಣ್ಣದಲ್ಲದ್ದಿಸಿದ ಬಟ್ಟೆಗಳನ್ನು ಉಡಬಾರದು. ದೇವರ ಪೂಜೆ, ವೇದಾಧ್ಯಯನ, ವೈಶ್ವದೇವ ಮಾಡುವವರ ಮನೆಯ ಅನ್ನವು ಅಮೃತ ಎನಿಸುತ್ತದೆ. ಅಂಥ ಅನ್ನವನ್ನೇ ಊಟ ಮಾಡಬೇಕು. ಮಾತು ಮಾತಿಗೆ ಆಣೆಯನ್ನು ಮಾಡಬಾರದು.

"ಏಕಾಂತಶೀಲಸ್ಯ ಸದೈವ ತಸ್ಯ ಸರ್ವೇಂದ್ರಿಯ ಪ್ರೀತಿ ನಿವರ್ತಕಸ್ಯ ।
ಸ್ವಾಧ್ಯಾಯಯೋಗೇ ಗತಮಾನಸಸ್ಯ ಮೋಕ್ಷೋಧ್ರುವಂ ನಿತ್ಯಮಹಿಂಸಕಸ್ಯ" ॥

ಏಕಾಂತದಲ್ಲಿದ್ದು ಭಗವದ್ಧ್ಯಾನಗೈಯುವ, ಯಾವಾಗಲೂ ತನ್ನ ಎಲ್ಲ ಇಂದ್ರಿಯಗಳನ್ನು ತಣಿಸುವುದೇ ತನ್ನ ಜೀವನದ ಗುರಿಯೆಂದು ತಿಳಿಯದೇ ಅದಷ್ಟನ್ನೇ ಮಾಡದೇ ವೇದಶಾಸ್ತ್ರಾದಿಗಳ ಅಧ್ಯಯನ, ಅಧ್ಯಾಪನ ರೂಪವಾದ ಜ್ಞಾನಯೋಗದಲ್ಲಿಯೇ ಮನಸ್ಸನ್ನು ಇಟ್ಟು ಸ್ವಾಧ್ಯಾಯದಲ್ಲಿ ನಿರತನಾದ, ಅಹಿಂಸೆಯನ್ನು ವ್ರತವೆಂದು ಆಚರಿಸುವ, ಸಜ್ಜನ ಮನುಷ್ಯನಿಗೆ ಮೋಕ್ಷವು ನಿಶ್ಚಿತವಾಗಿ ದೊರಕುವುದು. ಆದರೆ ಕಾಶಿಯಲ್ಲಿ ಈ ಎಲ್ಲ ಸದ್ಗುಣಗಳು ಇಲ್ಲದಿದ್ದರೂ ವಿಶ್ವನಾಥನ ಸೇವೆ ಹಾಗೂ ಗಂಗೆಯ ಸ್ನಾನ, ವ್ರತ, ದಾನ, ಯಮ, ನಿಯಮ, ಧ್ಯಾನಗಳಿಂದಲೇ ಮೋಕ್ಷವು ದೊರಕುವುದು.

## ವಾನಪ್ರಸ್ಥ; ಸನ್ಯಾಸ ಯೋಗಮಾರ್ಗ

**ಸ್ಕಂದ:-** ಮಹಾಮುನಿಯೇ, ಹೀಗೆ ಗೃಹಸ್ಥಾಶ್ರಮ ಧರ್ಮವನ್ನು ಪಾಲನೆ ಮಾಡುತ್ತ ಮುಪ್ಪು ಬಂದಾಗ ವಿರಕ್ತನಾಗಿ ಮನೆಮಾರು ತೊರೆದು ಮಡದಿಯೊಂದಿಗೆ ಅಥವಾ ಅವಳನ್ನು ಬಿಟ್ಟು ಅರಣ್ಯಕ್ಕೆ ಹೋಗಬೇಕು. ಅಲ್ಲಿ ಒಂದು ಆಶ್ರಮದಲ್ಲಿ ಇದ್ದು, ಮೃಗ ಚರ್ಮ ಅತವಾ ಹಳೆಯ ಬಟ್ಟೆಗಳನ್ನು ತೊಟ್ಟು, ಪ್ರತಿದಿನವೂ ಅಗ್ನಿಯಲ್ಲಿ ಹೋಮ ಮಾಡುತ್ತ ಹರಿಧ್ಯಾನನಿರತನಾಗಬೇಕು. ಇದೇ ವಾನಪ್ರಸ್ಥಾಶ್ರಮ. ಈಗ ಗಡ್ಡ, ಮೀಸೆ, ಉಗುರು, ತಲೆಗೂದಲುಗಳನ್ನು ಕತ್ತರಿಸಬಾರದು. ಎರಡು ಹೊತ್ತು ಸ್ಥಾನ, ಗೆಡ್ಡೆ, ಗೆಣಸುಗಳ ಆಹಾರ, ಅಪರಿಗ್ರಹ (ಯಾರಿಂದಲೂ ಎನ್ನನ್ನೂ ಸ್ವೀಕರಿಸದಿರುವುದು) ವೇದಾಂತ ಗ್ರಂಥಗಳ ಸ್ವಾಧ್ಯಾಯ, ಅಗ್ನಿಹೋತ್ರ, ಈರುಳ್ಳಿ, ಬೆಳ್ಳೊಳ್ಳಿ, ಮದ್ಯಮಾಂಸ ಮುಂತಾದ ನಿಷಿದ್ಧ ಪದಾರ್ಥಗಳ ಪರಿತ್ಯಾಗ ಬೇಯಿಸದ, ಉತ್ತಿ ಬಿತ್ತಿ ಬೆಳೆಯದ ಅನ್ನಭಕ್ಷಣ, ಒಂದೇ ಹೊತ್ತು ಭೋಜನ. ಚಾದ್ರಾಯಣ, ಮೊದಲಾದ ವ್ರತಾಚರಣ. ಇವು ವಾನಪ್ರಸ್ಥಾಶ್ರಮಿಯ ನಿಯಮಗಳು. ವಾನಪ್ರಸ್ಥಾಶ್ರಮಿಗಳಿಗೆ ಒಂದು, ಮೂರು, ಆರು, ಪರಮಾವಧಿ ಹನ್ನೆರಡು ತಿಂಗಳವರೆಗೆ ಆಹಾರವಸ್ತುಗಳನ್ನು ಸಂಗ್ರಹಿಸಿ ಇಡಲು ಅವಕಾಶವಿದೆ. ಕಂದಮೂಲಫಲಗಳನ್ನೇ ತಿಂದು, ತಪಸ್ಸು ಮಾಡಿ ದೇಹವನ್ನು ಸೊರಗಿಸಬೇಕು. ಅವು ದೊರಕದಿದ್ದರೆ ಬದುಕುವ ಮಟ್ಟಿಗೆ ವನವಾಸಿ ಅಥವಾ ಗ್ರಾಮವಾಸಿಗಳಿಂದ ಭಿಕ್ಷೆಬೇಡಿ ತಂದು ಎಂಟು ತುತ್ತು ಅನ್ನ ಮಾತ್ರ ಉಣ್ಣಬೇಕು. ಈ ಆಶ್ರಮಧರ್ಮವನ್ನು ಪಾಲಿಸುವವರು ಒರಳು, ಒನಕೆ, ಹಾರೆ, ಬೀಸುವ ಕಲ್ಲುಗಳನ್ನು ಉಪಯೋಗಿಸಕೂಡದು. ಕೈಯಲ್ಲಿ ಕುಟ್ಟಿ, ಹಲ್ಲುಗಳಿಂದಲೇ ಕಡಿದು, ಅಥವಾ ಕಲ್ಲ ಮೇಲೆ ಕುಟ್ಟಿ ಆಹಾರವನ್ನು ತಿನ್ನಬೇಕು. ಸಂಗ್ರಹಿಸಿ ಆಹಾರಧಾನ್ಯಗಳನ್ನು ಉಣ್ಣುವುದಾದರೆ ಒಂದು ದಿನ ಊಟ, ಒಂದು ದಿನ ಉಪವಾಸ (ಧಾರಣೆ ಪಾರಣೆ ವ್ರತ) ಮಾಡಬೇಕು. ಅಥವಾ ಎರಡು ದಿನ ಬಿಟ್ಟು ಮೂರನೇ ದಿನ ಸಾಯಂಕಾಲ ಊಟ ಮಾಡಬೇಕು. ಇಲ್ಲವೇ ಹದಿನೈದು ದಿನ ಅಥವಾ ತಿಂಗಳಿಗೊಮ್ಮೆ ಊಟ ಮಾಡಬೇಕು.

ಹೀಗೆ ವಾನಪ್ರಸ್ಥಾಶ್ರಮವನ್ನು ಆಯುಷ್ಯದ ಮೂರನೇ ಭಾಗದಲ್ಲಿ ಪಾಲಿಸಿ ನಾಲ್ಕನೇ ಭಾಗದಲ್ಲಿ ಸನ್ಯಾಸಾಶ್ರಮವನ್ನು ಸ್ವೀಕಾರ ಮಾಡಬೇಕು. ಯಜ್ಞಗಳಿಂದ ದೇವ ಋಣ, ಅಧ್ಯಯನದಿಂದ ಋಷಿ ಋಣ, ಶ್ರಾದ್ಧಆದಿಗಳಿಂದ ಪಿತೃಋಣಗಳನ್ನು ತೀರಿಸದೇ,

ಮಕ್ಕಳನ್ನು ಹಡೆಯದೇ ಸನ್ಯಾಸಾಶ್ರಮವವನ್ನು ಸ್ವೀಕಾರ ಮಾಡಬಾರದು. ಯತಿಯು ಏಕಾಕಿಯಾಗಿರಬೇಕು. ಭಿಕ್ಷೆಗೆ ಮಾತ್ರ ಗ್ರಾಮದಲ್ಲಿ ಬರಬೇಕು. ಸನ್ಯಾಸಿಯು ಬದುಕಲಿಕ್ಕೂ ಇಚ್ಛಿಸಬಾರದು. ಸಾಯಲಿಕ್ಕೂ ಇಚ್ಛಿಸಬಾರದು. ಯಾವ ವಸ್ತುವಿನ ಮೇಲೆಯೂ ಮಮತೆಯನ್ನು ಇಡಬಾರದು. ಯಾವಾಗಲೂ ಭಗವಂತನ ಧ್ಯಾನ ಮಾಡುತ್ತಲಿರಬೇಕು.

**ಧ್ಯಾನಂ ಶೌಚಂ ತಥಾ ಭಿಕ್ಷಾ ನಿತ್ಯಮೇಕಾಂತ ಶೀಲತಾ ।**
**ಯತೇಶ್ಚತ್ವಾರಿ ಕರ್ಮಾಣಿ ಪಂಚಮಂ ನೋಪಲಭ್ಯತೇ ॥**

ಸರ್ವದಾ ದೇವರ ಧ್ಯಾನ, ಶುಚಿರ್ಭೂತನಾಗಿರುವುದು, ಭಿಕ್ಷೆ ಮತ್ತು ಸರ್ವದಾ ಏಕಾಂತದಲ್ಲಿಯೇ ಇದ್ದು ಶ್ರೀಹರಿಯ ಆರಾಧನೆ ಮಾಡುವುದು. ಇವು ನಾಲ್ಕು ಯತಿಯು ಮಾಡಬೇಕಾದ ಕರ್ಮಗಳು. ಐದನೇಯ ಯಾವ ಕರ್ಮವನ್ನೂ ಯತಿಯು ಮಾಡಬಾರದು. ಮಳೆಗಾಲದ ನಾಲ್ಕು ತಿಂಗಳು ಯತಿಯು ಎಲ್ಲಿಯೂ ಸಂಚಾರ ಮಾಡಬಾರದು. ನಡೆಯುವಾಗ ತನ್ನ ಪಾದಘಾತದಿಂದ ಯಾವ ಪ್ರಾಣಿಯೂ ಸಾಯದಂತೆ ನೋಡಿಕೊಂಡು ನಡೆಯಬೇಕು. ವಸ್ತ್ರದಿಂದ ಸೋಸಿ ನೀರು ಕುಡಿಯಬೇಕು. ಎಂದೂ ಸಿಟ್ಟಿಗೇಳಬಾರದು. ಯಾರಿಂದಲೂ ಏನನ್ನೂ ಅಪೇಕ್ಷಿಸಬಾರದು. ತನಗಾಗಿ ಆಶ್ರಮ, ಮನೆ, ಕಟ್ಟಬಾರದು. ಯಾವಾಗಲೂ ಕೆಂಪು ಬಟ್ಟೆ ಧರಿಸಬೇಕು. ದಂಡವನ್ನೂ ಧರಿಸಬೇಕು. ಪ್ರಸಿದ್ಧಿ ಆಗದಂತೆ ಏಕಾಂತದಲ್ಲಿಯೇ ಇರಬೇಕು. ತುಂಬಿ, ಕಟ್ಟಿಗೆ, ಮಣ್ಣು, ಬಿದಿರುಗಳ ಪಾತ್ರೆಗಳನ್ನು ಮಾತ್ರ ಸನ್ಯಾಸಿಗಳು ಬಳಸಬೇಕು. ಬೇರೆ ಧಾತುಮಯ, ಹಿತ್ತಾಳೆ, ತಾಮ್ರ, ಕಂಚು, ಬೆಳ್ಳಿ ಮೊದಲಾದ ಪಾತ್ರೆಗಳನ್ನು ಹಿಡಿಯಬಾರದು.

**''ವರಾಟಕೇ ಸಂಗೃಹೀತೇ ಯತ್ರ ತತ್ರ ದಿನೇ ದಿನೇ ।**
**ಗೋಸಹಸ್ರ ವಧಂ ಪಾಪಂ ಶ್ರುತಿರೇಷಾ ಸನಾತನೀ'' ॥**

ಸನ್ಯಾಸಿಯಾದವನು ಎಂದಾದರೂ ಒಂದು ಕವಡಿಯಷ್ಟಾದರೂ ಹಣವನ್ನು ಸಂಗ್ರಹಿಸಿದರೆ ಸಾವಿರ ಹಸುಗಳನ್ನು ಕೊಂದ ಪಾಪವು ತಟ್ಟುವುದು ಎಂದು ಹಿಂದಿನ ಕಾಲದಿಂದಲೂ ಹೇಳುತ್ತ ಬಂದಿದ್ದಾರೆ. ಸ್ತ್ರೀಯರನ್ನಂತೂ ಸನ್ಯಾಸಿಯು ಎಂದೂ ನೋಡಬಾರದು.

**''ಹೃದಿ ಸಸ್ನೇಹ ಭಾವೇನ ಚೇದೀಕ್ಷೇತ್ ಸ್ತ್ರೀಯಮೇಕದಾ ।**
**ಕೋಟಿದ್ವಯಂ ಬ್ರಹ್ಮಕಲ್ಪಂ ಕುಂಭೀಪಾಕೀ ನ ಸಂಶಯಃ'' ॥**

ಯತಿಯು ಪ್ರೇಮಭಾವದಿಂದ ಒಮ್ಮೆಯಾದರೂ ಸ್ತ್ರೀಯರನ್ನು ನೋಡಿದರೆ ಎರಡು ಕೋಟಿವರ್ಷಗಳವರೆಗೆ ಕುಂಭೀಪಾಕ ನರಕದಲ್ಲಿ ಬೀಳುತ್ತಾನೆ. ಸನ್ಯಾಸಿಯು ದಿನಕ್ಕೆ ಒಂದೇ ಸಲ ಭಿಕ್ಷೆಗೆ ಹೋಗಬೇಕು. ಅಲ್ಪಾಹಾರವನ್ನು ಉಣ್ಣಬೇಕು. ಏಕಾಂತದಲ್ಲಿ ಇರಬೇಕು. ವಿಷಯಲೋಲುಪತೆಯನ್ನು ಬಿಡಬೇಕು. ರಾಗದ್ವೇಷಗಳನ್ನು ತೊರೆಯಬೇಕು. ಇಂಥ ಸನ್ಯಾಸಿಯು ಮೋಕ್ಷವನ್ನು ಹೊಂದುತ್ತಾನೆ. ಇಂಥ ವಿರಕ್ತ ಯತಿಗಳು ಯಾರ ಮನೆಯಲ್ಲಿ ವಿಶ್ರಾಂತಿ ತೆಗೆದುಕೊಳ್ಳುವರೋ, ಆ ಗೃಹಸ್ಥನು ಕೃತಾರ್ಥನಾಗುವನು. ಸನ್ಯಾಸಿಯು ಒಂದು ರಾತ್ರಿ ಯಾರ ಮನೆಯಲ್ಲಿ ವಿಶ್ರಮಿಸುವನೋ ಆ ಗೃಹಸ್ಥನು ಮರಣ ಕಾಲದವರೆಗೆ ಸಂಚೈಸಿದ ಪಾಪರಾಶಿ ಎಲ್ಲವೂ ಸುಟ್ಟು ಭಸ್ಮವಾಗುತ್ತದೆ.

ಪಾತ್ರೆಯನ್ನು ಹಿಡಿಯದೇ ಕೈಯಲ್ಲಿಯೇ ಭಿಕ್ಷೆಯನ್ನು ಹಾಕಿಸಿಕೊಳ್ಳುವ ಯತಿಗೆ 'ಕರಪಾತ್ರಿ' ಎನ್ನುವರು. ಉಳಿದ ಯತಿಗಳಿಗಿಂತ ಈ ಕರಪಾತ್ರಿ ಯತಿಗೆ ನೂರು ಪಟ್ಟು ಪುಣ್ಯ ಹೆಚ್ಚು. ಶೃತಿ, ಸ್ಮೃತಿ, ಪುರಾಣ, ವಿದ್ಯಾ, ಉಪನಿಷತ್ತು, ಶ್ಲೋಕ, ಸೂತ್ರ, ಭಾಷ್ಯ, ಹಾಗೂ

ಉಳಿದೆಲ್ಲ ಧಾರ್ಮಿಕ ವಾಙ್ಮಯಗಳ ಜ್ಞಾನವನ್ನು ಪಡೆಯುವುದೂ ಬ್ರಹ್ಮಚರ್ಯ, ಇಂದ್ರಿಯ ನಿಗ್ರಹ, ಶ್ರದ್ಧೆ, ಉಪವಾಸ, ಇವು ಎಲ್ಲವೂ ಆತ್ಮಜ್ಞಾನಕ್ಕೆ ಹಿತವಾಗಿವೆ. ಈ ಆತ್ಮಜ್ಞಾನದಿಂದಲೇ ಮುಕ್ತಿ. ಆದರೆ ಆ ಆತ್ಮಜ್ಞಾನವು ಯೋಗವಿಲ್ಲದೇ ದೊರೆಯುವುದಿಲ್ಲ. ಆ ಯೋಗವು ದೀರ್ಘಕಾಲದ ಅಭ್ಯಾಸದಿಂದ ಮಾತ್ರ ಸಾಧ್ಯ. ಇಂಥ ಆತ್ಮಜ್ಞಾನವು ಕೇವಲ ಅಡವಿಯಲ್ಲಿ ಹೋಗಿ ಕೂಡುವುದರಿಂದಾಗಲೀ, ಬಗೆ ಬಗೆಯ ಗ್ರಂಥಗಳ ಚಿಂತನ ದಿಂದಾಗಲೀ, ದಾನ ವ್ರತ, ತಪಸ್ಸು, ಯಜ್ಞ, ಪದ್ಮಾಸನ ಧ್ಯಾನ, ಶೌಚ, ಮೌನ, ಮಂತ್ರಾರಾಧನೆ ಮುಂತಾದವುದಾಗಲಿ ಸಿದ್ಧಿಯಾವಾಗುವುದಿಲ್ಲ. ಆತ್ಮ ಮತ್ತು ಮನಸ್ಸು ಇವೆರಡರ ಸಂಯೋಗಕ್ಕೆ ವಿದ್ವಾಂಸರು ಯೋಗ ಎಂದು ಕರೆಯುತ್ತಾರೆ. ಪ್ರಾಣ ಮತ್ತು ಅಪಾನವಾಯುಗಳ ಸಮ್ಯಕ್ ಮಿಲನವೇ 'ಯೋಗ', ಎಂದು ಕೆಲವರ ಅಭಿಪ್ರಾಯ. ಅಜ್ಞಾನಿಗಳ ದೃಷ್ಟಿಯಲ್ಲಿ ಇಂದ್ರಿಯ ಹಾಗೂ ವಿಷಯಗಳ ಸಂಯೋಗವೇ ಯೋಗ. ಆದರೆ, ಯಾರ ಚಿತ್ತವು ವಿಷಯಗಳಲ್ಲಿ ಆಸಕ್ತವಾಗಿದೆಯೋ ಅವನಿಗೆ ಜ್ಞಾನ ಹಾಗೂ ಮೋಕ್ಷಗಳು ಬಹುದೂರ. ಯಾರು ತಮ್ಮ ಮನಸ್ಸನ್ನು ವೃತ್ತಿಗಳಿಂದ ರಹಿತವಾಗಿ ಮಾಡಿ, ಆ ಮನಸ್ಸನ್ನು ಕ್ಷೇತ್ರಜ್ಞನಾದ ಪರಮಾತ್ಮನಲ್ಲಿಟ್ಟು ಸ್ವಯಂ ಮನಸ್ಸಿನ ಆಸಕ್ತಿಯಿಂದ ಮುಕ್ತನಾಗುವನೊ ಅವನು ಯೋಗ ಯುಕ್ತ ಎಂದು ಕರೆಯಲ್ಪಡುವನು. ಮೊದಲು ಬರ್ಹಿಮುಖವಾದ ಇಂದ್ರಿಯಗಳನ್ನು ಅಂತರ್ಮುಖ ಮಾಡಿಕೊಂಡು ಅವುಗಳನ್ನು ಮನಸ್ಸಿನ ಆಧೀನದಲ್ಲಿ ಸ್ಥಾಪಿಸಬೇಕು. ಅನಂತರ ಇಂದ್ರಿಯ ಸಹಿತವಾದ ಆ ಮನಸ್ಸನ್ನು ಕ್ಷೇತ್ರಜ್ಞ ಆತ್ಮನಲ್ಲಿ ಇರಿಸಬೇಕು. ಸರ್ವವಿಕಾರ ರಹಿತನಾದ ಕ್ಷೇತ್ರಜ್ಞನನ್ನು ಪರಮಾನಂದ ಸ್ವರೂಪಿಯಾದ ಬ್ರಹ್ಮನಲ್ಲಿ ಏಕೀಭೂತ ತನ್ಮಯ ಎಂದು ಚಿಂತಿಸಬೇಕು. ಇದೇ ಧ್ಯಾನ. ಇದೇ ಯೋಗ. ಉಳಿದುದೆಲ್ಲ ಗ್ರಂಥ ವಿಸ್ತಾರ ಮಾತ್ರ.

**''ಆಸನಂ ಪ್ರಾಣಸಂರೊಧಃ ಪ್ರತ್ಯಾಹಾರಶ್ಚ ಧಾಣಾ ।**
**ಧ್ಯಾನಂ ಸಮಾಧಿರೇತಾನಿ ಯೋಗಾಂಗಾನಿ ಭವಂತಿ ಷಟ್'' ॥**

ಆಸನ, ಪ್ರಾಣಯಾಮ ಪ್ರತ್ಯಾಹಾರ (ವಿಷಯಗಳ ಕಡೆಗೆ ಓಡುವ ಮನಸ್ಸನ್ನು ನಿಯಂತ್ರಿಸಿ ತಿರುಗಿಸಿ ಭಗವದಭಿಮುಖವಾಗಿ ಮಾಡುವುದು). ಮನಸ್ಸಿನಲ್ಲಿ ಭಗವಂತನ ವಿರಾಡ್ರಾರೂಪ ಹಾಗೂ ಸೂಕ್ಷ್ಮರೂಪಗಳನ್ನು ಗಟ್ಟಿಯಾಗಿ ಹಿಡಿದು ನಿಲ್ಲಿಸಿಕೊಳ್ಳುವುದು, ಧ್ಯಾನ ಮತ್ತು ಸಮಾಧಿ ಇವು ಆರು ಯೋಗದ ಅಂಗಗಳು. ಸಾಧನಕ್ಕಾಗಿ ಗಟ್ಟಿಯಾಗಿ, ಸುಖದಿಂದ ಕೂಡುವುದೇ ಆಸನ. ಸಿದ್ಧಾಸನವು ಯೋಗಿಗೆ ಶೀಘ್ರ ಸಿದ್ಧಿಯನ್ನು ಕೊಡುವುದಾಗಿದೆ. ಅದರ ಅಭ್ಯಾಸದಿಂದ ಮಾನವರ ದೇಹಗಳು ಗಟ್ಟಿಮುಟ್ಟಿಯಾಗುತ್ತ ಹೋಗುವವು. ಬಲಗಾಲನ್ನು ಎಡಗಾಲಿನ ಮೊಣಕಾಲಿನ ಮೇಲೆ ಇಟ್ಟು, ಎಡಗಾಲನ್ನು ಬಲತೊಡೆಯ ಮೇಲೆ ಇಟ್ಟರೆ ಅದು ಪದ್ಮಾಸನ, ಎನಿಸುವುದು. ಈ ಪದ್ಮಾಸನದ ಅಭ್ಯಾಸದಿಂದ ಮನುಷ್ಯನ ಶರೀರವು ಗಟ್ಟಿಯಾಗುವುದು ಅಥವಾ ಸ್ವಸ್ತಿಕಾಸನದ ಮೇಲೆ ಕುಳಿತರೆ ಸುಖ ಎನಿಸುತ್ತಿದ್ದರೆ ಹಾಗೇ ಕುಳಿತು ಯೋಗಾಭ್ಯಾಸವನ್ನು ಮಾಡಬೇಕು. ಸಾಧಕರು ಹೆಚ್ಚು ಊಟವನ್ನು ಮಾಡಬಾರದು. ಹಸಿವೆಯಿಂದ ಪೀಡಿತರಾಗಿ ಆಸನ ಹಾಕಬಾರದು. ಮತ್ತು ಯೋಗಾಭ್ಯಾಸ ಮಾಡಬಾರದು. ಮಲಮೂತ್ರ ವಿರೋಧಿಸಿ ಅಥವಾ ಮಾರ್ಗಾಯಾಸದಿಂದ ದಣಿದು ಬಂದಾಗ, ಚಿಂತಾಗ್ರಸ್ತನಾದಾಗ ಯೋಗಾಭ್ಯಾಸವನ್ನು ಮಾಡಕೂಡದು. ಹನ್ನೆರಡು ಮಾತ್ರೆಗಳ ಪ್ರಾಣಾಯಮ ಕನಿಷ್ಠ. ಇಪ್ಪತ್ನಾಕು ಮಾತ್ರೆಗಳ

ಪ್ರಾಣಾಯಾಮ ಮಧ್ಯಮ ಮೂವತ್ತಾರು ಮಾತ್ರೆಗಳ ಪ್ರಾಣಾಯಾಮಗಳು ಉತ್ತಮ. ಇವು ಮೂರು ಬೆವರು, ನಡಗು, ವಿಷಾದಗಳನ್ನು ಹುಟ್ಟಿಸುತ್ತವೆ. ಇವುಗಳಲ್ಲಿ ಮೊದಲಿನ ಪ್ರಾಣಾಯಾಮದಿಂದ ಬೆವರನ್ನು ಗೆಲ್ಲಬೇಕು. ಎರಡನೆಯ ಇಪ್ಪತ್ನಾಕು ಮಾತ್ರೆಗಳುಳ್ಳ ಪ್ರಾಣಾಯಾಮದಿಂದ ಕಂಪ ಅಥವಾ ನಡುಕವನ್ನು ಗೆಲ್ಲಬೇಕು. ಮೂವತ್ತಾರು ಮಾತ್ರೆಯುಳ್ಳ ಪ್ರಾಣಾಯಾಮದಿಂದ ವಿಷಾದವನ್ನು ಗೆಲ್ಲಬೇಕು.

ಒಂದು ಹ್ರಸ್ವಸ್ವರವನ್ನು ಉಚ್ಚಾರಮಾಡುವ ಸಮಯಕ್ಕೆ ಒಂದು ಮಾತ್ರಾ ಎನ್ನುವರು. ಇದರಿಂದ ಯೋಗಿಯ ಪ್ರಾಣಾಯಮವು ಸಿದ್ಧವಾದಂತಾಗುವುದು. ಕ್ರಮವಾಗಿ ಅಭ್ಯಾಸಮಾಡಿ ಸೇವಿಸಿದಾಗ ಸಿದ್ಧವಾದ ಪ್ರಾಣವು ಯೋಗಿಯು ಬಯಸಿದಲ್ಲಿ ಅವನನ್ನು ತೆಗೆದುಕೊಂಡು ಹೋಗುತ್ತದೆ. ಪ್ರಾಣವಾಯುವನ್ನು ಹಟದಿಂದ ತಡೆದು ನಿಲ್ಲಿಸಿದರೆ ಅದು ರೋಮಕೂಪ ದ್ವಾರದಿಂದ ಹೋಗಿಬಿಡುತ್ತದೆ. ಕಾಡಿನಲ್ಲಿ ಮದ್ದಾನೆಯನ್ನು ಹಿಡಿಯುವಂತೆ ಪ್ರಾಣವಾಯುವನ್ನು ಮೆಲ್ಲಮೆಲ್ಲನೇ ತಡೆಯುವ ಯತ್ನವನ್ನು ಮಾಡಬೇಕು. ಯೋಗಿಯ ಕ್ರಮಯೋಗದಿಂದ ಹೃದಯದಲ್ಲಿ ಸ್ಥಾಪಿತವಾದ ಈ ಪ್ರಾಣವು ಮೆಲ್ಲಮೆಲ್ಲನೇ ಅನುಕೂಲವಾಗುವುದು. ಮೂವತ್ತಾರು ಅಂಗುಲದ ಹಂಸವು (ಪ್ರಾಣ ವಾಯುವು) ದಕ್ಷಿಣ ಇಡಾಪಿಂಗಲಾ ಎಂಬ ಹೆಸರಿನ ಎರಡು ನಾಡಿಗಳಿಂದ ಹೊರಗೆ ಬರುತ್ತದೆ. ಅದು ಮುಂದೆ ಪ್ರಯಾಣ ಬೆಳೆಸುವುದರಿಂದ ಅದಕ್ಕೆ ಪ್ರಾಣ ಎಂದು ಹೆಸರು. ಎಲ್ಲ ದೇಹದೊಳಗಿನ ನಾಡಿಚಕ್ರವು ಶುದ್ಧವಾಗಿ ಶುದ್ಧವಾದ ಬಳಿಕ ಯೋಗಿಪುರುಷನು ತನ್ನ ಪ್ರಾಣವನ್ನು ತಡೆಹಿಡಿಯಲು ಸಮರ್ಥನಾಗುತ್ತಾನೆ.

ಆಸನದ ಮೇಲೆ ಧೃಡವಾಗಿ ಕುಳಿತುಕೊಂಡು ಯೋಗಿಯು ಚಂದ್ರನಾಡಿಯ ಇಡಾಮಾರ್ಗದಿಂದ ನಾಸಿಕೆಯ ಎಡಹೊರಳಿಯ ದ್ವಾರದಿಂದ ಪ್ರಾಣವಾಯುವನ್ನು ಒಳಗೆ ತುಂಬಬೇಕು. ಅನಂತರ ಸೂಯಮಾರ್ಗ-ಪಿಂಗಲಾನಾಡಿ (ಮೂಗಿನ ಬಲಹೊರಳೆ)ಯಿಂದ ಹೊರಬಿಡಬೇಕು. ಇದಕ್ಕೆ ಪೂರಕ, ರೇಚಕ, ಎಂಬ ಹೆಸರಿನ ಪ್ರಾಣಾಯಾಮ ಎನ್ನುತ್ತಾರೆ ಯೋಗಿಪುರುಷನು ಕುಂಭಕ ಎಂಬ ಪ್ರಾಣಾಯಾಮದ ಮುಖಾಂತರ ಚಂದ್ರಬೀಜದಿಂದ ಕೂಡಿದ ಸುಧಾಧಾರೆಯ ಪ್ರವಾಹದ ಧ್ಯಾನಗೈಯುತ್ತ ತತ್ಕಾಲದಲ್ಲಿ ಸುಖವನ್ನು ಅನುಭವಿಸುತ್ತಾನೆ. ಬಳಿಕ ಯೋಗಿಯು ಸೂರ್ಯನಾಡಿ ಅರ್ಥಾತ್ ನಾಸಿಕೆಯ ಬಲಛಿದ್ರ ದ್ವಾರದಿಂದ ಪ್ರಾಣವಾಯುವನ್ನು ಸೆಳೆದುಕೊಂಡು ಹೃದಯ ಗುಹೆಯನ್ನು ತುಂಬಿಕೊಳ್ಳಬೇಕು. ಸ್ವಲ್ಪಹೊತ್ತಿನ ತನಕ ಪ್ರಾಣವಾಯುವನ್ನು ತಡೆಹಿಡಿದು ಅನಂತರ ಚಂದ್ರನಾಡಿ ಅರ್ಥಾತ್ ಮೂಗಿನ ಎಡ ಛಿದ್ರದಿಂದ ವಾಯುವನ್ನು ಮೆಲ್ಲ ಮೆಲ್ಲನೆ ಹೊರಗೆ ತಳ್ಳಬೇಕು. ಆ ಸಮಯದಲ್ಲಿ ಅಗ್ನಿಪುಂಜದಂತೆ ದೇದೀಪ್ಯಮಾನನಾದ ಸೂರ್ಯ ನಾರಾಯಣನನ್ನು ಹೃದಯದಲ್ಲಿ ಧ್ಯಾನಮಾಡಬೇಕು. ಈ ರೀತಿಯಾಗಿ ದಕ್ಷಿಣ ಪ್ರಾಣಾಯಾಮದಿಂದ ಯೋಗಿಯು ಕಲ್ಯಾಣಭಾಗಿ ಆಗುತ್ತಾನೆ. ಹೀಗೆ ಮೂರು ತಿಂಗಳವರೆಗೆ ಅಭ್ಯಾಸಮಾಡಿ ವಾಮ ದಕ್ಷಿಣ ಎರಡೂ ಪ್ರಕಾರದ ಪ್ರಣಾಯಾಮ ಮಾಡಿ ಸಮಸ್ತ ನಾಡಿಗಳನ್ನು ಸಿದ್ಧ ಮಾಡಿಕೊಂಡ ಬಳಿಕ ಆ ಸಾಧಕನಿಗೆ ಸಿದ್ಧಪ್ರಾಣ ಎಂದು ಕರೆಯುತ್ತಾರೆ.

ಹೀಗೆ ನಾಡೀ ಶುದ್ಧಿಯನ್ನು ಸಾಧಿಸಿಕೊಂಡ ಬಳಿಕ ಯೋಗಿಯು ತನ್ನ ಇಚ್ಛಾನುಸಾರ ವಾಯುವನ್ನು ಧಾರಣಮಾಡುತ್ತಾನೆ. ತನ್ನ ಹೊಟ್ಟೆಯ ಜಾಠರಾಗ್ನಿಯನ್ನು ಉದ್ದೀಪಿತ

ಗೊಳಿಸುತ್ತಾನೆ. ಆದರಿಂದ ಅನಾಹತನಾದವು ಕೇಳಿ ಬರುತ್ತದೆ. ನಾದ ತತ್ವದ ಸಾಕ್ಷಾತ್ಕಾರವೂ ಆಗುತ್ತದೆ. ಪ್ರಾಣವಾಯುವು ಬ್ರಹ್ಮ ರಂಧ್ರವನ್ನು ತಲುಪಿದಾಗ ಗಂಟೆ ಮುಂತಾದ ವಾದ್ಯಗಳ ಮಹಾನಾದವು ಕೇಳಿ ಬರುತ್ತದೆ. ಈ ಘಂಟಾದಿ ವಾದ್ಯ ನಾದವು ಶ್ರುತವಾದ ಬಳಿಕ ಯೋಗಸಿದ್ಧಿಯು ದೂರವಿಲ್ಲ. ನಿಯಮಿತ ಪ್ರಾಣಾಯಾಮದಿಂದ ನಷ್ಟವಾಗಿ ಹೋಗುತ್ತವೆ ಸಕಲ ರೋಗಗಳು. ಪ್ರಾಣಾಯಾಮದ ಅನಿಮಿತ ಅವ್ಯವಸ್ಥಿತ ಆಚರಣೆಯಿಂದ ಎಲ್ಲ ರೋಗಗಳ ಉತ್ಪತ್ತಿ ಆಗುತ್ತದೆ. ಪ್ರಾಣವಾಯುವಿನ ವ್ಯತಿಕ್ರಮದಿಂದಲೇ ದಮ್ಮು, ಕೆಮ್ಮು, ತಲೆಶೂಲೆ, ಕಿವಿಶೂಲೆ, ಬಿಕ್ಕಳಿಕೆ, ನೇತ್ರರೋಗ ಮುಂತಾದ ಬಗೆಬಗೆಯ ವ್ಯಾಧಿಗಳು ತಲೆದೋರುತ್ತವೆ. ಆದುದರಿಂದ ವಾಯುವನ್ನು ಕೊಂಚ ಕೊಂಚವಾಗಿ ಬಿಡಬೇಕು ಸ್ವಲ್ಪಸ್ವಲ್ಪವಾಗಿಯೇ ವಾಯುವನ್ನು ಎಳೆದುಕೊಂಡು ಒಳಗೆ ತುಂಬಿಕೊಳ್ಳಬೇಕು. ನಿಯಮಿತ ವಾಯುವನ್ನೇ ತಡೆಹಿಡಿಯಲು ಪ್ರಯತ್ನಿಸಬೇಕು. ಹೀಗೆ ಮಾಡುವದರಿಂದ ಮಾತ್ರವೇ ಯೋಗಿ ಪುರುಷನು ಸಿದ್ಧಿಯನ್ನು ಪಡೆಯುತ್ತಾನೆ.

## ಪ್ರತ್ಯಾಹಾರ

ಇದೆಲ್ಲವೂ ಪ್ರಾಣಾಯಾಮದ ಕ್ರಮವಾಯಿತು. ಇನ್ನು ಪ್ರತ್ಯಾಹಾರದ ಬಗೆಗೆ ತಿಳಿಸುತ್ತೇನೆ. ಎಲ್ಲ ಕಡೆಯಿಂದಲೂ ವಿಷಯಗಳ ಕಡೆಗೆ ಧಾವಿಸಿ ಅಲ್ಲಿಯೇ ಸ್ವಚ್ಛಂದವಾಗಿ ವಿಹರಿಸುತ್ತಲಿರುವ ಇಂದ್ರಿಯಗಳನ್ನು ಒಂದಿಲ್ಲ ಒಂದು ಹಂಚಿಕೆಯಿಂದ ತಿರುಗಿಸಿ ಉಪಸಂಹಾರ ಮಾಡಿಕೊಳ್ಳುವುದೇ ಪ್ರತ್ಯಾಹಾರ ಆಮೆಯು ಹೊರಗೆ ಚಾಚಿದ ತನ್ನ ಅವಯವಗಳನ್ನೆಲ್ಲ ತನ್ನ ಇಚ್ಛೆಯಿಂದ ಒಳಗೆ ಎಳೆದುಕೊಳ್ಳುವಂತೆ ಯೋಗಿಯು ವಿಷಯಗಳಲ್ಲಿ ಹೊರಳಾಡುತ್ತಿರುವ ಇಂದ್ರಿಯಗಳನ್ನೆಲ್ಲ ಅಲ್ಲಿಂದ ಸೆಳೆದುಕೊಂಡು ಅಂತರ್ಮುಖಿಯನ್ನಾಗಿ ಮಾಡುವುದರಿಂದ ಪಾಪರಹಿತನಾಗುತ್ತಾನೆ. ನಾಭಿಪ್ರದೇಶದಲ್ಲಿ ಸೂರ್ಯ ಮುಖದ ಒಳಗೆ ನಾಲಿಗೆಯ ಮೇಲೆ ತಾಲು ಸ್ಥಾನದಲ್ಲಿ ಚಂದ್ರನ ನಿವಾಸ. ಚಂದ್ರನು ಕೆಳಗೆ ಮುಖಮಾಡಿ ಆ ಅಮೃತರಸವನ್ನು ಪಾನಮಾಡುತ್ತಾನೆ. ವಿಪರೀತ ಕರಣಿ ಮುದ್ರೆಯಿಂದ ನಾಭಿಯನ್ನೇ ಮೇಲೆ ಮಾಡಿ ತಾಲುವನ್ನು ಕೆಳಗೆ ಮಾಡಬಹುದು.

ಅಂದರೆ ಸೂರ್ಯನು ಮೇಲಾಗಿ ಚಂದ್ರನು ಕೆಳಗಾಗುವನು. ಇದು ಅಭ್ಯಾಸದಿಂದಲೇ ಸಿದ್ಧವಾಗುವುದು. ಪ್ರಾಣಾಯಾಮದ ವಿಧಿಯಲ್ಲಿ ಪಳಗಿದ ಯೋಗಿಯು ಕಾಗೆಯ ಚಂಚುವಿನಂತೆ ತನ್ನ ಮುಖಮಾಡಿ ಆದರಿಂದಲೇ ಶೀತಾತಿ ಶೀತಲವಾದ ಪ್ರಾಣಧಾರಕ ವಾಯುವನ್ನು ಪಾನಮಾಡಬೇಕು. ಇದರಿಂದ ಮುಪ್ಪು ಸಾವುಗಳ ಮೇಲೆ ಗೆಲವು ಸಾಧಿಸ ಬಹುದು. ಯಾವ ಯೋಗಿಯು ನಾಲಿಗೆಯನ್ನು ಮೇಲೆ ಮಾಡಿ ಅಮೃತಪಾನವನ್ನು ಮಾಡಲು ಸಮರ್ಥನಾಗುವುನೋ ಅವನು ಹದಿನೈದು ದಿನಗಳಲ್ಲಿ ಮರಣವನ್ನು ಗೆದ್ದು ಮೃತ್ಯುಂಜಯ ನಾಗುವನು. ನಾಲಿಗೆಯ ತುದಿಯಿಂದ ಆದರ ಮೂಲ ಭಾಗದಲ್ಲಿ ಇದ್ದ ಛಿದ್ರವನ್ನು ಮುಚ್ಚಿ ಅಮೃತಮಯಿಯಾದ ದೇವಿಯನ್ನು ಧ್ಯಾನ ಮಾಡಿದವನು ಆರು ತಿಂಗಳಲ್ಲಿ ಮಹಾಕವಿ ಆಗುತ್ತಾನೆ. ಹೀಗೆ ತನ್ನ ಯೋಗ ಕೌಶಲ್ಯದಿಂದ ತನ್ನ ಶರೀರದಿಂದಲೇ ಅಮೃತಪಾನ ಮಾಡಿದ ಯೋಗಿಯು ಮೂರು ವರುಷಗಳಲ್ಲಿ 'ಊರ್ಧ್ವ' ರೇತಸ್ಕನು ಆಗುತ್ತಾನೆ. ಈ ಮಟ್ಟವನ್ನು ಮುಟ್ಟಿದ ಯೋಗಿಗೆ ಅಣಿಮಾ, ಲಘಿಮಾ, ಮುಂತಾದ ಎಂಟು ಸಿದ್ಧಿಗಳ ಉದಯದ ಸೂಚನೆ ದೊರಕುತ್ತದೆ. ಅಮೃತಕಲೆಯಿಂದ ಪರಿಪೂರ್ಣವಾಗಿ ಅಮೃತಪಾನದಿಂದ ಪರಿಪುಷ್ಟವಾದ

ಯೋಗಿಯ ದೇಹವನ್ನು ತಕ್ಷಕ ನಾಗ ಬಂದು ಕಚ್ಚಿದರೂ ಅವನ ಮೇಲೆ ವಿಷದ ಪ್ರಭಾವ ಬೀಳುವುದಿಲ್ಲ. ಹೀಗೆ ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಈ ಮೂರರಿಂದ ಸಂಪನ್ನನಾಗಿ ಮನುಷ್ಯನು ಧಾರಣಾವನ್ನು ಅಭ್ಯಾಸಮಾಡಬೇಕು. ಮನಸ್ಸನ್ನು ಸ್ಥಿರಮಾಡಿಕೊಂಡು ತನ್ನ ಹೃದಯದಲ್ಲಿ ಪಂಚಮಹಾಭೂತಗಳ ಪ್ರೇರಕನಾದ ಪರಮೇಶ್ವರನನ್ನು ಸ್ಥಿರವಾಗಿ ನಿಲ್ಲಿಸಿಕೊಳ್ಳುವುದೇ ಧಾರಣಾ ಎಂದು ಕರೆಯಲ್ಪಡುತ್ತದೆ.

## ಧ್ಯಾನ

'ಧ್ಯೈ ಚಿಂತಾಯಾಂ' ಎಂಬ ಧಾತುವಿನಿಂದ ಚಿಂತನಮಾಡು ಎಂಬ ಅರ್ಥದಲ್ಲಿ ರೂಢವಾದ ಧ್ಯಾನ, ಎಂದರೆ ಸಚ್ಚಿದಾನಂದ ವಿಗ್ರಹನಾದ ಪರಮಾತ್ಮನ ಸ್ವರೂಪವನ್ನು ಮನೋಮಂದಿರದಲ್ಲಿ ಭಕ್ತಿಯಿಂದ ಚಿಂತಿಸುವುದು. ಇದೇ ಧ್ಯಾನ ಈ ಧ್ಯಾನವು ಎರಡು ವಿಧ. ಸಗುಣ ಹಾಗೂ ನಿರ್ಗುಣ, ಜ್ಞಾನ, ಆನಂದ, ಐಶ್ವರ್ಯ ಮುಂತಾದ ಸರ್ವಸದ್ಗುಣಗಳಿಂದ ಒಡಗೂಡಿದ್ದಾನೆ ಆ ಪರಮಾತ್ಮ ಎಂದು ತಿಳಿದು ಆರಾಧಿಸುವುದೇ ಸಗುಣ ಬ್ರಹ್ಮದ ಉಪಾಸನೆ. ''ಗುಣಪರಿಪೂರ್ಣನಾದ ಆ ಪರಮಾತ್ಮನಲ್ಲಿ ಇತರ ಚೇತನಗಳಂತೆ ಅಜ್ಞಾನ, ಪಾರತಂತ್ರ್ಯ, ಅಶಕ್ತತೆ, ವಂಚನೆ, ಮೋಸ, ಪರಿಮಿತ ಗುಣ, ಕ್ರೌರ್ಯ, ಕಾಮ, ಕ್ರೋಧ ಮುಂತಾದ ಯಾವ ಪ್ರಾಕೃತಗುಣಗಳೂ ಇರುವುದಿಲ್ಲ.'' ಎಂದು ತಿಳಿದು ಜ್ಞಾನಾನಂದ ಮಯನಾದ ಪರಬ್ರಹ್ಮನನ್ನು ಆರಾಧಿಸುವುದೇ ನಿರ್ಗುಣ ಉಪಾಸನೆ. ಮಂತ್ರ ಸ್ತೋತ್ರಗಳನ್ನು ಉಚ್ಚರಿಸುತ್ತ ಕರಚರಣಾದಿ ವಿಶಿಷ್ಟ ಬ್ರಹ್ಮನನ್ನು ಧ್ಯಾನಿಸುವುದು ಸಗುಣೋಪಾಸನೆ. ಮಂತ್ರೋಚ್ಚಾರಣೆ ದೇವ ಪೂಜೆ, ತಂತ್ರ ಅನುಷ್ಠಾನಗಳೆಲ್ಲ ಮಾಡಿ ಮುಗಿದ ಬಳಿಕ ಏಕಾಗ್ರಚಿತ್ತದಿಂದ ಧ್ಯಾನೈಕಲೀನ ಮಾನಸನಾಗಿ ಮಾಡುವ ಭಗವದಾರಾಧನೆಗೆ ನಿರ್ಗುಣೋಪಾಸನೆ ಎನ್ನುವರು. ಪವಿತ್ರ ಆಸನದಲ್ಲಿ ಕುಳಿತುಕೊಂಡು ಒಳಗೆ ಚಿತ್ತವನ್ನೂ, ಹೊರಗೆ ನೇತ್ರವನ್ನೂ ಸ್ಥಿರಪಡಿಸಿ, ಶರೀರವನ್ನು ಸಮಭಾವದಲ್ಲಿ ಇರಿಸಿ, ಮೌನವಾಗಿ ಭಗವಂತನನ್ನು ಚಿಂತಿಸುವದು ಧ್ಯಾನಮುದ್ರೆ ಎನಿಸುವುದು. ಈ ಉತ್ಕಟ ಅವಸ್ಥೆಯೇ ಸಮಾಧಿ. ಕಣ್ಣು, ಕಿವಿ, ಮೊದಲಾದ ಇಂದ್ರಿಯಗಳಿಗೆ ರೂಪ, ರಸ, ಶಬ್ದಾದಿ ವಿಷಯಗಳು ಗೋಚರವಾಗುವವರೆಗೆ, ಹೊರಗಿನ ಅರಿವು ಸರಿಯಾಗಿ ಉಳಿಯುವವರೆಗೆ ನಡೆದ ಭಗವತ್ ಚಿಂತನಕ್ಕೆ ಧ್ಯಾನ ಎನ್ನುವರು.

ಇದೇ ಧ್ಯಾನವು ಸ್ಥಿರವಾಗಿ, ಮನಸ್ಸು ಅಂತರ್ಮುಖಿಯಾಗಿ, ಬಾಹ್ಯ ಇಂದ್ರಿಯಗಳು ಬಾಹ್ಯ ವಿಷಯಗಳಿಂದ ವಿಮುಖವಾಗಿ, ಅಂತರಂಗದಲ್ಲಿ ವಾಸನಾ ರೂಪದಿಂದ ನಿಂತುಕೊಂಡ ಪರಮಾತ್ಮನಿಗೆ ಅಭಿಮುಖನಾಗಿ, ತದೇಕ ನಿಷ್ಠವಾಗಿ, ತನ್ಮಯಾವಸ್ಥೆಯಲ್ಲಿ ಇರುವುದಕ್ಕೆ ಸಮಾಧಿ ಎನ್ನುವರು. ದಂಡ ಎಂದರೆ ಇಪ್ಪತ್ತುನ್ನಾಲ್ಕು ನಿಮಿಷಗಳು. ಇಂಥ ಐದು ದಂಡಗಳು ಕಾಲ (೨ ಗಂಟೆ) ಮನಸ್ಸನ್ನು ಏಕಾಗ್ರತೆಯಲ್ಲಿ ನಿಲ್ಲಿಸಿ ಭಗವಂತನ ಧ್ಯಾನಮಾಡುವ ಅವಸ್ಥೆಯೇ ಧಾರಣಾ ಎನ್ನುವರು. ಅರವತ್ತು ದಂಡಗಳಷ್ಟು ಕಾಲ ಎಂದರೆ (೧೪೪೦ ನಿಮಿಷ ಅಥವಾ ೨೪ ಗಂಟೆ) ಕಾಲ ಭಗವಂತನಲ್ಲಿ ಮನಸ್ಸು ಗಟ್ಟಿಯಾಗಿ ಹಸಿವೆ ಬಾಯಾರಿಕೆಗಳ ಪರಿವೆ ಇಲ್ಲದೇ ನಿಶ್ಚಲವಾಗಿ ನಿಂತುಕೊಂಡು ಧ್ಯಾನಲೀನವಾದರೆ ಅದಕ್ಕೆ ಸಮಾಧಿ ಎನ್ನುವರು. ಈ ಸಮಾಧಿಯು ಮತ್ತೆ ಸವಿಕಲ್ಪಕ ಅಥ ನಿರ್ವಿಕಲ್ಪಕ ಸಂಪ್ರಜ್ಞಾತ, ಅಸಂಪ್ರಜ್ಞಾತ ಎಂದು ಬೇರೆ ಬೇರೆ ಬಗೆಯಾಗಿದೆ. ನೀರು ಉಪ್ಪುಗಳಂತೆ ಮನಸ್ಸು ಮತ್ತು ಆತ್ಮ ಎರಡೂ ಸಮರಸವಾಗಿ ಧ್ಯೇಯ

ವಸ್ತುವಿನಲ್ಲಿ ಚಿತ್ತವು ಲೀನವಾದರೆ ಆ ಅವಸ್ಥೆಗೆ ಸಮಾಧಿ ಎನ್ನುವರು. ಸಮಾಧಿ ಅವಸ್ಥೆಯಲ್ಲಿ ಕುಳಿತು ಚಿತ್ತೈಕಾಗ್ರ್ಯದಿಂದ ಹೊರಗಿನ ವಸ್ತುಗಳ ಜ್ಞಾನ ಲುಪ್ತವಾಗಿ, ಉಟ್ಟು ತೊಟ್ಟು ಅರಿವೆಯ ಪರಿವೆ ಇಲ್ಲದೇ, ಹಸಿವೆ ನೀರಡಿಕೆಗಳ ಎಚ್ಚರ ಇಲ್ಲದೇ, ಭೇರೀನಾದ ಮಾಡಿದರೂ ಎಚ್ಚರವಾಗದೇ, ಹೊಡೆದು ಬಡೆದು ದೇಹಕ್ಕೆ ಬಿಸಿ ತಾಕಿದಾಗಲೂ ಬಾಹ್ಯಪ್ರಜ್ಞೆ ಮರುಕಳಿಸದೇ, ಧ್ರುವ ರಾಜನಂತಹ ಬ್ರಹ್ಮನಿಷ್ಠವಾದ ಧ್ರುವ ಮನಸ್ಸಿನ ನಿಶ್ಚಲತೆಯ ನಿಲುವಿಗೆ ಅಸಂಪ್ರಜ್ಞಾತ ಸಮಾಧಿ ಎನ್ನುವರು. ನಿರ್ವಿಕಲ್ಪ ಸಮಾಧಿ ಎಂದರೂ ಅದೇ. ಇಂಥ ಅವಸ್ಥೆಯಲ್ಲಿ ನಿಶ್ಚಲವಾಗಿ ನಿಂತುಕೊಂಡ ಯೋಗಿಗೆ ಯಾವುದೇ ವಿಧಿ ನಿಷೇಧ ಹಾಗೂ ಶಾಸ್ತ್ರದ ನಿಯಮ ನಿಬಂಧನೆಗಳು ಅನ್ವಯಿಸುವುದಿಲ್ಲ. ಅವರಿಗೆ ಚಳಿ, ಮಳೆ, ಗಾಳಿ, ಬಿಸಿಲು, ಬಾಯಾರಿಕೆ, ಸುಖ, ದುಃಖ, ಮಾನ ಅಪಮಾನ ಯಾವ ಪ್ರಜ್ಞೆಯೂ ಇರುವುದಿಲ್ಲ. ಇಂಥ ಸಮಾಧಿ ಅವಸ್ಥೆಯಿಂದ ಮಾತ್ರ ಆನಂದ ಘನನಾದ ಪರಮಾತ್ಮನ ಸಾಕ್ಷಾತ್ಕಾರವು ಯೋಗಿಗೆ ಲಭ್ಯ. ಮೇಲೆ ಹೇಳಿದ ಈ ಎಲ್ಲ ಅಷ್ಟಾಂಗ ಪರಿಪೂರ್ಣವಾದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ ಎಂಬ ಎಂಟು ವಿಧವಾದ (ಅಷ್ಟಾಂಗ) ಸಿದ್ಧಿಯನ್ನು ಪಡೆದುಕೊಂಡ ಯೋಗೀಶ್ವರರು ಬ್ರಹ್ಮ ಸಾಕ್ಷಾತ್ಕಾರದ ಅನಂತರ ಆ ಪರಬ್ರಹ್ಮನ ಪರಮಾನುಗ್ರಹ ಪೂರ್ಣವಾದ ಪರಮ ಪ್ರಸಾದದಿಂದ ಮೋಕ್ಷರೂಪ ಪೂರ್ಣಾನಂದವನ್ನು ಪಡೆಯುವರು.

ಯೋಗಿಯಾದವನು ಬಿಸಿನೀರಿನಲ್ಲಿ ಸ್ನಾನ, ಆಹಾರದಲ್ಲಿ ಉಪ್ಪು, ರುಚಿಕರವಾದ ಭಕ್ಷ್ಯಭೋಜ್ಯ, ಅಧಿಕ ನಿದ್ರೆ, ವಿಷಯ ವಾಸನೆ ಎಲ್ಲವನ್ನೂ ತೊರೆಯಬೇಕು. ಬ್ರಹ್ಮಚರ್ಯವನ್ನು ಕಟ್ಟು ನಿಟ್ಟಾಗಿ ಪಾಲಸಬೇಕು. ಕಾಮ, ಕ್ರೋಧ, ಲೋಭ, ಮೋಹ, ಮದ, ಗರ್ವಗಳು ಸಮೀಪದಲ್ಲಿಯೂ ಸುಳಿಯದಂತೆ ಎಚ್ಚರವಹಿಸಬೇಕು. ಮಹಾ ಮುದ್ರಾ, ಖೇಚರಿ ಮುದ್ರಾ, ಉಡ್ಡಿಯಾನಬಂಧ, ಜಲಂಧರಬಂಧ, ಮೂಲಬಂಧ ಮುಂತಾದವುಗಳು ಯೋಗಸಿದ್ಧಿಯ ಪ್ರಾಥಮಿಕ ಹಂತದಲ್ಲಿಯ ಸಾಧನೆಗಳು. ಪೂರಕ, ಕುಂಭಕ, ರೇಚಕ ಎಂಬ ಪ್ರಾಣಾಯಾಮದಿಂದ ಮೊದಲು ನಾಡೀ ಜಾಲವನ್ನು ಶುದ್ಧಗೊಳಿಸಿ, ಚಂದ್ರಸೂರ್ಯ ನಾಡಿಗಳನ್ನು ಅರ್ಥಾತ್ ಇಡಾಪಿಂಗಲಾನಾಡಿಗಳನ್ನು ಜೋಡಿಸಿ, ವಿಕಾರಕ್ಕೆ ಕಾರಣೀಭೂತವಾದ ನಾಡಿಗಳನ್ನೆಲ್ಲ ಒಣಗಿಸಿ, ಇಂದ್ರಿಯಗಳನ್ನು ವಶಪಡಿಸಿಕೊಳ್ಳುವದಕ್ಕೆ ಮಹಾಮುದ್ರಾ ಎನ್ನುವರು. ಆಸನದಿಂದಲೂ ಈ ಮಹಾಮುದ್ರೆ ಯನ್ನು ಸಾಧಿಸುವ ಒಂದು ಪದ್ಧತಿ ಬೇರೆಯಿದೆ. ಎಡಗಾಲಿನಿಂದ ಜನನೇಂದ್ರಿಯನ್ನು ಒತ್ತಿ ಹಿಡಿದು, ಗದ್ದವನ್ನು ಎದೆಯ ಮೇಲೆ ಇಟ್ಟು ಎರಡೂ ಕೈಗಳಿಂದ ಚಾಚಿದ ಬಲಗಾಲನ್ನು ಬಹಳ ಹೊತ್ತಿನವರೆಗೆ ಹಿಡಿದು ಪ್ರಾಣವಾಯುವಿನಿಂದ ಹೊಟ್ಟೆಯನ್ನು ತುಂಬಿಸಿ, ಅನಂತರ ಮೆಲ್ಲ ಮೆಲ್ಲನೆ ಆ ವಾಯುವನ್ನು ಉದರದಿಂದ ಬಹಳ ಹೊತ್ತಿನವರೆಗೆ ಹೊರಗೆ ತಳ್ಳುತ್ತ ಇರಬೇಕು. ಇದರಿಂದ ಅನೇಕ ರೋಗಗಳು, ಪಾಪಗಳು ನಾಶವಾಗುವವು. ಹೀಗೆ ಇಡಾನಾಡಿಯಿಂದ ಪ್ರಾಣಾಯಾಮವನ್ನು ಅಭ್ಯಾಸಮಾಡಬೇಕು. ಈ ಮಹಾಮುದ್ರೆಯನ್ನು ಸಾಧಿಸಿದವರಿಗೆ ಕುಡಿದ ವಿಷವೂ ಕೂಡ ಅಮೃತದಂತೆ ಪಚನವಾಗಿ ಬಿಡುವುದು. ಈ ಮಹಾ ಮುದ್ರೆಯ ಅಭ್ಯಾಸಮಾಡುವವರಿಗೆ ಕ್ಷಯ, ಅಜೀರ್ಣ, ಕುಷ್ಠ, ಮೂಲವ್ಯಾಧಿ, ವಾತಪ್ರಕೋಪ ಮೊದಲಾದ ರೋಗಗಳೆಲ್ಲವೂ ನಷ್ಟವಾಗಿ ಹೋಗುವವು. ತಿರುಗಿ ಹೊರಳಿಸಿದ ನಾಲಿಗೆಯು ಕಪಾಲದ ಛಿದ್ರದಲ್ಲಿ ಪ್ರವಿಷ್ಟವಾಗಿ ಎರಡೂ ಹುಬ್ಬುಗಳ ನಡುವೆ ದೃಷ್ಟಿಯು ಸ್ಥಿರವಾಗಿ ನಿಂತರೆ ಅದು ಖೇಚರೀ ಮುದ್ರೆ ಎನಿಸುವುದು. ಈ ಖೇಚರಿ ಮುದ್ರೆಯನ್ನು ಬಲ್ಲವರಿಗೆ ಬಾಣ ಹೊಡೆದರೂ ಏನೂ

ಆಗುವುದಿಲ್ಲ. ಅವನಿಗೆ ಕಾಲದ ಬಾಧೆಯು ಕೂಡ ಇಲ್ಲ. ಈ ಮುದ್ರೆಯಲ್ಲಿ ಚಿತ್ತವು ಆಕಾಶದಲ್ಲಿಯೇ ತಿರುಗುತ್ತದೆ. ಆದರಂತೆ ಜಿಹ್ವೆಯೂ ಆಕಾಶಗತವಾಗಿಯೇ ಚರಿಸುತ್ತದೆ. ಆದುದರಿಂದಲೇ ಇದಕ್ಕೆ ಖೇಚರೀ ಮುದ್ರೆ ಎಂದು ಹೆಸರು.

ಇನ್ನು ಮೇಲೆ ಕೆಲವು ಬಂಧಗಳ ಮುದ್ರೆಯನ್ನು ನಿರೂಪಿಸುತ್ತೇನೆ. ಮಾನವರ ಪ್ರಾಣ ಎನ್ನುವ ಮಹಾಪಕ್ಷಿಯು ಹಗಲಿರುಳೂ ಇರುತ್ತದೆ. ಅದನ್ನು ಈ ಖೇಚರೀ ಮುದ್ರೆಯ ಮುಖಾಂತರ ಬಂಧಿಸಲಾಗುವುದು. ಆದುದರಿಂದ ಇದಕ್ಕೆ ಉಡ್ಡೀಯಾನ ಬಂಧ ಎಂದು ಹೆಸರಿದೆ. ಶರೀರದೊಳಗಿನ ರಕ್ತವು ಎಲ್ಲ ಕಡೆಗೂ ಹರಿದಾಡುವಂತೆ ಮಾಡುವ ನಾಡಿಗಳ ಸಮೂಹವನ್ನೆಲ್ಲ ಬಂಧಿಸುವುದಕ್ಕೆ ಜಾಲಂಧರ ಬಂಧ ಎಂದು ಹೆಸರು. ಇದರಿಂದ ಕಂಠ ರೋಗಗಳೆಲ್ಲವೂ ಹೋಗುತ್ತವೆ. ಕಂಠವನ್ನು ಸಂಕುಚಿತವನ್ನಾಗಿ ಮಾಡುವ ಈ ಜಾಲಂಧರ ಬಂಧವು ಸಿದ್ಧವಾದ ಬಳಿಕ ಲಲಾಟ, ಮತ್ತು ತಾಲುಗಳಲ್ಲಿರುವ ಚಂದ್ರಮಂಡಲದಲ್ಲಿರುವ ಅಮೃತವು ಉದರಾಗ್ನಿಯಲ್ಲಿ ಬೀಳುವುದಿಲ್ಲ. ವಾಯುವಿನ ಪ್ರಕೋಪವೂ ಆಗುವುದಿಲ್ಲ. ಎರಡೂ ಹಿಂಬಡಗಳಿಂದ ಲಿಂಗವನ್ನು ಬಿಗಿಹಿಡಿದು ಅಪಾನವಾಯುವನ್ನು ಮೇಲಕ್ಕೆ ಸೆಳೆದು ಗುದಮಾರ್ಗವನ್ನು ಸಂಕುಚಿತಗೊಳಿಸಬೇಕು. ಇದರ ಸಾಧನೆಯಿಂದ ವೃದ್ಧನು ತರುಣನಾಗುತ್ತಾನೆ. ಮತ್ತು ಪ್ರಾಣ ಹಾಗೂ ಅಪಾನ ಎರಡೂ ವಾಯುಗಳು ಅವನ ವಶವಾಗಿ ಚಂಚಲವಾದ ಜೀವವು ಇಳಾ ಮತ್ತು ಪಿಂಗಳಾ ನಾಡಿಯ ಮುಂಖಾಂತರ ಮೇಲಿಂದ ಕೆಳಗೆ ಕೆಳಗಿನಿಂದ ಮೇಲೆ ಓಡಾಡುತ್ತದೆ. ಎಲ್ಲಿಯೂ ಅದಕ್ಕೆ ಸ್ಥಿರವಾಗಿ ನೆಲೆ ನಿಲ್ಲಲು ಆಗುವುದಿಲ್ಲ. ಕಾಲಿಗೆ ದಾರ ಕಟ್ಟಿದ ಪಕ್ಷಿಯು ಬೇಕಾದಲ್ಲಿ ಹಾರಾಡಿದರೂ ಪುನಃ ಅದನ್ನು ಇದ್ದಲ್ಲಿಯೇ ಎಳೆಯುವಂತೆ ಮೂರು ಗುಣಗಳಲ್ಲಿ ಬದ್ಧವಾದ ಜೀವವು ಪ್ರಾಣಯಾಮ ದ್ವಾರಾ ಎಳೆಯಲ್ಪಡುತ್ತದೆ. ಅಪಾನವು ಪ್ರಾಣವನ್ನು, ಪ್ರಾಣವು ಅಪಾನವನ್ನು ತಮ್ಮ ತಮ್ಮ ಕಡೆ ಜಗ್ಗುತ್ತವೆ. ಯೋಗತಜ್ಞನಾದ ಪುರುಷನು ಇವೆರಡನ್ನು ಜೋಡಿಸುತ್ತಾನೆ. ಶ್ವಾಸವು 'ಹಮ್' ಎಂಬ ಹಕಾರ ಧ್ವನಿಯೊಂದಿಗೆ ಹೊರಗೆ ಬರುತ್ತದೆ. ಮತ್ತೆ ಸಕಾರ ಧ್ವನಿಯೊಂದಿಗೆ ಎಂದರೆ ಅರ್ಥಾತ್ 'ಸ' ಎಂಬ ಅಕ್ಷರದ ಧ್ವನಿಯೊಂದಿಗೆ ಪುನಃ ಆ ವಾಯುವು ಒಳಗೆ ಪ್ರವೇಶ ಮಾಡುತ್ತದೆ. ಹೀಗೆ ಜೀವವು ಯಾವಾಗಲೂ ಹಂಸ ಹಂಸ ಹಂಸ ಎಂಬ ಮಂತ್ರವನ್ನು ಜಪಮಾಡುತ್ತ ಇರುತ್ತದೆ. ಒಂದು ಹಗಲು ರಾತ್ರಿಯಲ್ಲಿ ಇಪ್ಪತ್ತೊಂಬತ್ತು ಸಾವಿರದ ಆರನೂರ ಹನ್ನೆರಡು ಶ್ವಾಸಗಳ ಎಳೆದಾಟ ನಡೆದಿರುವುದು. ಆದುದರಿಂದ ಜೀವನು ಇಷ್ಟು ಸಲ ಹಂಸ ಮಂತ್ರವನ್ನು ಜಪಮಾಡುತ್ತ ಇರುತ್ತಾನೆ. ಈ ಹಂಸಮಂತ್ರಕ್ಕೆ 'ಅಜಪಾ' ಎಂಬ ಗಾಯತ್ರಿ ಎಂದು ಕರೆಯುತ್ತಾರೆ. ಇದು ಯೋಗಿಗಳಿಗೆ ಮೋಕ್ಷವನ್ನು ಕೊಡುವ ಮಂತ್ರವಾಗಿದೆ. ಯೋಗಿಯ ಯೋಗ ಮಾರ್ಗದಲ್ಲಿ ಬರುವ ವಿಘ್ನಗಳು ಬಗೆ ಬಗೆಯ ಜಾತಿಯವು. ಅವೆಲ್ಲವೂ ಯೋಗಸಾಧನೆಯಲ್ಲಿ ಹಾನಿಯನ್ನುಂಟುಮಾಡುತ್ತವೆ. ಯೋಗಾರೂಢನಾದ ಮನುಷ್ಯನಿಗೆ ದೇಶಾಂತರದಲ್ಲಿ ಉಚ್ಚರಿಸಿದ ಧ್ವನಿಗಳು ಕೇಳಿ ಬರುತ್ತವೆ. ದೂರದ ದೃಶ್ಯವು ಕಣ್ಣೆದುರಿಗೆ ಪ್ರತ್ಯಕ್ಷವಾಗಿ ಕಾಣುತ್ತದೆ. ಅರೆನಿಮಿಷದಲ್ಲಿ ನೂರಾರು ಯೋಜನ ಹೋಗುವ ಶಕ್ತಿ ಅನಾಸಾಯವಾಗಿ ಬರುತ್ತದೆ. ಓದದೆ ಎಲ್ಲ ಶಾಸ್ತ್ರ ವೇದಪುರಾಣಗಳು ಕಂಠಸ್ವರವಾಗುತ್ತವೆ. ಧಾರಣಾ ಶಕ್ತಿಯು ತೀವ್ರವಾಗುತ್ತದೆ. ಯೋಗಿಯು ಒಂದು ಕ್ಷಣದಲ್ಲಿ ತೆಳ್ಳಗೆ, ಮರುಕ್ಷಣದಲ್ಲಿ ಧಾಂಡಿಗ, ಒಮ್ಮೆ ಕುಳ್ಳ, ಮತ್ತೊಮ್ಮೆ ಮಹತೋಮಹೀಯ ಆಗಲು ಸಮರ್ಥ. ಎರಡನೆಯವರ ದೇಹದಲ್ಲಿ ಪ್ರವೇಶ, ಪಶು ಪಕ್ಷಿಗಳ ಭಾಷೆಯ ಪರಿಜ್ಞಾನ, ತನ್ನ ದೇಹದಿಂದ ದಿವ್ಯಗಂಧವನ್ನು ಸೂಸುವುದು. ಮುಂತಾದವು ಯೋಗಿಗೆ ಅನಾಯಾಸ ಲಭ್ಯ.

ಇದೆಲ್ಲವು ಬಹುಕ್ಷುದ್ರ ಸಿದ್ಧಿ. ಯೋಗಿಯು ಇದಾವುದಕ್ಕೂ ಮನ ಕೊಡುವುದಿಲ್ಲ. ಹಾಗೂ ಚಲವಿಚಲನಾಗುವುದಿಲ್ಲ. ದೇವಲೋಕದ ಕನ್ಯೆಯರು ಅವನಲ್ಲಿ ಪ್ರೇಮ ಭಿಕ್ಷೆ ಬೇಡುವರು. ಎಲ್ಲವೂ ಅವನ ಯೋಗಸಿದ್ಧಿಯ ಸೂಚಕ. ಇವೆಲ್ಲವೂ ಪೂರ್ಣಯೋಗದ ದಾರಿಯಲ್ಲಿರುವ ದೊಡ್ಡ ದೊಡ್ಡ ವಿಘ್ನಗಳು, ಇವುಗಳಿಂದ ಮನಸ್ಸಿನಲ್ಲಿ ಚಂಚಲನಾಗದೆ ಮುಂದೆ ಯೋಗ ಸಾಧನವನ್ನು ಮಾಡಿದರೆ ಸಂಪೂರ್ಣ ಮಹಾಯೋಗದ ಸಿದ್ಧಿಯನ್ನು ಪಡೆಯುತ್ತಾನೆ. ಯೋಗಿಯಾದವನು ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿ ಈ ಆರು ಅಂಗಗಳಿಂದ ಸಹಿತವಾದ ಯೋಗ ಸಾಧನೆಯನ್ನು ಮಾಡಿಕೊಳ್ಳಬೇಕು. ಅದರಿಂದ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿ ಅದರಿಂದ ಮೋಕ್ಷವನ್ನು ಹೊಂದುವುದೇ ಮಾನವ ಜೀವನದ ಅರಸು ಗುರಿ.

ಆದರೆ ಈ ಕಲಿಯುಗದಲ್ಲಿ ಇಂದ್ರಿಯಗಳ ವೃತ್ತಿ ಚಂಚಲವಾದುದರಿಂದ, ಸುಖೋಪಭೋಗಗಳ ಆಮಿಷಗಳ ಸೆಳೆತ ಬಲವತ್ತರವಾದುದರಿಂದ ಇಷ್ಟೆಲ್ಲ ಕಠಿಣವಾದ ಷಡಂಗ ಯೋಗ ಸಾಧನೆಗಳನು ಮನುಷ್ಯರಿಗೆ ಮಾಡಲು ಶಕ್ಯವಾಗುವುದಿಲ್ಲ. ಅದರಿಂದ ಪರಮಾತ್ಮನ ಸಾಕ್ಷಾತ್ಕಾರವಂತೂ ಇಲ್ಲ. ಮೋಕ್ಷವಂತೂ ದೂರವೇ ಉಳಿಯಿತು. ಜನಸಾಮಾನ್ಯರಿಗೆ ಮುಕ್ತಿಯು ಎಟುಕದ ಹಣ್ಣು ಎಂದು ಅದನ್ನು ನೋಡಿ ಕೈಲಾಸ ಪತಿಯ ಹೃದಯದಲ್ಲಿ ಕರುಣೆ ಸೆಲೆಯೊಡೆಯಿತು. ಭಕ್ತವತ್ಸಲ ಆ ಭಗವಂತ. ಜ್ಞಾನಮಾರ್ಗ, ಕರ್ಮಮಾರ್ಗ ಹಾಗೂ ಯೋಗಮಾರ್ಗಗಳ ಜಂಜಡವಿಲ್ಲದೆ, ಹಿಂದೆ ಹೇಳಿದ ಅಷ್ಟಾಂಗ ಯೋಗಗಳ ಸಾಧನೆ ಮಾಡದೆ, ಸರ್ವಮಾನವರಿಗೂ ಜಾತಿ, ಮತ, ಪಂಥ ಪಂಡಗಗಳ ಗೊಂದಲವಿಲ್ಲದೆ, ಸುಲಭವಾಗಿ ಮೋಕ್ಷವು ದೊರಕಬೇಕು ಎಂಬ ಘನೋದ್ದೇಶದಿಂದ ಕಾಶೀಪಟ್ಟಣದಲ್ಲಿ ಬಂದು ನೆಲೆನಿಂತಿದ್ದಾನೆ. ಆ ಗಂಗಾಧರ ಕಾಶಿಯಲ್ಲಿ ಇದ್ದ ಮಾತ್ರಕ್ಕೆ ಮುಕ್ತಿ ಕರಗತ. ಜ್ಞಾನ ಭಕ್ತಿ, ವೈರಾಗ್ಯ, ಯೋಗ, ಸಾಧನೆಗಳ ಅಪೇಕ್ಷೆ ಇಲ್ಲದೆ, ಮೋಕ್ಷ ಮಂದಿರದಲ್ಲಿ ಮಾನವ ಮಾತ್ರರನ್ನು ಕೈ ಹಿಡಿದು ಕರೆದೊಯ್ದು ಕೂಡಿಸುವ ಏಕೈಕ ಮುಕ್ತಿ ಸಾಧನ ಎಂದರೆ ಈ ಅವಿಮುಕ್ತ ಕ್ಷೇತ್ರವಾದ ಕಾಶಿ. ಮೋಕ್ಷಾರ್ಥಿಗಲು ಇಷ್ಟನ್ನಾದರೂ ಮಾಡಬೇಕು. ಕಾಶಿಗೆ ಹೋಗಬೇಕು. ಗಂಗೆಯಲ್ಲಿ ಮೀಯಬೇಕು. ವಿಶ್ವಾನಾಥನನ್ನು ಪೂಜಿಸಬೇಕು. ಮೋಕ್ಷದ ದಾರಿ ಹಿಡಿಯಬೇಕು.

## ಮೃತ್ಯು ಸೂಚಕ ಚಿಹ್ನೆಗಳು

**ಅಗಸ್ತ್ಯ:-** ದೇವಸೇನಾಪತಿಯೇ, ಮಾನವರಿಗೆ ತಮ್ಮ ಮರಣವು ಸಮೀಪಿಸಿದ ಚಿಹ್ನೆಗಳನ್ನೂ ಲಕ್ಷಣಗಳನ್ನೂ ಮುಂಚಿತವಾಗಿ ಗುರುತಿಸಲು ಸಾಧ್ಯವಾಗದೆ? ಮರಣದ ಪೂರ್ವದಲ್ಲಿಯೇ ಅದರ ಲಕ್ಷಣಗಳು ತಿಳಿದರೆ ಸಚ್ಚೇತನರಿಗೆ ಏನಾದರೂ ಅಧ್ಯಾತ್ಮ ಸಾಧನೆ ಮಾಡಿಕೊಳ್ಳಲು ಅನುಕೂಲವಾಗುವುದು.

**ಸ್ಕಂದ:-** ಮಹರ್ಷಿಯೇ, ಕೆಲವೊಂದು ಲಕ್ಷಣಗಳಿಂದ ಸ್ಥೂಲ ರೂಪದಿಂದ ಮೃತ್ಯುವಿನ ಸೂಚನೆಯನ್ನು ಪೂರ್ವಭಾವಿಯಾಗಿಯೇ ಅರಿತುಕೊಳ್ಳಬಹುದು. ಆದರೆ ಇವು ಅವ್ಯಭಿಚರಿತ ಲಕ್ಷಣಗಳೆಲ್ಲ ಮನುಷ್ಯನ ಬಲಮೂಗಿನಲ್ಲಿ ಹಗಲಿರುಳು ಅಖಂಡವಾಗಿ ಗಾಳಿ ಅಡತೊಡಗಿದರೆ ಅವನ ಆಯುಷ್ಯ ಮೂರು ವರ್ಷಗಳಲ್ಲಿ ಸಮಾಪ್ತಿಯಾಗುವುದು ಎಂದು ತಿಳಿಯಬೇಕು. ಮಾನವನ ಮೂಗಿನ ವಿವರವು ಹತ್ತು ದಿನಗಳ ವರೆಗೆ ಊರ್ಧ್ವಶ್ವಾಸ ಕೂಡಿದ್ದರೆ ಆ ಮನುಷ್ಯನು ಮೂರು ದಿನಗಳಲ್ಲಿ ಮರಣಿಸುವನು. ಸ್ನಾನ ಮಾಡಿದಕೂಡಲೇ

ಯಾರ ಹೃದಯ, ಕೈ, ಕಾಲು, ಒಣಗಿ ಹೋಗುವುದೋ ಅವರಿಗೆ ಮೂರು ತಿಂಗಳ ಆಯುಷ್ಯ. ನೀರು, ತುಪ್ಪ, ಕನ್ನಡಿಯಲ್ಲಿ ತನ್ನ ಪ್ರತಿಬಿಂಬದ ತಲೆ ಕಾಣದಿದ್ದರೆ ಒಂದು ತಿಂಗಳ ಸೀಮಿತ ಅವನ ಉಸಿರಾಟ. ರಾತ್ರಿಯಲ್ಲಿ ಕಾಮನ ಬಿಲ್ಲಿನ ದರ್ಶನ ಮತ್ತು ಇಬ್ಬರು ಸೂರ್ಯರು ಇಬ್ಬರು ಚಂದ್ರರು ಕಾಣಿಸಿದರೆ ಅದು ಮೃತ್ಯುವಿನ ಸೂಚಕ. ಕನಸಿನಲ್ಲಿ ಭೂತ, ಪ್ರೇತ, ಕತ್ತೆ, ನಾಯಿ, ತೋಳಗಳು, ತನ್ನನ್ನು ಆಚೀಚೆ ಎಳೆದಾಡಿ ತಿಂದರೆ ಒಂದು ವರುಷದೊಳಗಾಗಿ ಮರಣಸಂಭವ. ಸ್ವಪ್ನದಲ್ಲಿ ಗಂಧ, ಹೂ, ಕೆಂಪು ಬಟ್ಟೆಯಿಂದ ವಿಭೂಷಿತವಾದ ತನ್ನ ಶರೀರವನ್ನು ನೋಡಿದರೆ ಅವನಿಗೆ ಎಂಟು ತಿಂಗಳ ಆಯುಷ್ಯ ಉಳಿದಿದೆ ಎಂದು ಭಾವಿಸಬೇಕು. ಕನಸಿನಲ್ಲಿ ಧೂಳಿನ ರಾಶಿ, ಗೆದ್ದಲೆಯ ಹುತ್ತ, ಯಜ್ಞಸ್ತಂಭಗಳ ಮೇಲೆ ಏರಿ ಕುಳಿತರೆ, ಮೈಗೆಲ್ಲ ಎಣ್ಣೆ ಹಚ್ಚಿಕೊಂಡು ಕತ್ತೆಯ ಮೇಲೆ ಕುಳಿತು ದಕ್ಷಿಣ ದಿಕ್ಕಿಗೆ ಪ್ರಯಾಣ ಮಾಡಿದರೆ ತನ್ನ ಮೈ ಅಥವಾ ತಲೆಯಮೇಲೆ ಹುಲ್ಲು ಬೆಳೆದಂತೆ ಕಂಡರೆ, ಕಬ್ಬಿಣದ ದೊಣ್ಣೆ ಹಿಡಿದುಕೊಂಡರೆ, ಕಪ್ಪು ಬಣ್ಣದ ಕನ್ಯೆಯು ತನ್ನ ತೆರೆದ ತೋಳುಗಳಿಂದ ಅಲಂಗಿಸಿಕೊಂಡರೆ, ಕೋತಿಯ ಮೇಲೆ ಸವಾರಿಮಾಡಿ ದಕ್ಷಿಣ ದಿಕ್ಕಿಗೆ ಪಯಣಮಾಡಿದರೆ ಆ ಮನುಷ್ಯನು ಕೆಲವೇ ದಿನಗಳಲ್ಲಿ ಯಮದೇವರ ಅತಿಥಿ ಆಗುವನು ಎಂದು ತರ್ಕಿಸಬಹುದು. ಅತೀ ಜಿಪುಣನು ಒಮ್ಮೆಲೇ ಉದಾರನಾದರೆ, ಅತೀ ಉದಾರನು ಒಮ್ಮೆಲೇ ಜಿಪುಣನಾದರೆ, ಅವನಿಗೆ ಮೃತ್ಯುವು ಸನ್ನಿಹಿತ ಎಂದು ತಿಳಿದುಕೊಳ್ಳಬಹುದು. ಈ ಎಲ್ಲ ಲಕ್ಷಣಗಳನ್ನು ತಿಳಿದು ಮಾನವನು ಬೇಗನೆ ಕಾಶಿಗೆ ಬಂದು ವಿಶ್ವನಾಥನಿಗೆ ಶರಣು ಹೋಗಬೇಕು. ಇದರಿಂದ ಆ ಮನುಷ್ಯನಿಗೆ ಮೃತ್ಯುಭಯ ದೂರವಾಗಿ ಮೋಕ್ಷಪುರಿ ಸಮೀಪವಾಗುವುದು. ಕಾಶಿಗೆ ಬಂದು, ಉತ್ತರವಾಹಿನಿಯಾದ ಗಂಗೆಯಲ್ಲಿ ಮಿಂದು ಪವಿತ್ರ ತೀರ್ಥವಾದ ಆ ವಿಷ್ಣು ಪಾದೋದಕವನ್ನು ಕುಡಿದು, ಶ್ರೀ ವಿಶ್ವೇಶ್ವರ ಲಿಂಗವನ್ನು ನಿತ್ಯ ಪೂಜಿಸಿ, ಶಿವನಾಮ ಸಂಕೀರ್ತನವನ್ನು ಮಾಡುವ ಮನುಷ್ಯನ ಸನಿಹದಲ್ಲಿಯೂ ಸುಳಿಯಲಾರದು ಯಮನ ಬಳಗ. ಇಂಥ ಕಾಶೀವಾಸಿಗಳಿಗೆ ಕಾಲನಿಯಾಮಕನಾದ ಕಲಿಯು ಕುಪಿತನಾದರೂ ಏನು ಮಾಡಬಲ್ಲನು? ಆದುದರಿಂದ ವಿವೇಕಿಗಳು ಮುಪ್ಪು, ಆಕ್ರಮಿಸುವುದಕ್ಕಿಂತ ಮೊದಲು, ಇಂದ್ರಿಯಗಳ ಸಡಿಲ ಬೀಳುವುದಕ್ಕಿಂತ ಮುಂಚಿತ. ಕೈಕಾಲು ಅವಯವಗಳೆಲ್ಲ ಗಟ್ಟಿ ಇರುವಾಗಲೇ ಕಾಶಿಗೆ ಬರಬೇಕು. ವಿಶ್ವೇಶ್ವರನ್ನು ಸೇವಿಸಬೇಕು. ಮೃತ್ಯು ಭಯದಿಂದ ಪಾರಾಗಬೇಕು. ಕೊನೆಗೆ ಮುಕ್ತಿ ಪುರಿಯಲ್ಲಿ ಪ್ರವೇಶಿಸಬೇಕು.

## ದಿವೋದಾಸನ ಆಖ್ಯಾನ

**ಅಗಸ್ತ್ಯ:-** ಭಗವನ್, ಭಗವಾನ್ ಶಂಕರನು ದಿವೋದಾಸನನ್ನು ಕಾಶೀಪಟ್ಟಣವನ್ನು ಬಿಟ್ಟು ಏಕೆ ಹೊರಗೆ ಹೊರಡಿಸಿದ?

**ಸ್ಕಂದ:-** ಗಿರಿರಾಜ ಮಂದರನು ತಪಸ್ಸು ಮಾಡಿದ. ಆದರಿಂದ ಶಿವಸಂತುಷ್ಟನಾದ. ಬ್ರಹ್ಮನೊಂದಿಗೆ ಆ ಮಂದರಾಚಲಕ್ಕೆ ಆಗಮಿಸಿದ. ಅವರಿಬ್ಬರೊಟ್ಟಿಗೆ ದೇವತಾ ಗಣವೂ ಕೂಡ. ವಿಷ್ಣುವೂ ಅಲ್ಲಿಗೆ ಆಗಮಿಸಿದ. ಹೀಗೆ ಭೂಮಂಡಲದಿಂದ ಎಲ್ಲ ದೇವತೆಗಳೂ ಹೊರಟು ಹೋದ ಬಳಿಕ ದಿವೋದಾಸನು ನಿಷ್ಕಂಟಕವಾಗಿ ರಾಜ್ಯ ಶಾಸನಗೈದ. ಕಾಶೀಪಟ್ಟಣವೇ ಅವನ ರಾಜಧಾನಿ. ಧರ್ಮಾನುಸಾರಿಯಾದ ಅವನ ಆಡಳಿತದಲ್ಲಿ ಪ್ರಜೆಗಳೆಲ್ಲರೂ ಪರಿತುಷ್ಟರು. ಉನ್ನತಿ, ಪ್ರಗತಿ, ಉತ್ಕರ್ಷಗಳು ಆ ರಾಜ್ಯದಲ್ಲಿ ನಿತ್ಯ ಧರ್ಮ. ರಾಕ್ಷಸರೂ ಕೂಡ ಮಾನವ ರೂಪ

ತಳೆದು ಅವನ ಸೇವೆಗೆ ಬದ್ಧ ಕಂಕಣರು. ಗುಹ್ಯಕರು ಕೂಡ, ಅದರಂತೆ. ಅವನ ಆಸ್ಥಾನದಲ್ಲಿದ್ದ ಪಂಡಿತರನ್ನು ಸೋಲಿಸುವ ವಿದ್ವಾಂಸರು, ರಣಾಂಗದಲ್ಲಿ ಅವನ ಸೈನಿಕರನ್ನು ಸೋಲಿಸುವ ಶೂರರೂ ಮಹೀಮಂಡಲದಲ್ಲಿಯೇ ಇನ್ನೂ ಮೂಡಿರಲಿಲ್ಲ.

ಹೀಗೆ ದಿವೋದಾಸನು ಕಾಶೀಪಟ್ಟಣದಲ್ಲಿ ಎಂಬತ್ತುಸಾವಿರ ವರ್ಷ ರಾಜ್ಯ ಆಳಿದ. ಅವನ ರಾಜ್ಯದಲ್ಲಿ ರಾಜನಂತೆ ಎಲ್ಲ ಪ್ರಜೆಗಳು ಧರ್ಮನಿಷ್ಠರು. ನ್ಯಾಯನಿಷ್ಠರರು. ನೀತಿ ಯುಕ್ತರು. ಪರೋಪಕಾರ ಶೀಲರು. ಶಿವಪೂಜಕರು. ಅದರಿಂದಾಗಿ ಎಲ್ಲರೂ ಭಾಗ್ಯ ಸಂಪನ್ನರು, ಆರೋಗ್ಯ ಪೂರ್ಣರು, ತುಷ್ಟರು, ಪುಷ್ಟರು, ಶಿಷ್ಟರು, ನೀತಿ ವಿಶಿಷ್ಟರು, ನಿತ್ಯ ತೃಪ್ತರು, ರಾಗ, ದ್ವೇಷ, ಅಸೂಯೆ, ಮುಂತಾದ ದೋಷವರ್ಜಿತರು. ಸರ್ವ ಸದ್ಗುಣಗಳಿಂದ ಊರ್ಜಿತರೂ ಆಗಿದ್ದರು. ರಾಜನ ನಡೆ, ನುಡಿ, ಆಚಾರ, ವಿಚಾರ, ಶಾಸನ ಎಲ್ಲಿಯಾದರೂ ಒಂದಾದರೂ ಛಿದ್ರವನ್ನು ಹುಡುಕಬೇಕು ಎಂದು ದೇವತೆಗಳು ಬಹು ಪ್ರಯತ್ನ ಮಾಡಿದರು. ಆದರೆ ಆ ರಾಜರ್ಷಿಯ ಧರ್ಮಶಾಸನಲ್ಲಿ ಎಲ್ಲಿಯೂ ಲೋಪ ಬರಲಿಲ್ಲ ದೋಷ ಕಂಡುಬರಲಿಲ್ಲ.

## ಲೋಲಾರ್ಕತೀರ್ಥದ ಮಹತ್ವ.

**ಸ್ಕಂದ:-** ಅಗಸ್ತ್ಯಮುನಿಯೇ, ಇಂದ್ರಾದಿ ದೇವತೆಗಳು ದಿವೋದಾಸನಲ್ಲಿ ಹಾಗೂ ಅವನ ಶಾಸನದಲ್ಲಿ ದೋಷವನ್ನು ಕಂಡುಹಿಡಿಯಲು ಪ್ರಯತ್ನಿಸಿದರು. ಹಾಗೂ ಅವನ ಧರ್ಮಶಾಸನದಲ್ಲಿ ವಿಘ್ನವನ್ನು ಒಡ್ಡಿದರು. ಆದರೆ ಆ ಧರ್ಮಾತ್ಮನಿಗೆ ಹೋದಲೆಲ್ಲೆಲ ಜಯ. ಅವನ ತಪೋಬಲದಿಂದ ಸುರರು ಒಡ್ಡಿದ ವಿಘ್ನಗಳ ಮೇಲೆಯೂ ಅವನಿಗೆ ವಿಜಯ, ಅನಂತರ ಮಂದರಾಚಲದಿಂದ ಮಹಾದೇವನು ರಾಜನ ಛಿದ್ರಗಳನ್ನು ಹುಡುಕಲಿಕ್ಕಾಗಿಯೇ ಅರವತ್ನಾಕು ಯೋಗಿನಿಯರನ್ನು ಕಾಶಿಗೆ ಕಳುಹಿಸಿಕೊಟ್ಟನು. ಆ ಯೋಗಿನಿಯರು ಹನ್ನೆರಡು ತಿಂಗಳು ಕಾಶಿಯಲ್ಲಿ ಇದ್ದು ಪ್ರಯತ್ನ ಮಾಡಿದರೂ ಅವರಿಗೆ ರಾಜನಲ್ಲಿ ಒಂದು ದೋಷ ಕಾಣಲಿಲ್ಲ. ಶಾಸನದಲ್ಲಿ ಯಾವ ಛಿದ್ರವೂ ಕಾಣಲಿಲ್ಲ. ಅವರು ಯಾರೂ ಮರಳಿ ಶಿವನ ಬಳಿಗೆ ಬರಲೇ ಇಲ್ಲ. ಅವರು ಕಾಶಿಯಲ್ಲಿಯೇ ನಿಂತರು. ಆಗ ಶಂಕರನು ಸೂರ್ಯನನ್ನು ಕರೆದನು. ಅಪ್ಪಣೆಯನ್ನು ನೀಡಿದನು- ದಿವಾಕರ, ನೀನು ಭೂಲೋಕದ ಮಂಗಲ ನಗರಿ ಎನಿಸಿದ ಕಾಶೀಪಟ್ಟಣಕ್ಕೆ ಕೂಡಲೇ ಹೋಗು. ಅಲ್ಲಿ ಈಗ ದಿವೋದಾಸನ ಶಾಸನ. ರಾಜನ ಧರ್ಮವಿರೋಧದಿಂದ ಆ ಕ್ಷೇತ್ರವು ನಾಶವಾಗುವಂತೆ ಏನಾದರೂ ಒಂದು ಉಪಾಯ ಮಾಡು. ಆದರೆ ಆ ರಾಜನಿಗೆ ಅನಾದರವನ್ನು ಮಾತ್ರ ಮಾಡಬೇಡ. ಧರ್ಮ ವರ್ಮರಾದ ಇಂಥ ಸತ್ಪುರುಷರ ಅವಮಾನ ಬಹಳ ಭಯಾವಹ. ಸೂರ್ಯನೇ, ನಿನ್ನ ಬುದ್ಧಿ ಕೌಶಲ್ಯದಿಂದ ಹೇಗಾದರೂ ಮಾಡಿ ಆ ದಿವೋದಾಸನನ್ನು ಧರ್ಮದಿಂದ ಚ್ಯುತನಾಗುವಂತೆ ಮಾಡು. ಅದೇ ನೆಪದಿಂದ ಆ ಪಟ್ಟಣವನ್ನು ನಿನ್ನ ಉಜ್ವಲ ಕಿರಣಗಳಿಂದ ಹಾಳು ಮಾಡು.

ಪರಮೇಶ್ವರನು ಆಜ್ಞೆಯನ್ನು ತಲೆಯಲ್ಲಿ ಹೊತ್ತು ಕಾಶಿಗೆ ಆಗಮಿಸಿದ ಆ ಸೂರ್ಯ. ಜಗತ್ತಿನ ಕಣ್ಣಾದ ಆ ಸೂರ್ಯದೇವನು ಕಣ್ಣಲ್ಲಿ ಕಣ್ಣಿಟ್ಟು ಪರೀಕ್ಷಿಸಿದ ದಿವೋದಾಸನ ದಿನಚರಿಯನ್ನು. ಬಗೆ ಬಗೆಯ ರೂಪಗಳನ್ನು ಧರಿಸಿ ಆ ದಿನಮಣಿಯು ಆ ಕಾಶಿಯಲ್ಲಿ ಒಂದು ವರ್ಷ ಇದ್ದು ಬಗೆ ಬಗೆಯ ರೀತಿಯಿಂದ ರಾಜನನ್ನು ಪರೀಕ್ಷಿಸಿದ ಒಮ್ಮೆ ಯಾಚಕನಾಗಿ. ಮತ್ತೊಮ್ಮೆ ಅತಿಥಿಯಾಗಿ. ಮಗದೊಮ್ಮೆ ಜ್ಯೋತಿಷಿಯಾಗಿ, ಮಗದೊಮ್ಮೆ ಜಟಾಧಾರಿಯಾಗಿ, ಇನ್ನೊಮ್ಮೆ ದಿಗಂಬರನಾಗಿ, ಮತ್ತೊಮ್ಮೆ ವಿಷ ಇಳಿಸುವ ಹಾವುಗಾರನಾಗಿ

ದಿವೋದಾಸನನ್ನು ಮತ್ತೆ ಮತ್ತೆ ತನ್ನ ಸೂಕ್ಷ್ಮ ಪರೀಕ್ಷೆಗೆ ಗುರಿಪಡಿಸಿದ. ಒಂದೊಂದು ಸಲ ಬ್ರಾಹ್ಮಣನಾಗಿ, ಮತ್ತೊಮ್ಮೆ ಕ್ಷತ್ರಿಯನಾಗಿ, ಇನ್ನೊಮ್ಮೆ ವೈಶ್ಯನಾಗಿ, ಶೂದ್ರನಾಗಿ ಚಂಡಾಲನಾಗಿ ಬ್ರಹ್ಮಚಾರಿಯಾಗಿ, ಗೃಹಸ್ತನಾಗಿ, ವಾನಪ್ರಸ್ತನಾಗಿ, ಸನ್ಯಾಸಿಯಾಗಿಯೂ ಕೂಡ ರಾಜನನ್ನು ಅವನ ಪ್ರಜೆಗಳನ್ನು ವಿವಿಧ ರೀತಿಯಿಂದ ಪರೀಕ್ಷೆಯ ತಟ್ಟೆಯಲ್ಲಿ ಇಟ್ಟು ತೂಗಿದ. ಇಷ್ಟಾದರೂ ಆ ರಾಜನಲ್ಲಿಯೇ ಆಗಲಿ. ಅಸಂಖ್ಯ ಕಾಶೀ ನಾಗರಿಕರಲ್ಲಿ ಒಬ್ಬ ಪ್ರಜೆಯಲ್ಲಾಗಲೀ, ಒಂದೂ ತಪ್ಪು, ಕಿಂಚಿದ್ ದೋಷಗಳೂ ದೊರಕಲಿಲ್ಲ ಧಾಮನಿಧಿಗೆ.

ಹೀಗೆ ಸೂರ್ಯನಿಗೆ ರಾಜ ಪ್ರಜರಲ್ಲಿ ಛಿದ್ರವನ್ನು ಹುಡುಕಲು ಆಗದಿದ್ದರೂ ಅವನು ತಿರುಗಿ ಹೋಗಲಿಲ್ಲ ಶಂಕರನ ಬಳಿಗೆ. ಈ ಮುಕ್ತಿಪುರಿಯ ಬಗೆಗೆ ಸ್ವಯಂ ಸೂರ್ಯ ದೇವನಿಗೆ ಸ್ನೇಹ, ಮೋಹ, ಪ್ರೀತಿ, ಆತ್ಮೀಯ ಭಾವನೆ ಹುಟ್ಟಿ ಬಿಟ್ಟಿತ್ತು. ಆದುದರಿಂದ ಆ ಸೂರ್ಯನು ಇಲ್ಲಿ ಹನ್ನೆರಡು ಸ್ವರೂಪಗಳಲ್ಲಿ ತನ್ನನ್ನು ತಾನೇ ಅಭಿವ್ಯಕ್ತಿಗೊಳಿಸಿ ವಿಶ್ವನಾಥನಸೇವೆಗಾಗಿ ನಿರಂತರ ಕೈಕಟ್ಟಿಕೊಂಡುನಿಂತುಕೊಂಡು ಬಿಟ್ಟಿದ್ದಾನೆ ಮೊದಲನೆಯದೇ ಲೋಲಾರ್ಕ. ನಂತರ ಉತ್ತರಾರ್ಕ, ಸಾಂಬಾದಿತ್ಯ, ದ್ರೌಪದಾದಿತ್ಯ, ಮಯೂಖಾದಿತ್ಯ, ಖಖೋಲಕಾದಿತ್ಯ, ಅರುಣಾದಿತ್ಯ, ವೃದ್ಧಾದಿತ್ಯ, ಕೇಶವಾದಿತ್ಯ, ವಿಮಲಾದಿತ್ಯ, ಗಂಗಾದಿತ್ಯ, ಯಮಾದಿತ್ಯ, ಎಂದು ಹನ್ನೆರಡು ರೂಪಗಳಿಂದ ಸೂರ್ಯದೇವನು ಈ ಕಾಶೀಪಟ್ಟಣದಲ್ಲಿ ನಿಂತು ಕೊಂಡಿದ್ದಾನೆ. ಈ ತೀರ್ಥಗಳು ತಮೋಗುಣವು ಅಧಿಕವಾದ ದುಷ್ಟರಿಂದ ಕಾಶಿಯನ್ನು ರಕ್ಷಣಮಾಡುತ್ತವೆ. ಸೂರ್ಯನ ಮನಸ್ಸು ಕಾಶೀ ದರ್ಶನಕ್ಕಾಗಿ 'ಲೋಲ' ಎಂದರೆ ಚಂಚಲವಾಗಿದ್ದಿತು ಆದುದರಿಂದ ಇದಕ್ಕೆ ಲೋಲಾರ್ಕ ಎಂದು ಹೆಸರು ಬಂದಿತು. ದಕ್ಷಿಣದಲ್ಲಿ ಅಸೀಸಂಗಮದ ಹತ್ತಿರ ಲೋಲಾರ್ಕ ಲಿಂಗವು ಇರುತ್ತದೆ. ಕಾಶೀವಾಸಿಗಳ ಯೋಗಕ್ಷೇಮವನ್ನು ನೋಡಿಕೊಳ್ಳುವುದೇ ಈ ಲೋಲಾರ್ಕನ ಮುಖ್ಯ ಕಾರ್ಯ.

## ಉತ್ತರಾರ್ಕ ಸೂರ್ಯನ ಮಹಿಮೆ. ಸುಲಕ್ಷಣೆಯ ತಪಸ್ಸು

**ಸ್ಕಂದ:-** ಕಾಶಿಯ ಉತ್ತರ ದಿಕ್ಕಿನಲ್ಲಿ ಭಗವಾನ್ ಸೂರ್ಯನು ಅರ್ಕಕುಂಡದ ತೀರದಲ್ಲಿ ಉತ್ತರಾರ್ಕಎಂಬ ಹೆಸರಿನಿಂದ ವಾಸವಾಗಿದ್ದಾನೆ. ಕಾಶೀಪಟ್ಟಣದಲ್ಲಿ ಹಿಂದೆ ಪ್ರಿಯವ್ರತ ಎಂಬ ಬ್ರಾಹ್ಮಣನಿದ್ದ. ಅವನ ವಂಶ ಆತ್ರೇಯಕುಲ. ಸದಾಚಾರ ಸಂಪನ್ನ. ಅತಿಥಿ ಪ್ರೇಮಿ. ಅವನ ಧರ್ಮಪತ್ನಿ ಸುಂದರಿ ಇದ್ದಷ್ಟೇ ಪತಿವ್ರತೆಯೂ ಆಗಿದ್ದಳು. ಅವನಿಗೆ ಅವಳಲ್ಲಿ ಒಳ್ಳೆ ಲಕ್ಷಣಗಳಿಂದೊಡಗೂಡಿದ ಒಂದು ಕನ್ಯೆ ಇದ್ದಳು. ಅವಳ ಹೆಸರು ಸುಲಕ್ಷಣಾ, ಮೂಲಾನಕ್ಷತ್ರದ ಮೊದಲನೇ ಚರಣದಲ್ಲಿ ಅವಳ ಉತ್ಪತ್ತಿ. ಅವಳ ಸೌಂದರ್ಯಕ್ಕೆ ವಿನಯ ಒಪ್ಪಹಾಕಿತ್ತು ಸದಾಚಾರಪರಾಯಣತೆಗೆ ಮಾತಾಪಿತೃಗಳ ಪ್ರೇಮ ಕಳಸವಿಟ್ಟಿತ್ತು. ಮಗಳು ದೊಡ್ಡವಳಾದಳು. ತಂದೆಯ ಚಿಂತೆಯು ದೊಡ್ಡದಾಯಿತು. ಈ ನನ್ನ ಮಗಳ ರೂಪಕ್ಕೆ ಅನುರೂಪನಾದ, ಗುಣಗಳಿಗೆ ಅನುಗುಣವಾದ ವರನು ಎಲ್ಲಿ ದೊರಕಬಹುದು? ಎಷ್ಟು ಹುಡುಕಿದರೂ ತನ್ನ ಮಗಳಿಗೆ ತಕ್ಕವನಾದ ಗಂಡು ಎಲ್ಲಿಯೂ ಸಿಕ್ಕಲಿಲ್ಲ. ಇದೇ ಚಿಂತೆ ಆ ಬ್ರಾಹ್ಮಣ ಹೃದಯದಲ್ಲಿ ಕೊರಗಾಗಿ ಕೊರೆಯತೊಡಗಿತು. ಅದೇ ಒಂದು ನೆಪವಾಗಿ ಹೃದ್ರೋಗದಿಂದ ಅವನು ಮರಣ ಹೊಂದಿದ. ಆ ಬ್ರಾಹ್ಮಣನ ಧರ್ಮಪತ್ನಿ ಪರಮ ಪತಿವ್ರತೆ ಪತಿಯ ವಿರಹಾಗ್ನಿಯಲ್ಲಿ ಬೇಯುವುದಕ್ಕಿಂತ ಅವನ ಚಿತಾಗ್ನಿಯಲ್ಲಿ ಆತ್ಮಾರ್ಪಣೆಮಾಡುವುದೇ ಸುಖ ಹಾಗೂ ಸುಖಕರ ಎನಿಸಿತು ಆ ಮಹಿಳಾ ಮಣಿಗೆ. ಪತಿಯೊಡನೆ ಸಹಗಮನ ಮಾಡಿದಳು ಆ ಮಂದಗಮನೆ.

ಒಮ್ಮೆಲೆ ತಾಯಿ ತಂದೆ ಇಬ್ಬರೂ ಕೈ ಬಿಟ್ಟು ಹೋದದ್ದರಿಂದ ಕಂಗಾಲಾದಳು ಆ ಕನ್ಯೆ. ಅವಳ ಬಾಳಿನ ಬಳ್ಳಿವಾಡದಲ್ಲಿ ಒಮ್ಮೆಲೆ ಎರಗಿತ್ತು ಬರಸಿಡಲು. ಏನು ಮಾಡಬೇಕು ತಿಳಿಯದಂತಾಯಿತು. ಕಿಂ ಕರ್ತವ್ಯ ಮೂಢಳಾದ ಆ ಬಾಲೆ ಕೊನೆಗೆ ವಿಚಾರಿಸಿ ಕಾಶಿಯಲ್ಲಿ ಇದ್ದ ಉತ್ತರಾರ್ಕದೇವನ ಸಮೀಪದಲ್ಲಿ ಉಗ್ರತಪಸ್ಸನ್ನು ಕೈಕೊಂಡಳು. ಅವಳು ತಪಸ್ಸಿಗೆ ಕುಳಿತಾಗ ಪ್ರತಿದಿನವೂ ಅವಳ ಎದುರು ಒಂದು ಮೇಕೆಯ ಮರಿಯು ನಿಶ್ಚಲವಾಗಿ ನಿಂತುಕೊಳ್ಳುತ್ತಿತ್ತು. ಹೊತ್ತು ಮುಳುಗಿದ ಬಳಿಕ ಅಲ್ಲಿಯೇ ಹತ್ತಿರದಲ್ಲಿ ಬಿದ್ದ ಹುಲ್ಲು ಮತ್ತು ತರೆಗೆಲೆಗಳನ್ನು ಚರ್ವಣಗೈದು ಉತ್ತರಾರ್ಕ ಕುಂಡದ ನೀರು ಕುಡಿದು ತನ್ನ ಒಡೆಯನ ಮನೆಗೆ ತಿರುಗಿ ಹೋಗುತ್ತಿತ್ತು. ಮರುದಿನ ಬೆಳಿಗ್ಗೆ ಸುಲಕ್ಷಣೆ ತಪಸ್ಸಿಗೆ ಕುಳಿತುಕೊಂಡಾಗ ಮತ್ತೆ ಹಾಜರು ಆಯಿತು ಆಡಿನ ಮರಿ. ಹೀಗೆ ಆರು ವರ್ಷ ಕಳೆಯಿತು. ಸುಲಕ್ಷಣೆಯ ತಪಸ್ಸು ಬೆಳೆಯಿತು. ಆದರೆ ದೇಹದ ಭಾರ ಮಾತ್ರ ಇಳಿಯುತ. ಮುಖದ ಕಳೆ ಕಾಂತಿ ನಿಸ್ತೇಜವಾಯಿತು.

ಒಂದು ದಿನ ಶಂಕರನು ಪಾರ್ವತಿಯೊಂದಿಗೆ ಲೀಲಾ ಸಂಚಾರಗೈಯುತ್ತ ಅತ್ತ ಕಡೆ ಆಗಮಿಸಿದ. ಅವಳನ್ನು ನೋಡಿ ಕರುಣೆದುಂಬಿತು ಪಾರ್ವತಿಯ ತಾಯಿಗರುಳು. ಪತಿ ಪರಮೇಶ್ವರನಲ್ಲಿ ಅವಳ ದೀನ ನಿವೇದನೆ.

**ಪಾರ್ವತಿ:-** ''ಪ್ರಭು, ಈ ಕನ್ಯೆ ಅನಾಥೆ. ತಾಯಿ ತಂದೆ ಇಬ್ಬರೂ ಮರಣ ಹೊಂದಿದ್ದಾರೆ. ಅನನ್ಯ ಭಕ್ತಿಯಿಂದ ಇಷ್ಟು ದಿನ ಕಷ್ಟಪಟ್ಟು ತಪಸ್ಸು ಮಾಡಿದ ಈ ಕನ್ಯೆಯನ್ನು ಅನುಗ್ರಹಿಸಿರಿ.'' ಆಗ ಪರಶಿವನು ಆ ತರಳೆಯ ಮೇಲೆ ಕರುಣೆ ಸುರಿಸಿದ. ಅವಳ ಎದುರು ಪ್ರತ್ಯಕ್ಷನಾಗಿ ನಿಂತುಕೊಂಡ- ''ಶುಭಾಂಗಿ, ನಿನ್ನ ತಪಸ್ಸಿಗೆ ನಾನು ಮೆಚ್ಚಿದೆ. ಬಯಸಿದ ವರ ಬೇಡು. ನೀಡುವೆ.''- ಎಂದ.

ದೇವ ವಾಣಿಯನ್ನು ಕೇಳಿ ಸುಲಕ್ಷಣೆಯು ಕಣ್ಣು ತೆರೆದಳು. ಮನಸ್ಸಿನಲ್ಲಿದ್ದ ಮಹಾದೇವ ಕಣ್ಣೆದುರೇ ನಿಂತುಕೊಂಡಿದ್ದ. ಅವನ ಎಡ ಭಾಗದಲ್ಲಿಯೇ ದಾಕ್ಷಾಯಣಿ. ಆ ದಂಪತಿಗಳ ದಿವ್ಯದರ್ಶನದಿಂದ ಹರ್ಷಪುಲಕಿತಳಾದ ಸುಲಕ್ಷಣೆ ಎದ್ದು ದೀರ್ಘದಂಡ ನಮಸ್ಕಾರ ಹಾಕಿದಳು. ಕೈ ಮುಗಿದು ಕೇಳಿಕೊಂಡಳು- ''ದೇವ ದೇವಾ, ತಾವು ನನ್ನ ಮೇಲೆ ಪ್ರಸನ್ನರಾಗಿದ್ದರೆ, ನನ್ನ ಜೊತೆಗೆ ನನ್ನ ಎದುರೇ ನಿಂತುಕೊಳ್ಳುತ್ತಿದ್ದ ಆ ನನ್ನ ತಪೋನುಷ್ಠಾನದ ಸಂಗಾತಿಯಾಗಿದ್ದ ಈ ಮೇಕೆಯ ಮರಿಯ ಮೇಲೆ ಅನುಗ್ರಹ ಮಾಡಿರಿ.'' ಸುಲಕ್ಷಣೆಯ ವಿಲಕ್ಷಣವಾದ ಪ್ರಾಣಿಪ್ರೇಮವನ್ನು ಕಂಡು ಸುಪ್ರೀತರಾದರು ಆ ಶಿವ ದಂಪತಿಗಳು. ಆಗ ಪರಮೇಶ್ವರನು ಮಂದಹಾಸ ಸುಂದರವಾದ ಮುಖದಿಂದ ಗೌರಿಗೆ ಹೇಳಿದ- 'ಗಿರಿರಾಜ ನಂದಿನಿ, ಈ ಕನ್ಯಾಮಣಿಯ ಪರೋಪಕಾರ ಬುದ್ಧಿಯನ್ನು ನೋಡು. ಈಗ ನೀನೇ ಹೇಳು. ಈ ಸುಲಕ್ಷಣೆಗೆ ನಾನು ಯಾವ ವರ ಕೊಡಬೇಕು? ಈ ಮೇಕೆಯ ಮರಿಗೂ ಏನು ವರದಾನ ಮಾಡಬೇಕು?'

**ಪಾರ್ವತಿ:-** ''ಪತಿದೇವ, ಈ ಸುಲಕ್ಷಣೆ ತನ್ನ ಹೆಸರಿಗೆ ತಕ್ಕಂತೆ ಸಾಧ್ವೀಮಣಿಯರ ಎಲ್ಲ ಸುಲಕ್ಷಣಗಳಿಂದ ಪರಿಪೂರ್ಣೆ. ಇವಳು ನನ್ನ ಸಖಿಯಾಗಿ ಇರಲಿ. ಇವಳು ಬಾಲ್ಯ ಬ್ರಹ್ಮಚಾರಿಣಿ ಇವಳ ಮೇಲೆ ನನಗೆ ವಿಲಕ್ಷಣ ಪ್ರೀತಿ. ಇವಳು ದಿವ್ಯ ದೇಹವನ್ನು ಧರಿಸಿ ಯಾವಾಗಲೂ ನನ್ನ ಬಳಿಯಲ್ಲಿಯೇ ನನ್ನ ಮೈತ್ರಿಣಿಯಾಗಿ ಇರಲಿ. ಈ ಮೇಕೆಯ ಮರಿಯು ಕಾಶೀರಾಜನ ಕುಮಾರಿಯಾಗಿ ಹುಟ್ಟಿಬರಲಿ. ಉತ್ತಮೋತ್ತಮವಾದ ಭೋಗೋಪ ಭೋಗಗಳನ್ನು ಅನುಭವಿಸಲಿ. ಕೊನೆಗೆ ಸದ್ಗತಿಯನ್ನು ಹೊಂದಲಿ. ಈ ಮೇಕೆಯು ಪುಷ್ಯಮಾಸದಲ್ಲಿ ಪ್ರತಿದಿನವೂ ಸೂರ್ಯೋದಯಕ್ಕಿಂತ ಮೊದಲು ಈ ಅರ್ಕಕುಂಡದಲ್ಲಿ

ಸ್ನಾನಮಾಡಿದೆ. ಆದ್ದರಿಂದ ಇದು ಇಂದಿನಿಂದ ಬರ್ಕರೀ ಕುಂಡ ಎಂದು ಪ್ರಸಿದ್ಧವಾಗಲಿ. ಇಲ್ಲಿಯೇ ಈ ಮೇಕೆಯ ಮರಿಯ ಮೂರ್ತಿಯು ಸರ್ವರಿಂದಲೂ ಪೂಜ್ಯವಾಗಲಿ. ಮಾನವರು ಪುಷ್ಯಮಾಸದ ರವಿವಾರ ದಿನ ಇಲ್ಲಿಯ ಉತ್ತರಾರ್ಕ ದಿನ ವಾರ್ಷಿಕಯಾತ್ರೆಯನ್ನು ಮಾಡಲಿ.'' ಹೀಗೆ ಹೇಳಿದ ಪಾರ್ವತಿಯ ವಚನವನ್ನು ಸತ್ಯಗೊಳಿಸಿ ವಿಶ್ವವ್ಯಾಪಿಯಾದ ಆ ವಿಶ್ವನಾಥನು ತನ್ನ ಲಿಂಗದಲ್ಲಿ ಲೀನನಾದನು.

## ಸಾಂಬಾದಿತ್ಯ, ದ್ರೌಪದಾದಿತ್ಯ, ಮಯೂಖಾದಿತ್ಯರ ಮಹಿಮೆ

**ಸ್ಕಂದ:-** ಮುನೀಶ್ವರ, ದ್ವಾರಕೆಯಲ್ಲಿ ಶ್ರೀಕೃಷ್ಣನ ಹದಿನಾರು ಸಾವಿರದಾ ಒಂದು ನೂರಾ ಎಂಟು ಜನ ಪತ್ನಿಯರಿಂದ ಆ ಭಗವಂತನಿಗೆ ಒಂದು ಲಕ್ಷ ಎಂಭತ್ತು ಮಕ್ಕಳು. ಅವರೆಲ್ಲರೂ ಸೂರ್ಯನಂತೆ ತೇಜಸ್ವಿಗಳು. ಅಗ್ನಿಯಂತೆ ವರ್ಚಸ್ವಿಗಳು. ಕಾಮನಂತೆ ರೂಪಸ್ವಿಗಳು. ಬೃಹಸ್ಪತಿಯಂತೆ ಮನಸ್ವಿಗಳು. ಆ ಎಲ್ಲ ಕೃಷ್ಣಕುಮಾರರಲ್ಲಿ ಸಾಂಬ ಎಲ್ಲರಿಗಿಂತ ಅಧಿಕ ಗುಣ ಸಂಪನ್ನ. ಅವನು ಕಾಶಿಗೆ ಬಂದು ಸೂರ್ಯನನ್ನು ಆರಾಧಿಸಿದ. ಒಂದು ತೀರ್ಥವನ್ನು ನಿರ್ಮಿಸಿದ. ರವಿವಾರ ದಿನ ಈ ಸಾಂಬಕುಂಡದಲ್ಲಿ ಸ್ನಾನಮಾಡಿ ಸಾಂಬಾದಿತ್ಯನ ಪೂಜೆ ಮಾಡಿದವರು ಸರ್ವರೋಗಗಳಿಂದ ಮುಕ್ತರಾಗುವರು.

ಪಂಚಪಾಂಡವರು ವನವಾಸದಲ್ಲಿದ್ದಾಗ ದ್ರೌಪತಿಯೊಡನೆ ಬಹಳ ಕಷ್ಟಪಟ್ಟರು. ಪಂಚಪತಿಗಳ ದುಃಖ ದಾರಿದ್ರ್ಯ ದುರವಸ್ಥೆಗಳನ್ನು ಕಂಡು ಮಮ್ಮಲನೆ ಮರಗಿ ಆ ಸತೀ ಮಣಿಯು ಸೂರ್ಯನನ್ನು ಭಕ್ತಿಯಿಂದ ಆರಾಧಿಸಿದಳು. ಅವಳ ಭಕ್ತಿಯಿಂದ ಪ್ರಸನ್ನನಾದ ಭಾಸ್ಕರ. ಒಂದು ಸೌಟು ಹಾಗೂ ಮುಚ್ಚಳದಿಂದ ಒಡಗೂಡಿದ ಒಂದು ಸ್ಥಾಲೀ ತಪ್ಪಲೆಯನ್ನು ಕರುಣಿಸಿ ಹೇಳಿದ-ಶುಭಾಂಗಿ, ನಾನು ನೀಡಿದ ಈ ಸ್ಥಾಲಿಯಿಂದ ಎಷ್ಟು ಜನ ಅತಿಥಿಗಳು ಬಂದರೂ ಇದರಲ್ಲಿಯ ಅನ್ನದಿಂದ ತೃಪ್ತಿಯಾಗುವುದು. ನಿನ್ನ ಊಟ ಆಗುವವರೆಗೆ ಸಹಸ್ರ ಲಕ್ಷ ಜನರು ಬಂದರೂ ಸಾಕು ಸಾಕಾಗುವಷ್ಟು ಅನ್ನವನ್ನು ಇದು ನೀಡುವುದು. ನಿನ್ನ ಊಟವಾದ ಬಳಿಕ ಮಾತ್ರ ಇದು ಖಾಲಿಯಾಗುವುದು. ಈ ತಪ್ಪಲೆಯು ಇಚ್ಛಾನುಸಾರ ರಸಭರಿತವಾದ ಭಕ್ಷ್ಯ, ಭೋಜ್ಯ, ಪಕ್ವಾನ್ನ, ಮೃಷ್ಟಾನ್ನಗಳನ್ನು ಪ್ರತಿದಿನ ಬೇಡಿದಷ್ಟು ಪ್ರಮಾಣದಲ್ಲಿ ವ್ಯಂಜನ ಪದಾರ್ಥ ಸಹಿತವಾಗಿ ನೀಡುವುದು. ನಿನ್ನಿಂದ ಆರಾಧಿಸಲ್ಪಟ್ಟ ನಾನು ದ್ರೌಪದಾದಿತ್ಯ ಎಂಬ ಹೆಸರಿನಿಂದ ಈ ಕಾಶಿಯಲ್ಲಿ ನೆಲಿಸುವೆನು ನನ್ನನ್ನು ಆರಾಧಿಸಿದವರಿಗೆ ಹಸಿವೆ ಬಾಧೆ ತಟ್ಟದು. ಬಾಯಾರಿಕೆ ಬಾಧಿಸದು. ರೋಗ ತಗಲದು.

ಮಯೂಖಾದಿತ್ಯನ ಮಹತ್ವ ಹೇಳುವೆ ಕೇಳಿರಿ. ಪೂರ್ವಕಾಲದಲ್ಲಿ ಪಂಚಗಂಗಾ ತೀರ್ಥದಲ್ಲಿ ಸೂರ್ಯನು ಗಭಸ್ತೀಶ್ವರ ಎಂಬ ಲಿಂಗವನ್ನೂ ಮಂಗಲಾ ಎಂಬ ಗೌರೀ ದೇವಿಯನ್ನು ಸ್ಥಾಪಿಸಿ ಅವನ ಆರಾಧನೆಗೋಸ್ಕರ ತೀವ್ರ ತಪಸ್ಸನ್ನು ಕೈಕೊಂಡ. ಅವನ ತಪಸ್ಸಿನ ತೇಜಸ್ಸಿನಿಂದ ಮೂರು ಲೋಕಗಳೇ ತಪ್ತವಾದವು. ಸೂರ್ಯನ ತಪೋಮಯವಾದ ಜ್ವಾಲೆಗಳಿಂದ ಪ್ರಪಂಚವೇ ನೊಂದು ಬೆಂದು ಉರಿದು ಹೋಗುವ ಪ್ರಸಂಗವು ಬಂದಿತು. ಆಗ ಕರುಣೆಯ ಕೈವಾರಿಯಾದ ಕೈಲಾಸ ಪತಿಯು ಸೂರ್ಯನು ತಪಿಸುವ ಸ್ಥಳಕ್ಕೆ ಬಂದು ಹೇಳಿದ- 'ದಿವಾಕರ, ನಿನ್ನ ತಪಸ್ಸು ಪೂರ್ಣನಾಗಿದೆ. ನಿನಗೆ ಬೇಕಾದ ವರ ಬೇಡು'.

ಆದರೆ ತಪೋಲೀನನಾದ ಸೂರ್ಯನ ಇಂದ್ರಿಯಗಳೆಲ್ಲವೂ ಅಂತರ್ಮುಖವಾಗಿದ್ದವು. ಶಿವವಾಣಿ ಅವನ ಕಿವಿಗೆ ಕೇಳಲಿಲ್ಲ. ಆಗ ವಿಶ್ವನಾಥನು ತನ್ನ ಕೈಯಿಂದ ಸ್ಪರ್ಶ ಮಾಡಿದ ಕಣ್ಣು ತೆರೆಯುವಷ್ಟರಲ್ಲಿ ಸಾಕ್ಷಾತ್ ಕಪರ್ದಿ ಕಣ್ಣ ಮುಂದೆಯೇ. ತನ್ನ ಆರಾಧ್ಯ ದೇವ ಪ್ರತ್ಯಕ್ಷ ವರದ ಮೂರ್ತಿಯಾಗಿ ಎದುರು ಬಂದು ನಿಂತದ್ದನ್ನು ಕಂಡು ಸಾಷ್ಟಾಂಗ ನಮನ ಮಾಡಿದ ಸೂರ್ಯ. ಭಕ್ತಿಯಿಂದ ಆ ಭವಾನೀಪತಿಯನ್ನು ಸ್ತೋತ್ರ ಮಾಡಿದ.

## ಸೂರ್ಯಕೃತ ಶಂಕರ ಸ್ತೋತ್ರ

**ದೇವ ದೇವ ಜಗತಾಂ ಪತೇ ವಿಭೋ ।**
**ಭರ್ಗ ಭೀಮ ಭವ ಚಂದ್ರ ಭೂಷಣ ॥**

ಭೂತಗಣಗಳನಾಥನೂ, ಸಂಸಾರದ ಭೀತಿಯನ್ನು ಪರಿಹರಿಸುವನೂ ಆದ ದೇವಾಧಿದೇವನೂ, ಜಗತ್ಪತಿಯೂ, ಎಲ್ಲರಿಗೂ ಪ್ರಭುವೂ ಜನರನ್ನೆಲ್ಲ ಭರಣ ಪೋಷಣ ಮಾಡುವವನೂ, ವೈರಿ ಭಯಂಕರನೂ, ಚಂದ್ರನನ್ನು ಭೂಷಣವನ್ನಾಗಿ ಮಾಡಿಕೊಂಡವನೂ

**ಭೂತ ನಾಥ ಭವಭೀತಿ ಹಾರಕ ।**
**ತ್ವಾಂ ನಮೋಽಸ್ಮಿ ನತ ವಾಂಛಿತಪ್ರದ ॥**

ಶಂಕರನೇ, ನಮಿಸಿದವರ ಇಷ್ಟಾರ್ಥಗಳನ್ನೆಲ್ಲ ನೀಡುವ ನಿನ್ನನ್ನು ನಾನು ನಮಸ್ಕರಿಸುತ್ತೇನೆ.

**ಚಂದ್ರಚೂಡ ಮೃಡ ಧೂರ್ಜಟೇ ಹರ । ತ್ರ್ಯಕ್ಷ ದಕ್ಷಶತ ತಂತುಶಾತನ ।**
**ಶಾಂತ ಶಾಶ್ವತ ಶಿವಾಪತೇ ಶಿವ । ತ್ವಾಂ ನತೋಽಸ್ಮಿ ನತ ವಾಂಛಿತಪ್ರದ ॥**

ಚಂದ್ರಚೂಡ, ಮೃಡ, ಧೂರ್ಜಟಿ, ಹರ, ತ್ರಿಲೋಚನ, ದಕ್ಷಯಜ್ಞನಾಶಕ, ಶಾಂತ, ಶಾಶ್ವತ, ಗೌರೀಪತಿ ಎಂದು ಬಗೆ ಬಗೆಯ ನಾಮಗಳುಳ್ಳ ಶಿವನೇ, ನಾನು ಇಷ್ಟಾರ್ಥಪ್ರದನಾದ ನಿನ್ನನ್ನು ನಮಿಸುತ್ತೇನೆ.

**ನೀಲ ಲೋಹಿತ ಸಮೀಹಿತಾರ್ಥದ । ದ್ವೈಕಲೋಚನ ವಿರೂಪ ಲೋಚನ।**
**ವ್ಯೋಮಕೇಶ ಪಶುಪಾಶ ನಾಶನ ತ್ವಾಂ...... ॥**

ನೀಲಲೋಹಿತ, ಇಷ್ಟಾರ್ಥಗಳನ್ನು ಕೊಡುವ ಮುಕ್ಕಣ್ಣ, ವಿರೂಪಾಕ್ಷ, ಆಕಾಶ ಕೇಶ, ಪಶುಪಾಶನಾಶನ ಮುಂತಾದ ನಾಮಗಳುಳ್ಳ ಇಷ್ಟಾರ್ಥಪ್ರದನಾದ ಶಿವನೇ, ನಿನ್ನನ್ನು ನಾನು ನಮಸ್ಕರಿಸುತ್ತೇನೆ.

**ವಾಮದೇವ ಶಿತಿಕಂಠ ಶೂಲಭೃತ್ ಚಂದ್ರಶೇಖರ ಫಣೀಂದ್ರ ಭೂಷಣ ।**
**ತ್ರ್ಯಂಬಕ ತ್ರಿಪುರ ಸೂದನೇಶ್ವರ ತ್ರಾಣ ಕೃತ್ ತ್ರಿನಯನ ತ್ರಯೀಮಯ ।**
**ಕಾಲಕೂಟ ದಲನಾಂತಕಾಂತಕ ತ್ವಾಂ...... ॥**

ವಾಮದೇವನೇ, ಶಿತಿಕಂಠನೇ ಶೂಲಧಾರಿಯೇ, ಚಂದ್ರಶೇಖರನೇ, ಶೇಷಭೂಷಣನೇ, ಇಷ್ಟಾರ್ಥಪ್ರದನೇ ಪಶುಪತಿಯೇ, ಮಹೇಶ್ವರನೇ ನಾನು ನಿನ್ನನ್ನು ನಮಸ್ಕರಿಸುತ್ತೇನೆ.

ತ್ರ್ಯಂಬಕನೇ, ತ್ರಿಪುರಾರಿಯೇ, ಈಶ್ವರನೇ ಎಲ್ಲರನ್ನು ರಕ್ಷಿಸುವವನೇ ಮೂರು ಕಣ್ಣುಗಳುಳ್ಳವನೇ, ಮೂರು ವೇದಗಳಿಂದ ಪ್ರತಿಪಾದ್ಯನೇ, ಕಾಲಕೂಟವನ್ನು ಭಕ್ಷಿಸಿದವನೇ, ಯಮನನ್ನು ನಿಗ್ರಹಿಸಿದವನೇ ನಾನು ನಿನಗೆ ನಮಸ್ಕರಿಸುತ್ತೇನೆ.

**ಶರ್ವರೀರಹಿತ ಶರ್ವ ಸರ್ವಗ ಸ್ವರ್ಗ ಮಾರ್ಗ ಸುಖದಾಪವರ್ಗದ ।**
**ಅಂಧಕಾಸುರರಿಪೋ ಕಪರ್ದಭೃತ್ ತ್ವಾಂ ........ ॥**

ಅಜ್ಞಾನ ರಹಿತನೇ, ಸರ್ವತ್ರ ವ್ಯಾಪ್ತನೇ, ಸ್ವರ್ಗಮಾರ್ಗವನ್ನು ಅನುಸರಿಸುವ ವೈದಿಕರಿಗೆ ಸುಖವನ್ನು ನೀಡುವವನೇ, ಮೋಕ್ಷವನ್ನು ಕರುಣಿಸುವವನೇ, ಅಂಧಕ ಎಂಬ ರಾಕ್ಷಸನ ವೈರಿಯೇ, ಜಟಾಧಾರಿಯೇ ನಾನು ನಿನ್ನನ್ನು ನಮಸ್ಕರಿಸುತ್ತೇನೆ.

**ಶಂಕರೋಗ್ರ ಗಿರಿಜಾ ಪತೇ ಪತೇ । ವಿಶ್ವನಾಥ ವಿಧಿ ವಿಷ್ಣು ಸಂಸ್ತುತ ।**
**ವೇದವೇದ್ಯ ವಿದಿತಾಖಿಲೇಂಗಿತ ತ್ವಾಂ .......... ॥**

ಶಂಕರನೇ, ಉಗ್ರನೇ, ಗಿರಿಜಾಪತಿಯೇ, ಲೋಕಪತಿಯೇ, ವಿಶ್ವನಾಥನೇ, ಹರಿಬ್ರಹ್ಮರಿಂದ ಹೊಗಳಲ್ಪಟ್ಟವನೇ, ವೇದವೇದ್ಯನೇ ಎಲ್ಲರ ಭಾವವನ್ನು ಬಲ್ಲವನೇ ನಿನ್ನನ್ನು ನಮಸ್ಕರಿಸುತ್ತೇನೆ.

**ವಿಶ್ವರೂಪ ಪರರೂಪ ವರ್ಜಿತ । ಬ್ರಹ್ಮ ಜಿಮ್ಹರಹಿತಾಮೃತ ಪ್ರದ ।**
**ವಾಙ್ಮನೋ ವಿಷಯ ದೂರ ದೂರಗ ।**
**ತ್ವಾಂ ನತೋಸ್ಮಿ ನತ ವಾಂಛಿತಪ್ರದ ॥**

ವಿಶ್ವರೂಪನೇ, ಪ್ರಾಕೃತರೂಪ ರಹಿತನೇ, ಗುಣಪೂರ್ಣನೇ, ಕೌಟಿಲ್ಯ ರಹಿತನೇ, ಅಮೃತಪ್ರದನೇ, ಮನಸ್ಸಿಗೂ ಮಾತಿಗೂ ನಿಲುಕದವನೇ, ಸರ್ವತ್ರ ವ್ಯಾಪ್ತನೇ, ನಮಿಸಿದವರ ಇಷ್ಟಾರ್ಥಗಳನ್ನೆಲ್ಲ ಪೂರೈಸಿದವನೇ ನಿನಗೆ ನಾನು ನಮಸ್ಕಾರ ಮಾಡುತ್ತೇನೆ.

ಈ ರೀತಿಯಾಗಿ ಮಹಾದೇವರನ್ನು ಸ್ತೋತ್ರಮಾಡಿ ಸೂರ್ಯನು ಪರಮೇಶ್ವರನಿಗೆ ಪ್ರದಕ್ಷಿಣೆ ಹಾಕಿ ನಮಸ್ಕಾರ ಮಾಡಿದ. ಅನಂತರ ಆ ಶಿವನ ವಾಮಾಂಗ ಭಾಗದಲ್ಲಿ ವಿರಾಜಿತಳಾದ ಗೌರೀದೇವಿಯನ್ನು ಕುರಿತು ಹೀಗೆ ಸ್ತೋತ್ರ ಮಾಡಿದ.

## ಆದಿತ್ಯ ಕೃತ ಅಂಬಿಕಾ ಸ್ತೋತ್ರ

**ದೇವಿ ತ್ವದೀಯ ಚರಣಾಂಬುಜ ರೇಣು ಗೌರೀಂ ।**
**ಭಾಲಸ್ಥಲೀಂ ವಹ ತಿಯಃ ಪ್ರಣತಿ ಪ್ರವೀಣಃ ॥**
**ಜನ್ಮಾಂತರೇಽಪಿ ರಜನೀಕರ ಚಾರುಲೇಖಾ ।**
**ತಾಂ ಗೌರಯೇದತಿತರಾಂ ಕಿಲ ತಸ್ಯ ಪುಂಸಃ ॥**

ದೇವಿಯೇ, ನಿನಗೆ ನಮಸ್ಕಾರ ಮಾಡುವಾಗ ಯಾವ ಭಕ್ತನ ಹಣೆಯು ನಿನ್ನ ಅಡಿದಾವರೆಯ ಹುಡಿಯ ಲೇಪದಿಂದ ಗೌರವರ್ಣವನ್ನು ತಳೆದು ಶೋಭಿಸುವುದೋ ಜನ್ಮಾಂತರದಲ್ಲಿ ಚಂದ್ರನ ಮನೋಹರವಾದ ಲೇಖೆಯು ಅವನ ಭಾಲ ಪ್ರದೇಶವನ್ನು ಉಜ್ವಲವನ್ನಾಗಿ ಮಾಡುತ್ತದೆ. ಅರ್ಥಾತ್ ಈಗ ನಿನ್ನ ಚರಣ ಸೇವೆ ಮಾಡಿದ ಮನುಷ್ಯನು ಮುಂದಿನ ಜನ್ಮದಲ್ಲಿ ಶಿವನ ಸಾರೂಪ್ಯವನ್ನು ಹೊಂದುತ್ತಾನೆ.

**ಶ್ರೀ ಮಂಗಲೇ ಸಕಲ ಮಂಗಲ ಜನ್ಮಭೂಮೇ ।**
**ಶ್ರೀ ಮಂಗಲೇ ಸಕಲ ಕಲ್ಮಷ ತೂಲ ವನ್ಹೇ ॥**
**ಶ್ರೀ ಮಂಗಲೇ ಸಕಲದಾನವ ದರ್ಪ ಹಂತ್ರಿ ।**
**ಶ್ರೀ ಮಂಗಲೇಽಖಿಲಮಿದಂ ಪರಿಪಾಹಿ ವಿಶ್ವಂ ॥**

ಸಂಪತ್ತನ್ನು ಮಂಗಳವನ್ನು ಭಕ್ತರಿಗೆ ನೀಡುವ, ಸಕಲ ಶುಭಗಳಿಗೂ ಜನ್ಮಭೂಮಿಯಾದ, ಸರ್ವಪಾಪಗಳ ರಾಶಿಯನ್ನು ಬೆಂಕಿಯು ಅರಳೆಯನ್ನು ಸುಡುವಂತೆ ಸುಟ್ಟುಹಾಕುವ ಸರ್ವದೈತ್ಯರದರ್ಪವನ್ನು ನಾಶಪಡಿಸುವ, ಮಹಾತಾಯೀ, ಈ ಪ್ರಪಂಚವನ್ನೆಲ್ಲ ನೀನೇ ರಕ್ಷಣೆಮಾಡು.

ವಿಶ್ವೇಶ್ವರಿ ತ್ವಮಸಿ ವಿಶ್ವ ಜನಸ್ಯ ಕರ್ತ್ರೀ ।
ತ್ವಂ ಪಾಲಯಿಷ್ಯ ತಥಾಪ್ರಳಯೇಽಪಿ ಹಂತ್ರೀ ॥
ತ್ವನ್ನಾಮ ಕೀರ್ತನ ಸಮುಲ್ಲಸದಚ್ಛ ಪುಣ್ಯಾ ।
ಸ್ರೋತಸ್ವಿನೀ ಹರತಿ ಪಾತಕ ಕೂಲ ವೃಕ್ಷಾನ್ ॥

ನೀನು ಜಗತ್ತಿನ ತಾಯಿ. ಎಲ್ಲ ಜನರ ಸೃಷ್ಟಿ ಮಾಡುವವಳೂ ಪಾಲನ ಮಾಡುವವಳೂ, ಪ್ರಳಯ ಕಾಲದಲ್ಲಿ ಸಂಹರಿಸುವವಳೂ ನೀನೇ ಆಗಿರುವಿ. ನಿನ್ನ ನಾಮ ಕೀರ್ತನವೆಂಬ ಪುಣ್ಯನದಿಯು ಪಾಪಗಳನ್ನು ನಾಶಪಡಿಸುತ್ತದೆ.

ಮಾತರ್ಭವಾನಿ ಭವತೀ ಭವತೀವ್ರ ದುಃಖ-
ಸಂಭಾರ ಹಾರಿಣಿ ಶರಣ್ಯಮಿಹಾಸ್ತಿ ನಾನ್ಯಾ ॥
ಧನ್ಯಾಸ್ತ ಏವ ಭುವನೇಷು ತ ಏವ ಮಾನ್ಯಾಃ ।
ಯೇಷು ಸ್ಫುರೇತ್ತವ ಶುಭಕರಃಣಾಕಟಾಕ್ಷಃ ॥

ಭವಾನೀ ತಾಯಿಯೇ, ಸಂಸಾರದ ಉತ್ಕಟವಾದ ದುಃಖದ ಭಾರವನ್ನೆಲ್ಲ ಪರಿಹರಿಸುವ ನೀನೇ ನಮಗೆ ರಕ್ಷಕಳು. ನಾನು ನಿನಗೆ ಶರಣು ಬಂದಿದ್ದೇನೆ. ನನಗೆ ನಿನ್ನ ಹೊರತು ಬೇರೆ ಗತಿಯೇ ಇಲ್ಲ. ತಾಯಿ, ಈ ಪ್ರಪಂಚದಲ್ಲಿ ಮಂಗಳಕರವಾದ ನಿನ್ನ ಕರುಣಾ ಕಟಾಕ್ಷವು ಯಾರ ಮೇಲೆ ಬೀಳುವುದೋ ಅವರೇ ಧನ್ಯರು.

ಯೇ ತ್ವಾಂ ಸ್ಮರಂತಿ ಸತತಂ ಸಹಜಪ್ರಕಾಶಾಂ ।
ಕಾಶೀಪುರೀ-ಸ್ಥಿತಿವತೀಂ ನತ-ಮೋಕ್ಷ ಲಕ್ಷ್ಮೀಂ ॥
ತಾನ್ ಸಂಸ್ಮರೇತ್ ಸ್ಮರಹರೋ ಧೃತ ಶುದ್ಧ ಬುದ್ಧೀನ್ ।
ನಿರ್ವಾಣ ರಕ್ಷಣ ವಿಚಕ್ಷಣ ಪಾತ್ರ ಭೂತಾನ್ ॥

ನಮಸ್ಕರಿಸಿದವರಿಗೆ ಮೋಕ್ಷವನ್ನು ಕರುಣಿಸುವ, ಸಹಜ ಕಾಂತಿಯಿಂದ ಬೆಳಗುವ, ಕಾಶೀಪಟ್ಟಣದಲ್ಲಿ ವಾಸಮಾಡುವ, ನಿನ್ನನು ಯಾರು ಸ್ಮರಣಮಾಡುವರೋ ಅವರು ತಮ್ಮ ಶುದ್ಧ ಬುದ್ಧಿಯಿಂದ ಮೋಕ್ಷರೂಪ ಧನವನ್ನು ರಕ್ಷಣೆ ಮಾಡುವಲ್ಲಿ ಕುಶಲರೂ ಮೋಕ್ಷವನ್ನು ಪಡೆಯಲು ಅರ್ಹತೆ ಉಳ್ಳವರೂ ಆಗುತ್ತಾರೆ. ಅಂಥವರನ್ನು ಪರಮೇಶ್ವರನು ಮರೆಯದೇ ರಕ್ಷಿಸುತ್ತಾನೆ.

ಮಾತಸ್ತವಾಂಘ್ರಿಯುಗಲಂ ವಿಮಲಂ ಹೃದಿಸ್ಥಂ ।
ಯಸ್ಯಾಸ್ತಿ ತಸ್ಯ ಭುವನಂ ಸಕಲಂ ಕರಸ್ಥಂ ॥
ಯೋ ನಾಮ ತೇ ಜಪತಿ ಮಂಗಲಗೌರಿ ನಿತ್ಯಂ ।
ಸಿದ್ಧ್ಯಷ್ಟಕಂ ನ ಪರಿಮುಂಚತಿ ತಸ್ಯ ಗೇಹಂ ॥

ತಾಯಿಯೇ, ನಿನ್ನ ಎರಡೂ ಚರಣಗಳನ್ನು ಹೃದಯದಲ್ಲಿ ಇಟ್ಟುಕೊಂಡವರ ಕೈಯಲ್ಲಿಯೇ ಸಕಲ ಜಗತ್ತು ಇರುತ್ತದೆ. ಯಾವನು ನಿನ್ನ ನಾಮವನ್ನು ಜಪಿಸುವನೋ, ಮಂಗಳಗೌರಿಯೇ, ಅಷ್ಟಸಿದ್ಧಿಗಳು ಅವನ ಮನೆಯನ್ನು ಬಿಟ್ಟು ಹೋಗುವುದಿಲ್ಲ.

**ತ್ವಂ ದೇವಿ ವೇದಜನನಿ ಪ್ರಣವಸ್ವರೂಪಾ ।**
**ಗಾಯತ್ರ್ಯಸಿ ತ್ವಮಸಿ ವೈ ದ್ವಿಜ ಕಾಮಧೇನುಃ ॥**
**ತ್ವಂ ವ್ಯಾಹೃತಿ ತ್ರಯಮಿಹಾಖಿಲ ಕರ್ಮಸಿದ್ಧೈ ।**
**ಸ್ವಾಹಾಸ್ವಧಾಸಿ ಸುಮನಃ ಪಿತೃ ತೃಪ್ತಿ ಹೇತುಃ ॥**

ದೇವಿಯೇ ನೀನೇ ವೇದಗಳ ಮಾತೆ. ಓಂಕಾರ ಸ್ವರೂಪಿ. ನೀನೇ ಗಾಯತ್ರಿ. ನೀನೇ ದ್ವಿಜರಿಗೆ ಕಾಮಧೇನು. ಓಂ ಭೂಃ ಭುವಃ ಸ್ವಃ ಎಂಬ ವ್ಯಾಹೃತಿಯ ಅರ್ಥವು ನೀನೇ ಆಗಿರುವಿ. ಎಲ್ಲ ಕರ್ಮಗಳ ಸಿದ್ಧಿಗಾಗಿ ದೇವತೆಗಳ ಹಾಗೂ ಪಿತೃಗಳ ತೃಪ್ತಿಗೆ ಕಾರಣೀಭೂತಳಾದ ಸ್ವಾಹಾ, ಸ್ವಧಾ ನೀನೇ ಆಗಿರುವಿ.

**ಗೌರಿ ತ್ವಮೇವ ಶಶಿಮೌಲಿನಿ ವೇಧಸಿ ತ್ವಂ ।**
**ಸಾವಿತ್ರ್ಯಸಿ ತ್ವಮಸಿ ಚಕ್ರಿಣಿ ಚಾರು ಲಕ್ಷ್ಮೀಃ ॥**
**ಕಾಶ್ಯಾಂ ತ್ವಮಸ್ಯಮಲ ರೂಪಿಣಿ ಮೋಕ್ಷ ಲಕ್ಷ್ಮೀಃ ।**
**ತ್ವಂ ಮೇ ಶರಣ್ಯಮಿಹ ಮಂಗಲ ಗೌರಿ ಮಾತಾ ॥**

ದೇವಿಯೇ, ಮಹಾದೇವನ ದೇಹದಲ್ಲಿ ನೀನು ಗೌರೀ ರೂಪದಿಂದ ವಿರಾಜಿಸುವೆ. ಬ್ರಹ್ಮದೇವನ ಬಳಿಯಲ್ಲಿ ಸಾವಿತ್ರಿಯಾಗಿ ಶೋಭಿಸುವೆ. ವಿಷ್ಣುವಿನ ಪಕ್ಕದಲ್ಲಿ ಮಹಾಲಕ್ಷ್ಮಿಯಾಗಿ ಮೆರೆಯುವೆ. ಕಾಶಿಯಲ್ಲಿ ನೀನೇ ಶುದ್ಧ ಸ್ವರೂಪದಿಂದ ಮೋಕ್ಷ ಲಕ್ಷ್ಮಿಯಾಗಿ ಬೆಳಗುವೆ. ತಾಯಿ, ನಾನು ನಿನ್ನನ್ನೇ ಶರಣು ಬಂದಿದ್ದೇನೆ. ಮಂಗಳ ಗೌರಿಯಾದ ನೀನೇ ನನಗೆ ತಾಯಿ, ನಿನಗೆ ನನ್ನ ವಂದನೆ.

ಹೀಗೆ ಮಂಗಳಗೌರಿಯಾದ ಪಾರ್ವತಿಯನ್ನೂ, ಪರಮೇಶ್ವರನನ್ನೂ ಭಕ್ತಿ ಯುಕ್ತವಾದ ಸ್ತೋತ್ರದಿಂದ ಸೂರ್ಯನು ಸ್ತವನ ಗೈದು ಆ ಶಿವದಂಪತಿಗಳಿಗೆ ಮತ್ತೆ ಮರಳಿ ನಮಸ್ಕಾರ ಮಾಡಿ ಕೈ ಮುಗಿದು ನಿಂತುಕೊಂಡ.

**ಮಹಾದೇವ:-** "ಸೂರ್ಯನೇ, ನಿನಗೆ ಕಲ್ಯಾಣವಾಗಲಿ. ನಾನು ನಿನ್ನ ಮೇಲೆ ಪ್ರಸನ್ನ ನಾಗಿದ್ದೇನೆ. ನೀನು ನನ್ನ ಕಣ್ಣಲ್ಲಿಯೇ ನೆಲಿಸಿರುವೆ. ನಿನ್ನ ಮುಖಾಂತರವೇ ನಾನು ಈ ಚರಾಚರ ಜಗತ್ತನ್ನೆಲ್ಲ ನೋಡುತ್ತೇನೆ. ನೀನು ನನ್ನ ಅಷ್ಟಮೂರ್ತಿಗಳಲ್ಲಿ ಒಂದು ಆಗಿರುವೆ. ನೀನು ಇಂದಿನಿಂದ ಸರ್ವಜ್ಞನೂ, ಸರ್ವವ್ಯಾಪಿಯೂ, ಸರ್ವಜನರ ಕರ್ಮ ಸಾಕ್ಷಿಯೂ ಆಗು. ನಿನ್ನ ಭಕ್ತರ ಸಮಸ್ತ ದುಃಖಗಳನ್ನೂ ದೂರಗೊಳಿಸು. ನೀನು ನನ್ನ ಅರವತ್ನಾಕು ನಾಮಗಳ ಮುಖಾಂತರ ಈ ಅಷ್ಟಕ ಸ್ತೋತ್ರಗಳನ್ನು ಹೇಳು. ಈ ಅಷ್ಟಕ ಸ್ತೋತ್ರದಿಂದ ನನ್ನನ್ನು ಸುತ್ತಿಸಿದವರು ನನ್ನ ಅಂತರಂಗ ಭಕ್ತರಾಗುವರು. ಮಂಗಳಾಗೌರಿಯ ಈ ಅಷ್ಟಕ ಸ್ತೋತ್ರವು ಮಂಗಳಾಗೌರಿಯ ಸ್ತೋತ್ರ ಎಂದೇ ಜಗತ್ತಿನಲ್ಲಿ ಪ್ರಸಿದ್ಧವಾಗುವುದು. ಈ ಸ್ತೋತ್ರದಿಂದ ಮಂಗಳಾಗೌರಿಯ ಪೂಜೆ, ನಮಸ್ಕಾರ, ಪ್ರಾರ್ಥನೆ, ಮಂಗಳಾರತಿ. ಮಾಡಿದವರು ಸಕಲ ವಿಧವಾದ ಮಂಗಳವನ್ನು ಹೊಂದುವರು. ನೀನು ಭಕ್ತಿ ಭಾವದಿಂದ ಸಂಪಿಗೆ ಹಾಗೂ ಕಮಲಗಳಂತೆ ಕಾಂತಿಯುಳ್ಳ ನಿನ್ನ ಗಭಸ್ತಿಮಾಲೆ ಎಂದರೆ ಕಿರಣಮಾಲೆಗಳಿಂದ ನನ್ನ ಈ ಈಶ್ವರಲಿಂಗ ಪೂಜಿಸಿದ್ದರಿಂದ ಇದಕ್ಕೆ ಗಭಸ್ತೀಶ್ವರ ಎಂದು ಹೆಸರಾಗುವರು. ಪಂಚಗಂಗೆಯಲ್ಲಿ ಸ್ನಾನಮಾಡಿ

ಗಭಸ್ತೀಶ್ವರನ ಪೂಜೆಮಾಡುವ ಮನುಷ್ಯನು ಸರ್ವಪಾಪಗಳಿಂದ ರಹಿತನಾಗಿ ಮಾತೃಗರ್ಭದಲ್ಲಿ ಪುನಃ ಪ್ರವೇಶಿಸುವುದಿಲ್ಲ. ಚೈತ್ರ ಶುಕ್ಲ ತೃತೀಯಾ ದಿನ ಉಪವಾಸ ಮಾಡಿ, ವಸ್ತ್ರ ಅಲಂಕಾರಗಳಿಂದ ಈ ಮಂಗಳಾಗೌರಿಯನ್ನು ಪೂಜಿಸುವರೋ ಅವರು ಎಂದೂ ಬಡತನವನ್ನು ಹೊಂದುವುದಿಲ್ಲ. ಅವರ ಪಾಪಗಳೆಲ್ಲವೂ ನಷ್ಟವಾಗುವುದು. ಪುಣ್ಯರಾಶಿಯು ಪ್ರಾಪ್ತವಾಗುವುದು. ಈ ಮಂಗಳಾಗೌರಿಯ ವ್ರತ ಮಾಡಿದರೆ ಬಂಜೆಯೂ ಕೂಡ ಮಕ್ಕಳನ್ನು ಪಡೆಯುವಳು. ಸೂರ್ಯ, ಇಲ್ಲಿ ನೀನು ತಪಸ್ಸು ಮಾಡುವಾಗ ನಿನ್ನ ದೇಹವು ಕಾಣಲೇ ಇಲ್ಲ. ಕೇವಲ ಮಯೂಖ ಸಮೂಹ (ಕಿರಣಪುಂಜ) ಮಾತ್ರ ಕಾಣಲ್ಪಟ್ಟಿತು. ಶರೀರ ಕಾಣಲೇ ಇಲ್ಲ. ಆದುದರಿಂದ ನಿನ್ನ ಹೆಸರು 'ಮಯೂಖಾದಿತ್ಯ' ಎಂದು ಆಗುವುದು. ನಿನ್ನ ಪೂಜೆ ಮಾಡುವುದರಿಂದ ಮಾನವರಿಗೆ ರೋಗ ರುಜಿನ ಬರುವುದಿಲ್ಲ. ಭಾನುವಾರ ನಿನ್ನ ದರ್ಶನ ಮಾಡಿದವರಿಗೆ ದಾರಿದ್ರ್ಯ ನಾಶವಾಗುವುದು.''

ಹೀಗೆ ಮಯಾಖಾದಿತ್ಯನಿಗೆ ವರವನ್ನು ನೀಡಿ ಶಂಕರ ಭಗವಂತನು ಅಂತರ್ಧಾನ ಹೊಂದಿದ. ಸೂರ್ಯನು ಅಲ್ಲಿಯೇ ನೆಲೆನಿತ.

## ಗರುಡೇಶ್ವರ ಲಿಂಗ. ಖಖೋಲ್ಕಾದಿತ್ಯ. ಗರುಡ ವಿನತೆಯರ ತಪಸ್ಸು

**ಸ್ಕಂದ:-** ಅಗಸ್ತ್ಯನೇ, ತ್ರಿಲೋಚನ ಸ್ಥಾನದ ಉತ್ತರ ಭಾಗದಲ್ಲಿ ಖಖ್ಕೋಲ್ಕ ಎಂಬ ಆದಿತ್ಯನ ಸ್ಥಾನವು ಇದೆ. ಪೂರ್ವಕಾಲದಲ್ಲಿ ಕದ್ರು, ವಿನತಾ ಎಂಬ ಅಕ್ಕತಂಗಿಯರು ಆಟವಾಡುತ್ತಿದ್ದರು. ಇವರಿಬ್ಬರೂ ದಕ್ಷ ಪ್ರಜಾಪತಿಯ ಕನ್ಯೆಯರು. ಮರೀಚಿ ಪುತ್ರರಾದ ಕಶ್ಯಪರ ಧರ್ಮಪತ್ನಿಯರು. ಸಹಜ ಆಟವಾಡುವಾಗ ಮಾತೆಯಾದ ಕದ್ರುವು ಗರುಡನ ತಾಯಿಯಾದ ವಿನತೆಗೆ ಹೇಳಿದಳು- ''ವಿನತೆ, ಸೂರ್ಯನ, ರಥಕ್ಕೆ ಹೂಡಿದ ಉಚ್ಚೈಶ್ರವ ಎಂಬ ಕುದುರೆಯ ರಂಗರೂಪವು ಹೇಗೆ ಇರುವುದು? ಗೊತ್ತಿದ್ದರೆ ಹೇಳು. ನಾವಿಬ್ಬರೂ ಜಿದ್ದು ಹಾಕಿ, ಇದರ ನಿರ್ಣಯ ಮಾಡೋಣ ಸೋತವರು ಗೆದ್ದವರ ದಾಸಿಯಾಗಬೇಕು. ನಮ್ಮ ಈ ಪ್ರತಿಜ್ಞೆಗೆ ಇಲ್ಲಿ ನೆರೆದ ಎಲ್ಲ ಸಖಿಯರೂ ಸಾಕ್ಷಿ.''

ಹೀಗೆ ಇಬ್ಬರೂ ಸೋದರಿಯರು ಪಣ ಹಾಕಿದರು. ಕದ್ರುವು ಆ ಕುದುರೆಯು ಬಣ್ಣ ಬಣ್ಣದ್ದು ಇದೆ ಎಂದಳು. ಅಚ್ಚಬೆಳ್ಳಗಿದೆ ಎಂದಳು ವಿನತೆ. ವಿನತೆಯು ಹೋದ ಬಳಿಕ ಕದ್ರುವು ತನ್ನ ಮಕ್ಕಳಾದ ಕೃಷ್ಣಸರ್ಪಗಳನ್ನೆಲ್ಲ ಕರೆದು ಅವುಗಳಿಗೆ ಅಪ್ಪಣೆ ಕೊಟ್ಟಳು. ''ನೀವೆಲ್ಲರೂ ನನ್ನ ಮಾತಿನಂತೆ ಉಚ್ಚೈಶ್ರವ ಕುದುರೆಯ ಬಳಿಗೆ ಹೋಗಿರಿ. ಅದನ್ನು ಕರಿ, ಬಿಳಿ, ಕೆಂಪು ಮುಂತಾದ ರಂಗುಗಳಿಂದ ಬಣ್ಣ ಬಣ್ಣದ್ದಾಗಿ ಕಂಗೊಳಿಸುವಂತೆ ಮಾಡಿರಿ.'' ತಾಯಿಯ ಮಾತಿನಂತೆ ಎಲ್ಲ ನಾಗಗಳು ಉಚ್ಚೈಶ್ರವ ಕುದುರೆಯು ಶರೀರವನ್ನು ಅಲ್ಲಲ್ಲಿ ಕಪ್ಪು ಬಿಳುಪಾಗಿ ಕಾಣುವಂತೆ ಮಾಡಿದವು. ಮರುದಿನ ಇಬ್ಬರೂ ಸೋದರಿಯರು ಆ ಕುದುರೆಯನ್ನು ನೋಡಿದರು. ಅದರ ಬಣ್ಣ ವಿನತೆ ಹೇಳಿದಂತೆ ಅಚ್ಚ ಬಿಳೀ ಆಗಿರಲಿಲ್ಲ. ಕಪ್ಪು ಬಿಳೀ ಬಣ್ಣದಿಂದ ಆ ಅಶ್ವವು ಹಂಡ ಬಂಡವಾಗಿ ಕಾಣುತ್ತಿತ್ತು. ಅದನ್ನು ನೋಡಿ ವಿನತೆಯು ನುಡಿದಳು. ''ಸೋದರಿ, ನಿನ್ನ ಮಾತು ಸತ್ಯವಾಯಿತು. ಇಂದಿನಿಂದ ನಾನು ನಿನ್ನ ದಾಸಿ.''

ವಿನತೆ ಕದ್ರುವಿನ ದಾಸಿಯಾದಳು. ಆ ದಿನದಿಂದ ಮುಂದೆ ಕೆಲದಿನಗಳ ಬಳಿಕ ವಿನತೆಯ ಪುತ್ರನಾದ ಗರುಡನು ಹಾವುಗಳಿಗೆ ಅಮೃತ ನೀಡಿ ತನ್ನ ಮಾತೆಯನ್ನು ದಾಸೀಭಾವದಿಂದ

ಮುಕ್ತನನ್ನಾಗಿ ಮಾಡಿದ ದಾಸ್ಯದಿಂದ ಮುಕ್ತಳಾದ ಬಳಿಕ ವಿನತೆಯು ತನ್ನ ಮಗ ಗರುಡನೊಂದಿಗೆ ಕಾಶಿಗೆ ಬಂದಳು. ಇಬ್ಬರೂ ಅದ್ಭುತ ತಪಸ್ಸನ್ನು ಮಾಡಿದರು ಈ ಮುಕ್ತಿ ಪುರಿಯಲ್ಲಿ. ಮತ್ತು ಗರುಡನು ಕಾಶಿಯಲ್ಲಿ ಒಂದು ಶಿವಲಿಂಗವನ್ನು ಸ್ಥಾಪನೆಮಾಡಿದ. ವಿನತೆಯು ಖಖೋಲ್ಕ ಎಂಬ ಆದಿತ್ಯನನ್ನು ಸ್ಥಾಪಿಸಿದಳು. ಅವರ ತಪಸ್ಸಿನಿಂದ ಶಿವ ಸೂರ್ಯರಿಬ್ಬರೂ ಪ್ರಸನ್ನರಾದರು ಮತ್ತು ಪ್ರತ್ಯಕ್ಷರಾದರು. ಆಗ ಶಂಕರ ಗರುಡನಿಗೆ ವರವನ್ನು ನೀಡುತ್ತ ಹೇಳಿದ- ''ಪಕ್ಷಿರಾಜ, ನೀನು ಸ್ಥಾಪಿಸಿದ ಈ ಲಿಂಗವು 'ಗರುಡೇಶ್ವರ' ಎಂಬ ಹೆಸರಾಗುವುದು. ನೀನು ಮುಂದೆ ವಿಷ್ಣುವಿನ ಶ್ರೇಷ್ಠ ವಾಹನನಾಗಿ ಪೂಜನೀಯ ಆಗುವೆ.'' ಎಂದ ವರವಿತ್ತು ಅನುಗ್ರಹಿಸಿದ. ಅನಂತರ ಒಂದು ದಿನ ತಪೋಲೀನಳಾದ ವಿನತೆಗೆ ಸೂರ್ಯನು ಪ್ರಸನ್ನನಾದ. ಅವಳು ಬಯಸಿದ ವರವಿತ್ತು ಅನುಗ್ರಹಿಸಿದ. ಅವಳಿಗೆ ವರವಿತ್ತು ತಾನು ಆ ಖಖೋಲಾದಿತ್ಯ ಮೂರ್ತಿಯಲ್ಲಿಯೇ ಸನ್ನಿಹಿತನಾದ. ವಿನತಾದಿತ್ಯ ಎಂದೂ ಹೆಸರಿನಿಂದ ಪ್ರಸಿದ್ಧನಾದ. ಈ ವಿನತಾದಿತ್ಯನ ದರ್ಶನ ಮಾತ್ರದಿಂದ ಮಾನವನ ಸಕಲ ಪಾಪಗಳು ಪರಿಹಾರವಾಗುವವು. ಕಾಶಿಯಲ್ಲಿ ಪೈಶಿಂಗಿಲ ತೀರ್ಥದ ತಡಿಯಲ್ಲಿ ಇರುವ ಖಕೋಲ್ಕಾದಿತ್ಯನ ದರುಶನದಿಂದ ಮನುಷ್ಯನು ಆರೋಗ್ಯ ಭಾಗ್ಯವನ್ನೂ, ಮನೋವಾಂಛಿತವಾತ ಅಭಿಷ್ಟವನ್ನೂ ಹೊಂದುವನು.

*ಕಾಶೀಖಂಡ ಪೂರ್ವಾರ್ಧ ಸಂಪೂರ್ಣ*

—○—

# ಕಾಶೀ ಖಂಡ

## ಉತ್ತರಾರ್ಧ

ಅಧ್ಯಾಯ - ೭೬

### ಅರುಣಾದಿತ್ಯ, ವೃದ್ಧಾದಿತ್ಯ, ಕೇಶವಾದಿತ್ಯ, ವಿಮಲಾದಿತ್ಯ, ಗಂಗಾದಿತ್ಯ, ಹಾಗೂ ಯಮಾದಿತ್ಯ

**ಸ್ಕಂದ:-** ಋಷಿಪುಂಗವ, ವಿನತೆಯ ಪುತ್ರನೂ ಗರುಡನ ಸೋದರನೂ ಆದ ಅರುಣನು ಸೂರ್ಯನನ್ನು ಕುರಿತು ತಪಸ್ಸು ಮಾಡಿದ ಕಾಶೀಕ್ಷೇತ್ರದಲ್ಲಿ. ಇದರಿಂದ ಪರಮಸಂತುಷ್ಟ ಪ್ರಭಾಕರ. ಆದರಿಂದ ಅನೇಕ ವರದಾನ ಅರುಣನಿಗೆ. ಅವನ ಹೆಸರಿನಿಂದಲೇ ಪ್ರಸಿದ್ಧಿ 'ಅರುಣಾದಿತ್ಯ' ಎಂದು.

**ಸೂರ್ಯ:-** ವಿನತೆಯ ತನುಜನೇ, ನೀನು ನನ್ನ ಸಾರಥಿಯಾಗಿ ನನ್ನ ರಥತದ ಮುಂದೆ ಕುಳಿತುಕೊ. ನೀನು ಆರಾಧಿಸಿದ ಈ ಅರುಣಾದಿತ್ಯನ ಪೂಜೆ ಮಾಡಿದವರಿಗೆ ಬಡತನ, ಬೇನೆ, ಇವು ಎಂದಿಗೂ ಬರುವುದಿಲ್ಲ. ಹೀಗೆ ಹೇಳಿ ಆ ಅರುಣಕುಮಾರನ್ನು ತನ್ನ ತೇರಿನ ಹಿಂಭಾಗದಲ್ಲಿ ಕೂಡಿಸಿಕೊಂಡು ಹೊರಟುಬಿಟ್ಟ ವಿಶ್ವಪರ್ಯಟನೆಗೆ. ಸೂರ್ಯೋದಯಕ್ಕಿಂತ ಮೊದಲು, ಅರುಣೋದಯ ಸಮಯದಲ್ಲಿಯೇ ಜ್ಞಾನಿಗಳು ಸ್ನಾನ, ಸಂಧ್ಯೆ, ಅರ್ಘ್ಯ, ಗಾಯತ್ರೀಜಪ, ಮುಂತಾದವುಗಳನ್ನು ಮಾಡುತ್ತಾರೆ.

ಇನ್ನು ಮೇಲೆ ವೃದ್ಧಾದಿತ್ಯನ ಮಹಿಮೆಯನ್ನು ಹೇಳುತ್ತೇನೆ. ಪ್ರಾಚೀನ ಕಾಲದಲ್ಲಿ ಮಹಾತಪಸ್ವಿಯಾದ ವೃದ್ಧಹಾರೀತ ಮುನಿಯು ಸೂರ್ಯನ ಆರಾಧನೆಮಾಡಿದ. ವಿಶಾಲಾಕ್ಷಿ ದೇವಿಯ ದಕ್ಷಿಣ ಭಾಗದಲ್ಲಿ ಒಂದು ದಿನಕರನ ಮೂರ್ತಿಯನ್ನು ಸ್ಥಾಪಿಸಿ ಭಕ್ತಿಯಿಂದ ಸೂರ್ಯದೇವನ ಆರಾಧನೆಗೈದ. ಆದರಿಂದ ಪ್ರಸನ್ನನಾದ ಸೂರ್ಯನು ವೃದ್ಧ ತಪಸ್ವಿ ಯಾದ ಹಾರೀತ ಮುನಿಯನ್ನು ಕುರಿತು ಹೇಳಿದ- ಮುನಿಯೇ, ನಿನಗೆ ಬೇಕಾದವರನ್ನು 'ಬೇಡಿಕೋ. ನಿನಗೆ ಅಭೀಷ್ಟ ಯಾವುದು? ನಿನಗೆ ನಾನು ಏನನ್ನು ನೀಡಲಿ?'

**ಹಾರೀತ:-** ಭಗವನ್, ನನಗೆ ಉಗ್ರವಾದ ತಪಸ್ಸನ್ನು ಮಾಡಬೇಕು ಎಂದು ಹೆಬ್ಬಯಕೆ. ಆದರೆ ನನಗೆ ಈಗಾಗಲೇ ಮುಪ್ಪು ವೈರಿಯನ್ನು ಆವರಿಸಿದ್ದರಿಂದ ತೀವ್ರತರವಾದ ತಪಸ್ಸನ್ನು ಮಾಡುವ ಯಾವ ತಪ್ಪಿಹೋಗಿದೆ. ಚಳಿಯಲ್ಲಿ ಮುಳುಗಲಿಕ್ಕೂ, ಬಿಸಲಲ್ಲಿ ನಿಲ್ಲಲಿಕ್ಕೂ, ಉಪವಾಸ ಕೂಡಲಿಕ್ಕೂ, ಚಾಂದ್ರಾಯಣಾದಿ ಮೊದಲಾದ ವ್ರತಗಳನ್ನು ಮಾಡಲಿಕ್ಕೂ ಈ ಮುದಿತನ ನನಗೆ ದೊಡ್ಡ ಆತಂಕ. ಆದ್ದರಿಂದ ದಯಮಾಡಿ ನನ್ನ ಈ ಮುಪ್ಪನ್ನು ತಪ್ಪಿಸು. ತರಣಿ ದೇವ, ನನ್ನನ್ನು ತರುಣನನ್ನಾಗಿ ಮಾಡು. ತಾರುಣ್ಯದಿಂದ ಮತ್ತೆ ನನಗೆ ತೀವ್ರತರವಾದ ತಪೋನುಷ್ಠಾನ ಕೈಕೊಳ್ಳಲು ಅನುಕೂಲವಾಗುವುದು. ಜಿತೇಂದ್ರಿಯನಾದ ಮನುಷ್ಯನು ತಪಸ್ಸಿಗಾಗಿ ತಾರುಣ್ಯವನ್ನೂ ದೀರ್ಘಾಯುಷ್ಯವನ್ನೂ ಕೇಳಿದರೆ ತಪ್ಪಿಲ್ಲ. ವಿವೇಕಿ ಮನುಷ್ಯರು

ತಪೋನುಷ್ಠಾನಕ್ಕಾಗಿ ಬಲಿಷ್ಠವಾದ ತರುಣ ದೇಹವನ್ನು, ದಾನಕ್ಕಾಗಿ ಧನವನ್ನು ಸಂತಾನಕ್ಕಾಗಿ ಸ್ತ್ರೀಯನ್ನು, ಮೋಕ್ಷಕ್ಕಾಗಿ ಉತ್ತಮ ಜ್ಞಾನವನ್ನು ಅಪೇಕ್ಷಿಸುತ್ತಾರೆ. ವೃದ್ಧ ಹಾರೀತ ಮುನಿಯ ಈ ಮಾತುಗಳನ್ನು ಆಲಿಸಿ ಪ್ರಭಾಕರನು ಅವನ ಅಪೇಕ್ಷೆಯಂತೆ ಅವನ ಮುಪ್ಪನ್ನು ಕಳೆದು ಯೌವ್ವನವನ್ನು ದಯಪಾಲಿಸಿದ. ವೃದ್ಧಹಾರೀತನು ತರಣಿಯ ದಯೆಯಿಂದ ತಾರುಣ್ಯ ಪಡೆದು ತೀವ್ರತರವಾದ ತಪೋನುಷ್ಠಾನವನ್ನು ಕೈಕಂಡ. ಅವನು ಆರಾಧಿಸಿ ಸ್ಥಾಪಿಸಿದ ಆ ರವಿಯ ಮೂರ್ತಿಯು ವೃದ್ಧಾದಿತ್ಯ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಭಾನುವಾರ ದಿನ ಈ ವೃದ್ಧಾದಿತ್ಯನ ಸೇವೆಗೈದವರು ಆರೋಗ್ಯ ಭಾಗ್ಯವನ್ನೂ ಮನೋಭೀಷ್ಟ ಸಿದ್ಧಿಗಳನ್ನೂ ಪಡೆಯುತ್ತಾರೆ.

ಒಂದು ದಿನ ಆಕಾಶದಲ್ಲಿ ಸಂಚರಿಸುವ ದಿವಾಕರನು ಕಾಶೀಕ್ಷೇತ್ರದಲ್ಲಿ ಭಗವಾನ್ ಕೇಶವನು ಬಂದುದನ್ನು ನೋಡಿದ. ಕೂಡಲೇ ಒಂದು ರೂಪದಿಂದ ಇಳಿದು ಬಂದು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ವಂದನೆಗೈದು ಕೈಜೋಡಿಸಿ ಕೇಳಿದ- ''ಜಗತ್ಪತೇ, ನೀನು ಸಂಪೂರ್ಣ ಜಗತ್ತಿನ ಪಾಲಕ. ಸರ್ವಪ್ರಾಣಿಗಳ ಅಂತರಾತ್ಮ. ಈ ಕಾಶೀಕ್ಷೇತ್ರದಲ್ಲಿ ನಿಮ್ಮಂಥವರಿಗೂ ಪೂಜನೀಯವಾದ ವಸ್ತು ಯಾವುದಿದೆ?''

**ಕೇಶವ:-** ಈ ಕಾಶೀಪುರಿಯಲ್ಲಿ ಶೋಭಿಸುವ ಮಹಾದೇವ ವಿಶ್ವವಂದ್ಯ, ಮುಪ್ಪು ಸಾವು ನೋವುಗಳನ್ನು ಮೀರಿದ ಮೃತ್ಯುಂಜಯ ಆ ಪರಮೇಶ್ವರ. ಶ್ವೇತರಾಜನು ಈ ಮೃತ್ಯುಂಜಯನನ್ನು ಪೂಜಿಸಿ ತಾನೂ ಮೃತ್ಯುಂಜಯನಾದ. ಈ ಮಹಾಕಾಲನನ್ನು ಆರಾಧಿಸಿ ಭೃಂಗಿಯು ಕಾಲದ ಮೇಲೆ ವಿಜಯವನ್ನು ಸಾಧಿಸಿದ್ದಾನೆ. ಮೃತ್ಯುಂಜಯನ ಪೂಜೆಗೈಯುವ ಶಿಲಾದ ಪುತ್ರ ನಂದಿಯನ್ನು ಮೃತ್ಯು ಬಿಟ್ಟು ಹೋಗಿದೆ. ನೀನು ಕೂಡ ಮಹೇಶ್ವರನ ಆರಾಧನೆ ಮಾಡು.

ಭಗವಾನ್ ಕೇಶವನ ಈ ಮಾತನ್ನು ಕೇಳಿ ಆ ಮಾರ್ತಾಂಡನು ಒಂದು ಸ್ಫಟಿಕಮಣಿಯ ಶಿವಲಿಂಗವನ್ನು ಮಾಡಿ ಅದರ ಪೂಜೆ ಮಾಡುತ್ತಿದ್ದಾನೆ. ಜಗದ್ಗುರುವಾದ ಶ್ರೀ ಕೇಶವನನ್ನೇ ತನ್ನ ಗುರು ಎಂದು ಭಾವಿಸಿ ಅವನ ಉತ್ತರ ಭಾಗದಲ್ಲಿ ನಿಂತುಕೊಂಡಿದ್ದಾನೆ. ಇದೇ ಕಾರಣದಿಂದಾಗಿ ಆ ಸೂರ್ಯನಿಗೆ ಕೇಶವಾದಿತ್ಯ ಎಂದು ಹೆಸರು ಬಂದಿದೆ. ಮಾಘಮಾಸ ರಥಸಪ್ತಮಿಯಂದು ರವಿವಾರವಿದ್ದಾಗ ಕೇಶವನ ಪಾದೋದಕ ತೀರ್ಥದಲ್ಲಿ ಸ್ನಾನಮಾಡಿ ಕೇಶವಾದಿತ್ಯನ ಪೂಜೆಮಾಡುವುದರಿಂದ ಏಳು ಜನ್ಮಗಳ ಪಾಪಗಳಿಂದ ಬಿಡುಗಡೆ ತಕ್ಷಣವೇ.

ಮುನಿಯೇ, ಪ್ರಾಚೀನಕಾಲದಲ್ಲಿ ವಿಮಲ ಎಂಬ ಓರ್ವ ಕ್ಷತ್ರಿಯ ಇದ್ದ. ಅವನು ಸದಾಚಾರಿಯಾಗಿದ್ದರೂ ಅವನಿಗೆ ಜನ್ಮಾಂತರದ ದುಷ್ಕರ್ಮದಿಂದ ಕುಷ್ಠರೋಗ ತಗುಲಿತು. ಮನೆಮಾರು ಮಡದಿ ಮಕ್ಕಳನ್ನು ತೊರೆದು ಅವನು ಓಡಿ ಬಂದ ಕಾಶೀಕ್ಷೇತ್ರಕ್ಕೆ. ಪರಮ ಭಕ್ತಿಯಿಂದ ಆರಾಧಿಸಿದ ಸೂರ್ಯದೇವನನ್ನು ಸಂತುಷ್ಟನಾದ ಸವಿತ್ರದೇವ ಅವನ ಭಕ್ತಿಗೆ. ಮೆಚ್ಚಿಬಂದು ಎದುರುನಿಂದು ಕೇಳಿದ- 'ವಿಮಲ, ನಿನಗೆ ಬಯಸಿದ ವರವನ್ನು ನೀಡಲು ಬಂದಿದ್ದೇನೆ. ನಿನ್ನ ದೇಹಕ್ಕೆ ತಗಲಿದ ಈ ಕುಷ್ಠವು ಈಗಲೇ ತೊಲಗಿ ಹೋಗುವುದು. ಇದಲ್ಲದೇ ನಿನಗೆ ಬೇರೆ ವರಬೇಕಾದ್ದರೆ ಕೇಳು-

**ವಿಮಲ:-** ''ಜಗತ್‌ಚಕ್ಷುವೆ, ನಿನ್ನಲ್ಲಿ ಭಕ್ತಿಮಾಡುವ ಜನರಿಗೆ ಯಾರಿಗೂ 'ಕುಷ್ಠ' ಎಂಬ ಈ ದುಷ್ಟರೋಗವು ಅಂಟಿಕೊಳ್ಳಬಾರದು. ಬೇರೆ ರೋಗಗಳೂ ಬರಬಾರದು. ಸೂರ್ಯೋ

ಪಾಸಕರಿಗೆ. ನಾನು ಸ್ಥಾಪನೆಮಾಡಿದ ಈ ನಿನ್ನ ಮೂರ್ತಿಯೂ ವಿಮಲಾದಿತ್ಯ ಎಂಬ ಹೆಸರಿನಿಂದ ಖ್ಯಾತಿಯನ್ನು ಹೊಂದಲಿ. ಇದರ ಪೂಜೆ ಮಾಡಿದವರ ರೋಗಗಳ ನಾಶ ಪಾಪಗಳ ಪರಿಹಾರ ಎರಡೂ ಆಗಲಿ'' ವಿಮಲನಿಗೆ ಈ ಅವನು ಬಯಸಿದ ಆ ವರವಿತ್ತು ದೃಶ್ಯನಾದರು?

ವಿಶ್ವನಾಥನ ದಕ್ಷಿಣದಲ್ಲಿ ಗಂಗಾದಿತ್ಯ ಎಂಬ ಸೂರ್ಯನ ಮೂರ್ತಿ ಇದೆ. ಹಿಂದೆ ಭಗೀರಥನನ್ನು ಮುಂದೆ ಮಾಡಿಕೊಂಡು ಮಂದಾಕಿನಿಯು ಕಾಶಿಗೆ ಬಂದಳು. ಆಗ ಸ್ವಯಂ ಸೂರ್ಯದೇವನು ಗಂಗೆಯನ್ನು ಸ್ತೋತ್ರಮಾಡಲಿಕ್ಕಾಗಿ ಅಲ್ಲಿಯೇ ನಿಂತುಕೊಂಡಿದ್ದ. ಈಗಲೂ ಗಂಗಾದಿತ್ಯ ಎಂದು ಪ್ರಸಿದ್ಧನಾದ ಆ ರವಿದೇವನು ಭಕ್ತರಿಗೆ ವರವನ್ನು ನೀಡುತ್ತಿದ್ದಾನೆ.

ಹಿಂದೆ ಯಮಧರ್ಮನು ಯಮತೀರ್ಥದಲ್ಲಿ ಸ್ನಾನಮಾಡಿ ಯಮೇಶ ಹಾಗೂ ಯಾಮಾದಿತ್ಯರನ್ನು ಸ್ಥಾಪನೆಮಾಡಿದ ಯಮಾದಿತ್ಯನು ಜೀವನ ಯಮಯಾತನೆಯನ್ನು ತಪ್ಪಿಸಿದ. ಇಲ್ಲಿಯ ಯಮತೀರ್ಥದಲ್ಲಿ ಚತುರ್ದಶೀ ದಿನ ಹಾಗೂ ಭರಣಿ ನಕ್ಷತ್ರ ದಿನದಂದು ಮಂಗಳವಾರ ಯೋಗವಿದ್ದಾಗ ಸ್ನಾನತರ್ಪಣ ಪಿಂಡ ದಾನಗಳಿಂದ ಮನುಷ್ಯರಿಗೆ ಪಿತೃಋಣದಿಂದ ವಿಮೋಚನೆ.

ಮುನಿಯೇ ಹೀಗೆ ನಿನಗೆ ಕಾಶಿಯಲ್ಲಿ ಇರುವ ಹನ್ನೆರಡು ಆದಿತ್ಯರ ಪರಿಚಯವನ್ನು ಮಾಡಿಕೊಟ್ಟಿದ್ದೇನೆ.

## ಬ್ರಹ್ಮದೇವರ ಯಜ್ಞ. ದಶಾಶ್ವಮೇಧ ತೀರ್ಥದ ಮಹಿಮೆ

**ಸ್ಕಂದ:-** ಸೂರ್ಯನು ಕಾಶಿಗೆ ತೆರಳಿದ ಬಳಿಕ ಮಂದರಾಚಲದ ಒಂದು ಕಂದರದಲ್ಲಿ ಕುಳಿತು ವಿಚಾರ ಮಾಡತೊಡಗಿದ. ಚಂದ್ರಶೇಖರ- 'ಇದು ಏನು ಅಚ್ಚರಿ? ನಾನು ಕಾಶಿಗೆ ಕಳಿಸಿದ ಯೋಗಿನಿಯರು ಮರಳಿ ಬರಲಿಲ್ಲ. ತಪನನೂ (ಸೂರ್ಯ) ತಿರುಗಿ ಬರಲಿಲ್ಲ. ಒಟ್ಟಾರೆ ನನಗೆ ಕಾಶಿಯ ಸಮಾಚಾರವೇ ತಿಳಿಯದಂತಾಗಿದೆ. ಆ ವಾರಣಾಸಿಯ ವಾರ್ತೆಯನ್ನು ತಿಳಿಯಲಿಕ್ಕಾಗಿ ಮತ್ತೆ ಯಾರನ್ನು ಕಳಿಸಲಿ?' ಎಂದು ವಿಚಾರಮಾಡಿ ಬ್ರಹ್ಮದೇವನನ್ನು ಕರೆದು ಹೇಳಿದ ಆ ಭವಾನೀಪತಿ- 'ಕಮಲೋದ್ಭವ, ಕಾಶಿಯ ಸಮಾಚಾರವನ್ನು ಅರಿಯಲು ನಾನು ಮೊದಲು ಯೋಗಿನಿಯರನ್ನು ಕಳಿಸಿದೆ. ಅನಂತರ ಸೂರ್ಯನನ್ನು, ಇಬ್ಬರೂ ಮರಳಿ ಬರಲಿಲ್ಲ. ಯಾವ ವಾರ್ತೆಯನ್ನೂ ತರಲಿಲ್ಲ. ಆದುದರಿಂದ ಈಗ ನೀನು ಹೋಗು ಕಾಶಿಯ ಸಮಾಚಾರವನ್ನು ತಿಳಿದುಕೊಂಡು ಬಾ.

ಹರನ ಆಜ್ಞೆಯನ್ನು ಶಿರದಲ್ಲಿ ಹೊತ್ತು ಆ ಹಂಸವಾಹನನು ಆಗಮಿಸಿದ ಕಾಶಿಕ್ಷೇತ್ರಕ್ಕೆ. ವೃದ್ಧ ಬ್ರಾಹ್ಮಣನ ವೇಷ ಧರಿಸಿ ಕಾಶಿರಾಜನಾದ ದಿವೋದಾಸನನ್ನು ಕಂಡ ಆ ಪರಮೇಷ್ಠಿ. ರಾಜನು ವೃದ್ಧ ಬ್ರಾಹ್ಮಣನ ಚರಣಾರವಿಂದಗಳಿಗೆ ಬಾಗಿ ನಮಸ್ಕಾರ ಮಾಡಿದ. ಬಂದ ಕಾರಣವೇನು ಎಂದು ಬ್ರಾಹ್ಮಣನನ್ನು ಬೆಸಗೊಂಡ.

**ವೃದ್ಧಬ್ರಾಹ್ಮಣ:-** ದಿವೋದಾಸ, ನಾನು ಒಬ್ಬ ವಶಿಷ್ಠ ಬ್ರಾಹ್ಮಣ, ದೀರ್ಘಜೀವಿ, ಕಾಶಿಯ ಇತಿಹಾಸವೆಲ್ಲವೂ ನನಗೆ ಗೊತ್ತು. ನಿನ್ನ ಜನ್ಮಾಂತರದ ಕಥೆಯೂ ನನಗೆ ಚಿರಪರಿಚಿತ. ನೀನು ಕಳೆದ ಜನ್ಮದಲ್ಲಿ ರಿಪುಂಜಯ ಎಂಬ ರಾಜನಾಗಿದ್ದೆ. ಈ ಜನ್ಮದಲ್ಲಿಯೂ ನೀನು ಪ್ರಜಾಜನರನ್ನು ಚೆನ್ನಾಗಿ ಪರಿಪಾಲನ ಮಾಡುತ್ತಲಿರುವೆ. ನೀನು ಪ್ರಜೆಗಳನ್ನು ಮಕ್ಕಳಂತೆ ಕಾಪಾಡುವೆ. ವೇದಶಾಸ್ತ್ರ ಪಂಡಿತರನ್ನು ದೇವತೆಗಳಂತೆ ಭಾವಿಸಿ ಗೌರವಿಸುವೆ. ತಪಸ್ವಿಗಳ ತಪೋನುಷ್ಠಾನಕ್ಕೆ ಸಕಲ ವಿಧವಾದ ಸೌಕರ್ಯ ಸೌವಿಧ್ಯಗಳನ್ನು ಒದಗಿಸುವೆ. ಇವು ಮೂರು

ಬೇರೆ ರಾಜರಲ್ಲಿ ಇರದು. ನಿನ್ನಲ್ಲಿ ಮಾತ್ರ ಇರುವ ಸದ್ಗುಣಗಳು. ಅದಕ್ಕಾಗಿ ನಾನು ನಿನ್ನ ಕಡೆಗೆ ಬಂದಿದ್ದೇನೆ. ಈ ಕಾಶೀಕ್ಷೇತ್ರ ದಲ್ಲಿ ನಾನು ಯಜ್ಞ ಮಾಡಲು ಬಯಸುತ್ತೇನೆ. ಈ ಪುಣ್ಯ ಕಾರ್ಯದಲ್ಲಿ ನೀನು ನನಗೆ ಸರ್ವ ವಿಧದಿಂದಲೂ ಸಹಾಯ ನೀಡಬೇಕು.

**ದಿವೋದಾಸ:-** ಪೂಜ್ಯರೇ, ನೀವು ಈ ನನ್ನ ರಾಜಧಾನಿಯಲ್ಲಿ ಯಜ್ಞವನ್ನು ಮಾಡುವುದು ನನಗೆ ಸಂತಸದ ಸಂಗತಿ. ನಾನು ನಿಮ್ಮ ಕಾರ್ಯದಲ್ಲಿ ಸರ್ವರೀತಿಯಿಂದ ಸಹಾಯವನ್ನು ಸಲ್ಲಿಸುವೆ. ನಾನು ನಿಮ್ಮ ದಾಸ. ನನ್ನ ಕೋಶಾಗಾರದಲ್ಲಿರುವ ಎಲ್ಲ ವಸ್ತುಗಳನ್ನು ನೀವು ಯಜ್ಞಕ್ಕಾಗಿ ಸ್ವೀಕರಿಸಬಹುದು. ನಾನು ಈ ರಾಜ್ಯವನ್ನು ಆಳುವಲ್ಲಿ ಯಾವ ಸ್ವಾರ್ಥವೂ ಇಲ್ಲ. ನನ್ನ ಮಡದಿ, ಮಕ್ಕಳು, ರಾಜ್ಯ, ವೈಭವ, ಎಲ್ಲದರಿಂದಲೂ ಪರೋಪಕಾರವನ್ನು ಮಾಡಲಿಕ್ಕಾಗಿ ಪ್ರಯತ್ನಿಸುತ್ತಲಿದ್ದೇನೆ. ತಮ್ಮಂಥ ಮಹಾ ವಿದ್ವಾಂಸರನ್ನು ತೃಪ್ತಿಪಡಿಸುವುದೇ ದೊಡ್ಡ ಯಜ್ಞ. ಹೊರಗಿನ ಯಜ್ಞಕ್ಕಿಂತ ನಿಮ್ಮಂಥ ವಿಪ್ರೋತ್ತಮರ ಮುಖದಲ್ಲಿ ಅನ್ನನೀಡುವುದೇ ಶ್ರೇಷ್ಠ ಯಜ್ಞ ಎಂದು ನಾನು ನಂಬಿದ್ದೇನೆ. ನೀವು ಯಜ್ಞಕಾರ್ಯಕ್ಕಾಗಿ ಸಹಾಯ ಕೇಳಲು ನನ್ನ ಬಳಿಗೆ ಬಂದದ್ದರಿಂದ ನಾನು ಧನ್ಯ. ತಾವು ನನ್ನ ಸೇವೆಯನ್ನು ಸ್ವೀಕರಿಸಿದರೆ ನಾನು ಕೃತಾರ್ಥ.

ದಿವೋದಾಸನ ಈ ಮಾತಿನಿಂದ ಆ ಬ್ರಹ್ಮದೇವನಿಗೆ ಬ್ರಹ್ಮಾನಂದ. ಅವನು ಕೊಟ್ಟ ಯಜ್ಞಸಾಮಗ್ರಿಗಳನ್ನೆಲ್ಲ ಸಂತಸದಿಂದ ಸ್ವೀಕರಿಸಿದ. ದಿವೋದಾಸನ ಸಹಕಾರದಿಂದ ಕಾಶಿಯಲ್ಲಿ ಹತ್ತು ಅಶ್ವಮೇಧ ಯಜ್ಞಮಾಡಿದ ಆ ಬ್ರಹ್ಮರೂಪಿ ಬ್ರಾಹ್ಮಣ. ದಶಾಶ್ವಮೇಧ ಎಂಬ ತೀರ್ಥವು ವಾರಣಾಸಿಯಲ್ಲಿ ಪ್ರಕಟವಾದದ್ದು ಆಗಲೇ. ಮೊದಲು ಇದರ ಹೆಸರು ರುದ್ರಸರೋವರ ಎಂದು ಬ್ರಾಹ್ಮಣರೂಪಿ ಬ್ರಹ್ಮನ ಯಜ್ಞದ ನಂತರ ಅದಕ್ಕೆ ಹೆಸರು ಬಂದದ್ದು ದಶಾಶ್ವಮೇಧ. ಅಲ್ಲಿ ದಶಾಶ್ವಮೇಧೇಶ್ವರ ಎಂಬ ಲಿಂಗವನ್ನು ಪ್ರತಿಷ್ಠಾಪಿಸಿದ. ಆ ಪರಮೇಷ್ಠಿ. ಮುಂದೆ ಭಗೀರಥ ಭೂಪಾಲನ್ನು ಬೆಂಬತ್ತಿ ಭಾಗೀರಥಿಯು ಅಲ್ಲಿ ಹಾಯದ್ದರಿಂದ ಆ ತೀರ್ಥ ಪರಮ ಪಾವನತೆಯನ್ನು ಪಡೆಯಿತು. ಚತುರಾನನ ತನ್ನ ಚತುರತೆಯಿಂದ ದಿವೋದಾಸನ ಮೇಲೆ ಕಣ್ಣಿಟ್ಟು ಚಿರಕಾಲದವರೆಗೂ ಪರೀಕ್ಷಿಸಿದ. ಆದರೆ ಆ ರಾಜರ್ಷಿಯಲ್ಲಿ ಒಂದೂ ಕುಂದು ಕಂಡು ಬರಲಿಲ್ಲ. ಯಾವ ದೋಷವೂ ಎಷ್ಟು ಹುಡುಕಿದರೂ ಹೊರಡಲಿಲ್ಲ ಆ ಕಾಶಿಯ ದೊರೆಯಲ್ಲಿ. ಇದನ್ನು ಮಹಾದೇವರಿಗೆ ಹೋಗಿ ಹೇಗೆ ಹೇಳುವುದು? ಕಾಶಿರಾಜನ ತಪ್ಪನ್ನು ಹುಡುಕಿಕೊಂಡು ಬರಲು ಆದೇಶ ನೀಡಿದ ಆ ಪರಮೇಶ್ವರನಿಗೆ ಏನೆಂದು ತಿಳಿಸುವುದು! ಆದ್ದರಿಂದ ಬ್ರಹ್ಮದೇವರು ಆ ಶಂಕರನ ಸಮ್ಮುಖದಲ್ಲಿಯೇ ಹೋಗುವುದು ಬೇಡವೆಂದು ಕಾಶಿಯಲ್ಲಿಯೇ ತಾನೂ ಒಂದು ಬ್ರಹ್ಮೇಶ್ವರ ಎಂಬ ಲಿಂಗಸ್ಥಾಪನೆ ಮಾಡಿ. ರುದ್ರಾಂತರ್ಗತ ಸಂಕರ್ಷಣನನ್ನು ಧ್ಯಾನಮಾಡುತ್ತ ಕಾಶೀಕ್ಷೇತ್ರದಲ್ಲಿಯೇ ನಿರಂತರ ವಾಸ್ತವ್ಯ ಹೂಡಿದರು. ಅಗಸ್ತ್ಯ ಎಲ್ಲ ತೀರ್ಥಗಳಲ್ಲಿ ದಶಾಶ್ವಮೇಧ ಹಿರಿಮೆಯುಳ್ಳದ್ದು. ಜ್ಯೇಷ್ಠಶುಕ್ಲ ಪ್ರತಿಪದೆಯಂದು ಅಥವಾ ದ್ವಿತೀಯಾ ತಿಥಿಯಂದು ಆರಂಭಿಸಿ ಈ ತೀರ್ಥದಲ್ಲಿ ಶುಕ್ಲಪಕ್ಷ ದಶಮಿಯವರೆಗೆ ಪ್ರತಿದಿನ ಸ್ನಾನಮಾಡುವ ಜನರ ಪಾಪಗಳೆಲ್ಲವೂ ಬಿಟ್ಟು ಹೋಗುತ್ತವೆ. ಜ್ಯೇಷ್ಠ ಶುಕ್ಲದಶಮಿ ದಶಹರಾ ದಿನದಂದು ದಶಾಶ್ವಮೇಧ ತೀರ್ಥದಲ್ಲಿ ಸ್ನಾನ ಹಾಗೂ ಲಿಂಗಪೂಜೆ ಮಾಡಿದವರು ಹತ್ತುಜನ್ಮದ ಪಾಪಗಳನ್ನೆಲ್ಲ ತೊಳೆದುಕೊಳ್ಳುತ್ತಾರೆ.೯ದಿವೋದಾಸ ಮಹಾರಾಜನು ಯಜ್ಞವನ್ನು ಪೂರ್ಣಮಾಡಿ ಅದೇ ಕಾಶೀಕ್ಷೇತ್ರ ದಲ್ಲಿಯೇ ನಿರಂತರ ನಿವಾಸಮಾಡಿದ ಬ್ರಾಹ್ಮಣ ವೇಷಧಾರಿ ಬ್ರಹ್ಮದೇವರಿಗೆ ಒಂದು ಬ್ರಹ್ಮಶಾಲೆಯನ್ನೇ ಕಟ್ಟಿಸಿಕೊಟ್ಟ ಅದರಲ್ಲಿ ಸ್ವಯಂ ಬ್ರಹ್ಮದೇವನು ವೇದಮಂತ್ರಗಳನ್ನು ಪಾರಾಯಣ ಮಾಡುತ್ತ ನಿರಂತರ ವಾಸಮಾಡಿದ.

## ಪಿಶಾಚಮೋಚನ ತೀರ್ಥದ ಹಿನ್ನೆಲೆ

**ಸ್ಕಂದ:-** ಕುಂಭೋದ್ಭವ, ಶಿವನ ಅತ್ಯಂತ ಪ್ರೇಮಾಸ್ಪದನಾದ ಕಪರ್ದಿ ಎಂಬ ಗಣಾಧೀಶನು ಪಿತ್ರೇಶ್ವರ ಲಿಂಗದ ಉತ್ತರಭಾಗದಲ್ಲಿ ಒಂದು ಶಿವಲಿಂಗವನ್ನು ಸ್ಥಾಪಿಸಿದ. ಅದರ ಎದುರು ವಿಮಲೋದಕ ಎಂಬ ಹೊಕ್ಕರಣಿಯನ್ನೂ ನಿರ್ಮಿಸಿದ. ತ್ರೇತಾ ಯುಗದಲ್ಲಿ ವಾಲ್ಮೀಕಿ ಮುನಿಯು ಕಾಶಿಯಲ್ಲಿದ್ದು ಪ್ರತಿದಿನವೂ ಕಪರ್ದೀಶ್ವರನನ್ನು ಪೂಜೆ ಮಾಡುತ್ತಲೇ ತಪಸ್ಸನ್ನು ಆಚರಿಸುತ್ತಿದ್ದ. ಮುಂದೆ ಒಂದು ದಿನ ಹೇಮಂತ ಋತು. ಮಾರ್ಗಶೀರ್ಷಮಾಸ. ಮಹಾತಪಸ್ವಿ ವಾಲ್ಮೀಕಿಯು ಮಧ್ಯಾಹ್ನದಲ್ಲಿ ವಿಮಲೋದಕ ತೀರ್ಥದಲ್ಲಿ ಸ್ನಾನಮಾಡಿ ಮುಡಿಯಿಂದ ಅಡಿಯವರೆಗೆ ಭಸ್ಮಬಳಿದುಕೊಂಡ. ಕಪರ್ದೀಶ್ವರನ ದಕ್ಷಿಣಭಾಗದಲ್ಲಿ ಕುಳಿತು ತನ್ನ ತ್ರಿಕಾಲ ಸಂಧ್ಯೆ ಹಾಗೂ ಪಂಚಾಕ್ಷರಿ ಜಪ, ಮಾಡುತ್ತ ಜಟಾಜೂಟಾ ಧಾರಿಯಾದ ಧೂರ್ಜಟಿಯ ಧ್ಯಾನಮಾಡಿದ ಅನಂತರ ವಾಮಾವರ್ತದಿಂದ ಪ್ರದಕ್ಷಿಣೆಮಾಡಿ ಉಚ್ಚಕಂಠದಿಂದ ಶಿವನ ನಾಮವನ್ನು ಧ್ಯಾನಮಾಡಿದ. ಅನಂತರ ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಾದ ಎಂದು ಬಗೆಬಗೆಯ ಸ್ವರಭೇದವನ್ನು ಅರಿತು ಮಧುರ ಕಂಠದಿಂದ ಶಿವನನ್ನು ಹೊಗಳುತ್ತ ನೃತ್ಯವನ್ನು ಚೆನ್ನಾಗಿ ಮಾಡಿದ. ಹೀಗೆ ಭಕ್ತಿಯಿಂದ ಶಿವಪೂಜೆ ಮಾಡಿ ಮುಗಿಸಿ ಕೆಲವು ಹೊತ್ತು ಹೊರಗೆ ಬಂದು ಆ ಸರೋವರದ ತೀರ್ಥದಲ್ಲಿ ಕುಳಿತುಕೊಂಡಿದ್ದ. ಅದೇ ಸಮಯದಲ್ಲಿ ಅಲ್ಲಿಗೆ ಒಂದು ಕರಾಳ ವಿಕರಾಳ ಆಕಾರದ ಭೀಕರ ಪಿಶಾಚಿಯು ಕಣ್ಣಿಗೆ ಬಿದ್ದಿತು. ಅದನ್ನು ಕಂಡು ವಾಲ್ಮೀಕಿಯು ಧೈರ್ಯದಿಂದ ಕೇಳಿದ- ''ನೀನು ಯಾರು? ಇಂಥ ನಿಕೃಷ್ಟವಾದ ಪ್ರೇತಯೋನಿಯಲ್ಲಿ ಹುಟ್ಟಲು ಕಾರಣವೇನು?''

**ಪಿಶಾಚ:-** ಪೂಜ್ಯರೇ, ಗೋದಾವರೀ ತೀರದಲ್ಲಿ ಪ್ರತಿಷ್ಠಾನ ಎಂಬಲ್ಲಿ ನಾನೊಬ್ಬ ಬ್ರಾಹ್ಮಣನಾಗಿ ಮೊದಲು ಹುಟ್ಟಿದ್ದೆ. ನನಗೆ ತೀರ್ಥಗಳಲ್ಲಿ ದಾನ ಸ್ವೀಕರಿಸುವ ಚಪಲ ಯಾವಾಗಲೂ. ಪುಣ್ಯಕರವಾದ ತೀರ್ಥಕ್ಷೇತ್ರಗಳಲ್ಲಿ ದ್ರವ್ಯದ ದುರಾಶೆಯಿಂದ ಒಂದು ಕಾಸನ್ನೂ ದಾನನೀಡದೇ. ದ್ರವ್ಯದ ಶುದ್ಧಾಶುದ್ಧತೆಯನ್ನು ಪರೀಕ್ಷಿಸದೇ ಕಂಡವರ ಕಡೆಯಿಂದ ದಾನವನ್ನು ಸ್ವೀಕರಿಸುತ್ತಲೇ ಜನ್ಮ ಕಳೆದೆ. ಅದರಿಂದ ನನಗೆ ಈ ದಾರುಣವಾದ ಪಿಶಾಚಿ ಜನ್ಮ ಬಂದಿತು. ನಾನು ಬಹುದಿನಗಳವರೆಗೆ ನೀರು, ಮರ ಇಲ್ಲದಿರುವ ಮರುಭೂಮಿಯಲ್ಲಿ ಚಿರಕಾಲ ವಾಸಮಾಡಿದೆ. ಹಸಿವು ನೀರಡಿಕೆಗಳಿಂದ ಬಾಯಾರಿ ಬೆಂದು ಬಸವಳಿದು ಬಗೆಬಗೆಯ ಬವಣೆಪಟ್ಟೆ. ಒಂದು ದಿನ ಸ್ನಾನ ಸಂಧ್ಯೆ ಮಾಡದಿರುವ ಅಪವಿತ್ರವಾದ ಓರ್ವ ಬ್ರಾಹ್ಮಣ ತರುಣನನ್ನು ನಾನು ನೋಡಿದೆ. ಕಚ್ಚೆ ಹಾಕದೇ ಅವನು ಧೋತರ ಉಟ್ಟಿದ್ದ. ಆದ್ದರಿಂದ ನಾನು ಅವನ ಮೈಯಲ್ಲಿ ಪ್ರವೇಶಿಸಿದೆ. ಹಣದ ಆಸೆಯಿಂದ ಆ ಬ್ರಾಹ್ಮಣ ಕುಮಾರನು ಓರ್ವ ವ್ಯಾಪಾರಿಯ ಜೊತೆಗೆ ಈ ಕಾಶೀಕ್ಷೇತ್ರಕ್ಕೆ ಬಂದ. ಅವನು ಈ ಪುಣ್ಯಕ್ಷೇತ್ರವನ್ನು ಪ್ರವೇಶಿಸಿದ ಕೂಡಲೇ ಅವನಲ್ಲಿ ಪಿಶಾಚರೂಪದಿಂದ ಸೇರಿಕೊಂಡ ನಾನೂ ಮತ್ತು ಬಹುಕಾಲದಿಂದ ಅವನಿಗೆ ತಗಲಿಕೊಂಡ ಪಾಪಗಳೂ ಅವನ ದೇಹ ಬಿಟ್ಟು ಹೊರಬಂದವು. ನಾನು ಮುಕ್ತಿಕ್ಷೇತ್ರದ ಹೆಬ್ಬಾಗಿಲ ಬಳಿಯಲ್ಲಿ ಅಂತರ ಪಿಶಾಚಿಯಾಗಿ ಅಲೆಯುತ್ತಿದ್ದಾಗ ನೀವು ಮಾಡಿದ ಶಿವನಾಮೋಚ್ಚಾರಣೆಯ ಧ್ವನಿ ನನ್ನ ಕಿವಿಗೆ ಬಿದ್ದಿತು. ಅದರಿಂದ ನನ್ನ ಪಾಪಗಳೆಲ್ಲವೂ ಪರಿಹೃತ ಅದರಿಂದಾಗಿ ನಾನು ಈಗ ಕಾಶಿಯ ಒಳಗೆ ಪ್ರವೇಶವನ್ನು ಪಡೆದಿದ್ದೇನೆ. ಇಲ್ಲಿ ಬಂದ ಬಳಿಕ ನಿಮ್ಮ ದರ್ಶನದಿಂದ ನನ್ನ ದುರ್ದೈವವೆಲ್ಲವೂ ಸವೆದಿದೆ ಎಂದು ತಿಳಿದಿದ್ದೇನೆ. ದಯಮಾಡಿ ನನ್ನನ್ನು ಈ ನೀಚ ಜನ್ಮದಿಂದ ಉದ್ಧಾರ ಮಾಡಿರಿ.

**ವಾಲ್ಮೀಕಿ:-** ಎಲೋ ಪಿಶಾಚ, ನೀನು ಈ ವಿಮಲೋದಕ ಸರೋವರದಲ್ಲಿ ಸ್ನಾನಮಾಡು. ಕಪರ್ದೀಶ್ವರನ ದರ್ಶನ ಮಾಡಿಕೊ. ಆ ಪುಣ್ಯದಿಂದ ತಾನಾಗಿಯೇ ತೊಲಗಿ ಹೋಗುವುದು ನಿನಗೆ ತಗಲಿದ ಆ ಪಿಶಾಚಭಾವ.

**ಪಿಶಾಚ:-** ಪುಣ್ಯಪುರುಷರೇ, ನನಗೆ ಈ ದುರ್ಯೋನಿಯಲ್ಲಿ ಕುಡಿಯಲಿಕ್ಕೆ ಕೂಡ ಹನಿ ನೀರು ದೊರಕುವುದಿಲ್ಲ. ಸ್ನಾನ ಮಾತಂತೂ ದೂರ ಉಳಿಯಿತು. ಈ ಅಧಮಯೋನಿ ಯಲ್ಲಿ ಜಲಸ್ಪರ್ಶ ಕೂಡ ದುರ್ಲಭ.

**ವಾಲ್ಮೀಕಿ:-** ಇತ್ತ ಬಾ. ಭಸ್ಮವನ್ನು ಹಿಡಿ. ಇದನ್ನು ನಿನ್ನ ಲಲಾಟದಲ್ಲಿ ಧರಿಸು. ಈ ದಿವ್ಯವಾದ ವಿಶ್ವೇಶ್ವರನ ವಿಭೂತಿಯನ್ನು ಲಲಾಟಪಟ್ಟದಲ್ಲಿ ನೀನು ಲೇಪಿಸಿಕೊಂಡ ಬಳಿಕ ನಿನಗೆ ಯಾವ ಬಾಧೆಯೂ ಬರಲಾರದು. ಇದನ್ನು ಕಂಡು ಯಮದೂತರು ಭಯಭ್ರಾಂತರಾಗಿ ಓಡಿಹೋಗುವರು.

ಹೀಗೆ ಹೇಳಿ ಆ ಮಹಾಮುನಿಯು ಆ ಪ್ರೇತದ ಕೈಯಲ್ಲಿ ಹಿಡಿಭಸ್ಮವನ್ನು ನೀಡಿದ. ಅದನ್ನು ಆ ಪಿಶಾಚವು ತನ್ನ ನೊಸಲಿನ ನಡುವೆ ಲೇಪಿಸಿಕೊಂಡಿತು. ನೇರವಾಗಿ ನಡೆಯಿತು ತೀರ್ಥಸ್ನಾನಕ್ಕೆ. ಲಲಾಟಪಟ್ಟದಲ್ಲಿ ವಿಭೂತಿ ಪಟ್ಟಿ ಇದ್ದದ್ದು ಕಂಡು ಯಾವ ಜಲ ದೇವತೆಯೂ ಅದರ ಸ್ನಾನವನ್ನು ಪ್ರತಿಬಂಧಿಸಲಿಲ್ಲ. ವಿಮಲೋದಕ ತೀರ್ಥದಲ್ಲಿ ಆ ಪಿಶಾಚವು ಮಿಂದು ಮುಳುಗುಹಾಕಿತು. ತೀರ್ಥದ ಸ್ನಾನಪಾನ ಮಾಡಿತು. ನೀರಿನಲ್ಲಿ ಮೈತೊಳೆದು ತೀರವನ್ನು ಸಾರುವಷ್ಟರಲ್ಲಿ ಬಿಟ್ಟು ಹೋಯಿತು ಅದರ ಪೈಶಾಚ್ಯ. ಕೂಡಲೇ ದಿವ್ಯದೇಹ ಅದಕ್ಕೆ ಪ್ರಾಪ್ತವಾಯಿತು. ಅರೆಕ್ಷಣದಲ್ಲಿ ದಿವ್ಯಲೋಕದಿಂದ ಅವನನ್ನು ಕರೆದೊಯ್ಯಲು ವಿಮಾನವು ಬಂದಿತು. ಆಗ ದಿವ್ಯ ದೇಹಧರಿಸಿದ ಆ ಪಿಶಾಚವು ವಾಲ್ಮೀಕಿಗೆ ನಮಸ್ಕಾರ ಮಾಡಿ ಹೇಳಿತು- ''ಮಹಾಮುನಿಗಳೇ, ತಾವು ಉಚ್ಚಕಂಠದಿಂದ ಶಿವನ ಶುಭನಾಮ ಉಚ್ಚರಿಸಿ ನನ್ನನ್ನು ಈ ನಿಂದ್ಯವೂ, ನೀಚವೂ ಆದ ದುರ್ಯೋನಿಯಿಂದ ಬಿಡುಗಡೆ ಮಾಡಿದಿರಿ ಆದ್ದರಿಂದ ಈ ತೀರ್ಥಕ್ಕೆ ಪಿಶಾಚಮೋಚನ ತೀರ್ಥ ಎಂದು ಇಂದಿನಿಂದ ಹೆಸರಾಗಲಿ. ಇಲ್ಲಿ ಸ್ನಾನ ಮಾಡುವುದರಿಂದ ಪಿಶಾಚ ಹಿಡಿದವರಿಗೆ ಅಂಟಿಕೊಂಡ ಪಿಶಾಚಿಗಳು ತಾವಾಗಿಯೇ ಬಿಟ್ಟು ಹೋಗಲಿ. ಈ ಪುಣ್ಯತೀರ್ಥದಲ್ಲಿ ಸ್ನಾನಮಾಡಿ ಪಿಂಡದಾನ ಮಾಡಿದವರ ಪಿತೃಗಣದಲ್ಲಿ ಯಾರಾದರೂ ದುರ್ದೈವದಿಂದ ಪಿಶಾಚಯೋನಿಯಲ್ಲಿ ಬಿದ್ದಿದ್ದರೆ, ಅವರಿಗೆ ಆ ದುರ್ಯೋನಿಯಿಂದ ಬಿಡುಗಡೆಯಾಗಿ ಆತ್ಮೋದ್ಧಾರವಾಗಲಿ. ಮಾರ್ಗಶೀರ್ಷ ಶುಕ್ಲ ಚತುರ್ದಶಿಯ ದಿನ ಇಲ್ಲಿಯ ಸ್ನಾನ ಪಿಶಾಚ ಮೋಚಕ ಸ್ನಾನವಾಗಲಿ. ಮಾರ್ಗಶಿರ ಶುಕ್ಲ ಚತುರ್ದಶಿಯ ದಿನ ಇಲ್ಲಿ ಪ್ರತಿವರ್ಷ ಯಾತ್ರೆ ಮಾಡುವವರು ಪುಣ್ಯಕ್ಷೇತ್ರಗಳಲ್ಲಿ ದಾನ ದಕ್ಷಿಣೆಗಳನ್ನು ಸ್ವೀಕರಿಸಿದ ಪಾಪದಿಂದ ಮುಕ್ತರಾಗಲಿ. ಹೀಗೆ ಹೇಳಿ ದಿವ್ಯದೇಹ ಧರಿಸಿದ ಆ ಪುರುಷನು ಆ ತಪಸ್ವೀ ಬ್ರಾಹ್ಮಣನಿಗೆ ಮತ್ತೆ ಮತ್ತೆ ನಮಸ್ಕಾರ ಮಾಡಿ ಪ್ರದಕ್ಷಿಣೆ ಹಾಕಿ ವಿಮಾನಾರೋಹಣಮಾಡಿ ದಿವ್ಯಧಾಮವನ್ನು ಕುರಿತು ಪ್ರಯಾಣ ಬೆಳೆಸಿದ.

ಇತ್ತ ತಪಸ್ವೀ ವಾಲ್ಮೀಕಿಯು ಆ ಆಶ್ಚರ್ಯವನ್ನು ಕಂಡು ತಾನು ಕೂಡ ಕಪರ್ದೀಶ್ವರನ ಸೇವೆಮಾಡಿ ಸಮಯಾನುಸಾರ ಮೋಕ್ಷವನ್ನು ಹೊಂದಿದ.

## ಕಾಶಿಯಲ್ಲಿ ಗಣೇಶನ ಆಗಮನ

**ಸ್ಕಂದ:-** ಕಲಶೀಕುಮಾರ, ಸೂರ್ಯ, ಯೋಗಿನಿಯರು, ಬ್ರಹ್ಮ, ಇವರಾರೂ ಕಾಶಿಗೆ ಹೋದವರು ಮರಳಿ ಬಾರದೇ ಇದ್ದುದನ್ನು ನೋಡಿ ಸ್ವಯಂ ಗಣೇಶನು ಶಿವನ ಆಜ್ಞೆಯನ್ನು ತಲೆಯಲ್ಲಿ ಹೊತ್ತು ಕಾಶಿಗೆ ಆಗಮಿಸಿದ. ಓರ್ವ ಮುದುಕ ಜ್ಯೋತಿಷಿಯ ವೇಷದಿಂದ ಕಾಶಿಗೆ ಬಂದು ಪ್ರತಿಯೊಬ್ಬರ ಮನೆಮನೆಗೆ ಹೋಗಿ ಭವಿಷ್ಯ ಹೇಳಿ ಆ ನಗರ ನಿವಾಸಿಗಳನ್ನು ಪ್ರಸನ್ನರನ್ನಾಗಿ ಮಾಡುತ್ತಿದ್ದ. ಎಲ್ಲರ ಮನೆಗಳ ಪಾಕಶಾಲೆಯಲ್ಲಿಯೂ ಪ್ರವೇಶಿಸಿ ಹೆಣ್ಣು ಮಕ್ಕಳನ್ನು ಮಾತನಾಡಿಸಿ, ಅವರ ಭೂತ ಭವಿಷ್ಯಗಳನ್ನೆಲ್ಲ ಸತ್ಯವಾಗಿ ನುಡಿದು ಅವರ ವಿಶ್ವಾಸಪಾತ್ರನಾದ. ಸಮಗ್ರ ಕಾಶೀಪಟ್ಟಣದಲ್ಲೆಲ್ಲ ಅಪ್ಪಟ ಸತ್ಯವನ್ನೇ ನುಡಿಯುವ ಭವಿಷ್ಯವಾದಿ ಎಂದು ಪ್ರಸಿದ್ಧಿ ಪಡೆದ ಆ ವೃದ್ಧ ಜ್ಯೋತಿಷಿ ಮಹಾರಾಣಿ ಲೀಲಾವತಿಯು ಈ ಜ್ಯೋತಿಷ್ಕನ ಎಂದೂ ತಪ್ಪದ ಭವಿಷ್ಯದ ವಚನಗಳನ್ನು ಬಹು ಜನರ ಬಾಯಿಂದ ಕೇಳಿ ತಿಳಿದುಕೊಂಡು ರಹಸ್ಯದಲ್ಲಿ ದಿವೋದಾಸನಿಗೆ ಅರಿಕೆಮಾಡಿಕೊಂಡಳು- ''ಆರ್ಯಕುಮಾರ, ಈ ನಗರಕ್ಕೆ ಓರ್ವ ವೃದ್ಧ ಬ್ರಾಹ್ಮಣ ಆಗಮಿಸಿದ್ದಾನೆ. ಅವನು ಜ್ಯೋತಿಷ್ಯದಲ್ಲಿ ಸಿದ್ಧಹಸ್ತ. ಈವರೆಗೂ ಅವನು ಹೇಳಿದ ಮಾತು ಒಂದೂ ಹುಸಿಹೋಗಿಲ್ಲ. ನಿಜವಾಗಿಯೂ ಅವನು ವೇದಮೂರ್ತಿ ತಾವು ಅವಶ್ಯವಾಗಿ ಆ ವಿಪ್ರೋತ್ತಮನ ದರ್ಶನಮಾಡಿಕೊಳ್ಳಿರಿ.''

ರಾಣಿಯ ಮಾತು ಯಾವಾಗಲೂ ಒಪ್ಪಿಗೆ ಮಹಾರಾಜನಿಗೆ. ಮರುದಿನ ಮುಂಜಾವಿನಲ್ಲಿಯೇ ಕರೆಕಳಿಸಿದ. ಆ ವಸಿಷ್ಠ ಬ್ರಾಹ್ಮಣನನ್ನು. ಆದರದಿಂದ ಉಪಚರಿಸಿ ಕೇಳಿದ- ''ಬ್ರಹ್ಮನ್, ತಾವು ಬ್ರಹ್ಮನಿಷ್ಠರು, ಜ್ಯೋತಿಷ್ಯದಲ್ಲಿ ಪರಿನಿಷ್ಠಿತರು. ತಾವು ವಿಚಾರಿಸಿ ನನ್ನ ಭವಿಷ್ಯದ ಬಗ್ಗೆ ನುಡಿಯಬೇಕು.''

**ಬ್ರಾಹ್ಮಣ:-** ರಾಜನ್! ಇಂದಿನಿಂದ ಹದಿನೆಂಟನೇ ದಿನ ನಿನ್ನ ಮನೆಗೆ ಉತ್ತರ ದಿಕ್ಕಿನಿಂದ ಓರ್ವ ಪಂಡಿತನು ಬರುವನು. ಅವನು ನಿಶ್ಚಿತವಾಗಿ ನೀಡುವನು ನಿನಗೆ ಉಪದೇಶವನ್ನು. ಮೀನಮೇಷ ಮಾಡದೇ, ಹಿಂದೆ ಮುಂದೆ ನೋಡದೇ ನೀನು ಅವನ ಮಾತನ್ನು ಮನ್ನಿಸು. ಅವನ ಉಪದೇಶವನ್ನು ನಡೆಸು. ಆದರಿಂದ ನಿನ್ನ ಎಲ್ಲ ಮನೋರಥಗಳ ಸಂಪೂರ್ಣ ಸಿದ್ಧಿ.

ಹೀಗೆ ಹೇಳಿದ ಆ ವೃದ್ಧ ಜ್ಯೋತಿಷಿ ರಾಜನ ಅನುಮತಿ ಪಡೆದು ಅಲ್ಲಿಂದ ಹೊರಟು ತನ್ನ ಆಶ್ರಮಕ್ಕೆ ತೆರಳಿದ.

ವೃದ್ಧ ಬ್ರಾಹ್ಮಣನು ಹೊರಟು ಹೋದ ಬಳಿಕ ಮೊದಲೇ ವಿರಕ್ತನಾದ ದಿವೋದಾಸ ಮಹಾರಾಜನು ರಾಜ್ಯದ ಮೇಲಿನ ಮನಸ್ಸು ತೆಗೆದುಬಿಟ್ಟನು. ಅವನಲ್ಲಿ ಒಂದು ಬಗೆಯ ಪೂರ್ಣ ವೈರಾಗ್ಯವೇ ಬಲಿಯಿತು. ಹದಿನೆಂಟು ದಿನಗಳ ಅವಧಿಯನ್ನು ಅವನು ಎಣಿಸತೊಡಗಿದ. ರಾಜ್ಯದ ಹಾಗೂ ರಾಜಧಾನಿಯ ಯಾವ ವಿಷಯಗಳಲ್ಲಿಯೂ ಅವನಿಗೆ ಆಸಕ್ತಿಯೇ ಉಳಿದಿರಲಿಲ್ಲ. ಆಗ ವೃದ್ಧ ಜೋತಿಷಿಯ ರೂಪದಿಂದ ಬಂದ ಗಣಪತಿಯು 'ರಾಜನು ಲೌಕಿಕ ವಿಷಯಗಳಿಂದ ವಿಮುಖನಾಗಿ ವಿಶಿಷ್ಟ ವೈರಾಗ್ಯದ ವೀತರಾಗದ ಚರ್ಯೆಯಲ್ಲಿ ವರ್ತಿಸುತ್ತ ಇರುವುದನ್ನು, ಕಂಡು ಕಾಶೀ ಪಟ್ಟಣವನ್ನೆಲ್ಲ ತನ್ನ ಕೈಯಲ್ಲಿಯೇ ತೆಗೆದುಕೊಂಡ. ಆ ನಗರದಲ್ಲಿ ಇರುವ ಗಣೇಶ ದೇವಾಲಯಗಳಲ್ಲಿ ಇರುವ ವಿನಾಯಕ ಮೂರ್ತಿಗಳನ್ನೆಲ್ಲ ತಾನೇ ಸಾಕ್ಷಾತಾಗಿ ನೆಲೆಸಿ ನಿಂತ. ಎಲ್ಲ ಕಡೆಗೂ ಗಣಪತಿಯ ಪೂಜೆ ಸ್ತೋತ್ರ ಪಾಠ ನಡೆದವು. ಭಕ್ತರ ವಿಘ್ನವನ್ನು ಪರಿಹರಿಸುವ ವಿಘ್ನೇಶ್ವರನಿಗೆ

ಜಯವಾಗಲಿ. ಸಂಪೂರ್ಣ ಗಣಗಳಿಗೆಲ್ಲ ಅಗ್ರಗಣ್ಯನಾದ ಗಜಾನನಿಗೆ ಜಯವಾಗಲಿ. ಗಜಾನನ, ಈ ಚರಾಚರ ಜಗತ್ತೆಲ್ಲವೂ ನಿನ್ನ ಸ್ವರೂಪದ ಒಂದು ಅಂಶವೇ ಆಗಿರುತ್ತದೆ. ನೀನು ವಾಗತೀತ ನಾಗಿರುವೆ. ವಿನಾಯಕ, ನೀನು ಎಲ್ಲ ಪುರುಷಾರ್ಥಗಳನ್ನೂ ಹುಡುಕಿ ಭಕ್ತರಿಗೆ ನೀಡುವೆ ಅದರಿಂದ ನಿನಗೆ 'ಡುಂಢಿ' ಎಂದು ಹೆಸರು ನಿನ್ನನ್ನು ಸಂತೋಷಗೊಳಿಸದೇ ಪ್ರಾರ್ಥಿಸದೇ ಯಾರೂ ಕಾಶಿಯನ್ನು ಪ್ರವೇಶಿಸಲಾರರು. ಎಂದು ಮುಂತಾಗಿ ಎಲ್ಲೆಡೆ ಪ್ರಾರ್ಥನೆಗಳು ಕೇಳಿಬರುತ್ತಿದ್ದವು.

## ವಿಷ್ಣುವಿನ ಕಾಶೀ ಪ್ರಯಾಣ ಪುಣ್ಯಕೀರ್ತಿಯ ಉಪದೇಶ ದಿವೋದಾಸನ ಸದ್ಗತಿ

**ಸ್ಕಂದ:-** ಕುಂಭಕುಮಾರ, ಯೋಗಿನಿ, ಸೂರ್ಯ, ಬ್ರಹ್ಮರಂತೆ ಗಣಪತಿಯೂ ಕಾಶಿಗೆ ಹೋದವ ಮರಳಿ ಬರದೇ ಇದ್ದುದನ್ನು ನೋಡಿ ಶಂಕರನು ವಿಷ್ಣುವನ್ನು ಕುರಿತು ಆತ್ಮಾದರ ದಿಂದ ಹೇಳಿದ- ''ಮಾಧವ, ನಿನ್ನ ಹೊರತು ಈ ಕೆಲಸ ಬೇರೊಬ್ಬರಿಂದ ಆಗುವುದಿಲ್ಲ. ಆದರೆ ದಯವಿಟ್ಟು ನೀನು ಕೂಡ ಹಿಂದಿನವರಂತೆ ಕಾಶಿಯಲ್ಲಿಯೇ ಕುಳಿತು ಬಿಡಬೇಡ. ಯುಕ್ತಿ ಯಿಂದ ದಿವೋದಾಸನನ್ನು ಅಲ್ಲಿಂದ ಬಿಡಿಸಿ ನನಗೆ ಆ ಸಮಾಚಾರವನ್ನು ಬಂದು ತಿಳಿಸು.''

ಮಹಾದೇವರ ಮಾತಿನಂತೆ ಮುಕುಂದನು ತನ್ನ ಮಡದಿ ಇಂದಿರೆಯೊಡನೆ ಮಂದರಾಚಲದಿಂದ ಪ್ರಸ್ಥಾನ ಹೊರಟ. ಮಹೀಮಂಡಲಕ್ಕೆ ಆಗಮಿಸಿದ. ಭರತಖಂಡಕ್ಕೆ ಬಿಜಯಂಗೈದ. ಗಂಗಾ ವರಣಾ ನದಿಗಳ ಸಂಗಮದಲ್ಲಿ ಮಿಂದು ಕೈಕಾಲು ತೊಳೆದು ಕೊಂಡ. ಹರಿಯು ತನ್ನ ಪಾದ ಪ್ರಕ್ಷಾಲನೆ ಮಾಡಿಕೊಂಡದ್ದರಿಂದ ಆ ಸಂಗಮ ತೀರ್ಥವು ಪಾದೋದಕತೀರ್ಥ ಎಂದು ಹೆಸರಾಯಿತು. ಅದೇ ಸ್ಥಳದಲ್ಲಿ ಕೇಶವನು ತನ್ನ ಕೈಯಿಂದಲೇ ತನ್ನದೇ ಒಂದು ಮೂರ್ತಿಯನ್ನು ನಿರ್ಮಿಸಿದ. ತಾನು ಮೊದಲು ಅದನ್ನು ಪೂಜಿಸಿ ಸ್ವಯಂ ಸ್ಥಾಪನೆಗೈದ. ಸಾಕ್ಷಾತ್ ವಿಷ್ಣುವಿನಿಂದ ನಿರ್ಮಿತವೂ, ಪೂಜಿತವೂ, ಸ್ಥಾಪಿತವೂ ಆದ ಈ ಕೇಶವ ಮೂರ್ತಿಯನ್ನು ಪೂಜಿಸಿದವರು ವೈಕುಂಠಧಾಮದ ಅಂಗಳದಲ್ಲಿ ಇಳಿದಿದ್ದಾರೆಂದೇ ಭಾವಿಸಬಹುದು. ಕಾಶಿಯ ಗಡಿಯಲ್ಲಿ ಈ ಸ್ಥಾನವನ್ನು ಶ್ವೇತದ್ವೀಪ ಎನ್ನುತ್ತಾರೆ. ಕೇಶವ ದೇವಸ್ಥಾನದ ಎದುರು ಕ್ಷೀರಸಾಗರ ಎಂಬ ಹೆಸರಿನ ಬೇರೊಂದು ತೀರ್ಥವಿದೆ. ಅಲ್ಲಿಯೇ ಮಹಾಲಕ್ಷ್ಮಿಯ ಒಂದು ಮೂರ್ತಿಯೂ ಇದೆ. ಭಗವಾನ್ ಕೇಶವನು ಹಾಗೂ ಅವನ ಮಡದಿ ಶ್ರೀದೇವಿಯೂ ಈ ಎರಡೂ ಮೂರ್ತಿಗಳಲ್ಲಿ ಸನ್ನಿಹಿತರಾಗಿದ್ದಾರೆ. ಈ ಮೂರ್ತಿಗಳಲ್ಲಿ ಶ್ರೀಲಕ್ಷ್ಮೀನಾರಾಯಣರು ಪ್ರವಿಷ್ಟರಾಗಿ ಅನಂತರ ಶಂಕರ ಕಾರ್ಯಸಿದ್ಧಿಗಾಗಿ ಮತ್ತೊಂದು ಅಂಶದಿಂದ ಹೊರಗೆ ಬಂದರು. ವಿಷ್ಣುವು ಕಾಶಿಯಿಂದ ಉತ್ತರಕ್ಕೆ ಹೋಗಿ ತನಗಾಗಿ ಇರಲಿಕ್ಕೆ ಒಂದು ಸ್ಥಾನವನ್ನು ನಿಶ್ಚಿತಗೊಳಿಸಿದನು. ಅದು ಧರ್ಮಕ್ಷೇತ್ರ (ಧರ್ಮಚಕ್ರಸ್ಥಾನ-ಸಾರನಾಥ) ಎಂಬ ನಾಮದಿಂದ ಪ್ರಸಿದ್ಧವಿರುತ್ತದೆ. ಅನಂತರ ನಾರಾಯಣನು ತ್ರಿಭುವನ ಮೋಹಕವಾದ ಒಂದು ರೂಪವನ್ನು ಧರಿಸಿದ. ಅವನ ವಾಹನನಾದ ಗರುಡನು ಕೂಡ ಅಲೌಕಿಕ ರೂಪವನ್ನು ಧರಿಸಿ ಅವನ ಶಿಷ್ಯನಾದ. ಭಗವಂತನು ಪುಣ್ಯಕೀರ್ತಿ ಎಂದು ತನ್ನ ನಾಮವನ್ನು ಇಟ್ಟುಕೊಂಡ. ಪುಣ್ಯಕೀರ್ತಿಯು ಕೈಯಲ್ಲಿ ಒಂದು ಪುಸ್ತಕವನ್ನು ಹಿಡಿದುಕೊಂಡಿದ್ದ. ಮತ್ತು ಪುಣ್ಯಕೀರ್ತಿಯು ವಿನಯ ಕೀರ್ತಿಗೆ ಹೀಗೆ ಉಪದೇಶ ಮಾಡಿದ.

**ಪುಣ್ಯಕೀರ್ತಿ:-** ಪುಣ್ಯವಂತನಾದ ವಿನಯಕೀರ್ತಿಯೇ, ಇಹಲೋಕ ಮತ್ತು ಪರ ಲೋಕಗಳಲ್ಲಿ ಕಲ್ಯಾಣಪ್ರಾಪ್ತಿಗಾಗಿ ಪ್ರಾಚೀನ ಮಹರ್ಷಿಗಳು ಸರ್ವಶಾಸ್ತ್ರಗಳನ್ನು ವಿಚಾರಿಸಿ

ನಾಲ್ಕು ಬಗೆಯಾದ ದಾನಗಳನ್ನು ನೀಡಬೇಕು ಎಂದು ಉಪದೇಶಗೈದಿದ್ದಾರೆ. ಭಯ ಭೀತರಿಗೆ ಅಭಯದಾನ, ರೋಗಿಗಳಿಗೆ ಔಷಧದಾನ, ವಿದ್ಯಾರ್ಥಿಗಳಿಗೆ ಜ್ಞಾನದಾನ, ಹಸಿದು ಬಂದವರಿಗೆ ಅನ್ನದಾನ. ವೇದವಾದಿಗಳಿಂದ ಮೇಲಿಂದ ಮೇಲೆ ಪ್ರಮಾಣವೆಂದು ಮನ್ನಿಸಲ್ಪಟ್ಟ ಶ್ರುತಿ ವಚನಗಳಲ್ಲಿ ಪರಮ ಮುಖ್ಯವಾದುದು, ''ಮಾ ಹಿಂಸ್ಯಾತ್ ಸರ್ವಾ ಭೂತಾನಿ'' ಯಾವ ಪ್ರಾಣಿಯನ್ನೂ ಹಿಂಸಿಸಬಾರದು.

ಈ ರೀತಿಯಾಗಿ ಪುಣ್ಯಕೀರ್ತಿಯು ಮಾಡಿದ ಉಪದೇಶವನ್ನು ಶಿಷ್ಯ ವಿನಯ ಕೀರ್ತಿಯೊಂದಿಗೆ ಅನೇಕ ಜನರು ಕೇಳಿ ಆಕರ್ಷಿತರಾದರು. ಪುಣ್ಯಕೀರ್ತಿಯು ಪ್ರತಿದಿನವೂ ಮಾಡುವ ಧರ್ಮೋಪದೇಶವನ್ನು ಕೇಳಲು ಅನೇಕ ಜನರು ಅವನ ಬಳಿಗೆ ಬರುತ್ತಲಿದ್ದರು. ಪ್ರತಿನಿತ್ಯವೂ ಅವನು ನೆರೆದ ಜನರೆಲ್ಲರಿಗೂ ಧರ್ಮದ ಮರ್ಮವನ್ನು ತಿಳಿಸಿ ಹೇಳುತ್ತ ನೀತಿಯ ಉಪದೇಶವನ್ನು ವಿವರಿಸಿ ಹೇಳುತ್ತಿದ್ದ.

**ಯಾವತ್ ಸ್ವಸ್ಥಂ ಇಂದ ವರ್ಷ್ಮ ಯಾವನ್ನೇಂದ್ರಿಯ ವಿಪ್ಲವಃ।**
**ಯಾವಜ್ಜರಾ ಚ ದೂರೇऽಸ್ತಿ ತಾವತ್ ಸೌಖ್ಯಂ ಪ್ರಸಾದಯೇತ್ ॥**

ಈ ಶರೀರವು ಎಲ್ಲಿಯವರೆಗೆ ಆರೋಗ್ಯ ಸಂಪನ್ನವಾಗಿ ಇರುವುದೋ, ಯಾವಾಗ ಇಂದ್ರಿಯಗಳು ಶಿಥಿಲವಾಗಿಲ್ಲವೋ, ಎಲ್ಲಿಯವರೆಗೆ ಮುಪ್ಪು ದೂರವಿರುವುದೋ ಅಷ್ಟರಲ್ಲಿಯೇ ಮನುಷ್ಯನು ಪರಮಸುಖವಾದ ಮೋಕ್ಷದ ಸಲುವಾಗಿ ಸಾಧನವನ್ನು ಮಾಡಿಕೊಳ್ಳಬೇಕು.''

**ಅಸ್ವಾಸ್ಥೇಂದ್ರಿಯ ವೈಕಲ್ಯೇ ವಾರ್ಧಕೇತು ಕುತಃಸುಖಮ್ ।**
**ಶರೀರಮಪಿ ದಾತವ್ಯ ಮರ್ತಿಭ್ಯೋऽ ತಃ ಸುಖೇಪ್ಸುಭಿಃ ॥**

''ದೇಹವು ಅಸ್ವಸ್ಥವಾಗಿ ಮುಪ್ಪಿನ ಕಾಲದಲ್ಲಿ ಇಂದ್ರಿಯಗಳೆಲ್ಲ ಶಕ್ತಿಹೀನವಾದ ಬಳಿಕ ಮನುಷ್ಯನಿಗೆ ಏನು ಸುಖ ಉಂಟಾದೀತು? ಆದ್ದರಿಂದ ಶಾಶ್ವತವಾದ ಸುಖವನ್ನು ಬಯಸುವ ಜನರು ಯಾಚಕರಿಗೆ ತಮ್ಮ ಶರೀರವನ್ನಾದರೂ ಕೊಟ್ಟು ದಾನ ನೀಡಬೇಕು'' ಹೀಗೆ ದಿನ ವೊಂದು ಬಗೆಯಾಗಿ ಧರ್ಮರಹಸ್ಯವನ್ನು ಜನರಿಗೆಲ್ಲ ತಿಳಿಸುತ್ತ ಪುಣ್ಯ ಕೀರ್ತಿಯು ಕಾಶಿಯ ಸದ್ಭಕ್ತರಿಗೆಲ್ಲ ಸದುಪದೇಶವನ್ನು ನೀಡುತ್ತ ಧರ್ಮಪ್ರವಚನವನ್ನು ಮಾಡುತ್ತಲಿದ್ದ.

ಇತ್ತ ವಿಘ್ನರಾಜ ಗಣೇಶನು ಕಾಶಿಯದೊರೆಯಾದ ದಿವೋದಾಸನಿಗೆ ''ಇಂದಿನಿಂದ ಹದಿನೆಂಟನೇಯ ದಿನ ಉತ್ತರದಿಕ್ಕಿನಿಂದ ಒಬ್ಬ ಬ್ರಾಹ್ಮಣನು ಆಗಮಿಸಲಿರುವನು. ನಿನಗೆ ಅವನು ಉಪದೇಶ ನೀಡುವನು. ನೀನು ಅವನ ವಚನವನ್ನು ಪಾಲಿಸು. ಅದರಿಂದಲೇ ನಿನ್ನ ಉದ್ಧಾರ ಹಾಗೂ ಸರ್ವ ಮನೋರಥ ಸಿದ್ಧಿ. ಎಂದು ಹಿಂದೆ ನುಡಿದಿದ್ದನಷ್ಟೆ? ಆ ಗಣೇಶನ ಮಾತಿನಿಂದ ದಿವೋದಾಸನಿಗೆ ವಿಷಯದಲ್ಲಿ ವೈರಾಗ್ಯ ಅಧ್ಯಾತ್ಮದಲ್ಲಿ ಆಸಕ್ತಿ ಮೂಡಿತ್ತು. ಅವನು ಅತ್ಯಂತ ಉತ್ಕಂಠತೆಯಿಂದ ಗಣೇಶನು ಹೇಳಿದ ಹದಿನೆಂಟು ದಿನಗಳನ್ನು ಎಣಿಸುತ್ತಲಿದ್ದ. ರಾಜ್ಯ, ಐಶ್ವರ್ಯ, ರಾಜಧಾನಿ ಹಾಗೂ ಉಳಿದೆಲ್ಲ ಲೌಕಿಕ ವಿಷಯಗಳಲ್ಲಿ ಸಂಪೂರ್ಣ ವಿರಕ್ತನಾಗಿದ್ದ. ಗಣೇಶನು ಹೇಳಿದ ಆ ಬ್ರಾಹ್ಮಣನು ಎಂದು ಬರುವನು ತನ್ನ ಉಪದೇಶದಿಂದ ನನ್ನನ್ನು ಎಂದು ಉದ್ಧರಿಸುವನು? ಎಂದು ಹಗಲಿರುಳೂ ಉತ್ಕಂಠತೆಯಿಂದ ಆ ಬ್ರಾಹ್ಮಣನ ದಾರಿಯನ್ನು ಕಾಯುತ್ತಲಿದ್ದ. ಹೀಗೆ ಕಾಶಿರಾಜನು ದಿನಗಳಲ್ಲಿ ಎಣಿಸುತ್ತಲಿರುವಾಗ ಹದಿನೆಂಟನೆಯ ದಿನವು ಬಂದಿತು. ರಾಜನ ಆತುರ ಕಾತುರವಾಗಿ

ಕೌತುಕದ ಕೊನೆಯೇರಿ, ಉತ್ತರದಿಕ್ಕಿಗೆ ಮುಖ ಮಾಡಿ ಧರ್ಮೋಪದೇಶಿ ಬ್ರಾಹ್ಮಣನ ಮಾರ್ಗವನ್ನು ನಿರೀಕ್ಷಿಸುತ್ತ ಕಾಶಿಯ ನರೇಶನು ನಿಂತುಕೊಂಡಾಗ ಒಮ್ಮೆಲೇ ಪುಣ್ಯಕೀರ್ತಿಯು ಕಾಣಿಸಿಕೊಂಡ. ಅವನನ್ನು ನೋಡಿದ ಕೂಡಲೇ ಆ ಕಾಶಿಯ ಅರಸನಿಗೆ ನಿಶ್ಚಯವಾಯಿತು. ''ಇವನೇ ಗಣೇಶನು ಹೇಳಿದಂತೆ ನನಗೆ ಉಪದೇಶ ನೀಡಲು ಬಂದ ಗುರು'' ಎಂದು ಅವನು ಧಾವಿಸಿಬಂದ ಪುಣ್ಯಕೀರ್ತಿಯ ಬಳಿಗೆ. ಸಾಷ್ಟಾಂಗ ನಮಸ್ಕಾರ ಮಾಡಿದ. ಅತ್ಯಾದರದಿಂದ ಅವನನ್ನು ತನ್ನ ಅಂತಃಪುರಕ್ಕೆ ಕರೆದುಕೊಂಡು ಹೋದ. ಅರ್ಘ್ಯಪಾದ್ಯಾದಿಗಳಿಂದ ಅವನನ್ನು ಸತ್ಕರಿಸಿದ. ಉಚ್ಚ ಆಸನದ ಮೇಲೆ ಅವನನ್ನು ಕೂಡಿಸಿದ. ಅವರಿಗೆ ತೃಪ್ತಿಯಾಗುವಂತೆ ಭೋಜನ ಮಾಡಿಸಿದ. ಬಗೆ ಬಗೆಯ ವಸ್ತುಗಳನ್ನು ದಾನ ನೀಡಿದ. ಪುಣ್ಯಕೀರ್ತಿಯು ತನ್ನ ಅತಿಥ್ಯದಿಂದ ಪೂರ್ಣ ಪರಿತುಷ್ಟನಾಗಿ ಪ್ರಸನ್ನಚಿತ್ತದಿಂದ ಕುಳಿತುಕೊಂಡಾಗ ಅವನನ್ನು ಕೈ ಮುಗಿದು ಕೇಳಿಕೊಂಡ- ''ಪೂಜ್ಯರೇ, ನಾನು ಈ ಸಾಮ್ರಾಜ್ಯದ ಭಾರವನ್ನು ಹೊತ್ತು ಹಾಗೂ ಕುಟುಂಬದ ಭಾರವನ್ನು ವಹಿಸಿ ದುಡಿದು ಬಹಳ ಹಣ್ಣಾಗಿದ್ದೇನೆ. ಬಹಳ ಖಿನ್ನನೂ ಆಗಿದ್ದೇನೆ. ಈಗ ನನಗೆ ಎಲ್ಲದರಲ್ಲಿಯೂ ವೈರಾಗ್ಯ ವಿಷಯ ಸುಖದಲ್ಲಿ ಜುಗುಪ್ಸೆ, ರಾಜ್ಯ, ಐಶ್ವರ್ಯ, ಅಧಿಕಾರಗಳಲ್ಲಿ ಜಿಹಾಸೆ. ಆದ್ದರಿಂದ ದಯಮಾಡಿ ತಾವು ನನಗೆ ಮಾರ್ಗದರ್ಶನ ಮಾಡಿಸಬೇಕು. ನಾನು ಮುಂದೆ ಏನು ಮಾಡಲಿ? ಎಲ್ಲಿಗೆ ಹೋಗಲಿ? ಏನು ಮಾಡಿದರೆ ನನ್ನ ಅಂತರಂಗಕ್ಕೆ ಶಾಂತಿ ಲಭಿಸೀತು? ಇದನ್ನು ವಿಚಾರ ಮಾಡುತ್ತಲೇ ನನಗೆ ಈಗ ಒಂದು ತಿಂಗಳು ಕಳೆದು ಹೋಯಿತು. ನಾನು ಈ ವರೆಗೆ ಪ್ರಜೆಗಳನ್ನು ಮಕ್ಕಳಂತೆಯೇ ಪಾಲಿಸಿದ್ದೇನೆ. ಧರ್ಮಮಾರ್ಗದಲ್ಲಿಯೇ ನಡೆದಿದ್ದೇನೆ. ಪ್ರತಿದಿನವೂ ಬಗೆಬಗೆಯ ದಾನದಕ್ಷಿಣೆಗಳನ್ನು ನೀಡಿ ಅತಿಥಿ, ಅಭ್ಯಾಗತರ ಸೇವೆಮಾಡಿ, ದೀನದುಃಖಿತರ ಸೇವೆಗೈದು ಯಾಚ್ಚಕ್ಕ ಪರೋಪಕಾರಗೈಯುತ್ತ, ಕ್ಷತ್ರಿಯೋಚಿತವಾದ ಧರ್ಮಕರ್ಮಾನುಷ್ಠಾನವನ್ನು ಆಚರಿಸುತ್ತಲೇ ಬಂದಿದ್ದೇನೆ. ಈ ರಾಜ್ಯಶಾಸನ ಮಾಡುವಾಗ ನನ್ನ ಕಡೆಯಿಂದ ಸಾಕಷ್ಟು ದೇವತಾರಾಧನೆ ಆಗಲಿಲ್ಲ. ಅದಕ್ಕೆ ನನ್ನ ತಪೋಬಲದ ಅಭಿಮಾನವೇ ಕಾರಣವಿರಬಹುದು. ಪರ್ಯಾಪ್ತ ಪ್ರಮಾಣದಲ್ಲಿ ದೇವತಾರಾಧನವನ್ನು ಮಾಡಲಿಲ್ಲ ಎನ್ನುವುದೊಂದೇ ನನ್ನ ಮಹದಪರಾಧ. ಇದರ ಹೊರತುಬೇರೆ ಯಾವ ತಪ್ಪನ್ನು ನಾನು ಮಾಡಿಲ್ಲ. ಪ್ರಜಾಪಾಲನತ ಪ್ರಜಾತೋಷಣವೇ ಪರಮೇಶ್ವರ ಪೂಜೆಯೆಂದು ನಾನು ಬಗೆದದ್ದರಿಂದ ದೇವತಾರಾಧನೆ ಮಾತ್ರ ನನ್ನಿಂದ ಸಮಾಧಾನಕಾರಕವಾಗಿ ಆಗಿರಲಿಕ್ಕಿಲ್ಲ. ಆದರೆ ನನ್ನ ಶಾಸನ ಕಾಲದಲ್ಲಿ ಯಾವುದೇ ಪಾಪಾಚರಣೆಯನ್ನು ನಾನು ಮಾಡಲಿಲ್ಲ. ಎಂದು ಆಣೆಯಿಟ್ಟು ಹೇಳಬಲ್ಲೆ. ನನ್ನ ರಾಜ್ಯದಲ್ಲಿ ಎಲ್ಲ ಪ್ರಜ್ಞರೂ ಧರ್ಮ ಪರಾಯಣರು, ವಿದ್ಯಾವ್ಯಸನಿಗಳು, ಸನ್ಮಾರ್ಗಗಾಮಿಗಳು. ಈ ಪ್ರಜೆಗಳ ಕ್ಷೇಮ, ಅಭ್ಯುಧಯಗಳಿಗಾಗಿಯೇ ನಾನು ದೇವತಾರಾಧನೆಯನ್ನು ಕಡಿಮೆ ಮಾಡಿದೆ. ಜನತಾರೂಪಿ ಜನಾರ್ದನನ ಸೇವೆಗೈದೆ. ಈಗ ನನಗೆ ಈ ರಾಜ್ಯಶಾಸನವು ಸಾಕಾಗಿದೆ. ಈ ಸಂಸಾರವೆಲ್ಲವೂ ಅಸಾರ ಎನಿಸಿದೆ. ಈ ಪ್ರಪಂಚದಲ್ಲಿ ವಿಷಯ ಸುಖವನ್ನು ಭೋಗಿಸುವುದು ಎಂದರೆ ವಾಂತಿ ಮಾಡಿಕೊಂಡ ಅನ್ನವನ್ನು ಮತ್ತೆ ಉಂಡಂತೆ ಸರಿ. ಇದೊಂದು ಬೀಸಿದ್ದನ್ನೇ ಬೀಸುವ, ಜಗಿದಿದ್ದನ್ನೇ ಜಗಿಯುವ ವ್ಯರ್ಥ ಕೆಲಸ. ಇದನ್ನು ಏಕೆ ಮಾಡಬೇಕು. ದಯವಿಟ್ಟು ತಾವು ನನಗೆ ಉಪದೇಶ ನೀಡಿರಿ. ನೀವು ಮಹಾಜ್ಞಾನಿಗಳು. ತಾವು ಹೇಳಿದಂತೆ ನಾನು ಕೇಳುತ್ತೇನೆ. ಗಣೇಶನು ನನಗೆ ಮೊದಲೇ ಸೂಚನೆ ನೀಡಿದ್ದಾನೆ. ಹದಿನೆಂಟನೆಯ ದಿನ ನಿನ್ನ ಸ್ವರೂಪೋದ್ಧಾರಕ ಗುರುಗಳು ಆಗಮಿಸುವರು ಎಂದು. ಅದರಂತೆ ತಾವು ಆಗಮಿಸಿದ್ದೀರಿ.

ನೀವೇ ನನ್ನ ಸ್ವರೂಪೋದ್ಧಾರಕ ಗುರುಗಳು ನನಗೆ ಮತ್ತೊಮ್ಮೆ ಗರ್ಭವಾಸ ದುಃಖವು ಬಾರದಂತೆ ಈ ಜನನ ಮರಣ ಜಾಲದಿಂದ ನಾನು ಪಾರಾಗಿ ಹೋಗುವಂತೆ. ನನ್ನ ಕರ್ಮಬಂಧನ ನಾಶವಾಗುವ ಉಪಾಯವನ್ನು ಹೇಳಿರಿ. ನನ್ನ ಉದ್ಧಾರವನ್ನು ಮಾಡಿರಿ.

**ಸ್ಕಂದ:-** ಕಾಶೀಪಟ್ಟಣದ ದೊರೆಯಾದ ದಿವೋದಾಸನ ಈ ಮಾತುಗಳನ್ನು ಕೇಳಿ, ಪುಣ್ಯಕೀರ್ತಿ ಎಂಬ ಧರ್ಮೋಪದೇಶಕ ಗುರುವಿನ ವೇಷದಿಂದ ಬಂದ ಮಹಾವಿಷ್ಣು ಹೀಗೆನುಡಿದ.

**ಪುಣ್ಯಕೀರ್ತಿ:-** ಪಂಡಿತೋತ್ತಮನಾದ ರಾಜಶೇಖರ, ನಾನು ಉಪದೇಶ ಮಾಡಬೇಕಾದುದನ್ನೆಲ್ಲ ನೀನೇ ಈಗ ಹೇಳಿಬಿಟ್ಟಿರುವೆ. ನೀನು ಪರಮಜ್ಞಾನಿಯೂ, ಕೃತಾರ್ಥನೂ, ಕೃತಕೃತನೂ ಆಗಿರುವೆ. ನನಗೆ ಗೌರವ ಕೊಡಲಿಕ್ಕಾಗಿ ಈ ಪ್ರಶ್ನೆಯನ್ನು ಕೇಳುತ್ತಲಿರುವೆ. ನೀನು ನಿನ್ನ ಉತ್ತಮವಾದ ತಪಸ್ಸಿನಿಂದ ಇಂದ್ರಿಯಗಳ ಮಾಲಿನ್ಯವನ್ನು ಎಂದೋ ತೊಡೆದು ಹಾಕಿರುವೆ. ನೀನು ನುಡಿದ ಮಾತೆಲ್ಲವೂ ನಿಜ. ನಿನ್ನಂಥ ರಾಜನು ಈ ಭೂಮಂಡಲದಲ್ಲಿ ಹಿಂದೆ ಆಗಿಲ್ಲ. ಈಗ ಇರುವುದಿಲ್ಲ. ಮುಂದೆ ಆಗುವುದಿಲ್ಲ. ಇಷ್ಟು ದಿನಗಳವರೆಗೆ ಧರ್ಮಮಾರ್ಗದಲ್ಲಿಯೇ ಶಾಸನಗೈದು ಕೃತಾರ್ಥನಾದ ನಿನ್ನಲ್ಲಿ ಈಗ ಮುಮುಕ್ಷಾ ಎಂದರೆ ಮೋಕ್ಷದ ಅಪೇಕ್ಷೆಯು ಜಾಗೃತವಾದದ್ದು ಯೋಗ್ಯವೇ ಆಗಿದೆ. ನಿನ್ನ ರಾಜ್ಯದಲ್ಲಿ ಈ ವರೆಗೂ ಅಧರ್ಮದ ಪ್ರವೇಶವೇ ಆಗಿಲ್ಲ. ಹಗಲಿರುಳೂ ಪ್ರಜಾಪಾಲನೆಯಲ್ಲಿಯೇ ಆಸಕ್ತನಾಗಿ ಎಲ್ಲ ಪ್ರಜರಿಂದಲೂ ಧರ್ಮಾನುಷ್ಠಾನವನ್ನು ತಪ್ಪದೇ ಮಾಡಿಸುತ್ತಲಿರುವ ನಿನ್ನ ಧರ್ಮಚಕ್ರಶಾಸನದಿಂದ ಎಲ್ಲ ದೇವತೆಗಳೂ ತೃಪ್ತರಾಗಿದ್ದಾರೆ. ಆದರೆ ನನಗೆ ನಿನ್ನಲ್ಲಿ ಕಂಡುಬರುವ ಒಂದೇ ಒಂದು ದೋಷವೆಂದರೆ ನೀನು ಭಗವಾನ್ ವಿಶ್ವನಾಥನನ್ನು ಪುಣ್ಯಕ್ಷೇತ್ರವಾದ ಈ ಕಾಶಿಯಿಂದ ದೂರ ಮಾಡಿರುವೆ. ಈ ಪಾಪದ ಶಾಂತಿಗಾಗಿ ನಾನು ನಿನಗೆ ಒಂದು ಉತ್ತಮ ಉಪಾಯವನ್ನು ಹೇಳುತ್ತೇನೆ ಕೇಳು. ಯಾರು ಶಂಕರನಲ್ಲಿ ಭಕ್ತಿಯನ್ನು ಮಾಡುತ್ತ ಕಾಶೀಕ್ಷೇತ್ರದಲ್ಲಿ ಭಕ್ತಿಯಿಂದ ಒಂದಾದರೂ ಶಿವಲಿಂಗವನ್ನು ಸ್ಥಾಪನೆ ಮಾಡುವನೋ ಅವನಿಗೆ ಸಂಪೂರ್ಣ ಜಗತ್ತನ್ನೇ ಸ್ಥಾಪನೆ ಮಾಡಿದ ಪುಣ್ಯವು ಬರುವುದು. ಆದರಿಂದ ನೀನು ಸರ್ವಪ್ರಯತ್ನದಿಂದ ಈ ವಾರಣಾಸಿ ಕ್ಷೇತ್ರದಲ್ಲಿ ಒಂದು ದಿವ್ಯವಾದ ಶಿವಲಿಂಗವನ್ನು ಪ್ರತಿಷ್ಠೆಮಾಡು. ಇದರಿಂದ ನೀನು ಕೃತಾರ್ಥನಾಗುವೆ. ದಿವೋದಾಸ! ಹುಟ್ಟಿದಾಗಿನಿಂದ ಈ ವರೆಗೆ ಧರ್ಮಕಾರ್ಯ ಹಾಗೂ ಧರ್ಮಶಾಸನಗಳನ್ನು ಮಾಡುತ್ತಲೇ ಬಂದು ರಾಜರ್ಷಿ ಎನಿಸಿದ ನೀನು ಅವಿಮುಕ್ತ ಕ್ಷೇತ್ರವಾದ ಈ ಕಾಶಿಯಲ್ಲಿ ಶಿವಲಿಂಗ ಒಂದನ್ನು ಸ್ಥಾಪನೆ ಮಾಡಿದರೆ ನಿನ್ನ ಸಮಾನವಾದ ಪುಣ್ಯವಂತರು ಯಾರು? ನಿನ್ನ ಸಹವಾಸ ಹಾಗೂ ನಿನ್ನೊಡನೆ ಸಂಭಾಷಣೆ ಮಾಡಿದ ನಾವೂ ಕೂಡ ಧನ್ಯರಾಗುವೆವು. ಈ ಮನುಷ್ಯಲೋಕದಲ್ಲಿ ನಿನ್ನ ನಾಮೋಚ್ಚಾರಣ ಮಾಡಿದವರೂ ಪುಣ್ಯಪುರುಷರು ಎನಿಸುವರು. ನೀನು ಭೂಕೈಲಾಸ ಎನಿಸಿದ ಈ ಕಾಶೀ ಕ್ಷೇತ್ರದಲ್ಲಿ ಪರಮೇಶ್ವರನ ಲಿಂಗವನ್ನು ವಿಧಿಪೂರ್ವಕವಾಗಿ ಸ್ಥಾಪನೆ ಮಾಡಿದಂದಿನಿಂದ ಏಳನೆಯ ದಿನ ನಿನ್ನನ್ನು ಕರೆಯಲು ಒಂದು ದಿವ್ಯ ವಿಮಾನವು ಬರುವುದು. ಅದು ನಿನ್ನನ್ನು ಕರೆದುಕೊಂಡು ಪರಮದುರ್ಲಭವಾದ ಶಿವಲೋಕಕ್ಕೆ ಕರೆದೊಯ್ಯುವುದು. ಇದು ನೀನು ಈ ವರೆಗೆ ಮಾಡಿದ ಕಾಶೀಪುರೀ ಸೇವೆಯ ಫಲ.

ವಿಷ್ಣುರೂಪಿಯಾದ ಆ ಪುಣ್ಯಕೀರ್ತಿಯ ಈ ಮಾತುಗಳನ್ನು ಕೇಳಿ ಕಾಶಿಯ ದೊರೆಯಾದ ದಿವೋದಾಸನಿಗೆ ಬಹಳ ಹಿಗ್ಗಾಯಿತು. ಇಂಥ ಗುರುವಿನ ಉಪದೇಶದಿಂದ ನನ್ನ ಜನ್ಮವೇ ಧನ್ಯವಾಯಿತು ಎಂದು ತಿಳಿದು ಅವನು ಪುಣ್ಯಕೀರ್ತಿಗೆ ಮತ್ತೆ ಮತ್ತೆ ನಮಸ್ಕಾರ ಮಾಡಿದ. ಪ್ರದಕ್ಷಿಣೆ ಹಾಕಿದ. ಕೈ ಜೋಡಿಸಿ ನುಡಿದ- ''ಪೂಜ್ಯರೇ, ನೀವು

ನನ್ನನ್ನು ಸಂಸಾರದಿಂದ ಪಾರು ಮಾಡಿದಿರಿ. ನನ್ನ ಜನ್ಮವನ್ನು ಉದ್ಧಾರಮಾಡಿದಿರಿ.'' ಹೀಗೆ ಆ ಕಾಶೀನರೇಶನಿಂದ ಗೌರವಾದರ ಸತ್ಕಾರಗಳನ್ನು ಪಡೆದು ಮಹಾವಿಷ್ಣು ಅಲ್ಲಿಂದ ಹೊರಟು ಕಾಶೀಪಟ್ಟಣವನ್ನೆಲ್ಲ ನೋಡಿಕೊಂಡ ಪಂಚಗಂಗಾ ಎಂದು ಹೆಸರಾದ ಪಂಚನದ ಕುಂಡ ಎಂಬ ತೀರ್ಥಕ್ಕೆ ಬಂದು ಅಲ್ಲಿ ಸ್ನಾನಮಾಡಿ ಅಲ್ಲಿಯೇ ವಸತಿ ಮಾಡಿದ. ಮತ್ತು ಪರಮೇಶ್ವರನಿಗೆ ಇಲ್ಲಿ ನಡೆದ ದಿವೋದಾಸನ ಸುದ್ದಿ ಸಮಾಚಾರವನ್ನು ತಿಳಿಸಿಬರಲು ಗರುಡನನ್ನು ಮಂದರಾಚಲಕ್ಕೆ ಕಳಿಸಿಕೊಟ್ಟ. ತಾನು ಮಹೇಶ್ವರನ ಮಾರ್ಗನಿರೀಕ್ಷಣೆ ಮಾಡುತ್ತ ಕಾಶಿಯಲ್ಲಿಯೇ ನಿಂತುಕೊಂಡನು.

ಇತ್ತ ದಿವೋದಾಸ ಮಹಾರಾಜನು ಪುಣ್ಯಕೀರ್ತಿಯ ಉಪದೇಶದ ಹಿರಿಮೆಯನ್ನು, ಅವನ ಅನುಗ್ರಹದ ಮಹಿಮೆಯನ್ನು ಬಹುದಿನಗಳಿಂದ ಕೊಂಡಾಡುತ್ತಲೇ ಇರುವ ತನ್ನ ಎಲ್ಲ ಪ್ರಜೆಗಳನ್ನು, ಮಂತ್ರಿಮಂಡಲೇಶ್ವರರನ್ನು, ಸೇನಾಪತಿ-ಸ್ನೇಹಿತರನ್ನು ಕರೆಕಳಿಸಿದ. ಹಾಗೂ ಜ್ಯೇಷ್ಠಪುತ್ರ ಸಮಯರಂಜಯನೇ ಮೊದಲಾದ ಐದು ನೂರು ಮಕ್ಕಳನ್ನೂ, ಪುರೋಹಿತ, ಋತ್ವಿಜ, ಜ್ಯೋತಿಷಿ, ಸಾಮಂತ, ಚಿಕಿತ್ಸಕ, ಹಾಗೂ ಬೇರೆ ಬೇರೆ ಕಾರ್ಯಗಳಿಗಾಗಿ ಬಂದ ದೇಶವಿದೇಶದ ಪ್ರಮುಖ ಜನರನ್ನೂ ತನ್ನ ಆಸ್ಥಾನಕ್ಕೆ ಆಹ್ವಾನಿಸಿದ. ಅವರೆಲ್ಲರ ಎದುರು ಕೈ ಜೋಡಿಸಿ ಪರಮಜ್ಞಾನಿಯಾದ ಪುಣ್ಯಕೀರ್ತಿ ಗುರುವರೇಣ್ಯರು ಹೇಳಿದ ಮಾತನ್ನೆಲ್ಲ ನಿವೇದಿಸಿದ. ಮತ್ತು ಅವರ ಆಜ್ಞೆ ನನಗೆ ಶಿರೋಮಾನ್ಯ ಎಂದು ತಿಳಿಸಿ ''ಇನ್ನು ನಾನು ಈ ಲೋಕದಲ್ಲಿ ಇರುವುದು ಏಳುದಿನ ಮಾತ್ರ. ಎಂದು ಖಚಿತವಾಗಿ ನುಡಿದುಬಿಟ್ಟನು. ಇದನ್ನು ಕೇಳಿ ಪ್ರಜಾಪರಿವಾರದವರೆಲ್ಲರಿಗೂ ಬಹಳ ಖೇದ ಎನಿಸಿತು. ಅದರಂತೆ ಅತ್ಯಾಶ್ಚರ್ಯವೂ ಆಯಿತು. ಅನಂತರ ಮಹಾರಾಜನು ತನ್ನ ಹಿರಿಯ ಮಗನಾದ ಸಮರಂಜಯನನ್ನು ಒಳಗೆ ಕರೆದೊಯ್ದು ಅವನಿಗೆ ಎಲ್ಲವನ್ನೂ ತಿಳಿಸಿ ಹೇಳಿದ. ಅದರಂತೆ ಮಂತ್ರಿಗಳನ್ನು ಕರೆದು ಯುವರಾಜ ಸಮರಂಜಯನಿಗೆ ಸಾಮ್ರಾಜ್ಯಪಟ್ಟದಲ್ಲಿ ಅಭಿಷೇಕಗೈದ. ತನ್ನ ಸಾಮ್ರಾಜ್ಯದಲ್ಲಿರುವ ಎಲ್ಲ ಬಡಬಗ್ಗರಿಗೂ ಬಲ್ಲಿದ ಬ್ರಾಹ್ಮಣರಿಗೂ, ದೀನದರಿದ್ರರಿಗೂ ಯಥೇಚ್ಛವಾಗಿ ದಾನದಕ್ಷಿಣೆಗಳನ್ನಿತ್ತ. ಎಲ್ಲರನ್ನು ಸಂತೋಷಪಡಿಸಿ, ಗಂಗಾನದಿಯ ಪಶ್ಚಿಮತೀರದಲ್ಲಿ ಒಂದು ಭವ್ಯದಿವ್ಯವಾದ ವಿಶಾಲ ಶಿವಮಂದಿರವನ್ನು ನಿರ್ಮಾಣ ಮಾಡಿಸಿದ. ತಾನು ಸಂಗ್ರಾಮಗಳಲ್ಲಿ ವೈರಿರಾಜರುಗಳನ್ನೆಲ್ಲ ಗೆದ್ದು ವಿಜಯಶ್ರೀಯೊಂದಿಗೆ ಸಂಗ್ರಹಿಸಿಗೊಂಡು ಬಂದ ಸರ್ವಸಂಪತ್ತನ್ನೂ ವೆಚ್ಚಮಾಡಿ ಅತ್ಯದ್ಭುತವಾದ ಮಹಾದೇವನ ಗುಡಿಯನ್ನು ಶೃಂಗಾರಗೊಳಿಸಿದ. ರಾಜನು ಗಳಿಸಿದ ರಾಜ್ಯೈಶ್ವರ್ಯವೆಲ್ಲವೂ ಈ ಶಿವಮಂದಿರಕ್ಕಾಗಿ ಉಪಯೋಗಿಸಲ್ಪಟ್ಟದ್ದರಿಂದ ಆ ಮಹಾದೇವ ಮಂದಿರಕ್ಕೆಲ್ಲ ಭೂಪಾಲಶ್ರೀ ಎಂದೇ ಹೆಸರು ಆಯಿತು. ಆ ಮಹಾಮಂದಿರದಲ್ಲಿ ದಿವೋದಾಸ ಮಹಾರಾಜನು ದಿವೋದಾಸೇಶ್ವರಲಿಂಗವನ್ನು ಸ್ಥಾಪನೆ ಮಾಡಿ ಕೃತಾರ್ಥನಾದ. ಅತ್ಯಂತ ಭಕ್ತಿಯಿಂದ ಎಲ್ಲ ಮುನಿಮಹರ್ಷಿ ಪುರೋಹಿತ ಪಂಡಿತರಿಂದ ಕೂಡಿಕೊಂಡು ವಿಧ್ಯುಕ್ತವಾಗಿ ಪ್ರತಿಷ್ಠಾಪಿಸಲ್ಪಟ್ಟ ಆ ಶಿವಲಿಂಗವನ್ನು ಏಳು ದಿನಗಳವರೆಗೆ ಹಗಲಿರುಳೂ ಹಸಿವೆ, ನೀರಡಿಕೆ ಮರೆತು ಆರಾಧನೆ ಮಾಡಿದ ಆ ಭೂಪ. ಹೀಗೆ ಕಾಶೀಶ್ವರನು ಅಹರ್ನಿಶ ಶಿವನ ಧ್ಯಾನ, ಪೂಜೆ, ವಂದನೆ, ಸ್ತೋತ್ರ ಪಠಣಗಳನ್ನು ಮಾಡುತ್ತಲೇ ಇರುವಾಗ ಏಳನೆಯ ದಿನ ಆಕಾಶದಿಂದ ಒಂದು ದಿವ್ಯ ವಿಮಾನವು ಆ ದಿವ್ಯ ಕ್ಷೇತ್ರದಲ್ಲಿ ಇಳಿಯಿತು. ಕೈಯಲ್ಲಿ ತ್ರಿಶೂಲ ಹಾಗೂ ಡಮರುಗಳನ್ನು ಧಾರಣೆಮಾಡಿದ

ಶಿವಪಾರ್ಷದರು ಆ ವಿಮಾನದಿಂದ ಇಳಿದುಬಂದು ದಿವೋದಾಸೇಶ್ವರ ಲಿಂಗದ ಪೂಜೆ, ಪರ್ಯುಪಾಸನೆ ಪರಿಚರ್ಯೆಗಳಲ್ಲಿಯೇ ತಲ್ಲೀನನಾದ ಆ ಮಹಾರಾಜನಿಗೆ ತಾವು ತಂದ ದಿವ್ಯ ಭವ್ಯಮಾಲೆಯನ್ನು ಹಾಕಿ ದಿವ್ಯಗಂಧವನ್ನು ಲೇಪಿಸಿ, ದಿವ್ಯ ವಸ್ತ್ರ ಉಡಿಸಿ, ದಿವ್ಯ ಆಭರಣಗಳನ್ನು ತೊಡಿಸಿ ಅಲಂಕಾರಗೈದು ತಮ್ಮ ದಿವ್ಯ ವಿಮಾನದಲ್ಲಿ ಕೂಡಿಸಿಕೊಂಡು ಪರಮಮಂಗಳಕರವಾದ ಶಿವಲೋಕಕ್ಕೆ ಕರೆದುಕೊಂಡು ಹೋದರು. ಇದನ್ನೆಲ್ಲ ತಮ್ಮ ಕಣ್ಣನಿಂದಲೇ ನೋಡುತ್ತಲಿರುವ ಮಂತ್ರಿ, ಸೇನಾಪತಿ, ಪ್ರಜಾಪರಿವಾರದವರೂ, ರಾಜಪುತ್ರರೂ, ರಾಣೀವಾಸದವರೂ, ಕಾಶಿಯನಾಗರಿಕರೂ, ಅತ್ಯಂತ ಆಶ್ಚರ್ಯವಶರಾಗಿ ಮಹಾದೇವರ ಹಾಗೂ ದಿವೋದಾಸನ ಹೆಸರಿನಿಂದ ಜೈಜೈಕಾರವನ್ನು ಮಾಡಿದರು. ಮತ್ತು ಈ ದೃಶ್ಯವನ್ನು ಕಣ್ಣಾರೆ ಕಂಡ ತಾವೇ ಧನ್ಯ ಎಂದು ಕೊಂಡರು.

## ಧರ್ಮನದ, ಪಂಚನದ, ಬಿಂದುಮಾಧವತೀರ್ಥಗಳ ಮಹಿಮೆ

**ಅಗಸ್ತ್ಯ:-** ಗಿರಿಜಾಪುತ್ರ, ಕಾಶಿಯು ಪರಮಪಾವನ. ಅದರಲ್ಲಿಯೂ ಪಂಚ ಗಂಗಾ ಎಂಬ ಪಂಚನದ ತೀರ್ಥವು ಅತ್ಯುತ್ತಮ ಎಂದು ತಿಳಿದು ಭಗವಾನ್ ವಿಷ್ಣು ಅಲ್ಲಿಯೇ ನೆಲೆಸಿದ ಎಂದು ನೀವು ಅಪ್ಪಣೆ ಕೊಡಿಸಿದಿರಿ. ಎಲ್ಲ ತೀರ್ಥಗಳಿಗಿಂತ ಪಂಚನದ ತೀರ್ಥಕ್ಕೆ ಇಂಥ ಮಹತ್ವ ಬರಲು ಏನು ಕಾರಣ? ಸರ್ವಸ್ವಾಮಿಯೂ ಸರ್ವಾಂತರ್ಯಾಮಿಯೂ ಜಗತ್ತಿನ ಸೃಷ್ಟಿ ಸ್ಥಿತಿಸಂಹಾರಗಳಿಗೆಲ್ಲ ಏಕಮಾತ್ರ ಕಾರಣೀಭೂತನೂ ಆದ ಮಹಾವಿಷ್ಣು ಕಾಶಿಯ ಉಳಿದ ತೀರ್ಥಗಳನ್ನೆಲ್ಲ ಬಿಟ್ಟು ಅಲ್ಲಿಯೇ ನೆಲೆಸಲು ಕಾರಣವೇನು?

**ಸ್ಕಂದ:-** ಹಿಂದೆ ಒಂದಾನೊಂದು ಕಾಲದಲ್ಲಿ ಸೂರ್ಯನು ಕಾಶೀಕ್ಷೇತ್ರದಲ್ಲಿ ಆಚರಿಸಿದ ಉಗ್ರತಪಸ್ಸನ್ನು. ತಪೋಲೀನನಾದ ಮಯೂಖಾದಿತ್ಯ ಎಂಬ ಹೆಸರಿನಿಂದ ಆ ತಪನ ದೇವನ ದೇಹದಿಂದ ಬೆವರು ಹರಿಯತೊಡಗಿತು ತಪಃತಾಪದಿಂದ. ಸೂರ್ಯನ ದೇಹದಿಂದ ಹೊರಟ ಆ ಸ್ವೇದಜಲವು ಮಡುಗಟ್ಟಿ ಕಿರಣಾ ಎಂಬ ನದೀರೂಪದಿಂದ ಹರಿಯತೊಡಗಿತು. ಆ ಕಿರಣಾನದಿಯು ಧೂತ ಪಾಪಾನದಿಯೊಂದಿಗೆ ಸಂಗಮಿಸಿತು. ಮುಂದೆ ಭಗೀರಥನು ಬೆನ್ನುಹತ್ತಿ ಭೂತಲಕ್ಕೆ ಬಂದ ಭಾಗೀರಥಿಯು ಕಾಶಿಗೆ ಆಗಮಿಸಿದಾಗ ಅದರೊಡನೆ ಸರಸ್ವತಿ ಯಮುನೆಯರು ಕೂಡಿ ತ್ರಿವೇಣಿಯಾಗಿಯೇ ಹರಿದು ಬಂದಿದ್ದಳು ಆ ಭಾಗೀರಥಿ. ಆ ಮೂರು ನದಿಗಳ ಜೊತೆಗೆ ಇವೆರಡೂ ನದಿಗಳು ಸೇರಿ ಈ ತೀರ್ಥದಲ್ಲಿ ಮಿಲಿತವಾದದ್ದರಿಂದ ಇದಕ್ಕೆ ಪಂಚಗಂಗಾ ಅಥವಾ ಪಂಚನದ ತೀರ್ಥ ಎಂದು ಹೆಸರಾಯಿತು. ಕಿರಣಾ, ಧೂತಪಾಪಾ, ಗಂಗಾ, ಯಮುನಾ, ಸರಸ್ವತಿ ಈ ಐದು ನದಿಗಳು ಸಂಗಮಿಸಿದ ಈ ಪಂಚನದ ಎಂಬ ಹೆಸರಿನ ಪಂಚಗಂಗಾ ತೀರ್ಥದಲ್ಲಿ ಸ್ನಾನಮಾಡಿದ ಮಾನವನು ಪುನಃ ಪಂಚಭೌತಿಕ ಶರೀರವನ್ನು ಗ್ರಹಣಮಾಡುವುದಿಲ್ಲ.

ಮಹಾವಿಷ್ಣುವು ಕಾಶಿಯ ಸಮಾಚಾರ ಹಾಗೂ ದಿವೋದಾಸನ ನಿವೃತ್ತಿ ಮುಂತಾದ ಸಂಗತಿಯನ್ನೆಲ್ಲ ತಿಳಿಸಲಿಕ್ಕಾಗಿ ಗರುಡನನ್ನು ಕೈಲಾಸಕ್ಕೆ ಕಳಿಸಿ ತಾನು ಪಂಚನದ ತೀರ್ಥದ ತಡಿಯಲ್ಲಿ ನಿಂತುಕೊಂಡಿದ್ದನಷ್ಟೆ? ಆ ಸಂದರ್ಭದಲ್ಲಿ ಓರ್ವ ತಪಸ್ವಿಯು ಆ ಪಂಚನದ ತೀರ್ಥದ ದಂಡೆಯ ಮೇಲೆ ತಪೋನುಷ್ಠಾನವನ್ನು ಕೈಗೊಂಡಿದ್ದ. ಆ ತೀರ್ಥದ ತೀರದಲ್ಲಿ ಸಾಕ್ಷಾತ್ ಪರಬ್ರಹ್ಮರೂಪಿಯಾದ ಶ್ರೀಮಾನ್ ನಾರಾಯಣನೇ ಬಂದು ನೆಲೆಸಿದ್ದನ್ನು ಕಂಡು ಆ ಮಹಾಮುನಿಗೆ ಪರಮಹರ್ಷ ಆಯಿತು. ತನ್ನ ತಪಃ ಸಿದ್ಧಿಯೇ ವಿಷ್ಣುರೂಪದಿಂದ ಬಂದಿದೆ

ಎಂದು ಭಾವಿದ. ಧಾವಿಸಿಬಂದು ಭಗವಂತನಿಗೆ ನೆಲೆದಮೇಲೆ ಅಡ್ಡಬಿದ್ದು ಸಾಷ್ಟಾಂಗ ವಂದನೆಗೈದ. ಶ್ರೀಹರಿಯ ಪರಮ ಸುಂದರವಾದ ದಿವ್ಯವಿಗ್ರಹವನ್ನು ಸಾಕ್ಷಾತ್ತಾಗಿ ಕಂಡು, ತೃಪ್ತಿಗೊಂಡು ಕೈಜೋಡಿಸಿ ಪ್ರಾರ್ಥನೆ ಮಾಡಿದ. ಆ ಮುನಿಯ ಹೆಸರು ಅಗ್ನಿಬಿಂದು.

**ಅಗ್ನಿಬಿಂದು:-** ಕಮಲನೇತ್ರನಾದ ನಾರಾಯಣ, ಸಹಸ್ರಶೀರ್ಷನೂ, ಸಹಸ್ರ ಪಾದನೂ, ಸಹಸನೇತ್ರನೂ ಆದ ನಿನಗೆ ನನ್ನ ನಮಸ್ಕಾರ. ಸರ್ವಾಂತರ್ಯಾಮಿಗೆ ವಂದನೆ. ಇಂದ್ರಾದಿ ಸುರವೃಂದದಿಂದ ವಂದನೀಯವಾದ ಪಾದಾರವಿಂದ ದ್ವಂದ್ವವುಳ್ಳ ಮುಕುಂದ ನಾಮಕನಾದ ಗೋವಿಂದನಿಗೆ ಮತ್ತೆ ಮತ್ತೆ ವಂದನೆ ಬೃಹಸ್ಪತಿಯ ವಾಣಿಯೂ ನಿನ್ನನ್ನು ಬಣ್ಣಿಸಲು ಅಸಮರ್ಥವಾದಾಗ ನನ್ನಂತಹ ಪಾಮರರ ಪಾಡೇನು? ವಾಕ್‌ಮನೋ ಅತೀತನಾದ ನಿನ್ನನ್ನು ಸ್ತೋತ್ರ ಮಾಡಲು ಜಗತ್ತಿನಲ್ಲಿ ಯಾರು ಸಮರ್ಥರು? ಸನಕಾದಿ ಮಹರ್ಷಿಗಳು ತಮ್ಮ ಹೃದಯದಲ್ಲಿ ನಿರಂತರವೂ ನಿನ್ನ ಧ್ಯಾನ ಮಾಡುತ್ತಲಿದ್ದರೂ, ನಿನ್ನನ್ನು ಪೂರ್ಣರೂಪದಿಂದ ಅರಿಯಲು ಸಮರ್ಥರಾಗಿಲ್ಲ. ನಿನ್ನ ನಾಮಸ್ಮರಣ ಮಾತ್ರದಿಂದಲೇ ಪಾಪರಾಶಿ ಎಲ್ಲವೂ ನಷ್ಟವಾಗಿ ಹೋಗುವುದು.

**ಏಕೈಕಮೇವ ತವ ನಾಮ ಹರೇನ್ಮುರಾರೇ ।**
**ಜನ್ಮಾರ್ಜಿತಾಘಮಘನಾಂಚ ಮಹಾಪದಾಢ್ಯಂ ॥**
**ತ್‌ದ್ಯಾದ ಫಲಂ ಚ ಮಹಿತಂ ಮಹತೋ ಮಖಸ್ಯ ।**
**ಜಪ್ತಂ ಮುಕುಂದ ಮಧುಸೂದನ ಮಾಧವೇತಿ ॥**

ಮುಕುಂದ, ಮಧುಸೂದನ, ಮಾಧವ ಎಂದು ಮುಂತಾಗಿ ಮುರಾರಿಯೇ ನಿನ್ನ ಒಂದೊಂದು ನಾಮವನ್ನೂ ಉಚ್ಚರಿಸಿ ಜಪಮಾಡಿದರೆ ಪಾಪಿಗಳ ಜನ್ಮಜನ್ಮಾಂತರಗಳಲ್ಲಿ ಮಾಡಿದ ಮಹಾಪಾಪರಾಶಿಯೆಲ್ಲವೂ ನಷ್ಟವಾಗಿ ಹೋಗುವವು. ಮತ್ತು ನಿನ್ನ ಒಂದೊಂದು ನಾಮೋಚ್ಚಾರಣೆಯೂ ದೊಡ್ಡ ದೊಡ್ಡ ಯಜ್ಞಮಾಡಿದ ಪುಣ್ಯವನ್ನೂ ಫಲವನ್ನೂ ನೀಡುವುದು. ಇಷ್ಟು ಅದ್ಭುತವಾಗಿದೆ ನಿನ್ನ ನಾಮೋಚ್ಚಾರಣೆಯ ಮಹಿಮೆ.

**ನಾರಾಯಣೇತಿ ನರಕಾರ್ಣವ ತಾರಣೇತಿ ।**
**ದಾಮೋದರೇತಿ ಮಧುಹೇತಿ ಚತುರ್ಭುಜೇತಿ ॥**
**ವಿಶ್ವಂಭರೇತಿ ವಿರಜೇತಿ ಜನಾರ್ದನೇತಿ ।**
**ಕ್ವಾಸ್ತಿಹ ಜನ್ಮಜಪತಾಂ ಕ್ವಕೃತಾಂತ ಭೀತಿ ॥**

ನಾರಾಯಣ, ನರಕ ಎಂಬ ಸಮುದ್ರದಿಂದ ಪಾರುಮಾಡುವ ದಾಮೋದರ, ಮಧು ಎಂಬ ದೈತ್ಯನನ್ನು ಸಂಹರಿಸಿದ ನಾಲ್ಕು ತೋಳಿನ ವಿಶ್ವಂಭರ, ದೋಷರಹಿತನಾದ ಜನಾರ್ಧನ ಎಂದು ಮುಂತಾಗಿ ಶ್ರೀಹರಿಯ ನಾಮಗಳನ್ನು ಭಕ್ತಿಯಿಂದ ಜಪಿಸುವವರಿಗೆ ಪುನರ್ಜನ್ಮ ಎಲ್ಲಿದೆ ಯಮನಭೀತಿಯಾದರೂ ಎಲ್ಲಿದೆ? ಶ್ರೀವತ್ಸ, ಚಿನ್ನದಿಂದ ಸುಶೋಭಿತನಾದ ಶ್ರೀಹರೇ, ಅಚ್ಯುತ, ಕೈಟಭಾರೇ, ಗೋವಿಂದ, ಗರುಡವಾಹನ, ಕೇಶವ, ಚಕ್ರಪಾಣಿ ಲಕ್ಷ್ಮೀಪತಿ, ನಾರಾಯಣ, ಶಾರಂಗಪಾಣೇ, ನಿನಗೆ ನಮೋನಮಃ ನಮೋ ನಮಃ

ಹೀಗೆ ಭಕ್ತಿಭಾವಭರಿತನಾಗಿ ತನ್ನನ್ನು ಸ್ತುತಿಸುತ್ತಲಿರುವ ಆ ಅಗ್ನಿಬಿಂದು ಮುನಿಯ ಸ್ತೋತ್ರಾಕ್ಷರಗಳನ್ನು ಕೇಳಿ ಪರಮಪರಿತುಷ್ಟನಾದ ಆ ಅಧೋಕ್ಷಜ. ಪ್ರಸನ್ನನಾಗಿ ಹೇಳಿದ- ''ಮುನಿಯೇ, ನಾನು ನಿನ್ನ ತಪಸ್ಸಿನಿಂದ ತುಷ್ಟ. ನಿನಗೆ ಇಷ್ಟವಾದ ವರವನ್ನು ಬೇಡು.''

**ಅಗ್ನಿಬಿಂದು:-** ಭಗವನ್, ನೀನು ನನ್ನ ಮೇಲೆ ಸಂತುಷ್ಟನಾಗಿದ್ದರೆ ನಾನು ತಪಸ್ಸು ಮಾಡಿದ ಈ ಪಂಚನದ ತೀರ್ಥದಲ್ಲಿ ನೀನು ನಿತ್ಯವೂ ಸನ್ನಿಹಿತನಾಗಿರು ಮತ್ತು ನಿನ್ನ ಪದಕಂಜಗಳಲ್ಲಿ ನನಗೆ ನಿರಂತರ ಭಕ್ತಿಯನ್ನು ಕೊಡು ಮತ್ತು ನೀನು ಈ ಪಂಚನದ ತೀರ್ಥದಲ್ಲಿ ನನ್ನ ಹೆಸರಿನಿಂದಲೇ ಇದ್ದು, ಇಲ್ಲಿ ಸ್ನಾನಮಾಡಿದವರಿಗೆ ಎಲ್ಲಿಯೇ ಮರಣ ಹೊಂದಿದರೂ ಮುಕ್ತಿಯನ್ನು ನೀಡು.

**ವಿಷ್ಣು:-** ಭಕ್ತಾಗ್ರೇಸರ, ನಿನ್ನ ಅಪೇಕ್ಷೆಯಂತೆ ಆಗಲಿ. ನಿನ್ನ ಅಗ್ನಿಬಿಂದು ಎಂಬ ಹೆಸರಿನ ಮುಂದಿನ ಬಿಂದು ಎಂಬ ಎರಡು ಅಕ್ಷರಗಳನ್ನು ಲಕ್ಷ್ಮೀ ಶಬ್ದ ಘಟಿತವಾದ ಮಾಧವ ಎಂಬ ಹೆಸರಿನೊಡನೆ ಸೇರಿಸಿಕೊಂಡು ಬಿಂದುಮಾಧವ ಎಂದು ನನ್ನ ಹೆಸರು ಜಗತ್ತಿನಲ್ಲಿ ಪ್ರಸಿದ್ಧವಾಗುವುದು. ಯಾರು ತಮ್ಮ ಹೃದಯದಲ್ಲಿ ಪಂಚನದ ತೀರ್ಥದಲ್ಲಿ ನೆಲೆಸಿದ ಬಿಂದುಮಾಧವನ ಸ್ಮರಣೆಯನ್ನು ಮಾಡುವರೋ ಅವರಿಗೆ ನನ್ನ ಅನುಗ್ರಹದಿಂದ ಧನಲಕ್ಷ್ಮಿ ಹಾಗೂ ಮೋಕ್ಷಲಕ್ಷ್ಮೀ ಎರಡೂ ಲಭಿಸುವವು. ಕಾರ್ತೀಕಮಾಸದಲ್ಲಿ ಸೂರ್ಯೋದಯಕ್ಕಿಂತ ಮೊದಲು ಬಂದು ತೀರ್ಥದಲ್ಲಿ ಸ್ನಾನಮಾಡಿ, ಪಂಚಾಮೃತ ಕಲಶಗಳಿಂದ ನನಗೆ ಅಭಿಷೇಕ ಮಾಡಿ ನನ್ನ ಎದುರು ಮಂಗಳಾರತಿ ದೀಪಾರಾಧನೆ ಮಾಡುವರೋ, ಅವರು ಒಂದು ಕಲ್ಪದವರೆಗೆ ಕ್ಷೀರಸಾಗರದ ಮಧ್ಯದಲ್ಲಿ ಶ್ವೇತದ್ವೀಪ ದಲ್ಲಿ ವಾಸಮಾಡುವರು. ನನ್ನಲ್ಲಿ ಭಕ್ತಿಮಾಡಿ ಶಿವನನ್ನು ದ್ವೇಷಮಾಡುವವರು ಹಾಗೂ ಶಿವನಲ್ಲಿ ಭಕ್ತಿ ಮಾಡಿ ನನ್ನಲ್ಲಿ ದ್ವೇಷಮಾಡುವರು ಹರಿಹರ ದ್ವೇಷಿಗಳು. ಅವರು ಕಾಲಭೈರವನ ಶಾಸನದಿಂದ ಪಿಶಾಚ ಜನ್ಮವನ್ನು ಹೊಂದಿ ಮೂವತ್ತು ಸಾವಿರ ವರ್ಷ ದುಃಖದ ದಳ್ಳುರಿಯಲ್ಲಿ ಬೇಯುವರು. ಕಾಶಿಯು ಶಿವನ ಕ್ಷೇತ್ರ. ಇದರಲ್ಲಿಯೂ ಪಂಚನದ ತೀರ್ಥದಲ್ಲಿ ನನ್ನ ಉತ್ಕಟ ಸಾನಿಧ್ಯ. ಇವೆರಡರಿಂದ ಈ ಪುಣ್ಯಪುರಿಯು ಭೂಲೋಕದಲ್ಲಿಯೇ ಸರ್ವಶ್ರೇಷ್ಠ. ಇಲ್ಲಿ ನೆಲೆಸಿರುವವರು ಯಾರೂ ಹರನನ್ನು ದ್ವೇಷಿಸಬಾರದು. ಶಿವನದ್ವೇಷ ಮಾಡಿದರೆ ನನ್ನ ದ್ವೇಷ ಮಾಡಿದಂತೆಯೇ. ನನ್ನ ದ್ವೇಷಮಾಡಿದರೆ ಶಿವನ ದ್ವೇಷಮಾಡಿದಂತೆಯೇ.

## ಕಾಶಿಯಲ್ಲಿರುವ ವಿಷ್ಣುವಿನ ಪವಿತ್ರ ಸ್ಥಳಗಳು; ಅಗ್ನಿಬಿಂದುವಿಗೆ ಮುಕ್ತಿ.

**ಬಿಂದುಮಾಧವ:-** ಅಗ್ನಿಬಿಂದು ಮುನಿಯೇ, ಈ ಕಾಶೀಕ್ಷೇತ್ರವು ಶೈವಕ್ಷೇತ್ರ. ಆದರೆ ಇಲ್ಲಿ ಅನೇಕಾನೇಕ ವಿಷ್ಣುವಿನ ವಿಶೇಷಸನ್ನಿಧಾನೋಪೇತವಾದ ವೈಷ್ಣವ ಮಂದಿರಗಳೂ, ವೈಷ್ಣವತೀರ್ಥಗಳೂ ಇರುವುದರಿಂದ ಇದು ಪರಮವೈಷ್ಣವ ಕ್ಷೇತ್ರವೂ ಆಗಿದೆ. ಈ ದಿವ್ಯ ಕ್ಷೇತ್ರದಲ್ಲಿ ಇರುವ ಬಗೆಬಗೆಯ ವಿಷ್ಣುರೂಪಗಳನು ಹೇಳುತ್ತೇನೆ ಕೇಳು.

ಪಾದೋದಕ ತೀರ್ಥದಲ್ಲಿ ಆದಿಕೇಶವ. ಶ್ವೇತದ್ವೀಪ ತೀರ್ಥದಲ್ಲಿ ಜ್ಞಾನಕೇಶವ. ತಾರ್ಕ್ಷ್ಯ ತೀರ್ಥದಲ್ಲಿ ತಾರ್ಕ್ಷ್ಯಕೇಶವ. ನಾರದತೀರ್ಥದಲ್ಲಿ ನಾರದಕೇಶವ. ಪ್ರಹ್ಲಾದ ತೀರ್ಥದಲ್ಲಿ ಪ್ರಹ್ಲಾದಕೇಶವ. ಅಂಬರೀಷ ತೀರ್ಥದಲ್ಲಿ ಆದಿತ್ಯಕೇಶವ. ಭಾರ್ಗವ ತೀರ್ಥದಲ್ಲಿ ಭೃಗುಕೇಶವ. ವಾಮನತೀರ್ಥದಲ್ಲಿ ವಾಮನಕೇಶವ. ಹಯಗ್ರೀವ ತೀರ್ಥದಲ್ಲಿ ಹಯಗ್ರೀವಕೇಶವ. ವೃದ್ಧಿಕಾಲೇಶ್ವರದಿಂದ ಪಶ್ಚಿಮದಲ್ಲಿ ಭೀಷ್ಮಕೇಶವ, ಲೋಲಾರ್ಕದಿಂದ ಉತ್ತರಭಾಗದಲ್ಲಿ ನಿರ್ವಾಣಕೇಶವ. ತ್ರಿಪುರಸುಂದರಿ ದೇವಿಯ ದಕ್ಷಿಣಭಾಗದಲ್ಲಿ ತ್ರಿಭುವನಕೇಶವ ಎಂಬ ಹೆಸರಿನಿಂದ ನಾನು ಆಯಾ ತೀರ್ಥಜಲಗಳಲ್ಲಿ

ಸನ್ನಿಹಿತನಾಗಿ ಮತ್ತು ಆ ತೀರ್ಥಗಳ ತೀರದಲ್ಲಿರುವ ನನ್ನ ಮೂರ್ತಿಗಳಲ್ಲಿ ಸಾಕ್ಷಾತ್ ಆಗಿಯೇ ನಿಂತುಕೊಂಡು ನನ್ನ ಸೇವೆ ಹಾಗೂ ನಾಮಸ್ಮರಣೆ ಮಾಡುವವರಿಗೆ ಪುಣ್ಯಫಲವನ್ನೂ ವೈಕುಂಠಾದಿ ಲೋಕಗಳನ್ನೂ ದಯಪಾಲಿಸುತ್ತೇನೆ. ನರನಾರಾಯಣ ತೀರ್ಥದಲ್ಲಿ ನಾನು ನರನಾರಾಯಣ ಸ್ವರೂಪದಿಂದ ನೆಲೆ ನಿಂತಿದ್ದೇನೆ, ಪಾಪಹಾರಿ ಶೇಷತೀರ್ಥದಲ್ಲಿ ನಾನು ಶೇಷಮಾಧವ. ಶಂಖಮಾಧವ ತೀರ್ಥದಲ್ಲಿ ಶಂಖಮಾಧವ, ಜ್ಞಾನವಾಪಿಯ ಪೂರ್ವಭಾಗದಲ್ಲಿ ನಾನು ಜ್ಞಾನಮಾಧವ. ವಿಶಾಲಾಕ್ಷಿದೇವಿಯ ಸಮೀಪದಲ್ಲಿ ಶ್ವೇತಮಾಧವ, ದಶಾಶ್ವ ಮೇಧದ ಉತ್ತರದಲ್ಲಿ ಪ್ರಯಾಗಮಾಧವ ಎಂಬ ರೂಪಗಳಿಂದ ನಾನು ವಾಸಮಾಡಿದ್ದೇನೆ. ಇದರಂತೆ ಗೋಪಿಗೋವಿಂದ ತೀರ್ಥಲ್ಲಿ ಗೋಪಿ ಗೋವಿಂದ ಹೆಸರಿನಿಂದ, ದತ್ತಾತ್ರೇಯೇಶ್ವರದಿಂದ ದಕ್ಷಿಣಕ್ಕೆ ಆದಿ ಗಧಾಧರ, ಯಜ್ಞವರಾಹ ತೀರ್ಥದಲ್ಲಿ ಯಜ್ಞವರಾಹ, ವಿದಾರ ನಾರಸಿಂಹತೀರ್ಥದಲ್ಲಿ ವಿದಾರ ನಾರಸಿಂಹ, ಲಕ್ಷ್ಮೀನೃಸಿಂಹ ತೀರ್ಥದಲ್ಲಿ ಲಕ್ಷ್ಮೀನರಸಿಂಹ ಎಂಬ ಹೆಸರಿನಿಂದ ಸನ್ನಿಹಿತ ರಾಗಿ ಆ ತೀರ್ಥಗಳಲ್ಲಿ ಸ್ನಾನ, ದೇವತಾರ್ಚನ, ಪಿತೃತರ್ಪಣ, ದಾನ ಧರ್ಮ ಮಾಡುವವರ ಸರ್ವ ಪಾಪಗಳನ್ನು ಪರಿಹರಿಸಿ ಮುಕ್ತಿಮಂದಿರಕ್ಕೆ ಕರೆದೊಯ್ಯುತ್ತೇನೆ.

ಹೀಗೆ ಬಿಂದುಮಾಧವನರೂಪಿ ಭಗವಂತನು ಅಗ್ನಿಬಿಂದು ಮುನಿಗೆ ಕಾಶಿಯಲ್ಲಿರುವ ತನ್ನ ಭಿನ್ನಭಿನ್ನ ನಾಮರೂಪಗಳನ್ನು ವಿವರಿಸುತ್ತಲಿರುವಾಗಲೇ ಗರುಡನೂ, ಅವನ ಹಿಂದೆಯೇ ನಂದಿಯನ್ನು ಆರೋಹಣಮಾಡಿದ ಶಂಕರನೂ ಕಾಶೀಕ್ಷೇತ್ರಕ್ಕೆ ಆಗಮಿಸಿದರು. ಆಗ ಅಗ್ನಿಬಿಂದು ಮುನಿಯು ಶ್ರೀಹರಿಯ ಆದೇಶದಂತೆ ವಿಷ್ಣುವಿನ ಕೈಯಲ್ಲಿರುವ ಸುದರ್ಶನ ಚಕ್ರವನ್ನು ಸ್ಪರ್ಶಿಸಿದನು. ವಿಷ್ಣು ಚಕ್ರದ ಸ್ಪರ್ಶಮಾತ್ರದಿಂದ ಆ ಅಗ್ನಿಬಿಂದು ಮುನಿಗೆ ಅದರ ಸಾರೂಪ್ಯವು ಲಭಿಸಿತು.

## ಕೈಲಾಸಪತಿಯ ಕಾಶೀಪಟ್ಟಣದ ಪ್ರವೇಶ

**ಸ್ಕಂದ:-** ಗರುಡನು ಮುಂದೆ ಬಂದು ಶಂಕರನ ಆಗಮನದ ಸಮಾಚಾರವನ್ನು ತಿಳಿಸಿದನು. ಆಗ ಮಹಾವಿಷ್ಣು ಬ್ರಹ್ಮದೇವನನ್ನು ಮುಂದೆ ಮಾಡಿಕೊಂಡು ವೃಷಭಧ್ವಜನಿಗೆ ಸ್ವಾಗತ ಸತ್ಕಾರ ನೀಡಿದರು. ಬ್ರಹ್ಮನು ಸ್ವಸ್ತಿವಾಚನ ಹೇಳಿದನು. ಗಣೇಶನು, ಆ ನಂದಿವಾಹನನ ಚರಣಾರವಿಂದಗಳಲ್ಲಿ ತನ್ನ ತಲೆಯಿಟ್ಟು ನಮಸ್ಕಾರ ಮಾಡಿದನು. ಅನಂತರ ಯೋಗಿನಿಯರೂ, ಸೂರ್ಯನೂ, ಎಲ್ಲರೂ ಬಂದು ಕೈ ಮುಗಿದು ಪ್ರಾರ್ಥಿಸಿದರು- ''ದೇವದೇವೇಶ್ವರ, ಬ್ರಹ್ಮ, ಸೂರ್ಯ, ಯೋಗಿನಿಯರು, ಗಣೇಶ, ಮುಂತಾದ ನಾವೆಲ್ಲರೂ ನಿನ್ನ ಅಪ್ಪಣೆಯಂತೆ ಕಾಶಿಗೆ ಬಂದೆವು. ಇಲ್ಲಿ ಧರ್ಮಶಾಸನಗೈಯುವ ದಿವೋದಾಸ ದೊರೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದೆವು. ಆದರೆ ಅವನ ಯಾವುದೇ ಆಚಾರ, ವಿಚಾರ, ಉಚ್ಚಾರ, ಸಂಚಾರ, ವ್ಯವಹಾರ, ನುಡಿ, ನಡೆ, ಪ್ರವೃತ್ತಿ, ಮನಃಸ್ಥಿತಿ, ಭಾವ, ಭಾಷೆ, ಒಂದರಲ್ಲಿಯೂ ಒಂದೂ ಕುಂದು ಕೊರತೆ, ಲೋಪ ದೋಷಗಳನ್ನು ಕಾಣದಾದೆವು. ಆದ್ದರಿಂದ ನಮಗೆ ನಿಮ್ಮಲ್ಲಿಗೆ ಬಂದು ಈ ನಿಷೇಧವಚನ ವನ್ನು ಹೇಳುವ ಧೈರ್ಯ ಆಗಲಿಲ್ಲ. ಧರ್ಮಮಾರ್ಗದಲ್ಲಿ ತಪ್ಪದೇ, ತಪ್ಪಿಲ್ಲದೇ ತೂಕದಿಂದಲೂ, ಜೋಕೆಯಿಂದಲೂ, ವಿವೇಕದಿಂದಲೂ ನಡೆಯುತ್ತಲಿರುವ ಸಾಕ್ಷಾತ್ ಧರ್ಮಮೂರ್ತಿಯಂತಿದ್ದ ಆ ದಿವೋದಾಸನ ವಿರುದ್ಧ ನಮಗೆ ಯಾವ ಕ್ರಮವನ್ನು ಕೈಕೊಳ್ಳಲೂ ಆಗಲಿಲ್ಲ. ನಮ್ಮನ್ನು ನೀವು ಕ್ಷಮಿಸಬೇಕು.

**ಶಂಕರ:-** "ನಾನು ಎಲ್ಲವನ್ನೂ ತಿಳಿದಿದ್ದೇನೆ. ಗರುಡನು ಬಂದು ಇಲ್ಲಿಯ ಸಮಾಚಾರವನ್ನೆಲ್ಲ ನನಗೆ ತಿಳಿಸಿದ್ದಾನೆ. ಬ್ರಹ್ಮದೇವ, ನೀನು ಸ್ವರೂಪದಿಂದಲೇ ಬ್ರಹ್ಮ. ನೀನು ಇಲ್ಲಿಗೆ ಬ್ರಾಹ್ಮಣವೇಷ ತೊಟ್ಟು ಬಂದುದು ಉಚಿತವೇ ಆಗಿದೆ. ಇಲ್ಲಿ ನಿಂತು ಹತ್ತು ಅಶ್ವಮೇಧ ಯಜ್ಞಗಳನ್ನು ಆಚರಿಸಿದ್ದು ಹಾಗೂ ನನ್ನ ಲಿಂಗವನ್ನು ಸ್ಥಾಪಿಸಿದ್ದು ನನಗೆ ಪರಮಸಂತೋಷಕಾರಕ." ಎಂದು ನುಡಿದು, ಬ್ರಹ್ಮನನ್ನು ಸಂತೈಸಿ ಸೂರ್ಯನಿಗೆ ಅಭಿಮುಖನಾಗಿ ಶಂಕರ ಹೇಳಿದ.

"ಭಾಸ್ಕರ, ದಿವೋದಾಸನ ಶಾಸನ ಕಾಲದಲ್ಲಿ ಇಲ್ಲಿ ದೇವತೆಗಳಿಗೆ ಪ್ರವೇಶವೇ ಇರಲಿಲ್ಲ. ಅಂಥದರಲ್ಲಿ ನೀನು ಇಲ್ಲಿ ಪ್ರವೇಶಿಸಿ ದ್ವಾದಶಾತ್ಮಕನಾಗಿ ನಿಂತು ಕೊಂಡಾಗಲೇ ನನ್ನ ಕೆಲಸ ಆದಂತಾಯಿತು." ಹೀಗೆ ನುಡಿದು ಅನಂತರ ಮಹಾದೇವನು ಯೋಗಿನಿಯರನ್ನು ಪ್ರಸನ್ನದೃಷ್ಟಿಯಿಂದ ನೋಡಿ ಸಂತೋಷಗೊಳಿಸಿದ ಬಳಿಕ, ತನ್ನ ಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸಿದ ನಾರಾಯಣನ ಕಡೆಗೆ ಕೃತಜ್ಞತೆಯ ದೃಷ್ಟಿಯಿಂದ ನೋಡಿದ. ಹರಿಹರರಿಬ್ಬರೂ ಸರ್ವಜ್ಞರೇ ಆದುದರಿಂದ ಇಬ್ಬರಿಗೂ ಎಲ್ಲ ಘಟನೆಗಳೂ ತಿಳಿದೇ ಇದ್ದುದರಿಂದ ಹೇಳುವ, ಕೇಳುವ ಸಂದರ್ಭವೇ ಒದಗಲಿಲ್ಲ. ಗಣೇಶನ ವೃತ್ತಾಂತವನ್ನೂ, ಶ್ರೀವಿಷ್ಣುವಿನ ಗೈಮ, ಮೈಮಗಳನ್ನೂ ಗರುಡನ ಮುಖಾಂತರ ಗಿರಿಜಾಪತಿಯು ಕೇಳಿ ತಿಳಿದದ್ದರಿಂದ ಮತ್ತು ಸ್ವಯಂ ಸರ್ವಜ್ಞನೇ ಆದದ್ದರಿಂದ, ವಚನವೃತ್ತಿಯಿಂದ ಯಾರೂ ಏನೂ ಹೇಳದೇ ಇದ್ದರೂ ಎಲ್ಲವನ್ನೂ ಚೆನ್ನಾಗಿ ಅರಿತು, ಪ್ರಸನ್ನಮುದ್ರೆಯಿಂದ ಮಂದಹಾಸ ಮಾಡಿ ಅವರಿಬ್ಬರನ್ನೂ ಹಾಗೂ ಉಳಿದವರನ್ನೂ ಸಂತೋಷಪಡಿಸಿದನು.

ಇದೇ ಸಮಯದಲ್ಲಿ ಗೋಲೋಕದಿಂದ ಸುನಂದಾ, ಸುಮನಾ, ಸುಶೀಲಾ, ಸುರಭಿ ಮತ್ತು ಕಪಿಲಾ ಎಂಬ ಐದು ಹಸುಗಳು ಆಗಮಿಸಿದವು. ಶಿವನ ಮೇಲಿನ ವಾತ್ಸಲ್ಯ ಸ್ನೇಹದಿಂದ ಆ ಎಲ್ಲ ಗೋವುಗಳು ತೊರೆಬಿಟ್ಟು ತಮ್ಮ ಕೆಚ್ಚಲಿನಿಂದ ಹಾಲನ್ನು ಸುರಿಸತೊಡಗಿದವು. ಕೆಲವೇ ಸಮಯದಲ್ಲಿ ಆ ಪಂಚಧೇನುಗಳ ವಾತ್ಸಲ್ಯ ಸ್ವರೂಪವಾದ ಹಾಲಿನಿಂದ ಒಂದು ಕುಂಡವೇ ತುಂಬಿ ಒಂದು ತೀರ್ಥವಾಯಿತು. ಅದಕ್ಕೆ ಮಹೇಶ್ವರನು ಕಪಿಲಾಕುಂಡ ಎಂದು ಹೆಸರಿಟ್ಟನು. ಎಲ್ಲ ದೇವತೆಗಳೂ ಅದರಲ್ಲಿ ಸ್ನಾನಮಾಡಿ ಆ ತೀರ್ಥದಿಂದ ಪಿತೃಗಳಿಗೆ ತರ್ಪಣ ನೀಡಿದರು. ಅದರಿಂದ ಅಗ್ನಿ ಶ್ವಾತ್ತೆ, ಬರ್ಹಿಷದ ಆಜ್ಯಪ, ಸೋಮಪ, ಮುಂತಾದ ಪಿತೃಗಳು ತೃಪ್ತರಾಗಿ ಶಂಕರನನ್ನು ಪ್ರಾರ್ಥನೆ ಮಾಡಿದರು.

**ಶಂಕರ:-** ಗೋಲೋಕದ ಪಂಚಧೇನುಗಳ ಹಾಲಿನಿಂದ ತುಂಬಿದ ಈ ಕಪಿಲೆಯ ತೀರ್ಥದಲ್ಲಿ ಸ್ನಾನ ಪಿಂಡದಾನ, ಮಾಡಿದವರ ಪಿತೃಗಳೆಲ್ಲರೂ ಉದ್ಧೃತರಾಗಿ ಶ್ರಾದ್ಧಕರ್ತನಿಗೆ ಬಯಸಿದ ಫಲಗಳನ್ನು ನೀಡುವರು. ಬ್ರಹ್ಮ ಹಾಗೂ ಗಧಾಧರ ಮತ್ತು ನಾನು ಮೂವರೂ ಇಲ್ಲಿ ಇದ್ದುದರಿಂದ ಇಲ್ಲಿ ಫಲಗುನದಿಯು ಇರುತ್ತದೆ. ಈ ಕಪಿಲೇಯ ತೀರ್ಥಕ್ಕೆ ಮಧುಸ್ರವಾ, ಕೃತಕೃತ್ಯಾ, ಕ್ಷೀರಸಾಗರ, ವೃಷಧ್ವಜ ತೀರ್ಥ, ಪಿತಾಮಹತೀರ್ಥ, ಗಧಾಧರತೀರ್ಥ, ಪಿತೃತೀರ್ಥ, ಕಪಿಲಾಧಾರಾ, ಸುಧಾಖನಿ, ಶಿವಗಯಾ, ಎಂದು ಹತ್ತು ಹೆಸರುಗಳು ಉಂಟು. ಈ ತೀರ್ಥವು ಸತ್ಯಯುಗದಲ್ಲಿ ಹಾಲಿನಿಂದಲೂ, ತ್ರೇತಾಯುಗದಲ್ಲಿ ಜೇನಿನಿಂದಲೂ, ದ್ವಾಪರದಲ್ಲಿ ತುಪ್ಪದಿಂದಲೂ, ಕಲಿಯುಗದಲ್ಲಿ ನೀರಿನಿಂದಲೂ

ತುಂಬಿರುತ್ತದೆ. ಯದ್ಯಪಿ ಈ ತೀರ್ಥವು ಕಾಶಿಯ ಗಡಿಯ ಆಚೆ ಇರುತ್ತದೆ. ಆದರೂ ನನ್ನ ಸಾಮೀಪ್ಯ ಇರುವುದರಿಂದ ಇದು ಕಾಶೀಪುರಿಯ ಸೀಮೆಯ ಕಕ್ಷೆಯಲ್ಲಿಯೇ ಇದೆ ಎಂದು ತಿಳಿಯಬೇಕು. ಪಿತೃಗಳ ತೃಪ್ತಿಗಾಗಿ ನಾನು ಇಲ್ಲಿ ಬ್ರಹ್ಮ, ವಿಷ್ಣು ಹಾಗೂ ಸೂರ್ಯರೊಂದಿಗೆ ಇಲ್ಲಿಯೇ ನೆಲೆಸುವೆನು. ಹೀಗೆ ಮುಕ್ಕಣ್ಣನು ಪಿತೃಗಳಿಗೆಲ್ಲ ವರದಾನವನ್ನು ನೀಡುತ್ತಿರಲು ವಾಗೆತೀ ನಂದೀಶ್ವರನು ಬಂದು ನಿವೇದನಗೈದನು- ''ಪ್ರಭೋ ರಥವು ಸಿದ್ಧವಾಗಿದೆ. ಈಗ ತಮ್ಮ ವಿಜಯಯಾತ್ರೆಯ ಪ್ರಾರಂಭವಾಗಲಿ.

ಆಗ ಎಂಟೂ ಮಾತೃಕೆಯರು ಪಶುಪತಿಗೆ ಆರತಿ ಬೆಳಗಿದರು. ಆಗ ವಿಶ್ವೇಶ್ವರನು ಎದ್ದುನಿಂತು ಶ್ರೀಹರಿಯ ಹಸ್ತಾಂದೋಲನ ಮಾಡಿ ವಿಜಯಯಾತ್ರೆಗೆ ಸನ್ನದ್ಧನಾದನು. ದೇವದಂಧುಭಿಗಳು ಭೂಮಿಯಿಂದ ಆಕಾಶದವರೆಗೆ ಮೊಳಗಿದವು. ದೇವಿಯರ ಮಂಗಳಗೀತ, ಮುನಿಮಹರ್ಷಿಗಳ ವೇದಘೋಷ, ಮಂದಿಮಾಘದರ ಸ್ತುತಿಪಾಠ ಹಾಗೂ ಮಂಗಳವಾದ್ಯಗಳ ಮೊಳಗುವ ನಾದನಿನಾದಗಳಿಂದ ದಶದಿಕ್ಕುಗಳೆಲವೂ ಮರಿದನಾದ ದಿಂದ ಮುಖರಿತವಾಯಿತು. ಮೂವತ್ತು ಮೂರು ಕೋಟಿ ದೇವತೆಗಳು, ಇಪ್ಪತ್ತು ಕೋಟಿ ಶಿವಗಣ ಒಂಭತ್ತು ಕೋಟಿ ಚಾಮುಂಡೆಯರು, ಒಂದು ಕೋಟಿ ಭೈರವಿಯರು ಹಾಗೂ ಎಂಟು ಕೋಟಿ ನನ್ನ (ಸ್ಕಂದನ) ಅನುಚರರು, ತಮ್ಮ ತಮ್ಮ ವಾಹನಾರೂಢರಾಗಿ ಶಿವನ ಮೆರವಣಿಗೆಯಲ್ಲಿ ಮುಂದೆ ಮುಂದೆ ನಡೆದಿದ್ದರು. ಅವರ ಹಿಂದೆ ಏಳುಕೋಟಿ ಆನೆಯ ಮುಖದ ಗಣಪತಿಯ ಗಣಂಗಳು ಕೈಯಲ್ಲಿ ಕೊಡಲಿ ಹಿಡಿದು ಮೆರವಣಿಗೆಯಲ್ಲಿ ಶಿವನ ಭಜನೆ ಮಾಡುತ್ತ ಸಾಗಿದ್ದರು. ತೊಂಬತ್ತಾರು ಸಾವಿರ ಬ್ರಹ್ಮವಾದಿ ಮುನಿಮಹರ್ಷಿಗಳು, ತೊಂಬತ್ತಾರು ಸಾವಿರ ಬ್ರಹ್ಮಜ್ಞಾನಿಗಳಾದ ಗೃಹಸ್ಥರೂ, ಮೂರು ಕೋಟಿ ನಾಗರೂ, ಎರಡು ಕೋಟಿ ಶಿವಭಕ್ತರಾದ ದೈತ್ಯ ದಾನವರೂ, ಎಂಟುಲಕ್ಷ ಗಂಧರ್ವರೂ, ಐವತ್ತುಲಕ್ಷ ಯಕ್ಷರಾಕ್ಷಸರೂ, ಎರಡುಲಕ್ಷದ ಮೇಲೆ ಹತ್ತುಸಾವಿರ ವಿದ್ಯಾಧರರೂ, ಅರವತ್ತು ಸಾವಿರ ಅಪ್ಸರೆಯರೂ, ಎಂಟುಲಕ್ಷ ಗೋಮಾತೆಯರೂ, ಅರವತ್ತುಸಾವಿರ ಗರುಡರೂ, ನಾನಾಬಗೆಯ ಮುತ್ತು ರತ್ನಗಳ ಕಾಣಿಕೆ ಒಪ್ಪಿಸಲು ಬಂದ ಸಪ್ತಸಮುದ್ರಗಳೂ, ಎಂಟು ಸಾವಿರ ಪರ್ವತಗಳೂ, ಐವತ್ತು ಮೂರುಸಾವಿರ ನದಿಗಳೂ, ಮೂರುನೂರು ವನಸ್ಪತಿಗಳೂ, ಎಂಟು ದಿಗ್ಗಜಗಳೂ, ಶಿವನ ಆ ಶೋಭಾಯಾತ್ರೆಯಲ್ಲಿ ಉತ್ಸಾಹದಿಂದ ಭಾಗವಹಿಸಿದರು. ಶಿವನ ಪಕ್ಕದಲ್ಲಿ ಗಿರಿರಾಜನಂದಿನಿ ಉಮಾದೇವಿಯೂ ಮಂಡಿಸಿದ್ದಳು. ಇಂಥ ಅತ್ಯದ್ಭುತವಾದ ಮೆರವಣಿಗೆಯಿಂದ ಪಾರ್ವತಿ ಪರಮೇಶ್ವರ ದಂಪತಿಗಳು ಪುಣ್ಯಕ್ಷೇತ್ರವಾದ ಕಾಶೀಪುರಿಯ ಪ್ರವೇಶೋತ್ಸವ ಸಮಾರಂಭವನ್ನು ಸಂಭ್ರಮದಿಂದ ಆಚರಿಸಿ ಜಗತ್ತಿನ ಚರಾಚರ ಪ್ರಾಣಿಗಳಿಗೂ, ದೇವಾಧಿ ದೇವತೆಗಳಿಗೂ, ಮುನಿಮನುಜ, ಮಾನವ, ದಾನವ, ಪ್ರಾಣಿ ಸಮಸ್ತಕ್ಕೂ ಸಂತೋಷವನ್ನುಂಟುಮಾಡುತ್ತ ಪುರಪ್ರವೇಶ ಮಾಡಿದರು.

## ಜೈಗೀಶವ್ಯರ ಮೇಲೆ ಶಿವನ ಕೃಪೆ ಹಾಗೂ ಅವನು ಮಾಡಿದ ಶಿವಸ್ತುತಿ

**ಅಗಸ್ತ್ಯ:-** ಭಗವನ್, ಕಾಶೀಪುರಿಯ ದರ್ಶನಮಾಡಿಕೊಂಡು ಕೈಲಾಸಪತಿಯು ಏನು ಮಾಡಿದ?

**ಸ್ಕಂದ:-** ಅಗಸ್ತ್ಯ, ಭಕ್ತವತ್ಸಲನಾದ ಉಮಾಪತಿಯು ಕಾಶೀಪುರಿಯನ್ನೆಲ್ಲ ನೋಡಿ, ಅನಂತರ ಮೊಟ್ಟಮೊದಲು ಗುಹೆಯಲ್ಲಿ ಕುಳಿತು ತಪಸ್ಸನ್ನು ಮಾಡುತ್ತಿರುವ ಜೈಗೀಶವ್ಯ ಮುನಿಗೆ ದರ್ಶನಕೊಟ್ಟನು. ಪರಮೇಶ್ವರನು ಕಾಶಿಯಲ್ಲಿ ಬಿಟ್ಟು ಮಂದರ ಪರ್ವತಕ್ಕೆ

ಹೋದದಿನದಿಂದ ಜೈಗೀಶವ್ಯ ಮುನಿಯು ಪ್ರತಿಜ್ಞೆ ಮಾಡಿದ್ದನು. ಕಾಶಿಯಿಂದ ಹೊರಟುಹೋದ ಶಂಕರ ಭಗವಂತನು ತಿರುಗಿ ಕಾಶಿಗೆ ಪುನಃ ಆಗಮಿಸಿ, ತನ್ನ ಚರಣ ದರ್ಶನವನ್ನು ನನಗೆ ನೀಡುವವರೆಗೆ ನಾನು ಬಾಯಿಯಲ್ಲಿ ಒಂದು ಹನಿನೀರನ್ನು ಕೂಡ ಹಾಕುವುದಿಲ್ಲ. ಒಂದು ತುತ್ತು ಅನ್ನವನ್ನೂ ಉಣ್ಣುವುದಿಲ್ಲ. ಆ ಮಹಮುನಿಯು ತನ್ನ ಮಹಾಶಿವಭಕ್ತಿಯಿಂದಲೇ ಶಂಕರನ ಅನುಗ್ರಹದಿಂದ ಅನ್ನಜಲವನ್ನು ಬಿಟ್ಟು ಇಷ್ಟು ದಿನ ಬದುಕಿ ಉಳಿದಿದ್ದನು. ಇದು ಮಹರುದ್ರದೇವನಿಗೆ ಮಾತ್ರಗೊತ್ತು. ಆದುದರಿಂದ ಅವನು ನೇರವಾಗಿ ಅಲ್ಲಿಗೆ ಹೋದನು. ಮತ್ತು ಎಲ್ಲದೇವತೆಗಳಿಗೆ ಕೇಳುವಂತೆ ನಂದೀಶ್ವರನನ್ನು ಸಂಭೋದಿಸಿ ''ಶಿಲಾದ ಪುತ್ರ, ಈ ಗುಹೆಯಲ್ಲಿ ನೋಡಿದೆಯೇ! ಎಷ್ಟು ಮನೋಹರ, ಎಂಥ ಶಾಂತ ಸುಂದರ. ಇದರ ಒಳಗೆ ಕುಳಿತಿದ್ದಾನೆ ನನ್ನ ಭಕ್ತ ಜೈಗೀಶವ್ಯಮುನಿ. ನನ್ನ ಶ್ರೀಚರಣ ದರ್ಶನವಿಲ್ಲದೇ ಆಹಾರ ಮುಟ್ಟುವುದಿಲ್ಲ. ನೀರನ್ನು ಕುಡಿಯುವುದಿಲ್ಲ ಎಂದು ಅವನ ಪ್ರತಿಜ್ಞೆ. ನಾನು ಮಂದರ ಪರ್ವತಕ್ಕೆ ಹೋದ ದಿನದಿಂದ ಇಂದಿನವರೆಗೆ ಅವನು ಅನ್ನ ನೀರು ಬಿಟ್ಟು ಉಗ್ರತಪಸ್ಸನ್ನು ಕೈಕೊಂಡು ದೇಹದಿಂದ ಸೊರಗಿದ್ದಾನೆ. ಅವನ ಕಾಯವೆಲ್ಲವೂ ಕೊರಗಿ ಕಾಷ್ಠವಾಗಿದೆ. ಇಕೋ ಈ ಲೀಲಾಕಮಲವನ್ನು. ಇದರ ಸ್ಪರ್ಶ ಮಾತ್ರದಿಂದ ಅಮೃತ ಪುಷ್ಟಿ. ಇದನ್ನು ತಪೋಜೀರ್ಣವಾದ ಆ ಮುನಿಯ ದೇಹಕ್ಕೆ ತಗಲಿಸು. ಪರಮೇಶ್ವರನ ಅಪ್ಪಣೆಯನ್ನು ಶಿರಸಾಧಾರಣಮಾಡಿ ಕೈಲಾಸಪತಿಯು ಕೊಟ್ಟು ಲೀಲಾಕಮಲವನ್ನು ಕೈಯಲ್ಲಿ ಹಿಡಿದುಕೊಂಡು ನಂದಿಯು ಆ ಗುಹೆಯ ಒಳಗೆ ಹೋದನು. ಅಲ್ಲಿ ತನ್ನ ತಪೋಗ್ನಿಯಿಂದ ಮೈಯೆಲ್ಲ ಒಣಗಿ, ಸೊರಗಿ, ಕಾಷ್ಠದಂತಾದ ಆ ಮುನಿಯ ದೇಹ ಕಟ್ಟಿಗೆಯ ಪಂಜರದಂತೆ ಆಗಿದ್ದಿತು. ಒಳಗಿನ ಜೀವ ಮಾತ್ರ ಮಹಾದೇವನ ದಿವ್ಯ ನಾಮವನ್ನು ನುಡಿಯುತ್ತ ಮಿಡಿಯುತ್ತಿತ್ತು. ನಂದಿಯು ಅವನ ಬಳಿಗೆ ಹೋದನು. ತ್ರಿಲೋಚನನು ಕೊಟ್ಟ ಅವನ ಕೈಯಲ್ಲಿಯ ಲೀಲಾಕಮಲವನ್ನು ಆ ಮುನಿಯ ದೇಹಕ್ಕೆ ಸ್ಪರ್ಶಮಾಡಿಸಿದನು. ಪರಮೇಶ್ವರನ ಪಾಣಿಪಲ್ಲವ ಸಲ್ಲಾರಿತವಾದ ಆ ಪದ್ಮ ಪುಷ್ಪದ ಸ್ಪರ್ಶಮಾತ್ರದಿಂದ ಜೈಗೀಶವ್ಯ ಮುನಿಯ ದೇಹವು ಉಲ್ಲಾಸದಿಂದ ಉಲ್ಲಸಿತವೂ, ಪ್ರಫುಲ್ಲಿತವೂ ಆಯಿತು. ದಿವ್ಯದೇಹಕಾಂತಿಯಿಂದ ನಳನಳಿಸುವ ಆ ಮುನಿಯನ್ನು ಕರೆದುಕೊಂಡು ನಂದಿಯು ಮಹಾದೇವರ ಬಳಿಗೆ ಬಂದನು. ಆ ಮಹಾಮುನಿಯ ಸಾಷ್ಟಾಂಗ ವಂದನೆಮಾಡಿದ ಆ ಅಷ್ಟಮೂರ್ತಿಗೆ ಮಹಾದೇವನ ವಾಮಾಂಗದಲ್ಲಿ ಗಿರಿರಾಜ ನಂದಿನಿಯಾದ ಪಾರ್ವತೀದೇವಿಯು ಶೋಭಿಸುತ್ತಿದ್ದಳು. ಆ ಶಿವ ದಂಪತಿಗಳ ದಿವ್ಯ ದರ್ಶನದಿಂದ ಹಾಗೂ ಪಾದಸ್ಪರ್ಶನದಿಂದ ಕುಲಕಿಟಗಾತ್ರನಾದ ಯೋಗಿ ಜೈಗೀಶವ್ಯನು ನುಡಿದನು.- ''ಶಾಂತಮೂರ್ತಿಯೂ, ಸರ್ವಜ್ಞನೂ, ಕಲ್ಯಾಣ ಸ್ವರೂಪಿಯೂ ಆದ ಭಗವಾನ್ ಶಿವನಿಗೆ ನಮಸ್ಕಾರ. ಆದಿ, ಮಧ್ಯ, ಅಂತರಹಿತನೂ ಚರಾಚರ ಬ್ರಹ್ಮಾಂಡದ ಆಧಾರಸ್ತಂಭನೂ, ಇಂದ್ರ ಉಪೇಂದ್ರ ಮುಂತಾದ ವೃಂದಾರಕದಿಂದ ವಂದನೀಯನೂ, ಅದ್ವಿತೀಯನೂ ಆದ ಪರಮೇಶ್ವರನಿಗೆ ವಂದನೆ. ನಾನು ನಿನ್ನನ್ನು ಹೇಗೆ ಸ್ತುತಿಸಬೇಕೆಂಬುದನ್ನು ಅರಿಯೆ. ಶಬ್ದನೂ ನೀನೇ ಅರ್ಥವೂ ನೀನೆ. ವಾಣಿಯೂ ನೀನೇ. ಸರ್ವವೂ ನೀನೆ. ನಿನ್ನ ಹೊರತು ಅನ್ಯದೇವರನ್ನು ನಾನು ತಿಳಿಯೆನು. ಬೇರೆಯವರ ನಾಮವನ್ನು ಉಚ್ಚರಿಸುವಲ್ಲಿ ನಾನು ಮೂಕ. ಹರನ ಹೊರತು ಹೆರವರ ಕಥೆಕಳುವಲ್ಲಿ ನಾನು ಕಿವುಡ. ಮಹಾದೇವನ ಹೊರತು ಬೇರೆಯವರ ಕಡೆ ಹೋಗಲು ನಾನು ಹೆಳವ. ಬೇರೊಂದು ದೇವತೆಯ ದರ್ಶನ ಮಾಡಲು ನಾನು ಕುರುಡ. ನಾನು ತಿಳಿದದ್ದು ಒಂದೇ ದೇವರನ್ನು ಅವನೇ

ಈಶ್ವರ ಅರ್ಥಾತ್ ನೀನು. ನಾನು ನಿನಗೇ ಶರಣು ಬಂದಿದ್ದೇನೆ. ಸಂಸಾರ ಸಮುದ್ರದಲ್ಲಿ ಮುಳುಗಿದ ನನ್ನನ್ನು ಉದ್ಧರಿಸು. ಮುನಿಯ ಈ ಮಾರ್ಮಿಕವಾದ ಸ್ತೋತ್ರವನ್ನು ಕೇಳಿ ಸಂತುಷ್ಟನಾದ ಶಂಕರ. ಬೇಕಾದ ವರ ಬೇಡು ಎಂದ.

**ಜೈಗೀಶವ್ಯ:-** ದೇವದೇವ, ನನಗೆ ನಿನ್ನ ಚರಣಗಳಲ್ಲಿ ಇರುವ ಅವಿಚಲ ಭಕ್ತಿಗೆ ಎಂದೂ ಚ್ಯುತಿ ಬರಬಾರದು. ಇದು ಮೊದಲನೆಯ ವರ. ಎರಡನೆಯ ವರದಿಂದ ನಾನು ಇಲ್ಲಿ ಪ್ರತಿಷ್ಠೆಗೈದ ಈ ಶಿವಲಿಂಗದಲ್ಲಿ ನೀನು ಯಾವಾಗಲೂ ಸುಸ್ಥಿತನಾಗಬೇಕು.

**ಮಹಾದೇವ:-** ಯೋಗಿ ಜೈಗೀಶವ್ಯನೇ, ನೀನು ಬಯಸಿದ ವರಗಳನ್ನು ನೀಡಿದ್ದೇನೆ. ನನ್ನ ವಿಶೇಷ ಅನುಗ್ರಹದಿಂದ ನೀನು ಯೋಗವಿದ್ಯೆಯ ರಹಸ್ಯವನ್ನೆಲ್ಲ ತಿಳಿದುಕೊಳ್ಳುವಿ. ಯೋಗಿಗಳ ಮಧ್ಯದಲ್ಲಿ ಯೋಗಾಚಾರ್ಯ ಎಂದು ನೀನುಪ್ರಸಿದ್ಧಿಯಾಗು. ನಂದಿ, ಭೃಂಗಿ, ಸೋಮ ನಂದಿಯರಂತೆ ನೀನು ಕೂಡ ನನ್ನ ಮೃತ್ಯುಂಜಯ ಭಕ್ತನಾಗುವೆ. ಕಾಶಿಯಲ್ಲಿ ನೀನು ಸ್ಥಾಪನೆ ಮಾಡಿದ ಜೈಗೀಶವ್ಯೇಶ್ವರ ಲಿಂಗವು ಆರಾಧಕರಿಗೆ ಇಹದಲ್ಲಿ ಇಷ್ಟಾರ್ಥವನ್ನು ನೀಡಿ ಪರದಲ್ಲಿ ಮೋಕ್ಷಜನಕ ಆಗುವುದು.

## ಕಾಶಿಯ ವಿದ್ವಾಂಸರಿಗೆ ಶಿವನ ವರದಾನ

**ಅಗಸ್ತ್ಯ:-** "ಷಣ್ಮುಖ, ಕಾಶಿಯಲ್ಲಿರುವಪಂಡಿತರನ್ನು ಕಂಡು ಮಹಾದೇವನು ಏನು ಹೇಳಿದ?"

**ಸ್ಕಂದ:-** ಮಹರ್ಷಿಯೇ, ಬ್ರಹ್ಮದೇವರ ಮೇಲಿನ ಗೌರವ ಬುದ್ಧಿಯಿಂದ ಮತ್ತು ಅವರ ಮಾನರಕ್ಷಣೆಗಾಗಿ ಮಂದಾರಚಲಕ್ಕೆ ತೆರಳಿದರು ಮಹಾದೇವರು, ಅನಂತರ ಕಾಶೀಕ್ಷೇತ್ರದಲ್ಲಿರುವ ಎಲ್ಲ ಸಂನ್ಯಾಸಿಗಳೂ, ಬ್ರಾಹ್ಮಣರೂ, ಪಂಡಿತರೂ, ಭಕ್ತರೂ ಎಲ್ಲರೂ ನಿರಾಶ್ರಿತರಾದರು. ಈ ಮಹಾಕ್ಷೇತ್ರದಲ್ಲಿ ದಾನ ಸ್ವೀಕರಿಸುವದನ್ನಂತೂ ಅವರು ನಿಲ್ಲಿಸಿಬಿಟ್ಟಿದ್ದರು. ಅವರು ಆ ತಮ್ಮ ದಂಡದ ಮುಂಭಾಗದಿಂದ ನೆಲವನ್ನು ಅಗಿದು ಬಗಿದು ದೊರೆತಷ್ಟು ಗಡ್ಡೆ ಗೆಣಸುಗಳನ್ನು ತಿಂದು ಜೀವನ ನಿರ್ವಾಹಣೆ ಮಾಡುತ್ತಿದ್ದರು. ಹೀಗೆ ಪಂಡಿತ ಮಂಡಲಿಯ ಹಾಗೂ ಸಂನ್ಯಾಸಿಗಳ ದಂಡಕಾಷ್ಠದ ತುದಿಯಿಂದ ಅಗೆದಗೆದು ಒಂದು ಸುಂದರವಾದ ಹೊಕ್ಕರಣಿಯು ಸಿದ್ಧವಾಯಿತು. ಅದಕ್ಕೆ ದಂಡಖಾತತೀರ್ಥ ಎಂದು ಹೆಸರು. ಆ ತೀರ್ಥದ ನಾಲ್ಕೂ ಕಡೆಗೂ ಆ ವಿದ್ವಂಸರು ದೊಡ್ಡ ಶಿವಲಿಂಗವನ್ನು ಸ್ಥಾಪಿಸಿ ಮಹೇಶ್ವರನ ಆರಾಧನೆಯ್ಲಲಿ ತಮ್ಮ ಬದುಕಿನ ಸಾರ್ಥಕತೆಯನ್ನು ಕಂಡುಕೊಂಡರು. ಹಣೆಯ ಮೇಲೆ ವಿಭೂತಿ, ಕೈಯಲ್ಲಿ ರುದ್ರಾಕ್ಷಿಮಾಲೆ, ಮುಖದಲ್ಲಿ ಶತರುದ್ರ್ಯ ಜಪ, ಕೈಯಿಂದ ಶಿವಲಿಂಗಗಳ ಪೂಜೆ, ಚಿತ್ತದಿಂದ ನಿರಂತರ ಚಂದ್ರಚೂಡನ ಚಿಂತನ ಮುಂತಾದವುಗಳನ್ನು ಎಡೆಬಿಡದೇ ನೆರವೇರಿಸುತ್ತಾ ಶಿವಾರ್ಪಿತ ಜೀವರಾಗಿ ನಿಂತುಕೊಂಡಿದ್ದರು ಆ ಸಾಧುಸಂತ ಮಹಾಂತರು. ಅವರ ಕಿವಿಗೆ ಮಹಾದೇವರು ಮರಳಿ ಆ ಮುಕ್ತಿಕ್ಷೇತ್ರಕ್ಕೆ ಆಗಮಿಸಿದ ಸಮಾಚಾರ ತಿಳಿಯಿತು. ಕಷ್ಟದಿಂದ ಕಾಶಿಯಲ್ಲಿಯೇ ಇಷ್ಟು ದೀರ್ಘಕಾಲ ಕಳೆದ ಆ ಐದು ಸಾವಿರ ತಪಸ್ವೀ ಬ್ರಾಹ್ಮಣರು ಕೈಗಳಲ್ಲಿ ಹೂವು, ಎಳೆಯ ಗರಿಕೆ, ಅಕ್ಷತೆ, ಹಣ್ಣು, ಹೂವಿನ ಮಾಲೆಗಳನ್ನು ಹಿಡಿದುಕೊಂಡು ಮಹಾದೇವರ ಮಹಿಮೆಯನ್ನು ಉಗ್ಗಡಿಸುತ್ತ, ವೈದಿಕ ಸೂಕ್ತಗಳಿಂದ ಶಿವನ ಸ್ತವನ ಮಾಡಿದರು. ಆಗ ಪ್ರಸನ್ನನಾದ ಪಾರ್ವತಿಪತಿಯು ಆ ಎಲ್ಲ ಕ್ಷೇತ್ರವಾಸಿಗಳಿಗೆ ಅಭಯ ನೀಡಿ ಕುಶಲ ಪ್ರಶ್ನೆ ಮಾಡಿ ಅವರೆಲ್ಲರ ಯೋಗಕ್ಷೇಮವನ್ನು ವಿಚಾರಿಸಿದನು. ಅದರಿಂದ ಕೃತಾರ್ಥರಾದ ಆ ಕ್ಷೇತ್ರ ಮೂರ್ತಿಗಳು ನುಡಿದರು.

**ಬ್ರಾಹ್ಮಣರು:-** ಲೋಕನಾಥ, ಈ ಕಾಶೀಕ್ಷೇತ್ರದಲ್ಲಿ ನಿತ್ಯವಾಸಮಾಡುವ ನಮಗೆ ಸರ್ವದಾ ಕುಶಲವೇ. ಅದರಲ್ಲಿಯೂ ಈಗ ನೀನು ಈ ಪುಣ್ಯಪುರಿಗೆ ಪುನರಾಗಮಿಸಿದ್ದರಿಂದ ನಮ್ಮ ಸಂತಸ ಅಂತರಂಗದಿಂದ ಉಕ್ಕಿ ಮೇರೆ ಮೀರಿ ಮೊರೆದಿದೆ. ಕಾಶಿಯನ್ನು ಮನಸ್ಸಿನಲ್ಲಿ ನೆನೆಯುವವರ ಮೇಲೆ ಸಂಸಾರರೂಪ ಸರ್ಪದ ವಿಷದ ಪರಿಣಾಮವೂ ಏನು ಆಗಲಾರದು. 'ಕಾಶಿ' ಎಂಬ ಎರಡೇ ಅಕ್ಷರವು ಉಚ್ಚಾರ ಮಾತ್ರದಿಂದ ಮಾನವರಿಗೆ ಮುಂದೆ ಗರ್ಭ ವಾಸದ ದುಃಖವನ್ನೇ ತಪ್ಪಿಸಿಬಿಡುತ್ತದೆ. ಇಲ್ಲಿ ಕಾಶೀಪುರಿಯು ಕಲ್ಯಾಣ ಸ್ವರೂಪ. ಇಲ್ಲಿ ಹರಿಯುವ ಗಂಗೆ ಕಲ್ಯಾಣ ಕಲ್ಲೋಲಿನಿ ಇಲ್ಲಿಯ ಕ್ಷೇತ್ರಸ್ವಾಮಿಯಾದ ನೀನು ಸ್ವಯಂ ಕಲ್ಯಾಣರೂಪಿಯೇ. ಹೀಗೆ ಮೂರು ಕಲ್ಯಾಣ ಮೂರ್ತಿಗಳು ಕಾಶಿಯ ಹೊರತು ಬೇರೆ ಸ್ಥಳಗಳಲ್ಲಿ ಈ ತ್ರಿವೇಣಿಸಂಗಮವು ಅತ್ಯಂತ ದುರ್ಲಭ.

**ಶಿವ:-** ದ್ವಿಜಶ್ರೇಷ್ಠರೇ ನನ್ನ ಕ್ಷೇತ್ರದಲ್ಲಿ ಇದ್ದು. ನನ್ನ ಚಿಹ್ನೆಗಳನ್ನ ಧರಿಸಿ, ನನ್ನಲ್ಲಿ ಭಕ್ತಿಮಾಡುವ ನೀವು ನಿಜವಾಗಿಯೂ ಧನ್ಯರು. ನಾನು ನಿಮ್ಮ ಹೃದಯವನ್ನು ಬಿಟ್ಟು ಎಲ್ಲಿಯೂ ದೂರ ಹೋಗುವುದಿಲ್ಲ ನಾನು ಕೂಡ ಈ ಕಾಶೀಪುರಿಯನ್ನು ಬಿಟ್ಟು ಎಲ್ಲಿಯೂ ಹೋಗಿಲ್ಲ. ಮುಂದೆ ಹೋಗುವುದಿಲ್ಲ. ಹೀಗೆ ಭಕ್ತ ಭಗವಂತರ ನಡುವೆ ಬಿಡಿಸಲಾರದ ಬೆಸುಗೆ ಹಾಕುವ ಈ ಕಾಶೀಪುರಿಯಲ್ಲಿ ವಾಸಿಸುವ ನೀವೆಲ್ಲರೂ ನಿಮಗೆ ಬೇಕಾದ ಮನೋಭೀಷ್ಟವಾದ ವರಗಳನ್ನು ಕೇಳಿಕೊಳ್ಳಿರಿ.

**ಬ್ರಾಹ್ಮಣರು:-** ಉಮಾಪತಿಯೇ, ನೀನು ನಮಗೆ ವರ ಕೊಡುವುದಾದರೆ ಒಂದು ವರವನ್ನು ಕರುಣಿಸು. ನೀನು ಎಂದೆಂದಿಗೂ ಈ ಕಾಶೀಪಟ್ಟಣವನ್ನು ಬಿಟ್ಟು ಹೋಗ ಬಾರದು. ಈ ಕಾಶಿಯಲ್ಲಿ ಇರುವವರ ಮೇಲೆ ಯಾವ ಶಾಪಾಕ್ಷರವೂ ತಗಲಬಾರದು. ನಿನ್ನ ಅಡಿಗಳಲ್ಲಿ ನಿರಂತರ ಶ್ರದ್ಧೆಯು ನಮ್ಮಲ್ಲಿ ಬೆಳೆಯಲಿ. ಇಲ್ಲಿ ಇರುವ ಈ ಕಾಶೀಪಟ್ಟಣದ ಎಲ್ಲ ಲಿಂಗಗಳಲ್ಲಿ ನೀನು ನಿರಂತರ ವಾಸಮಾಡು.

**ಮಹಾದೇವ:-** ನೀವು ಹೇಳಿದ್ದೆಲ್ಲವೂ ಯಥಾರ್ಥವಾಗಿ ನೆರವೇರುವುದು. ನೀವು ಕೇಳಿದ ವರಗಳನ್ನೆಲ್ಲ ನಾನು ನೀಡಿರುವೆನು. ಅದಲ್ಲದೇ ಇಲ್ಲಿ ನೆಲೆಸಿದ ಎಲ್ಲ ಬ್ರಾಹ್ಮಣರಿಗೂ ನನ್ನ ನಿರಂತರ ಸೇವೆ, ಉತ್ತರವಾಹಿನಿ ಗಂಗೆಯ ಸ್ನಾನ, ಶಿವಲಿಂಗ ಪೂಜೆ, ಇಂದ್ರಿಯ ನಿಗ್ರಹ, ದಾನ, ದಯೆ, ಮುಂತಾದ ಪುಣ್ಯಕರ್ಮಗಳ ಅತ್ಯಲ್ಪ ಆಚರಣೆಯಿಂದಾದರೂ ಲೋಕೋತ್ತರ ಪುಣ್ಯ ಫಲವು ಲಭಿಸುವುದು. ಈ ಕ್ಷೇತ್ರದಲ್ಲಿ ಅಂತ್ಯಕಾಲದಲ್ಲಿ ನೆಲಿಸಿ ಅವಿಮುಕ್ತ ಎಂಬ ಲಿಂಗದ ಸ್ಮರಣೆಯನ್ನು ಮಾಡಿ ವಿಶ್ವನಾಥನ ಸ್ಪರ್ಶನ, ದರ್ಶನ, ಪೂಜನ, ಚಿಂತನಗಳನ್ನು ಮಾಡಿಕೊಂಡು ಇರುವರೋ ಅವರಿಗೆ ನಾನು ಸಾಯುವ ಮುನ್ನ ತಾರಕ ಮಂತ್ರವನ್ನು ಉಪದೇಶಿಸುವೆನು. ಅವರು ಮುಂದೆ ಎಂದೂ ಪುನಃ ಈ ಸಂಸಾರದಲ್ಲಿ ಬರುವುದಿಲ್ಲ. ಈ ತೀರ್ಥದಲ್ಲಿ ಒಮ್ಮೆ ನನ್ನ ದರ್ಶನ ಪೂಜೆ ಮಾಡಿದವರು ಮುಂದೆ ಎಲ್ಲಿಯೇ ಸಾಯಲಿ, ಅವರು ಮುಂದಿನ ಜನ್ಮದಲ್ಲಿ ನನ್ನನ್ನು ಹೊಂದಿ ಮುಕ್ತರಾಗುವರು.

## ಪರಾಪರೇಶ್ವರ, ವ್ಯಾಘ್ರೇಶ್ವರ ಲಿಂಗಗಳ ಮಹಿಮೆ

**ಸ್ಕಂದ:-** ಮುನಿವರ್ಯ ಅಗಸ್ತ್ಯ, ಜ್ಯೇಷ್ಠೇಶ್ವರ ಕ್ಷೇತ್ರದ ಎಲ್ಲ ಕಡೆಗೂ ಮುನಿ ಮಹರ್ಷಿಗಳು ಸ್ಥಾಪಿಸಿದ ಐದುಸಾವಿರ ಶಿವಲಿಂಗಗಳು ಶೋಭಿಸುತ್ತಿವೆ. ಈ ಜ್ಯೇಷ್ಠೇಶ್ವರ ದಿಂದ ಉತ್ತರಕ್ಕೆ ಪರಾಪರೇಶ್ವರ ಲಿಂಗ, ಅದರ ದರ್ಶನಮಾತ್ರದಿಂದಲೇ ದಿವ್ಯಜ್ಞಾನ ಪ್ರಾಪ್ತಿ. ದಂಡಖಾತತೀರ್ಥದ ಸಮೀಪದಲ್ಲಿ ಹಿಂದೆ ಮುನಿಗಳು ತಪಸ್ಸು ಮಾಡುತ್ತಲಿದ್ದಾಗ ಒಂದು ಘಟನೆ ಸಂಭವಿಸಿತು.

ಪ್ರಹ್ಲಾದನ ತಾಯಿಯ ತಮ್ಮ ದುಂದುಭಿನಿಹ್ರಾದ ಎಂಬ ದೈತ್ಯ. ಅವನಿಗೆ ಎಲ್ಲ ದೇವತೆಗಳನ್ನು ಗೆದ್ದು ಸುರಸಾಮ್ರಾಜ್ಯವನ್ನು ತನ್ನ ಪಾದಾಕ್ರಾಂತ ಮಾಡಿಕೊಳ್ಳಬೇಕೆಂಬ ರಾಕ್ಷಸೀ ಮಹತ್ವಾಕಾಂಕ್ಷೆ. ಆದರೆ ಬಲಿಷ್ಠರಾದ ದೇವತಾ ಪುರುಷರನ್ನು ಹೇಗೆ ನಿಗ್ರಹಿಸುವುದು? ಹೇಗೆ ಗೆಲ್ಲುವುದು? ನಿರ್ಜರರನ್ನು ಗೆಲ್ಲುವುದು ಹೇಗೆ? ಅಮರರನ್ನು ಕೊಲ್ಲುವದು ಹೇಗೆ? ಹೀಗೆ ಎಷ್ಟೋ ದಿನ ಯೋಚಿಸಿದ ಬಳಿಕ ಆ ದೈತ್ಯಾಧಮನ ತಲೆಗೆ ಹೊಳೆಯಿತು ಒಂದು ದುರ್ವಿಚಾರ. ದೇವತೆಗಳ ತುಷ್ಟಿ ಪುಷ್ಟಿ ಯಜ್ಞಗಳಿಂದ. ಈ ಯಜ್ಞ ಮಾಡುವವರು ಬ್ರಾಹ್ಮಣರು. ಬ್ರಾಹ್ಮಣರು ಇಲ್ಲದಿದ್ದರೆ ಯಜ್ಞವಿಲ್ಲ. ತುಪ್ಪದ ಆಹುತಿ ಇಲ್ಲ. ದೇವತೆಗಳಿಗೆ ಊಟವಿಲ್ಲ. ಯಜ್ಞಾನ್ನವಿಲ್ಲದೇ ಕೃಶಕಾಯರಾದ ಅಮರಾವತಿಯ ನಾಗರಿಕರನ್ನು ಸುಲಭವಾಗಿ ಕೊಲ್ಲಬಹುದು. ಆದರೆ ದೇವತೆಗಳ ಬಲ, ತುಷ್ಟ ಪುಷ್ಟಿಗಳಿಗೆ ಮುಖ್ಯಕಾರಣವಾದ ಯಜ್ಞಗಳನ್ನು ಬ್ರಾಹ್ಮಣರು ತಾವು ಬದುಕಿ ಇರುವವರೆಗೆ ಬಿಡಲಾರರು. ಈ ಬ್ರಾಹ್ಮಣರನ್ನೇ ಮೊದಲು ಕೊಂದು ಹಾಕಿದರೆ ಯಜ್ಞನಿಂತುಹೋಗಿ ದೇವತೆಗಳೆಲ್ಲರೂ ಉಪವಾಸದಿಂದ ಕ್ಷೀಣರಾಗುವರು. ಅನಂತರ ಅವರ ಪ್ರಾಣ ತೆಗೆಯುವುದು ನನಗೆ ಕಷ್ಟವಾಗುವುದಿಲ್ಲ. ಹೀಗೆ ಯೋಚಿಸಿ, ಆ ದೈತ್ಯಾಧಮನು ಮುನಿಮಹರ್ಷಿಗಳ ನಡುವೆ ತಾನೂ ಒಬ್ಬ ಬ್ರಾಹ್ಮಣನ ವೇಷದಿಂದ ಬಂದು ಕೂಡತೊಡಗಿದನು. ಆ ಬ್ರಾಹ್ಮಣರು ಊರ ಹೊರಗೆ ಸಮಿಧೆ, ಹೂವು, ದರ್ಭೆ, ಗಡ್ಡೆ, ಗೆಣಸು, ತುಳಸಿ, ತರಲು ಹೋದಾಗ ಅವರ ಬೆನ್ನುಹತ್ತಿ ಕಾಡಿಗೆ ಹೋಗಿ ನಿರ್ಜನ ಸ್ಥಾನದಲ್ಲಿ ಅವರ ಮೇಲೆ ಎರಗಿ ಕೊಂದುಬಿಡುತ್ತಲಿದ್ದ. ಹೀಗೆ ಕಾಶಿಯಲ್ಲಿ ಇದ್ದುಕೊಂಡು ಆ ಮಾಯಾವಿ ದೈತ್ಯನು ಎಷ್ಟೋ ಜನ ಬ್ರಾಹ್ಮಣರನ್ನು ಕಾಡು, ಮೇಡು, ನಾಡುಗಳಲ್ಲಿ ಸಮಯ ಸಿಕ್ಕಾಗೆಲ್ಲ ಅನೇಕಾನೇಕ ಸದಾಚಾರ ಸಂಪನ್ನ ಬ್ರಾಹ್ಮಣರನ್ನು ಸಂಹರಿಸಿದ. ಆದರೆ ಆ ದೈತ್ಯನ ಈ ಕಪಟ ಕಾರಸ್ಥಾನ ಯಾರಿಗೂ ಗೊತ್ತೇ ಆಗುತ್ತಿರಲಿಲ್ಲ. ಕಾಶೀಕ್ಷೇತ್ರದ ಎಲ್ಲ ದೇವಸ್ಥಾನ, ಮಠ, ಮಂದಿರ, ಆಶ್ರಮಗಳ ಬೀದಿ ಒಳಹಾದಿ ಹೋಗಿಬರುವ ಗುಪ್ತದಾರಿಗಳನ್ನೆಲ್ಲ ಅಲ್ಲಿಯೇ ಇದ್ದು ಚೆನ್ನಾಗಿ ಅರಿತುಕೊಂಡಿದ್ದ ಆ ಪಾಪಿ. ಎಲ್ಲರೂ ದಣಿದು ಮಲಗಿದಾಗ ಹೆಬ್ಬುಲಿಯ ವೇಷತಾಳಿ ಕೈಗೆ ಸಿಕ್ಕ ಬ್ರಾಹ್ಮಣರನ್ನೆಲ್ಲ ಕೊಂದು ತಿಂದು ಹಾಕಿ ಬಿಡುತ್ತಲಿದ್ದ. ಒಂದು ದಿನ ಶಿವರಾತ್ರಿಯ ಸಮಯ. ಓರ್ವ ಶಿವಭಕ್ತ ಬ್ರಾಹ್ಮಣ ಆ ಪುಣ್ಯದಿನದಂದು ಶಂಕರನ ಪೂಜೆಮಾಡಿದ. ಅನಂತರ ಶಿವಧ್ಯಾನದಲ್ಲಿ ಮೈ ಮರೆತ. ಏಕಾಂತದಲ್ಲಿ ಧ್ಯಾನ ಲೀನನಾದ ಆ ಬ್ರಾಹ್ಮಣ. ಈ ಮಾಯಾವಿ ದೈತ್ಯನ ಕಣ್ಣಿಗೆ ಗೋಚರಿಸಿದ. ತನ್ನ ಶಕ್ತಿಯ ಗರ್ವದಿಂದ ಬೇಗಿ ಭರದಿಂದ ಬಂದ ಆ ದುಂಧುಭಿ ದೈತ್ಯನು ಹುಲಿಯ ರೂಪವನ್ನು ಧರಿಸಿ ಆ ಶಿವಭಕ್ತನನ್ನು ಕಬಳಿಸಲು ಹೊಂಚುಹಾಕಿದ. ಆ ಶಿವಯೋಗಿಗಳಂತೂ ಶಿವನತ್ತಲೇ ಚಿತ್ತ. ಈ ದುರ್ದಾನವನ ದುರ್ವ್ಯಾಪಾರಗಳ ಕಡೆಗೆ ಗಮನವೇ ಇಲ್ಲ ಆ ಶಿವಾನುಭಾವಿಗೆ ವಿಧಿಪೂರ್ವಕವಾಗಿ ಶಿವಮಂತ್ರಗಳ ಅಂಗನ್ಯಾಸ, ಕರನ್ಯಾಸಗಳನ್ನು ಮಾಡಿ ಧ್ಯಾನಗೈದು ಧ್ಯಾನಶ್ಲೋಕಗಳನ್ನು ಹೇಳತೊಡಗಿದ. ಅಷ್ಟರಲ್ಲಿ ಆ ದುಂದುಭಿ ದೈತ್ಯನು ಶಿವನಲ್ಲಿ ತನ್ಮಯನಾದ ಆ ಬ್ರಾಹ್ಮಣನ ಮೇಲೆ ಆಕ್ರಮಣಗೈಯಲು ಪ್ರವೃತ್ತನಾದುದನ್ನು ನೋಡಿ, ಅವನನ್ನು ತಡೆಯಬೇಕೆಂದು ಆ ಬ್ರಾಹ್ಮಣನು ಪೂಜಿಸುವ ಶಿವಲಿಂಗದಿಂದಲೇ ಪ್ರಕಟನಾದ ಪರಮೇಶ್ವರ. ಶಂಕರನು ಆ ಲಿಂಗದ ಪ್ರಾದುರ್ಭೂತನಾದುದನ್ನು ಕಂಡು ಆ ದೈತ್ಯನು ತನ್ನ ಮಾಯೆಯಿಂದ ತನ್ನ ದೇಹವನ್ನು ಭೂತಾಕಾರವಾಗಿ ಬೆಳೆಸಿ ಶಿವನ ಮೇಲೆಯೇ ಎರಿ ಹೋದ.

ಹೀಗೆ ಒಮ್ಮೆಲೆ ತನ್ನ ಮೇಲೆ ಎರಗಿದ ಆ ದೈತ್ಯ ವ್ಯಾಘ್ರವನ್ನು ಶೂಲಪಾಣಿಯು ಹೊಡೆದು,, ಕೈಯಲ್ಲಿ ಹಿಡಿದು, ತನ್ನ ಕಂಕುಳದಲ್ಲಿ ಇಟ್ಟು ಅಮುಕಿದನು. ಭವಾನೀ ಪತಿಯ ಬಗಲಲ್ಲಿಯೆ ಬಲಿಷ್ಠವಾದ ಹಿಡಿತ ಹಾಗೂ ಹಿಚುಕಾಟದಿಂದ ದೈತ್ಯನು ಜರ್ಜರಿತನಾಗಿ ಕೆಟ್ಟದನಿಯಿಂದ ಚೀರತೊಡಗಿದನು. ಆ ದೈತ್ಯನು ಮರಣಾಂತಿಕ ವೇದನೆಯಿಂದ ಕಂಗೆಟ್ಟು ಹೊರಡಿಸಿದ ಆರ್ತನಾದವ ಕೇಳಿ ಎಲ್ಲ ಋಷಿಗಳೂ, ಬ್ರಾಹ್ಮಣರೂ, ಮುನಿಗಳೂ ಕೂಡಿ ಅಲ್ಲಿಗೆ ಬಂದರು. ವ್ಯಾಘ್ರರೂಪಿಯಾದ ದಾನವನನ್ನು ತನ್ನ ಕಂಕುಳದಲ್ಲಿ ಹಿಸುಕಿ ಹೊಸಕಿ ಹಾಕುತ್ತ ಹರದೇವನು ಅಟ್ಟಹಾಸಗೈಯುತ್ತ ನಿಂತುಕೊಂಡಿದ್ದನು. ಅದನ್ನು ನೋಡಿದ ನೆರೆದ ಬ್ರಾಹ್ಮಣರೆಲ್ಲರೂ ಜಯ ಪರಮೇಶ್ವರ, ಜಯ ಹರಹರ, ಜಯ ಮಹಾದೇವ ಎಂದು ಜಯಘೋಷ ಮಾಡಿ, ಸಾಷ್ಟಾಂಗ ವಂದನೆಗೈದು ಕೈ ಜೋಡಿಸಿ ಬೇಡಿಕೊಂಡರು- ''ಜಗದ್ಗುರು, ಈ ದೈತ್ಯನನ್ನು ಭೇದಿಸಿ ನಮ್ಮೆಲ್ಲರನ್ನೂ ನೀನೇ ಮೃತ್ಯುವಿನಿಂದ ಪಾರು ಮಾಡಿದೆ. ಈ ನೀಚನು ಹುಲಿಯ ರೂಪದಿಂದ ಹೊಂಚುಹಾಕಿ ರಾತ್ರಿಕಾಲದಲ್ಲಿ ಅನೇಕ ಬ್ರಾಹ್ಮಣರನ್ನು ಸಂಹಾರಮಾಡಿದ್ದಾನೆ. ಇವನನ್ನು ನಿಗ್ರಹಿಸಿ ನಮ್ಮೆಲ್ಲ ಬ್ರಾಹ್ಮಣರ ಮೇಲೆ ನೀನು ಪರಮಾನುಗ್ರಹ ಮಾಡಿರುವೆ. ಇನ್ನು ಮೇಲೆ ಇದೇ ಸ್ಥಳದಲ್ಲಿ ನೀನು ವ್ಯಾಘ್ರೇಶ್ವರ ಎಂಬ ರೂಪದಲ್ಲಿ ನಿಂತು ಇಲ್ಲಿ ಬಂದ ಯಾತ್ರಿಕರನ್ನು ಅನುಗ್ರಹಿಸು. ಮತ್ತು ಈ ಸ್ಥಾನವನ್ನು ನೀನೇ ರಕ್ಷಿಸು.

ತಪಸ್ವಿಗಳ ಮಾತುಕೇಳಿ ಪ್ರಸನ್ನನಾದ ಚಂದ್ರಶೇಖರನು ನುಡಿದನು- ''ವಿಪ್ರೋತ್ತಮರೇ, ನೀವು ಬಯಸಿದಂತೆ ವ್ಯಾಘ್ರೇಶ್ವರ ರೂಪದಿಂದ ನಾನು ಇಲ್ಲಿಯೇ ಸನ್ನಿಹಿತನಾಗಿರುವೆ. ನನ್ನನ್ನು ಈ ರೂಪದಲ್ಲಿ ನೋಡಿ ಆರಾಧಿಸಿದವರ ಪೀಡೆಗಳನ್ನೆಲ್ಲ ನಿವಾರಿಸಿ, ಪರಮಪದವನ್ನು ನೀಡುವೆನು'' ಎಂದು ಹೇಳಿ ಆ ಲಿಂಗದಲ್ಲಿಯೇ ಲೀನನಾದನು.

## ಕಾಶಿಯಲ್ಲಿ ಹಿಮವಂತನು ಮಾಡಿದ ಶೈಲೇಶ್ವರನ ಲಿಂಗದ ಸ್ಥಾಪನೆ

**ಸ್ಕಂದ:-** ಒಂದು ದಿನ ಪರ್ವತ ಸಾರ್ವಭೌಮ ಹಿಮಾಲಯನ ಮಡದಿಯಾದ ಮೇನೆಯು ಪತಿಯ ಬಳಿಗೆ ಬಂದು ಕೇಳಿದಳು- 'ಪರ್ವತ ರಾಜ, ನಮ್ಮ ಮೆಚ್ಚಿನ ಮಗಳಾದ ಗೌರಿಯ ಮದುವೆ ಮಾಡಿಕೊಂಡು ಅತ್ತೆಯ ಮನೆಗೆ ಹೋದ ಬಳಿಕ ಅವಳಿಂದ ಯಾವ ಸಮಾಚಾರವೂ ತಿಳಿದು ಬಂದಿಲ್ಲ. ಈಗ ನಮ್ಮ ಅಳಿಯನಾದ ಮಹಾದೇವನು ಎಲ್ಲಿ ಇರುತ್ತಾನೆ? ಭಗವಾನ್ ಶಂಕರನ ಹಾಗೂ ಅವನ ಮಡದಿಯ ಸಮಾಚಾರನ್ನು ತಿಳಿಯುವ ಪ್ರಯತ್ನವನ್ನು ಮಾಡಿರಿ.' ಮಡದಿ ಮೇನೆಯ ಬಿನ್ನಹವನ್ನು ಕೇಳಿ ಗಿರಿರಾಜನಿಗೂ ತನ್ನ ಪ್ರೇಮದ ಪುತ್ರಿಯ ವಿಷಯದಲ್ಲಿ ಚಿಂತೆ ಆಯಿತು. ಅವನು ಹೊರಟೇ ಬಿಟ್ಟ ತನ್ನ ತನುಜೆಯ ಸುದ್ದಿ ತಿಳಿದು ಬರಲು. ನೇರವಾಗಿ ಆ ಪರ್ವತೇಶ್ವರನು ಕಾಶೀಪುರಿಗೆ ಆಗಮಿಸಿದ. ಅಲ್ಲಿ ಓರ್ವ ಯಾತ್ರಿಕನನ್ನು ಕಂಡು ಕೇಳಿದ. ಇದು ಯಾವ ಪಟ್ಟಣ? ಇದರ ಒಡೆಯನು ಯಾರು? ಅವನು ಮಾಡುವ ಉದ್ಯೋಗ ಏನು?

**ಯಾತ್ರಿಕ:-** 'ಮಹನೀಯನೆ, ಇದು ಕಾಶೀಕ್ಷೇತ್ರ. ಗೌರೀಪತಿಯಾದ ವಿಶ್ವನಾಥನು ಮಂದರಾಚಲದಿಂದ ಈ ಕಾಶೀಪುರಿಗೆ ಮರಳಿ ಬಂದು ಆರು ದಿನಗಳಾದವು. ಈ ಮೊದಲು ಇಷ್ಟು ಕಾಲದವರೆಗೆ ಈ ಕಾಶೀ ಸಾಮ್ರಾಜ್ಯವನ್ನು ಆಳುತ್ತಲಿದ್ದ ದಿವೋದಾಸ ಎಂಬ ಹೆಸರಿನ ಧರ್ಮನಿಷ್ಠ ಮಹಾರಾಜನು ಈ ಭೂಲೋಕವನ್ನು ತ್ಯಜಿಸಿ ದಿವ್ಯ ಗತಿಯನ್ನು ಹೊಂದಿದನು. ಈಗ ಸರ್ವಜಗತ್ತಿನ ಸ್ವಾಮಿಯಾದ ಮಹಾದೇವನೇ ಈ ಕಾಶೀಪಟ್ಟಣಕ್ಕೂ ಸ್ವಾಮಿ ಜಗದೀಶ್ವರನಾದ ಈ ವಿಶ್ವನಾಥನಿಗೆ ತನ್ನ ಮಗಳನ್ನು ಕೊಟ್ಟ ಗಿರಿರಾಜನು ಗಾತ್ರದಲ್ಲಿ ಇದ್ದಷ್ಟೇ, ಗುಣದಿಂದಲೂ

ಗೌರವದಿಂದಲೂ ಉಚ್ಚತರನಾಗಿದ್ದಾನೆ. ಈಗ ಮಹಾದೇವ ದಂಪತಿಗಳು ಈ ಕಾಶೀಕ್ಷೇತ್ರದ ಜ್ಯೇಷ್ಠೇಶ್ವರ ಎಂಬ ಸ್ಥಾನದಲ್ಲಿ ವಾಸಮಾಡಿದ್ದಾರೆ. ಈಗ ದೇವತೆಗಳ ಬಡಗಿನಾದ ವಿಶ್ವಕರ್ಮನು. ಆ ವಿಶ್ವನಾಥ ದಂಪತಿಗಳಿಗಾಗಿ ಒಂದು ಅತ್ಯದ್ಭುತವಾದ ಭವ್ಯ ಭವನವನ್ನು ನಿರ್ಮಿಸಿದ್ದಾನೆ. ಆ ವಿಶಾಲ ಭವನದ ಗೋಡೆಗಳು ಮಣಿಮಯ, ನೆಲ ರತ್ನಮಯ, ಕಂಬಗಳು ವಜ್ರಮಯ ಹನ್ನೆರಡು ಸಾವಿರ ಸಂಖ್ಯೆಯಲ್ಲಿರುತ್ತವೆ ಆ ವಜ್ರಸ್ತಂಭಗಳು. ಇಂಥ ಅಭೂತಪೂರ್ವವಾದ ಶಿವಮಂದಿರದ ವರ್ಣನೆಯನ್ನು ನಾನೆಂತು ಮಾಡಬಲ್ಲೆ?' ಯಾತ್ರಿಕನ ಮುಖಾಂತರ ಅಳಿಯನು ಈ ಅದ್ಭುತವಾದ ವೈಭವ ಸಮೃದ್ಧಿಯ ಸುದ್ದಿಯನ್ನು ಕೇಳಿ ಆ ಗಿರಿರಾಜನು ಮನಸ್ಸಿನಲ್ಲಿ ಆನಂದಭರಿತನಾದನು. ಅವನು ಆ ಯಾತ್ರಿಕನಿಗೆ ಹಿಡಿ ಹಿಡಿ ಹೊನ್ನುರನ್ನಗಳನ್ನಿತ್ತು ಸಂತೋಷಪಡಿಸಿ ಕಳಿಸಿದನು. ಆದರೆ 'ಮಹಾದೇವನಿಗೆ ಮನೆಮಾರು, ಊರು, ಹೊಲ, ನೆಲ, ಐಶ್ವರ್ಯ ಯಾವುದೂ ಇಲ್ಲ. ದೂರ್ಜಟಿ ಎಂದರೆ ದಟ್ಟ ದರಿದ್ರ. ಮನೆ ಇಲ್ಲದ್ದಕ್ಕಾಗಿ ಸುಡುಗಾಡು ಸೇರಿದ್ದಾನೆ. ಬಟ್ಟೆ ಇಲ್ಲದ್ದಕ್ಕಾಗಿ ಹುಲಿದೊಗಲು ಹೊತ್ತಿದ್ದಾನೆ. ತಿನ್ನಲು ಇಲ್ಲದ್ದಕ್ಕಾಗಿ ತಿರುಪೆ ಬೇಡುತ್ತಾನೆ.' ಎಂದು ಮುಂತಾಗಿ ಶಿವದ್ವೇಷಿಗಳು ಆಡುವ ಮಾತು ಎಷ್ಟು ಮೂರ್ಖತನದ್ದು ಎಂದು ಕಾಶಿಗೆ ಬಂದು ನೋಡಿದರೆ ಗೊತ್ತಾಗುವುದು. ಪರಮೇಶ್ವರನ ಈ ಐಶ್ವರ್ಯದ ಮುಂದೆ ರತ್ನಸಾನು ಎಂದು ಹೆಸರಾದ ನಾನು ಕೂಡ ದೀನದರಿದ್ರನೇ. ನಾನು ಕೇವಲ ಗುಡ್ಡಗಳ ಸ್ವಾಮಿ. ಆದರೆ ನನ್ನ ಅಳಿಯ ಜಗತ್ತಿಗೇ ಸ್ವಾಮಿ ನನ್ನ ಸಂಪತ್ತು ಪರಿಮಿತ. ಪರಮೇಶ್ವರನ ಐಶ್ವರ್ಯ ಅಪರಿಮಿತ. ಈ ಮಗಳು ಅಳಿಯನಿಗೆ ಕೊಡಬೇಕೆಂದು ನಾನು ಹಿಡಿದುಕೊಂಡು ಬಂದ ಮುತ್ತುರತ್ನಗಳ ಕಾಣಿಕೆ, ಆ ಮಹಾದೇವನ ಅಪರಂಪಾರ ಐಶ್ವರ್ಯದ ಮುಂದೆ ಕಳಪೆ ಎನಿಸಿ ನಗಣ್ಯ ಎಂದು ತೋರಬಹುದು. ಆದುದರಿಂದ ಈ ನನ್ನ ಕ್ಷುಲ್ಲಕವಾದ ಕಾಣಿಕೆಯನ್ನು ಹಿಡಿದುಕೊಂಡು ಶಿವನ ದರ್ಶನಕ್ಕೆ ಹೋಗುವುದು ಬೇಡ. ಈ ನನ್ನ ಕ್ಷುಲ್ಲಕವಾದ ಕಾಣಿಕೆಯನ್ನು ಅವರಿಗೆ ಅರ್ಪಿಸುವುದೇ ಬೇಡ ಎಂದು ನಿರ್ಧರಿಸಿದನು.

ಹೀಗೆ ನಿರ್ಧರಿಸಿ ಆ ಶೈಲರಾಜನು ಸಾಯಂಕಾಲದಲ್ಲಿ ತನ್ನ ಎಲ್ಲ ಪಾರ್ವತೀಯ ಅನುಚರರನ್ನು ಕರೆದು ಹೇಳಿದನು- 'ನನ್ನ ಎಲ್ಲ ಪರ್ವತಾತ್ಮಕರಾದ ಸೇವಕರೇ, ನೀವೆಲ್ಲರೂ ಕೂಡಿ ನಾಳೆ ಸೂರ್ಯೋದಯವು ಆಗುವುದರ ಒಳಗೆ, ಒಂದು ದಿವ್ಯ ಭವ್ಯವಾದ ಶಿವಾಲಯವನ್ನು ರಚಿಸಿರಿ. ಆ ಹಿಮಗಿರಿಯ ಆಜ್ಞೆಯಂತೆ ಅವನ ಆ ಎಲ್ಲ ಶೈಲ ಸೇವಕರು, ಅಂದಿನ ರಾತ್ರಿ ಕಳೆಯುವಷ್ಟರಲ್ಲಿ ಪರಮ ಸುಂದರವಾದ ಒಂದು ಶಿವಮಂದಿರ ವನ್ನು ನಿರ್ಮಾಣಮಾಡಿದರು. ಅದರಲ್ಲಿ ಗಿರಿರಾಜ ಹಿಮವಂತನು ಚಂದ್ರಕಾಂತ ಮಣಿಯ ಶೈಲೇಶ್ವರ ಎಂಬ ಹೆಸರಿನ ಶಿವಲಿಂಗವನ್ನು ಪ್ರತಿಷ್ಠಾಪಿಸಿದನು. ಅನಂತರ ಬೆಳಗಾದ ಬಳಿಕ ಪಂಚನದ ಕುಂಡದಲ್ಲಿ ಸ್ನಾನಮಾಡಿ ಕಾಲರಾಜನಾದ ಭೈರವನಿಗೆ ನಮಸ್ಕರಿಸಿ, ತಾನು ಅಳಿಯನಿಗೆ ಕೊಡಬೇಕೆಂದು ತಂದ ರತ್ನ ರಾಶಿಯನ್ನೆಲ್ಲ ಅಲ್ಲಿಯೇ ಬಿಟ್ಟು ಅಲ್ಲಿಂದ ಹೊರಟು ಹೋದನು. ಮರುದಿನ ಸೂರ್ಯೋದಯದ ನಂತರ ಹುಂಡನ, ಮುಂಡನ ಎಂಬ ಇಬ್ಬರು ಶಿವಗಣಾಧೀಶರು ವರಣಾ ನದಿಯ ತೀರದಲ್ಲಿ ಅತಿ ಸುಂದರವಾಗಿ ತಲೆಯೆತ್ತಿ ನಿಂತ ಆ ಶೈವ ಮಂದಿರವನ್ನು ನೋಡಿದರು. ಕೂಡಲೇ ಅವರು ಓಡುತ್ತ ಮಹಾದೇವನ ಬಳಿಗೆ ಹೋಗಿ ಹೇಳಿದರು- 'ದೇವಾ ವರಣಾನದಿಯ ದಂಡೆಯ ಮೇಲೆ ಮನೋಹರವಾದ ಒಂದು ಸುಂದರ ಶಿವಮಂದಿರ ತಲೆಯೆತ್ತಿದೆ. ಅದನ್ನು ಯಾರು ನಿರ್ಮಿಸಿದರೋ ಗೊತ್ತಿಲ್ಲ. ನಿನ್ನೆ ಸಂಜೆಯವರೆಗೆ ಅಲ್ಲಿ ಯಾವ ಮಂದಿರವೂ ಇರಲಿಲ್ಲ. ಈಗ ಬೆಳಗಾಗುವಷ್ಟರಲ್ಲಿ ಅಂಥ ಭವ್ಯ ಭವನವು ಹೇಗೆ ತಲೆಯೆತ್ತಿತು?

ಹುಂಡನ, ಮುಂಡನರ ಈ ಮಾತು ಕೇಳಿ ಅತ್ಯಾಶ್ಚರ್ಯ ಮಹಾದೇವರಿಗೆ. ಪರಮಾಶ್ಚರ್ಯ ಪಾರ್ವತೀದೇವಿಗೆ. ಇಬ್ಬರೂ ಧಾವಿಸಿ ಅಲ್ಲಿಗೆ ಬಂದರು. ಚಂದ್ರಕಾಂತಮಣಿಯ ಅಲ್ಲಿಯ ಶಿವಲಿಂಗವನ್ನು ನೋಡಿದರು. ಈ ಶಿವಲಿಂಗವನ್ನು ಯಾರು ಪ್ರತಿಷ್ಠಿಸಿರಬಹುದು? ಎಂದು ಅವರು ಯೋಚಿಸುವಷ್ಟರಲ್ಲಿ ಅಲ್ಲಿಯೇ ಇರುವ ಶಿಲಾಫಲಕದ ಮೇಲೆ ಅವರ ದೃಷ್ಟಿಹೋಯಿತು. ಅದರಲ್ಲಿ ''ಹಿಮಗಿರಿಯ ಅಲ್ಪ ಸೇವೆ'' ಎಂದು ಕೊರೆಯಲಾಗಿತ್ತು. ಆಗ ಆನಂದಮಂಥರನಾದ ಮಹಾದೇವನು ಪ್ರಮೋದ್ರೇಕ ದಿಂದ ಭವಾನಿಗೆ ನುಡಿದನು- 'ಪ್ರಿಯೇ ಇದು ನಿನ್ನ ತಂದೆಯದೇ ಕಾರ್ಯ. ಚೆನ್ನಾಗಿ ಪರಿಕಿಸಿ ನೋಡು.' ಆಗ ಹೈಮವತಿಯು ತನ್ನ ಆಶ್ಚರ್ಯ ವಿಸ್ಫಾರಿತವಾದ ನೇತ್ರಗಳನ್ನು ಎತ್ತಿ, ಸುತ್ತುಮುತ್ತು ತಿರುಗಿಸಿ ಆ ಶಿವಾಲಯವನ್ನೆಲ್ಲ ಚೆನ್ನಾಗಿ ನೋಡಿದಳು. ಅದರ ಕಲಾ ಕೌಶಲ್ಯ ವೈಶಾಲ್ಯ, ಭವ್ಯತೆ, ದಿವ್ಯತೆ, ಸೌಂದರ್ಯ, ಚಾತುರ್ಯಗಳನ್ನೆಲ್ಲ ಕಂಡು, ಆ ಹಿಮವತ್ಕನ್ಯೆಯ ಹೃದಯದಲ್ಲಿ ಹರ್ಷ. ಹೆಮ್ಮೆ ಎರಡೂ ಹಮ್ಮಿ ಹಮ್ಮಿ ಗರಿಗೆದರಿ ನಿಂತವು. ಆಗ ಅವಳು ಮಹಾದೇವನಿಗೆ ಕೈ ಜೋಡಿಸಿ ಕೇಳಿಕೊಂಡಳು- 'ಪ್ರಾಣನಾಥಾ, ನನ್ನ ತಂದೆ ನಿರ್ಮಿಸಿದ ಈ ಶಿವಲಿಂಗದಲ್ಲಿ ನೀವು ಹಗಲಿರುಳೂ ಅವಸ್ಥಿತರಾಗಿರಿ.'

ಹಾಗೆಯೇ ಆಗಲಿ ಎಂದು ಹೇಳಿದ ಪರಮೇಶ್ವರ ಮತ್ತು ಪಾರ್ವತಿಯನ್ನು ಕುರಿತು ನುಡಿದ- 'ಪ್ರಿಯೆ, ನಾನು ಈ ಶೈಲೇಶ್ವರ ಲಿಂಗದಲ್ಲಿ ನಿರಂತರವೂ ನೆಲಸುತ್ತೇನೆ. ವರಣಾ ನದಿಯಲ್ಲಿ ಸ್ನಾನಮಾಡಿ ಈ ಶೈಲೇಶ್ವರನನ್ನು ಪೂಜಿಸಿದವರಿಗೆ ಮೋಕ್ಷವನ್ನು ಕರುಣಿಸುತ್ತೇನೆ.

## ರತ್ನೇಶ್ವರ ಲಿಂಗದ ಮಹಿಮೆ

**ಸ್ಕಂದ:-** ಶೈಲೇಶ್ವರನ ದರ್ಶನ ಮಾಡಿಕೊಂಡು ಪಾರ್ವತೀ ಪರಮೇಶ್ವರರು ರತ್ನಮಯ ಲಿಂಗವು ಪ್ರಕಟವಾದ ಸ್ಥಳಕ್ಕೆ ಬಂದರು. ಅಲ್ಲಿ ಬಂದು ಅಲ್ಲಿಯ ಶಿವಲಿಂಗದ ದರ್ಶನ ಮಾಡಿಕೊಂಡು, ಅಂಬಿಕಾದೇವಿಯು ಗಂಗಾಧರನಿಗೆ ಕೇಳಿದಳು- 'ಜಗನ್ನಾಥ, ಈ ರತ್ನಲಿಂಗವು ಎಲ್ಲಿಂದ ಪ್ರಕಟವಾಯಿತು? ಇದರ ಮೂಲವು ಕೆಳಗಿನ ಏಳು ಲೋಕಗಳ ಕೊನೆಗೆ ಪಾತಾಳದ ವರೆಗೆ ಇಳಿದಿದೆ. ಇದರ ಸ್ವರೂಪವೇನು? ಹೆಸರು ಏನು? ಪ್ರಭಾವ ಏನು?'

**ಮಹಾದೇವ:-** ದೇವಿ, ನಿನ್ನ ತಂದೆಯಾದ ಹಿಮಗಿರಿಯು ನನಗೂ ನಿನಗೂ ಕೊಡಬೇಕು ಎಂದು ಅಪಾರ ರತ್ನ ರಾಶಿಯನ್ನು ಹಿಡಿದುಕೊಂಡು ಇಲ್ಲಿಗೆ ಬಂದಿದ್ದ. ಆ ಎಲ್ಲ ರತ್ನಗಳನ್ನು ಇಲ್ಲಿ ಕೂಡಿಸಿಟ್ಟು ಅವನು ತನ್ನ ಮನೆಗೆ ಹೋಗಿದ್ದಾನೆ. ಈ ಕಾಶಿಯಲ್ಲಿ ನಡೆದ ಏನೇ ಎಷ್ಟೇ ಶ್ರದ್ಧೆಯಿಂದ ಅರ್ಪಿಸಿದರೂ ಅದಕ್ಕೆಲ್ಲ ಇದರಂತೆಯೇ ಫಲವು ದೊರೆಯುವುದು. ಇಲ್ಲಿರುವ ಎಲ್ಲ ಶಿವಲಿಂಗಗಳಲ್ಲಿ ಈ ರತ್ನೇಶ್ವರ ಲಿಂಗವು ಶ್ರೇಷ್ಠ. ನಿಮ್ಮ ತಂದೆಯು ಇಲ್ಲಿ ಸುವರ್ಣ ರಾಶಿಯನ್ನೇ ತಂದು ಒಟ್ಟಿದ್ದಾನೆ. ಅದರಿಂದ ನೀನು ಈ ರತ್ನೇಶ್ವರ ಲಿಂಗಕ್ಕಾಗಿ ಒಂದು ಮಹಾಮಂದಿರವನ್ನು ಜೀರ್ಣೋದ್ಧಾರ ಮಾಡಿದರೂ ಶಿವಲಿಂಗ ಸ್ಥಾಪನೆ ಮಾಡಿದಷ್ಟೇ ಪುಣ್ಯ ಬರುವುದು.

ಪತಿಯ ಆಜ್ಞೆಯನ್ನು ಶಿರಸಾ ವಹಿಸಿ ಸತೀಮಣಿಯು ತನ್ನ ನಂದಿ ಮುಂತಾದ ಪಾರ್ಷದವರಿಗೆ ಒಂದು ಶಿವಮಂದಿರವನ್ನು ನಿರ್ಮಿಸಲು ಆಜ್ಞೆಮಾಡಿದಳು. ಮೂರು ಗಂಟೆಯಲ್ಲಿ ಆ ಶಿವ ಪಾರ್ಷದವರೆಲ್ಲರೂ ಕೂಡಿ ಸುಮೇರು ಶಿಖರದಂತೆ ಸುಂದರವಾದ ಒಂದು ಸುವರ್ಣ ಮಂದಿರವನ್ನು ನಿರ್ಮಿಸಿದರು. ಅನಂತರ ಪರಮೇಶ್ವರನು ತನ್ನ ಮನದನ್ನೆಗೆ ಆ ರತ್ನೇಶ್ವರ ಲಿಂಗದ ಮಹಾಮಹಿಮೆಯನ್ನು ತಿಳಿಸಿ ಹೇಳಿದನು.

**ಮಹಾದೇವ:-** ದೇವಿ, ಈ ಶಿವಲಿಂಗವು ಅನಾದಿ ಸಿದ್ಧ. ನಿನ್ನ ತಂದೆಯ ಪುಣ್ಯ ಗೌರವದಿಂದಲೇ ಇದು ಪ್ರಕಟ. ಗೋಪನೀಯ ವಸ್ತುಗಳಲ್ಲಿ ಇದು ಅತ್ಯಂತ ಗೌಪ್ಯತಮ ಕೋಟಿ ರುದ್ರ ಸೂಕ್ತಗಳ ಜಪದಿಂದ ಬರುವ ಪುಣ್ಯ ಈ ರತ್ನೇಶ್ವರ ಲಿಂಗದ ಪೂಜೆಯಿಂದ ಬರುವುದು. ಇಷ್ಟು ದಿನ ಗುಪ್ತವಾದ ಈ ಲಿಂಗವು ನಿನ್ನ ತಂದೆಯ ಪುಣ್ಯದಿಂದ ಅವನು ತಂದು ಒಟ್ಟಿದ ಮಹಾರತ್ನಗಳ ಮುಖಾಂತರ ಪ್ರಕಟ ರೂಪವನ್ನು ಪಡೆದಿದೆ. ಕಾಶಿಗೆ ಬಂದವರು ತಪ್ಪದೇ ಈ ಶಿವಲಿಂಗವನ್ನು ಪೂಜಿಸಬೇಕು.

## ಕೃತ್ತಿವಾಸೇಶ್ವರನ ಮಹಿಮೆ

**ಸ್ಕಂದ:-** ಕಲಶೀಕುಮಾರ, ಮುಕ್ಕಣ್ಣನು ಈ ರೀತಿಯಾಗಿ ರತ್ನೇಶ್ವರ ಲಿಂಗದ ಮಹಿಮೆಯನ್ನು ಬಣ್ಣಿಸುತ್ತಲಿರುವಾಗಲೇ ಎಲ್ಲ ಕಡೆಯಿಂದಲೂ 'ರಕ್ಷಿಸಿರಿ' 'ರಕ್ಷಿಸಿರಿ' 'ರಕ್ಷಿಸಿರಿ' ಎಂದು ಮಹಾಕೋಲಾಹಲದ ಧ್ವನಿಯು ಕೇಳಿಬಂದಿತು. ಮದೋನ್ಮತ್ತನಾದ ಮಹಿಷಾಸುರನ ಮಗ ಗಜಾಸುರನು ದೂರಿಂದ ಬರುತ್ತಲಿದ್ದ. ಅವನು ಹೆಜ್ಜೆ ಇರಿಸಿದ ಮಾತ್ರಕ್ಕೆ ಪ್ರಥ್ವಿಯು ಕಂಪಿಸುತ್ತಿತ್ತು. ಆ ಗಜಾಸುರನು ಬ್ರಹ್ಮದೇವರನ್ನು ಕುರಿತು ತಪಸ್ಸುಮಾಡಿ ವರ ಪಡೆದುಕೊಂಡಿದ್ದ. ''ಕಾಮನ ಕೈವಶರಾದ ಪ್ರಾಣಿಗಳಿಂದ ನಾನು ಸಾಯಬಾರದು'' ಎಂದು ಅವನಿಗೆ ಬ್ರಹ್ಮವರ, ಶಿವನ ಹೊರತು ಜಗತ್ತಿನಲ್ಲಿ ಎಲ್ಲ ದೇವತೆಗಳೂ ಮಾನವರೂ ಕಾಮನ ಕೈಗೊಂಬೆಗಳೇ, ಕಾಮನನ್ನು ಗೆದ್ದವ ಶಂಕರನೊಬ್ಬನೇ. ಅವನನ್ನು ಬಿಟ್ಟು ಬೇರೆ ಯಾರೂ ಗಜಾಸುರನನ್ನು ಗೆಲ್ಲಲಾರರು ಮತ್ತು ಕೊಲ್ಲಲಾರರು. ಇದು ಬ್ರಹ್ಮದೇವರ ವರ. ಇದರಿಂದ ಮದೋನ್ಮತ್ತನಾದ ಆ ದೈತ್ಯ ಜಗತ್ತನ್ನೇ ಕಬಳಿಸಲು ಹೊರಟಿದ್ದ. ಅವನಿಂದ ಸಂತ್ರಸ್ತರಾಗಿ ಭಯಭ್ರಾಂತರಾದ ಮುನಿ, ಮನುಜ, ಮಾನವ, ದಾನವ, ದೇವತೆಗಳೆಲ್ಲರೂ 'ರಕ್ಷಿಸಿರಿ ರಕ್ಷಿಸಿರಿ' ಎಂದು ಕೂಗಿಕೊಳ್ಳ ತೊಡಗಿದರು. ಜನರ ಮೊರೆಯನ್ನು ಕೇಳಿ ಎದ್ದು ಬಂದ ವೃಷಭಧ್ವಜ. ಅವನನ್ನು ನೋಡಿದ ಕೂಡಲೇ ಗಜಾಸುರನಿಗೆ ಕೋಪ ಕೆರಳಿತು. ಶಂಕರನ ಮೇಲೆಯೇ ಏರಿ ಬಂದ ಆ ಭಂಯಕರ ದೈತ್ಯ, ಆಗ ಮಹಾದೇವನು ತನ್ನ ತ್ರಿಶೂಲನವನ್ನು ಎತ್ತಿ ಆ ದೈತ್ಯನಿಗೆ ಪ್ರಹಾರ ಮಾಡಿದ. ಆ ತ್ರಿಶೂಲವು ದೈತ್ಯನ ದೇಹದಲ್ಲಿ ನೆಟ್ಟಿತು. ಪರಮೇಶ್ವರನು ತನ್ನ ತ್ರಿಶೂಲದ ತುದಿಯಿಂದ ಆ ದೈತ್ಯನನ್ನು ಹಾಗೇ ಎತ್ತಿದ. ಶಿವನ ತಲೆಯ ಮೇಲೆ ಗಜಾಸುರನ ದೇಹವು ಒಂದು ಛತ್ರದಂತೆ ಆದುದನ್ನು ಕಂಡು ಆ ಅಸುರನಿಗೆ ಅಮಿತ ಆನಂದ. ಅವನು ಕೈ ಮುಗಿದು ಪರಶಿವನನ್ನು ಪ್ರಾರ್ಥಿಸಿದ- ''ದೇವೇಶ್ವರ, ನೀನು ಕಾಮನನ್ನು ಗೆದ್ದವ ಎಂಬುದನ್ನು ನಾನು ಬಲ್ಲೆ. ನಿನ್ನ ಕೈಯಿಂದ ನನಗೆ ಮರಣವು ವಾಂಛನೀಯವೇ. ಇಂದು ನಿನ್ನ ತ್ರಿಶೂಲದ ಅಗ್ರಭಾಗದಲ್ಲಿ ನಾನು ಇದ್ದುದರಿಂದ ಇದು ಒಂದು ರೀತಿಯಿಂದ ನನ್ನದೇ ವಿಜಯ. ನಿನ್ನ ಶೂಲಾಗ್ರಹದ ಮೇಲೆ ನನಗೆ ನಿಲ್ಲಲು ಅವಕಾಶ ಮಾಡಿ ಕೊಟ್ಟದ್ದಕ್ಕಾಗಿ ನಾನು ಇಂದು ನಿನಗೆ ಕೃತಜ್ಞನಾಗಿದ್ದೇನೆ. ಇದೂ ಒಂದು ನನ್ನ ಮೇಲೆ ಅನುಗ್ರಹ ಎಂದೇ ಭಾವಿಸಿದ್ದೇನೆ. ಹುಟ್ಟಿದ ಪ್ರಾಣಿಗೆ ಸಾವು ತಪ್ಪಿದ್ದಲ್ಲ. ಆದರೆ ನಿನ್ನ ಕೈಯಿಂದ ನಿನ್ನ ತ್ರಿಶೂಲಾಯುಧದಿಂದ ಆ ಸಾವು ಬಂದರೆ ಅದರಂತಹ ಪುಣ್ಯ ಯಾವುದು?''

ಗಜಾಸುರ ಮಾತು ಕೇಳಿ ಕೌತುಕವೆನಿಸಿತು ಕೈಲಾಸಪತಿಗೆ. ಕರುಣೆಯೂ ಉಕ್ಕಿತು ಆ ದೈತ್ಯಾಧಮನ ಮೇಲೆ. ಅವನಿಗೆ ಬೇಕಾದ ವರ ಬೇಡಲು ಹೇಳಿದ. ಸಾಯಲಿರುವ ಆ ಸುರವೈರಿಗೆ ಶಂಕರನ ಈ ಮಾತು ಅಪ್ಯಾಯನ ಎನಿಸಿತು. ಮರಣೋನ್ಮುಖನಾದ ಆ ದಾನವೇಂದ್ರ ಕೈಮುಗಿದು ಬೇಡಿಕೊಂಡ.

**ಗಜಾಸುರ:-** ದಿಗಂಬರ ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ ನನ್ನ ದೇಹದ ಮೇಲಿನ ಈ ಗಜಚರ್ಮವನ್ನು ನೀನು ಬಟ್ಟೆಯ ರೂಪದಿಂದ ಧರಿಸು. ನೀನು ಧರಿಸಿದಾಗ ಈ ನನ್ನ ಮೈದೊಗಲಿನಿಂದ ಸುಗಂಧ ಸೂಸಲಿ. ಇದು ನಿನಗೆ ಧಾರಣೆಗೆ ಅನುಕೂಲ ವಾಗುವಂತೆ ಹದವಾಗಿ ಮಿದುವಾಗಲಿ. ಇದರ ಮೇಲೆ ಯಾವುದೇ ಕಿಟ್ಟ ಕಶ್ಮಲ ಕೂಡದೇ ನಿರ್ಮಲವಾಗಿ ನಿನ್ನ ಮೈಮೇಲೆ ಇದೊಂದು ಅಭೂಷಣದಂತೆ ಶೋಭಿಸಲಿ. ಇದನ್ನು ಧರಿಸಿದ ನೀನು ಇಂದಿನಿಂದ ಕೃತ್ತಿವಾಸ ಎಂದು ಪ್ರಸಿದ್ಧನಾಗು.

**ಮಹಾದೇವ:-** ದೈತ್ಯರಾಜ, ನಿನ್ನ ಅಪೇಕ್ಷೆಯನ್ನು ನಡೆಸಿಕೊಡುತ್ತೇನೆ. ಇಂದಿನಿಂದ ನಿನ್ನ ಆನೆಯ ಮೈದೊಗಲನ್ನು ಧರಿಸಿ ನಾನು ಕೃತ್ತಿವಾಸನಾಗುತ್ತೇನೆ. ಈ ಮುಕ್ತಿಕ್ಷೇತ್ರದಲ್ಲಿ ನಿನ್ನ ಈ ಶರೀರವು ನನ್ನ ಲಿಂಗ ವಿಗ್ರಹವಾಗಲಿ. ಇದಕ್ಕೆ ಕೃತ್ತಿವಾಸೇಶ್ವರ ಎಂದು ಹೆಸರು ಬಂದು ಮಹಾಪಾತಕಗಳನ್ನು ನಾಶಮಾಡುವ ಸರ್ವಶಿವಲಿಂಗಗಳ ಶಿರೋಮಣಿ ಆಗಲಿ. ರುದ್ರ, ಪಾಶುಪಾತ, ಸಿದ್ಧ, ಶಾಂತ, ದಾಂತ, ದ್ವಂದ್ವರಹಿತ ಮುಂತಾದ ಬಗೆಬಗೆಯ ನನ್ನ ಭಕ್ತರಾದ ಸಾಧುಗಳು ಕಾಶಿಯಲ್ಲಿ ಇರುತ್ತಾರೆ. ಅವರೆಲ್ಲರಿಗೂ ಅನುಗ್ರಹ ಮಾಡಲು ನಾನು ಈ ಕೃತ್ತಿವಾಸೇಶ್ವರ ಲಿಂಗದಲ್ಲಿ ನಿರಂತರ ನೆಲೆಸುತ್ತೇನೆ. ಹೀಗೆ ಹೇಳಿ ಮಹಾದೇವನು ಗಜಾಸುರನ ಚರ್ಮವನ್ನು ಉತ್ತರೀಯವಾಗಿ ತನ್ನ ಮೈ ಮೇಲೆ ಹೊದ್ದುಕೊಂಡನು. ದಿಗಂಬರನಾದ ಮಹಾದೇವನು ಆ ಆನೆಯ ಚರ್ಮವನ್ನು ಹೊದ್ದುಕೊಂಡ ದಿನ ಕಾಶಿಯಲ್ಲಿ ದೊಡ್ಡ ಉತ್ಸವವಾಯಿತು. ಮಹಾದೇವನು ತ್ರಿಶೂಲವನ್ನು ನೆಲದಲ್ಲಿ ನೆಟ್ಟು ಅದರ ತುದಿಯಲ್ಲಿ ಗಜಾಸುರನನ್ನು ಛತ್ರದಂತೆ ಎತ್ತಿ ಹಿಡಿದಾಗ ಆ ತ್ರಿಶೂಲದ ಮೂಲವನ್ನು ನೆಟ್ಟ ಸ್ಥಳದಲ್ಲಿ ಒಂದು ದೊಡ್ಡ ತೆಗ್ಗು ಬಿದ್ದಿತು. ಅದರಲ್ಲಿ ನೀರು ತುಂಬಿ ಹಂಸತೀರ್ಥ ಎಂಬ ಹೆಸರಿನಿಂದ ಕೃತ್ತಿಕಾಸೇಶ್ವರನ ಸಮೀಪದಲ್ಲಿಯೇ ಒಂದು ಕುಂಡವು ನಿರ್ಮಿತಗೊಂಡಿತು. ಈ ಹಂಸತೀರ್ಥದ ಸುತ್ತುಮುತ್ತಲೂ ಮುನಿ ಮಹರ್ಷಿಗಳು ಸ್ಥಾಪಿಸಿದ ಹತ್ತುಸಾವಿರ ಶಿವಲಿಂಗಗಳು ಇರುತ್ತವೆ. ಇವುಗಳಲ್ಲಿ ಮೊದಲನೆಯದು ಕಾತ್ಯಾಯನೇಶ್ವರ. ಕೊನೆಯದು ಚ್ಯವನೇಶ್ವರ.

## ಕಾಶಿಗೆ ಎಲ್ಲ ತೀರ್ಥ ದೇವತೆಗಳ ಆಗಮನ ಮತ್ತು ಅವುಗಳ ಸ್ಥಾನ

**ಸ್ಕಂದ:-** ಮಹಾದೇವರು ಲೀಲೆಯಿಂದ ಗಜಾಸುರನನ್ನು ಸಂಹರಿಸಿ ಅವನ ಚರ್ಮವನ್ನು ಧರಿಸಿದ ಸ್ಥಳವು ರುದ್ರಾವಾಸ ಎಂದು ಹೆಸರಾಗಿದೆ. ಅನಂತರ ಶಂಕರನು ಪಾರ್ವತಿಯೊಂದಿಗೆ ಸ್ವೇಚ್ಛೆಯಿಂದಲೇ ಕೃತ್ತಿವಾಸ ತೀರ್ಥದಲ್ಲಿ ವಾಸ್ತವ್ಯ ಹೂಡಿದ. ಅವನ ವಾಹನನಾದ ನಂದಿಯು ಅಲ್ಲಿಗೇ ಬಂದು ಆ ಚಂದ್ರಚೂಡನನ್ನು ವಂದಿಸಿ ಸೂಚನೆ ನೀಡಿದ.

**ನಂದಿ:-** ಭಗವನ್ ಎಲ್ಲ ಮೂರು ಲೋಕಗಳಲ್ಲಿ ಇರುವ ಮುಕ್ತಿದಾಯಕವಾದ ತೀರ್ಥಗಳನ್ನೂ ಎಲ್ಲ ದೇವತೆಗಳನ್ನೂ ನಾನು ಈ ಕಾಶೀಕ್ಷೇತ್ರಕ್ಕೆ ಕರತಂದಿದ್ದೇನೆ. ಕುರುಕ್ಷೇತ್ರದಿಂದ ಆ ತೀರ್ಥದ ಜೊತೆಗೆ ಸ್ಥಾನಲಿಂಗವೂ ಇಲ್ಲಿಗೆ ಆಗಮಿಸಿದೆ. ಅದು ಲೋಲಾರ್ಕದ ಪಶ್ಚಿಮ ಭಾಗದಲ್ಲಿ ಈಗ ನೆಲೆಸಿದೆ. ಢುಂಢಿ ರಾಜನ ಉತ್ತರ ಭಾಗದಲ್ಲಿ ದೇವದೇವೇಶ್ವರ ಲಿಂಗವು ಇರುತ್ತದೆ. ಗೋಕರ್ಣ ಸ್ಥಾನದಿಂದ ಸ್ವಯಂ ಪ್ರಕಟವಾದ ಮಹಾಬಲ ಎಂಬ ಶಿವಲಿಂಗವು ಸಾಂಬಾದಿತ್ಯದ ಹತ್ತಿರದಲ್ಲಿ ಪ್ರತಿಷ್ಠಿತವಾಗಿದೆ. ಋಣಮೋಚನದ ಪೂರ್ವಭಾಗದಲ್ಲಿ ಶಶಿಭೂಷಣ ಲಿಂಗ. ಓಂಕಾರೇಶ್ವರ ಮಹಾಲಿಂಗದ ಪೂರ್ವಕ್ಕೆ ದರ್ಶನ ಮಾತ್ರದಿಂದ ಮುಕ್ತಿಕೊಡುವ ಮಹಾಕಾಲ ಎಂಬ ಶಿವಲಿಂಗವು ಪ್ರತಿಷ್ಠಿತವಾಗಿದೆ. ಮಚ್ಛೋದರಿಯ ಉತ್ತರ ಭಾಗದಲ್ಲಿ ಪುಷ್ಕರಕ್ಷೇತ್ರದಿಂದ ಬಂದ

ಅಯೋಗಂಧೇಶ್ವರ ಎಂಬ ಶಿವಲಿಂಗವು ಸ್ವಯಂ ಪ್ರಕಟವಾಗಿದೆ. ಕಾಮೇಶ್ವರದ ಉತ್ತರ ಭಾಗದಲ್ಲಿ ಮರುತ್ಕೋಟಿಯಿಂದ ಬಂದ ಮಹೋತ್ಕಟೇಶ್ವರ ಲಿಂಗದ ಸನ್ನಿಧಾನ. ಸ್ವನೀಲೇಶ್ವರದ ಪಶ್ಚಿಮ ಭಾಗದಲ್ಲಿ ವಿಶ್ವಸ್ಥಾನದಿಂದ ಬಂದ ವಿಮಲೇಶ್ವರ ಲಿಂಗ ಗಯಾತೀರ್ಥದಿಂದ ಎಂಟೂವರೆ ಕೋಟಿ ತೀರ್ಥಗಳ ಜೊತೆಗೆ ಪಿತಾಮಹೇಶ್ವರ ಲಿಂಗವು ಈ ಕಾಶೀಪಟ್ಟಣಕ್ಕೆ ಬಂದು ಇಲ್ಲಿ ಸುಸ್ಥಿರವಾಗಿದೆ. ಮುಕ್ತಿಮಂಟಪದ ದಕ್ಷಿಣದಲ್ಲಿ ಪ್ರಯಾಣ ತೀರ್ಥ ಮತ್ತು ಶೂಲಟಂಕೇಶ್ವರ ಎಂಬ ಶಿವಲಿಂಗಗಳು ಆಗಮಿಸಿ ಇಲ್ಲಿ ಸುಸ್ಥಿತಿ ಪಡೆದಿವೆ. ಇಲ್ಲಿಯ ವಿನಾಯಕೇಶ್ವರನ ಪೂರ್ವಭಾಗದಲ್ಲಿ ಶಂಕುಕರ್ಣ ಕ್ಷೇತ್ರದಿಂದ ಮಹಾತೇಜ ಎಂಬ ಶಿವಲಿಂಗವು ಇಲ್ಲಿ ಪ್ರಕಟವಾಗಿದೆ. ಇಲ್ಲಿಯ ಪಾರ್ವತೀಶ್ವರ ಲಿಂಗದ ಸಮೀಪದಲ್ಲಿ ರುದ್ರಕೋಟಿ ತೀರ್ಥದಿಂದ ಮಹಾಯೋಗೀಶ್ವರ ಲಿಂಗವು ಪ್ರಕಟವಾಗಿದೆ. ಈ ಮಂದಿರದ ಸುತ್ತಲೂ ಅಸಂಖ್ಯ ರುದ್ರ ಮಂದಿರಗಳು ರುದ್ರ ಮೂರ್ತಿಗಳು ಕಂಗೊಳಿಸುತ್ತವೆ. ಕಾಶಿಯ ಮೇದವಾದಿ ವಿದ್ವಾಂಸರು ಅದಕ್ಕೆ ರುದ್ರಸ್ಥಲೀ ಎಂದು ಕರೆಯುವರು. ಏಕಾಂಬರ ಕ್ಷೇತ್ರದಿಂದ ಕೃತ್ತಿವಾಸ ಎಂಬ ಮಹಾದೇವನು ಇಲ್ಲಿಗೆ ಬಂದು ಕಾಶಿಯ ಕೃತ್ತಿವಾಸೇಶ್ವರ ಲಿಂಗದಲ್ಲಿ ಪ್ರತಿಷ್ಠಿತನಾಗಿದ್ದಾನೆ. ಈ ಸ್ಥಾನದಲ್ಲಿ ಶಿವನು ತನ್ನ ಭಕ್ತರ ಕಿವಿಯಲ್ಲಿ ತಾರಕ ಮಂತ್ರವನ್ನು ಉಪದೇಶಿಸುತ್ತಾನೆ.

ಕುರುಜಾಂಗಲ ಕ್ಷೇತ್ರದಿಂದ ಚಂಡೀಶ್ವರ, ಕಾಲಂಬರದಿಂದ ನೀಲಕಂಠ, ಇಲ್ಲಿಗೆ ಬಂದು ದಂತ ಕೂಟ ಗಣೇಶನ ಸಮೀಪದಲ್ಲಿ ಸ್ಥಾನಾಪನ್ನರಾಗಿದ್ದಾರೆ. ಶಾಲಕಂಟಕದ ಪೂರ್ಣಭಾಗದಲ್ಲಿ ಕಾಶ್ಮೀರದಿಂದ ಬೀಜೇಶ್ವರ ಲಿಂಗವು ಪ್ರಕಟವಾಗಿದೆ. ಕೂಷ್ಮಾಂಡ ಗಣೇಶನ ಎದುರು ತ್ರಿದಂಡಾಪುರಿಯಿಂದ ಇಲ್ಲಿಗೆ ಬಂದ ಭಗವಾನ್ ಊರ್ಧ್ವರೇತ ಮಹಾದೇವನು ಕೂಷ್ಮಾಂಡ ಗಣೇಶನನ್ನು ಮುಂದೆ ಮಾಡಿಕೊಂಡು ನಿಂತುಕೊಂಡಿದ್ದಾನೆ. ಮಂಡವಿನಾಯಕನ ಉತ್ತರದಿಕ್ಕಿನಲ್ಲಿ ಮಂಡಲೇಶ್ವರ ಕ್ಷೇತ್ರದಿಂದ ಬಂದ ಶ್ರೀಕಂಠಲಿಂಗ ಭಾಗಲಾಂಡ ತೀರ್ಥದಿಂದ ಬಂದ ಕಪರ್ದೀಶ್ವರನು ಕಾಶಿಯ ಪಿಶಾಚಮೋಚನ ತೀರ್ಥದಲ್ಲಿ ಸ್ವಯಂ ಪ್ರಕಟಿತ, ವಿಕಟದಂತ, ಎಂಬ ಹೆಸರಿಂದ ಗಣೇಶನ ಸಮೀಪದಲ್ಲಿ ಆಮ್ರಾತಕೇಶ್ವರ ಕ್ಷೇತ್ರದಿಂದ ಬಂದ ಸೂಕ್ಷ್ಮೇಶ್ವರ ಲಿಂಗದ ಸುಸ್ಥಿತಿ. ಮಧುಕೇಶ್ವರ ಕ್ಷೇತ್ರದಿಂದ ಬಂದ ಜಯಂತೇಶ್ವರನು ಲಂಬೋದರ ಗಣೇಶನ ಪೂರ್ಣಭಾಗದಲ್ಲಿ ಅವಸ್ಥಿತ. ಶ್ರೀಶೈಲದಿಂದ ತ್ರಿಪುರಾಂತಕ ಲಿಂಗವು ಈ ಕಾಶಿಯಲ್ಲಿಯೇ ಪ್ರಕಟವಾಗಿದೆ.

ಇದೇ ರೀತಿಯಾಗಿ ಸೌಮ್ಯ ಸ್ಥಾನದಿಂದ ಕುಕ್ಕುಟೇಶ್ವರ, ಜಾಲೇಶ್ವರ ತೀರ್ಥದಿಂದ ತ್ರಿಶೂಲೇಶ್ವರ. ರಾಮೇಶ್ವರದಿಂದ ಜಟಾಧಾರಿ ಪರಮೇಶ್ವರ. ತ್ರಿಸಂಧ್ಯ ಕ್ಷೇತ್ರದಿಂದ ತ್ರ್ಯಂಬಕ. ಹರಿಶ್ಚಂದ್ರದಿಂದ ಹರೇಶ್ವರ. ಮಧ್ಯಮ ಕೇಶ್ವರದಿಂದ ಸಹಸ್ರಾಕ್ಷ ಶಿವಲಿಂಗ, ವೃಷಧ್ವಜ ತೀರ್ಥದಿಂದ ವೃಷೇಶ್ವರ, ಕೇದಾರದಿಂದ ಈಶಾನೇಶ್ವರ, ಭೈರವ ಕ್ಷೇತ್ರದಿಂದ ಭೈರವಮೂರ್ತಿ, ಕನಖಲ ತೀರ್ಥದಿಂದ ಸಿದ್ಧಿದಾಯಕ, ದೇವದಾರು ವನದಿಂದ ದಂಡೀಶ. ಭದ್ರಕರ್ಣ ಕುಂಡದಿಂದ ಭದ್ರಕರ್ಣೇಶ್ವರ. ಯಮಲಿಂಗ ತೀರ್ಥದಿಂದ ಕಾಮಲಿಂಗ, ನೇಪಾಲದಿಂದ ಪಶುಪತಿ, ಕರವೀರದಿಂದ ಕಪಾಲೀಶ್ವರ, ಮಹೇಶ್ವರ ಕ್ಷೇತ್ರದಿಂದ ದೀಪ್ತೇಶ್ವರ, ಗಂಗಾಸಾಗರ ತೀರ್ಥದಿಂದ ಅಮರೇಶ, ಸಪ್ತಗೋದಾವರೀ ತೀರ್ಥದಿಂದ ಭೀಮೇಶ್ವರ, ಭೂತೇಶ್ವರ ಕ್ಷೇತ್ರದಿಂದ ಭಸ್ಮಗಾತ್ರ ಲಿಂಗ. ನಕುಲೀಶ್ವರ ತೀರ್ಥದಿಂದ ಸ್ವಯಂಭೂಲಿಂಗ, ಪ್ರಯಾಣ ತೀರ್ಥದಿಂದ ಧರಣೀ ವರಾಹ, ಹಿಮಕೂಟ ಪರ್ವತದಿಂದ ವಿರೂಪಾಕ್ಷ ಲಿಂಗ,

ಹರಿದ್ವಾರದಿಂದ ಹಿಮಸ್ಥೇಶ ಲಿಂಗ, ಮುಂತಾದ ಎಲ್ಲ ಕ್ಷೇತ್ರಗಳ ತೀರ್ಥಗಳೂ ದೇವತೆಗಳೂ ಲಿಂಗಗಳೂ ಒಂದೊಂದು ರೂಪದಿಂದ ಅವಿಮುಕ್ತ ಕ್ಷೇತ್ರವಾದ ಈ ಕಾಶಿಯ ಪುಣ್ಯಭೂಮಿಯಲ್ಲಿ ಬಂದು ನೆಲೆಸಿರುತ್ತವೆ. ಕೈಲಾಸದಿಂದ ಗಣೇಶ ಮತ್ತು ಏಳು ಕೋಟಿ ಶಿವಪಾರ್ಷದರು ಇಲ್ಲಿಗೆ ಆಗಮಿಸಿದ್ದಾರೆ. ಈ ಎಲ್ಲ ಪಾರ್ಷದರು ಕಾಶಿಯ ಸುತ್ತಲೂ ನಾಲ್ಕು ಕಡೆಗೆ ಪರ್ವತದಂತೆ ಉಚ್ಚವಾದ ಪ್ರಾಕಾರವನ್ನು ಸಿದ್ಧಪಡಿಸಿದ್ದಾರೆ. ಹಾಗೂ ಈ ವಾರಾಣಸಿಯ ಸುತ್ತುಮುತ್ತು ಕಂದಕವನ್ನು ತೋಡಿ ಮತ್ಸ್ಯೋದರಿಯ ನೀರಿನಿಂದ ತುಂಬಿದ್ದಾರೆ. ಆ ನೀರು ಗಂಗೆಯ ಜಲದೊಂದಿಗೆ ಮಿಲಿತವಾಗಿ ಮಹಾತೀರ್ಥವಾಗಿದೆ. ಗಂಗೆಯು ತಿರುಗು ಸೆಳವಿನಲ್ಲಿ ಹರಿದಾಗ ಗಂಗೆಯ ನೀರು ಮತ್ಸ್ಯೋದರಿಯಲ್ಲಿಯೇ ನುಗ್ಗಿ ಅದೊಂದು ಪವಿತ್ರ ನದಿಯಾಗಿಯೇ ಮಾರ್ಪಡುತ್ತದೆ. ಗಂಗೆಯ ನೀರು ಮತ್ಸ್ಯೋದರಿಯ ಪ್ರವಾಹದ ಉದಕದಲ್ಲಿ ಪ್ರವೇಶಿಸಿದಾಗ ಈ ಸಮಗ್ರ ಕಾಶೀಪಟ್ಟಣವು ಮೀನದ ಆಕಾರವಾಗಿ ಕಾಣುತ್ತದೆ. ಗಂಧಮಾಧನ ಪರ್ವತದಿಂದ ಭೂರ್ಭುವಃ ಎಂಬ ಲಿಂಗವೂ, ಏಳು ಪಾತಾಳ ತಳದಿಂದ ಹಾಟಕೇಶ್ವರ ಲಿಂಗವೂ, ನಕ್ಷತ್ರ ಲೋಕದಿಂದ ಜ್ಯೋತಿರ್ಮಯ ಲಿಂಗವೂ, ಕಿರಾತ ತೀರ್ಥದಿಂದ ಕಿರಾತೇಶ್ವರ ಲಿಂಗವೂ, ಲಂಕಾಪೂರಿಯಿಂದ ಮರುತೇಶ್ವರ ಲಿಂಗವೂ, ಕೋಟೇಶ್ವರ ಕ್ಷೇತ್ರದಿಂದ ಜ್ಯೇಷ್ಠೇಶ್ವರ ಲಿಂಗವೂ, ವಡವಾ ಮುಖದಿಂದ ಅನಲೇಶ್ವರ ಲಿಂಗವೂ, ಅಮರ ಕಂಟಕದಿಂದ ಓಂಕಾರೇಶ್ವರ ಮಹಾದೇವರೂ ಈ ಕಾಶೀಕ್ಷೇತ್ರದಲ್ಲಿ ಬಂದು ನೆಲೆ ನಿಂತಿದ್ದರಿಂದ ಈ ಪುಣ್ಯಕ್ಷೇತ್ರವು ಈಗ ಸರ್ವಕ್ಷೇತ್ರಮಯ. ಇಲ್ಲಿ ಹರಿಯುವ ಗಂಗೆ ಸರ್ವತೀರ್ಥಮಯ, ಭಗವನ್, ನಾನು ಭರತಖಂಡದ ಎಲ್ಲ ಪುಣ್ಯಕ್ಷೇತ್ರಗಳ ಶ್ರೀವಿಗ್ರಹಗಳನ್ನು ಕಾಶೀಪುರಿಗೆ ತಂದಿದ್ದು ಆ ಎಲ್ಲ ಕ್ಷೇತ್ರ ದೇವತೆಗಳು, ಮೂರ್ತಿಗಳು, ಲಿಂಗಗಳು ತಮ್ಮ ತಮ್ಮ ಪೂರ್ಣರೂಪದಿಂದ ಕಾಶೀಕ್ಷೇತ್ರದಲ್ಲಿಯೇ ಇದ್ದು ತಮ್ಮ ಒಂದೊಂದು ಅಂಶದಿಂದ ಮಾತ್ರ ತಮ್ಮ ಮೂಲಸ್ಥಲಗಳಲ್ಲಿ ಅವಶಿಷ್ಟವಾಗಿರುತ್ತವೆ. ನಾನು ಭಿನ್ನ ಭಿನ್ನ ತೀರ್ಥಕ್ಷೇತ್ರದಿಂದ ಕರೆದುತಂದು ಕಾಶಿಯಲ್ಲಿ ಕೂಡಿಸಿದ ಆ ಎಲ್ಲ ಶ್ರೀ ವಿಗ್ರಹಗಳಿಗೆ ಈಗ ಇಲ್ಲಿ ದಿವ್ಯಭವ್ಯವೂ ಸುಂದರಾಶಿ ಸುಂದರವೂ ಆದ ದೇವಮಂದಿರಗಳನ್ನು ರಚಿಸಲಾಗಿದೆ. ಇಷ್ಟು ತಮ್ಮ ಸೇವೆಯನ್ನು ನಾನು ಈಗ ಮಾಡಿದ್ದೇನೆ ಮುಂದೆ ನಾನು ಏನು ಮಾಡಬೇಕು ಆಜ್ಞೆ ಆಗಲಿ. ನಿಮ್ಮ ಅಪ್ಪಣೆಯಂತೆ ನಡೆಯಲು ನಾನು ಸದಾ ಸಿದ್ಧಸರ್ವದಾ ಕಟಿಬದ್ಧ.

**ಶಂಕರ:-** ನಂದಿಯೇ, ನೀನು ಬಹಳ ಒಳ್ಳೆಯ ಕಾರ್ಯಮಾಡಿದೆ. ಇನ್ನು ಮೇಲೆ ಈ ಕಾಶಿಯಲ್ಲಿ ಇರುವ ಚಂಡಿಕಾದೇವಿಯರನ್ನು ಉಪಯುಕ್ತ ಕಾರ್ಯಗಳಲ್ಲಿ ನಿಯೋಜಿಸು. ಇಲ್ಲಿ ಒಂಬತ್ತು ಕೋಟಿ ಚಾಮುಂಡೆಯರು ಇರುತ್ತಾರೆ. ಇವರ ಹಿಂದೆ ಅವರವರ ದೇವತೆ, ಭೂತ, ಬೇತಾಲ, ಭೈರವರು ಗುಂಪುಗೂಡಿ ನಿಂತಿರುತ್ತಾರೆ. ಅವರೆಲ್ಲರನ್ನೂ ಈ ಕಾಶೀಪುರಿಯ ರಕ್ಷಣೆಯ ಕಾರ್ಯದಲ್ಲಿ ತೊಡಗಿಸು. ಪ್ರತ್ಯೇಕ ದುರ್ಗದಲ್ಲಿ ಅವರು ನೆಲೆಸುವಂತೆ ಮಾಡು.

ಈ ರೀತಿಯಾಗಿ ಮಹಾದೇವರು ನಂದಿಗೆ ಆಜ್ಞೆಮಾಡಿ ತ್ರೈವಿಷ್ಟಪ ಕ್ಷೇತ್ರಕ್ಕೆ ನಡೆದನು. ನಂದಿಯು ಪರಮೇಶ್ವರನ ಆಜ್ಞೆಯನ್ನು ತಲೆಯ ಮೇಲೆ ಹೊತ್ತು ಎಲ್ಲ ದುರ್ಗೆಯರನ್ನು ಕರೆದು ಪ್ರತಿಯೊಂದು ದುರ್ಗದಲ್ಲಿಯೂ ಅವರನ್ನು ಯಥಾಸ್ಥಾನದಲ್ಲಿ ಗಟ್ಟಿಯಾಗಿ ಕೂಡಿಸಿದನು.

## ದುರ್ಗ ಅಸುರನೊಂದಿಗೆ ದೈವೀ ಶಕ್ತಿಗಳ ಯುದ್ಧ

**ಸ್ಕಂದ:-** ಅಗಸ್ತ್ಯನೇ, ಪೂರ್ವಕಾಲದಲ್ಲಿ ದುರ್ಗ ಎಂಬ ದೈತ್ಯನು ಘೋರ ತಪಸ್ಸನ್ನು ಆಚರಿಸಿದ. ರುರೂದೈತ್ಯನ ಮಗನಾದ ಆ ದಾನವೇಶ್ವರನು ಯಾವ ಪುರುಷರಿಂದಲೂ

ಸಾಯಬಾರದು ಎಂದು ವರವನ್ನು ಪಡೆದ. ಭೂಲೋಕ ಭುವರ್ಲೋಕ, ಸ್ವರ್ಲೋಕ ಈ ಮೂರು ಲೋಕಗಳನ್ನು ತನ್ನ ಬಾಹು ಬಲದಿಂದ ಗೆದ್ದು ತನ್ನ ಅಧೀನವನ್ನಾಗಿ ಮಾಡಿಕೊಂಡ. ಅವನ ಭಯದಿಂದ ಪೀಡಿತರಾದ ಬ್ರಾಹ್ಮಣರು ವೇದಾಧ್ಯಯನವನ್ನು ಬಿಡುವ ಪ್ರಸಂಗ ಬಂದಿತು. ಅವನ ದುಷ್ಟಸೈನಿಕರು ಲೋಕದಲ್ಲಿಯ ಯಜ್ಞಶಾಲೆಗಳನ್ನೆಲ್ಲ ವಿಧ್ವಂಸಗೊಳಿಸಿದರು. ಈ ಪ್ರಪಂಚದಲ್ಲಿ ಯಾಚನೆ ಬಹಳ ಹೇಯ. ಅದರಿಂದ ಎಂಥ ದೊಡ್ಡ ಮನುಷ್ಯನೂ ಕುಬ್ಜ ಆಗಿಬಿಡುವ.

'ವಿಪದ್ಯಪಿ ಚ ತೇ ಧನ್ಯಾ ನ ಯೇ ದೈನ್ಯ ಪ್ರಚೋದಿತಾಃ ।
ಧನೈರ್ಮಲಿನ ಚಿತ್ತಾನಾಂ ನಭಜಂತೇಽಂಗನಂ ಕ್ವಚಿತ್' ॥

ಎಂಥ ಸಂಕಟ ಬಂದರೂ ದೈನ್ಯದಿಂದ ಪ್ರೇರಿತರಾಗಿ ದ್ರವ್ಯ ಮದದಿಂದ ಕಲಷಿತ ಚಿತ್ತರಾದ ಸಿರಿವಂತರ ಮನೆಯ ಅಂಗಳದಲ್ಲಿ ಹೋಗಿ ನಿಲ್ಲದಿರುವ ಮನುಷ್ಯನೇ ಈ ಪ್ರಪಂಚದಲ್ಲಿ ಧನ್ಯ.

"ಪಂಚತ್ವಮೇವ ಹಿ ವರಂ ಲೋಕೇ ಲಾಘವ ವರ್ಜಿತಂ ।
ನಾಮರತ್ವಮಪಿ ಶ್ರೇಯೋ ಲಾಘವೇನ ಸಮನ್ವಿತಂ" ॥

ಅವಮಾನಿತನಾಗಿ ದೇವತ್ವವನ್ನು ಹೊಂದುವುದಕ್ಕಿಂತ ಲಾಘವ ಅಥವಾ ಅವಮಾನವಿಲ್ಲದೇ ಮರಣ ಹೊಂದುವುದೇ ಲೇಸು.

ಈ ಪ್ರಪಂಚದಲ್ಲಿ ಮನುಷ್ಯನಿಗೆ ಒಮ್ಮೊಮ್ಮೆ ಸಂಪತ್ತು ಬರಬಹುದು. ಮತ್ತೊಮ್ಮೆ ವಿಪತ್ತು ಬರಬಹುದು. ಈ ಎರಡೂ ಸಂದರ್ಭಗಳಲ್ಲಿ ಮನುಷ್ಯರು ತಮ್ಮ ಧೈರ್ಯ ಬಿಡಬಾರದು. ಸಂಕಟ ಆಪತ್ತುಗಳು ಬಂದಾಗ ದೈನ್ಯದಿಂದ ಯಾವ ಮನುಷ್ಯನು ಮರಣ ಹೊಂದುವನೋ ಅವನಿಗೆ ಇಹಲೋಕ ಪರಲೋಕ ಎರಡೂ ನಷ್ಟವಾಗಿ ಹೋಗುತ್ತವೆ. ಆದುದರಿಂದ ಮಾನವರು ದೈನ್ಯವನ್ನು ಬಿಟ್ಟುಬಿಡಬೇಕು.

ಆಪದ್ಯಪಿ ಚ ಯೇ ಧೀರಾ ಇಹ ಲೋಕೇ ಪರತ್ರ ಚಃ ।
ನ ತಾನ್ ಪುನಃ ಸ್ಪುರೇದಾಪತ್ ತದ್ಧೈರ್ಯೇಣಾವಧೀರಿತಾ ॥

ಅಪತ್ಕಾಲದಲ್ಲಿಯೂ ಕೂಡ ಯಾರು ಧೈರ್ಯವನ್ನು ಕಳೆದುಕೊಳ್ಳುವುದಿಲ್ಲವೋ ಅವರ ಧೈರ್ಯದಿಂದ ಧಿಕ್ಕೃತವಾಗಿ ಅಪತ್ತು ಹಾಗೂ ಕುತ್ತುಗಳು ಈ ಲೋಕದಲ್ಲಿಯೇ ಆಗಲಿ ಪರಲೋಕದಲ್ಲಿಯೇ ಆಗಲಿ ಅವರನ್ನು ಮುತ್ತುವುದಿಲ್ಲ.

ಹಿಂದೆ ದೈತ್ಯರು ಎಲ್ಲ ದೇವತೆಗಳನ್ನು ಸೋಲಿಸಿ ಅವರ ಅಧೀನದಲ್ಲಿ ಇರುವ ಸ್ವರ್ಗರಾಜ್ಯವನ್ನು ಕಿತ್ತುಕೊಂಡು ಬಳಿಕ ಪರಾಜಿತರಾದ ದೇವತೆಗಳು ಮಹೇಶ್ವರನಿಗೆ ಶರಣು ಹೋದರು. ಆಗ ಸರ್ವಜ್ಞ ಪ್ರಭುವಾದ ಮಹಾದೇವನು ಅಸುರರನ್ನು ನಾಶಮಾಡಲಿಕ್ಕಾಗಿ ದೇವಿಗೆ ಆದೇಶ ನೀಡಿದ. ಮಹೇಶ್ವರನ ಆಜ್ಞೆಯಿಂದ ಭವಾನೀ ದೇವಿಯು ದೇವ ಸಮೂಹಕ್ಕೆ ಅಭಯದಾನ ಮಾಡಿ ತನ್ನ ಎಲ್ಲ ಯುದ್ಧದ ಸಿದ್ಧತೆಯನ್ನು ಮಾಡಿದಳು. ಮೂರು ಲೋಕಗಳಲ್ಲಿಯೇ ಕಮನೀಯ ಕಾಂತಿಯಿಂದ ಸರ್ವಾಧಿಕ ಸುಂದರಿ ಎಂದು ಎನಿಸಿದ ರುದ್ರ ಶಕ್ತಿಯು ಕಾಳರಾತ್ರಿಯನ್ನು ಕರೆದು ದೇವದ್ರೋಹಿಯಾದ ಆ ದೈತ್ಯನನ್ನು ಯುದ್ಧಕ್ಕೆ ಆಮಂತ್ರಿಸಿ ಬರಲು ಕಳಿಸಿಕೊಟ್ಟಳು. ಆಗ ಕಾಳರಾತ್ರಿಯು ಆ ದೈತ್ಯನ ಬಳಿಗೆ ಬಂದು ಹೇಳಿತು-

"ದೈತ್ಯ ರಾಜನೇ, ನೀನು ಈ ತ್ರಿಭುವನ ಸಂಪತ್ತನ್ನು ಕೊಟ್ಟುಬಿಡು. ಈ ತ್ರಿಲೋಕದ ರಾಜ್ಯವು ದೇವೇಂದ್ರನಿಗೆ ಹೋಗಲಿ. ನೀನು ರಸಾತಲಕ್ಕೆ ಹೋರಟು ಹೋಗು. ಆದ್ದರಿಂದ ವೈದಿಕ ಕ್ರಿಯೆಗಳೆಲ್ಲವೂ ನಿರ್ವಿಘ್ನವಾಗಿ ನಡೆಯುವಂತಾಗಲಿ. ನಿನಗೆ ನಿನ್ನ ಸೈನ್ಯದ ಗರ್ವವು ಇದ್ದರೆ ಯುದ್ಧಕ್ಕಾಗಿಯೇ ನೀನು ಬಾ. ಅದು ಬೇಡವಾದರೆ ಇಂದ್ರನಿಗೆ ಶರಣು ಹೋಗು. ಈ ಎರಡರಲ್ಲಿ ನಿನಗೆ ಯಾವುದು ಉಚಿತ ತೋರುವುದೋ ಅದನ್ನು ಮಾಡಿ ಮುಗಿಸಿ ಬಿಡು. ನಿನಗೆ ನಿನ್ನ ಬಲಪರಾಕ್ರಮಗಳ ಗರ್ವ ಇದ್ದರೆ ಯುದ್ಧಕ್ಕೆ ಬಾ. ಇಲ್ಲದಿದ್ದರೆ ಶರಣು ಹೋಗು."

ಮಹಾಕಾಳಿಯ ಈ ವಚನವನ್ನು ಕೇಳಿ ದೈತ್ಯರಾಜನಾದ ದುರ್ಗನಿಗೆ ಬ್ರಹ್ಮಾಂಡ ಕೋಪ ಬಂದಿತು. ಅವನು ಸೇವಕರಿಗೆ ಆಜ್ಞೆ ಮಾಡಿದ. ಸೇವಕರೇ ಏನು ನೋಡುತ್ತಿರುವಿರಿ? ಹಿಡಿಯಿರಿ ಈ ಕಾಳರಾತ್ರಿಯನ್ನು ಇವಳನ್ನು ವಶಪಡಿಸಿಕೊಳ್ಳಲಿಕ್ಕಾಗಿಯೇ ನಾನು ಅನೇಕ ದೇವರ್ಷಿಗಳನ್ನು ಸೆರೆಹಿಡಿದಿದ್ದೇನೆ. ಅಸಂಖ್ಯ ರಾಜರನ್ನು ನನ್ನ ಬಂದೀಖಾನೆಯಲ್ಲಿಟ್ಟಿದ್ದೇನೆ. ಇಂದು ನನ್ನ ಸೌಭಾಗ್ಯದ ಉದಯಕಾಲ. ಯಾರನ್ನು ಹಿಡಿಯಲಿಕ್ಕಾಗಿ ನಾನು ಮಹಾಪ್ರಯತ್ನ ಮಾಡುತ್ತಿದ್ದೇನೊ ಆ ಕಾಳರಾತ್ರಿಯು ತಾನಾಗಿಯೇ ಸಿಕ್ಕಿದ್ದಾಳೆ. ಕೂಡಲೇ ಇವಳನ್ನು ಹಿಡಿದು ನನ್ನ ಅಂತಃಪುರಕ್ಕೆ ಸೇರಿಸಿ. "ದೈತ್ಯ ರಾಜನ ಆದೇಶದಿಂದ ಅವನ ಅಂತಃಪುರದ ರಕ್ಷಕರಾದ ಸೈನಿಕರು ಕಾಳರಾತ್ರಿಯನ್ನು ಹಿಡಿಯಲು ಬಂದರು. ಆಗ ಕಾಳರಾತ್ರಿಯು ಅವರಿಗೆ ಸಾಂತ್ವನದ ದನಿಯಲ್ಲಿ ಹೀಗೆ ಹೇಳಿದಳು ದೈತ್ಯರಾಜನಾದ ದುರ್ಗನಿಗೆ ಕೇಳಿಸುವಂತೆ.

**ಕಾಲರಾತ್ರಿ:-** "ದೈತ್ಯರಾಜ, ಹಾಗೂ ಅಂತಃಪುರದ ರಕ್ಷಕರೇ ನಾನು ಮತ್ತು ಉಳಿದ ದಾಸಿಯರು ಭವಾನಿ ದೂತಿಯರು. ನಮ್ಮ ಒಡತಿಯಾದ ರುದ್ರಶಕ್ತಿ ಹಾಗೂ ಭವಾನಿಯರು ಹೇಳಿದ ಮಾತನ್ನು ಕೇಳುವುದಷ್ಟೇ ನಮ್ಮ ಕೆಲಸ. ಯಾವ ಕ್ಷುದ್ರಪುರುಷನೂ ದೂತ ದೂತಿಯರನ್ನು ಹಿಡಿದು ಹಾಕುವುದಿಲ್ಲ ಮತ್ತು ಪೀಡಿಸುವುದಿಲ್ಲ. ನಿನ್ನಂಥ ದೈತ್ಯ ರಾಜನಂತೂ ರಾಜದೂತರನ್ನು ಸೆರೆಹಿಡಿಯುವುದು ಘೋರ ಅನ್ಯಾಯ ಮತ್ತು ಲಾಂಛನಾಸ್ಪದ. ನಿನಗೆ ಶಕ್ತಿಯಿದ್ದರೆ ನಮ್ಮ ಒಡತಿಯಾದ ರುದ್ರಶಕ್ತಿಯನ್ನೂ ಅವಳಿಗೂ ಸ್ವಾಮಿನಿಯಾದ ದುರ್ಗಾದೇವಿಯನ್ನೂ ಯುದ್ಧದಲ್ಲಿ ಗೆದ್ದು ನನ್ನಂಥ ಸಾವಿರಾರು ದೂತಿಯನರ್ನು ನಿನ್ನ ಅಂತಃಪುರದಲ್ಲಿ ಸೇರಿಸಿಕೊಳ್ಳಬಹುದು."

ಕಾಳರಾತ್ರಿಯ ಈ ಮಾತುಗಳನ್ನು ಕೇಳಿ ದುರ್ಗದೈತ್ಯನಿಗೆ ಕ್ರೋಧ ಕೆರಳಿತು. ಅವಳ ರೂಪ ಕಂಡು ಕಾಮ ಅರಳಿತು. ಕಾಳರಾತ್ರಿಯ ಸೌಂದರ್ಯದಿಂದ ಅವನು ಮುಗ್ಧನಾಗಿ ಹೋಗಿದ್ದ. 'ಇಂಥ ಒಬ್ಬ ಸುಂದರಿಯಾದರೂ ತನಗೆ ದಕ್ಕಿದರೆ ತನ್ನ ಭಾಗ್ಯ' ಎಂದುಕೊಂಡು ಅವನು ತನ್ನ ಸೇವಕರಿಗೆ ಆಜ್ಞೆ ನೀಡಿದ- "ಈ ಸುಂದರಿಯನ್ನು ಎಳೆದುಕೊಂಡು ಹೋಗಿರಿ. ನನ್ನ ರಾಣೀವಾಸದಲ್ಲಿ ಸೇರ್ಪಡೆಮಾಡಿರಿ." ದೈತ್ಯರಾಜನ ಆಜ್ಞೆಯಂತೆ ಅಂತಃಪುರದ ಸಂರಕ್ಷಕರು ಕಾಳರಾತ್ರಿಯನ್ನು ಹಿಡಿಯಲು ಮುಂದೆ ಬಂದರು. ಆಗ ಕಾಳರಾತ್ರಿದೇವಿಯು ಆ ಅಂತಃಪುರದ ಆರಕ್ಷಿಗಳು ತನ್ನ ತೀರ ಸಮೀಪದವರೆಗೆ ಬರುವವರೆಗೆ ಗಂಭೀರವಾಗಿ ನಿಂತುಕೊಂಡಳು. ಅವರು ಶಸ್ತ್ರಾಸ್ತ್ರ ಸನ್ನದ್ಧರಾಗಿ ತನ್ನ ದೇಹದ ಸಮೀಪಕ್ಕೆ ಬಂದ ಕೂಡಲೇ ದೇವಿಯು ಹೂಂಕಾರ ಶಬ್ದವನ್ನು ಮಾಡಿದಳು. ಕಾಳರಾತ್ರಿಯ ಭಯಂಕರವಾದ ಹೂಂಕಾರ ಧ್ವನಿಯಿಂದಲೇ ದುರ್ಗದೈತ್ಯನ ಅಂತಃಪುರ

ರಕ್ಷಕರೆಲ್ಲರೂ ಅರೆಕ್ಷಣದಲ್ಲಿ ಸುಟ್ಟು ಬೂದಿಯಾದರು ಅದನ್ನು ನೋಡಿ ಆ ದೈತ್ಯೇಶ್ವರನು ತನ್ನ ಮೂವತ್ತುಸಾವಿರ ವೀರ ಸೈನಿಕರನ್ನು ಕರೆದು ಆ ಕಾಳರಾತ್ರಿ ದೇವಿಯನ್ನು ಹಿಡಿದು ಹೊಡೆದು ತರಲು ಆದೇಶವಿತ್ತ ಕೂಡಲೇ ಆ ವೀರ ಸೈನಿಕರ ತಂಡವು ಪ್ರಚಂಡ ಆಯುಧಗಳನ್ನು ಹಿಡಿದು ಆ ದೇವಿಯನ್ನು ಹೊಡೆದು ಪಾಶಗಳಲ್ಲಿ ಬಂಧಿಸಿ ತರಬೇಕು ಎಂದು ಅವಳ ಮೇಲೆ ನುಗಿದರು. ಆದರೆ ದೇವಿಯ ನಿಶ್ವಾಸದ ಗಾಳಿಯಿಂದಲೇ ಅವರೆಲ್ಲರೂ ಹಾರಿ, ದೂರ ತೂರಿ ಒಗೆಯಲ್ಪಟ್ಟರು. ಅನಂತರ ಕಾಳರಾತ್ರಿ ದೇವಿಯು ಅಲ್ಲಿಂದ ಒಮ್ಮೆಲೇ ಮುಗಿಲಿಗೆ ನೆಗೆದು ಆಕಾಶ ಮಾರ್ಗದಿಂದ ಅಲ್ಲಿಂದ ಹೊರಟಳು. ಸಹಸ್ರಾರು ದುಷ್ಟದೈತ್ಯರು ಅವಳನ್ನು ಬೆನ್ನಟ್ಟಿದರು ಸ್ವಯಂ ದುರ್ಗದೈತ್ಯನು ಪ್ರಚಂಡ ಸೇನಾ ಸನ್ನಾಹದೊಂದಿಗೆ ಯುದ್ಧಕ್ಕೆ ಹೊರಟ. ಆ ಕಾಲದಲ್ಲಿ ಮಹಾದೇವಿಯು ವಿಂಧ್ಯಾಚಲದಲ್ಲಿ ವಾಸಮಾಡಿದ್ದಳು. ಕಾಳರಾತ್ರಿಯು ಅಲ್ಲಿಗೆ ಬಂದು ದೇವಿಯ ದರ್ಶನ ಪಡೆದಳು. ಮತ್ತು ದುರ್ಗಾಸುರನ ದುರದ್ದೇಶವನ್ನು ಹಾಗೂ ಸಂಗ್ರಾಮಕ್ಕಾಗಿ ಅವನ ಪ್ರಸ್ಥಾನವನ್ನು ತಿಳಿಸಿದಳು. ಇತ್ತ ದುರ್ಗದೈತ್ಯನು ತನ್ನ ಸೇನಾಪತಿಗಳಿಗೆ ಆದೇಶ ನೀಡಿದ- ''ವೀರರೇ, ನಿಮ್ಮಲ್ಲಿ ವಿಂಧ್ಯವಾಸಿಯನ್ನು ನನ್ನ ಬಳಿಗೆ ಕರೆತರುವ ಧೈರ್ಯ ಶಕ್ತಿ ಅಥವಾ ಯುಕ್ತಿಉಳ್ಳವರು ಯಾರಾದರೂ ಇರುವರೆ? ಬಲದಿಂದಾಗಲಿ, ಛಲದಿಂದಾಗಲಿ ಅವಳನ್ನು ನನ್ನ ಬಳಿಗೆ ಹಿಡಿದು ತನ್ನಿರಿ. ಯಾವುದಾದರೂ ಹಂಚಿಕೆಯಿಂದ ಆ ವಿಂಧ್ಯವಾಸಿನಿಯನ್ನು ನನ್ನ ಬಳಿಗೆ ಹಿಡಿದು ತಂದವರಿಗೆ ನಾನು ಇಂದ್ರಪದಿವಿಯ್ನನೇ ನೀಡುತ್ತೇನೆ.''

ದಾನವರಾಜನ ಈ ಆಹ್ವಾನವನ್ನು ಅನೇಕ ದೈತ್ಯ ಸೇನಾಪತಿಗಳು ಆನಂದದಿಂದ ಸ್ವೀಕರಿಸಿದರು. ಉತ್ಸಾಹದಿಂದ ಎರಡೂ ಕೈಗಳನ್ನು ಎತ್ತಿ ದರ್ಪದಿಂದ ನುಡಿದರು- ''ದಾನವೇಂದ್ರ, ಇದಾವ ಮಹಾಕಾರ್ಯ? ಇದನ್ನು ನಾವು ಲೀಲೆಯಿಂದಲೇ ಮಾಡುತ್ತೇವೆ. ವಿಂಧ್ಯವಾಸಿನಿಯು ಅಬಲೆ. ಮೇಲೆ ಅನಾಥಳು ಅವಳನ್ನು ಹಿಡಿದು ತರುವುದು ಅಂಥ ಕಷ್ಟದ ಕೆಲಸವೇನಲ್ಲ. ನಾವು ಅವಳನ್ನು ನಮ್ಮ ಬಲಪರಾಕ್ರಮದಿಂದ ಕೆಲವೇ ಸಮಯದಲ್ಲಿ ಹಿಡಿದು ಎಳೆದು ತಂದು ನಿನ್ನ ಎದುರು ನಿಲ್ಲಿಸುತ್ತೇವೆ. ನಮ್ಮ ಶಕ್ತಿಯನ್ನಾದರೂ ನೋಡು.'' ಹೀಗೆ ಹೇಳಿ ಎಲ್ಲ ದೈತ್ಯಧೀರರು ಒಂದುಗೂಡಿ ಶಸ್ತ್ರಾಸ್ತ್ರ ಸುಸಜ್ಜಿತರಾಗಿ ಅಲ್ಲಿಂದ ಹೊರಟರು. ರಣವಾದ್ಯಗಳು ಭೋರ್ಗರೆಯತೊಡಗಿದವು. ದೈತ್ಯವೀರರ ಈ ಆಕ್ರಮಣ ಹಾಗೂ ಪ್ರಚಂಡ ಪರಾಕ್ರಮವನ್ನು ಕಂಡು ದೇವತೆಗಳು ಕೂಡ ನಡುಗಿ ಹೋದರು. ವಿಂಧ್ಯವಾಸಿನಿಯಾದ ಮಹಾದೇವಿಯು ದೂರದಿಂದಲೇ ಈ ದುಷ್ಟ ಹಾಗೂ ದರ್ಪಿಷ್ಠ ದೈತ್ಯ ದಾನವ ಧುರೀಣರ ಯುದ್ಧದ ಉದ್ಯಮವನ್ನು ನೋಡಿದಳು. ತನ್ನ ಅಂಗಾಂಗಳಿಂದ ಸಹಸ್ರಾರು ಸ್ತ್ರೀ ಶಕ್ತಿಗಳನ್ನು ಪ್ರಕಟಗೊಳಿಸಿದಳು. ಆ ಎಲ್ಲ ಶಕ್ತಿದೇವತೆಯರ ಗುಂಪು ಮಹಾಸಂಭ್ರಮದಿಂದ ದೇವಿಯನ್ನು ಹಿಡಿಯಲು ಹುರುಪಿನಿಂದ ಓಡಿ ಬರುತ್ತಲಿರುವ ದೈತ್ಯಸೈನಿಕರನ್ನೆಲ್ಲ ಮಾರ್ಗ ಮಧ್ಯದಲ್ಲಿಯೇ ತಡೆದು ನಿಲ್ಲಿಸಿತು. ಮತ್ತು ಆ ರಾಕ್ಷಸ ವೀರರು ತಮ್ಮನ್ನು ಹೊಡೆಯಲು ತಂದ ಶಸ್ತ್ರಾಸ್ತ್ರಗಳನ್ನೆಲ್ಲ ಅವರ ಕೈಯಿಂದ ಕಿತ್ತಿ ದೂರ ಬಿಸಾಕಿದವು ಆ ಸ್ತ್ರೀ ಶಕ್ತಿಗಳು ಹೀಗೆ ಕ್ಷಣಾರ್ಧದಲ್ಲಿ ನಿಶ್ಶಸ್ತ್ರರಾದ ಆ ದೈತ್ಯವೀರರು ನಿರಾಶರಾಗದೆ ಕಣ್ಣಿಗೆ ಕಂಡ ಮರಗಳನ್ನು ಬಂಡೆಗಲ್ಲುಗಳನ್ನು ಎತ್ತಿ ಆ ಶಕ್ತಿ ದೇವಿಯರ ಮೇಲೆ ತೂರತೊಡಗಿದರು. ಅದರಿಂದ ಶಕ್ತಿ ದೇವಿಯರ ಸಮೂಹದ ಮೇಲೆ ಭಯಂಕರವಾದ ಶಿಲಾವೃಷ್ಟಿಯೇ ಸುರಿಯತೊಡಗಿತು. ಆಗ ವಿಂಧ್ಯ ಪರ್ವತದ ಮೇಲೆ

ವಾಸಮಾಡಿದ ಮಹಾಮಾಯೆಯು ತನ್ನ ಪ್ರಚಂಡವಾದ ಬಿಲ್ಲನ್ನು ಬಾಗಿಸಿ ವಾಯವ್ಯಾಸ್ತ್ರವನ್ನು ಹೂಡಿ ದಾನವ ಸೇವೆಯ ಮೇಲೆ ಪ್ರಯೋಗಿಸಿದಳು. ಅದರಿಂದ ದೈತ್ಯರು ಇವರ ಮೇಲೆ ತೂರಿ ಒಗೆದ ಹೆಮ್ಮರ ಹೆಬ್ಬಂಡೆ ಹಾಗೂ ಶಸ್ತ್ರಾಸ್ತ್ರಗಳೆಲ್ಲವೂ ಎಲ್ಲಿಯೋ ದೂರ ಹೋಗಿ ದಿಗಂತರಾಳದಲ್ಲಿ ಬಿದ್ದುಕೊಂಡವು.

ಹೀಗೆ ದೈತ್ಯ ಸೈನಿಕರೆಲ್ಲರೂ ಆಯುಧ ಹೀನರಾಗಿ ರಿಕ್ತ ಹಸ್ತದಿಂದ ನಿಂತುಕೊಂಡದ್ದನ್ನು ಕಂಡು ಆ ದುರ್ಗದೈತ್ಯರಾಜನು ಒಂದು ಉರಿಯುವ ಶಕ್ತಿ ಆಯುಧವನ್ನು ಕೈಯಲ್ಲಿ ತೆಗೆದುಕೊಂಡು ಸ್ವಯಂ ದೇವಿಯ ಮೇಲೆಯೇ ಪ್ರಯೋಗಿಸಿದ. ಆಗ ದೇವಿಯು ತನ್ನ ಮೇಲೆ ದೈತ್ಯ ತೂರಿ ಒಗೆದ ಆ ಶಕ್ತಿಯ ಜ್ವಾಲಾ ಮಾಲೆಗಳನ್ನು ತನ್ನ ಬಾಣದಿಂದ ಕ್ಷಣಾರ್ಧದಲ್ಲಿ ಒಡೆದು ಹೊಡೆದು ಪುಡಿ ಪುಡಿ ಮಾಡಿ ಒಗೆದಳು. ಅನಂತರ ಆ ದುಷ್ಟದೈತ್ಯನು ದವಡೆ ಕಚ್ಚಿ ಭಯಂಕರವಾದ ಒಂದು ಚಕ್ರವನ್ನು ದೇವಿಯ ಮೇಲೆ ಬಿರುಸಿನಿಂದ ಬೀಸಿ ಒಗೆದ. ದೇವಿಯು ಅದನ್ನು ಕೂಡ ತನ್ನ ನೂರಾರು ಬಾಣಗಳಿಂದ ದಾರಿಯಲ್ಲಿಯೇ ತುಂಡು ತುಣುಕುಗಳಾಗುವಂತೆ ತುಂಡರಿಸಿ ಚೆಲ್ಲಿದಳು. ಅನಂತರ ಚಂಡಪ್ರತಾಪಿಯಾದ ಆ ದುರ್ಗದಾನವೇಶ್ವರನು ಪ್ರಯೋಗಿಸಿದ ಶೂಲಾಯುಧ ಭೀಮಗದೆಗಳನ್ನು ದೇವಿಯು ತನ್ನ ಬಾಣಪ್ರಯೋಗ ಹೊಡೆದು ಸೀಳಿ ಸಾವಿರ ಹೋಳು ಮಾಡಿ ಹಾಕಿದಳು. ಕೊನೆಗೆ ದೇವಿಯು ಆ ದೈತ್ಯರಾಜನನ್ನು ತನ್ನ ಎಡಗಾಲಿನ ತುದಿಯಿಂದ ವೃಕ್ಷಸ್ಥಳದಲ್ಲಿ ಒದ್ದು ಕೆಳಗೆ ಬೀಳಿಸಿದಳು. ಇದರಿಂದ ದೈತ್ಯನಿಗೆ ರಕ್ತವಾಂತಿಯಾಗಿ ನೆಲದ ಮೇಲೆ ಉರುಳಿದ. ಮುಂದೆ ಕೆಲವೇ ಕ್ಷಣದಲ್ಲಿ ಚೇತರಿಸಿಕೊಂಡು ಎದ್ದು, ಆ ದೈತ್ಯನು ಅಲ್ಲಿಂದ ಅದೃಶ್ಯನಾದ.

## ದುರ್ಗದೈತ್ಯನ ವಧೆ, ಅಂದಿನಿಂದ 'ದುರ್ಗಾ' ನಾಮದಿಂದ ದೇವಿಯ ಪ್ರಸಿದ್ಧಿ

**ಸ್ಕಂದ:-** ದುರ್ಗದೈತ್ಯನು ತನ್ನ ಎದೆಯಲ್ಲಿ ದೇವಿಯ ಪಾದಘಾತದಿಂದ ಒದೆತ ತಿಂದು ಅದೃಶ್ಯನಾಗಿ ಓಡಿಹೋದ ಬಳಿಕ. ಅವನ ಸೈನಿಕರನ್ನೆಲ್ಲ ಶಕ್ತಿದೇವಿಯರು ಹೊಡೆದು ಬಡೆದು ಕ್ಷತವಿಕ್ಷತ ಗಾತ್ರರನ್ನಾಗಿ ಮಾಡಿದಳು. ಅದನ್ನು ನೋಡಿ ಕ್ರುದ್ಧನಾದ ದುರ್ಗದೈತ್ಯನು ಕೂಡ ಯುದ್ಧವನ್ನು ಮಾಡಬೇಕೆಂದು ಹೊಂಚುಹಾಕಿ ಏರಿಬಂದ. ಮೋಡಪಡೆಗಳ ಹಿಂದೆ ಅಡಗಿಕೊಂಡು ಭಯಂಕರ ಬಿರುಗಾಳಿಗಳನ್ನು ಎಬ್ಬಿಸಿದ. ಮತ್ತು ಕಲ್ಲು, ಮೂಳೆ, ಅಸ್ಥಿಪಂಜರಗಳನ್ನು ಶಕ್ತಿಯರ ಗುಂಪಿನಮೇಲೆ ತಂದು ಸುರುಸತೊಡಗಿದ. ಆಗ ಮಹಾದೇವಿಯು ಶೋಷಣಾಸ್ತ್ರದಿಂದ ಒಂದು ಕ್ಷಣದಲ್ಲಿ ಆ ಶಿಲಾವೃಷ್ಟಿಯನ್ನು ತಡೆದಳು. ಅನಂತರ ದೈತ್ಯನು ಸಿಟ್ಟಿನಿಂದ ಒಂದು ಬೆಟ್ಟದ ಶಿಖರವನ್ನೇ ತಂದು ದೇವಿಯ ಮೇಲೆ ಅಪ್ಪಳಿಸಿದ. ಮಹಾದೇವಿಯು ವಜ್ರಾಯುಧ ಪ್ರಹಾರದಿಂದ ಅದನ್ನು ಚೂರು ಚೂರು ಮಾಡಿ ಹಾಕಿದಳು. ಅನಂತರ ಮಾಯಾವಿಯಾದ ಆ ದೈತ್ಯ ಒಂದು ಮದ್ದಾನೆಯ ರೂಪದಿಂದ ಸೊಂಡೆಯನ್ನು ಅಲುಗಾಡಿಸುತ್ತಾ ದೇವಿಯ ಮೇಲೆ ಏರಿಬಂದ. ದೇವಿಯು ತನ್ನ ಖಡ್ಗದಿಂದ ಆ ಗರ್ವಾಂಧ ಗಜದ ಸೊಂಡೆಯನ್ನೇ ಕಡಿದು ಹಿಮ್ಮೆಟ್ಟಿಸಿದಳು. ಅನಂತರ ಕಾಡುಕೋಣವಾಗಿ ಇರಿಯಲು ಬಂದ ಆ ದೈತ್ಯನು ದೊಡ್ಡ ದೊಡ್ಡ ಪರ್ವತಗಳನ್ನೇ ತನ್ನ ಕೋಡಿನಿಂದ ಕಿತ್ತು ಎತ್ತಿತಂದು ದೇವಿಯ ಮೇಲೆ ತೂರತೊಡಗಿದ. ಆಗ ದೇವಿಯು ತನ್ನ ತ್ರಿಶೂಲದಿಂದ ಆ ಮಹಿಷಿರೂಪಿಯಾದ ದುಷ್ಟದೈತ್ಯನನ್ನು ಹೊಡೆದು ಗಾಯಗೊಳಿಸಿ ದೂರ ಅಟ್ಟಿದಳು. ಆಗ ಆ ದುರ್ಗದೈತ್ಯನು ಸಾವಿರ ತೋಳುಗಳುಳ್ಳ ವಿರಾಟ ಪುರುಷನ ರೂಪವನ್ನು ಧರಿಸಿ, ದೇವಿಯ ಕೈಯನ್ನು ಹಿಡಿದು ದರದರ ಎಳೆಯುತ್ತ ಆಕಾಶದಲ್ಲಿ ಎತ್ತಿಕೊಂಡು ಹೋದ. ಗಗನ ಗೋಪುರದವರೆಗೆ ಎತ್ತಿಕೊಂಡು ಹೋಗಿ ಒಮ್ಮೆಲೇ ಅವಳ ಕೈಯನ್ನು ಬಿಟ್ಟು ತನ್ನ ಬಾಣಗಳ

ಜಾಲದಿಂದ ಅವಳನ್ನು ಮುಚ್ಚಿ ಹಾಕಿದ. ಆಗ ಆ ಮಹಾದೇವಿಯು ತನ್ನ ಕೈ ಚಳಕದಿಂದ ಘೋರಬಾಣಗಳನ್ನು ಬಿಟ್ಟು ಆ ದೈತ್ಯನ ಬಾಣಜಾಲಗಳನ್ನೆಲ್ಲ ಮುರಿದು ಮುಟಗಿ ಮಾಡಿ, ತನ್ನ ಒಂದು ಅಮೋಘವಾದ ಬಾಣವನ್ನು ಪ್ರಯೋಗಿಸಿ ಆ ದೈತ್ಯನ ದೇಹವನ್ನು ಚುಚ್ಚಾಕಿದಳು. ದೇವಿಯ ಪ್ರಾಣಾಂತಕವಾದ ಬಾಣವು ದೈತ್ಯನ ಎದೆಯಲ್ಲಿ ನೆಟ್ಟಕೂಡಲೇ ದುರ್ಗ ದೈತ್ಯನ ಕಣ್ಣು ಗುಡ್ಡೆಗಳು ಹೊರಬಂದವು. ಅವನ ಎದೆ ಸೀಳಿ ದೈತ್ಯನು ನೆಲದ ಮೇಲೆ ಉರುಳಿ ಬಿದ್ದ. ದುರ್ಗದೈತ್ಯನು ಸಂಗ್ರಾಮದ ಅಂಗಳದಲ್ಲಿ ಹತಪತಿತನಾಗಿ ಬಿದ್ದುದನ್ನು ಕಂಡು ದೇವ ದುಂದುಭಿಗಳು ಮೊಳಗಿದವು. ಸ್ವರ್ಗದಿಂದ ಪುಷ್ಪವೃಷ್ಟಿಯಾಯಿತು. ಮಹರ್ಷಿಗಳ ಪ್ರಶಂಸಾ ವೃಷ್ಟಿಯೂ ಆಗತೊಡಗಿತು. ದೇವತೆಗಳೆಲ್ಲರೂ ಆ ಮಹಾದೇವಿಯನ್ನು ಪರಿಪರಿಯಾಗಿ ಸ್ತೋತ್ರಮಾಡಿದರು. ಎಲ್ಲ ಋಷಿಗಳೂ, ಗಂಧರ್ವರೂ, ಇಂದ್ರಾದಿ ದೇವತೆಗಳೂ ಆ ಜಗದಂಬೆಯ ಚರಣಗಳಿಗೆ ಮತ್ತೆ ಮತ್ತೆ ಬಂದು ನಮಸ್ಕಾರ ಮಾಡಿದರು. ದೇವತೆಗಳ ಸ್ತೋತ್ರದಿಂದ ಸಂತುಷ್ಟಳಾದ ದೇವಿಯು ಪ್ರಸನ್ನಳಾಗಿ ಹೇಳಿದಳು.

**ದೇವಿ:-** ಸುರೋತ್ತಮರೇ, ನೀವೆಲ್ಲರೂ ಮೊದಲಿನಂತೆ ನಿಮ್ಮ ನಿಮ್ಮ ಅಧಿಕಾರಸ್ಥಾನಗಳನ್ನು ಪಾಲನೆಮಾಡಿರಿ. ಸಂಗ್ರಾಮದಲ್ಲಿ ಅತ್ಯಂತ ದುರ್ಗಮನಾದ ಈ ದುರ್ಗ ಎಂಬ ದೈತ್ಯನನ್ನು ನಾನು ಇಂದುಕೊಂದು ಹಾಕಿದ್ದರಿಂದ, ನನಗೆ ದುರ್ಗಾ ಎಂಬ ಹೆಸರು ಪ್ರಾಪ್ತವಾಗುವುದು.

**ಅದ್ಯಪ್ರಭೃತಿ ಮೇ ನಾಮ ದುರ್ಗೇತಿ ಖ್ಯಾತಿಮೇಷ್ಯತಿ ।**
**ದುರ್ಗದೈತ್ಯಸ್ಯ ಸಮರೇ ಪಾತನಾದತಿ ದುರ್ಗಮಾತ್ ॥**

ಯಾರು ದುರ್ಗಾ ಎಂಬ ಹೆಸರಿನ ನನಗೆ ಶರಣು ಬರುವರೋ ಅವರಿಗೆ ಎಂದೂ ದುರ್ಗತಿ ಆಗುವುದಿಲ್ಲ. ದುರ್ಗಾದೇವಿಯ ಸ್ತೋತ್ರವನ್ನು ಪ್ರತಿದಿನವೂ ಪಠಿಸುವವರನ್ನು ನಾನು ಪ್ರೀತಿಯಿಂದ ಕಾಪಾಡುತ್ತೇನೆ.

ದೇವತೆಗಳಿಗೆ ಹೀಗೆ ವರಗಳನ್ನು ನೀಡಿ ಆ ಮಹಾದೇವಿಯು ಅಂತರ್ಧಾನ ಹೊಂದಿದಳು. ಅಷ್ಟಮೀ, ಚತುರ್ದಶೀ ಮತ್ತು ಮಂಗಳವಾರ ದಿನದಂದು ದುರ್ಗಾದೇವಿಯನ್ನು ಪೂಜೆಮಾಡಿದವರಿಗೆ ಎಂದೂ ದುರ್ಗತಿ ಆಗುವುದಿಲ್ಲ. ನವರಾತ್ರಿಯಲ್ಲಿ ಪ್ರತಿದಿನವೂ ದುರ್ಗಾದೇವಿಯನ್ನು ವಿವಿಧ ಉಪಚಾರಗಳಿಂದ ಪೂಜೆಮಾಡಬೇಕು. ಕಾಶೀ ಕ್ಷೇತ್ರದಲ್ಲಿ ದುರ್ಗಾಕುಂಡದಲ್ಲಿ ಸ್ನಾನಮಾಡಿ ಎಲ್ಲ ದುರ್ಗಮ ಪೀಡೆಗಳನ್ನು ಪರಿಹರಿಸುವ ದುರ್ಗಾದೇವಿಯ ಪೂಜೆಯನ್ನು ವಿಧಿಪೂರ್ವಕವಾಗಿ ನವರಾತ್ರಿಯಲ್ಲಿ ಮಾಡುವವರು, ತಮ್ಮ ಹಿಂದಿನ ಒಂಬತ್ತು ಜನ್ಮದ ಪಾಪಗಳನ್ನೆಲ್ಲ ಕಳೆದುಕೊಂಡು ದಿವ್ಯ ಸದ್ಗತಿಯನ್ನು ಹೊಂದುತ್ತಾರೆ. ದುರ್ಗಾದೇವಿಯು ತನ್ನ ಸೇವಕಿಯರಾದ ಆ ಎಲ್ಲ ಶಕ್ತಿ ದೇವಿಯರೊಂದಿಗೆ ಕಾಶೀಪಟ್ಟಣವನ್ನು ರಕ್ಷಿಸುತ್ತ ಇರುತ್ತಾಳೆ. ಮಹಾದೇವಿಯನ್ನೂ, ಅವಳ ಪರಿಚಾರಿಕೆಯರಾದ ರುದ್ರಶಕ್ತಿ, ಕಾಲರಾತ್ರಿ ಮುಂತಾದ ದೇವಿಯರನ್ನೂ ಭಕ್ತಿಯಿಂದ ಆರಾಧನೆ ಮಾಡಿದವರಿಗೆ ಯಾವುದೇ ತರಹದ ಭಯವಾಗಲೀ, ಅಪಾಯವಾಗಲೀ ಇರುವುದಿಲ್ಲ.

## ಕಾಶಿಯ ಇಪ್ಪತ್ತೆಂಟು ಪ್ರಮುಖ ಲಿಂಗಗಳು

**ಸ್ಕಂದ:-** ಅಗಸ್ತ್ಯ ಮುನಿಯೇ, ಒಂದು ದಿನ ಪಾರ್ವತೀದೇವಿಯು ತ್ರಿಲೋಚನ ಅಥವಾ ತ್ರಿವಿಷ್ಟಪ ಲಿಂಗದ ಬಳಿಗೆ ಹೋದಾಗ ಶಿವನನ್ನು ಕುರಿತು ಪ್ರಶ್ನೆ ಮಾಡಿದಳು- ''ಪ್ರಭು ಮೋಕ್ಷ ಲಕ್ಷ್ಮಿಯ ಲೀಲಾನಿಕೇತನ ರೂಪವಾದ ಈ ಕಾಶೀಧಾಮದಲ್ಲಿ ಯಾವ

ಯಾವ ಶಿವಲಿಂಗಗಳು ಅನಾದಿಸಿದ್ಧ ಆಗಿರುತ್ತವೆ? ಮತ್ತು ಯಾವ ಲಿಂಗಗಳ ಪೂಜೆಯಿಂದ ಈ ಅವಿಮುಕ್ತ ಕ್ಷೇತ್ರದಲ್ಲಿದ್ದ ಎಲ್ಲ ಲಿಂಗಗಳ ಪೂಜೆ ಮಾಡಿದ ಫಲವು ಬರುವುದು? ಈ ಎಲ್ಲ ಮಹಾಲಿಂಗಗಳ ಪರಿಚ. ನನಗೆ ಮಾಡಿಕೊಡಿರಿ.

**ಮಹೇಶ್ವರ:-** ಪ್ರಿಯೆ, ಈ ಕಾಶೀನಗರಿಯಲ್ಲಿ ರತ್ನನಿರ್ಮಿತವಾದ ಸ್ಥೂಲಸೂಕ್ಷ್ಮ ಶಿವಲಿಂಗಗಳು ಅಸಂಖ್ಯ. ಅವುಗಳ ನಾಮೋಚ್ಚಾರಣ ಮಾತ್ರದಿಂದಲೇ ಪಾಪರಾಶಿ ಕ್ಷೀಣ. ಪುಣ್ಯರಾಶಿ ಪ್ರಾಪ್ತಿ. ಇವಲ್ಲದೆ, ಇಲ್ಲಿ ಧಾತುಮಯ ಲಿಂಗಗಳು ಅನೇಕ. ಶಿಲಾಮಯ ಲಿಂಗಗಳು ಅಪರಿಮಿತ. ಇವುಗಳಲ್ಲಿ ಬಹಳಷ್ಟು ಸ್ವಯಂ ಪ್ರಕಟವಾದ ಸ್ವಯಂಭೂ ಲಿಂಗಗಳು. ದೇವತೆಗಳು ಹಾಗೂ ಋಷಿಗಳಿಂದ ಸಂಸ್ಥಾಪಿತಗೊಂಡವು ಹಲವಾರು. ಇವುಗಳಲ್ಲಿ ೧) ಓಂಕಾರಲಿಂಗ ೨) ತ್ರಿಲೋಚನ ೩) ಮಹಾದೇವ ೪) ಕೃತ್ತಿವಾಸ ೫) ರತ್ನೇಶ್ವರ ೬) ಚಂದ್ರೇಶ್ವರ ೭) ಕೇದಾರೇಶ್ವರ ೮) ಧರ್ಮೇಶ್ವರ ೯) ವೀರೇಶ್ವರ ೧೦) ಕಾಮೇಶ್ವರ ೧೧) ವಿಶ್ವಕರ್ಮೇಶ್ವರ ೧೨) ಮಣಿಕರ್ಣೀಶ್ವರ ೧೩) ಅವಿಮುಕ್ತೇಶ್ವರ ೧೪) ವಿಶ್ವೇಶ್ವರ ಈ ಹದಿನಾಲ್ಕು ಲಿಂಗಗಳ ಸಮುದಾಯವೇ ಮುಕ್ತಿಕ್ಷೇತ್ರ ಎಂದು ಕರೆಯಲ್ಪಡುತ್ತದೆ. ಈ ಹದಿನಾಲ್ಕು ಲಿಂಗಗಳು ಕಾಶೀಕ್ಷೇತ್ರದ ಅಧಿಷ್ಠಾತೃ ದೇವತೆಗಳೂ, ಮೋಕ್ಷಲಕ್ಷ್ಮಿಯ ಪ್ರದಾತೃಗಳೂ ಆಗಿವೆ. ಈ ಚತುರ್ದಶ ಲಿಂಗಗಳು ಪ್ರತಿಯೊಂದು ತಿಂಗಳಿನ ಪ್ರತಿಪದೆಯಿಂದ ಆರಂಭಿಸಿ ಚತುರ್ದಶಿಯವರೆಗೆ ಈ ಮುಖ್ಯ ಮುಖ್ಯವಾದ ಚತುರ್ದಶ ಲಿಂಗಗಳ ಯಾತ್ರೆಗೈದು ಪೂಜೆಮಾಡುವವರು ಪುನಃ ಸಂಸಾರ ಮಾರ್ಗಕ್ಕೆ ಮರಳಿ ಬರುವುದಿಲ್ಲ. ಇವಲ್ಲದೆ ೧೫) ಶೈಲೇಶ್ವರ ೧೬) ಸಂಗಮೇಶ್ವರ ೧೭) ಸ್ವರ್ಲೀನೇಶ್ವರ ೧೮) ಮಧ್ಯಮೇಶ್ವರ ೧೯) ಉಪಶಾಂತೇಶ್ವರ ೨೦) ಜ್ಯೇಷ್ಠೇಶ್ವರ ೨೧) ನಿವಾಸೇಶ್ವರ ೨೨) ಶುಕ್ರೇಶ್ವರ ೨೩) ವ್ಯಾಘ್ರೇಶ್ವರ ೨೪) ಜಂಬುಕೇಶ್ವರ. ಇವು ಹದಿನಾಲ್ಕು ಕಾಶಿಯ ಮಹತ್ವ ಪೂರ್ಣವಾದ ಶಿವಲಿಂಗಗಳು ಎನಿಸುತ್ತವೆ. ಪ್ರತಿ ತಿಂಗಳಿನ ಅದರಲ್ಲಿಯೂ ವೈಶಾಖ ಮಾಸದ ಕೃಷ್ಣಪಕ್ಷದ ಪ್ರತಿ ಪದೆಯಿಂದ ಆರಂಭಿಸಿ ಚತುರ್ದಶಿ ತಿಥಿಯವರೆಗೆ ಈ ಶಿವಲಿಂಗಗಳ ವಿಶೇಷ ಪೂಜೆಯನ್ನು ಮಾಡಬೇಕು.

**ಪಾರ್ವತಿ:-** ಪ್ರಭು ಪರಮೇಶ್ವರ, ಕಾಶಿಯಲ್ಲಿರುವ ಅಸಂಖ್ಯ ಶಿವಲಿಂಗಗಳಲ್ಲಿ ಇಪ್ಪತ್ತೆಂಟು ಶಿವಲಿಂಗಗಳು ಪ್ರಮುಖ ಎಂದು ತಾವು ಅಪ್ಪಣೆ ಕೊಡಿಸಿದಿರಿ. ಆ ಇಪ್ಪತ್ತೆಂಟು ಶಿವಲಿಂಗಗಳಲ್ಲಿ ಪ್ರಪ್ರಥಮವಾದ ಲಿಂಗವೇ ಓಂಕಾರೇಶ್ವರ ಲಿಂಗ ಎಂದು ಹೇಳಿದಿರಿ. ಈ ಓಂಕಾರೇಶ್ವರ ಲಿಂಗದ ಸ್ವರೂಪ ಏನು? ಮಹಿಮೆ ಏನು? ಇದನ್ನು ಮೊದಲು ಯಾರು ಆರಾಧಿಸಿದರು? ಎಂಥ ಫಲವನ್ನು ಪಡೆದರು? ಇದನ್ನೆಲ್ಲ ನಿರೂಪಿಸಬೇಕು.

**ಮಹಾದೇವ:-** ಪ್ರಿಯ ಪಾರ್ವತಿ, ಬಹಳ ಪೂರ್ವಕಾಲದ ಸಂಗತಿ. ಹದಿನಾಲ್ಕು ಲೋಕಗಳ ಸೃಷ್ಟಿಕಾರಕನಾದ ಚತುರ್ಮುಖ ಬ್ರಹ್ಮನು ಈ ಆನಂದವನ (ಕಾಶಿ)ದಲ್ಲಿ ಉಗ್ರವಾದ ತಪಸ್ಸನ್ನು ಆಚರಿಸಿದ. ಸಾವಿರ ಯುಗದವರೆಗೆ ಸಾಗಿತು ಅವನ ಈ ತೀವ್ರತರವಾದ ತಪಶ್ಚರ್ಯೆ. ಆಗ ಸಪ್ತಪಾತಾಳ ಲೋಕಗಳನ್ನೂ ಸೀಳಿಕೊಂಡು ಒಂದು ದಿವ್ಯ ಜ್ಯೋತಿಯು ಆ ಚತುರ್ಮುಖನ ಮುಂದೆ ಪ್ರಕಟವಾಯಿತು. ಅವನ ಚಿರಂತನ ಯೋಗದಿಂದ ಅಂತಃಕರಣದ ಚಿತ್ತಪಟಲದಲ್ಲಿ ಪ್ರಕಾಶಿತವಾದ ದಿವ್ಯ ಜ್ಯೋತಿಯೇ ಈಗ ಬಹಿರಂಗದಲ್ಲಿ ಪ್ರಕಟವಾಗಿದ್ದಿತು. ಬ್ರಹ್ಮದೇವನು ತಪಸ್ಸಿನಿಂದ ನಿಮೀಲಿತವಾದ ನಯನಗಳನ್ನು ತೆರೆದು ನೋಡಿದಾಗ ಎದುರು ಅಕ್ಷರ ರೂಪವಾದ ಓಂಕಾರವು ಪ್ರಕಟವಾಗಿತ್ತು. ಅದರಲ್ಲಿ ಸತ್ವಗುಣ ಸಂಪನ್ನನೂ, ಋಗ್ವೇದದ ಅಧಿಷ್ಠಾನಭೂತನೂ, ಚರಾಚರ ಪ್ರಪಂಚದ ಪಾಲನ ಕರ್ತನೂ

ಆದ ಸಾಕ್ಷಾತ್ ನಾರಾಯಣ ಸ್ವರೂಪ 'ಅಕಾರದ' ದರ್ಶನವು ಮೊದಲು ಆಯಿತು. ಅನಂತರ ರಜೋಗುಣ ಸ್ವರೂಪವೂ ಯಜುರ್ವೇದದ ಉತ್ಪತ್ತಿಸ್ಥಾನವೂ, ಬ್ರಹ್ಮಮಯವೂ ಆದ 'ಉಕಾರವು' ಆ ಬ್ರಹ್ಮನ ದೃಷ್ಟಿಗೋಚರವಾಯಿತು. ಅನಂತರ ತಮೋಗುಣ ಸ್ವರೂಪವಾದ ಹಾಗೂ ಸಾಮವೇದದ ಉತ್ಪತ್ತಿಸ್ಥಾನವಾದ ರುದ್ರ ಸ್ವರೂಪವಾದ 'ಮಕಾರವು' ಆ ಬ್ರಹ್ಮನಿಗೆ ಪ್ರತ್ಯಕ್ಷವಾಯಿತು. ಹೀಗೆ ಹರಿಹರ ಬ್ರಹ್ಮಾತ್ಮಕವಾದ ಅಕಾರ, ಉಕಾರ, ಮಕಾರಗಳ ನಾದತತ್ವದ ಸಾಕ್ಷಾತ್ಕಾರವಾಯಿತು. ಈ ನಾದ ತತ್ವವೇ ಸಮಸ್ತ ವಾಙ್ಮಯಕ್ಕೆ ಕಾರಣವಾಗಿದ್ದು 'ಶಬ್ದ ಬ್ರಹ್ಮ' ಎಂದು ಕರೆಯಲ್ಪಡುತ್ತದೆ. ಅನಂತರ ಎಲ್ಲ ಕಾರಣಗಳಿಗೂ ಕಾರಣ, ಎಲ್ಲ ಜಗತ್ತಿನ ಉತ್ಪತ್ತಿಸ್ಥಾನ, ಹಾಗೂ ಪರಮ ಶಿವ ಎಲ್ಲ ಕಾರಣಗಳಿಗೂ ಕಾರಣ, ಎಲ್ಲ ಜಗತ್ತಿನ ಉತ್ಪತ್ತಿಸ್ಥಾನ. ಹಾಗೂ ಪರಮ ಶಿವ ರೂಪವಾದ ಬಿಂದು ತತ್ವವನ್ನು ಆ ವಿಧಾತನು ತನ್ನ ತಪಸ್ಸಿನಿಂದ ಪ್ರತ್ಯಕ್ಷೀಕರಿಸಿ ಕೊಂಡ. ಈ ಅ, ಉ, ಮ, ನಾದ, ಬಿಂದು. ಈ ಐದು ಅಕ್ಷರಗಳಿಂದ ಕೂಡಿದ ಓಂಕಾರ ರೂಪವಾದದ್ದೇ ಲಿಂಗರೂಪಧಾರಿಯಾದ ಈ ಓಂಕಾರೇಶ್ವರ. ಇದು ತನ್ನ ಪ್ರಭಾವದಿಂದ ಎಲ್ಲ ಭಕ್ತರನ್ನು 'ಅವನ' (ರಕ್ಷಣ) ಮಾಡುವುದರಿಂದ 'ಓಂ' ಅಥವಾ 'ಭಕ್ತಂ ಉನ್ನಯತಿ' ಭಕ್ತನನ್ನು ಉರ್ಧ್ವಲೋಕಕ್ಕೆ ಕರೆದುಕೊಂಡು ಹೋಗುತ್ತದೆ ಎಂದು 'ಓಂ' ಆಗಿದೆ. ತನ್ನನ್ನು ಜಪಮಾಡುವ ಭಕ್ತರನ್ನು ಸಂಸಾರ ಸಮುದ್ರದಿಂದ ತಾರಣ ಮಾಡುವುದರಿಂದ ಈ ಓಂಕಾರಕ್ಕೆ 'ತಾರ' ಎಂದು ಹೇಳುತ್ತಾರೆ. ಮೋಕ್ಷವನ್ನಪೇಕ್ಷಿಸುವ ಎಲ್ಲ ಮಾನವರಿಂದ 'ಪ್ರಣುತ' ಪ್ರಶಂಸಿತ, ಆಗಿ ತನ್ನ ಉಪಾಸಕರನ್ನು ಪರಮಪದವಿಗೆ 'ಪ್ರಣಯನ' ಮಾಡುವುದರಿಂದ ಎಂದರೆ ಕರೆದೊಯ್ಯುವುದರಿಂದ ಇದಕ್ಕೆ 'ಪ್ರಣವ' ಎಂದೂ ಕರೆಯುತ್ತಾರೆ. ವೇದತ್ರಯ ಸ್ವರೂಪವೂ ನಾದಬಿಂದು ಸ್ವರೂಪವೂ ಆದ ಈ ಓಂಕಾರದ ಪ್ರಥಮ ದರ್ಶನವನ್ನು ಬ್ರಹ್ಮದೇವರು ಮಾಡಿದರು. ಇದರಿಂದಲೇ ಮುಂದೆ ಷಡಂಗಸಹಿತವಾದ ಸಂಪೂರ್ಣ ವೇದವು ವೃಷಭ ರೂಪನೂ ಯಜ್ಞಮಯನೂ ಆದ ಪರಮೇಶ್ವರನ ಪ್ರತಿಪಾದಕವಾದ ಮಂತ್ರ, ಬ್ರಾಹ್ಮಣ, ಕಲ್ಪಾತ್ಮಕವಾಗಿ ತೇಜೋಮಯವಾಗಿ ಪ್ರಕಟವಾಯಿತು. ಬ್ರಹ್ಮನಿಂದ ಆರಂಭಿಸಿ ಕೀಟ ಪರ್ಯಂತವಾದ ಸಂಪೂರ್ಣ ಜಗತ್ತು ಇದರಲ್ಲಿಯೇ ಲೀನವಾಗುವುದರಿಂದ ಇದು 'ಓಂಕಾರ ಲಿಂಗ' ಎನಿಸಿತು. ಅ, ಉ, ಮ, ನಾದ, ಬಿಂದು ಈ ಪಂಚ ಅಕ್ಷರಗಳಿಂದ ಯುಕ್ತವಾಗಿ ಪ್ರಪಂಚದಿಂದ ಭಿನ್ನವಾದ ಲಿಂಗರೂಪ ಧರಿಸಿ ಓಂಕಾರೇಶ್ವರ ಎಂದು ಬ್ರಹ್ಮದೇವರಿಂದ ಇದು ಸ್ತೋತ್ರ ಮಾಡಲ್ಪಟ್ಟಿತು.

**ಬ್ರಹ್ಮ:-** ಅಕ್ಷರ ಸ್ವರೂಪಧಾರಣ ಮಾಡಿದ ಓಂಕಾರ ರೂಪಿ ಪರಬ್ರಹ್ಮನಿಗೆ ನಮಸ್ಕಾರ ಋಗ್ವೇದ, ಯರ್ಜುವೇದ, ಸಾಮವೇದ ಸ್ವರೂಪಿಯೂ ನಾದಬಿಂದು ಕಲಾತ್ಮಕನೂ ಪಶುವಿನಂತೆ ಇದ್ದ ಅಜ್ಞಾನಿ ಜೀವಿಗಳನ್ನು ರಕ್ಷಿಸುವವನೂ, ಸಂಸಾರ ಸಾಗರದಿಂದ ಪ್ರಾಣಿಗಳನ್ನು ತಾರಣ ಮಾಡಿ ತಾರಕ ಸ್ವರೂಪಿಯೂ ಪ್ರಣವ ರೂಪಿಯೂ ಆದ ಪರಮಾತ್ಮನಿಗೆ ವಂದನೆ, ''ಊ, ಋ, ಲೃ, ಏ, ಓ, ಐ, ಔ'' ಈ ಎಲ್ಲ ಸ್ವರ ಸ್ವರೂಪಿಯೂ, ಕಕಾರದಿಂದ ಹಕಾರದವರೆಗೆ ಇರುವ ಎಲ್ಲ ವ್ಯಂಜನಾಕ್ಷರ ಸ್ವರೂಪಿಯೂ, ಉದಾತ್ತ ಅನುದಾತ್ತ ಸ್ವರಿತರೂಪನೂ, ಹ್ರಸ್ವ, ದೀರ್ಘ, ಪ್ಲುತ, ವಿಸರ್ಗ, ಅನುಸ್ವಾರ, ಅನುನಾಸಿಕ, ನಿರನಾನಾಸಿಕ, ಅಕ್ಷರ ಸ್ವರೂಪನೂ, ದಂತ ತಾಲು, ಓಷ್ಠ, ಹೃದಯಗಳಿಂದ ಹೊರಡುವ ಅಕ್ಷರಾತ್ಮಕನೂ, ಊಷ್ಮ ಅಂತಸ್ಥವರ್ಣಾತ್ಮಕನೂ, ಎಲ್ಲ ವರ್ಗಗಳ ಪಂಚಮ

ವರ್ಣಾತ್ಮಕನೂ ಆದ ಶಬ್ದ ಬ್ರಹ್ಮನಿಗೆ ವಂದನೆ. ತಾನು ಇಪ್ಪತ್ತೊಂದು ಮೊರ್ಛನ, ಸ್ಥಾಯಿ, ಸಂಚಾರಿ, ಸ್ವರಭೇದಗಳ ನಿಯಮಕನಾದ ತೌಲಪ್ರಿಯ, ತೌಲಸ್ವರೂಪ, ಲಾಸ್ಯತಾಂಡವ ನೃತ್ಯಗಳ ಪ್ರಕಾಶಕನೂ ಆದ ನಟವರನಿಗೆ ನಮಸ್ಕಾರ. ವಿಷ್ಣುರೂಪದಿಂದ ಶಂಖ, ಚಕ್ರ, ಗದಾಪದ್ಮಗಳನ್ನು ಧರಿಸಿ ಜಗತ್ತನ್ನು ರಕ್ಷಿಸುವ, ಸೃಷ್ಟಿ ರಚನೆಯ ವಿಶೇಷವನ್ನೆಲ್ಲ ತಿಳಿದು ಬ್ರಹ್ಮರೂಪದಿಂದ ಜಗತ್ತಿನ ಸೃಷ್ಟಿಯನ್ನೆಲ್ಲ ಮಾಡುವ, ಕಲ್ಪಾಂತ ಕಾಲದಲ್ಲಿ ಕಾಲಾಗ್ನಿ ರುದ್ರನಾಗಿ ಮಹಾಪ್ರಳಯವನ್ನು ಆರಂಭಿಸುವ ಕಲ್ಪದ ಆದಿಕಾಲದಲ್ಲಿ ದೃಷ್ಟಿಪಾತ ಮಾತ್ರದಿಂದ ಪ್ರಕೃತಿ ಪುರುಷ ವಿಲಾಸ ರೂಪದಿಂದ ಮಹತತ್ವ ಮೊದಲಾದ ಸಂಪೂರ್ಣ ಜಗತ್ತನ್ನು ಪುನಃ ಪ್ರಕಟಮಾಡುವ, ವೇದವಾಣಿಗೂ ಅಗೋಚರನಾದ ಭಗವನ್, ನಿನ್ನನ್ನು ಪೂರ್ಣವಾಗಿ ಯಾರು ತಿಳಿಯಬಲ್ಲರು? ಯಾರು ಸುತ್ತಿಸಬಲ್ಲರು? ಓಂಕಾರ ಶಬ್ದವಾಚ್ಯನಾದ ಪರಬ್ರಹ್ಮನೇ ಅಪರ ಬ್ರಹ್ಮನಾದ ನಾನು ನಿನಗೆ ಶರಣು ಬಂದಿದ್ದೇನೆ. ಪ್ರಣವರೂಪಿಯಾದ ನಿನಗೆ ನಾನು ಪ್ರಣಾಮಮಾಡುತ್ತೇನೆ. ನಿನಗೆ ನನ್ನ ನಮಸ್ಕಾರ. ಬ್ರಹ್ಮದೇವನು ಮಾಡಿದ ಅರ್ಥಪೂರ್ಣವಾದ ಈ ಸ್ತೋತ್ರದಿಂದ ಪರಮ ಪ್ರೀತನಾದ ಓಂಕಾರೇಶ್ವರ ಬ್ರಹ್ಮದೇವನಿಗೆ ಬಯಸಿದ ವರ ಬೇಡಲು ಹೇಳಿದ.

**ಬ್ರಹ್ಮ:-** ''ದೇವೇಶ್ವರ, ನೀನು ನನ್ನ ಮೇಲೆ ಪ್ರಸನ್ನನಾಗಿರುವೆ. ಇದೇ ನಿನ್ನಿಂದ ನಾನು ಬೇಡುವ ವರ. ಈ ಓಂಕಾರೇಶ್ವರ ಲಿಂಗದಲ್ಲಿ ನೀನು ನಿರಂತರವೂ ನೆಲೆಸು''.

ಬ್ರಹ್ಮದೇವರ ಪ್ರಾರ್ಥನೆಯ ಮೇರೆಗೆ ಆ ಓಂಕಾರೇಶ್ವರನಲ್ಲಿ ಪರಬ್ರಹ್ಮನ ನಿತ್ಯ ಸನ್ನಿಧಾನ ಇರುತ್ತದೆ. ಈ ಓಂಕಾರೇಶ್ವನ ದರ್ಶನ ಮಾತ್ರದಿಂದಲೇ ಮಾನವರಿಗೆ ಅಶ್ವಮೇಧ ಯಜ್ಞಮಾಡಿದ ಫಲವು ಬರುತ್ತದೆ.

## ಕೇದಾರೇಶ್ವರ ಲಿಂಗದ ಮಹಿಮೆ:

**ಪಾರ್ವತಿ:-** ಕರುಣೆಯ ಕೈವಾರಿಯಾದ ಕೈಲಾಸ ಪತಿಯೇ, ಈಗ ನೀನು ನಿನ್ನ ಭಕ್ತರ ಮೇಲೆ ಕೃಪೆಮಾಡಿ ಕೇದಾರದ ಮಹಾತ್ಮೆಯನ್ನು ಹೇಳಿರಿ.

**ಮಹಾದೇವ:-** ಪಾರ್ವತೀ, ಇದೊಂದು ಬಹುಕಾಲದ ಹಿಂದೆ ನಡೆದ ಭೂತ ಸಂಗತಿ. ಉಜ್ಜಯನಿಯಿಂದ ಒಬ್ಬ ಬ್ರಾಹ್ಮಣನು ಕಾಶಿಗೆ ಬಂದ. ಅವನ ತಂದೆಯು ಈ ಮೊದಲೇ ಅವನಿಗೆ ಉಪನಯನ ಸಂಸ್ಕಾರ ಮಾಡಿದ್ದ. ಈ ಮಗ ಬ್ರಹ್ಮಚರ್ಯ ವ್ರತವನ್ನು ಪಾಲಿಸುತ್ತಿದ್ದ. ಕಾಶಿಯಲ್ಲಿ ಆ ಬ್ರಾಹ್ಮಣಕುಮಾರನು ಹಿರಣ್ಯಗರ್ಭ ಎಂಬ ಆಚಾರ್ಯರಿಂದ ಪಾಶುಪತವ್ರತದ ದೀಕ್ಷೆಯನ್ನು ಸ್ವೀಕರಿಸಿದ. ಅವನ ಹೆಸರು ವಶಿಷ್ಠ. ಹಿರಣ್ಯಗರ್ಭನ ಅನೇಕ ಶಿಷ್ಯರಲ್ಲಿ ಈ ವಶಿಷ್ಠನೇ ವರಿಷ್ಠ ಮತ್ತು ಶ್ರೇಷ್ಠ. ಪ್ರತಿದಿನವೂ ಹರಪಾಪ ಎಂಬ ಕುಂಡದಲ್ಲಿ ಪ್ರಾತಃಕಾಲದಲ್ಲಿ ಸ್ನಾನಮಾಡಿ ತ್ರಿಕಾಲದಲ್ಲಿಯೂ ಅವನು ಶಿವಪೂಜೆ ಮಾಡುತ್ತಿದ್ದ. ಪ್ರತಿನಿತ್ಯವೂ ಸರ್ವಾಂಗದಲ್ಲಿ ವಿಭೂತಿಯನ್ನು ಲೇಪಿಸಿಕೊಂಡು ವಿಭೂತಿ ಸ್ನಾನವನ್ನೂ ಮಾಡುತ್ತಿದ್ದ. ಅವನು ಶಿವಲಿಂಗ ಹಾಗೂ ಗುರುಗಳಲ್ಲಿ ಭೇದವನ್ನು ಎಂದೂ ಮಾಡುತ್ತಿರಲಿಲ್ಲ. ವಶಿಷ್ಠನು ಹನ್ನೆರಡು ವರ್ಷದವನಿದ್ದ. ಅದೇ ಕಾಲದಲ್ಲಿ ಅವನು ತನ್ನ ಗುರುಗಳೊಂದಿಗೆ ಕೇದಾರ ತೀರ್ಥದ ಯಾತ್ರೆ ಮಾಡಲು ಹಿಮಾಲಯಕ್ಕೆ ತೆರಳಿದ. ಆಸಿಧಾರ ಪರ್ವತಕ್ಕೆ ಹೋಗಿ ತಲುಪಿದ ಬಳಿಕ ವಶಿಷ್ಠನ ಗುರುಗಳಾದ ಹಿರಣ್ಯಗರ್ಭಾಚಾರ್ಯರು ಮರಣಹೊಂದಿದರು. ಆಗ ಕೂಡಲೇ ಪರಮೇಶ್ವರನ ಪಾರ್ಷದರು ಅಲ್ಲಿಗೆ ಬಂದರು.

ಉಳಿದ ಎಲ್ಲ ಯಾತ್ರಿಕರೂ, ತಪಸ್ವಿಗಳೂ ನೋಡುತ್ತಿದ್ದಂತೆಯೇ ಹಿರಣ್ಯಗರ್ಭರನ್ನು ತಮ್ಮ ದೈವೀ ವಿಮಾನದಲ್ಲಿ ಕೂಡಿಸಿಕೊಂಡು ಕೈಲಾಸಲೋಕಕ್ಕೆ ಪಯಣ ಬೆಳಸಿದರು. ಅದನ್ನು ನೋಡಿ ತಪಸ್ವೀ ವಶಿಷ್ಠನು ಎಲ್ಲ ಲಿಂಗಗಳಲ್ಲಿ ಕೇದಾರಲಿಂಗವೇ ಸರ್ವಶ್ರೇಷ್ಠ ಎಂದು ನಿರ್ಧರಿಸಿದ. ಅನಂತರ ಕೇದಾರಕ್ಷೇತ್ರದ ಯಾತ್ರೆಯನ್ನು ಪೂರ್ಣಮಾಡಿ ಅವನು ಕಾಶಿ ಪಟ್ಟಣಕ್ಕೆ ಮರಳಿ ಬಂದ. ಆಗಲೇ ಅವನು ಒಂದು ಪ್ರತಿಜ್ಞೆ ಮಾಡಿದ "ನಾನು ಬದುಕಿ ಇರುವವರೆಗೂ ಕಾಶಿಯಲ್ಲಿಯೇ ವಾಸಿಸುತ್ತೇನೆ. ಆದರೆ ಪ್ರತಿಯೊಂದು ಚೈತ್ರಮಾಸದ ಹುಣ್ಣಿಮೆಯೆಂದು ನಡೆದು ಹೋಗಿ ಕೇದಾರನಾಥನ ದರ್ಶನವನ್ನು ತಪ್ಪದೇ ಮಾಡುತ್ತೇನೆ.

ಈ ತನ್ನ ಪ್ರತಿಜ್ಞೆಯನ್ನು ಅನುಸರಿಸಿ ಆ ತಪಸ್ವೀ ವಶಿಷ್ಠ ಮುನಿಯು ಬ್ರಹ್ಮಚರ್ಯಪಾಲನ ಪೂರ್ವಕವಾಗಿ ಕಾಶಿಯಲ್ಲಿ ವಾಸಮಾಡಿಯೇ ಹಿಮಾಲಯ ಪರ್ವತದಲ್ಲಿ ಇರುವ ಕೇದಾರಕ್ಷೇತ್ರದ ಯಾತ್ರೆಯನ್ನು ಅರವತ್ತೊಂದು ಬಾರಿ ಮಾಡಿ ಪೂರೈಸಿದ. ಮತ್ತೆ ಮರುವರುಷ ಚೈತ್ರಮಾಸ ಸಮೀಪಿಸಿದ ಕೂಡಲೇ ಬಹಳ ಉತ್ಸಾಹದಿಂದ ಕೇದಾರಯಾತ್ರೆಯನ್ನು ಪ್ರಾರಂಭಿಸಿದ. ಅವನ ಕೂದಲುಗಳೆಲ್ಲ ಬೆಳ್ಳಗಾಗಿದ್ದವು. ದೇಹದಲ್ಲಿ ವೃದ್ಧಾವಸ್ಥೆಯ ಪೂರ್ಣಪ್ರಭಾವವು ಬಿದ್ದಿತ್ತು. ಅವನ ಸಂಗ ಸಹವಾಸದಲ್ಲಿದ್ದ ಅನೇಕ ತಪಸ್ವೀ ಜನರು ಪ್ರೀತಿಯಿಂದ "ಈ ಸಲ ನೀನು ಕೇದಾರೇಶ್ವರಕ್ಕೆ ಹೋಗುವುದು ಬೇಡ. ಇಲ್ಲಿಯೇ ಇದ್ದುಬಿಡು. ನಿನಗೆ ವಯಸ್ಸಾಗಿದೆ. ನೀನು ಕಠಿಣವಾದ ಆ ಕೇದಾರೇಶ್ವರ ಯಾತ್ರೆಯನ್ನು ಇನ್ನು ಮುಂದೆ ಮೊದಲಿನಂತೆ ಮಾಡಲಾರೆ." ಹೀಗೆ ಅನೇಕರು ಅವನಿಗೆ ಉಪದೇಶ ಮಾಡಿದರೂ ಅವನು ಯಾರ ಮಾತಿಗೂ ಲಕ್ಷ ಕೊಡಲಿಲ್ಲ. ತಾನು ಸಂಕಲ್ಪಮಾಡಿದ ಕೇದಾರೇಶ್ವರ ಯಾತ್ರೆಯನ್ನು ಬಿಡಲಿಲ್ಲ ಅವನ ಮನಸ್ಸಿನಲ್ಲಿ ವಿಚಾರಿಸಿದ. "ಇವರೆಲ್ಲರೂ ಸುಮ್ಮನೇ ನನಗೆ ಯಾತ್ರೆಯನ್ನು ನಿಷೇಧಿಸುತ್ತಲಿದ್ದಾರೆ. ನನಗೆ ಒಂದು ವೇಳೆ ದಾರಿಯಲ್ಲಿ ಬೀದಿಯಲ್ಲಿಯೇ ಮರಣವಾದರೆ ನನ್ನ ದಾರಿಯಲ್ಲೇ ನಾನು ಮರಣವಾದರೆ ಗುರುಗಳಾದ ಹಿರಣ್ಯಗಭಾಚಾರ್ಯರಂತೆ ನನಗೂ ಸದ್ಗತಿ ಉಂಟಾಗುವುದು." ಎಂದು. ದೇವಿ, ತಪಸ್ವೀ ವಶಿಷ್ಠನ ಈ ಚಿತ್ತದ ಧೃಡತೆಯನ್ನು ಕಂಡು ನನಗೆ ಬಹಳ ಸಂತೋಷವಾಯಿತು. ನಾನು ಅವನಿಗೆ ಸ್ವಪ್ನದಲ್ಲಿ ದರ್ಶನಕೊಟ್ಟು ಹೇಳಿದೆ. "ವಶಿಷ್ಠ, ನಾನು ನಿನ್ನ ಮೇಲೆ ಸುಪ್ರಸನ್ನ. ನಾನು ಬೇರೆ ಅಲ್ಲ, ಕೇದಾರೇಶ್ವರ ಬೇರೆ ಅಲ್ಲ. ನಾನೇ ಕೇದಾರೇಶ್ವರ, ನಾನೇ ಓಂಕಾರೇಶ್ವರ, ನಾನೇ ತ್ರಿಲೋಚನೇಶ್ವರ, ನಾನು ನಿನ್ನ ಮೇಲೆ ಸುಪ್ರೀತ ನಿನಗೆ ಬೇಕಾದ ವರ ಬೇಡು."

**ವಶಿಷ್ಠ:-** ದೇವೇಶ್ವರ, ನೀನು ನನ್ನ ಮೇಲೆ ಪ್ರಸನ್ನನಾದದ್ದು ನಿಜವಿದ್ದರೆ, ಇಲ್ಲಿ ನನ್ನ ಜೊತೆಗಿದ್ದ ಎಲ್ಲರ ಮೇಲೆಯೂ ನೀನು ಪರಮಾನುಗ್ರಹ ಮಾಡು. ಅವರೆಲ್ಲರೂ ಉದ್ಧಾರ ಹೊಂದಲಿ.

ವಶಿಷ್ಠನ ಈ ಪರೋಪಕಾರ ಬುದ್ಧಿಯನ್ನು ಹಾಗೂ ದಯಾಧರ್ಮವನ್ನು ನೋಡಿ ನನಗೆ ಅವನ ಮೇಲಿನ ಪ್ರೀತಿಯು ದುಪ್ಪಟ್ಟಾಯಿತು. ಮತ್ತೆ ಅವನಿಗೆ ವರ ಕೇಳಿಕೊಳ್ಳಲು ಹೇಳಿದೆ. ಆಗ ಅವನು ನನಗೆ ಪ್ರಾರ್ಥನೆ ಮಾಡಿದ.

**ವಶಿಷ್ಠ:-** ಪರಮದಯಾಳುವಾದ ಪರಮೇಶ್ವರ, ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ ನೀನು ಹಿಮಾಲಯದಲ್ಲಿದ್ದ ಕೇದಾರೇಶ್ವರ ಸ್ಥಾನದಿಂದ ಈ ಕಾಶಿಯಲ್ಲಿಯೇ ಬಂದು ನೆಲೆಸು.

ಆ ವಶಿಷ್ಠನ ಉಗ್ರವಾದ ತಪಸ್ಸಿನಿಂದ ಮೊದಲೇ ನಾನು ಸಂತುಷ್ಟ. ಆ ಭಕ್ತನ ಕೋರಿಕೆಯ ಮೇರೆಗೆ ಆ ಹಿಮಾಲಯ ಪರ್ವತದ ಮೇಲೆ ಕಲಾಮಾತ್ರದಿಂದ ಉಳಿದು ಪೂರ್ಣರೂಪದಿಂದ ಕಾಶಿಗೆ ಬಂದು ನೆಲೆಸಿದೆ. ವಶಿಷ್ಠ ಹಾಗೂ ಅವನ ಜೊತೆಗಾರರನ್ನು ಮುಂದೆ ಮಾಡಿಕೊಂಡು, ನಾನು ಕಾಶಿಯನ್ನು ಪ್ರವೇಶಿಸಿದೆ. ಹರ ಪಾಪಕುಂಡ ತೀರ್ಥದ ಸಮೀಪದಲ್ಲಿ ಇರುತ್ತಲಿದ್ದೇನೆ. ನನ್ನ ನಿವಾಸದಿಂದ ಪವಿತ್ರವಾದ ಈ ಹರ ಪಾಪ ಕುಂಡದಲ್ಲಿ ಎಲ್ಲ ಜನರೂ ಸ್ನಾನ, ಸಂಧ್ಯೆ, ತರ್ಪಣಾಧಿಗಳನ್ನು ಮಾಡಿ ಇದೇ ಶರೀರದಿಂದ ಸಿದ್ಧಿ ಪಡೆಯುತ್ತಾರೆ. ಈ ಹರಪಾಪ ತೀರ್ಥವು ಹಿಂದಿನಿಂದ ಗಂಗೆಯಲ್ಲಿಯೇ ಕೂಡಿ ಹೋಗುವುದರಿಂದ ರಾಶಿ ರಾಶಿ ಪಾಪವನ್ನೆಲ್ಲ ನಾಶಮಾಡಲು ಸಮರ್ಥವಾಗಿದೆ. ಮುಂದೆ ಮಾನಸ ಸರೋವರವು ಇಲ್ಲಿ ತಪಸ್ಸನ್ನು ಮಾಡಿತು. ಆದ್ದರಿಂದ ಇಲ್ಲಿ ಈ ಹರಪಾಪ ತೀರ್ಥವು ಮಾನಸತೀರ್ಥ ಎಂದು ಪ್ರಖ್ಯಾತವಾಯಿತು. ಕೇದಾರ ತೀರ್ಥದಲ್ಲಿ ಸ್ನಾನಮಾಡಿ ನಿಧಾನವಾಗಿ ಕುಳಿತು, ಪಿತೃಗಳನ್ನು ಉದ್ದೇಶಿಸಿ ಪಿಂಡದಾನ ಮಾಡಿದವನ ಅನೇಕ ತಲೆ ಮಾರಿನ ಹಿಂದಿನ ಪಿತೃಗಳೆಲ್ಲರೂ ಸಂಸಾರ ಸಾಗರದಿಂದ ಪಾರಾಗುತ್ತಾರೆ. ಮಂಗಳವಾರ ಅಮಾವಾಸ್ಯೆಯ ತಿಥಿ ಇದ್ದಾಗ ಕೇದಾರ ತೀರ್ಥದಲ್ಲಿ ಶ್ರಾದ್ಧ ಮಾಡಿದವರು ಗಯಾ ಕ್ಷೇತ್ರಕ್ಕೆ ಏಕೆ ಹೋಗಬೇಕು? ಆದ್ದರಿಂದ ಕಾಶಿಯಲ್ಲಿ ಎಲ್ಲರೂ ಪ್ರಯತ್ನ ಪೂರ್ವಕವಾಗಿ ದರ್ಶನ ಮಾಡಿಕೊಳ್ಳಬೇಕು. ಕೇದಾರದಿಂದ ಉತ್ತರದಲ್ಲಿ ಚಿತ್ರಾಂಗದೇಶ್ವರ. ದಕ್ಷಿಣದಲ್ಲಿ ನೀಲಕಂಠೇಶ್ವರ ವಾಯುವ್ಯ ಕೋಣದಲ್ಲಿ ಇಂದ್ರದ್ಯುಮ್ನೇಶ್ವರ ಅದರ ದಕ್ಷಿಣ ಭಾಗದಲ್ಲಿ ಕಾಲಂಜಲೇಶ್ವರ ಲಿಂಗವು ಇರುತ್ತದೆ. ಅದರ ದರ್ಶನ ಮಾಡಿಕೊಂಡವರಿಗೆ ಮುಪ್ಪು, ಮರಣ ಎರಡೂ ತಪ್ಪಿ ಹೋಗಿ ಬಹೂಕಾಲ ನನ್ನ ಲೋಕದಲ್ಲಿ ವಾಸಮಾಡುವರು. ಚಿತ್ರಾಂಗದೇಶ್ವರದಿಂದ ಉತ್ತರದಲ್ಲಿ ಕ್ಷೇಮೇಶ್ವರಲಿಂಗದ ದರ್ಶನ ಮಾಡಿಕೊಂಡು ಸೇವೆಸಲ್ಲಿಸಿದವರು ಇಹ ಲೋಕದಲ್ಲಿ ಭಕ್ತಿ, ಪರಲೋಕದಲ್ಲಿ ಮುಕ್ತಿ ಎರಡನ್ನೂ ಪಡೆಯುವರು.

## ಧರ್ಮೇಶ್ವರ ಲಿಂಗದ ಮಹಿಮೆ ಮತ್ತು ಮನೋರಥ ತದಿಗೆಯ ವ್ರತ

**ಮಹಾದೇವ** :- ದೇವಿ, ಈಗ ನಿನಗೆ ಶ್ರೀಧರ್ಮೇಶ್ವರ ಲಿಂಗದ ಮಹಿಮೆ ಹೇಳುತ್ತೇನೆ ನೀನು ಇದೇ ಕ್ಷೇತ್ರದಲ್ಲಿ ವಿಶ್ವಭುಜಾ ಎಂಬ ಹೆಸರಿನಿಂದ ನೆಲಿಸಿರುವಿ. ಈ ಕ್ಷೇತ್ರವು ವಿಘ್ನ ವಿರೋಧಗಳನ್ನು ನಾಶಪಡಿಸುವ ನಿನ್ನ ಪುತ್ರನಾದ ಗಣೇಶನು ಆಶಾವಿನಾಯಕ ಎಂಬ ಹೆಸರಿನಿಂದ ಪ್ರಸಿದ್ಧ ಪಡೆದಿದ್ದಾನೆ. ಈ ಧರ್ಮೇಶ್ವರ ಲಿಂಗದ ದರ್ಶನ ಮಾತ್ರದಿಂದ ದುರ್ದಮ ಎಂಬ ಓರ್ವ ರಾಜನಿಗೆ ಮೊದಲಿನ ದುರ್ವಿಚಾರಗಳೆಲ್ಲಾ ದೂರವಾಗಿ ಒಮ್ಮೆಲೆ ಧರ್ಮಬುದ್ಧಿ ಜಾಗೃತವಾಗಿತ್ತು. ಇಂತಹ ಪರಮ ಪವಿತ್ರವಾದ ಧರ್ಮೇಶ್ವರ ಲಿಂಗದ ಪ್ರಾದುರ್ಭಾವ ವೃತ್ತಾಂತವನ್ನು ನಿರೂಪಿಸುತ್ತೇನೆ ಕೇಳು.

ಪೂರ್ವಕಾಲದಲ್ಲಿ ವಿವಸ್ವಾನ್ (ಸೂರ್ಯ)ನ ಮಗನಾದ ವೈವಸ್ವತ ಮನುವು ಇಂದ್ರಿಯಗಳನ್ನು ಅಂಕಿತದಲ್ಲಿಟ್ಟುಕೊಂಡು ಇದೇ ಸ್ಥಳದಲ್ಲಿ ನಿನ್ನ (ವಿಶ್ವಭುಜಾದೇವಿಯ) ಸಾಕ್ಷಾತ್ಕಾರಕ್ಕಾಗಿ ಕೈಕೊಂಡಿದ್ದ ತೀಕ್ಷ್ಣ ತಪಸ್ಸನ್ನು. ಹೀಗೆ ತ್ರೀವ್ರತರವಾದ ತಪಶ್ಚರ್ಯೆಯನ್ನು ಅವನು ಅನುಷ್ಠಾನ ಮಾಡುತ್ತ ಇರುವಾಗ ಕೃತ, ತ್ರೇತಾ, ದ್ವಾಪರ, ಕಲಿ ನಾಲ್ಕು ಯುಗಗಳು ತಿರುಗಿ ಹೋದವು. ಅವನ ನಿಷ್ಠುರವಾದ ತಪೋನುಷ್ಠಾನದಿಂದ ತುಷ್ಟನಾದ ನಾನು ಅವನಿಗೆ, ನಿನಗೆ ನಿನ್ನ ಮನಸ್ಸಿಗೆ ಇಷ್ಟವಾದ ವರವನ್ನು ಕೇಳು ಎಂದು ಹೇಳಿದೆ. ಆಗ ಆ ವೈವಸ್ವತ ಮನುಮಹಾರಾಜನು ಯಾವ ವರವನ್ನೂ ಬೇಡದೇ ''ಓಂ ನಮಃ ಶಿವಾಯ'' ಎಂಬ

ಮಂತ್ರವನ್ನು ಉಚ್ಚರಿಸುತ್ತ ಸಾವಿರ ನಮಸ್ಕಾರಗಳನ್ನು ಹಾಕಿದ ಆ ಗೌರೀಪತಿಗೆ. ಆಗ ಆ ಪರಮೇಶ್ವರನು ಯಮರಾಜನ ಆ ಪ್ರಣಾಮದ ಪೌನಃಪ್ರನ್ಯವನ್ನು ತಡೆದು ನಿಲ್ಲಿಸಿ ತಾನಾಗಿಯೇ ಅವನು ಬೇಡದಿದ್ದರೂ ನಿಡಿದ ಈ ಕೆಳಗಿನ ವರಗಳನ್ನು.

**ಮಹಾದೇವ:-** ''ಸೂರ್ಯನಂದನ, ನೀನು ಕರ್ಮ ಮತ್ತು ಸ್ವರೂಪದಿಂದಲೂ ಧರ್ಮರೂಪನು ಇದ್ದೇಇರುತ್ತಿ. ಇನ್ನು ಮೇಲೆ ಹೆಸರಿನಿಂದಲೂ ಧರ್ಮರಾಜ ಎಂದೇ ಕರೆಯಲ್ಪಡುವಿ. ಇಂದಿನಿಂದ ನೀನು ಎಲ್ಲ ಚರಾಚರ ಪ್ರಾಣಿಗಳ ಧರ್ಮಾ ಧರ್ಮ ನಿರ್ಣಯದಲ್ಲಿ ಮುಖ್ಯ ನಿರ್ಣಾಯಕ ಎಂದು ನನ್ನಿಂದ ನೇಮಿಸಲ್ಪಟ್ಟಿರುವಿ, ನನ್ನ ಆಜ್ಞೆಯಿಂದ ನೀನು ಎಲ್ಲರನ್ನೂ ಶಾಸನಮಾಡು.'' ನೀನು ದಕ್ಷಿಣ ದಿಕ್ಕಿಗೆ ಅಧಿಪತಿಯಾಗಿ ಸರ್ವ ಜೀವರು ಮಾಡುವ ಒಳ್ಳೆಯ ಹಾಗೂ ಕೆಟ್ಟದಾದ ಕಾರ್ಯಗಳಿಗೆಲ್ಲ ಸಾಕ್ಷಿಯಾಗುವಿ. ಮಾನವರೆಲ್ಲರಿಗೂ ನೀನು ಹೇಳಿದ ಮಾರ್ಗದಿಂದಲೇ ಅವರವರ ಕರ್ಮಾನು ಸಾರಗತಿಯಾಗಲಿ. ನೀನು ನನ್ನಲ್ಲಿ ಭಕ್ತಿಯನ್ನು ಇಟ್ಟು ಈ ಲಿಂಗ ವಿಗ್ರಹದ ಆರಾಧನೆಯನ್ನು ಚೆನ್ನಾಗಿ ಮಾಡಿರುವೆ. ಈ ಲಿಂಗದ ದರ್ಶನ, ಸ್ಪರ್ಶನ, ಪೂಜನಗಳಿಂದ ಶೀಘ್ರಸಿದ್ಧಿ ಭಕ್ತರಿಗೆ ಆಗುವುದು. ಈ ಧರ್ಮತೀರ್ಥದಲ್ಲಿ ಸ್ನಾನಮಾಡಿ ಧರ್ಮೇಶ್ವರನ ದರ್ಶನ ಮಾಡಿಕೊಂಡು ಅವನ ಆರಾಧನೆ ಮಾಡಿದವರಿಗೆ ಯಾವ ಪುರುಷಾರ್ಥ ಸಿದ್ಧಿಯೂ ದೊರಕದೇ ಇರಲಾರದು. ಕಾರ್ತೀಕ ಶುಕ್ಲ ಅಷ್ಟಮಿಯ ದಿನ ಉಪವಾಸವಿದ್ದು ಧರ್ಮೇಶ್ವರ ತೀರ್ಥದ ಯಾತ್ರೆಗೈದು,ರಾತ್ರಿಯಲ್ಲಿ ಆ ಉತ್ಸವದೊಂದಿಗೆ ಜಾಗರಣಮಾಡಿದವರು ಈ ಮಹೀಮಂಡಲದಲ್ಲಿ ಮತ್ತೊಮ್ಮೆ ಹುಟ್ಟನ್ನು ಪಡೆಯುವುದಿಲ್ಲ.''

ಹೀಗೆ ಹೇಳಿ ಶಂಕರನು ತನ್ನ ಕಮಲ ಕೋಮಲವಾದ ಕೈಯಿಂದ ಧರ್ಮರಾಜನನ್ನು ಮುಟ್ಟಿದ. ಆ ಪರಮೇಶ್ವರನ ಪಾಣಿಪಲ್ಲವದ ಪೇಶಲ ಸ್ಪರ್ಶಮಾತ್ರದಿಂದಲೇ ಆನಂದ ಸಾಗರದಲ್ಲಿ ಮುಳುಗಿದ ಧರ್ಮರಾಜ. ಮತ್ತು ಇಷ್ಟವಾದ ವರಬೇಡು ಎಂದು ಅಗ್ರಹ ಪಡಿಸುತ್ತಲಿದ್ದ, ತನ್ನ ಇಷ್ಟ ಶ್ರೇಷ್ಠ ದೇವತೆಯಾದ ಪರಮೇಶ್ವರನನ್ನು ಕುರಿತು ಹೇಳಿದ. ''ಕರುಣಾನಿಧಿಯಾದ ಸರ್ವಜ್ಞ ಜಗದೀಶ್ವರನೇ, ಇಂದು ನನಗೆ ನಿನ್ನ ಪ್ರತ್ಯಕ್ಷ ದರ್ಶನವಾಗಿದೆ. ಇದಕ್ಕಿಂದ ಬೇರೆ ವರ ಏನು ಬೇಕು ನನಗೆ? ಆದರೆ ನೀನು ಬಯಸಿದ ವರ ಬೇಡಲು ಬಲವಂತ ಪಡಿಸುತ್ತಿದ್ದುದರಿಂದ ಒಂದು ವರವನ್ನು ನಿನ್ನಲ್ಲಿ ಕೇಳುತ್ತಿದ್ದೇನೆ. ಈಗ ನನ್ನ ಬಳಿಯಲ್ಲಿ ಎರಡು ಗಿಳಿಮರಿಗಳು ಇರುತ್ತವೆ ಇವು ಎರಡಕ್ಕೂ ಹುಟ್ಟಿದಂದಿನಿಂದಲೇ ರೋಗ ತಟ್ಟಿದೆ. ಇವರ ತಾಯಿ ಶುಕಿಯು ಈ ಎರಡು ಅಶಕ್ತ ಮಕ್ಕಳಿಗೆ ಜನ್ಮಕೊಟ್ಟು ತಾನು ಮರಣ ಹೊಂದಿದಳು. ಇವುಗಳ ತಂದೆ ಒಂದು ಗಿಡುಗದ ಬಾಯಿಗೆ ಬಿದ್ದು ಸತ್ತು ಹೋದನು. ಈಗ ಇವು ಎರಡೂ ಶುಕ ಶಿಶುಗಳು ಅನಾಥ. ಸ್ವಾಮಿ, ಶಶಾಂಕ ಶೇಖರನೇ. ಇವು ಎರಡೂ ಅನಾಥ. ನೀನು ಅನಾಥನಾಥ. ಈಗ ನೀನು ನನ್ನ ಬದಲಾಗಿ ಇವೆರಡೂ ಗಿಳಿಮರಿಗಳಿಗೆ ವರವನ್ನು ನೀಡು.''

ಅಗಸ್ತ್ಯ, ಈ ರೀತಿಯಾಗಿ ಯಮಧರ್ಮನ ಪರೋಪಕಾರಾರ್ಥವಾದ ನಿಷ್ಕಪಟ ವಚನವನ್ನೂ ನಿಷ್ಕಲ್ಮಷ ಅಪೇಕ್ಷೆಯನ್ನೂ ಕೇಳಿ ಪ್ರೀತನಾಗಿ, ಆ ಗಿರಿಜಾರಮಣನು ಆ ಎರಡೂ ಅನಾಥ ಪಕ್ಷಿಗಳನ್ನು ಕರೆದು ಕೇಳಿದನು- ''ಪಕ್ಷಿಗಳೇ, ನೀವೇ ಹೇಳಿರಿ. ನಿಮಗೆ ನಾನು ಯಾವ ವರವನ್ನು ಕೊಡಲಿ.''

**ಪಕ್ಷಿಗಳು:-** ಸಂಸಾರ ಬಂಧನವನ್ನು ನಾಶಮಾಡುವ ಸೋಮಶೇಖರ, ನಿನಗೆ ನಮಸ್ಕಾರ. ಸರ್ವಜ್ಞನಾದ ಅನಾಥನಾಥ, ನಿನಗೆ ಈ ಅನಾಥರ ವಂದನೆ. ನಾವು ಹುಟ್ಟಿದ್ದು ಕ್ಷುದ್ರವಾದ ಪಕ್ಷಿಯೋನಿಯಲ್ಲಿ. ಆದರೆ ಇಂದು ಪಡೆದದ್ದು ಸಾಕ್ಷಾತ್ ವಿರೂಪಾಕ್ಷನ ಪ್ರತ್ಯಕ್ಷದರ್ಶನ. ನಾವು ಎಲ್ಲ ದೃಷ್ಟಿಯಿಂದಲೂ ನಿಕೃಷ್ಟರು. ಆದರೆ ಇಂದು ಉತ್ಕೃಷ್ಟವಾದ ನಿನ್ನ ಕೃಪಾದೃಷ್ಟಿಗೆ ವಿಷಯರಾಗಿದ್ದೇವೆ. ಇದಕ್ಕಿಂತ ನಮಗೆ ಬೇರೆ ಮನೋವಾಂಛಿತವಾದ ವರವು ಏನು ಇರಲು ಶಕ್ಯ? ಈ ಪ್ರಪಂಚದಲ್ಲಿ ಕಣ್ಣಿಗೆ ಕಾಣುವುದೆಲ್ಲವೂ ಕ್ಷಣಾರ್ಧದಲ್ಲಿ ಮಣ್ಣುಗೂಡಿ ಹೋಗುವುದು. ಈ ನಶ್ವರವಾದ ಪ್ರಪಂಚದಲ್ಲಿ ಶಾಶ್ವತವಾಗಿ ಉಳಿಯುವುದು ಎರಡು. ಒಂದು ಈಶ್ವರ, ಎರಡನೆಯದು ಅವನ ಆರಾಧನೆ. ಇವೆರಡೇ ಅಕ್ಷಯ ಈ ಕ್ಷಯಿಷ್ಣು ಪ್ರಪಂಚದಲ್ಲಿ ಈ ಕಾಶೀಕ್ಷೇತ್ರದ ತಪಸ್ವಿಗಳು ಮಾಡುತ್ತಲಿರುವ ನಿನ್ನ ಲಿಂಗದ ಪೂಜೆಯನ್ನು ನೋಡುವುದರಿಂದ ನಮ್ಮ ಜನ್ಮ ಜನ್ಮಾಂತರದ ನೆನಪಿನ ನಿಧಿಯನ್ನೇ ಕೆದರಿದಂತಾಗಿದೆ. ಹಿಂದಿನ ಎಂದೆಂದಿನ ಕಥೆಯೆಲ್ಲವೂ ಇಂದು ಸ್ಮರಣ ಪಥದಲ್ಲಿ ಬಿಚ್ಚಿಕೊಳ್ಳತೊಡಗಿದೆ.

ಮಹೇಶ್ವರ ನಾವು ಮೊದಲು ಬಹುದೀರ್ಘಕಾಲ ದೇವಯೋನಿಯಲ್ಲಿ ಸುಖಜೀವಿಯಾಗಿದ್ದೆವು. ಲೀಲಾಲೋಲರಾಗಿ ಸ್ವರ್ಗಲೋಕದ ಅನೇಕ ಲಲನಾಮಣಿಗಳ ವಿಲಾಸ, ವಿಹಾರ, ವಿಭ್ರಮಗಳ ಸುಖೋಪಭೋಗಗಳನ್ನು ಅನುಭವಿಸಿದೆವು. ಆ ದೇವಯೋನಿಯಿಂದ ಮುಂದೆ ನಾವು ವಿದ್ಯಾಧರ, ಗಂಧರ್ವ, ದಾನವ, ಕಿನ್ನರ, ನಾಗ, ರಾಕ್ಷಸ, ಮುಂತಾದ ಭಿನ್ನ ಭಿನ್ನ ಯೋನಿಗಳಲ್ಲಿ ಹುಟ್ಟಿ ಸುಖ ದುಃಖಗಳ ಬಗೆ ಬಗೆಯ ಅನುಭವಗಳನ್ನು ಪಡೆದೆವು. ಮುಂದೆ ಮಾನವ ಯೋನಿಯಲ್ಲಿ ಜನಿಸಿ ರಾಜ ವೈಭವದ ಸುಖೋಪಭೋಗಗಳನ್ನು ಸೂರೆಗೊಂಡೆವು. ಅನಂತರ ಅನೇಕ ಜಲಚರ, ಸ್ಥಲಚರ, ವನೇಚರ ಖೇಚರ, ಖಗ, ಮೃಗ ಮುಂತಾದ ಬಗೆಬಗೆಯ ಯೋನಿಗಳಲ್ಲಿ ಸುಖ ದುಃಖ ಸಂಗಮದ ವಿಚಿತ್ರ ಪ್ರಸಂಗಗಳನ್ನು ಅನುಭವಿಸುತ್ತ. ಈಗ ಈ ಶುಕ ಯೋನಿಯಲ್ಲಿ ಬಂದು ಬಿದ್ದಿದ್ದೇವೆ. ಈ ಕಾಶೀಕ್ಷೇತ್ರದಲ್ಲಿ ಧರ್ಮೇಶ್ವರನ ದರ್ಶನ ಮಾಡಿಕೊಂಡೆವು. ಇಲ್ಲಿ ಘೋರ ತಪಸ್ಸನ್ನು ಆಚರಿಸಿದ ಸೂರ್ಯ ದೇವನಂದನನಾದ ಯಮಧರ್ಮರಾಜನ ತಪೋರೂಪವಾದ ಅಗ್ನಿಯ ಜ್ವಾಲೆಗಳಿಂದ ಸುಟ್ಟು ಉರಿದುಹೋಗಿವೆ ನಮ್ಮ ಎಲ್ಲ ಪಾಪರಾಶಿಗಳು. ನಮ್ಮ ಸಕೃತ ರಾಶಿಯೆಲ್ಲವೂ ಈಗ ಪರಿಪಾಕೋನ್ಮುಖ. ಆದರಿಂದಲೇ ಇಂದು ನಮ್ಮ ಕಣ್ಣೆದುರೇ ಮುಕ್ಕಣ್ಣ. ಸ್ವಯಂ ದಕ್ಷಾರಿಯಾದ ತ್ರ್ಯಕ್ಷನು ನಮಗೆ ಇಂದು ಪ್ರತ್ಯಕ್ಷ. ಇದರಿಂದಲೇ ನಾವು ಇಂದು ಕೃತಕೃತ್ಯ. ಇದೇ ನಾವು ಈ ಜನ್ಮದಲ್ಲಿ ಸಾಧಿಸಿದ ಶತಕೃತ್ಯ. ಸ್ವಾಮಿನ್, 'ನಿಮಗೆ ಇಷ್ಟವಾದ ವರವನ್ನು ಬೇಡಿರಿ' ಎಂದು ತಮ್ಮ ಆದೇಶ ಆದರೆ ನಮಗೆ ಇಂದ್ರಲೋಕ, ಚಂದ್ರಲೋಕ, ರಾಜ್ಯ, ವೈಭವ, ಅಧಿಕಾರ ಯಾವುದೂ ಬೇಡ. ನಮಗೆ ಬೇಕಾದದ್ದು ಈ ಸಂಸಾರಿಕವಾದ ಮಾಯಾ ಬಂಧದಿಂದ ಬಿಡುಗಡೆ. ಎಲ್ಲ ಪಾಪಗಳಿಂದ ಮುಕ್ತಿ ಹಾಗೂ ಈ ಸಂಸಾರದಿಂದ ಮುಕ್ತಿ. ನಮ್ಮ ಕೊನೆಯ ಬಯಕೆಯೆಂದರೆ ಈ ಕಾಶೀಪಟ್ಟಣದಲ್ಲಿ ಬದುಕಿ ಇರುವವರೆಗೆ ಇದ್ದು ಮರಣಕಾಲದಲ್ಲಿ ಈ ಅವಿಮುಕ್ತ ಕ್ಷೇತ್ರದಲ್ಲಿ ನಮ್ಮ ದೇಹತ್ಯಾಗ. ಆದರಿಂದ ನಿನ್ನ ಉತ್ತಮವಾದ ತತ್ವಜ್ಞಾನ, ಕೊನೆಗೆ ನಮ್ಮ ಅಪೇಕ್ಷೆ ವಿಷಯವಾದ ವಸ್ತು ಮೋಕ್ಷ ಶಿವಸಾಯುಜ್ಯ ಪ್ರಾಪ್ತಿ.

**ಮಹಾದೇವ:-** ಪಕ್ಷಿಗಳೇ, ಈ ಪುಣ್ಯಧಾಮವಾದ ಕಾಶಿಯಲ್ಲಿಯೇ ನನ್ನ ರಾಜಭವನ ಇದೆ. ಇಲ್ಲಿಯೇ ಮೋಕ್ಷ ಲಕ್ಷ್ಮೀ ವಿಲಾಸ ಎಂಬ ಒಂದು ನನ್ನ ಮಂದಿರ ಶೋಭಿಸುತ್ತದೆ. ಅದಕ್ಕೆ ಧರ್ಮೇಶ್ವರಸ್ಥಾನ ಎನ್ನುವರು. ಈ ಶಿವಾಲಯದ ನೆಪದಿಂದ ಆನಂದ ಕಂದದ

ಒಂದು ಅಂಕುರವೇ ಭೂಮಿಯನ್ನು ಶೀಳಿಕೊಂಡು ಪ್ರಕಟವಾಗಿದೆ. ಉಪನಿಷತ್ತಿನ ವಾಣಿಯಿಂದ ವರ್ಣಿಸಲ್ಪಟ್ಟ ನಿರಾಕಾರ ಪರಬ್ರಹ್ಮವು ನಾನೇ. ಭಕ್ತರ ಮೇಲೆ ಕೃಪೆಮಾಡಲಿಕ್ಕಾಗಿ ಪ್ರಕಟನಾಗಿದ್ದೇನೆ ಸಾಕಾರರೂಪದಿಂದ. ಇದರ ದಕ್ಷಿಣ ದಿಕ್ಕಿನಲ್ಲಿ ಮೋಕ್ಷಲಕ್ಷ್ಮಿಯ ಧಾಮಸ್ವರೂಪವಾದ ನನ್ನ ಮಂಟಪ. ಅದರಲ್ಲಿ ನನ್ನ ನಿತ್ಯ ನಿವಾಸ. ಆ ನನ್ನ ಸಭಾಮಂಟಪವೇ ಭೂಮಂಡಲದಲ್ಲಿ ನಿರ್ಮಾಣ ಮಂಟಪ ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆದಿದೆ. ಈ ನಿತ್ಯ ಮಂಟಪದಲ್ಲಿ ಕುಳಿತು 'ಓಂ ನಮಃ ಶಿವಾಯ' ಎಂಬ ಶಿವಷಡಕ್ಷರ ಮಂತ್ರವನ್ನು ಒಂದು ಸಲ ಉಚ್ಚಾರ ಮಾಡಿದರೂ, ರುದ್ರಾಧ್ಯಾಯವನ್ನು ಕೋಟಿ ಸಲ ಜಪಮಾಡಿದ ಪೂರ್ಣ ಫಲ. ಈ ನನ್ನ ಮಂದಿರದ ಪೂರ್ವಭಾಗದಲ್ಲಿ ಇದ್ದ ಜ್ಞಾನ ಮಂಟಪದಲ್ಲಿ ಕುಳಿತು ನನ್ನ ಧ್ಯಾನಮಾಡುವ ಸತ್ಪುರುಷರಿಗೆ ನಾನು ಜ್ಞಾನೋಪದೇಶ ಮಾಡುತ್ತೇನೆ. ಈ ಕಾಶಿಯಲ್ಲಿ ಹೆಜ್ಜೆ ಹೆಜ್ಜೆಗೆ ಅನೇಕ ಸಿದ್ಧ ಪೀಠಗಳು. ಆದರೆ ಅವೆಲ್ಲವುಗಳಿಗಿಂತ ಈ ಧರ್ಮಪೀಠವು ಶಕ್ತಿಯಿಂದ ಮಿಗಿಲಾಗಿದೆ. ಮಹಿಮೆಯಿಂದ ಶ್ರೇಷ್ಠವಾಗಿದೆ. ಇಲ್ಲಿ ಈ ಚಿಕ್ಕ ಚಿಕ್ಕ ಗಿಳಿಯ ಮರಿಗಳು ತ್ರಾತ, ತ್ರಾತ, ತ್ರಾತ ಎಂದು ನುಡಿದು ನನ್ನ ಸದುಪದೇಶದಿಂದ ನಿರ್ಮಲವಾದ ಜ್ಞಾನವನ್ನು ಪಡೆದಿರುತ್ತವೆ. ಇತ್ತ ನೋಡು. ನನ್ನ ಕೃಪೆಯಿಂದ ಈ ಎರಡೂ ಶುಕಪಕ್ಷಿಗಳು ದಿವ್ಯ ವಿಮಾನವನ್ನು ಆರೋಹಣಮಾಡಿ ನನ್ನ ನಿಜ ಧಾಮಕ್ಕೆ ಹೊರಟು ಹೋಗುತ್ತಲಿವೆ.

**ಪಾರ್ವತಿ:-** ಪ್ರಾಣನಾಥ, ಈ ಧರ್ಮಪೀಠದ ಮಹಾತ್ಮ್ಯವನ್ನು ನಿನ್ನ ಬಾಯಿಂದ ಕೇಳಿದ ಬಳಿಕ ನನಗೆ ಈ ಧರ್ಮೇಶ್ವರನ ಸಮೀಪದಲ್ಲಿಯೇ ವಾಸಮಾಡಬೇಕು ಎನಿಸಿದೆ. ನಾನು ಇಲ್ಲಿಯೇ ಇದ್ದು ಧರ್ಮೇಶ್ವರ ಲಿಂಗವನ್ನು ಭಕ್ತಿಯಿಂದ ಆರಾಧನೆ ಮಾಡುವವರಿಗೆ ಅವರ ಮನೋಭಿಲಾಷೆಗಳನ್ನು ಸಿದ್ಧಿಸುತ್ತೇನೆ.

**ಮಹಾದೇವ:-** ದೇವಿ, ಇದು ಬಹಳ ಒಳ್ಳೆಯ ನಿರ್ಣಯ ನೀನು ಕೈಕೊಂಡದ್ದು. ಇಲ್ಲಿ ನೆಲೆಸಿ 'ವಿಶ್ವಭುಜಾ' ಎಂಬ ಹೆಸರಿನಿಂದ ನೀನು ಖ್ಯಾತಿಯನ್ನು ಹೊಂದುವಿ. ಇಲ್ಲಿ ವಿಶ್ವಭುಜಾ ರೂಪದಿಂದ ನಿಂತ ನಿನ್ನನ್ನು ಪೂಜಿಸುವವರು ಸಮಸ್ತ ಭೋಗ ಭಾಗ್ಯಗಳಿಂದ ಸಂಪನ್ನರಾಗುವರು.

ಪೂರ್ವಕಾಲದಲ್ಲಿ ಪುಲೋಮ ದಾನವನ ಮಗಳಾದ ಶಚೀದೇವಿಯು ತನ್ನ ಮನೋರಥ ಸಿದ್ಧಿಗಾಗಿ ಇಲ್ಲಿ ನಿಂತು ಘೋರತಪಸ್ಸನ್ನು ಆಚರಿಸಿದಳು. ಆದರೆ ಅವಳ ತಪಸ್ಸಿಗೆ ಫಲ ದೊರಕಲೆಯಿಲ್ಲ. ಆಗ ಆ ಪುಲೋಮಿಯು ಕೋಕಿಲದಂಥ ಮಧುರ ಕಂಠದಿಂದ ಗಾನಮಾಡಿ ನನ್ನ ಸುಸ್ವರ ಸೇವೆ ಮಾಡಿದಳು. ನಾನು ಗಾನ ಲೋಲನಾದ ಗೀತ ಗಂಗಾಧರ. ಆ ಮಾನಿನಿಯ ಗಾನ, ತಾನ, ವಿತಾನಗಳಿಂದ ಒಡಗೂಡಿದ ಸಂಗೀತ ಸೇವೆಯಿಂದ ನಾನು ಸುಪ್ರಸನ್ನನಾಗಿ ಅವಳಿಗೆ ಹೇಳಿದೆ. ''ಪುಲೋಮನಂದಿನಿ, ನಾನು ನಿನ್ನ ಈ ಮಧುರ ಗೀತೆಯ ನಾದ ಸೇವೆಯಿಂದ ಹಾಗೂ ನೀನು ಮಾಡಿದ ನನ್ನ ವಿಗ್ರಹದ ಪೂಜೆಯಿಂದ ಪ್ರಸನ್ನನಾಗಿದ್ದೇನೆ. ನಿನಗೆ ಇಷ್ಟವಾದ ವರವನ್ನು ಬೇಡು.''

**ಶಚಿ:-** ದೇವ ದೇವ, ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ, ದೇವತೆಗಳಿಗೆಲ್ಲ ಪರಮ ಮಾನನೀಯನೂ, ಮನ್ಮಥನಂತೆ ಸುಂದರನೂ, ಯಜ್ಞಿಕರಲ್ಲಿ ಶ್ರೇಷ್ಠನೂ ಆದ ಮಹಾಪುರುಷನು ನನಗೆ ಪತಿಯಾಗಿ ದೊರಕಲಿ ಮತ್ತು ನನ್ನ ಇಚ್ಛೆಗೆ ಅನುಸಾರವಾಗಿ ನನಗೆ ಆಯುಷ್ಯವನ್ನು, ಆರೋಗ್ಯವನ್ನೂ, ಸೌಂದರ್ಯವನ್ನು ಕರುಣಿಸು. ನನ್ನ ಪಾತಿವ್ರತ್ಯಕ್ಕೆ ಭಂಗತರುವ ಪ್ರಸಂಗವು ನನ್ನ ಜೀವನದಲ್ಲಿ ಎಂದೂ ಬಾರದಿರಲಿ.

**ಮಹಾದೇವ:-** ಪುಲೋಮ ನಂದಿನಿ, 'ಮನೋರಥ ತೃತೀಯ' ಎಂದು ವ್ರತವನ್ನು ನೀನು ವಿಧಿರ್ವಕವಾಗಿ ಅನುಷ್ಠಾನ ಮಾಡಿದರೆ ನಿನ್ನ ಮನೋರಥವೆಲ್ಲವೂ ಸಿದ್ಧಿಸುವುದು. ಇಪ್ಪತ್ತು ತೋಳುಗಳಿಂದ ಶೋಭಿಸುವ ಗೌರೀದೇವಿಯು ಈ ವ್ರತದ ಅಧಿಷ್ಠಾತೃ ದೇವತೆ. ಇದರಲ್ಲಿ ಆ ವಿಶ್ವಭುಜೆಯ ಪೂಜೆಯೇ ಮುಖ್ಯ. ಈ ದೇವಿಯ ಎದುರು ಇರುವ ಆಶಾವಿನಾಯಕನ ಪೂಜೆಯೂ ಈ ವ್ರತದ ಒಂದು ಮುಖ್ಯ ಅಂಗ. ಚೈತ್ರ ಶುಕ್ಲ ತೃತೀಯಾ ದಿನ ಅಲ್ಪೋಪಹಾರ ಮಾಡಿ ದೇವಿಯನ್ನು ಪ್ರಾರ್ಥಿಸಿ ಈ ನಿಯಮ ಗ್ರಹಣವನ್ನು ಮಾಡಬೇಕು- "ಜಗನ್ಮಾತೆಯಾದ ವಿಶ್ವಭುಜಾದೇವಿಯೇ ನಿನ್ನ ಕೃಪಾಶೀರ್ವಾದವನ್ನು ಪಡೆಯಲಿಕ್ಕಾಗಿ ನಾನು ಪ್ರಾತಃ ಕಾಲದಲ್ಲಿ ಶುರ್ಚಿಭೂತಳಾಗಿ 'ಮನೋರಥ ತೃತೀಯಾ' ಎಂಬ ವತ್ರದ ಅನುಷ್ಠಾನವನ್ನು ಕೈಕೊಳ್ಳುವೆ. ಈ ಮನೋರಥ ಸಿದ್ಧಿಗಾಗಿ ನೀನು ಯಾವಾಗಲೂ ನನ್ನ ಸಮೀಪದಲ್ಲಿಯೇ ಇರು.' ಎಂದು ಮರುದಿನ ಪ್ರಾತಃಕಾಲದಲ್ಲಿ ಎದ್ದು ಶೌಚ, ಮುಖಮಾರ್ಜನ, ಅಶೋಕ ವೃಕ್ಷದ ಕಾಷ್ಠದಿಂದ ದಂತದಾಮನ, ನಿತ್ಯಸ್ನಾನ, ದೇವತಾರ್ಚನ ಮುಂತಾದವುಗಳನ್ನು ಮಾಡಿ ಹಗಲು ಹೊತ್ತು ಉಪವಾಸ ಮಾಡಬೇಕು. ಅನಂತರ ಸಾಯಂಕಾಲದಲ್ಲಿ ಮತ್ತೆ ಸ್ನಾನಮಾಡಿ ಮಡಿ ಬಟ್ಟೆ ಉಟ್ಟು ಗೌರೀಪೂಜೆ ಮಾಡಬೇಕು. ಎಲ್ಲಕ್ಕಿಂತ ಮೊದಲು ಗಣೇಶನ ಪೂಜೆಮಾಡಿ ಅವನಿಗೆ ತುಪ್ಪದಲ್ಲಿಯೇ ಪಕ್ವವಾದ ಅಥವಾ ಕರಿದಪುರೆ, ಹೋಳಿಗೆ ಮುಂತಾದ ಪದಾರ್ಥಗಳನ್ನು ನೈವೇದ್ಯ ಮಾಡಬೇಕು. ಅನಂತರ ಅಶೋಕ ಪುಷ್ಪದಿಂದ ವಿಶ್ವಭುಜಾದೇವಿಯ ಪೂಜೆಯನ್ನು ಮಾಡಬೇಕು. ಮೊದಲು ಕುಂಕುಮದಿಂದ ದೇವಿಗೆ ಲೇಪನಮಾಡಿ ಧೂಪ, ದೀಪ, ನೈವೇದ್ಯಗಳಿಂದ ದೇವಿಯ ಪೂಜೆಯನ್ನು ಮಾಡಿ, ಒಂದು ಹೊತ್ತು ದೇವಿಯ ಪ್ರಸಾದದ ಭೋಜನ ಮಾಡಬೇಕು.

ಹೀಗೆ ಚೈತ್ರ ಶುಕ್ಲ ತೃತೀಯಾದಿಂದ ಫಾಲ್ಗುಣ ಮಾಸದವರೆಗೆ ಪ್ರತಿಯೊಂದು ತಿಂಗಳಿನ ಶುಕ್ಲಪಕ್ಷ ತೃತೀಯಾ ದಿನ ಈ ವ್ರತವನ್ನು ಪಾಲನೆಮಾಡಬೇಕು. ವೈಶಾಖದಿಂದ ಆರಂಭಿಸಿ ಫಾಲ್ಗುಣದವರೆಗೆ ಹನ್ನೊಂದು ತಿಂಗಳಲ್ಲಿ ಪ್ರತಿ ತಿಂಗಳು ಈ ವ್ರತಮಾಡುವವರು. ನೇರಿಳೆ ಅಥವಾ ಜಂಬೂ, ಅಪಾಮಾರ್ಗ, ಖದಿರೆ, ಆಮ್ರ, ಕದಂಬ ಪ್ಲಕ್ಷ, ಔದುಂಬರ, ಖರ್ಜೂರ, ಬೀಜಪೂರ, ದಾಡಿಮ ಈ ಮರಗಳ ಕಟ್ಟಿಗೆಗಳನ್ನು ಒಂದೊಂದು ತಿಂಗಳು ಒಂದೊಂದರಂತೆ ವ್ರತಸ್ಥರು ಉಪಯೋಗಿಸಬೇಕು. ಇದರಂತೆ ಸಿಂಧೂರ, ಅಗರು, ಕಸ್ತೂರಿ, ಚಂದನ, ರಕ್ತಚಂದನ, ಗೋರೋಚನ, ದೇವದಾರು, ಪದ್ಮಾಕ್ಷ, ಎರಡು ಬಗೆಯ ಅರಿಶಿನ ಮತ್ತು 'ಯಕ್ಷಕರ್ದಮ' ಇವುಗಳನ್ನು ವೈಶಾಖದಿಂದ ಫಾಲ್ಗುಣದವರೆಗೆ ಒಂದೊಂದು ತಿಂಗಳು ಒಂದೊಂದರಂತೆ ದೇವಿಗೆ ಲೇಪನವನ್ನು ಮಾಡಬೇಕು. ಅವು ದೊರಕದಿದ್ದರೆ ಹನ್ನೊಂದು ತಿಂಗಳೂ ಯಕ್ಷಕರ್ದಮ'ವನ್ನೇ ದೇವಿಗೆ ಲೇಪಿಸಬೇಕು. ಎರಡು ಭಾಗ ಕಸ್ತೂರಿ, ಎರಡು ಭಾಗ ಕುಂಕುಮ, ಮೂರು ಭಾಗ ಚಂದನ, ಒಂದು ಭಾಗ ಕರ್ಪೂರ ಐದನ್ನೂ ಕೂಡಿಸಿ, ಕುಟ್ಟಿ, ಗಾಳಿಸಿ, ಚಾಳಿಸಿ ಲೇಪನದ ರೂಪಕ್ಕೆ ತಂದು ಇಟ್ಟಾಗ ಅದು 'ಯಕ್ಷಕರ್ದಮ' ಎಂದು ಕರೆಯಲ್ಪಡುತ್ತದೆ. ಮತ್ತು ಈ ಹನ್ನೊಂದು ತಿಂಗಳಲ್ಲಿ ದೇವಿಗೆ ಗುಲಾಬಿ, ಮಲ್ಲಿಗೆ, ಕಮಲ, ಕೇದಿಗೆ, ಕಣಗಿಲೆ, ನೈದಿಲೆ, ಸಂಪಿಗೆ, ತಗರ, ಜಾಜಿ, ಕುಮಾರಿ, ಕಾಡು ತಾವರೆ ಈ ಹನ್ನೊಂದು ಹೂಗಳನ್ನು ಪ್ರತಿ ತಿಂಗಳಿಗೆ ಒಂದೊಂದರಂತೆ ಪೂಜಿಸಬೇಕು. ಹೂಗಳು ಸಿಗದಿದ್ದರೆ ಆ ಬಳ್ಳಿಯ ಎಲೆಗಳಿಂದಾದರೂ ಪೂಜೆಮಾಡಬೇಕು. ಅದೂ ಸಿಗದಿದ್ದರೆ ಆ ಕಾಲದಲ್ಲಿ ದೊರೆತ

ಒಂದು ಅಂಕುರವೇ ಭೂಮಿಯನ್ನು ಶೀಳಿಕೊಂಡು ಪ್ರಕಟವಾಗಿದೆ. ಉಪನಿಷತ್ತಿನ ವಾಣಿಯಿಂದ ವರ್ಣಿಸಲ್ಪಟ್ಟ ನಿರಾಕಾರ ಪರಬ್ರಹ್ಮವು ನಾನೇ. ಭಕ್ತರ ಮೇಲೆ ಕೃಪೆಮಾಡಲಿಕ್ಕಾಗಿ ಪ್ರಕಟನಾಗಿದ್ದೇನೆ ಸಾಕಾರರೂಪದಿಂದ. ಇದರ ದಕ್ಷಿಣ ದಿಕ್ಕಿನಲ್ಲಿ ಮೋಕ್ಷಲಕ್ಷ್ಮಿಯ ಧಾಮಸ್ವರೂಪವಾದ ನನ್ನ ಮಂಟಪ. ಅದರಲ್ಲಿ ನನ್ನ ನಿತ್ಯ ನಿವಾಸ. ಆ ನನ್ನ ಸಭಾಮಂಟಪವೇ ಭೂಮಂಡಲದಲ್ಲಿ ನಿರ್ಮಾಣ ಮಂಟಪ ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆದಿದೆ. ಈ ನಿತ್ಯ ಮಂಟಪದಲ್ಲಿ ಕುಳಿತು 'ಓಂ ನಮಃ ಶಿವಾಯ' ಎಂಬ ಶಿವಷಡಕ್ಷರ ಮಂತ್ರವನ್ನು ಒಂದು ಸಲ ಉಚ್ಚಾರ ಮಾಡಿದರೂ, ರುದ್ರಾಧ್ಯಾಯವನ್ನು ಕೋಟಿ ಸಲ ಜಪಮಾಡಿದ ಪೂರ್ಣ ಫಲ. ಈ ನನ್ನ ಮಂದಿರದ ಪೂರ್ವಭಾಗದಲ್ಲಿ ಇದ್ದ ಜ್ಞಾನ ಮಂಟಪದಲ್ಲಿ ಕುಳಿತು ನನ್ನ ಧ್ಯಾನಮಾಡುವ ಸತ್ಪುರುಷರಿಗೆ ನಾನು ಜ್ಞಾನೋಪದೇಶ ಮಾಡುತ್ತೇನೆ. ಈ ಕಾಶಿಯಲ್ಲಿ ಹೆಜ್ಜೆ ಹೆಜ್ಜೆಗೆ ಅನೇಕ ಸಿದ್ಧ ಪೀಠಗಳು. ಆದರೆ ಅವೆಲ್ಲವುಗಳಿಗಿಂತ ಈ ಧರ್ಮಪೀಠವು ಶಕ್ತಿಯಿಂದ ಮಿಗಿಲಾಗಿದೆ. ಮಹಿಮೆಯಿಂದ ಶ್ರೇಷ್ಠವಾಗಿದೆ. ಇಲ್ಲಿ ಈ ಚಿಕ್ಕ ಚಿಕ್ಕ ಗಿಳಿಯ ಮರಿಗಳು ತ್ರಾತ, ತ್ರಾತ, ತ್ರಾತ ಎಂದು ನುಡಿದು ನನ್ನ ಸದುಪದೇಶದಿಂದ ನಿರ್ಮಲವಾದ ಜ್ಞಾನವನ್ನು ಪಡೆದಿರುತ್ತವೆ. ಇತ್ತ ನೋಡು. ನನ್ನ ಕೃಪೆಯಿಂದ ಈ ಎರಡೂ ಶುಕಪಕ್ಷಿಗಳು ದಿವ್ಯ ವಿಮಾನವನ್ನು ಆರೋಹಣಮಾಡಿ ನನ್ನ ನಿಜ ಧಾಮಕ್ಕೆ ಹೊರಟು ಹೋಗುತ್ತಲಿವೆ.

**ಪಾರ್ವತಿ:-** ಪ್ರಾಣನಾಥ, ಈ ಧರ್ಮಪೀಠದ ಮಹಾತ್ಮ್ಯವನ್ನು ನಿನ್ನ ಬಾಯಿಂದ ಕೇಳಿದ ಬಳಿಕ ನನಗೆ ಈ ಧರ್ಮೇಶ್ವರನ ಸಮೀಪದಲ್ಲಿಯೇ ವಾಸಮಾಡಬೇಕು ಎನಿಸಿದೆ. ನಾನು ಇಲ್ಲಿಯೇ ಇದ್ದು ಧರ್ಮೇಶ್ವರ ಲಿಂಗವನ್ನು ಭಕ್ತಿಯಿಂದ ಆರಾಧನೆ ಮಾಡುವವರಿಗೆ ಅವರ ಮನೋಭಿಲಾಷೆಗಳನ್ನು ಸಿದ್ಧಿಸುತ್ತೇನೆ.

**ಮಹಾದೇವ:-** ದೇವಿ, ಇದು ಬಹಳ ಒಳ್ಳೆಯ ನಿರ್ಣಯ ನೀನು ಕೈಕೊಂಡದ್ದು. ಇಲ್ಲಿ ನೆಲೆಸಿ 'ವಿಶ್ವಭುಜಾ' ಎಂಬ ಹೆಸರಿನಿಂದ ನೀನು ಖ್ಯಾತಿಯನ್ನು ಹೊಂದುವಿ. ಇಲ್ಲಿ ವಿಶ್ವಭುಜಾ ರೂಪದಿಂದ ನಿಂತ ನಿನ್ನನ್ನು ಪೂಜಿಸುವವರು ಸಮಸ್ತ ಭೋಗ ಭಾಗ್ಯಗಳಿಂದ ಸಂಪನ್ನರಾಗುವರು.

ಪೂರ್ವಕಾಲದಲ್ಲಿ ಪುಲೋಮ ದಾನವನ ಮಗಳಾದ ಶಚೀದೇವಿಯು ತನ್ನ ಮನೋರಥ ಸಿದ್ಧಿಗಾಗಿ ಇಲ್ಲಿ ನಿಂತು ಘೋರತಪಸ್ಸನ್ನು ಆಚರಿಸಿದಳು. ಆದರೆ ಅವಳ ತಪಸ್ಸಿಗೆ ಫಲ ದೊರಕಲೆಯಿಲ್ಲ. ಆಗ ಆ ಪುಲೋಮಿಯು ಕೋಕಿಲದಂಥ ಮಧುರ ಕಂಠದಿಂದ ಗಾನಮಾಡಿ ನನ್ನ ಸುಸ್ವರ ಸೇವೆ ಮಾಡಿದಳು. ನಾನು ಗಾನ ಲೋಲನಾದ ಗೀತ ಗಂಗಾಧರ. ಆ ಮಾನಿನಿಯ ಗಾನ, ತಾನ, ವಿತಾನಗಳಿಂದ ಒಡಗೂಡಿದ ಸಂಗೀತ ಸೇವೆಯಿಂದ ನಾನು ಸುಪ್ರಸನ್ನನಾಗಿ ಅವಳಿಗೆ ಹೇಳಿದೆ. ''ಪುಲೋಮನಂದಿನಿ, ನಾನು ನಿನ್ನ ಈ ಮಧುರ ಗೀತೆಯ ನಾದ ಸೇವೆಯಿಂದ ಹಾಗೂ ನೀನು ಮಾಡಿದ ನನ್ನ ವಿಗ್ರಹದ ಪೂಜೆಯಿಂದ ಪ್ರಸನ್ನನಾಗಿದ್ದೇನೆ. ನಿನಗೆ ಇಷ್ಟವಾದ ವರವನ್ನು ಬೇಡು.''

**ಶಚಿ:-** ದೇವ ದೇವ, ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ, ದೇವತೆಗಳಿಗೆಲ್ಲ ಪರಮ ಮಾನನೀಯನೂ, ಮನ್ಮಥನಂತೆ ಸುಂದರನೂ, ಯಜ್ಞಕರಲ್ಲಿ ಶ್ರೇಷ್ಠನೂ ಆದ ಮಹಾಪುರುಷನು ನನಗೆ ಪತಿಯಾಗಿ ದೊರಕಲಿ ಮತ್ತು ನನ್ನ ಇಚ್ಛೆಗೆ ಅನುಸಾರವಾಗಿ ನನಗೆ ಆಯುಷ್ಯವನ್ನು, ಆರೋಗ್ಯವನ್ನೂ, ಸೌಂದರ್ಯವನ್ನು ಕರುಣಿಸು. ನನ್ನ ಪಾತಿವ್ರತ್ಯಕ್ಕೆ ಭಂಗತರುವ ಪ್ರಸಂಗವು ನನ್ನ ಜೀವನದಲ್ಲಿ ಎಂದೂ ಬಾರದಿರಲಿ.

**ಮಹಾದೇವ:-** ಪುಲೋಮ ನಂದಿನಿ, 'ಮನೋರಥ ತೃತೀಯ' ಎಂದು ವ್ರತವನ್ನು ನೀನು ವಿಧಿರ್ವಕವಾಗಿ ಅನುಷ್ಠಾನ ಮಾಡಿದರೆ ನಿನ್ನ ಮನೋರಥವೆಲ್ಲವೂ ಸಿದ್ಧಿಸುವುದು. ಇಪ್ಪತ್ತು ತೋಳುಗಳಿಂದ ಶೋಭಿಸುವ ಗೌರೀದೇವಿಯು ಈ ವ್ರತದ ಅಧಿಷ್ಠಾತೃ ದೇವತೆ. ಇದರಲ್ಲಿ ಆ ವಿಶ್ವಭುಜೆಯ ಪೂಜೆಯೇ ಮುಖ್ಯ. ಈ ದೇವಿಯ ಎದುರು ಇರುವ ಆಶಾವಿನಾಯಕನ ಪೂಜೆಯೂ ಈ ವ್ರತದ ಒಂದು ಮುಖ್ಯ ಅಂಗ. ಚೈತ್ರ ಶುಕ್ಲ ತೃತೀಯಾ ದಿನ ಅಲ್ಪೋಪಹಾರ ಮಾಡಿ ದೇವಿಯನ್ನು ಪ್ರಾರ್ಥಿಸಿ ಈ ನಿಯಮ ಗ್ರಹಣವನ್ನು ಮಾಡಬೇಕು- ''ಜಗನ್ಮಾತೆಯಾದ ವಿಶ್ವಭುಜಾದೇವಿಯೇ ನಿನ್ನ ಕೃಪಾಶೀರ್ವಾದವನ್ನು ಪಡೆಯಲಿಕ್ಕಾಗಿ ನಾನು ಪ್ರಾತಃ ಕಾಲದಲ್ಲಿ ಶುರ್ಚಿಭೂತಳಾಗಿ 'ಮನೋರಥ ತೃತೀಯಾ' ಎಂಬ ವತ್ರದ ಅನುಷ್ಠಾನವನ್ನು ಕೈಕೊಳ್ಳುವೆ. ಈ ಮನೋರಥ ಸಿದ್ಧಿಗಾಗಿ ನೀನು ಯಾವಾಗಲೂ ನನ್ನ ಸಮೀಪದಲ್ಲಿಯೇ ಇರು.' ಎಂದು ಮರುದಿನ ಪ್ರಾತಃಕಾಲದಲ್ಲಿ ಎದ್ದು ಶೌಚ, ಮುಖಮಾರ್ಜನ, ಅಶೋಕ ವೃಕ್ಷದ ಕಾಷ್ಠದಿಂದ ದಂತದಾಮನ, ನಿತ್ಯಸ್ನಾನ, ದೇವತಾರ್ಚನ ಮುಂತಾದವುಗಳನ್ನು ಮಾಡಿ ಹಗಲು ಹೊತ್ತು ಉಪವಾಸ ಮಾಡಬೇಕು. ಅನಂತರ ಸಾಯಂಕಾಲದಲ್ಲಿ ಮತ್ತೆ ಸ್ನಾನಮಾಡಿ ಮಡಿ ಬಟ್ಟೆ ಉಟ್ಟು ಗೌರೀಪೂಜೆ ಮಾಡಬೇಕು. ಎಲ್ಲಕ್ಕಿಂತ ಮೊದಲು ಗಣೇಶನ ಪೂಜೆಮಾಡಿ ಅವನಿಗೆ ತುಪ್ಪದಲ್ಲಿಯೇ ಪಕ್ವವಾದ ಅಥವಾ ಕರಿದಪುರೆ, ಹೋಳಿಗೆ ಮುಂತಾದ ಪದಾರ್ಥಗಳನ್ನು ನೈವೇದ್ಯ ಮಾಡಬೇಕು. ಅನಂತರ ಅಶೋಕ ಪುಷ್ಪದಿಂದ ವಿಶ್ವಭುಜಾದೇವಿಯ ಪೂಜೆಯನ್ನು ಮಾಡಬೇಕು. ಮೊದಲು ಕುಂಕುಮದಿಂದ ದೇವಿಗೆ ಲೇಪನಮಾಡಿ ಧೂಪ, ದೀಪ, ನೈವೇದ್ಯಗಳಿಂದ ದೇವಿಯ ಪೂಜೆಯನ್ನು ಮಾಡಿ, ಒಂದು ಹೊತ್ತು ದೇವಿಯ ಪ್ರಸಾದದ ಭೋಜನ ಮಾಡಬೇಕು.

ಹೀಗೆ ಚೈತ್ರ ಶುಕ್ಲ ತೃತೀಯಾದಿಂದ ಫಾಲ್ಗುಣ ಮಾಸದವರೆಗೆ ಪ್ರತಿಯೊಂದು ತಿಂಗಳಿನ ಶುಕ್ಲಪಕ್ಷ ತೃತೀಯಾ ದಿನ ಈ ವ್ರತವನ್ನು ಪಾಲನೆಮಾಡಬೇಕು. ವೈಶಾಖದಿಂದ ಆರಂಭಿಸಿ ಫಾಲ್ಗುಣದವರೆಗೆ ಹನ್ನೊಂದು ತಿಂಗಳಲ್ಲಿ ಪ್ರತಿ ತಿಂಗಳು ಈ ವ್ರತಮಾಡುವವರು. ನೇರಿಳೆ ಅಥವಾ ಜಂಬೂ, ಅಪಾಮಾರ್ಗ, ಖದಿರೆ, ಆಮ್ರ, ಕದಂಬ ಪ್ಲಕ್ಷ, ಔದುಂಬರ, ಖರ್ಜೂರ, ಬೀಜಪೂರ, ದಾಡಿಮ ಈ ಮರಗಳ ಕಟ್ಟಿಗೆಗಳನ್ನು ಒಂದೊಂದು ತಿಂಗಳು ಒಂದೊಂದರಂತೆ ವ್ರತಸ್ಥರು ಉಪಯೋಗಿಸಬೇಕು. ಇದರಂತೆ ಸಿಂಧೂರ, ಅಗರು, ಕಸ್ತೂರಿ, ಚಂದನ, ರಕ್ತಚಂದನ, ಗೋರೋಚನ, ದೇವದಾರು, ಪದ್ಮಾಕ್ಷ, ಎರಡು ಬಗೆಯ ಅರಿಶಿನ ಮತ್ತು 'ಯಕ್ಷಕರ್ದಮ' ಇವುಗಳನ್ನು ವೈಶಾಖದಿಂದ ಫಾಲ್ಗುಣದವರೆಗೆ ಒಂದೊಂದು ತಿಂಗಳು ಒಂದೊಂದರಂತೆ ದೇವಿಗೆ ಲೇಪನವನ್ನು ಮಾಡಬೇಕು. ಅವು ದೊರಕದಿದ್ದರೆ ಹನ್ನೊಂದು ತಿಂಗಳೂ ಯಕ್ಷಕರ್ದಮ'ವನ್ನೇ ದೇವಿಗೆ ಲೇಪಿಸಬೇಕು. ಎರಡು ಭಾಗ ಕಸ್ತೂರಿ, ಎರಡು ಭಾಗ ಕುಂಕುಮ, ಮೂರು ಭಾಗ ಚಂದನ, ಒಂದು ಭಾಗ ಕರ್ಪೂರ ಐದನ್ನೂ ಕೂಡಿಸಿ, ಕುಟ್ಟಿ, ಗಾಳಿಸಿ, ಚಾಳಿಸಿ ಲೇಪನದ ರೂಪಕ್ಕೆ ತಂದು ಇಟ್ಟಾಗ ಅದು 'ಯಕ್ಷಕರ್ದಮ' ಎಂದು ಕರೆಯಲ್ಪಡುತ್ತದೆ. ಮತ್ತು ಈ ಹನ್ನೊಂದು ತಿಂಗಳಲ್ಲಿ ದೇವಿಗೆ ಗುಲಾಬಿ, ಮಲ್ಲಿಗೆ, ಕಮಲ, ಕೇದಿಗೆ, ಕಣಗಿಲೆ, ನೈದಿಲೆ, ಸಂಪಿಗೆ, ತಗರ, ಜಾಜಿ, ಕುಮಾರಿ, ಕಾಡು ತಾವರೆ ಈ ಹನ್ನೊಂದು ಹೂಗಳನ್ನು ಪ್ರತಿ ತಿಂಗಳಿಗೆ ಒಂದೊಂದರಂತೆ ಪೂಜಿಸಬೇಕು. ಹೂಗಳು ಸಿಗದಿದ್ದರೆ ಆ ಬಳ್ಳಿಯ ಎಲೆಗಳಿಂದಾದರೂ ಪೂಜೆಮಾಡಬೇಕು. ಅದೂ ಸಿಗದಿದ್ದರೆ ಆ ಕಾಲದಲ್ಲಿ ದೊರೆತ

ಯಾವುದೇ ಸುಗಂಧಿ ಪುಷ್ಪದಿಂದ ದೇವಿಗೆ ಪುಷ್ಪಾರ್ಚನವನ್ನು ಮಾಡಬೇಕು. ಮೊಸರು ಹಿಟ್ಟು, ಮೊಸರು ಅನ್ನ, ಮೈದಾದ ರೊಟ್ಟಿ, ಪದರಫೇಣಿ, ವಡೆ, ಖೀರು, ಹೆಸರು ಕಾಳು, ತುಪ್ಪಾನ್ನ, ಈಡಹರೆ ಉಂಡೆ, ಹಲ್ವಾ, ಪಾಕದಲ್ಲಿ ಹಾಕಿದ ಚಿರೋಟಿ ಮುಂತಾದ ಪದಾರ್ಥಗಳನ್ನು ಪ್ರತಿ ತಿಂಗಳಿಗೊಂದರಂತೆ ಸಿದ್ಧಪಡಿಸಿ ವಿಶ್ವ ಭುಜಾ ದೇವಿಗೆ ನೈವೇದ್ಯ ಸಮರ್ಪಣೆಯನ್ನು ಮಾಡಬೇಕು. ಹೀಗೆ ಒಂದು ವರ್ಷದವರೆಗೆ ಪ್ರತಿಯೊಂದು ಮಾಸದ ಶುಕ್ಲಪಕ್ಷದ ತೃತೀಯ ದಿನದಂದು ವಿಶ್ವಭುಜಾ ದೇವಿಯ ಆರಾಧನೆಮಾಡಿ ವ್ರತದ ಪೂರ್ತಿಗಾಗಿ ವೇದಿಕೆಯ ಮೇಲೆ ಅಗ್ನಿಸ್ಥಾಪನೆಯನ್ನು ಮಾಡಬೇಕು. ಅನಂತರ ಅಗ್ನಿದೇವತಾ ಸಂಬಂಧಿಯಾದ ಮಂತ್ರಗಳನ್ನು ಹೇಳಿ ಎಳ್ಳು ತುಪ್ಪ ಮುಂತಾದ ಹೋಮ ದ್ರವ್ಯಗಳಿಂದ ಒಂದುನೂರಾ ಎಂಟು ಸಲ ಹೋಮವನ್ನು ಮಾಡಬೇಕು. ಈ ವ್ರತದಲ್ಲಿ ದೇವಿಯ ಪೂಜೆಯನ್ನು ಹಾಗೂ ಭೋಜನವನ್ನು ಹೋಮವನ್ನು ಎಲ್ಲ ಕಾರ್ಯಗಳನ್ನೂ ರಾತ್ರಿಯಲ್ಲಿಯೇ ಮಾಡಬೇಕು. ಮತ್ತು ರಾತ್ರಿ ಕಾಲದಲ್ಲಿ

**ಗ್ರಹಾಣ ಪೂಜಾಂ ಮೇ ಭಕ್ತ್ಯಾ, ಮಾತರ್ವಿಘ್ನಜಿತಾ ಸಹ।**
**ನಮೋಽಸ್ತು ತೇ ವಿಶ್ವಭುಜೇ ಪೂರಯಾಶು ಮನೋರಥಂ॥**
**ನಮೋ ವಿಘ್ನಕೃತೇ ತುಭ್ಯಂ ನಮ ಆಶಾವಿನಾಯಕ।**
**ತ್ವಂ ವಿಶ್ವಭುಜಾಯಾ ಸಾರ್ಧಂ ಮಮ ದೇಹಿ ಮನೋರಥಂ॥**

ಎಂಬ ಈ ಮಂತ್ರವನ್ನು ಹೇಳಿ ದೇವಿಯ ಪ್ರಾರ್ಥನೆಯನ್ನು ಮಾಡಿಕೊಳ್ಳಬೇಕು. "ತಾಯಿಯೇ, ವಿಘ್ನರಾಜನಾದ ಗಣೇಶನ ಜೊತೆಗೆ ನಾನು ಭಕ್ತಿಯಿಂದ ವಿಶ್ವಭುಜೆಯಾದ ನಿನ್ನನ್ನೂ ಪೂಜಿಸುತ್ತೇನೆ. ನೀನು ನನ್ನ ಮನೋರಥವನ್ನು ಶೀಘ್ರವಾಗಿ ಪೂರ್ಣಮಾಡು. ಆಶಾವಿನಾಯಕನೇ, ವಿಘ್ನಗಳನ್ನು ಒಡ್ಡುವವನೂ ವಿಘ್ನಗಳನ್ನು ನಾಶಮಾಡುವವನೂ ಆದ ನಿನಗೆ ನಮ್ಮ ನಮಸ್ಕಾರ. ವಿಶ್ವಭುಜಾದೇವಿಯೊಂದಿಗೆ ನನ್ನ ಮೇಲೆ ಅನುಗ್ರಹಮಾಡಿ ನನ್ನ ಮನೋರಥವನ್ನು ಪೂರ್ಣಮಾಡು." ಈ ಅಭಿಪ್ರಾಯವುಳ್ಳ ಮೇಲಿನ ಮಂತ್ರವನ್ನು ಉಚ್ಚರಿಸಿ ಗೌರಿ ಗಣಪತಿಯರ ಸ್ತೋತ್ರ ಹಾಗೂ ಪ್ರಾರ್ಥನೆ ಸಲ್ಲಿಸಿ ಆ ತಾಯಿ ಮಕ್ಕಳನ್ನು ಭಕ್ತಿಯಿಂದ ಪೂಜಿಸಬೇಕು. ಪೂಜೆಮಾಡಿಸಿದ ಆಚಾರ್ಯರಿಗೆ ಮಂಚ, ಗಾದೆ, ದಿಂಬು, ಹೊದಿಕೆ, ಮೇಲ್ಹಾಸು, ದೀಪ ಕನ್ನಡಿ ಮುಂತಾದವುಗಳನ್ನು ಕೊಟ್ಟು ಆಚಾರ್ಯರ ಪ್ರಾರ್ಥನೆಯನ್ನು ಮಾಡಬೇಕು. "ಪೂಜ್ಯರೇ, ನಾನು ಮಾಡಿದ ಈ ಮನೋರಥ ತೃತೀಯ ವ್ರತದಲ್ಲಿ ಏನಾದರೂ ಲೋಪದೋಷ ಒದಗಿದ್ದರೆ ಅದೆಲ್ಲವೂ ದೂರವಾಗಿ ನಿಮ್ಮ ವಚನದಿಂದ ಈ ನನ್ನ ವ್ರತವು ಪೂರ್ಣವಾಗಲಿ." ಹೀಗೆ ನುಡಿದು ಆಚಾರ್ಯರ ಆಶೀರ್ವಾದ ಪಡೆದು ಅವರಿಗೆ ಸಂಭಾವನೆ ನೀಡಿ ಸತ್ಕರಿಸಿ ಬೀಳ್ಕೊಡಬೇಕು. ಉಳಿದವರಿಗೂ ಯಥಾಶಕ್ತಿ ದಾನವನ್ನು ನೀಡಬೇಕು. ಅನಂತರ ತನ್ನ ಪರಿವಾರದವರೊಡನೆ ರಾತ್ರಿ ಕಾಲದಲ್ಲಿ ನಾಲ್ಕು ಬ್ರಹ್ಮಚಾರಿಗಳನ್ನೂ, ಹನ್ನೆರಡು ಕುಮಾರಿಯರನ್ನು ಕರೆದು ಗಂಧ, ಪುಷ್ಪ, ಮಾಲೆ ಮುಂತಾದವುಗಳಿಂದ ಪೂಜೆಮಾಡಿ ಪಕ್ವಾನ್ನ ಭೋಜನವನ್ನು ಮಾಡಿಸಬೇಕು. ಈ ರೀತಿಯಾಗಿ ಮನೋರಥ ತೃತೀಯಾ ವ್ರತವನ್ನು ಸರ್ವಪ್ರಯತ್ನದಿಂದ ಪೂರ್ಣಗೊಳಿಸಿದರೆ ಮಾನವರ ಮನೋರಥಗಳೆಲ್ಲವೂ ಖಂಡಿತವಾಗಿಯೂ ಪೂರ್ಣವಾಗುತ್ತವೆ.

ಮಹಾದೇವರು ಹೇಳಿದ ಈ 'ಮನೋರಥ ತೃತೀಯಾವ್ರತ'ವನ್ನು ಶಚೀದೇವಿಯು ಶ್ರದ್ಧೆಯಿಂದ ಯಾವ ಲೋಪವೂ ಬಾರದಂತೆ ಉತ್ಸಾಹದಿಂದ ಆಚರಿಸಿದಳು. ಇದರಿಂದ ಅವಳಿಗೆ ಆಶಾವಿನಾಯಕ, ವಿಶ್ವಭುಜಾದೇವಿ ಹಾಗೂ ಮಹಾದೇವರ ಪೂರ್ಣಾನುಗ್ರಹ ಪ್ರಾಪ್ತವಾಗಿ

ಅವಳು ತನ್ನ ಮನೋರಥದಂತೆ ದೇವೇಂದ್ರನಂಥ ಶ್ರೇಷ್ಠ ಪತಿಯನ್ನು ಪಡೆದಳು. 'ಮನೋರಥ ತೃತೀಯ'ವ್ರತ ಆಚರಣೆಯಿಂದ ತಮ್ಮ ಮನೋರಥವನ್ನು ಪೂರ್ಣಮಾಡಿಕೊಂಡವರಲ್ಲಿ ಇಂದ್ರಾಣಿಯು ಮೊದಲನೆಯ ದೃಷ್ಟಾಂತ ಆಗಿದ್ದಾಳೆ. ಈ ಪುಣ್ಯಕಥೆಯನ್ನು ಕೇಳಿದವರು ಸದ್ಬುದ್ಧಿಯನ್ನು ಹೊಂದಿ ಸರ್ವಪಾಪಗಳಿಂದ ಮುಕ್ತರಾಗುತ್ತಾರೆ.

## ಅಮಿತ್ರಜಿತ ದೊರೆ: ಮಲಯಗಂಧಿನಿಯರ ಚರಿತ್ರೆ

**ಪಾರ್ವತಿ:-** ಮಹೇಶ್ವರ ! ವೀರೇಶ್ವರ ಲಿಂಗದ ಮಹಿಮೆ ಅನುಪಮ ಎಂದು ನನ್ನ ಕೇಳಿಕೆ. ಕಾಶಿಯಲ್ಲಿ ಆ ಶ್ರೇಷ್ಠಲಿಂಗದ ಆವಿರ್ಭಾವ ಆದುದು ಎಂತು?

**ಮಹಾದೇವ:-** ದೇವಿ, ಪೂರ್ವಕಾಲದಲ್ಲಿ 'ಅಮಿತ್ರಜಿತ' ಎಂಬ ಓರ್ವ ಧರ್ಮಾತ್ಮನಾದ ಮಹಾರಾಜನಿದ್ದನು. ವಿನಯಶೀಲನೂ ವಿದ್ಯಾಸಂಪನ್ನನೂ, ಸತ್ಯವಾದಿಯೂ ಜಿತೇಂದ್ರಿಯನೂ ಆದ ಆ ಅರಸು ವಿಷ್ಣು ಭಕ್ತ. ಅವನ ರಾಜ್ಯದಲ್ಲಿ ಹೆಜ್ಜೆ ಹೆಜ್ಜೆಗೆ ಹರಿಮಂದಿರಗಳು ನೋಡಿದಲ್ಲೆಲ್ಲ.

**ಗೋವಿಂದ ಗೋಪಾಲ ರಥಾಂಗಪಾಣೇ।
ಗುಣಾಢ್ಯ ಗೋಪೀಜನ ವಲ್ಲಭೇಶ॥**

**ಶ್ರೀ ಕೃಷ್ಣ ಹೇ ಕೇಶವ ಪದ್ಮನಾಭ।
ಪರಾತ್ಪರ ಶ್ರೀಪುರುಷೋತ್ತಮಽಜ॥**

**ಶ್ರೀವತ್ಸ ವಕ್ಷೋ ವನಮಾಲಿ ವಿಷ್ಣೋ।
ಶೌರೇ ತ್ರಿಲೋಕೇಶ್ವರ ಚಕ್ರಪಾಣೇ॥**

**ಶ್ರೀರಂಗ ದಾಮೋದರ ಶಾಂರ್ಙ್ಗ ಪಾಣೇ।
ಶ್ರೀದೇವಕೀನಂದನ ಶೇಷಶಾಯಿನ್॥**

**ಹರೇ ಜಗನ್ನಾಥ ಜನಾರ್ದನೇಶ।
ಶ್ರೀ ಜಾಹ್ನವೀಕಾರಣ ಪಾದಪದ್ಮ॥**

**ವೈಕುಂಠಧಾಮಾಚ್ಯುತ ಪದ್ಮನೇತ್ರ।
ಮುಕುಂದ ಹೇ ಮಾಧವ ಕೈಟಭಾರೇ॥**

ಎಂದು ಮುಂತಾಗಿ ಶ್ರೀಹರಿಯ ನಾನಾ ವಿಧವಾದ ನಾಮೋಚ್ಚಾರಣ ಧ್ವನಿಯು ಕೇಳಿ ಬರುತ್ತಿತ್ತು. ಹೆಣ್ಣು-ಗಂಡು ವೃದ್ಧ-ಬಾಲ, ಭೂಪಾಲ-ಗೋಪಾಲ ಎಲ್ಲರ ಬಾಯಿಂದಲೂ ಹರಿನಾಮ ಸಂಕೀರ್ತನೆಯು ನಿತ್ಯ ನಿರಂತರವೂ ನಡೆದಿರುತ್ತಿತ್ತು. ಮನೆಮನೆಯ ಮುಂದೆ ಹೊರಗೆ ತುಳಸಿಯ ವೃಂದಾವನ. ಲಕ್ಷ್ಮೀಪತಿಯ ಚರಿತ್ರೆಗಳ ಚರ್ಚೆ ಮನೆಯ ಒಳಗೆ. ಪ್ರತಿಯೊಂದು ಮನೆಯ ಗೋಡೆಗಳ ಮೇಲೆ ಮಹಾವಿಷ್ಣುವಿನ ಚಿತ್ರ ಘಟನೆಗಳು ಚಾರು ಚಿತ್ರಣಗಳು ಆ ಅಮಿತ್ರಜಿತನ ರಾಜ್ಯದಲ್ಲಿ. ಆ ರಾಜನ ಭಯದಿಂದ ಯಾವ ಬೇಡನೂ ಹರಿಣ (ಚಿಗರಿಗಳ ಮೇಲೆ ಬಾಣವನ್ನು ಬಿಡುತ್ತಿದ್ದಿಲ್ಲ. ಹರಿಣ ಶಬ್ದದ ಮೊದಲು 'ಹರಿ' ಎಂಬ ಎರಡು ಅಕ್ಷರಗಳು ಇದ್ದುದರಿಂದ ಆ ವ್ಯಾಧರೇ ಹೆದರಿ ಹರಿಣಗಳ ಮೇಲೆ ಬಾಣ ಪ್ರಯೋಗ ಮಾಡುವುದನ್ನೇ ಬಿಟ್ಟು ಬಿಟ್ಟಿದ್ದರು. ಶ್ರೀಹರಿಯು ಮತ್ಸ್ಯ, ಕೂರ್ಮ, ವರಾಹ

ಅವತಾರಮಾಡಿದ್ದರಿಂದ ಆ ದೇಶದ ಬೆಸ್ತರು ಮತ್ಸ್ಯ, ಕೂರ್ಮಗಳನ್ನು (ಮೀನ, ಆಮೆ) ಬೇಟೆಯಾಡುತ್ತಿರಲಿಲ್ಲ. ಕಿರಾತರು ವರಾಹ (ಹಂದಿ)ಗಳನ್ನು ಬೇಟೆಯಾಡುತ್ತಿರಲಿಲ್ಲ. ಪಶುಪಕ್ಷಿಗಳು ಅಂದು ಕಾಡಿನಲ್ಲಿ ಹುಲ್ಲನ್ನು ಮೇಯುತ್ತಿರಲಿಲ್ಲ. ಆ ಹರಿಭಕ್ತ ರಾಜನ ಶಾಸನ ಕಾಲದಲ್ಲಿ ಎಲ್ಲ ನಗರವಾಸಿಗಳು ಏಕಾದಶಿಯ ದಿನ ದೊಡ್ಡ ಉತ್ಸವ ಮಾಡುತ್ತಿದ್ದರು. ಅಲ್ಲಿಯ ಜನರು ಪ್ರತಿದಿನವೂ ತಾವು ಮಾಡುವ ಧರ್ಮ ಕರ್ಮಗಳನ್ನು ನಿಷ್ಕಾಮ ಬುದ್ಧಿಯಿಂದ ಶ್ರೀವಾಸುದೇವನಿಗೆ ಸಮರ್ಪಣೆ ಮಾಡುತ್ತಿದ್ದರು. ಹೀಗೆ ಅಮಿತ್ರಜಿತ ಮಹಾರಾಜನು ತನ್ನ ಸಾಮ್ರಾಜ್ಯದಲ್ಲಿ ಧರ್ಮಚಕ್ರಪಾಲನೆಯನ್ನು ಮಾಡುತ್ತಿದ್ದಾಗ ಒಂದು ದಿನ ನಾರದರು ಅವನ ಮನೆಗೆ ಬಂದರು. ಸ್ವಾಗತ ಸತ್ಕಾರವಾದ ಬಳಿಕ ನಾರದರು ಅಮಿತ್ರಜಿತನಿಗೆ ಹೇಳಿದರು. ''ಮಹಾರಾಜನೇ, ನೀನು ಧನ್ಯ ಹಾಗೂ ಕೃತಾರ್ಥ ನಿನಗೆ ಎಲ್ಲ ಪ್ರಾಣಿಗಳಲ್ಲಿ ಭಗವಾನ್ ಗೋವಿಂದನ ದರ್ಶನವೇ ಆಗುತ್ತದೆ. ಈ ಜಗತ್ತಿನಲ್ಲಿ ಗೋವಿಂದನ ಹೊರತಾಗಿ ಎಲ್ಲವೂ ಅಶಾಶ್ವತ.

**ಯೌವನಂ ಧನಮಾಯುಷ್ಯಂ ಪದ್ಮಿನೀ ಜಲಬಿಂದುವತ್।**
**ಅತೀವ ಚಪಲಂ ಜ್ಞಾತ್ವಾಽಚ್ಯುತಮೇಕಂ ಸಮಾಶ್ರಯೇತ್॥**

ತಾರುಣ್ಯ, ಐಶ್ವರ್ಯ, ಆಯುಷ್ಯ ಎಲ್ಲವೂ ತಾವರೆಯ ದಳದ ಮೇಲಿನ ನೀರಿನ ಹನಿಯಂತೆ ಅತ್ಯಂತ ಚಂಚಲ ಮತ್ತು ಅಶಾಶ್ವತ ಎಂದು ತಿಳಿದು ಶಾಶ್ವತನೂ ನಾಶರಹಿತನೂ ಆದ ಶ್ರೀಹರಿಯನ್ನು ಮನುಷ್ಯರು ಆಶ್ರಯಿಸಬೇಕು. ಈ ಶಾಸ್ತ್ರದ ಆದೇಶವನ್ನು ನೀನು ಅಕ್ಷರಶಃ ಪಾಲಿಸಿ ಪರಮಶ್ರೇಷ್ಠ ವಿಷ್ಣುಭಕ್ತ ಎನಿಸಿರುವೆ. ಮಹಾರಾಜನೇ, ನಿನ್ನ ಈ ವಿಷ್ಣುಭಕ್ತಿಯನ್ನು ನೋಡಿ ನನಗೆ ಪರಮಸಂತೋಷವಾಗಿದೆ. ನಿನಗೆ ಏನಾದರೂ ಉಪಕಾರ ಮಾಡಬೇಕು, ಎಂದು ನನ್ನ ಬಹುದಿನದ ಹಂಬಲ. ಅದು ಈಡೇರುವ ಸಂದರ್ಭ ಈಗ ಒದಗಿ ಬಂದಿದೆ. ಅದಕ್ಕಾಗಿ ನಿನಗೆ ಒಂದು ಮಾತನ್ನು ಹೇಳಲು ತವಕದಿಂದ ನಾನು ಬಂದಿದ್ದೇನೆ. ಚಿತ್ತವಿಟ್ಟು ಆಲಿಸು. ವಿದ್ಯಾಧರ ರಾಜಕುಮಾರಿಯಾದ ಮಲಯಗಂಧಿನಿ ತ್ರಿಲೋಕ ಸುಂದರಿ, ಸುರಲೋಕದ ಸುಂದರಿಯರು ಅವಳ ಸೌಂದರ್ಯದ ಎದುರು ಕಳಪೆ. ಈ ತ್ರಿಭುವನ ಮೋಹಿನಿಯು ಒಂದು ದಿನ ಉದ್ಯಾನದಲ್ಲಿ ತನ್ನ ಗೆಳತಿಯರೊಂದಿಗೆ ಆಟವಾಡುತ್ತಿದ್ದಳು. ಅದೇ ವೇಳೆಯಲ್ಲಿ ಕಪಾಲಕೇತುವಿನ ಮಗನಾದ ಕಂಕಾಲಕೇತು ಎಂಬ ಮಹಾಬಲಿಷ್ಠನಾದ ದೈತ್ಯ ಅಲ್ಲಿಗೆ ಆಗಮಿಸಿದ. ಆ ಹೆಣ್ಣಿನ ಮೇಲೆ ಅವನ ಕಣ್ಣುಬಿತ್ತು. ಮಲಯಗಂಧಿನಿಯ ಅನಿಂದ್ಯ ಸೌಂದರ್ಯವನ್ನು ಕಂಡು ಹುಚ್ಚಾಗಿ ಹೋದ ಆ ಕಂಕಾಲಕೇತು. ಮಹಾಪರಾಕ್ರಮಿಯಾದ ಆ ದೈತ್ಯರಾಜ ಕೂಡಲೇ ಲೀಲಾಲೋಲಳಾದ ಆ ಲಲನಾಮಣಿಯನ್ನು ಮೂರ್ಛಿತಗೊಳಿಸಿ ಗುಟ್ಟಾಗಿಯೇ ಅಲ್ಲಿಂದ ಹಾರಿಸಿಬಿಟ್ಟ. ತನ್ನ ಅಂತಃಪುರದಲ್ಲಿ ತಂದು ಇಟ್ಟ. ಪಾತಾಳಲೋಕದ ಚಂಪಕಾವತಿ ನಗರದಲ್ಲಿದಾನವೇಂದ್ರನ ರಾಣೀವಾಸದಲ್ಲಿ ಬಂದಿನಿಯಾಗಿದ್ದಾಳೆ ಈಗ ಈ ಮಲಯಗಂಧಿನಿ. ನಾನು ಪಾತಾಳ ಲೋಕದಲ್ಲಿ ಇರುವ ಮಹಾದೇವರ ದಿವ್ಯಮಂದಿರವಾದ ಹಾಟಕೇಶ್ವರ ದೇವಲಯಕ್ಕೆ ಹೋಗಿದ್ದೆ. ಅಲ್ಲಿಯ ಶಿವಲಿಂಗವನ್ನು ವಂದಿಸಿ ಮರಳಿ ಬರುತ್ತಿರುವಾಗ ಆ ಮಲಯಗಂಧಿನಿಯು ನನ್ನ ಕಣ್ಣಿಗೆ ಬಿದ್ದಳು. ನನ್ನನ್ನು ಕಂಡ ಕೂಡಲೇ ನಮಸ್ಕಾರಮಾಡಿ ದಾರುಣವಾದ ಕಥೆಯನ್ನು ಹೇಳಿದಳು. ಪೂಜ್ಯರೇ, ನಾನು ಗಂಧಮಾದನ ಪರ್ವತದ ಮೇಲೆ ನನ್ನ ತಂದೆಯ ಉದ್ಯಾನದಲ್ಲಿ ಆಟಪಾಟಗಳಲ್ಲಿ ಮಗ್ನಳಾಗಿದ್ದೆ. ಅದೇ ಸಮಯದಲ್ಲಿ

ದುರಾಚಾರಿಯಾದ ಈ ಕಂಕಾಲಕೇತು ನನ್ನನ್ನು ಮೂರ್ಛೆಗೊಳಿಸಿ ಅಲ್ಲಿಂದ ಹೊತ್ತು ತಂದು ಈ ಪಾತಾಳಲೋಕದ ಚಂಪಕಾವತಿ ನಗರದಲ್ಲಿ ಬಂಧಿಸಿಟ್ಟಿದ್ದಾನೆ. ಆ ದುಷ್ಟದಾನವನನ್ನು ಬೇರೆ ಶಾಸ್ತ್ರಗಳಿಂದ ಗೆಲ್ಲಲು ಆಗುವುದಿಲ್ಲ. ಬೇರೆ ಅಸ್ತ್ರಗಳಿಂದ ಅವನು ಸಾಯುವುದೂ ಇಲ್ಲ. ಅವನದೇ ತ್ರಿಶೂಲದಿಂದ ಮಾತ್ರ ಅವನಿಗೆ ಸಾವು. ಇದು ಆ ದೈತ್ಯನು ಪಡೆದುಕೊಂಡ ವರ. ಆದ್ದರಿಂದ ಯಾರಾದರೂ ವೀರರು ಆ ಪಾಪಿಯ ತ್ರಿಶೂಲದಿಂದ ಅವನನ್ನು ಹಣಿದು ನನ್ನನ್ನು ಈ ಬಂಧನದಿಂದ ಬಿಡುಗಡೆ ಮಾಡಿದರೆ ನನ್ನ ಮೇಲೆ ಪರಮೋಪಕಾರ ಆಗುವುದು. ಇಂಥ ಬಲಿಷ್ಠನಾದ ವೀರದೈತ್ಯನನ್ನು ಸಂಹರಿಸುವ ಸಾಮರ್ಥ್ಯವು ಈ ಪ್ರಪಂಚದಲ್ಲಿ ಅಮಿತ್ರಜಿತ ರಾಜನ ಹೊರತು ಬೇರೆ ಯಾರಿಗಿದೆ? ಜಗದಂಬೆಯು ನನಗೆ- ''ಶ್ರೇಷ್ಠನಾದ ಓರ್ವ ವಿಷ್ಣುಭಕ್ತನು ನಿನ್ನನ್ನು ಮದುವೆಯಾಗುವನು'' ಎಂದು ವರವನ್ನು ನೀಡಿದ್ದಾಳೆ. ಆದ್ದರಿಂದ ಪೂಜ್ಯರಾದ ನಾರದರೇ, ನೀವು ಪರಮವಿಷ್ಣುಭಕ್ತನೂ, ಕರುಣೆಯು ಕೈವಾರಿಯೂ ಪರೋಪಕಾರ ಪರಾಯಣನೂ ತರುಣನೂ ತೇಜಸ್ವಿಯೂ ವೀರವರೇಣ್ಯನೂ ಆದ ಅಮಿತ್ರಜಿತ ಮಹಾರಾಜರಿಗೆ ನನ್ನ ಸಂದೇಶವನ್ನು ಹೋಗಿ ತಿಳಿಸಿರಿ. ಈ ದುಷ್ಟ ದಾನವನ ಸೆರೆಯಿಂದ ನನ್ನನ್ನು ಪಾರು ಮಾಡಲು ಹೇಳಿರಿ. ನಾಳಿನ ತೃತೀಯಾ ತಿಥಿಯ ಒಳಗಾಗಿ ನನ್ನನ್ನು ಈ ಪಾತಾಳಪುರಿಯ ಬಂದೀಮನೆಯಿಂದ ಮುಕ್ತಳನ್ನಾಗಿ ಮಾಡಿ ದೇವಿಯ ವರವನ್ನು ಸತ್ಯವನ್ನಾಗಿ ಮಾಡಲು ತಿಳಿಸಿರಿ.''

ಮಹಾರಾಜನೇ, ದುಷ್ಟದಾನವನ ಅಂತಃಪುರದಲ್ಲಿ ನಿನಗಾಗಿ ಆ ಬಾಲೆ ಪರಿತಪಿಸುತ್ತಿದ್ದಾಳೆ. ನೀನು ಕೂಡಲೇ ಹೋಗು. ಆ ದುರ್ದಾನವನನ್ನು ಮರ್ದಿಸು. ಮಲಯಗಂಧಿನಿಯನ್ನು ಬಿಡಿಸು, ಪುಣ್ಯವನ್ನು ಗಳಿಸು, ಕೀರ್ತಿಯನ್ನು ಬೆಳೆಸು, ದೇವಿಯ ಆಶೀರ್ವಾದದ ರಕ್ಷಾಕವಚ ನಿನ್ನ ಬೆನ್ನಿಗಿದೆ.''

ನಾರದರ ಈ ಮಾತನ್ನು ಕೇಳಿ ಮಿತ್ರಜಿತನು ಚಿಂತಾಗ್ರಸ್ತನಾದ. ಭೂತಾಳವನ್ನು ಸೀಳಿಕೊಂಡು ಪಾತಾಳದ ಆಳಕ್ಕೆ ಇಳಿಯುವದೆಂತು? ಚಂಪಕಾಪುರಿಗೆ ಹೇಗೆ ಹೋಗುವುದು? ಇತರ ಅಸ್ತ್ರಗಳಿಂದ ಅವಧ್ಯನಾದ ಆ ದೈತ್ಯಾಧಮನನ್ನು ಹೇಗೆ ಸಂಗರಿಸುವುದು? ಹೀಗೆ ಚಿಂತಾಚಕ್ರದ ಸುಳಿಯಲ್ಲಿ ಸಿಕ್ಕ ರಾಜನ ಮುಖಚರ್ಯೆಯನ್ನು ನೋಡಿ ನಾರದರು ನಗುತ್ತ ನುಡಿದರು.

**ನಾರದ:-** ಮಹಾರಾಜ, ನೀನು ಚಿಂತೆ ಮಾಡಬೇಡ. ನಿನಗೆ ಈ ಕಾರ್ಯವನ್ನು ಸಾಧಿಸುವ ಉಪಾಯವನ್ನು ನಾನು ಹೇಳಿಕೊಡುತ್ತೇನೆ. ಹುಣ್ಣಿಮೆಯ ದಿನ ನೀನು ಸಮುದ್ರತೀರಕ್ಕೆ ಹೋಗು ಅಲ್ಲಿಯ ಒಂದು ನೌಕೆಯಲ್ಲಿ ಹೋಗಿ ಕುಳಿತುಕೊ. ಅಲ್ಲಿ ನಿನಗೆ ಒಂದು ರಥದ ಮೇಲೆ ಕಲ್ಪವೃಕ್ಷವು ಕಂಡುಬರುವುದು. ಅಲ್ಲಿಯೇ ಒಂದು ಮಂಚದ ಮೇಲೆ ಓರ್ವ ದಿವ್ಯಾಂಗನೆಯು ಕೈಯಲ್ಲಿ ತಂಬೂರಿಯನ್ನು ಹಿಡಿದು ಮಧುರ ಕಂಠದಿಂದ ಗಾಯನವನ್ನು ಮಾಡುತ್ತ ಇರುತ್ತಾಳೆ. ಅವಳ ಸಂಗೀತದ ಪಲ್ಲವಿ ಹೀಗೆ ಇರುತ್ತದೆ.

**''ಯತ್ಕರ್ಮ ವಿಹಿತಂ ಯೇನ ಶುಭಂ ವಾऽ ಶುಭೇತರಂ।**
**ಸ ಏವ ಭುಂಕ್ತೇ ತತ್ ತಥ್ಯಂ ವಿಧಿಸೂತ್ರ ನಿಯಂತ್ರಿತಃ'' ॥**

ಯಾವ ಮನುಷ್ಯನು ಶುಭವಾಗಲೀ ಅಶುಭವಾಗಲಿ ಕರ್ಮವನ್ನು ಮಾಡಿರುವನೋ ಆ ಕರ್ಮದ ಫಲವನ್ನು ಭಾಗ್ಯ ಸೂತ್ರದಲ್ಲಿ ಬಂಧಿತನಾಗಿ ಅದೇ ಮನುಷ್ಯನು ಅನುಭವಿಸುತ್ತಾನೆ. ಇದು ಸತ್ಯ.'' ಹೀಗೆ ಗಾನ ಮಾಡುತ್ತಿರುವ ಆ ಬಾಲೆಯು

ಕ್ಷಣಾರ್ಧದಲ್ಲಿ ಸಮುದ್ರದ ಒಳಗೆ ಪ್ರವೇಶಮಾಡುತ್ತಾಳೆ. ನೀನು ಕೂಡ ಯಜ್ಞವರಾಹನ ಸ್ತೋತ್ರವನ್ನು ಮಾಡುತ್ತ ಆ ವೀಣಾಪಾಣಿಯಾದ ಪ್ರಮದೆಯ ಹಿಂದೆ ಹೋಗು. ಅವಳು ಅಲ್ಲಿಂದ ನೇರವಾಗಿ ಸಮುದ್ರದ ಆಳಕ್ಕಿಳಿದು ಪಾತಾಳಲೋಕಕ್ಕೆ ಹೋಗಿ ಚಂಪಕಾವತಿ ನಗರಕ್ಕೆ ಪ್ರಯಾಣ ಮಾಡುವಳು. ಅವಳ ಬೆನ್ನು ಬಿಡದೇ ನೀನು ಕೂಡ ಆ ದೇವಸುಂದರಿಯ ಹಿಂದೆ ಹೆಜ್ಜೆ ಹಾಕುತ್ತ ಹೋದರೆ ಪಾತಾಳ ಲೋಕದ ಚಂಪಕಾವತಿ ಪಟ್ಟಣದಲ್ಲಿ ಮಲಯಗಂಧಿನಿಯು ಇದ್ದಲ್ಲಿಗೆ ಹೋಗಿ ತಲುಪುವಿ. ''ಹೀಗೆ ಹೇಳಿ ನಾರದರು ಅಲ್ಲಿಂದ ಹೊರಟು ಹೋದರು.

ಧೈರ್ಯಶಾಲಿಯಾದ ಅಮಿತ್ರಜಿತ ಮಹಾರಾಜನು ನಾರದರ ನಿರ್ದೇಶನದಂತೆ ಸಮುದ್ರತೀರಕ್ಕೆ ಪ್ರಯಾಣಮಾಡಿದ. ಅಂದು ಹುಣ್ಣಿಮೆಯ ತಿಥಿ. ನಾರದರು ಹೇಳಿದಂತೆ ಮಹಾರಾಜನು ಸಮುದ್ರ ತೀರದ ಒಂದು ನೌಕೆಯಲ್ಲಿ ಆಸೀನನಾದ. ಅಲ್ಲಿಯೇ ಒಂದು ವೃಕ್ಷ ಸುಂದರವಾದ ತೇರು. ಅದರಲ್ಲಿ ಅತ್ಯದ್ಭುತವಾದ ಒಂದು ಸುರ ತರು. ಆ ದಿವ್ಯ ವೃಕ್ಷದ ನೆರಳಿನಲ್ಲಿ ಒಂದು ಮಿಂಚುವ ಮಂಚ. ಅದರ ಮಧ್ಯದಲ್ಲಿ ತಂಬೂರಿಯನ್ನು ತೊಡೆಯ ಮೇಲಿಟ್ಟು ಕೊಂಡು ಅದರ ತಂತಿಯನ್ನು ಮೀಟುತ್ತ ಕುಳಿತುಕೊಂಡಿದ್ದಳು ಓರ್ವ ಸುಂದರಿ. ಅವಳ ಕೋಕಿಲ ಕಂಠದ ಸಂಗೀತದ ಮಧುರ ತರಂಗಗಳಿಂದ ವಾತಾವರಣವೆಲ್ಲವೂ ಮೂಕ ಮುಗ್ಧ.

**''ಯತ್ಕರ್ಮ ವಿಹಿತಂ ಯೇನ ಶುಭಂ ವಾಥ ಶುಭೇತರಂ।**
**ಸ ಏವ ಭುಂಕ್ತೇ ತತ್ತಥ್ಯಂ ವಿಧಿಸೂತ್ರ ನಿಯಂತ್ರಿತಃ'' ॥**

ಈ ಗೀತಗಾಥೆಯ ಪಾದಪಲ್ಲವಿಯು ವೀಣೆಯ ಝುಂಕಾರದೊಂದಿಗೆ ಕೂಡಿಕೊಂಡು ಪ್ರಕೃತಿಯ ಮೌನ ಸಂಗೀತಕ್ಕೆ ಶೃತಿಗೂಡಿಸುತಿತ್ತು. ರಾಜನು ಆ ಜಗನ್ಮೋಹಿನಿಯ ಹಾಡಿನ ಚಾರುಚರಣವನ್ನು ಆಲಿಸಿದ. ಅವಳ ರೂಪರಾಶಿಯನ್ನು ನೋಡಿದ. ರಾಜನು ಅವಳ ಕಣ್ಣಿಗೆ ಬಿದ್ದ ಕೂಡಲೇ ಆ ಚಂಚಲಾಕ್ಷಿಯು ಮಿಂಚಿನಂತೆ ಒಮ್ಮೆಲೇ ಸಮುದ್ರದಲ್ಲಿ ಹಾರಿ ತನ್ನ ಮಂಚ ಹಾಗೂ ರಥ, ಕಲ್ಪವೃಕ್ಷದೊಂದಿಗೆ ಸಮುದ್ರದಲ್ಲಿ ಹೊಕ್ಕಳು. ಒಮ್ಮೆಲೇ ಮಹಾರಾಜನು ನೌಕೆಯಿಂದ ಹಾರಿ ಅವಳನ್ನು ಬೆನ್ನಟ್ಟಿದ. ಅವಳ ನೆರಳು ಹಿಡಿದೇ ಸಮುದ್ರದಲ್ಲಿ ಹೊಕ್ಕ. ಜಲರಾಶಿಯನ್ನು ಭೇದಿಸಿಗೊಂಡು ಸಾಗರದ ಆಳಕ್ಕೆ ಇಳಿದ. ಮುಂದೆ ಮುಂದೆ ಮೋಹಿನಿ. ಹಿಂದೆ ಹಿಂದೆ ಮಹಾರಾಜ. ಸಾಗರದ ಅಪಾರ ಜಲರಾಶಿಯನ್ನು ಸರಿಸಿ, ಕ್ರೂರ ಸತ್ವಗಳನ್ನೂ, ತಿಮಿಂಗಲಗಳನ್ನೂ ಆ ದಿವ್ಯ ಸ್ತ್ರೀಯು ದೂರ ದೂರವೇ ಇರಿಸಿ ನೆಟ್ಟಗೆ ಪಾತಾಳ ಲೋಕಕ್ಕೆ ಇಳಿದಳು. ಚಂಪಕಾವತಿ ನಗರಕ್ಕೆ ಬಂದು ಮುಟ್ಟಿದಳು. ಅವಳೊಟ್ಟಿಗೆ ಅಮಿತ್ರಜಿತ ಮಹಾರಾಜನು ಪಾತಾಳಪುರಿಯನ್ನು ಪ್ರವೇಶಿಸಿದ. ಚಂಪಕಾವತಿ ನಗರವನ್ನು ತಲುಪಿದ. ಮಲಯಗಂಧಿನಿ ಇದ್ದಲ್ಲಿಯೇ ಆ ದಿವ್ಯಾಂಗನೆಯು ಬಂದಳು. ಅವಳ ಹಿಂದೆ ಹಿಂದೆ ಮಹಾರಾಜನು ಅಲ್ಲಿಗೆ ಬಂದ. ಅಲ್ಲಿ ಮಲಯಗಂಧಿನಿಯನ್ನು ನೋಡಿದ. ಮೂರು ಲೋಕದ ಸೌಂದರ್ಯ ಅವಳಲ್ಲಿ ಮೂರ್ತೀಭವಿಸಿತ್ತು. ರತಿಯ ರೂಪ, ಲಕ್ಷ್ಮಿಯ ಕಾಂತಿ, ಪಾರ್ವತಿಯ ಚೆಲುವು ಮೂರು ಮೇಳವಿಸಿ ಮಲಯಗಂಧಿನಿ ಆಗಿದ್ದಾಳೆ ಎನಿಸಿತು ಆ ಮಹಾರಾಜನಿಗೆ. ಆ ವಿದ್ಯಾಧರ ಕುಮಾರಿಯು ಒಂದು ತೂಗು ಮಂಚದ ಮೇಲೆ ಕುಳಿತ್ತಿದ್ದಳು. ಅವಳ ಬಳಿಗೆ ಸಾಗಿದ ಮಹಾರಾಜ ಅರಸನನ್ನು ಕಂಡ ಕೂಡಲೇ ಆ ಅಪ್ಸರೆಯು ತನ್ನ

ತೂಗುತೊಟ್ಟಿಲಿಂದ ಕೆಳಗೆ ಇಳಿದಳು. ನಾಚಿಕೆಯಿಂದ ತಲೆಯನ್ನು ತಗ್ಗಿಸಿ ಸೌಜನ್ಯದ ಮೂರ್ತಿಯಾಗಿ ಅವಳು ಮಾತನಾಡಿದಳು. "ಮನೋಹರ ರೂಪವುಳ್ಳ ಪುರುಷಶ್ರೇಷ್ಠ, ನೀನು ಯಾರು? ನಿನ್ನನ್ನು ನೋಡಿದ ಕೂಡಲೇ ನನ್ನ ಮನಸ್ಸು ನಿನ್ನೆಡೆಗೆ ಎಳೆಯಲ್ಪಟ್ಟಿದೆ. ಇಂಥ ಮುಗ್ಧ ಮನೋಹರ ಮೂರ್ತಿಯಾದ ನೀನು ಈ ಮೃತ್ಯು ಮಂದಿರಕ್ಕೆ ಏಕೆ ಬಂದಿರುವೆ? ಆ ಕ್ರೂರನಾದ ಕಂಕಾಲಕೇತು ರಾಕ್ಷಸನು ಇಲ್ಲಿಗೆ ಬರುವಷ್ಟರಲ್ಲಿ ನೀನು ಶಸ್ತ್ರಾಗಾರದಲ್ಲಿ ಅಡಗಿ ಕುಳಿತುಕೊ ದೇವಿ ಪಾರ್ವತಿಯ ವರದಾನದಿಂದ ಅವನು ಈವರೆಗೂ ನನ್ನ ಕನ್ಯಾವ್ರತವನ್ನು ಭಂಗಗೊಳಿಸಲು ಸಮರ್ಥನಾಗಿಲ್ಲ ಇಂದು ಹುಣ್ಣಿಮೆ ಆಚೆಯನಾಡದು ತೃತೀಯ ತಿಥಿಯಂದು ನನ್ನನ್ನು ಆ ಕಾಮಾಂಧನಾದ ಕಂಲಾಲ ಕೇತು ಮದುವೆ ಆಗಬೇಕೆಂದು ಸಂಕಲ್ಪಿಸಿದ್ದಾನೆ."

ವಿಧ್ಯಾದರ ಕುಮಾರಿಯು ಹೀಗೆ ಹೇಳಿದ ಬಳಿಕ ಮಹಾರಾಜನು ಅವಳ ಸೂಚನೆಯಂತೆ ಶಸ್ತ್ರಾಗಾರದಲ್ಲಿ ಹೋಗಿ ಅಡಗಿ ಕುಳಿತ. ಸಾಯಂಕಾಲದಲ್ಲಿ ಭೀಕರ ಆಕಾರದ ಕಂಕಾಲಕೇತು ಅಲ್ಲಿಗೆ ಬಂದ ಮಲಯಗಂಧಿನಿಗೆ ಹೇಳಿದ. ಅವಳ ಮುಂದೆ ರತ್ನರಾಶಿಯನ್ನು ಸುರುವಿದ- "ಸುಂದರೀ, ಅತ್ಯುತ್ಕೃಷ್ಟವಾದ ಈ ರತ್ನವನ್ನು ತೆಗೆದುಕೊ ಆಚೆಯನಾಡದು ನಿನ್ನ ಪಾಣಿಗ್ರಹಣ ಮಹೋತ್ಸವ ನನ್ನೊಡನೆ. ಇನ್ನು ಮೇಲೆ ನಿನ್ನ ಕನ್ಯಾಭಾವ ಉಳಿಯದು. ನಾಳೆ ಪ್ರಾತಃಕಾಲದಲ್ಲಿ ನಿನ್ನ ಸೇವೆಗಾಗಿ ಸಾವಿರ ದಾಸಿಯರನ್ನು ಕಳಿಸಿ ಕೊಡುತ್ತೇನೆ. ದಿಕ್ಪಾಲಕರ ಮನೆಯಲ್ಲಿ ಇರುವಷ್ಟು ಐಶ್ವರ್ಯ ವೈಭೋಗಗಳಿಗೆಲ್ಲ ನೀನು ನಾಳೆಯೇ ನಾಡದು ನೀನು ನನ್ನ ಭಾಮಿನಿ ಆಚೆಯ ನಾಡದು ನನ್ನ ಕುಟುಂಬಿನಿ. ನನ್ನ ಪತ್ನಿ ಆಗುವುದರಿಂದ ನೀನು ದೇವಮಹಿಳೆಯರಿಗೂ ದುರ್ಲಭವಾದ ಸುಖವಿಲಾಸಗಳನ್ನೂ ವಿಹಾರ ಸೌಖ್ಯವನ್ನೂ ಯಾವಜನ್ಮ ಅನುಭವಿಸಬಹುದು." ಹೀಗೆ ಮನಬಂದಂತೆ ಬಡಬಡಿಸುತ್ತ ಆ ದಾನವನು ತನ್ನ ತೊಡೆಯ ಮೇಲೆ ತ್ರಿಶೂಲವನ್ನು ಇಟ್ಟುಕೊಂಡು ಆಯಾಸದಿಂದ ಮಲಗಿಕೊಂಡನು. ಅವನಿಗೆ ಗಾಢನಿದ್ರೆ. ಆದರೆ ಮಲಯಗಂಧಿನಿ ಮಾತ್ರ ಯಾವಗಲೂ ಜಾಗ್ರತೆ. ಅವಳಿಗೆ ಪಾರ್ವತಿಯ ವರದಾನದ ನೆನಪು ಆಯಿತು. ಕೂಡಲೇ ಅವಳು ಶಸ್ತ್ರಾಗಾರದಲ್ಲಿ ಕುಳಿತ ಅಮಿತ್ರಜಿತ ಮಹಾರಾಜನನ್ನು ಹೊರಗೆ ಕರೆದಳು. ಕಂಕಾಲಕೇತು ತೊಡೆಯ ಮೇಲೆ ಇಟ್ಟುಕೊಂಡ ತ್ರಿಶೂಲವನ್ನು ತನ್ನ ಕೈಯಲ್ಲಿ ಎತ್ತಿಕೊಂಡಳು. ಅದನ್ನು ಅಮಿತ್ರಜಿತ ಮಹಾರಾಜನಿಗೆ ಕೊಡುತ್ತ ಹೇಳಿದಳು. "ರಾಜೇಶ್ವರ, ತೆಗೆದುಕೋ ಈ ತ್ರಿಶೂಲವನ್ನು ಇದರಿಂದ ಈ ರಾಕ್ಷಸನ ಪ್ರಾಣವನ್ನೂ ತೆಗೆದುಕೋ, ತಡಮಾಡಬೇಡ."

ಕನ್ಯಾಮಣಿಯಾದ ಮಲಯಗಂಧಿನಿಯ ಕೈಯಿಂದ ತ್ರಿಶೂಲವನ್ನು ಪಡೆದು ಅಮಿತ್ರಜಿತನು ಉತ್ಸಾಹದಿಂದ ಉಬ್ಬಿಹೋದ. ಆ ವಿದ್ಯಾಧರ ಕುಮಾರನಿಗೆ ಅಭಯ ನೀಡಿದ. ಚರಾಚರ ಜಗತ್ತನ್ನೆಲ್ಲ ರಕ್ಷಣೆಮಾಡುವ ನಾರಾಯಣನನ್ನು ಮನದಲ್ಲಿಯೇ ಮತ್ತೆ ನೆನೆದ. ಶ್ರೀಹರಿಯ ಹಸ್ತಾಲಂಕಾರವಾದ ಸುದರ್ಶನ ಚಕ್ರವನ್ನು ಮನಸ್ಸಿನಲ್ಲಿ ಸ್ಮರಿಸಿದ. ಅನಂತರ ಎಡಗಾಲಿನಿಂದ ನಿದ್ರಿಸುತ್ತಿರುವ ಆ ಕಂಕಾಲಕೇತುವಿನ ಎದೆಗೆ ಒಂದು ಒದೆತ ಕೊಟ್ಟ. "ದುಷ್ಟಾತ್ಮನೇ, ಏಳು ಎದ್ದೇಳು. ಕನ್ಯೆಯರ ಮೇಲೆ ಬಲಾತ್ಕಾರ ಮಾಡಲು ನಿನಗೆ ನಾಚಿಕೆ ಎನಿಸುವುದಿಲ್ಲವೇ? ಪಾಪಿ ನನ್ನ ಜೊತೆ ಯುದ್ಧಮಾಡು. ನಾನು ಮಲಗಿದ ವೈರಿಯನ್ನು ಕೊಲ್ಲಲಾರೆ." ಅಮಿತ್ರಜಿತನ ಈ ವೀರಗರ್ಜನೆಯನ್ನು ಆ ಘೋರ ರಕ್ಕಸ ಕೇಳಿ ಗಡಬಡಿಸಿ ಎದ್ದ. ಹಾಗೂ ಕರ್ಕಶ ಧ್ವನಿಯಿಂದ ಚೀರಿದ ಪ್ರಿಯೆ, ನನ್ನ ತ್ರಿಶೂಲವನ್ನು ತಂದು ಕೊಡು. ಇವನಾವನೋ ಪಾಪಿಯು ಈ ಮೃತ್ಯು

ಮಂದಿರಕ್ಕೆ ಬಂದಿದ್ದಾನೆ. ಇವನು ನನ್ನ ಕಣ್ಣಿಗೆ ಬಿದ್ದನಂತರ ಇವನ ಆಯುಷ್ಯ ಮುಗಿದಂತಾಗಿದೆ.'' ಹೀಗೆ ಹೇಳಿ ಆ ದೈತ್ಯನು ಅಮಿತ್ರಜಿತನ ಎದೆಗೆ ಬಹಳ ವೇಗದಿಂದ ಮುಷ್ಟಿಪ್ರಹಾರ ಮಾಡಿದ. ಕಂಕಾಲಕೇತವಿನ ವಜ್ರಕಠೋರವಾದ ಕರಾಘಾತದಿದ ಅಮಿತ್ರಜಿತನಿಗೆ ತಿಲಮಾತ್ರವೂ ನೋವಾಗಲಿಲ್ಲ. ಆದರೆ ಅವನ ಶಿಲಾನಿಷ್ಠುರವಾದ ಎದೆಗೆ ಬಡೆದ ಆ ದಾನವನ ಕೈಗೆ ಮಾತ್ರ ವಿಲಕ್ಷಣ ಬೇನೆ ಆಯಿತು. ಕೂಡಲೇ ರಾಜನು ಆ ದೈತ್ಯನ ಮುಖಕ್ಕೆ ಹೊಡೆದ. ಇದರಿಂದ ಆ ದೈತ್ಯನ ತಿರುಗಿ ಅವನು ನೆಲದ ಮೇಲೆ ಬಿದ್ದ. ಮರು ಕ್ಷಣದಲ್ಲಿ ಎದ್ದುನಿಂತು ಅಮಿತ್ರಜಿತನಿಗೆ ಕೇಳಿದ - ''ನೀನು ಮನುಷ್ಯನಲ್ಲ. ಸಾಕ್ಷಾತ್ ವಿಷ್ಣುವೇ ಆಗಿರಬೇಕು. ನೀನು ಬಲಿಷ್ಠನಾಗಿದ್ದರೆ ನನ್ನ ಒಂದು ಮಾತುಕೇಳು. ನಿನ್ನ ಕೈಯಲ್ಲಿ ಇದ್ದುದು ನನ್ನ ತ್ರಿಶೂಲ. ಅದನ್ನು ಬಿಟ್ಟು ನೀನು ನನ್ನ ಆಯುಧಗಳಿಂದಲೇ ನನ್ನ ಜೊತೆ ಯುದ್ಧಮಾಡು. ಇಂದಿಲ್ಲ ನಾಳೆ ಎಲ್ಲ ಶರೀರಧಾರಿಗಳಿಗೂ ಮೃತ್ಯು ನಿಶ್ಚಿತ. ಬಲದಿಂದಾಗಲಿ ಛಲದಿಂದಾಗಲಿ ವಿಷ್ಣು ಸ್ವರೂಪಿಯಾದ ನಿನ್ನಿಂದ ನನಗೆ ಮೃತ್ಯು ಬಂದರೆ ಬಹಳ ಸಂತೋಷ. ಈ ಮಲಯಗಂಧಿನಿ ಎಂಬ ಕನ್ಯೆಯು ನಿಜವಾಗಿಯೂ ಸತೀಮಣಿ ಈವರೆಗೂ ನಾನು ಇವಳ ಮೈ ಮುಟ್ಟಿಲ್ಲ. ನಿನಗಾಗಿ ಇವಳನ್ನು ಈ ವರೆಗೆ ಸುರಕ್ಷಿತವಾಗಿ ರಕ್ಷಿಸಿದ್ದೇನೆ.''

ಹೀಗೆ ಹೇಳಿ ಆ ದಾನವನು ಪರ್ವತಗಳನ್ನು ಪುಡಿ ಪುಡಿ ಮಾಡಬಲ್ಲ ಒಂದು ಭಯಂಕರ ಹಸ್ತಪ್ರಹಾರವನ್ನು ರಾಜನ ಎದೆಯ ಮೇಲೆ ಮಾಡಿದ. ಆ ಹಸ್ತಾಘಾತವನ್ನು ಅಮಿತ್ರಜನು ತಾಳಿಕೊಂಡು ತನ್ನ ಕೈಯಲ್ಲಿರುವ ತ್ರಿಶೂಲವನ್ನು ತೂಗಿ ದೈತ್ಯನ ಎದೆಗೆ ಗುರಿಯಿಟ್ಟು ತೂರಿ ಒಗೆದ. ಆ ತ್ರಿಶೂಲದ ಪ್ರಹಾರದಿಂದ ಕಂಕಾಲಕೇತುವು ಆ ಕ್ಷಣದಲ್ಲಿಯೇ ಪ್ರಾಣಬಿಟ್ಟ. ಹೀಗೆ ಮೂರು ಲೋಕಗಳನ್ನೂ ಹಾಗೂ ದೇವತೆಗಳನ್ನು ಭಯಕಂಪಿತವನ್ನಾಗಿ ಮಾಡುತ್ತಲಿದ್ದ ಕಂಕಾಲಕೇತುವನ್ನು ರಾಜನು ತ್ರಿಶೂಲದಿಂದ ಸಂಹಾರಮಾಡಿ, ಭಯದಿಂದ ನಡುಗುತ್ತಿದ್ದ ಮಲಯಗಂಧಿನಿಯ ಬಳಿಬಂದು ಹೇಳಿದ- ''ಸುಂದರಿ, ದೇವರ್ಷಿ ನಾರದರಿಂದ ನಿನ್ನ ಸಂದೇಶವನ್ನು ತಿಳಿದು ನಾನು ಇಲ್ಲಿಗೆಬಂದೆ. ನಿನ್ನ ಹೇಳಿಕೆಯಂತೆ ಈ ದೈತ್ಯನನ್ನು ಕೊಂದೆ. ಇನ್ನು ನಾನು ಏನು ಮಾಡಬೇಕು? ಹೇಳು.''

**ಮಲಯಗಂಧಿನಿ:-** ವೀರಾಗ್ರೇಸರ, ನೀನೇ ನನ್ನ ಜೀವನ ಸರ್ವಸ್ವ. ನನ್ನ ದೇಹ, ಆತ್ಮ ಎಲ್ಲವನ್ನು ಕಾಪಾಡಿದವನು ನೀನು. ನನ್ನ ಸರ್ವಸ್ವವೂ ನಿನಗೇ ಸಮರ್ಪಿತ. ಮುಂದೆ ಏನು ಮಾಡಬೇಕು ಎಂದು ನನ್ನನ್ನೇನು ಕೇಳುವಿ?

ಮಲಯಗಂಧಿನಿಯು ಹೀಗೆ ನುಡಿಯುವಷ್ಟರಲ್ಲಿ ದೇವರ್ಷಿ ನಾರದರು ಅಲ್ಲಿಗೆ ಬಂದರು. ಅವರನ್ನು ಕಂಡಕೂಡಲೇ ಮಲಯಗಂಧಿನಿಗೆ ಇನ್ನಿಲ್ಲದ ಹಿಗ್ಗು. ಅಮಿತ್ರ ಜಿತನಿಗೆ ಹರ್ಷೋರ್ತ್ಕರ್ಷ. ಇಬ್ಬರೂ ವಿನಯದಿಂದ ವಂದಿಸಿದರು. ಆಗ ನಾರದರು ''ನೀವಿಬ್ಬರೂ ಸತಿಪತಿಯರಾಗಿ ಆನಂದದಿಂದ ಬಹುಕಾಲ ಬಾಳಿರಿ'' ಎಂದು ಆಶೀರ್ವಾದ ನೀಡಿದರು. ಅನಂತರ ಸ್ವಯಂ ನಾರದರೇ ವೇದೋಕ್ತವಿಧಿಯಿಂದ ಅವರ ವಿವಾಹ ಸಮಾರಂಭವನ್ನು ನೆರವೇರಿಸಿದರು. ನವದಂಪತಿಗಳು ಮಂಗಳ ಸ್ನಾನಮಾಡಿ ಸತಿಪತಿಯರಾಗಿ ಆ ದೇವರ್ಷಿಗೆ ನಮಸ್ಕರಿಸಿದರು. ನಾರದರು ವಧೂವರರನ್ನು ಗುಪ್ತಮಾರ್ಗದಿಂದ ಭೂಲೋಕಕ್ಕೆ ಕರೆತಂದು ಬಿಟ್ಟರು. ಅಮಿತ್ರಜಿತನು ಮಲಯಗಂಧಿನಿಯೊಂದಿಗೆ ಕಾಶೀಪುರವನ್ನು ಪ್ರವೇಶಮಾಡಿದನು. ಕಾಶಿಯ ನಾಗರೀಕರು ಈ ಪುಣ್ಯ ಪುರಿಯನ್ನು ತಳಿರು ತೋರಣಗಳಿಂದ ಅಲಂಕರಿಸಿದ್ದರು. ವಿದ್ಯಾಧರ ಕುಮಾರಿಯಾದ ಮಲಯಗಂಧಿನಿಯು ಕಾಶಿಯ ವೈಭವವನ್ನು ಕಂಡು ತಾನು ನೋಡಿದ ಪಾತಾಳ ಪುರಿಯನ್ನು

ಕನಿಷ್ಠವೆಂದೇ ಭಾವಿಸಿದಳು. ಅಮಿತ್ರಜಿತಮಹಾರಾಜನು ತನ್ನ ಧರ್ಮಪತ್ನಿಯಾದ ಮಲಯಗಂಧಿನಿಯೊಂದಿಗೆ ಕಾಶಿಯಧರ್ಮಪೀಠದ ಸೇವೆಯನ್ನು ಮಾಡಿದನು. ಅದರಿಂದ ತನ್ನ ಮನೋವಾಂಛಿತವಾದ ಸುಖ ಸಂಪದಗಳನ್ನೆಲ್ಲಾ ಪಡೆದನು.

ಒಂದು ದಿನ ಪರಮ ಪತಿವ್ರತೆಯಾದ ಆ ಮಹಾರಾಣಿಯ ಸಂತಾನದ ಇಚ್ಛೆಯಿಂದ ಏಕಾಂತದಲ್ಲಿ ತನ್ನ ವಿಷ್ಣು ಭಕ್ತನಾದ ಪತಿಗೆ ಬಿನ್ನಹ ಮಾಡಿಕೊಂಡಳು. "ಪ್ರಾಣನಾಥ! ತಮ್ಮ ಆಜ್ಞೆಯಾದರೆ ನಾನು ಮನೋರಥ ತೃತೀಯ' ವ್ರತವನ್ನು ಮಾಡಬೇಕು ಎಂದು ಇಚ್ಛಿಸಿದ್ದೇನೆ. ನಮಗೆ ಈ ವರೆಗೂ ಸಂತಾನವಾಗಲಿಲ್ಲ. ಈ 'ಅಭೀಷ್ಟ ತೃತೀಯಾ' ವ್ರತದ ಆಚರಣೆಯಿಂದ ನಮ್ಮ ಅಪೇಕ್ಷೆಯು ಪೂರ್ಣವಾಗುವುದು.

**ರಾಜ:-** ''ದೇವಿ, ಈ ಅಭೀಷ್ಠ ತೃತೀಯಾ ವ್ರತವನ್ನು ಹೇಗೆ ಮಾಡುವುದು? ಅದರಲ್ಲಿ ಯಾವ ದೇವತೆ ಪೂಜಿಸಲ್ಪಡುವುದು? ಅದರ ವಿಧಾನ ಏನು? ಫಲ ಏನು?

**''ನಾರಿ ಪತ್ಯನನುಜ್ಞಾತಾ ಯಾ ವ್ರತಾದಿ ಸಮಾಚರೇತ್**
**ಜೀವಂತಿ ದುಃಖಿನೀ ಸಾಸ್ಯಾನ್ ಮೃತಾ ನಿರಯಮ್ಯಚ್ಛತಿ''**

ಯಾವ ಮಹಿಳೆಯೂ ಪತಿಯ ಅಪ್ಪಣೆಯಿಲ್ಲದೇ ವ್ರತ ಮುಂತಾದವುಗಳನ್ನು ಆಚರಿಸುವವಳೋ ಅವಳು ಬದುಕಿ ಇರುವವರೆಗೂ ದುಃಖದಿಂದಿರುತ್ತಾಳೆ ಮೃತಳಾದ ಬಳಿಕ ನರಕ ಪ್ರಾಪ್ತವಾಗುವುದು.

## ವೀರೇಶ್ವರನ ಜನ್ಮ ವೀರೇಶ್ವರ ಲಿಂಗದ ಪ್ರಾದುರ್ಭಾವ

**ಮಹಾರಾಣಿ:-** ಪೃಥ್ವೀನಾಥ, ಪೂರ್ವಕಾಲದಲ್ಲಿ ಕುಬೇರನ ಪತ್ನಿಯಾದ ಶ್ರೀಮುಖಿಯು ಪುತ್ರನನ್ನು ಪಡೆಯಲು ಅಪೇಕ್ಷಿಸಿದಳು. ಅವಳಿಗೆ ನಾರದರು ಈ ಅಭೀಷ್ಟ ತೃತೀಯ ವ್ರತದ ವಿಧಾನವನ್ನು ಹೇಳಿದರು. ಶ್ರೀಮುಖಿ ದೇವಿಯು ಈ ವ್ರತವನ್ನು ಅನೂಚಾನವಾಗಿ ಮಾಡಿ ನಲಕೂಬರ ಎಂಬ ಗಂಡು ಮಗನನ್ನು ಪಡೆದಳು.

ಮಾರ್ಗಶೀರ್ಷ ಮಾಸದ ಶುಕ್ಲ ಪಕ್ಷ ತೃತೀಯಾ ದಿನ ಒಂದು ಕಲಶದ ಮೇಲೆ ಅಕ್ಕಿ ತುಂಬಿದ ತಾಮ್ರದ ಪಾತ್ರೆಯನ್ನು ಇಡಬೇಕು. ಅದರ ಮೇಲೆ ಹಳದಿ ಬಣ್ಣದ ಒಂದು ಹೊಸ ವಸ್ತ್ರವನ್ನು ಹೊದಿಸಬೇಕು. ಆ ವಸ್ತ್ರದ ಮೇಲೆ ಅಂದೇ ಅರಳಿದ ಒಂದು ಸುಂದರವಾದ ಹೊಂದಾರೆವಯ ಹೂವನ್ನು ತಂದು ಇರಿಸಬೇಕು. ಅದರ ಮಧ್ಯಭಾಗದಲ್ಲಿ ಸರಸ್ವತಿಯ ಒಂದು ಬಂಗಾರದ ಮೂರ್ತಿಯನ್ನು ಸ್ಥಾಪನೆಮಾಡಿ ರತ್ನ ಮತ್ತು ರೇಷಿಮೆ ವಸ್ತ್ರಗಳಿಂದ ಭಕ್ತಿಯಿಂದ ಪೂಜಿಸಬೇಕು. ಪೂಜೆಯಲ್ಲಿ ಬಗೆ ಬಗೆಯ ಸುಂದರವಾದ ಪುಷ್ಪ, ಕಿತ್ತಳೆ, ಹಣ್ಣು, ಚಂದನ ಮೊದಲಾದ ಸುಗಂಧಿ ಪದಾರ್ಥ, ಕರ್ಪೂರ, ಕಸ್ತೂರಿ, ಬಗೆ ಬಗೆಯ ಪಕ್ವಾನ್ನದ ನೈವೇದ್ಯ, ಧೂಪ, ದೀಪ ಮುಂತಾದವುಗಳನ್ನು ಉಪಯೋಗಿಸಿ ಭಕ್ತಿಯಿಂದ ವಿಧಿಪೂರ್ವಕವಾಗಿ ಅರ್ಚನೆಮಾಡಬೇಕು. ಒಂದು ರಾತ್ರಿ ಜಾಗರಣೆಯನ್ನು ಮಾಡಬೇಕು. ವೇದಮಂತ್ರಗಳನ್ನು ಚೆನ್ನಾಗಿ ಬಲ್ಲ ಬ್ರಾಹ್ಮಣನಿಂದ ಅಗ್ನಿ ಸ್ಥಾಪನೆಯನ್ನು ಮಾಡಿಸಿ ಜಾತವೇದಸೆ ಇತ್ಯಾದಿ ಮಂತ್ರಗಳಿಂದ ತುಪ್ಪ ಹಾಗೂ ಜೇನಿನಲ್ಲಿ ಅದ್ದಿದ ಸಾವಿರ ಕಮಲ ಪುಷ್ಪಗಳನ್ನು ಆಹುತಿ ನೀಡಬೇಕು. ಗೋವನ್ನು ಆಚಾರ್ಯರಿಗೆ ದಾನವನ್ನು ಕೊಡಬೇಕು. ಪತಿಪತ್ನಿಯರಿಬ್ಬರೂ ನೂತನ ವಸ್ತ್ರ ಹಾಗೂ ವಸ್ತು ವಡವೆ ಧರಿಸಿ ಭಕ್ತಿಯಿಂದ ಉಪವಾಸಮಾಡಿ ಮರುದಿನ ಚತುರ್ಥಿಯಂದು ಪ್ರಾತಃಕಾಲದ ಸ್ನಾನಮಾಡಿದ ನಂತರ ಆಚಾರ್ಯ ಪೂಜೆಯನ್ನು ಮಾಡಬೇಕು. ಅವರಿಗೂ ವಸ್ತ್ರ, ಭೂಷಣ ಮಾಲೆ ಮುಂತಾದವುಗಳನ್ನು ಕೊಡಬೇಕು.

**ನಮೋ ವಿಶ್ವವಿಧಾನದೆ ವೀವಿವಿಧಕಾರಿಣೆ।**
**ಸುತಂ ವಂಶಕರಂ ದೇಹಿ ತುಷ್ಟಾS ಮುಷ್ಮಾತ್ ಶುಭವ್ರತಾಜ್ಞೆ॥**

ಸಂಪೂರ್ಣ ವಿಶ್ವದ ವಿಧಾನವನ್ನು ತಿಳಿದು ಬಗೆ ಬಗೆಯ ಸೃಷ್ಟಿಯನ್ನು ಮಾಡುವ ಮಹಾದೇವಿ ನಿನಗೆ ನಮ್ಮ ನಮಸ್ಕಾರ ಈ ಶುಭ ವ್ರತದ ಅನುಷ್ಠಾನದಿಂದ ನೀನು ಪ್ರಸನ್ನಳಾಗಿ ನನ್ನ ವಂಶ ವೃದ್ಧಿ ಮಾಡುವ ಗಂಡು ಮಕ್ಕಳನ್ನು ಕರುಣಿಸು.

ಈ ಮಂತ್ರೋಪಚರಣೆ ಮಾಡಿ ಸುವರ್ಣದ ಪ್ರತಿಮೆಯನ್ನು ಆಚಾರ್ಯರಿಗೆ ನೀಡಿ, ಬ್ರಾಹ್ಮಣ ಭೋಜನವೇರ್ಪಡಿಸಿ ನಂತರ ತಾನು ಈ ವ್ರತವನ್ನು ನಾನು ನಿಮ್ಮ ಅಪ್ಪಣೆಯಿಂದ ನಿಮ್ಮ ಜೊತೆಗೇಮಾಡಬೇಕೆಂದು ಬಯಸಿದ್ದೇನೆ ಈ ನನ್ನ ಕಾರ್ಯವನ್ನು ತಾವು ಸಂಪನ್ನವಾಗುವಂತೆ ಮಾಡಬೇಕು.

**ಸ್ಕಂದ:-** ಅಗಸ್ತ್ಯ, ಧರ್ಮಪತ್ನಿಯ ಮಾತನ್ನು ಕೇಳಿ ರಾಜಶ್ರೇಷ್ಠನಾದ ಅಮಿತ್ರಜಿತನು ಪ್ರಸನ್ನ ಮನಸ್ಸಿನಿಂದ ತನ್ನ ಮಡದಿಯೊಂದಿಗೆ ಈ 'ಅಭೀಷ್ಟ ತೃತಿಯಾ' ವ್ರತವನ್ನು ಭಕ್ತಿಯಿಂದಾಚರಿಸಿದನು. ವ್ರತಾನುಷ್ಠಾನಾದ ಪ್ರಭಾವದಿಂದ ರಾಣಿಯು ಗರ್ಭದರಿಸಿದಳು. ಗರ್ಭಾವಸ್ಥೆಯಲ್ಲಿ ಮಹಾರಾಣಿಯು ಪಾರ್ವತೀದೇವಿಗೆ ಪ್ರಾರ್ಥನೆ ಮಾಡಿಕೊಂಡಳು- ''ಜಗದಾಂಬೆ, ನನಗೆ ಸಾಕ್ಷಾತ್ ವಿಷ್ಣುವಿನ ಅಂಶದಿಂದ ಉತ್ಪನ್ನನಾಗುವ ಒಬ್ಬ ಮಗನನ್ನು ಕರುಣಿಸು. ಅವನು ಹುಟ್ಟಿದ ಕೂಡಲೇ ಸ್ವರ್ಗ ಲೋಕಕ್ಕೆ ಹೊರಟು ಮತ್ತೆ. ಮರಳಿ ಬರಲಿ. ಅವನು ನನ್ನ ವಕ್ಷಸ್ಥಳದ ಹಾಲನ್ನು ಕುಡಿಯದೇ ಒಂದು ಕ್ಷಣದಲ್ಲಿ ಹದಿನಾರು ವರ್ಷದ ಅವಸ್ಥೆಯ ಕಿಶೋರನಂತಾಗಲಿ.'' ಮಹಾರಾಣಿಯ ಭಕ್ತಿಯುಕ್ತವಾದ ಈ ಪ್ರಾರ್ಥನೆಗೆ ಸಂತುಷ್ಟಳಾದ ಗೌರೀದೇವಿಯು ''ತಥಾಸ್ತು'' ಎಂದಳು.

ಅನಂತರ ನವಮಾಸ ತುಂಬಿದ ಬಳಿಕ ಮಹಾರಾಣಿಯು ಮೂಲಾ ನಕ್ಷತ್ರದಲ್ಲಿ ಒಂದು ಗಂಡು ಮಗುವಿಗೆ ಜನ್ಮವಿತ್ತಳು ಆಗ ಕೆಲವು ರಾಜಕುಟುಂಬದ ಹಿತೈಷಿಗಳು ಮಂತ್ರಿಗಳು ನಿವೇದನ ಮಾಡಿಕೊಂಡರು.- ''ದೇವಿ, ಈ ನಿನ್ನ ಪುತ್ರನು ದುಷ್ಟ ನಕ್ಷತ್ರದಲ್ಲಿ ಜನಿಸಿದ್ದಾನೆ. ನಿನ್ನ ಪತಿಯಾದ ಮಹಾರಾಜನ ಜೀವನವು ಸುರಕ್ಷಿತವಾಗಿ ಉಳಿಯಬೇಕು ಎಂದೂ ಹಾಗೂ ನಿನ್ನ ಮಂಗಲ ಸೂತ್ರವು ಕೊನೆಯವರೆಗೂ ಗಟ್ಟಿಯಾಗಿ ಉಳಿಯಬೇಕು ಎಂದೂ ನಿನಗೆ ಬಯಕೆ ಇದ್ದರೆ. ಈ ನಿನ್ನ ಮಗನನ್ನು ನೀನು ತ್ಯಾಗ ಮಾಡು.' ಜ್ಯೋತಿರ್ಮಾರ್ತಂಡರ ಹಾಗೂ ಮಂತ್ರಿ ಮಾನ್ಯರ ಈ ಕೇಳಿ ಬಹಳ ದುಃಖವಾಯಿತು ಆ ಅರಸಿಗೆ. ಮೂಲಾ ನಕ್ಷತ್ರದಲ್ಲಿ ಜನಿಸಿದ ಮಗು ತಂದೆಯ ಜೀವಿತಕ್ಕೆ ಅಪಾಯ ಎಂದು ಅವಳಿಗೂ ತಿಳಿದಿತ್ತು. ತನ್ನ ಪತಿಯ ಪ್ರಾಣಕ್ಕೆ ಗಂಡಾಂತರವನ್ನು ತರಬಹುದಾದ ಆ ಪುತ್ರನನ್ನು ತೊರೆಯುವುದಕ್ಕೂ, ಮನೆಯಲ್ಲಿ ಇಟ್ಟು ಕೊಳ್ಳುವುದಕ್ಕೂ ಧೈರ್ಯವಿಲ್ಲ. ಆ ಗಂಡುಮಗುವಿನ ಸುಂದರವಾದ ಮುಖವನ್ನು ಕಂಡಾಗ ಅವಳಿಗೆ ಅದನ್ನು ಎಂದಿಗೂ ಬಿಟ್ಟುಕೊಡಬಾರದು ಎನಿಸುತ್ತಿತ್ತು. ತನ್ನ ಆ ಕರುಳಿನ ಕುಡಿಯನ್ನು ಮತ್ತೆ ಮತ್ತೆ ಆಯುಷ್ಯದುದ್ದಕ್ಕೂ ಎತ್ತಿ ಮುದ್ದಾಡಬೇಕು ಎಂದು ಅವಳ ತಾಯಿಗರುಳು ಹಂಬಲಿಸುತ್ತಿತ್ತು. ಆದರೆ ಜ್ಯೋತಿಷ್ಯರು ನೀಡಿದ ಎಚ್ಚರಿಕೆ ಹಾಗೂ ತನ್ನ ಪತಿಯ ಪ್ರಾಣಾಪಾಯವನ್ನು ಗಮನಿಸಿ ಅವಳು ಆ ತನ್ನ ಮುದ್ದು ಮಗುವನ್ನು ತೊರೆದು ಬಿಡುವುದು ಎಂದು ನಿರ್ಧರಿಸಿದಳು. ತನ್ನ ವಿಶ್ವಾಸಿಯಾದ ಓರ್ವ ದಾಸಿಯನ್ನು ಕರೆದು ಅವಳು ಹೇಳಿದಳು- ''ದಾಸಿ, ಪಂಚಮುದ್ರ ಮಹಾಪೀಠದಲ್ಲಿ ವಿಕಟಾ ಎಂಬ ಮಾತೃಕೆಯು ಇರುತ್ತಾಳೆ. ಅವಳ ಎದುರು ಈ ಮಗುವನ್ನು ಇಟ್ಟು ನೀನು ಹೀಗೆ ಹೇಳು- ''ದೇವಿ, ಈ ಮಗುವನ್ನು

ಪಾರ್ವತೀ ದೇವಿಯು ನಿಮಗೆ ಒಪ್ಪಿಸಿದ್ದಾಳೆ. ಅದನ್ನು ನಾನು ನಿಮಗೆ ತಂದು ಕೊಡುತ್ತಲಿದ್ದೇನೆ. ಪತಿಗೆ ಹಿತವನ್ನು ಮಾಡಬಯಸುವ ಮಹಾರಾಣಿಯು ಈ ತನ್ನ ಮುದ್ದಮಗುವನ್ನು ನಿಮಗೆ ಒಪ್ಪಿಸಿದ್ದಾಳೆ.''

ಅರಸಿಯ ಅಪ್ಪಣೆಯನ್ನು ಪಡೆದು ಈ ರಾಜದೂತಿಯು, ಆ ಎಳೆಯ ಅರಸು ಕುವರನನ್ನು ಪಂಚಮುದ್ರ ಮಹಾಪೀಠದಲ್ಲಿರುವ ವಿಕಟಾ ಮಾತೃಕೆಗೆ ರಾಣಿಯ ಅಪ್ಪಣೆಯಂತೆ ಒಪ್ಪಿಸಿ ಮನೆಗೆ ಬಂದಳು. ಆಗ ಆ ಪಂಚಮುದ್ರ ಮಹಾಪೀಠದಲ್ಲಿ ಆ ವಿಕಟಾ ಮಾತೃಕೆಯು ಯೋಗಿನಿಯರನ್ನೆಲ್ಲ ಕರೆದು ಹೇಳಿದಳು. ''ಯೋಗಿನಿಯರೇ, ಈ ಬಾಲಕನನ್ನು ನೀವು ಸ್ವರ್ಗಲೋಕದಲ್ಲಿ ಇರುವ ನಮ್ಮ ಮಾತೃಕಾ ಗಣದ ಮುಂದೆ ತೆಗೆದುಕೊಂಡು ಹೋಗಿರಿ. ಅವರು ಆಜ್ಞೆಮಾಡಿದಂತೆ ನಡೆಯಿರಿ. ಸರ್ವಪ್ರಯತ್ನದಿಂದಲೂ ಈ ಮಗುವನ್ನು ಮಾತ್ರ ಚೆನ್ನಾಗಿ ರಕ್ಷಿಸಿರಿ.''

ವಿಕಟಾದೇವಿಯ ಹೇಳಿಕೆಯಂತೆ ಆಕಾಶ ಗಾಮಿನಿಯರಾದ ಯೋಗಿನಿಯರು ಆ ಮುದ್ದು ಮಗುವನ್ನು ಕ್ಷಣಾರ್ಧದಲ್ಲಿ ಬ್ರಾಹ್ಮೀ ಮುಂತಾದ ಸ್ವರ್ಗೀಯ ಮಾತೃಕೆಯರು ಇದ್ದಲ್ಲಿಗೆ ಹೋಗಿ ತಲುಪಿಸಿದರು. ಅಲ್ಲಿ ಇದ್ದ ಬ್ರಾಹ್ಮಾಣಿ, ವೈಷ್ಣವೀ, ರೌದ್ರೀ, ವಾರಾಹೀ, ನಾರಸಿಂಹೀ, ಕೌಮಾರೀ, ಮಾಹೇಂದ್ರೀ, ಚಾಮುಂಡಾ ಮತ್ತು ಚಂಡಿಕಾ ಈ ಒಂಬತ್ತು ಮಾತೃಕೆಯರು ವಿಕಟಾದೇವಿಯು ಕಳಿಸಿದ ಆ ಮಗುವನ್ನು ನೋಡಿ ಒಮ್ಮೆಲೆ ಪ್ರಶ್ನೆಮಾಡಿದರು. ''ವತ್ಸ, ನಿನ್ನ ತಂದೆ ಯಾರು? ಮತ್ತು ನಿನ್ನ ತಾಯಿ ಯಾರು?'' ಆದರೆ ಆ ನವಮಾತೃಕೆಯರ ಈ ಪ್ರಶ್ನೆಗೆ ಮುಗ್ಧ ಮಗುವಾದ ಆ ರಾಜಕುಮಾರನು ಏನು ಉತ್ತರಕೊಡಲಿಲ್ಲ. ಆಗ ಆ ಒಂಬತ್ತು ಜನ ಅಂಬಿಕೆಯರು ಆ ಎಳೆ ಕಂದಮ್ಮನ ಮುಖ ಮಂಡಲವನ್ನು ದೇಹ ಲಕ್ಷಣಗಳನ್ನೂ ಚೆನ್ನಾಗಿ ಪರೀಕ್ಷಿಸಿದರು. ಮತ್ತು ಆ ಕೂಸನ್ನು ಅಲ್ಲಿಯವರೆಗೂ ಕರೆದುಕೊಂಡು ಬಂದ ಯೋಗಿನಿಯರನ್ನು ಕುರಿತು ಹೇಳಿದರು.- ''ಈ ಕುಮಾರನಲ್ಲಿ ಅತ್ಯುತ್ತಮ ಲಕ್ಷಣಗಳು ಕಾಣುತ್ತಿದೆ. ಇವನು ಮುಂದೆ ಚಕ್ರವರ್ತಿ ಸಾಮ್ರಾಟನಾಗಲು ಯೋಗ್ಯನಿರುತ್ತಾನೆ. ನೀವು ಈ ಬಾಲಕನನ್ನು ಕಾಶಿಯ ಪಂಚಮುದ್ರ ಮಹಾಪೀಠಕ್ಕೆ ಕರೆದುಕೊಂಡು ಹೋಗಿರಿ. ಅಲ್ಲಿ ಇರುವ ಮಹಾದೇವಿಯಾದ ಪಂಚಾಮುದ್ರಾ ಅಥವಾ ವಿಕಟಾ ಮಾತೃಕೆಗೆ ಈ ಮಗುವನ್ನು ಒಪ್ಪಿಸಿರಿ. ಈ ಬಾಲಕನು ಆ ಪೀಠದ ಸೇವೆಯನ್ನು ಅಲ್ಲಿ ಮಾಡಲಿ. ಅಲ್ಲಿ ವಿಶ್ವನಾಥನ ಕೃಪೆಯಿಂದ ಈ ಬಾಲಕನು ಒಮ್ಮೆಲೆ ಹದಿನಾರು ವರ್ಷ ವಯಸ್ಸಿನ ಸುಕುಮಾರ ಆಕಾರವನ್ನು ಪಡೆಯುವನು. ಮತ್ತು ಉತ್ತಮ ಸಿದ್ಧಿಯನ್ನು ಹೊಂದುವನು.'' ಹೀಗೆ ಆ ಮಾತೃಕಾ ಗಣದ ಮಹಾದೇವಿಯರ ಆದೇಶ ಆಶೀರ್ವಾದಗಳನ್ನು ಪಡೆದು ಆ ಯೋಗಿನಿಯರು ಆ ಬಾಲಕನನ್ನು ಒಂದು ಕ್ಷಣದಲ್ಲಿ ಮತ್ತೆ ಅದೇ ಕಾಶೀ ಕ್ಷೇತ್ರದ ಪಂಚಮುದ್ರಾಂಕಿತ ಪೀಠಕ್ಕೆ ತಂದು ತಲುಪಿಸಿದರು. ಸ್ವರ್ಗಲೋಕದಿಂದ ಮರಳಿ ಕಾಶಿಯ ಪಂಚಮುದ್ರ ಮಹಾಪೀಠಕ್ಕೆ ಬಂದ ಆ ಹುಡುಗನು ಒಮ್ಮೆಲೆ ಮಾತೃಕಾ ಗಣದ ಆಶೀರ್ವಾದದಿಂದ ಮತ್ತು ಪಂಚಮುದ್ರಿಕಾ ಪೀಠದ ಸೇವೆಯಿಂದ ಹದಿನಾರು ವರ್ಷ ಪ್ರಾಯದವನಾಗಿ ಬೆಳೆದು ನಿಂತ. ಕಾಶೀಪಟ್ಟಣದಲ್ಲಿ ಅತ್ಯುಗ್ರವಾದ ತಪಸ್ಸನ್ನು ಕೈಕೊಂಡ. ಅವನ ಏಕಾಗ್ರಮನಸ್ಸಿನ ಉಗ್ರತಪಸ್ಸಿನಿಂದ ಪರಿತುಷ್ಟನಾದ ಆ ಭಗವಂತ. ಶಿವಲಿಂಗರೂಪದಿಂದ ಆ ರಾಜಕುಮಾರ ಕಣ್ಣೆದುರು ಪ್ರಕಟನಾಗಿ ಹೇಳಿದ- ''ರಾಜಕುಮಾರ, ನಿನ್ನ ತಪೋನುಷ್ಠಾನದಿಂದ ಪರಮ ಸಂತುಷ್ಟನಾಗಿದ್ದೇನೆ ನೀನು ಬೇಡಿದ ವರಗಳನ್ನು ನೀಡುತ್ತೇನೆ. ಅಪೇಕ್ಷಿತವಾದುದನ್ನು ಕೇಳು.''

ಆಗ ಸಪ್ತಪಾತಾಳಗಳನ್ನು ಭೇದಿಸಿಕೊಂಡು ತನ್ನ ಕಣ್ಣೆದುರು ಪ್ರಕಟವಾದ ಆ ಜ್ಯೋತಿರ್ಮಯ ಲಿಂಗವನ್ನು ನೋಡಿ ದೀರ್ಘದಂಡ ಪ್ರಣಾಮವನ್ನು ಸಲ್ಲಿಸಿದ ಆ ಅರಸುಕುಮಾರ. ವೇದಸೂಕ್ತದಿಂದ ಆ ಮಹಾರುದ್ರ ದೇವರನ್ನು ಸ್ತೋತ್ರಮಾಡಿ ನುಡಿದ- 'ಸರ್ವದೇವೋತ್ತಮನಾದ ಮಹಾದೇವ, ನಿನಗೆ ವಂದನೆ. ನಿನ್ನ ದರ್ಶನದಿಂದ ನಾನು ಧನ್ಯ. ನನ್ನ ಮೇಲೆ ಕೃಪೆ ಮಾಡಿ ನೀನು ಈ ಶಿವಲಿಂಗದಲ್ಲಿ ಸಂಸ್ಥಿತನಾಗು. ಭಕ್ತರ ಮನೋರಥಗಳನ್ನು ಪೂರ್ಣಮಾಡು. ಇಲ್ಲಿಗೆ ಬಂದು ನಿನ್ನ ದರ್ಶನ, ಪಾದಸ್ಪರ್ಶ, ಪ್ರದಕ್ಷಿಣ ನಮಸ್ಕಾರ, ಪೂಜೆ ಸೇವೆಗಳನ್ನು ಭಕ್ತಿಯಿಂದ ಸಲ್ಲಿಸುವವರಿಗೆ ಉತ್ತಮ ಸಿದ್ಧಿ ಸಮೃದ್ಧಿಗಳನ್ನು ನೀಡು. ಆ ಭಕ್ತ ಬಾಲಕನು ಕೇಳಿದ ವರಗಳಿಗೆಲ್ಲ ಅಸ್ತು ಹೇಳಿದ. ಆ ಗೌರೀಪತಿ ''ರಾಜಪುತ್ರ, ನಿನ್ನ ಅಪೇಕ್ಷೆಗಳೆಲ್ಲ ಪೂರ್ಣವಾಗಲಿ. ವಿಷ್ಣುಭಕ್ತನಾಗು ಅಮಿತ್ರಜಿತ ಮಹಾರಾಜನು ನಿನ್ನ ತಂದೆ. ನೀನು ವೀರ ಎಂದು ಪ್ರಸಿದ್ಧಿಯಾಗುವೆ. ಸಾಕ್ಷಾತ್ ವಿಷ್ಣುವಿನ ಅಂಶದಿಂದ ಉತ್ಪನ್ನನಾಗಿರುವುದರಿಂದ ಪಂಚಮುದ್ರಾಪೀಠದ ವಿಕಟಾ ಮಹಾದೇವಿಯು ಹಾಗೂ ನವಮಾತೃಕೆಯರ ಅನುಗ್ರಹಕ್ಕೆ ಪಾತ್ರನಾಗಿರುವಿ. ಈ ಶಿವಲಿಂಗವು ನಿನ್ನ ಹೆಸರಿನ ಮೇಲಿಂದ 'ವೀರೇಶ್ವರ' ಎಂದು ಕರೆಯಲ್ಪಡುವುದು. ನಾನು ಇಂದಿನಿಂದ ನಿನ್ನ ಅಪೇಕ್ಷೆಯಂತೆ ಈ ಶಿವಲಿಂಗದಲ್ಲಿಯೇ ಇದ್ದು ಭಕ್ತರ ಮನೋರಥಗಳನ್ನೆಲ್ಲ ಪೂರ್ಣಮಾಡುತ್ತೇನೆ. ಈ ವೀರೇಶ್ವರ ಲಿಂಗವು ಆರಾಧಕರಿಗೆ ಸಕಲವಿಧವಾದ ಸಂಪತ್ತನ್ನು ನೀಡುವುದು. ಈ ಲಿಂಗದ ಸೇವೆಮಾಡುವವರಿಗೆ ಬದುಕಿ ಇದ್ದಾಗಲೇ ತಾರಕ ಜ್ಞಾನ ಆಗುವುದು. ಆದುದರಿಂದ ಬದುಕಿ ಇದ್ದ ಪುರುಷರು ಈ ವೀರೇಶ್ವರ ಲಿಂಗದ ಸೇವೆಯನ್ನು ಅವಶ್ಯವಾಗಿ ಮಾಡಬೇಕು.''

ಹೀಗೆ ಹೇಳಿ ಪರಮೇಶ್ವರನು ಅದೇ ಲಿಂಗದಲ್ಲಿ ಲೀನನಾದನು. ಅನಂತರ ಪರಮೇಶ್ವರನ ಪರಮಾನುಗ್ರಹವನ್ನು ಪಡೆದ ಆ ವೀರ ಕುಮಾರನನ್ನು ಪಂಚಮುದ್ರ ಮಹಾಪೀಠದ ಮಾತೃಕೆಯಾದ ವಿಕಟಾದೇವಿಯು ಕರೆತಂದು ಅಮಿತ್ರಜಿತ ಹಾಗೂ ಮಲಯಗಂಧಿನಿ ರಾಜದಂಪತಿಗಳಿಗೆ ಹೇಳಿದಳು.- ''ಇವನೇ ನಿಮ್ಮ ಔರಸ ಪುತ್ರನಾದ ವೀರ ಹೆಸರಿನ ರಾಜಕುಮಾರ. ಇವನನ್ನು ಮೂಲಾನಕ್ಷತ್ರದಲ್ಲಿ ಜನಿಸಿದ್ದರಿಂದ ಜ್ಯೋತಿಷ್ಯರು ಹಾಗೂ ಮಂತ್ರಿಮಾನ್ಯರ ಸಲಹೆಯಮೇಲೆ ನೀವು ಇವನನ್ನು ಪರಿತ್ಯಾಗಮಾಡಿ ನಮ್ಮ ಪಂಚಮುದ್ರ ಪೀಠಕ್ಕೆ ತಂದು ಒಪ್ಪಿಸಿದ್ದೀರಿ. ಇವನನ್ನು ನಾನು ಯೋಗಿನಿಯರ ಮುಖಾಂತರ ಸ್ವರ್ಗಲೋಕದಲ್ಲಿ ಇರುವ ಬ್ರಾಹ್ಮೀ ಮೊದಲಾದ ಮಾತೃಕೆಯರ ಬಳಿ ಕಳಿಸಿ ಕೊಟ್ಟಿದ್ದೆನು. ಅವರು ಈ ನಿಮ್ಮ ಕುಮಾರನಿಗೆ ಆಶೀರ್ವಾದದ ರಕ್ಷಾಕವಚವನ್ನು ಹೊದಿಸಿ ಕಳಿಸಿದರು. ಅವನು ಮರಳಿ ಇಲ್ಲಿ ಕಾಶಿಗೆ ಬಂದು ವಿಶ್ವನಾಥನ ಸೇವೆಮಾಡಿ ಒಮ್ಮೆಲೇ ಹದಿನಾರು ವರ್ಷದ ಪ್ರಾಯದವನಾಗಿ ಶಿವಪ್ರಸಾದದಿಂದ ಶಕ್ತಿ ಸಾಮರ್ಥ್ಯಗಳನ್ನು ಪಡೆದು ವೀರ ಎಂದು ಹೆಸರಾಗಿದ್ದಾನೆ. ಶಿವ ಪೂರ್ಣಾನುಗ್ರಹದ ಬೆಂಬಲವು ಇವನಿಗೆ ಯಾವಾಗಲೂ ರಾಮರಕ್ಷೆಯಾಗಿ ಕಾಪಾಡುತ್ತಲಿದೆ. ಇವನು ಸ್ವರ್ಗಲೋಕಕ್ಕೆ ಹೋಗಿ ನವಮಾತೃಕೆಯರ ಅನುಗ್ರಹ ಹೊಂದಿ ಹೊಸ ಹುಟ್ಟು ಪಡೆದು ಮತ್ತೆ ಇಲ್ಲಿಗೆ ಬಂದಿದ್ದಾನೆ. ಈಗ ಇವನಿಗೆ ಮೂಲ ನಕ್ಷತ್ರದ ದೋಷವೆಲ್ಲ ಅಳಿದು ಹೋಗಿದೆ. ಇವನಿಂದ ಮುಂದೆ ತಂದೆಯ ಜೀವಕ್ಕೆ ಯಾವುದೇ ಅಪಾಯ ಇರುವುದಿಲ್ಲ. ಈ ನಿಮ್ಮ ಮಗುವನ್ನು ಸ್ವೀಕರಿಸಿರಿ.

ಆ ತನ್ನ ಮುದ್ದು ಮಗುವನ್ನು ಪ್ರಸೂತಿ ಗೃಹದಿಂದ ನಿರ್ವಾಹವಿಲ್ಲದೇ ಕೊಟ್ಟು ಕಳಿಸಿದ ಮಹಾರಾಣಿಯು ಅದೇ ದುಃಖದಲ್ಲಿ ಕುದಿಯುತ್ತಿದ್ದಳು. ಆ ತನ್ನ ಕರುಳಿನ ಕುಡಿ

ಮಹಾದೇವನ ಅನುಗ್ರಹ ಮತ್ತು ಮಾತೃಕೆಯರ ಆಶೀರ್ವಾದದಿಂದ ಕೆಲವೇ ದಿನಗಳಲ್ಲಿ ತಾನು ಗೌರೀ ದೇವಿಯಲ್ಲಿ ಮಾಡಿಕೊಂಡ ಬಿನ್ನಹದ ಮೇರೆಗೆ ಹದಿನಾರು ವರ್ಷ ಪ್ರಾಯದ ಸುಂದರ ಸುಕುಮಾರನಾಗಿ ಸುರಕ್ಷಿತನಾಗಿ ಮನೆಗೆ ಬಂದಿದ್ದನ್ನು ನೋಡಿ ಪರಮಾನಂದವಾಯಿತು. ತಾನು ಈ ಕೂಸಿನ ಗರ್ಭಾವಸ್ಥೆಯಲ್ಲಿಯೇ ಪಾರ್ವತೀದೇವಿಯಲ್ಲಿ ಸಲ್ಲಿಸಿದ ಪ್ರಾರ್ಥನೆಯೆಲ್ಲವೂ ಇಂದವಳಿಗೆ ಸಾರ್ಥಕವಾಯಿತು ಎನಿಸಿತು. ಕೂಡಲೇ ಅವಳು ತಾನು ಗರ್ಭಿಣಿಯಾಗಿದ್ದಾಗ ಪಾರ್ವತಿಗೆ ಸಲ್ಲಿಸಿದ ಪ್ರಾರ್ಥನೆ ಅನಂತರದಲ್ಲಿ ಮಗುವಿನ ಮೂಲಾನಕ್ಷತ್ರದಲ್ಲಿ ಜನನ. ಆ ಬಳಿಕ ಆ ಮಗುವನ್ನು ತ್ಯಾಗಮಾಡಬೇಕೆಂದು ಮಂತ್ರಿಗಳ ಸೂಚನೆ. ಬಳಿಕ ತಾನು ತನಗೆ ಜನಿಸಿದ ಆ ಮಗುವನ್ನು ಪಂಚಮುದ್ರ ಪೀಠದ ವಿಕಟಾ ದೇವಿಗೆ ಕಳುಸಿದ್ದನ್ನೂ ವಿಕಟಾದೇವಿಯು ತಾನು ಗರ್ಭಿಣಿಯಾಗಿದ್ದಾಗ ಪಾರ್ವತಿಯನ್ನು ಬೇಡಿಕೊಂಡ ಪ್ರಕಾರ ಆ ಮಗುವನ್ನು ಸ್ವರ್ಗಲೋಕಕ್ಕೆ ಕಳಿಸಿ ನವಮಾತೃಕೆಯರ ಆಶೀರ್ವಾದವನ್ನು ಲಭಿಸುವಂತೆಮಾಡಿ ಮರಳಿ ಕಾಶಿಗೆ ತರಿಸಿದ್ದನ್ನು ಕಾಶಿಯಲ್ಲಿ ಆ ಮಗು ಶಿವನ ಹಾಗೂ ಪಾರ್ವತಿಯ ಅನುಗ್ರಹದಿಂದ ಒಮ್ಮೆಲೇ ಹದಿನಾರು ವರ್ಷದವನಾಗಿ ಬೆಳೆದದ್ದನ್ನು, ಅನಂತರ ಅವನಿಗೆ ಆದ ಶಿವ ಸಾಕ್ಷಾತ್ಕಾರವನ್ನೂ, ಇವನ ಹೆಸರಿನಿಂದ ಆದ ವೀರೇಶ್ವರ ಲಿಂಗದ ಪ್ರತಿಷ್ಠಾಪನೆಯನ್ನೂ ಆ ತಮ್ಮ ಮಗುವನ್ನು ವಿಕಟಾ ದೇವಿಯು ಮತ್ತೆ ಈಗ ತಮಗೆ ತಂದು ಒಪ್ಪಿಸುವುದನ್ನೂ, ಸಾದ್ಯಂತವಾಗಿ ಎಲ್ಲ ವಿವರಗಳೊಂದಿಗೆ ತಿಳಿಸಿ ಹೇಳಿದಳು. ಇದನ್ನೆಲ್ಲ ಕೇಳಿ ತಿಳಿದ ಅಮಿತ್ರಜಿತ ಮಹಾರಾಜನು ಎದ್ದು ಬಂದು ಆ ತನ್ನ ಮುದ್ದ ಮಗನನ್ನು ಬಿಗಿದಪ್ಪಿ ಮುದ್ದಾಡಿದನು.

ಮಲಯಗಂಧಿನಿಯೂ ಆ ತನ್ನ ವೀರಕುಮಾರರನ್ನು ಮೈದಡವಿ ನೆತ್ತಿ ಮೂಸಿ ಚಿರಂಜೀವಿಯಾಗು ಮಗನೇ ಎಂದು ಹೃದಯತುಂಬಿ ಹರಸಿದಳು. ಅಮಿತ್ರಜಿತ ಮಹಾರಾಜನು ಪ್ರಬುದ್ಧನಾದ ಆ ತನ್ನ ಮಗನಿಗೆ ತನ್ನ ಸಾಮ್ರಾಜ್ಯದ ಉತ್ತರಾಧಿಕಾರವನ್ನು ಒಪ್ಪಿಸಿ, ತನ್ನ ಧರ್ಮಪತ್ನಿ ಮಲಯಗಂಧಿನಿಯೊಂದಿಗೆ ಆ ಅವಿಮುಕ್ತ ಕ್ಷೇತ್ರದಲ್ಲಿ ಮಹಾವಿಷ್ಣುವನ್ನು ಕುರಿತು ತಪೋನುಷ್ಠಾನ ತತ್ಪರನಾದನು. ಅವನ ಮಗನಾದ ವೀರಕುಮಾರನು ಸಮ್ರಾಟನಾಗಿ ರಾಜ್ಯ ಶಾಸನವನ್ನು ನ್ಯಾಯ ನೀತಿ ಧರ್ಮಗಳಿಂದ ಪಾಲಿಸುತ್ತ ವೀರೇಶ್ವರನ ಆರಾಧನೆಯನ್ನು ಯಾವ ಜನ್ಮ ಎಡೆಬಿಡದೇ ನಡೆಸಿದನು. ಆ ವೀರೇಶ್ವರನ ನಿರಂತರ ಸೇವೆಯಿಂದ ಅವನು ಇಹ ಲೋಕದಲ್ಲಿ ಸಕಲ ವಿಧವಾದ ಸಂತಾನ ಸೌಭಾಗ್ಯ, ಅಧಿಕಾರ, ವೈಭವ, ಸಮೃದ್ಧಿ, ಸಿದ್ಧಿಗಳನ್ನು ಪಡೆದು ಕೊನೆಗೆ ಸದ್ಗತಿಯನ್ನು ಹೊಂದಿದನು.

ಈ ವೀರೇಶ್ವರನ ತೀರ್ಥದಲ್ಲಿ ಸ್ನಾನ, ವಿಶೇಷವಾಗಿ ಚತುರ್ದಶಿ ತಿಥಿಯಂದು ವೀರೇಶ್ವರನ ಪೂಜೆ ಹಾಗೂ ರಾತ್ರಿಕಾಲದಲ್ಲಿ ಜಾಗರಣ ಮತ್ತು ವಿರೇಶ್ವರ ಲಿಂಗದ ಪ್ರಾರ್ಥನೆ ಮಾಡಿದರೆ ಮನುಷ್ಯನ ಪುನರ್ಜನ್ಮವನ್ನು ಹೊಂದುವುದಿಲ್ಲ.

## ದೂರ್ವಾಸೇಶ್ವರ ಲಿಂಗದ ಮಹಿಮೆ

**ಸ್ಕಂದ:-** ಹಿಂದೆ ಒಂದಾನೊಂದು ಕಾಲದಲ್ಲಿ ಮಹಾತಪಸ್ವಿಗಳಾದ ದೂರ್ವಾಸ ಋಷಿಗಳು ಪರಮೇಶ್ವರನ ನಿವಾಸಭೂತವಾದ ಈ ಆನಂದವನಕ್ಕೆ (ಕಾಶಿಗೆ) ಬಂದರು. ಇಲ್ಲಿ ಬಗೆ ಬಗೆಯ ಶಂಕರನ ಕ್ರೀಡಾಸ್ಥಾನವಾದ ಶಿವಮಂದಿರಗಳು, ಅನೇಕ ತೀರ್ಥಗಳು, ಪುಷ್ಕರಿಣಿಗಳು ಹಾಗೂ ವರಣಾ, ಅಸಿ, ಗಂಗಾ, ಪಂಚ ಗಂಗಾ ಮುಂತಾದ ತುಂಗ ತರಳ ತರಂಗ ಮಾಲೆಗಳಿಂದ ಹೃದಯಂಗಮವಾಗಿ ಕಾಣುವ ನದಿಗಳು, ಅಲ್ಲಲ್ಲಿ ಕಂಗೊಳಿಸುವ

ತಿಳಿನೀರಿನ ಹೊಂಡ ಹೊಕ್ಕರಿಣಿಗಳು, ಮಹರ್ಷಿ ದೂರ್ವಾಸರ ಮನಸ್ಸಿಗೆ ಅತ್ಯಂತ ಪ್ರಸನ್ನತೆಯನ್ನು ಪ್ರಸನ್ನತೆಯನ್ನುಂಟು ಮಾಡಿದವು. ಕಾಶೀನಗರದಲ್ಲಿ ನೋಡಿದಲ್ಲೆಲ್ಲ ಅಂಗಾಂಗಗಳಿಗೆ ವಿಭೂತಿ ಬಳಿದುಕೊಂಡು ಮಸ್ತಕದಲ್ಲಿ ಜಟಾಜೂಟ ಮಂಡಿತರಾದ, ಕೌಪೀನ ಮಾತ್ರ ಧರಿಸಿದ ಅನೇಕ ಸಾಧುಸತ್ಪುರುಷರು ಮಹಾದೇವರ ನಾಮಗರ್ಜನೆ ಮಾಡುತ್ತ ತಿರುಗಾಡುವುದನ್ನು ಕಂಡು ಅವರ ಹೃದಯಕ್ಕೆ ಅತ್ಯಂತ ಹಿಗ್ಗು ಆಯಿತು. ಅಲ್ಲಲ್ಲಿ ಅಸಂಗ, ಅಪರಿಗ್ರಹ, ಅನಿಕೇತನರಾದ ತ್ರಿದಂಡಿ ಸನ್ಯಾಸಿಗಳು ಹಿಂಡು ಹಿಂಡಾಗಿ ವಿಶ್ವನಾಥನ ದರ್ಶನಕ್ಕಾಗಿ ಮಂದಿರದ ಮುಂದೆ ಕಾದುಕೊಂಡು ನಿಂತದ್ದನ್ನು ಕಂಡು ಅವರಿಗೆ ಒಳ್ಳೇ ಕೌತುಕ ಎನಿಸಿತು. ಕಾಶೀಕ್ಷೇತ್ರದ ಈ ಎಲ್ಲ ಆಧ್ಯಾತ್ಮಿಕ ವೈಭವವನ್ನು ಕಂಡು ಸಂತುಷ್ಟ ಚಿತ್ತರಾದ ದುರ್ವಾಸರು ತಮ್ಮ ಮನಸ್ಸಿನಲ್ಲಿಯೇ ಹೀಗೆ ಅಂದುಕೊಂಡರು- ''ಈ ಕಾಶಿಯು ಪರಮಕಲ್ಯಾಣದ ಕೇಂದ್ರ ಸ್ವರ್ಗಲೋಕದಲ್ಲಿಯೂ ಇಂಥ ಆಧ್ಯಾತ್ಮಿಕ ದೃಶ್ಯ ನೋಡಲು ದೊರೆಯದು. ಪಶುಪಕ್ಷಿಗಳಿಗೂ ಕೂಡ ಈ ಕಾಶಿಯನ್ನು ಕಂಡರೆ ಏನೋ ಒಂದು ಬಗೆಯ ಸಂತಸ. ಈ ವಿಶ್ವನಾಥ ನಗರವು ನನ್ನನ್ನು ಆಕರ್ಷಿಸಿದಷ್ಟು ಈ ಭೂಮಂಡಲದಲ್ಲಿ ಯಾವ ಪುರಗ್ರಾಮಗಳೂ, ತೀರ್ಥಕ್ಷೇತ್ರಗಳೂ ನನ್ನ ಮನಸ್ಸಿಗೆ ಹಿಡಿಸಿಲ್ಲ'' ಹೀಗೆ ತಮ್ಮ ಮನಸ್ಸಿನಲ್ಲಿಯೇ ಈ ವಾರಣಾಸಿ ಕ್ಷೇತ್ರವನ್ನು ಹೊಗಳಿ ಕೊಂಡಾಡುತ್ತ ದುರ್ವಾಸ ಮುನಿಗಳು ಕೈಕೊಂಡಳು ಉಗ್ರತಪಸ್ಸನ್ನು ಆ ಕಾಶಿಪಟ್ಟಣದಲ್ಲಿ. ಬಹುದೀರ್ಘ ಕಾಲದವರೆಗೆ ನಡೆಯಿತು ಆ ದೂರ್ವಾಸರ ತಪಸ್ಸು. ಆದರೆ ಫಲ ಮಾತ್ರ ಶೂನ್ಯ. ಅವರ ತಪಸ್ಸಿಗೆ ಯಾವ ದೇವರೂ ಮೆಚ್ಚಲಿಲ್ಲ. ಆ ಭಗವಂತನೂ ಸಾಕ್ಷಾತ್ಕಾರ ಗೋಚರವಾಗಲಿಲ್ಲ. ಮೊದಲೇ ಚಂಡಕೋಪರಾದ ಆ ಮುನೀಶ್ವರನಿಗೆ ಬ್ರಹ್ಮಾಂಡ ಕೋಪ ಬಂದಿತು ಆ ಕಾಶಿಯ ಮೇಲೆ ಕೂಡಲೇ ಅವರು ತಮ್ಮಷ್ಟಕ್ಕೆ ತಾವೇ ನುಡಿದರು- ''ಧಿಕ್ಕಾರವಿರಲಿ ನನಗೆ ನನ್ನ ಈ ಕಠೋರ ತಪಸ್ಸಿಗೂ ಧಿಕ್ಕಾರ. ನನ್ನಂಥ ಅನೇಕ ಸಾಧುಬೈರಾಗಿಗಳನ್ನು ಮೋಸ ಮಾಡುವ ಈ ಕಾಶೀಕ್ಷೇತ್ರಕ್ಕೆ ಮೊದಲು ಧಿಕ್ಕಾರ. ಉಳಿದ ಕ್ಷೇತ್ರದಲ್ಲಿ ನಾನು ತಪಸ್ಸು ಮಾಡಿದಾಗಲೆಲ್ಲ ಕೆಲವೇ ಸಮಯದಲ್ಲಿ ಸಿದ್ಧಿ ನನ್ನ ಕರಗತವಾಗುತ್ತಿತ್ತು. ದೇವರು ನನ್ನ ದೃಷ್ಟಿಗೆ ಗೋಚರನಾಗುತ್ತಿದ್ದ. ಆದರೆ ಈ ಕಾಶಿಗೆ ಬಂದು ನಾನು ಉಗ್ರ ಎಂಬ ಹೆಸರಿನ ಮಹಾದೇವರನ್ನು ಕುರಿತು ಅವ್ಯಗ್ರ ಮನಸ್ಸಿನಿಂದ ನನ್ನ ಸಮಗ್ರ ಶಕ್ತಿಯನ್ನೆಲ್ಲ ವಿನಿಯೋಗಿಸಿ ಅತ್ಯುಗ್ರ ತಪವನ್ನು ಆಚರಿಸಿದರೂ ಈವರೆಗೂ ಬಂದ ಫಲವೂ ಇಲ್ಲ. ಯಾವ ಸಿದ್ಧಿಯೂ ಇಲ್ಲ. ದೇವರ ಸಾಕ್ಷಾತ್ಕಾರವೂ ಇಲ್ಲ. ಆದ್ದರಿಂದ ಧಿಕ್ಕಾರ ಈ ಕಾಶೀಕ್ಷೇತ್ರಕ್ಕೆ. ಇನ್ನು ಇಲ್ಲಿ ತಪಸ್ಸು ಮಾಡಿದರೆ ಯಾರಿಗೂ ಮೋಕ್ಷ ದೊರಕದೇ ಇರಲಿ. ಎಂದು ಶಾಪ ಕೊಟ್ಟುಬಿಡುತ್ತೇನೆ ಈ ಕಾಶೀನಗರಕ್ಕೆ.'' ಹೀಗೆ ತನ್ನಷ್ಟಕ್ಕೆ ತಾನೇ ನುಡಿದು ಸಿಟ್ಟಿನಿಂದ ಸಿಡಿದು, ಅಭಿಮಂತ್ರಿತವಾದ ಶಾಪಜಲವನ್ನು ಕೈಯಲ್ಲಿ ಹಿಡಿದು ಕಾಶೀಕ್ಷೇತ್ರಕ್ಕೆ ಶಾಪಕೊಡಲು ಸಿದ್ಧನಾದ. ಈ ದೂರ್ವಾಸ ಮುನಿಯನ್ನು ನೋಡಿ ಒಮ್ಮೆಲೆ ಮಹಾದೇವನು ನಗುತ್ತ ಅಟ್ಟಹಾಸಗೈದನು. ಶಿವನ ಆ ಅಟ್ಟಹಾಸದ ನಗೆಯಿಂದಲೇ ತತ್ಕಾಲದಲ್ಲಿ ಒಂದು ಶಿವಲಿಂಗವು ಪ್ರಕಟವಾಯಿತು. ಅದಕ್ಕೆ ಪ್ರಹಸಿತೇಶ್ವರ ಎಂಬ ಹೆಸರು ಬಂದಿತು. ಮುಂಗೋಪಿಯಾದ ಆ ದೂರ್ವಾಸರ ಶಾಪದಿಂದ ಕಾಶೀಪಟ್ಟಣವನ್ನು ಸುಂರಕ್ಷಿಸುವ ಉದ್ದೇಶದಿಂದ ಭಗವಾನ್ ಶಂಕರನು ಕೂಡಲೇ ಪ್ರಕಟನಾದನು. ಮತ್ತು ಅವರಿಗೆ ಹೇಳಿದನು- ''ಮುನಿಪುಂಗವ ನಾನು ಪ್ರಸನ್ನನಾಗಿದ್ದೇನೆ. ಮಹಾಕೋಪಿಷ್ಠನಾದ ನಿನಗೆ ವರವನ್ನು ಕೊಡಬೇಕೆಂದು ಬಂದು ನಿಂತಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳು.''

ಲೋಕಗಳಿಗೆಲ್ಲ ಕ್ಷೇಮಂಕರನಾದ ಆ ಶಂಕರನ ಈ ಕರುಣಾತರಂಗವಾದ ವಚನವನ್ನು ಕೇಳಿ ದೂರ್ವಾಸಮುನಿಗೆ ನಾಚಿಕೆ ಆಯಿತು. ಅವರಿಗೆ ತಮ್ಮ ಕೃತ್ಯಕ್ಕಾಗಿ ಪಶ್ಚಾತ್ತಾಪವಾಗಿ ಅವರು ನುಡಿದರು. ಮೂರು ಲೋಕಗಳಿಗೂ ಅಭಯ ನೀಡುವ ಈ ಕಾಶೀಕ್ಷೇತ್ರಕ್ಕೆ ಶಾಪಕೊಡಲು ಹೊರಟ ನನಗೆ ಧಿಕ್ಕಾರವಿರಲಿ. ಈ ಮುಕ್ತಿಕ್ಷೇತ್ರವನ್ನು ಸ್ತೋತ್ರ ಮಾಡುವವನು, ಈ ಕಾಶಿಯನ್ನು ಹೃದಯದಲ್ಲಿ ನೆನೆಯುವವನು ಮಹಾತಪಸ್ಸನ್ನು ಮಾಡಿದಂತೆ. ಒಂದು ನೂರು ಯಜ್ಞಗಳನ್ನು ಆಚರಿಸಿದಂತೆ ಕಾಶೀ ಎಂಬ ಎರಡು ಅಕ್ಷರಗಳು ಯಾರ ನಾಲಿಗೆಯ ಮೇಲೆ ನಲಿದಾಡುವವೋ ಆ ಪುರುಷನು ಮತ್ತೊಮ್ಮೆ ಮಾತೆಯ ಗರ್ಭದಲ್ಲಿ ಪ್ರವೇಶಿಸುವುದಿಲ್ಲ. ಕಾಶೀ ಎಂಬ ಎರಡು ಅಕ್ಷರದ ಮಂತ್ರವನ್ನು ಪ್ರತಿದಿನವೂ ಸಾಯಂಕಾಲ ಪ್ರಾತಃಕಾಲಗಳಲ್ಲಿ ಜಪ ಮಾಡುವವರು ಇಹಲೋಕ, ಪರಲೋಕ ಎರಡನ್ನೂ ಗೆದ್ದು ಲೋಕಾತೀತವಾದ ಪದವನ್ನು ಹೊಂದುತ್ತಾರೆ.

**ಮಹಾದೇವ:-** ಅನುಸೂಯಾ ಪುತ್ರನಾದ ದುರ್ವಾಸ, ನೀನು ಮಾಡಿದ ಈ ಕಾಶೀಸ್ತುತಿಯ ಪುಣ್ಯದಿಂದ ನಿನಗೆ ಎಂಥ ಉತ್ತಮ ಜ್ಞಾನವು ಪ್ರಾಪ್ತವಾಗಿದೆಯೋ ಅಂಥ ಜ್ಞಾನವು ನನಗೆ ಈ ಮೊದಲು ತಪಸ್ಸಿನಿಂದಲೂ ಕೂಡ ಪ್ರಾಪ್ತವಾಗಿದಿಲ್ಲ. ಕಾಶಿಯಸ್ತುತಿ ಮಾಡಿದ ಮನುಷ್ಯ ನನಗೆ ಯಾವಾಗಲೂ ಪರಮ ಪ್ರೀತ್ಯಾಸ್ಪದ. ಯಜ್ಞದೀಕ್ಷೆಯನ್ನು ಧರಿಸಿ ನಿರಂತರ ಯಜ್ಞಮಾಡಿದ ಮನುಷ್ಯನೂ ನನಗೆ ಕಾಶಿನಗರವನ್ನು ಬಣ್ಣಿಸುವ ಮನುಷ್ಯನಷ್ಟು ಪ್ರೀತ್ಯಾಸ್ಪದನಲ್ಲ.

ಆಗ ದೂರ್ವಾಸರು ವರವನ್ನು ಬೇಡುತ್ತ ಶಂಕರನನ್ನು ಸ್ತೋತ್ರ ಮಾಡಿದರು.

**ದೇವ ದೇವ ಜಗನ್ನಾಥ ಕರುಣಾಕರ ಶಂಕರ।**
**ಮೃತ್ಯುಂಜಯೋಗ್ರ ಭೂತೇಶ ತ್ರಿಲೋಚನ ನಮೋಽಸ್ತುತೇ॥**

ಎಂದು ಅವರೆಲ್ಲರೂ ಸ್ತೋತ್ರಮಾಡಿ ಇಲ್ಲಿ ಪ್ರಕಟವಾದ ಲಿಂಗವು ಕಾಮದ ಎಂತಲೂ ಹಾಗೂ ಈ ತೀರ್ಥವು ಕಾಮಕುಂಡ ಎಂದು ಕರೆಯಲ್ಪಡಲಿ.

**ಮಹಾದೇವ:-** ತೇಜಸ್ವಿಯಾದ ಮುನಿವರ್ಯ, ನೀನು ಹೇಳಿದಂತೆ ಆಗಲಿ. ನೀನು ಇಲ್ಲಿ ಸ್ಥಾಪನೆ ಮಾಡಿದ ಈ ದೂರ್ವಾಸೇಶ್ವರ ಲಿಂಗವು ಮನುಷ್ಯರ ಕಾಮನೆಗಳನ್ನು ಪೂರ್ಣಮಾಡುವುದರಿಂದ ಕಾಮೇಶ್ವರಲಿಂಗ ಎಂದು ಪ್ರಸಿದ್ಧವಾಗಲಿ. ತ್ರಯೋದಶಿ ಶನಿವಾರ ಬಂದಾಗ ಈ ಕಾಮಕುಂಡದಲ್ಲಿ ಸ್ನಾನಮಾಡಿ ಕಾಮೇಶ್ವರಲಿಂಗದ ದರ್ಶನ ಪೂಜೆ, ಧ್ಯಾನ ಮಾಡಿದವರು ಕಾಮಮೂಲಕವಾಗಿ ಬರುವ ಯಮಯಾತನೆಗಳಿಂದ ಪಾರಾಗಿ ಪರಶಿವನ ಪರಮಾನುಗ್ರಹವನ್ನು ಪಡೆಯುವರು. ಹೀಗೆ ವರಗಳನ್ನು ನೀಡಿ ಆ ಶಂಕರ ದೇವನು ಅದೇ ಲಿಂಗದಲ್ಲಿ ಲೀನವಾದನು.

## ವಿಶ್ವಕರ್ಮೇಶ್ವರ ಲಿಂಗದ ಮಹಿಮೆ

**ಪಾರ್ವತಿ:-** ಪ್ರಿಯನಾಥ, ಕಾಶಿಯಲ್ಲಿ ಅತ್ಯಂತ ಪ್ರಖ್ಯಾತವಾದ ಲಿಂಗ ಎಂದರೆ ವಿಶ್ವಕರ್ಮೇಶ್ವರ ಲಿಂಗ. ಅದರ ಉತ್ಪತ್ತಿಯ ಕಥೆಯನ್ನು ಬಿತ್ತರಿಸಿರಿ.

**ಮಹಾದೇವ:-** ದೇವಿ ಹಿಂದಿನ ಕಾಲದಲ್ಲಿ ತ್ವಷ್ಟಾ ಎಂಬ ಪ್ರಜಾಪತಿಗೆ ಓರ್ವ ಗಂಡುಮಗು ಜನಿಸಿದ. ಅವನ ಹೆಸರು ವಿಶ್ವಕರ್ಮ. ಈ ವಿಶ್ವಕರ್ಮ ಎಂದರೆ ಚತುರ್ಮುಖ ಬ್ರಹ್ಮನ ಎರಡನೇ ಸ್ವರೂಪ. ಆ ವಿಶ್ವಕರ್ಮನಿಗೆ ಅವನ ತಂದೆ ಐದನೇ ವರ್ಷದವನಿದ್ದಾಗಲೇ

ಉಪನಯನ ಸಂಸ್ಕಾರವನ್ನು ನೆರವೇರಿಸಿದ. ಅನಂತರ ವಟು ವಿಶ್ವಕರ್ಮನು ಮನೆ ಬಿಟ್ಟು ಗುರುಕುಲದಲ್ಲಿದ್ದು ಭಿಕ್ಷಾನ್ನ ಭೋಜನ ಹಾಗೂ ಗುರು ಶುಶ್ರೂಷೆಯನ್ನು ಮಾಡತೊಡಗಿದ. ಒಂದು ದಿನ ಮಳೆಗಾಲವು ಬಂದಿತು. ಮಳೆಗಾಳಿಯಿಂದ ಗುರುದಂಪತಿಗಳು ನಡುಗತೊಡಗಿದರು. ಆಗ ಗುರುಗಳು ವಿಶ್ವಕರ್ಮನನ್ನು ಕರೆದು ಹೇಳಿದರು.

**ಗುರು:-** ಪ್ರಿಯ ಶಿಷ್ಯ, ನನಗಾಗಿ ಒಂದು ಎಲೆಮನೆ (ಪರ್ಣಶಾಲೆ) ಯನ್ನು ನಿರ್ಮಿಸು, ಆ ಪರ್ಣಶಾಲೆ ಅತ್ಯುತ್ತಮವಾಗಿರಬೇಕು. ಅಲ್ಲಿ ಇದ್ದವರಿಗೆ ವೃಷ್ಟಿಯಿಂದ ಕಷ್ಟವಾಗಬಾರದು ಶಿಷ್ಯೋತ್ತಮ, ನೀನು ನನಗಾಗಿ ಎಂಥ ಕಾಲದಲ್ಲಿಯೂ ನಾಶವಾಗದಿರುವ ಮತ್ತು ಹಳೆಯದಾಗದಿರುವ ಒಂದು ನೂತನವಾದ ನಿಕೇತನವನ್ನು ನನಗಾಗಿ ರಚಿಸು.

ಹೀಗೆ ಗುರುಗಳು ಅಪ್ಪಣೆ ಮಾಡಿದ ಬಳಿಕ ಗುರುಪತ್ನಿಯೂ ವಿಶ್ವಕರ್ಮನನ್ನು ಕರೆದು ಹೇಳಿದಳು.

**ಗುರುಪತ್ನಿ:-** ವಿಶ್ವಕರ್ಮ, ನೀನು ನನಗಾಗಿ, ಒಂದು ಚೋಳಿಯನ್ನು (ಕಂಚುಕ) ಹೊಲಿದುಕೊಡು. ಅದು ನನ್ನ ದೇಹಕ್ಕೆ ಅನು ರೂಪವಾಗಿರಬೇಕು. ಅದು ನನಗೆ ಬಿಗಿಯೂ ಆಗಬಾರದು ಸಡಿಲವೂ ಆಗಬಾರದು. ಅದು ಬಟ್ಟೆಯದು ಆಗಕೊಡದು. ಎಂದರೆ ನೂಲಿನಿಂದ ಅದನ್ನು ನೇಯಬಾರದು. ಕೇವಲ ಗಿಡದ ತೊಗಟೆಯ ಎಳೆಗಳಿಂದಲೇ ಅದನ್ನು ಮಾಡಬೇಕು. ಅದು ಅತ್ಯಂತ ಸುಂದರವಾಗಿದ್ದು ಅದು ಎಂದೂ ಹೊಲಸಾಗಬಾರದು.

ಅನಂತರ ಗುರುಗಳ ಮಗನು ವಿಶ್ವಕರ್ಮನನ್ನು ಕರೆದು ಆಜ್ಞೆ ಮಾಡಿದನು.

**ಗುರುಪುತ್ರ:-** ವಿಶ್ವಕರ್ಮ, ನನಗಾಗಿ ನೀನು ಕಾಲಿಗೆ ಮೆಟ್ಟು ಎರಡು ಕಡಾವಿಗೆಗಳನ್ನು (ಕಟ್ಟಿಗೆಯ ಪಾದರಕ್ಷೆ) ತಯಾರು ಮಾಡು. ಅದಕ್ಕೆ ಚರ್ಮವನ್ನು ತಗುಲಿಸಬೇಡ. ತೊಗಲಿನಪಟ್ಟಿ, ಹಿಡಿಕೆ, ಯಾವುದೂ ಇರಕೂಡದು. ನಾನು ಓಡುವಾಗಲೂ, ನಡೆಯುವಾಗಲೂ ನನಗೆ ಆಯಾಸವಾಗಬಾರದು. ನೆಲದ ಮೇಲೆ ನಡೆದಂತೆ ಜಲದ ಮೇಲೆಯೂ ಲೀಲಾಜಾಲವಾಗಿ ನಡೆಯಲು ಬರುವಂಥ ಅಪೂರ್ವವಾದ ಕಟ್ಟಿಗೆಯ ಪಾದುಕೆಗಳನ್ನು ನನಗಾಗಿ ಸಿದ್ಧಪಡಿಸು.

**ಗುರುಪುತ್ರಿ:-** ವಿಶ್ವಕರ್ಮ, ನನಗಾಗಿ ನಿನ್ನ ಕೈಯಿಂದಲೇ ಬಂಗಾರದ ಎರಡು ಕಿವಿಯ ಆಭರಣಗಳನ್ನು ಮಾಡಿಕೊಡು. ಹಾಗೂ ಹೆಣ್ಣು ಹುಡಿಗಿಯರಿಗೆ ಆಡಲು ಯೋಗ್ಯವಾದ ಹಸ್ತಿದಂತದ ಆಟಿಗೆಗಳನ್ನು ನಿನ್ನ ಕೈಯಿಂದಲೇ ಮಾಡಿಕೊಡು.

ಪಾರ್ವತೀ, ತನ್ನ ಗುರುಗಳ ಕುಟುಂಬದ ಪ್ರತಿಯೊಬ್ಬರೂ ತನಗೆ ಒಂದೊಂದು ತರಹದ ಅಪ್ಪಣೆಯನ್ನು ನೀಡಿದ್ದನ್ನು ನೋಡಿ ಚಿಂತಾಕ್ರಾಂತನಾದ. ಆಗ ವಿಶ್ವಕರ್ಮನು ಎಲ್ಲರ ಎದುರು ಆಗಲಿ ಆಗಲಿ ನೀವು ಹೇಳಿದಂತೆ ಮಾಡುವೆ ಎಂದು ವಿನಯದಿಂದ ಪ್ರತಿಜ್ಞೆ ಮಾಡಿದನು. ಅನಂತರ ಅವನು ಗುರುಗಳ ಹಸುವನ್ನು ಕಾಯಲು ಅರಣ್ಯಕ್ಕೆ ಹೋದಾಗ ಅವನಿಗೆ ಒಳ್ಳೇ ಯೋಚನೆಗೆ ಇಟ್ಟುಕೊಂಡಿತು. ಗುರುಗಳ ಮನೆಯವರು ಒಬ್ಬೊಬ್ಬರು ಒಂದೊಂದು ರೀತಿಯಿಂದ ತಮಗೆ ಅಪೇಕ್ಷಿತವಾದದ್ದನ್ನು ಮಾಡಿಕೊಡಲು ನನಗೆ ಆಜ್ಞೆ ನೀಡಿದ್ದಾರೆ. ನನಗಂತೂ ಏನನ್ನೂ ಮಾಡಲು ಬರುವುದಿಲ್ಲ. ಆದರೆ ದಾಕ್ಷಿಣ್ಯಕ್ಕೆ ಬಿದ್ದು ಎಲ್ಲವನ್ನೂ ಮಾಡಿಕೊಡುತ್ತೇನೆ ಎಂದು ಪ್ರತಿಜ್ಞೆ ಮಾಡಿ ಬಂದಿದ್ದೇನೆ ಅವರೆಲ್ಲರ ಎದುರು. ಈಗ ನಾನು ಏನು ಮಾಡಲಿ? ಎಲ್ಲಿ ಹೋಗಲಿ? ಯಾರು ನನಗೆ ಈ ವಿಷಯದಲ್ಲಿ ಬೌದ್ಧಿಕ ಸಹಾಯವನ್ನು

ನೀಡುವರು? ಯಾರನ್ನು ಮೊರೆ ಹೋಗಲಿ? ಯಾವ ಮೂಢ ಮಾನವನೂ ಗುರು, ಗುರುಪತ್ನಿ, ಗುರುಪುತ್ರ, ಗುರುಪುತ್ರಿ ಇವರ ಮಾತನ್ನು ಒಪ್ಪಿಕೊಂಡು ಪೂರ್ಣಮಾಡುವುದಿಲ್ಲವೋ ಅವನು ನರಕಕ್ಕೆ ಹೋಗುತ್ತಾನೆ. ಗುರುಶುಶ್ರೂಷೆಯೇ ಬ್ರಹ್ಮಚಾರಿಯ ಪ್ರಧಾನ ಧರ್ಮ. ಸಾಮಾನ್ಯ ಪಾಮರ ಜನರರ ಕಾರ್ಯವನ್ನು ಮಾಡುತ್ತೇನೆ ಎಂದು ಒಪ್ಪಿಕೊಂಡು ಮಾಡದೇ ಇದ್ದರೆ ಅವನಿಗೆ ನರಕ ಎಂದು ಶಾಸ್ತ್ರದಲ್ಲಿ ಹೇಳಿದ್ದಾರೆ. ಅಂದಬಳಿಕ ನಾನು ಗುರುಬಂಧುಗಳಿಗಿತ್ತ ಈ ಮಾತನ್ನು ಮುರಿಯುವುದು ಹೇಗೆ ನಡೆಸುವುದು ಹೇಗೆ?

ಏಕಾಂತ ಪ್ರಾಂತದಲ್ಲಿ ಕುಳಿತು ವಿಶ್ವಕರ್ಮನು ಹೀಗೆ ಚಿಂತೆಯನ್ನು ಮಾಡುತ್ತಲಿದ್ದಾಗ ಅಲ್ಲಿಗೆ ಆಕಸ್ಮಾತ್ತಾಗಿ ಓರ್ವ ಮಹಾತ್ಮನಾದ ತಪಸ್ವಿಯು ದೃಷ್ಟಿಗೋಚರನಾದನು. ಕೂಡಲೇ ವಿಶ್ವಕರ್ಮನು ಅವನ ಎರಡೂ ಪಾದಗಳನ್ನು ಗಟ್ಟಿಯಾಗಿ ಹಿಡಿದು ಹೇಳಿದ- ''ತಪಸ್ವಿಗಳೇ ತಾವು ಯಾರು? ನಿಮ್ಮನ್ನು ನೋಡಿದ ಕೂಡಲೇ ನನ್ನ ಚಿಂತೆಯ ಭಾರ ಏಕೋ ಕಡಿಮೆಯಾದಂತೆ ಎನಿಸುವುದು. ತಪಸ್ವಿಯ ವೇಷದಿಂದ ಸಾಕ್ಷಾತ್ ಶಿವನೇ ನನ್ನನ್ನು ಈ ಸಂಕಟದಿಂದ ಪಾರುಮಾಡಲು ಬಂದಿರುವನೋ? ಅಥವಾ ನನ್ನ ಪ್ರಾರಬ್ಧವೇ ಸಾಕಾರವಾಗಿ ಇಲ್ಲಿ ಬಂದು ನಿಂತಿದೆಯೋ? ತಾವು ಯಾರೇ ಇರಲಿ ನಿಮಗೆ ನನ್ನ ನಮಸ್ಕಾರ. ನನಗೆ ಉಪದೇಶ ನೀಡಿರಿ. ನಾನು ಗುರು, ಗುರುಪತ್ನಿ, ಗುರುಪುತ್ರ ಮತ್ತು ಗುರುಪುತ್ರಿ ಈ ನಾಲ್ವರ ವಿಚಿತ್ರವಾದ ಆಜ್ಞೆಗಳನ್ನು ಹೇಗೆ ಪಾಲಿಸಲಿ?

**ತಪಸ್ವಿ:-** ವಿಶ್ವಕರ್ಮ, ಇದು ಏನು ಅಶಕ್ಯಕಾರ್ಯ? ಬ್ರಹ್ಮದೇವರು ಆ ಭಗವಂತನ ಕೃಪೆಯಿಂದಲೇ ಜಗತ್ತಿನ ಸೃಷ್ಟಿ ಮಾಡುವುದರಲ್ಲಿ ಪ್ರವೀಣರಾಗಿದ್ದಾರೆ. ನೀನಾದರೂ ಕಾಶಿಗೆ ಹೋಗಿ ಸರ್ವಜ್ಞನಾದ ವಿಶ್ವನಾಥನ ಆರಾಧನೆಯನ್ನು ಭಕ್ತಿಯಿಂದ ಮಾಡಿದರೆ ನಿನ್ನ ವಿಶ್ವಕರ್ಮ ಎಂಬ ಹೆಸರು ಸಾರ್ಥಕವಾಗುವುದು. ನಿನ್ನ ಮನೋರಥಗಳೆಲ್ಲವೂ ಸಿದ್ಧಿಸುವವು. ಈ ಕಾಶೀಪಟ್ಟಣದಲ್ಲಿ ವಿಶ್ವನಾಥನ ದಯೆಯಿಂದ ಯಾವ ಮನೋರಥವೂ ದುರ್ಲಭ ಆಗುವುದಿಲ್ಲ. ನೀನು ನಿನ್ನ ಮನೋರಥವನ್ನು ಪೂರ್ಣಮಾಡಿಕೊಳ್ಳಲು ನಿಜವಾಗಿ ಬಯಸುತ್ತಿದ್ದರೆ ಕಾಶಿಯ ವಿಶ್ವನಾಥನ ಸ್ಥಾಪನನ್ನು ಕುರಿತು ಪ್ರಯಾಣಮಾಡು.

**ವಿಶ್ವಕರ್ಮ:-** ಮಹಾತ್ಮರೇ, ಶಂಕರಪ್ರಭುವಿನ ಆನಂದವನ ಅಥವಾ ಆ ಕಾಶೀಕ್ಷೇತ್ರವು ಎಲ್ಲಿ ಇರುತ್ತದೆ?

**ತಪಸ್ವಿ:-** ನಾನೂ ಈಗ ಕಾಶಿಗೇ ಹೊರಟಿದ್ದೇನೆ. ನನ್ನ ಜೊತೆಗೆ ನೀನೂ ನಡೆ. ನಾನು ನಿನ್ನನ್ನು ಮುಟ್ಟಿಸುತ್ತೇನೆ ಆ ಪುಣ್ಯಪುರಿಗೆ.

ಕೃಪಾಳುಗಳಾದ ಆ ಮಹರ್ಷಿಗಳ ಜೊತೆಗೆ ವಿಶ್ವಕರ್ಮನು ವಿಶ್ವನಾಥನ ಆ ಆಡಂಬರವಾದ ಕಾಶೀಪಟ್ಟಣಕ್ಕೆ ಹೋದನು. ಈ ವಿಶ್ವಕರ್ಮನನ್ನು ಕಾಶಿಗೆ ತಲುಪಿಸಿ ಆ ಹಿರಿಯ ತಪಸ್ವಿಯು ಎಲ್ಲಿಯೋ ಹೊರಟು ಹೋದನು.

ಅನಂತರ ಆ ವಿಶ್ವಕರ್ಮನು ಕಾಶಿಯ ವಿಶ್ವೇಶ್ವರನ ದರ್ಶನ ಪಡೆದುಕೊಂಡು ಅವನ ಅಪ್ಪಣೆ ಪಡೆದು ಒಂದು ಶಿವಲಿಂಗವನ್ನು ತಾನಾಗಿಯೇ ಸ್ಥಾಪನೆ ಮಾಡಿದನು ಮತ್ತು ಪ್ರಸನ್ನ ಮನಸ್ಸಿನಿಂದ ವಿಶ್ವನಾಥನ ಆರಾಧನೆಯನ್ನು ಮಾಡತೊಡಗಿದನು. ಕಾಡಿಗೆ ಹೋಗಿ ಬಹಳಷ್ಟು ಬಗೆಬಗೆಯ ಪುಷ್ಪಗಳನ್ನು ತಂದು ಸ್ನಾನಾನಂತರ ನಿತ್ಯವೂ ಶಿವಪೂಜೆಯನ್ನು ಮಾಡುತ್ತಿದ್ದನು. ಹಣ್ಣು, ಕಾಯಿ, ಗಡ್ಡೆ ಗೆಣಸುಗಳನ್ನು ಭಗವಂತನಿಗೆ ನಿವೇದಿಸಿ, ಆ ನೈವೇದ್ಯ ಶೇಷವನ್ನು ಹರಪ್ರಸಾದವೆಂದು ಬಗೆದು ತಿನ್ನುತ್ತಿದ್ದನ್ನು. ಹೀಗೆ ಅನ್ನ, ನೀರು,

ನಿದ್ದೆ, ವಿಶ್ರಾಂತಿ, ವಿರಾಮ, ವಿನೋದ, ವಿಹಾರ ಎಲ್ಲವನ್ನೂ ಬಿಟ್ಟು ಚಳಿಮಳೆ ಬಿಸಿಲು ಗಾಳಿಗಳಿಗೆ ಅಂಜದೇ ಅಳುಕದೇ ಹಗಲಿರುಳು ಧ್ಯಾನಾರೂಢನಾಗಿ ಮೂರುವರ್ಷ ಅಖಂಡ ಶಂಕರಾಧನೆಯನ್ನು ಮಾಡಿದನು. ಆಗ ಶಿವನನ್ನು ಪ್ರಸನ್ನನಾಗಿ ಅವನೇ ಸ್ಥಾಪನೆಮಾಡಿದ ಆ ಶಿವಲಿಂಗದಲ್ಲಿ ಪ್ರಕಟನಾಗಿ ಅಭಯನೀಡಿ ನುಡಿದನು- ''ವಿಶ್ವಕರ್ಮ, ನಿನ್ನ ದೃಢಭಕ್ತಿಯಿಂದ ನಾನು ಸಂತುಷ್ಟನಾಗಿದ್ದೇನೆ. ಗುರುಕುಟುಂಬದ ಪ್ರತಿಯೊಬ್ಬ ಸದಸ್ಯನೂ ನಿನಗೆ ಒಂದೊಂದ ಚಿತ್ರ ವಿಚಿತ್ರವಾದ ವಸ್ತುಮಾಡಿಕೊಡಲು ಆಜ್ಞೆ ನೀಡಿದ್ದಾರೆ. ಅದೆಲ್ಲವನ್ನೂ ಪೂರ್ಣ ಮಾಡಿಕೊಡುವ ಶಕ್ತಿಯು ನಿನಗೆ ನನ್ನ ಪ್ರಭಾವದಿಂದ ಬರುವುದು. ಕಟ್ಟಿಗೆ ಕಲ್ಲು, ಧಾತು, ರತ್ನ ಮತ್ತು ಹೂವು, ವಸ್ತ್ರ, ಕರ್ಪೂರ ಮುಂತಾದ ಸುಗಂಧಿಪದಾರ್ಥ, ನೀರು ಕಂದಮೂಲ, ಹಣ್ಣು, ದ್ರವ್ಯ, ಗಿಡದ ತೊಗಟೆ ಈ ಎಲ್ಲ ವಸ್ತುಗಳಿಂದ ಉತ್ತಮವಾದ ಕಾರ್ಯವನ್ನು ಮಾಡುವ ವಿದ್ಯೆಯು ನಿನಗೆ ನನ್ನ ದಯೆಯಿಂದ ಪ್ರಾಪ್ತವಾಗುವುದು. ಯಾರು ಯಾರಿಗೆ ಎಂತೆಂಥ ಮನೆ ಮಠ ಮಂದಿರಗಳನ್ನು ಕಟ್ಟಿಸುವ ಅಪೇಕ್ಷೆ ಆಗುವುದೋ, ಅಂಥ ಸುಂದರವಾದ ಕೃತಿಗಳನ್ನು ರೂಪಿಸುವ ಶಿಲ್ಪ ಕಲಾಚಾತುರ್ಯವು ನಿನ್ನ ಸ್ವತ್ತಾಗುವುದು. ಎಲ್ಲ ವಿಧವಾದ ಶೃಂಗಾರ, ಆಭರಣ, ಅಡಿಗೆ, ನೃತ್ಯ, ಗೀತ, ಶಿಲ್ಪ, ವಾಸ್ತು ಮುಂತಾದ ವಿವಿಧ ವಸ್ತುಗಳನ್ನು ಮಾಡುವ ವಿಶ್ವತೋಮುಖ ಪಾಂಡಿತ್ಯ. ಪ್ರಾವೀಣ್ಯ ಚಾತುರ್ಯಗಳು ನಿನಗೆ ಸ್ವಯಂ ಪ್ರತಿಭಾತವಾಗುವವು. ಅನೇಕ ಪ್ರಕಾರದ ಶಿಲ್ಪ ಹಾಗೂ ಯಂತ್ರ, ಶಸ್ತ್ರಾಸ್ತ್ರ, ಜಲಾಶಯ, ದುರ್ಗರಚನೆ, ಜ್ಞಾನ ವಿಜ್ಞಾನ, ಕಲಾಕೌಶಲ್ಯ, ಇಂದ್ರಜಾಲ, ಮಹೇಂದ್ರಜಾಲ ಮುಂತಾದ ನಾನಾ ಬಗೆಯ ಕೃತಿರಚನೆಯಲ್ಲಿ ನೀನು ಸಿದ್ಧಹಸ್ತನಾಗುವಿ. ಈ ಎಲ್ಲ ವಿದ್ಯೆಗಳು ನಿನಗೆ ನನ್ನ ಅನುಗ್ರಹದಿಂದ ಕೂಡಲೇ ಕರಗತವಾಗುವವು. ವಿಶ್ವದಲ್ಲಿ ಇರುವ ಎಲ್ಲ ವಿಧ ಕರ್ಮಗಳನ್ನೂ ಬಲ್ಲವನಾದುದರಿಂದ ನಿನಗೆ ವಿಶ್ವಕರ್ಮ ಎಂಬ ಹೆಸರು ಸಾರ್ಥಕವಾಗುವುದು.

**ವಿಶ್ವಕರ್ಮ:-** ಭಗವನ್, ನಾನೇನೋ ಅಜ್ಞ, ಆದರೆ ಮಹಾಪ್ರಾಜ್ಞನಂತೆ ಇಲ್ಲಿ ಒಂದು ಶಿವಲಿಂಗವನ್ನು ಸ್ಥಾಪನೆ ಮಾಡಿದ್ದೇನೆ. ಇದೇ ಶಿವಲಿಂಗವನ್ನು ಕುರಿತು ತೀವ್ರ ತಪಸ್ಸನ್ನು ಮಾಡಿ ಸಿದ್ಧಿಯನ್ನೂ, ವಿರೂಪಾಕ್ಷನ ಸಾಕ್ಷಾತ್ಕಾರವನ್ನು ಪಡೆದಿದ್ದೇನೆ. ಈ ಅಲ್ಪಜ್ಞನು ಪ್ರತಿಷ್ಠೆಮಾಡಿದ ಈ ಶಿವಲಿಂಗದ ಕೃಪೆಯಿಂದ ಈಗ ನಾನೇ ಸರ್ವಜ್ಞನಂತೆ ಆಗಿದ್ದೇನೆ. ನನ್ನಂತೆ ಮುಂದೆ ಈ ಲಿಂಗವನ್ನು ಆರಾಧನೆ ಮಾಡಿದವರು ಜ್ಞಾನ, ವಿಜ್ಞಾನ ಕಲಾಕೌಶಲ್ಯಗಳಿಗೆ ಪಾತ್ರರಾದ ಅಧಿಕಾರಿಗಳು ಆಗಲಿ.

**ಮಹಾದೇವ:-** ವಿಶ್ವಕರ್ಮ ನಿನ್ನ ಅಪೇಕ್ಷೆಯಂತೆ ಆಗಲಿ. ಈ ಲಿಂಗದ ಆರಾಧನೆಯಿಂದ ಎಲ್ಲರಿಗೂ ಸದ್ಬುದ್ಧಿ ಹಾಗೂ ಜ್ಞಾನೋದಯ ಉಂಟಾಗಲಿ. ಮುಂದೆ ಬ್ರಹ್ಮದೇವರ ವರದಾನದಿಂದ ದಿವೋದಾಸನು ಕಾಶಿಯ ರಾಜನಾದ ಬಳಿಕ ನೀನು ನನ್ನ ಆದೇಶದಿಂದ ಈ ಶಿವಲಿಂಗದ ಮೇಲೆ ವಿಶಾಲವಾದ ಒಂದು ಸುಂದರ ಶಿವ ಮಂದಿರವನ್ನು ನಿರ್ಮಾಣಮಾಡು. ಈಗ ನೀನು ನಿನ್ನ ಗುರುಕುಟುಂಬದ ಎಲ್ಲ ಜನರ ಅಪೇಕ್ಷೆಯನ್ನು ಪೂರ್ಣಮಾಡು.

ಹೀಗೆ ಹೇಳಿ ಮಹಾದೇವರು ಅಂತರ್ಧಾನ ಹೊಂದಿದರು. ವಿಶ್ವಕರ್ಮನು ತನ್ನ ಗುರುಗಳ ಗೃಹಕ್ಕೆ ತೆರಳಿದನು. ಶಿವಾನುಗ್ರಹದಿಂದ ಲಬ್ಧವಾದ ಕಲಾಕೌಶಲ್ಯ, ಜ್ಞಾನ, ವಿಜ್ಞಾನಗಳ ಬಲದಿಂದ ಅವನು ಗುರು, ಗುರುಪತ್ನಿ, ಗುರುಪುತ್ರ ಮತ್ತು ಗುರುಪುತ್ರಿ ಈ ನಾಲ್ಕು ಜನರ ವಿಕ್ಷಿಪ್ತವಾದ ವಿಚಿತ್ರ ಅಪೇಕ್ಷೆಗಳನ್ನೆಲ್ಲ ಸರಿಯಾಗಿ ಪೂರ್ಣಗೊಳಿಸಿ

ಎಲ್ಲರನ್ನೂ ಸಂತೋಷಪಡಿಸಿದನು. ಹೀಗೆ ಗುರುಗಳ ಆಶೀರ್ವಾದ ಪಡೆದು ಆ ವಿಶ್ವಕರ್ಮನು ಮರಳಿ ಕಾಶೀಪಟ್ಟಣಕ್ಕೆ ಆಗಮಿಸಿದ ತಾನೇ ಸ್ಥಾಪನೆಮಾಡಿದ ಶಿವಲಿಂಗದ ಆರಾಧನೆಯಲ್ಲಿ ತನ್ನ ದೇಹವನ್ನು ಸವೆಯಿಸಿದ.

**ಮಹಾದೇವ:-** ಪಾರ್ವತೀ, ನೀನು ಕಾಶೀಪಟ್ಟಣದಲ್ಲಿ ಮುಕ್ತಿಯನ್ನು ನೀಡುವ, ಶಕ್ತಿಯನ್ನು ನೀಡುವ ಶಿವಲಿಂಗಗಳ ಪರಿಚಯವನ್ನು ಕೇಳಿದ್ದಿ. ಅದೆಲ್ಲವನ್ನೂ ನಾನು ನಿನಗೆ ತಿಳಿಸಿ ಹೇಳಿದ್ದೇನೆ. ಈ ಕಾಶಿಯಲ್ಲಿ ಓಂಕಾರೇಶ್ವರ ತ್ರಿವಿಷ್ಟಪೇಶ್ವರ, ಮಹಾದೇವೇಶ್ವರ, ಕೃತ್ತಿವಾಸೇಶ್ವರ, ರತ್ನೇಶ್ವರ, ಚಂದ್ರೇಶ್ವರ, ಕೇದಾರೇಶ್ವರ, ಧರ್ಮೇಶ್ವರ, ವೀರೇಶ್ವರ, ಕಾಮೇಶ್ವರ, ವಿಶ್ವಕರ್ಮೇಶ್ವರ, ಮಣಿಕರ್ಣೀಶ್ವರ, ಅವಿಮುಕ್ತೇಶ್ವರ, ವಿಶ್ವನಾಥ ಮುಂತಾದ ಲಿಂಗಗಳೆಲ್ಲವೂ ಮುಕ್ತಿದಾಯಕ ಲಿಂಗ ಎನಿಸಿರುತ್ತವೆ. ಈ ಅವಿಮುಕ್ತ ಕ್ಷೇತ್ರದಲ್ಲಿ ಬಂದು ವಿಶ್ವನಾಥನ ಪೂಜೆ ಮಾಡಿದವರು ಮತ್ತೆ ಈ ಸಂಸಾರಕ್ಕೆ ಬರುವುದಿಲ್ಲ. ಮರಳಿ ಹುಟ್ಟುವುದಿಲ್ಲ. ಜಿತೇಂದ್ರಿಯರಾದ ಸನ್ಯಾಸಿಗಳು ವರ್ಷದಲ್ಲಿ ಎಂಟು ತಿಂಗಳ ಸಂಚಾರಮಾಡಿ ನಾಲ್ಕು ತಿಂಗಳ ಚಾತುರ್ಮಾಸ್ಯದ ಕಾಲದಲ್ಲಿ ಮಾತ್ರ ಒಂದೆಡೆ ಇರಬೇಕು ಎಂದು ನಿರ್ಬಂಧ ಶಾಸ್ತ್ರದಲ್ಲಿ ಹೇಳಿದೆ ಆದರೆ ಈ ಕಾಶಿಯು ಅದಕ್ಕೆ ಅಪವಾದ. ಈ ಕಾಶೀಪಟ್ಟಣಕ್ಕೆ ಬಂದ ಸನ್ಯಾಸಿಗಳು ಸಂಚಾರ ಮಾಡಬೇಕು ಎಂಬ ನಿಯಮವಿಲ್ಲ. ಇಲ್ಲಿ ಇದ್ದು ವಿಶ್ವನಾಥನ ಆರಾಧನೆ ಮಾಡುವವರು ಎಲ್ಲಿಯೂ ಸಂಚಾರಕ್ಕೆ ಹೋಗಕೂಡದು. ಎಂಥ ಯತಿಯಾದರೂ ಕಾಶಿಯನ್ನು ತ್ಯಾಗಮಾಡಿ ಬೇರೆಡೆಗೆ ಸಂಚರಿಸಬಾರದು. ಕಾಶೀಕ್ಷೇತ್ರದ ಈ ಹದಿನಾಲ್ಕು ಲಿಂಗಗಳ ಮಹಾತ್ಮೆಯನ್ನು ಶ್ರವಣಮಾಡಿದವರು ಹದಿನಾಕು ಲೋಕಗಳಲ್ಲಿಯೂ ಗೌರವಾದರಗಳನ್ನು ಹೊಂದುತ್ತಾರೆ.

## ದಕ್ಷೇಶ್ವರ ಮತ್ತು ಪಾರ್ವತೀಶ್ವರ ಲಿಂಗಗಳ ಮಹಿಮೆ.

**ಸ್ಕಂದ:-** ಲೋಪಾಮುದ್ರಾಪತಿಯೇ, ಭಗವಾನ್ ಶಂಕರನ ಗಣಾಧೀಶರು ದಕ್ಷ ಪ್ರಜಾಪತಿಯ ಯಜ್ಞವನ್ನು ವಿಧ್ವಂಸಗೊಳಿಸಿದಾಗ ಬ್ರಹ್ಮದೇವನು ದಕ್ಷನಿಗೆ ಹೀಗೆ ಉಪದೇಶವನ್ನು ನೀಡಿದನು.

**ಬ್ರಹ್ಮ:-** ವತ್ಸ ದಕ್ಷ, ನೀನು ಭಗವಾನ್ ಶಂಕರನ ಘೋರನಿಂದೆಯನ್ನು ಮಾಡಿದೆ ಆದರಿಂದ ನಿನಗೆ ಭಯಂಕರ ಪಾಪವು ಪ್ರಾಪ್ತವಾಗಿದೆ. ನಿನ್ನ ಈ ಪಾಪರಾಶಿಯನ್ನು ಪ್ರಕ್ಷಾಲನೆ ಮಾಡಿಕೊಳ್ಳಲಿಕ್ಕಾಗಿ ನೀನು ಕಾಶೀಪಟ್ಟಣಕ್ಕೆ ಹೋಗು. ಅಲ್ಲಿ ಒಂದು ಶಿವಲಿಂಗವನ್ನು ಪ್ರತಿಷ್ಠೆಮಾಡು. ಇದರಿಂದ ಆ ಪಾರ್ವತೀಪತಿಯು ಪರಿತುಷ್ಟನಾಗುವನು. ಆ ಅಷ್ಟಮೂರ್ತಿಯು ಸಂತುಷ್ಟನಾದರೆ ಚರಾಚರಾತ್ಮಕವಾದಿ ಪ್ರಪಂಚವೇ ಸಂತುಷ್ಟವಾದದಂತೆ. ವೇದ-ಶಾಸ್ತ್ರಜ್ಞರಾದ ಮುನಿಮನಿಷೀಗಳು ಮಹರ್ಷಿಗಳು ಬ್ರಹ್ಮಹತ್ಯೆ ಮುಂತಾದ ಘೋರ ಪಾತಕಗಳಿಗೆಲ್ಲ ಪ್ರಾಯಶ್ಚಿತ ಹೇಳಿದ್ದಾರೆ. ಆದರೆ ಶಿವನಿಂದಾ ಜನಿತ ಪಾಪಕ್ಕೆ ಮಾತ್ರ ಪ್ರಾಯಶ್ಚಿತ್ತವನ್ನು ಯಾವ ಶಾಸ್ತ್ರ ಪುರಾಣದಲ್ಲಿಯೂ ಹೇಳಿಲ್ಲ. ಅದಕ್ಕೆ ಪ್ರಾಯಶ್ಚಿತ್ತವೆಂದರೆ ಕಾಶೀವಾಸ. ಕಾಶಿಯಲ್ಲಿ ಯಾರು ಶಿವಲಿಂಗದ ಪ್ರತಿಷ್ಠಾಪನೆಯನ್ನು ಮಾಡಿರುವರೋ ಅವರು ಎಲ್ಲ ಧರ್ಮಗಳನ್ನು ಅನುಷ್ಠಾನ ಮಾಡಿದಂತೆ. ಆದ್ದರಿಂದ ನೀನು ಕೂಡ ಕೂಡಲೇ ಕಾಶಿಗೆ ಹೋಗು ಅಲ್ಲಿ ಒಂದು ಶಿವಲಿಂಗವನ್ನು ಸ್ಥಾಪನೆಮಾಡು.

ಬ್ರಹ್ಮದೇವರ ಈ ಮಾತನ್ನು ಕೇಳಿ ದಕ್ಷಪ್ರಜಾಪತಿಯು ಕೂಡಲೇ ಕಾಶಿಗೆ ಬಂದ. ಅತ್ಯಂತ ಉಗ್ರವಾದ ತಪೋನುಷ್ಠಾನದಲ್ಲಿ ಮಗ್ನನಾದ. ವಿಧಿಪೂರ್ವಕವಾಗಿ ಒಂದು ಶಿವಲಿಂಗದ ಪ್ರತಿಷ್ಠೆಗೈದ. ಹಗಲಿರುಳೂ ಅದನ್ನೇ ಆರಾಧಿಸಿದ. ಪ್ರತಿದಿನವೂ ತಪ್ಪದೇ

ಗಂಗೆಯಲ್ಲಿ ಸ್ನಾನಮಾಡಿ ಮಹೇಶ್ವರನ ವಿಧ್ಯುಕ್ತವಾದ ಪೂಜೆ, ಪ್ರದಕ್ಷಿಣೆ, ನಮಸ್ಕಾರ, ಸ್ತೋತ್ರ, ಧ್ಯಾನ, ದರ್ಶನಗಳಲ್ಲಿಯೇ ಅವನ ಕಾಲವು ವ್ಯತಿತವಾಗುತ್ತಿತ್ತು. ಹೀಗೆ ಏಕಚಿತ್ತನಾಗಿ ಆ ದಕ್ಷಪ್ರಜಾಪತಿಯು ಹನ್ನೆರಡುಸಾವಿರ ವರ್ಷಗಳವರೆಗೆ ಪರಮೇಶ್ವರನ ಆರಾಧನೆಯನ್ನು ಮಾಡಿದ. ದಕ್ಷಪ್ರಜಾಪತಿಯ ಯಜ್ಞದ ಪ್ರಾರಂಭದಲ್ಲಿ ದಾಕ್ಷಾಯಣಿಯು ಪತಿಯ ಮಾತನ್ನು ಕೇಳದೇ ತಂದೆಯ ಮನೆಗೆ ಬಂದು ಅಲ್ಲಿ ಶಿವನಿಂದೆಯನ್ನುಕೇಳಿ ಯಾಗಾಗ್ನಿಯಲ್ಲಿ ಆತ್ಮಾರ್ಪಣೆ ಮಾಡಿದ ಬಳಿಕ ದಕ್ಷಪ್ರಜಾಪತಿಯು ಪಶ್ಚಾತ್ತಾಪದಿಂದ ಬ್ರಹ್ಮದೇವರ ಆದೇಶದಂತೆ ಕಾಶಿಗೆ ಬಂದು ತಪಸ್ಸಿಗೆ ತೊಡಗಿದನು. ಅತ್ತ ಅಗ್ನಿನಾರಾಯಣನಿಗೆ ಆತ್ಮಾಹುತಿಯನ್ನು ನೀಡಿದ ಆ ದಾಕ್ಷಾಯಿಣಿಯು ಹಿಮಾಚಲ ಹಾಗೂ ಮೇನಾದೇವಿಯರ ಗರ್ಭದಿಂದ ಉಮಾರೂಪದಿಂದ ಪ್ರಕಟಳಾಗಿ, ಗೌರೀಶಂಕರ ಶಿಖರದಲ್ಲಿ ನಿಂತು ಉಗ್ರತಪಂಗೈದು ಪಿನಾಕಪಾಣಿಯಾದ ಆ ಪರಮೇಶ್ವರನನ್ನು ಮೆಚ್ಚಿಸಿ ಪತಿರೂಪದಿಂದ ಅವನ ಪಾಣಿಗ್ರಹಣ ಮಾಡಿ, ಕೈಲಾಸದಲ್ಲಿ ಶಂಕರನೊಂದಿಗೆ ಆನಂದದಿಂದ ಇದ್ದಾಗ ಕಾಶಿಯಲ್ಲಿ ದಕ್ಷಪ್ರಜಾಪತಿಯ ತಪಸ್ಸು ನಡದೇ ಇದ್ದಿತು. ಮುಂದೆ ಎಷ್ಟೋ ವರ್ಷಗಳ ನಂತರ ಆ ಶಿವ ದಂಪತಿಗಳಿಗೆ ಕೈಲಾಸವಾಸವು ಸಾಕಾಗಿ ಕಾಶಿಗೆ ಬಂದಾಗಲೂ ದಕ್ಷ ಪ್ರಜಾಪತಿ ಧೃಡ ಮನಸ್ಸಿನಿಂದ ಶಿವಲಿಂಗದ ಆರಾಧನೆಯನ್ನು ಮಾಡುತ್ತಲೇ ಇದ್ದ. ಪಾರ್ವತೀದೇವಿಯು ಪರಮೇಶ್ವರನೊಡನೆ ತನ್ನ ತಂದೆಯು ತಪಿಸುವ ಸ್ಥಳಕ್ಕೆ ಬಂದು ನೋಡಿದಳು. ತನ್ನನ್ನು ಹಡೆದ ಪಿತನು ಹನ್ನೆರಡು ಸಾವಿರ ವರ್ಷಗಳಿಂದ ಬಿಟ್ಟು ಬಿಡದೇ ಘೋರ ತಪೋನುಷ್ಠಾನವನ್ನು ಮಾಡಿ ಹಣ್ಣು ಹಣ್ಣಾಗಿದ್ದ. ಅವನನ್ನು ನೋಡಿ ಅವಳ ಹೆಣ್ಣು ಹೃದಯ ಕರಗಿತು. ಕಣ್ಣಿನಲ್ಲಿ ಕಂಬನಿ ಹನಿಯಿತು. ಅವಳು ಪರಮೇಶ್ವರನಿಗೆ ಬೇಡಿಕೊಂಡಳು. ''ಪ್ರಭು, ಈ ನನ್ನ ಜನ್ಮಾಂತರದ ಜನಕನು ತಪೋನುಷ್ಠಾನವನ್ನು ಮಾಡಿ ಮಾಡಿ ಅತ್ಯಂತ ಕ್ಷೀಣನಾಗಿದ್ದಾನೆ. ಕರುಣಾಸಿಂಧುವಾದ ನೀನು ಇವನಿಗೆ ಅನುಗ್ರಹಮಾಡು. ವರಗಳನ್ನು ನೀಡು ಕೃಪಾದೃಷ್ಟಿಯಿಂದ ನೋಡು''.

ಅಪರ್ಣಾದೇವಿಯ ಈ ಕರುಣಾಪೂರ್ಣವಾದ ವಚನವನ್ನು ಕೇಳಿ ಹಾಗೂ ದಕ್ಷಪ್ರಜಾಪತಿಯ ಸುದೀರ್ಘವಾದ ತಪೋನುಷ್ಠಾನವನ್ನು ನೋಡಿ ಹೃದಯ ಹಿಂಡಿತು ಆ ಹರನಿಗೆ. ಕರುಣೆಯ ಕೈವಾರಿಯಾದ ಆ ಕೈಲಾಸಪತಿಯು ದಕ್ಷಪ್ರಜಾಪತಿಯು ಬಳಿಗೆ ಬಂದು ದಯೆತುಂಬಿದ ಧ್ವನಿಯಲ್ಲಿ ಗಂಭೀರನಾಗಿ ನುಡಿದ. ''ಮಹಾನುಭಾವನೇ ಏಳು. ನಾನು ತುಷ್ಟನಾಗಿದ್ದೇನೆ ನಿನ್ನ ಈ ಸುದೀರ್ಘ ತಪೋನುಷ್ಠಾನದಿಂದ. ನಿನಗೆ ಬೇಕಾದ ವರಗಳನ್ನು ಕೇಳು. ಈ ಕ್ಷಣದಲ್ಲಿಯೇ ಕೊಡುತ್ತೇನೆ''.

ಭಗವಾನ್, ಮಹೇಶ್ವರನ ಈ ವಚನವನ್ನು ಕೇಳಿ ದಕ್ಷಪ್ರಜಾಪತಿಯು ಎದ್ದುನಿಂತು ಆ ಪರಮೇಶ್ವರನಿಗೆ ಸಾಷ್ಟಾಂಗ ವಂದನೆ ಮಾಡಿದ ಮತ್ತು ಬಗೆಬಗೆಯ ಸ್ತೋತ್ರಗಳಿಂದ ಅವನನ್ನು ಸ್ತುತಿಸಿದ. ಪ್ರಸನ್ನ ಮುಖಮುದ್ರೆಯ ಆ ಮಹಾರುದ್ರನನ್ನು ನೋಡಿ ಹೀಗೆ ನುಡಿದ. ''ದೇವ ದೇವೋತ್ತಮ, ನಿನ್ನ ಚರಣಾರವಿಂದಗಳಲ್ಲಿ ನನಗೆ ನಿರ್ದ್ವಂದ್ವ ಭಕ್ತಿ ಉಂಟಾಗಲಿ ಮತ್ತು ನಾನು ಸ್ಥಾಪನೆ ಮಾಡಿದ ಈ ಮಹಾಲಿಂಗದಲ್ಲಿ ನೀನು ಯಾವಾಗಲೂ ವಾಸಮಾಡು. ನಾನು ನಿನ್ನ ವಿಷಯದಲ್ಲಿ ಹಿಂದೆ ಮಾಡಿದ ಸರ್ವಾಪರಾಧಗಳನ್ನೂ ಕ್ಷಮಿಸು. ಹಾಗೂ ನನ್ನ ಮೇಲೆ ಪೂರ್ಣಾನುಗ್ರಹವನ್ನು ಮಾಡು.

**ಮಹಾದೇವ:-** ದಕ್ಷಪ್ರಜಾಪತಿಯೇ, ನಿನ್ನ ತಪಸ್ಸಿನಿಂದ ನಾನು ಪೂರ್ಣ ಪ್ರಸನ್ನನಾಗಿದ್ದೇನೆ. ನೀನು ಹಿಂದೆ ಮಾಡಿದ ನಿಂದೆಯ ಅಪರಾಧವನ್ನೆಲ್ಲ ಕ್ಷಮಿಸಿದ್ದೇನೆ. ನಿನ್ನ

ಅಪೇಕ್ಷೆಯನ್ನೆಲ್ಲ ಪೂರ್ಣಮಾಡುತ್ತೇನೆ. ನೀನು ಸ್ಥಾಪನೆ ಮಾಡಿದ ಈ ದಕ್ಷೇಶ್ವರ ಲಿಂಗದಲ್ಲಿ ನಾನು ಸರ್ವದಾಪಿ ನೆಲೆಸುತ್ತೇನೆ. ಈ ದಕ್ಷೇಶ್ವರ ಲಿಂಗದ ಸೇವೆ ಹಾಗೂ ಆರಾಧನೆಗಳಿಂದ ಸಹಸ್ರ ಸಹಸ್ರ ಅಪರಾಧಗಳನ್ನು ಕೂಡ ನಾನು ಕ್ಷಮಿಸಿ ಅನುಗ್ರಹ ಮಾಡುತ್ತೇನೆ. ನಿನ್ನ ಅಪರಾಧವನ್ನಂತೂ ಎಂದೋ ಮರೆತು, ಈಗ ನಿನ್ನ ಮೇಲೆ ಕೃಪಾವೃಷ್ಟಿಯನ್ನು ಸುರಿಸುತ್ತಿದ್ದೇನೆ. ಕಾಶಿಗೆ ಬಂದ ಎಲ್ಲ ಯಾತ್ರಿಕರೂ ಈ ದಕ್ಷೇಶ್ವರ ಲಿಂಗದ ಪೂಜೆಯನ್ನು ಅವಶ್ಯವಾಗಿ ಮಾಡಬೇಕು. ಈ ಲಿಂಗಪೂಜೆಯ ಮಹಿಮೆಯಿಂದ ನೀನು ಈ ಪ್ರಪಂಚದಲ್ಲಿ ಮತ್ತೆ ಮೊದಲಿನಂತೆ ವಿಶ್ವಮಾನ್ಯ ವ್ಯಕ್ತಿ ಆಗುವೆ. ಎರಡು ಪರಾರ್ಧ ವರ್ಷಗಳಷ್ಟು ಸಮಯ ಕಳೆದ ಬಳಿಕ ನೀನು ಮೋಕ್ಷವನ್ನು ಹೊಂದುವೆ. ಹೀಗೆ ಹೇಳಿ ಮಹಾದೇವನು ಅದೇ ದಕ್ಷೇಶ್ವರ ಲಿಂಗದಲ್ಲಿ ಅಂತರ್ಧಾನ ಹೊಂದಿದನು. ದಕ್ಷಪ್ರಜಾಪತಿಯಾದರೂ ತನ್ನ ಮನೋರಥ ಸಿದ್ಧಿಯಿಂದ ಕೃತಕೃತ್ಯನಾಗಿ ತನ್ನ ಮನೆಗೆ ಮರಳಿ ಬಂದನು.

**ಅಗಸ್ತ್ಯ:-** ಪಾರ್ವತೀನಂದನ, ಈಗ ಪಾರ್ವತೀಶ್ವರ ಲಿಂಗದ ಮಹಿಮೆಯನ್ನು ನಿರೂಪಿಸಿರಿ.

**ಸ್ಕಂದ:-** ಕುಂಭೋದ್ಭವ, ಒಂದು ದಿನ ಹಿಮಗಿರಿಯ ಮಡದಿಯಾದ ಮೇನಾದೇವಿಯು ಮಗಳಾದ ಪಾರ್ವತಿಯನ್ನು ಕೇಳಿದಳು.

**ಮೇನಾ:-** ವತ್ಸೇ, ನಿಮ್ಮಿಬ್ಬರ ವಿವಾಹವಾಗಿ ಎಷ್ಟೋ ವರ್ಷಗಳು ಸಂದವು ನೀವು ಗಂಡನೊಡನೆ ತವರು ಮನೆಯಲ್ಲಿಯೇ ಬಹುಕಾಲದಿಂದ ವಾಸಮಾಡಿರುವಿ. ನಿನ್ನ ಪತಿಯಾದ ಪರಮೇಶ್ವರನಿಗೆ ವಾಸ ಮಾಡಲು ತನ್ನದು ಎಂಬುದು ಒಂದೂ ಮನೆಯಿಲ್ಲವೆ? ಇದ್ದರೆ ಎಲ್ಲಿ ಇದೆ? ನಿನ್ನ ಪತಿಯ ಊರು ಯಾವುದು? ಬಂದುಗಳು ಯಾರು? ನಿನಗೆ ಗೊತ್ತಿದ್ದರೆ ಹೇಳು.

ತಾಯಿಯ ಈ ಪ್ರಶ್ನಾವಳಿಯನ್ನು ಕೇಳಿ ಸತಿದೇವಿಗೆ ಬಹಳ ಸಂಕೋಚ ಎನಿಸಿತು. ತವರು ಮನೆಯಲ್ಲಿ ಇಷ್ಟು ದೀರ್ಘಕಾಲ ತಾನು ಮದುವೆ ಆದ ಬಳಿಕ ಇದ್ದುದು, ಅದಕ್ಕೆ ತನ್ನ ತಾಯಿಯು ವ್ಯಂಗ್ಯವಾಗಿ ಮಾತನಾಡಿದ್ದೂ ತಿಳಿದು ಅವಳಿಗೆ ನಾಚಿಕೆ ಎನಿಸಿತು. ಅವಳು ತನ್ನ ಪತಿಯಾದ ಪರಮೇಶ್ವರನು ಪ್ರಸನ್ನಮನಸ್ಕನಾಗಿ ಇರುವ ಸಂದರ್ಭವನ್ನು ನೋಡಿಕೊಂಡು ನಮ್ರತೆಯಿಂದ ನುಡಿದಳು.

**ಪಾರ್ವತಿ:-** ಪ್ರಾಣವಲ್ಲಭ, ನಾನು ಮದುವೆಯಾಗಿ ಇಷ್ಟು ವರ್ಷವಾದರೂ ಒಮ್ಮೆಯೂ ನನ್ನ ಅತ್ತೆಯ ಮನೆಗೆ ಹೋಗಲೇ ಇಲ್ಲ ನೀವು ಮಾತ್ರ ಒಮ್ಮೆಯೂ ಅತ್ತೆಯ ಮನೆಗೆ ಹೋಗುವ ಸುಸಂದರ್ಭವನ್ನು ತಾವು ತಂದುಕೊಡಲೇ ಇಲ್ಲ. ಆದ್ದರಿಂದ ಈಗ ನನಗೆ ಈ ತವರು ಮನೆಯ ವಾಸ ಸಾಕಾಗಿದೆ. ನನ್ನ ಅತ್ತೆಯ ಮನೆಗೆ ನನ್ನನ್ನು ಕರೆದೊಯ್ಯಿರಿ. ಹೆಣ್ಣು ಮಕ್ಕಳು ಹುಟ್ಟಿದ ಮನೆಯಲ್ಲಿ ಬಹುಕಾಲ ಇರುವುದು ಸರಿಯಲ್ಲ. ಆದ್ದರಿಂದ ಸಾಕು ನಿಮ್ಮ ಶ್ವಶುರಗೃಹ ನಿವಾಸ, ನಡೆಯಿರಿ ನಮ್ಮ ಮನೆಗೆ.

ಪಾರ್ವತಿಯ ಮಾತಿನ ಹಿನ್ನೆಲೆಯಲ್ಲಿ ನಡೆದ ಅವಾಂತರವನ್ನೆಲ್ಲ ಸೂಕ್ಷ್ಮವಾಗಿ ಗುರುತಿಸಿದ ಆ ಗಿರೀಶನು ಕೂಡಲೇ ಮಡದಿಯೊಂದಿಗೆ ಆ ಹಿಮಗಿರಿಯನ್ನು ತೊರೆದನು. ತನ್ನ ನಿಜಧಾಮವಾದ ಆನಂದವನಕ್ಕೆ ಆನಂದದಿಂದ ಆಗಮಿಸಿದ. ಪರಮಾನಂದಕ್ಕೆ ಕಾರಣೀಭೂತವಾದ ಆ ಆನಂದವನ ಅರ್ಥಾತ್ ಕಾಶೀಕ್ಷೇತ್ರಕ್ಕೆ ಬಂದು ಪಾರ್ವತೀದೇವಿಯು ಆನಂದ ಭರಿತಳಾದಳು. ನನ್ನ ಮನೆ ಎಂಬ ಅಭಿಮಾನ ಉಕ್ಕಿ ಆ ಅವಿಮುಕ್ತ ಕ್ಷೇತ್ರದ ಮೇಲೆ

ಅವಳಿಗೆ ಬಹಳ ಮಮತೆ ಉಂಟಾಯಿತು. ಇಲ್ಲಿಗೆ ಬಂದ ಬಳಿಕ ಅವಳು ತನ್ನ ತವರಾದ ಹಿಮಾಚಲದ ನಿಸರ್ಗಸುಂದರವಾದ ಶೈಲಶ್ರೇಣಿಗಳನ್ನೂ, ಸುಂದರ ಕಂದರಗಳನ್ನೂ, ಅಲ್ಲಿಯ ವನೋಪವನಗಳನ್ನು ಕೂಡ ಸಂಪೂರ್ಣವಾಗಿ ಮರೆತು ಬಿಟ್ಟಳು.

ಮುಂದೆ ಒಂದು ದಿನ ಅವಳು ಮಹಾದೇವರನ್ನು ಕುರಿತು ಒಂದು ಪ್ರಶ್ನೆ ಮಾಡಿದಳು.

**ಪಾರ್ವತಿ:-** ಪ್ರಾಣವಲ್ಲಭ, ಈ ಕಾಶೀಕ್ಷೇತ್ರಕ್ಕೆ ಬಂದ ಬಳಿಕ ನನ್ನ ಹೃದಯಕ್ಕೆ ಏನೋ ಒಂದು ವಿಚಿತ್ರ ಸಮಾಧಾನ. ನನ್ನ ಅಂತರಂಗದಲ್ಲಿ ಇಲ್ಲಿಯ ವಾಸದಿಂದ ಆನಂದ ಸಾಗರದ ತೆರೆಗಳೇ ತೂರಾಡಿದಂತೆ ಆಗುತ್ತದೆ. ಇಲ್ಲಿ ಬಂದಾಗಿನಿಂದ ನನ್ನ ಈ ಆನಂದೋದ್ರೇಕಕ್ಕೆ ಏನು ಕಾರಣ? ದಯಮಾಡಿ ಹೇಳಿರಿ.

**ಮಹಾದೇವ:-** ದೇವಿ, ಕಾಶೀಕ್ಷೇತ್ರದ ಸುತ್ತ ಮುತ್ತ ಹನ್ನೆರಡು ಮೈಲಿ ಪುಣ್ಯಪರಿಸರವೆಲ್ಲವೂ ಮುಕ್ತಿಧಾಮ. ಈ ಕಾಶಿಯಲ್ಲಿ ಶಿವಲಿಂಗವು ಇಲ್ಲದಿರುವ ಒಂದು ಇಂಚು ಜಾಗವೂ ಇಲ್ಲ. ಇಲ್ಲಿ ಇರುವ ಲಿಂಗಗಳೆಲ್ಲವೂ ಮೋಕ್ಷದಾಯಕ. ಮೋಕ್ಷ ಎಂದರೆ ಪರಮಾನಂದ. ಬ್ರಹ್ಮಾನಂದ ಇದು ಆನಂದರೂಪವಾದ ಮುಕ್ತಿಯ ಮುಖ್ಯಧಾಮ. ಆದುದರಿಂದ ಇಲ್ಲಿ ಬಂದಬಳಿಕ ನಿನಗೆ ಯಾವಾಗಲೂ ಆನಂದ ಸಾಗರದಲ್ಲಿ ಓಲಾಡಿದ ಅನುಭವ ಆದದ್ದು ಆಶ್ಚರ್ಯವೇನಲ್ಲ. ಹದಿನಾಲ್ಕು ಲೋಕಗಳಲ್ಲಿ ಇರುವ ಪುಣ್ಯಾತ್ಮರೆಲ್ಲರೂ ಇಲ್ಲಿ ವಾಸಮಾಡಿದ್ದಾರೆ. ಅವರೆಲ್ಲರೂ ಭಕ್ತಿಯಿಂದ ನಿನ್ನ ಹೆಸರಿನಿಂದ ಲಿಂಗಸ್ಥಾಪನೆಯನ್ನು ಮಾಡಿದ್ದಾರೆ. ಬಹುಜನ ಮಹಾತ್ಮರು ಕೂಡಿ ಮಾಡಿದ ಈ ಪಾರ್ವತೀಶ್ವರ ಲಿಂಗದ ಪ್ರತಿಷ್ಠಾಪನೆಯಿಂದ ನಿನಗೆ ಕೃತಕೃತ್ಯತೆಯ ಭಾವನೆ ಬಂದು ಇಂಥ ಪರಮಾನಂದವು ಉಂಟಾಗಿರಲಿಕ್ಕೆ ಸಾಕು. ಈ ಕಾಶೀಕ್ಷೇತ್ರದ ಹೆಸರೂ ಆನಂದವನ. ನೀನೂ ಆನಂದರೂಪಿಣಿ ಆನಂದರೂಪವಾದ ಮೋಕ್ಷ ಲಕ್ಷ್ಮಿಯ ಮಂದಿರವೇ ಈ ಮುಕ್ತಿಕ್ಷೇತ್ರ. ಇದಲ್ಲದೇ ಹಿಮಾಲಯದಲ್ಲಿದ್ದಾಗ ನಿನ್ನ ಮನಸ್ಸಿಗೆ ಆಗುವ ಹೆರವರ ಮನೆಯ ಹಂಗಿನ ಭಾವನೆ ಹೋಗಿದ್ದರಿಂದ, ಇದು ನನ್ನ ಮನೆ ಎಂಬ ಅಭಿಮಾನ ನಿನಗೆ ಮೂಡಿದ್ದರಿಂದ, ನನ್ನ ನಿನ್ನ ಆರಾಧಿಕರಾದ ಮುನಿಮಹರ್ಷಿ, ಸಾಧು ಸತ್ಪುರುಷರು ಹಗಲಿರುಳೂ ಇಲ್ಲಿ ನಮ್ಮಿಬ್ಬರ ಗುಣಗಾನ ಮಾಡಿ, ಭಕ್ತಿಯಿಂದ ಯಾವಾಗಲೂ ನಮ್ಮನ್ನು ಸ್ತೋತ್ರ ಮಾಡುತ್ತ ಇರುವುದರಿಂದ ನಿನಗೆ ಆನಂದಾತಿಶಯವಾದುದು ಸಹಜ.

**ಪಾರ್ವತಿ:-** ನಾಥ, ಹಾಗಾದರೆ ನನಗೂ ಒಂದು ಶಿವಲಿಂಗವನ್ನು ಸ್ಥಾಪಿಸಲು ಅಪ್ಪಣೆಯನ್ನು ನೀಡಿರಿ. ಪತಿವ್ರತಾ ಸ್ತ್ರೀಯರು ಪತಿಯ ಆಜ್ಞೆಯನ್ನು ಪಡೆದು ಕೈಕೊಂಡ ಎಲ್ಲ ಕಾರ್ಯಗಳೂ ಶ್ರೇಯಸ್ಸಿಗೆ ಕಾರಣವಾಗುತ್ತವೆ. ಮಹಾದೇವಿಯ ಈ ಅಪೇಕ್ಷೆಯನ್ನು ಮನ್ನಿಸಿ ಪರಮೇಶ್ವರನು ಅವಳಿಗೆ ಶಿವ ಲಿಂಗಸ್ಥಾಪನೆಗೆ ಅನುಮತಿಯನ್ನು ಇತ್ತನು. ಅದರಿಂದ ಸಂತುಷ್ಟಳಾಗಿ ಆ ಸತೀ ದೇವಿಯು ವಿಧ್ಯುಕ್ತ ಮಾರ್ಗದಿಂದ ಮಹಾದೇವೇಶ್ವರನ ಸಮೀಪದಲ್ಲಿಯೇ ಒಂದು ಶಿವಲಿಂಗವನ್ನು ಸ್ಥಾಪನೆಮಾಡಿದಳು. ಅದರ ದರ್ಶನ ಮಾತ್ರದಿಂದಲೇ ಮಾನವರ ಬ್ರಹ್ಮಹತ್ಯಾದಿ ಪಾತಕಗಳು ದೂರವಾಗುವವು. ಪಾರ್ವತೀದೇವಿಯು ಪ್ರತಿಷ್ಠೆ ಮಾಡಿದ್ದರಿಂದ ಅದಕ್ಕೆ ಪಾರ್ವತೀಶ್ವರ ಲಿಂಗ ಎಂಬ ಹೆಸರು ಬಂದಿದೆ. ಈ ಲಿಂಗಸ್ಥಾಪನೆಯಿಂದ ಪರಮ ಪ್ರಮೋದಭರಿತನಾದ ಆ ಪಿನಾಕಪಾಣಿಯು ಅಪರ್ಣೆಯಿಂದ ಸ್ಥಾಪಿತವಾದ ಆ ಲಿಂಗಕ್ಕೆ ಹೀಗೆ ವರವನ್ನು ನೀಡಿದನು.

**ಮಹಾದೇವರು:-** ಕಾಶೀಪಟ್ಟಣದಲ್ಲಿ ಇದ್ದು ಪಾರ್ವತೀಶ್ವರ ಎಂಬ ಹೆಸರಿನ ಲಿಂಗವನ್ನು ಭಕ್ತಿಭಾವ ಭರಿತರಾಗಿ ಯಾರು ಪೂಜಿಸುವರೋ ಅವರು ಮರಣಾನಂತರದಲ್ಲಿ ನನ್ನ ದೇಹದಲ್ಲಿಯೇ ಪ್ರವೇಶ ಮಾಡುವರು. ಚೈತ್ರಶುಕ್ಲ ತದಿಗಿಯದಿನದಂದು ಈ ಪಾರ್ವತೀಶ್ವರರ ಪೂಜೆಯಿಂದ ಮನುಷ್ಯರಿಗೆ ಇಹಲೋಕದಲ್ಲಿ ಸೌಭಾಗ್ಯ, ಪರಲೋಕದಲ್ಲಿ ಸದ್ಗತಿ ಎರಡೂ ದೊರಕುವವು. ಈ ಪಾರ್ವತೀಶ್ವರನ ಮಹಾಮಹಿಮೆಯನ್ನು ಶ್ರವಣ ಮಾಡಿದವರು ಮತ್ತು ಪಠಣ ಮಾಡಿದವರು ಇಲ್ಲಿ ದಿವ್ಯಜ್ಞಾನ ಪಡೆದು ಪರಲೋಕದಲ್ಲಿ ತಮ್ಮ ಮನಃಕಾಮನೆಗಳನ್ನೆಲ್ಲ ಹೊಂದಿ ಪೂರ್ಣಾನಂದವನ್ನು ಪಡೆಯುವರು.

## ನರ್ಮದೇಶ್ವರ ಲಿಂಗ: ಸತೀಶ್ವರ ಲಿಂಗಗಳ ಮಹಿಮೆ

**ಸ್ಕಂದ:-** ಅಗಸ್ತ್ಯ ಮುನಿಯೇ, ಈಗ ನಾನು ಸ್ಮರಣ ಮಾತ್ರದಿಂದಲೇ ಮಹಾಮಹತ್ತರವಾದ ಘೋರ ಪಾತಕಗಳನ್ನೆಲ್ಲ ನಾಶಮಾಡುವ ನರ್ಮದೇಶ್ವರಲಿಂಗದ ಮಹಿಮೆಯನ್ನು ಹೇಳುತ್ತೇನೆ ಕೇಳು. ಈ ವರಾಹಕಲ್ಪದ ಪ್ರಾರಂಭದಲ್ಲಿ ದೊಡ್ಡ ದೊಡ್ಡ ಮಹರ್ಷಿಗಳು ಮಾರ್ಕಂಡೇಯ ಮುನಿಯನ್ನು ಪ್ರಶ್ನೆ ಮಾಡಿದರು. ' ಮೃಕಂಡು ನಂದನ! ಈ ಪ್ರಪಂಚದ ಎಲ್ಲ ನದಿಗಳಲ್ಲಿ ಸರ್ವಶ್ರೇಷ್ಠವಾದ ನದಿಯು ಯಾವುದು?

**ಮಾರ್ಕಂಡೇಯ:-** ಮುನಿಗಳೇ, ಈ ಭಾರತ ವರ್ಷದಲ್ಲಿ ಸಾವಿರಾರು ನದಿಗಳು ಇರುತ್ತವೆ. ಅವುಗಳಲ್ಲಿ ಸಮುದ್ರವನ್ನು ಕೂಡುವ ನದಿಗಳಿಗೆ ಮಹಾನದಿ. ಬೇರೆ ಬೇರೆ ನದಿಗಳಿಗೆ ಕೂಡುವ ನೀರಿನ ಪ್ರವಾಹಗಳಿಗೆ ಉಪನದಿ ಎನ್ನುವರು ನದಿಗಳೆಲ್ಲವೂ ಪಾವನ. ಅವುಗಳಲ್ಲಿ ಸಮುದ್ರಗಾಮಿನಿಯಾದ ಮಹಾನದಿಗಳು ಪರಮ ಪಾವನ, ಈ ಮಹಾನದಿಗಳಲ್ಲಿ ಗಂಗಾ, ಯಮುನಾ, ನರ್ಮದಾ, ಸರಸ್ವತಿ ಈ ನಾಲ್ಕು ನದಿಗಳು ಸರ್ವಶ್ರೇಷ್ಠ ಗಂಗೆಯ ಋಗ್ವೇದದ ಮೂರ್ತಿ. ಯಜುರ್ವೇದದ ಮೂರ್ತಿ ಯಮುನಾ. ನರ್ಮದೆಯು ಸಾಮವೇದದ ಮೂರ್ತಿ ಸರಸ್ವತಿಯು ಅಥರ್ವಣ ವೇದದ ಸ್ವರೂಪ. ಇವುಗಳಲ್ಲಿ ಗಂಗಾ ನದಿಯು ಎಲ್ಲ ನದಿಗಳ ಉತ್ಪತ್ತಿಗೆ ಮೂಲಕಾರಣ ಕಡಲಿನ ಒಡಲನ್ನು ಕೂಡ ತುಂಬುವ ಶಕ್ತಿ ಆ ಈಶ್ವರಿಗೆ. ಈ ಭೂಮಂಡಲದಲ್ಲಿ ಗಂಗೆಗೆ ಸರಿದೊರೆಯಾಗಿ ನಿಲ್ಲಬಲ್ಲ ಬೇರೆ ನದಿ ಯಾವುದೂ ಇಲ್ಲ. ಆದರೆ ಪೂರ್ವಕಾಲದಲ್ಲಿ ನರ್ಮದಾನದಿಯು ಬ್ರಹ್ಮದೇವರನ್ನು ಕುರಿತು ಬಹುದೀರ್ಘಕಾಲ ತಪಸ್ಸನ್ನು ಮಾಡಿದಳು. ಅವಳ ನಿಷ್ಠುರವಾದ ತಪೋನುಷ್ಠಾನದಿಂದ ಪರಿತುಷ್ಟನಾದ ಆ ಪರಮೇಷ್ಠಿ ಅವನು ಸುಪ್ರಸನ್ನನಾದುದನ್ನು ನೋಡಿ ನರ್ಮದೆಯು ಅವನನ್ನು ಪ್ರಾರ್ಥಿಸಿಕೊಂಡಳು.

**ನರ್ಮದಾ:-** ಕಮಲಾಸನ, ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ, ನನ್ನನ್ನು ಗಂಗಾ ನದಿಗೆ ಸರಿಸಮಾನಳನ್ನಾಗಿ ಮಾಡಿ. ನರ್ಮದೆಯ ಈ ಬೇಡಿಕೆಯನ್ನು ಕೇಳಿ ನಗೆ ಬಂದಿತು ಆ ವಾಣೀಪತಿಗೆ. ಆಗ ಅವನು ಮಂದಹಾಸ ಮಾಡುತ್ತ ಆ ನರ್ಮದೆಗೆ ಹೇಳಿದ.

**ಬ್ರಹ್ಮ:-** ಮಂಗಳತರಂಗಿಣಿಯೇ, ಈ ಜಗತ್ತಿನಲ್ಲಿ ಬೇರೆ ಯಾವುದಾದರೂ ಪುರುಷನು ಪುರುಷೋತ್ತಮನಾದ ವಿಷ್ಣುವಿಗೆ ಸಮಾನನಾದರೆ, ಯಾವುದಾದರೂ ಪಶು ಪಶುಪತಿಗೆ ಸಮಾನವಾದರೆ, ಯಾವುದಾದರೂ ಒಂದು ನಗರ ಕಾಶೀನಗರಕ್ಕೆ ಸಮಾನವಾದರೆ, ಬೇರೆ ನದಿಯು ಗಂಗಾ ನದಿಗೆ ಸಮಾನವು ಆಗಬಹುದು.

ಬ್ರಹ್ಮದೇವರ ಈ ವಚನವೈಖರಿಯನ್ನು ಕೇಳಿ ನಿರಾಶೆಯಾಯಿತು. ಆ ನರ್ಮದಾ ನದಿಗೆ. ಅವಳು ಬ್ರಹ್ಮದೇವರ ಆಶೆಯನ್ನು ಬಿಟ್ಟು ನೇರವಾಗಿ ನಡೆದಳು ಕಾಶೀಪಟ್ಟಣಕ್ಕೆ.

ಅಲ್ಲಿಗೆ ಬಂದು ಪಿಲಪಿಲಾ ತೀರ್ಥದಲ್ಲಿ ಸ್ನಾನಮಾಡಿ ವಿಧಿಪೂರ್ವಕವಾಗಿ ಅಲ್ಲಿಯೇ ಒಂದು ಶಿವಲಿಂಗವನ್ನು ಸ್ಥಾಪನೆ ಮಾಡಿದಳು. ಮತ್ತು ಆ ತೀರ್ಥದ ದಂಡೆಯ ಮೇಲೆ ತಾನು ಸ್ಥಾಪನೆ ಮಾಡಿದ ಆ ನರ್ಮದೇಶ್ವರ ಲಿಂಗವನ್ನೇ ಭಕ್ತಿ ಉದ್ರೇಕದಿಂದ ಸೇವಿಸಿ ಆರಾಧನೆಗೈದಳು ಅವಳ ನಿರಂತರ ಅರ್ಚನೆ ಹಾಗೂ ಉಪಾಸನೆಯಿಂದ ಪ್ರಸನ್ನನಾದ ಪರಮೇಶ್ವರನು ಅವಳ ಎದುರು ಪ್ರತ್ಯಕ್ಷನಾಗಿ ಹೇಳಿದ.

**ಪರಮೇಶ್ವರ:-** ದೇವಿ ನರ್ಮದೆ, ನಿನ್ನ ತಪೋನುಷ್ಠಾನದಿಂದ ನಾನು ತೃಪ್ತನಾಗಿದ್ದೇನೆ. ನಿನಗೆ ಏನು ಬೇಕು ಆ ವರವನ್ನು ಕೇಳಿಕೊ.

**ನರ್ಮದಾ:-** ದೇವೇಶ್ವರಾ, ಅಂಥ ಇಂಥ ಚಿಕ್ಕ ಪುಟ್ಟ ವರಗಳನ್ನು ನಿನ್ನಂಥ ಮಹಾದೇವನಲ್ಲಿ ಕೇಳುವುದರಿಂದ ಏನು ಲಾಭ? ನನಗೆ ಬೇರೆ ಯಾವ ವರವೂ ಬೇಡ. ನಿನ್ನ ಪಾದಾರವಿಂದಗಳಲ್ಲಿ ಅವ್ಯಭಿಚರಿತವಾದ ಭಕ್ತಿಯನ್ನು ದಯಪಾಲಿಸು. ನರ್ಮದೆಯ ಈ ನುಡಿಯನ್ನು ಕೇಳಿ ಮತ್ತಷ್ಟು ಅವಳ ಮೇಲೆ ಕರುಣೋನ್ಮುಖನಾದ ಆ ಕಪರ್ದಿ. ತನ್ನ ಸಾನುಗ್ರಹ ದೃಷ್ಟಿಪಾತದಿಂದ ಮತ್ತೊಮ್ಮೆ ಆ ನರ್ಮದೆಯನ್ನು ನೋಡಿ ಆ ಪರಮೇಶ್ವರ ಹೇಳಿದ - ಸೌಭಾಗ್ಯ ಶಾಲಿನಿ, ನಿನ್ನ ತೀರದಲ್ಲಿ ಇದ್ದ ಎಲ್ಲ ಶಿಲಾಖಂಡಗಳು ನನ್ನ ವರದಿಂದ ಇನ್ನು ಮೇಲೆ ಶಿವಲಿಂಗ ಸ್ವರೂಪ ಆಗುವವು. ಗಂಗಾ ನದಿಯಲ್ಲಿ ಸ್ನಾನಮಾಡಿದ ಕೂಡಲೇ ಪಾಪಗಳೆಲ್ಲವೂ ನಾಶವಾಗುವವು. ಯಮುನಾ ನದಿಯಲ್ಲಿ ಏಳು ದಿನ ಸ್ನಾನಮಾಡಿದ ಸರ್ವಪಾಪ ಪರಿಹಾರ. ಸರಸ್ವತೀ ನದಿಯಲ್ಲಿ ಮೂರುದಿನ ಸ್ನಾನ ಮಾಡಿದರೆ. ಪಾಪಪ್ರಕ್ಷಾಳನ. ಆದರೆ (ನರ್ಮದಾ ನದಿಯ) ದರ್ಶನ ಮಾತ್ರದಿಂದಲೇ ಸರ್ವಪಾಪ ನಿವಾರಣೆ ಆಗುವುದು.

ಹೀಗೆ ಹೇಳಿ ಪರಮೇಶ್ವರನು ಅದೇ ಲಿಂಗದಲ್ಲಿ ಲೀನನಾದ. ನರ್ಮದೆಗೂ ಪರಮ ಸಂತೋಷವಾಯಿತು. ಪರಮೇಶ್ವರನ ಅನುಗ್ರಹದಿಂದ ತಾನು ಎಲ್ಲ ನದಿಗಳಿಗಿಂತ ಅದರಲ್ಲಿ ಗಂಗೆಗಿಂತ ಮಿಗಿಲಾಗಿ ಕಂಡು ಅವಳ ಹಿಗ್ಗು ಕೃತಕೃತ್ಯವೆನಿಸಿತ್ತು. ಗಂಗೆಯಲ್ಲಿ ಸ್ನಾನಮಾಡಿದವರ ಪಾಪ ಪರಿಹಾರವಾದರೆ, ನರ್ಮದೆಯ ದರ್ಶನದಿಂದಲೇ ಪಾಪ ಪರಿಹಾರ ಎಂಬ ಮಹಾದೇವರ ಮಾತು ಅವಳ ಧನ್ಯತೆಗೆ ಹಾಗೂ ಸಂತೃಪ್ತಿಗೆ ಮುಖ್ಯ ಕಾರಣವಾಗಿತ್ತು.

ಈ ಪ್ರಕಾರ ಮಾರ್ಕಂಡೇಯ ಮಹರ್ಷಿಗಳ ವಚನವನ್ನು ಕೇಳಿ ಎಲ್ಲ ಮುನೀಶ್ವರರೂ ಪ್ರಸನ್ನ ಚಿತ್ತರಾಗಿ ನರ್ಮದಾ ನದಿಯಲ್ಲಿ ಸ್ನಾನಮಾಡಿದರು. ಕಾಶಿಯಲ್ಲಿ ಸ್ವಯಂ ನರ್ಮದಾ ನದಿಯಿಂದಲೇ ಪ್ರತಿಷ್ಠಿತವಾದ ನರ್ಮದೇಶ್ವರ ಲಿಂಗದ ಮಹಾಮಹಿಮೆಯನ್ನು ಕೇಳಿ ಪರಮೇಶ್ವರನ ಪರಮ ಪ್ರಸಾದಕ್ಕೆ ಪಾತ್ರರಾದರು.

**ಸ್ಕಂದ:-** ಮಹಾದೇವರ ಹಿಂದೆ ರುದ್ರಭಾವವನ್ನು ಹೊಂದಿದಾಗ ಜಗದಂಬೆಯು ದಕ್ಷಪ್ರಜಾಪತಿಯ ಮಗಳಾಗಿ ಹುಟ್ಟಿದ್ದಳು. ಆಗ ಅವಳಿಗೆ ಸತೀ ಎಂದು ಹೆಸರು. ಆಗಲೇ ಆ ಮಹಾದೇವಿಯು ಕಾಶೀನಗರಕ್ಕೆ ಆಗಮಿಸಿದಳು. ತನ್ನ ತಂದೆಯಾದ ದಕ್ಷಪ್ರಜಾಪತಿಯ ಅಪ್ಪಣೆಯನ್ನು ಪಡೆದುಕೊಂಡು ತೀವ್ರ ತಪಶ್ಚರ್ಯವನ್ನು ಕೈಕೊಂಡಳು. ಅವಳ ತಂದೆ ಬಂದು ಕೇಳಿದ.

**ದಕ್ಷ:-** ವತ್ಸೆ! ಈ ಚಿಕ್ಕ ವಯಸ್ಸಿನಲ್ಲಿ ನೀನೇಕೆ ಉಗ್ರ ತಪಸ್ಸು ಕೈಕೊಂಡೆ?

**ದಾಕ್ಷಾಯಿಣಿ:-** ಕನ್ಯೆಯರಿಗೆ ಅವರವರ ರೂಪಕ್ಕೆ ಅನುರೂಪನೂ, ಗುಣಕ್ಕೆ ಅನುಗುಣನೂ, ಸರ್ವರೀತಿಯಿಂದಲೂ ಯೋಗ್ಯನೂ ಆದ ವರನು ದೊರಕುವುದು

ದುಸ್ತರ ಹೆಣ್ಣಿನ ಜೀವನದಲ್ಲಿ ವಿವಾಹ ಒಂದೇ ಸಲ. ಅದರಲ್ಲಿ ಹೊಂದಿಕೆ ಆಗದೆ ದುಷ್ಟ ಅಥವಾ ರೋಗಿಷ್ಠ ಪಾಪಿಷ್ಠ ಪತಿಯು ದುರ್ದೈವದಿಂದ ದೊರಕಿದರೆ ಹೆಣ್ಣಿನ ಜೀವನ ಕಣ್ಣೀರಿನ ಕಡಲು. ಅದಕ್ಕಾಗಿ ಯೋಗ್ಯನಾದ ಪತಿ ದೊರಕಲಿ ಎಂದು ನಾನು ಅವಿಮುಕ್ತ ಕ್ಷೇತ್ರ ಎನಿಸಿದ ಈ ಕಾಶಿಯಲ್ಲಿ ತಪಸ್ಸನ್ನು ಕೈಕೊಂಡಿದ್ದೇನೆ. ಇದು ನನ್ನ ಜೀವನದ ಪ್ರಶ್ನೆಯಾದುದರಿಂದ ಯಾರೂ ವಿಘ್ನ ಮಾಡ ಬೇಡಿರಿ. ದಯವಿಟ್ಟು ಅನುಮತಿ ನೀಡಿರಿ.

ಮಗಳ ಸದುದ್ದೇಶವನ್ನು ಅಭಿನಂದಿಸಿ ಅವಳ ತಪಶ್ಚರ್ಯೆಯನ್ನು ಅನುಮೋದಿಸಿ ಅವಳಿಗೆ ಸಕಲ ಸೌಕರ್ಯವನ್ನು ಏರ್ಪಡಿಸಿ ದಕ್ಷಪ್ರಜಾಪತಿಯು ತನ್ನ ಮನೆಗೆ ಹೊರಟು ಹೋದ. ಅನಂತರ ಮತ್ತೆ ಮುಂದುವರೆಯಿತು ಆ ಸತೀ ದೇವಿಯ ತೀಕ್ಷ್ಣ ತಪಸ್ಸು.

ಹೀಗೆ ಹಲವಾರು ದಿನ ತಪೋನುಷ್ಠಾನದ ಎಲ್ಲ ನಿಷ್ಠುರಗಳನ್ನು ಸಹಿಸಿ ಕ್ಷೀಣಾವಾದ ಅವಳ ಕೋಮಲ ಶರೀರವು ಸೊರಗಿ ಕೊರಗಿ ಕಾಷ್ಠದಂತಾಯಿತು. ಅವಳ ಈ ದಯನೀಯವಾದ ದೇಹಸ್ಥಿಯನ್ನೂ, ಗಣನೀಯವಾದ ಶ್ರಮಸಹಿಷ್ಣುತೆಯನ್ನೂ, ಶ್ಲಾಘನೀಯವಾದ ತಪಶ್ಚರ್ಯೆಯನ್ನೂ ಅನುಲಕ್ಷಿಸಿ ಅವಳ ಎದುರು ಲಿಂಗರೂಪದಿಂದ ಪ್ರಕಟನಾದ ಗಂಗಾಧರ ಮತ್ತು ಸ್ನೇಹ ಸಿಕ್ತವಾದ ಧ್ವನಿಯಿಂದ ಮಾತನಾಡಿದ ಶುಭಾಂಗಿ, ನೀನು ಇನ್ನು ತಪಸ್ಸು ಮಾಡುವ ಅವಶ್ಯಕತೆಯಿಲ್ಲ ಯೋಗ್ಯವಾದರು ವರ ದೊರಕಬೇಕೆಂಬ ಉದ್ದೇಶದಿಂದಲ್ಲವೇ ನೀನು ತಪಸ್ಸನ್ನು ಮಾಡುತ್ತ ಇರುವುದು? ನಾನೇ ನಿನಗೆ ಯೋಗ್ಯವರನಾಗಿ ಕಣ್ಣೆದುರು ನಿಂತಿದ್ದೇನೆ. ನಿನ್ನ ಮನೋಗತವನ್ನು ಚೆನ್ನಾಗಿ ಅರಿತು, ನಿನ್ನ ಅಪೇಕ್ಷೆಯ ಪ್ರಕರಾವೇ ನಿನ್ನ ಪಾಣಿ ಗ್ರಹಣವನ್ನು ಮಾಡುತ್ತೇನೆ. ಇಂದಿನಿಂದ ಎಂಟನೆಯ ದಿನ ನಿನ್ನ ತಂದೆ ದಕ್ಷಪ್ರಜಾ ಪತಿಯು ನಿನ್ನನ್ನು ನನಗೆ ಕೊಟ್ಟು ಮದುವೆ ಮಾಡುವನು. ನೀನು ಪೂಜೆಮಾಡಿದ ಈ ಶಿವಲಿಂಗವು ಸತೀಶ್ವರ ಲಿಂಗ ಎಂಬ ಹೆಸರಿನಿಂದ ಜಗತ್ತಿನಲ್ಲಿ ಪ್ರಖ್ಯಾತವಾಗುವುದು. ಈ ಸತೀಶ್ವರ ಲಿಂಗವನ್ನು ಆರಾಧಿಸಿ ನಿನ್ನ ಮನೋರಥವು ಪೂರ್ಣವಾದಂತೆ. ಇಲ್ಲಿ ಬಂದು ಭಕ್ತಿಯಿಂದ ಈ ಲಿಂಗವನ್ನು ಪೂಜಿಸಿದವರ ಮನೋರಥಗಳೆಲ್ಲವೂ ಪೂರ್ಣವಾಗುವವು. ಮದುವೆಯಾಗದ ಕನ್ಯೆಯರು ಕಾಶೀಕ್ಷೇತ್ರದಲ್ಲಿರುವ ಈ ಸತೀಶ್ವರ ಲಿಂಗವನ್ನು ಭಕ್ತಿಯಿಂದ ಪೂಜಿಸಿದರೆ ಅವರಿಗೆ ಅವರ ಅಪೇಕ್ಷೆಗೆ ತಕ್ಕಂಥ ಯೋಗ್ಯನಾದ ವರನು ದೊರಕುವನು. ಇದರಂತೆ ಮದುವೆಯಾಗದ ಕುಮಾರ ಪುರುಷರು ಈ ಸತೀಶ್ವರ ಲಿಂಗವನ್ನು ಆರಾಧಿಸಿದರೆ ಅವರಿಗೆ ಮನಸ್ಸಿಗೆ ತಕ್ಕಂಥ ಸಾಧ್ವೀಮಣಿಯಾದ ಪತಿಯ ಇಚ್ಛಾನುವರ್ತಿನಿಯಾದ ಸುಂದರ ಕನ್ಯೆಯು ದೊರಕುವಳು. ಹೀಗೆ ಹೇಳಿ ಆ ಬಾಲಚಂದ್ರನು ಅದೇ ಲಿಂಗದಲ್ಲಿ ಅಂತರ್ಧಾನ ಹೊಂದಿದನು. ಸತೀದೇವಿಯು ಪರಮೇಶ್ವರನ ಪ್ರಸಾದವನ್ನು ಪಡೆದು, ಕೃತಕೃತ್ಯತೆಯ ಭಾವದಿಂದ ಸಂತೃಪ್ತಳಾಗಿ ತನ್ನ ತಂದೆಯ ದಕ್ಷ ಧಾಮಕ್ಕೆ ಮರಳಿದಳು. ಮುಂದೆ ಎಂಟನೆಯ ದಿನದಲ್ಲಿ ಶುಭಮುಹೂರ್ತದಲ್ಲಿ ದಕ್ಷಪ್ರಜಾಪತಿಯು ತನ್ನ ಮಗಳಾದ ಆ ದಾಕ್ಷಾಯಿಣಿಯನ್ನು ಮಹಾದೇವನಿಗೆ ಕೊಟ್ಟು ವೈವಾಹಿಕ ಮಂಗಳ ಸಮಾರಂಭವನ್ನು ವಿಜೃಂಭಣೆಯಿಂದ ನೆರವೇರಿಸಿದ.

## ಅಮೃತೇಶ್ವರ ಲಿಂಗದ ಮಹಿಮೆ ಮತ್ತು ವೇದವ್ಯಾಸರು ನಿರೂಪಿಸಿದ ಧರ್ಮಗಳು

**ಸ್ಕಂದ:-** ಅಗಸ್ತ್ಯ ಮುನಿಯೇ, ಇದೊಂದು ಹಿಂದಿನ ಕಾಲದ ಘಟನೆ. ಪರಮ ಪವಿತ್ರವಾದ ಈ ವಾರಣಾಸಿ ಕ್ಷೇತ್ರದಲ್ಲಿ ಸನಾರು ಎಂಬ ಒಬ್ಬ ಮುನಿಯು ಇರುತ್ತಿದ್ದ. ಅತಿಥಿ ಪೂಜೆ, ಬ್ರಹ್ಮಯಜ್ಞ, ಶಿವಲಿಂಗ ಪೂಜೆ ಮುಂತಾದವುಗಳನ್ನು ಮಾಡುತ್ತ

ಗೃಹಸ್ಥಾಶ್ರಮ ಧರ್ಮಪಾಲನೆಯಲ್ಲಿ ತತ್ಪರನಾದ ಆ ಮುನಿಯು ತೀರ್ಥ ಕ್ಷೇತ್ರಗಳಲ್ಲಿ ಯಾರಿಂದಲೂ ದಾನವನ್ನು ಸ್ವೀಕರಿಸುತ್ತಿರಲಿಲ್ಲ. ಅವನಿಗೆ ಉಪಜಂಘನಿ ಎಂಬ ಹೆಸರಿನ ಓರ್ವ ವಿದ್ಯಾವಿನಯ ಸಂಪನ್ನನಾದ ಮಗನಿದ್ದ. ಆ ಮುನಿ ಕುಮಾರನು ಒಂದು ದಿನ ಯಜ್ಞ ಹಾಗೂ ದೇವ ಪೂಜೆಗೆ ಬೇಕಾಗುವ ದರ್ಭೆ, ಹೂ, ತುಳಸಿ, ಅರಳಿಕಟ್ಟಿಗೆ ಮುಂತಾದವುಗಳನ್ನು ತರಲು ಕಾಡಿಗೆ ಹೋದಾಗ ಒಂದು ಹಾವು ಕಚ್ಚಿಬಿಟ್ಟಿತು. ಅವನ ಜೊತೆಗೆ ಇದ್ದ ಮಿತ್ರರು ಉಲ್ಬಣವಾದ ಹಾವಿನ ವಿಷದಿಂದ ಮೂರ್ಛಿತನಾಗಿ ಬಿದ್ದ ಆ ಮುನಿಕುಮಾರನನ್ನು ಹೊತ್ತುಕೊಂಡು ಬಂದು ಸನಾರುವಿನ ಆಶ್ರಮದ ಅಂಗಳದಲ್ಲಿ ತಂದು ಇಳಿಸಿದರು ಸನಾರುಮುನಿಗೆ ತನ್ನ ಮೆಚ್ಚಿನ ಮಗ ಹೀಗೆ ಒಮ್ಮೆಲೇ ಹಾವು ಕಚ್ಚಿ ಮರಣ ಹೊಂದಿದ್ದನ್ನು ನೋಡಿ ವಜ್ರಾಘಾತ ಆದಂತೆ ಆಯಿತು. ನಿರುಪಾಯನಾದ ಅವನು ಆ ಮಗನ ಪ್ರೇತವನ್ನು ಸ್ವರ್ಗದ್ವಾರ ಸಮೀಪದ ಮಹಾಸ್ಮಶಾನ ಭೂಮಿಗೆ ಹೊತ್ತು ತಂದನು. ಅಲ್ಲಿ ಶ್ರೀ ಫಲದಂತೆ ಆಕಾರವುಳ್ಳ ಒಂದು ಗುಪ್ತವಾದ ಶಿವಲಿಂಗವು ಇದ್ದಿತು. ಅಲ್ಲಿಯೇ ಆ ಮುನಿಕುಮಾರನ ಶವವನ್ನು ಇಟ್ಟು ಅವನನ್ನು ಹೊತ್ತು ತಂದ ಬ್ರಾಹ್ಮಣರೆಲ್ಲ ಯೋಚಿಸ ತೊಡಗಿದರು. ಹಾವು ಕಚ್ಚಿ ಮೃತರಾದವರ ದಹನ ಸಂಸ್ಕಾರವನ್ನು ಹೇಗೆ ಮಾಡಬೇಕು ತಮ್ಮ ತಮ್ಮಲ್ಲಿ ಧರ್ಮ ಶಾಸ್ತ್ರವನ್ನು ಉದಾಹರಿಸಿ ಆಲೋಚಿಸತೊಡಗಿದರು. ಆದರೆ ಅಷ್ಟರಲ್ಲಿ ಶವವಾಗಿ ಬಿದ್ದ ಮುನಿಕುಮಾರ ಉಪಜಂಘನಿಯು ಮಲಗಿದವರು ಎದ್ದು ಕೂಡುವಂತೆ ಒಮ್ಮೆಲೇ ಆ ಚಟ್ಟದಿಂದ ಎದ್ದು ಕುಳಿತನು. ನಾಗರಹಾವಿನ ಕಡಿತದಿಂದ ಮೈಯೆಲ್ಲ ನಂಜುಏರಿ, ದೇಹವೆಲ್ಲ ನೀಲಿಗಟ್ಟಿ ಉಸಿರು ನಿಂತು ಸತ್ತು ಮೂರು ಗಂಟೆಯಾದ ಬಳಿಕ ಸ್ಮಶಾನದಲ್ಲಿ ತಂದು ಇಟ್ಟ ತನ್ನ ಮಗ ಮತ್ತೆ ಬದುಕಿ ಎದ್ದು ಕೂತದ್ದನ್ನು ನೋಡಿ ಆ ಸನಾರುಮುನಿಗೆ ಅತ್ಯಂತ ಆಶ್ಚರ್ಯವಾಯಿತು. ಅದೇ ವೇಳೆಯಲ್ಲಿ ಒಂದು ಇರುವೆಯು ಎಲ್ಲಿಯೋ ಸತ್ತು ಬಿದ್ದ ಮತ್ತೊಂದು ಇರುವೆಯ ಶವವನ್ನು ಎಳೆಯುತ್ತ ಅಲ್ಲಿಗೆ ಬಂದಿತು. ಅಲ್ಲಿಗೆ ಬಂದ ಕೂಡಲೇ ಆ ಸತ್ತ ಇರುವೆಯು ಬದುಕಿ ಎದ್ದು ತನ್ನನ್ನು ಎಳೆದು ತಂದ ಇರುವೆಯೊಡನೆ ಆನಂದದಿಂದ ಹರಿದು ಮುಂದೆ ಹೋಯಿತು. ಅದನ್ನು ಪ್ರತ್ಯಕ್ಷವಾಗಿ ನೋಡಿದ ಸನಾರು ಮುನಿಯ ತಲೆಯಲ್ಲಿ ನೂರು ಮಿಂಚು ಮಿಂಚಿದಂತಾಯಿತು. ಕೂಡಲೇ ಆ ಮುನಿಯ ತಲೆಯಲ್ಲಿ ಒಂದು ವಿಚಾರ ಬಂದಿತು. ''ಈ ಸ್ಥಳದಲ್ಲಿಯೇ ಏನೋ ಒಂದು ಪುನರ್ಜೀವದ ತತ್ವ ಇದೆ. ಇಲ್ಲಿಯ ನೆಲಕ್ಕೆ ತಾಕಿದ ಮೃತವಸ್ತುಗಳು ಪುನರ್ಜೀವನವನ್ನು ಪಡೆಯುತ್ತವೆ. ಈಗ ನನ್ನ ಕಣ್ಣೆದುರೇ ಎರಡು ದೃಷ್ಟಾಂತಗಳಿಂದ ಈ ಸ್ಥಳದಲ್ಲಿ ಯಾವುದೋ ಒಂದು ಮೃತಸಂಜೀವನದ ರಹಸ್ಯ ಅಡಗಿದೆ.

ಸನಾರುಮುನಿಯ ತಲೆಯಲ್ಲಿ ಈ ಯೋಚನೆ ಬರುವದೊಂದೇ ತಡ, ಸಮೀಪದ ಗಂಗೆಯ ತೀರ್ಥದಲ್ಲಿ ಸ್ನಾನಮಾಡಿ ಬಂದು ಆ ಶವ ಇಟ್ಟ ಸ್ಥಳವನ್ನು ಅಗೆದು ಬಗೆದು ನೋಡಿದ. ಅಲ್ಲಿಯ ಭೂಗರ್ಭದಲ್ಲಿ ಒಂದು ಶ್ರೀಫಲದ (ಬಿಲ್ವಪತ್ರಿಕಾಯಿ) ಆಕಾರದ ಒಂದು ಶಿವಲಿಂಗವು ಗೋಚರವಾಯಿತು. ಅದನ್ನು ನೋಡಿದ ಕೂಡಲೇ ಆ ಸನಾರು ಮುನಿಯು ಅದರ ಸುತ್ತ ಮುತ್ತಲಿನ ಮಣ್ಣನ್ನೆಲ್ಲ ಕೆದರಿ ತೆಗೆದು ಆ ಶಿವಲಿಂಗವನ್ನು ಭಕ್ತಿಯಿಂದ ಪೂಜಿಸಿದನು. ಸತ್ತವರನ್ನು ಮತ್ತೆ ಬದುಕಿಸುವ ಆ ಲಿಂಗಕ್ಕೆ ಅಮೃತೇಶ್ವರರ ಎಂದು ಹೆಸರನ್ನು ಇಟ್ಟನು. ಮತ್ತು ತಾನು ಬದುಕಿ ಇರುವವರೆಗೆ ಪ್ರತಿ ದಿನವೂ ಅಲ್ಲಿಗೆ ಬಂದು ಆ ಅಮೃತೇಶ್ವರ ಲಿಂಗದ ಪೂಜೆಯನ್ನು ಅವನೂ, ಅವನ ಮಗನಾದ ಉಪಜಂಘನಿ

ಎಂಬ ಮುನಿಕುಮಾರನೂ ಅತ್ಯಂತ ಶ್ರದ್ಧೆಯಿಂದ ಮಾಡುತ್ತ ಇದ್ದರು. ಮುತ್ತು ಅವನು ತನ್ನ ಭೇಟಿಗೆ ಬಂದವರಿಗೆಲ್ಲ 'ಈ ಆನಂದವನದಲ್ಲಿ ಅಮೃತೇಶ್ವರ ಲಿಂಗದ ಸ್ಪರ್ಶದಿಂದ ಅಮೃತತ್ವ ಪ್ರಾಪ್ತಿಯು ಆಗುತ್ತದೆ ಇದಕ್ಕೆ ನನ್ನ ಮಗ ಹಾಗೂ ಈ ಒಂದು ಇರುವೆ ಇವು ಎರಡು ನನ್ನ ಪ್ರತ್ಯಕ್ಷ ಸಾಕ್ಷಿ ಹೀಗೆ ಹೇಳುತ್ತಲಿದ್ದನು. ಅಂದಿನಿಂದ ಈ ಅಮೃತೇಶ್ವರ ಲಿಂಗವು ಕಾಶೀ ಪಟ್ಟಣದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಪಡೆಯಿತು. ಕಲಿಯುಗದಲ್ಲಿ ಈ ಲಿಂಗದ ಅದ್ಭುತಶಕ್ತಿಯು ಗುಪ್ತವಾದರೂ ಈಗ ಆ ಅಮೃತೇಶ್ವರ ಲಿಂಗದ ಸ್ಪರ್ಶ ಮಾತ್ರದಿಂದ ಜೀವಂತ ಮಾನವರು ಜೀವನ್ಮುಕ್ತರು ಆಗುತ್ತಾರೆ. ಈ ಅಮೃತೇಶ್ವರಕ್ಕೆ ಸಮಾನವಾದ ಶಿವಲಿಂಗವು ಭೂಲೋಕದಲ್ಲಿ ಎಲ್ಲಿಯೂ ಸಿಗುವುದಿಲ್ಲ. ಪ್ರಯತ್ನ ಪೂರ್ವಕವಾಗಿಯೇ ಪರಮೇಶ್ವರನು ಇದನ್ನು ಗುಪ್ತವಾಗಿರಿಸಿದ್ದಾನೆ.

**ಅಗಸ್ತ್ಯ:-** ಗಿರಿಜಾನಂದನ, ಮಾನವರು ತಮ್ಮ ಆತ್ಮಶುದ್ಧಿ ಹಾಗೂ ಇಂದ್ರಿಯ ಶುದ್ಧಿಗಾಗಿ ಆಚರಿಸಬೇಕಾದ ಕೃಚ್ಛ್ರ, ಚಾಂದ್ರಾಯಣ ಮುಂತಾದ ವ್ರತಗಳ ವಿಧಿ ವಿಧಾನ ಸ್ವರೂಪಗಳನ್ನು ನಿರೂಪಿಸಿರಿ.

**ಸ್ಕಂದ:-** ಮುನಿ ಮುನೀಷಿಯೇ, ಪಾಪ ಪರಿಹಾರಕವಾದ ವ್ರತಗಳ ಆಚರಣೆಯ ವಿಧಿ ವಿಧಾನಗಳನ್ನು ವಿವರಿಸುತ್ತೇನೆ ಕೇಳು. ವ್ರತಗಳಲ್ಲೆಲ್ಲ ಶ್ರೇಷ್ಠವಾದ ಕೃಚ್ಛ್ರ ಎಂಬ ವ್ರತವು ಪಾದ ಕೃಚ್ಛ್ರ, ಪರ್ಣ ಕೃಚ್ಛ್ರ, ಸಾಮ್ಯ ಕೃಚ್ಛ್ರ, ಅತಿ ಕೃಚ್ಛ್ರಕೃಚ್ಛ್ರ ತಿಕೃಚ್ಛ್ರ, ಮುಂತಾಗಿ ಅನೇಕ ಬಗೆಯಾಗಿದೆ. ಪಾದ ಕೃಚ್ಛ್ರ ವ್ರತ ಎಂದರೆ ಹಗಲು ಹೊತ್ತಿನಲ್ಲಿ ಒಂದು ಸಲ ಊಟ ಎರಡನೇ ದಿನದಲ್ಲಿ ರಾತ್ರಿ ಮಾತ್ರ ಊಟ. ಮೂರನೆಯ ದಿನ ಯಾರನ್ನು ಬೇಡದೆ ಸಿಕ್ಕಷ್ಟು ಅಲ್ಲ ಸ್ವಲ್ಪ ಆಹಾರವನ್ನು ಒಂದು ಸಲ ಮಾತ್ರ ತಿನ್ನುವುದು. ನಾಲ್ಕನೇ ದಿನ ಪೂರ್ಣ ಉಪವಾಸ ಮಾಡುವುದು. ಇದಕ್ಕೆ ಪಾದಕೃಚ್ಛ್ರ ವ್ರತ ಎನ್ನುವರು, ಆಲದ ಎಲೆ, ಅತ್ತಿಯ ಮರದ ಎಲೆ ಮತ್ತು ಕಮಲದ ಎಲೆ, ಬಿಲ್ವ ಪತ್ರ ಹಾಗೂ ದರ್ಭೆ ಈ ಎಲೆಗಳನ್ನು ಒಂದೊಂದು ದಿನ ತಿಂದು ಬರೀ ನೀರು ಕುಡಿದು ಇರುವುದು ಪರ್ಣಕೃಚ್ಛ್ರ ಎನಿಸುತ್ತದೆ. ಮೊದಲನೆಯ ದಿನ ಎಳ್ಳಿನ ಹಿಂಡಿ, ಎರಡನೆಯ ದಿನ ತುಪ್ಪ, ಮೂರನೆಯ ದಿನ ಮಜ್ಜಿಗೆ, ನಾಲ್ಕನೆಯ ದಿನ ನೀರು, ಐದನೆಯ ದಿನ ಹಿಟ್ಟು ತಿಂದು, ಕೊನೆಯ ದಿನ ಪೂರ್ಣ ಉಪವಾಸವಿದ್ದು ದೇವರ ಧ್ಯಾನ ಮಾಡುವ ವ್ರತಕ್ಕೆ ಸೌಮ್ಯ ಕೃಚ್ಛ್ರವ್ರತ ಎನ್ನುವರು. ಮೂರು ದಿನ ಪ್ರಾತಃಕಾಲದಲ್ಲಿ ಹವಿಶ್ಯ (ಹೋಮಮಾಡಲು ವಿಹಿತವಾದ ಅಕ್ಕಿ ಹೆಸರು ಬೇಳೆ, ತುಪ್ಪ, ಹಾಲು, ಗೋದಿ ಮುಂತಾದ ಹೋಮಶಾಸ್ತ್ರದಲ್ಲಿ ಹೇಳಿದ ವಸ್ತುಗಳು) ಅನ್ನವನ್ನು ಭೋಜನ ಮಾಡಬೇಕು. ಅನಂತರ ಮೂರು ದಿನ ಸಾಯಂಕಾಲದಲ್ಲಿ ಹವಿಷ್ಯಾನ್ನದ ಭೋಜನ. ಮತ್ತೆ ಮೂರು ದಿನ ಯಾರನ್ನು ಬೇಡದೆ ಪ್ರಾಪ್ತವಾಗುವ ಹವಿಷ್ಯವಾಗುವ ಆಹಾರವನ್ನು ಸ್ವೀಕರಿಸುವುದು. ಕೊನೆಗೆ ಮೂರು ದಿನ ಯಾವ ಆಹಾರವನ್ನು ತೆಗೆದುಕೊಳ್ಳದೆ ಉಪವಾಸ ಇರುವುದು. ಇದಕ್ಕೆ ಕೃಚ್ಛ್ರವ್ರತ ಎನ್ನುವರು. ಅತೀ ಕೃಚ್ಛ್ರ ವ್ರತವನ್ನು ಪಾಲನೆ ಮಾಡುವವರು ಪ್ರತಿ ದಿನವು ಪ್ರಾತಃಕಾಲದಲ್ಲಿ ಒಂದೊಂದು ತುತ್ತನ್ನು ಮಾತ್ರ ಊಟಮಾಡಬೇಕು. ಮತ್ತೆ ಮೂರು ದಿನ ಸಾಯಂಕಾಲ ಭೋಜನ. ಒಂದೊಂದು ತುತ್ತು ಮಾತ್ರ ಮತ್ತೆ ಮೂರು ದಿನ ಅಯಾಚಿತವಾದ ಆಹಾರ ಗ್ರಹಣಮಾಡಬೇಕು. ಕೊನೆಯ ಮೂರು ದಿನ ಅಖಂಡ ಉಪವಾಸವನ್ನು ಆಚರಿಸಬೇಕು. ಇದಕ್ಕೆ ಅತಿಕೃಚ್ಛ್ರ ವ್ರತ ಎನ್ನುವರು. ಇಪ್ಪತ್ತೊಂದು ದಿನ ಕೇವಲ ಹಾಲನ್ನು ಮಾತ್ರ ಕುಡಿದು ಇರುವುದಕ್ಕೆ ಕೃಚ್ಛ್ರಾತಿ ಕೃಚ್ಛ್ರ ಎನ್ನುವರು. ಹನ್ನೆರಡು ದಿನ ಅಖಂಡ ಉಪವಾಸ ಮಾಡುವುದಕ್ಕೆ ಪರಾಕ ವ್ರತ ಎನ್ನುವರು.

ಮೂರು ದಿನ ಮುಂಜಾನೆ ಊಟ. ಮೂರು ದಿನ ಸಾಯಂಕಾಲ ಊಟ. ಮೂರು ದಿನ ಆಯಾಚಿತ ಅನ್ನ ಗ್ರಹಣ. ಕೊನೆಯ ಮೂರು ದಿನ ಅಖಂಡ ಉಪವಾಸ ಮಾಡುವುದಕ್ಕೆ ರಾಜಪತ್ಯ ವ್ರತ ಎನ್ನುವರು. ಒಂದು ದಿನ ಗೋಮೂತ್ರ, ಗೋಮಯ, ಹಸುವಿನ ಮೊಸರು, ಗೋವಿನ ಹಾಲು, ಆಕಳ ತುಪ್ಪ ಹಾಗೂ ದರ್ಭೆ ಹಾಕಿದ ನೀರು ಇವುಗಳನ್ನೆಲ್ಲ ಕೂಡಿಸಿ ಕುಡಿಯಬೇಕು. ಎರಡನೆಯ ದಿನ ಪೂರ್ಣ ಉಪವಾಸಮಾಡಬೇಕು. ಎರಡನೆಯ ದಿನ ರಾತ್ರಿ ಮಾತ್ರ ಉಪವಾಸ. ಮೂರನೆಯ ದಿನ ಪೂರ್ಣ ಉಪವಾಸ ಮಾಡಿದರೆ. ಇದಕ್ಕೆ ಕೃಚ್ಛ್ರ ಸಾಂತಪನ ವ್ರತ ಎಂದು ಕರೆಯುವರು.

ಮಹಾಸಾಂತಪನ ಎಂಬ ವ್ರತದಲ್ಲಿ ಮೊದಲನೆಯ ದಿನ ಗೋಮೂತ್ರವನ್ನು ಮಾತ್ರ ಸೇವನೆಮಾಡಬೇಕು. ಎರಡನೆಯ ದಿನ ಗೋಮಯ, ಮೂರನೆಯ ದಿನ ಗೋವಿನ ಹಾಲು, ನಾಲ್ಕನೆಯ ದಿನ ಗೋವಿನ ಮೊಸರು, ಐದನೆಯ ದಿನ ಆಕಳ ತುಪ್ಪ, ಆರನೆಯ ದಿನ ಕುಶೋದಕ (ದರ್ಭೆ ಹಾಕಿದ ನೀರು) ಮಾತ್ರ ಸೇವನೆಮಾಡಬೇಕು. ಏಳನೆಯ ದಿನ ಪೂರ್ಣ ಉಪವಾಸ ಮಾಡಬೇಕು. ತಪ್ತ ಕೃಚ್ಛ್ರ ಎಂಬ ವ್ರತವನ್ನು ಆಚರಣ ಮಾಡುವವರು ಪ್ರತಿದಿನವೂ ಒಂದು ಸಲ ಸ್ನಾನಮಾಡಿ ದೇವರನ್ನು ಪೂಜಿಸಿ ಏಕಾಗ್ರಚಿತ್ರನಾಗಿ ಮೊದಲಿನ ಮೂರು ದಿನ ಬಿಸಿನೀರು, ಮುಂದಿನ ಮೂರು ದಿನ ಕರಗಿದ ತುಪ್ಪ, ಅದರ ಮುಂದಿನ ಮೂರು ದಿನ ಕೇವಲ ಗಾಳಿ ಕುಡಿದು ಇರಬೇಕು. ಇದಕ್ಕೆ ತಪ್ತ ಕೃಚ್ಛ್ರ ಎನ್ನುವರು. ನವಣಕ್ಕಿಯ ಅನ್ನವನ್ನು ಗೋಮೂತ್ರದೊಂದಿಗೆ ಉಂಡು ದೇಹ ಶುದ್ಧಿ ಮಾಡಿಕೊಳ್ಳುವ ಒಂದು ದಿನದ ವ್ರತಕ್ಕೆ ಏಕಾಹ್ನಿಕ ಕೃಚ್ಛ್ರ ಎನ್ನುವರು. ಎರಡೂ ಕೈಗಳನ್ನು ಮೇಲೆ ಮಾಡಿ ಹಗಲು ಹೊತ್ತು ವಾಯು ಭಕ್ಷಣಮಾಡಿ ರಾತ್ರಿ ಬೆಳಗಾಗುವ ಹೊತ್ತಿಗೆ ನೀರಿನಲ್ಲಿ ನಿಂತು ದೇವರ ಧ್ಯಾನ ಮಾಡುವ ಕ್ರಮಕ್ಕೆ ವಾತಾಂಬು ವ್ರತ ಎನ್ನುವರು. ತಿಂಗಳಿನ ಕೃಷ್ಣಪಕ್ಷದಲ್ಲಿ ಪ್ರತಿ ಪದೆಯ ದಿನ ಹದಿನೈದು ತುತ್ತು ಊಟವನ್ನು ಮಾಡಬೇಕು. ಬಿದಿಗೆಯ ದಿನ ಹದಿನಾಕು ತದಿಗೆಯಂದು ಹದಿಮೂರು ಹೀಗೆ ಒಂದೊಂದು ದಿನ ಒಂದೊಂದು ತುತ್ತನ್ನು ಕಡಿಮೆ ಮಾಡುತ್ತ ಮಾಡುತ್ತ ಶುಕ್ಲಪಕ್ಷದಲ್ಲಿ ಒಂದೊಂದು ತುತ್ತನ್ನು ಹೆಚ್ಚು ಹೆಚ್ಚು ಸೇವಿಸುತ್ತ ಹೋಗಬೇಕು. ಪ್ರತಿದಿನವೂ ಮೂರು ಹೊತ್ತು ಸ್ನಾನ ಮಾಡಬೇಕು. ಇದಕ್ಕೆ ಚಾಂದ್ರಾಯಣ ವ್ರತ ಎನ್ನುವರು. ಅಥವಾ ಶುಕ್ಲಪಕ್ಷ ಪ್ರತಿಪದೆಯಿಂದ ಒಂದೊಂದು ತುತ್ತು ಅನ್ನವನ್ನು ಬೆಳೆಸುತ್ತಾ ಹೋಗಬೇಕು. ಎಂದರೆ ಶುಕ್ಲಪಕ್ಷ ಪ್ರತಿಪದೆಯಂದು ಒಂದೇ ತುತ್ತು ಅನ್ನವನ್ನು ಊಟಮಾಡಬೇಕು. ಬಿದಿಗೆ ಎರಡು ತುತ್ತು, ತದಿಗೆ ಮೂರು ತುತ್ತು, ಹೀಗೆ ದಿನ ಒಂದು ತುತ್ತಿನಂತೆ ಬೆಳೆಸುತ್ತ ಹುಣ್ಣಿಮೆಯ ದಿನ ಹದಿನೈದು ಅನ್ನದ ತುತ್ತುಗಳನ್ನು ಉಣ್ಣಬೇಕು. ಅನಂತರ ಕೃಷ್ಣಪಕ್ಷದ ಪ್ರತಿಪದೆಯಿಂದ ಒಂದೊಂದು ತುತ್ತು ಕಡಿಮೆ ಮಾಡುತ್ತ ಅಮಾವಾಸ್ಯೆಯ ದಿನ ಸಂಪೂರ್ಣ ಕಡಿಮೆ ಮಾಡಬೇಕು. ಇದಕ್ಕೆ ಚಾಂದ್ರಾಯಣ ವ್ರತ ಎನ್ನುವರು. ಇನ್ನೊಂದು ಶಿಶುಚಾಂದ್ರಾಯಣ ಎಂಬ ವ್ರತದಲ್ಲಿ ನಾಲ್ಕು ತುತ್ತು ಅನ್ನ ಹೀಗೆ ಊಟ ಮಾಡುತ್ತ ಭಗವತ್ ಪೂಜೆಯನ್ನು ಮಾಡಬೇಕು. ಇದಕ್ಕೆ ಶಿಶುಚಾಂದ್ರಾಯಣ ವ್ರತ ಎನ್ನುವರು ಇನ್ನೊಂದು ಶಿಶುಚಾಂದ್ರಾಯಣ ಎಂಬ ವ್ರತದಲ್ಲಿ ತಿಂಗಳವರೆಗೆ ಪ್ರತಿದಿನ ಪ್ರಾತಃಕಾಲದಲ್ಲಿ ನಾಲ್ಕು ತುತ್ತು ಅನ್ನ, ಸೂರ್ಯಸ್ತದಲ್ಲಿ ನಾಲ್ಕು ತುತ್ತು ಅನ್ನ ಹೀಗೆ ಊಟ ಮಾಡುತ್ತ ಭಗವತ್ ಪೂಜೆಯನ್ನು ಮಾಡಬೇಕು. ಇದಕ್ಕೆ ಶಿಶುಚಾಂದ್ರಾಯಣ ವ್ರತ ಎನ್ನುವರು. ಇದರಂತೆ ಪ್ರತಿದಿನವೂ ಮಧ್ಯಾಹ್ನ ಕಾಲದಲ್ಲಿ

ಹವಿಷ್ಯಾನ್ನವನ್ನು ಎಂಟು ತುತ್ತು ಮಾತ್ರ ಭೋಜನ ಮಾಡುತ್ತ ಒಂದು ತಿಂಗಳ ಈ ಮಿತಾಹಾರವನ್ನು ಸಾಧಿಸಬೇಕು. ಇದಕ್ಕೆ ಯತಿ ಚಾಂದ್ರಾಯಣ ಎನ್ನುವರು. ಇನ್ನೊಂದು ವ್ರತದಲ್ಲಿ ಮನುಷ್ಯರು ಒಟ್ಟು ಒಂದು ತಿಂಗಳಿನಲ್ಲಿ ತಮ್ಮ ಇಚ್ಛೆಯ ಪ್ರಕಾರ ಎರಡುನೂರಾ ನಲವತ್ತು ತುತ್ತುಗಳನ್ನು ವಿಭಾಗ ಮಾಡಿ ಕೊಂಡು ಭಕ್ಷಣಮಾಡಬೇಕು.

ಹೀಗೆ ನಾನಾ ವಿಧವಾದ ವ್ರತ ಉಪವಾಸಗಳನ್ನು ಮನುಷ್ಯನ ಶರೀರ ಶುದ್ಧಿಗಾಗಿ ಶಾಸ್ತ್ರಗಳಲ್ಲಿ ಹೇಳಿದ್ದಾರೆ. ಮಾನವನ ಶರೀರಕ್ಕೆ ನೀರಿನಿಂದ ಶುದ್ಧಿ. ಮನಸ್ಸಿಗೆ ಸತ್ಯದಿಂದ ಶುದ್ಧಿ. ಆತ್ಮಕ್ಕೆ ತಪಸ್ಸಿನಿಂದ ಶುದ್ಧಿ. ಬುದ್ಧಿಗೆ ಜ್ಞಾನದಿಂದ ಶುದ್ಧಿ ಇಂಥ ದಿವ್ಯ ಜ್ಞಾನವು ಮನುಷ್ಯರಿಗೆ ಕಾಶೀಕ್ಷೇತ್ರದ ಸೇವನೆಯಿಂದ ಪ್ರಾಪ್ತವಾಗುತ್ತದೆ. ಕಾಶಿಯವಾಸ, ಗಂಗೆಯ ಸ್ನಾನ, ವಿಶ್ವನಾಥನ ಪೂಜೆ ಮುಂತಾದವುಗಳಿಂದ ಆ ಪರಮೇಶ್ವರನಿಗೆ ಕರುಣೆ ಹುಟ್ಟಿ ಅವನ ಪ್ರಸಾದವು ದೊರಕುತ್ತದೆ. ಆ ಶಿವ ಪ್ರಸಾದದಿಂದ ಕರ್ಮಬಂಧನದ ಉನ್ಮೂಲನ ಸುಲಭ ಸಾಧ್ಯ. ಅದೇ ಮೋಕ್ಷಕ್ಕೆ ಹೆದ್ದಾರಿ. ಆದುದರಿಂದ ಮನುಷ್ಯರು ಕಾಶಿಯಲ್ಲಿ ಇದ್ದು ಸ್ನಾನ, ದಾನ, ಜಪ, ತಪ, ಪುರಾಣ ಶ್ರವಣ, ಧರ್ಮಶಾಸ್ತ್ರೋಕ್ತ ಕರ್ಮಾನುಚರಣಗಳನ್ನು ಮಾಡಬೇಕು. ಪ್ರತಿ ದಿನವೂ ಹಾಗೂ ಪ್ರತಿಕ್ಷಣವೂ ವಿಶ್ವನಾಥನ ಚರಣ ಚಿಂತನ, ತ್ರಿಕಾಲ ಸ್ನಾನ ಹಾಗೂ ತ್ರಿಕಾಲ ಶಿವಪೂಜೆ. ಸಾಧು ಪುರುಷರ ಜೊತೆಗೆ ಸಂಭಾಷಣೆ ಸತ್ಸಂಗ ಶಿವ ಶಿವ ಎಂಬ ಮಂತ್ರ ಜಪ, ಅತಿಥಿ ಸತ್ಕಾರ, ತೀರ್ಥ ವಾಸಿಗಳ ಜೊತೆ ಸ್ನೇಹ, ಅಸ್ತಿಕ್ಯ, ಬುದ್ಧಿ. ವಿನಯ ಮಾನಾಪಮಾನಗಳಲ್ಲಿ ಸಮಾನ ದೃಷ್ಟಿ, ನಿಸ್ಪೃಹತೆ, ಸೌಜನ್ಯ, ರಾಗದ್ವೇಷ ವರ್ಜನೆ, ಅಹಿಂಸೆ, ಅಪ್ರತಿಗ್ರಹ, ದಯಾದಾಕ್ಷಿಣ್ಯ ಈರ್ಷ್ಯೆಗಳ ಅಭಾವ, ಯಾಚನೆಯ ತ್ಯಾಗ, ಲೋಭ, ಆಲಸ್ಯಗಳ, ವರ್ಜನೆ, ಕ್ರೌರ್ಯ ತ್ಯಾಗ ಮುಂತಾದ ಗುಣಗಳನ್ನು ಕಾಶಿಯಲ್ಲಿ ಇರುವವರು ಬೆಳಿಸಿಕೊಳ್ಳಬೇಕು. ಹೀಗೆ ವೇದವ್ಯಾಸ ದೇವರು ಪ್ರತಿದಿನವೂ ತಮ್ಮ ಶಿಷ್ಯರಿಗೆ ಧರ್ಮೋಪದೇಶವನ್ನು ಮಾಡುತ್ತಲಿದ್ದರು.

## ಕಾಶಿಯಲ್ಲಿರುವ ತೀರ್ಥಗಳ ಸಂಕ್ಷಿಪ್ತ ವರ್ಣನೆ

**ಪಾರ್ವತಿ:-** ಪತಿದೇವ, ಕಾಶಿಯಲ್ಲಿ ಯಾವ ಯಾವ ತೀರ್ಥಗಳು ಎಲ್ಲಿ ಎಲ್ಲಿ ಇರುತ್ತವೆ? ಇದನ್ನು ನನಗೆ ಸಂಕ್ಷೇಪವಾಗಿ ವಿವರಿಸಿರಿ.

**ಮಹಾದೇವ:-** ದೇವಿ, ಮಹಾದೇವೇಶ್ವರ ತೀರ್ಥವು ಪ್ರಥಮತೀರ್ಥ ಎಂದು ಕರೆಯಲ್ಪಡುತ್ತದೆ. ಅದರ ಉತ್ತರದಲ್ಲಿ ಜೀವರ ಅಜ್ಞಾನವನ್ನು ನಾಶ ಮಾಡುವ ಮತ್ತು ಸರಸ್ವತಿ ಪ್ರಸಾದವನ್ನೂ ಲಭ್ಯವನ್ನಾಗಿ ಮಾಡುವ ಸಾರಸ್ವತ ಮಹಾಕೋಷ ಎಂಬ ಕ್ಷೇತ್ರವು ಇರುತ್ತವೆ. ಅದರ ಪಶ್ಚಿಮ ಬಾಗದಲ್ಲಿಯೇ ಸಕಲ ಮಾನವರಿಂದ ಪೂಜನೀಯವಾದ ಕಾಶೀಪುರಿಯು ಇರುತ್ತದೆ. ಆ ಮಹಾದೇವೇಶ್ವರ ತೀರ್ಥದಿಂದ ಪೂರ್ವಭಾಗದಲ್ಲಿ ಗೋಪ್ರೇಕ್ಷೇಶ್ವರ ಎಂಬ ಉತ್ತಮ ಲಿಂಗವು ವಿರಾಜಮಾನವಾಗಿದೆ. ಪೂರ್ವಕಾಲದಲ್ಲಿ ಭಗವಾನ್ ಶಂಕರನು ಇಲ್ಲಿಗೆ ಗೋಲೋಕದಿಂದಲೇ ಕೆಲವು ಗೋವುಗಳನ್ನು ಕಳಿಸಿದ್ದ. ಗೋಪ್ರೇಕ್ಷೇಶ್ವರದ ದಕ್ಷಿಣ ಭಾಗದಲ್ಲಿ ಧಧೀಚೆಶ್ವರ. ಧಧೀಚೇಶ್ವರ ಪೂರ್ವಭಾಗದಲ್ಲಿ ಅತ್ರೀಶ್ವರ. ಈ ಅತ್ರೀಶ್ವರದ ಲಿಂಗದ ದರ್ಶನದಿಂದ ವಿಷ್ಣುಲೋಕ ಪ್ರಾಪ್ತಿ ಮಾನವರಿಗೆ. ಗೋಪ್ರೇಕ್ಷೇಶ್ವರ ಪೂರ್ವಭಾಗದಲ್ಲಿ ವಿಜ್ವರಲಿಂಗ. ವಿಜ್ವರ ಪೂರ್ವಭಾಗದಲ್ಲಿ ವೇದೇಶ್ವರಲಿಂಗ. ವೇದೇಶ್ವರದಿಂದ ಉತ್ತರದಲ್ಲಿ ಕ್ಷೇತ್ರಜ್ಞ ಆದಿಕೇಶವನಮೂರ್ತಿ.

ಮೂರು ದಿನ ಮುಂಜಾನೆ ಊಟ. ಮೂರು ದಿನ ಸಾಯಂಕಾಲ ಊಟ. ಮೂರು ದಿನ ಆಯಾಚಿತ ಅನ್ನ ಗ್ರಹಣ. ಕೊನೆಯ ಮೂರು ದಿನ ಅಖಂಡ ಉಪವಾಸ ಮಾಡುವುದಕ್ಕೆ ರಾಜಪತ್ಯ ವ್ರತ ಎನ್ನುವರು. ಒಂದು ದಿನ ಗೋಮೂತ್ರ, ಗೋಮಯ, ಹಸುವಿನ ಮೊಸರು, ಗೋವಿನ ಹಾಲು, ಆಕಳ ತುಪ್ಪ ಹಾಗೂ ದರ್ಭೆ ಹಾಕಿದ ನೀರು ಇವುಗಳನ್ನೆಲ್ಲ ಕೂಡಿಸಿ ಕುಡಿಯಬೇಕು. ಎರಡನೆಯ ದಿನ ಪೂರ್ಣ ಉಪವಾಸಮಾಡಬೇಕು. ಎರಡನೆಯ ದಿನ ರಾತ್ರಿ ಮಾತ್ರ ಉಪವಾಸ. ಮೂರನೆಯ ದಿನ ಪೂರ್ಣ ಉಪವಾಸ ಮಾಡಿದರೆ. ಇದಕ್ಕೆ ಕೃಚ್ಛ್ರ ಸಾಂತಪನ ವ್ರತ ಎಂದು ಕರೆಯುವರು.

ಮಹಾಸಾಂತಪನ ಎಂಬ ವ್ರತದಲ್ಲಿ ಮೊದಲನೆಯ ದಿನ ಗೋಮೂತ್ರವನ್ನು ಮಾತ್ರ ಸೇವನೆಮಾಡಬೇಕು. ಎರಡನೆಯ ದಿನ ಗೋಮಯ, ಮೂರನೆಯ ದಿನ ಗೋವಿನ ಹಾಲು, ನಾಲ್ಕನೆಯ ದಿನ ಗೋವಿನ ಮೊಸರು, ಐದನೆಯ ದಿನ ಆಕಳ ತುಪ್ಪ, ಆರನೆಯ ದಿನ ಕುಶೋದಕ (ದರ್ಭೆ ಹಾಕಿದ ನೀರು) ಮಾತ್ರ ಸೇವನೆಮಾಡಬೇಕು. ಏಳನೆಯ ದಿನ ಪೂರ್ಣ ಉಪವಾಸ ಮಾಡಬೇಕು. ತಪ್ತ ಕೃಚ್ಛ್ರ ಎಂಬ ವ್ರತವನ್ನು ಆಚರಣ ಮಾಡುವವರು ಪ್ರತಿದಿನವೂ ಒಂದು ಸಲ ಸ್ನಾನಮಾಡಿ ದೇವರನ್ನು ಪೂಜಿಸಿ ಏಕಾಗ್ರಚಿತ್ರನಾಗಿ ಮೊದಲಿನ ಮೂರು ದಿನ ಬಿಸಿನೀರು, ಮುಂದಿನ ಮೂರು ದಿನ ಕರಗಿದ ತುಪ್ಪ, ಅದರ ಮುಂದಿನ ಮೂರು ದಿನ ಕೇವಲ ಗಾಳಿ ಕುಡಿದು ಇರಬೇಕು. ಇದಕ್ಕೆ ತಪ್ತ ಕೃಚ್ಛ್ರ ಎನ್ನುವರು. ನವಣಕ್ಕಿಯ ಅನ್ನವನ್ನು ಗೋಮೂತ್ರದೊಂದಿಗೆ ಉಂಡು ದೇಹ ಶುದ್ಧಿ ಮಾಡಿಕೊಳ್ಳುವ ಒಂದು ದಿನದ ವ್ರತಕ್ಕೆ ಏಕಾಹ್ನಿಕ ಕೃಚ್ಛ್ರ ಎನ್ನುವರು. ಎರಡೂ ಕೈಗಳನ್ನು ಮೇಲೆ ಮಾಡಿ ಹಗಲು ಹೊತ್ತು ವಾಯು ಭಕ್ಷಣಮಾಡಿ ರಾತ್ರಿ ಬೆಳಗಾಗುವ ಹೊತ್ತಿಗೆ ನೀರಿನಲ್ಲಿ ನಿಂತು ದೇವರ ಧ್ಯಾನ ಮಾಡುವ ಕ್ರಮಕ್ಕೆ ವಾತಾಂಬು ವ್ರತ ಎನ್ನುವರು. ತಿಂಗಳಿನ ಕೃಷ್ಣಪಕ್ಷದಲ್ಲಿ ಪ್ರತಿ ಪದೆಯ ದಿನ ಹದಿನೈದು ತುತ್ತು ಊಟವನ್ನು ಮಾಡಬೇಕು. ಬಿದಿಗೆಯ ದಿನ ಹದಿನಾಕು ತದಿಗೆಯಂದು ಹದಿಮೂರು ಹೀಗೆ ಒಂದೊಂದು ದಿನ ಒಂದೊಂದು ತುತ್ತನ್ನು ಕಡಿಮೆ ಮಾಡುತ್ತ ಮಾಡುತ್ತ ಶುಕ್ಲಪಕ್ಷದಲ್ಲಿ ಒಂದೊಂದು ತುತ್ತನ್ನು ಹೆಚ್ಚು ಹೆಚ್ಚು ಸೇವಿಸುತ್ತ ಹೋಗಬೇಕು. ಪ್ರತಿದಿನವೂ ಮೂರು ಹೊತ್ತು ಸ್ನಾನ ಮಾಡಬೇಕು. ಇದಕ್ಕೆ ಚಾಂದ್ರಾಯಣ ವ್ರತ ಎನ್ನುವರು. ಅಥವಾ ಶುಕ್ಲಪಕ್ಷ ಪ್ರತಿಪದೆಯಿಂದ ಒಂದೊಂದು ತುತ್ತು ಅನ್ನವನ್ನು ಬೆಳೆಸುತ್ತಾ ಹೋಗಬೇಕು. ಎಂದರೆ ಶುಕ್ಲಪಕ್ಷ ಪ್ರತಿಪದೆಯಂದು ಒಂದೇ ತುತ್ತು ಅನ್ನವನ್ನು ಊಟಮಾಡಬೇಕು. ಬಿದಿಗೆ ಎರಡು ತುತ್ತು, ತದಿಗೆ ಮೂರು ತುತ್ತು, ಹೀಗೆ ದಿನ ಒಂದು ತುತ್ತಿನಂತೆ ಬೆಳೆಸುತ್ತ ಹುಣ್ಣಿಮೆಯ ದಿನ ಹದಿನೈದು ಅನ್ನದ ತುತ್ತುಗಳನ್ನು ಉಣ್ಣಬೇಕು. ಅನಂತರ ಕೃಷ್ಣಪಕ್ಷದ ಪ್ರತಿಪದೆಯಿಂದ ಒಂದೊಂದು ತುತ್ತು ಕಡಿಮೆ ಮಾಡುತ್ತ ಅಮಾವಾಸ್ಯೆಯ ದಿನ ಸಂಪೂರ್ಣ ಕಡಿಮೆ ಮಾಡಬೇಕು. ಇದಕ್ಕೆ ಚಾಂದ್ರಾಯಣ ವ್ರತ ಎನ್ನುವರು. ಇನ್ನೊಂದು ಶಿಶುಚಾಂದ್ರಾಯಣ ಎಂಬ ವ್ರತದಲ್ಲಿ ನಾಲ್ಕು ತುತ್ತು ಅನ್ನ ಹೀಗೆ ಊಟ ಮಾಡುತ್ತ ಭಗವತ್ ಪೂಜೆಯನ್ನು ಮಾಡಬೇಕು. ಇದಕ್ಕೆ ಶಿಶುಚಾಂದ್ರಾಯಣ ವ್ರತ ಎನ್ನುವರು ಇನ್ನೊಂದು ಶಿಶುಚಾಂದ್ರಾಯಣ ಎಂಬ ವ್ರತದಲ್ಲಿ ತಿಂಗಳವರೆಗೆ ಪ್ರತಿದಿನ ಪ್ರಾತಃಕಾಲದಲ್ಲಿ ನಾಲ್ಕು ತುತ್ತು ಅನ್ನ, ಸೂರ್ಯಸ್ತದಲ್ಲಿ ನಾಲ್ಕು ತುತ್ತು ಅನ್ನ ಹೀಗೆ ಊಟ ಮಾಡುತ್ತ ಭಗವತ್ ಪೂಜೆಯನ್ನು ಮಾಡಬೇಕು. ಇದಕ್ಕೆ ಶಿಶುಚಾಂದ್ರಾಯಣ ವ್ರತ ಎನ್ನುವರು. ಇದರಂತೆ ಪ್ರತಿದಿನವೂ ಮಧ್ಯಾಹ್ನ ಕಾಲದಲ್ಲಿ

ಹವಿಷ್ಯಾನ್ನವನ್ನು ಎಂಟು ತುತ್ತು ಮಾತ್ರ ಭೋಜನ ಮಾಡುತ್ತ ಒಂದು ತಿಂಗಳ ಈ ಮಿತಾಹಾರವನ್ನು ಸಾಧಿಸಬೇಕು. ಇದಕ್ಕೆ ಯತಿ ಚಾಂದ್ರಾಯಣ ಎನ್ನುವರು. ಇನ್ನೊಂದು ವ್ರತದಲ್ಲಿ ಮನುಷ್ಯರು ಒಟ್ಟು ಒಂದು ತಿಂಗಳಿನಲ್ಲಿ ತಮ್ಮ ಇಚ್ಛೆಯ ಪ್ರಕಾರ ಎರಡುನೂರಾ ನಲವತ್ತು ತುತ್ತುಗಳನ್ನು ವಿಭಾಗ ಮಾಡಿ ಕೊಂಡು ಭಕ್ಷಣಮಾಡಬೇಕು.

ಹೀಗೆ ನಾನಾ ವಿಧವಾದ ವ್ರತ ಉಪವಾಸಗಳನ್ನು ಮನುಷ್ಯನ ಶರೀರ ಶುದ್ಧಿಗಾಗಿ ಶಾಸ್ತ್ರಗಳಲ್ಲಿ ಹೇಳಿದ್ದಾರೆ. ಮಾನವನ ಶರೀರಕ್ಕೆ ನೀರಿನಿಂದ ಶುದ್ಧಿ. ಮನಸ್ಸಿಗೆ ಸತ್ಯದಿಂದ ಶುದ್ಧಿ. ಆತ್ಮಕ್ಕೆ ತಪಸ್ಸಿನಿಂದ ಶುದ್ಧಿ. ಬುದ್ಧಿಗೆ ಜ್ಞಾನದಿಂದ ಶುದ್ಧಿ ಇಂಥ ದಿವ್ಯ ಜ್ಞಾನವು ಮನುಷ್ಯರಿಗೆ ಕಾಶೀಕ್ಷೇತ್ರದ ಸೇವನೆಯಿಂದ ಪ್ರಾಪ್ತವಾಗುತ್ತದೆ. ಕಾಶಿಯವಾಸ, ಗಂಗೆಯ ಸ್ನಾನ, ವಿಶ್ವನಾಥನ ಪೂಜೆ ಮುಂತಾದವುಗಳಿಂದ ಆ ಪರಮೇಶ್ವರನಿಗೆ ಕರುಣೆ ಹುಟ್ಟಿ ಅವನ ಪ್ರಸಾದವು ದೊರಕುತ್ತದೆ. ಆ ಶಿವ ಪ್ರಸಾದದಿಂದ ಕರ್ಮಬಂಧನದ ಉನ್ಮೂಲನ ಸುಲಭ ಸಾಧ್ಯ. ಅದೇ ಮೋಕ್ಷಕ್ಕೆ ಹೆದ್ದಾರಿ. ಆದುದರಿಂದ ಮನುಷ್ಯರು ಕಾಶಿಯಲ್ಲಿ ಇದ್ದು ಸ್ನಾನ, ದಾನ, ಜಪ, ತಪ, ಪುರಾಣ ಶ್ರವಣ, ಧರ್ಮಶಾಸ್ತ್ರೋಕ್ತ ಕರ್ಮಾನುಚರಣಗಳನ್ನು ಮಾಡಬೇಕು. ಪ್ರತಿ ದಿನವೂ ಹಾಗೂ ಪ್ರತಿಕ್ಷಣವೂ ವಿಶ್ವನಾಥನ ಚರಣ ಚಿಂತನ, ತ್ರಿಕಾಲ ಸ್ನಾನ ಹಾಗೂ ತ್ರಿಕಾಲ ಶಿವಪೂಜೆ. ಸಾಧು ಪುರುಷರ ಜೊತೆಗೆ ಸಂಭಾಷಣೆ ಸತ್ಸಂಗ ಶಿವ ಶಿವ ಎಂಬ ಮಂತ್ರ ಜಪ, ಅತಿಥಿ ಸತ್ಕಾರ, ತೀರ್ಥ ವಾಸಿಗಳ ಜೊತೆ ಸ್ನೇಹ, ಆಸ್ತಿಕ್ಯ, ಬುದ್ಧಿ. ವಿನಯ ಮಾನಾಪಮಾನಗಳಲ್ಲಿ ಸಮಾನ ದೃಷ್ಟಿ, ನಿಸ್ಪೃಹತೆ, ಸೌಜನ್ಯ, ರಾಗದ್ವೇಷ ವರ್ಜನೆ, ಅಹಿಂಸೆ, ಅಪ್ರತಿಗ್ರಹ, ದಯಾದಾಕ್ಷಿಣ್ಯ ಈರ್ಷ್ಯೆಗಳ ಅಭಾವ, ಯಾಚನೆಯ ತ್ಯಾಗ, ಲೋಭ, ಆಲಸ್ಯಗಳ, ವರ್ಜನೆ, ಕ್ರೌರ್ಯ ತ್ಯಾಗ ಮುಂತಾದ ಗುಣಗಳನ್ನು ಕಾಶಿಯಲ್ಲಿ ಇರುವವರು ಬೆಳಿಸಿಕೊಳ್ಳಬೇಕು. ಹೀಗೆ ವೇದವ್ಯಾಸ ದೇವರು ಪ್ರತಿದಿನವೂ ತಮ್ಮ ಶಿಷ್ಯರಿಗೆ ಧರ್ಮೋಪದೇಶವನ್ನು ಮಾಡುತ್ತಲಿದ್ದರು.

## ಕಾಶಿಯಲ್ಲಿರುವ ತೀರ್ಥಗಳ ಸಂಕ್ಷಿಪ್ತ ವರ್ಣನೆ

**ಪಾರ್ವತಿ:-** ಪತಿದೇವ, ಕಾಶಿಯಲ್ಲಿ ಯಾವ ಯಾವ ತೀರ್ಥಗಳು ಎಲ್ಲಿ ಎಲ್ಲಿ ಇರುತ್ತವೆ? ಇದನ್ನು ನನಗೆ ಸಂಕ್ಷೇಪವಾಗಿ ವಿವರಿಸಿರಿ.

**ಮಹಾದೇವ:-** ದೇವಿ, ಮಹಾದೇವೇಶ್ವರ ತೀರ್ಥವು ಪ್ರಥಮತೀರ್ಥ ಎಂದು ಕರೆಯಲ್ಪಡುತ್ತದೆ. ಅದರ ಉತ್ತರದಲ್ಲಿ ಜೀವರ ಅಜ್ಞಾನವನ್ನು ನಾಶ ಮಾಡುವ ಮತ್ತು ಸರಸ್ವತಿ ಪ್ರಸಾದವನ್ನೂ ಲಭ್ಯವನ್ನಾಗಿ ಮಾಡುವ ಸಾರಸ್ವತ ಮಹಾಕೋಷ ಎಂಬ ಕ್ಷೇತ್ರವು ಇರುತ್ತವೆ. ಅದರ ಪಶ್ಚಿಮ ಬಾಗದಲ್ಲಿಯೇ ಸಕಲ ಮಾನವರಿಂದ ಪೂಜನೀಯವಾದ ಕಾಶೀಪುರಿಯು ಇರುತ್ತದೆ. ಆ ಮಹಾದೇವೇಶ್ವರ ತೀರ್ಥದಿಂದ ಪೂರ್ವಭಾಗದಲ್ಲಿ ಗೋಪ್ರೇಕ್ಷೇಶ್ವರ ಎಂಬ ಉತ್ತಮ ಲಿಂಗವು ವಿರಾಜಮಾನವಾಗಿದೆ. ಪೂರ್ವಕಾಲದಲ್ಲಿ ಭಗವಾನ್ ಶಂಕರನು ಇಲ್ಲಿಗೆ ಗೋಲೋಕದಿಂದಲೇ ಕೆಲವು ಗೋವುಗಳನ್ನು ಕಳಿಸಿದ್ದ. ಗೋಪ್ರೇಕ್ಷೇಶ್ವರದ ದಕ್ಷಿಣ ಭಾಗದಲ್ಲಿ ಧಧೀಚೀಶ್ವರ. ಧಧೀಚೀಶ್ವರ ಪೂರ್ವಭಾಗದಲ್ಲಿ ಅತ್ರೀಶ್ವರ. ಈ ಅತ್ರೀಶ್ವರದ ಲಿಂಗದ ದರ್ಶನದಿಂದ ವಿಷ್ಣುಲೋಕ ಪ್ರಾಪ್ತಿ ಮಾನವರಿಗೆ. ಗೋಪ್ರೇಕ್ಷೇಶ್ವರ ಪೂರ್ವಭಾಗದಲ್ಲಿ ವಿಜ್ವರಲಿಂಗ. ವಿಜ್ವರ ಪೂರ್ವಭಾಗದಲ್ಲಿ ವೇದೇಶ್ವರಲಿಂಗ. ವೇದೇಶ್ವರದಿಂದ ಉತ್ತರದಲ್ಲಿ ಕ್ಷೇತ್ರಜ್ಞ ಆದಿಕೇಶವನಮೂರ್ತಿ.

ಆದಿಕೇಶವ ಮಂದಿರದ ಪೂರ್ವಕ್ಕೆ ಸಂಗಮೇಶ್ವರ ಸಂಗಮೇಶ್ವರಿಂದ ಪೂರ್ವನಿಟ್ಟಿನಲ್ಲಿ ಬ್ರಹ್ಮದೇವರು ಸ್ಥಾಪಿಸಿದ ಚತುರ್ಮುಖಲಿಂಗ. ಪೂಜೆ ಮಾಡುವವರಿಗೆ ಬ್ರಹ್ಮಲೋಕವನ್ನು ನೀಡುವ ಈ ಚತುರ್ಮುಖಲಿಂಗಕ್ಕೆ ಪ್ರಯಾಗಲಿಂಗ ಎಂತಲೂ ಕರೆಯುತ್ತಾರೆ. ಅಲ್ಲಿಯೇ ಶಾಂತಿ ಕರಿಗೌರೀದೇವಿಯ ಸ್ಥಾನ, ಅವಳ ಆರಾಧನೆಯಿಂದ ಜೀವನ ತುಂಬ ಶಾಂತಿ ಸಂತಸ ಬೆಳಗುವವು.

ವರಣಾ ನದಿಯ ಪೂರ್ಣತೀರದಲ್ಲಿ ಕುಂತೀಶ್ವರ ಲಿಂಗ ಅಲ್ಲಿಂದ ಉತ್ತರಕ್ಕೆ ಕಪಿಲ ಕುಂಡ, ಗೋಪ್ರೇಕ್ಷೇಶ್ವರದಿಂದ ಉತ್ತರ ಭಾಗದಲ್ಲಿ ಅನುಸೂಯೇಶ್ವರ ಲಿಂಗ,ಅದರ ಪೂರ್ವಕ್ಕೆ ಸಿದ್ಧಿವಿನಾಯಕ ಲಿಂಗ, ಅನುಸೂಯೇಶ್ವರ ಲಿಂಗ ಪಶ್ಚಿಮ ದಿಕ್ಕಿನಲ್ಲಿ ಹಿರಣ್ಯ ಕಶ್ಯಪುವು ಸ್ಥಾಪಸಿದ ಶಿವಲಿಂಗ. ಆ ಶಿವಲಿಂಗದಿಂದ ಪಶ್ಚಿಮ ದಿಕ್ಕಿನಲ್ಲಿ ಮುಂಡಾಸುರೇಶ್ವರ ಲಿಂಗ. ಗೋಪ್ರೇಕ್ಷೃರದಿಂದ ನೈರುತ್ಯ ದಿಕ್ಕಿನಲ್ಲಿ ವೃಷಭೇಶ್ವರಲಿಂಗ. ಮಹಾದೇವೇಶ್ವರ ತೀರ್ಥದ ಪಶ್ಚಿಮದಲ್ಲಿ ಸ್ಕಂದೇಶ್ವರಲಿಂಗ. ಅದರ ಸಮೀಪದಲ್ಲಿಯೇ ಶಾಖೇಶ್ವರ, ವಿಶಾಖೇಶ್ವರ ಎಂಬ ಲಿಂಗಗಳು ಇರುತ್ತವೆ. ಅಲ್ಲಿಯೇ ಹತ್ತಿರದಲ್ಲಿ ನೈಗಮೇಯೇಶ್ವರ ಲಿಂಗ ಮತ್ತು ನಂದಿ ಮುಂತಾದ ಗಣಾಧೀಶ್ವರರು ಸ್ಥಾಪಿಸಿದ ಸಾವಿರಾರು ಲಿಂಗಗಳು ಇರುತ್ತವೆ.

ಈ ನಂದೀಶ್ವರ ಲಿಂಗಗಳ ಪಶ್ಚಿಮ ನಿಟ್ಟಿನಲ್ಲಿ ಶಿಲಾದೇಶ್ವರ, ಹಿರಣ್ಯಾಕ್ಷೇಶ್ವರ ಎಂಬ ಲಿಂಗಗಳು ಬೆಳಗುತ್ತಲಿವೆ. ಅಲ್ಲಿಂದ ದಕ್ಷಿಣಕ್ಕೆ ಅಟ್ಟಹಾಸ ಲಿಂಗ. ಉತ್ತರದಲ್ಲಿ ಪ್ರಸನ್ನ ವದನೇಶ್ವರ. ಅದರ ಉತ್ತರ ಭಾಗದಲ್ಲಿ ಪ್ರಸನ್ನೋದ ಕುಂಡ ಎಂಬ ತೀರ್ಥವು ಇದೆ. ಅಟ್ಟಹಾಸೇಶ್ವರದಿಂದ ಪಶ್ಚಿಮ ಭಾಗದಲ್ಲಿ ಮಿತ್ರೇಶ್ವರ ವರುಣೇಶ್ವರ ಅಟ್ಟಹಾಸೇಶ್ವರದ ನೈಋತ್ಯ ಕೋಣದಲ್ಲಿ ವೃದ್ಧ ವಾಶಿಷ್ಠಲಿಂಗ ಈ ವಾಶಿಷ್ಠೇಶ್ವರದ ಸಮೀಪದಲ್ಲಿ ಕೃಷ್ಣೇಶ್ವರ, ಅದರಿಂದ ದಕ್ಷಿಣದಲ್ಲಿ ಯಾಜ್ಞವಲ್ಕೇಶ್ವರ, ಅದರ ಪಶ್ಚಿಮದಲ್ಲಿ ಪ್ರಲ್ಹಾದೇಶ್ವರ. ಪ್ರಲ್ಹಾದೇಶ್ವರ ಪೂರ್ವಭಾಗದಲ್ಲಿ ಸ್ವಲೀನೇಶ್ವರ, ಈ ಸ್ವಲೀನೇಶ್ವರದ ಸಮೀಪದಲ್ಲಿ ಶರೀರ ತ್ಯಾಗಮಾಡುವವರಿಗೆ ನಿಶ್ಚಿತವಾಗಿಯೂ ಮೋಕ್ಷ. ಸ್ವಲೀನೇಶ್ವರದಿಂದ ಪೂರ್ವದಲ್ಲಿ ವೈರೋಚನೇಶ್ವರ ಲಿಂಗ. ಅದರಿಂದ ಉತ್ತರಕ್ಕೆ ವಲೀಶ್ವರ ಬಾಣೇಶ್ವರ ಲಿಂಗಗಳು ಚಂದ್ರೇಶ್ವರ ಪೂರ್ವದಲ್ಲಿ ವಿದ್ಯೇಶ್ವರ ಲಿಂಗ. ಅದರ ದಕ್ಷಿಣ ಭಾಗದಲ್ಲಿ ವೀರೇಶ್ವರ. ಅಲ್ಲಿಯೇ ಎಲ್ಲ ದುಃಖಗಳಿಂದ ಮಾನವರನ್ನು ವಿಮೋಚನ ಮಾಡುವ ವಿಕಟಾದೇವಿಯ ನಿವಾಸ. ಅದಕ್ಕೆ ಪಂಚಮುದ್ರ ಪೀಠ ಎಂದು ಹೆಸರು. ಅಲ್ಲಿ ಜಪಿಸಿದ ಮಹಾಮಂತ್ರಗಳೆಲ್ಲವೂ ಶೀಘ್ರ ಸಿದ್ಧಿಹೊಂದುತ್ತವೆ. ಈ ಪಂಚಮುದ್ರ ಪೀಠದ ವಾಯುಯ್ಯ ಕೋಣದಲ್ಲಿ ಸಗರೇಶ್ವರ. ಅದರಿಂದ ಈಶಾನ್ಯ ಕೋಣದಲ್ಲಿ ವಾಲೀಶ್ವರ. ವಾಲೀಶ್ವರದ ಉತ್ತರದಲ್ಲಿ ಸುಗ್ರೀವೇಶ್ವರ ಮತ್ತು ಜಾಂಬವದೀಶ್ವರ.

ಗಂಗಾ ನದಿಯ ಪಶ್ಚಿಮ ತೀರದಲ್ಲಿ ಅಶ್ವಿನೀಯೇಶ್ವರ. ಎಂಬ ಹೆಸರಿನ ಜೋಡು ಲಿಂಗಗಳು ಇರುತ್ತವೆ. ಅಲ್ಲಿಂದ ಉತ್ತರದಲ್ಲಿ ಹಸುವಿನ ಹಾಲಿನಿಂದ ತುಂಬಿದ ಭದ್ರ ಕುಂಡ. ಅಲ್ಲಿ ಸ್ನಾನಮಾಡುವುದರಿಂದ ಸಾವಿರ ಕಪಿಲಾಧೇನುವನ್ನು ದಾನ ಮಾಡಿದಷ್ಟು ಪುಣ್ಯ ಬರುವುದು. ಭದ್ರ ಕುಂಡದ ಪಶ್ಚಿಮ ತೀರದಲ್ಲಿ ಭದ್ರೇಶ್ವರ ಭದ್ರೇಶ್ವರದ ನೈಋತ್ಯ ಕೋಣದಲ್ಲಿ ಉಪಶಾಂತೀಶ್ವರ, ಅದರ ಉತ್ತರದಲ್ಲಿ ಚಕ್ರೇಶ್ವರ. ಚಕ್ರೇಶ್ವರದ ಉತ್ತರ ಭಾಗದಲ್ಲಿ ಚಕ್ರಕುಂಡದ ನೈಋತ್ಯ ಕೋಣದಲ್ಲಿ ಶೂಲೇಶ್ವರ. ಶೂಲೇಶ್ವರದಿಂದ

ಪೂರ್ವದಿಕ್ಕಿನಲ್ಲಿ ಹಿಂದೆ ನಾರದರು ತೀವ್ರ ತಪಸ್ಸನ್ನು ಮಾಡಿ ನಾರದೇಶ್ವರನ ಪ್ರತಿಷ್ಠೆಗೈದು ಒಂದು ಕುಂಡವನ್ನು ನಿರ್ಮಾಣಮಾಡಿದ್ದಾರೆ. ನಾರದೇಶ್ವರನ ಪೂರ್ವಭಾಗದಲ್ಲಿ ಅವಭ್ರಾತಕೇಶ್ವರ, ಅದರ ಮುಂಭಾಗದಲ್ಲಿಯೇ ತಾಮ್ರಕುಂಡ. ಅದರ ವಾಯವ್ಯ ಭಾಗದಲ್ಲಿ ವಿಘ್ನೇಹರ್ತಾಕುಂಡ. ಅದರ ತೀರದಲ್ಲಿಯೇ ವಿಘಹರ್ತಾ ಗಣೇಶ. ಅಲ್ಲಿಂದ ಉತ್ತರದಲ್ಲಿ ಅನಾರಕೇಶ್ವರ ಲಿಂಗ. ಅದರ ಉತ್ತರದಲ್ಲಿ ವರಣಾನದಿಯ ಮನೋಹರವಾದ ತೀರದಲ್ಲಿ ವರಣೇಶ್ವರ. ವರಣೇಶ್ವರದಿಂದ ಪಶ್ಚಿಮದಲ್ಲಿ ಶೈಲೇಶ್ವರ ಶೈಲೇಶ್ವರದಿಂದ ದಕ್ಷಿಣದಲ್ಲಿ ಕೋಟೀಶ್ವರ ಲಿಂಗ. ಕೋಟೀಶ್ವರ ಆಗ್ನೇಯ ಕೋನದಲ್ಲಿ ಕುಲಸ್ಥಂಬ, ಅಲ್ಲಿಯೇ ಕಪಾಲೇಶ್ವರನ ಸಮೀಪದಲ್ಲಿ ಕಪಾಲ ಮೋಚನತೀರ್ಥ. ಅದರ ಉತ್ತರ ದಿಕ್ಕಿನಲ್ಲಿ ಜ್ಞಾನದಾಯಕನಾದ ವಿಶ್ವಕರ್ಮೇಶ್ವರ ಲಿಂಗ. ಅದರ ದಕ್ಷಿಣದಲ್ಲಿಯೇ ಮಹಾ ಮುಂಡೇಶ್ವರ ಲಿಂಗ. ಅಲ್ಲಿಯೇ ಶುಭೋದಕ ಎಂಬ ಕೂಪವು ಇರುತ್ತದೆ. ಅಲ್ಲಿ ಖಟ್ವಾಂಗವನ್ನು ಧಾರಣ ಮಾಡಿದ್ದರಿಂದ ಖಟ್ವಾಂಗೇಶ್ವರ ಲಿಂಗವು ಪ್ರಾದುರ್ಭಾವ ಹೊಂದಿತು. ಅಲ್ಲಿಂದ ದಕ್ಷಿಣದಲ್ಲಿ ಭುವನೇಶ್ವರ ಲಿಂಗ ಮತ್ತು ಭುವನೇಶ್ವರ ಕುಂಡಗಳು. ಅಲ್ಲಿಂದ ದಕ್ಷಿಣ ಭಾಗದಲ್ಲಿ ವಿದುಲೇಶ್ವರ ಲಿಂಗ ಮತ್ತು ವಿಮಲೋದಕ ಕುಂಡ, ಅದರ ದಕ್ಷಿಣ ಭಾಗದಲ್ಲಿ ಶುಭೇಶ್ವರ ತೀರ್ಥವು ಇರುತ್ತದೆ.

ಅಗಸ್ತ್ಯ, ನಾನು ನಿನಗೆ ಸಂಕ್ಷೇಪವಾಗಿ ಕಾಶಿಯಲ್ಲಿರುವ ಕೆಲವೊಂದು ಶಿವಲಿಂಗಗಳ ವರ್ಣನೆಯನ್ನು ಮಾಡಿದ್ದೇನೆ. ಇವುಗಳಲ್ಲಿ ಕೆಲವು ಲಿಂಗಗಳು ಭಕ್ತಿಯಿಂದ ಎರಡು ಮೂರು ಬಾರಿ ಸ್ಥಾಪನೆ ಮಾಡಲ್ಪಟ್ಟಿವೆ. ಈ ಪುನಃ ಪ್ರತಿಷ್ಠಾಪನೆಯ ಸಾಹಿತ್ಯದಲ್ಲಿ ಪುನರುಕ್ತಿಯು ದೋಷವಾದಂತೆ ಇಲ್ಲಿ ದೋಷವಾಗುವುದಿಲ್ಲ. ಜನರಲ್ಲಿ ಭಕ್ತಿ ದಾರ್ಢ್ಯದ ಸಲುವಾಗಿ ಕೆಲವು ಲಿಂಗಗಳು ಪುನಃ ಪುನಃ ಪ್ರತಿಷ್ಠೆಗೊಂಡಿರುತ್ತವೆ. ಅದಕ್ಕೆಲ್ಲ ಬೇರೆ ಬೇರೆ ಕಾರಣಾಂತರವೂ ಇರುತ್ತವೆ. ಅದರ ಚಿಂತನೆ ಮಾಡದೇ ಭಕ್ತರು ಈ ಎಲ್ಲ ಲಿಂಗಗಳನ್ನು ಆರಾಧಿಸಬೇಕು. ಕಾಶಿಯಲ್ಲಿ ಈ ಮೇಲೆ ಹೇಳಿದ ಶಿವಲಿಂಗ, ಕುಂಡ, ಕೂಪ, ವಾಪಿ, ತೀರ್ಥ ಮುಂತಾದವುಗಳ ಮೇಲೆ ಎಲ್ಲರೂ ಧೃಡವಾದ ಶ್ರದ್ಧೆ ಇಡಬೇಕು. ಇವುಗಳ ದರ್ಶನ ಹಾಗೂ ಸ್ನಾನದಿಂದ ಅಧಿಕ ಪುಣ್ಯ ಅನಂತಫಲ. ಕಾಶೀಪಟ್ಟಣದಲ್ಲಿ ಇರುವ ತೀರ್ಥಗಳನ್ನೂ, ಶಿವಲಿಂಗಗಳನ್ನೂ ಮೂರ್ತಿಗಳನ್ನೂ, ಸರೋವರಗಳನ್ನೂ, ಬಾವಿಗಳನ್ನೂ ಎಣಿಸಲು ಯಾರು ಸಮರ್ಥರು ಈ ಆನಂದ ವನದಲ್ಲಿ ಇರುವ ಹುಲ್ಲು ಕಡ್ಡಿ ಕೂಡ ಅತ್ಯಂತ ಶ್ರೇಷ್ಠ.

**ಮಹಾದೇವ:-** ಹೈಮವತೀ, ನೀನು ನಿನ್ನ ತಪೋಬಲದಿಂದ ನನಗೆ ಪರಮ ಪ್ರೀತ್ಯಾಸ್ಪದಳಾಗಿರುವೆ. ಆದರೆ ಕಾಶೀಪಟ್ಟಣವು ಮಾತ್ರ ಸ್ವಾಭಾವಿಕವಾಗಿಯೇ ಪರಮ ಪ್ರಿಯ. ಇದೇ ನನ್ನ ವಿಶ್ರಾಂತಿಭೂಮಿ. ನನ್ನ ಕರ್ಮಭೂಮಿ, ತಪೋಭೂಮಿ. ಕಾಶಿಯ ನಾಮವನ್ನು ಉಚ್ಚರಿಸುವವರೂ, ಅದನ್ನು ಕೇಳಿ ಆನಂದಪಡುವವರು ನನಗೆ ಶಾಖ, ವಿಶಾಖ, ಸ್ಕಂದ, ನಂದಿ, ಗಣಪತಿ ಮೊದಲಾದವರಷ್ಟೇ ನನಗೆ ಪ್ರೀತ್ಯಾಸ್ಪದರು. ಕಾಶೀಪಟ್ಟಣದಲ್ಲಿ ಇರುವುದೇ ಒಂದು ದೊಡ್ಡ ತಪಸ್ಸು. ಇಲ್ಲಿ ನೆಲೆಸುವುದೇ ಒಂದು ದೊಡ್ಡ ವ್ರತ. ಕಾಶಿಯಲ್ಲಿ ಕೆಲವು ದಿನ ವಾಸಗೈದರೂ ಕೂಡ ಮಹಾ ಮಹಾ ದಾನಗಳನ್ನು ನೀಡಿದಷ್ಟೇ ಪುಣ್ಯ. ಕಾಶಿಯಲ್ಲಿ ವಾಸಮಾಡಿದವರು ಸರ್ವ ಧರ್ಮಾನುಷ್ಠಾನ ಮಾಡಿದಷ್ಟು ಪುಣ್ಯವನ್ನು ಪಡೆಯುತ್ತಾರೆ.

ಹೀಗೆ ಪಾರ್ವತಿಯ ಎದುರು ಮಹಾದೇವನು ಕಾಶಿಯ ಕಥೆಯನ್ನು ಹೇಳುತ್ತಲಿರುವಾಗಲೇ ನಂದೀಶ್ವರನು ಬಂದು ವಂದನೆ ಮಾಡಿ ಚಂದ್ರಶೇಖರನಿಗೆ ಸೂಚನೆಯನ್ನು ನೀಡಿದ.

**ನಂದೀಶ್ವರ:-** ಭಗವನ್, ವಿಶಾಲ ಶಿವಮಂದಿರದ ನಿರ್ಮಾಣದ ಕಾರ್ಯವು ಈಗ ಪೂರ್ಣವಾಗಿದೆ. ನಿಮ್ಮನ್ನು ಕರೆದೊಯ್ಯಲು ರಥವೂ ಕೂಡ ಸುಸಜ್ಜಿತವಾಗಿ ನಿಂತಿದೆ. ಎಲ್ಲ ಬ್ರಹ್ಮಾದಿ ದೇವತೆಗಳು ಒಂದೆಡೆ ಕೂಡಿದ್ದಾರೆ. ಭಗವಾನ್ ವಿಷ್ಣುವು ಗರುಡಾರೂಢನಾಗಿ ಪಾರ್ಷದರೊಂದಿಗೆ ಆಗಮಿಸಿದ್ದಾನೆ. ಹದಿನಾಲ್ಕು ಲೋಕಗಳಲ್ಲಿ ಉತ್ತಮೋತ್ತಮ ವ್ರತಾನುಷ್ಠಾನ ತತ್ಪರ ಸತ್ಪುರುಷರೆಲ್ಲರೂ ಇಂದು ಮಂದಿರ ಪ್ರವೇಶಿಸುವ ಮಹೋತ್ಸವದ ಸಮಾಚರವನ್ನು ಕೇಳಿ ಇಲ್ಲಿ ಒಂದೆಡೆ ಕೂಡಿದ್ದಾರೆ.

**ಸ್ಕಂದ:-** ನಂದಿಯ ಮಾತನ್ನು ಕೇಳಿ ಮಹಾದೇವರು ಪಾರ್ವತೀದೇವಿಯೊಂದಿಗೆ ದಿವ್ಯವಾದ ರಥದಲ್ಲಿ ಕುಳಿತು ತ್ರಿವಿಷ್ಟಪ ಕ್ಷೇತ್ರದಿಂದ ಹೊರಟರು.

## ವಿಶ್ವೇಶ್ವರ ಲಿಂಗದ ಮಹಿಮೆ

**ಸ್ಕಂದ:-** ಅಗಸ್ತ್ಯ ಮುನಿಯೇ, ಮೋಕ್ಷ ಲಕ್ಷ್ಮೀವಿಲಾಸ ಎಂಬ ಅರಮನೆಯು ಸಿದ್ಧವಾದ ಬಳಿಕ ಮಹಾದೇವರು ತ್ರಿವಿಷ್ಟಪ ಕ್ಷೇತ್ರದಿಂದ ವಿರಜಪೀಠಕ್ಕೆ ಬಂದು ಅಲ್ಲಿಂದ ಅಂತಗ್ರಹದಲ್ಲಿ ಪ್ರವೇಶಮಾಡಿದರು. ಕಾರ್ತೀಕ ಶುಕ್ಲ ಪ್ರತಿಪದೆಯಂದು ಅನುರಾಧ ನಕ್ಷತ್ರಯುಕ್ತವಾದ ಬುಧವಾರ ಆಗಿದ್ದಿತು. ಚಂದ್ರನು ಸಪ್ತಮ ರಾಶಿಯಲ್ಲಿ ಇದ್ದ ಉಳಿದ ಎಲ್ಲ ಗ್ರಹಗಳು ಉಚ್ಚ ಸ್ಥಳದಲ್ಲಿಯೇ ಇದ್ದವು ಆ ಸಮಯದಲ್ಲಿ ಭಗವಾನ್ ಶಂಕರನು ನೂತನವಾದ ಪ್ರಾಸಾದದಲ್ಲಿ ಪ್ರವೇಶಮಾಡಿದನು. ಪ್ರವೇಶ ಕಾಲದಲ್ಲಿ ಬಗೆ ಬಗೆಯ ವಾದ್ಯಗಳು ಮೊಳಗುತ್ತಿದ್ದವು. ದಶದಿಕ್ಕುಗಳಲ್ಲಿಯೂ ಪ್ರಸನ್ನತೆ. ಬ್ರಾಹ್ಮಣರ ವೇದ ಮಂತ್ರೋಚ್ಚಾರಣದ ಗದ್ದಲದಲ್ಲಿ ಉಳಿದ ಎಲ್ಲ ಸದ್ದು ಗದ್ದಲಗಳು ಅಂತರ್ಲೀನ. ಭೂಲೋಕದಿಂದ ಆರಂಭ ಮಾಡಿ ಭೂವರ್ಲೋಕದ ಮಧ್ಯ ಮಾರ್ಗವೆಲ್ಲವೂ ವೇದ ಘೋಷದಿಂದ ಪ್ರತಿಧ್ವನಿತ ಭಗವಾನ್ ಶಿವನ ಈ ಗೃಹಪ್ರವೇಶದ ಮಹೋತ್ಸವದಲ್ಲಿ ಎಲ್ಲ ಚರಾಚರ ಜಗತ್ತೇ ಆನಂದ ತುಂಬಿದ ಗಂಧರ್ವರ ಗಾಯನ, ಅಪ್ಸರೆಯರ ಕುಣಿತ, ಚಾರಣರ ಪ್ರಶಂಸೆ, ಗೀತಗಾಥೆ, ದೇವತೆಗಳ ಪುಷ್ಪವೃಷ್ಟಿ ಮಂದಮಾರುತದ ಸುಗಂಧ ಸ್ಪಂದನದಿಂದ ದಿಗಂತರಾಲವೆಲ್ಲವು ಸುರಭೀಕೃತ ಯಾತ್ರೆಯಲ್ಲಿ ಮಿಲತ ಜನಸ್ತೋಮವೆಲ್ಲವೂ ಮಾಂಗಲಿಕ ವೇಷಾ ಭೂಷಾವಿಭೂಷಿತ ಎಲ್ಲರ ಮುಖಗಳಲ್ಲಿಯೂ ಮಾಂಗಲಿಕವಚನ. ಸ್ಥಾವರ, ಜಂಗಮ, ಜೀವ ಸಂಘವೆಲ್ಲವೂ ಆನಂದ ಮಗ್ನ.

ಅನಂತರ ಬ್ರಹ್ಮದೇವರ ಎಲ್ಲ ಮುನಿ ಮಹರ್ಷಿಗಳೊಂದಿಗೆ ಬಂದು ಸಿಂಹಾಸನಾಸೀನರಾದ ಪಾರ್ವತೀ ಪರಮೇಶ್ವರರಿಗೆ ಮಂಗಳಾಭಿಷೇಕವನ್ನು ಮಾಡಿದರು. ಇಂದಿರಾದಿ ದೇವತೆಗಳೂ, ನಾಗರಾಜರೂ, ಮುಂದೆ ಬಂದು ಅಸಂಖ್ಯ ಮುತ್ತು ರತ್ನ ಮತ್ತು ಬಗೆ ಬಗೆಯ ಬಟ್ಟೆ ಹಾಗೂ ಸುಗಂಧಿತ ಪುಷ್ಪಹಾರಗಳಿಂದ ಆ ಈಶ್ವರ ದಂಪತಿಗಳ ಪೂಜೆಮಾಡಿದರು. ನವ ಮಾತೃಕೆಯರು ಮಂಗಳ ಆರತಿಯನ್ನು ಬೆಳಗಿದರು. ಅನಂತರ ಸರ್ವ ಸುರವೃಂದದಿಂದ ವಂದನೀಯನಾದ ಆ ಪರಮೇಶ್ವರನು ಎಲ್ಲರಿಗಿಂತ ಮೊದಲು ಮುನಿಮಹರ್ಷಿಗಳಿಗೆ ಅಪೇಕ್ಷಿತವಾದುದನ್ನು ಕೊಟ್ಟು ಸಂತೋಷಪಡಿಸಿದನು. ಅನಂತರ ಬ್ರಹ್ಮದೇವರ ಜೊತೆಗೆ ಮಾತು ಕತೆ ಆಗಿ ಭಗವಾನ್ ಶ್ರೀವಿಷ್ಣುವಿಗೆ ಹೇಳಿದರು.

ದೇವ ದೇವೋತ್ತಮನಾದ ಲಕ್ಷ್ಮೀ ಪತಿಯೇ, ನೀನು ಇಲ್ಲಿ ಬಂದು ಕುಳಿತುಕೊ. ನನ್ನ ಸಮಸ್ತ ಪ್ರಭುತ್ವಕ್ಕೆ ಮುಖ್ಯವಾಗಿ ಏಕಮಾತ್ರ ಕಾರಣ ಎಂದರೆ ನೀನು, ನೀನು ದೂರ ಇದ್ದರೂ ನನ್ನ ಸಮೀಪದಲ್ಲಿಯೇ ಇರುತ್ತಿ ನಿನಗಿಂತ ಹೆಚ್ಚಿನ ನನ್ನ ಕಾರ್ಯ ಮಾಡುವವರು

ಬೇರೆ ಯಾರು ಇಲ್ಲ. ನೀನೇ ನಿನ್ನ ಉಪದೇಶದಿಂದ ರಾಜಶ್ರೇಷ್ಠನಾದ ದಿವೋದಾಸನಿಗೆ ಶಿಷಾರಷಾಗಳನ್ನು ಕರುಣಿಸಿದೆ. ಅದರಿಂದ ಅವನು ಪರಮಸಿದ್ಧಿಯನ್ನು ಹೊಂದಿದನು. ನನ್ನ ಮನೋವಾಂಛಿತ ಕಾರ್ಯವು ಕೂಡ ಸಿದ್ಧಯಾಯಿತು. ನನಗೆ ಈ ಆನಂದವನವು ಲಭಿಸಬೇಕಾದರೆ ನೀನು ಮತ್ತು ಗಣೇಶ ಇಬ್ಬರೂ ಕಾರಣ. ಈ ಕ್ಷೇತ್ರದಲ್ಲಿ ಮರಣ ಹೊಂದಿದ ಜೀವಜಂತು ಮತ್ತೆ ಹುಟ್ಟಿ ಬರುವುದಿಲ್ಲ. ಈ ಕಾಶೀಕ್ಷೇತ್ರವು ಬ್ರಹ್ಮಾನಂದದ ಮೂಲ ಖಣಿ. ಈ ಮೂರು ಲೋಕಗಳಲ್ಲಿ ನನಗೆ ಪ್ರಿಯಕರವಾದ ವಸ್ತು ಬೇರೊಂದು ಇಲ್ಲ.

**ವಿಷ್ಣು:-** ''ಪಿನಾಕ ಪಾಣಿಯೇ, ನಾನು ಕೂಡ ಈ ಸ್ಥಾನದಿಂದ ದೂರ ಹೋಗುವುದಿಲ್ಲ.''

**ಮಹಾದೇವ:-** ''ಮುರಾರಿಯೇ, ಮೋಕ್ಷಲಕ್ಷ್ಮಿಗೆ ಆಶ್ರಯ ಭೂತವಾದ ಈ ಸ್ಥಾನದಲ್ಲಿ ನೀನು ಕೂಡ ನನ್ನ ಜತೆಗೆ ಇರು. ನನ್ನ ಸಮೀಪದಲ್ಲೇ ಇರು ನನ್ನ ಭಕ್ತನಾಗಿದ್ದರೂ ಮೊದಲು ಶ್ರೀಹರಿಯ ಆರಾಧನೆಯನ್ನು ಮಾಡದೇ ನನ್ನ ಪೂಜೆಯನ್ನು ಮಾಡಿದರೆ ಅವನಿಗೆ ಯಾವ ಪುಣ್ಯವೂ ಬರುವುದಿಲ್ಲ. ಮತ್ತು ಅವನ ಮನೋಭೀಷ್ಟವೂ ಸಿದ್ಧಿಸುವುದಿಲ್ಲ ಅಚ್ಯುತನೇ, ನನಗೆ ಈ ಮುಕ್ತಿ ಮಂಟಪದಲ್ಲಿ ಇರುವುದರಿಂದ ಆಗುವಷ್ಟು ಸುಖವು ಕೈಲಾಸ ಪರ್ವತದಲ್ಲಿದ್ದಾಗಲೂ ಆಗುವುದಿಲ್ಲ. ನನ್ನಲ್ಲಿ ಅನನ್ಯ ಹೃದಯದಲ್ಲೂ ಆಗುವುದಿಲ್ಲ. ನನಗೆ ಅವನ ಭಕ್ತಿಯನ್ನು ಇಟ್ಟು ಚಿತ್ತ ವೃತ್ತಿಗಳನ್ನು ಸ್ಥಿರಗೊಳಿಸಿ ಇಲ್ಲಿಯ ದಕ್ಷಿಣ ಮಂಟಪದಲ್ಲಿ ಒಂದು ಕ್ಷಣ ಮಾತ್ರವಾದರೂ ನಿಂತು ಶಿವಧ್ಯಾನ ಮಾಡಿದವರು ಮತ್ತೊಮ್ಮೆ ಗರ್ಭಾವಸ್ಥೆಯ ದುಃಖವನ್ನು ಅನುಭವಿಸುವುದಿಲ್ಲ.

ಅಲ್ಲಿ ಪೂರ್ವಾಭಿಮುಖನಾಗಿ ಕುಳಿತುಕೊಂಡ ಮಹೇಶ್ವರನ ಬಲಭಾಗದಲ್ಲಿ ಬ್ರಹ್ಮದೇವರೂ ಎಡಭಾಗದಲ್ಲಿ ವಿಷ್ಣುವೂ ನಿಂತುಕೊಂಡರು. ದೇವರಾಜ ಇಂದ್ರನು ಚಾಮರಸೇವೆಯನ್ನು ಸಲ್ಲಿಸುತ್ತಿದ್ದ. ಆ ಪರಮೇಶ್ವರನ ಸುತ್ತ ಮುತ್ತ ಮುನಿ ಮನೀಷಿ ಮಹರ್ಷಿಗಳು ನಿಂತುಕೊಂಡಿದ್ದರು. ಪರಮೇಶ್ವರನ ಹಿಂಬದಿಯಲ್ಲಿ ಆಯುಧ ಪಾಣಿಗಳಾಗಿ ಶಿವಪಾರ್ಷದವರು ಮೌನ ಮುನಿಗಳಾಗಿ ನಿಂತುಕೊಂಡಿದ್ದರು. ಆ ಸಮಯದಲ್ಲಿ ಮಹಾದೇವನು ತನ್ನ ಬಲಗೈಯನ್ನು ಎತ್ತಿ ಬ್ರಹ್ಮ ಹಾಗೂ ನಾರಾಯಣನಿಗೆ ಒಂದು ಶಿವಲಿಂಗವನ್ನು ತೋರಿಸಿ ಹೇಳಿದನು ದೇವತೆಗಳೇ ಅಲ್ಲಿ ನೋಡಿರಿ. ಅದೇ ಪರಂಜ್ಯೋತಿ. ಪರಾತಪರ ಬ್ರಹ್ಮ. ಅದೇ ಅತ್ಯಂತ ಸಿದ್ಧಿದಾಯಕವಾದ ನನ್ನ ಸ್ಥಾವರ ರೂಪ. ಇಲ್ಲಿ ಈ ಕಾಶೀಕ್ಷೇತ್ರದಲ್ಲಿ ಇರುವ ನನ್ನ ಭಕ್ತರೆಲ್ಲರೂ ಸಿದ್ಧಪುರುಷರು. ಆ ಬಾಲಬ್ರಹ್ಮಚಾರಿಯರು ಜಿತೇಂದ್ರಿಯರು, ತಪಸ್ವಿಗಳು ಶಿವಪಂಚಾಕ್ಷರ ಮಂತ್ರದ ದಿವ್ಯ ಜ್ಞಾನಿಗಳು. ಲಿಂಗಾರ್ಚನಜ್ಞಾನಿಗಳು ಲಿಂಗಾರ್ಚನಪರಾಯಣರು, ಇಂದ್ರಿಯ ನಿಗ್ರಹಿಗಳು, ಊರ್ಧ್ವರೇತಸರು ಮನಸ್ಸು ಮತ್ತು ಇಂದ್ರಿಯವನ್ನು ನನ್ನ ಹೊರತೂ ಎಂದಿಗೂ ಬೇರೆ ಕಡೆ ಹರಿಬಿಡದೇ ಇರುವವರು. ಕಂದ, ಮೂಲ, ಫಲಾಗಿಗಳು. ಸದಾ ಶಿವೈಕ್ಯ ನಿಷ್ಠರು. ಕಾಮಕ್ರೋಧಗಳನ್ನೂ ಗೆದ್ದವರು. ಮೋಹರಹಿತರು. ಪರಿಗ್ರಹವರ್ಜಿತರು ನನಗೆ ಪರಮ ಪ್ರಿಯರು. ನನಗೆ ಮಕ್ಕಳಂತೆ ಇರುವವರು. ಇವರೆಲ್ಲರೂ ನನ್ನ ಸ್ವರೂಪರೇ. ನನ್ನನ್ನು ಆರಾಧಿಸ ಬಯಸುವವರು ಈ ನನ್ನ ಭಕ್ತರನ್ನು ಕೂಡ ನನ್ನ ಸ್ವರೂಪರು ಎಂದು ತಿಳಿದೇ ಇವರನ್ನು ಪೂಜಿಸಬೇಕು ಮತ್ತು ಇವರಿಗೆ ನಮಸ್ಕರಿಸಬೇಕು. ನಾನು ಒಮ್ಮೊಮ್ಮೆ ಹಲ ಕೆಲವರಿಗೆ ಮಾತ್ರ ದರ್ಶನವನ್ನು ನೀಡುತ್ತೇನೆ. ಒಮ್ಮೊಮ್ಮೆ ಒಮ್ಮೆಲೆ ಅದಶ್ಯನಾಗಿ ಬಿಡುತ್ತೇನೆ.

ದೇವತೆಗಳೇ, ಎಲ್ಲ ಭಕ್ತರ ಅನುಗ್ರಹ ಮಾಡಬೇಕು ಎಂಬ ಉದ್ದೇಶದಿಂದಲೇ ನಾನು ಆನಂದವನ ಎಂಬ ಹೆಸರಿನ ಈ ಕಾಶೀಕ್ಷೇತ್ರದಲ್ಲಿ ಯಾವಾಗಲೂ ಸ್ವೇಚ್ಛೆಯಿಂದ ವಾಸಮಾಡುತ್ತೇನೆ. ಭಕ್ತರಿಗೆ ಮನೋವಾಂಛಿತವಾದ ವರವನ್ನು ನೀಡುವ ನಾನು ಇಲ್ಲಿ ಲಿಂಗ ರೂಪದಿಂದ ನಿರಂತರವೂ ನೆಲೆಸಿರುತ್ತೇನೆ. ನಾನು ಇಲ್ಲಿಯ ಸ್ವಯಂಭೂ ಎಲ್ಲ ಲಿಂಗಗಳಲ್ಲಿಯೂ ಸಮಾನವಾಗಿಯೇ ಇರುತ್ತೇನೆ. ಶ್ರದ್ಧೆ ಹಾಗೂ ಶುದ್ಧ ದೃಷ್ಟಿಯಿಂದ ಈ ನನ್ನ ಲಿಂಗವನ್ನು ದರ್ಶನಮಾಡಿಕೊಂಡವರು ನನ್ನ ಪ್ರತ್ಯಕ್ಷ ದರ್ಶನವನ್ನೂ ಮಾಡಿಕೊಂಡಂತೆ.

ಋಷಿಗಳೇ ಮತ್ತು ದೇವತೆಗಳೇ ನೀವೆಲ್ಲರೂ ನನ್ನ ಮಾತನ್ನು ಲಕ್ಷಪೂರ್ವಕವಾಗಿ ಕೇಳಿರಿ ಕಾಶೀಕ್ಷೇತ್ರದಲ್ಲಿ ಇರುವ ಈ ವಿಶ್ವೇಶ್ವರ ಲಿಂಗದಲ್ಲಿಯೇ ನಾನು ಸರ್ವದಾ ಸುಪ್ರಿತಷ್ಠಿತ. ಇದೇ ನನ್ನ ಪರಮಸ್ವರೂಪ ಜಗತ್ತಿನಲ್ಲಿ ಹಾಗೂ ಕಾಶೀ ಕ್ಷೇತ್ರದಲ್ಲಿ ಇರುವ ಎಲ್ಲ ಲಿಂಗಗಳು ಈ ವಿಶ್ವೇಶ್ವರ ಲಿಂಗದ ದರ್ಶನಕ್ಕೆ ಬರುತ್ತವೆ. ನಾನು ಹಿಂದೆ ಹೇಳಿದಂತೆ ಎಲ್ಲ ಲಿಂಗಗಳಲ್ಲಿಯೂ ಸಮಾನವಾಗಿಯೇ ಸನ್ನಿಹಿತನಾಗಿರುತ್ತೇನೆ. ಆದರೆ ಈ ವಿಶ್ವೇಶ್ವರ ಲಿಂಗದಲ್ಲಿ ನನ್ನ ಸನ್ನಿಧಾನದ ಪ್ರಶ್ನೆಯೇ ಇಲ್ಲ. ಈ ವಿಶ್ವೇಶ್ವರ ಲಿಂಗವು ನನ್ನ ಸಾಕ್ಷತ್ ಪರಾಮೂರ್ತಿಯೇ. ನನ್ನ ಸಾಕ್ಷಾತ್ ಸ್ವರೂಪವೇ. ಈ ಲಿಂಗದ ನಾಮಶ್ರವಣ ಮಾತ್ರದಿಂದಲೇ ಜೀವಿಗಳ ಜನ್ಮಾಂತರದ ಪಾತಕಗಳೆಲ್ಲವೂ ನಷ್ಟವಾಗಿ ಹೋಗುತ್ತವೆ. ಕಾಶಿಯ ಈ ವಿಶ್ವೇಶ್ವರ ಲಿಂಗದ ದರ್ಶನ ಮಾಡಿಕೊಳ್ಳುವ ಉದ್ದೇಶ ಮನೆಯಿಂದ ಹೊರಟ ಕೂಡಲೇ ಮಾನವರ ಮೂರು ಜನ್ಮದ ಸಂಚಿತ ಮಹಾಪಾಪಗಳೆಲ್ಲವೂ ತೊಳೆದು ಹೋಗುತ್ತವೆ. ಈ ಲಿಂಗದ ಸ್ಪರ್ಶಮಾತ್ರದಿಂದ ಸಾವಿರ ರಾಜಸೂಯ ಯಜ್ಞಮಾಡಿದ ಫಲವುಲಭಿಸುತ್ತದೆ. ಈ ಲಿಂಗರಾಜವನ್ನು ಭಕ್ತಿಯಿಂದ ಪೂಜೆಮಾಡಿದ ಮಾತ್ರಕ್ಕೆ ಸಾವಿರ ಬಂಗಾರದ ಕಮಲಗಳಿಂದ ಪೂಜೆ ಮಾಡಿದ ಫಲವು ಪ್ರಾಪ್ತವಾಗುತ್ತದೆ. ಪಂಚಾಮೃತ ಮೊದಲಾದವುಗಳಿಂದ ಈ ಶಿವಲಿಂಗವನ್ನು ಪೂಜಿಸಿದವರಿಗೆ ನಾಲ್ಕು ವಿಧವಾದ ಪುರುಷಾರ್ಥಗಳು ಧರ್ಮ, ಅರ್ಥ, ಕಾಮ, ಮೋಕ್ಷ ಪ್ರಾಪ್ತವಾಗುತ್ತವೆ.

ದೇವತೆಗಳೇ, ವಸ್ತ್ರದಿಂದ ಸೋಸಿದ ಶುದ್ಧನೀರಿನಿಂದ ಲಿಂಗಕ್ಕೆ ಸ್ನಾನವನ್ನು ಮಾಡಿದರೆ ಒಂದು ಲಕ್ಷ ಅಶ್ವಮೇಧ ಯಜ್ಞವನ್ನು ಮಾಡಿದ ಫಲ. ಈ ವಿಶ್ವನಾಥ ಲಿಂಗದ ದರ್ಶನವನ್ನು ಒಮ್ಮೆ ಮಾಡಿಕೊಂಡು ಬೇರೆ ಕಡೆ ಮರಣಹೊಂದಿದರೂ ಅವನಿಗೆ ಜನ್ಮಾಂತರದಲ್ಲಿ ಮುಕ್ತಿ. ಯಾವನ ನಾಲಿಗೆಯ ತುದಿಯಲ್ಲಿ ವಿಶ್ವನಾಥನ ನಾಮವು ನಲಿದಾಡುವುದೋ, ಕಿವಿಯಲ್ಲಿ ವಿಶ್ವನಾಥನ ಕಥೆಯು ಕೇಳಿಬರುವುದೋ, ಚಿತ್ತದಲ್ಲಿ ವಿಶ್ವನಾಥನ ಚಿಂತನೆಯು ಒದಗಿ ಬರುವುದೋ ಅಂಥ ಮನುಷ್ಯನು ಈ ಸಂಸಾರದಲ್ಲಿ ಹೇಗೆ ಮತ್ತೆ ಹುಟ್ಟಿ ಬರುವನು? ಯಾರು ಈ ನನ್ನ ವಿಶ್ವನಾಥ ಲಿಂಗ ರೂಪವಾದ ವಿಗ್ರಹನ್ನು ದರ್ಶನಮಾಡಿಕೊಂಡು ಮನಸ್ಸಿನಲ್ಲಿ ಧ್ಯಾನಮಾಡುವನೋ ಅವನು ನನ್ನ ಶಿವಗಣದಲ್ಲಿಯೇ ಗಣನೆಮಾಡಲ್ಪಡುತ್ತಾನೆ. ಯಾರು ಪ್ರತಿದಿನವೂ ಮೂರು ಹೊತ್ತು ಸಂಧ್ಯಾವಂದನೆ ಮಾಡುವ ಸಮಯದಲ್ಲಿ ವಿಶ್ವನಾಥ, ವಿಶ್ವನಾಥ, ವಿಶ್ವನಾಥ ಎಂದು ಜಪಿಸುವನೋ ಅಂಥ ಪುಣ್ಯಾತ್ಮನ ನಾಮವನ್ನು ನಾನು ಕೂಡ ಜಪಿಸುತ್ತೇನೆ. ದೇವತೆಗಳೇ, ಕಾಶಿಯ ಈ ವಿಶ್ವೇಶ್ವರ ಲಿಂಗವು ನನಗೂ ಕೂಡ ಪೂಜಿಸಲು ಯೋಗ್ಯವಾಗಿದೆ. ಆದುದರಿಂದ ದೇವತೆಗಳೇ, ಋಷಿಗಳೇ ಹಾಗೂ ಮನುಷ್ಯರೇ ನೀವೆಲ್ಲರೂ ಸರ್ವಪ್ರಯತ್ನ ಮಾಡಿ ಈ ಶಿವಲಿಂಗದ ಪೂಜೆಯನ್ನು ಮಾಡಿರಿ. ಈ ವಿಶ್ವನಾಥ ಲಿಂಗಕ್ಕೆ ನಮಸ್ಕಾರ ಮಾಡಿದವರು ದೇವತೆಗಳಿಂದ ವಂದನೀಯರಾಗುತ್ತಾರೆ. ದೈತ್ಯರಿಗೂ ಪೂಜನೀಯರಾಗುತ್ತಾರೆ.

ಇಲ್ಲಿ ನೆರೆದ ಎಲ್ಲ ದೇವ, ಧಾನವ, ಮಾನವ ಮುನಿಮಹರ್ಷಿ ಮಹಾನುಭಾವರೇ, ಮತ್ತೊಮ್ಮೆ ನನ್ನ ಈ ಮಾತನ್ನು ಕೇಳಿರಿ. ನಾನು ನನ್ನ ಕೈಗಳನ್ನು ಎತ್ತಿ ಮತ್ತೆ ಮತ್ತೆ ಒತ್ತಿ ಈ ಮಾತನ್ನು ಹೇಳುತ್ತೇನೆ. ತ್ರಿಗುಣಾತ್ಮಕವಾದ ಈ ಮೂರು ಲೋಕಗಳಲ್ಲಿ ಮೂರೇ ಮೂರು ವಸ್ತುಗಳು ಸಾರಾತ್ ಸಾರತರ ಆಗಿರುತ್ತವೆ. ವಿಶ್ವನಾಥಲಿಂಗ, ಮಣಿಕರ್ಣಿಕೆಯ ನೀರು ಮತ್ತು ಕಾಶೀಪಟ್ಟಣ.

ಹೀಗೆ ಮಹಾದೇವನು ಕೈ ಎತ್ತಿ ಸಾರಿ ಘೋಷಣೆಯೊಂದಿಗೆ ಪಾರ್ವತಿಯೊಂದಿಗೆ ಸಿಂಹಾಸನದಿಂದ ಎದ್ದು ನಿಂತನು. ಮತ್ತು ಆ ವಿಶ್ವನಾಥ ಲಿಂಗವನ್ನು ಮಹಾದೇವಿಯೊಂದಿಗೆ ವಿಧಿ ಪೂರ್ವಕವಾಗಿ ಪೂಜೆಮಾಡಿದನು. ಅಲ್ಲಿ ನೆರೆದ ಸುರಾಸುರ, ನರವಾನರ, ಕಿನ್ನರ, ಕಿಂಪುರುಷ, ನಾಗ, ಯಕ್ಷರಕ್ಷ, ಸಾಧು ಸಿದ್ಧ ಭಕ್ತಮುಕ್ತ ಜನರೆಲ್ಲರೂ ನೋಡ ನೋಡುತ್ತಿದ್ದಂತೆಯೇ ಅವರೆಲ್ಲರ ಸಮಕ್ಷಮದಲ್ಲಿ ಪಾರ್ವತಿಯೊಂದಿಗೆ ಪರಮೇಶ್ವರನು ಆ ವಿಶ್ವನಾಥ ಲಿಂಗದಲ್ಲಿ ಲೀನನಾದನು. ಆಗ ಎಲ್ಲ ದೇವತೆಗಳು ಆ ಪಾರ್ವತೀ ಪರಮೇಶ್ವರರ ಹೆಸರು ಹೇಳಿ ಜೈ ಜೈಕಾರಮಾಡಿದರು. ರುದ್ರಸೂಕ್ತಗಳನ್ನು ಪಠಿಸಿದರು. ಶಿವಮಂತ್ರಗಳನ್ನು ಜಪಿಸಿದರು.

ಅಗಸ್ತ್ಯ ಮುನಿಯೇ, ಈ ರೀತಿಯಾಗಿ ಅವಿಮುಕ್ತ ಕ್ಷೇತ್ರವಾದ ಕಾಶಿಯ ಪ್ರಭಾವದ ಒಂದು ಅಂಶವನ್ನು ಮಾತ್ರ ನಾನು ನಿನಗೆ ನಿರೂಪಣೆ ಮಾಡಿದ್ದೇನೆ. ಇದು ಸರ್ವಪಾಪ ಪರಿಹಾರಕ. ನೀನು ಸ್ವಲ್ಪ ಸಮಯದಲ್ಲಿ ಆ ಕಾಶೀಪುರಿಗೆ ಪ್ರಯಾಣ ಮಾಡುವೆ. ಅಗೋ ಅತ್ತ ನೋಡು. ಸೂರ್ಯನಾರಾಯಣನು ಅಸ್ತಾಚಲ ಶಿಖರದಲ್ಲಿ ಶೋಭಿಸುತ್ತಲಿದ್ದಾನೆ. ನಮ್ಮಿಬ್ಬರಿಗೂ ಈ ಮೌನಧ್ಯಾನ, ಸಾಯಂಸಂಧ್ಯೆ ಹಾಗೂ ಸಂಧ್ಯಾ ಪೂಜೆಗಳ ಸಮಯವಾಯಿತು.

**ವೇದವ್ಯಾಸ:-** ಸೂತನೆ, ಈ ರೀತಿಯಾಗಿ ಪಾರ್ವತೀ ಕುಮಾರನಾದ ಸ್ಕಂದನ ಮುಖದಿಂದ ಕಾಶೀಕ್ಷೇತ್ರದ ದಿವ್ಯ ಮಹಿಮೆಯನ್ನು ಕೇಳಿ ಅಗಸ್ತ್ಯ ಮುನಿಗಳು ತನ ಧರ್ಮಪತ್ನಿ ಲೋಪಾಮುದ್ರೆಯೊಂದಿಗೆ ಸ್ಕಂದ ಸ್ವಾಮಿಯ ಚರಣಾರವಿಂದಗಳಿಗೆ ಮತ್ತೆ ಮತ್ತೆ ವಂದನೆ ಮಾಡಿದರು. ಅನಂತರ ಸಾಯಂ ಸಂಧ್ಯಾವಂದನೆಗಾಗಿ ಅಲ್ಲಿಂದ ಎದ್ದು ಹೋದರು. ಚಂದ್ರಶೇಖರನಾದ ಭಗವಾನ್ ಶಿವನ ದಿವ್ಯ ಧಾಮವಾದ ಈ ಕಾಶೀಕ್ಷೇತ್ರದ ರಹಸ್ಯವನ್ನು ತಿಳಿದು ಅಗಸ್ತ್ಯರ ಮನಸ್ಸಿಗೆ ವಿಚಿತ್ರವಾದ ಶಾಂತಿ ಸಮಾಧಾನಗಳು ಉಂಟಾದವು. ಅವರು ಸಾಯಂಕಾಲದ ತಮ್ಮ ನಿತ್ಯಾಹ್ನಿಕವನ್ನು ಮುಗಿಸಿಕೊಂಡು ಕಾಶೀವಿಶ್ವನಾಥನ ಧ್ಯಾನೋಪಾಸನೆಯಲ್ಲಿ ಲೀನರಾದರು.

ಸೂತನೇ, ಈ ಆನಂದವನದ ಮಹಿಮೆ ಅತ್ಯದ್ಭುತ. ನೂರು ವರ್ಷ ಹೇಳಿದರೂ ತೀರದು ಇದರ ಹಿರಿಮೆ. ಭಗವಾನ್ ಪರಶಿವನು ಪಾರ್ವತೀದೇವಿಗೆ ಕಾಶಿ ಮಹಿಮೆಯನ್ನು ಏನು ಹೇಳಿದ್ದನೋ ಹೇಗೆ ಹೇಳಿದ್ದನೋ ಅದೆಲ್ಲವನ್ನೂ ಆ ಶಿವ ದಂಪತಿಗಳ ಪ್ರೀತಿಯ ಪುತ್ರನಾದ ಸ್ಕಂದನು ಅಗಸ್ತ್ಯರಿಗೆ ಹೇಳಿದನು. ಆ ಸ್ಕಂದ ಅಗಸ್ತ್ಯ ಸಂವಾದ ರೂಪವಾದ ಕಾಶೀ ಖಂಡದ ಮಾಹಾತ್ಮ್ಯವನ್ನು ನಾನು ನಿನಗೂ ಹಾಗೂ ನನ್ನ ಮಗನಾದ ಶಕುನಿಗೂ ಒಂದೂ ಬಿಡದಂತೆ ನಿರೂಪಿಸಿದ್ದೇನೆ.

## ಕಾಶೀ ಯಾತ್ರೆಯ ಕ್ರಮ

**ಸೂತ:-** ಭಗವನ್ ವೇದವ್ಯಾಸರೇ, ಸಿದ್ಧಿಯನ್ನು ಅಪೇಕ್ಷಿಸುವ ಮನುಷ್ಯರ ಹಿತಕ್ಕಾಗಿ ಕಾಶೀಯಾತ್ರೆಯ ಕ್ರಮವನ್ನು ವರ್ಣಿಸಿರಿ,

**ವೇದವ್ಯಾಸ:-** ಪ್ರಾಜ್ಞಪುಂಗವನಾದ ಸೂತನೆ, ಕಾಶೀಯಾತ್ರೆಯ ಕ್ರಮವನ್ನು ವಿವರಿಸುತ್ತೇನೆ. ಲಕ್ಷವಿಟ್ಟು ಕೇಳು. ಕಾಶಿಗೆ ಬಂದ ಯಾತ್ರಿಕರು ಮೊಟ್ಟ ಮೊದಲು ೧) ಮಣಿಕರ್ಣಿಕೆಯ ಚಕ್ರಪುಷ್ಪ ನೀರಿನಲ್ಲಿವಸ್ತ್ರ ಸಹಿತವಾಗಿಯೇ ಸ್ನಾನ ಮಾಡಬೇಕು. ಅನಂತರ ದೇವತಾ, ಋಷಿ, ಪಿತೃಗಳಿಗೆ ತರ್ಪಣಕೊಟ್ಟುಬ್ರಾಹ್ಮಣರನ್ನೂ ಯಾಚಕರನ್ನೂ ತೃಪ್ತಿಪಡಿಸಬೇಕು. ೨) ಆದಿತ್ಯ, ದ್ರೌಪದಿ, ವಿಷ್ಣು, ದಂಡಪಾಣಿ, ಮಹೇಶ್ವರ ಈ ಐವರಿಗೆ ನಮಸ್ಕಾರ ಮಾಡಬೇಕು. ೩) ಧುಂಢಿರಾಜ ಗಣೇಶನ ದರ್ಶನ ೪) ಜ್ಞಾನವಾಪಿಯಲ್ಲಿ ಆಚಮನ. ನಂದಿಕೇಶ್ವರ ಪೂಜೆ, ತಾರಕೇಶ್ವರ ಪೂಜೆ, ಮಹಾಕಾಲೇಶ್ವರ ಪೂಜೆಗಳನ್ನು ಮಾಡಬೇಕು. ೫) ಅನಂತರ ಪುನಃ ದಂಡಪಾಣಿಯ ದರ್ಶನ ಪೂಜೆಯನ್ನು ಮಾಡಬೇಕು ಈ ಐದಕ್ಕೆ ಪಂಚತೀರ್ಥ ಯಾತ್ರಾ ಎಂದು ಕರೆಯುತ್ತಾರೆ. ಮಹಾಫಲವನ್ನು ಬಯಸುವವರು ಕಾಶಿಯಲ್ಲಿ ಇದ್ದು ಪ್ರತಿದಿನವೂ ಈ ಪಂಚತೀರ್ಥ ಯಾತ್ರೆಯನ್ನು ಮಾಡಬೇಕು. ಅನಂತರ ಸರ್ವಪ್ರಯೋಜನಗಳ ಸಿದ್ಧಿಯನ್ನು ಮಾಡುವ ಭಗವಾನ್ ವಿಶ್ವನಾಥನ ಯಾತ್ರೆಯನ್ನು ಮಾಡಬೇಕು. ತಿಂಗಳಿನ ಕೃಷ್ಣಪಕ್ಷದ ಪ್ರತಿಪದೆಯಿಂದ ಆರಂಭಮಾಡಿಕೊಂಡು ಚತುರ್ದಶಿಯವರೆಗೆ ಕಾಶಿಯ ಮುಖ್ಯ ಮುಖ್ಯವಾದ ಹದಿನಾಲ್ಕು ಆಯತನಗಳ ಯಾತ್ರೆಯನ್ನು ಮಾಡಬೇಕು. ಅಥವಾ ಕ್ಷೇತ್ರ ಸಿದ್ಧಿಯನ್ನು ಇಚ್ಚಿಸುವ ಪುಣ್ಯೇಚ್ಛುಕರು ಪ್ರತಿಯೊಂದು ಚತುರ್ದಶಿ ದಿನದಂದು ಯಾತ್ರೆಯನ್ನು ಮಾಡಬೇಕು. ಭಿನ್ನ ಭಿನ್ನ ತೀರ್ಥಗಳಲ್ಲಿ ಸ್ನಾನ, ಮತ್ತು ಅಲ್ಲಿಯ ಶಿವಲಿಂಗಗಳ ಪೂಜೆಮಾಡಿ ಮೌನದಿಂದ ಯಾತ್ರೆ ಮಾಡುವ ಯಾತ್ರಿಕರು ತಮ್ಮ ಮನೋವಾಂಛಿತವಾದ ಫಲವನ್ನು ಪಡೆಯುತ್ತಾರೆ.

ಮೊದಲವು ಮಚ್ಛೋದರಿಯಲ್ಲಿ ಸ್ನಾನಮಾಡಿ ತರ್ಪಣಾದಿಗಳನ್ನು ಮಾಡಿ ಓಂಕಾರೇಶ್ವರನ ದರ್ಶನವನ್ನು ತೆಗೆದುಕೊಳ್ಳಬೇಕು. ಅನಂತರ ಕ್ರಮವಾಗಿ ತ್ರಿವಿಷ್ಟಪ, ಮಹಾದೇವ, ಕೃತಿವಾಸ, ರತ್ನೇಶ್ವರ, ಚಂದ್ರೇಶ್ವರ ಕೇದಾರ, ಧರ್ಮೇಶ್ವರ, ವೀರೇಶ್ವರ, ಕಾಮೇಶ್ವರ, ವಿಶ್ವಕರ್ಮೇಶ್ವರ, ಮಣಿಕರ್ಣೇಶ್ವರ ಮತ್ತು ಅವಿಮುಕ್ತೇಶ್ವರ ಲಿಂಗಗಳ ದರ್ಶನ ಮಾಡಿಕೊಂಡು ಕೊನೆಗೆ ವಿಶ್ವನಾಥನದರ್ಶನ ಮಾಡಿ ಪೂಜೆಯನ್ನು ಆಚರಿಸಬೇಕು. ಕಾಶೀಕ್ಷೇತ್ರದಲ್ಲಿ ವಾಸಮಾಡುವ ಪುರುಷರು ಈ ಯಾತ್ರೆಯನ್ನು ಪ್ರಯತ್ನ ಪೂರ್ವಕವಾಗಿ ಮಾಡಬೇಕು. ಕಾಶಿಯಲ್ಲಿ ಇದ್ದೂ ಯಾತ್ರೆಯನ್ನು ಮಾಡದಿದ್ದರೆ ಅವರು ಆ ಕಾಶಿಯನ್ನೇ ಬಿಟ್ಟು ಹೋಗಬೇಕಾದಂಥ ಅನೇಕ ಆಪತ್ತುಗಳು, ವಿಘ್ನಗಳು ಬಂದು ಒದಗುವವು. ಈ ವಿಘ್ನಗಳ ಶಾಂತಿಗಾಗಿ ಬೇರೆ ಎಂಟು ಸ್ಥಾನಗಳ ಯಾತ್ರೆಯನ್ನು ಮಾಡಬೇಕಾಗುವುದು ದಕ್ಷೇಶ್ವರ, ಪಾರ್ವತೀಶ್ವರ, ಪಶುಪತೀಶ್ವರ, ಗಂಗೇಶ್ವರ, ನರ್ಮದೇಶ್ವರ, ಗಭಸ್ತೀಶ್ವರ, ಸತೀಶ್ವರ ಹಾಗೂ ತಾರಕೇಶ್ವರ. ಈ ಎಂಟು ಪುಣ್ಯ ಸ್ಥಾನಗಳ ಯಾತ್ರೆಯಿಂದ ಹಾಗೂ ಈ ಲಿಂಗಗಳ ದರ್ಶನದಿಂದ ವಿಘ್ನರಾಶಿಗಳೆಲ್ಲವೂ ಪ್ರನಷ್ಟವಾಗುವವು.

ಯೋಗಕ್ಷೇಮಗಳ ಸಿದ್ಧಿಯನ್ನು ಉಂಟುಮಾಡುವ ಮತ್ತು ಸರ್ವವಿಘ್ನಗಳನ್ನು ನಿವಾರಣ ಮಾಡುವ ಇನ್ನೂ ಒಂದು ಶುಭ ಯಾತ್ರೆಯು ಇರುತ್ತದೆ ಅದನ್ನು ಕಾಶಿಯ ಕ್ಷೇತ್ರ ವಾಸಿಗಳು ಅವಶ್ಯವಾಗಿ ಮಾಡಬೇಕು. ಮೊದಲು ವರಣಾ ನದಿಯಲ್ಲಿ ಸ್ನಾನಮಾಡಿ ಶೈಲೇಶ್ವರನ ದರ್ಶನವನ್ನು ಮಾಡಿಕೊಳ್ಳಬೇಕು. ಅನಂತರ ಸಂಗಮ ತೀರ್ಥದಲ್ಲಿ ಸ್ನಾನಮಾಡಿ ಸಂಗಮೇಶ್ವರ ಪೂಜೆ ಬಳಿಕ ಸ್ಥಲೀನೇಶ್ವರ ತೀರ್ಥದಲ್ಲಿ ಸ್ನಾನ, ಸ್ವಲೀನೇಶ್ವರ ದರ್ಶನ ಅನಂತರ ಮಂದಾಕಿನೀ ತೀರ್ಥದಲ್ಲಿ ಸ್ನಾನ, ಮಧ್ಯಮೇಶ್ವರ ದರ್ಶನ. ಹಿರಣ್ಯಗರ್ಭತೀರ್ಥದಲ್ಲಿ ಸ್ನಾನ, ತರ್ಪಣ ಹಿರಣ್ಯ ಗರ್ಭೇಶ್ವರ

ದರ್ಶನ. ತದನಂತರ ಮಣಿಕರ್ಣಿಕಾ ಸ್ನಾನ, ಈಶಾನೇಶ್ವರ ದರ್ಶನ. ಕೂಪದಲ್ಲಿ ಜಲಸ್ಪರ್ಶ ಹಾಗೂ ಆಚಮನಮಾಡಿ ಗೋಪ್ರೇಕ್ಷೇಶ್ವರನ ಪೂಜೆ. ಕಪಿಲೆಯ ಕುಂಡದಲ್ಲಿ ಸ್ನಾನ ವೃಷಭಧ್ವಜನ ಪೂಜೆ. ಉಪಶಾಂತ ಕೂಪದಲ್ಲಿ ಸ್ಥಾನ, ಉಪಶಾಂತಿಯೇಶ್ವರ ಪೂಜೆ, ಪಂಚಚೂಡಾ ಕುಂಡದಲ್ಲಿ ಸ್ನಾನ, ಜ್ಯೇಷ್ಠ ಸ್ನಾನ ದರ್ಶನ ಮಾಡಿಕೊಂಡು ಪೂಜೆಯನ್ನು ಸಲ್ಲಿಸಬೇಕು. ಇದಾದ ನಂತರ ಚತುಃಸಮುದ್ರದಲ್ಲಿ ಸ್ನಾನಮಾಡಿ ಮಹಾದೇವರನ್ನು ಪೂಜಿಸಬೇಕು. ದೇವರ ಮುಂದೆ ಇರುವ ಬಾವಿಯಲ್ಲಿ ಸ್ನಾನಮಾಡಿ ಶುಕ್ರೇಶ್ವರ ದರ್ಶನಮಾಡಿಕೊಂಡು ಅದೇ ಕೂಪದಲ್ಲಿ ಸ್ನಾನತರ್ಪಣಾದಿ ಕಾರ್ಯಪೂರೈಸಬೇಕು. ಅನಂತರ ದಂಡಖಾತ ತೀರ್ಥದಲ್ಲಿ ಮಿಂದು ವ್ಯಾಘ್ರೇಶ್ವರನನ್ನು ಪೂಜಿಸಬೇಕು. ನಂತರ ಶೌನಕೇಶ್ವರ ತೀರ್ಥದಲ್ಲಿ ಮುಳುಗುಹಾಕಿ ಜಂಬುಕೇಶ್ವರ ಮಹಾಲಿಂಗವನ್ನು ಆರಾಧಿಸಿ ಪೂಜಿಸಬೇಕು. ಹೀಗೆ ಈ ಯಾತ್ರೆಯನ್ನು ಪೂರ್ಣಮಾಡಿದ ಮನುಷ್ಯರು ಸಂಸಾರ ರೂಪವಾದ ದುಃಖ ಸಾಗರದಲ್ಲಿ ಎಂದಿಗೂ ಮುಳುಗುವುದಿಲ್ಲ. ಈ ಯಾತ್ರೆಯನ್ನು ಕೃಷ್ಣಪಕ್ಷ ಪ್ರತಿಪದೆಯಿಂದ ಆರಂಭಮಾಡಿ ಚತುರ್ದಶಿ ತಿಥಿಯವರೆಗೆ ಕ್ರಮವಾಗಿ ಮಾಡಬೇಕು. ಇದರಿಂದ ಯಾತ್ರಿಕರು ಈ ಭವಬಂಧನಕ್ಕೆ ಪುನಃ ತಿರುಗುವುದಿಲ್ಲ.

ಇದಲ್ಲದೇ ಕಾಶಿಯಲ್ಲಿ ಹನ್ನೊಂದು ಮಂದಿರಗಳ ದರ್ಶನ ಯಾತ್ರೆಯ ಅವಶ್ಯ ಕರ್ತವ್ಯ. ೧) ಅಗ್ನೀಧ್ರ ಕುಂಡ ಸ್ನಾನ, ಅಗ್ನೀಧ್ರೇಶ್ವರನ ದರ್ಶನ. ೨) ಊರ್ವಶೀಶ್ವರ ತೀರ್ಥದಲ್ಲಿ ಸ್ನಾನ, ನಕುಲೀಶ್ವರ ದರ್ಶನ ೩) ಆಷಾಢೇಶ್ವರ ೪) ಭಾರ ಭೂತೇಶ್ವವರ ೫) ಪ್ರೀತಿಕೇಶ್ವರ ೬) ಲಾಂಗಲೀಶ್ವರ ೭) ತ್ರಿಪುರಾಂತಕೇಶ್ವರ ೮) ಮನಃಪ್ರಕಾಮೇಶ್ವರ ೯) ಪ್ರೀತಿಕೇಶ್ವರ ೧೦) ಮದಾಲಸೇಶ್ವರ ೧೧) ತಿಲಪರಣೇಶ್ವರ ಈ ಹನ್ನೊಂದು ಲಿಂಗಗಳ ದರ್ಶನವನ್ನು ಮಾಡಿ, ಅಲ್ಲಿಯೇ ಸಮೀಪದಲ್ಲಿದ್ದ ತೀರ್ಥ, ಕುಂಡಗಳಲ್ಲಿ ಸ್ನಾನಮಾಡಿ, ಪಾನಗೈದು ದಾನದಕ್ಷಿಣೆ ನೀಡಿದವರು ರುದ್ರ ಸಾರೂಪ್ಯವನ್ನು ಹೊಂದುತ್ತಾರೆ. ಅನಂತರ ಯಾತ್ರಿಕರು ಗೌರೀ ಯಾತ್ರೆಯನ್ನು ಮಾಡಬೇಕು. ಶುಕ್ಲಪಕ್ಷ ತೃತೀಯಾದಂದು ಮಾಡಿದ ಗೌರೀ ಯಾತ್ರೆಯು ಸಿದ್ಧಿ ಸಮೃದ್ಧಿದಾಯಕ. ಗೋಪ್ರೇಕ್ಷ ತೀರ್ಥದಲ್ಲಿ ಸ್ನಾನಮಾಡಿ ಮುಖನಿರ್ಮಾಲಿಕಾ ಗೌರಿಯ ದರ್ಶನಮಾಡಿಕೊಂಡು ಸೇವೆಸಲ್ಲಿಸಬೇಕು. ಜೇಷ್ಠ ವಾಪಿಯಲ್ಲಿ ಸ್ನಾನಮಾಡಿ ಜೇಷ್ಠ ಗೌರಿಯನ್ನು ಆರಾಧಿಸಬೇಕು. ಜ್ಞಾನವಾಪಿಯಲ್ಲಿ ಸ್ನಾನಮಾಡಿ ಸೌಭಾಗ್ಯ ಗೌರಿಯನ್ನು ಪೂಜಿಸಬೇಕು. ಮತ್ತು ಅಲ್ಲಿಯೇ ಪಿತೃತರ್ಪಣಾದಿ ಕಾರ್ಯಗಳನ್ನು ಮಾಡಿ ಶೃಂಗಾರ ಗೌರಿಯನ್ನು ಪೂಜಿಸಬೇಕು. ವಿಶಾಲ-ಗಂಗಾದಲ್ಲಿ ಸ್ನಾನಮಾಡಿ ವಿಶಾಲಾಕ್ಷೀದೇವಿಯ ದರ್ಶನಮಾಡಿಕೊಳ್ಳಬೇಕು. ಅನಂತರ ಲಲಿತಾ ತೀರ್ಥದಲ್ಲಿ ಸ್ನಾನ, ಲಲಿತಾದೇವಿಯ ಪೂಜೆ. ಬಳಿಕ ಭವಾನೀ ತೀರ್ಥದಲ್ಲಿ ಸ್ನಾನ, ಭವಾನೀದೇವಿಯ ಪೂಜೆ. ಬಿಂದು ತೀರ್ಥದಲ್ಲಿ ಸ್ನಾನ ಮಾಡಿ ಮಂಗಳಗೌರಿಯನ್ನು ಪೂಜಿಸಬೇಕು. ಆ ಮಂಗಳಾಗೌರಿಯ ಸ್ಥಾನದಿಂದ ಸಂಪತ್ತು ಸೌಭಾಗ್ಯಗಳ ಅಭಿವೃದ್ಧಿಯಾಗಿ ಮಹಾಲಕ್ಷ್ಮಿಯ ಬಳಿಗೆ ಹೋಗಿ ಅವಳ ಸೇವೆಮಾಡಬೇಕು.

ಕಾಶೀಕ್ಷೇತ್ರದಲ್ಲಿ ಮಾಸದ ಪ್ರತಿಯೊಂದು ಚತುರ್ಥಿಯ ದಿನದೊಂದು ವಿಘ್ನರಾಜ ಗಣೇಶನ ಯಾತ್ರೆಮಾಡಿ ಆ ಗಣಪತಿಯ ಪ್ರೀತಿಗಾಗಿ ಬ್ರಾಹ್ಮಣರಿಗೆ ಮೋದಕಗಳನ್ನು ದಾನ ಮಾಡಬೇಕು. ಮಂಗಳವಾರದಂದು ಕಾಲ-ಭೈರವನ ಯಾತ್ರೆಮಾಡಬೇಕು. ರವಿವಾರದ ಯೋಗವಿದ್ದ ಷಷ್ಠೀ ಮತ್ತು ಸಪ್ತಮೀ ದಿನಗಳಂದು ಸೂರ್ಯ ದರ್ಶನದ ಯಾತ್ರೆಯನ್ನು ಮಾಡಬೇಕು. ಅಷ್ಟಮೀ, ನವಮೀ ದಿನಗಳಲ್ಲಿ ಚಂಡೀದೇವಿಯ ಯಾತ್ರೆ ಮಾಡುವುದು ಶುಭಕರ.

ಕಾಶಿಯಲ್ಲಿ ಇದ್ದ ಅಂತರ್ಗೃಹದ ಯಾತ್ರೆಯನ್ನು ಪ್ರತಿಯೊಬ್ಬರೂ ಮಾಡಬೇಕು. ಪ್ರಾತಃಕಾಲದಲ್ಲಿ ಎದ್ದ ಕೂಡಲೇ ಅಂತರ್ಗೃಹದ ಯಾತ್ರೆಯನ್ನು ಪ್ರತಿದಿನವೂ ಮಾಡಬೇಕು. ಪ್ರಾತಃಕಾಲದಲ್ಲಿ ಎದ್ದು ಸ್ನಾನಮಾಡಿ ಐದು ವಿನಾಯಕ ಮೂರ್ತಿಗಳಿಗೆ ನಮಸ್ಕಾರ ಮಾಡಿ

ಬರಬೇಕು. ಅನಂತರ ವಿಶ್ವನಾಥನಿಗೆ ನಮಸ್ಕಾರ ಮಾಡಿ ಮುಕ್ತಿ ಮಂಟಪದಲ್ಲಿ ನಿಂತುಕೊಂಡು "ನಾನು ನನ್ನ ಪಾಪರಾಶಿಯನ್ನು ನಿವಾರಣ ಮಾಡಿಕೊಳ್ಳಲಿಕ್ಕಾಗಿ ಭಾನುವಾರ ಯುಕ್ತವಾದ ಷಷ್ಠೀ ಹಾಗೂ ಸಪ್ತಮೀ ದಿನಗಳಂದು ಸೂರ್ಯದೇವನ ದರ್ಶನಮಾಡಿ ಅಂತಗ್ರಹದ ಯಾತ್ರೆಮಾಡುತ್ತೇನೆ." ಎಂದು ಪ್ರತಿಜ್ಞೆ ಮಾಡಿ ಮಣಿಕರ್ಣಿಕಾ ತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನಮಾಡಿ ಮೌನದಿಂದ ಬಂದು ಮಣಿಕರ್ಣಿಕೇಶ್ವರನನ್ನು ಪೂಜಿಸಬೇಕು. ಅನಂತರ ಕಂಬಲ, ಅಶ್ವತರರ ದರ್ಶನ ಮಾಡಿಕೊಂಡು, ವಾಸುಕೇಶ್ವರನಿಗೆ ನಮಸ್ಕಾರ ಮಾಡಬೇಕು. ಬಳಿಕ ಪರ್ವತೇಶ್ವನ ದರ್ಶನಮಾಡಿಕೊಂಡು ಗಂಗಾಕೇಶವರ ದರ್ಶನ ಮಾಡಿಕೊಳ್ಳಬೇಕು. ಅನಂತರ ಲಲಿತಾದೇವಿಯ ದರ್ಶನ, ಜರಾಸಂಧೇಶ್ವರನಿಗೆ ನಮಸ್ಕಾರ ಅಲ್ಲಿಂದ ಸೋಮನಾಥ ಹಾಗೂ ವಾರಾಹೇಶ್ವರ ದರ್ಶನಮಾಡಿಕೊಳ್ಳಬೇಕು. ಅದರ ನಂತರ ಕ್ರಮವಾಗಿ ಬ್ರಹ್ಮೇಶ್ವರ. ಅಗಸ್ತೀಶ್ವರ, ಕಶ್ಯಪೇಶ್ವರ, ಹರಿಕೇಶವರ ದರ್ಶನಮಾಡಿ ನಮಸ್ಕಾರ ಗೈದು ವೈದ್ಯನಾಥನ ದರ್ಶನಮಾಡಿಕೊಳ್ಳಬೇಕು. ಅದರ ನಂತರ ಧ್ರುವೇಶ್ವರ ದರ್ಶನ, ಗೋಕರ್ಣೇಶ್ವರ ಪೂಜೆಯನ್ನು ಮಾಡುತ್ತ ಹಾಟಕೇಶ್ವರನ ಸಮೀಪದಲ್ಲಿ ಹೋಗಬೇಕು. ಅಲ್ಲಿಂದ ಅಸ್ತಿಕ್ಷೇಪ ಎಂಬ ತಟಾಕದಲ್ಲಿ ಹೋಗಿ ಕೀಕಶೇಶ್ವರನ ದರ್ಶನಮಾಡಿಕೊಳ್ಳಬೇಕು. ಅಲ್ಲಿಂದ ಮುಂದೆ ಹೋಗಿ ಭಾರಭೂತೇಶ್ವರ ಚಿತ್ರಗುಪ್ತೇಶ್ವರ ಚಿತ್ರಘಂಟಾದೇವಿ, ಹಾಗೂ ಪಶುಪತೀಶ್ವರರಿಗೆ ನಮಸ್ಕಾರ ಮಾಡಿ ಪಿತಾಮಹೇಶ್ವರನ ಬಳಿಗೆ ಹೋಗಬೇಕು. ಅನಂತರ ಕಲಶೇಶ್ವರ. ಚಂದ್ರೇಶ್ವರ, ವೀರೇಶ್ವರ, ವಿದ್ಯೇಶ್ವರ, ಅಗ್ನೀಶ್ವರ ನಾಗೇಶ್ವರ, ಹರಿಶ್ಚಂದ್ರೇಶ್ವರ, ಚಿಂತಾಮಣಿ ವಿನಾಯಕ, ಸೇನಾವಿನಾಯಕ, ಮುಂತಾದ ದೈವೀ ವಿಭೂತಿಗಳನ್ನು ದರ್ಶನಮಾಡಿಕೊಂಡು ಪೂಜೆಮಾಡಬೇಕು. ಇದಾದ ಬಳಿಕ ವಶಿಷ್ಠ, ವಾಮದೇವ ಎಂಬ ಇಬ್ಬರು ಮೂರ್ತಿಮಹಾನ್ ಮಹಾರ್ಷಿಗಳನ್ನು ಅವಶ್ಯವಾಗಿ ದರ್ಶನಮಾಡಿಕೊಳ್ಳಬೇಕು. ಈ ಎರಡೂ ಗಣಪತಿ ವಿಗ್ರಹಗಳು ದೊಡ್ಡ ಗುಡ್ಡದಂಥ ವಿಘ್ನವಿಡ್ಡೂರಗಳನ್ನು ಕಳೆದು ಹಾಕುವವು.

ಅನಂತರ ಸೀಮಾವಿನಾಯಕ, ಕರುಣೇಶ್ವರ, ತ್ರಿಸಂಧೇಶ್ವರ, ವಿಶಾಲಾಕ್ಷಿ, ಧರ್ಮೇಶ್ವರ, ವಿಶ್ವಭುಜ, ಆಶಾವಿನಾಯಕ, ವೃದ್ಧಾದಿತ್ಯ, ಚತುಃವಕ್ರೇಶ್ವರ, ಬ್ರಾಹ್ಮೀಶ್ವರ, ಮನಃಪ್ರಕಾಮೇಶ್ವರ, ಈಶಾನೇಶ್ವರ, ಚಂಡೀಶ್ವರ, ಭವಾನಿ, ಶಂಕರ, ಢುಂಢಿರಾಜ ಗಣೇಶ, ಇವರ ದರ್ಶನವನ್ನು ಮಾಡಿಕೊಂಡು ಅನೇಕ ಶ್ರದ್ಧಾ ಯುಕ್ತ ಪೂಜೆಗಳನ್ನು ಸಲ್ಲಿಸಬೇಕು. ಆ ಬಳಿಕ ರಾಜ-ರಾಜೇಶ್ವರನ ಪೂಜೆಯನ್ನು ಮಾಡಬೇಕು. ಅದರ ನಂತರ ಲಾಂಗಲೀಶ್ವರ, ನಕುಲೀಶ್ವರ, ಪಟಾನ್ನೇಶ್ವರ ಪರದ್ರವ್ಯೇಶ್ವರ, ಪ್ರತಿಗ್ರಹೇಶ್ವರ, ನಿಷ್ಕಲಂಕೇಶ್ವರ, ಮಾರ್ಕಂಡೇಶ್ವರ, ಅಪ್ಸರೇಶ್ವರ, ಗಂಗೇಶ್ವರ ಮುಂತಾದ ಪವಿತ್ರೋತ್ತಮವಾದ ಲಿಂಗಗಳ ಪೂಜೆಯನ್ನು ಮಾಡಬೇಕು. ಆ ಬಳಿಕ ಜ್ಞಾನವಾಪಿಯಲ್ಲಿ ಸ್ನಾನಮಾಡಿ ನಂದಿಕೇಶ್ವರ, ತಾರಕೇಶ್ವರ, ಮಹಾಕಾಲೇಶ್ವರ, ದಂಡಪಾಣಿ, ಮಹೇಶ್ವರ, ಮೋಕ್ಷೇಶ್ವರ, ವೀರಭದ್ರೇಶ್ವರ ಅವಿಮುಕ್ತೇಶ್ವರ, ಮುಂತಾದ ಲಿಂಗಗಳನ್ನು ಪೂಜೆಮಾಡಿ ಈ ವಿನಾಯಕರಿಗೆಲ್ಲ ನಮಸ್ಕರಿಸಿ, ಅನಂತರ ವಿಶ್ವನಾಥನ ದರ್ಶನಕ್ಕೆ ಹೋಗಬೇಕು. ವಿಶ್ವನಾಥನ ದರ್ಶನವನ್ನು ತೆಗೆದು ಕೊಂಡ ಬಳಿಕವೇ ಈ ವರೆಗೆ ಪಾಲಿಸಿಕೊಂಡು ಬಂದ ಮೌನವ್ರತವನ್ನು ತ್ಯಾಗಮಾಡಿ ಈ ಮಂತ್ರವನ್ನು ಹೇಳಬೇಕು.

**ಅಂರ್ತಗ್ರಹಸ್ಯ ಯಾತ್ರೇಯಂ ಯಥಾವದ್ ಯಾ ಮಯಾ ಕೃತಾ।**
**ನ್ಯೂನಾತಿರಿಕ್ತಯಾ ಶಂಭುಃ ಪ್ರಿಯತಾಮನಯಾ ವಿಭುಃ॥**

ನಾನು ವಿಧಿಪೂರ್ವಕವಾಗಿ ಮಾಡಿದ ಈ ಅಂರ್ತಗ್ರಹದ ಯಾತ್ರೆಯಲ್ಲಿ ಏನಾದರೂ ಲೋಪದೋಷಗಳು ಆಗಿದ್ದರೆ ಮಹಾದೇವನು ಕ್ಷಮಿಸಿ ಈ ನನ್ನ ಯಾತ್ರೆಯಿಂದ

ಪ್ರೀತನಾಗಲಿ. ಈ ಮಂತ್ರದ ಉಚ್ಚಾರಣಮಾಡಿ ಒಂದು ಕ್ಷಣ ಮುಕ್ತಿಮಂಟಪದಲ್ಲಿ ವಿಶ್ರಾಂತಿಯನ್ನು ತೆಗೆದುಕೊಳ್ಳಬೇಕು. ಅದರಿಂದ ಮನುಷ್ಯನು ತನ್ನ ಎಲ್ಲ ಪಾಪಗಳನ್ನು ಕಳೆದುಕೊಂಡು ತನ್ನ ಮನೆಗೆ ತೆರಳಬೇಕು. ಏಕಾದಶಿ ತಿಥಿಯು ಬಂದ ಬಳಿಕ ಪ್ರಯತ್ನ ಪೂರ್ವಕವಾಗಿ ಕಾಶಿಯ ಎಲ್ಲ ವೈಷ್ಣವ ತೀರ್ಥಗಳ ಯಾತ್ರೆಯನ್ನು ಮಾಡಬೇಕು. ಭಾದ್ರಪದ ಹುಣ್ಣಿಮೆಯ ದಿನ ಕುಲಸ್ತಂಭದ ಪೂಜೆಯನ್ನು ಮಾಡಬೇಕು. ಆದರ ಪೂಜೆಯಿಂದ ಎಂದೂ ಮನುಷ್ಯನಿಗೆ ರುದ್ರಪಿಶಾಚತ್ವವು ಬರುವುದಿಲ್ಲ. ಕಾಶೀ ಕ್ಷೇತ್ರದಲ್ಲಿ ವಾಸಮಾಡಿದವರು ಶ್ರದ್ಧೆಯಿಂದ ಪರ್ವಕಾಲ, ಪುಣ್ಯಕಾಲಗಳಲ್ಲಿ ಈ ಎಲ್ಲ ಯಾತ್ರೆಗಳನ್ನು ಮಾಡಬೇಕು. ಪುಣ್ಯಪುರುಷರು ಕಾಶಿಯಲ್ಲಿದ್ದು ಈ ಯಾತ್ರೆಗಳನ್ನು ಮಾಡದೇ ವ್ಯರ್ಥ ದಿನಗಳನ್ನು ಕಳೆಯಬಾರದು. ಪ್ರತಿದಿನವೂ ಪ್ರಯತ್ನ ಮಾಡಿ ಕನಿಷ್ಠ ಎರಡು ಯಾತ್ರೆಗಳನ್ನಾದರೂ ಮಾಡಬೇಕು. ಆ ಎರಡು ಮುಖ್ಯ ಯಾತ್ರೆಗಳೆಂದರೆ ಗಂಗಾ ಸ್ನಾನ, ವಿಶ್ವನಾಥದರ್ಶನ, ಕಾಶಿಯಲ್ಲಿದ್ದರೂ ಈ ಎರಡು ಯಾತ್ರೆಗಳನ್ನು ಮಾಡದೇ ಇದ್ದ ದಿನದಲ್ಲಿ ಪಿತೃಗಳ ನಿರಾಶರಾಗಿ ಹೋಗುತ್ತಾರೆ. ಮಣಿಕರ್ಣಿಕೆಯಲ್ಲಿ ಸ್ನಾನಮಾಡಿ ವಿಶ್ವನಾಥನ ದರ್ಶನ ಮಾಡಿಕೊಂಡವನು. ಜಗತ್ತಿನ ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡಿದಂತೆಯೇ ಸರಿ. ಮತ್ತು ಎಲ್ಲ ಯಾತ್ರೆಗಳನ್ನೂ ಪೂರ್ಣಮಾಡಿದಂತೆ. ಈ ಮಾತು ತ್ರಿಕಾಲದಲ್ಲಿಯೂ ಸತ್ಯ, ಸತ್ಯ, ಸತ್ಯ, ಆದ್ದರಿಂದ ಕಾಶಿವಾಸಿಯು ಪ್ರತಿದಿನವೂ ಮಣಿಕರ್ಣಿಕಾ ತೀರ್ಥದಲ್ಲಿ ಸ್ನಾನ ಹಾಗೂ ವಿಶ್ವನಾಥನ ದರ್ಶನವನ್ನು ಅವಶ್ಯವಾಗಿ ಮಾಡಿಕೊಳ್ಳಬೇಕು.

**ವೇದವ್ಯಾಸ:-** ಸೂತನೇ, ಸಾವಿರ ಪಾಪಗಳನ್ನು ಮಾಡಿದ್ದರೂ ಮನುಷ್ಯನು ಕಾಶಿಖಂಡಪುರಾಣದ ಈ ಕಾಶೀಮಹಾತ್ಮೆಯನ್ನು ಶ್ರವಣಮಾಡಿದರೆ ಎಂದೂ ನರಕಕ್ಕೆ ಹೋಗುವುದಿಲ್ಲ ಎಲ್ಲ ತೀರ್ಥಗಳ ಸ್ನಾನ ಹಾಗೂ ಸರ್ವಕ್ಷೇತ್ರಗಳ ಯಾತ್ರೆ ಮಾಡುವುದರಿಂದ ಬರುವ ಪುಣ್ಯವು ಈ ಕಾಶೀಖಂಡ ಸ್ಮರಣ ಮಾತ್ರದಿಂದಲೇ ಅವಶ್ಯವಾಗಿ ಪ್ರಾಪ್ತವಾಗುತ್ತದೆ. ಸಂಪೂರ್ಣ ಕಾಶೀಖಂಡದ ಭಕ್ತಿಯುಕ್ತವಾದ ಪಾಠ, ಶ್ರದ್ಧೆಯಿಂದ ಒಡಗೂಡಿದ ಶ್ರವಣಗಳು, ದೊಡ್ಡ ದೇವತಾರಾಧನೆ, ಈ ಕಾಶೀಖಂಡವು ಸತ್ಯಧರ್ಮದ ಕೇಂದ್ರ ಪುರುಷಾರ್ಥಪ್ರದ. ಮಾನವರ ಎಲ್ಲ ಕಾಮನಾಪೂರಕ. ಇದನ್ನು ಕೇಳಿದವರಿಗೆ ಮೋಕ್ಷ ದೂರ ಇಲ್ಲ. ಈ ಕಾಶೀಖಂಡವನ್ನು ಕೇಳಿದವರ ಪಿತೃಗಳೆಲ್ಲರೂ ತೃಪ್ತರಾಗುತ್ತಾರೆ. ಇದರ ಪಠಣ, ಪಾಠಣ, ಶ್ರವಣಗಳು ನಡೆದಲ್ಲಿ ಬ್ರಹ್ಮ, ವಿಷ್ಣು, ಶಿವ ಮೂವರೂ ದೇವತೆಗಳು ಸುಪ್ರಸನ್ನರಾಗುತ್ತಾರೆ. ಯಾವ ಪಂಡಿತನು ಈ ಕಾಶೀಖಂಡವನ್ನು ಪೂರ್ಣವಾಗಿ ಅಥವಾ ಅರ್ಧಕಾಲುಭಾಗ, ಕೊನೆಗೆ ಎಂಟನೆಯ ಒಂದು ಭಾಗವನ್ನಾದರೂ ಜನರಿಗೆ ಪ್ರವಚನ ಹೇಳಿ ತಿಳಿಸಿದರೆ, ಅವನನ್ನು ಇಷ್ಟದೇವರಂತೆ ಪೂಜೆ ಮಾಡಬೇಕು. ಭಗವಾನ್ ವಿಶ್ವನಾಥ ಪ್ರೀತಿಗಾಗಿ ಈ ಕಾಶೀಖಂಡದ ಪ್ರವಚನ ಮಾಡುವ ಆಚಾರ್ಯರಿಗೆ ಅನ್ನ, ವಸ್ತ್ರ, ಸುವರ್ಣ ರಜತ ಮುಂತಾದವುಗಳನ್ನು ಯಥಾಶಕ್ತಿ ದಾನನೀಡಬೇಕು. ಪ್ರವಚನಕಾರರು ಸಂತುಷ್ಟರಾದರೆ ಸಾಕ್ಷಾತ್ ಶಿವನೇ ಸಂತುಷ್ಟನಾಗುವನು ಈ ಸ್ಕಂದ ಪುರಾಣದ ಕಾಶೀಖಂಡದ ಪಠಣ, ಪಾಠಣ, ಶ್ರವಣ ಪಾರಾಯಣ ಪ್ರವಚನ ಮುಂತಾದವುಗಳು ಯಾವ ಸ್ಥಳದಲ್ಲಿ ನಡೆಯುವವೋ ಅಲ್ಲಿ ಯಾವುದೇ ಅ ಮಂಗಳಗಳನ್ನು ಉಂಟುಮಾಡುವ ವಿಘ್ನಗಳು ತಮ್ಮ ಪ್ರಭಾವವನ್ನು ಸರ್ವಥಾ ಬೀರಲಾರವು.

*ಕಾಶೀಖಂಡ ಉತ್ತರಾರ್ಧ ಸಮಾಪ್ತ.*

*ಕಾಶೀಖಂಡದಲ್ಲಿ ಉತ್ತರಾರ್ಧ-ಪೂರ್ವಾರ್ಧ ಸಂಪೂರ್ಣ*

# ಪ್ರಭಾಸ ಖಂಡ

## ಶ್ರೀ ಹರಿ ಚರಿತ್ರೆ

### ಅಧ್ಯಾಯ - ೭೭

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥**

ಗುಣಪರಿಪೂರ್ಣನಾದ, ನೀರಿನ ನಡುವೆ ಮಲಗಿದ ಲಕ್ಷ್ಮೀದೇವಿಯ ಆಶ್ರಯನಾದ ಮುಕ್ತರಿಂದ ಉಪಾಸ್ಯನಾದ ಶ್ರೀಹರಿಯನ್ನು ನಮಸ್ಕರಿಸಿ, ಶೇಷ ದೇವರನ್ನು ವಂದಿಸಿ, ಜೀವೋತ್ತಮರಾದ ವಾಯುದೇವರನ್ನು ಪ್ರಣಮಿಸಿ, ಲಕ್ಷ್ಮೀದೇವಿಯನ್ನೂ, ಸರಸ್ವತಿದೇವಿಯನ್ನೂ ವೇದವ್ಯಾಸರನ್ನೂ ವಂದಿಸಿ ಪುರಾಣವನ್ನು ಪಠಿಸಬೇಕು.

**ಶೌನಕ:-** ಸೂತರೆ, ಜನಮೇಜಯ ರಾಜನಿಗೆ ಎಷ್ಟು ಜನ ಮಕ್ಕಳು? ಯಾರು ಯಾರು? ಅವರ ಹೆಸರುಗಳು ಏನು? ಪಾಂಡವರ ವಂಶವು ಜನಮೇಜಯನ ಯಾವ ಪುತ್ರನಿಂದ ಮುಂದೆ ಬೆಳೆಯಿತು? ಇದೆಲ್ಲವನ್ನೂ ನೀವು ನನಗೆ ಹೇಳಿರಿ.

**ಸೂತ:-** ಪರೀಕ್ಷಿತರಾಜನ ಮಗನಾದ ಜನಮೇಜಯನಿಗೆ ಕಾಶ್ಯಾ ಎಂಬ ಪತ್ನಿಯಿಂದ ಸೂರ್ಯಾಪೀಡ, ಚಂದ್ರಾಪೀಡ ಎಂಬ ಇಬ್ಬರು ಮಕ್ಕಳು ಜನಿಸಿದರು. ಅವರಲ್ಲಿ ಸೂರ್ಯಾಪೀಡನು ಸಂಸಾರದಲ್ಲಿ ವಿರಕ್ತನಾಗಿ ಮೋಕ್ಷಸಾಧನವಾದ ಜ್ಞಾನವನ್ನು ತನ್ನ ಸತತ ಧ್ಯಾನೋಪಾಸನೆಗಳಿಂದ ಸಂಪಾದಿಸಿದನು. ಹಿರಿಯ ಮಗನಾದ ಚಂದ್ರಾಪೀಡ ಜನಮೇಜಯ ಅನಂತರ ಪಾಂಡವರ ರಾಜ್ಯ ಸಿಂಹಾಸನವನ್ನು ಏರಿ ಕೀರ್ತಿವಂತನಾದ. ಅವನಿಗೆ ನೂರು ಜನ ಮಕ್ಕಳು. ಎಲ್ಲರೂ ಬಿಲ್ಲುಗಾರಿಕೆ, ಹಾಗೂ ಯುದ್ಧ ತಂತ್ರಗಳಲ್ಲಿ ಬಲ್ಲಿದರೂ, ಬಲಿಷ್ಠರೂ ಆಗಿದ್ದರು. ಈ ನೂರು ಜನ ಜನಮೇಜಯ ಪುತ್ರ ಸಂಘಕ್ಕೆಲ್ಲ 'ಜನಮೇಜಯ' ಎಂದೇ ಹೆಸರು ಬಂದಿತು. ಚಂದ್ರಾಪೀಡನ ಹಿರಿಯ ಮಗ ವಾರಾಣಸ, ಸತ್ಯಕರ್ಣ ಎಂತಲೂ ಅವನಿಗೆ ಇನ್ನೊಂದು ಹೆಸರು. ವಿಪುಲ ದಾನ ದಕ್ಷಿಣೆಗಳನ್ನು ನೀಡಿ ತನ್ನ ಅಜ್ಜನಂತೆ ಅವನು ಅನೇಕ ಯಜ್ಞಗಳನ್ನು ಶಾಸ್ತ್ರೋಕ್ತವಾಗಿ ನೆರವೇರಿಸಿದ ಸತ್ಯ ಕರ್ಣನಿಗೆ ಶ್ವೇತಕರ್ಣ ಎಂಬ ಪುತ್ರ. ಅವನು ಮಹಾ ಪ್ರತಾಪಶಾಲಿ ಮತ್ತು ಧರ್ಮ ಧುರಂಧರ, ಆದರೆ ಅವನಿಗೆ ಮದುವೆಯಾಗಿ ಅನೇಕ ವರ್ಷಗಳು ಕಳೆದರೂ ಸಂತತಿ ಆಗಲಿಲ್ಲ. ಆದ್ದರಿಂದ ಅವನು ಬಾಳಿನಲ್ಲಿ ಜಿಗುಪ್ಸೆಗೊಂಡು ತಪೋವನಕ್ಕೆ ತೆರಳಿದ. ತನ್ನ ಪತಿಯು ಸಂಸಾರದಲ್ಲಿ ವಿರಕ್ತನಾಗಿ ರಾಜ್ಯಕೋಶಗಳನ್ನು ತೊರೆದುದರಿಂದ ಅವನ ಧರ್ಮ ಪತ್ನಿಯಾದ ಭ್ರಾತೃಮಾಲಿನಿಯೂ ಅದೇ ತಪೋವನಕ್ಕೆ ಹೋದಳು. ಅವಳು ಯಾದವ ವಂಶದ ಸಂಚಾರು, ಸುಭ್ರು ದಂಪತಿಗಳು ತಮ್ಮ ಹಿಂದಿನ ಯಾದವ ಪಾಂಡ ವಂಶಗಳ ಮೊದಲಿನ ಮಧುರ ಸಂಬಂಧವನ್ನು ನೆನೆದು ತಮ್ಮ ಮಗಳಾದ ಭಾತೃಮಾಲಿನಿಯನ್ನು ಪಾಂಡವರು ಪ್ರಪೌತ್ರ ಪೌತ್ರನಾದ ಶ್ವೇತಕರ್ಣನಿಗೆ ಮದುವೆ ಮಾಡಿಕೊಟ್ಟಿದ್ದ. ಆದರೆ

ಅವಳಿಂದ ತನಗೆ ಸಂತಾನವಾಗದ್ದರಿಂದ ನಿರ್ವೇದ ಹೊಂದಿ ಶ್ವೇತಕರ್ಣನು ಕಾಡಿಗೆ ಹೋದಾಗ ಪತಿವ್ರತೆಯಾದ ಭ್ರಾತೃಮಾಲಿನಿಯು ತನಗೂ ಮನೆ, ಮಾರು, ವಿಷಯ ಸುಖ ಬೇಕಾಗಿಲ್ಲವೆಂದು ಎಲ್ಲವನ್ನೂ ತೊರೆದು ಪತಿ ಇದ್ದಲ್ಲಿಗೆ ಹೋಗಿ ಅವನ ಸೇವೆ ಶುಶ್ರೂಷೆ ಮಾಡತೊಡಗಿದಳು. ಅದೇ ಆಶ್ರಮದಲ್ಲಿ ನಿಂತು ಆ ಶ್ವೇತಕರ್ಣನ ತಪಸ್ಸಿಗೆಲ್ಲ ಅನುಕೂಲ ಮಾಡಿಕೊಟ್ಟು ಹಗಲಿರುಳು ಅವನ ಸೇವೆಯಲ್ಲಿ ನಿರತಳಾದಳು. ಅದರಿಂದ ಆ ಶ್ವೇತಕರ್ಣನಿಗೆ ಮಡದಿಯ ಮೇಲೆ ಒಂದು ತರಹದ ಪ್ರೇಮಾಂಕುರ ಬೆಳೆಯಿತು. ಅದರ ಫಲವಾಗಿ ಅವಳು ಗರ್ಭಿಣಿಯಾದಳು. ಮಡದಿಯು ಗರ್ಭವತಿಯಾದರೂ ಆ ಶ್ವೇತಕರ್ಣನು ತನ್ನ ಅಧ್ಯಾತ್ಮ ಸಾಧನೆಯ ಮಾರ್ಗವನ್ನು ಬಿಡಲಿಲ್ಲ. ಮಗನು ಹುಟ್ಟಿದ ಕೂಡಲೇ ''ಈ ಮಗನೇ ನಿನಗೆ ಆಧಾರ ಮತ್ತು ರಾಜ್ಯಕ್ಕೆ ಉತ್ತರಾಧಿಕಾರಿ'' ಎಂದು ಹೇಳಿ ಅವನು ಹಿಂದೆ ಪಾಂಡವರು ಸ್ವರ್ಗಾರೋಹಣಕ್ಕಾಗಿ ಮಹಾ ಪ್ರಸ್ಥಾನಕ್ಕೆ ಹೊರಟಂತೆ ತಾನೂ ಅದೇ ದಾರಿ ಹಿಡಿದು ಹೊರಟು ಬಿಟ್ಟ. ಆಗ ಪತಿನಿಷ್ಠಳಾದ ಭ್ರಾತೃಮಾಲಿನಿಯು ''ಗಂಡನನ್ನು ಬಿಟ್ಟು ಮಗನಿಗಾಗಿ ನಾನೇಕೆ ಈ ಸಂಸಾರದಲ್ಲಿ ಇರಲಿ'' ಎಂದು ಯೋಚಿಸಿ ಆ ಎಳೇ ಮಗುವನ್ನು ದಾರಿಯ ಒಂದು ಮರದ ನೆರಳಿನಲ್ಲಿ ಮಲಗಿಸಿ ಹಿಮಾಚಲದ ಶೈಲ ಶ್ರೇಣಿಗಳನ್ನು ಏರುತ್ತ ಸ್ವರ್ಗಮಾರ್ಗದಲ್ಲಿ ಮಹಾಪ್ರಸ್ಥಾನವನ್ನು ಬೆಳೆಸಿದಳು. ತಾನೂ ದ್ರೌಪದೀ ದೇವಿಯಂತೆ ಪತಿಶ್ವೇತಕರ್ಮನ ಹೆಜ್ಜೆಯ ಮೇಲೆಯೇ ಹೆಜ್ಜೆಯಿಡುತ್ತ ತಾನೂ ಆ ಕೊನೆಯ ಪಯಣದಲ್ಲಿ ಹಿಂಬಾಲಿಸಿ ನಡೆದಳು.

ಇತ್ತ ಶೈಲಾಗ್ರದ ಒಂದು ಹೆಮ್ಮರದ ಕೆಳಗೆ ಅವಸರದಲ್ಲಿ ಇಳಿಜಾರು ನೆಲದ ಮೇಲೆ ಮಲಗಿಸಿದ ಭ್ರಾತೃಮಾಲಿನಿಯ ಸುಂದರ ಮುಖದ ಆ ಎಳೆ ಕಂದನು ಅಲ್ಲಿಂದ ಉರುಳಿ ಬೆಟ್ಟದಡಿಯ ಒಂದು ಬಳ್ಳಿವಾಡದಲ್ಲಿ ಬಂದು ಬಿದ್ದಿತು. ಉರುಳಿ, ಪೆಟ್ಟು ತಾಕಿ ಮಗು ದೊಡ್ಡ ಧ್ವನಿಯಲ್ಲಿ ಚೀರತೊಡಗಿತು. ಆ ರಾಜಕುಮಾರನ ಈ ದುರವಸ್ಥೆಯನ್ನು ಕಂಡು ಮೋಡಗಳೂ ಕೂಡ ಮರುಕಗೊಂಡವು. ಮೋಡವು ಸುತ್ತಲೂ ಹರಡಿ ಅರಸುಕುವರನಿಗೆ ನೆರಳು ಮಾಡಿತು. ಶ್ರವಿಷ್ಠಾ ಎಂಬ ಪತ್ನಿಯಿಂದ ಚಂದ್ರನಿಗೆ ಹುಟ್ಟಿದ ಪಿಪ್ಪಲಾದ ಮತ್ತು ಕೌಶಿಕ ಎಂಬ ಇಬ್ಬರು ಕುಮಾರರು ಆ ಕಾನನದ ಕಾವಣದಲ್ಲಿ ಎಳೆಗೂಸಿನ ಆ ರೋದನವನ್ನು ಕೇಳಿ ಧಾವಿಸಿ ಬಂದರು. ಸುಂದರ ಮಗು. ಸುಕಮಾರ ಶರೀರ, ಬಂಗಾರದ ಬಣ್ಣ, ಮಿಂಚುಗಣ್ಣು, ಮುದ್ದು ಮೂರುತಿ, ತಾಯಿಯಿಲ್ಲ - ತಂದೆ ಇಲ್ಲ. ಅವಿರತನಾಗಿ ಅರಣ್ಯರೋದನ ನಡೆಸಿತ್ತು. ಅದನ್ನು ಕಂಡು ಪ್ರೀತಿ ಉಕ್ಕಿ ಬಂದಿತು. ಆ ಚಂದ್ರಕುಮಾರನಿಗೆ ನಿಡಿದೋಳು ಚಾಚಿ ಆ ಎಳೆಕುಡಿಯನ್ನು ಎತ್ತಿಕೊಂಡರು. ನೀರಿನಿಂದ ಆ ಎಳೆ ಬುತ್ತಿಯನ್ನು ಒರಸಿದರು. ಮೇಲಿಂದ ಉರುಳಿಬಿದ್ದುದರಿಂದ ಅವನ ಎರಡೂ ಹೊಟ್ಟೆಯ ಪಕ್ಕೆಗಳಿಗೆ ನೆತ್ತರವೆತಿತ್ತು. ಆ ಗಾಯಗೊಂಡ ಭಾಗವು ಕೆಲದಿನದ ಮೇಲೆ ಹಕ್ಕಳಿಗಟ್ಟಿ ಕುರಿಯ ತೊಗಲಿನಂತೆ ಕಪ್ಪಾಯಿತು. ಅದರಿಂದ ಮಗುವಿಗೆ ಅಜಪಾರ್ಶ್ವ ಎಂದು ವಿನೋದಕ್ಕಾಗಿ ಆ ಚಂದ್ರನ ಮಕ್ಕಳು ಹೆಸರಿಟ್ಟರು.

ಆ ಅರಣ್ಯದಲ್ಲಿ ವೇಮಕ - ವೇಮಕಿ ಎಂಬ ಋಷಿ ದಂಪತಿಗಳು ಆಶ್ರಮವನ್ನು ಕಟ್ಟಿಕೊಂಡು ತಪಸ್ಸು ಮಾಡುತ್ತಿದ್ದರು. ಕೆಲವು ದಿನಗಳ ಬಳಿಕ ವೇಮಕ ಮರಣ ಹೊಂದಿದ. ಆಶ್ರಮದಲ್ಲಿ ವೇಮಕಿ ಒಬ್ಬಳೇ ಇದ್ದಳು. ಚಿಕ್ಕ ಮಗುವನ್ನು ಚೆನ್ನಾಗಿ ಜೋಪಾನ ಮಾಡಲು ಅಂತಃಕರಣದ ಓರ್ವಸಾಕು ತಾಯಿ ಬೇಕೇ ಬೇಕು. ಎಂದು ಭಾವಿಸಿ ಆ ಚಂದ್ರಕುಮಾರರು ಆ ಅಜಪಾರ್ಶ್ವನನ್ನು ವೇಮಕಿಯ ಆಶ್ರಮದಲ್ಲಿ ತಂದಿಟ್ಟರು.

ವೇಮಕಿಯು ಆ ರಾಜಕುಮಾರನನ್ನು ತನ್ನ ಮಗನೆಂದು ಸ್ವೀಕರಿಸಿ ಮಾತೃ ಪ್ರೇಮದಿಂದ ಪೋಷಿಸಿ ದೊಡ್ಡವನನ್ನಾಗಿ ಮಾಡಿದಳು. ಚಂದ್ರನ ಮಕ್ಕಳಾದ ಪಿಪ್ಪಲಾದ ಮತ್ತು ಕೌಶಿಕ ಎಂಬ ಬ್ರಾಹ್ಮಣ ಕುಮಾರರು ಪಾಂಡವ ರಾಜಪುತ್ರನಾದ ಅಜಪಾರ್ಶ್ವನನ್ನು ದೊಡ್ಡವನಾದ ಬಳಿಕ ಹಸ್ತಿನಾವತಿಗೆ ಕರೆದುಕೊಂಡು ಬಂದು ಅಲ್ಲಿ ಎಲ್ಲ ಜನರಿಗೂ ಅವನ ಹುಟ್ಟು ಬೆಳವಣಿಗೆಗಳನ್ನು ತಿಳಿಸಿ ಹೇಳಿ, ಯಾದವವಂಶದ ಸುಚಾರುವಿನ ಸಹಾಯದಿಂದ ಹಸ್ತಿನಾವತಿಯ ರಾಜಗದ್ದುಗೆಯ ಮೇಲೆ ಕೂಡಿಸಿದರು. ಮತ್ತು ತಾವಿಬ್ಬರೂ ಅವನ ಮಂತ್ರಿಯಾಗಿ ಸಮುದ್ರವಲಯಾಂಕಿತವಾದ ಅಖಂಡ ಭೂಮಂಡಲವನ್ನೆಲ್ಲ ಆ ಅಜಪಾರ್ಶ್ವ ಸಾರ್ವಭೌಮನ ಅಂಕಿತಕ್ಕೆ ಒಳಪಡಿಸಿ ಪಾಂಡವರ ಕೀರ್ತಿಯನ್ನು ಭೂಲೋಕದಲ್ಲಿ ಮತ್ತೊಮ್ಮೆ ಬೆಳೆಸಿ ಬೆಳಗಿಸಿದರು. ಮುಂದೆ ಅನೇಕ ತಲೆಮಾರಿನವರೆಗೆ ಅಜಪಾರ್ಶ್ವನ ಸಂತತಿಯವರು ರಾಜರಾಗಿಯೂ, ಪಿಪ್ಪಲಾಕ - ಕೌಶಿಕ ಸಂತತಿಯವರು ಮಂತ್ರಿಯಾಗಿಯೂ ಭಾರತ ವಸುಂಧರೆಯನ್ನು ಧರ್ಮದಿಂದ ರಾಜ್ಯಭಾರ ಮಾಡಿದರು.

**ಶೌನಕ:-** ರಾಜಸೂಯಯಾಗದ ಬಗೆಗೆ ವ್ಯಾಸರಿಗೆ ಒಂದು ಪ್ರಶ್ನೆ ಸೂತಪುತ್ರ, ಸರ್ಪ ಸತ್ರದ ಅನಂತರ ಜನಮೇಜಯ ರಾಜನು ಏನು ಮಾಡಿದ?

**ಸೂತ:-** ಸರ್ಪಯಾಗವು ಜರತ್ಕಾರುವಿನ ಮಗನಾದ ಆಸ್ತಿಕನಿಂದಾಗಿ ಪೂರ್ತಿಯಾಗದೇ ಉಳಿದು ಬಿಟ್ಟಿತು. ಕೆಟ್ಟ, ದುಷ್ಟ ನಾಗಗಳೆಲ್ಲವೂ ಬೆಂಕಿಯಲ್ಲಿ ಬಿದ್ದು ಸುಟ್ಟು ಸತ್ತುಹೋದವು. ನಿರುಪದ್ರವಿ, ಹಾಗೂ ಸಾಧು ಸ್ವಭಾವದ ಸರ್ಪಗಳು ಬದುಕಿಕೊಂಡವು. ಅನಂತರ ಪರೀಕ್ಷಿತ ರಾಜನ ಸತ್ಪುತ್ರನಾದ ಆ ಜನಮೇಜಯನು ಅಶ್ವಮೇಧಯಜ್ಞವನ್ನು ಮಾಡಬೇಕು ಎಂದು ನಿರ್ಧರಿಸಿದ. ಋತ್ವಿಜರನ್ನು ಕರೆಸಿದ. ಆಚಾರ್ಯರನ್ನು ಆಮಂತ್ರಿಸಿದ. ಪುರೋಹಿತರನ್ನು ಬರಮಾಡಿಕೊಂಡ. ಇದನ್ನು ತಿಳಿದು ಸರ್ವಜ್ಞರಾದ ಸಾಕ್ಷಾತ್ ವೇದವ್ಯಾಸರು ತಾವೇ ಹಸ್ತಿನಾವತಿಗೆ ಆಗಮಿಸಿದರು. ಅರ್ಘ್ಯಪಾದ್ಯಾದಿಗಳನ್ನು ಇತ್ತು ಅವರನ್ನು ಆದರಿಸಿ, ಪೂಜಿಸಿ, ಸತ್ಕರಿಸಿ ಪ್ರಣಮಿಸಿದ ಜನಮೇಜಯ. ಶೌನಕಾದಿ ಮುನಿಗಳು ತಮ್ಮ ತಮ್ಮ ಸ್ಥಾನದಲ್ಲಿ ಕುಳಿತರು. ಅಲ್ಲಿ ವೇದ ವೇದಾಂತಗಳಿಗೆ ಸಂಬಂಧಿಸಿದ ಅನೇಕ ಗೋಷ್ಠಿಗಳು ನಡೆದವು. ಬಗೆ ಬಗೆಯ ಅಧ್ಯಾತ್ಮಿಕ, ಐತಿಹಾಸಿಕ, ಗೀತೋಪನಿಷದಾದಿ ಗಹನ ತತ್ವಗಳ ಚಿಂತನ ಮಂಥನಗಳು ನೆರವೇರಿದವು. ಇದೆಲ್ಲ ಮುಗಿದ ಬಳಿಕ ಕೊನೆಗೆ ಜನಮೇಜಯರಾಜನು ತನ್ನ ಅಜ್ಜ ಮುತ್ತಜ್ಜರ ಮುತ್ತಜ್ಜನೇ ಆದ ಆ ಭಗವಾನ್ ಬಾದಾರಾಯಣರಿಗೆ ವಂದಿಸಿ ನುಡಿದ.

**ಜನಮೇಜಯ:-** ಪ್ರಭು, ನೀವು ರಚಿಸಿದ ಭಾರತದ ಇತಿಹಾಸ ವೇದವೇದಾಂತಗಳ ಆಶಯವನ್ನು ಪಲ್ಲವಿಸಿ, ಉಲ್ಲಾಸಿತಗೊಳಿಸಿ ಕೇಳುಗರ ಕರ್ಣೇಂದ್ರಿಯಗಳಿಗೆ ತೃಪ್ತಿಯನ್ನು ನೀಡುತ್ತದೆ. ಅದನ್ನು ನಾನು ತಮ್ಮ ಶಿಷ್ಯ ವೈಶಂಪಾಯನರಿಂದ ಸಂಪೂರ್ಣವಾಗಿ ಮನನ ಮಾಡಿದೆ. ಒಂದು ವರ್ಷವು ಒಂದು ನಿಮಿಷದಂತೆ, ಭಾರತವನ್ನು ಕೇಳುತ್ತ ಕಳೆದು ಹೋಯಿತು. ಮಹಾಭಾರತ ತಮ್ಮ ಕಲಶಕೃತಿ. ಭಾರತೀಯ ಸಾಹಿತ್ಯದ ಮೇರುಕೃತಿ. ಅದನ್ನು ತಾವು ಶಂಖದಿಂದ ಹಾಲನ್ನು ಹಾಕಿದಂತೆ ವೈಶಂಪಾಯನರಂಥ ಯೋಗ್ಯ ಶಿಷ್ಯರಿಗೆ ಕಲಿಸಿದ್ದೀರಿ. ಅಮೃತ ಕುಡಿದರೂ ನನಗೆ ಇಷ್ಟು ತೃಪ್ತಿಯಾಗತ್ತಿರಲಿಲ್ಲ. ಅಂಥಹ ಸಂತಸ, ಬ್ರಹ್ಮಾನಂದ ನನಗಾಯಿತು ಭಾರತ ಶ್ರವಣದಿಂದ. ಎಲ್ಲಾ ಕೇಳಿದ ಬಳಿಕ ನನ್ನ ಮನಸ್ಸಿನಲ್ಲಿ ಒಂದು ಶಂಕೆ ಹುಟ್ಟಿದೆ. ತಮ್ಮ ಅಪ್ಪಣೆ ಪಡೆದು ಆ ನನ್ನ ಸಂದೇಹವನ್ನು ತಮ್ಮ ಮುಂದೆ ಇಡುತ್ತೇನೆ.

ನಮ್ಮ ಹಿರಿಯರಾದ ಧರ್ಮರಾಜಾದಿ ಪಾಂಡುನಂದನರು ತಮ್ಮ ಸಮರ್ಥವಾದ ನೇತೃತ್ವದಲ್ಲಿ ರಾಜಸೂಯಯಾಗವನ್ನು ಶ್ರೀಕೃಷ್ಣನ ಘನಅಧ್ಯಕ್ಷತೆಯಲ್ಲಿ ವೈಭವದಿಂದ ನೇರವೇರಿಸಿದರು. ಆದರೆ ಈ ರಾಜಸೂಯಯಾಗವು ಬಹುಜನರ ಸಂಹಾರಕ್ಕೆ ಕಾರಣವಾದ ಯಜ್ಞ. ಇತಿಹಾಸವನ್ನು ನೋಡಿದರೆ ಇದು ಸುಸ್ಪಷ್ಟ. ಪ್ರಜಾಕ್ಷಯಕ್ಕಾಗಿಯೇ ಬ್ರಹ್ಮ ಈ ರಾಜಸೂಯ ಯಾಗವನ್ನು ನಿರ್ಮಿಸಿದಂತಿದೆ. ಈ ಮಾತು ವೇದ, ಪುರಾಣ ಸಿಂಹಾವಲೋಕನ ಮಾತ್ರದಿಂದಲೇ ಸಿದ್ಧಮಾಡಬಹುದು.

ಹಿಂದೆ ಬಹುಪೂರ್ವಕಾಲದಲ್ಲಿ ಮೊಟ್ಟ ಮೊದಲು ಚಂದ್ರನು ಈ ರಾಜಸೂಯಯಾಗ ಮಾಡಿದ. ಅದರಿಂದ ದೇವದಾನವರಲ್ಲಿ ತಾರಕಮಯ ಸಂಗ್ರಾಮ ಎಂಬ ಒಂದು ಸುಪ್ರಸಿದ್ಧವಾದ ದೇವಾಸುರ ಯುದ್ಧವು ಸಂಭವಿಸಿತು. ಅನಂತರ ವರುಣನು ಈ ರಾಜಸೂಯಯಾಗಮಾಡಿದ. ಯಜ್ಞದ ಕೊನೆಗೆ ಮತ್ತೆ ದೇವಸುರರಲ್ಲಿ ಭೀಕರ ಸಂಗ್ರಾಮವು ಮಸಗಿತು. ಅನಂತರ ಹರಿಶ್ಚಂದ್ರರಾಜನು ಇಂಥ ರಾಜಸೂಯ ಯಾಗವನ್ನು ನೇರವೇರಿಸಿದ. ಅದರಿಂದ ವಶಿಷ್ಠ ವಿಶ್ವಾಮಿತ್ರರಲ್ಲಿ ಕಲಹ ಕಿಡಿ ಹೊತ್ತಿಕೊಂಡಿತು. ಆ ಕಿಡಿ ಕಿಚ್ಚಾಗಿ ಮಹಾಯುದ್ಧದ ರೂಪವನ್ನು ತಾಳದಿದ್ದರೂ ಒಳಗಿಂದೊಳಗೇ ಹೊಗೆಯಾಡುತ್ತಲೇತ್ತು. ಸಾಮಾನ್ಯ ಜನರಂತೆ ಮಾರಾಮಾರಿ ಕಲಹ ಅಥವಾ ಕದನಕ್ಕೆ ನಿಲ್ಲುವುದು ಮಹರ್ಷಿಗಳಾದ ಇಬ್ಬರ ಗೌರವಕ್ಕೂ ಕುಂದುತರುತ್ತಿತ್ತು. ಆದರೆ ಇಬ್ಬರಲ್ಲಿಯೂ ವಿಜಗೀಷೆಯ ಸಂಕಲ್ಪವಿತ್ತು. ಆದುದರಿಂದ ವಶಿಷ್ಠರು ಅಡಿ ಎಂಬ ಜಲಚರ ಪಕ್ಷಿಯಾದರು. ವಿಶ್ವಾಮಿತ್ರರು ಬಕಪಕ್ಷಿಯ ರೂಪವನ್ನು ತಾಳಿದರು. ಅವರಿಬ್ಬರ ನಡುವೆ ಘೋರ ಕಾದಾಟವಾಯಿತು. ತಮ್ಮ ಗುರುಗಳ ನಡುವಿನ ಈ ಪ್ರಚ್ಛನ್ನ ಯುದ್ಧ ಅವರ ಶಿಷ್ಯರಾದ ರಾಜಮಹಾರಾಜರನ್ನು ಪ್ರಕಟ ಯುದ್ಧಕ್ಕೆ ಪ್ರೇರೇಪಿಸಿತು. ಎರಡು ಪಕ್ಷದವರೂ ಕಲಿತನದಿಂದ ಕಾದಾಡಿದರು. ತಮ್ಮ ರಕ್ತದಲ್ಲಿಯೇ ನೆಲವನ್ನೆಲ್ಲ ನಾದಿದರು. ಆ ಯುದ್ಧಕ್ಕೆ ಅಡೀಬಕ ಎಂದು ಹೆಸರು ಬಂದಿತು. ಅನಂತರ ನಮ್ಮ ಪರಮ ಪೂಜ್ಯ ಮುತ್ತಜ್ಜ ಧರ್ಮರಾಜನು ರಾಜಸೂಯ ಯಜ್ಞವನ್ನು ಮಾಡಿದರು. ಆ ರಾಜಸೂಯ ಯಜ್ಞದಲ್ಲಿ ನಮ್ಮ ಮುತ್ತಜ್ಜಿ ದ್ರೌಪದಿಯ ನಗೆ, ದುರ್ಯೋಧನನ ಎದೆಯಲ್ಲಿ ಹೊಗೆಯಾಗಿ ಕುರುಕ್ಷೇತ್ರದಲ್ಲಿ ಕಾಡ್ಗಿಚ್ಚನ್ನೇ ಹೊತ್ತಿಸಿತು. ಅದರಿಂದ ಕುರು ಕುಲಕ್ಷಯ ಪ್ರಚಂಡ ಪ್ರಮಾಣದಲ್ಲಿ ನಡೆಯಿತು. ಹೀಗೆ ಈ ಪ್ರಪಂಚದಲ್ಲಿ ರಾಜಸೂಯ ಯಜ್ಞ ಮಾಡಿದಾಗೆಲ್ಲ ರಕ್ತದ ನದಿ ಹರಿದಿದೆ. ಲೋಕ ಹಿತಚಿಂತಕರಾದ ತಾವು ಅದನ್ನು ಏಕೆ ತಡೆಯಲಿಲ್ಲ? ಈ ರಾಜಸೂಯ ಯಜ್ಞದ ಅಂಗೋಪಾಂಗಗಳು ಬಹುವಿಧ. ಎಲ್ಲಿಯೂ ಯಜ್ಞದ ವಿಧಿ ವಿಧಾನಗಳಿಗೆ ಸ್ವಲ್ಪವೂ ಚ್ಯುತಿ ಬಾರದಂತೆ ಇದನ್ನು ನೇರವೇರಿಸುವುದು ಅಸಾಧ್ಯ. ಯಾವುದಾದರೂ ಒಂದು ಅಂಗ, ಭಾಗ, ಅಂಶದಲ್ಲಿ ಎಲ್ಲಿಯಾದರೂ ಏನಾದರೂ ಪ್ರಮಾದ, ಅನವಧಾನ, ತಪ್ಪು ತಡೆ ಉಂಟಾದರೆ ಅದರ ವಿಪರೀತ ಫಲವಾದ ಲೋಕಸಂಹಾರ ಕಟ್ಟಿಟ್ಟದ್ದು. ಇದೆಲ್ಲವೂ ಶಾಸ್ತ್ರಜ್ಞರೂ ಸರ್ವಜ್ಞರೂ ಆದ ತಮಗೆ ಸುವಿದಿತ, ಸುಸ್ಪಷ್ಟ. ತಾವು ಆ ಪಾಂಡವರಿಗೆಲ್ಲಾ ಹಿರಿಯರು, ಸಂಬಂಧಿಕರು ಪಿತೃಗಣ ಪ್ರಧಾನರು. ರಾಜಸೂಯ ಯಾಗದ ಸಾಂಗ ಸಮಾಪ್ತಿಯ ಅಶಕ್ಯತೆಯನ್ನೂ ಅದರಲ್ಲಿಯ ಲೋಪದೋಷಗಳಿಂದಾಗಬಹುದಾದ ಅನರ್ಥ ಅನಾಹುತಗಳನ್ನೂ ವಿಪರೀತ ಪರಿಣಾಮವನ್ನೂ ಅವರಿಂದಾಗಬಹುದಾದ ಲೋಕಸಂಹಾರವನ್ನೂ ಚೆನ್ನಾಗಿ ತಿಳಿದಿದ್ದರೂ ಪಾಂಡವರನ್ನು ರಾಜಸೂಯ ಯಾಗದಿಂದ ಹಿಂದೆಗೆಯುವಂತೆ ಅಥವಾ ಅವರು ಅದನ್ನು ಮಾಡದಂತೆ ಏಕೆ ಪ್ರತಿಬಂಧಿಸಲಿಲ್ಲ?

**ವೇದವ್ಯಾಸ:-** ರಾಜನೇ, ಇದೆಲ್ಲಕ್ಕೂ ಕಾಲವೇ ಕಾರಣ ಕಾಲದ ಪ್ರಭಾವದಿಂದ ನಿನ್ನ ಹಿಂದಿನ ಹಿರಿಯರ ಬುದ್ಧಿಯು ಬದಲಾಯಿತು. ಅವರು ಎಲ್ಲವನ್ನೂ ನನ್ನನ್ನು ಕೇಳಿಯೇ ಮಾಡುತ್ತಿದ್ದರೂ ಸಹ ಈ ರಾಜಸೂಯಯಾಗದ ಪರಿಣಾಮ ಏನಾಗುತ್ತದೆ ಎಂದು ಮಾತ್ರ ನನ್ನನ್ನು ಒಮ್ಮೆಯೂ ಕೇಳಲಿಲ್ಲ. ಕೇಳದೇ ಹೇಳುವ ಸ್ವಭಾವ ನನ್ನದಲ್ಲ. ಮತ್ತು ಮುಖ್ಯವಾಗಿ ಹೇಳಬೇಕೆಂದರೆ ಮುಂದೆ ಆಗುವುದನ್ನು ತಪ್ಪಿಸಲು ನನ್ನಿಂದಲೂ ಸಾಧ್ಯವಿಲ್ಲ. ಯಾರಿಂದಲೂ ಸಾಧ್ಯವಿಲ್ಲ. ಆದುದರಿಂದ ಕಾಲವಶರಾದ ಅವರು ನಾನು ಹೇಳಿದ್ದರೂ ಕೇಳುತ್ತಿರಲಿಲ್ಲ. ಕಾಲಗತಿಯನ್ನು ಬದಲಿಸುವುದು ಯಾರಿಂದಲೂ ಸಾಧ್ಯವಿಲ್ಲ. ಹಾಗೊಂದು ವೇಳೆ ನೀನು ಅದರ ಪರೀಕ್ಷೆಯನ್ನು ಮಾಡಿನೋಡು. ಈಗ ನಾನು ನಿನಗೆ ನಿನ್ನ ಭವಿಷ್ಯವನ್ನು ಹೇಳುತ್ತೇನೆ. ಮುಂದಾಗುವ ಅನರ್ಥವನ್ನೂ ಸಹ ತಿಳಿಸುತ್ತೇನೆ. ಅದನ್ನು ತಿಳಿದುಕೊಂಡ ಬಳಿಕವಾದರೂ ಬದಲಿಸಲು ಪ್ರಯತ್ನಿಸು. ಭವಿಷ್ಯದಲ್ಲಿ ಆಗುವ ಅಥವಾ ಆಗುವುದೆಂದು ನಾನು ಹೇಳಿದ ಅನಾಹುತವನ್ನು ನೀನು ತಪ್ಪಿಸಲು ನಿನ್ನ ಶಕ್ತಿಯನ್ನೆಲ್ಲಾ ಒರೆಗೆ ಹಚ್ಚಿ ಸಾಹಸ ಮಾಡಿನೋಡು. ಆಗ ಕಾಲದ ಪ್ರಭಾವ ಎಷ್ಟು ಪ್ರಬಲವಿದೆ ಎನ್ನುವುದು ತಿಳಿಯುವುದು. ಮತ್ತು ಆ ರಾಜಸೂಯಯಾಗವನ್ನು ನಾನು ಏಕೆ ತಡೆದು ನಿಲ್ಲಿಸಲಿಲ್ಲ ಎಂಬುದು ಕೂಡ ನಿನಗೆ ಅರ್ಥವಾಗುವುದು. ಕಾಲವು ಎಳೆದಗೆರೆಯನ್ನು ಯಾವನೂ ದಾಟಲಾರ. ನೀನು ಎಷ್ಟೇ ಉದ್ಯೋಗ ಮಾಡಿದರೂ, ಎಷ್ಟೇ ನಿನ್ನ ಪೌರುಷ ಪರಾಕ್ರಮಗಳನ್ನು ಮೆರೆದರೂ ಕಾಲಕೃತ ನಿಯಮಗಳ ನಿಯಂತ್ರಣ ಸರ್ವಥಾ ನಿಮ್ಮ ವಶದಲ್ಲಿ ಉಳಿಯಲಾರದು. ''ಮುಂದೆ ಕೆಲವೇ ದಿನಗಳಲ್ಲಿ ನೀನು ಅಶ್ವಮೇಧ ಯಜ್ಞವನ್ನು ಮಾಡುವಿ'' ಯಜ್ಞಗಳಲ್ಲಿ ಅಶ್ವಮೇಧ ಯಜ್ಞವು ಶ್ರೇಷ್ಠ. ಕ್ಷತ್ರಿಯರಿಗೆ ಅದರಿಂದ ಯಶಸ್ಸು, ಪುಣ್ಯ ಎರಡೂ ಲಭಿಸುವವು ಎಂದು ಕೇಳಿದ ಬಳಿಕ ಆ ಯಜ್ಞವನ್ನು ಮಾಡಲು ನಿನ್ನಲ್ಲಿ ಮಹತ್ವಾಕಾಂಕ್ಷೆ ಉಂಟಾಗುವುದು. ಮುಂದೆ ಆ ನಿನ್ನ ಯಜ್ಞವನ್ನು ದೇವೇಂದ್ರನು ನಾಶಮಾಡುವನು.'' ರಾಜನೇ, ಇದೆಲ್ಲವನ್ನೂ ನಾನು ನಿನಗೆ ಮೊದಲೇ ಹೇಳಿ ಇಟ್ಟಿದ್ದೇನೆ. ಪುರುಷ ಪ್ರಯತ್ನದಿಂದ ದೈವವನ್ನು ಬದಲಿಸಲು ಯಾವುದಾದರೂ ಪ್ರಕಾರದಿಂದ ಸಾಧ್ಯವಿದ್ದರೆ ನೀನು ಬದಲಿಸು. ನಾನು ಮೊದಲೇ ನಿನಗೆ ತಿಳಿಸಿದ್ದರಿಂದ ನೀನು ಯಜ್ಞವನ್ನೇ ಮಾಡಲಿಕ್ಕೆ ಹೋಗಬೇಡ. ನಿನಗೆ ಮುಂದಾಗಲಿರುವ ಅನರ್ಥದಲ್ಲಿ ಇಂದ್ರನದು ಯಾವುದೂ ತಪ್ಪಿಲ್ಲ. ನಿನ್ನ ಪುರೋಹಿತರದೂ ತಪ್ಪಿಲ್ಲ. ಯಜಮಾನನಾದ ನಿನ್ನದಂತೂ ಅಪರಾಧವು ಇಲ್ಲವೇ ಇಲ್ಲ. ಆದರೂ ಅನರ್ಥ ಆಗುವುದು ತಪ್ಪುವುದೇ ಇಲ್ಲ. ಇದಕ್ಕೆ ಏನು ಕಾರಣ? ಕಾರಣ ದೈವ. ಅದೃಷ್ಟ. ನಿನ್ನ ದೈವವು ನಿನ್ನಿಂದ ಅಶ್ವಮೇಧ ನಡೆಯಬೇಕು. ಅದರಿಂದ ಅನರ್ಥ ಆಗಬೇಕು. ಇಂದ್ರ ನಿನ್ನ ಯಜ್ಞವನ್ನು ಧ್ವಂಸ ಮಾಡಬೇಕು. ಎಂದೆಲ್ಲಾ ಬರದಿಟ್ಟಿದೆ. ಅದನ್ನು ಅಳಿಸಲು ಅಥವಾ ಬದಲಿಸಲು ನೀನೆಷ್ಟರವನು.

**ಜನಮೇಜಯ:-** ಪೂಜ್ಯರೇ, ನಾನು ಪ್ರಾರಂಭಿಸಿದ ಯಜ್ಞವನ್ನು ಅರ್ಧದಲ್ಲಿಯೇ ಬಿಟ್ಟುಬಿಡಲು ನಿಮಿತ್ತವಾದರೂ ಏನು ಒದಗಿ ಬರುವುದು? ಆ ಭವಿಷ್ಯದ ಗರ್ಭವನ್ನು ತಮ್ಮ ಜ್ಞಾನಶಕ್ತಿ ಇಂದ ದಯವಿಟ್ಟು ನೋಡಿರಿ. ನೋಡಿ-ತಿಳಿದು ನನ್ನ ಮೇಲಿನ ಪ್ರೀತಿಯಿಂದ ಹೇಳಿರಿ. ನಾನು ಅದಕ್ಕೆ ಪರಿಹಾರವನ್ನು ಮಾಡಿಕೊಳ್ಳುವೆನು.

**ವ್ಯಾಸ:-** ಅರಸ, ಬ್ರಾಹ್ಮಣರ ಕೋಪವೇ ಆ ನಿನ್ನ ಯಜ್ಞಸ್ತಂಭನಕ್ಕೆ ನಿಮಿತ್ತ. ಆದುದರಿಂದ ನೀನು ಬ್ರಾಹ್ಮಣರ ಕೋಪವನ್ನು ಪರಿಹರಿಸಲು ಮಾಡಬೇಕಾದ ಪ್ರಯತ್ನವನ್ನೆಲ್ಲ ಮಾಡಿ ನೋಡು. ಆದರೆ ನನ್ನ ಮಾತು ನೆನಪಿರಲಿ. '*ಭವಿತವ್ಯಂ ಭವತ್ಯೇವ*' ನಿನಗೆ ಕಲ್ಯಾಣವಾಗಲಿ. ನಿನ್ನ ಅನಂತರ ಈ ಅಶ್ವಮೇಧಯಜ್ಞವನ್ನು ಭೂಮಿಯಲ್ಲಿ ಯಾವ ಕ್ಷತ್ರಿಯನೂ ಮತ್ತೆ ಮಾಡಲಾರ.

**ಜನಮೇಜಯ:-** ಬ್ರಾಹ್ಮಣಶಾಪರೂಪವಾದ ಅಗ್ನಿಯ ತೇಜಸ್ಸಿನಿಂದ ಜಗತ್ತಿನಲ್ಲಿ ಅಶ್ವಮೇಧಯಾಗದ ಆಚರಣೆಯನ್ನು ತಡೆದು ನಿಲ್ಲಿಸಲು ನಾನೇ ನಿಮಿತ್ತನಾಗುವುದಾದರೆ, ಅದು ನನಗೆ ಅಪಕೀರ್ತಿ. ಆ ಅಪಯಶದ ಜಾಲದಲ್ಲಿ ನಾನು ಬಿದ್ದ ಬಳಿಕ, ಈ ಲೋಕದಲ್ಲಿ ಆ ಅಪವಾದವು ನನ್ನ ಮೇಲಿರುವವರೆಗೂ ನನಗೆ ಸದ್ಗತಿ ಸಾಧ್ಯವಿಲ್ಲ. ನನ್ನ ಕಾಲಾನಂತರ ಮುಂದೆ ಅಶ್ವಮೇಧಯಾಗವು ಅದೇ ವೇದೋಕ್ತವಾದ ಅನುಭವ ಪದ್ಧತಿಯಿಂದ ಮತ್ತೆ ಯಾರಾದರೂ ಪುಣ್ಯಪುರುಷರು ಮುಂದೆ ಅಶ್ವಮೇಧಯಜ್ಞವನ್ನು ಪುನರಾರಂಭಿಸಿದರೆ ನನ್ನ ಮೇಲಿನ ಅಪಕೀರ್ತಿ-ಅಪರಾಧ ಪ್ರಜ್ಞೆ ತೊಳೆದು ಹೋಗುವುದು ತಾವು ದಯಮಾಡಿ ಭವಿಷ್ಯದ ದೃಷ್ಟಿಯಿಂದ ಪಾಮರನಾದ ನನಗೆ ತಿಳಿಸಿರಿ ಧೈರ್ಯಹೇಳಿರಿ.

**ವ್ಯಾಸ:-** ಜನಮೇಜಯ, ಲೋಕದಲ್ಲಿ ಈ ರೂಪದಿಂದ ಯಜ್ಞಾನುಷ್ಠಾನದ ಕ್ರಮ ಸಮಾಪ್ತವಾದಂತಾಗಿದೆ. ಮುಂದೆ ಯಜ್ಞ-ಯಾಗ ಪ್ರಕ್ರಿಯೆಯು ಬದಲಾಗಿ ಜ್ಞಾನ ಯಜ್ಞರೂಪವಾಗಿ ಮಾರ್ಪಟ್ಟು ದೇವಬ್ರಾಹ್ಮಣರಲ್ಲಿ ಉಳಿದು ಕೊಳ್ಳುವುದು. ಒಂದು ತೇಜಸ್ಸು ಇನ್ನೊಂದು ತೇಜಸ್ಸುಲ್ಪುವಾದಾಗ ಅದು ಉದಯೋನ್ಮುಖ ತೇಜಸ್ಸಿನಲ್ಲಿ ಗುಪ್ತರೂಪದಿಂದ ಇದ್ದೇಯಿರುವುದು. ಕಶ್ಯಪಕುಲದ ಒಬ್ಬ ಸೇನಾನಾಯಕನಾದ ಬ್ರಾಹ್ಮಣನು ಭೂಗರ್ಭದಲ್ಲಿ ಗುಪ್ತನಾಗಿ ಇರುತ್ತಾನೆ. ಭೂಮಿಯನ್ನು ಅಗೆದು ಒಗೆದು ನೋಡಿದಾಗ ಅವನು ಹೊರಗೆ ಬಂದು ಕಲಿಯುಗದಲ್ಲಿ ಕೆಲವು ಕಾಲದ ಬಳಿಕ ಅಶ್ವಮೇಧ ಯಜ್ಞವನ್ನು ಮತ್ತೆ ಪ್ರಾರಂಭಿಸುವನು ಮುಂದೆ ಅದೇ ಕಶ್ಯಪಕುಲದಲ್ಲಿ ಹುಟ್ಟಿದ ಮತ್ತೊಬ್ಬ ರಾಜೇಂದ್ರನು ಪ್ರಳಯಾಂತಕವಾದ ಶ್ವೇತಗ್ರಹ ಎಂಬ ಉತ್ಪಾತಕ್ಕೆ ಕಾರಣನಾಗಿ ರಾಜಸೂಯ ಯಜ್ಞವನ್ನು ಕೂಡ ಪ್ರಾರಂಭಿಸುವನು. ಆ ಯಜ್ಞವು ಮನುಷ್ಯರ ಶ್ರದ್ಧೆಗನುಗುಣವಾಗಿ ಫಲ ನೀಡುವುದು. ಋಷಿಮುನಿಗಳೆಲ್ಲರೂ ಕಲಿಯುಗದ ಕೊನೆಯ ಹಂತದಲ್ಲಿ ಕಾಲಿರಿಸುವರು. ಮನುಷ್ಯರ ಇಂದ್ರಿಯ ಸ್ಥೈರ್ಯ ಮೊದಲಿನಂತೆ ಉಳಿದಿರುವುದಿಲ್ಲ ಜನರ ನಡೆನುಡಿಗಳೆಲ್ಲವೂ ಪೂರ್ವಾಚಾರ ಸಂಪ್ರದಾಯಗಳಿಂದ ಬದಲಾಗಿ ಪರಿವರ್ತನೆ ಹೊಂದುವವು. ಆ ಕಾಲದಲ್ಲಿ ಅತ್ಯಲ್ಪ ಧರ್ಮ ಕರ್ಮ ಮಾಡಿದರೂ ಅದಕ್ಕೆ ಅನಂತ ಫಲ ಮತ್ತು ಮನುಷ್ಯರಿಗೆ ಸ್ವಲ್ಪ ತಪಸ್ಸಿನಿಂದ ಸಿದ್ಧಿಪ್ರಾಪ್ತವಾಗುವುದು. ಈ ಯುಗಾಂತ ಕಾಲದಲ್ಲಿ ಧರ್ಮಾಚರಣೆ ಮಾಡಿದವರು ಧನ್ಯರು.

**ಶೌನಕ:-** ಧರ್ಮಜ್ಞನಾದ ಸೂತಾಚಾರ್ಯನೇ, ಕಲಿಯುಗದಲ್ಲಿ ಧರ್ಮನಷ್ಟವಾಗಿ ಲೋಕದಲ್ಲಿ ಎಂಥ ಅವಸ್ಥೆ ಉಂಟಾಗುವುದು ಅದನ್ನು ತಿಳಿಸಿರಿ.

**ಸೂತ:-** ಹಿಂದೆ ಜನಮೇಜಯರಾಜನು ವ್ಯಾಸರಿಗೆ ಇದೇ ಪ್ರಶ್ನೆ ಮಾಡಿದ್ದ. ಅವನಿಗೆ ವೇದವ್ಯಾಸರು ಹೇಳಿದ್ದನ್ನೇ ನಾನು ನಿಮಗೆ ಹೇಳುತ್ತೇನೆ ಕೇಳಿರಿ.

**ವ್ಯಾಸ:-** ಕಲಿಯುಗದಲ್ಲಿ ರಾಜರು ಪ್ರಜೆಗಳ ರಕ್ಷಣೆ ಮಾಡದೆ, ಕೇವಲ ಅವರ ಕಡೆಯಿಂದ ಹೆಚ್ಚಿನ ಕರವನ್ನು ಒತ್ತಾಯದಿಂದ ತೆಗೆದುಕೊಂಡು ತಮ್ಮ ಸುಖೋಪ ಭೋಗಕ್ಕೆ

ಉಪಯೋಗಿಸುವರು. ಕ್ಷತ್ರಿಯರಲ್ಲದವರು ರಾಜರಾಗುವರು. ಬ್ರಾಹ್ಮಣ ಮೊದಲಾದ ಎಲ್ಲ ಜಾತಿಯವರು ಮಾಂಸಾಹಾರಿಗಳೂ ಜಾತಿಹೀನರೂ ಆಗುವರು. ಮತ್ತು ಎಲ್ಲ ಜನರು ಮಿತ್ರರ ಮಡದಿಯರೊಡನೆ ಪ್ರೇಮ ಬೆಳೆಸುವರು. ಕಳ್ಳರಿಗೂ ರಾಜರಿಂದ ಮಾಸಾಶನ ಮತ್ತು ಗೌರವಧನ ದೊರೆಯುವುದು. ಜಗತ್ತಿನಲ್ಲಿ ಜ್ಞಾನ ಆಚಾರ ಕತೃತ್ವ ಶಕ್ತಿ ಮೊದಲಾದ ದ್ರವ್ಯಕ್ಕೆ ಮಹತ್ವ ಬರುವುದು. ಶಿಖ ಯಜ್ಞೋಪವೀತ (ಚಂಡಿಕೆ, ಜನಿವಾರ)ಗಳನ್ನು ಯಾರೂ ಧರಿಸುವುದಿಲ್ಲ. ಹದಿನಾರು ವರುಷದೊಳಗೆ ಮಕ್ಕಳನ್ನು ಹಡೆಯುವರು ಶಾಸ್ತ್ರದಲ್ಲಿ ನಿಷಿದ್ಧವಾದ ರಸವಿಕ್ರಯ (ಅನ್ನದ ಮಾರಾಟ) ಪ್ರಕಟವಾಗಿಯೇ ನಡೆಯುವುದು. ಬ್ರಾಹ್ಮಣರು ಸಂಬಳ ತೆಗೆದುಕೊಂಡು ತಮ್ಮ ಜ್ಞಾನವನ್ನು ಮಾರಾಟಕ್ಕಿಡುವರು. ಹೆಣ್ಣುಮಕ್ಕಳ ಮಾರಾಟ ಅನಿರ್ಬಂಧವಾಗಿ ನಡೆಯುವುದು. ಬ್ರಾಹ್ಮಣರು ತಮ್ಮ ತಪಸ್ಸು, ಯಜ್ಞ, ಪುಣ್ಯಕಾರ್ಯಗಳ ಫಲವನ್ನು ಮಾರಾಟಕ್ಕಿಡುವರು ಹಿಂಸಾ ಪ್ರಾಣಿಗಳ ವೃದ್ಧಿ. ಗೋವುಗಳ ಸಾಮೂಹಿಕ ಸಂಹಾರ, ಸ್ವಾರ್ಥಿ ಧೂರ್ತ ಕಪಟೀ ಜನರ ಪ್ರಾಮುಖ್ಯತೆ, ಪುರುಷರಿಗಿಂತ ಎಲ್ಲ ಕ್ಷೇತ್ರಗಳಲ್ಲಿಯೂ ಮಹಿಳೆಯರದೇ ಅಧಿಕಾರ, ಚೋರರ ಪ್ರಾಬಲ್ಯ, ವ್ಯಭಿಚಾರ ಸಂತತಿಯ ಪ್ರಾಬಲ್ಯ, ಮದ್ಯ ಮಾಂಸಗಳ ಸಾರ್ವತ್ರಿಕ ಬಳಕೆ, ಮಕ್ಕಳಿಗೆ ತಂದೆ ತಾಯಿಗಳ ದ್ವೇಷ, ಜಾತಿ ಮತ ಸಂಪ್ರದಾಯಗಳೆಲ್ಲವೂ ಅಳಿದು ಸರ್ವಜಾತಿಯ ಸ್ತ್ರೀಪುರುಷರ ಸಂಪರ್ಕ. ವೈದ್ಯರ ಚಿಕಿತ್ಸೆಗೆ ಒಳಗಾಗದ ಅನೇಕ ಉಲ್ಬಣರೋಗಗಳ ಪ್ರಸಾರ ಎಲ್ಲವೂ ಕಲಿಯುಗದ ಲಕ್ಷಣ. ಈ ಕಲಿಯುಗದ ಕೊನೆಯಲ್ಲಿ ಮನುಷ್ಯರ ಆಯುಷ್ಯವು ಮೂವತ್ತು ವರ್ಷಗಳಿಗೆ ಮಾತ್ರ ಸೀಮಿತವಾಗುವುದು.

ಹೀಗೆ ಕಲಿಯುಗದಲ್ಲಿ ಅಧರ್ಮವು ಹೆಚ್ಚಾಗಿ ಧರ್ಮ ಕರ್ಮಗಳೆಲ್ಲವೂ ಲೋಪವಾಗಿ ಜನರ ಸತ್ವ ಶಕ್ತಿ ಮತ್ತು ಆಯುಷ್ಯವು ಕೂಡ ಕ್ಷೀಣವಾದ ಬಳಿಕ ಜನರಿಗೆ ಬುದ್ಧಿ ಬರುವುದು. ಅವರಿಗೆ ಪಶ್ಚಾತ್ತಾಪವಾಗಿ ಎಲ್ಲರೂ ಮತ್ತೆ ಮೊದಲಿನ ಧರ್ಮಮಾರ್ಗಕ್ಕೆ ಪರಿವರ್ತನೆಯನ್ನು ಹೊಂದುವರು. ದುರಾಚಾರವನ್ನು ತ್ಯಜಿಸುವರು. ಅನಂತರ ಎಲ್ಲಕಡೆ ಜ್ಞಾನಿಗಳ ಸೇವಾ ಶುಶ್ರೂಷಾ, ದಾನ, ಸತ್ಯ, ಪ್ರಾಣರಕ್ಷಣೆ ಈ ನಾಲ್ಕು ಪಾದಗಳಿಂದ ಸಂಪನ್ನವಾದ ಧರ್ಮವು ಎಲ್ಲರ ರಕ್ಷಣೆಯನ್ನು ಮಾಡುವುದು. ಹೀಗೆ ಜನರೆಲ್ಲರೂ ''ಅಧರ್ಮದಿಂದ ನಾಶ, ಧರ್ಮದಿಂದಲೇ ಉತ್ಕರ್ಷ, ಮಾನವ ಕುಲದ ಉನ್ನತಿ'' ಎಂಬುದನ್ನು ಮನಗಂಡು ಪುನಃ ಸತ್ಯ, ಧರ್ಮ, ಸದಾಚಾರಗಳಿಗೆ ಮೊರೆಹೋಗುವರು. ಆಗ ಕಲಿಯುಗ ಹೋಗಿ ಮತ್ತೆ ಕೃತಯುಗ ಪ್ರಾರಂಭವಾಗುವುದು. ಹೀಗೆ ಕಾಲವು ಪರಿವರ್ತನ ಶೀಲವಾಗಿರುತ್ತದೆ. ವಿಧಿ ಅಥವಾ ನೀತಿಯ ನಿಯಮದಂತೆ ಕಾಲಚಕ್ರವು ಒಮ್ಮೆ ಒಳ್ಳೆಯದನ್ನು ಮತ್ತೊಮ್ಮೆ ಕೆಟ್ಟದನ್ನು ಮಾಡುತ್ತ ಅವ್ಯಾಹತವಾಗಿ ತಿರುಗುತ್ತಲೇ ಇರುತ್ತದೆ.

## ಜನಮೇಜಯ ಅಶ್ವಮೇಧ ಯಜ್ಞ, ಇಂದ್ರನಿಂದ ಆತಂಕ

**ಸೂತ:-** ಹೀಗೆ ವೇದವ್ಯಾಸ ಮಹರ್ಷಿಗಳು ತುಂಬಿದ ಸಭೆಯಲ್ಲಿಯೇ ಜನಮೇಜಯ ರಾಜನಿಗೆ ಆಶ್ವಾಸನ ನೀಡಿದರು. ಭೂತ ಭವಿಷ್ಯದ ಸಂಗತಿಗಳೆನ್ನೆಲ್ಲ ವರ್ತಮಾನ ಕಾಲದಲ್ಲಿಯೇ ಕಣ್ಣೆದುರೇ ನಡೆದಂತೆ ನಿಚ್ಚಳವಾಗಿ ತಿಳಿಸಿ ಹೇಳಿದರು. ಧರ್ಮ, ಅರ್ಥ, ಕಾಮಾದಿ ಪುರುಷಾರ್ಥಗಳಿಂದಲೂ ಕರುಣೆ ವೀರ ಶೃಂಗಾರ ಮುಂತಾದ ರಸಗಳಿಂದಲೂ ರಮಣೀಯವಾದ ಇತಿಹಾಸವನ್ನು ವ್ಯಾಸ ಹಾಗೂ ವೈಶಂಪಾಯನರ ಮುಖಾಂತರ ಕೇಳಿ ಎಲ್ಲ ಸಭಾಸದಸ್ಯರು ಭಾವತರಂಗಿತರಾಗಿ ಕೆಲವು ಕಾಲ ಕಣ್ಣೀರು ಉದುರಿಸುತ್ತ, ಹಲವು

ನಿಮಿಷ ಧ್ಯಾನಾರೂಢರಾಗಿ ಕುಳಿತರು. ಅನಂತರ ಅಲ್ಲಿ ನೆರೆದ ಎಲ್ಲ ಸಭಾಸದಸ್ಯರಿಗೂ ಪ್ರೀತಿಯ ಸಾಂತ್ವನಪರ ಮಾತುಗಳನ್ನು ಹೇಳಿ ಆ ವ್ಯಾಸರು ಅಲ್ಲಿಂದ ಹೊರಟರು. ಆಗ ಅಲ್ಲಿ ನೆರೆದ ಜನರಲ್ಲಿ ಶ್ರೇಷ್ಠರಾದ ಋಷಿಪುಂಗವರೂ, ಅನೇಕ ಬ್ರಹ್ಮರ್ಷಿಗಳು ವ್ಯಾಸರನ್ನು ಹಿಂಬಾಲಿಸಿದರೂ ಆ ಎಲ್ಲ ಬ್ರಹ್ಮರ್ಷಿವೃಂದವನ್ನು ತುಸು ದೂರ ಹೋಗಿ ಬೀಳ್ಕೊಟ್ಟು ಜನಮೇಜಯ ಮಹಾರಾಜನೂ ಅವನ ಪುರೋಹಿತರೂ ಮರಳಿ ಬಂದರು.

ಜನಮೇಜಯ ರಾಜನು ತನ್ನ ತಂದೆಯನ್ನು ಕಚ್ಚಿಕೊಂದ ಹಾವುಗಳ ಹುಟ್ಟನೇ ಅಡಗಿಸಬೇಕೆಂದು ಕೈಕೊಂಡ ಸರ್ಪಯಾಗವು ಆಸ್ತಿಕನ ಮಧ್ಯಸ್ಥಿಕೆಯಿಂದ ಅರ್ಧಕ್ಕೆ ತಡೆ ಹಿಡಿಯಲ್ಪಟ್ಟಿತು. ಅಗ್ನಿಹೋತ್ರದಲ್ಲಿಯ ಅಗ್ನಿಜ್ವಾಲೆಗಳ ಝಳವು ಆಗಲೇ ತಕ್ಷಕನಿಗೆ ತಾಕಿದ್ದಿತು. ಕೆಲವೇ ನಿಮಿಷಗಳಲ್ಲಿ ಅವನು ಅಗ್ನಿಯಲ್ಲಿ ಬಿದ್ದು ದಗ್ಧನಾಗಿ ಹೋಗುತ್ತಿದ್ದ. ಆಸ್ತಿಕ ಮುನಿಯು ಅವನನ್ನು ಹಾಗೂ ಇತರ ಸರ್ಪಗಳನ್ನು ರಾಜನಿಗೆ ಹೇಳಿ ಬದುಕಿಸಿದ. ಅವನ ಹಾಗೂ ಇತರ ಮುನಿಗಳ ಉಪದೇಶದಿಂದ ಜನಮೇಜಯ ರಾಜ ಸೂಡು ಹಾಗೂ ಸೇಡಿನ ಭಾವನೆಯನ್ನು ತ್ಯಜಿಸಿದ. ಮನಸ್ಸಿನಲ್ಲಿ ಉಕ್ಕುವ ಸರ್ಪದ್ವೇಷವನ್ನು ಹಾಗೂ ಭೀಕರ ರೋಷವನ್ನು ಪ್ರಯತ್ನದಿಂದ ಪರಿತ್ಯಜಿಸಿದ. ಆಸ್ತಿಕಮುನಿ ಅಳಿದುಳಿದ ನಗಾಧುರೀಣರೊಂದಿಗೆ ತನ್ನ ಆಶ್ರಮಕ್ಕೆ ಬಂದ. ಜನಮೇಜಯ ರಾಜ ತನ್ನ ರಾಜಧಾನಿಯಾದ ಹಸ್ತಿನಾವತಿಗೆ ಆಗಮಿಸಿದ. ರಾಜ ತನ್ನ ಮನಸ್ಸಿನ ಕಹಿಯನ್ನೆಲ್ಲ ಕಳೆದು ಕೊಂಡು ಆನಂದದಿಂದಲೇ ರಾಜ್ಯ ಶಾಸನವನ್ನು ಧರ್ಮಮಾರ್ಗದಲ್ಲಿಯೇ ಮುಂದುವರೆಸಿದ. ಹೀಗೆ ಕಾಲ ಚಕ್ರ ಉರುಳುತ್ತಿತು. ಹಳೆಯದೆಲ್ಲ ಮರೆತು ಹೊಸ ಹೊಸ ಕರ್ತವ್ಯ. ಲೋಕ ಕಲ್ಯಾಣ ಕಾರ್ಯ. ಲೋಕ ಕ್ಷೇಮದ ಯೋಜನೆಗಳನ್ನು ಜನಮೇಜಯ ರಾಜ ಯೋಚನೆ ಮಾಡುತ್ತಲೇ ಇದ್ದ. ಧಾರಾಳಿಯಾದ ಆ ಧರ್ಮಿಷ್ಠ ಮಹಾರಾಜ ವಿಪುಲವಾದ ದಾನ ದಕ್ಷಣೆಯನ್ನಿತ್ತು ಪಂಡಿತರು ಪುರೋಹಿತರ ಹೇಳಿಕೆಯಂತೆ ಅನೇಕ ಯಾಗ ಯಜ್ಞಗಳನ್ನು ಮಾಡಿದ. ಅವನ ಪುರೋಹಿತರದಲ್ಲಿ ಕೆಲವರು ಸಿದ್ಧಪುರುಷರು, ಮಂತ್ರಸಿದ್ಧಿ ಉಳ್ಳವರು. ಶಾಪಾನುಗ್ರಹ ಸಮರ್ಥರು, ಅವರು ಹೇಳಿದ್ದೆ ಅವನಿಗೆ ವೇದವಾಕ್ಯ. ಅವರು ಹೇಳಿದ ಒಂದು ಮಾತೂ ಹುಸಿಯಾಗಿರಲಿಲ್ಲ. ಆದುದರಿಂಲೇ ಆ ರಾಜರ್ಷಿಗೆ ಅಂಥ ವಿಪ್ರವೃಂದದ ಮಾತಿನಲ್ಲಿ ಅಗಾಧ ಶ್ರದ್ಧೆ.

ಇಂಥ ರಾಜನ ಶ್ರದ್ಧಾ ಕೇಂದ್ರರಾದ, ಅವನ ಹಿತವನ್ನೇ ಬಯಸುವ ಕೆಲವು ಪುರೋಹಿತ ಪ್ರಮುಖರು ಅಶ್ವಮೇಧ ಯಜ್ಞವನ್ನು ಮಾಡಲು ಅವನಿಗೆ ಆದೇಶವಿತ್ತರು. ''ಅದರಿಂದ ನಿನಗೂ ರಾಷ್ಟ್ರಕ್ಕೂ ಕಲ್ಯಾಣ ಪರಂಪರೆ. ಶೇಯಸ್ಸು, ಪ್ರೇಯಸ್ಸು, ಸರ್ವತೋಮುಖ ಉತ್ಕರ್ಷ. ಪ್ರಜಾಕ್ಷೇಮ, ಮುಂದೆ ಸ್ವರ್ಗಪ್ರಾಪ್ತಿ. ಈಗ ಸರ್ವಾರಿಷ್ಟ ನಿವಾರಣೆ ಸರ್ವ ಸಂಪತ್ ಸಮೃದ್ಧಿ. ಸಕಲ ಕಾಮನಾಪೂರ್ತಿ ನಿನಗೆ ಆಚಂದ್ರಾರ್ಕಕೀರ್ತಿ.'' ಎಂದೆಲ್ಲ ಹೇಳಿ ಅಶ್ವಮೇಧಯಜ್ಞವನ್ನು ಮಾಡಲೇಬೇಕು ಎಂದು ಒತ್ತಾಯ ಪಡಿಸಿದರು.

ಇಷ್ಟೆಲ್ಲ ಭವ್ಯ ಭವಿಷ್ಯದ ಕನಸನ್ನು ನನಸಾಗಿ ಮಾಡುವ ಅಶ್ವಮೇಧ ಯಜ್ಞದ ಆದೇಶವನ್ನು ಮೀರಲು ಮಹಾರಾಜನಿಗೆ ಸಾಧ್ಯವೇ ಆಗಲಿಲ್ಲ. ಅವರ ಅಪ್ಪಣೆಯಂತೆ ಅಶ್ವಮೇಧ ಯಜ್ಞದ ದೀಕ್ಷೆಯನ್ನು ಸ್ವೀಕರಿಸಿದ. ಪಟ್ಟದರಸಿಯಾದ ಕಾಶಿರಾಜ ಕನ್ಯೆ ವಪುಷ್ಟಮೆಯು ಮಹಾರಾಜನೊಂದಿಗೆ ಯಜ್ಞದೀಕ್ಷೆಯನ್ನು ಸ್ವೀಕರಿಸಿದಳು. ಅಶ್ವಮೇಧ

ಯಜ್ಞದ ಎಲ್ಲ ವಿಧಿವಿಧಾನಗಳು ಯಾವುದಕ್ಕೂ ಲೋಪ ಬಾರದಂತೆ ಶಾಸ್ತ್ರೋಕ್ತವಾಗಿಯೇ ನೆರವೇರಿಸಲ್ಪಟ್ಟವು. ಮೊದಲೇ ಧಾರಾಳಿಯಾದ ಆ ದಾನಶೂರ ರಾಜನು ಈ ಅಶ್ವಮೇಧ ಯಜ್ಞದಲ್ಲಿ ಪ್ರಸಂಗದಲ್ಲಿಯಂತೂ ಮುಕ್ತಹಸ್ತದಿಂದ ಪುರೋಹಿತರಿಗೂ, ಆಚಾರ್ಯರಿಗೂ, ಬಂದ ಅತಿಥಿಗಳಿಗೂ, ಬೇಡಿದ ಯಾಚಕರಿಗೂ ತೃಪ್ತಿಯಾಗುವಂತೆ ದಾನ ದಕ್ಷಿಣೆ ನೀಡಿದ.

ಸಂಪ್ರದಾಯಕ್ಕೆ ಅನುಗುಣವಾಗಿ ಪುರೋಹಿತರು ಅಶ್ವಮೇಧ ಯಜ್ಞದಲ್ಲಿ ಯಜ್ಞಾಶ್ವವನ್ನು ಕೊಂದರು. ಮೃತವಾದ ಅಶ್ವದ ಜೊತೆಗೆ ಮಹಾರಾಣಿಯು ಮಲಗಿಕೊಳ್ಳುವುದು ಆ ಯಾಗದ ಒಂದು ವಿಧಿ. ಅದನ್ನು ಅನುಸರಿಸಿ ಪುರೋಹಿತರ ನಿರ್ದೇಶನದಂತೆ ಪಟ್ಟದರಾಣಿ ವಪುಷ್ಟಮೆಯು ಪುರೋಹಿತರಿಂದ ಕೊಲ್ಲಲ್ಪಟ್ಟು ಯಜ್ಞ ಭೂಮಿಯಲ್ಲಿ ಮಲಗಿಸಲ್ಪಟ್ಟ ಯಜ್ಞಾಶ್ವದ ಶವದೊಂದಿಗೆ ಶಾಸ್ತ್ರಕ್ಕಾಗಿ ಹೋಗಿ ಮಲಗಿಕೊಂಡಳು. ಆಗ ಆ ಸರ್ವಾಂಗ ಸುಂದರಿಯನ್ನು ನೋಡಿ ಇಂದ್ರನು ಸಕಾಮನಾದ. ಸತ್ತ ಕುದುರೆಯ ದೇಹದಲ್ಲಿ ಪ್ರವೇಶ ಮಾಡಿದ. ಮಹಾರಾಣಿಯೊಂದಿಗೆ ಸಂಯೋಗ ಹೊಂದಿದ. ಕುದುರೆಯ ಹೆಣದಲ್ಲಿ ಉಂಟಾದ ವಿಕಾರವನ್ನು ನೋಡಿ ಜನಮೇಜಯನಿಗೆ ಒಮ್ಮೆಲೇ ಸಂದೇಹ ಬಂದಿತು. ಕೂಡಲೇ ಅವನು ಗರ್ಜಿಸಿ ಸಿಟ್ಟಿನಿಂದ ಹೇಳಿದ.

**ಜನಮೇಜಯ:-** ಮೂರ್ಖ ಪುರೋಹಿತ, ನಿನ್ನ ಕೈಯಿಂದ ಭಯಂಕರ ಅಪರಾಧ ಆಗಿದೆ. ಈ ಕುದುರೆಯು ಇನ್ನೂ ಸತ್ತಿಲ್ಲ. ಈ ಜೀವಂತ ಕುದುರೆಯು ನನ್ನ ಹೆಂಡತಿಯಾದ ವಪುಷ್ಟಮೆಯ ಶೀಲವನ್ನು ಅಪಹರಣ ಮಾಡಿದೆ. ನನ್ನ ಯಜ್ಞವನ್ನು ಹಾಳು ಮಾಡಿದೆ. ಈ ಎಲ್ಲ ಅನರ್ಥಕ್ಕೆ ನೀನೇ ಕಾರಣ. ಕುದುರೆಯನ್ನು ಸರಿಯಾಗಿ ಕೊಲ್ಲಲಿಲ್ಲ ಅದರಿಂದ ನನ್ನ ಹೆಂಡತಿಯ ಶೀಲಭಂಗವಾಯಿತು. ಕುದುರೆಯನ್ನು ಕೊಲ್ಲುವುದರ ಬದಲು ನೀನು ನನ್ನನ್ನೇ ಕೊಂದೆ, ನಾನು ಸತ್ತೆ. ಇದು ಎಂಥ ಪ್ರಮಾದ?

**ಅಧ್ವರ್ಯ:-** ಮಹಾರಾಜ, ಇದರಲ್ಲಿ ನನ್ನದು ಎಳ್ಳಿನಷ್ಟೂ ತಪ್ಪಿಲ್ಲ. ನಾನು ಅಶ್ವಮೇಧ ಕುದುರೆಯನ್ನು ಚೆನ್ನಾಗಿಯೇ ಕೊಂದಿದ್ದೇನೆ. ಅದು ಸಂಪೂರ್ಣವಾಗಿ ಸತ್ತು ಬಿದ್ದುದನ್ನು ಈ ಎಲ್ಲ ಋತ್ವಿಜರೂ ಪುರೋಹಿತರೂ ಸಭಾಧ್ಯಸರು ನೀವು ಕೂಡ ನಿಚ್ಚಳವಾಗಿ ನೋಡಿದ್ದೀರಿ, ಜೀವ ಹೋಗಿ ಎಷ್ಟೋ ಸಮಯವಾದ ನಂತರ ಅನೇಕ ಸಂಸ್ಕಾರಗಳನ್ನು ನಾವು ಮಾಡಿ ಮುಗಿಸಿದ್ದೇವೆ. ಆಗ ಒಮ್ಮೆಯೂ ನನಗೆ ಅದರ ಜೀವಂತತನದ ಕುರುಹು ಕಂಡು ಬರಲಿಲ್ಲ. ಆದರೆ ಮಹಾರಾಜ, ವಪುಷ್ಟಮೆಯು ಆ ಕುದುರೆಯ ಬಳಿ ಬಂದಾಗ ಮಾತ್ರ ಆ ಮೃತ ಅಶ್ವಶವದ ದೇಹದಲ್ಲಿ ಒಮ್ಮೆಲೆ ಪ್ರಾಣಸಂಚಾರ ಹೇಗೆ ಸಾಧ್ಯ! ಇದೆಲ್ಲವೂ ಇಂದ್ರ ಮಾಡಿದ ಮೋಸ. ರೂಪದಲ್ಲಿ ರತಿಯನ್ನು ಮೀರಿಸುವ ನಿನ್ನ ರಾಣಿಯ ಲೋಕೋತ್ತರ ಸೌಂದರ್ಯವನ್ನು ಕಂಡು ಮುಗ್ಧನಾದ ದೇವೇಂದ್ರ ಆ ಸತ್ತ ಪಶುವಿನ ದೇಹದಲ್ಲಿ ಪ್ರವೇಶಿಸಿ ತನ್ನ ಕಾಮಪಿಪಾಸೆಯನ್ನು ತಣಿಸಿಕೊಂಡಿದ್ದಾನೆ. ನಿನ್ನ ಯಜ್ಞವನ್ನು ಹಾಳು ಮಾಡಿದ್ದಾನೆ. ನಿನ್ನ ಈ ಯಜ್ಞ ವಿಧ್ವಂಸವೇ ಅವನ ಮುಖ್ಯಗುರಿ. ಅದನ್ನು ಸಾಧಿಸಲಿಕ್ಕಾಗಿ ಅವನು ಈ ಕಾಮ ಮಾರ್ಗ ಅಥವಾ ವಾಮಮಾರ್ಗವನ್ನು ಬಳಸಿಕೊಂಡಿದ್ದಾನೆ. ಇದಕ್ಕೆಲ್ಲ ದೇವೇಂದ್ರನ ಕಾಪಟ್ಯವೇ ಕಾರಣ. ದೇವತಾ ಸಾರ್ವಭೌಮನಾದ ಇಂದ್ರನೇ ಇಂಥ ಅನ್ಯಾಯಕ್ಕೆ ಇಳಿದಾಗ ನನ್ನಂಥ ಹುಲುಮಾನವ ಏನು ಮಾಡಬಲ್ಲೆ?

**ಜನಮೇಜಯ:-** ಇನ್ನು ಮೇಲೆ ಯಾವ ಕ್ಷತ್ರಿಯನೂ ಅಶ್ವಮೇಧ ಯಜ್ಞವನ್ನು ಮಾಡಿ ವಿಷಯಲಂಪಟನೂ, ಅತಿ ಕಾಮುಕನೂ ಆದ ದೇವೇಂದ್ರನನ್ನು ಪೂಜೆ ಮಾಡದೆ ಇರಲಿ. ಪುರೋಹಿತರೇ, ದೇವೇಂದ್ರನು ಆ ಸತ್ತು ಬಿದ್ದ ಯಜ್ಞಾಶ್ವದಲ್ಲಿ ತಾನು ಜೀವಂತ ಪ್ರವೇಶಿಸಿ ನನ್ನ ಮಹಾರಾಣಿಯ ಶೀಲಹರಣವನ್ನು ಮಾಡುವವರೆಗೆ ನೋಡದೇ ಇದ್ದುದು ಮತ್ತು ಆ ಕ್ಷಣದಲ್ಲಿಯೇ ಅದಕ್ಕೆ ಪ್ರತಿರೋಧವನ್ನು ಮಾಡದೇ ಇದ್ದುದು ನಿಮ್ಮದೇ ತಪ್ಪು. ನಿಮ್ಮ ಅಜಾಗರೂಕತೆ ಹಾಗೂ ದೌರ್ಬಲ್ಯದಿಂದ ಇಂದ್ರನ ಕಾಮಚಾರ ಹಾಗೂ ವ್ಯಭಿಚಾರಗಳಿಗೆ ಅವಕಾಶವಾಯಿತು. ಆದರಿಂದ ನನ್ನ ರಾಣಿಯ ಶೀಲಹರಣ ಆಗಲು ನೀವೇ ಕಾರಣರಾದಂತಾಯಿತು. ಆದುದರಿಂದ ನೀವೆಲ್ಲ ಪುರೋಹಿತರು ನನ್ನ ರಾಜ್ಯ ಬಿಟ್ಟು ಪರಿವಾರದೊಂದಿಗೆ ಹೊರಟುಹೋಗಿರಿ.

ರಾಜನು ಹೀಗೆ ಆಜ್ಞೆಯನ್ನು ಮಾಡಿದ ಕೂಡಲೇ ಆ ಪುರೋಹಿತರಿಗೂ ಕೋಪ ಕೆರಳಿತು. ಆ ಕ್ಷಣದಲ್ಲಿ ಅವರೆಲ್ಲರೂ ಜನಮೇಜಯ ರಾಜ್ಯ ಬಿಟ್ಟು ಹೊರಟು ಹೋದರು. ಅನಂತರ ಆ ಜನಮೇಜಯ ರಾಜನು ಕ್ರೋಧಾಂಧನಾಗಿ ಅಂತಃಪುರದಲ್ಲಿ ಪ್ರವೇಶಿಸಿದ. ಅಲ್ಲಿ ಇರುವ ಪರಿಚಾರಿಕೆಯರನ್ನು ಕರೆದು ಆಜ್ಞೆ ಮಾಡಿದ. ''ನನ್ನ ಪಟ್ಟದರಸಿಯಾದ ವಪುಷ್ಟಮೆಯನ್ನು ಅಂತಃಪುರದಿಂದ ಹೊರಗೆಹಾಕಿರಿ. ಅವಳು ತನ್ನ ಮಲಿನವಾದ ಕೆಸರು ಮೆತ್ತಿದ ಕಾಲನ್ನು ನನ್ನ ನೆತ್ತಿಯ ಮೇಲಿಟ್ಟು ತುಳಿದು ಹಾಕಿದ್ದಾಳೆ. ನನ್ನ ಕೀರ್ತಿಯನ್ನೆಲ್ಲ ಮಣ್ಣುಗೂಡಿಸಿದ್ದಾಳೆ. ಅವಳು ನನ್ನ ದೃಷ್ಟಿಗೆ ಬೀಳುವುದೇ ಬೇಡ. ಅವಳನ್ನು ಈಗಲೇ ರಾಜ್ಯ ಬಿಟ್ಟು ಹೊರಗೆ ಹಾಕಿರಿ.'' ಹೀಗೆ ಸಿಟ್ಟಿನಿಂದ ಹುಚ್ಚನಂತಾದ ಆ ಮಹಾರಾಜ ಬೆಂಕಿಯ ಬೆಟ್ಟದಂತೆ ಉರಿಯುತ್ತ ಅಂತಃಪುರದ ಆವರಣವೆಲ್ಲವೂ ದುಮಿದುಮಿಸುವಂತೆ ಇರುವಾಗ ಅಲ್ಲಿಗೆ ವಿಶ್ವಾವಸು ಎಂಬ ಗಂಧರ್ವ ರಾಜ ಆಗಮಿಸಿದ. ಅವನು ಮಹಾರಾಜನನ್ನು ಸಂತೈಸುತ್ತ ನುಡಿದ.

**ವಿಶ್ವಾವಸು:-** ಜನಮೇಜಯ, ನೀನು ಮೂರುನೂರು ಯಜ್ಞಗಳನ್ನು ಈ ವರೆಗೆ ಮಾಡಿದೆ. ದೇವೇಂದ್ರ, ಶತಕ್ರತು. ನೂರು ಯಜ್ಞ ಮಾಡಿದವ. ನೀನು ಅವನಿಗಿಂತ ಎರಡುನೂರು ಯಜ್ಞಗಳನ್ನು ಅಧಿಕೃತವಾಗಿ ಮಾಡಿದೆ? ಇದು ಅವನಿಗೆ ಹೇಗೆ ಸಹನೆಯಾದೀತು? ಆದುದರಿಂದ ಅವನು ನಿನ್ನ ಕೀರ್ತಿಯನ್ನು ಕಂಡು ಕರುಬಿ ಈ ಕಪಟ ಜಾಲವನ್ನು ಹೆಣೆದಿದ್ದಾನೆ. ಇದೆಲ್ಲವೂ ದೇವೇಂದ್ರನ ಬಹುದಿನದ ಹಂಚಿಕೆ. ಅದರ ಪರಿಣಾಮ ಮಾತ್ರ ನಿನಗೆ ಈಗ ತಿಳಿದು ಬರುತ್ತಲಿದೆ. ನಿನ್ನ ನೂರು ಅಶ್ವಮೇಧ ಯಜ್ಞಗಳು ಪೂರ್ತಿಯಾದ ಕೂಡಲೇ ನಿನ್ನ ವಿಷಯದಲ್ಲಿ ದೇವೇಂದ್ರನಿಗೆ ಹೆದರಿಕೆ ಆಯಿತು. ಆಗಲೇ ಅವನು ಈ ಮೋಸದಹಂಚಿಕೆಗೆ ಹೊಂಚು ಹಾಕಿದ. ಆಗಿನಿಂದ ಈ ವರೆಗೂ ಈ ಕಪಟದ ಜಾಲವನ್ನು ಒಳಗಿಂದೊಳಗೆ ಹಂತ ಹಂತವಾಗಿ ನಿನಗೆ ಗೊತ್ತಾಗದಂತೆ ನೇಯುತ್ತಲೇ ಬಂದಿದ್ದಾನೆ. ವಪುಷ್ಟಮೆಯೊಂದಿಗೆ ನಿನ್ನ ವಿವಾಹವು ಕೂಡ ಆ ಇಂದ್ರಜಾಲದ ಒಂದು ಅಂಗವೇ. ನಿನ್ನ ಮೆಚ್ಚಿನ ರಾಣಿಯಾದ ವಪುಷ್ಟಮೆಯನ್ನು ನೀನು ಚೆನ್ನಾಗಿ ಕಣ್ಣು ತೆರೆದು ನೋಡಿರುವೆಯಾ? ಅವಳ ಚೆಲುವು, ಜಗನ್ಮೋಹಕವಾದ ಸೌಂದರ್ಯ, ರತಿಯನ್ನು ನಾಚಿಸುವ ಆ ರೂಪರಾಶಿ ಇದೆಲ್ಲವೂ ಭೂಲೋಕದ ಹೆಣ್ಣಿನಲ್ಲಿರುವುದು ಸಾಧ್ಯವುಂಟೆ? ವಾಸ್ತವಿಕವಾಗಿ ವಿಚಾರಿಸಿದರೆ ಅವಳು ಮನುಷ್ಯ ಕುಲದ ಮಹಿಳೆಯೇ ಅಲ್ಲ. ಅವಳೊಬ್ಬಳು ಅಪ್ಸರೆ, ರಂಭಾ ಎಂದು ಅವಳ ಹೆಸರು. ದೇವೇಂದ್ರನೇ ನಿನ್ನ ಯಜ್ಞ ಹಾಳು ಮಾಡಲಿಕ್ಕಾಗಿ ಆ ರಂಭೆಗೆ ಆದೇಶವಿತ್ತು ಭೂಮಿಯಲ್ಲಿ ಮನುಷ್ಯಳಾಗಿ ಅವತರಿಸಲು ಅಪ್ಪಣೆ ನೀಡಿದ. ಅವಳು ಕಾಶಿ ರಾಜನ ಕನ್ಯೆಯಾಗಿ ಹುಟ್ಟಿ ಬಂದಳು. ನಿನ್ನನ್ನು ಮದುವೆಯಾದಳು ಅವಳ ಅಪ್ರಾಕೃತವಾದ ಅಪ್ಸರ ಸೌಂದರ್ಯಕ್ಕೆ ನೀನು

ಮುಗ್ಧನಾದೆ. ಅವಳನ್ನು ಮೆಚ್ಚಿದೆ. ರೂಪ ರಾಣಿಯಾದ ಆ ರಂಭೆಯನ್ನು ನಿನ್ನ ಪಟ್ಟದರಾಣಿಯನ್ನಾಗಿ ಮಾಡಿಕೊಂಡೆ. ಆ ಇಂದ್ರನ ರಂಭೆಯೇ ಈಗ ನಿನ್ನ ರಾಣಿ ವಪುಷ್ಟಮೆ. ನಿಜವಾಗಿಯೂ ಅವಳು ಸಾಧ್ವಿ. ಪತಿವ್ರತಾ ಶಿರೋಮಣಿ. ಈ ಭೂಲೋಕದಲ್ಲಿ ನಿನ್ನ ಹೊರತು ಅವಳು ಯಾರನ್ನೂ ಕಣ್ಣೆತ್ತಿ ಒಮ್ಮೆಯೂ ನೋಡಲಿಲ್ಲ. ಅವಳೊಂದು ಸ್ತ್ರೀ ರತ್ನ. ಅವಳು ನಿನ್ನನ್ನು ಮದುವೆಯಾದದ್ದು ನಿನ್ನ ಅಹೋಭಾಗ್ಯ. ಅವಳು ನಿನ್ನ ಈ ಯಜ್ಞ ಕಾರ್ಯಕ್ಕೆ ವಿಘ್ನಮಾಡಲಿಕ್ಕಾಗಿಯೇ ಹುಟ್ಟಿ ಬಂದವಳು. ಅವಳು ಇಂದ್ರನ ಆದೇಶದಂತೆ ದೀಕ್ಷೆಯನ್ನು ತೆಗೆದುಕೊಂಡಾಗ ಮೃತ ಯಜ್ಞಾಶ್ವದಲ್ಲಿ ಪ್ರವಿಷ್ಟನಾದ ದೇವೇಂದ್ರನೊಡನೆ ಕೂಡಿಕೊಂಡದದು ಅವಳದೇನು ತಪ್ಪು? ಜಗತ್ತಿನಲ್ಲಿ ಎಲ್ಲ ಮಾನವ ಸ್ತ್ರೀಯರನ್ನು ಇಂದ್ರ, ಅಗ್ನಿ, ಗಂಧರ್ವರು, ಮೊದಲು ಭೋಗಿಸುವರು ಎಂದು ಶಾಸ್ತ್ರ ವಚನವಿದೆ. ಆ ದೇವತಾ ಸಂಯೋಗವು, ಮಾನವಿಯರಿಗೆ ಅದರಲ್ಲೂ ದೇವತಾ ಸ್ತ್ರೀಯರಿಗೆ ಎಂದೂ ದೋಷಾವಲ್ಲ. ಇದು ನಿನಗೆ ನಮ್ಮ ಪುರಾಣ, ಧರ್ಮಶಾಸ್ತ್ರ ಗ್ರಂಥಗಳನ್ನು ನೋಡಿದರೆ ತಾನಾಗಿಯೇ ತಿಳಿದು ಬರುವುದು. ಇದರಲ್ಲಿ ನಿನ್ನ ರಾಣಿಯಾದ ವಪುಷ್ಟಮೆಯದು ತಿಲಮಾತ್ರ ತಪ್ಪಿಲ್ಲ. ದೇವತೆಗಳು ಹಾಗೂ ಗಂಧರ್ವರಿಂದ ಅಭುಕ್ತವಾದ ಹೆಣ್ಣು ಯಾವ ಪುರುಷನಿಗೂ ಈ ಪ್ರಪಂಚದಲ್ಲಿ ದೊರಕಲಾರದು. ಅಂಥ ದೇವಭೋಗ್ಯವಾದ ಹೆಣ್ಣು ನಿನ್ನ ರಾಣಿಯಾಗಿ ದೊರೆತದ್ದು ನಿನ್ನಸೌಭಾಗ್ಯ. ದೇವೇಂದ್ರನ ಪ್ರೀತಿಯ ಅಪ್ಸರೆ ಅವನನ್ನು ತೊರೆದು ನಿನ್ನ ಮಡದಿಯಾಗಿ, ನಿನ್ನನ್ನೇ ನಂಬಿ ನೆಚ್ಚಿ ಮಹಾರಾಣಿಯಾಗಿ ಇದುವರೆಗೂ ಉಳಿದುಕೊಂಡಿದ್ದು ನಿನ್ನ ಅದೃಷ್ಟ. ಇದೇ ರಂಭೆಗಾಗಿಯೇ ವಿಶ್ವಾಮಿತ್ರ ಸಾವಿರ ವರ್ಷ ತಪಸ್ಸು ಮಾಡಿಲಿಲ್ಲವೆ? ದೇವೇಂದ್ರನ ಭೋಗದ ಹೆಣ್ಣಾದ ಊರ್ವಶಿಗಾಗಿ ನಿನ್ನ ಹಿಂದಿನ ಪೂರ್ವಜನಾದ ಪುರೂರವ ಮಹಾರಾಜನು ಹುಚ್ಚು ಹಿಡಿದು ಅಲೆದಾಡಲಿಲ್ಲವೆ? ಇಂದ್ರ ಭುಕ್ತ ಎಂದು ಯಾರೂ ಸ್ವರ್ಗ ಅಪ್ಸರೆಯನ್ನು ಇಂದಿನವರೆಗೂ ಇತಿಹಾಸ ಪುರಾಣಗಳಲ್ಲಿ ತಿರಸ್ಕರಿಸಿಲ್ಲ. ನೀನು ಕೂಡ ತಿರಸ್ಕರಿಸಬೇಡ. ನಿನಗೆ ಒಲಿದು, ಇಂದ್ರನನ್ನು ಕೂಡ ತ್ಯಜಿಸಿ, ನಿನ್ನ ರಾಜಭವನದ ರಾಜಲಕ್ಷ್ಮಿಯಾಗಿ, ನಿನ್ನ ಬಾಳಿನ ಐಸಿರಿಯಾಗಿ, ಬೇರೊಬ್ಬರನ್ನು ಎಂದೂ ಕಣ್ಣೆತ್ತಿ ನೋಡದ ಮಹಾಸಾಧ್ವೀ ಶಿಖಾಮಣಿಯಾಗಿ, ನಿನ್ನ ಸೇವೆಗೇ ಕೈಕಟ್ಟಿ ನಿಂತುಕೊಂಡ ರಂಭಾ ರೂಪಿಣಿಯಾದ ಈ ನಿನ್ನ ಮಹಾರಾಣಿಯನ್ನು ನೀನು ಬದುಕಿರುವವರೆಗೂ ಭೋಗಿಸು.

ಇದರಲ್ಲಿ ದೇವೇಂದ್ರನದು ಏನೂ ತಪ್ಪಿಲ್ಲ. ಮುನ್ನೂರು ಯಜ್ಞಗಳನ್ನು ಮಾಡಿದ ನೀನು ಹಿಂದಿನ ದಾನವರಂತೆ ಅವನ ಸ್ವರ್ಗ ಸಾಮ್ರಾಜ್ಯವನ್ನು ಆಕ್ರಮಿಸಬಹುದು ಎಂದು ಹೆದರಿ ಈ ಕಪಟ ಇಂದ್ರಜಾಲವನ್ನು ಹೂಡಿದ್ದಾನೆ. ಆ ಯಜ್ಞಾಶ್ವದಲ್ಲಿ ಛಿದ್ರವನ್ನು ಸಾಧಿಸಿ (ನೀನು ವಪುಷ್ಟಮೆ ಎಂದು ತಿಳಿದುಕೊಂಡ) ತನ್ನ ಪ್ರೇಯಸಿ ರಂಭೆಯೊಂದಿಗೆ ಸಂಯೋಗ ಹೊಂದಿದ್ದಾನೆ. ರಂಭೆಯನ್ನು ಸಂಪೂರ್ಣವಾಗಿ ನಿನಗೇ ಒಪ್ಪಿಸಿ ಒಮ್ಮೆ ಮಾತ್ರ ಯಜ್ಞಾಶ್ವದ ಮೃತ ದೇಹದಲ್ಲಿ ಹೊಕ್ಕು ತನ್ನ ರಂಭೆಯೊಡನೆ ಸಂಪರ್ಕಿಸಿದರೆ ಅವನದೇನು ತಪ್ಪು? ಮತ್ತು ಸ್ವಯಂ ದೇವತಾ ಪುರಷನಾದ ಇಂದ್ರನೇ ಬಂದು ತನ್ನ ಪ್ರೇಯಸಿಯೊಡನೆ ಪ್ರಚ್ಛನ್ನವಾಗಿ ಸಂಗವನ್ನು ಸಾಧಿಸಿಕೊಂಡರೆ ನಿಮ್ಮ ಪುರೋಹಿತರ ದಾದರೂ ಏನು ತಪ್ಪು? ಮಹಾತ್ಮರೂ, ತಪೋನಿಷ್ಠರೂ, ನಿಸ್ಪೃಹಿಗಳೂ ಆದ ಆ ನಿಮ್ಮ ಪುರೋಹಿತರು ಮುನ್ನೂರು ಯಜ್ಞಗಳನ್ನು ಮಾಡಿಸಲಿಲ್ಲವೆ? ಅಂಥ ಪರಮೋಪಕಾರಿಯಾದ ಬ್ರಾಹ್ಮಣರನ್ನು ನೀನು ನಿನ್ನ ರಾಜ್ಯ ಬಿಟ್ಟು ಹೊರಗೆ ಹಾಕಿದೆ.

ನಿನಗೆ ಈಗ ಗುರುದ್ರೋಹ, ಬ್ರಹ್ಮದ್ರೋಹ, ದೇವ (ಇಂದ್ರ) ದ್ರೋಹ ಮೂರು ಒದಗಿ ಬಂದವು. ಈ ಕೊನೆಯದಾದ ಒಂದು ಯಜ್ಞದಲ್ಲಿ ನೀನು ಸಂಯಮದಿಂದ ನಡೆದಿದ್ದರೆ, ವಿವೇಕದಿಂದ ವರ್ತಿಸಿದ್ದರೆ ನೀನೂ ಒಬ್ಬ ಭೂಲೋಕದ ಇಂದ್ರನೇ ಆಗಿರುತ್ತಿದ್ದೆ. ಇಂದ್ರನಷ್ಟು ಶಕ್ತಿ, ಸಾಮರ್ಥ್ಯ, ಪ್ರಭಾವ, ಮಹಿಮೆ, ಮೇಲ್ಮೆ ಮುಂತಾದವು ನಿನಗೆ ಮೈಗೂಡಿ ಬರುತ್ತಿದ್ದವು. ನೀನು ಬಹಳ ಕಷ್ಟಪಟ್ಟುಗಳಿಸಿದ ಆ ಇಂದ್ರ ತೇಜಸ್ಸನ್ನು, ಆ ಬ್ರಾಹ್ಮಣರನ್ನು ದೇಶಭ್ರಷ್ಟರನ್ನಾಗಿ ಮಾಡಿ ಇಂದ್ರನಿಗೂ ಶಾಪಕೊಟ್ಟು ನೀನು ಹಾಳು ಮಾಡಿಕೊಂಡೆ. ಆದದ್ದು ಆಯಿತು. ಈಗ ನಡೆದ ಈ ದುರ್ಘಟನೆಯಲ್ಲಿ ಇಂದ್ರ, ಪುರೋಹಿತರು, ವಪುಷ್ಟಮಾ, ಈ ಮೂವರಲ್ಲಿ ನೀನು ಯಾರಿಗೂ ದೋಷ ಮಾಡಬೇಡ. ಎಲ್ಲವೂ ಕಾಲಕೃತ. ನಿನ್ನ ಪಟ್ಟದರಾಣಿಯಾದ ವಪುಷ್ಟಮೆ ದೇವ ಭೋಗ್ಯ ವಸ್ತು, ಅವಳು ಸ್ವರ್ಗ ಸುಖವನ್ನೂ ಇಂದ್ರಭೋಗವನ್ನೂ ಬಿಟ್ಟು ನರಮನುಷ್ಯನಾದ ನಿನ್ನ ಮನೆಗೆ ಬಂದದ್ದೂ. ನಿನ್ನ ಮಡದಿಯಾಗಿ ನಿಂತದ್ದೂ ನಿನ್ನ ಭಾಗ್ಯ ಎಂದೇ ತಿಳಿ. ಸುರಲೋಕದ ರಮಣೀಯ ನಾರೀರತ್ನವಾದ ರಂಭೆ ನಿನ್ನ ರಮಣಿಯಾಗಿದ್ದುರಿಂದ ನೀನು ಹೆಮ್ಮೆಪಟ್ಟುಕೊಂಡು ಅವಳೊಡನೆ ಸುಖೋಪಭೋಗಗಳನ್ನು ಅನುಭವಿಸುತ್ತಾ ಸಂಸಾರ ಮಾಡು. ಕುದುರೆಯ ರೂಪದಲ್ಲಿದ್ದ ದೇವೇಂದ್ರನ ಸಂಪರ್ಕ ಅವಳಿಗೆ ದೋಷವಲ್ಲ. ಸ್ತ್ರೀಯರು ದೋಷರಹಿತರು, ಅದರಲ್ಲಿಯೂ ದೇವತಾ ಸ್ತ್ರೀಯರು ದೂಷಿತರೇ ಆಗುವುದಿಲ್ಲ. ಸೂರ್ಯನ ಪ್ರಭೆ, ಅಗ್ನಿಯ ಜ್ವಾಲೆ, ಯಜ್ಞದ ವೇದಿಕೆ, ಹೋಮದ ಆಹುತಿ, ದೇವತಾ ಸ್ತ್ರೀ ಇವು ಐದು ದೂಷಿತವಾದರೂ ಅದೂಷಿತ ಎಂದೇ ಸಿದ್ಧಾಂತ. ಆದುದರಿಂದ ಅವುಗಳನ್ನು ಗ್ರಹಣ ಮಾಡಿ ಲಾಲನೆ ಪಾಲನೆ ಪೂಜೆ ಮಾಡುವುದು ಉಚಿತ ಮತ್ತು ಶ್ರೇಯಸ್ಕರ. ಶೀಲ ಸಂಪನ್ನರಾದ ಸ್ತ್ರೀಯರು ಲಕ್ಷ್ಮೀದೇವಿಯಂತೆ ನಮಸ್ಕಾರಕ್ಕೇ ಯೋಗ್ಯರು. ಪೂಜೆಗೆ ಅರ್ಹರು.

**ಸೂತ:-** ಹೀಗೆ ಗಂಧರ್ವರಾಜನಾದ ವಿಶ್ವಾವಸು ಅಂತಃಪುರಕ್ಕೆ ಬಂದು ಜನಮೇಜಯ ರಾಜನಿಗೆ ಯಜ್ಞದಲ್ಲಿ ನಡೆದ ಎಲ್ಲ ವಿಚಿತ್ರ ಹಾಗೂ ದುಃಖಾಂತವಾದ ಘಟನೆಗಳಿಗೆಲ್ಲ ಹಿನ್ನೆಲೆಯನ್ನು ವಿವರಿಸಿ ಹೇಳಿದಾಗ ಜನಮೇಜಯ ಮನಸ್ಸು ಪ್ರಸನ್ನವಾಯಿತು. ತನ್ನ ಕೋಪ ತಾಪ ಬಿರುನುಡಿಯಿಂದ ನೊಂದುಕೊಂಡ ವಪುಷ್ಟಮೆಯನ್ನು ಸಂತೈಸಿ ಅಂತಃಪುರದಲ್ಲಿ ಶಾಂತಿ ಸಂತಸಗಳು ನೆಲೆಗೊಳ್ಳುವಂತೆ ಮಾಡಿದ ತನ್ನ ಮಾನಸಿಕ ದುಃಖವನ್ನೆಲ್ಲ ಪೂರ್ಣ ಮರೆತು ತನ್ನ ಕೀರ್ತಿಯನ್ನು ಬೆಳೆಸುವಲ್ಲಿ ಮನಸ್ಸನ್ನು ತೊಡಗಿಸಿದ. ತನ್ನ ಮೆಚ್ಚಿನ ಮಡದಿಯಾದ ವಪುಷ್ಟಮೆಯೊಂದಿಗೆ ಭೌತಿಕ ಸುಖವನ್ನೂ ಭೋಗಾನುಭೋಗಗಳನ್ನೂ ಅನುಭವಿಸುತ್ತ ಯಜ್ಞ, ದಕ್ಷಿಣೆ, ಯಾಗ, ಅತಿಥಿ ಸತ್ಕಾರ, ದೇವಬ್ರಾಹ್ಮಣರ ಸೇವೆ, ಪ್ರಜಾರಂಜನೆ ಹಾಗೂ ದೇಶದ ಅಭ್ಯುದಯದ ಸಾಧನೆ ಮುಂತಾದ ಕಾರ್ಯಗಳನ್ನು ಮಾಡುತ್ತ ಕ್ರೋಧರಹಿತನಾಗಿ ನೆಮ್ಮದಿಯ ಬದುಕನ್ನು ಬಾಳಿದ. ವೈಶಂಪಾಯನರಂಥ ಮಹಾತ್ಮರು ಬಂದಾಗ ಅವರಿಗೆ ಪ್ರಶ್ನೆ ಕೇಳಿ ಆಧ್ಯಾತ್ಮಿಕ ವಿಷಯಗಳನ್ನೂ ಭಾರತಾದಿ ಪುರಾಣ ಇತಿಹಾಸಗಳನ್ನೂ ತಿಳಿದುಕೊಳ್ಳುತ್ತಿದ್ದ. ಒಂದು ದಿನ ವೈಶಂಪಾಯನರು ಬಂದಾಗ ಪ್ರಶ್ನಿಸಿದ.

**ಜನಮೇಜಯ:-** ಪ್ರಳಯ ಕಾಲದ ಸಾಗರದಲ್ಲಿ ಶಯನ ಮಾಡಿದ ಪದ್ಮನಾಭನ ಮಹಿಮೆಯನ್ನೂ ಅವನ ನಾಭಿಯಿಂದ ಜನಿಸಿದ ಪುಷ್ಕರದ ಪ್ರಾದುರ್ಭಾವದ ಸಮಾಚಾರವನ್ನೂ, ಆ ಪದ್ಮನಾಭನ ಅವತಾರದ ಕತೆಗಳನ್ನೂ ದೇವತಾ ಪುರುಷರ ಹಾಗೂ ಮಹಾಮಹಿಮರ ಆಖ್ಯಾನಗಳನ್ನೂ ನಿರೂಪಿಸಿರಿ.

**ವೈಶಂಪಾಯನ:-** ಜನಮೇಜಯ, ಕೃತಯುಗದ ಅವಧಿ ನಾಲ್ಕು ಸಾವಿರ ದೇವಮಾನದ ವರ್ಷ. ಅದಕ್ಕೆ ನಾಲ್ಕುನೂರು ವರ್ಷ ಪೂರ್ವಸಂಧ್ಯೆ ನಾಲ್ಕುನೂರು ವರ್ಷ ಉತ್ತರ ಸಂಧ್ಯೆ. ಆಗ ಧರ್ಮ ತನ್ನ ನಾಲ್ಕು ಕಾಲುಗಳ ಮೇಲೆ ನಿಂತಿರುತ್ತದೆ. ತ್ರೇತಾಯುಗದ ಅವಧಿ ಮೂರು ಸಾವಿರ ವರ್ಷ. ಮುನ್ನೂರು ವರ್ಷ ಪೂರ್ವಸಂಧ್ಯೆ ಮುನ್ನೂರು ವರ್ಷ ಉತ್ತರ ಸಂಧ್ಯೆ. ಆಗ ಧರ್ಮ ದ್ವಿಪಾದ, ಅಧರ್ಮ, ತ್ರಿಪಾದ, ದ್ವಾಪರ ಯುಗದ ಅವಧಿ ಎರಡು ಸಾವಿರ ದಿವ್ಯ ವರ್ಷ. ಎರಡು ನೂರು ವರ್ಷ ಪೂರ್ವಸಂಧ್ಯೆ ಎರಡು ನೂರು ವರ್ಷ ಉತ್ತರ ಸಂಧ್ಯೆ ಆಗ ಧರ್ಮ ದ್ವಿಪಾದ, ಅಧರ್ಮ ತ್ರಿಪಾದ, ಕಲಿಯುಗದ ಅವಧಿ ಒಂದು ಸಾವಿರ ದಿವ್ಯ ವರ್ಷ. ಪೂರ್ವಸಂಧ್ಯೆ ಒಂದು ನೂರು ವರ್ಷ. ಉತ್ತರ ಸಂಧ್ಯೆ ಒಂದು ನೂರು ವರ್ಷ ಹೀಗೆ ಒಟ್ಟು ಹನ್ನೆರಡು ಸಾವಿರ ದೇವತಾ ಮಾನದ ವರ್ಷಗಳಿಗೆ ಒಂದು ಮಹಾಯುಗ ಅಥವಾ ದಿವ್ಯಯುಗ ಎಂದು ಕರೆಯುವರು. ಇಂಥ ಸಾವಿರ ದಿವ್ಯಯುಗಗಳು ತಿರುಗಿದರೆ ಬ್ರಹ್ಮದೇವರ ಒಂದು ದಿನ ಆಗುವುದು. ಇಂಥ ಎಪ್ಪತ್ತೊಂದು ಮಹಾಯುಗಗಳಕಾಲವು ಒಂದು ಮನ್ವಂತರ ಎನಿಸುತ್ತದೆ. ಬ್ರಹ್ಮದೇವರ ಒಂದು ದಿನಕ್ಕೆ ಮಹಾಕಲ್ಪ ಎನ್ನುವರು. ಈ ಒಂದು ಕಲ್ಪದಲ್ಲಿ ಅಥವಾ ಬ್ರಹ್ಮದೇವರ ಒಂದು ದಿನದಲ್ಲಿ ಹದಿನಾಲ್ಕು ಮನ್ವಂತರಗಳು ತಿರುಗುವವು. ಇಂಥ ಸಾವಿರ ಮಹಾಯುಗಗಳು ಅಂದರೆ ಬ್ರಹ್ಮದೇವರ ಒಂದು ದಿವಸ ಈ ಬ್ರಹ್ಮದೇವರ ಒಂದು ದಿನ ಮುಗಿದ ಬಳಿಕ ದೈನಂದಿನ ಪ್ರಳಯ ಆಗುವುದು. ಅನಂತರ ಇಷ್ಟೇ ಅವಧಿಯ ಬ್ರಹ್ಮದೇವರ ರಾತ್ರಿ ಕಾಲ. ಬ್ರಹ್ಮದೇವರ ಆಯುಷ್ಯ ಬ್ರಹ್ಮಮಾನದ ಒಂದು ಸಾವಿರ ವರ್ಷ. ಅನಂತರದಲ್ಲಿ ಮಹಾಪ್ರಳಯ. ಅನಂತರ ಮತ್ತೆ ಹೊಸ ಸೃಷ್ಟಿ. ಹೊಸ ಬ್ರಹ್ಮ. ಹೊಸ ಪ್ರಪಂಚ. ಹೀಗೆ ಕಾಲಚಕ್ರವು ತಿರುಗುತ್ತಲೇ ಇರುವುದು.

ಹಿಂದೆ ಮಾರ್ಕಂಡೇಯ ಮುನಿ ಪರಮಾತ್ಮನ ಈ ಪ್ರಳಯ ಲೀಲೆಯನ್ನು ನೋಡಬೇಕು ಎಂದು ತಪಸ್ಸು ಮಾಡಿ ಬೇಡಿಕೊಂಡ. ಅವನ ಅಪೇಕ್ಷೆಯನ್ನು ಭಗವಂತ ಪೂರ್ಣ ಮಾಡಿದ. ಮಹರ್ಷಿಯು ತನ್ನ ಆಶ್ರಮದಲ್ಲಿ ಕುಳಿತುಕೊಂಡಾಗಲೇ ಭಯಂಕರ ಮಳೆ ಬಿರುಗಾಳಿ. ತೆರಪಿಲ್ಲದ ವೃಷ್ಟಿಯಿಂದ ಲೋಕವೆಲ್ಲವೂ ಜಲಮಯ ಸಮುದ್ರಗಳೇ ಉಕ್ಕೇರಿ ಮಳೆನೀರು ಜಗತ್ತಿನ ಒಡಲನ್ನು ತುಂಬಿ ಏಕಾರ್ಣವ ಸಾಗರದ ಭೋರ್ಗರೆತ. ಎಲ್ಲಿ ನೋಡಿದಲ್ಲೆಲ್ಲ ನೀರೇ ನೀರು. ಜಲಪ್ರಳಯ, ಆ ಜಲಪ್ರಳಯದ ಪರ್ದೆರೆಗಳ ಮಧ್ಯದಲ್ಲಿ ಬಿದ್ದ ಮಾರ್ಕಂಡೇಯ ಮುನಿಯು ಕಕ್ಕಾಬಿಕ್ಕಿ. ಈಸಿ ಕೈಸೋತು ಕಣ್ಣು ಕಣ್ಣು ಬಿಡತೊಡಗಿದ. ಆಗ ಒಂದು ಆಲದ ಎಲೆಯ ಮೇಲೆ ಒಂದು ಶಿಶು. ಆ ಸುಂದರವಾದ ಮಗು ಮೇಘಗಂಭೀರ ಧ್ವನಿಯಿಂದ "ಮಾರ್ಕಂಡೇಯ, ಹೆದರಬೇಡ, ವತ್ಸ, ನನ್ನ ಕಡೆ ಬಾ" ಎಂದು ಕರೆಯಿತು. ತೆರೆಗಳ ಮಧ್ಯದಲ್ಲಿ ಬಿದ್ದು, ಎದ್ದು ತೂರಾಡಿ, ತೇಲಾಡಿ, ನೀರು ಕುಡಿದು ಕೈ ಸೋತು ಈಸಲಾರದೆ, ಮುಳುಗಲೊಲ್ಲದೆ, ಸಾವು ನೋವುಗಳ ಜೋಕಾಲಿಯಲ್ಲಿ ತೂಗಾಡುತ್ತಿದ್ದರೂ ಮಾರ್ಕಂಡೇಯನ ಅಹಂ ಬುದ್ಧಿ ಹೋಗಿರಲಿಲ್ಲ. "ತಪಸ್ಸಿನಲ್ಲಿಯೇ ಮುಪ್ಪಾದ ತನ್ನಂಥ ಹಿರಿಯ ವಯೋವೃದ್ಧ ತಪೋವೃದ್ಧನಾದ ಜ್ಯೇಷ್ಠ ಶ್ರೇಷ್ಠ ಮನುಷ್ಯನನ್ನು ತಲೆಯ ಮೇಲಿನ ಮಾಸ ಆರದ ಈ ತರಳ ಬಾಲಕ 'ವತ್ಸ', ಎಂದು ಕೂಗುವನಲ್ಲ? ಮಾರ್ಕಂಡೇಯ ಎಂದು ಏಕವಚನದಲ್ಲಿ ಅವಮಾನ ಮಾಡಿ ಕರೆಯಬೇಕಾದರೆ, ಈ ಚೋಟುದ್ದ ಬಾಲಕನಿಗೆ ಎಷ್ಟು ಗರ್ವ! ಎಂದು ಅಭಿಮಾನದಿಂದ ಬೇಗಿ ಅವನು ಕರೆದರೂ ಅವನ ಬಳಿಗೆ ಹೋಗಲಿಲ್ಲ. ಆಗ

ಮತ್ತೆ ತೆರೆಯ ತೊಟ್ಟಿಲಲ್ಲಿ ತೂಗಾಡುವ ಆ ಸುಂದರ ಬಾಲಕ ಮಾತನಾಡಿದ. "ವತ್ಸ ಮಾರ್ಕಂಡೇಯ, ನಾನು ನಿನ್ನ ತಂದೆ, ಗುರು, ನಿನಗೆ ಪ್ರಳಯ ದರ್ಶನ ಮಾಡಿಸುತ್ತೇನೆ. ಎಂದು ವರ ಕೊಟ್ಟಿದ್ದೆ. ತೋರಿಸಿದೆ. ನೋಡು, ನಾನೇ ನಾರಾಯಣ" ಹೀಗೆ ನುಡಿದ ಆ ಬಾಲಕನ ನಿಶ್ವಾಸದ ಅಲೆಯಗುಂಟ ಮಾರ್ಕಂಡೇಯ ಅವನ ಜಠರದಲ್ಲಿ ಪ್ರವೇಶಿಸಿದ. ಅಲ್ಲಿಯೂ ಒಂದು ಬ್ರಹ್ಮಾಂಡ. ಅಲ್ಲಿಯೂ ಒಂದು ಜಲಪ್ರಳಯ. ಅದರಲ್ಲಿಯೂ ಆಲದ ಎಲೆಯ ಮೇಲೆ ತೇಲುವ ಬಾಲಕೃಷ್ಣ. ಮತ್ತೊಂದು ಉಸಿರಿನ ಅಲೆಯಿಂದ ಮಾರ್ಕಂಡೇಯ ಹೊರಗೆ ಬಂದ. ಭಗವಂತನ ಮಹಿಮೆ ಕಂಡು ವಂದಿಸಿದ. ಮುಂದಿನ ನಿಮಿಷದಲ್ಲಿ ತನ್ನ ಆಶ್ರಮದಲ್ಲಿ ಮುನಿ ಮೊದಲಿನಂತೆ ಸ್ವಸ್ಥ, ಆಶ್ವಸ್ತ, ಸಂತುಷ್ಟ.

ಆ ಪ್ರಳಯ ಜಲಧಿಯಲ್ಲಿ ಪವಡಿಸಿದ ಪರಬ್ರಹ್ಮನ ಹೊಕ್ಕಳಲ್ಲಿ ಒಂದು ಸುಂದರವಾದ ಹೊಂದಾವರೆ ಹುಟ್ಟಿತು. ಅದೇ ಪುಷ್ಕರ. ಅದಕ್ಕೆ "ಲೋಕಪದ್ಮ" ಎನ್ನುವರು. ಆ ಪುಷ್ಕರದಿಂದಲೇ ಮೊಟ್ಟ ಮೊದಲು ಹುಟ್ಟಿದವನು ಚತುರ್ಮುಖಬ್ರಹ್ಮ. ಅವನಿಂದಲೇ ಭಗವಂತನ ಅಜ್ಞಾನುಸಾರವಾಗಿ ಆ ಲೋಕಪದ್ಮದ ಹದಿನಾಲ್ಕು ದಳಗಳಂತಿರುವ ಹದಿನಾಲ್ಕು ಲೋಕದ ನಿರ್ಮಾಣ. ಆ ಪುಷ್ಕರದಲ್ಲಿ ಮೊಟ್ಟಮೊದಲು ಹುಟ್ಟಿದ್ದು ಮಹಾಬಲಿಷ್ಠರಾದ ಮಧು, ಮತ್ತು ಕೈಟಭ ಎಂಬ ದೈತ್ಯರು ಬ್ರಹ್ಮದೇವರ ಬಳಿಗೆ ಬಂದು 'ನಮ್ಮೊಡನೆ ಯುದ್ಧಮಾಡಲು ಬಾ' ಎಂದು ಕರೆದರು. ಬ್ರಹ್ಮನನ್ನೇ ಕಬಳಿಸ ಬಂದ ಆ ದೈತ್ಯರನ್ನು ಮಹಾವಿಷ್ಣುವು ಲೀಲೆಯಿಂದ ಸಂಹಾರಮಾಡಿದ ಪದ್ಮಾಸನಾದೇವಿಯಾದ ಮಹಾಲಕ್ಷ್ಮಿಯೆ ಪೃಥ್ವೀರೂಪದಿಂದ ಆ ಲೋಕಪದ್ಮದ ಒಳಭಾಗವನ್ನೂ ವ್ಯಾಪಿಸಿದಳು. ಆ ಪುಷ್ಕರದ ಗಟ್ಟಿ ಎಸಳುಗಳು ದೇಹದ ಅಸ್ಥಿರೂಪವಾದ ಮೇರು, ಮಂದರ, ಹಿಮಗಿರಿ, ನೀಲ, ನಿಷಿಧ, ವಿಂಧ್ಯಾದ್ರಿ ಮುಂತಾದ ಬೆಟ್ಟಗಳು. ಅದರ ಮಧ್ಯದ ಜಂಬೂದ್ವೀಪವೇ ಕರ್ಮಭೂಮಿ. ಆ ಪದ್ಮದ ಗರ್ಭದಿಂದ ಸ್ರವಿಸಿದ ನೀರೇ ನದೀರೂಪ ತೀರ್ಥ. ಅದರ ಮೇಲಿನ ಪಕಳೆಗಳೇ ಊರ್ಧ್ವಲೋಕಗಳು, ಅಧೋಮುಖ ಪಕಳೆಗಳೇ ಪಾತಾಳ. ಹೀಗೆ ನಾರಾಯಣ ಋಷಿಯ ಅಂಗದಿಂದ ಹುಟ್ಟಿದ್ದರಿಂದ ಇದ್ದಕ್ಕೆ ಪುಷ್ಕರ ಪ್ರಾದುರ್ಭಾವ ಎನ್ನುವರು.

ಪುಷ್ಕರದಲ್ಲಿ ಶ್ರೀಹರಿಯಿಂದ ಹುಟ್ಟಿದ ಬ್ರಹ್ಮ ಮುಂದೆ ಬಹುಕಾಲ ತಪಸ್ಸನ್ನು ಮಾಡಿದ. ಭಗವಂತನ ಆದೇಶದಂತೆ ತನ್ನನ್ನೇ ಎರಡು ವಿಭಾಗ ಮಾಡಿ ನಾರಾಯಣಾತ್ಮಕರಾದ ಯೋಗಾಚಾರ್ಯ ಮತ್ತು ಕಪಿಲ ಎಂಬ ಇಬ್ಬರ ಪ್ರಾದುರ್ಭಾವಕ್ಕೆ ಕಾರಣನಾದ. ಅನಂತರ ಸೃಷ್ಟಿ ಸರ್ವತೋಮುಖವಾಗಿ ಬೆಳೆಯಲಿ ಎಂಬ ಉದ್ದೇಶದಿಂದ ತನ್ನನ್ನೇ ಗಂಡು ಹೆಣ್ಣು ಎಂದು ಎರಡು ವಿಭಾಗ ಮಾಡಿ ಮೈಥುನ ಧರ್ಮದಿಂದ ಪ್ರಜಾ ಸೃಷ್ಟಿಮಾಡಿದ. ಬ್ರಹ್ಮದೇವನು ಈ ಮೊದಲೇ ಸೃಷ್ಟಿಮಾಡಿದ ಮಾನಸ ಪುತ್ರರಲ್ಲಿ ಕೆಲವರು ಊರ್ಧ್ವರೇತಸ್ಕರಾಗಿ ಅಧ್ಯಾತ್ಮರಹಿತರಾದರೂ ದಕ್ಷ, ಮರೀಚಿ, ಅತ್ರಿ, ಪುಲಸ್ತ್ಯ, ಪುಲಹ, ಕ್ರುತ, ವಶಿಷ್ಠ, ಗೌತಮ, ಭೃಗು, ಆಂಗಿರ ಮಹರ್ಷಿಗಳು ದಾಂಪತ್ಯ ಧರ್ಮದಿಂದ ಪ್ರಜಾ ಸೃಷ್ಟಿಯನ್ನು ಮಾಡಿ ಪ್ರಪಂಚವನ್ನು ತುಂಬಿದರು. ಹೀಗೆ ಪುಷ್ಕರ ಪ್ರಾದುರ್ಭಾವದಲ್ಲಿ ದಕ್ಷನ ದೌಹಿತ್ರ ಸಂತತಿಯಿಂದ ವಿಪುಲವಾಗಿ ಲೋಕವೃದ್ಧಿಯಾಯಿತು. ಆ ಪುಷ್ಕರ ಪರ್ವದಲ್ಲಿ ಲೋಕಶಿಕ್ಷಾರ್ಥವಾಗಿ ಸ್ವಯಂ ನಾರಾಯಣನೇ ಮುನಿಯಾಗಿ ತಪಸ್ಸನ್ನು ಆಚರಿಸಿದ. ಅವನಿಂದ ಸೃಷ್ಟರಾದ ಬ್ರಹ್ಮ, ವಾಯು, ರುದ್ರ, ಇಂದ್ರ ಮುಂತಾದ ದೇವತೆಗಳೂ ತಪಂಗೈದು ಪುಷ್ಕರದಿಂದಲೇ ಅಗ್ನಿಯನ್ನು ಪಡೆದು ಯಜ್ಞಮಾಡಿ ಬ್ರಹ್ಮದಂಡ, ಚಕ್ರ, ಮುಸಲ, ಹಲ, ವಜ್ರ, ಪಾಶ ಮುಂತಾದ ಅಸ್ತ್ರಗಳನ್ನು ಹೊಂದಿದರು.

ದೈತ್ಯರೂ ಕೂಡ ತಪಸ್ಸುಮಾಡಿ ಆಗ್ನೆಯಾಸ್ತ್ರ, ವರುಣಾಸ್ತ್ರ, ವಾಯವ್ಯಾಸ್ತ್ರ, ರೌದ್ರಾಸ್ತ್ರ, ಇಂದ್ರಾಸ್ತ್ರ ಮುಂತಾದ ಘೋರ ಅಸ್ತ್ರಗಳನ್ನೂ ಆಯುಧಗಳನ್ನೂ ಪಡೆದರು. ದೇವತೆಗಳು ಭೂಲೋಕದಲ್ಲಿ ವೇನನ ಮಗನಾದ ಪೃಥುರಾಜನಿಗೆ ಪಟ್ಟಾಭಿಷೇಕ ಮಾಡಿದರು. ಅವನು ಸದಾಕಾಲವು ಯಜ್ಞಯಾಗಾದಿಗಳನ್ನು ಮಾಡುತ್ತಾ ಪ್ರಜಾಪಾಲನೆಯಲ್ಲಿ ನಿರತನಾಗಿ ಸಕಲ ಜೀವರಾಶಿಗಳನ್ನು ಸಲಹಲಿ ಎಂದು ಹಾರೈಸಿದರು.

ಒಮ್ಮೆ ಗಂಧಮಾದನ ಪರ್ವತದಲ್ಲಿ ವಿಶ್ರಮಿಸಿದ ದೈತ್ಯರು ಜಗತ್ತಿನಲ್ಲಿದ್ದ ಔಷಧಿ ವನಸ್ಪತಿಗಳನ್ನೆಲ್ಲ ಹಾಲಿನ ಹೆಗ್ಗಡಲಿನಲ್ಲಿ ಹಾಕಿ ಅದನ್ನು ಕಡೆದು ಅಮೃತವನ್ನು ಪಡೆಯ ಬೇಕೆಂದು ಹವಣಿಸಿದರು. ಮಂದಾರ ಪರ್ವತವನ್ನು ಕಡಗೋಲು ಮಾಡಬೇಕೆಂದು ಪ್ರಯತ್ನಪಟ್ಟರು. ಅದು ಅಶಕ್ಯವಾಯಿತು. ಆಗ ಬ್ರಹ್ಮದೇವರ ಆದೇಶದಂತೆ ದೇವತೆಗಳ ಜೊತೆಗೆ ಒಪ್ಪಂದ ಮಾಡಿಕೊಂಡು ಇಬ್ಬರೂ ಕೂಡಿ ಮಂದಾರಪರ್ವತವನ್ನು. ಹಾಲಿನ ಹೆಗ್ಗಡಲಿನಲ್ಲಿ ತಂದಿಟ್ಟು ಕಡೆದರು. ಅದರಿಂದ ಉಚ್ಚೈಶ್ರವ, ಐರಾವತ, ಚಂದ್ರ, ಲಕ್ಷ್ಮಿ, ಮದ್ಯ, ಕೌಸ್ತುಭ, ಧನ್ವಂತರಿ, ಅಮೃತ ಮುಂತಾದವುಗಳು ಜನಿಸಿದವು. ದೇವತೆಗಳು ಅಮೃತವನ್ನು ಕುಡಿದರು. ದೈತ್ಯರಿಗೆ ಒಂದು ಹನಿಯೂ ದೊರಕಲಿಲ್ಲ. ಅಮೃತವನ್ನು ಕುಡಿಯ ಹೊರಟ ರಾಹುವಿನ ತಲೆಯನ್ನು ವಿಷ್ಣು ಕತ್ತರಿಸಿದ. ಅದರಿಂದ ಸುರಾಸುರ ಸಂಗ್ರಾಮ ನಡೆದು ದೈತ್ಯರು ಪರಾಜಿತರಾದರು.

ಅನಂತರ ಹಿರಣ್ಯ ಕಶಿಪು ಗಂಗಾಯಮುನೆಯ ಮಧ್ಯಭಾಗದಲ್ಲಿ ರಾಜಸೂಯಯಾಗ ಮಾಡಿದ. ಮುಂದೆ ಅವನ ಕುಲದಲ್ಲಿಯೇ ಹುಟ್ಟಿದ ಬಲಿಚಕ್ರವರ್ತಿಯೂ ಅಲ್ಲಿಯೇ ಯಜ್ಞಮಾಡಿದ. ವಿಷ್ಣು ವಾಮನರೂಪದಿಂದ ಬಂದು ಮೂರುಪಾದ ಭೂಮಿಯನ್ನು ಅವನಿಂದ ಪಡೆದು ಮೂರು ಲೋಕಗಳನ್ನೇ ಆಕ್ರಮಿಸಿದ. ದಾನ ನೀಡಿದ ಬಲಿಯನ್ನು ದೈತ್ಯ ಪರಿವಾರ ಸಹಿತ ಪಾತಾಳಕ್ಕೆ ಕಳಿಸಿದ.

ಒಮ್ಮೆ ಪ್ರಚೇತಸನ ಮಗನಾದ ದಕ್ಷನಿಂದ ಅಶ್ವಮೇಧ ಯಜ್ಞವನ್ನು ಮಾಡಿಸಿದರು. ಅದನ್ನು ನಂದಿ ಹಾಗೂ ತನ್ನ ಪರಿವಾರದೊಂದಿಗೆ ಶಂಕರನು ಬಂದು ಧ್ವಂಸ ಮಾಡಿದ. ಆಗ ಆ ಯಜ್ಞವು ಮೃಗರೂಪವನ್ನು ತೆಗೆದುಕೊಂಡು ಓಡತೊಡಗಿತು. ಪಿನಾಕಧನುಸ್ಸನ್ನು ಹಿಡಿದು ಶಿವ ಬೇಡನಾಗಿ ಬೆನ್ನಟ್ಟಿದ. ಅದು ಬ್ರಹ್ಮನಿಗೆ ಶರಣುಹೋಯಿತು. ಆಗ ಬ್ರಹ್ಮನು ಆ ಮೃಗರೂಪಿ ಯಜ್ಞವನ್ನು ಮೃಗಶಿರಾ ಎಂಬ ನಕ್ಷತ್ರವನ್ನಾಗಿ ಮಾಡಿ ರುದ್ರನೊಂದಿಗೆ ಅಂತರಿಕ್ಷದಲ್ಲಿ ಸ್ಥಿರವಾಗಿ ನಿಲ್ಲಿಸಿದ. ಇತ್ತ ದಕ್ಷನ ಯಜ್ಞಭೂಮಿಯಲ್ಲಿ ವಿಷ್ಣು ಹಾಗೂ ಶಿವರಲ್ಲಿ ಘನಘೋರ ಯುದ್ಧವು ನಡೆಯಿತು. ವಿಷ್ಣುವು ರುದ್ರನ ಕೊರಳನ್ನು ಅಮುಕಿದ. ಅದರಿಂದ ಅದು ಕಪ್ಪಾಗಿ ಶಿವ 'ನೀಲಕಂಠ' ಎನಿಸಿದ. ಆಗ 'ದೇವಾಧಿದೇವ, ನೀನು ನನ್ನನ್ನು ಕ್ಷಮಿಸು' ಎಂದು ಅವನನ್ನು ಕೇಳಿಕೊಂಡ. ದೇವತೆಗಳೂ ಪ್ರಾರ್ಥಿಸಿಕೊಂಡರು. ಇದನ್ನು ಕಂಡು ಹೊಡೆಯಲು ಬಂದ ಶಿವನ ಮತ್ತೊಂದು ಸ್ವರೂಪವಾದ ನಂದಿಯನ್ನು ನೋಡಿ ವಿಷ್ಣು ಮಂದಹಾಸಮಾಡಿ ಸ್ತಬ್ಧಗೊಳಿಸಿದ. ಅನಂತರ ಹರಿಯು ರುದ್ರನಿಗೆ ಯಜ್ಞ ಭಾಗವನ್ನು ನೀಡಿದ. ಅಂದಿನಿಂದ ರುದ್ರನು 'ವಿಷ್ಣು ಧರ್ಮ ಪರೋ ನಿತ್ಯಂ ತ್ಯಕ್ತಕಾಮಃ ಸುರೋತ್ತಮಃ'' ಆಶೆ ಬಿಟ್ಟು ವಿಷ್ಣು ಪ್ರೀತಿಕರವಾದ ಧರ್ಮವನ್ನು ಮಾಡುವುದರಲ್ಲಿಯೇ ಆಸಕ್ತನಾದ. ಇದೆಲ್ಲವೂ ಪುಷ್ಕರ ಪ್ರಾದುರ್ಭಾವದಲ್ಲಿ ನಡೆದ ಘಟನೆ. ಇದನ್ನು ಹೇಳಿ ಕೇಳಿದವರಿಗೆ ಸ್ವರ್ಗಫಲ.

## ಹಿರಣ್ಯಾಕ್ಷ ಸಂಹಾರ

ಸ್ವರ್ಗದ ಆದಿಕಾಲದಲ್ಲಿ ಈ ಪೃಥ್ವಿಯು ರಸಾತಳದಲ್ಲಿ ಮುಳುಗಿದ್ದನ್ನು ಕಂಡು ವಿಷ್ಣುವು ಯಜ್ಞವರಾಹರೂಪವನ್ನು ಧಸಿದ. ಅದನ್ನು ಮೇಲಕ್ಕೆ ತಂದ ತನ್ನ ಕೋರೆದಾಡೆಯಿಂದ ಮುಂದೆ ಓಂಕಾರದಿಂದ ಜಗತ್ತಿನ ಸೃಷ್ಟಿಯಾಯಿತು. ಅನಂತರ ಹರಿಯ ಆಜ್ಞೆಯಂತೆ ಬ್ರಹ್ಮನು ದೇವರಾಜ್ಯದಲ್ಲಿ ಇಂದ್ರನನ್ನು 'ದೇವರಾಜ' ಎಂದು ನಿಯೋಜಿಸಿ ಪಟ್ಟಾಭಿಷೇಕಗೈದ. ಯಜ್ಞ, ತಪಸ್ಸು, ಗ್ರಹ, ನಕ್ಷತ್ರ, ಬ್ರಾಹ್ಮಣ, ಔಷಧಿಗಳ ಮೇಲೆ ಚಂದ್ರನನ್ನು ಅಧಿರಾಜನನ್ನಾಗಿ ಮಾಡಿದ. ಇದರಂತೆ ಪ್ರಜಾಪತಿಗಳ ಮೇಲೆ ದಕ್ಷನನ್ನು, ನೀರಿಗೆ ವರುಣನನ್ನು ಪಿತೃಗಳಿಗೆ ಕಾಲನನ್ನು, ಗಂಧ, ಶಬ್ದ, ಆಕಾಶ, ಬಲ, ಇವುಗಳಿಗೆ ವಾಯುವನ್ನು, ಮೃತ್ಯು, ಗೋವು, ಭೂತ, ಪಿಶಾಚ, ರೋಗ, ವ್ರತಗಳಿಗೆ ಮಹಾದೇವನನ್ನು, ಯಕ್ಷ, ರಾಕ್ಷಸ, ಐಶ್ವರ್ಯಗಳಿಗೆ ಕುಬೇರನನ್ನು, ಹಾವುಗಳಿಗೆ ವಾಸುಕಿಯನ್ನು, ಮೇಘ, ನದಿ, ಸಮುದ್ರ, ವೃಷ್ಟಿಗಳಿಗೆ ಪರ್ಜನ್ಯನನ್ನು, ಗಂಧರ್ವರಿಗೆ ಚಿತ್ರರಥನನ್ನು, ನಾಲ್ಕುಕಾಲಿನ ಪ್ರಾಣಿಗಳಿಗೆ ನಂದಿಯನ್ನು ದೈತ್ಯರಿಗೆ ಹಿರಣ್ಯಾಕ್ಷನನ್ನು, ಅಧಿನಾಯಕರನ್ನಾಗಿ ನಿಯಮಿಸಿದ. ಹಿರಣ್ಯಾಕ್ಷಪನನ್ನು ಯುವರಾಜನನ್ನಾಗಿ ಮಾಡಿದ. ಆಗ ಬಲದರ್ಪಿತನಾದ ಹಿರಣ್ಯಾಕ್ಷನು ಇಂದ್ರಾದಿ ದೇವತೆಗಳ ಮೇಲೆ ದಾಳಿಮಾಡಿದ. ಭಯ ಭ್ರಾಂತರಾದ ದೇವತೆಗಳು ಶ್ರೀಹರಿಗೆ ಶರಣು ಹೋದರು. ಆಗ ಶ್ರೀಹರಿಯು ತನ್ನ ದಿವ್ಯವಾದ ಶಂಖವನ್ನು ಊದಿದ. ಕುಪಿತನಾದ ಹಿರಣ್ಯಾಕ್ಷ ಸಿಟ್ಟಿನಿಂದ ತನ್ನ ಅಮೋಘವಾದ ಶಕ್ತ್ಯಾಯುಧವನ್ನು ಆ ವರಾಹರೂಪಿ ವಿಷ್ಣುವಿನ ಎದೆಯ ಮೇಲೆ ತೂರಿದ. ಅದನ್ನು ಹರಿಯು ಹುಂಕಾರ ಮಾತ್ರದಿಂದ ನಾಶಪಡಿಸಿ ಚಕ್ರದಿಂದ ಹಿರಣ್ಯಾಕ್ಷನ ತಲೆಯನ್ನು ಕತ್ತರಿಸಿ ಹಾಕಿದ. ಅನಂತರ ಹಿರಣ್ಯಾಕ್ಷನಿಂದ ಬಂಧಿಸಲ್ಪಟ್ಟ ಎಲ್ಲ ದೇವತೆಗಳನ್ನು ಬಿಡುಗಡೆ ಮಾಡಿ ಅವರಿಗೆ ತ್ರಿಲೋಕದ ಅಧಿಪತ್ಯವನ್ನು ಕರುಣಿಸಿದ.

ಹಿಂದೆ ಪರ್ವತಗಳಿಗೆಲ್ಲ ರೆಕ್ಕೆಗಳು ಇದ್ದವು. ಆ ಪರ್ವತಗಳು ಭೂಲೋಕದಿಂದ ಹಾರಿ, ಪಾತಾಳಲೋಕಕ್ಕೆ ಹೋಗಿ, ಅಲ್ಲಿ ರಾಜನಾದ ಹಿರಣ್ಯಾಕ್ಷನಿಗೆ ಹೇಳಿದವು. ''ಭೂಲೋಕ ಹಾಗೂ ಸ್ವರ್ಗಲೋಕಗಳಲ್ಲಿ ನಿಮ್ಮ ಸಹೋದರರಾದ ದೇವತೆಗಳದೇ ಅಧಿಪತ್ಯ ನಡೆದಿದೆ. ನೀವೂ ಕಶ್ಯಪರ ಮಕ್ಕಳೇ, ನೀವೇಕೆ ಪೃಥ್ವಿಯ ಮೇಲೆ ನಿಮ್ಮ ಅಧಿಕಾರವನ್ನು ಸ್ಥಾಪಿಸುವುದಿಲ್ಲ?'' ಎಂದು ಕೇಳಿ ಹಿರಣ್ಯಾಕ್ಷನನ್ನು ದೇವತೆಗಳ ಮೇಲೆ ಯುದ್ಧಕ್ಕೆ ಪ್ರಚೋದಿಸಿದ್ದವು. ಇಂದ್ರನು ಸಿಟ್ಟಿನಿಂದ ತನ್ನ ವಜ್ರಾಯುಧದ ಮೂಲಕ ಬೆಟ್ಟಗಳ ರೆಕ್ಕೆಯನ್ನು ಕತ್ತರಿಸಿದ. ಆದರೆ ಮೈನಾಕ ಪರ್ವತವು ಮಾತ್ರ 'ನಾನು ಸಮುದ್ರದ ಒಳಗೆ ಒಂದೇ ಕಡೆಗೆ ನೆಲೆಸುತ್ತೇನೆ' ಎಂದು ಬೇಡಿಕೊಂಡಿದ್ದರಿಂದ ಅದರ ರೆಕ್ಕೆಗಳನ್ನು ಕತ್ತರಿಸಲಿಲ್ಲ. ಹಿಂದೆ ಕೃತಯುಗದಲ್ಲಿ ದೈತ್ಯರ ಸಾರ್ವಭೌಮನಾದ ಹಿರಣ್ಯಕಶಿಪು ಹನ್ನೊಂದು ಸಾವಿರ ಐದನೂರು ವರ್ಷ ನೀರಿನಲ್ಲಿ ನಿಂತು ಮೌನದಿಂದ ತಪಸ್ಸನ್ನು ಮಾಡಿದ. ಅವನ ತಪಸ್ಸಿಗೆ ಮೆಚ್ಚಿ ಬ್ರಹ್ಮ ಪ್ರತ್ಯಕ್ಷನಾಗಿ ಬೇಕಾದ ವರ ಬೇಡು ಎಂದ.

**ಹಿರಣ್ಯಕಶಿಪು:-** ''ಪಿತಾಮಹ, ನಾನು ದೇವತೆಗಳಿಂದಾಗಲೀ, ದಾನವರಿಂದಾಗಲೀ, ಮಾನವರಿಂದಾಗಲೀ ಸಾಯಬಾರದು. ಋಷಿಗಳು ನನ್ನನ್ನು ಶಪಿಸಬಾರದು. ಶಸ್ತ್ರದಿಂದ ಅಸ್ತ್ರದಿಂದ ಬೆಟ್ಟದಿಂದ, ಮರಗಳಿಂದ, ಹಸಿಯಾದದ್ದರಿಂದ, ಒಣಗಿದ್ದರಿಂದ ನಾನು ಸಾಯಬಾರದು. ಹಗಲು, ರಾತ್ರಿ, ಸ್ವರ್ಗ, ಪಾತಾಳ, ಆಕಾಶ, ಭೂಮಿ, ಎಲ್ಲಿಯೂ ನಾನು ಸಾಯಬಾರದು. ನಾನು ಸಾಯುವುದೇ ಆದರೆ ಒಂದೇ ಹೊಡೆತದಿಂದ ನನ್ನನ್ನು ನನ್ನ ಭೃತ್ಯ ಪರಿವಾರ ವಾಹನಗಳನ್ನೂ ಕೊಲ್ಲಲು ಸಮರ್ಥನಾದ ಮನುಷ್ಯನಿಂದ ಮಾತ್ರ ನಾನು ಸಾಯಬೇಕು.''

'ತಥಾಸ್ತು' ಎಂದು ಹೇಳಿದ ಚತುರ್ಮುಖಿ. ವರಪಡೆದು ಬಂದಕೂಡಲೇ ಹಿರಣ್ಯಕಶಿಪು ಮೊದಲು ಧರ್ಮಿಷ್ಠರಾದ ತಪಸ್ವೀ ಬ್ರಾಹ್ಮಣರನ್ನು ಸಂಹರಿಸಿದ. ದೇವತೆಗಳನ್ನೆಲ್ಲ ಗೆದ್ದ. ಸ್ವರ್ಗವನ್ನೇ ತನ್ನ ವಾಸ್ಥನವನ್ನಾಗಿ ಮಾಡಿಕೊಂಡ. ದೈತ್ಯರಿಗೆ ಯಜ್ಞದಲ್ಲಿ ಭಾಗ ಕೊಡಿಸಿದ.

ಆಗ ದೇವತೆಗಳೆಲ್ಲರೂ ವಿಷ್ಣುವಿಗೆ ಮೊರೆ ಹೊಕ್ಕರು. ಆಗ ಎಲ್ಲವನ್ನೂ ಬಲ್ಲ ಹರಿಯು ಅರ್ಧ ದೇಹದಿಂದ ಸಿಂಹ. ಇನ್ನರ್ಧದಿಂದ ಮನುಷ್ಯರ ರೂಪವನು ತೆಗೆದು ಕೊಂಡು ಹಿರಣ್ಯಕಶಿಪುವಿನ ಆಸ್ಥಾನಕ್ಕೆ ಆಗಮಿಸಿದ. ಹಿರಣ್ಯಕಶಿಪು ದಿವ್ಯ ಸುಂದರವಾದ ತನ್ನ ಸಭೆಯಲ್ಲಿ ನಾಲ್ಕು ಮೊಳ ಎತ್ತರವಾದ, ಸೂರ್ಯನಂತೆ ಹೊಳೆಯುವ ಸಿಂಹಾಸನದ ಮೇಲೆ ಕುಳಿತುಕೊಂಡಿದ್ದ. ರಂಭಾ, ಊರ್ವಶಿ, ಮೊದಲಾದ ಅಪ್ಸರೆಯರ ನೃತ್ಯ, ಸಂಗೀತ ಕಾರ್ಯಕ್ರಮ ನಡೆದಿದ್ದವು. ಆಗ ಒಮ್ಮೆಲೇ ಅಲ್ಲಿಗೆ ಆಗಮಿಸಿದ ನರಸಿಂಹರೂಪದ ಶ್ರೀಹರಿಯನ್ನು ಕಂಡು ಎಲ್ಲ ದೈತ್ಯರು 'ಇದೇನು ಅತ್ಯದ್ಭುತ ರೂಪ? ಸಾವಿರ ಚಂದ್ರರ ಕಾಂತಿ ಇದೆ ಈ ಸಿಂಹಕ್ಕೆ' ಎಂದು ಬೆರಗಾದರು. ಆಗ ಹಿರಣ್ಯಕಶ್ಯಪನ ಪುತ್ರನಾದ ಪ್ರಹ್ಲಾದನು ಮಾತ್ರ ದಿವ್ಯ ದೃಷ್ಟಿಯಿಂದ ಆ ಸಿಂಹವನ್ನು ನೋಡಿ ಸಾಕ್ಷಾತ್ ವಿಷ್ಣುವೇ ಬಂದಿದ್ದಾನೆ ಎಂದು ತಿಳಿದುಕೊಂಡ. ಮತ್ತು ತನ್ನ ತಂದೆಯಾದ ಹಿರಣ್ಯಕಶ್ಯಪನಿಗೆ ಹೇಳಿದ.

**ಪ್ರಹ್ಲಾದ:-** ದೈತ್ಯರಾಜ, ಅರ್ಧಸಿಂಹ, ಅರ್ಧಮನುಷ್ಯ ರೂಪದ ಇಂಥ ನರಸಿಂಹ ರೂಪವನ್ನು ನಾನು ಇಂದಿನವರೆಗೆ ಕಂಡಿಲ್ಲ ಕೇಳಿಲ್ಲ. ದೈತ್ಯರನ್ನೆಲ್ಲ ಸಂಹರಿಸಲಿಕ್ಕಾಗಿಯೇ ಈ ಘೋರ ನರಸಿಂಹ ರೂಪವು ಇಲ್ಲಿಗೆ ಬಂದಿದೆ ಎಂದು ನನ್ನ ಮನಸ್ಸು ಹೇಳುತ್ತಲಿದೆ. ನಾನು, ನೀನು, ಬ್ರಹ್ಮ ಮತ್ತು ಎಲ್ಲ ಬ್ರಹ್ಮಾಂಡವೇ ಇವನ ಶರೀರದಲ್ಲಿ ನನಗೆ ಕಾಣುತ್ತಲಿವೆ. ಹೀಗೆ ಹೇಳಿ ಪ್ರಹ್ಲಾದನು ಆ ನರಸಿಂಹದೇವರ ಧ್ಯಾನವನ್ನು ಅಂತರ್ಮುಖನಾಗಿ ಮಾಡತೊಡಗಿದ. ಆಗ ಹಿರಣ್ಯಕಶಿಪು ''ಈ ಕಾಡು ಪ್ರಾಣಿಯನ್ನು ಕೂಡಲೇ ಹಿಡಿದು ಹಾಕಿರಿ'' ಎಂದು ಗರ್ಜಿಸಿದ. ಅವನ ಅಪ್ಪಣೆಯನ್ನು ಕೇಳಿ ತಕ್ಷಣ ಎಲ್ಲ ದೈತ್ಯವೀರರೂ ಆ ಸಿಂಹದ ಮೇಲೆ ತಮ್ಮ ಶಸ್ತ್ರಾಸ್ತ್ರಗಳನ್ನು ಬಿಡಲು ಆರಂಭಿಸಿದರು. ಆಗ ನಿರ್ಭಯನಾದ ಆ ನರಸಿಂಹನು ಮೊದಲು ಅತ್ಯಂತ ಸುಂದರವಾದ ಹಿರಣ್ಯಕಶ್ಯಪುವಿನ ಸಭೆಯನ್ನೆಲ್ಲ ಮುರಿದು ದೈತ್ಯರ ಎದುರು ನಿಂತುಕೊಂಡ. ಆಗ ಹಿರಣ್ಯಕಶಿಪು ಹಾಗೂ ಉಳಿದೆಲ್ಲ ದೈತ್ಯರು ತಮ್ಮ ವಶದಲ್ಲಿ ಇರುವ ದಂಡಾಸ್ತ್ರ, ಕಾಲಚಕ್ರ, ವಿಷ್ಣುಚಕ್ರ, ಇಂದ್ರಚಕ್ರ, ಪೈತಾಮಹಾಚಕ್ರ, ವಜ್ರ, ಬ್ರಹ್ಮಾಸ್ತ್ರ, ಆಗ್ನೇಯಾಸ್ತ್ರ, ವಾಯವ್ಯಾಸ್ತ್ರ ಮುಂತಾದ ಬಗೆಬಗೆಯ ಅಸ್ತ್ರಗಳನ್ನು ಏಕಕಾಲಕ್ಕೆ ಪ್ರಯೋಗಿಸಿದರು. ಅವೆಲ್ಲವೂ ಆ ಸಿಂಹದ ಮೈ ಮೇಲಿನ ಒಂದು ಕೂದಲನ್ನೂ ಮಣಿಸಲಿಲ್ಲ. ಆಗ ದೈತ್ಯರು ತಮ್ಮ ಬಗೆ ಬಗೆಯ ಮಾಯೆಗಳನ್ನು ಆ ಸಿಂಹದ ಮೇಲೆ ಪ್ರಯೋಗಿಸಿದರು. ಅವೆಲ್ಲವೂ ವ್ಯರ್ಥವಾದವು. ಆಗ ಹಿರಣ್ಯಕಶ್ಯಪು ಒಂದು ಬೆಂಕಿಯ ಮಾಯೆಯನ್ನು ನಿರ್ಮಿಸಿದ. ಆ ಸಿಂಹವನ್ನು ಸುಟ್ಟುಹಾಕಲು ಅದನ್ನು ಆ ವಿಷ್ಣುವಿನ ಮೇಲೆ ಅಟ್ಟಿದ. ಆಗ ದೇವೇಂದ್ರನು ಒಮ್ಮೆಲೇ ಮಳೆ ಸುರಿಸಿ ಅದನ್ನು ಶಮನಗೊಳಿಸಿದ. ಹೀಗೆ ದೈತ್ಯರ ಎಲ್ಲ ಮಾಯೆಗಳೂ ವಿಫಲವಾದ ಬಳಿಕ ದೈತ್ಯರ ರಾಜ್ಯದಲ್ಲಿ ಅಪಶಕುನಗಳು ತೋರತೊಡಗಿದವು. ಬೆಟ್ಟಗಳು ನಡುಗಿದವು. ಭೂಮಿ ಕಂಪಿಸಿತು. ಗಗನದಲ್ಲಿ ಬೆಂಕಿಯ ಉಲ್ಕೆಗಳು ಉರಿದವು. ಧೂಮಕೇತುವು ಮೂಡಿತು ಆಗ ಹಿರಣ್ಯಕಶಿಪು ಶುಕ್ರಾಚಾರ್ಯರಿಗೆ ಕೇಳಿದ - ''ಗುರುಗಳೇ, ಇದು ಯಾವುದರ ಸೂಚನೆ?'' ಎಂದು.

**ಶುಕ್ರ:-** ಇಂಥ ಅಪಶಕನುಗಳು ದೇಶನಾಶ, ಅಥವಾ ರಾಜನ ಬಂಧನವನ್ನು ಸೂಚಿಸುತ್ತವೆ. ನನಗಂತೂ ಸದ್ಯೋ ಭವಿಷ್ಯದಲ್ಲಿ ನಿನಗೆ ಒಂದು ದೊಡ್ಡ ಅಪಾಯ ಕಾದಿದೆ. ಎನಿಸುವುದು. ರಾಜನೇ, ನಿನಗೆ ಒಳ್ಳೆಯದಾಗಲಿ'' ಎಂದರು ಆಗ ದೈತ್ಯರಾಜನು ಕೈಯಲ್ಲಿ ತನ್ನ ಘೋರ ಗಧೆಯನ್ನು ಹಿಡಿದುಕೊಂಡು ನರಸಿಂಹದೇವರು ನಿಂತಲ್ಲಿ ಧಾವಿಸಿದ. ಅದೇ ವೇಳೆಯಲ್ಲಿ ದೇವತೆಗಳು ಬಂದು-''ಈ ದುಷ್ಟ ದೈತ್ಯನನ್ನು ಬೇಗನೇ ಸಂಹರಿಸು'' ಎಂದು ಪ್ರಾರ್ಥಿಸಿದರು. ಆಗ ಆ ನೃಸಿಂಹನು ಗದಾಪಾಣಿಯಾದ ಹಿರಣ್ಯಕಶ್ಯಪನನ್ನು ಹಾರಿ ಹಿಡಿದು ತನ್ನ ಉಗುರುಗಳಿಂದ ಸೀಳಿ ಕೊಂದು ಹಾಕಿದ. ನೃಸಿಂಹರೂಪಿಯಾದ ಮಹಾವಿಷ್ಣುವಿನ ಈ ಅದ್ಭುತಾ ಕೃತಿಯನ್ನು ಕಂಡು ಬ್ರಹ್ಮಾದಿ ದೇವತೆಗಳು ಅವನನ್ನು ಹಾಡಿ ಹೊಗಳಿ ಸ್ತೋತ್ರ ಮಾಡಿದರು.

## ವಾಮನಾವತಾರ

**ವೈಶಂಪಾಯನ:-** ಜನಮೇಜಯ, ನಾನು ನಿನಗೆ ನೃಸಿಂಹನ ಮಹಿಮೆಯನ್ನು ಹೇಳಿದೆ. ಈಗ ಬಲಿಯನ್ನು ನಿಗ್ರಹಿಸಿದ ವಾಮನನ ಅಖ್ಯಾನವನ್ನು ಹೇಳುತ್ತೇನೆ.

ಮರೀಚಿ ಪ್ರಜಾಪತಿಯ ಮಗನಾದ ಕಶ್ಯಪ ಋಷಿಗೆ ದಿತಿ, ಅದಿತಿ ಎಂದು ಇಬ್ಬರು ಪತ್ನಿಯರು. ಅವರಿಬ್ಬರೂ ದಕ್ಷಪ್ರಜಾಪತಿಯ ಮಕ್ಕಳು, ಕಶ್ಯಪರಿಗೆ ಅದಿತಿದೇವಿಯಿಂದ ಹನ್ನೆರಡು ಜನ ಗಂಡುಮಕ್ಕಳು. ಧಾತಾ, ಅರ್ಯಮಾ, ಮಿತ್ರ, ವರುಣ, ಅಂಶ, ಭಗ, ಇಂದ್ರ, ವಿವಸ್ವಾನ್, ಪೂಷಾ, ಪರ್ಜನ್ಯ, ಹನ್ನೊಂದನೆಯವನು ವಿಶ್ವಕರ್ಮ. ಹನ್ನೆರಡನೆಯವನೇ ವಿಷ್ಣು. ಅದಿತಿಯ ತಂಗಿಯಾದ ದಿತಿಗೆ ಹಿರಣ್ಯಾಕ್ಷ, ಹಿರಣ್ಯಕಶಿಪು ಎಂದು ಇಬ್ಬರು ಮಕ್ಕಳು. ಹಿರಣ್ಯ ಕಶ್ಯಪುನಿಗೆ ಪ್ರಹ್ಲಾದ, ಅನುಹ್ಲಾದ, ಲ್ಹಾದ, ಜಂಭ, ಸಲ್ಹಾದ ಎಂದು ಐದು ಜನ ಮಕ್ಕಳು ಪ್ರಹ್ಲಾದನಿಗೆ ವಿರೋಚನ ಮಗ. ವಿರೋಚನನ ಮಗನೇ ಬಲಿರಾಜ ಈ ಬಲಿರಾಜನ ಮಕ್ಕಳು ಮೊಮ್ಮಕ್ಕಳ ಸಂತಾನ ಅಪಾರ. ದೈತ್ಯದಾನವರೆಲ್ಲ ಕೂಡಿ ಹಿರಣ್ಯಕಶಿಪುವಿನ ವಧೆ ಆದ ಬಳಿಕ ವಿಚಾರಮಾಡಿ ಬಲಿಚಕ್ರ ವರ್ತಿಯನ್ನು ಅಸುರರಾಜ್ಯಕ್ಕೆ ಅಧಿಪತಿಯನ್ನಾಗಿ ಪಟ್ಟಾಭಿಷೇಕ ಮಾಡಿದರು. ಸತ್ಯನಿಷ್ಠನಾದ ಬಲಿರಾಜನಿಗೆ ಇಂದ್ರಿಯಗಳ ಮೇಲೆ ಯಾವಾಗಲೂ ಹಿಡಿತ. ಅವನಿಗೆ ತಿಳಿಯದ ವಿಷಯವೇ ಇರಲಿಲ್ಲ. ಮಹಾತೇಜಸ್ವಿ ಇಂಥ ಆ ಬಲಿರಾಜನನ್ನು ಎಲ್ಲ ದೈತ್ಯರೂ ಹಿರಣ್ಯಕಶ್ಯಪನ ಸ್ಥಾನದಲ್ಲಿ ರಾಕ್ಷಸರಾಜ್ಯದ ಸಾರ್ವಭೌಮ ಪದವಿಯಲ್ಲಿ ಕೂಡಿಸಿ ಪಟ್ಟಾಭಿಷೇಕ ಮಾಡಿದರು. ಆಗ ಎಲ್ಲ ದೈತ್ಯರು ಬಲಿರಾಜನನ್ನು ಬೇಡಿಕೊಂಡರು.

**ದೈತ್ಯರು:-** ''ಬಲಿರಾಜ, ಈ ಪ್ರಪಂಚವೆಲ್ಲವೂ ಮೊದಲು ನಿನ್ನ ಮುತ್ತಾತನಾದ ಹಿರಣ್ಯಕಶ್ಯಪನ ಒಡೆತನಕ್ಕೆ ಸೇರಿದ್ದು ಆ ನಿನ್ನ ಮುತ್ತಾತನನ್ನು ಕೊಂದು ಹರಿಯು ಆ ಸ್ಥಾನದಲ್ಲಿ ದೇವೇಂದ್ರನಿಗೆ ಅಭಿಷೇಕ ಮಾಡಿದ. ಈಗ ನೀನು ನಿನ್ನ ಮುತ್ತಜ್ಜನು ಗಳಿಸಿದ ರಾಜ್ಯವನ್ನು ಉಳಿಸಿಕೊ. ಆ ದೇವತೆಗಳನ್ನು ಗೆದ್ದು ರಾಜ್ಯಾಧಿಕಾರವನ್ನು ಮರಳಿ ನಿನ್ನ ಕೈಯಲ್ಲಿ ತೆಗೆದುಕೋ'' ಅವರ ಈ ಸೂಚನೆಯನ್ನು ಕೇಳಿ ಬಲಿಚಕ್ರವರ್ತಿಯು ಶಂಬರ, ನಮುಚಿ, ಜಂಭ, ಮುಂತಾದ ದೈತ್ಯವೀರರೊಂದಿಗೆ ಯುದ್ಧಕ್ಕೆ ಸಿದ್ದನಾಗಿ ಬಂದ. ಇತ್ತ ದೇವತೆಗಳೂ ಯುದ್ಧ ಸಿದ್ಧತೆಯನ್ನು ಮಾಡಿಕೊಂಡು ಬಂದರು. ಎರಡೂ ಸೇನೆಗಳ ನಡುವೆ ಘನಘೋರವಾದ ಭೀಕರ ಸಂಗ್ರಾಮವು ನಡೆಯಿತು. ನಮುಚಿ, ಶಂಬರ, ಪೌಲೋಮ, ಕುಜಂಭ, ಕೇಶಿ, ಪ್ರಹ್ಲಾದ, ಅನುಲ್ಹಾದ, ವಿಪ್ರಚಿತ್ತ ಮುಂತಾದ ದಾನವರು ದೇವತಾಧುರೀಣರೊಡನೆ ಕಲಿತನದಿಂದ ಕಾದಾಡಿದರು. ಆಗ ಎಲ್ಲ

ಕಡೆಯಿಂದಲೂ ದೇವತೆಗಳಿಗೆ ಸೋಲಿನ ಸರಮಾಲೆಯೇ ಕೊರಳಲ್ಲಿ ಬೀಳುವ ಲಕ್ಷಣ ಕಂಡಿತು. ಆಗ ಬೃಹಸ್ಪತ್ಯಾಚಾರ್ಯನು ಅಗ್ನಿಯ ಸ್ತೋತ್ರ ಮಾಡಿ ವೈರಿಗಳನ್ನು ಸುಟ್ಟುಹಾಕು ಎಂದು ಕೇಳಿ ಕೊಂಡ. ಆಗ ಅಗ್ನಿಯು ಸಿಟ್ಟಿನಿಂದ ಉರಿದೆದ್ದು ದೈತ್ಯರ ಮಾಯೆಗಳನ್ನೆಲ್ಲ ಸುಟ್ಟು ಹಾಕಿ ದೈತ್ಯರನ್ನೆಲ್ಲ ತನ್ನ ಜ್ವಾಲೆಯ ಜಾಲಗಳಿಂದ ದಗ್ಧರನ್ನಾಗಿ ಮಾಡಿದ. ಆಗ ಪ್ರಹ್ಲಾದನಿಂದ ಪ್ರೋತ್ಸಾಹಿಸಲ್ಪಟ್ಟ ಬಲಿಚಕ್ರವರ್ತಿಯು ದೇವೇಂದ್ರನ ಜೊತೆಗೆ ಘನಘೋರವಾಗಿ ಕಾದಿದ. ಆಗ ಆ ಸುರರಾಜನು ಆ ಬಲಿಯು ಪ್ರಯೋಗಿಸಿದ ಎಲ್ಲ ಶಸ್ತ್ರಾಸ್ತ್ರಗಳನ್ನು ನಿಷ್ಫಲಗೊಳಿಸಿ ತಾನು ಅವನನ್ನು ಕೊಂದುಬಿಡಬೇಕೆಂದು ವಜ್ರಾಯುಧವನ್ನು ಎತ್ತಿದ. ಆಕಾಶವಾಣಿ ಆಯಿತು ''ದೇವೇಂದ್ರ, ಹಿಂದೆ ಸರಿ. ಬಲಿರಾಜನನ್ನು ನೀನು ಎಂದೂ ಗೆಲ್ಲಲಾರೆ. ಅವನು ತಪಸ್ಸುಮಾಡಿ ಬ್ರಹ್ಮದೇವರಿಂದ ವರ ಪಡೆದಿದ್ದಾನೆ. ಅವನನ್ನು ಯಾರೂ ಗೆಲ್ಲಲಾರರು.'' ಈ ಆಕಾಶವಾಣಿಯನ್ನು ಕೇಳಿ ಇಂದ್ರನು ಮರಳಿದ. ಆಗ ದೈತ್ಯರು ಸಿಂಹನಾದಗೈದರು ಜಯಘೋಷದಿಂದ ಭೂಮ್ಯಾಕಾಶಗಳನ್ನೆಲ್ಲ ಮುಖರಿತವನ್ನಾಗಿ ಮಾಡಿದರು. ಅನಂತರ ಪರಾಜಿತರಾಗಿ ತಮ್ಮ ಸ್ಥಾನಮಾನ ಐಶ್ವರ್ಯ ಅಧಿಕಾರ ಎಲ್ಲವನ್ನೂ ಕಳೆದುಕೊಂಡ ದೇವತೆಗಳು ತಮ್ಮ ತಾಯಿ ತಂದೆಗಳಾದ ಆದಿತಿ ಕಶ್ಯಪರ ಬಳಿಗೆ ಬಂದರು. ದೇವತೆಗಳ ಈ ದುರವಸ್ಥೆಯನ್ನು ಕಂಡು ಅವರಿಗೂ ಬಹಳ ದುಃಖವಾಯಿತು. ಎಲ್ಲರೂ ಕೂಡಿ ಬ್ರಹ್ಮಲೋಕಕ್ಕೆ ಹೋದರು. ಇದನ್ನೆಲ್ಲ ಮೊದಲೇ ತಿಳಿದ ಬ್ರಹ್ಮದೇವರು ದೇವತೆಗಳಿಗೆ ಹೇಳಿದರು.

**ಬ್ರಹ್ಮ**:- ಕಶ್ಯಪರೇ ಹಾಗೂ ದೇವತೆಗಳೇ, ನೀವು ಇಲ್ಲಿಗೆ ಬಂದ ಉದ್ದೇಶ ನನಗೆ ತಿಳಿದಿದೆ. ಗುರುಶುಕ್ರರ ನೇತೃತ್ವದಲ್ಲಿ ಅನೇಕ ಯಜ್ಞಯಾಗಗಳನ್ನು ಮಾಡಿ ದೇವ ಬ್ರಾಹ್ಮಣರ ಆರಾಧನೆ ಮಾಡುತ್ತ ಧರ್ಮಮಾರ್ಗದಲ್ಲಿಯೇ ಸತ್ಯನಿಷ್ಠನಾಗಿ ಪ್ರಜಾರಂಜನೆ ಗೈಯುತ್ತಲಿರುವ ಧರ್ಮಾತ್ಮ ಬಲಿರಾಜನನ್ನು ಯಾರೂ ಗೆಲ್ಲಲು ಶಕ್ಯವಿಲ್ಲ. ಅದಕ್ಕಾಗಿ ವಿಷ್ಣುವಿಗೇ ಶರಣು ಹೋಗಿರಿ. ಅವನೊಬ್ಬನೇ ಬಲಿಯನ್ನು ನಿಗ್ರಹಿಸಲು ಸಮರ್ಥ. ಕ್ಷೀರ ಸಮುದ್ರದ ಉತ್ತರ ತೀರದಲ್ಲಿ ಅಮೃತ ಎಂಬ ಸ್ಥಾನದಲ್ಲಿ ನಿಂತು ಆ ವಿಷ್ಣು ಈಗ ತಪಸ್ಸನ್ನು ಆಚರಿಸುತ್ತಿದ್ದಾನೆ.

ಬ್ರಹ್ಮದೇವರ ಆದೇಶದಂತೆ ಕಶ್ಯಪ ಆದಿತಿಯರು ತಮ್ಮ ಮಕ್ಕಳಾದ ಎಲ್ಲ ದೇವತೆಗಳನ್ನು ಕರೆದುಕೊಂಡು ಅಮೃತ ಸ್ಥಾನಕ್ಕೆ ಹೋಗಿ ಅಲ್ಲಿ ನಿಂತು ಉಗ್ರವಾದ ತಪಸ್ಸನ್ನು ಮಾಡಿದರು. ಒಂದು ಸಾವಿರ ದಿವ್ಯ ವರ್ಷಗಳ ಪರ್ಯಂತ ಆ ಕಶ್ಯಪದಂಪತಿಗಳು ಘೋರ ತಪಸ್ಸನ್ನು ಆಚರಿಸಿದರು. ಅವರ ತಪಸ್ಸಿಗೆ ಮೆಚ್ಚಿ ವಿಷ್ಣುವು ಪ್ರಸನ್ನನಾಗಿ ಬೇಕಾದ ವರ ಬೇಡಿರಿ ಎಂದು ಹೇಳಿದ. ಆಗ ಕಶ್ಯಪ ಆದಿತಿಯರು ಕೈ ಮುಗಿದು ''ದೇವತೆಗಳ ಕಲ್ಯಾಣಕ್ಕಾಗಿ ನೀನು ನಮ್ಮ ಮಗನಾಗಿ ಹುಟ್ಟಿ ಬಾ'' ಎಂದು ಕೇಳಿಕೊಂಡರು. ದೇವತೆಗಳೂ ಕೂಡ ಅದರಂತೆ ''ಸ್ವಾಮಿ ನೀನು ಅದಿತಿಯ ಮಗನಾಗಿ ನಮ್ಮೆಲ್ಲರಿಗೂ ಭ್ರಾತಾ, ಭರ್ತಾ, ದಾತಾ, ಶರಣ ಎಂದರೆ ಸೋದರ, ಸ್ವಾಮಿ, ಸುಖದಾತಾ, ಸಂರಕ್ಷಕ ನಾಲ್ಕು ಆಗು'' ಎಂದು ಕೇಳಿಕೊಂಡರು. 'ತಥಾಸ್ತು' ಎಂದು ಶ್ರೀಹರಿ ಅವರೆಲ್ಲರಿಗೂ ಅಭಯ ಪ್ರಧಾನ ಮಾಡಿದ, ಎಲ್ಲರೂ ತೃಪ್ತರಾಗಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಅನಂತರ ಗರ್ಭಿಣಿ ಆದ ಆದಿತಿಯು ಒಂದು ಸಾವಿರ ವರ್ಷ ಆ ಬಸಿರನ್ನು ಧರಿಸಿದಳು. ವಿಷ್ಣು ವಾಮನರೂಪದಿಂದ ಅವಳ ಹೊಟ್ಟೆಯಿಂದ ಹುಟ್ಟಿಬಂದ.

ಆಗ ಎಲ್ಲ ದೇವತೆಗಳೂ ಸಪ್ತರ್ಷಿಗಳೂ ಉಳಿದ ಎಲ್ಲ ಬ್ರಹ್ಮರ್ಷಿಗಳೂ ಸ್ವಯಂ ಬ್ರಹ್ಮದೇವರೂ ಆ ವಾಮನರೂಪಿಯಾದ ವಿಷ್ಣುವನ್ನು ಸ್ತೋತ್ರಮಾಡಿದರು. ದೇವತೆಗಳ ಅಪೇಕ್ಷೆಯನ್ನು ಕೇಳಿಕೊಂಡು ವಾಮನನು ಬೃಹಸ್ಪತಿಯು ತೋರಿದ ದಾರಿಯಿಂದ ಬಲಿಚಕ್ರವರ್ತಿಯು ಯಜ್ಞಮಂಟಪಕ್ಕೆ ಆಗಮಿಸಿದ. ಅಲ್ಲಿ ವಾಮನನು ಶಾಸ್ತ್ರೋಕ್ತವಾದ ಯಜ್ಞದ ವರ್ಣನೆಯನ್ನು ಮಾಡಿ ಅದರ ವಿಧಿವಿಧಾನಗಳ ವಿವರಣೆಯನ್ನು ನೀಡಿ ಅಲ್ಲಿ ನೆರೆದ ದೈತ್ಯ ಪುರೋಹಿತರನ್ನೂ, ಶುಕ್ರಾಚಾರ್ಯರನ್ನೂ ಯಜ್ಞ ವಿಷಯದಲ್ಲಿ ಕೆಲವು ಪ್ರಶ್ನೆ ಕೇಳಿ ನಿರುತ್ತರಗೊಳಿಸಿದ, ಆ ವಾಮನಮೂರ್ತಿಯ ಅದ್ಭುತಪಾಂಡಿತ್ಯ ಹಾಗೂ ತೇಜಸ್ಸನ್ನು ನೋಡಿ ಬಲಿಚಕ್ರವರ್ತಿಯು ಅವನಿಗೆ ನಮಸ್ಕಾರ ಮಾಡಿ ಕೇಳಿದ.

**ಬಲಿರಾಜ:-** ಮಹಾನುಭಾವ, ನೀನು ಯಾರು? ಇಲ್ಲಿಗೆ ನೀನು ಬಂದ ಉದ್ದೇಶ ವೇನು? ನೀನು ವಯಸ್ಸಿನಿಂದ ಬಾಲಕ, ಜ್ಞಾನದಲ್ಲಿ ವೃದ್ಧ. ರೂಪದಿಂದ ಸುಂದರ, ಮಾತಿನಲ್ಲಿ ಚತುರ. ನಿನಗೆ ಬೇಕಾದುದನ್ನು ನೀಡಲು ನಾನು ಸಿದ್ಧ. ಬಯಸಿದ್ದನ್ನು ಕೇಳು.

**ವಾಮನ:-** ನಾಲ್ಕು ಆಶ್ರಮಗಳಲ್ಲಿ ಗೃಹಸ್ಥಾಶ್ರಮ ಶ್ರೇಷ್ಠ. ಮನುಷ್ಯರಲ್ಲಿ ಬ್ರಾಹ್ಮಣ ಶ್ರೇಷ್ಠ. ಯಜ್ಞಗಳಲ್ಲಿ ನೀನು ಮಾಡುವ ಅಶ್ವಮೇಧ ಶ್ರೇಷ್ಠ. ದೈತ್ಯರಲ್ಲಿ ಬಲಿರಾಜ ಶ್ರೇಷ್ಠ. ನೀನು ನನಗೆ ಪ್ರಸನ್ನನಾಗಿದ್ದರೆ ನನ್ನ ಗುರುವಿಗೆ ಯಜ್ಞಕ್ಕಾಗಿ ಅಗ್ನಿಸ್ಥಾನವನ್ನು ಸಿದ್ಧಪಡಿಸಲಿಕ್ಕಾಗಿ ಮೂರು ಪಾದ ಭೂಮಿಯನ್ನು ನೀಡು.

ಅಷ್ಟರಲ್ಲಿ ಶುಕ್ರಾಚಾರ್ಯರು ಮುಂದೆ ಬಂದು 'ಬಲಿರಾಜ, ಇವನಿಗೆ ನೀನು ಏನನ್ನೂ ದಾನ ಕೊಡಬೇಡ. ಇವನು ಕಪಟವೇಷದ ವಿಷ್ಣು. ನಿನ್ನ ಸರ್ವಸ್ವವನ್ನೂ ಅಪಹರಿಸಿ ನಿನ್ನ ವೈರಿಯಾದ ಇಂದ್ರನಿಗೆ ನೀಡುತ್ತಾನೆ.'

**ಬಲಿರಾಜ:-** 'ಇವನು ವಿಷ್ಣುವಾದರೆ ಬಹಳ ಒಳ್ಳೆಯದಾಯಿತು. ನಾನು ನೀಡುವ ದಾನಕ್ಕೆ ದೇವಾಧಿದೇವ ವಿಷ್ಣುವಿನಿಂಥ ಸತ್ಪಾತ್ರರು ಬೇರೆ ಯಾವುದಾದರೆ?' ಎಂದು ಹೇಳಿ ಬಲಿರಾಜನು ನೀರು ತುಂಬಿದ ಕಲಶವನ್ನು ಕೈಗೆ ಎತ್ತಿ ಕೊಂಡನು. ಪೂರ್ವಕ್ಕೆ ಮುಖಮಾಡಿ ಬಲಿಯು ವಾಮನ ಕೈಯಲ್ಲಿ ಸಂಕಲ್ಪದ ನೀರನ್ನು ಬಿಡಲು ಉದ್ಯುಕ್ತನಾದ. ಆಗ ಶ್ರೀಹರಿಯ ಅತ್ಯದ್ಭುತವಾದ ರೂಪವನ್ನು ಕಂಡು ಪ್ರಹ್ಲಾದನು ಮುಂದೆ ಬಂದು ಬಲಿಯನ್ನು ತಡೆದು ಹೇಳಿದ.

**ಪ್ರಹ್ಲಾದ:-** ಈ ವಾಮನನ ಕೈಯಲ್ಲಿ ದಾನದ ನೀರನ್ನು ಹಾಕಬೇಡ. ನಿನ್ನ ಅಜ್ಜನಾದ ಹಿರಣ್ಯಕಶ್ಯಪುವನ್ನು ನರಸಿಂಹ ರೂಪದಿಂದ ಸಂಹರಿಸಿದ ಆ ವಿಷ್ಣುವೇ ನಿನ್ನನ್ನು ವಂಚಿಸಲಿಕ್ಕಾಗಿ ಹೀಗೆ ವಾಮನ ರೂಪದಿಂದ ಈಗ ಬಂದಿದ್ದಾನೆ.

**ಬಲಿರಾಜ:-** ಹಾಗಿದ್ದರೆ ನಾನು ಮೊದಲು ಇವನಿಗೆ ದಾನವನ್ನು ನೀಡುತ್ತೇನೆ. ಜಗತ್ಪ್ರಭುವಾದ ಈ ವಿಷ್ಣು ಇಲ್ಲಿಗೆ ಬಂದದ್ದು ನನ್ನನ್ನು ಅನುಗ್ರಹ ಮಾಡಲಿಕ್ಕಾಗಿಯೇ. ಅವನ ನಿಗ್ರಹವೂ ಅನುಗ್ರಹವೇ ದೇಹಿ ಎಂದು ಕೇಳಿದವನಿಗೆ 'ನಹಿ' ಎಂದು ಯಾವನು ನುಡಿಯುವನೋ ಆ ಯಜಮಾನನ ದೇಹದಲ್ಲಿ ಅವರಿಬ್ಬರ ಭಾಗದ ದೌರ್ಭಾಗ್ಯಗಳೂ ಸೇರಿಕೊಳ್ಳುತ್ತವೆ. ಆ ದೌರ್ಭಾಗ್ಯಕ್ಕೆ ಅಲಕ್ಷ್ಮಿ ಎನ್ನುತ್ತಾರೆ ಇವನನ್ನು ನೋಡಿದ ಕೂಡಲೇ ನನಗೆ ಏಕೋ ಪೂರ್ಣ ತೃಪ್ತಿ ಎನಿಸಿದೆ. ಎಂದು ನುಡಿದು ದಾನ ಸಂಕಲ್ಪಮಾಡಿ ವಿಷ್ಣುವಿನ ಕೈಯಲ್ಲಿ ನೀರನ್ನು ಬಿಟ್ಟನು. ಕೂಡಲೇ ಆ ವಾಮನರೂಪಿಯಾದ ವಿಷ್ಣುವು ತ್ರಿವಿಕ್ರಮ

ರೂಪವನ್ನು ಸ್ವೀಕರಿಸಿ ಮೂರು ಲೋಕಗಳನ್ನೆಲ್ಲ ಆಕ್ರಮಿಸಿದ. ಅದರಲ್ಲಿ ಸ್ವರ್ಗಲೋಕವನ್ನು ಭೂಲೋಕವನ್ನು ದೇವೇಂದ್ರನಿಗೆ ನೀಡಿದ. ಭೂಲೋಕದ ಕೆಳಗೆ ಇರುವ ಸುತಲಲೋಕವನ್ನು ಬಲಿರಾಜನಿಗೆ ವಾಸಮಾಡಲು ಕೊಟ್ಟ. ವಿಷ್ಣುವಿನ ಆದೇಶದಂತೆ ಬಲಿಚಕ್ರವರ್ತಿಯು ಪಾತಾಳ ಲೋಕಕ್ಕೆ ತೆರಳಿ ಅಲ್ಲಿ ನಿಂತು ಭಗವಂತನನ್ನು ಸ್ತೋತ್ರಮಾಡಿದ ಅವನ ಸ್ತೋತ್ರದಿಂದ ಪ್ರಸನ್ನನಾದ ಪರಮಾತ್ಮನು ಮಾತನಾಡಿದ.

**ವಿಷ್ಣು:-** ಬಲಿರಾಜ, ನಿನಗೆ ಬೇಕಾದ ವರಬೇಡು. ನಾನು ನಿನ್ನ ಮೇಲೆ ಪೂರ್ಣ ಪ್ರಸನ್ನನಾಗಿದ್ದೇನೆ. ನೀನು ಇನ್ನು ಮೇಲೆ ದೇವೇಂದ್ರನ ಶಾಸನವನ್ನು ಮೀರಬೇಡ. ಅವನು ನನಗೂ ಅಣ್ಣ. ನನ್ನ ಭಕ್ತರಾದ ದೇವತೆಗಳು ಯಾವಾಗಲೂ ವಂದನೀಯರು. ನೀನು ರಸಾತಳದಲ್ಲಿಯೇ ದಿವ್ಯವಾದ ಭೋಗಗಳನ್ನು ಅನುಭವಿಸುವಿ. ನೀನು ಬೇಡಿದ್ದೆಲ್ಲ ದೊರಕುವುದು. ಬಯಸಿದ್ದೆಲ್ಲ ಸಿದ್ಧಿಸುವುದು.

**ಬಲಿಚಕ್ರವರ್ತಿ:-** ಆ ಪಾತಾಳದಲ್ಲಿ ನನಗೆ ಉಣ್ಣಲು ಆಹಾರ ಯಾವುದು?

**ವಿಷ್ಣು:-** ಶೋತ್ರಿಯ ಬ್ರಾಹ್ಮಣನಿಲ್ಲದೆ ಮಾಡಿದ ಶ್ರಾದ್ಧ, ಬ್ರಹ್ಮಚರ್ಯ ವ್ರತವನ್ನು ಪಾಲಿಸದ ಅಧ್ಯಯನ, ದಕ್ಷಿಣೆ ಇಲ್ಲದೆ ಮಾಡಿದ ಯಜ್ಞ, ಶ್ರದ್ಧೆ ಇಲ್ಲದೆ ನೀಡಿದ ದಾನ, ಸಂಸ್ಕರಿಸದೇ ಕೊಟ್ಟ ಆಹುತಿ ಮುಂತಾದವುಗಳಿಂದ ಬಂದ ಪುಣ್ಯ ಭಾಗವೆಲ್ಲವೂ ನಿನಗೆ ಆಹಾರವಾಗಿ ಲಭಿಸುವುದು. ಮತ್ತು ಹರಿದ್ವೇಷಿಗಳು, ಹರಿಭಕ್ತರ ದ್ವೇಷಿಗಳು ಮಾಡಿದ ಎಲ್ಲ ಪುಣ್ಯವು ದೈತ್ಯರಿಗೆ ಹೋಗುವುದು.

ಇದರಿಂದ ಪ್ರೀತನಾಗಿ ಬಲಿಚಕ್ರವರ್ತಿಯು ಪಾತಾಳಲೋಕಕ್ಕೆ ಹೋದ ಬಳಿಕ ಮೂರು ಲೋಕಗಳನ್ನು ಬಲಿಯಿಂದ ಗೆದ್ದುಕೊಂಡು ಶ್ರೀವಿಷ್ಣುವು ತ್ರೈಲೋಕ್ಯದ ರಾಜ್ಯಗಳನ್ನು ಬೇರೆ ಬೇರೆ ವಿಭಾಗ ಮಾಡಿ ಬೇರೆ ಬೇರೆ ದೇವತೆಗಳಿಗೆ ನೀಡಿದ. ಪೂರ್ವದಿಕ್ಕನ್ನು ಇಂದ್ರನಿಗೂ, ದಕ್ಷಿಣ ದಿಶೆಯನ್ನು ಯಮನಿಗೂ, ಪಶ್ಚಿಮವನ್ನು ವರುಣನಿಗೂ ಉತ್ತರ ದಿಕ್ಕನ್ನು ಕುಬೇರನಿಗೂ, ಅಧೋಲೋಕವನ್ನು ನಾಗರಾಜನಿಗೂ, ಊರ್ಧ್ವಲೋಕವನ್ನು ಚಂದ್ರನಿಗೂ ಹಂಚಿಕೊಟ್ಟ. ಅನಂತರ ಎಲ್ಲ ಮಹರ್ಷಿಗಳು ಸ್ತೋತ್ರ ಮಾಡುತ್ತಿರುವಾಗ ಆ ವಾಮನ ರೂಪಿ ವಿಷ್ಣುವು ಸ್ವರ್ಗಲೋಕಕ್ಕೆ ತೆರಳಿದ.

## ಬದರೀಕ್ಷೇತ್ರದಲ್ಲಿ ಶ್ರೀಕೃಷ್ಣನ ತಪಸ್ಸು

**ವೈಶಂಪಾಯನ:-** ಶ್ರೀಕೃಷ್ಣ ಪರಮಾತ್ಮನು ದುಷ್ಟ ಜನರನ್ನು ದಮನ ಮಾಡಿ ಶಿಷ್ಟರನ್ನು ಪರಿಪಾಲನೆ ಮಾಡುತ್ತ ದ್ವಾರಕಾ ಪಟ್ಟಣದಲ್ಲಿ ವಾಸಮಾಡಿದಾಗ, ರುಕ್ಮಿಣೀ ದೇವಿಯು ಪ್ರೀತಿಯಿಂದ ಪತಿಗೆ ಪ್ರಾರ್ಥನೆ ಮಾಡಿಕೊಂಡಳು.

**ರುಕ್ಮಿಣಿ:-** ಪ್ರಭು, ನನಗೆ ನಿನ್ನಂತೆಯೇ ರೂಪಸಂಪನ್ನನೂ, ಗುಣ ಸಂಪನ್ನನೂ ತಪೋನಿಧಿಯೂ, ಸರ್ವಶಾಸ್ತ್ರಾರ್ಥ ಕುಶಲನೂ, ರಾಜವಿದ್ಯೆಯಲ್ಲಿ ಪ್ರವೀಣನೂ ಆದ ಒಬ್ಬ ಮಗನನ್ನು ಕರುಣಿಸು.

**ಕೃಷ್ಣ:-** ರುಕ್ಮಿಣೀ, ನೀನು ನನ್ನ ನಿತ್ಯ ಭಕ್ತಳು. ಒಳ್ಳೆ ಸದ್ಗುಣಗಳಿಂದ ಒಡಗೂಡಿದ ಯೋಗ್ಯರಾದ ಸತ್ಪುತ್ರರು ದೊರಕಬೇಕಾದರೆ ಮನುಷ್ಯರು ಮಹಾದೇವರನ್ನೇ ಆರಾಧಿಸಬೇಕು. ಇದನ್ನು ಜನರಿಗೆ ತಿಳಿಸಲಿಕ್ಕಾಗಿ ಕೈಲಾಸ ಪರ್ವತಕ್ಕೆ ಹೋಗಿ ಮಹಾದೇವನನ್ನು ಕುರಿತು ತಪಸ್ಸು ಮಾಡಿ ನಿನ್ನಲ್ಲಿ ಪುತ್ರನನ್ನು ಪಡೆಯುತ್ತೇನೆ. ಹೀಗೆ ಹೇಳಿ

ಶ್ರೀಕೃಷ್ಣನು ಯಾದವರನ್ನೆಲ್ಲ ಕರೆದು ''ನಾನು ಕೈಲಾಸ ಪರ್ವತಕ್ಕೆ ಹೋಗಿ ಬರುವವರೆಗೆ ದ್ವಾರಕಾ ಪಟ್ಟಣವನ್ನು ಜಾಗರೂಕತೆಯಂದ ರಕ್ಷಿಸಿರಿ. ನರಕಾಸುರನ ಮಿತ್ರನಾದ ಪುಂಡ್ರಕನು ಈ ದ್ವಾರಕೆಯನ್ನು ಆಕ್ರಮಿಸವ ತಯಾರಿಯಲ್ಲಿದ್ದಾನೆ. ದ್ರೋಣರ ಶಿಷ್ಯ, ಬ್ರಹ್ಮಾಸ್ತ್ರವನ್ನೂ ಬಲ್ಲವ. ಶೌರ್ಯದಲ್ಲಿ ಅವನೊಬ್ಬ ಪರಶುರಾಮ. ನಮ್ಮ ಶತ್ರು ಹೊಂಚ ಹಾಕಿ ಕುಳಿತಿದ್ದಾನೆ. ಈ ದ್ವಾರಕಾತಿಯ ಹೆಚ್ಚಿನ ಬೇರೆ ಬೇರೆ ದಿಕ್ಕಿನ ಬಾಗಿಲುಗಳನ್ನೆಲ್ಲ ಮುಚ್ಚಿ ಬಿಡಿರಿ. ನಗರದಿಂದ ಹೊರಗೆ ಹೋಗಲಿಕ್ಕೂ, ಒಳಗೆ ಬರಲಿಕ್ಕೂ ಆಗಸೆ ಬಾಗಿಲ ಒಂದನ್ನೇ ಬಳಸಿರಿ. ಯಾರನ್ನೂ ಒಳಗೆ ಬಿಡಬೇಡಿರಿ. ಊರು ಬಿಟ್ಟು ಯಾರಾದರೂ ಹೊರಗೆ ಹೋಗಬೇಕಾದರೆ ಅವರು ರಾಜಮುದ್ರೆಯನ್ನು ತೆಗದುಕೊಂಡೇ ಹೋಗಬೇಕು. ಬರುವಾಗ ರಾಜಮುದ್ರೆ ತೋರಿಸಿಯೇ ಒಳಗೆ ಬರಬೇಕು. ಯಾರೂ ಬೇಟೆಯಾಡಲು ನಗರ ಬಿಟ್ಟು ಹೋಗಬಾರದು. ನಗರದ ಹೊರಗೆ ಹೋಗುವವರು ಮತ್ತು ಒಳಗೆ ಬರುವವರ ಮೇಲೆ ಕಣ್ಣು ಇರಲಿ. ನಾನು ಬರುವವರೆಗೆ ಸರ್ವರೀತಿಯಿಂದಲೂ ಈ ರಾಜಧಾನಿಯನ್ನು ನೀವೆಲ್ಲರೂ ಕೂಡಿ ರಕ್ಷಿಸಿರಿ.

ಹೀಗೆ ಹೇಳಿ ಶ್ರೀಕೃಷ್ಣನು ಬದರಿಕಾಶ್ರಮಕ್ಕೆ ಆಗಮಿಸಿದ. ಅಲ್ಲಿ ವಶಿಷ್ಠ, ವಾಮದೇವ, ಜಾಬಾಲಿ, ಕಶ್ಯಪ, ಯಾಜ್ಞವಲ್ಕ್ಯ, ಕಣ್ವ, ಮುಂತಾದ ಋಷಿಗಳು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದರು. ಅವರ ಪೂಜೆಯನ್ನು ಸ್ವೀಕರಿಸಿ, ಪ್ರೀತನಾದ ಪರಮಾತ್ಮನು ಗಂಗೆಯ ಉತ್ತರ ತೀರದಲ್ಲಿ ಇದ್ದ ತಪೋವನಕ್ಕೆ ಆಗಮಿಸಿದ. ಹಿಂದೆ ಇದೇ ತಪೋವನದಲ್ಲಿ ನಾರಾಯಣ ರೂಪದಿಂದ ತಾನು ತಪಸ್ಸನ್ನು ಮಾಡಿದ್ದ. ಅತ್ಯಂತ ಸುಂದರವಾದ ಆ ನಾರಾಯಣಾ ಶ್ರಮದಲ್ಲಿ ನಿಂತು ತಪಸ್ಸಮಾಧಿಯನ್ನು ಕೈಕೊಳ್ಳಬೇಕೆಂದು ಸಂಕಲ್ಪಿಸಿದ. ತನ್ನ ಮನಸ್ಸಿನಲ್ಲಿ ಏನನ್ನೋ ಧ್ಯಾನಮಾಡಿದ. ಆಗ ಒಮ್ಮೆಲೇ ಎಲ್ಲ ಕಡೆಗೂ ''ತಿನ್ನಿರಿ, ತಿನ್ನಿರಿ, ತೃಪ್ತಿಪಡಿರಿ. ಈ ಮೃಗಗಳನ್ನು ಹಿಡಿಯಿರಿ. ವಿಷ್ಣು, ಕೃಷ್ಣ, ಈಶ, ಹರಿ ಎಂದು ಕರೆಯಲ್ಪಡುವ ಆ ಜಗದೀಶ್ವರನು ಇಲ್ಲಿಯೇ ಕುಳಿತಿದ್ದಾನೆ. ಮಾಧವಾ ನಿನಗೆ ನಮಸ್ಕಾರ. ಕೇಶವಾ ನಿನಗೆ ಸಾಷ್ಟಾಂಗ ಪ್ರಣಾಮ.'' ಎಂಬ ಶಬ್ದ ಭುವಿಬಾನು ಬಿರಿಯುವಂತೆ ಕೇಳಿ ಬಂತು. ಒಮ್ಮೆಲೇ ಚಿಮ್ಮಿ ಬಂದ ಈ ಶಬ್ದವನ್ನು ಕೇಳಿ ಕೃಷ್ಣನ ತಪಃ ಸಮಾಧಿ ಭಂಗವಾಯಿತು. ''ನನ್ನನ್ನು ಸ್ತುತಿಸುತ್ತ ಯಾರು ಹೀಗೆ ಬೊಬ್ಬಿರಿದು ಮಾತನಾಡುತ್ತಿದ್ದಾರೆ? ಇದು ಎಲ್ಲಿಯ ಶಬ್ದ? ಹೀಗೆ ಅತ್ತಿತ್ತ ನೋಡುತ್ತ ನಿಂತ. ಅದು ರಾತ್ರಿಯ ಸಮಯ. ಈ ಭೀಕರ ಮನುಷ್ಯರ ಧ್ವನಿಯ ಜೊತೆಗೆ ಬೇಟೆಯ ನಾಯಿಗಳ ಹಾಗೂ ಧಾವಿಸಿ ಓಡುವ ಮೃಗಗಳ ಧ್ವನಿಯೂ ಕೇಳಿಬಂದಿತು. ಅಷ್ಟರಲ್ಲಿ ಅನೇಕ ಚಿಗರೆಗಳು ಕೇಶವನು ಕುಳಿತ ಕಡೆಗೆ ಧಾವಿಸಿಬಂದವು. ಅವುಗಳ ಹಿಂದೆ ಆ ಮೃಗಗಳನ್ನು ಅಟ್ಟಿಸಿಕೊಂಡು ಒಂದು ಬೇಡರ ಪಡೆ ಅದರ ಹಿಂದೆ ಸಾವಿರಾರು ಪಿಶಾಚಿಗಳು, ಭೂತ ಪ್ರೇತಗಳು ಕೈಯಲ್ಲಿ ಸಹಸ್ರಾರು ಉರಿಯುವ ಕೊಳ್ಳಿಗಳನ್ನು ಹಿಡಿದುಕೊಂಡು ಧಾವಿಸಿ ಬಂದವು. ಅನೇಕ ಬೇಡರು ಕೈಯಲ್ಲಿ ಸಹಸ್ರಾರು ದೀಪಗಳನ್ನು ಹಿಡಿದುಕೊಂಡು ಕೃಷ್ಣನ ಸುತ್ತುಮುತ್ತಲೂ ಬಂದು ನಿಂತುಕೊಂಡರು. ಆಗ ಕೃಷ್ಣನು ಆಶ್ಚರ್ಯದಿಂದ 'ಇವರೆಲ್ಲರೂ ಯಾರು? ಇಲ್ಲಿಗೇಕೆ ಬಂದಿದ್ದಾರೆ? ಈ ಭಯಂಕರ ಶಬ್ದವನ್ನು ಏಕೆ ಮಾಡುತ್ತಾರೆ? ಮಧ್ಯದಲ್ಲಿ ನನ್ನನ್ನು ಏಕೆ ಹೋಗಳುತ್ತಾರೆ?'' ಎಂದು ಮುಂತಾಗಿ ವಿಚಾರಿಸುತ್ತ ಕೌತುಕಾಕ್ರಾಂತನಾಗಿ ನಿಂತುಕೊಂಡನು.

**ವೈಶಂಪಾಯನ:-** ಚಿಗರೆ ಹಾಗೂ ಆ ಬೇಡರನ್ನು ಬೆನ್ನಟ್ಟಿ ಬಂದ ಆ ಪಿಶಾಚರ ಬಳಗದ ಹಿಂದಿನಿಂದ ಎರಡು ಘೋರ ಪಿಶಾಚಿಗಳು ಅಲ್ಲಿಗೆ ಬಂದವು. ವಿಕೃತವಾದ ಮುಖ

ಘೋರ ಆಕಾರ, ನಿಮಿರಿನಿಂತ ಕೆಂಬಣ್ಣದ ಕೂದಲು, ಜೋತಾಡುವ ನಾಲಿಗೆ, ಉದ್ದ ಗದ್ದ, ಕೆಂಪು ಕಣ್ಣು, ಆಹಾ! ಹಿಹೀ,! ಎನ್ನುತ್ತ, ರಕ್ತವನ್ನು ಕುಡಿಯುತ್ತ, ಮಾಂಸದ ಬುಟ್ಟಿಯನ್ನೇ ಬಾಯಿಯಲ್ಲಿ ಹಾಕಿಕೊಳ್ಳುತ್ತ, ಕರುಳುಗಳನ್ನೇ ಮೈತುಂಬ ಸುತ್ತಿಕೊಂಡು, ಅನೇಕ ಹೆಣಗಳನ್ನು ಕೈಗಳಿಂದ ಎಳೆಯುತ್ತ ಅಟ್ಟಹಾಸ ಮಾಡುತ್ತ ಅಲ್ಲಿಗೇ ಬಂದು ನಿಂತುಕೊಂಡವು. ಅಟ್ಟಹಾಸವನ್ನು ಗೈದು ಪ್ರಾಕೃತ ಭಾಷೆಯಲ್ಲಿ ಯದ್ವಾ ತದ್ವಾ ಮಾತನಾಡುತ್ತ, ''ಕೃಷ್ಣ, ಕೃಷ್ಣ ಮಾಧವ,'' ಎಂದು ಮಧ್ಯ ಮಧ್ಯದಲ್ಲಿ ತಮ್ಮ ತಮ್ಮ ಮಾತು ಕೃತಿಗಳ ನಡುವೆ ನುಡಿಯುತ್ತಿದ್ದವು. ಆ ವಿಷ್ಣುವು ಈಗ ಎಲ್ಲಿ ಇರುತ್ತಾನೆ? ಅವನನ್ನು ನಾವು ಎಂದು ನೋಡುವೆವು? ಬ್ರಹ್ಮಜ್ಞಾನಿಗಳು ಯಾವನನ್ನು ಪುಂಡರೀಕಾಕ್ಷ ಪುರುಷೋತ್ತಮ, ಉಪೇಂದ್ರ ಎಂದು ಕರೆಯುವರೋ ಅಂಥ ವಿಷ್ಣುವನ್ನು ನೋಡಲು ನಾವು ಈಗ ಪ್ರಯತ್ನಿಸುತ್ತಿದ್ದೇವೆ. ನಮ್ಮ ದುಷ್ಕರ್ಮದಿಂದ ನಮಗೆ ಇಂಥ ಘೋರ ಪಿಶಾಚ ಜನ್ಮ ಬಂದಿದೆ. ಹೀಗೆಲ್ಲ ಮಾತನಾಡುತ್ತ ಆ ಎರಡೂ ಪಿಶಾಚಗಳು ಕೃಷ್ಣನ್ನು ಕುಳಿತ ಸ್ಥಳಕ್ಕೆ ಬಂದು ಕೇಳಿದವು.

**ಪಿಶಾಚಿಗಳು:-** ಸುಕುಮಾರ, ನೀನು ಯಾರು? ಇಂಥ ಘೋರ ವನಕೆ ಏಕೆ ಬಂದೆ? ನಿನ್ನನ್ನು ನೋಡಿದ ಕೂಡಲೇ ನಮ್ಮಂಥ ಕ್ರೂರರಿಗೂ ಪ್ರೀತಿ ಬರುತ್ತದೆ ಶ್ಯಾಮಸುಂದರ ಶರೀರನೂ, ತಾವರೆ ಗಣ್ಣಿನವನೂ ಆದ ನೀನು ಸಾಕ್ಷಾತ್ ಲಕ್ಷ್ಮೀಪತಿ ನಾರಾಯಣನಂತೆಯೇ ತೋರುತ್ತಿ.

**ವಿಷ್ಣು:-** ನಾನು ಯದುವಂಶದಲ್ಲಿ ಹುಟ್ಟಿದ ಒಬ್ಬ ಕ್ಷತ್ರಿಯ. ದುಷ್ಟರ ನಾಶಕ. ಲೋಕಗಳ ಪಾಲಕ. ನಾನು ಮಹಾದೇವನನ್ನು ನೋಡಲು ಕೈಲಾಸಕ್ಕೆ ಹೊರಟಿದ್ದೇನೆ. ಈ ಬದರೀ ಕ್ಷೇತ್ರವು ಬ್ರಾಹ್ಮಣರ ಆಶ್ರಮ. ಇಲ್ಲಿಯ ತಪಸ್ವಿಗಳು ತಪೋನುಷ್ಠಾನ ಗೈಯುತ್ತಾರೆ ಇಲ್ಲಿ ನಾಯಿಗಳಾಗಲೀ, ಮಾಂಸತಿನ್ನುವ ಪಿಶಾಚಿಗಳಾಗಲೀ ಬರಕೂಡದು. ಇದು ಬೇಟೆಯಾಡುವ ಸ್ಥಳವಲ್ಲ. ಈ ಸಿದ್ಧಾಶ್ರಮದಲ್ಲಿ ಯಾರೂ ಯಾವ ಪ್ರಾಣಿ ಹಿಂಸೆಯನ್ನೂ ಮಾಡಕೂಡದು. ನೀವು ಯಾರು? ಇಲ್ಲಿ ನೀವು ಬರುವುದರಿಂದ ತಪಸ್ವಿಗಳ ತಪಸ್ಸಿಗೆ ವಿಘ್ನ. ಇದರ ಮುಂದೆ ಹೋಗಬೇಡಿರಿ. ಇಲ್ಲದಿದ್ದರೆ ನಾನು ನಿಮ್ಮನ್ನು ದಂಡಿಸುತ್ತೇನೆ''- ಎಂದು ಗದರಿಸಿ ಮಾತನಾಡಿದ. ಆಗ ಒಂದು ಪಿಶಾಚವು ಮಾತನಾಡಿತು.

**ಪಿಶಾಚ:-** ನಾನು ಹೇಳುವದನ್ನು ಕೇಳು. ಜಗದೋಡೆಯನಾದ ಶ್ರೀಹರಿ ಕೃಷ್ಣನನ್ನು ನಮಸ್ಕರಿಸಿ ನಾನು ನಿನಗೆ ಎಲ್ಲವನ್ನೂ ವಿವರಿಸುತ್ತೇನೆ. ಇಚ್ಛೆಯಿದ್ದರೆ ಕೇಳು. ನಾನು ಮಾಂಸ ಭಕ್ಷಕನಾದ ಘೋರ ಪಿಶಾಚ. **ಘಂಟಾಕರ್ಣ** ಎಂದು ನನಗೆ ಹೆಸರು. ನಾನೊಬ್ಬ ಎರಡನೆಯ ಮೃತ್ಯು ಕುಬೇರನ ಸೇವಕ. ಇಲ್ಲಿ ನನ್ನ ಪಕ್ಕದಲ್ಲಿ ಇರುವವ ನನ್ನ ತಮ್ಮ. ಅವನನ್ನು ಕಂಡರೆ ಮೃತ್ಯುವಿಗೂ ಮರಣ ಭಯ. ಆ ವಿಷ್ಣುವಿಗಾಗಿ ಈಗ ನನ್ನ ಬೇಟೆ, ಈ ಬೇಡರ ಪಡೆ, ನಾಯಿಗಳ ತಂಡ ಎಲ್ಲವೂ ನನ್ನ ಪರಿವಾರ. ನಾನು ಶುದ್ಧ ಶಿವಭಕ್ತ ರುದ್ರನ ಅನನ್ಯ ಸೇವಕ. ಆಜನ್ಮ ದ್ವೇಷ ನನಗೆ ವಿಷ್ಣುವಿನಲ್ಲಿ ಆಕಸ್ಮಿಕವಾಗಿ ಯಾರಾದರೂ ಉಚ್ಚರಿಸಿದ ರಾಮ, ಹರಿ, ಕೃಷ್ಣ, ನಾರಾಯಣ ಮುಂತಾದ ವಿಷ್ಣುವಿನ ಹೆಸರುಗಳು ನನ್ನ ಕಿವಿಗೆ ಕೇಳಬಾರದು ಎಂದು ನಾನು ಎರಡೂ ಕಿವಿಗಳಿಗೂ ಎರಡು ಘಂಟೆ ಕಟ್ಟಿಕೊಂಡೇ ತಿರುಗಾಡುತ್ತೇನೆ. ಆದುದರಿಂದಲೇ ನನಗೆ ಘಂಟಾಕರ್ಣ ಎಂದು ಹೆಸರು. ನಾನು ಅಚ್ಛಿನ್ನ ಶಿವಭಕ್ತನಾದುದರಿಂದ ಒಮ್ಮೆ ಕೈಲಾಸ ಪರ್ವತಕ್ಕೆ ಹೋದೆ ಭಕ್ತಿಯಿಂದ ಗೌರೀಪತಿಯನ್ನು ಆರಾಧಿಸಿದೆ ಪ್ರಸನ್ನನಾದ ಪರಮೇಶ್ವರ. ಪಕ್ಕನೇ ನನ್ನ ಎದುರು ಬಂದು ನಿಂತ

ಆ ಮುಕ್ಕಣ್ಣ. ಎತ್ತಿನ ಮೇಲೆ ಕುಳಿತುಕೊಂಡು ಎತ್ತರದ ದನಿಯಲ್ಲಿಯೇ ನುಡಿದ.

**ಮಹಾದೇವ:-** ಘಂಟಾಕರ್ಣ, ನಿನ್ನ ಸ್ತೋತ್ರದಿಂದ ಪ್ರೀತನಾಗಿದ್ದೇನೆ ನಾನು. ಬೇಕಾದ ವರ ಬೇಡು. ನೀಡುತ್ತೇನೆ.

ಆಗ ನಾನು ಆ ಶಂಕರನನ್ನು ವಂದಿಸಿ ಕೈಮುಗಿದು ಕೇಳಿಕೊಂಡೆ - ''ಪ್ರಭು, ನನಗೆ ಬೇರೆ ಏನೂ ಬೇಡು. ಮೋಕ್ಷವನ್ನು ಮಾತ್ರ ಕರುಣಿಸು. ಮೋಕ್ಷ ಬಿಟ್ಟು ನಾನು ಬೇರೆ ಏನನ್ನೂ ಒಲ್ಲೆ.'' ಆಗ ವಿರೂಪಾಕ್ಷನಾದ ಆ ಮಹೇಶ್ವರ ನುಡಿದ. ಬಕ್ತಾ, ಮೋಕ್ಷ ಕೊಡುವದು ನನ್ನ ಕೈಯಲ್ಲಿ ಇಲ್ಲ.

**''ಮುಕ್ತಿ ಪ್ರದಾತಾ ಸರ್ವೇಷಾಂ ವಿಷ್ಣುರೇವ ನ ಸಂಶಯ।**
**ತಸ್ಮಾದ್ ಗತ್ವಾ ಚ ಬದರೀಂ ತತ್ರಾರಾಧ್ಯಜನಾರ್ದನಂ'' ॥**
**ಮುಕ್ತಿಂ ಪ್ರಾಪ್ನುಹಿ ಗೋವಿಂದನರನಾರಾಯಣಾಶ್ರಮೇ ॥**

ಎಲ್ಲರಿಗೂ ಮುಕ್ತಿಯನ್ನು ಕೊಡುವವ ವಿಷ್ಣು ಒಬ್ಬನೇ. ಇದರಲ್ಲಿ ಸಂದೇಹವೇ ಇಲ್ಲ. ಆದುದರಿಂದ ನೀನು ಬದರಿಗೆ ಹೋಗು. ಅಲ್ಲಿ ಇರುವ ಶ್ರೀಹರಿಯನ್ನು ಭಕ್ತಿಯಿಂದ ಆರಾಧಿಸು. ನರನಾರಾಯಣ ಆಶ್ರಮದಲ್ಲಿರುವ ಆ ಗೋವಿಂದನಿಂದಲೇ ನೀನು ಮುಕ್ತಿಯನ್ನು ಪಡೆ. ಹೀಗೆ ನನ್ನ ಇಷ್ಟದೇವತೆ ಹಾಗೂ ಆರಾಧ್ಯ ದೇವತೆಯಾದ ಶಂಕರನಿಂದ ನಾನು ಶ್ರೀಹರಿಯೇ ಸರ್ವೋತ್ತಮ ಎಂದು ಕೇಳಿ ತಿಳಿದುಕೊಂಡೆ.

**''ಇತ್ಯುಕ್ತೋ ದೇವದೇವೇನ ಶೂಲಿನಾ ಜ್ಞಾತವಾನಹಂ।**
**ತ್ವಮೇವ ಪರಮಂ ಮತ್ವಾ ಗೋವಿಂದಂ ಗರುಡಧ್ವಜಂ'' ॥**
**ತಸ್ಮಾತ್ ಪ್ರಾರ್ಥಯ ಮಾನಸ್ಸನ್ ಮುಕ್ತಿದೇಶಮುಪಾಗತಃ ॥**

ಗರುಡಾರೂಢನಾದ ಆ ಸ್ವಾಮಿ ಗೋವಿಂದನೇ ಈ ಪ್ರಪಂಚದಲ್ಲಿ ಎಲ್ಲರಿಗಿಂತಲೂ ಸರ್ವಶ್ರೇಷ್ಠ. ಆ ಹರಿಯೇ ಸರ್ವೋತ್ತಮ ಎಂಬ ಪರಮ ತತ್ವವನ್ನು ಶೂಲಧಾರಿಯಾದ ಶಂಭುವಿನಿಂದ ನಾನು ಅರಿತುಕೊಂಡೆ. ನನಗೆ ಮುಖ್ಯವಾಗಿ ಈಗ ಬೇಕಾದುದು ಮೋಕ್ಷ. ಆ ವಿಷ್ಣುವು ನೆಲೆನಿಂತ ಈ ನರನಾರಾಯಣರ ಆಶ್ರಮವೇ ಮುಕ್ತಿಕ್ಷೇತ್ರ ಎಂದು ತಿಳಿದು ಇಲ್ಲಿಗೆ ಬಂದಿದ್ದೇನೆ. ನಿನಗೆ ಕುತೂಹಲವಿದ್ದರೆ ನನ್ನ ಇನ್ನೂ ಒಂದು ಕಾರ್ಯವನ್ನು ಹೇಳುತ್ತೇನೆ ಕೇಳು. ಪಶ್ಚಿಮಸಮುದ್ರದ ತೀರದಲ್ಲಿ ದ್ವಾರಕಾ ಎಂಬ ಒಂದು ನಗರವಿದೆಯಂತೆ. ಪುರುಷೋತ್ತಮನಾದ ವಿಷ್ಣು ಲೋಕಹಿತಕ್ಕಾಗಿ ಆ ದ್ವಾರಕಾ ಪಟ್ಟಣದಲ್ಲಿ ನೆಲೆಸಿದ್ದಾನಂತೆ ಮನುಷ್ಯನಾಗಿ. ಮನುಷ್ಯ ವೇಷ ತಳೆದು ದ್ವಾರಕಾವತಿಯಲ್ಲಿ ಇರುವ ಸರ್ವೇಶ್ವರನಾದ ವಿಷ್ಣುವನ್ನು ನೋಡಬೇಕೆಂದು ನಾವಿಬ್ಬರೂ ಅಣ್ಣ ತಮ್ಮಂದಿರು ಈ ನಮ್ಮ ಸೇನಾಪರಿವಾರದೊಂದಿಗೆ ಹೊರಟಿದ್ದೇವೆ. ಸರ್ವಲೋಕಕ್ಕೂ ಪ್ರಭು, ಪಾತಾ, ಕರ್ತಾ, ಹರ್ತಾ, ಎಂದರೆ ಸೃಷ್ಟಿಸುವವ, ಪಾಲಿಸುವವ, ಸಂಹರಿಸುವವ ಆ ಶ್ರೀಹರಿಯೇ. ಅವನೇ ಎಲ್ಲ ದೇವತೆಗಳಿಗೂ ಮೂಲ ಪುರುಷ. ಪ್ರಭುಗಳಿಗೆ ಪ್ರಭು. ಅವನನ್ನು ನೋಡಲು ನಾವು ಹೊರಟಿದ್ದೇವೆ. ಬ್ರಹ್ಮನನ್ನು ನಿರ್ಮಿಸಿದವನು ಅವನೇ. ಪ್ರಳಯಕಾಲದಲ್ಲಿ ಆ ಜಗದೀಶನು ವಿಶ್ವವನ್ನೆಲ್ಲ ನುಂಗಿ ತನ್ನ ಹೊಟ್ಟೆಯಲ್ಲಿಟ್ಟುಕೊಂಡು, ಎಳೆಕೂಸಾಗಿ ಆಲದ ಎಲೆಯ ಮೇಲೆ ಪವಡಿಸುತ್ತಾನೆ. ಹಿಂದೆ ಮಾರ್ಕಂಡೇಯ ಮುನಿಯು ವಟಪತ್ರದಲ್ಲಿ

ಮಲಗಿ ಎಳೆಕಂದನಂತೆ ಕೈಕಾಲು ಅಲುಗಿಸುವ ಆ ಶಿಶುವಿನ ಉದರದಲ್ಲಿ ಪ್ರವೇಶಿಸಿ ಅವನ ಮಾಯೆಯಿಂದ ಎಲ್ಲ ಲೋಕಗಳನ್ನೂ ನೋಡಿ ಬಂದನಂತೆ. ಅವನಿಗೆ ವೇದ, ಪುರಾಣ, ಹಾಗೂ ವೇದಾಂತಗಳಲ್ಲಿ ಆತ್ಮ, ಅಜ, ಈಶ ಎಂದು ಕರೆದಿದ್ದಾರೆ. ಅಂಥ ಜಗತ್ತಿನ ತಂದೆಯಾದ ಜನಾರ್ದನನ್ನು ನಾವು ಕಾಣಲು ಹೋಗುತ್ತೇವೆ. ಈಗ ರಾತ್ರಿಯಾಗಿದೆ. ಹೆಚ್ಚಿಗೆ ವಿಚಾರಿಸಬೇಡ. ನಿನಗೆ ಮನಬಂದಲ್ಲಿ ಬೇಕಾದಲ್ಲಿ ನೀನು ಹೋಗು.'' ಹೀಗೆ ಹೇಳಿ ಆ ಪಿಶಾಚವು ಅಲ್ಲಿಯೇ ಒಂದು ಸಮನಾದ ಪ್ರದೇಶದಲ್ಲಿ ಕುಳಿತು ರಾಶಿ ರಾಶಿ ಮಾಂಸವನ್ನು ತಿಂದಿತು. ಅನಂತರ ಸಿಕ್ಕಷ್ಟು ರಕ್ತವನ್ನೂ ಕುಡಿಯಿತು. ಅನಂತರ ಬಾಯಿ ತೊಳೆದುಕೊಂಡು ಕರುಳಿನ ಪಾಶವನ್ನು ಪಕ್ಕದಲ್ಲಿ ಇಟ್ಟುಕೊಂಡು ಆಚಮನ ಮಾಡಿ ಒಂದು ದರ್ಭಾಸನದ ಮೇಲೆ ನೀರನ್ನು ಪ್ರೋಕ್ಷಿಸಿ ಅದರ ಮೇಲೆ ಕುಳಿತುಕೊಂಡಿತು. ಅಲ್ಲಿ ನಿಂತ ನಾಯಿಗಳನ್ನೆಲ್ಲ ಗದರಿಸಿ ಓಡಿಸಿತು. ಅನಂತರ ಸುಖಾಸನದಲ್ಲಿ ಕುಳಿತು ಏಕಾಗ್ರಚಿತ್ತವಾಗಿ ಕೇಶವನನ್ನು ನಮಸ್ಕರಿಸಿ ಒಂದು ಮಂತ್ರವನ್ನು ಪಠಿಸಿತು.

''ನಮೋ ಭಗವತೇ ತಸ್ಮೈ ವಾಸುದೇವಾಯ ಚಕ್ರಿಣೇ ।
ನಮಸ್ತೇ ಗದಿನೇ ತುಭ್ಯಂ ವಾಸುದೇವಾಯ ಧೀಮತೇ'' ॥
ಓಂ ನಮೋ ನಾರಾಯಣಾಯ ವಿಷ್ಣವೇ ಪ್ರಭ ವಿಷ್ಣವೇ ।
ತವ ಚಕ್ರ ಪ್ರಹಾರೇಣ ಕಾಯೋ ನಶ್ಯತು ಮಾಮಕಃ ॥

ಚಕ್ರ ಮತ್ತು ಗಧೆಗಳನ್ನು ಧರಿಸಿದ ಭಗವಾನ್ ವಾಸುದೇವನೇ ನಿನಗೆ ನಮಸ್ಕಾರ. ಗುಣಪರಿಪೂರ್ಣನಾದ ಓಂಕಾರ ಶಬ್ದವಾಚ್ಯನಾದ ನಾರಾಯಣನಿಗೆ ನಮಸ್ಕಾರ. ಸರ್ವಸಮರ್ಥನಾದ ವಿಷ್ಣುವಿಗೆ ವಂದನೆ. ನಿನ್ನ ಚಕ್ರ ಪ್ರಹಾರದಿಂದ ನನ್ನ ದೇಹವು ನಾಶವಾಗಲಿ'' ಹೀಗೆ ವಿಷ್ಣುವನ್ನು ಅನನ್ಯ ಮನಸ್ಸಿನಿಂದ ಧ್ಯಾನ ಮಾಡುತ್ತ ಆ ಪಿಶಾಚಿಯು ತಪಃಸಮಾಧಿಯಲ್ಲಿ ಮಗ್ನವಾಯಿತು. ಹೀಗೆ ಏಕಾಗ್ರ ಮನಸ್ಸಿನಿಂದ ಬಿಟ್ಟು ಬಿಡದೇ ಬಹುಕಾಲ ತನ್ನನ್ನೇ ಉತ್ಕಟ ಭಕ್ತಿಯಿಂದ ಧ್ಯಾನಗೈಯುತ್ತಿರುವ ಆ ಘಂಟಾ ಕರ್ಣನ ಮೇಲೆ ಪ್ರಸನ್ನನಾಗಿ ಕೃಷ್ಣ ಅವನ ಅಂತಃಕರಣಕ್ಕೆ ಗೋಚರನಾದ. ಶಂಖ, ಚಕ್ರ, ಗದಾಪದ್ಮಗಳನ್ನು ಕೈಗಳಲ್ಲಿ ಧರಿಸಿದ ಪೀತಾಂಬರಧಾರಿ ಶ್ರೀಹರಿಯು ಆ ಪಿಶಾಚನ ಮನಸ್ಸಿನಲ್ಲಿ ನಿಚ್ಚಳವಾಗಿ ಮೂಡಿದ. ಆಗ ಆ ಪಿಶಾಚಯ ''ಜಗನ್ನಾಥನ ದರ್ಶನದಿಂದ ನಾನು ಕೃತಾರ್ಥನಾದೆ'' ಎಂದು ಭಾವಿಸಿ ಕಣ್ಣನ್ನು ತೆರೆಯದೇ ಒಳಕಣ್ಣಿನಿಂದಲೇ ಶ್ರೀಹರಿಯ ನೀಲ ಮೇಘಶ್ಯಾಮನಾದ ಮತ್ತು ಶ್ರೀವತ್ಸಲಾಂಛನದಿಂದ ಶೋಭಿಸುವ ಚತುರ್ಭುಜ ಮೂರ್ತಿಯನ್ನು ನೋಡಿ ತನ್ನ ಮನಸ್ಸಿನಲ್ಲಿಯೇ ಯೋಚಿಸಿದ- ''ನಾನು ಈಗ ಸಾಕ್ಷಾತ್ ಆಗಿ ಶ್ರೀಹರಿಯನ್ನು ಕಂಡೆ. ಆ ಹರಿಯು ನನ್ನ ಮೇಲೆ ಪ್ರಸನ್ನ ಆಗಿದ್ದಾನೆ. ಆದರಿಂದಲೇ ನನಗೆ ಈ ದರ್ಶನ ಲಭ್ಯವಾಯಿತು. ಇಂದು ನನ್ನ ಜನ್ಮ ಸಾರ್ಥಕ. ನನ್ನ ಕರ್ಮದ ಕಗ್ಗಂಟುಗಳೆಲ್ಲವೂ ಇಂದು ಬಿಚ್ಚಿಕೊಂಡವು. ನನ್ನ ಇಂದ್ರಿಯಗಳೆಲ್ಲವೂ ಈಗ ನನ್ನ ಸ್ವಾಧೀನದಲ್ಲಿ. ಮನಸ್ಸನ್ನು ಹರಿಯಲ್ಲಿಟ್ಟು ನಾನು ಗೆದ್ದೆ. ನನಗೆ ಈಗ ಪ್ರಪಂಚದಲ್ಲಿ ಬೇರೆ ಯಾವ ಆಸೆಯೂ ಇಲ್ಲ. ನನ್ನ ತಮ್ಮನೂ ಕೂಡ ಹರಿಭಕ್ತನೇ. ಅವನು ಕೂಡ ಮುಂದೆ ಕಾಲಕ್ರಮದಿಂದ ಸಾಯುಜ್ಯ ಮೋಕ್ಷವನ್ನು ಪಡೆಯುವನು.'' ಹೀಗೆ ಯೋಚಿಸಿ ಆ ಪಿಶಾಚಯ ಪ್ರಾಣಗಳನ್ನು ಸಡಿಲು ಬಿಟ್ಟು ಸಮಾಧಿಯಿಂದ ಹೊರಬಂದು ಕಣ್ಣುತೆರೆದ.

ಹೃದಯದಲ್ಲಿ ಹೊಳೆವ ಹರಿಯೇ ಹೊರಗೆ ಬಂದು ತನ್ನ ದಿವ್ಯ ರೂಪದಿಂದ ನಿಂತುಕೊಂಡಿದ್ದ. ಅವನನ್ನು ನೋಡಿದ ಕೂಡಲೇ ಆ ಪಿಶಾಚವು ''ಇವನೇ ವಿಷ್ಣು ಇವನೇ ಹರಿ ಸಮಾಧಿಯಲ್ಲಿ ನಾನು ಕಂಡಂತೆ ಹೊರಗೂ ಇಲ್ಲಿಯೂ ಕಾಣುತ್ತಿದ್ದಾನೆ.''

**ವಿಷ್ಣುರ್ಜಿಷ್ಣುರ್ಜಗನ್ನಾಥಃ ಪುರಾಣಃ ಪುರುಷೋತ್ತಮಃ**

ಇವನೇ ವಿಷ್ಣು, ಇವನೇ ಜಿಷ್ಣು. ಇವನೇ ಜಗನ್ನಾಥ, ಇವನೇ ಪುರಾಣ ಪುರುಷೋತ್ತಮ, ಇವನೇ ವರಾಹರೂಪದಿಂದ ಭೂಮಿಯನ್ನು ರಸಾತಳದಿಂದ ಎತ್ತಿ ತಂದ. ವಾಮನಾವತಾರ ಮಾಡಿ ಬಲಿಯನ್ನು ನಿಗ್ರಹಿಸಿ ಇಂದ್ರನಿಗೆ ರಾಜ್ಯವನ್ನು ಕೊಟ್ಟ. ಒಂದೇ ಕೈಯಿಂದ ಮಂದರಗಿರಿಯನ್ನು ಎತ್ತಿ ದೈತ್ಯರನ್ನೆಲ್ಲ ಗೆದ್ದು ಸಮುದ್ರದಿಂದ ಹುಟ್ಟಿದ ಅಮೃತವನ್ನು ಇಂದ್ರನಿಗೆ ನೀಡಿದ ಭೃಗುವಂಶದಲ್ಲಿ ಹುಟ್ಟಿ ಪರಶುರಾಮನಾಗಿ ಕಾರ್ತವೀರ್ಯಾರ್ಜುನನ್ನು ಕೊಂದ. ರಘುವಂಶದಲ್ಲಿ ರಾಮ ಎಂಬ ಹೆಸರಿನಿಂದ ಅವತರಿಸಿ ಸೀತಾ ಲಕ್ಷ್ಮಣರಿಂದ ಒಡಗೂಡಿ ಕಾಡಿಗೆ ಹೋದ. ಸಮುದ್ರಕ್ಕೆ ಸೇತುವೆ ಕಟ್ಟಿ ರಾವಣನನ್ನು ಕೊಂದ. ವಿಭೀಷಣನಿಗೆ ರಾಜ್ಯವನ್ನಿತ್ತು ಹತ್ತು ಅಶ್ವಮೇಧಯಜ್ಞಗಳನ್ನು ಮಾಡಿದ. ಈಗ ಅದೇ ವಿಷ್ಣು ವಸುವೇವನ ಮಗನಾಗಿ ವಾಸುದೇವ ಹೆಸರಿನಿಂದ ಗೋಕುಲದಲ್ಲಿ ಬಲರಾಮನೊಂದಿಗೆ ಆಡುತ್ತಲಿದ್ದಾನೆ ಮಗುವಿದ್ದಾಗ ಪೂತನಿಯನ್ನು ಕೊಂದ. ಮೊಸರಿನ ಗಡಿಗೆ ಒಡೆದು ತಾಯಿಯಿಂದ ಹಗ್ಗದಿಂದ ಬಿಗಿಯಲ್ಪಟ್ಟು ಯಮಲಾರ್ಜುನರ ಮರಜನ್ಮವನ್ನು ನಾಶಪಡಿಸಿದ. ಗೋಪಿಯರ ಜೊತೆಗೆ ವೃಂದಾವನದಲ್ಲಿ ರಾಸಕ್ರೀಡೆಯನ್ನು ಆಡಿ, ಕಾಲಿಯನನ್ನು ತುಳಿದು, ಧೇನುಕಾಸುರನನ್ನು ಕೊಂದ. ಗೋವರ್ಧನ ಪರ್ವತವನ್ನು ಎತ್ತಿ ಇಂದ್ರನ ಗರ್ವಭಂಗಮಾಡಿ ಗೋಪಿಯರ ಜೊತೆಗೆ ಬೆಳದಿಂಗಳ ರಾತ್ರಿಯಲ್ಲಿ ಕಾಮಿಯಂತೆ ಕ್ರೀಡಿಸಿದ. ಅನಂತರ ಅಕ್ರೂರನ ಅಮಂತ್ರಣದಂತೆ ಮಥುರಾಪಟ್ಟಣಕ್ಕೆ ಹೋಗಿ ಕಂಸನನ್ನು ಕೊಂದು, ಸಾಂದೀಪನಿಯಿಂದ ವಿದ್ಯೆ ಪಡೆದು, ಅವನ ಸತ್ತ ಮಗನನ್ನು ಬದುಕಿಸಿ ಕೊಟ್ಟು, ನರಕಾಸುರನನ್ನು ಸಂಹರಿಸಿ, ಎಲ್ಲ ಬ್ರಾಹ್ಮಣರನ್ನು, ದೇವತೆಗಳನ್ನು, ಮುನಿಮಹರ್ಷಿಗಳನ್ನು ರಕ್ಷಿಸಿದ. ಈ ಜಗದೀಶನನ್ನು ಇಂದು ನಾನು ಪ್ರತ್ಯಕ್ಷ ನೋಡಿ ಕೃತಕೃತನಾದೆ. ಈ ಹರಿಗೆ ನಾನು ಏನು ಕೊಡಲಿ? ಏನು ಮಾತನಾಡಲಿ? ಯಾವ ಸೇವೆ ಮಾಡಲಿ? ನನಗಂತೂ ಏನೂ ತಿಳಿಯದು. ಶ್ರೀಹರಿಯೇ, ನೀನೇ ಅಪ್ಪಣೆ ಮಾಡು. ನೀನು ಹೇಳಿದ್ದನ್ನು ಮಾಡುತ್ತೇನೆ.

**'ನಮೋ ನಮೋ ಹರೇ ಕೃಷ್ಣ ಯಾದವೇಶ್ವರ ಕೇಶವ'**

ಹೀಗೆ ಹೇಳಿ ಕೃಷ್ಣನ ಮುಂದೆ ನಗುತ್ತ ಆ ಪಿಶಾಚವು ವಿಕಟಾಕಾರವಾಗಿ ಕುಣಿಯ ತೊಡಗಿತು.

## ಘಂಟಾಕರ್ಣನಿಗೆ ಮುಕ್ತಿ

**ವೈಶಂಪಾಯನ:-** ಹೀಗೆ ವಿಕಾರವಾಗಿ ನಕ್ಕು ಕುಣಿದು ಮಣಿದು ಆ ಘಂಟಾಕರ್ಣನು ಅಲ್ಲಿಯೇ ಪಕ್ಕದಲ್ಲಿ ಇದ್ದ ಒಂದು ಬ್ರಾಹ್ಮಣನ ಶವವನ್ನು ಸೀಳಿ, ಒಳಗಿನ ಮಾಂಸ ಖಂಡವನ್ನು ತೆಗೆದು, ಅದಕ್ಕೆ ನೀರನ್ನು ಪ್ರೋಕ್ಷಿಸಿ ಒಂದು ಪಾತ್ರೆಯಲ್ಲಿಟ್ಟು ಕೃಷ್ಣನ ಮುಂದೆ ಸರಿಸಿತು. ಮತ್ತು ನಮಸ್ಕರಿಸಿ ಕೈ ಮುಗಿದು ಕೇಳಿ ಕೊಂಡಿತು.

**ಘಂಟಾಕರ್ಣ:-** ಜಗನ್ನಾಥ, ಇದು ನಿನಗೆ ಯೋಗ್ಯವಾದ ಭಕ್ಷ್ಯ. ಇದನ್ನು ನೀನು ಸ್ವೀಕರಿಸು. ಭಕ್ತರು ಭಕ್ತಿಯಿಂದ ನೀಡಿದ್ದನ್ನೆಲ್ಲ ನೀನು ಸ್ವೀಕರಿಸುವಿ ತಾನೇ? ನಾನು ನಿನ್ನ ಭಕ್ತ. ಇದು ಪರಮಪವಿತ್ರವಾದ ಬ್ರಾಹ್ಮಣನ ಹೆಣ. ಇದು ಕೊಳೆತದ್ದಲ್ಲ. ತಂಗಳವೂ ಅಲ್ಲ. ಇದೀಗ ಕೊಂದು ತಂದ ಮಾಂಸ. ಮಾಂಸಾಹಾರಿಗಳಾದ ಪಿಶಾಚಗಳಿಗೆ ಶಾಸ್ತ್ರದಲ್ಲಿ ಈ

ಮಾಂಸವೇ ಆಹಾರ ಎಂದು ಹೇಳಿದ್ದಾರೆ. ನಾನು ನಿನ್ನ ಭಕ್ತ. ಭಕ್ತಿಯಿಂದ ಕೊಟ್ಟದ್ದನ್ನು ಸ್ವೀಕರಿಸುವುದು ಭಗವಂತನಾದ ನಿನ್ನ ಧರ್ಮ. ಇದರಲ್ಲಿ ನಿನಗೆ ಯಾವ ದೋಷವೂ ತೋರದಿದ್ದರೆ ಈ ಮಾಂಸವನ್ನು ಸ್ವೀಕರಿಸು.

**ವಿಷ್ಣು:-** ''ಪಿಶಾಚಿಯ, ಸಾಕು, ಸಾಕು, ಬ್ರಾಹ್ಮಣನ ಶವವನ್ನು ನಾನು ಮುಟ್ಟಲಾರೆ. ಧರ್ಮವನ್ನು ಬಯಸುವ ಎಲ್ಲ ಪ್ರಾಣಿಗಳಿಗೂ ಬ್ರಾಹ್ಮಣ ಪೂಜ್ಯ. ಬ್ರಹ್ಮ ಹತ್ಯೆಯನ್ನು ಎಂದೂ ಮಾಡಬಾರದು. ನಿನ್ನ ಭಕ್ತಿಯಿಂದ ಹಾಗೂ ಏಕಾಗ್ರ ತಪಸ್ಸಿನಿಂದ ನಾನು ಪ್ರೀತನಾಗಿದ್ದೇನೆ. ನಿನಗೆ ಮನಃಶುದ್ಧಿಯನ್ನು ನೀಡಿದ್ದೇನೆ.'' ಎಂದು ಹೇಳಿ ಶ್ರೀಹರಿಯು ತನ್ನ ಕೈಯಿಂದ ಘಂಟಾಕರ್ಣನ ದೇಹವನ್ನು ಸ್ಪರ್ಶ ಮಾಡಿದ. ಶ್ರೀಹರಿಯ ಹಸ್ತಸ್ಪರ್ಶವಾದ ಕೂಡಲೇ ಆ ಘಂಟಾಕರ್ಣನು ಪಿಶಾಚ ಜನ್ಮದಿಂದ ಮುಕ್ತನಾದ ಅವನಿಗೆ ಸುಂದರನಾದ ಗಂಧರ್ವನಂತಹ ದಿವ್ಯ ದೇಹ ಬಂದಿತು. 'ನಿನಗೆ ಬೇಕಾದ ವರ ಬೇಡು' ಎಂದು ಭಗವಂತ ಅವನಿಗೆ ಹೇಳಿದ.

**ಘಂಟಾಕರ್ಣ:-** ಭಗವನ್, ನನಗೆ ನಿನ್ನಲ್ಲಿ ನಿಶ್ಚಲ ಭಕ್ತಿಯಿರಲಿ. ನೀನು ನನ್ನಂತಹ ಪಾಪಿಯನ್ನೂ ಅನುಗ್ರಹಿಸಿ ನಿನನ್ನು ಪರಮ ಪದವನ್ನು ನೀಡಿದೆ. ಈ ದಿವ್ಯಕಥೆಯನ್ನು ಕೇಳಿದವರಿಗೂ ನಿನ್ನಲ್ಲಿ ಅಚಲಭಕ್ತಿ ಉಂಟಾಗಲಿ.

**ಕೃಷ್ಣ:-** ಘಂಟಾಕರ್ಣ, ನಿನ್ನ ಅಪೇಕ್ಷೆಯಂತೆ ಆಗಲಿ. ನೀನು ಈಗಿನ ಇಂದ್ರನು ಇರುವವರೆಗೂ ಸ್ವರ್ಗದಲ್ಲಿ ಅಕ್ಷಯಸುಖವನ್ನು ಅನುಭವಿಸು. ಅನಂತರ ನನ್ನ ಸಾಯುಜ್ಯ ಮೋಕ್ಷವನ್ನು ಹೊಂದು.

ಹೀಗೆ ಹೇಳಿ ಶ್ರೀಕೃಷ್ಣನು ಆ ಘಂಟಾಕರ್ಣನಿಗೆ ಸದ್ಗತಿಯನ್ನುಯಿತ್ತ. ಆ ಪಿಶಾಚಿಯು ಕೊಂದು ತಂದ ಆ ಬ್ರಾಹ್ಮಣನ ಶವವನ್ನು ತನ್ನ ಹಸ್ತ ಸ್ಪರ್ಶದಿಂದಲೇ ಬದುಕಿಸಿ ಅನುಗ್ರಹಿಸಿದ. ಭಗವಂತನಿಂದ ಮರುಹುಟ್ಟನ್ನು ಪಡೆದ ಆ ಬ್ರಾಹ್ಮಣ ಕೃಷ್ಣನನ್ನು ಪೂಜಿಸಿ, ಪ್ರಾರ್ಥಿಸಿ, ಅವನ ಪಾದಸ್ಪರ್ಶ ಪಡೆದು ಧನ್ಯನಾದ. ಉದ್ಧೃತನಾದ. ಮತ್ತು ಶ್ರೀಹರಿಯ ಆಜ್ಞೆಯಿಂದಲೇ ಸ್ವರ್ಗಲೋಕವನ್ನು ಕುರಿತು ಪ್ರಯಾಣ ಮಾಡಿದ.

**ವೈಶಂಪಾಯನ:-** ಅನಂತರ ಕೃಷ್ಣನು ಗರುಡಾರೂಢನಾಗಿ ಕೈಲಾಸಪರ್ವತಕ್ಕೆ ತೆರಳಿದ. ಹನ್ನೆರಡು ವರ್ಷ ಅಲ್ಲಿ ನಿಂತು ಉಗ್ರತಪಸ್ಸನ್ನು ಮಾಡಿದ. ಫಾಲ್ಗುಣ ಮಾಸದಲ್ಲಿ ತಪಸ್ಸನ್ನು ಭಗವಂತನು ಪ್ರಾರಂಭಿಸಿದ. ಮೊದಲು ಕೇವಲ ತರಕಾರಿಯನ್ನು ಮಾತ್ರ ತಿಂದು ವೇದಾಧ್ಯಯನ ಮಾಡುತ್ತ ಜಪ ಮಾಡುತ್ತಿದ್ದ. ಯಾವ ಉದ್ದೇಶದಿಂದ ಈ ಹರಿಯ ತಪಸ್ಸು ಎನ್ನುವುದು ಮಾತ್ರ ಯಾರಿಗೂ ತಿಳಿಯಲೇ ಇಲ್ಲ. ಗರುಡನು ಕೃಷ್ಣನ ಹೋಮಕ್ಕಾಗಿ ಅರಳಿಕಟ್ಟಿಗೆಗಳನ್ನೂ, ಸುದರ್ಶನ ಚಕ್ರವು ಹೂಗಳನ್ನೂ, ಅವನ ಖಡ್ಗವಾದ ನಂದಕವು ಕುಶದರ್ಭೆಗಳನ್ನೂ ತಂದು ಕೊಡುತ್ತಿದ್ದವು. ಅವನ ಕೌಮುದಿಕೀ ಗದೆ. ಹಾಗೂ ಶಾರಂಗ ಬಿಲ್ಲು ಅವನ ಕಿಂಕರರಾಗಿ ಎಲ್ಲ ವಿಧವಾದ ಸೇವೆಯನ್ನು ಸಲ್ಲಿಸುತ್ತಿದ್ದವು. ಪಾಂಚಜನ್ಯ ಶಂಖವು ತಪಸ್ಸಿಗೆ ವಿಘ್ನ ಬರದಂತೆ ಕಾವಲು ಕಾಯುತ್ತಿತ್ತು. ಅವನು ಮೊದಲು ವರ್ಷದಲ್ಲಿ ತಿಂಗಳಿಗೆ ಒಂದು ಸಲ ಅಲ್ಪಾಹಾರ ಮಾಡಿದ. ಎರಡನೆಯ ವರ್ಷ ಆರು ತಿಂಗಳಿಗೆ ಒಮ್ಮೆ ಆಹಾರವನ್ನು ಸ್ವೀಕರಿಸಿದ. ಮೂರನೆಯ ವರ್ಷದಿಂದ ವರ್ಷಕ್ಕೆ ಒಂದು ಸಲ ಮಾತ್ರ ಆಹಾರವನ್ನು ಗ್ರಹಣ ಮಾಡುತ್ತಿದ್ದ. ಹೀಗೆ ಹನ್ನೆರಡು ವರ್ಷ ತಪಸ್ಸನ್ನು ಮಾಡಿ ಒಂದು ತಿಂಗಳು ಕಡಿಮೆ ಇದ್ದಾಗ ಅಗ್ನಿಯಲ್ಲಿ ಹೋಮ ಮಾಡಿ ಅರಣ್ಯಕ

ಮಂತ್ರಗಳನ್ನು ಪಠಿಸಿದ. ಅನಂತರ ಓಂಕಾರ ಜಪವನ್ನು ಮಾಡಿದ. ಆಗ ಇಂದ್ರಾದಿ ದೇವತೆಗಳು, ನಾರದಾದಿ ಮಹರ್ಷಿಗಳು ಅಲ್ಲಿ ಬಂದು ಅವನ ದರ್ಶನತೆಗೆದುಕೊಂಡರು. ಪಾರ್ವತಿ ಸಹಿತನಾಗಿ ಪರಮೇಶ್ವರನು ಆ ಶ್ರೀಕೃಷ್ಣನ ದರ್ಶನಕ್ಕಾಗಿ ಆ ತಪೋವನಕ್ಕೆ ಆಗಮಿಸಿದ. ದೀಕ್ಷಾ ಬದ್ಧನಾಗಿ ಹೋಮ ಮಾಡುತ್ತ ಕುಳಿತುಕೊಂಡ ಆ ಶ್ರೀಹರಿಯನ್ನು ನೋಡಿ ಮಹಾದೇವನು ಎತ್ತಿನಿಂದಳಿದು ಅವನು ಕುಳಿತಲ್ಲಿಗೆ ಸಾಗಿ ಬಂದ. ಆಗ ಪರಮಸಂತುಷ್ಟನಾದ ಶ್ರೀಹರಿಯು ಎದ್ದು ಬಂದು ಸ್ವಾಗತಿ ಸ್ತೋತ್ರ ಮಾಡಿದ. ಆಗ ವಿಷ್ಣು ಮಾಡಿದ ಸ್ತೋತ್ರದಿಂದ ಪ್ರಸನ್ನನಾದ ಮಹಾದೇವನು ಪ್ರೀತಿಯಿಂದ ಕೇಶವನ ಕೈ ಹಿಡಿದು ಮಾತನಾಡಿದ.

**ಶಿವ:**- ಚಕ್ರಪಾಣಿಯೇ, ನೀನು ಏತಕ್ಕಾಗಿ ಈ ತಪಸ್ಸನ್ನು ಮಾಡುತ್ತಲಿರುವೆ? ನೀನು ಸಾಕ್ಷಾತ್ ವಿಷ್ಣು. ತಪಸ್ಸಿನ ಸತ್ವ ನೀನು. ತಪಸ್ಸಿನ ಸಿದ್ಧಿಯೇ ನೀನು. ಸಂತತಿಯ ಸಲುವಾಗಿ ತಪಶ್ಚರ್ಯೆಯನ್ನು ಮಾಡುತ್ತಿದ್ದರೆ ನಿಮಗೆ ಉತ್ತಮವಾದ ಪುತ್ರನನ್ನು ಈ ಮೊದಲೇ ಕ್ಲಪ್ತಮಾಡಿ ಇಟ್ಟಿದ್ದೇನೆ. ಹಿಂದೆ ನಾನು ಕಾರಣಾಂತರದಿಂದ ತಪಸ್ಸು ಮಾಡುತ್ತಿದ್ದೆ. ಆಗ ಹಿಮಾಲಯನು ಪಾರ್ವತಿಯನ್ನು ನನ್ನ ಸೇವೆಗೆ ನೇಮಿಸಿದ್ದ. ಹೆದರಿದ ಇಂದ್ರಕಾಮನನ್ನು ಕಳಿಸಿದ. ಕಾಮ ತನ್ನ ಹೂಬಾಣಕ್ಕೆ ನನ್ನನ್ನು ಗುರಿ ಮಾಡಿದ. ಅದರಿಂದ ನಾನು ಸಿಟ್ಟಾದೆ. ಸಿಟ್ಟಾದ ನನ್ನ ಕಣ್ಣಿನಿಂದ ಬೆಂಕಿ ಹುಟ್ಟಿತು. ಅದು ಕಾಮನನ್ನು ಸುಟ್ಟಿತು. ಅನಂತರ ನನಗೆ ಗೊತ್ತಾಯಿತು ಇದು ಇಂದ್ರನ ಅವಾಂತರ ಎಂದು. ಮಧ್ಯದಲ್ಲಿ ನಿರಪರಾಧಿಯಾದ ಕಾಮನು ಸತ್ತದ್ದರಿಂದ ನನಗೆ ಅವನ ಮೇಲೆ ದಯೆ ಮೂಡಿತು. ಬ್ರಹ್ಮನ ಆದೇಶದಂತೆ ಆ ಕಾಮನೇ ನಿನ್ನ ಜ್ಯೇಷ್ಠ ಪುತ್ರನಾಗಿ ನಿನ್ನಿಂದ ರುಕ್ಮಿಣಿಯಲ್ಲಿ ಹುಟ್ಟಿಬರುವನು. ಅವನಿಗೆ ಪ್ರದ್ಯುಮ್ನ ಎಂದು ಹೆಸರು ಬರುವುದು.

ಹೀಗೆ ಹೇಳಿದ ಬಳಿಕ ಅಲ್ಲಿ ನೆರೆದ ಋಷಿಮುನಿಗಳು ಎಲ್ಲರೂ ಶ್ರೀಹರಿಯ ಮಹಿಮೆಯನ್ನು ಹೇಳಬೇಕು ಎಂದು ರುದ್ರನನ್ನು ಕೇಳಿಕೊಂಡರು. ಆಗ ಮಹಾದೇವನು-

**ಅಂಜಲಿಂ ಸಂಪುಟಂ ಕೃತ್ವಾ ವಿಷ್ಣುಮುದ್ದಿಶ್ಯ ಶಂಕರಃ ।**
**ಉಮಯಾ ಸಾರ್ಧಮೀಶಾನೋ ಯಾಥಾತ್ಮ್ಯಂ ವಕ್ತುಮೈಹತ ॥**

ಕೃಷ್ಣನನ್ನು ಕುರಿತು ಶಂಕರನು ಉಮಾದೇವಿಯೊಂದಿಗೆ ಸಂಪುಟಾಕಾರವಾಗಿ ಕೈ ಜೋಡಿಸಿ ಕೃಷ್ಣನ ಪರಮಾತ್ಮ ಸ್ವರೂಪವನ್ನು ಹೇಳಲು ಇಚ್ಛಿಸಿದ.

**ಹರೇ ಕುರ್ವತಿ ತತ್ರೈವಮಂಜಲಿಂ ಕುರುಸತ್ತಮ ।**
**ಅಂಜಲಿಂ ಚಕ್ರಿರೇ ವಿಷ್ಣೋಃ ಮುನಯಃ ಸಸುರರ್ಷಯಃ ॥**

ಸಾಕ್ಷಾತ್ ಸ್ವಯಂ ಮಹಾದೇವನೇ ಕೈಮುಗಿದುಕೊಂಡು ನಿಂತದ್ದನ್ನು ನೋಡಿ ಅಲ್ಲಿ ನೆರೆದ ಎಲ್ಲ ದೇವತೆಗಳೂ ಮುನಿಗಳೂ, ಕಿನ್ನರರೂ, ಕೈ ಮುಗಿದು ನಿಂತುಕೊಂಡರು.

**''ಬ್ರಹ್ಮಾ ತ್ವಂ ಸೃಷ್ಟಿಕಾಲೇ ತು ಸ್ಥಿತೌ ವಿಷ್ಣುರಸಿ ಪ್ರಭೋ ।**
**ಸಂಹಾರೇ ರುದ್ರನಾಮಾಸಿ ತ್ರಿಧಾಮಾ ತ್ವಮಸಿ ಪ್ರಭೋ ॥''**

ಸೃಷ್ಟಿಕಾಲದಲ್ಲಿ ನೀನೇ ಬ್ರಹ್ಮನಾಗಿ ಜಗತ್ತನ್ನೆಲ್ಲ ಸೃಷ್ಟಿಮಾಡುವೆ. ಸ್ಥಿತಿಕಾಲದಲ್ಲಿ ಸಂರಕ್ಷಣೆ ಮಾಡುವೆ. ನೀನೇ ಸ್ವಯಂ ವಿಷ್ಣುವಾಗಿರುತ್ತೀಯೆ. ಸಂಹಾರ ಕಾಲದಲ್ಲಿ ರುದ್ರ ಎಂಬ ಹೆಸರನ್ನು ತಳೆದು ಜಗತ್ತೆಲ್ಲ ಸಂಹರಿಸುವೆ. ಈ ಜಗತ್ತನ್ನೆಲ್ಲ ನೀನು ವ್ಯಾಪಿಸಿರುವುದರಿಂದ ನಿನಗೆ ವಿಷ್ಣು ಎಂದು ಹೆಸರು. ನೀರಿನಲ್ಲಿ ಮಲಗಿದ್ದರಿಂದ

ನಾರಾಯಣ. ಪ್ರಾಣಿಗಳನ್ನೆಲ್ಲ ಅಂತಕಾಲದಲ್ಲಿ ಸಂಹರಿಸುವುದರಿಂದ ನೀನೇ ಹರಿ. ಶಂ ಎಂದರೆ ಸುಖವನ್ನು ಉಂಟುಮಾಡುವುದರಿಂದ ನೀನೇ ಶಂಕರ. ಗುಣ ಪರಿಪೂರ್ಣನಾದದ್ದರಿಂದ ಬ್ರಹ್ಮ. ಇಂದ್ರಿಯಗಳಿಗೆ ಒಡೆಯನಾದುದರಿಂದ ಹೃಷೀಕೇಶ.

**ಕ ಇತಿ ಬ್ರಹ್ಮಣೋ ನಾಮ ಈಶೋಹಂ ಸರ್ವದೇಹಿನಾಂ ।**
**ಆವಾಂ ತವಾಂಗಸಂಭೂತೌ ತಸ್ಮಾತ್ ಕೇಶವ ನಾಮವಾನ್ ॥**

**''ನಮಃ ಸರ್ವಾತ್ಮನಾ ದೇವ ವಿಷ್ಣೋ ಮಾಧವ ಕೇಶವ**
**ಕಿಮುಚ್ಯತೇ ಮಯಾ ದೇವ ಸರ್ವಂ ತ್ವಂ ಭೂತ ಭಾವನ**
**ನಮಸ್ಕರೋಮಿ ಸರ್ವಾತ್ಮನ್ ನಮಸ್ತೇಽಸ್ತು ಸದಾಹರೇ**
**ನಮಃ ಪುಷ್ಕರನಾಭಾಯ ವಂದೇ ತ್ವಾಮಜಮೀಶ್ವರಂ ॥''**

ಹೀಗೆ ಹೇಳಿ ಮಹಾದೇವರು ಅಲ್ಲಿ ನೆರೆದ ದೇವತೆಗಳನ್ನು ಮುನಿಗಳನ್ನು ಕುರಿತು ಮತ್ತೆ ಹೇಳಿದರು.

ಕ ಎಂದರೆ ಚತುರ್ಮುಖ ಬ್ರಹ್ಮನ ಹೆಸರು. ಈಶ ಎಂದರೆ ಎಲ್ಲ ಪ್ರಾಣಿಗಳ ಒಡೆಯನಾದ ನಾನು. ನಾವಿಬ್ಬರೂ ನಿನ್ನ ಅಂಗದಿಂದ ಹುಟ್ಟಿದ್ದೇವೆ. ಆದ್ದರಿಂದ ನಿನಗೆ 'ಕಂ ಈಶಂ ವರ್ತಯತಿ ಇತಿ ಕೇಶವಃ' ಎಂಬ ಹೆಸರು ಬಂದಿದೆ. 'ಮಾ' ಎಂದರೆ ವಿದ್ಯೆ. ಅದಕ್ಕೆ ನೀನೇ ಒಡೆಯನಾಗಿರುವುದಿರಂದ 'ಮಾಧವ' ಎಂದು ಹೆಸರು. ವಾಗಭಿಮಾನಿಯಾದ ಅಂಭ್ರಣೀ ನಾಮಕಳಾದ ಮಹಾಲಕ್ಷ್ಮಿಗೆ ನೀನು ಸ್ವಾಮಿಯಾಗಿರುವೆ. 'ಗೋ' ಎಂದರೆ ವೇದವಾಣಿ ಅದನ್ನು ಪೂರ್ಣವಾಗಿ ತಿಳಿದವ ನೀನು ಆದುದರಿಂದ ಮುನಿಗಳು ನಿನ್ನನ್ನು 'ಗೋವಿಂದ' ಎಂದು ಕರೆಯುತ್ತಾರೆ. ನೀನು ಮೂರು ಲೋಕಗಳನ್ನೂ ವಾಮನ ರೂಪದಿಂದ ಆಕ್ರಮಿಸಿದ್ದರಿಂದ ನೀನೇ 'ತ್ರಿವಿಕ್ರಮ'. ಈ ಪ್ರಪಂಚ ಎಲ್ಲವು ನಿನ್ನ ಅಧೀನ. ಆದ್ದರಿಂದ ನೀನೇ 'ಸರ್ವ' ಎನಿಸುವಿ ಆದ್ದರಿಂದ ಕೇಶವ ಮಾಧವ, ಸರ್ವಾತ್ಮಕನಾದ ನಿನಗೆ ನನ್ನ ನಮಸ್ಕಾರ.

**''ಹರಿರೇಕಃ ಸದಾ ಧ್ಯೆಯೋ ಭವದ್ಭಿಃ ಸತ್ವಮಾಸ್ಥಿತೈಃ ।**
**ನಾನ್ಯೋ ಜಗತಿ ದೇವೋಽಸ್ತಿ ವಿಷ್ಣೋರ್ನಾರಾಯಣಾತ್ಪರಃ ॥''**

ಸತ್ವಗುಣಪ್ರಧಾನರಾದ ನೀವು ಯಾವಾಗಲೂ ಶ್ರೀಹರಿ ಒಬ್ಬನನ್ನೇ ಧ್ಯಾನ ಮಾಡಬೇಕು. ಈ ಜಗತ್ತಿನಲ್ಲಿ ನಾರಾಯಣನ ಹೊರತು ಅವನಿಗಿಂತ ಮಿಗಿಲಾದ ಹೆಚ್ಚಿನ ದೇವರು ಯಾರೂ ಇರುವುದಿಲ್ಲ.

**ಓಮಿತ್ಯೇವಂ ಸದಾ ವಿಪ್ರಾಃ ಪಠತ ಧ್ಯಾತ ಕೇಶವಂ ।**
**ತತೋ ನಿಶ್ರೇಯಸ ಪ್ರಾಪ್ತಿರ್ಭವಿಷ್ಯತಿ ನ ಸಂಶಯಃ ॥**

ಓಂ ಎಂದರೆ ಗುಣಪೂರ್ಣನಾದ ಆ ಕೇಶವನನ್ನು ಓಂಕಾರ ರೂಪದಿಂದ ಧ್ಯಾನಮಾಡಿರಿ. ಓಂ ಎಂಬ ಪ್ರಣವ ಮಂತ್ರವನ್ನೇ ಯಾವಾಗಲೂ ಪಠಿಸಿರಿ. ಇದರಿಂದಲೇ ನಿಮಗೆ ಮೋಕ್ಷವು ದೊರೆಯುವುದು. ಇದರಲ್ಲಿ ಸಂಶಯವೇ ಇಲ್ಲ. ಯಾಕೆಂದರೆ- ''ಏಷ ವೋ ಮೋಕ್ಷ ದಾತಾ ಚ'' ಈ ವಿಷ್ಣುವೇ ಮೋಕ್ಷವನ್ನು ಕರುಣಿಸುವ ಒಬ್ಬನೇ ದೇವೋತ್ತಮ ಅವನನ್ನೇ ನೀವು ಸ್ಮರಿಸಿ, ಜಪಿಸಿ, ಆರಾಧಿಸಿ ಉಪಾಸನೆ ಮಾಡಿರಿ. ಹೀಗೆ ಮುನಿಗಳಿಗೆಲ್ಲ ಉಪದೇಶಿಸಿ ಮಹಾದೇವರು ಮತ್ತೊಮ್ಮೆ ನಮಿಸಿ ಈ ವಿಷ್ಣು ಸ್ತೋತ್ರ ಹೇಳಿದರು.

## ಶಿವಕೃತ ವಿಷ್ಣುಸ್ತುತಿ

### ಶಂಕರ ಉವಾಚ

೧) ನಮೋ ವಿಷ್ಣೋ ನಮೋ ವಿಷ್ಣೋ ನಮೋ ವಿಷ್ಣೋ ನಮೋ ಹರೇ ।
ನಮಸ್ತೇ ಸರ್ವ ಲೋಕೇಶ ಸರ್ವಕರ್ತ್ರೇ ನಮೋ ನಮಃ ॥

೨) ನಮಸ್ತೇ ವಾಸುದೇವಾಯ ವಾಸುದೇವ ನಮೋ ನಮಃ ।
ನಮಃ ಸ್ವಭಾವ ಶುದ್ಧಾಯ ನಮಸ್ತೇ ಯಜ್ಞ ಸೂಕರ ॥

೩) ಗದಿನೇ ಖಡ್ಗಿನೇ ತುಭ್ಯಂ ಶಂಖಿನೇ ಚಕ್ರಿಣೇ ನಮಃ ।
ಶೂಲನೇ ಚರ್ಮಿಣೇ ನಿತ್ಯಂ ವರದಾಯ ನಮೋ ನಮಃ ॥

೪) ನಮೋ ಯಜ್ಞಾಯ ಇಜ್ಯಾಯ ಹವಿಷೇ ಹವ್ಯಸಂಸ್ಕೃತೇ ।
ನಮಃ ಸ್ರುವಾಯ ಪಾತ್ರಾಯ ಯಜ್ಞಾಂಗಾಯ ಪರಾಯ ಚ ॥

೫) ನಮಃ ಪ್ರಣವದೇಹಾಯ ಕ್ಷರಾಯಾಪ್ಯಕ್ಷರಾಯ ಚ ।
ವೇದಾಯ ವೇದರೂಪಾಯ ಶಸ್ತ್ರಿಣೇ ಶಸ್ತ್ರರೂಪಿಣೇ ॥

೬) ನಮೋ ಭಗವತೇ ತುಭ್ಯಂ ವಾಸುದೇವಾಯ ಧೀಮತೇ ।
ಯಸ್ಯ ಭಾಸಾ ಜಗತ್ ಸರ್ವಂ ಭಾಸತೇ ನಿತ್ಯ ಮುಚ್ಯುತ ॥

೭) ನಮೋ ಭಗವತೇ ದೇವ ನಿತ್ಯಂ ಸೂರ್ಯಾತ್ಮನೇ ನಮಃ ।
ಯಃ ಶೀತಯತಿ ಶೀತಾಂಶುಂ ಲೋಕಾನ್ ಸರ್ವಾನಿಮಾನ್‌ವಿಭುಃ ॥

೮) ನಮಃ ಕೃಷ್ಣಾಯ ಕೃಷ್ಣಾಯ ಸರ್ವಾವಾಸ ನಮೋ ನಮಃ ।
ನಮೋ ಭೂಯೋ ನಮಸ್ತೇಽಸ್ತು ಪಾಹಿ ಲೋಕಾನ್ ಜನಾರ್ದನ ॥

೯) ನಮಸ್ತೇ ವಿಷ್ಣವೇ ದೇವ ನಿತ್ಯಂ ಸೋಮಾತ್ಮನೇ ನಮಃ ।
ಯಃ ಪ್ರಜಾಃ ಪ್ರೀಣಯತ್ಯೇಕೋ ವಿಶ್ವಾತ್ಮಾ ಭೂತಭಾವನಃ ॥

೧೦) ನಮಃ ಸರ್ವಾತ್ಮನೇ ದೇವ ನಮೋ ವಾಗಾತ್ಮನೇ ಹರೇ ।
ಯೋ ದಧಾರ ಕರೇಣಾಸೌ ಕುಶ ಚೀರಾದಿ ಯತ್ ಸದಾ ॥

೧೧) ಧಧಾರ ವೇದಾನ್ ಸರ್ವಾಂಶ್ಚ ತಭ್ಯಂ ಬ್ರಹ್ಮಾತ್ಮನೇ ನಮಃ।
ಸರ್ವಾನ್ ಸಂಹರತೇ ಯಸ್ತು ಸಂಹಾರೇ ವಿಶ್ವದೃಕ್ ಸದಾ ॥

೧೨) ಕ್ರೊಧಾತ್ಮಾಸಿ ವಿರೂಪೋಽಸಿ ತುಭ್ಯಂ ರುದ್ರಾತ್ಮನೇ ನಮಃ ।
ಸೃಷ್ಟೌ ಸ್ರಷ್ಟಾ ಸಮಸ್ತಾನಾಂ ಪ್ರಾಣಿನಾಂ ಪ್ರಾಣದಾಯಿನೇ ॥

೧೩) ಅಜಾಯ ವಿಷ್ಣವೇ ತುಭ್ಯಂ ಸೃಷ್ಟೇ ವಿಶ್ವ ಸೃಜೇ ನಮಃ ।
ಆದೌ ಪ್ರಕೃತಿ ಮೂಲಾಯ ಭೂತಾನಾಂ ಪ್ರಭವಾಯ ಚ ॥

೧೪) ನಮೋಽಶ್ವಶಿರಸೇ ತುಭ್ಯಂ ವೇದಾಭರಣ ರೂಪಿಣೇ ।
ಅಗ್ನಯೇಽ ಗ್ನಿಪತೇ ತುಭ್ಯಂ ಜ್ಯೋತಿಷಾಂ ಪತಯೇ ನಮಃ ॥

೧೫) ಬುದ್ಧಿ ಪ್ರಿಯಾಯ ಬುದ್ಧಾಯ ಪ್ರಬುದ್ಧಾಯ ಸುಖಾಯ ಚ ।
ಹರಯೇ ವಿಷ್ಣವೇ ತುಭ್ಯಂ ನಮಃ ಸರ್ವಾತ್ಮನೇ ಗುರೋ ॥

ಹೀಗೆ ಮಹಾರುದ್ರದೇವರು ಭಕ್ತಿಯಿಂದ ಮಹಾವಿಷ್ಣುವನ್ನು ಸ್ತೋತ್ರಮಾಡಿ ಅಲ್ಲಿ ನೆರೆದ ಮುನಿಪುಂಗವರಿಗೆ ಹೇಳಿದರು.

**ಶಿವ:-** ''ಮುನಿ ಮನುಜರೇ, ನೀವೆಲ್ಲರೂ ನಾನು ಹೇಳಿದ ಈ ವಿಷ್ಣು ಸ್ತುತಿಯನ್ನು ನಿತ್ಯವೂ ಪಠಿಸಿರಿ. ಕೇಶವನನ್ನು ಆರಾಧಿಸಿರಿ. ಈ ನಾನು ಮಾಡಿದ ಪಾಪಪರಿಹಾರಕವಾದ ಹರಿಸ್ತೋತ್ರವನ್ನು ಪಠಿಸುವವರಿಗೆ ಶ್ರೀಹರಿಯು ಶ್ರೇಯಸ್ಸನ್ನು ನೀಡುತ್ತಾನೆ. ಇದರಲ್ಲಿ ಸಂಶಯವಿಲ್ಲ.'' ಹೀಗೆ ಹೇಳಿ ಮಹಾದೇವರು ಅಲ್ಲಿಯೇ ಅಂತರ್ಧಾನವನ್ನು ಹೊಂದಿದರು. ಅದನ್ನು ಕೇಳಿ ಋಷಿ ಮುನಿಗಳೆಲ್ಲರೂ 'ಶ್ರೀ ನಾರಾಯಣನೇ ಪರತತ್ವ' ಎಂದು ತಿಳಿದು ಅವನಿಗೆ ನಮಸ್ಕಾರ ಮಾಡಿದರು. ಇಂದ್ರಾದಿ ಲೋಕಪಾಲಕರು ಆ ಶ್ರೀಹರಿಯನ್ನು ನಮಸ್ಕರಿಸಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಅನಂತರ ಕೃಷ್ಣನು ಗರುಡನನ್ನು ಆರೋಹಣ ಮಾಡಿ ಆ ಕೈಲಾಸದಿಂದ ಕೆಳಗೆ ಇಳಿದು ಬದರೀ ಎಂಬ ನರನಾರಾಯಣರ ಆಶ್ರಮಕ್ಕೆ. ಮರಳಿ ಬಂದ. ಅಲ್ಲಿ ಮುನಿಗಳಿಂದ ಸ್ವಾಗತ ಸತ್ಕಾರಗಳಿಂದ ಅರ್ಚಿತನಾಗಿ ಸುಖಾಸನದಲ್ಲಿ ವಿಶ್ರಮಿಸಿದ.

## ಪೌಂಡ್ರಕ ವೃತ್ತಾಂತ

**ವೈಶಂಪಾಯನ:-** ಇದೇ ಕಾಲದಲ್ಲಿ ಪೌಂಡ್ರಕ ಎಂಬ ರಾಜನು ಪ್ರಬಲನಾಗಿದ್ದ. ಅವನೂ ಕೂಡ ವಸುದೇವನ ಮತ್ತೊಬ್ಬ ಹೆಂಡತಿಯ ಮಗ. ತಾನೂ ವಾಸುದೇವ ಅಥವಾ ತಾನೇ ವಾಸುದೇವ ಎಂಬ ಗರ್ವ ಆ ರಾಜಕುಮಾರನಿಗೆ. ಕೃಷ್ಣನು ವಾಸುದೇವ ಎಂದು ಎಲ್ಲ ಕಡೆಗೂ ಕೀರ್ತಿ ಪಡೆದದ್ದು ಅವನಿಗೆ ಅಸೂಯೆ ಆಗಿ ಅವನು ಕೃಷ್ಣದ್ವೇಷಿ ಆಗಿದ್ದ. ಒಂದು ಸಲ ಅವನು ಎಲ್ಲ ರಾಜರ ಸಭೆ ಕರೆದು ಹೇಳಿದ.

**ಪೌಂಡ್ರಕ:-** ರಾಜ ಮಹಾರಾಜರೇ, ಕೃಷ್ಣನ ಬೆಂಬಲದಿಂದ ಯಾದವರು ಮದೋನ್ಮತ್ತರಾಗಿದ್ದಾರೆ. ಪೃಥ್ವಿಯನ್ನೆಲ್ಲ ಗೆದ್ದಿದ್ದಾರೆ. ಆದ್ದರಿಂದ ಅವರು ನನಗೆ ಕರವನ್ನು ಕೊಡುವುದಿಲ್ಲ. ಆ ಕೃಷ್ಣನು ಕೂಡ ತನ್ನ ಕೈಯಲ್ಲಿಯ ಚಕ್ರದ ಬಲದಿಂದ ನನ್ನನ್ನು ಧಿಕ್ಕರಿಸಿ ತಲೆ ಎತ್ತಿ ನಿಂತಿದ್ದಾನೆ. ತಾನೊಬ್ಬನೇ 'ಚಕ್ರಿ' ಎಂದರೆ ಚಕ್ರವುಳ್ಳವ. 'ಶಂಖ, ಗದೆ, ಬಿಲ್ಲು, ಬಾಣವುಳ್ಳವ' ಎಂದು ಗರ್ವಾಂಧನಾಗಿದ್ದಾನೆ. ಅವನಿಗಿಂತ ನನ್ನ ಕೈಯಲ್ಲಿಯ ಚಕ್ರವು ಮಹಾಘೋರ. ಆ ಕೃಷ್ಣ ಚಕ್ರವನ್ನು ನಾಶಮಾಡಲು ನನ್ನ ಕೈ ಚಕ್ರವು ಸಮರ್ಥ. ನನ್ನ ಶಂಖ ಕೂಡ ದಿವ್ಯ ಧ್ವನಿವುಳ್ಳದ್ದು. ನನ್ನಲ್ಲಿದ್ದದ್ದೇ ನಿಜವಾದ ಶಾರಂಗ ಧನಸ್ಸು. ನನ್ನ ಕೈಯಲ್ಲಿಯ ಕೌಮೋದಕೀ ಎಂಬ ಈ ಗದೆಯು ಸಾವಿರ ಉಕ್ಕಿನ ಭಾರ (ಇಪ್ಪತ್ತು ತೊಲಿ=ಒಂದು ಭಾರ)ದ ತೂಕದ್ದು. ನನ್ನ ನಂದಕ ಎಂಬ ಖಡ್ಗವು ಕಾಲಾಂತಕ. ಭಾರೀ ಗಟ್ಟಿ. ಆದ್ದರಿಂದ ನಿಜವಾದ ಶಂಖ, ಚಕ್ರ, ಗದಾ, ಬಿಲ್ಲು, ಬಾಣಗಳನ್ನು ಧರಿಸಿದ ನಾನೇ ವಸ್ತುತಸ್ತು ಚಕ್ರೀ, ಶಂಖೀ, ಗದೀ, ಶಾರ್ಙ್ಗೀ ಹಾಗು ನಾನೇ ನಿಜವಾದ ವಾಸುದೇವ. ಅವನು ವಸುದೇವನ ಮಗನಾದರೂ ದನಕಾಯುವವ, ಗೋಪಾಲ. ಇನ್ನು ಮೇಲೆ ನೀವು ಯಾರೂ ತುರುಗಾಹಿಗಳ ಕುಲದಲ್ಲಿ ಬೆಳೆದ ಆ ಗೋಪಾಲನನ್ನು 'ವಾಸುದೇವ' ಎಂದು ಕರೆಯಕೂಡದು. ಮತ್ತು ನನ್ನ ಮಿತ್ರನಾದ ನರಕಾಸುರನನ್ನು ಸಂಹರಿಸಿ ಆ ಕೃಷ್ಣನು ನನಗೆ ಬಹಳ ದುಃಖವನ್ನು ಉಂಟುಮಾಡಿದ್ದಾನೆ. ನಾನು ಆ ಕೃಷ್ಣನನು ಯುದ್ಧದಲ್ಲಿ ಗೆಲ್ಲುತ್ತೇನೆ. ನೀವೆಲ್ಲರೂ ನನ್ನನ್ನು ಬೆಂಬಲಿಸಬೇಕು. ಯಾರಾದರೂ ವಾಸುದೇವ ಎಂದು ಕೃಷ್ಣನನು ಕರೆದರೆ ಅವರು ನೂರು ತೊಲೆ ಬಂಗಾರವನ್ನು, ನೂರು ಬಂಗಾರ ನಾಣ್ಯಗಳನ್ನು. ಹಾಗೂ ನಾನು ಬೇಡಿದಷ್ಟು ಧಾನ್ಯವನ್ನು ದಂಡರೂಪವಾಗಿ ತೆತ್ತಬೇಕಾಗುವುದು'' ಎಂದು ಹೇಳಿದ.

ಇದನ್ನು ಕೇಳಿ ಕೃಷ್ಣನ ಬಲವೀರ್ಯವನ್ನು ಬಲ್ಲ ಕೆಲವು ರಾಜರು ಆಗಲಿ, ಆಗಲಿ ಎಂದು ಬಾಯಿಯಿಂದ ಹೇಳಿದರು. ಉಳಿದ ಕೆಲವರು ಮದಾಂಧರಾಗಿ ''ನೀವು ಹೇಳಿದ್ದೇ ಸರಿ. ನಾವೂ ನಿಮಗೆ ಬೆಂಬಲ. ಕೃಷ್ಣನನ್ನು ಗೆದ್ದು ಬಿಡೋಣ'' ಎಂದು ನುಡಿದರು.

ಒಂದು ದಿನ ಕೈಲಾಸಪರ್ವತದಿಂದ ನಾರದರು ಪೌಂಡ್ರನ ರಾಜಧಾನಿಗೆ ಬಂದರು. ಅವರ ಮುಂದೆ ಪೌಂಡ್ರಕ ಹೇಳಿದ.

**ಪೌಂಡ್ರಕ:-** ನಾರದರೇ, ಗೋಪಾಲಕನಾದ ಕೃಷ್ಣ ನನ್ನ ವಾಸುದೇವ ಎಂಬ ನಾಮವನ್ನು ತಾನು ಬಳಸುತ್ತಿದ್ದಾನೆ. ಆದ್ದರಿಂದ ನಾನು ದ್ವಾರಕೆಯ ಮೇಲೆ ದಾಳಿ ಮಾಡಿ ಆ ಕೃಷ್ಣನನ್ನು ಗೆದ್ದು ಯಾದವರನ್ನೆಲ್ಲ ಸಂಹರಿಸುತ್ತೇನೆ. ಇದನ್ನು ನೀವು ಕೃಷ್ಣನಿಗೆ ತಿಳಿಸಿರಿ.

ಆಗ ನಾರದರು ''ನೀನು ಆಡುವ ಮಾತು ಹಾಸ್ಯಾಸ್ಪದ. ಆ ಕೃಷ್ಣನೇ ನಿನ್ನ ಗರ್ವವನ್ನು ಇಳಿಸುತ್ತಾನೆ. ಎಂದು ಹೇಳಿ ಹೋದರು.

ಆಗ ನಾರದರು ನೇರವಾಗಿ ಬದರಿಕಾಶ್ರಮಕ್ಕೆ ಬಂದು ಪೌಂಡ್ರಕನ ಮೂರ್ಖತನದ ಮಾತುಗಳನ್ನು ಕೃಷ್ಣನಿಗೆ ಹೇಳಿದರು. ಆಗ ಕೃಷ್ಣ 'ನಾಳೆಯೇ ಹೋಗಿ ಅವನ ಸರ್ವಗರ್ವವನ್ನೂ ನಾಶ ಮಾಡುತ್ತೇನೆ' ಎಂದು ನುಡಿದ. ಅಷ್ಟರಲ್ಲಿ ಇತ್ತ ಪೌಂಡ್ರಕನು ಪ್ರಚಂಡವಾದ ಸೇನೆಯನ್ನು ತೆಗೆದುಕೊಂಡು ರಾತ್ರಿಕಾಲದಲ್ಲಿ ದ್ವಾರಕೆಯ ಮೇಲೆ ದಾಳಿ ಇಟ್ಟ. ಅರ್ಧರಾತ್ರಿಯ ಒಮ್ಮೆಲೇ ತಮ್ಮ ಮೇಲೆ ಭೀಕರ ದಾಳಿಯನ್ನು ಮಾಡಿದ ಪೌಂಡ್ರಕನ ಈ ಆಕಸ್ಮಿಕ ಅಭಿಯೋಗದಿಂದ ಒಂದು ಕ್ಷಣ ಯಾದವರು ತಬ್ಬಿಬ್ಬಾದರು. ಆದರೂ ಮರು ಕ್ಷಣದಲ್ಲಿ ಸಾತ್ಯಕಿ, ಬಲರಾಮ, ಅಕ್ರೂರ, ನಿಶಠ, ಉದ್ಧವ, ಉಗ್ರಸೇನ, ಮುಂತಾದ ಯಾದವ ವೀರರು ಉಳಿದೆಲ್ಲ ಯಾದವರನ್ನು ನಗರಾ ಬಡಿಸಿ ಎಬ್ಬಿಸಿ ತಮ್ಮ ಸೇನೆಯೊಂದಿಗೆ ಸಂಗ್ರಾಮಕ್ಕೆ ಅಣಿಯಾದರು. ಕೈಯಲ್ಲಿ ದೀಪ ಹಿಡಿದುಕೊಂಡು 'ಎಲ್ಲಿ ಇದ್ದಾನೆ ಆ ಪೌಂಡ್ರಕ' ಎಂದು ಗರ್ಜನೆ ಮಾಡುತ್ತ ದ್ವಾರಕೆಯ ಅಗಸಿ ಬಾಗಿಲನ್ನು ತೆರೆದು ಧೈರ್ಯದಿಂದ ಹೊರಗೆ ಬಂದು ಪೌಂಡ್ರಕನ ಸೈನ್ಯದ ಮೇಲೆ ಎರಗಿದರು. ಆಗ ಪೌಂಡ್ರಕನ ಬೆಂಬಲಕ್ಕೆ ಬಂದ ಕಿರಾತರ ರಾಜನಾದ ಏಕಲವ್ಯನು ತನ್ನ ಪ್ರಚಂಡ ಸೇನಾಸನ್ನಾಹದೊಂದಿಗೆ ಯಾದವರನ್ನೆಲ್ಲ ಎದುರಿಸಿ ತನ್ನ ಅದ್ಭುತವಾದ ಶಸ್ತ್ರಾಸ್ತ್ರ ಪಾಂಡಿತ್ಯದಿಂದ ಯಾದವ ಸೈನಿಕರನ್ನೆಲ್ಲ ಕೊಚ್ಚಿ ಹಾಕತೊಡಗಿದ. ಆಗ ಸಾತ್ಯಕಿಯು ಯದುವೀರರ ಜೊತೆಗೆ ಏಕಲವ್ಯನನ್ನು ಎದುರಿಸಿ, ಪೌಂಡ್ರಕನ ಸೈನಿಕರನ್ನೆಲ್ಲ ಸೋಲಿಸಿ ಕದನ ಕೋಲಾಹಲವನ್ನು ಉಂಟುಮಾಡಿದ. ಮತ್ತು ಧೀರ ದೊರೆಯನಾದ ಬಲರಾಮನು ತನ್ನ ಮೇಲೆ ಏರಿ ಬಂದ ಏಕಲವ್ಯನನ್ನು ಹಾಗೂ ಎಂಬತ್ತೆಂಟು ಸಾವಿರ ಅವನ ಶಸ್ತ್ರಾಸ್ತ್ರ ಸಂಪನ್ನರಾದ ಸೈನಿಕರನ್ನೂ, ತನ್ನ ಘೋರವಾದ ಮುಸಲಾಯುಧದಿಂದ ಹೊಡೆದು ಬಡೆದು ನೆಲದ ಮೇಲೆ ಛಿನ್ನಭಿನ್ನರನ್ನಾಗಿ ಮಾಡಿ ಹಾಕಿದ. ಮತ್ತು ಏಕಲವ್ಯನು ತನ್ನ ಮೇಲೆ ತೂರಿ ತೂಗಿ ಒಗೆದ ಶಕ್ತಿ ಎಂಬ ಘೋರ ಆಯುಧವನ್ನು ಹೊಡೆದು, ಕೆಳಗೆ ಬೀಳಿಸಿ ತನ್ನ ಕೈಯಲ್ಲಿಯ ಶಕ್ತ್ಯಾಯುಧದಿಂದ ಏಕಲವ್ಯನ ಎದೆಗೆ ಪ್ರಹಾರವನ್ನು ಮಾಡಿದ. ಅದರಿಂದ ಏಕಲವ್ಯನು ಮೂರ್ಛಿತನಾಗಿ ನೆಲದ ಮೇಲೆ ಬಿದ್ದ. ಮರುಕ್ಷಣದಲ್ಲಿ ಏಕಲವ್ಯನು ಚೇತರಿಸಿಕೊಂಡು ಎದ್ದು ತನ್ನ ಸೈನಿಕರೆಲ್ಲರೂ ಬಲರಾಮನಿಂದ ಕ್ಷತವಿಕ್ಷತರಾಗಿ ರಣಾಂಗಣದಲ್ಲಿ ಬಿದ್ದುದನ್ನು ನೋಡಿ ಕೋಪಾಂಧನಾಗಿ ಮತ್ತೆ ಬಲರಾಮನ ಮೇಲೆ ಏರಿಬಂದ. ಇತ್ತ ಯುಯುಧಾನನಿಗೂ ಪೌಂಡ್ರಕ ವಾಸುದೇವನಿಗೂ ಭಯಂಕರವಾದ ಯುದ್ಧ ನಡೆಯಿತು. ಅಷ್ಟರಲ್ಲಿ ಸೂರ್ಯೋದಯ ಆಯಿತು.

ಶ್ರೀಕೃಷ್ಣನು ಬದರಿಕಾಶ್ರಮದಿಂದ ದ್ವಾರಕೆಗೆ ಆಗಮಿಸಿದ. ದೂರದಿಂದ ಈ ಕದನ ಕೋಲಾಹಲವನ್ನು ಕೇಳಿ 'ಪೌಂಡ್ರಕನೇ ಬಂದಿದ್ದಾನೆ' ಎಂದು ತಿಳಿದ. ಅಲ್ಲಿಂದಲೇ ತನ್ನ ಪಾಂಚಜನ್ಯ ಶಂಖವನ್ನು ಊದಿದ ಕೃಷ್ಣನು ಗರುಡನನ್ನು ಬಿಟ್ಟು ದಾರುಕನಿಗೆ ತನ್ನ ರಥವನ್ನು ತರಲು ಹೇಳಿದ ಪಾಂಚಜನ್ಯವನ್ನು ಊದುತ್ತ ಯುದ್ಧರಂಗಕ್ಕೆ ಇಳಿದ. ಸಾತ್ಯಕಿಯ ಜೊತೆ ಯುದ್ಧ ಮಾಡುತ್ತಿದ್ದ ಪೌಂಡ್ರಕ ಕೃಷ್ಣನ ಕಡೆಗೆ ತಿರುಗಿದ. ಆಗ ಸಾತ್ಯಕಿಯು ''ನನ್ನನ್ನು ಗೆದ್ದು ಕೃಷ್ಣನ ಬಳಿಗೆ ಹೋಗು. ನಾನು ನಿನ್ನನ್ನು ಬಿಡುವುದಿಲ್ಲ'' ಎಂದು ಪೌಂಡ್ರಕನ ಎದುರು ಬಂದು ಗದಾಪಾಣಿಯಾಗಿ ಯುದ್ಧಕ್ಕೆ ತೊಡಗಿದ. ಆಗ ಕೃಷ್ಣನು ಸಾತ್ಯಕಿಯನ್ನು ಪ್ರಶಂಸಿಸಿ 'ನಾನೇ ಇವನನ್ನು ನೋಡಿಕೊಳ್ಳುತ್ತೇನೆ. ನೀನು ವಿಶ್ರಮಿಸು'' ಎಂದು ಹೇಳಿದ. ಆಗ ಪೌಂಡ್ರಕನು ''ಗೋಪಾಲಕನಾದ ಕೃಷ್ಣ. ನಾನು ಈಗ ಬಲರಾಮನೊಂದಿಗೆ ನಿನ್ನನ್ನು ಕೊಂದು ನಾನೊಬ್ಬನೇ ವಾಸುದೇವನಾಗಿ ಮೆರೆಯುತ್ತೇನೆ. ನಿಜವಾದ ಚಕ್ರಿ, ಶಂಖಿ, ಗದಿ, ಶಾರಂಗಿ, ಎಂದರೆ ನಾನೇ. ನಿನ್ನಲ್ಲಿ ನನ್ನನ್ನು ಎದುರಿಸುವ ಶಕ್ತಿ ಇದ್ದರೆ ಯುದ್ಧಕ್ಕೆ ಸನ್ನದ್ಧನಾಗು. ನೀನು ಇಷ್ಟು ದಿನ ಕೆಲವು ಮುದುಕರನ್ನೂ, ಬಾಲಕರನ್ನೂ, ಸ್ತ್ರೀಯರನ್ನೂ, ಗೋವುಗಳನ್ನೂ, ಎತ್ತುಗಳನ್ನೂ ಕೊಂದು ಮಹಾವೀರ ಎಂದು ಗರ್ವಿಷ್ಠನಾಗಿರುವೆ. ಆ ನಿನ್ನ ಗರ್ವವನ್ನೆಲ್ಲ ನಾನಿಂದು ಕಳೆಯುತ್ತೇನೆ'' ಎಂದು ನುಡಿದು ಕೃಷ್ಣನ ಮೇಲೆ ಏರಿಬಂದ. ಆಗ ಕೃಷ್ಣನು ನಕ್ಕು ಆ ಪೌಂಡ್ರಕನನ್ನು ಹಾಸ್ಯ ಮಾಡುತ್ತ ನುಡಿದ.

**ಕೃಷ್ಣ:-** ''ರಾಜನೇ, ನೀನು ನನಗೆ 'ಗೋಘಾತಕ' 'ಬಾಲ ಘಾತಕ' 'ಸ್ತ್ರೀ ಹಂತಕ' ಎಂದು ಮುಂತಾಗಿ ನಿನ್ನ ಮನಸ್ಸಿಗೆ ಬಂದಂತೆ ಮಾತಾಡು. ನೀನೇ ಚಕ್ರಿ ಆಗು. ಶಾರಂಗಿ, ಗದಿ, ಎಲ್ಲವೂ ನೀನೇ ಆಗು. ಪ್ರಭು, ನೀನೇ ವಾಸುದೇವ. ಶಾರಂಗಿ, ಚಕ್ರಿ, ಎನ್ನುವುದೆಲ್ಲ ನನಗೆ ವ್ಯರ್ಥ. ಆದರೆ ಇದನ್ನೆಲ್ಲ ನೀನು ಯುದ್ಧದಲ್ಲಿ ಸಿದ್ಧಮಾಡಿ ತೋರಿಸು. ನನ್ನನ್ನು ಗೆದ್ದ ಬಳಿಕ ಈ ಎಲ್ಲ ಗರ್ವದ ಮಾತುಗಳನ್ನೂ, ಆತ್ಮ ಪ್ರಶಂಸೆಯನ್ನೂ ಮಾಡಿಕೊ. ಈಗ ಯುದ್ಧಕ್ಕೆ ಸಿದ್ಧನಾಗು'' ಎಂದು ಸಿಂಹನಾದವನ್ನು ಮಾಡಿದ.

ಕೃಷ್ಣನಿಗೂ ಪೌಂಡ್ರಕನಿಗೂ ಭೀಕರವಾದ ಯುದ್ಧವು ನಡೆಯಿತು. ಪೌಂಡ್ರಕನು ತನ್ನ ಚಕ್ರವನ್ನು ಕೃಷ್ಣನ ಮೇಲೆ ಪ್ರಯೋಗಿಸಿದ. ಅರೆಕ್ಷಣದಲ್ಲಿ ಕೃಷ್ಣ ಅದನ್ನು ತನ್ನ ಸುದರ್ಶನದಿಂದ ನೂರು ಚೂರು ಮಾಡಿದ. ಅವನ ಖಡ್ಗವನ್ನು ತುಂಡರಿಸಿದ. ಹೀಗೆ ಕೆಲವು ನಿಮಿಷ ಪೌಂಡ್ರಕನ ಜೊತೆಗೆ ಆಟವಾಡಿ ಕೊನೆಗೆ ಅವನ ಮೇಲೆ ತನ್ನ ಸುದರ್ಶನವನ್ನು ಬಿಟ್ಟು ಪೌಂಡ್ರಕನ ತಲೆಯನ್ನು ಕತ್ತರಿಸಿದ. ಇತ್ತ ಬಲರಾಮನ ಜೊತೆಗೆ ಕಲಿತನದಿಂದ ಕಾದಾಡುವ ಏಕಲವ್ಯನು ಕ್ರುದ್ಧನಾಗಿ ಬಲರಾಮನ ವಕ್ಷಸ್ಥಳದಲ್ಲಿ ತನ್ನ ಭೀಮಗದೆಯಿಂದ ಪ್ರಹಾರಮಾಡಿದ. ಆದರೆ ಅದರಿಂದ ಸ್ವಲ್ಪವೂ ವಿಚಲಿತನಾಗದೇ ಆ ಬಲರಾಮನು ಅದೇ ಗದೆಯನ್ನು ತಿರುಗಿಸಿ ಹಿಡಿದು ಏಕಲವ್ಯನಿಗೆ ತಿರುಗಿ ಹೊಡೆಯಬಂದ. 'ಅಮೋಘವಾದ ಆ ಗದೆಯಿಂದ ಗದಾವಿದ್ಯೆಯಲ್ಲಿ ಅಪ್ರತಿಮನಾದ ಬಲರಾಮನು ತನ್ನನ್ನು ತಾಡನ ಮಾಡಿದರೆ ತಾನು ಬದುಕಲಾರೆ' ಎಂದು ತಿಳಿದು ರಣಭೂಮಿಯಿಂದ ಕಾಲು ಕಿತ್ತು ಓಡತೊಡಗಿದ. ಬಲರಾಮ ಏಕಲವ್ಯನನ್ನು ಬೆನ್ನಟ್ಟಿ ತಾನೂ ಓಡಿದ. ಅವನು ಹೋದಲ್ಲೆಲ್ಲ ಇವನೂ ಹೊಕ್ಕ. ಎಲ್ಲ ಕಡೆಗೂ ಓಡಿ, ಓಡಿ ಸಮುದ್ರದವರೆಗೂ ಧಾವಿಸಿದ ಆ ನಿಷಾದರಾಜ ಸಮುದ್ರತೀರಕ್ಕೆ ಬೆನ್ನಟ್ಟಿ ಬಂದ ರಾಮ. ಸಾಗರದಲ್ಲಿಯೇ ಸೇರಿಕೊಂಡ ಏಕಲವ್ಯ. ಐದು ಯೋಜನ ಸಮುದ್ರದಲ್ಲಿಯೇ ಈಜುತ್ತ ನಡೆದ. ಅವನನ್ನು ಬೆಂಬತ್ತಿ ಈಜಿದ ಬಲಭದ್ರ. ಅನಂತರ ಜೀವ

ದಾಸೆಯಿಂದ ಆ ಬೇಡರ ರಾಜ ಸಮುದ್ರದ ಮಧ್ಯದಲ್ಲಿ ಇದ್ದ ಒಂದು ದ್ವೀಪದಲ್ಲಿ ಹೊಕ್ಕ. ಬಲರಾಮ ನೋಡು ನೋಡುವಷ್ಟರಲ್ಲಿಯೇ ಆ ಬೇಡರ ದೊರೆ ಆ ಬೆಂಗಾಡಿನ ನಿಬಿಡತರವಾದ ಗಿಡಗಳ ಝಾಡಿನಲ್ಲಿ ಎಲ್ಲಿಯೋ ಕಣ್ಮರೆಯಾದ. ಹೀಗೆ ವಿಜಯ ಶಾಲಿಯಾಗಿ ಬಲರಾಮ ದ್ವಾರಕೆಗೆ ಮರಳಿದ. ಕೃಷ್ಣನು ಯಾದವರ ಸಭೆಯಲ್ಲಿ ತಾನು ಕೈಲಾಸಕ್ಕೆ ಹೋದ ಸಮಾಚಾರವನ್ನು ಮತ್ತೆ ಘಂಟಾಕರ್ಣನೆಂಬ ಪಿಶಾಚಿಯ ಭಕ್ತಿಯ ಪವಾಡ ಹಾಗೂ ತಾನು ಅವನಿಗೆ ನೀಡಿದ ಮುಕ್ತಿಯ ಸಮಾಚಾರ ಎಲ್ಲವನ್ನು ತಿಳಿಸಿದ. ಅದನ್ನು ಕೇಳಿ ಯಾದವರೆಲ್ಲರೂ ಕೃಷ್ಣನನ್ನು ಪ್ರಶಂಸಿಸಿದರು. ಅನಂತರ ಶ್ರೀಹರಿಯು ತನ್ನ ಅಂತಃಪುರವನ್ನು ಪ್ರವೇಶಿಸಿ ಈ ಎಲ್ಲ ಕೌತುಕದ ವೃತ್ತಾಂತವನ್ನು ರುಕ್ಮಿಣೀ ಸತ್ಯಭಾಮಾ ಜಾಂಬವತಿ ಮಿತ್ರವಿಂದಾ ಮುಂತಾದ ತನ್ನ ಮೆಚ್ಚಿನ ಮಡದಿಯರಿಗೆ ತಿಳಿಸಿದ.

## ಹಂಸ ಡಿಂಭಕರ ಆಖ್ಯಾನ

**ಜನಮೇಜಯ:-** ದ್ವಿಜಶ್ರೇಷ್ಠನೇ, ಹಂಸಡಿಂಭಕ ಎಂಬ ಬ್ರಹ್ಮಜ್ಞಾನಿಯಾದ ಬ್ರಹ್ಮದತ್ತನ ಮಕ್ಕಳು ಕೃಷ್ಣನೊಡನೆ ಹೋರಾಡಿ ಹತರಾದರಂತೆ. ಆ ಕೌತುಕದ ಕತೆಯನ್ನು ನನಗಾಗಿ ಬಿತ್ತರಿಸು.

**ವೈಶಂಪಾಯನ:-** ರಾಜೇಂದ್ರನೇ, ಶಾಲ್ವದೇಶದಲ್ಲಿ ಬ್ರಹ್ಮದತ್ತ ಎಂಬ ಮಹಾರಾಜ ಆಳುತ್ತಿದ್ದ ಪೂತಾತ್ಮನಾದ ಆ ರಾಜರ್ಷಿ ಪರಮ ದಯಾಳು. ನಿತ್ಯವೂ ಪಂಚಯಜ್ಞಗಳಾದ ಬ್ರಹ್ಮಯಜ್ಞ, ಪಿತೃಯಜ್ಞ, ಋಷಿಯಜ್ಞ, ದೇವಯಜ್ಞ, ಭೂತಯಜ್ಞಗಳನ್ನು ತಪ್ಪದೇ ಮಾಡುತ್ತಲಿದ್ದ. ನಾಲ್ಕು ವೇದಗಳೂ ಅವನ ನಾಲಿಗೆಯ ತುದಿಯಲ್ಲಿ. ಬ್ರಹ್ಮಜ್ಞಾನ ಅವನಿಗೆ ಎಂದೋ ಲಭ್ಯ. ಅವನಿಗೆ ಮಡದಿಯರು ಇಬ್ಬರು. ಒಬ್ಬರಿಗಿಂತ ಒಬ್ಬರು ರೂಪದಲ್ಲಿ ಮಿಗಿಲು. ದಾನದಲ್ಲಿ ಮುಂದೆ. ದೊಡ್ಡಸ್ತಿಕೆಯಲ್ಲಿ, ದಯಾ, ದಾನ, ಧರ್ಮಗಳಲ್ಲಿ, ಪತಿಗೂ ಪ್ರೇರಕರು. ಆದರೆ ಅವರಿಬ್ಬರಿಂದಲೂ ರಾಜನಿಗೆ ಮಕ್ಕಳಾಗಲಿಲ್ಲ. ಈ ಬ್ರಹ್ಮದತ್ತನಿಗೆ ಒಬ್ಬ ಬ್ರಾಹ್ಮಣ ಮಿತ್ರ. ಅವನಿಗೆ ಮಿತ್ರಸಹ ಎಂದೇ ಹೆಸರು. ಅವನು ಯೋಗಾಚಾರ್ಯ ನಾಲ್ಕು ವೇದಗಳು ಅವನಿಗೆ ಅಂಗೈಯಲ್ಲಿಯ ನೆಲ್ಲಿಕಾಯಿ. ವೇದಾಂತ ಅದರ ಅಂತರಂಗದಲ್ಲಿ ಪ್ರತಿಷ್ಠಿತ. ಆ ಬ್ರಾಹ್ಮಣನಿಗೂ ಮಕ್ಕಳೇ ಆಗಿರಲಿಲ್ಲ.

ಬ್ರಹ್ಮದತ್ತ ಮಹಾರಾಜನು ಶಿವಭಕ್ತ. ಅವನು ತನ್ನ ಕುಲಸ್ವಾಮಿಯಾದ ಶಂಕರನನ್ನು ತನ್ನ ಇಬ್ಬರೂ ರಾಣಿಯರೊಂದಿಗೆ ಭಕ್ತಿಯಿಂದ ಸೇವಿಸಿದ. ಇತ್ತ ಮಿತ್ರಸಹ ಬ್ರಾಹ್ಮಣನೂ ತನ್ನ ಇಷ್ಟದೇವನಾದ ಶ್ರೀಹರಿಯನ್ನು ಐದು ವರ್ಷಭಕ್ತಿಯಿಂದ ಆರಾಧಸಿದಿ. ಮಹಾದೇವನು ಬ್ರಹ್ಮದತ್ತನಿಗೆ ಇಬ್ಬರು ಮಕ್ಕಳನ್ನು ಕರುಣಿಸಿದ. ವಿಷ್ಣು, ತನ್ನ ಭಕ್ತನಾದ ಮಿತ್ರಸಹನಿಗೆ ಒಬ್ಬ ಉತ್ತಮ ಪುತ್ರನನ್ನು ದಯಪಾಲಿಸಿದ. ಮಹಾರಾಜ ತನ್ನ ಹಿರಿಯ ಮಗನಿಗೆ ಹಂಸ ಎಂದು ಹೆಸರಿಟ್ಟ. ಎರಡನೆಯ ಮಗನೇ ಡಿಂಭಕ. ಬ್ರಾಹ್ಮಣ ತನ್ನ ಮಗನಿಗೆ ಜನಾರ್ದನ ಎಂದು ಶ್ರೀಹರಿಯ ಹೆಸರನ್ನೇ ಇಟ್ಟ. ಮೂವರಿಗೂ ಒಂದೇ ವಯಸ್ಸು. ಮೂವರೂ ಗೆಳೆಯಂದಿರು. ಎಲ್ಲರೂ ಗುರುಗಳಲ್ಲಿ ವೇದ ಓದಿದರು. ದಂಡನೀತಿ ಅಧ್ಯಯನ ಮಾಡಿದರು. ಶಸ್ತ್ರವಿದ್ಯೆ, ಶಾಸ್ತ್ರವಿದ್ಯೆಗಳಲ್ಲಿ ಎಲ್ಲರೂ ಪಾರಂಗತರಾದರು. ದೊಡ್ಡವರಾದ ಬಳಿಕ ರಾಜಪುತ್ರರಾದ ಹಂಸಡಿಂಭಕರು ಮಹಾದೇವರನ್ನು ಕುರಿತು ತಪಸ್ಸನ್ನು ಮಾಡಿದರು. ತಮ್ಮ ತಪಸ್ಸಿನಿಂದ ಪ್ರೀತನಾದ ಮಹಾದೇವನಿಗೆ ವರಗಳನ್ನು ಕೇಳಿದರು.

**ಹಂಸ ಡಿಂಭಕ:-** "ನಾವು ದೇವ, ದಾನವ, ಯಕ್ಷ, ಗಂಧರ್ವರಲ್ಲಿ ಯಾರಿಂದಲೂ ಸೋಲಬಾರದು ಮತ್ತು ಕೊಲ್ಲಲ್ಪಡಬಾರದು. ಮತ್ತು ನಮಗೆ ರೌದ್ರಾಸ್ತ್ರ, ಬ್ರಹ್ಮಾಸ್ತ್ರ ಮುಂತಾದ ಎಲ್ಲ ಬಗೆಯ ಅಸ್ತ್ರಗಳ ಸಂಗ್ರಹವನ್ನೂ, ಅಭೇದ್ಯ ಕವಚವನ್ನೂ, ಅಚ್ಛೇದ್ಯ ಬಿಲ್ಲನ್ನೂ, ಅಖಂಡ್ಯವಾದ ಕೊಡಲಿಯನ್ನೂ ನೀಡು. ಮತ್ತು ನಮಗೆ ಯುದ್ಧದಲ್ಲಿ ಸಹಾಯಕರಾಗಿ ನಿನ್ನ ಇಬ್ಬರು ಗಣಾಧೀಶರನ್ನು ಕಳಿಸಿ ಕೊಡು."

ರಾಜಕುಮಾರರ ಈ ಪ್ರಾರ್ಥನೆಯನ್ನು ಮನ್ನಿಸಿ ಶಂಕರನು ಅವರಿಗೆ ಬೇಡಿದ್ದನ್ನೆಲ್ಲ ಕೊಟ್ಟು ಕುಂಡೋದರ ಹಾಗೂ ವಿರೂಪಾಕ್ಷ ಎಂಬ ತನ್ನ ಅನುಚರ ವೀರರನ್ನು ಅವರ ಸಹಾಯಕ್ಕೆ ಕಳಿಸಿಕೊಟ್ಟ. ಇತ್ತ ಮಿತ್ರಸಹನ ಮಗನಾದ ಜನಾರ್ದನನು ಮನೆಯಲ್ಲಿಯೇ ತನ್ನ ತಂದೆತಾಯಿಗಳ ಸೇವೆಯನ್ನು ಮಾಡುತ್ತ ಮಹಾವಿಷ್ಣುವನ್ನು ಆರಾಧನೆಗೈಯುತ್ತಲಿದ್ದ. ರಾಜಕುಮಾರರ ಮದುವೆ ಆಯಿತು. ಜನಾರ್ದನನೂ ತಂದೆಯ ಅಪ್ಪಣೆಯಂತೆ ವಿವಾಹವನ್ನು ಮಾಡಿಕೊಂಡ. ಒಂದು ದಿನ ಶೂರರಾದ ಹಂಸ ಡಿಂಭಕರು ಬೇಟೆಯಾಡಲಿಕ್ಕೆ ಅರಣ್ಯಕ್ಕೆ ಹೊರಟರು. ತಮ್ಮ ಜೊತೆಗೆ ಮಿತ್ರನಾದ ಜನಾರ್ದನನ್ನೂ ನಲುಮೆಯಿಂದ ಕರೆದು ಕೊಂಡು ಹೋದರು. ಆ ಗೊಂಡಾರಣ್ಯದಲ್ಲಿ ಅನೇಕ ಹುಲಿ, ಸಿಂಹ, ಕಾಡಾನೆ ಕಾಡು ಹಂದಿ, ಮುಂತಾದ ಕ್ರೂರ ಶ್ವಾಪದಗಳನ್ನು ಕೊಂದು ಬೇಟೆಯಾಡಿ ದಣಿದ ಆ ರಾಜಪುತ್ರರು ಮಧ್ಯಾಹ್ನದಲ್ಲಿ ಒಂದು ಸರೋವರಕ್ಕೆ ಬಂದರು. ಜನಾರ್ದನನ್ನು ಕರೆದು ಕೊಂಡು ಆ ತಿಳಿನೀರಿನ ಕೊಳದಲ್ಲಿ ಸ್ನಾನಮಾಡಿ ತೀರದಲ್ಲಿ ವಿಶ್ರಮಿಸಿದ್ದರು. ಆಗ ಒಮ್ಮೆಲೇ ಅವರಿಗೆ ಮಹರ್ಷಿಗಳ ಸುಸ್ವರವಾದ ವೇದಘೋಷವು ಕೇಳಿಬಂದಿತು. ಆಗ ಆ ಮೂವರೂ ಸಮೀಪದಲ್ಲಿರುವ ಕಶ್ಯಪಋಷಿಗಳ ಆಶ್ರಮಕ್ಕೆ ಪಾದಚಾರಿ ಆಗಿ ಹೋದರು. ಆ ಪುಣ್ಯಾಶ್ರಮದಲ್ಲಿ ಅನೇಕ ಮುನಿಗಳು ವೈಷ್ಣವ ಸತ್ರದಲ್ಲಿ ದೀಕ್ಷಿತರಾಗಿ ಜಪ, ಹೋಮ, ಪಾರಾಯಣಗಳಲ್ಲಿ ಪರಾಯಣರಾಗಿದ್ದರು. ಮೂವರೂ ಅಲ್ಲಿಗೆ ಹೋಗಿ ದಂಡ ಪ್ರಣಾಮ ಹಾಕಿದರು ಆ ಮುನಿ ಮಂಡಲಕ್ಕೆ. ಮುನಿಗಳು ಅರ್ಘ್ಯ, ಪಾದ್ಯ, ಮಧುಪರ್ಕ ಮುಂತಾದವುಗಳನ್ನು ನೀಡಿ ಮೂವರನ್ನೂ ಸತ್ಕರಿಸಿದರು. ಅದರಿಂದ ಪ್ರೀತನಾದ ಹಂಸನು ಆ ಮುನಿಗಳಿಗೆ ನುಡಿದ.

**ಹಂಸ:-** ಮುನಿಶ್ರೇಷ್ಠರೇ, ನಮ್ಮ ತಂದೆಯಾದ ಬ್ರಹ್ಮದತ್ತನು ರಾಜಸೂಯ ಯಾಗವನ್ನು ಮಾಡಬೇಕೆಂದು ನಿರ್ಧರಿಸಿದ್ದಾನೆ. ನಾವು ಕುದುರೆ ಇಲ್ಲದೇ ಹಾಗೆಯೇ ದಿಗ್ವಿಜಯ ಮಾಡಿಕೊಂಡು ಬಂದು ನಮ್ಮ ತಂದೆಯ ಕಡೆಯಿಂದ ಈ ಯಜ್ಞವನ್ನು ಮಾಡಿಸುತ್ತೇವೆ. ನಾವು ಈಗಲೇ ದೇಶ ದಿಗ್ವಿಜಯಕ್ಕಾಗಿ ಹೊರಟಿದ್ದೇವೆ. ಮಹಾದೇವರಿಂದ ವರವನ್ನು ಪಡೆದ ನಮ್ಮ ಎದುರು ಯಾವ ದೇವದಾನವರೂ ನಿಲ್ಲಲಾರರು. ನಮ್ಮನ್ನು ಗೆಲ್ಲಲಾರರು.

**ಮುನಿಗಳು:-** ನೀವು ಜಗತ್ತಿನಲ್ಲೆಲ್ಲ ದಿಗ್ವಿಜಯ ಮಾಡಿಕೊಂಡು ಜಯಶಾಲಿಗಳಾಗಿ ಬಂದರೆ, ನಿಮ್ಮ ತಂದೆ ರಾಜಸೂಯಯಾಗ ಮಾಡಿದರೆ ನಾವೂ ಕೂಡ ನಮ್ಮ ಶಿಷ್ಯರೊಡನೆ ಬರುವೆವು. ಇಲ್ಲದಿದ್ದರೆ ಇಲ್ಲಿಯೇ ಇರುವೆವು.

**ವೈಶಂಪಾಯನ:-** ಅನಂತರ ಆ ಹಂಸಡಿಂಭಕರು ದೇಶಗಳನ್ನೆಲ್ಲ ಗೆದ್ದು ಬರಲು ತವಕಗೊಂಡು ಅಲ್ಲಿಂದ ಹೊರಟರು. ಪುಷ್ಕರಕ್ಷೇತ್ರದ ಉತ್ತರ ತೀರದಲ್ಲಿ ಇರುವ ದುರ್ವಾಸ ಋಷಿಗಳ ಆಶ್ರಮಕ್ಕೆ ಬಂದರು. ಅಲ್ಲಿ ಮಂತ್ರಬ್ರಾಹ್ಮಣಾತ್ಮಕವಾದ ವೇದವನ್ನು

ಅಧ್ಯಯನ ಮಾಡುತ್ತ, ಬಾದಾರಾಯಣರ ಬ್ರಹ್ಮಸೂತ್ರಗಳ ಅರ್ಥವನ್ನು ಸರ್ವದಾ ಮನನ, ಮಂಥನ, ಗೈಯುತ್ತ ಕೌಪೀನ ಧಾರಿಗಳಾದ ಅನೇಕ ಬ್ರಹ್ಮರ್ಷಿಗಳೂ ಹಾಗೂ ಸನ್ಯಾಸಿಗಳೂ ಆ ದುರ್ವಾಸರ ಆಶ್ರಮದಲ್ಲಿ ವೇದಾಂತ ಮೂರ್ತಿಯಾದ ವಿಷ್ಣುವನ್ನು ಆರಾಧಿಸುತ್ತಿದ್ದರು. ಮತ್ತು ಮನಸ್ಸಿನಿಂದ ಉಪಾಸನೆ ಮಾಡುತ್ತಿದ್ದರು. ಆ ಆಶ್ರಮದಲ್ಲಿ ದೂರ್ವಾಸರ ಶಿಷ್ಯರಾಗಿ ಬ್ರಹ್ಮಕರ್ತವನ್ನು ಆಲೋಚನೆ ಮಾಡಿ, ನಿಶ್ಚಿತ ತತ್ವಜ್ಞಾನವನ್ನು ಪಡೆದು, ಆ ದಿವ್ಯಜ್ಞಾನದಿಂದ ನಿರ್ಮಲ ಚೇತಸ್ಕರಾದ ಅನೇಕ ಹಂಸರೂ, ಪರಮ ಹಂಸರೂ, ದುರ್ವಾಸ ಋಷಿಗಳಿಂದ ನಿತ್ಯವೂ ಉಪಾಸಿಸಲ್ಪಡುವ ಆ ಮಹಾವಿಷ್ಣುವನ್ನೂ ವೇದಾಂತೈಕರಸರಾದ ಗುರುವ್ಯಾಸರನ್ನೂ ತಮ್ಮ ಜ್ಞಾನೋಪಾಸನೆಯಿಂದ ಆರಾಧಿಸುತ್ತಿದ್ದರು.

ಅದನ್ನು ನೋಡಿ ಹಂಸ ಡಿಂಭಕರು ತಮ್ಮ ಮನಸ್ಸಿನಲ್ಲಿಯೇ ವಿಚಾರಮಾಡಿದರು.- "ಕೆಂಪು ಬಣ್ಣದ ಕಾವಿಯ ಬಟ್ಟೆಯನ್ನು ತೊಟ್ಟುಕೊಂಡ ಈ ತಪಸ್ವಿಯು ಯಾರು? ಗೃಹಸ್ಥಾಶ್ರಮವನ್ನು ಬಿಟ್ಟು ಇವನು ಬೇರೆ ಯಾವ ಆಶ್ರಮವನ್ನು ಸ್ವೀಕರಿಸಿದ್ದಾನೆ? ಮನೆಮಾಡು ತೊರೆದು ಕಾಡಿಗೆ ಬಂದು ಏಕೆ ಕುಳಿತಿದ್ದಾನೆ? ಎಲ್ಲ ಆಶ್ರಮಕ್ಕಿಂತ ಗೃಹಸ್ಥಾಶ್ರಮವೇ ಶ್ರೇಷ್ಠ. ಇದನ್ನು ಸರಿಯಾಗಿ ಪಾಲಿಸುವವನು ಧರ್ಮಾತ್ಮ. ಅದನ್ನು ಬಿಟ್ಟು ಅವಲಕ್ಷಣವಾದ ಬೇರೆ ವೇಷ, ಬೇರೆ ಆಶ್ರಮವನ್ನು ಧರಿಸಿದವನು ಮೂರ್ಖನೇ. ಜನರನ್ನು ವಂಚಿಸಲಿಕ್ಕಾಗಿ ಇವರು ಇಂಥ ಆಶ್ರಮಾಂತರವನ್ನು ಅವಲಂಬಿಸಿರುತ್ತಾರೆ. ಇಂಥ ಮೂರ್ಖ ಬ್ರಾಹ್ಮಣರನ್ನು ನಮ್ಮ ಹೊರತು ಬೇರೆಯವರಿಗೆ ಶಾಸನ ಮಾಡಲು ಆಗುವುದಿಲ್ಲ. ನಾವೇ ಇವರನ್ನು ನಿಗ್ರಹಿಸಬೇಕು." ಎಂದು ವಿಚಾರಿಸಿ ಹಂಸಡಿಂಭಕರು ದುರ್ವಾಸ ಋಷಿಗಳನ್ನು ಕುರಿತು ಗರ್ವದಿಂದ ಮಾತನಾಡಿದರು.

**ಹಂಸ ಡಿಂಭಕ:-** "ಬುದ್ಧಿಗೇಡಿಯಾದ ಬ್ರಾಹ್ಮಣನೇ, ನೀನು ಇದನ್ನೇನು ಪ್ರಾರಂಭಿಸಿರುವೆ? ನೀನು ಸ್ವೀಕರಿಸಿದ ಈ ಆಶ್ರಮವು ಯಾವುದು? ಗೃಹಸ್ಥಾಶ್ರಮವನ್ನು ಬಿಟ್ಟು ಇದರಿಂದ ನೀನು ಏನು ಸಾಧಿಸಿದಂತಾಗಿದೆ? ಇದೊಂದು ಕೇವಲ ಡಂಭಾಚಾರ ಮಾತ್ರ. ಇದರಿಂದ ನೀನು ಜನರನ್ನೆಲ್ಲ ವಂಚಿಸಿ ನಾಶಪಡಿಸುವೆ. ಸ್ವಯಂ ನಷ್ಟನಾಗಿ ಇನ್ನೊಬ್ಬರನ್ನು ನಾಶಪಡಿಸುವುದೇ ನಿನ್ನ ಈ ಸಂನ್ಯಾಸಿ ಆಶ್ರಮ ಸ್ವೀಕಾರದ ಉದ್ದೇಶ ಇರುತ್ತದೆ. ಮೂರ್ಖನಾದ ನಿನ್ನನ್ನು ಶಾಸನ ಮಾಡುವವರು ಯಾರೂ ಇಲ್ಲವೇ? ಯತ್ಯಾಶ್ರಮವನ್ನು ಈಗಲೇ ಬಿಟ್ಟುಬಿಡು. ಗೃಹಸ್ಥಾಶ್ರಮಿಯಾಗು. ಪಂಚಯಜ್ಞಗಳನ್ನು ಮಾಡು. ಅದರಿಂದ ಇಲ್ಲಿರುವವರೆಗೆ ಸುಖ, ಮುಂದೆ ಸ್ವರ್ಗ. ನಿನಗೆ ಬದುಕಬೇಕು ಎಂದು ಇಚ್ಛೆ ಇದ್ದರೆ ಸನ್ಯಾಸಾಶ್ರಮವನ್ನು ಬಿಟ್ಟು ಗೃಹಸ್ಥನಾಗು. ಗೃಹಸ್ಥಾಶ್ರಮವೇ ದ್ವಿಜರಿಗೆ ಏಹಿತವಾದ ಧರ್ಮ. ಶ್ರೇಯಸ್ಕರ ಮಾರ್ಗ."

ಈ ಹಂಸ ಡಿಂಭಕರ ಜೊತೆಗೆ ಇದ್ದ ಬ್ರಾಹ್ಮಣನಾದ ಅವರ ಮಿತ್ರ ಜನಾರ್ದನನಿಗೆ ಮಾತ್ರ ಇವರ ಮಾತು ಸರಿಬರಲಿಲ್ಲ. ಅವನು ಮುಂದೆ ಬಂದು ದುರ್ವಾಸ ಋಷಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ. ಮತ್ತು ತನ್ನ ಮಿತ್ರರಾದ ಹಂಸ ಡಿಂಭಕರಿಗೆ ವಿನಯದಿಂದ ಹೇಳಿದ.

**ಜನಾರ್ದನ:-** ರಾಜಪುತ್ರರೇ, ಇಂಥ ಬಿರುಸು ಮಾತುಗಳನ್ನ ನುಡಿಯಬೇಡಿರಿ. ನಿಮ್ಮ ಮಾತು ಕಿವಿಯಿಂದ ಕೇಳಲಾಗದು. ಇದರಿಂದ ನಿಮಗೆ ಎರಡು ಲೋಕಗಳಲ್ಲಿಯೂ ಹಾನಿ. ನಿಮಗೆ ವಿನಾಶಕಾಲವೇ ಬಂದಿದೆ. ಆದ್ದರಿಂದಲೇ ಬುದ್ಧಿ ಇಲ್ಲದ ನೀವು ಹೀಗೆ ಮಾತನಾಡುತ್ತಲಿರುವಿರಿ. ಬ್ರಹ್ಮದಂಡದಿಂದ ಹತರಾದ ನಿಮ್ಮ ಆಯುಷ್ಯ ಮುಗಿದಂತೆಯೇ. ಇವರು

ಸನ್ಯಾಸಿಗಳು. ಅವರ ಅಂತರಂಗವು ಯಾವಾಗಲೂ ಜ್ಞಾನದಿಂದ ಪರಿಶೋಧಿತ. ಪ್ರಕಾಶಿತ. ಆದ್ದರಿಂದಲೇ ನಿಷ್ಕಲ್ಮಷ. ಜ್ಞಾನಾಗ್ನಿಯಿಂದ ತಮ್ಮ ದುಷ್ಕರ್ಮಗಳನ್ನೆಲ್ಲ ಸುಟ್ಟ ಇಂಥ ಪವಿತ್ರಾತ್ಮರಿಗೆ ನಿಮ್ಮ ಹೊರತು ಯಾರು ಇಂಥ ಘೋರ ಮಾತುಗಳನ್ನು ನುಡಿಯಬಲ್ಲರು! ನಿಮ್ಮ ಆಯುಷ್ಯವು ಮುಗಿಯ ಬಂದಿದ್ದರಿಂದಲೇ ನಿಮ್ಮ ಬಾಯಿಂದ ಇವರ ವಿಷಯದಲ್ಲಿ ಇಂಥ ಕಠೋರ ವಚನಗಳು ಹೊರಬಿದ್ದವು. ಹಿಂದಿನ ಋಷಿಗಳು ಬ್ರಹ್ಮಚರ್ಯ, ಗೃಹಸ್ಥಾಶ್ರಮ, ವಾನಪ್ರಸ್ಥಾಶ್ರಮ ಮತ್ತು ಸನ್ಯಾಸಾಶ್ರಮವು ಎಲ್ಲಕ್ಕಿಂತ ಪರಮ ಶ್ರೇಷ್ಠ. ಅದು ಪರಮ ಪವಿತ್ರವಾದ ಆಶ್ರಮ. ಅತ್ಯಧಿಕವಾದ ಪುಣ್ಯವನ್ನು ಸಂಪಾದಿಸಲು ಏಕಮಾತ್ರ ಸಾಧನ. ಅಂಥ ಪುಣ್ಯಕರವಾದ ಯತ್ಯಾಶ್ರಮವನ್ನು ಸ್ವೀಕರಿಸಿ ಈ ಪುಣ್ಯಕ್ಷೇತ್ರದಲ್ಲಿ ಕುಳಿತು ತಪಸ್ಸನ್ನು ಮಾಡುತ್ತಲಿದ್ದಾರೆ ಈ ಯತೀಶ್ವರರು. ನೀವು ಈ ಮೊದಲು ಇಂಥ ತಪಸ್ವಿಗಳ ಸೇವೋಪಾಸನೆಯನ್ನು ಮಾಡಲಿಲ್ಲ. ಅವರ ಮಹಿಮೆಯು ನಿಮಗೆ ಗೊತ್ತಿಲ್ಲ. ನೀವು ಈ ಮೊದಲು ಗುರುಗಳಲ್ಲಿ ಓದಿದ್ದೆಲ್ಲವೂ ವ್ಯರ್ಥವೇ. ನಿಮ್ಮಂಥ ಮೂರ್ಖರ ಮಿತ್ರತ್ವವನ್ನು ಮಾಡಿದ್ದರಿಂದ ನಾನು ನಿಮ್ಮ ಮುಖದಿಂದ ಈ ಯತಿನಿಂದೆಯನ್ನು ಕೇಳಬೇಕಾಯಿತು. ಇನ್ನು ಮುಂದೆ ನೀವು ಈ ತಪಸ್ವಿಗಳ ಮನಸ್ಸಿಗೆ ನೋವಾಗುವ ಮಾತನ್ನಾಗಲೀ, ಅವಮಾನಿಸುವ ಕಾರ್ಯವನ್ನಾಗಲೀ ಮಾಡಿದರೆ ನಾನು ನಿಮ್ಮನ್ನು ಬಿಟ್ಟು ಹೋಗುತ್ತೇನೆ. ಮಿತ್ರರಾದ ನಿಮ್ಮನ್ನು ಈ ಪಾಪಕೃತ್ಯದಿಂದ ದೂರಸರಿಸಲಿಕ್ಕಾಗಿ ವಿಷವನ್ನು ಕುಡಿಯುತ್ತೇನೆ. ಸಮುದ್ರದಲ್ಲಿ ಬೀಳುತ್ತೇನೆ. ಅಥವಾ ಪರ್ವತದಿಂದ ಕೆಳಗೆ ಹಾರಿಕೊಳ್ಳುತ್ತೇನೆ ಪ್ರಾಣವನ್ನೇ ಬಿಟ್ಟುಬಿಡುತ್ತೇನೆ. ಈ ತಪಸ್ವಿಗಳನ್ನು ಅವಮಾನ ಪಡಿಸಬೇಡಿರಿ.'' ಎಂದು ಹೇಳಿ ತನ್ನ ಮಿತ್ರರನ್ನು ತಡೆದು ರೋದಿಸತೊಡಗಿದ.

ಆಗ ದುರ್ವಾಸರು ಆ ಜನಾರ್ದನ ಬ್ರಾಹ್ಮಣನನ್ನು ತಮ್ಮ ಶಾಂತ, ಸೌಮ್ಯವಾದ ಒಂದು ಕಣ್ಣಿಂದ ಸಂತೈಸುವಂತೆ ಪ್ರೀತಿಸ್ನಿಗ್ಧವಾಗಿ ನೋಡಿದರು. ಮತ್ತು ಇನ್ನೊಂದು ಕಣ್ಣಿನಿಂದ ಕಿಡಿಯನ್ನು ಉದುರಿಸುತ್ತ ಕೋಪ ಕಷಾಯಿತರಾಗಿ ಕೆಕ್ಕರಿಸಿ ಹಂಸ ಡಿಂಭಕರನ್ನು ನೋಡಿ ನುಡಿದರು.

**ದುರ್ವಾಸ:-** ಬೇಗನೇ ಇಲ್ಲಿಂದ ಹೊರಟು ಹೋಗಿರಿ. ತಡಮಾಡಬೇಡಿರಿ. ಇಲ್ಲದಿದ್ದರೆ ಸತ್ತುಹೋಗುವಿರಿ. ಸುಟ್ಟು ಹೋಗುವಿರಿ. ನಿಮ್ಮ ಮಾತಿನಿಂದ ನನ್ನ ಮನಸ್ಸಿನಲ್ಲಿ ಹೊತ್ತುತ್ತಿರುವ ಸಿಟ್ಟಿನ ಉರಿಯನ್ನು ನಾನು ಬಿಗಿಹಿಡಿಯಲಾರೆ. ನೀವಿಷ್ಟೇ ಏಕೆ? ಎಲ್ಲ ರಾಜರನ್ನೂ ಸುಟ್ಟುಹಾಕಲು ನನಗೆ ಸಾಮರ್ಥ್ಯವುಂಟು. ಶಂಖಚಕ್ರಗದಾಧಾರಿಯಾದ ಆ ಶ್ರೀಕೃಷ್ಣನೇ ನಿಮ್ಮ ಗರ್ವವನ್ನು ಕಳೆಯುವನು. ನಿಮ್ಮಂಥ ತಿಳಿಗೇಡಿಗಳ ಮುಂದೆ ನಾನು ಏನು ಹೇಳಲಿ? ಹೀಗೆ ನುಡಿದು ದುರ್ವಾಸ ಯತಿಗಳು ಅಲ್ಲಿಂದ ಎದ್ದು ಹೊರಡಲು ಉದ್ಯುಕ್ತರಾದರು.

ಆಗ ರಾಜಕುಮಾರನಾದ ಹಂಸನು ಅವರನ್ನು ತಡೆದ. ಅವರ ಕೈಹಿಡಿದು ಅವರು ತೊಟ್ಟುಕೊಂಡ ಕೌಪೀನವನ್ನು ಸೆಳೆದ. ಯಮದೂತನಂತೆ ತಮ್ಮ ಮೇಲೆ ಏರಿ ಬಂದ ಆ ರಾಜಾಧಮನನ್ನು ಕಂಡು ಉಳಿದ ಸನ್ಯಾಸಿಗಳೆಲ್ಲರೂ ದಿಕ್ಪಾಪಾಲಾಗಿ ಓಡಿಹೋದರು. ಅಲ್ಲಿಯೇ ನಿಂತ ಜನಾರ್ದನನು ತನ್ನ ಶಕ್ತಿ ಮೀರಿ ಆ ರಾಜಕುಮಾರರನ್ನು ನಿಷೇಧಿಸಿ ಆ ಯತಿ ದ್ರೋಹವನ್ನು ನಿಲ್ಲಿಸಲು ಪ್ರಯತ್ನಿಸಿದ.- ''ಮಿತ್ರರೇ, ಇದೇನು ನಿಮ್ಮ ಹುಚ್ಚು ಸಾಹಸ? ಇದರಿಂದ ನಿಮ್ಮ ಸರ್ವಸ್ವನಾಶ ನಿಶ್ಚಿತ. ನಾನು ಇದನ್ನು ನೋಡಲಾರೆ. ಈ ಪಾಪ ಕೃತ್ಯವನ್ನು ನೋಡಿ ಸಹನ ಮಾಡಲಾರೆ. ನಾನು ಬದುಕಿರುವವರೆಗೂ ನಿಮ್ಮಿಂದ ಇಂಥ ಅನ್ಯಾಯ

ಕೃತ್ಯವನ್ನು ಮಾಡಗೊಡಲಾರೆ.'' ಎಂದು ನುಡಿದು ಅವರನ್ನು ಪ್ರತಿಬಂಧಿಸಿದ, ಆಗ ದುರ್ವಾಸರು ತಾವೇ ಶಾಂತರಾಗಿ ತಗ್ಗಿದ ಧ್ವನಿಯಲ್ಲಿ ಆ ಹಂಸ ಡಿಂಭಕರಿಗೆ ಹೇಳಿದರು.

**ದುರ್ವಾಸ:-** ''ರಾಜಾಧಮರೇ, ನಾನು ಶಾಪದಿಂದ ನಿಮ್ಮನ್ನು ಈಗಲೇ ಕೊಂದು ಹಾಕಲು ಸಮರ್ಥನಿದ್ದೇನೆ. ಆದರೆ ನಾವು ಯತಿಗಳು. ರಾಜಹತ್ಯೆಯನ್ನು ನಾವು ಮಾಡಬಾರದು. ನಿಮ್ಮಂಥ ದುಷ್ಟರನ್ನು ಶಾಸನ ಮಾಡಲಿಕ್ಕಾಗಿಯೇ ವಿಷ್ಣು ಯದುಕುಲದಲ್ಲಿ ಹುಟ್ಟಿದ್ದಾನೆ. ನಿಮ್ಮಂಥವರ ನಾಶಕ್ಕಾಗಿಯೇ ಕೈಯಲ್ಲಿ ಶಂಖಚಕ್ರವನ್ನು ಹಿಡಿದಿದ್ದಾನೆ. ಅವನೇ ನಿಮ್ಮ ಮದವನ್ನು ಇಳಿಸುತ್ತಾನೆ. ಜರಾಸಂಧನು ನಿಮ್ಮ ಬಂಧುವೇ. ನಿಮ್ಮ ಜಾತಿಯವನೇ. ಆದರೂ ಅವನು ನಿಮ್ಮಂತೆ ಸನ್ಯಾಸಿಗಳಿಗೆ ಇಂಥ ಬಿರುನುಡಿಗಳನ್ನು ಆಡಲಾರ. ಇಷ್ಟು ಅಪಮಾನವನ್ನು ಮಾಡಲಾರ. ನಿಮಗೂ ಅವನಿಗೂ ಇನ್ನು ಮುಂದೆ ದ್ವೇಷವೇ ಬೆಳೆಯಲಿ. ಹೋಗು ಇಲ್ಲಿಂದ ಹೊರಟು ಹೋಗು'' ಎಂದು ಹೇಳಿ ಇತ್ತ ಜನಾರ್ದನ ಬ್ರಾಹ್ಮಣನಿಗೆ- ''ವಿಪ್ರಶ್ರೇಷ್ಠನೇ ನಿನಗೆ ಕಲ್ಯಾಣವಾಗಲಿ. ನಿನಗೆ ಇಂದು ನಾಳೆ ಇಷ್ಟರಲ್ಲಿಯೇ ಆ ಶ್ರೀಕೃಷ್ಣ ಪರಮಾತ್ಮನ ದರ್ಶನವಾಗುವುದು. ನಿನ್ನಂಥ ಸಜ್ಜನರಿಗೆ ಈ ಲೋಕದಲ್ಲಿ ಆಗಲಿ ಪರಲೋಕದಲ್ಲಿ ಆಗಲಿ ನಾಶವು ಇರುವುದಿಲ್ಲ. ನಿನ್ನ ತಂದೆಗೆ ಇದೆಲ್ಲ ಸಮಾಚಾರವನ್ನು ತಿಳಿಸು'' ಎಂದು ಹೇಳಿದರು.

ದುರ್ವಾಸರು ಆಡಿದ ಮಾತುಗಳಿಂದ ಮತ್ತಿಷ್ಟೂ ಕೋಪ ಬಂದಿತು ಆ ಹಂಸ ಡಿಂಭಕರಿಗೆ. ಅವರು ಅಲ್ಲಿ ಇರುವ ದುರ್ವಾಸರೇ ಮೊದಲಾದವರ ಕೈಯಲ್ಲಿಯ ದಂಡ, ಕಮಂಡಲು, ಗೋಕರ್ಣಾಕಾರದ ಕಟ್ಟಿಗೆಯ ಭೋಜನ ಪಾತ್ರೆ, ಸಾಲಿಗ್ರಾಮ, ಸಂಪುಟ, ಮುಂತಾದವುಗಳನ್ನೆಲ್ಲ ಅವರ ಕೈಯಿಂದ ಕಸಿದುಕೊಂಡು ಕಲ್ಲಮೇಲೆ ಒಡೆದು ಒಗೆದು ಚೂರು ಚೂರು ಮಾಡಿದರು. ಮತ್ತು ಅಲ್ಲಿಯೇ ಅವರು ತಪಸ್ಸು ಮಾಡುವ ಸ್ಥಳದಲ್ಲಿ ಮೃಗಗಳ ಮಾಂಸಗಳನ್ನು ಸುಟ್ಟು ಭಕ್ಷಣಮಾಡಿ ಆ ಹಂಸ ಡಿಂಭಕರು ಅಲ್ಲಿಂದ ಹೊರಟು ಹೋದರು. ಧರ್ಮಾತ್ಮನಾದ ಜನಾರ್ದನನು ''ಇವರ ಮುಂದೆ ತನ್ನ ಮಾತು ಯಾವುದೂ ನಡೆಯಲಾರದು'' ಎಂದು ತಿಳಿದು ಸುಮ್ಮನೇ ಅಲ್ಲಿಂದ ಹೊರಟು ತನ್ನ ಮನೆಗೆ ಬಂದ. ಅನಂತರ ಆ ದುಷ್ಟರು ಅಲ್ಲಿಂದ ಹೋದ ಬಳಿಕ ಯತಿವರೇಣ್ಯರಾದ ದುರ್ವಾಸರು ಅಲ್ಲಿಂದ ಓಡಿಹೋಗುತ್ತಲಿರುವ ಹಂಸ ಹಾಗೂ ಪರಮಹಂಸರನ್ನು ಕೂಗಿ ಕರೆದು ಹೇಳಿದರು. - ''ನಾವು ಇನ್ನು ಮೇಲೆ ಪುಷ್ಕರ ಕ್ಷೇತ್ರದಲ್ಲಿ ತುಸು ವಿಶ್ರಮಿಸಿ ದ್ವಾರಕೆಗೆ ಹೋಗೋಣ. ಜಗದ್‌ರಕ್ಷಣೆಯ ದೀಕ್ಷೆಯನ್ನು ಹೊತ್ತ ಕೃಷ್ಣನ ಎದುರಿಗೆ ಇದೆಲ್ಲವನ್ನೂ ತಿಳಿಸೋಣ. ಈ ಪಾಪಿಗಳು ಇಲ್ಲಿ ಒಡೆದು ಹಾಕಿದ ನಮ್ಮ ದಂಡ, ಕಮಂಡಲು, ಕಟ್ಟಿಗೆಯ ಪಾತ್ರೆ, ಸೊಂಡೆಮಿಳ್ಳೆ, ಹರಿದ ಲಂಗೋಟಿ, ಸೀಳಿದ ಭೋಜನಪಾತ್ರೆ, ಛೇದಿಸಿದ ನಾರು ಬಟ್ಟೆ, ಮುರಿದ ಪ್ರೋತಕಪಾಲ, ತುಂಡು ತುಂಡು ಮಾಡಿದ ಶಾಟಿ, ಇದೆಲ್ಲವನ್ನೂ ಆ ಕೃಷ್ಣನಿಗೆ ತೋರಿಸೋಣ.'' ಹೀಗೆ ನುಡಿದು ದುರ್ವಾಸರು ತಮ್ಮ ಶಿಷ್ಯರಾದ ಐದು ಸಾವಿರ ಹಂಸ ಪರಮ ಹಂಸ ಸನ್ಯಾಸಿಗಳನ್ನು ಕರೆದುಕೊಂಡು ದ್ವಾರಕಾಪಟ್ಟಣಕ್ಕೆ ಬಂದರು.

ದ್ವಾರಕೆಯಲ್ಲಿ ಕೃಷ್ಣನು ಸುಧರ್ಮ ಸಭೆಯಲ್ಲಿ ಸಾತ್ಯಕಿ ಮೊದಲಾದವರಿಂದ ಕೂಡಿಕೊಂಡು 'ಲೆತ್ತ' ಆಟ ಆಡುತ್ತಿದ್ದ. ಉದ್ಧವ, ಯುಯುಧಾನ, ಸಾತ್ಯಕಿ, ಬಲರಾಮ ಮೊದಲಾದವರೆಲ್ಲರೂ, ನನ್ನದು ಗೋಲು, 'ನನ್ನದು ಗೋಲು' ಎಂದು ಮಾತನಾಡುತ್ತ ಗೋಲಗಳನ್ನು ಕೈಯಲ್ಲಿ ಹಿಡಿದು ತುರುಸಿನಿಂದ ಆಟದಲ್ಲಿ ಮಗ್ನರಾಗಿದ್ದರು.

ಆ ಸುಧರ್ಮಸಭೆಯ ದ್ವಾರಪಾಲಕರು ''ಕೃಷ್ಣನು ಕ್ರೀಡಾಸಕ್ತನಾಗಿದ್ದಾನೆ'' ಎಂದು ಹೇಳಿ ಈ ಸನ್ಯಾಸಿಗಳನ್ನು ಹೊರಗೇ ತಡೆದು ನಿಲ್ಲಿಸಿದರು. ಮಧ್ಯಾಹ್ನದವರೆಗೆ ಸಾಗಿತು ಆ ಕೃಷ್ಣಮಿತ್ರರ ಪಗಡೆಯ ಆಟ. ಮಧ್ಯಾಹ್ನದಲ್ಲಿ ಆಟವನ್ನು ಮುಗಿಸಿ ಅವರೆಲ್ಲರೂ ಅದರ ಬಗ್ಗೆಯೇ ಚರ್ಚಿಸುತ್ತ ಕುಳಿತಾಗ ದುರ್ವಾಸರು ಶಿಷ್ಯರೊಂದಿಗೆ ಒಳಗೆ ನುಗಿದ್ದರು. ಉಗ್ರಸೇನ, ವಸುದೇವ, ಅಕ್ರೂರ ಮೊದಲಾದ ಯಾದವರೆಲ್ಲರೂ ಒಡೆದ ಕಮುಂಡಲ, ತುಂಡಾದ ದಂಡ, ಹರಿದ ಲಂಗೋಟಿ. ಚೂರು ಚೂರಾದ ಶಾಟಿ, ತುಣುಕಾದ ಗೋಕರ್ಣ ಪಾತ್ರೆ ಮುಂತಾದವುಗಳನ್ನು ಹಿಡಿದುಕೊಂಡು ಸಿಟ್ಟಿನಿಂದ ಕಣ್ಣುಕೆಂಪಾಗಿ ಬಂದಿರುವ ಆ ಸನ್ಯಾಸಿಗಳ ಹಿಂಡನ್ನು ಕಂಡು ಗಾಬರಿಯಾಗಿ ''ಇಲ್ಲಿ ಆಸನ'' ''ಇತ್ತ ಕೃಷ್ಣಾಜಿನ'' ''ಅಲ್ಲಿ ಮೇಲೆ ದರ್ಭಾಸನ'' ತಾವು ಕೂಡಬೇಕು. ಅನುಗ್ರಹ ಮಾಡಬೇಕು.'' ಎಂದು ಅಂಜುತ್ತ ಅಳುಕುತ್ತ ನುಡಿದರು. ಕೃಷ್ಣನೂ ಕೂಡ ಸಂಭ್ರಮದಿಂದ ಹಾರಿ ಬಂದು ಅವರಿಗೆ ಆಸನವನ್ನು ಇಟ್ಟು ''ದಯವಿಟ್ಟು ಇದರ ಮೇಲೆ ಕುಳಿತುಕೊಳ್ಳಿ ನಾನು ನಿಮ್ಮ ಕಿಂಕರ'' ಎಂದು ನುಡಿದ. ಆಗ ದುರ್ವಾಸರು ಆಸನದ ಮೇಲೆ ತುಸು ಕುಳಿತಂತೆ ಮಾಡಿದರು. ಉಳಿದವರೂ ಆಸನಗಳಿಗೆ ತಮ್ಮ ದೇಹಗಳನ್ನು ತಗಲಿಸಿದರು ಅನಂತರ ಕೃಷ್ಣನು ಅರ್ಘ್ಯ ಪಾದ್ಯಾದಿಗಳಿಂದ ಅವರನ್ನು ಪೂಜಿಸಿ ಕೇಳಿದ.

**ಕೃಷ್ಣ:-** ''ವಿಪ್ರೋತ್ತಮರೇ, ತಾವು ಇಲ್ಲಿಗೆ ಬಂದ ಕಾರಣ ಏನು? ತಮ್ಮಂಥ ನಿಸ್ಪೃಹರಾದ ಯತಿಶ್ರೇಷ್ಠರು ಇಲ್ಲಿಯವರೆಗೆ ಬರಬೇಕಾದರೆ ಏನಾದರೂ ಮಹತ್ಕಾರಣ ಇರಲೇಬೇಕು. ತಾವಂತೂ ವಿರಕ್ತರು. ಯಾವುದರ ಮೇಲೆಯೂ ತಮಗೆ ಆಸೆ ಇಲ್ಲ. ಆದ್ದರಿಂದ ನಮ್ಮಂಥ ಕ್ಷತ್ರಿಯರ ಬಳಿಗೆ ಏನಾದರೂ ಬೇಡಲು ಬರುವುದು ಅಸಂಭವ. ಇಚ್ಛೆಯೇ ಇಲ್ಲದವರು ಯಾವ ಪೃಚ್ಛೆಯನ್ನೂ ಮಾಡುವುದಿಲ್ಲ. ಯಾವುದಾದರೂ ಅಪೇಕ್ಷೆಯುಳ್ಳವರು ಅದರ ಆಸೆಯಿಂದ ಕ್ಷತ್ರಿಯರ ಬಳಿಗೆ ಹೋಗಿ ಬೇಡುತ್ತಾರೆ ನಿಮಗಂತೂ ಆಸೆ ಎಂಬುದೇ ಇಲ್ಲ. ಆದ್ದರಿಂದ ನೀವು ಇಲ್ಲಿ ಬರಲು ಒಂದು ಕಾರಣವಂತೂ ಇರಲೇಬೇಕು. ಅದಕ್ಕಾಗಿ ಏನಾದರೂ ಕಾರಣವಿದ್ದರೆ ನಮಗೆ ತಿಳಿಸಿರಿ.''

ಕೃಷ್ಣನ ಈ ಮಾತನ್ನು ಕೇಳಿ ದುರ್ವಾಸರು ಮತ್ತಷ್ಟೂ ಕೆರಳಿ ಕೆಂಡವಾದರು. ಅವರ ಕಣ್ಣು ಅಗ್ನಿಕುಂಡದಂತೆ ಹೊಳೆಯತೊಡಗಿದವು ಅವರು ಕೃಷ್ಣನ ಕಡೆಗೆ ತಮ್ಮ ಸುಡುವ ಕಣ್ಣಿನಿಂದ ಮತ್ತೊಮ್ಮೆ ನೋಡಿ ಹಾಸ್ಯದ ನಗುವನ್ನು ಬೀರಿ ಖಾರವಾಗಿಯೇ ಮಾತನಾಡಿದರು.

**ದುರ್ವಾಸ:-** ಯಾದವೇಶ್ವರ, ನನಗೆ ನಿನ್ನದೆಲ್ಲವೂ ಗೊತ್ತು. ನಾನು ಬಂದ ಕಾರಣ ನಿನಗೆ ಎಲ್ಲವೂ ತಿಳಿದಿದೆ ನಿನ್ನ ಹಿಂದಿನ ಇತಿಹಾಸವನ್ನೆಲ್ಲ ಚೆನ್ನಾಗಿ ಬಲ್ಲೆವು. ನೀನು ಮಾಯೆಯಿಂದ ಮನುಷ್ಯ ದೇಹವನ್ನು ಸ್ವೀಕರಿಸಿರುವೆ ನೀನು ಬೇಕಾದಷ್ಟು ಮುಚ್ಚಿಡು ನಾನೆಲ್ಲ ಚೆನ್ನಾಗಿ ಬಲ್ಲೆ ನಿನ್ನ ಸ್ವರೂಪವನ್ನು ನೀನು ಜಗತ್ಪತಿ. ಬ್ರಹ್ಮಜ್ಞಾನಿಗಳ ಆರಾಧ್ಯಮೂರ್ತಿ. ಪರಮಪುರುಷ. ತಪಸ್ಸುಮಾಡಿ ಬ್ರಹ್ಮನೂ, ರುದ್ರನೂ ನಾವೆಲ್ಲ ಮುನಿಗಳೂ ನಿನ್ನನ್ನು ಯಥಾಶಕ್ತಿ ತಿಳಿದಿದ್ದೇವೆ. ಈ ಪ್ರಪಂಚವೆಲ್ಲವೂ ನಿನ್ನಿಂದಲೇ ಹುಟ್ಟಿದೆ ಎನ್ನುವುದನ್ನು ನಾವು ಅರಿಯಲಾರೆವು? ನೀನು ಯಾರು ಎನ್ನುವುದನ್ನು ತಿಳಿಯಲಾರದಷ್ಟು ನಾವು ಮೂರ್ಖರು ಅಲ್ಲ. ಕೆಲವು ಮನುಷ್ಯರಿಗೆ ಮಾತ್ರ ನೀನು ಪ್ರತ್ಯಕ್ಷ ಕಂಡರೂ ನಿನ್ನ ಯಥಾರ್ಥವಾದ ಸ್ವರೂಪವು ತಿಳಿದು ಬರಲಿಕ್ಕಿಲ್ಲ. ಆದರೆ ವೇದ ವೇದಾಂತಗಳನ್ನು ಹಗಲು, ರಾತ್ರಿ ಓದಿ ಮನನ ಮಾಡಿ ಮಥನಗೈಯುವ ನಮಗೆ ನಿನ್ನ ಸ್ವರೂಪವು ತಿಳಿಯದೆ? ಬ್ರಹ್ಮಜ್ಞಾನಿಗಳು ತಪಃ

ಸಮಾಧಿಯಿಂದ ತಮ್ಮ ಹೃದಯ ಪದ್ಮದಲ್ಲಿ ಕಾಣುವ ಪರಮ ತತ್ವವೇ ನೀನು ವೇದಶಾಸ್ತ್ರಗಳಲ್ಲಿ ಮುಖ್ಯವಾಗಿ ಪ್ರತಿಪಾದಿಸಲ್ಪಟ್ಟ ಪರಬ್ರಹ್ಮವೇ ನೀನು. ಓಂ ಎಂಬ ಪ್ರಣವ ಮಂತ್ರದಿಂದ ಪ್ರತಿಪಾದಿಸಲ್ಪಟ್ಟವ ನೀನೇ. ಆದ್ದರಿಂದ ''ನನಗೆ ಗೊತ್ತು ಇಲ್ಲ'' ಎಂದು ನೀನು ಆಡಿದ ಮಾತನ್ನು ಹಿಂದೆ ತೆಗೆದುಕೊ. ನಿನಗೆ ಕಾಣದ್ದು ತಿಳಿಯದ್ದು ಯಾವುದಾದರೂ ಇದ್ದರೆ 'ಗೊತ್ತಿಲ್ಲ' ಎಂಬ ಶಬ್ದವನ್ನು ಪ್ರಯೋಗಿಸಬೇಕು. ಆದರೆ ವಾಸ್ತವಿಕವಾಗಿ ನಿನಗೆ ಗೋಚರವಾಗದಿರುವುದು ಈ ಜಗತ್ತಿನಲ್ಲಿ ಯಾವುದಿದೆ? ಸರ್ವವಿಷಯ ಪ್ರತ್ಯಕ್ಷವು ನಿನಗೆ ಸರ್ವದಾ ಇರುವುದು. ಇದ್ದರಿಂದ ನೀನು ಸರ್ವಜ್ಞ. ಇಷ್ಟಾದರೂ 'ನ ಜಾನೇ' ನನಗೆ ಗೊತ್ತಿಲ್ಲ ಎಂದು ಹೇಳುವೆಯಲ್ಲ? ಇದು ಎಂಥ ನಿನ್ನ ಸಾಹಸ? ನಿನಗೆ ಎಲ್ಲವೂ ತಿಳಿದಿದೆ. ಎಲ್ಲವನ್ನೂ ನೀನು ನೋಡುತ್ತಲಿರುವೆ. ಇಷ್ಟಾದರೂ ನಮ್ಮ ದುರವಸ್ಥೆ ತಿಳಿದರೂ ಕಣ್ಣಿಂದ ನೋಡಿಯೂ ಸುಮ್ಮನಿರುವೆ. ಇದನ್ನು ತಿಳಿದ ನಮಗೆ ಸಂಕಟವಾಗುತ್ತಿದೆ. ನಾವಂತೂ ಎಂದಿನಿಂದಲೂ ನಿನ್ನನ್ನೇ ನಂಬಿದ್ದೇವೆ. ನಿನ್ನನ್ನೇ ನೆಚ್ಚಿದ್ದೇವೆ. ನೀನು ನೋಡನೋಡುತ್ತಿರುವಾಗಲೇ ನಮಗೆ ಈ ದುರವಸ್ಥೆ ಮತ್ತು ಇಂಥ ದುಃಖ ಬರುತ್ತಲಿವೆ ಇಷ್ಟಾದರೂ ನೀನು ನಮ್ಮ ಕಡೆಗೆ ಕಣ್ಣೆತ್ತಿ ನೋಡುವುದಿಲ್ಲ. ಇದಕ್ಕಿಂತ ಹೆಚ್ಚಿನ ದೌರ್ಭಾಗ್ಯ ಯಾವುದಿದೆ? ಹಂಸ ಡಿಂಭಕ ಎಂಬ ಇಬ್ಬರು ಕ್ಷತ್ರಿಯಾಧಮರು ನಮ್ಮನ್ನು ಪರಿಪರಿಯಿಂದ ಪೀಡಿಸಿದ್ದಾರೆ. ದಾರುಣವಾಗಿ ಹಿಂಸಿಸಿದ್ದಾರೆ. ''ಗ್ರಹಸ್ಥಾಶ್ರಮವೇ ಶ್ರೇಷ್ಠ. ನೀವು ಏಕೆ ಸನ್ಯಾಸಿಗಳಾದಿರಿ?'' ಎಂದು ನಮ್ಮನ್ನು ಹಿಡಿದು ಎಳೆದಿದ್ದಾರೆ. ಇಕೋ ಇಲ್ಲಿ ನೋಡು. ನಮ್ಮ ದಂಡವನ್ನು ಮುರಿದಿದ್ದಾರೆ. ಕಮಂಡಲವನ್ನು ಸೀಳಿದ್ದಾರೆ. ಕಟ್ಟಿಗೆಯ ಗೋಕರ್ಣವನ್ನು ತುಂಡರಿಸಿದ್ದಾರೆ. ಆ ದುಷ್ಟರ ಇನ್ನೊಂದು ಸಾಹಸವನ್ನು ನೋಡು. ನಾನು ಹಾಕಿಕೊಂಡು ಕೌಪೀನವನ್ನು ಕೂಡ ಕಸಿದು ಚೂರು ಚೂರಾಗಿ ಹರಿದು ಒಗೆದರು. ಇಷ್ಟಾದರೂ ನೀನು ನಮ್ಮನ್ನು ರಕ್ಷಿಸುವುದಿಲ್ಲ. ಆಶ್ಚರ್ಯ! ಆಶ್ಚರ್ಯ! ರಕ್ಷಣೆಗಾಗಿಯೇ ಹುಟ್ಟಿ ಬಂದ ನೀನು ನಮ್ಮನ್ನು ರಕ್ಷಿಸುವುದಿಲ್ಲ ಎಂದರೆ ನಾವು ಎಂಥ ಮಂದಭಾಗ್ಯರು! ಆದ್ದರಿಂದ ನಾವು ಈಗ ನಿನಗೇ ಶರಣು ಬಂದಿದ್ದೇವೆ. ನೀನೇ ನಿನಗೆ ಉಚಿತ ತೋರಿದಂತೆ ಮಾಡು. ಆ ದುಷ್ಟರಿಬ್ಬರೂ ಈ ಭೂಮಿಯಲ್ಲಿ ಮತ್ತೆ ಬದುಕಿ ಉಳಿದರೆ ಸನ್ಯಾಸಿಗಳು ಎಲ್ಲರೂ ಸತ್ತಂತೆ. ಬ್ರಾಹ್ಮಣರೆಲ್ಲರೂ ಮರಣಿಸಿದಂತೆ ರಾಜರಿಗೆ ಉಳಿಗಾಲವಿಲ್ಲ. ವೈಶ್ಯರಿಗೆ ಆಳಿಗಾಲ ತಪ್ಪಿಲ್ಲ ಭೀಷ್ಮ, ಬಾಹ್ಲೀಕ, ಜರಾಸಂಧ ಮುಂತಾದ ಯಾವ ವೀರರೂ ಅವರನ್ನು ಶಾಸನಗೈಯಲು ಸಮರ್ಥರಲ್ಲ, ಆದ್ದರಿಂದ ನೀನೇ ಅವರಿಬ್ಬರನ್ನು ನಿಗ್ರಹಿಸು. ಜಗತ್ತನ್ನು ರಕ್ಷಿಸು. ಇಲ್ಲದಿದ್ದರೆ ನಿನ್ನ ಜಗದ್ರಕ್ಷಕ ಎಂಬ ಬಿರುದು ವ್ಯರ್ಥ. ಆದ್ದರಿಂದ ಸ್ವಾಮೀ ರಕ್ಷಿಸು, ರಕ್ಷಿಸು.

**ಕೃಷ್ಣ:-** ಯತಿವರ್ಯರೇ, ಕ್ಷಮಿಸಿರಿ, ಕ್ಷಮಿಸಿರಿ ಎಲ್ಲವೂ ನನ್ನದೇ ತಪ್ಪು. ಈ ಮೊದಲೇ ಅವರು ಶಿವನ ವರದಿಂದ ಮತ್ತರಾಗಿದ್ದಾರೆ ಎಂದು ಕೇಳಿದ್ದೆ. ಅವರು ಜರಾಸಂಧನ ಪಕ್ಷದವರು. ಅವರನ್ನು ಅಲ್ಪ ಪ್ರಯತ್ನದಿಂದ ನಿಗ್ರಹಿಸುವುದು ಸಾಧ್ಯವಿಲ್ಲ. ಅದಕ್ಕಾಗಿ ಉದಾಸೀನನಾಗಿದ್ದೆ. ಆದರೆ ತಮ್ಮಂಥ ಅವಧೂತ ಸನ್ಯಾಸಿಗಳನ್ನು ಪೀಡಿಸಿದ ಆ ಪಾಪಿ ಇನ್ನು ಬದುಕಿ ಉಳಿಯಲಾರೆ. ಅವನಿಗೆ ರುದ್ರನ ವರ ಬಿಟ್ಟು ಬ್ರಹ್ಮದೇವರ ವರವಿದ್ದರೂ ನಾನು ಅವನನ್ನು ಶಾಸನ ಮಾಡುತ್ತೇನೆ. ತಾವು ಸಿಟ್ಟಿಗೇಳಬಾರದು. ನಾನು ಆಣೆಯಿಟ್ಟು ಹೇಳುತ್ತೇನೆ. ಆ ದುಷ್ಟರನ್ನು ದಮನ ಮಾಡಿ ತಮ್ಮ ರಕ್ಷಣೆಯನ್ನು ನಿಶ್ಚಿತವಾಗಿಯೂ ಮಾಡುತ್ತೇನೆ. ನೀವು ನಿಮ್ಮ ಕಾರ್ಯಕ್ಕೆ ತೆರಳಬಹುದು.

**ದುರ್ವಾಸ:-** ಕೃಷ್ಣ. ಆ ದೈತ್ಯರಿಂದ ಹಿಂಸಗೊಳಗಾದ ನಾನು ಕ್ಷುಬ್ಧನಾಗಿ ನಿನಗೆ ಏನೇನೋ ಮಾತನಾಡಿದೆ. ತಿಳಿಯದೇ ನಾನು ಆಡಿದ ತಪ್ಪನ್ನು ಮನ್ನಿಸು. ತಿಳಿದು ಮಾತನಾಡಿದ್ದನ್ನೂ ಕ್ಷಮಿಸು. ನೀನು ಮೂರು ಲೋಕಗಳಿಗೆ ಒಡೆಯ. ದೇವತೆಗಳಿಗೂ ದೇವ. ಶ್ವೇತದ್ವೀಪ, ಅನಂತಾಸನ, ವೈಕುಂಠ ಮೂರು ಸ್ಥಾನಗಳಲ್ಲಿ ನೆಲೆಸಿ ತ್ರಿಧಾಮ ಎಂದು ಪ್ರಸಿದ್ಧ ಆದವ ನೀನು. ಜಗನ್ನಾಥ, ನೀನು ನನ್ನ ಅಪರಾಧವನ್ನು ಕ್ಷಮಿಸು. ''ಕ್ಷಮಾಸಾರಾ ಹಿ ಸಾಧವಃ'' ಕ್ಷಮಾಗುಣ ಪ್ರಧಾನವಾಗಿ ಉಳ್ಳವರೇ ಸಾಧುಗಳು.

ಆಗ ಶ್ರೀಕೃಷ್ಣನು, ಮುನಿಗಳೇ ನೀವು ಎಲ್ಲರೂ ಯತೀಶ್ವರರು ''ಮಹಾಪ್ರಯತ್ನ ದಿಂದ ನಿಮ್ಮ ಕ್ಷಮಾಗುಣವನ್ನು ರಕ್ಷಿಸಿಗೊಳ್ಳಿರಿ. ನೀವೆಲ್ಲರೂ ಇಂದು ನನ್ನ ಮನೆಯಲ್ಲಿ ಭಿಕ್ಷೆಯನ್ನು ಸ್ವೀಕರಿಸಿರಿ.'' ದುರ್ವಾಸರೇ ಮೊದಲಾದ ಎಲ್ಲ ಹಂಸ ಪರಮಹಂಸ ಸನ್ಯಾಸಿಗಳಿಗೆ ಕೃಷ್ಣನ ಮನೆಯಲ್ಲಿ ಅನ್ನವನ್ನು ಸ್ವೀಕರಿಸಬೇಕು ಎಂದು ಬಹುಕಾಲದಿಂದ ಅಪೇಕ್ಷೆ ಇತ್ತು. ಆದ್ದರಿಂದ ಅವರೆಲ್ಲರೂ ಶ್ರೀಹರಿಯ ಆಮಂತ್ರಣವನ್ನು ಅಂಗೀಕರಿಸಿದರು. ಅನಂತರ ಶ್ರೀಕೃಷ್ಣನು ಆ ಎಲ್ಲ ಯತಿಗಳಿಗೂ ನಾಲ್ಕು ಬಗೆಯಾದ ಅಡಿಗೆ ಮಾಡಿಸಿ ತೃಪ್ತಿಯಾಗುವಂತೆ ಊಟ ಮಾಡಿಸಿದ ಮತ್ತು ಅವರೆಲ್ಲರಿಗೂ ಬೇಕಾಗುವಷ್ಟು ಬಟ್ಟೆಗಳನ್ನು ಕೊಟ್ಟ. ಶ್ರೀಕೃಷ್ಣನ ಈ ಪ್ರೀತ್ಯಾದರದ ಆತಿಥ್ಯದಿಂದ ಅತ್ಯಂತ ಸಂತುಷ್ಟರಾದ ಹಂಸರೂ, ಪರಮಹಂಸರೂ ಪರಮತೃಪ್ತರಾಗಿ ಆನಂದದಿಂದ ಅಲ್ಲಿಂದ ಹೊರಟು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಆದರೆ ದೂರ್ವಾಸರು ಮಾತ್ರ ಬಹುದಿನಗಳವರೆಗೆ ಶ್ರೀಕೃಷ್ಣನ ಅತ್ಯಾದರದ ಆತಿಥ್ಯವನ್ನು ಸ್ವೀಕರಿಸುತ್ತ ಆನಂದದಿಂದ ದ್ವಾರಕೆಯಲ್ಲಿಯೇ ಇದ್ದರು ಅವರ ಜೊತೆಗೆ ದೇವರ್ಷಿ ನಾರದರೂ ಆ ಶ್ರೀಕೃಷ್ಣ ಭವನದಲ್ಲಿ ಅವರೊಡನೆ ಕೃಷ್ಣನ ಅತಿಥಿಯಾಗಿ ಕೆಲವು ದಿನ ಉಳಿದರು.

**ವೈಶಂಪಾಯನ:-** ಆ ಕಾಲದಲ್ಲಿ ಹಂಸ ಡಿಂಭಕರು ತಮ್ಮ ತಂದೆಯಿಂದ ರಾಜಸೂಯ ಯಾಗವನ್ನು ಮಾಡಿಸಬೇಕು ಎಂದು ಸಿದ್ಧತೆಯನ್ನು ನಡೆಸಿದರು. ಆದರೆ ಅವರು ಮಿತ್ರನಾದ ಜನಾರ್ದನನು ''ಭೀಷ್ಮ, ಜರಾಸಂಧ, ಬಾಲ್ಹೀಕ, ಮತ್ತು ಕೃಷ್ಣನೇ ಮೊದಲಾದ ಯಾದವರು ಹಾಗೂ ಬಲರಾಮ ಇವರೆಲ್ಲರೂ ಬದುಕಿ ಇದ್ದಾಗ ನೀನು ರಾಜಸೂಯಯಾಗ ಮಾಡುವುದು ಅತ್ಯಂತ ಅಶಕ್ಯ ಎಂದು ನನಗೆ ಎನಿಸುವುದು. ನಿನ್ನಿಂದ ಅವಮಾನಿತರಾದ ದುರ್ವಾಸರು ಈಗ ದ್ವಾರಕೆಯಲ್ಲಿಯೇ ಶ್ರೀಕೃಷ್ಣನ ಅತಿಥಿಯಾಗಿ ಇರುತ್ತಾರೆ ಎಂದು ನಮ್ಮ ಮನೆಗೆ ಭೋಜನಕ್ಕೆ ಬಂದ ಒಬ್ಬ ಯಾತ್ರಿಕ ಹೇಳಿದ. ಆದುದರಿಂದ ನಿಮ್ಮ ರಾಜಸೂಯ ಯಾಗವನ್ನು ಮುಂದೆ ಹಾಕುವುದೇ ಹಿತಕರ ಎಂದು ನನ್ನ ಅಭಿಪ್ರಾಯ'' ಎಂದು ಹಿತವಚನವನ್ನು ಹೇಳಿದ. ಆಗ ಮದಾಂಧರಾದ ಹಂಸ ಡಿಂಭಕರು ಜನಾರ್ದನನ ಮಾತನ್ನು ಧಿಕ್ಕರಿಸಿ ನಕ್ಕು ನುಡಿದರು.

**ಹಂಸ:-** ಬಲಹೀನರಾದ ಆ ಮುದಿಭೀಷ್ಮ ನಮ್ಮ ಎದುರು ನಿಲ್ಲಲು ಎಂದೂ ಸಮರ್ಥನಲ್ಲ. ಆ ಯಾದವರಿಗಂತೂ ನಮ್ಮನ್ನು ಎದುರಿಸುವ ಧೈರ್ಯ ಎಲ್ಲಿ? ಕೃಷ್ಣ, ಬಲರಾಮ, ಸಾತ್ಯಕಿ ಇವರು ನಮ್ಮ ಮುಂದೆ ರಣರಂಗದಲ್ಲಿ ಬಂದು ಯುದ್ಧ ಮಾಡಲು ಎಷ್ಟರವರು? ಜರಾಸಂಧನಂತೂ ನಮಗೆ ಸಮೀಪದ ಬಂಧು. ಅಂದ ಮೇಲೆ ನಮಗೆ ಯಾರ ಅಂಜಿಕೆ? ಅದನ್ನೆಲ್ಲ ನೀನು ತಲೆಯಲ್ಲಿ ಹಾಕಿಕೊಳ್ಳಬೇಡ. ನಾವು ಹೇಳಿದಷ್ಟು

ಮಾಡು ನೀನು ಈಗ ದ್ವಾರಕಾ ಪಟ್ಟಣಕ್ಕೆ ಹೋಗಿ ಕೃಷ್ಣನಿಗೆ ನಮ್ಮ ಸಂದೇಶವನ್ನು ತಿಳಿಸು. ''ನಾವು ರಾಜಸೂಯ ಯಾಗವನ್ನು ಕೈಕೊಂಡಿದ್ದೇವೆ. ಅದಕ್ಕಾಗಿ ನೀನು ನಮಗೆ ಕೊಡಬೇಕಾದ ಕಪ್ಪು ಕಾಣಿಕೆಗಳನ್ನೆಲ್ಲ ತಪ್ಪದೇ ತಂದು ಒಪ್ಪಿಸು. ಸಮುದ್ರದ ದಂಡೆಯಲ್ಲಿರುವ ನೀನು ನಮ್ಮ ಸಮಾರಂಭಕ್ಕೆ ಬೇಕಾಗುವ ಉಪ್ಪು, ಹಾಗೂ ಉಳಿದ ಕ್ಷಾರಪದಾರ್ಥಗಳನ್ನೆಲ್ಲ ತೆಗೆದುಕೊಂಡು ಬಾ, ಕೇಶವ, ನೀನು ತಡಮಾಡಬೇಡ'' ಎಂದು ನೀನು ಹೋಗಿ ತಿಳಿಸು. ಆಗುವುದಿಲ್ಲ ಎನ್ನಬೇಡ. ನೀನು ನಮ್ಮ ಮಿತ್ರನಲ್ಲವೇ? ನೀನು ಈ ನಮ್ಮ ಸಂದೇಶವನ್ನು ಕೃಷ್ಣನಿಗೆ ತಿಳಿಸದಿದ್ದರೆ ನಮ್ಮ ಆಣೆ. ಜನಾರ್ದನನಿಗೆ ಆ ಮೂರ್ಖರ ಮಾತು ಕೇಳಿ ಮತ್ತು ಅವರು ಕೃಷ್ಣನ ಬಗೆಗೆ ತಾಳಿದ ತಿರಸ್ಕಾರದ ಭಾವನೆಯನ್ನು ನೋಡಿ ಬಹಳ ಕೆಡುಕೆನಿಸಿತು. ಆದರೂ ಈ ನೆವದಿಂದ ತನಗೆ ಆ ಶ್ರೀಕೃಷ್ಣಪರಮಾತ್ಮನನ್ನು ಸಾಕ್ಷಾತ್‌ಆಗಿ ಕಾಣುವ ಸುಯೋಗ ಲಭಿಸುವುದು ಎಂದು ಆನಂದವೂ ಆಯಿತು. ''ದ್ವಾರಕಾಧೀಶನಾದ ಆ ಶ್ರೀಕೃಷ್ಣನ ಹೊಂದಾವರೆಯಂತೆ ಸುಂದರವಾದ ಮುಖವನ್ನು ನೋಡಲಿರುವ ನಾನೇ ಧನ್ಯ. ಆ ಕೃಷ್ಣನನ್ನು ನೋಡಿ ಬಂದ ನನ್ನನ್ನು ಕಾಣುವ ನನ್ನ ತಾಯಿಯೂ ಧನ್ಯ. ನಾನೇನೋ ದ್ವಾರಕೆಗೆ ಹೋಗಿ ಕೃಷ್ಣನನ್ನು ಕಣ್ತುಂಬ ನೋಡುತ್ತೇನೆ. ಆದರೆ ಕೃಷ್ಣನು ನನ್ನನ್ನು ಪ್ರೀತಿಯಿಂದ ನೋಡಬಹುದೆ? ಒಲುಮೆಯಿಂದ ಮಾತನಾಡಬಹುದೆ? ಅದರದಿಂದ ''ಕ್ಷೇಮವಷ್ಟೆ''? ಎಂದು ಕುಶಲ ಪ್ರಶ್ನೆ ಮಾಡಬಹುದೆ? ಹೀಗೆಲ್ಲ ವಿಚಾರಿಸುತ್ತ ಅವನು ದ್ವಾರಕಾನಗರಕ್ಕೆ ಬಂದ. ಸುಧರ್ಮ ಸಭೆಯಲ್ಲಿ ಬಲರಾಮ, ಉದ್ಧವ, ಅಕ್ರೂರ ಮೊದಲಾದವರೊಂದಿಗೆ ಆಸನದ ಮೇಲೆ ಆಸೀನನಾದ ಶ್ರೀಕೃಷ್ಣನ ಚರಣಗಳಿಗೆ ವಂದನೆ ಮಾಡಿದ. 'ನಾನು ಹಂಸ ಡಿಂಭಕರ ದೂತ' ಎಂದು ಹೇಳಿದ.

**ಕೃಷ್ಣ:-** ಜನಾರ್ದನ, ಮೊದಲು ಈ ಆಸನದ ಮೇಲೆ ಕೂಡು ಬ್ರಹ್ಮದತ್ತ ಮಹಾರಾಜನು ಕ್ಷೇಮವಷ್ಟೇ? ಹಂಸ ಡಿಂಭಕರ ಪರಾಕ್ರಮವನ್ನು ಕೇಳಿದ್ದೇವೆ. ನಿನ್ನ ತಂದೆಯು ಕ್ಷೇಮದಿಂದ ಇರುವರು ತಾನೆ? ಆ ಹಂಸ ಡಿಂಭಕರು ಏನು ಹೇಳಿ ಕಳಿಸಿದ್ದಾರೆ? ಅದು ಒಳ್ಳೆಯದೇ ಇರಲಿ, ಕೆಟ್ಟದ್ದೇ ಇರಲಿ. ನೀನು ನಿರ್ಭಯವಾಗಿ ಹೇಳು. ನೀನು ದೂತ. ಹೇಗೆ ಹೇಳುವುದು? ಯಾವುದನ್ನು ಹೇಳುವುದು? ಎಂಬ ವಿಮರ್ಶೆ ನಿನಗೆ ಬೇಡ.

**ಜನಾರ್ದನ:-** ಪ್ರಭು, ನಿನಗೆ ತಿಳಿಯದೇ ಇದ್ದುದು ಯಾವುದಿದೆ? ನೀನು ಸರ್ವಜ್ಞ. ಅಂದ ಬಳಿಕ ನನ್ನನ್ನು ಏಕೆ ಕೇಳುತ್ತಿ? ಆದರೂ ಕೂಡ ನೀನು ಹೇಳು ಎಂದು ಹೇಳಿದ್ದರಿಂದ ಹಂಸಡಿಂಭಕರ ಸಂದೇಶವನ್ನು ತಿಳಿಸುತ್ತೇನೆ. - ಬ್ರಹ್ಮದತ್ತ ಮಹಾರಾಜರು ರಾಜಸೂಯ ಯಾಗವನ್ನು ಮಾಡಲಿರುವರು. ಅದಕ್ಕಾಗಿ ಹಂಸ ಡಿಂಭಕರು ಯಾದವರಿಗೆ ಕರವನ್ನು ತೆಗೆದುಕೊಂಡು ಬರಲು ತಿಳಿಸು ಎಂದು ಹೇಳಿ ನನ್ನನ್ನು ನಿಮ್ಮಲ್ಲಿಗೆ ಕಳಿಸಿದ್ದಾರೆ. ಅವರಿಗೆ ನೀವು ಆ ಯಜ್ಞದ ಸಲುವಾಗಿ ಬಹಳಷ್ಟು ಉಪ್ಪನ್ನು ತಂದುಕೊಡಬೇಕಂತೆ.

ಅದನ್ನು ಕೇಳಿ ಕೃಷ್ಣನು ನಕ್ಕು ಜನಾರ್ದನನಿಗೆ ತನ್ನ ಸಂದೇಶವನ್ನು ಹಂಸ ಡಿಂಭಕರಿಗೆ ಮುಟ್ಟಿಸಲು ಹೇಳಿದ-

**ಕೃಷ್ಣ:-** ಹಂಸ ಡಿಂಭಕರೇ, ನಿಮಗೆ ನಾನು ನನ್ನ ಬಾಣ ಹಾಗೂ ಖಡ್ಗಗಳಿಂದ ಕರವನ್ನು ಕೊಡುತ್ತೇನೆ. ನನ್ನ ಚಕ್ರದಿಂದ ನಿಮ್ಮ ಶಿರವನ್ನು ಕತ್ತರಿಸುತ್ತೇನೆ. ನಿಮ್ಮ ಈ ಉನ್ಮಾದಕ್ಕೆ ಕಾರಣವಾದ ವರವನ್ನು ನಿಮಗೆ ನೀಡಿದ ಆ ಶಿವನನ್ನು ಗೆದ್ದು ಅನಂತರ

ನಿಮ್ಮನ್ನು ಕೊಲ್ಲುತ್ತೇನೆ. (ಯೋ ವಾಂ ದತ್ತವಾನ್ ರುದ್ರೋ ತಂ ಜಿತ್ವಾ ವಾಮ್ ಹನ್ಮ್ಯಹಮ್ ।) ಹೀಗೆ ಹೇಳಿ ಆ ಜನಾರ್ದನನ ಜೊತೆಗೆ ಹಂಸ ಡಿಂಭಕರನ್ನು ಭೆಟ್ಟಿಯಾಗಿ ಬರಲು ಸಾತ್ಯಕಿಯನ್ನು ಕಳುಹಿಸಿದ. ಸಾತ್ಯಕಿ ಮತ್ತು ಆ ಜನಾರ್ದನ ಇಬ್ಬರೂ ಕೂಡಿ ಹಂಸ ಡಿಂಭಕರ ರಾಜಧಾನಿಗೆ ಬಂದರು. ಅವರಿಗೆ ಜನಾರ್ದನನು ತಾನು ಕೃಷ್ಣನನ್ನು ನೋಡಿ ಮಾತನಾಡಿದ ಸಂದರ್ಭವನ್ನು ವಿವರಿಸಿ ಹೇಳಿದ. ಕೃಷ್ಣನನ್ನು ಬಾಯ್ತುಂಬ ಹೊಗಳಿದ. ಅದನ್ನು ಕೇಳಿ ಹಂಸನಿಗೆ ಕೋಪ ಬಂದಿತು. ಆಗ ಅವನು ಜನಾರ್ದನನಿಗೆ ''ಕೃಷ್ಣನ ಕೈಯಲ್ಲಿಯ ಶಂಖ, ಚಕ್ರ, ಗದಾ, ಶಾರಂಗ, ಕೊರಳಲ್ಲಿಯ ವನಮಾಲಾ ಮತ್ತು ತಾವರೆಗಣ್ಣು, ಧೀರನಿಲುವುಗಳನ್ನು ನೋಡಿಯೇ ನೀನು ಮರುಳಾಗಿ ಬಿಟ್ಟೆ. ಮೂರ್ಖ ಬ್ರಾಹ್ಮಣ'' ಎಂದು ಜರಿದು ''ನೀನು ಬ್ರಾಹ್ಮಣನಾದುದರಿಂದ ಕೊಲ್ಲದೇ ಬಿಟ್ಟಿದ್ದೇನೆ'' ಎಂದು ಹೇಳಿ 'ಬಂದ ಕಾರಣ ಏನು' ಎಂದು ಸಾತ್ಯಕಿಯನ್ನು ಕೇಳಿದ.

**ಸಾತ್ಯಕಿ:-** ಕರ ಕೊಡಬೇಕು ಎಂದು ಕೃಷ್ಣನಿಗೆ ನೀನು ಹೇಳಿ ಕಳಿಸಿದ್ದೀ. ಕೃಷ್ಣನಿಂದ ಕರವನ್ನು ಬೇಡುವುದು ನಿನ್ನ ಹುಚ್ಚು ಸಾಹಸ. ಮತ್ತು ಮೂರ್ಖತನದ ಪರಮಾವಧಿ. ಕೃಷ್ಣನು ನಿಮ್ಮೆಲ್ಲರ ಪ್ರಾಣಗಳನ್ನೇ ನಿನಗೆ ಕರರೂಪವಾಗಿ ಕೊಡಲಿರುವನು. ಆದರೆ ಈ ಕರದಾನ ಮಹೋತ್ಸವವು ಎಲ್ಲಿ ನಡೆಯಬೇಕು ಎನ್ನುವುದನ್ನು ನೀನು ಹೇಳು ನೀನು ಬಯಸಿದಲ್ಲಿ ಬಂದು ನಿನ್ನ ಶಿರಚ್ಛೇದ ಮಾಡಿ ಕರಪ್ರದಾನ ಮಾಡಲು ಕೃಷ್ಣ, ಬಲರಾಮ, ಸಾತ್ಯಕಿ, ಉದ್ಧವ, ಅಕ್ರೂರ, ಪ್ರದ್ಯುಮ್ನ, ಅನಿರುದ್ಧ ಎಲ್ಲ ಯಾದವರೂ ಉತ್ಸುಕರಾಗಿದ್ದಾರೆ.

**ಹಂಸ:-** ರಾಜದೂತ, ನಿನಗೆ ನಾಚಿಕೆಯಿಲ್ಲ. ಆದುದರಿಂದಲೇ ಹೀಗೆ ಮಾತನಾಡುತ್ತಿರುವಿ. 'ದೂತರಾಗಿ ಬಂದವರನ್ನು ಪ್ರೇತರನ್ನಾಗಿ ಮಾಡಬಾರದು. (ಕೊಲ್ಲಬಾರದು)' ಎಂದು ನಿಯಮ. ಆದುದರಿಂದ ನಿನ್ನನ್ನು ಕೊಲ್ಲದೆ ಬಿಟ್ಟಿದ್ದೇನೆ, ನಾಳೆ ಅಥವಾ ನಾಡಿದ್ದು ಪುಷ್ಕರದಲ್ಲಿ ಆ ಕೃಷ್ಣ ಹಾಗೂ ಬಲರಾಮರ ಶಕ್ತಿ ಎಷ್ಟು ಇದೆ ಎನ್ನುವದನ್ನು ನಾನೇ ನೋಡಿ ಬಿಡುತ್ತೇನೆ'' ಎಂದು ಕಟುವಾಗಿಯೇ ಹೇಳಿ ಕಳಿಸಿದ.

ಅದನ್ನೆಲ್ಲ ಕೇಳಿಕೊಂಡು ಬಂದು ಸಾತ್ಯಕಿ ಕೃಷ್ಣನಿಗೆ ಹಂಸ ಡಿಂಭಕರ ಅಭಿಪ್ರಾಯವನ್ನೂ, ಗರ್ವಾಂಧತೆಯನ್ನೂ ತಿಳಿದ ಪುಷ್ಕರ ಕ್ಷೇತ್ರದಲ್ಲಿ ಹಂಸ ಡಿಂಭಕರು ಎಂಬತ್ತೆಂಟು ಸಾವಿರ ರಾಕ್ಷಸರೊಡನೆ ಯುದ್ಧಕ್ಕೆ ಇಳಿದರು. ವಿಚಕ್ರ ಎಂಬ ಆ ಹಂಸ ಡಿಂಭಕರ ಗೆಳೆಯನೂ ಅವನ (ವಿಚಕ್ರನ) ಗೆಳೆಯನಾದ ಹಿಡಿಂಬ ಎಂಬ ರಾಕ್ಷಸನೂ ತಮ್ಮ ಅಪಾರ ಸೈನ್ಯವನ್ನು ತೆಗೆದುಕೊಂಡು ಬಂದು ಆ ಹಂಸ ಡಿಂಭಕರನ್ನು ಕೂಡಿಕೊಂಡರು. ಜರಾಸಂಧನ ಕಿವಿಗೂ ಹಂಸ ಡಿಂಭಕರು ಕೃಷ್ಣನ ಮೇಲೆ ಯುದ್ಧ ಸಾರಿದ ಸಮಾಚಾರ ತಲುಪಿತು. ಆದರೆ ಪಾಪಿಷ್ಠರಾದ ಹಂಸ ಡಿಂಭಕರಿಗೆ ಸಹಾಯ ಮಾಡಿದರೆ ತನಗೂ ಪಾಪಬರುವುದು ಎಂದು ಬಗೆದು ಯುದ್ಧಕ್ಕೆ ಅವನು ಹೋಗಲಿಲ್ಲ. ಎರಡೂ ಸೈನಿಕರಿಗೂ ನಿಕರದ ಸಂಗ್ರಾಮ ಆ ಪುಷ್ಕರ ಕ್ಷೇತ್ರದಲ್ಲಿ ನಡೆಯಿತು. ಸೂರ್ಯನು ನಡುನೆತ್ತಿಗೆ ಬರುವಷ್ಟರಲ್ಲಿ ಅನೇಕ ರಾಕ್ಷಸರೂ ಯಾದವರೂ ಛಿನ್ನ ವಿಚ್ಛಿನ್ನಗಾತ್ರರಾಗಿ ರಣಾಂಗಣದಲ್ಲಿ ಮಡಿದು ಬಿದ್ದರು. ಎಂಭತ್ತೇಳು ಸಾವಿರ ಆನೆಗಳು ಸತ್ತು ಉರುಳಿದವು. ಹತ್ತು ಲಕ್ಷ ಮೂವತ್ತುಸಾವಿರ ಕುದುರೆಗಳು ಧಾರಾತೀರ್ಥದಲ್ಲಿ ಮಡಿದು ಬಿದ್ದವು. ಒಂದು ಲಕ್ಷ ರಥಿಕರು ರಥಸಹಿತವಾಗಿಯೇ ನಾಶಹೊಂದಿದರು. ಮೂವತ್ತುಕೋಟಿ ಕುದುರೆ ಸವಾರರು ರಣರಂಗದಲ್ಲಿ ದೇಹಬಿಟ್ಟರು. ಎಷ್ಟೋ ದೈತ್ಯರು ಬಾಯಾರಿಕೆಯಿಂದ ಬಳಲಿ ಪುಷ್ಕರ ಸರೋವರದಲ್ಲಿ ಮುಳುಗುಹಾಕಿದರು.

ಅನಂತರ ಉಭಯ ಪಕ್ಷದ ವೀರರಲ್ಲಿ ಜೋಡಿ ಯುದ್ಧ ನಡೆದವು. ಕೃಷ್ಣ ವಿಚಕ್ರ, ಹಂಸ ಬಲರಾಮ, ಡಿಂಭಕ ಸಾತ್ಯಕಿ, ವಸುದೇವ ಹಿಡಂಬ, ಮುಂತಾದವರು ಜೋಡಿಯಾಗಿ ಕಲಿತನದಿಂದ ಹೋರಾಡತೊಡಗಿದರು. ಕೃಷ್ಣನು ತನ್ನ ಪಾಂಚಜನ್ಯವನ್ನೂ ಊದಿದ. ಅದರಿಂದ ಅವನೊಡನೆ ಹೋರಾಡುವ ವಿಚಕ್ರ, ಹೌಹಾರಿದ. ಅವನು ಮತಿಗೆಟ್ಟು ರಥದಿಂದ ಹಾರಿ, ತನ್ನ ಭೀಮಗದೆಯನ್ನು ಎತ್ತಿ ಶ್ರೀಕೃಷ್ಣನ ಕಿರೀಟದ ಮೇಲೆ ಕುಟ್ಟಿದ. ಹಣೆಯ ಮೇಲೆ ಹೊಡೆದ. ಸಿಂಹದಂತೆ ಗರ್ಜಿಸಿದ. ಅನಂತರ ಉಕ್ಕಿನ ಒಂದು ಹಾರೆಯನ್ನು ತೆಗೆದುಕೊಂಡು ಗರಗರ ತಿರುಗಿಸಿ ಕೃಷ್ಣನ ಎದೆಗೆ ಗುರಿಯಿಟ್ಟು ತೂರಿ ಒಗೆದ. ಕೃಷ್ಣನು ಆ ಗಧಾಯುಧವನ್ನು ತನ್ನ ಕೈಯಲ್ಲಿ ತೆಗೆದುಕೊಂಡು ತಿರುಗಿ ಆ ವಿಚಕ್ರನ ಮೇಲೆ ಎಸೆದ. ಅದರಿಂದ ವಿಚಕ್ರನು ನೆಲದ ಮೇಲೆ ನಿಶ್ಚೇಷನಾಗಿ ಉರುಳಿದ. ಮರುಕ್ಷಣದಲ್ಲಿ ಮತ್ತೆ ಎದ್ದು ನಿಂತು ಮತ್ತೊಂದು ಕಬ್ಬಿಣದ ಸಳಿಯನ್ನು ತೂರಿದ. ತನ್ನ ಖಡ್ಗದಿಂದ ಅದನ್ನು ಚೂರು ಚೂರು ಮಾಡಿದ ಕೃಷ್ಣ. ಅನಂತರ ಒಂದು ಹೆಮ್ಮರವನ್ನೇ ಕಿತ್ತಿ ಕೃಷ್ಣನ ಮೇಲೆ ಎಸೆದ ವಿಚಕ್ರ, ಅದೂ ಕೂಡ ಕೃಷ್ಣನ ಖಡ್ಗಕ್ಕೆ ತುತ್ತಾಗಿ ನೂರು ಹೋಳಾಗಿ ನೆಲಕ್ಕೆ ಬಿದ್ದಿತು. ಹೀಗೆ ಕೃಷ್ಣನು ವಿಚಕ್ರನ ಜೊತೆಗೆ ಕೆಲವು ನಿಮಿಷ ಆಟವಾಡಿ ಅನಂತರ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದ.ಕೃಷ್ಣನು ಬಿಟ್ಟ ಆ ಅಗ್ನೇಯಾಸ್ತ್ರವು ಕ್ಷಣಾರ್ಧದಲ್ಲಿ ವಿಚ್ಕರನನ್ನು ಪುರು ಪುರು ಸುಟ್ಟು ಬೂದಿಮಾಡಿ ಮತ್ತೆ ಕೃಷ್ಣನ ಕೈಯನ್ನು ಅಲಂಕರಿಸಿತು.

ವಸುದೇವ, ಉಗ್ರಸೇನರು ವೀರರಾದರೂ ವಯಸ್ಸಿನಿಂದ ವೃದ್ಧರು. ಮುಪ್ಪಿನಿಂದ ಅವರಿಬ್ಬರ ವಜ್ರದೇಹಗಳೂ ಈಗ ಜರ್ಜರಿತ. ಆದರೂ ಧೈರ್ಯದಿಂದ ಅವರು ಹಿಡಿಂಬನ ಜೊತೆಗೆ ಕಾದುತ್ತಿದ್ದರು. ಹಿಡಿಂಬಾಸುರ ತರುಣ. ಆಕಾರದಿಂದಂತೂ ಅವನೊಂದು ದೊಡ್ಡ ಗುಡ್ಡ ಎಲ್ಲರನ್ನೂ ತಿಂದು ತೇಗುವಷ್ಟು ಉದ್ದ ಹೊಟ್ಟೆ, ಲಂಬೋದರ, ಕಂಡವರನ್ನೆಲ್ಲ ಕೊಲ್ಲುತ್ತಿದ್ದ. ಕೊಂದವರನ್ನೆಲ್ಲ ತಿನ್ನುತ್ತಿದ್ದ. ಹಸಿ ಹಸಿ ಮಾಂಸವನ್ನೇ ಯುದ್ಧದಲ್ಲಿ ತನ್ನ ಬಾಯಲ್ಲಿ ಹಾಕಿಕೊಂಡು ಮೇಲೆ ಬಿಸಿ ರಕ್ತವನ್ನು ಕುಡಿಯುತ್ತಿದ್ದ. ಅವನನ್ನು ನೋಡಿಯೇ ಎಷ್ಟೋ ಯಾದವರು ಓಡಿ ಹೋಗುತ್ತಿದ್ದರು. ಅವನ ಈ ಲೋಕ ಸಂಹಾರವನ್ನು ವಸುದೇವ, ಉಗ್ರಸೇನ ಇಬ್ಬರೂ ತಡೆಯಬೇಕೆಂದು ಬಾಣಗಳಿಂದ ಹೊಡೆಯುತ್ತಲಿದ್ದರು. ಅದನ್ನು ಕಂಡು ಕುಪಿತನಾದ ಆ ಹಿಡಿಂಬಾಸುರ ಅವರಿಬ್ಬರ ಕೈಯಲ್ಲಿನ ಬಿಲ್ಲುಗಳನ್ನು ಕಸಿದು ಮುರಿದು ಹಾಕಿದ. ಮತ್ತು ನಿರಾಯುಧರಾಗಿ ನಿಂತ ಅವರಿಬ್ಬರನ್ನೂ ಕಬಳಿಸಬೇಕೆಂದು ಕೈಚಾಚಿದ. ಮತ್ತು ಅವರಿಗೆ ಹೇಳಿದ.

**ಹಿಡಿಂಬ:-** ನೀವಿಬ್ಬರೂ ನನ್ನ ಬಾಯಲ್ಲಿ ಬಂದು ಬೀಳಿರಿ. ಬ್ರಹ್ಮ ಇಂದು ನೀವಿಬ್ಬರೂ ನನ್ನ ಗ್ರಾಸ ಎಂದು ಕ್ಲಪ್ತಮಾಡಿದ್ದಾನೆ. ನಿಮ್ಮಿಬ್ಬರೂ ಮುದುಕರ ಮಾಂಸ ತಿಂದು ರಕ್ತ ಕುಡಿದು ತೃಪ್ತಿಯನ್ನು ಪಡೆಯುತ್ತೇನೆ. ಹೀಗೆ ನುಡಿದು ಭೀಕರಾಕಾರನಾಗಿ ತಮ್ಮನ್ನು ಹಿಡಿಯಬೇಕೆಂದು ಮುಂದೆ ಬರುತ್ತಲಿರುವ ಹಿಡಿಂಬನನ್ನು ನೋಡಿ ಮುಪ್ಪಿನ ಮುದುಕರಾದ ವಸುದೇವ. ಉಗ್ರಸೇನರು ಹೆದರಿ ಹೌಹಾರಿ ಓಡತೊಡಗಿದರು. ದೂರಿಂದಲೇ ಅದನ್ನು ಕಂಡ ಬಲರಾಮನು ಓಡಿ ಬಂದು "ಆ ಮುದುಕರನ್ನು ಬಿಟ್ಟು ನನ್ನ ಜೊತೆಗೆ ಯುದ್ಧಕ್ಕೆ ಬಾ" ಎಂದು ಅವನ ಎದುರು ಬಂದು ನಿಂತ. ಆಗ ಹಿಡಿಂಬನು ಆ ಯದು ವೃದ್ಧರಿಬ್ಬರನ್ನೂ ಬಿಟ್ಟು ಮುಷ್ಟಿ ಬಿಗಿದು ಬಲರಾಮನ ಎದೆಗೆ ಪ್ರಹಾರ ಮಾಡಿದ. ಆಗ ಬಲರಾಮನು ಆ ದೈತ್ಯನೊಡನೆ ಕಲಿತನದಿಂದ ಮುಷ್ಟಿಯುದ್ಧವಾಡಿದ. ಅವರಿಬ್ಬರ ಪರಸ್ಪರ ಮುಷ್ಟಿಪ್ರಹಾರದ ಛಟ ಛಟ ಶಬ್ದವು ಆಕಾಶದಲ್ಲಿ ದುಂದುಮಿಸಿತು ಆಗ

ಬಲರಾಮನು ಬಿಗಿಯಾಗಿ ಮುಷ್ಟಿಯನ್ನು ಮುಚ್ಚಿ ಆ ಹಿಡಿಂಬನ ವಕ್ಷಸ್ಥಲದಲ್ಲಿ ಒಮ್ಮೆ ಜೋರಾಗಿ ಕುಟ್ಟಿದ ಮತ್ತು ಅಂಗೆಯಿಂದ ಆ ದೈತ್ಯನ ಮುಖದ ಮೇಲೆಯೂ ಬಲವಾಗಿ ಪ್ರಹರಿಸಿದ. ಇದರಿಂದ ಹಿಡಿಂಬಾಸುರನು ನೆಲಕ್ಕೆ ಕುಸಿದ. ಆಗ ಬಲರಾಮನು ಎರಡೂ ಕೈಗಳಿಂದ ಅವನನ್ನು ಎತ್ತಿ ಗಿರಿ ಗಿರಿ ತಿರುಗಿಸಿ ಎರಡು ಮೈಲು ದೂರದ ಅಂತರದಲ್ಲಿ ತೂರಿ ಒಗೆದ. ಉಳಿದೆಲ್ಲ ರಾಕ್ಷಸರೂ ಹಿಡಿಂಬಾಸುರನು ಸತ್ತದ್ದನ್ನು ನೋಡಿ ರಣಾಂಗಣದಿಂದ ಓಡಿಹೋದರು. ಅನಂತರ ಸೂರ್ಯನು ಅಸ್ತಂಗತನಾದ. ಉಭಯ ಪಕ್ಷದ ವೀರರೂ ಮರುದಿನ ಗೋವರ್ಧನ ಪರ್ವತದ ಮೇಲೆ ಯುದ್ಧ ಮಾಡೋಣ ಎಂದು ಘೋಷಣಮಾಡಿ ಅಂದಿನ ಯುದ್ಧವನ್ನು ನಿಲ್ಲಿಸಿದರು.

ಮರುದಿನ ಪ್ರಭಾತಕಾಲದಲ್ಲಿ ಮತ್ತೆ ಗೋವರ್ಧನ ಪರ್ವತದ ಉತ್ತರಭಾಗದಲ್ಲಿ ಯಮುನೆಯ ವಿಶಾಲವಾದ ತೀರಪ್ರದೇಶದಲ್ಲಿ ಯುದ್ಧ ಪ್ರಾರಂಭವಾಯಿತು. ಹಂಸ, ಡಿಂಭಕರ ದೈತ್ಯರು, ತಮ್ಮ ಧನುರ್ವಿದ್ಯಾ ಕೌಶಲ್ಯದಿಂದ ಯಾದವರ ಸೈನ್ಯದ ಮೇಲೆ ಬಾಣಗಳ ಜಡಿಮಳೆಯನ್ನೇ ಸುರಿಸಿದರು. ಆಗ ಹಂಸ ಡಿಂಭಕರ ಸಂರಕ್ಷಣೆಗಾಗಿ ಮಹಾದೇವರು ಎರಡು ಭೂತಗಳನ್ನು ಕಳುಹಿಸಿಕೊಟ್ಟರು. ಆ ಎರಡು ಭೂತಗಳು ಕೈಯಲ್ಲಿ ತ್ರಿಶೂಲವನ್ನು ತೆಗೆದುಕೊಂಡು ಅಟ್ಟಹಾಸಮಾಡುತ್ತ ಕೃಷ್ಣನ ಮೇಲೆ ಏರಿ ಬಂದವು. ಆಗ ಕೃಷ್ಣನು ತನ್ನ ತುಟಿ ತಟದಲ್ಲಿಯೇ ತುಸು ನಕ್ಕಂತೆ ಮಾಡಿ ರಥದಿಂದ ಕೆಳಗೆ ಹಾರಿದ ಯುದ್ಧಭೂಮಿಯಲ್ಲಿ ಭಯಾನಕವಾಗಿ ಕಿರುಚುತ್ತ ತನ್ನ ಕಡೆಗೆ ಬರುತ್ತಲಿರುವ ಎರಡೂ ಭೂತಗಳನ್ನು ತನ್ನ ಎರಡೂ ಕೈಗಳಿಂದ ಹಿಡಿದು ಎರಡು ಬಡಿಗೆಗಳನ್ನು ತಿರುಗಿಸುವಂತೆ ಗರಗರ ತಿರುಗಿಸಿ ಕೈಲಾಸ ಪರ್ವತದ ಕಡೆಗೆ ತೂರಿ ಒಗೆದುಬಿಟ್ಟ. ಅವೆರಡೂ ನೇರವಾಗಿ ಕೈಲಾಸದ ಶಿಖರದ ಮೇಲೆಯೇ ಹೋಗಿಬಿದ್ದವು. ಅನಂತರ ಹಂಸ ಡಿಂಭಕ ಇಬ್ಬರೂ ಕೃಷ್ಣನ ಈ ಅತ್ಯದ್ಭುತ ಕೃತ್ಯವನ್ನು ಕಂಡು ಆಶ್ಚರ್ಯಚರಿತರಾದರು. ಹಂಸನಿಗೆ ಬಹಳ ಕೋಪಬಂದಿತು. ಕಣ್ಣು ಕೆಂಪಗಾಯಿತು. ಅವನು ಕೃಷ್ಣನನ್ನು ಅಧಿಕ್ಷೇಪಿಸಿ ನುಡಿದ.

**ಹಂಸ:-** ''ಕೇಶವ, ನಮ್ಮ ತಂದೆ ಕೈಕೊಂಡ ರಾಜಸೂಯಯಾಗಕ್ಕೆ ನೀನು ಏಕೆ ವಿಘ್ನ ಒಡ್ಡುವೆ? ನಿನಗೆ ಬದುಕಬೇಕು ಎಂದು ಇಚ್ಛೆ ಇದ್ದರೆ ನಾನು ಹೇಳಿದಂತೆ ಕರವನ್ನು ಕೊಡು. ಅಥವಾ ಒಂದು ಕ್ಷಣ ನಿಲ್ಲು. ಇದೀಗ ನನ್ನ ಬಾಣಗಳಿಂದ ನಿನ್ನ ಪ್ರಾಣಕ್ಕೆ ಸಂಚಕಾರ ಬಂದಾಗ ನೀನಾಗಿಯೇ ನಾವು ಕೇಳಿದ್ದಕ್ಕಿಂತ ಹೆಚ್ಚು ಕರವನ್ನು ತಂದು ಕೊಡುವೆ. ಅನಂತರದಲ್ಲಿಯೇ ನಮ್ಮ ತಂದೆ ಯಜ್ಞ ಮಾಡಲಿ. ದೇವತೆಗಳಿಗೆಲ್ಲ ಮಹಾದೇವ ಈಶ್ವರ. ರಾಜರಿಗೆಲ್ಲ ನಾನೇ ಈಶ್ವರ.'' ಹೀಗೆ ಹೇಳಿ ಕೃಷ್ಣನ ಹಣೆಗೆ ಗುರಿಯಿಟ್ಟು ಬಾಣಬಿಟ್ಟ. ಆಗ

**ಕೃಷ್ಣ:-** ''ಮೂರ್ಖ, ನೀನು ಕ್ಷತ್ರಿಯ. ತಲೆಕೆಟ್ಟವರಂತೆ ಏಕೆ ಪ್ರಲಪಿಸುತ್ತಲಿರುವೆ? ನನ್ನಿಂದ ಕರವನ್ನು ಬಯಸುತ್ತಿದ್ದರೆ ನಿನ್ನ ಶೌರ್ಯ ಎಷ್ಟು ಇದೆ ಎಂಬುದನ್ನು ಈಗ ತೋರಿಸು. ಪುಷ್ಕರದಲ್ಲಿ ತಪಸ್ಸು ಮಾಡುತ್ತಿದ್ದ ಯತಿಗಳನ್ನು ಹಿಂಸಿಸಿದೆಯಾ? ನಾನು ದುಷ್ಟ ಕ್ಷತ್ರಿಯರನ್ನೆಲ್ಲ ಕೊಂದು ಬ್ರಾಹ್ಮಣರನ್ನು ರಕ್ಷಣ ಮಾಡಲು ನಿಂತುಕೊಂಡಾಗ ಯತಿಗಳನ್ನು ಪೀಡಿಸಿದ ನಿನ್ನನ್ನು ಇಂದು ಮೃತ್ಯುವಿಗೆ ಅರ್ಪಿಸಲಿರುವೆನು. ಆ ಯತಿಗಳ ಶಾಪದಿಂದ ನೀನು ಈಗಾಗಲೇ ಸತ್ತುಹೋಗಿರುವೆ.'' ಎಂದು ನುಡಿದು ಹಂಸನ ಮೇಲೆ ಅಗ್ನ್ಯಸ್ತ್ರವನ್ನು ಕೃಷ್ಣನು ಪ್ರಯೋಗಿಸಿದ. ಅದಕ್ಕೆ ಪ್ರತಿಯಾಗಿ ಹಂಸನಿಂದ ವರುಣಾಸ್ತ್ರ ಪ್ರಯೋಗ. ಅದಕ್ಕೆ ಎದುರಾಗಿ ಕೃಷ್ಣನ ವಾಯುವ್ಯಾಸ್ತ್ರ. ಆ ವಾಯವ್ಯಾಸ್ತ್ರಕ್ಕೆ ಹಂಸನಿಂದ ಸರ್ವಶಾಸ್ತ್ರ ಅದಕ್ಕೆ ಮಾಹೇಂದ್ರಾಸ್ತ್ರ. ಅದಕ್ಕೆ ಕೃಷ್ಣನಿಂದ ಮಾಹೇಶ್ವರ ಅಸ್ತ್ರ. ಕೃಷ್ಣನ

ಮಾಹೇಶ್ವರಾಸ್ತ್ರವನ್ನು ಆ ಹಂಸಾಸುರನು ರೌದ್ರಾಸ್ತ್ರವನ್ನು ಬಿಟ್ಟು ತಿರುಗಿ ಕಳಿಸಿಬಿಟ್ಟ. ಆಗ ಕೃಷ್ಣನು ಗಾಂಧರ್ವ, ರಾಕ್ಷಸ, ಪೈಶಾಚ ಎಂಬ ಮೂರು ಅಸ್ತ್ರಗಳನ್ನು ಎಸೆದ. ಕೃಷ್ಣನ ಈ ಮೂರು ಅಸ್ತ್ರಗಳನ್ನು ಎದುರಿಸಲು ಹಂಸದೈತ್ಯನು ಬ್ರಹ್ಮಾಸ್ತ್ರ. ಕೌಬೇರಾಸ್ತ್ರ, ಅಸುರ ಅಸ್ತ್ರ, ಯಾಮ್ಯಾಸ್ತ್ರ ಎಂಬ ನಾಲ್ಕು ಅಸ್ತ್ರಗಳನ್ನು ಅಟ್ಟಿದ. ಆಗ ದೇವಾಧಿದೇವನಾದ ಕೃಷ್ಣನು ಬ್ರಹ್ಮಶಿರ ಎಂಬ ಹೆಸರಿನ ಭಯಂಕರವಾದ ಅಸ್ತ್ರವನ್ನು ಹಂಸನನ್ನು ಉದ್ದೇಶಿಸಿ ಪ್ರೇರಿಸಿದ. ಅದನ್ನು ಭಯಭ್ರಾಂತನಾದ ಹಂಸನು ಮಹಾರೌದ್ರ ಎಂಬ ಅಮೋಘ ಅಸ್ತ್ರವನ್ನು ಬಿಟ್ಟು ನಿವಾರಣೆ ಮಾಡಿದ. ಆಗ ಕೃಷ್ಣನು ಯಮುನೆಯ ನೀರಿನಿಂದ ಆಚಮನಮಾಡಿ ಹಂಸನನ್ನು ಕೊಲ್ಲಲು ವೈಷ್ಣವಾಸ್ತ್ರವನ್ನು ಯೋಜಿಸಿದ.

**ವೈಶಂಪಾಯನ:-** ಜನಮೇಜಯ, ಆ ಭಯಂಕರವಾದ ವೈಷಣವಾಸ್ತ್ರವನ್ನು ಕಂಡ ಕೂಡಲೇ ಹಂಸ ದೈತ್ಯನು ನಿಶ್ಚೇಷ್ಟನಂತಾದ. ಇದರಿಂದ ತಾನು ಉಳಿಯುವುದು ಸಾಧ್ಯವಿಲ್ಲ ಎಂದು ತಿಳಿದು ರಥದಿಂದ ಹಾರಿಕೊಂಡ. ಯಮುನಾನದಿಯ ಕಡೆಗೆ ಓಡಿದ. ಕೃಷ್ಣನು ಹಿಂದೆ ಕಾಲಿಯಾಮರ್ದನ ಮಾಡಿದ ಭಯಂಕರ ಮಡುವಿನಲ್ಲಿ ಹಾರಿಬಿಟ್ಟ. ಆಗ ಕೃಷ್ಣನೂ ಕೂಡ ತನ್ನ ರಥದಿಂದ ಕೆಳಗೆ ಜಗಿದ. ಅದೇ ಕಾಲಿಯಾ ಮಡುವಿನಲ್ಲಿ ತಾನೂ ಹಾರಿ ಆ ಮಡುವಿನ ಮಧ್ಯದಲ್ಲಿ ಬಿದ್ದ ಹಂಸನ ಮೇಲೆ ಎರಗಿದ. ಆ ನದಿಯ ನಟ್ಟ ನೀರಿನ ನಡುವೆ ತೇಲುತ್ತಲಿದ್ದ ಆ ಹಂಸಾಸುರನಿಗೆ ಕಾಲಿನಿಂದ ಒದ್ದ. ಕೃಷ್ಣನ ಲತ್ತಾ ಪ್ರಹಾರದ ಏಟು ಬಿದ್ದ ಕೂಡಲೇ ಆ ಹಂಸ ಮರಣಹೊಂದಿದ ಎಂದು ಕೆಲವರು ಹೇಳುವರು. ಮತ್ತೆ ಕೆಲವರು ಪಾತಾಳದವರೆಗೆ ಆಳವಾದ ಆ ಯಮುನೆಯ ಮಡುವಿನಲ್ಲಿ ಕೃಷ್ಣನಿಂದ ಹೊಡೆತ ತಿಂದ ಹಂಸಾಸುರ ನೇರವಾಗಿ ಪಾತಾಳಕ್ಕೆ ಇಳಿದ. ಅಲ್ಲಿಯ ಭಯಂಕರ ಹಾವುಗಳು ಅವನನ್ನು ಕಚ್ಚಿಕೊಂದವು ಎಂದು ಹೇಳುತ್ತಾರೆ. ಏನೇ ಆಗಲಿ. ಆ ಹಂಸ ದೈತ್ಯ ಅಂದಿನಿಂದ ಇಂದಿನವರೆಗೆ ಯಾರ ಕಣ್ಣಿಗೂ ಬಿದ್ದಿಲ್ಲ. ಅನಂತರ ಶ್ರೀಕೃಷ್ಣನು ಮೇಲೆ ಬಂದು ತನ್ನ ರಥವನ್ನು ಆರೋಹಣಮಾಡಿದ. ಎಲ್ಲ ದೇವಗಂಧರ್ವರೂ ''ಕೃಷ್ಣನು ಯಮುನೆಯ ಮಡುವಿನಲ್ಲಿ ಹಂಸನನ್ನು ಸಂಹರಿಸಿದ. ಹಂಸ ಹತನಾದ'' ಎಂದು ಹಾಡಿ ಹೊಗಳಿದರು. ತನ್ನ ಅಣ್ಣನಾದ ಅತ್ಯಂತ ಪರಾಕ್ರಮಶಾಲಿ ಹಂಸನು ಮರಣಿಸಿದ್ದನ್ನು ಕೇಳಿ ಅವನ ತಮ್ಮನಾದ ಡಿಂಭಕನಿಗೆ ಎದೆ ಒಡೆಯಿತು. ತನ್ನ ಅಣ್ಣನು ಹಾರಿಕೊಂಡ ಯಮುನೆಯ ಮಡುವಿನಲ್ಲಿಯೇ ತಾನೂ ಹಾರಿಬಿದ್ದು ಸಾಯಬೇಕೆಂದು ಯಮುನೆಯತ್ತ ಓಡಿದ. ಆಗ ಬಲರಾಮನು ಅವನನ್ನು ಬೆನ್ನಟ್ಟಿ ತಾನೂ ಯಮುನೆಯ ತೀರದವರೆಗೆ ಹೋದ ಅಷ್ಟರಲ್ಲಿ ಡಿಂಭಕನು ನಡುನೀರಿನಲ್ಲಿ ಹೋಗಿ ಮುಳುಗಿಬಿಟ್ಟಿದ್ದ. ಬಲರಾಮ, ಕೃಷ್ಣ, ಹಾಗೂ ಎಲ್ಲ ಯಾದವರು ಯಮುನೆಯ ದಂಡೆಯ ಮೇಲೆಯೇ ನಿಂತುಕೊಂಡರು. ಕ್ರೋಧ ಮೂರ್ಛಿತನಾದ ಡಿಂಭಕನು ಯಮುನೆಯ ಮಡುವಿನಲ್ಲಿ ಬಿದ್ದು ಎಲ್ಲಕಡೆಗೂ ಶೋಧಿಸಿದ ನೀರನ್ನೆಲ್ಲ ಅಲ್ಲೋಲ್ಲ ಕಲ್ಲೋಲ ಮಾಡಿದ. ಮತ್ತೆ ಮತ್ತೆ ಮುಳುಮುಳುಗಿ ಎದ್ದ. ಆ ಯಮುನೆಯ ತಳವನ್ನೆಲ್ಲ ತಡಕಾಡಿ ಹುಡುಕಾಡಿ ಶೋಧಿಸಿದ. ಎಷ್ಟು ನೋಡಿದರೂ ಅವನಿಗೆ ತನ್ನ ಅಣ್ಣ ಕಾಣಲಿಲ್ಲ. ಆಗ ಅವನು ಆ ಮಡುವಿನಿಂದ ತಲೆಯನ್ನು ಮೇಲಕ್ಕೆ ಎತ್ತಿ ದಂಡೆಯಲ್ಲಿ ನಿಂತ ಕೃಷ್ಣನನ್ನು ಕೇಳಿದ- 'ಎಲೇ ದನಕಾಯುವವ ಮಗನೇ, ಆ ನನ್ನ ಅಣ್ಣ ಹಂಸನು ಎಲ್ಲಿ?' ಆಗ ಕೃಷ್ಣನು ಸಮಾಧಾನದಿಂದಲೇ 'ಆ ಯಮುನೆಯನ್ನೇ ಕೇಳು' ಎಂದು ನುಡಿದ. ಆಗ ಡಿಂಭಕ ಮತ್ತೆ ಆ ಯಮುನೆಯ ಸಲಿಲ ಗರ್ಭದಲ್ಲಿ ಹೊಕ್ಕ ಹುಡುಕಿದ.

ಅಣ್ಣನನ್ನು ಕಾಣದೇ ಮಿಡುಕಿದ- ''ರಾಜೇಂದ್ರ, ಈ ನನ್ನ ತಮ್ಮನನ್ನು ಅನಾಥನನ್ನಾಗಿಸಿ ನೀನು ಎಲ್ಲಿ ಹೋದೆ? ಈ ಯಮುನೆಯ ತಳಬುಡವನ್ನೆಲ್ಲ ಸೋಸಿದೆ. ನೀನು ಎಲ್ಲಿಯೂ ಕಾಣಲೊಲ್ಲೆ. ಹಾಗಾದರೆ ನನ್ನನ್ನು ಬಿಟ್ಟು ನೀನು ಹೋದದ್ದಾದರೂ ಎಲ್ಲಿ?'' ಹೀಗೆ ದುಃಖದಿಂದ ದೀನನಾಗಿ ರೋದಿಸಿದ. ಮತ್ತೆ ಮತ್ತೆ ಮುಳುಗಿದ. ಮತ್ತೆ ಮತ್ತೆ ಮೇಲೆ ಬಂದ. ಪುನಃ ಮುಳುಗಿದ. ಮತ್ತೆ ಮೇಲೆದ್ದ ಕೊನೆಗೆ ತನ್ನ ಕೈಯಿಂದಲೇ ತನ್ನ ನಾಲಿಗೆಯನ್ನು ಬುಡಮುಟ್ಟ ಕಿತ್ತಿಕೊಂಡು ವಿಕಾರವಾಗಿ ಒದರುತ್ತ ಆ ನೀರಿನಲ್ಲಿ ಆತ್ಮಹತ್ಯೆಯನ್ನು ಮಾಡಿಕೊಂಡು ಸತ್ತುಹೋದ. ಹೀಗೆ ಕೃಷ್ಣನು ಹಂಸ ಡಿಂಭಕ ಇಬ್ಬರನ್ನು ನಿಃಪಾತಮಾಡಿ ಪ್ರಸನ್ನ ಮನಸ್ಸಿನಿಂದ ಬಲರಾಮನೊಂದಿಗೆ ಯಾದವ ಸಹಿತನಾಗಿ ಕೆಲದಿನ ಗೋವರ್ಧನ ಗಿರಿಯಲ್ಲಿ ವಿಶ್ರಮಿಸಿದ. ಹಿಂದೆ ತಾನು ಬಾಲಕನಾಗಿ ಇದ್ದಾಗ ಓಡಾಡಿದ ಆ ಗೋವರ್ಧನ ಬೆಟ್ಟದ ಸ್ಥಳವನ್ನು ಬಿಟ್ಟು ಹೋಗಲು ಅವನಿಗೆ ಮನಸ್ಸು ಆಗಲಿಲ್ಲ.

ರಾಮಕೃಷ್ಣರು ಗೋವರ್ಧನ ಪರ್ವತದಲ್ಲಿ ತಂಗಿದ್ದಾರೆ ಎಂಬ ಸಮಾಚಾರವನ್ನು ಕೇಳಿ ಯಶೋದಾ ನಂದಗೋಪರೂ ಕೃಷ್ಣನ ಬಾಲ್ಯ ಸ್ನೇಹಿತರಾದ ಗೋಪಾಲಕರೂ, ಹಾಗೂ ಗೋಪಿಕಾಸ್ತ್ರೀಯರೂ ಕೂಡಿಕೊಂಡು ಅಲ್ಲಿಗೆ ಬಂದರು. ಒಂದು ಗಿಡದ ಕೆಳಗೆ ಚಿಗರೆಗಣ್ಣಿನ ಚೆಲುವನಾದ ಕೃಷ್ಣ ಕುಳಿತುಕೊಂಡಿದ್ದ. ಅವನ ಪಕ್ಕದಲ್ಲಿಯೇ ಬಲರಾಮ. ಎಲ್ಲ ಗೋಪಾಲ ಬಾಲಕರೂ ರಾಮಕೃಷ್ಣನಿಗೆ ನಮಸ್ಕರಿಸಿದರು. ಅವರೊಡನೆ ಬಂದ ಯಶೋದಾ ನಂದಗೋಪರನ್ನು ಕಂಡು ಬಲರಾಮ ಕೃಷ್ಣರು ಸಂತೋಷ ಭರಿತರಾಗಿ ನಮಸ್ಕಾರ ಮಾಡಿದರು. ಆಗ ನಂದಗೋಪ ಹಾಗೂ ಯಶೋದೆಯರು ಪರಮ ಪ್ರೀತರಾಗಿ ರಾಮಕೃಷ್ಣರಿಗಾಗಿ ತಾವು ಹೊತ್ತು ತಂದ ವಿಪುಲವಾದ ತಾಜಾ ಬೆಣ್ಣೆ, ಗಟ್ಟಿ ಕೆನೆ ಮೊಸರು, ಎಳ್ಳು ಚಿಗುರು, ಪಾಯಸ, ಕಾಡುಹೂಗಳು, ನವಿಲುಗರಿ ಮುಂತಾದವುಗಳನ್ನೆಲ್ಲ ತೋರಿಸಿ ಕೃಷ್ಣನ ಎದುರಿಗೆ ಇರಿಸಿದರು. ಅದನ್ನು ನೋಡಿ ಕೃಷ್ಣನು ಸಂತೋಷದಿಂದ ಕೇಳಿದ. ''ತಾಯಿ ಯಶೋದೆ, ಹಾಗೂ ತಂದೆಯೇ, ವಜ್ರಭೂಮಿಯಲ್ಲಿ ಎಲ್ಲವೂ ಕುಶಲವಷ್ಟೇ? ನಿಮ್ಮ ಗೋದನವು ಮೊದಲಿನಂತೆ ಚೆನ್ನಾಗಿ ಇರುವುದು ತಾನೇ! ಹಸುಗಳು ಸರಿಯಾಗಿ ಹಿಂಡುವವೇ? ನಿಮ್ಮ ಪ್ರೀತಿಯ ಕರುಗಳು ನಿಮಗೆ ಹರ್ಷವನ್ನು ಉಂಟುಮಾಡುವಂತೆ ಓಡಾಡುತ್ತಿರುವೆಯಷ್ಟೇ? ನಿಮ್ಮ ಹಸುಗಳು ಒಳ್ಳೆ ರುಚಿಕರವಾದ ಹಾಲುಗಳನ್ನು ನಿಮ್ಮ ಮಕ್ಕಳೂ ದನಕಾಯುವ ಹುಡುಗರೂ, ಯಥೇಚ್ಛವಾಗಿ ಕುಡಿಯುವರಷ್ಟೇ? ನಾವು ಅಲ್ಲಿ ಇದ್ದಾಗ ನಾವು ನಮ್ಮ ಮನೆಯಲ್ಲಿ ನೆಟ್ಟ ಗೂಟ, ಇಟ್ಟ ಹಗ್ಗ, ಎಲ್ಲವೂ ಹಾಗೆಯೇ ಇರುವವೋ? ನಿಮ್ಮ ಪರಿಸರದಲ್ಲಿ ಹಸರಿ, ಹುಲ್ಲು, ಪರ್ಯಾಪ್ತವಾಗಿ ಹನ್ನೆರಡು ತಿಂಗಳು ತುರುಕರುಗಳಿಗೆ ಹಸೀ ಹುಲ್ಲನ್ನು ಒದಗಿಸುವವೆ? ನನ್ನೊಡನೆ ಆಟ ಪಾಟವಾಡಿದ ಎಳೆ ವಯಸ್ಸಿನ ಗೋಪಿಯರೆಲ್ಲ ಈಗ ಮಕ್ಕಳನ್ನು ಹಡೆದಿರಬಹುದು. ಅಲ್ಲವೇ? ಯಾರು ಯಾರಿಗೆ ಈಗ ಎಷ್ಟು ಗಂಡು? ಎಷ್ಟು ಹೆಣ್ಣು? ತಾಯಿ, ನಾನು ಗೋಕುಲ ಬಿಟ್ಟು ಬಂದ ಬಳಿಕ ನಂದವ್ರಜದಲ್ಲಿಯ ಎಲ್ಲರ ಮನೆಯ ಕೊಡ, ಬಿಂದಿಗೆ, ಮಡಿಕೆ, ಗಡಿಗೆ ಕುಡಿಕೆಗಳು ಒಡೆಯದೇ ಸುರಕ್ಷಿತವಾಗಿ ಇರಬಹುದಲ್ಲವೆ? ನಮ್ಮ ಹಸುಗಳು ಹಗಲು, ರಾತ್ರಿ ಮೂರು ಹೊತ್ತು ಹಾಲನ್ನು ಕರೆಯುವವಷ್ಟೇ! ನಂದಗೋಕುಲದಲ್ಲಿ ನಿನ್ನಿನ ಬೆಣ್ಣೆ, ಇಂದಿನ ತುಪ್ಪ, ಗಟ್ಟಿಚೆಂಡಾದ ಮೊಸರು. ಅದೇ ಹಿಂಡಿದ ಹಸುವಿನ ಅಮೃತದಂಥ ಹಾಲು, ಎಲ್ಲವೂ ಅಂದಿನಂತೆಯೇ ಸಮೃದ್ಧವಾಗಿ ಇದೆಯಷ್ಟೇ! ಈಗ ನೀವು ನಮ್ಮ ಸಲುವಾಗಿ ಇಲ್ಲಿಗೆ ತಂದ

ಅತ್ಯಂತ ಸ್ನಿಗ್ಧವಾದ ಈ ಹಾಲು ಮೊಸರು ಬೆಣ್ಣೆ ತುಪ್ಪವನ್ನು ನೋಡಿದರೆ ನಮ್ಮ ಗೋಕುಲದ ಗೋಧನವು (ಹಸುಗಳ ಹಿಂಡು) ಎಂದಿನಂತೆ ಆರೋಗ್ಯದಿಂದ ಹೃಷ್ಟ ಪುಷ್ಟವಾಗಿ ಇರುವುದು ಎಂದು ತಿಳಿದು ಬರುತ್ತದೆ.

**ನಂದ:-** ''ಕೃಷ್ಣ, ನೀನು ಈಗ ಯದುಶ್ರೇಷ್ಠ. ನೀನು ಹೇಳಿದಂತೆ ಧೇನುರೂಪವಾದ ನಮ್ಮ ದನವು ಎಂದಿನಂತೆ ರೋಗರಹಿತವಾಗಿ ಸಂಪನ್ನವಾಗಿ ಇರುತ್ತದೆ. ನೀನು ಮಾಡಿದ ನಮ್ಮ ರಕ್ಷಣೆಯಿಂದ ಹಾಗೂ ಸಂಕಟಗಳ ಪರಿಹಾರದಿಂದ ಈಗ ಪಶುಸಂಪತ್ತಿಗೆ ಸರ್ವದಾ ಕ್ಷೇಮವು ಉಂಟಾಗಿರುತ್ತದೆ. ನಮ್ಮ ಹಸುಗಳೂ ನಮ್ಮ ಕರುಗಳೂ ಯಾವುದೇ ರೋಗ, ಅಪಾಯ ಇಲ್ಲದೇ ಆರೋಗ್ಯದಿಂದ ಇರುತ್ತವೆ. ನಾವು ಕೂಡ ನಿನ್ನಿಂದ ರಕ್ಷಿತರಾಗಿ ಕುಶಲದಿಂದ ಇರುತ್ತೇವೆ. ಆದರೆ ಕೃಷ್ಣ, ನಮಗೆ ಒಂದೇ ಒಂದು ದುಃಖವು ಅಂತರಂಗವನ್ನು ಕೊರೆಯುತ್ತಿದೆ. ನಮಗೆ ನಿನ್ನ ದರ್ಶನವು ಈಗ ಇಲ್ಲದಂತಾಗಿದೆ. ಇದೇ ಒಂದು ನಮ್ಮ ದೊಡ್ಡ ದುಃಖ. ಅದರಿಂದಲೇ ಕೊರಗುತ್ತಿದ್ದೇವೆ.''

ಆಗ ಶ್ರೀಕೃಷ್ಣನು ಯಶೋದಾ ನಂದಗೋಪರನ್ನು ಗಟ್ಟಿಯಾಗಿ ಅಪ್ಪಿಕೊಂಡು ಅವರನ್ನು ಸಂತೈಸಿ ಸಮಾಧಾನ ಪಡಿಸಿ ಹೇಳಿದ. ''ತಂದೆ ತಾಯಿಗಳೇ, ನಿಮ್ಮ ಹೆಸರನ್ನು ಯಾರು ಉಚ್ಚರಿಸುವರೋ ಯಾರು ನಿಮ್ಮನ್ನು ನಮಸ್ಕರಿಸುವರೋ ಅವರು ನನಗೆ ಪರಮ ಪ್ರೀತಿಸ್ಪದರು. ನಿಮ್ಮನ್ನು ನೆನೆದವರಿಗೆ ಸ್ವರ್ಗಪ್ರಾಪ್ತಿ ನಿಶ್ಚಿತ. ನಿಮ್ಮನ್ನು ಸ್ಮರಿಸುವವರೇ ನನ್ನ ನಿಜವಾದ ಭಕ್ತರು. ಇನ್ನು ನೀವು ನಂದಗೋಕುಲಕ್ಕೆ ಎಲ್ಲರೂ ಹೋಗಿರಿ.'' ಎಂದು ಹೇಳಿ ಅವರನ್ನೆಲ್ಲ ಪ್ರೀತಿಯಿಂದ ಮತ್ತೊಮ್ಮೆ ಮೈದಡವಿ ಬೀಳ್ಕೊಟ್ಟ. ಯಶೋದಾ ನಂದಗೋಪ ಹಾಗೂ ಉಳಿದ ಎಲ್ಲ ಗೋಪಿಯರೂ, ಗೋಪಾಲಕರೂ ಕೃಷ್ಣರಾಮರ ಸಂದರ್ಶನ, ಸಂಭಾಷಣ, ಸಹವಾಸ, ಸರಸಾಲಾಪ ಸಾಂತ್ವನವಚನ. ಪ್ರೀತಿಯ ಯೋಗಕ್ಷೇಮ ವಿಚಾರಗಳಿಂದ ಅತ್ಯಂತ ಸಂತುಷ್ಟರಾಗಿ ಅಲ್ಲಿಂದ ನಂದಗೋಕುಲಕ್ಕೆ ತೆರಳಿದರು. ಇತ್ತ ಕೃಷ್ಣನು ಯಾದವರೊಂದಿಗೆ ದ್ವಾರಕಾ ಪಟ್ಟಣಕ್ಕೆ ಪ್ರಸ್ಥಾನ ಬೆಳಸಿದ. ದಾರಿಯಲ್ಲಿ ಯಾದವರೊಂದಿಗೆ ಕೃಷ್ಣನು ಪುಷ್ಕರ ಕ್ಷೇತ್ರಕ್ಕೆ ಬಂದು ಅಲ್ಲಿ ಇರುವ ಋಷಿ ಮುನಿಗಳಿಂದ ಅರ್ಘ್ಯಪಾದ್ಯಾದಿಗಳಿಂದ ಪೂಜಿತನಾಗಿ ಅವರೆಲ್ಲರನ್ನು ಅನುಗ್ರಹಿಸಿ ದ್ವಾರಕಾ ಪಟ್ಟಣಕ್ಕೆ ಆಗಮಿಸಿದ. ಅಲ್ಲಿ ಆ ದ್ವಾರಕಾ ಪಟ್ಟಣದಲ್ಲಿ ರುಕ್ಮಿಣೀ ಸತ್ಯಭಾಮಾ ಮೊದಲಾದ ಅಷ್ಟಮಹಿಷಿಯರೂ ಹಾಗೂ ಉಳಿದೆಲ್ಲ ರಮಣೀ ಮಣಿಗಳೊಂದಿಗೆ ಆನಂದದಿಂದ ವಾಸಮಾಡಿದ.

ಜನಮೇಜಯ, ನೀನು ಶ್ರೀಹರಿಯ ಚರಿತ್ರವನ್ನು ಹೇಳಬೇಕು ಎಂದು ಬಿನ್ನವಿಸಿ ಕೊಂಡಿದ್ದೆ. ನಾನು ನಿನಗೆ ಶ್ರೀಹರಿಯ ಅತ್ಯದ್ಭುತವಾದ ಚಾರು ಚರಿತ್ರವನ್ನೂ ಆ ಹರಿವಂಶ ವಿಸ್ತಾರವನ್ನೂ ನಿನ್ನ ಸಲುವಾಗಿ ನಿರೂಪಿಸಿದೆ. ಮತ್ತೆ ಏನು ಕೇಳಲು ಬಯಸುವೆ?

**ಜನಮೇಜಯ:-** ಮಹಾದೇವರು ತ್ರಿಪುರಾಸುರನನ್ನು ಹೇಗೆ ಸಂಹಾರ ಮಾಡಿದರು ಎಂಬುದನ್ನು ತಿಳಿಸಿರಿ.

**ವೈಶಂಪಾಯನ:-** ಪೂರ್ವಕಾಲದಲ್ಲಿ ದೈತ್ಯರು ಮೂರು ಸಂಚಾರಿ ನಗರಗಳನ್ನು ನಿರ್ಮಿಸಿದ್ದರು. ಅದರ ಸುತ್ತಲೂ ಬಂಗಾರದ ತಟ. ರತ್ನಮಯವಾದ ಬಾಗಿಲು. ಮುತ್ತು ರತ್ನ ಬಂಗಾರದಿಂದ ನಿರ್ಮಿತವಾದ ಅನೇಕ ಭವ್ಯ ಭವನಗಳು ಅದಕ್ಕೆ ರೆಕ್ಕೆಗಳುಳ್ಳ ಕುದುರೆಗಳನ್ನು ಹೂಡಿದ್ದರಿಂದ ಅವು ಮೇಘ ಮಂಡಲಗಳಂತೆ ಆಕಾಶದಲ್ಲಿ ಮನ ಬಂದ

ಕಡೆ ಸಂಚರಿಸುತ್ತಿದ್ದವು ರತ್ನದ ತೋರಣ, ಮಣಿದೀಪ, ಬಂಗಾರದ ಕೋಟೆ ಕೊತ್ತಲು, ಮುಂತಾದವುಗಳಿಂದ ಅದೊಂದು ಗಂಧರ್ವ ನಗರವೇ ಮುಗಿಲಿನಲ್ಲಿ ತೇಲಾಡುವಂತೆ ತೋರುತ್ತಿತ್ತು. ಆ ನಗರದಲ್ಲಿ ಇರುವ ದೈತ್ಯರು ತಪಸ್ಸನ್ನು ಮಾಡಿ ತಮ್ಮ ತೇಜಸ್ಸನ್ನು ಬೆಳೆಸಿಕೊಂಡಿದ್ದರು. ಋಷಿಗಳ ಕಣ್ಣಿಗೆ ಮಾತ್ರ ಅವರು ಕಾಣಿಸುತ್ತಿದ್ದರು. ಗಂಧರ್ವ ಪುರಿಯಂತೆ ಅಲ್ಲಿ ಯಾವಾಗಲೂ ಗಾಯನ ಕವನಗಳ ಧ್ವನಿ. ಎಲ್ಲ ವಿಧವಾದ ಘೋರಾಯುಧಗಳು ಅದರಲ್ಲಿ ತುಂಬಿದ್ದವು. ಆ ಮೂರು ನಗರಗಳಲ್ಲಿ ಇರುವ ಅರಮನೆ, ಸಿರಿಮನೆ ಶಿಖರಗಳು ಕೈಲಾಸ ಶಿಖರಗಳಂತೆ ಹೊಳೆಯುತ್ತಿದ್ದವು. ಅದರ ತೇಜಸ್ಸನ್ನು ನೋಡಿದರೆ ಆ ನಗರಗಳ ಒಳಗೆ ಅನೇಕ ಸೂರ್ಯರು ಬೆಳಗುವಂತೆ ತೋರುತ್ತಿತ್ತು. ಆ ನಗರಗಳಲ್ಲಿ ಸೂರ್ಯನಾಭ, ಚಂದ್ರನಾಭ ಎಂಬ ಹೆಸರಿನ ದೈತ್ಯ ವೀರರು ಮತ್ತು ಬೇರೆ ಬೇರೆ ದಾನವ ಧೀರರೂ ಆನಂದದಿಂದ ಮತ್ತರಾಗಿ ಆಗಾಗ ಸಿಂಹನಾದವನ್ನು ಮಾಡುತ್ತಿದ್ದರು. ಆ ಎಲ್ಲ ದುಷ್ಟ ದೈತ್ಯರೂ ದೇವಯಾನ, ಪಿತೃಯಾನ ಎಂಬ ಭಕ್ತಿಮಾರ್ಗಗಳನ್ನು ತಮ್ಮ ಕಾಲಿನಿಂದ ತುಳಿದು ಮುರಿದು ಹಾಕಿದ್ದರು. ಅಗ್ನಿಯ ಸಾಮರ್ಥ್ಯದಿಂದ ಬೆಳಗುವ ದೇವಯಾನ ಅರ್ಚಿರಾದಿ ಮಾರ್ಗಗಳೂ ಪಿತೃಪ್ರಭಾವದಿಂದ ಪ್ರಭಾವಿತವಾದ ಪಿತೃಯಾನವೂ ದುಷ್ಟದೈತ್ಯರ ದುರ್ವ್ಯಾಪಾರಗಳಿಂದ ಉಧ್ವಸ್ತವಾದವು. ಆ ಮಾರ್ಗಕ್ಕೆ ಸಂಬಂಧಿಸಿದ ಕರ್ಮಗಳೆಲ್ಲವೂ ಉಚ್ಛಿನ್ನವಾದುದರಿಂದ ದೇವತೆಗಳೆಲ್ಲರೂ ದುಃಖಿತರಾಗಿ, ದೀನರಾಗಿ ಬ್ರಹ್ಮದೇವರಿಗೆ ಶರಣುಹೋದರು. ಆಗ ಬ್ರಹ್ಮದೇವರು ಅವರಿಗೆ ಶಂಕರನ ಕಡೆಗೆ ಹೋಗಲು ಸಲಹೆ ನೀಡಿದ. ಆಗ ಎಲ್ಲ ದೇವತೆಗಳೂ ಮೇರು ವಿಂಧ್ಯಾದ್ರಿ ಹಿಮಾಲಯ ಮುಂತಾದ ಪರ್ವತಗಳಲ್ಲಿ ನಿಂತು ಋಷಿರೂಪದಿಂದ ತಪಸ್ಸುಮಾಡಿ ಶಂಕರನನ್ನು ಒಲಿಸಿಕೊಂಡರು. ಅವನಿಗೆ ತಮ್ಮ ದುಃಖವನ್ನೆಲ್ಲ ನಿವೇದಿಸಿದರು. ಆಗ ಮಹಾದೇವನು ದೇವತೆಗಳಿಗೆಲ್ಲ ಹಿತವನ್ನು ಉಂಟುಮಾಡಲು ಆ ತ್ರಿಪುರಾಸುರನ ಸಂಹಾರಕ್ಕಾಗಿ ಸನ್ನದ್ಧನಾದ. ಎಲ್ಲ ದೇವತೆಗಳೂ ರುದ್ರದೇವರಿಂದ ಒಡಗೂಡಿ ಆದಿತ್ಯಪಥದಲ್ಲಿ ನಿಂತುಕೊಂಡು ಮಹಾದೇವರನ್ನು ಮುಂದೆ ಮಾಡಿ ಆ ಮೂರೂ ಪಟ್ಟಣಗಳ ಮೇಲೆ ದಾಳಿ ಮಾಡಿದರು. ಮಹಾದೇವರು ದೇವಸೇನೆಯ ಮುಂಚೂಣಿಯಲ್ಲಿ ನಿಂತು ಆ ತ್ರಿಪುರದ ಪಟ್ಟಣದ ಮೇಲೆ ಬಾಣಗಳನ್ನು ಸುರಿಸತೊಡಗಿದರು. ಶಿವನ ಬಾಣಪ್ರಹಾರದಿಂದ ದೈತ್ಯರು ಹಿಂಡು ಹಿಂಡಾಗಿ ಆ ಮೂರು ಪಟ್ಟಣಗಳಿಂದ ಉರುಳಿ ನೆಲದ ಮೇಲೆ ಬೀಳತೊಡಗಿದರು.

ಹೀಗೆ ಸಾಯಂಕಾಲದವರೆಗೆ ನೆಲದ ಮೇಲೆ ಉರುಳಿಬಿದ್ದ ದೈತ್ಯರೆಲ್ಲರೂ ರಾತ್ರಿಯಾದ ಕೂಡಲೇ ಕತ್ತಲೆಯಲ್ಲಿ ಮತ್ತೆ ಎದ್ದು ದೇವತೆಗಳ ಮೇಲೆ ಘೋರ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿ ಗಗನದಲ್ಲಿ ಕೋಲಾಹಲವನ್ನು ಉಂಟು ಮಾಡಿದರು. ಶುಕ್ರಾಚಾರ್ಯರು ಹೋಮಮಾಡಿ ರಾತ್ರಿಕಾಲದಲ್ಲಿ ಆ ದೈತ್ಯರಿಗೆ ಭಾರೀ ಬಲವನ್ನೂ ಅಮೋಘ ಅಸ್ತ್ರಗಳನ್ನೂ ಕರುಣಿಸಿದ್ದರಿಂದ ಮಹಾಬಲಿಷ್ಠರೂ ಗರ್ವಿಷ್ಠರೂ ಆದ ಆ ದೈತ್ಯರು ದೇವತೆಗಳ ಮೇಲೆ ಗೆಲುವನ್ನು ಸಾಧಿಸಿದರು. ಅದನ್ನು ನೋಡಿ ಶಂಕರನಿಗೆ ಸಿಟ್ಟು ಬಂತು. ಎಲ್ಲ ದೇವತೆಗಳೊಂದಿಗೆ ತನ್ನ ಅತ್ಯದ್ಭುತವಾದ ರಥೋರೋಹಣವನ್ನು ಮಾಡಿದ. ಗಗನಮಧ್ಯದಲ್ಲಿ ಬಂದು ನಿಂತು ಆ ತ್ರಿಪುರಗಳ ಮೇಲೆ ಬಾಣ ಪ್ರಹಾರಮಾಡತೊಡಗಿದ. ಆಗ ಮಹಾಪರಾಕ್ರಮಶಾಲಿಗಳಾದ ಹಾಗೂ ಶುಕ್ರಯಜ್ಞದಿಂದ ಅದ್ಭುತ ಶಕ್ತಿಯನ್ನು ಪಡೆದ

ಆ ದೈತ್ಯರು ಎಲ್ಲರೂ ಏಕ ಕಾಲದಲ್ಲಿ ಭಯಂಕರವಾದ ಗದೆ, ಭರ್ಜಿ, ಖಡ್ಗ, ಈಟಿ, ಬಾಣ, ಪರಿಘ, ಅಸ್ತ್ರ, ಶಸ್ತ್ರ, ಶಕ್ತಿ, ಕೊಡಲಿ, ವಜ್ರ ಮುಂತಾದ ಸಾವಿರಾರು ಮಾಯಾನಿರ್ಮಿತವಾದ ಘೋರ ಆಯುಧಗಳಿಂದ ಆ ರುದ್ರದೇವರು ಕುಳಿತ ರಥವನ್ನು ಒಂದೇ ಸಮನೇ ಹೊಡೆದು ಹಾಕಿದರು. ಅದರಿಂದಾಗಿ ಆ ರುದ್ರದೇವರ ರಥವು ಒಮ್ಮೆಲೇ ನೆಲಕ್ಕೆ ಬಂದು ಅಪ್ಪಳಿಸಿತು. ಅದರಿಂದ ಎಲ್ಲ ಪ್ರಾಣಿಗಳೂ ಭೂತಲದಲ್ಲಿ ಉರುಳಿ ಬಿದ್ದವು. ಹೆಮ್ಮರಗಳು ಮುರಿದು ಬಿದ್ದವು. ಪರ್ವತದ ಶಿಖರಗಳೆಲ್ಲವೂ ನಡುಗಿದವು. ಸಮುದ್ರಗಳು ಪ್ರಕ್ಷುಬ್ಧವಾದವು. ಆಗ ತಪಸ್ವಿಗಳು ಪರಬ್ರಹ್ಮನನ್ನು ನಮಿಸಿ ಶಾಂತ ಜಪವನ್ನು ಕೈಕೊಂಡರು. ಹರಿಹರರ ತೇಜಸ್ಸನ್ನು ಉದ್ದೀಪಿತ ಗೊಳಿಸಲಿಕ್ಕಾಗಿ ರಥಂತರ ಎಂಬ ಸಾಮ ಮಂತ್ರವನ್ನು ಜಪಿಸ ತೊಡಗಿದರು. ದೇವತೆಗಳೆಲ್ಲರೂ ಹೆದರಿ ಹೌಹಾರಿದರು. ಆಗ ಸರ್ವ ಸಮರ್ಥನಾದ ಶ್ರೀಹರಿಯು ಒಂದು ಬಲಾಢ್ಯವಾದ ಎತ್ತಿನ ರೂಪ ತೆಗೆದುಕೊಂಡು ಎಲ್ಲ ದೇವತೆಗಳೂ ಹಾಗೂ ಮಹಾದೇವರೂ ಕುಳಿತುಕೊಂಡ ಆ ಬೃಹತ್ತರವಾದ ರಥವನ್ನು ಕೋಡಿನಿಂದ ಎತ್ತಿ ಮತ್ತೆ ಆಕಾಶಮಾರ್ಗದಲ್ಲಿ ಒಯ್ದು ನಿಲ್ಲಿಸಿದ. ಮತ್ತೆ ದೇವ ದಾನವರಲ್ಲಿ ಭೀಕರ ಸಂಗ್ರಾಮವು ಮುಂದುವರೆಯಿತು. ಕ್ರೋಧಾಂಧರಾದ ಆ ಮದಾಂದ ದೈತ್ಯರು ಧನುಷ್ಟಂಕಾರ ಮಾಡಿ ದೇವಸೈನ್ಯವನ್ನೆಲ್ಲ ಭೀಕರವಾಗಿ ಪ್ರಹರಿಸತೊಡಗಿದರು. ಆಗ ನಾಶರಹಿತನಾದ ಆ ಶಂಕರನು ತನ್ನ ತಪಃಶಕ್ತಿಯಿಂದ ತನ್ನ ಬಾಣದಲ್ಲಿ ಬ್ರಹ್ಮಾಸ್ತ್ರವನ್ನು ಯೋಜಿಸಿ ಬಿಲ್ಲಿನಲ್ಲಿಯೂ ಅಗ್ನಿಯನ್ನು ಅನುಸಂಧಾನ ಮಾಡಿ, ಮೂರು ಬಾಣಗಳನ್ನು ಆ ಮೂರು ದೈತ್ಯ ನಗರಗಳ ಮೇಲೆ ಬಿಟ್ಟನು. ಬಂಗಾರದಂತೆ ದೇದೀಪ್ಯಮಾನವಾಗಿ ಹೊಳೆಯುವ ಆ ಮೂರು ಬಾಣಗಳು ವಿಷಾರಿ ಹಾವುಗಳಂತೆ ಆ ಮೂರೂ ಪಟ್ಟಣಗಳ ಮೇಲೆ ಬಿದ್ದು ಅವುಗಳನ್ನು ಸೀಳಿ ಸುಟ್ಟು ಹಾಕಿದವು. ಆ ಪಟ್ಟಣಗಳ ಗೋಪುರಗಳೂ, ಮನೆಗಳೂ, ಅಗ್ನಿಯಿಂದ ಉರಿಯತೊಡಗಿ ನೆಲದ ಮೇಲೆ ಉರುಳಿಬಿದ್ದವು. ಮಹಾದೇವರು ಬಿಟ್ಟ ಬ್ರಹ್ಮಾಸ್ತ್ರದಿಂದ ಅತ್ಯಂತ ಸುಂದರವಾದ ಅತ್ಯದ್ಭುತ ಆ ತ್ರಿಪುರಗಳು ಸುಟ್ಟು ನೆಲದ ಮೇಲೆ ನಷ್ಟವಾಗಿ ಬಿದ್ದು ಧ್ವಂಸವಾಗಿ ಹೋದವು. ಎಲ್ಲ ದೈತ್ಯರೂ ಅಧಃಪತಿತರಾದರು. ಆಗ ಶಂಕರ, ಬ್ರಹ್ಮ, ಹಾಗೂ ಋಷಿಗಳು ಎಲ್ಲರೂ ಮಹಾಯೋಗಿಯಾದ ವಿಷ್ಣುವನ್ನೇ ಈ ತ್ರಿಪುರ ಸಂಹಾರಕ್ಕೆ ಕಾರಣ ಪುರುಷ ಎಂದು ಸ್ತೋತ್ರ ಮಾಡಿದರು.

**ಜನಮೇಜಯ:-** ಈ ಹರಿಯ ಚರಿತ್ರ ಹಾಗೂ ಶ್ರೀಹರಿಯ ವಂಶ ವಿಸ್ತಾರ ರೂಪ ಪುರಾಣವನ್ನು ಕೇಳಿದರೆ ಯಾವ ಫಲವು ಬರುವುದು ಎನ್ನುವುದನ್ನು ಹೇಳಿರಿ.

**ವೈಶಂಪಾಯನ:-** ಹದಿನೆಂಟು ಪುರಾಣಗಳ ಶ್ರವಣದಿಂದ ಬರುವ ಫಲವು ಈ ಹರಿಯ ಚರಿತ್ರೆಯ ಹರಿವಂಶ ವಿಸ್ತಾರದ ಒಂದು ಶ್ಲೋಕ ಅಥವಾ ಅರ್ಧ ಶ್ಲೋಕ. ಪಾದಶ್ಲೋಕವನ್ನಾದರೂ ಶ್ರವಣಮಾಡಿದರೂ ಪಠಿಸಿದರೂ ಬರುವುದು. ಸಂತಾನವನ್ನು ಬಯಸುವ ಸ್ತ್ರೀಯರು ಮುಖ್ಯವಾಗಿ ಈ ವೈಷ್ಣವ ಪುರಾಣವನ್ನು ಭಕ್ತಿಯಿಂದ ಕೇಳಬೇಕು. ಈ ಪುರಾಣವನ್ನು ಹೇಳಿದವರಿಗೆ ಯಥಾಶಕ್ತಿ ಮೂರು ಬಂಗಾರದ ನಾಣ್ಯಗಳನ್ನೂ ಚಿನ್ನದ ಕೋಡಿನ ಕರು ಹಾಗೂ ವಸ್ತ್ರ ಸಹಿತವಾದ ಕಪಿಲಾ ಗೋವನ್ನು ವಾಚಕನಿಗೆ ದಾನಕೊಡಬೇಕು. ಮತ್ತು ಈ ಪುರಾಣವನ್ನು ಹೇಳಿದವರಿಗೆ ಕಡಗ, ಕಂಕಣ, ವಾಹನ,

ಭೂದಾನ ಮುಂತಾದವುಗಳನ್ನೂ ನೀಡಬೇಕು. ಇದರ ದಶಾಂಶ ಹೋಮವನ್ನೂ ಶ್ರೋತೃಗಳು ಮಾಡಬೇಕು. ಈ ಪುರಾಣದ ಶ್ರವಣದಿಂದ ಹಿಂದಿನ ಹನ್ನೊಂದು ತಲೆಯ ಪಿತೃಗಳ ಉದ್ಧಾರ ಆಗುವುದು. ಮತ್ತು ಶ್ರವಣಮಾಡಿದ ಮನುಷ್ಯನು ಹೆಂಡತಿ ಮಕ್ಕಳೊಂದಿಗೆ ದಿವ್ಯಗತಿಯನ್ನೂ ಹೊಂದುವನು. ಈ ಪುರಾಣ ಶ್ರವಣ ಮಾತ್ರದಿಂದ ಎಲ್ಲ ಪಾಪಗಳು ಪರಿಹೃತವಾಗುವವು. ಮಕ್ಕಳಿಲ್ಲದವರಿಗೆ ಸಂತಾನ ಪ್ರಾಪ್ತಿ ಆಗುವುದು. ದರಿದ್ರ್ಯರಾದವರಿಗೆ ಐಶ್ವರ್ಯವು ಲಭಿಸುವದು. ಈ ಪುರಾಣ ಶ್ರವಣದಿಂದ ಕೇಳುಗರಿಗೆ ಅಶ್ವಮೇಧಯಾಗ ಮಾಡಿದಷ್ಟು ಪುಣ್ಯವು ಪ್ರಾಪ್ತವಾಗುವದು. ಬ್ರಹ್ಮಹತ್ಯೆ, ಶಿಶುಹತ್ಯೆ, ಗೋಹತ್ಯೆ, ಮದ್ಯಪಾನ, ಗುರುಪತ್ನೀಗಮನ ಮುಂತಾದ ಮಹಾಪಾಪಗಳನ್ನು ಮಾಡಿದವರೂ ಕೂಡ ಈ ಹರಿಯಚರಿತ್ರೆ ಹಾಗೂ ಹರಿವಂಶ ಪುರಾಣಗಳಿಂದ ಪರಿಶುದ್ಧರಾಗಿ ಪೂತಾತ್ಮರಾಗುವರು.

ಇದಂ ಮಯಾ ತೇ ಪರಿಕೀರ್ತಿತಂ ಮಹತ್ ।
ಶ್ರೀಕೃಷ್ಣ ಮಾಹಾತ್ಮ್ಯ ಮಪಾರಮದ್ಭುತಮ್ ॥
ಶೃಣ್ವನ್ ಪಠನ್ನಾಶಂ ಸಮಾಪ್ನುಯಾತ್ ಫಲಂ ।
ಯಚ್ಚಾಪಿ ಲೋಕೇಷು ಸುದುರ್ಲಭಂ ಮಹತ್ ॥

ಜನಮೇಜಯ, ನಾನು ನಿನಗೆ ಅತ್ಯದ್ಭುತವೂ ಅಪಾರವೂ ಆದ ಮತ್ತು ಮಹಾಮಹತ್ತರವಾದ ಶ್ರೀಕೃಷ್ಣನ ಮಾಹಾತ್ಮ್ಯವನ್ನು ಈಗ ಹೇಳಿದೆ. ಇದನ್ನು ಶ್ರವಣ ಮಾಡುವವರೂ ಪಠಣ ಮಾಡುವವರೂ ಈ ಲೋಕದಲ್ಲಿ ದುರ್ಲಭವಾದ ಮಹಾ ಪುಣ್ಯಫಲವನ್ನು ಹೊಂದುತ್ತಾರೆ.

—○—

## ಪುರಾಣ ಉಪಪುರಾಣಗಳ ನಿರೂಪಣೆ

**ಅಧ್ಯಾಯ - ೭೮**

ನೈಮಿಷಾರಣ್ಯದಲ್ಲಿ ವಾಸಮಾಡಿದ ಲೋಮುಶ ಮೊದಲಾದ ಮಹರ್ಷಿಗಳು ಇತಿಹಾಸ ಪುರಾಣಾದಿ ಧಾರ್ಮಿಕ ಪ್ರಬಂಧಗಳ ಪ್ರವಚನದಲ್ಲಿ ಪಟೀಯಾಂಸನಾದ ವಿದ್ವಾಂಸನೆನಿಸಿದ ಸೂತಾಚಾರ್ಯನಿರಿಗೆ ಪ್ರಶ್ನೆ ಮಾಡಿದರು- "ಬುದ್ಧಿವಂತನಾದ ಸೂತಾಚಾರ್ಯ! ಪ್ರಭಾಸಕ್ಷೇತ್ರದ ಮಹಿಮೆ ಏನು? ದ್ವಾರಕಾಪುರಿಯಲ್ಲಿ ತನ್ನ ವಿವಿಧ ಲೀಲಾವತಾರದ ಚಾರುಚರ್ಯೆಯನ್ನು ತೋರಿದ ಆ ಶ್ರೀಕೃಷ್ಣನ ದಿವ್ಯ ಕಥಾನಕಗಳ ಕೌತುಕದ ಘಟನೆಗಳು ಯಾವವು? ಕೃಷ್ಣಾವತಾರದ ಹಿನ್ನೆಲೆ ಅವನ ಹಿಂದುಮುಂದಿನ ವಂಶ ವಿಸ್ತಾರ, ಕೃಷ್ಣಕುಲದ ಭೂತಭಾವಿ ರಾಜಋಷಿಗಳ ಪಾವನ ಜೀವನಗಳ ಇತಿಹಾಸ ಹಾಗೂ ಆ ದಿವ್ಯಾವತಾರದ ಸುಚರಿತಗಳು ಯಾವ ಬಗೆಯಾಗಿವೆ. ಎನ್ನುವುದನ್ನು ನಮಗೆ ನಿರೂಪಿಸಿರಿ. ಈ ದಿವ್ಯವಾದ ಪ್ರಭಾಸಕ್ಷೇತ್ರ, ದ್ವಾರಕಾಪಟ್ಟಣ ಹಾಗೂ ಈ ಕ್ಷೇತ್ರ ಸ್ವಾಮಿಯಾದ ಕೃಷ್ಣಭಗವಂತನ ಮಧುರವಾದ ಚಾರಿತ್ರಿಕ ಚಮತ್ಕಾರಕ ಜೀವನದ ಚಿತ್ರವಿಚಿತ್ರ ಘಟನೆಗಳನ್ನು ಹಾಗೂ ಸುಂದರವಾದ ಸಂದರ್ಭ ಸನ್ನಿವೇಶಗಳನ್ನು ಕೃಷ್ಣವಂಶ ವಿಸ್ತಾರಪೂರ್ವಕವಾದ ವೃತ್ತಾಂತವನ್ನು ತಮ್ಮ ಮುಖದಿಂದ ಕೇಳಬೇಕು ಎಂಬ ನಮ್ಮ ಹಿರಿಯಾಸೆ ಈಗ ಹೆಬ್ಬಯಕೆಯ ರೂಪತಾಳಿ ಹೃದಯದಲ್ಲಿ ಕೌತುಕದ ಕೊನೆಯೇರಿ ನಿಂತಿದೆ. ತಾವು ದಯವಿಟ್ಟು ಈ ಕ್ಷೇತ್ರಗಳ ಹಾಗೂ ಆ ಕ್ಷೇತ್ರಜ್ಞನ ಪಾವನವಾದ ಜೀವನದ, ವಂಶಾವಳಿ ವಿಸ್ತಾರದ ರಸರಮಣಿಯವಾದ ಸಮಾಚಾರವನ್ನು ದಯವಿಟ್ಟು ನಿರೂಪಿರಿ.

**ಸೂತ:**- ಪೂಜನೀಯರಾದ ವಿಪ್ರೋತ್ತಮರೇ, ನಾನು ನನ್ನ ಸಾಕ್ಷಾತ್ ಗುರುದೇವನಾದ ಸತ್ಯವತೀನಂದನ ವೇದವ್ಯಾಸದೇವರಿಗೆ ಮೊದಲು ನಮಸ್ಕರಿಸುವೆ. ಮತ್ತು ವಕ್ಷಸ್ಥಲದಲ್ಲಿ ಲಕ್ಷ್ಮೀಲಲನೆಯಿಂದ ಲಕ್ಷ್ಮೀಕಾಂತನಾದ ಸಾಕ್ಷಾತ್ ಶ್ರೀಹರಿಯನ್ನು ವಂದಿಸುವೆ. ನಿಮ್ಮಂಥ ಪರಮಶ್ರದ್ಧಾಳುಗಳಾದ ಕಥಾಕುತೂಹಲಿಗಳಿಗೆ ನನ್ನ ಸದ್ಗುರು ಶ್ರೀವ್ಯಾಸರ ಮುಖದಿಂದ ಕೇಳಿದ ಪ್ರಭಾಸ ಕ್ಷೇತ್ರದ ಮಹಿಮೆ ಹಾಗೂ ಕೃಷ್ಣಾವತಾರದ ಹಿನ್ನೆಲೆ, ಶ್ರೀಹರಿಯ ವಂಶ ವಿಸ್ತಾರ ಹಾಗೂ ಕೃಷ್ಣನ ಕೌತುಕದ ಕತೆಗಳನ್ನು ಯಥಾಶಕ್ತಿ ಬಿತ್ತರಿಸುವೆನು. ಈ ಪರಮ ರಮಣೀಯವಾದ ಭಗವದ್ ವಂಶ ವಿಸ್ತಾರದ ಹಿನ್ನೆಲೆಯನ್ನು ವಿಚಿತ್ರವೃತ್ತಾಂತಗಳನ್ನು ಚಾರಿತ್ರಿಕ ವಂಶಾವಳಿಯ ವಿವಿಧ ಘಟನಾಚಕ್ರಗಳನ್ನು ನೀವು ಸಾವಧಾನ ಚಿತ್ತರಾಗಿ ಆಲಿಸಿರಿ. ಮೂವತ್ಮೂರು ಕೋಟಿ ದೇವತೆಗಳಲ್ಲಿ ಮಹಾದೇವ, ನದಿಗಳಲ್ಲಿ ಗಂಗೆ, ವರ್ಣಗಳಲ್ಲಿ ಬ್ರಾಹ್ಮಣ, ಅಕ್ಷರಗಳಲ್ಲಿ ಓಂಕಾರ, ಪೂಜ್ಯವಸ್ತುಗಳಲ್ಲಿ ಮಾತೆ, ಗುರುಜನರಲ್ಲಿ ತಂದೆ 'ಶ್ರೇಷ್ಠ' ಎನಿಸಿದ್ದಾರೆ. ಅದರಂತೆ ಎಲ್ಲ ಪುರಾಣಗಳಲ್ಲಿ ಸ್ಕಂದಪುರಾಣ ಸರ್ವಶ್ರೇಷ್ಠ. ಈ ದಿವ್ಯವಾದ ಸ್ಕಂದ ಪುರಾಣವನ್ನು ಬಹುಪೂರ್ವಕಾಲದಲ್ಲಿ ಕೈಲಾಸ ಪರ್ವತದ ಶಿಖರ ಪ್ರದೇಶದ ಶೃಂಗಾಂಗಣದಲ್ಲಿ ನೆರೆದ ಬ್ರಹ್ಮಾದಿ ದೇವತೆಗಳಿಗೆ ಸಾಕ್ಷಾತ್ ಪಿನಾಕಪಾಣಿಯಾದ ಪರಶಿವನು ಪಾರ್ವತಿಯ ಸಮಕ್ಷ ಮೊಟ್ಟಮೊದಲು ನಿರೂಪಿಸಿದನು. ಶಿವಪ್ರೋಕ್ತವಾದ ಈ ಪಾವನ ಪುರಾಣವನ್ನು ಮುಂದೆ ಪಾರ್ವತಿದೇವಿಯು ತನ್ನ ನೆಚ್ಚಿನ ಮಗನಾದ ಸ್ಕಂದನಿಗೆ ಹೇಳಿದಳು. ಪಾರ್ವತೀನಂದನನಾದ ಆ ಸ್ಕಂದನು ಈ ಸ್ಕಂದಪುರಾಣವನ್ನು ನಂದೀಶ್ವರನಿಗೆ ನಿರೂಪಿಸಿದನು. ಈ ನಂದೀಶ್ವರನು ಸನಕ, ಸನಂದನ, ಸನಾತನ, ಸನತ್ಕುಮಾರ ಎಂಬ

ಚತುರಮತಿಗಳಾದ ಬ್ರಹ್ಮದೇವರ ನಾಲ್ಕು ಮಾನಸಪುತ್ರರಿಗೆ ಬೋಧಿಸಿದನು. ಅವರಲ್ಲಿ ಪರಮ ಬುದ್ಧಿವಂತನಾದ ಸನತ್ಕುಮಾರನು ಆ ಸ್ಕಂದಪುರಾಣವನ್ನು ಸರ್ವಜ್ಞರಾದ ಭಗವಾನ್ ಶ್ರೀವೇದವ್ಯಾಸರ ಎದುರು ತಾನು ಕಲಿತಂತೆ ನುಡಿದು ಒಪ್ಪಿಸಿದನು. ನಾನು ನನ್ನ ಗುರುವರೇಣ್ಯರಾದ ಆ ವ್ಯಾಸರ ಮುಖದಿಂದ ಈ ಸಮಗ್ರ ಸ್ಕಂದ ಮಹಾಪುರಾಣವನ್ನು ಶ್ರದ್ಧೆಯಿಂದ ಅಧ್ಯಯನ ಮಾಡಿದೆನು. ಗುರುಮುಖದಿಂದ ಅಧೀತವಾದ ಈ ಮಹಾಪುರಾಣವನ್ನು ನಾನು ನಿಮಗೆ ಹೇಳುತ್ತಲಿದ್ದೇನೆ.

ಪ್ರಾಚೀನ ಕಾಲದಲ್ಲಿ ಬ್ರಹ್ಮದೇವರು ತಪಸ್ಸನ್ನು ಆಚರಿಸಿದರು. ಚತುರ್ಮುಖನ ತಪಸ್ಸು ಅದು ಅತೀ ಉಗ್ರ ಎಂದು ಬೇರೆ ಹೇಳಬೇಕೆ? ಆ ತಪೋಮೂರ್ತಿಯ ಮುಖದಿಂದ ಮೊದಲು ಹೊರಬಂದದ್ದು ನಾಲ್ಕು ವೇದ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಈ ಚತುರ್ವೇದಗಳಿಗೂ, ಶಿಕ್ಷಾ, ಕಲ್ಪ, ನಿರುಕ್ತ, ವ್ಯಾಕರಣ, ಛಂದಸ್ಸು, ಜ್ಯೋತಿಷ್ಯ ಎಂದು ಆರು ಅಂಗ ಸಹಿತವಾಗಿಯೇ ಪ್ರಾರ್ದುರ್ಭಾವ ಚರ್ತುಮುಖನ ಮುಖದಿಂದ. ಹೀಗೆ ಸಾಂಗವೇದಗಳ ಪ್ರಾದುರ್ಭೂತಿಯ ಅನಂತರ ಅದೇ ಚರ್ತುಮುಖನ ಚತುರಮುಖದಿಂದ ಹದಿನೆಂಟು ಪುರಾಣಗಳ ಅರ್ವಿಭಾವ. ಈ ಪುರಾಣಗಳೆಲ್ಲವೂ ಸರ್ವಶಾಸ್ತ್ರಮಯ. ಸಕಲ ವಿಷಯೋಪಬೃಂಹಿತ. ನೂರುಕೋಟಿ ಪದ್ಯಗಳಷ್ಟು ಗಾತ್ರವಿಸ್ತಾರದ ಹರವು ಹಿರಿಮೆಗಳನ್ನು ಹೊಂದಿದ ಈ ಪುರಾಣ ವಾಙ್ಮಯವನ್ನೆಲ್ಲ ಶಾರದಾಪತಿಯು ವಿಂಗಡಿಸಿ ಕ್ರೋಢೀಕರಿಸಿ, ಜನರಿಗೆ ತಿಳಿಯುವ ರೀತಿಯಲ್ಲಿ ವಿಷಯ ವೈಶಿಷ್ಟ್ಯಕ್ಕೆ ಅನುಗುಣವಾಗಿ ಹದಿನೆಂಟು ಕಟ್ಟುಗಳಲ್ಲಿ ಹೊಂದಿಸಿ ಅಷ್ಟಾದಶ ಪುರಾಣಗಳನ್ನು ರಚಿಸಿದರು. ಆ ವಾಣೀಪತಿಯ ಮುಖದಿಂದ ಕ್ರಮವಾಗಿ ಹೊರಬಂದ ಪುರಾಣಗಳು ೧) ಬ್ರಹ್ಮಪುರಾಣ ೨) ವಿಷ್ಣುಪುರಾಣ ೩) ಶಿವಪುರಾಣ ೪) ಭಾಗವತ ಪುರಾಣ ೫) ಭವಿಷ್ಯ ಪುರಾಣ ೬) ನಾರದೀಯ ಪುರಾಣ ೭) ಮಾರ್ಕಂಡೇಯ ಪುರಾಣ ೮) ಅಗ್ನಿಪುರಾಣ ೯) ಬ್ರಹ್ಮವೈವರ್ತ ಪುರಾಣ ೧೦) ಲಿಂಗ ಪುರಾಣ ೧೧) ಪದ್ಮ ಪುರಾಣ ೧೨) ವರಾಹ ಪುರಾಣ ೧೩) ಸ್ಕಂದ ಪುರಾಣ ೧೪) ವಾಮನ ಪುರಾಣ ೧೫) ಕೂರ್ಮ ಪುರಾಣ ೧೬) ಮತ್ಸ್ಯ ಪುರಾಣ ೧೭) ಗರುಡ ಪುರಾಣ ೧೮) ವಾಯು ಪುರಾಣ ಈ ಹದಿನೆಂಟು ಪುರಾಣಗಳು ಮಹಾಪುರಾಣ ಎಂದು ಕರೆಯಲ್ಪಡುತ್ತವೆ. ಈ ಮಹಾಪುರಾಣಗಳಲ್ಲದೇ ಹದಿನೆಂಟು ಉಪಪುರಾಣಗಳು ಇರುತ್ತವೆ. ೧) ಸನತ್ಕುಮಾರ ಉಪಪುರಾಣ ೨) ನರಸಿಂಹೋಪ ಪುರಾಣ ೩) ಸ್ಕಂದ ಉಪಪುರಾಣ ೪) ನಂದೀಶ್ವರ ಕಥಿತ ಶಿವಧರ್ಮ ೫) ದುರ್ವಾಸ ಉಪಪುರಾಣ ೬) ನಾರದ ಉಪಪುರಾಣ ೭) ಕಪಿಲ ಉಪಪುರಾಣ ೮) ಮನು ಉಪಪುರಾಣ ೯) ಉಶನಾ ಉಪಪುರಾಣ ೧೦) ಬ್ರಹ್ಮಾಂಡ ಉಪಪುರಾಣ ೧೧) ವರುಣ ಉಪಪುರಾಣ ೧೨) ಕಾಲಿಕಾ ಪುರಾಣ ೧೩) ಮಾಹೇಶ್ವರ ಪುರಾಣ ೧೪) ಸಾಂಬ ಪುರಾಣ ೧೫) ಸೌರ ಉಪಪುರಾಣ ೧೬) ಪರಾಶರ ಉಪಪುರಾಣ ೧೭) ಮಾರೀಚ ೧೮) ಭಾರ್ಗವ ಉಪಪುರಾಣ.

**ಶೌನಕ:-** ಸೂತರೇ, ತಾವು ಹೇಳಿದ ಈ ಹದಿನೆಂಟು ಪುರಾಣಗಳ ಶ್ಲೋಕ ಸಂಖ್ಯೆ ಎಷ್ಟು?

**ಸೂತ:-** ಮೊದಲು ಈ ಪುರಾಣ ಮಙ್ಮಯ ಎಲ್ಲವೂ ಒಂದೇ ಅಪಾರ ಶಬ್ದರಾಶಿ ಆಗಿತ್ತು. ಒಂದುನೂರು ಕೋಟಿ ಪದ್ಯಗಳಷ್ಟು ವಿಸ್ತಾರ ಈ ಪುರಾಣ ಪ್ರಪಂಚ. ಪ್ರಳಯ ಕಾಲದಲ್ಲಿ ಸಂಕರ್ಷಣ ರೂಪಿಯಾದ ಶ್ರೀಹರಿಯು ಸರ್ವಲೋಕಗಳನ್ನು ಅಂತಿಮವಾಗಿ ಸುಟ್ಟುಹಾಕುವ ಮೊದಲು ಷಂಡಗಸಹಿತವಾದ ವೇದಪುರಾಣ, ನ್ಯಾಯ, ಮೀಮಾಂಸಾ,

ಧರ್ಮಶಾಸ್ತ್ರ ಮುಂತಾದ ಈ ಪವಿತ್ರವಾಙ್ಮಯವನ್ನು ಸಂಕ್ಷಿಪ್ತವಾಗಿ ತನ್ನ ಸ್ವಾಧೀನಪಡಿಸಿಕೊಂಡನು. ಅನಂತರ ಬ್ರಹ್ಮಾಂಡದ ಹೊಸಹುಟ್ಟಿನ ಹೊಳವು ಹಾಕಹೊರಟ ಮತ್ಸ್ಯರೂಪಿ ಶ್ರೀಹರಿಯು ಆ ಏಕಾರ್ಣವ ಜಲದಲ್ಲಿ ಸಂಚರಿಸುತ್ತ ಬ್ರಹ್ಮದೇವರಿಗೆ ಈ ಎಲ್ಲ ವೇದಾದಿವಿದ್ಯೆಯನ್ನು ಉಪದೇಶಿಸಿದನು. ಆ ಬ್ರಹ್ಮನಿಂದ ತ್ರಿಕಾಲ ದರ್ಶಿಗಳಾದ ಮುನಿಗಳಿಗೆ ಈ ಧಾರ್ಮಿಕ ಸಾಹಿತ್ಯ ಉಪದೇಶ. ಅನಂತರ ಕಾಲಕ್ರಮದಿಂದ ಮಾನವರ ಮತಿಮನಿಷಿಗಳು ಮಂದಮಂದವಾಗತೊಡಗಿದಾಗ ಶ್ರೀಹರಿಯು ವ್ಯಾಸರೂಪಧರಿಸಿ ಪ್ರತಿಯೊಂದು ದ್ವಾಪರಯುಗದಲ್ಲಿ ಅವತರಿಸಿ ಆ ಪುರಾಣ ವಾಙ್ಮಯವನ್ನೆಲ್ಲ ಹದಿನೆಂಟು ಪುರಾಣಗಳಲ್ಲಿ ಸಂಕ್ಷೇಪಿಸುವನು. ನೂರುಕೋಟಿ ವಿಸ್ತಾರವಾದ ಆ ಪುರಾಣ ಪ್ರಪಂಚವನ್ನು ನಾಲ್ಕು ಲಕ್ಷಶ್ಲೋಕಗಳಲ್ಲಿ ಹದಿನೆಂಟು ವಿಭಾಗಗಳಲ್ಲಿ ಕ್ರೋಡೀಕರಿಸಿ ಹೇಳಿದ್ದು ಬರೆದದ್ದು ವ್ಯಾಸರ ವೈಶಿಷ್ಟ್ಯ. ಬ್ರಹ್ಮದೇವನು ತನ್ನ ಮಾನಸಪುತ್ರನಾದ ಮರೀಚಿಮುನಿಗೆ ಉಪದೇಶಿಸಿದ ಮೊಟ್ಟಮೊದಲನೇಯ ಪುರಾಣವೇ ಬ್ರಹ್ಮಪುರಾಣ. ಇದರಲ್ಲಿ ಇದ್ದ ಪದ್ಯಗಳ ಸಂಖ್ಯೆ ಹತ್ತುಸಾವಿರ.

ಬ್ರಹ್ಮದೇವರ ಹೊಕ್ಕಳದಿಂದ ಹೊಂದಾವರೆಯ ರೂಪದಲ್ಲಿ ಈ ಬಂಗಾರಮಯವಾದ ಬ್ರಹ್ಮಾಂಡವು ಪ್ರಕಟವಾಯಿತು. ಆ ಕಥೆಯನ್ನು ಆಧರಿಸಿ ಪ್ರಕಾಶಿತವಾದ ಮಹಾಪುರಾಣವೇ ಪದ್ಮಪುರಾಣ. ಇದರ ಶ್ಲೋಕಸಂಖ್ಯೆ ಐವತ್ತೈದು ಸಾವಿರ.

ವರಾಹಕಲ್ಪದ ವೃತ್ತಾಂತವನ್ನು ಆಧರಿಸಿ ವಿಷ್ಣುವಿನ ಚರಿತೆಯನ್ನು ಬಿತ್ತರಿಸಿದ ಪುರಾಣವೇ ವಿಷ್ಣುಪುರಾಣ. ಅದರ ಶ್ಲೋಕಸಂಖ್ಯೆ ಇಪ್ಪತ್ಮೂರು ಸಾವಿರ. ಶ್ವೇತಕಲ್ಪದ ಪ್ರಸಂಗವನ್ನು ಆಧರಿಸಿ ವಾಯುದೇವರು ನೀಡಿದ ಧರ್ಮೋಪದೇಶವೇ ವಾಯುಪುರಾಣ. ಇದರಲ್ಲಿ ಶಿವನ ಮಹಿಮೆ ವರ್ಣಿಸಲ್ಪಟ್ಟಿದೆ. ಇದರಲ್ಲಿ ಬರುವ ಒಟ್ಟುಪದ್ಯಗಳು ಇಪ್ಪತ್ನಾಕುಸಾವಿರ. ಗಾಯತ್ರೀ ಮಂತ್ರದ ತಿರುಳನ್ನು ಅರಳಿಸಿ ಭಾಗವತ ಹದಿನೆಂಟುಸಾವಿರ ಶ್ಲೋಕಗಳಿಂದ ಈ ಮಹಾಪುರಾಣವು ಬಿತ್ತರಿಸಲ್ಪಟ್ಟಿದೆ.

ಬೃಹತ್‌ಕಲ್ಪದ ಕಥಾನಕವನ್ನು ಆಶ್ರಯಿಸಿ ನಾರದರು ಧರ್ಮೋಪದೇಶವನ್ನು ಬಿತ್ತರಿಸಿದ ಮಹಾಪುರಾಣವೇ ನಾರದೀಯ ಪುರಾಣ. ಇಪ್ಪತ್ತೈದು ಸಾವಿರ ಶ್ಲೋಕಗಳು ಇರುತ್ತವೆ ಈ ಪುರಾಣದಲ್ಲಿ.

ಪಕ್ಷಿಗಳ ಪ್ರಸಂಗದಿಂದ ಧರ್ಮಾಧರ್ಮಗಳ ವಿಚಾರವನ್ನು ಪ್ರಸ್ತುತಪಡಿಸಿದ ಮಹಾಪ್ರಬಂಧವೇ ಮಾರ್ಕಂಡೇಯ ಪುರಾಣ. ಇದರಲ್ಲಿ ಒಂಭತ್ತುಸಾವಿರ ಶ್ಲೋಕಗಳು ಇರುತ್ತವೆ

ಈಶಾನಕಲ್ಪದ ವೃತ್ತಾಂತದ ಆಧಾರದ ಮೇಲೆ ಅಗ್ನಿದೇವನು ವಶಿಷ್ಠರಿಗೆ ಉಪದೇಶಿಸಿದ ಧರ್ಮಗ್ರಂಥವೇ ಅಗ್ನಿಪುರಾಣ. ಇದರಲ್ಲಿ ಹದಿನಾರುಸಾವಿರ ಶ್ಲೋಕಗಳು ಬರುತ್ತವೆ.

ಬ್ರಹ್ಮದೇವರು ಅಘೋರಕಲ್ಪದ ವೃತ್ತಾಂತವನ್ನು ಹಾಗೂ ಸೂರ್ಯನ ಮಹಿಮೆಯನ್ನು ಆಶ್ರಯಿಸಿ ಮನುವಿನಿಂದ ಪ್ರಾರಂಭಿಸಿ ಎಲ್ಲ ಜೀವಸಮುದಾಯದ ಲಕ್ಷಣ, ಇತಿಹಾಸ, ವೃತ್ತಾಂತ, ಇದ್ಧಂಭೂತ ಸಂಗತಿಗಳನ್ನೂ ಮತ್ತು ಭವಿಷ್ಯಕಾಲದ ಜೀವಿಗಳ ಸ್ಥೂಲಮಾನದ ಆಗು ಹೋಗುಗಳನ್ನು ಬರೆದು ಬಿತ್ತರಿಸಿದ ಬೃಹತ್ ಕೃತಿಯೇ ಭವಿಷ್ಯ ಪುರಾಣ. ಅದರ ಪದ್ಯಗಳ ಪರಿಧಿ ಹದಿನಾಲ್ಕು ಸಾವಿರ.

ರಥಂತರಕಲ್ಪದ ವೃತ್ತಾಂತವನ್ನು ಅಧಿಕರಿಸಿ ನಾರದರು ಶ್ರೀಕೃಷ್ಣ ಮಾಹಾತ್ಮ್ಯ ಸಹಿತವಾಗಿ ಬ್ರಹ್ಮವರಾಹಚರಿತವನ್ನು ಬಣ್ಣಿಸಿದ ಉದ್ಗ್ರಂಥ ಬ್ರಹ್ಮವೈವರ್ತಪುರಾಣ. ಹದಿನೆಂಟುಸಾವಿರ ಶ್ಲೋಕಗಳ ಹರಡಿನಲ್ಲಿ ಈ ಮಹಾಪುರಾಣ ಸಂಪ್ರತಿಷ್ಠಿತ.

ಲಿಂಗದಲ್ಲಿ ನೆಲೆಸಿದ ಭವಾನೀಪತಿಯು ಅಗ್ನಿಕಲ್ಪದಲ್ಲಿ ನಡೆದ ಘಟನಾವಳಿಗಳನ್ನು ಅವಲಂಬಿಸಿ ಅಗ್ನಿಗೆ ನಿರೂಪಿಸಿದ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳ ವರ್ಣನೆಯನ್ನು ಒಳಗೊಂಡ ಪುರಾಣವೇ ಲಿಂಗಪುರಾಣ. ಹನ್ನೊಂದುಸಾವಿರ ಇದರ ಶ್ಲೋಕಸಂಖ್ಯೆ.

ಭಗವಾನ್ ಶ್ರೀವಿಷ್ಣು ಪೃಥ್ವೀದೇವಿಗೆ ಆಖ್ಯಾನಿಸಿದ ಮಹಾವರಾಹನ ದಿವ್ಯ ಮಾಹಾತ್ಮ್ಯ ಗರ್ಭಿತವಾದ ಮಹತ್ ಪ್ರಬಂಧವೇ ವರಾಹಪುರಾಣ. ಈ ವರಾಹಪುರಾಣವು ಇಪ್ಪತ್ತುನಾಕುಸಾವಿರ ಪದ್ಯಗಳ ಪ್ರದೀರ್ಘ ಪರವೇಷದಲ್ಲಿ ಬಿತ್ತರಗೊಂಡಿದೆ. ಈ ಬೃಹತ್ ಪುರಾಣ ಮಾಹೇಶ್ವರ ಧರ್ಮಗಳಿಂದ ಅನುಪ್ರಾಣಿತವಾದ ತತ್ಪುರುಷ ಕಲ್ಪದ ವೃತ್ತಾಂತಗಳಿಂದ ಓತಪ್ರೋತವಾಗಿ ಅನುಸ್ಯೂತವಾಗಿದೆ.

ವೈವಿಧ್ಯಪೂರ್ಣವಾದ ವಿರಾಟ್ ಕಥಾಸಂದರ್ಭ, ಚಿತ್ರವಿಚಿತ್ರ ಪ್ರಮೇಯಪುಂಜ, ಬೋಧಪ್ರದ ದೃಷ್ಟಾಂತ, ವೇದಮೂಲ ಸಿದ್ಧಾಂತ, ಐತಿಹಾಸಿಕ ನಿದರ್ಶನ. ಪೌರಾಣಿಕ ಸತ್ಯ ಪ್ರದರ್ಶನ, ನಯನೀತಿ, ಧರ್ಮರೀತಿ, ಆರ್ಯಸಂಸ್ಕೃತಿ, ಸನಾತನ ಧರ್ಮಗಳ ರಮ್ಯರಹಸ್ಯ, ಔಪನಿಷದ ತಾತ್ವಿಕ ಗುಹ್ಯಾರ್ಥ ಸ್ವಾರಸ್ಯ ಮುಂತಾದವುಗಳಿಂದ ತುಂಬಿತುಳುಕುತ್ತಲಿರುವ ಬೃಹತ್‌ಕಾಯದ ಮಹತ್ ಪುರಾಣವೇ ಸ್ಕಂದಪುರಾಣ. ಸ್ಕಂದಸ್ವಾಮಿಯ ಮುಖಾಂತರ ರೂಪಗೊಂಡ ಮಹತೋಮಹಿಮವಾದ ಈ ಮಹಾಪುರಾಣದಲ್ಲಿ ಎಂಬತ್ತೊಂದು ಸಾವಿರ ಶ್ಲೋಕಗಳು ಇರುತ್ತವೆ

ಬ್ರಹ್ಮದೇವರು ಶ್ರೀವಿಷ್ಣುವಿನ ತ್ರಿವಿಕ್ರಮರೂಪದ ಮಹಾಮಹಿಮೆಯನ್ನು ಆಶ್ರಯಿಸಿ ಧರ್ಮಾರ್ಥ, ಕಾಮ ಮೋಕ್ಷಗಳ ಬಣ್ಣನೆಯನ್ನು ಬಿತ್ತರಿಸಿ ಹತ್ತುಸಾವಿರ ಶ್ಲೋಕಗಳಲ್ಲಿ ನಿರೂಪಿಸಿದ ವಾಮನ ಪುರಾಣವು ಕೂರ್ಮಕಲ್ಪದ ಕಥೋಪಕಥನಗಳ ಆಖ್ಯಾನ ರೂಪವಾಗಿದೆ.

ಕೂರ್ಮರೂಪಿಯಾದ ಶ್ರೀಹರಿಯು ರಸಾತಳದಲ್ಲಿ ದೇವೇಂದ್ರ ಹಾಗೂ ಮಹರ್ಷಿಗಳ ಎದುರು ಇಂದ್ರದ್ಯುಮ್ನನ ಪ್ರಸಂಗದಿಂದ ಚತುರ್ವಿಧ ಪುರುಷಾರ್ಥಗಳ ಮಹಿಮೆಯನ್ನು, ಲಕ್ಷ್ಮೀಕಲ್ಪದ ವೃತ್ತಾಂತದ ಆಧಾರದ ಮೇಲೆ ಹದಿನೇಳುಸಾವಿರ ಶ್ಲೋಕಗಳಲ್ಲಿ ನಿರೂಪಣೆಗೈಯ್ದಿದ್ದೇ ಕೂರ್ಮಪುರಾಣ ಎನಿಸುತ್ತದೆ.

ಕಲ್ಪದ ಆದಿಕಾಲದಲ್ಲಿ ವೇದಗಳ ಪ್ರವೃತ್ತಿಗಾಗಿ ಮತ್ಸ್ಯರೂಪವನ್ನು ಧರಿಸಿದ ಭಗವಾನ್ ಶ್ರೀಹರಿಯು ನರಸಿಂಹಕಲ್ಪದಿಂದ ಏಳು ಕಲ್ಪಗಳ ಸಮಾಚಾರಗಳನ್ನೆಲ್ಲ ಹದಿನಾಲ್ಕು ಸಾವಿರ ಪದ್ಯಗಳಲ್ಲಿ ಬಿತ್ತರಿಸಿ ಬಣ್ಣಿಸಿದ ಪವಿತ್ರಗ್ರಂಥವೇ ಮತ್ಸ್ಯಪುರಾಣ. ಗರುಡಕಲ್ಪದ ಬ್ರಹ್ಮಾಂಡದ ಉತ್ಪತ್ತಿಕಥೆಯನ್ನು ಮೂಲವಸ್ತುವನ್ನಾಗಿ ಇಟ್ಟುಕೊಂಡು ಭಗವಾನ್ ಮಹಾವಿಷ್ಣು ಗರುಡನಿಗೆ ಹೇಳಿದ ಉಪದೇಶ ಪ್ರಕರಣವೇ ಗರುಡ ಪುರಾಣ. ಇದರಲ್ಲಿಯ ಶ್ಲೋಕಗಳ ವಿಸ್ತಾರ ಹದಿನೆಂಟುಸಾವಿರದಷ್ಟು ಬೃಹದಾಕಾರ.

ಭವಿಷ್ಯಕಲ್ಪದ ವಿಸ್ತೃತವಾದ ವರ್ಣನೆಯೊಂದಿಗೆ ಸ್ವಯಂ ಬ್ರಹ್ಮದೇವರು ಬ್ರಹ್ಮಾಂಡ ಮಹಿಮೆಯನ್ನು ಉಪದೇಶಗೈದ ಪವಿತ್ರ ಪ್ರಬಂಧವೇ ಬ್ರಹ್ಮಾಂಡ ಪುರಾಣ. ಹನ್ನೊಂದು ಸಾವಿರ ಶ್ಲೋಕಗಳಲ್ಲಿ ಮೈಚಾಚಿದೆ ಇಲ್ಲಿಯ ವಿಷಯವಿಸ್ತಾರ.

ಹೀಗೆ ವೇದವ್ಯಾಸದೇವರು ಅಪರಿಮಿತವಾದ ರಾಶಿರಾಶಿಯಾಗಿ ಒಟ್ಟೈಯಿಸಿದ ಪೂರ್ವಕಾಲದ ಪುರಾಣಭಾಂಡಾರವನ್ನೆಲ್ಲ ಸಂಕ್ಷೇಪಿಸಿ ಸಾರೋದ್ಧಾರಗೈದು ನಾಲ್ಕು ಲಕ್ಷ ಶ್ಲೋಕಗಳ ಭಟ್ಟಿಯಲ್ಲಿ ಇಳಿಸಿಈಮೇಲೆಹೇಳಿದಹದಿನೆಂಟುಮಹಾಪುರಾಣಗಳನ್ನು ವಿಂಗಡಿಸಿಇಟ್ಟರು.

ಪದ್ಮಪುರಾಣದಲ್ಲಿ ಸಾಂಧರ್ಭಿಕವಾಗಿ ಬಂದ ಶ್ರೀ ನರಸಿಂಹಾವತಾರದ ವರ್ಣನೆಯ ಉಪಬೃಂಹಿತಸ್ವರೂಪವೇ 'ನರಸಿಂಹ ಪುರಾಣ' ಎಂಬ ಉಪಪುರಾಣದ ರೂಪದಿಂದ ಮೈದಾಳಿದೆ.

ಸ್ಕಂದನು ನಂದೀಶ್ವರನ ಮಹಾತ್ಮೆಯನ್ನು ಆಖ್ಯಾನಿಸಿದ ಉಪಪುರಾಣವು ನಂದೀಪುರಾಣ ಎಂದು ಪ್ರಖ್ಯಾತವಾಗಿದೆ. ಕೃಷ್ಣಕುಮಾರ ಸಾಂಬನ ಕರ್ಮಯೋಗವನ್ನು ಅವನ ಚಿತ್ರಚರಿತ್ರೆಗಳೊಂದಿಗೆ ಚಿತ್ರಿಸಿದ ಉಪಪುರಾಣವು ಸಾಂಬಪುರಾಣವಾಗಿ ಮಾರ್ಪಟ್ಟಿದೆ. ಆದಿತ್ಯಪುರಾಣ ಎಂದು ಅದಕ್ಕೆ ಬೇರೊಂದು ಹೆಸರು ಇರುತ್ತದೆ. ಪುರಾಣ ಉಪಪುರಾಣಗಳೆಲ್ಲವೂ ಈ ಮಹಾಪುರಾಣಗಳಲ್ಲಿ ಉಕ್ತವಾದ ಹಲಕೆಲವು ಆಖ್ಯಾನ ಉಪಾಖ್ಯಾನಗಳ ಪರಿಷ್ಕೃತ ಸ್ವರೂಪಗಳೇ ಆಗಿರುತ್ತವೆ. ಸರ್ಗ, ಪ್ರತಿಸರ್ಗ ವಂಶ, ಮನ್ವಂತರ, ವಂಶಾನುಚರಿತ, ಎಂದು ಐದು ಲಕ್ಷಣಗಳಿಂದ ಯುಕ್ತವಾದ ಈ ಪುರಾಣ ಗ್ರಂಥಗಳಲ್ಲಿ ಎಲ್ಲ ಕಡೆಗೂ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ವಿಧ ಪುರುಷಾರ್ಥಗಳ ವಿವರಣೆ ಬರುತ್ತದೆ.

ಈ ಪುರಾಣಗಳು ಮೂರು ಬಗೆಯಾಗಿವೆ. ಸಾತ್ವಿಕ, ರಾಜಸ, ತಾಮಸ ಎಂದು. ಸಾತ್ವಿಕ ಪುರಾಣಗಳಲ್ಲಿ ಭಗವಾನ್ ಶ್ರೀಮಹಾವಿಷ್ಣುವಿನ ಮಾಹಾತ್ಮ್ಯ ಹಾಗೂ ಅವನ ಆರಾಧನೆಯ ಫಲಗಳ ವರ್ಣನೆಯು ಅಧಿಕವಾಗಿ ಎದ್ದು ಕಾಣುತ್ತದೆ. ರಾಜಸ ಪುರಾಣಗಳಲ್ಲಿ ನಾಕುಮೊಗದ ಬ್ರಹ್ಮದೇವನ ವರ್ಣನೆ ಗೋಚರವಾಗುತ್ತದೆ.

ಇದರಂತೆ ತಾಮಸ ಪುರಾಣಗಳಲ್ಲಿ ರುದ್ರದೇವರ ಹಾಗೂ ಅಗ್ನಿ ಮುಂತಾದ ದೇವತೆಗಳ ಮಹಿಮೆಯು ಸದೃಷ್ಟಾಂತವಾಗಿ ನಿರೂಪಿಸಲ್ಪಟ್ಟಿದೆ.

ಪುರಾಣಗಳಲ್ಲಿ ನಾಲ್ಕು ಮಹಾಪುರಾಣಗಳಲ್ಲಿ ವಿಷ್ಣುವಿನ ಮಹಿಮೆ ಪ್ರತಿಪಾದಿಸಲ್ಪಟ್ಟಿದೆ. ಎರಡು ಪುರಾಣಗಳಲ್ಲಿ ಬ್ರಹ್ಮದೇವನ ಮಹಿಮೆ ಮತ್ತು ಎರಡು ಪುರಾಣಗಳಲ್ಲಿ ಸೂರ್ಯನ ಮಹಾತ್ಮೆ ಹಾಗೂ ಶೇಷನ ಪ್ರಭಾವಗಳು ಬಣ್ಣಿಸಲ್ಪಟ್ಟಿವೆ. ಉಳಿದ ಎಲ್ಲ ಪುರಾಣಗಳಲ್ಲಿ ಸಂಕರ್ಷಣ ರೂಪಿಯಾದ ಶಿವನ ಮಹಾಮಹಿಮೆ ನಿರೂಪಿತವಾಗಿದೆ.

ದ್ವಾಪರಯುಗದ ಕೊನೆಯ ಭಾಗದಲ್ಲಿ ಸತ್ಯವತೀ ಕುಮಾರನಾದ ಬಾದರಾಯಣ ಮಹರ್ಷಿಯು ಹದಿನೆಂಟು ಮಹಾಪುರಾಣಗಳನ್ನು ರಚಿಸಿ ವೇದಾರ್ಥ ಗರ್ಭಿತವಾದ ಮಹಾಭಾರತ ಎಂಬ ಬೃಹತ್ ಗ್ರಂಥವನ್ನು ಲೇಖಿಸಿದರು. ಅದರಲ್ಲಿ ಇರುವ ಶ್ಲೋಕಗಳ ಸಂಖ್ಯೆ ಒಂದು ಲಕ್ಷ.

ಬ್ರಹ್ಮದೇವರು ಒಂದುನೂರುಕೋಟಿ ಪದ್ಯಗಳಿಂದ ಹಿಂದೆ ಶ್ರೀರಾಮಚಂದ್ರನ ಚರಿತ್ರೆಯನ್ನು ರಚಿಸಿದ್ದರು. ಅದರ ಸಾರವನ್ನು ತೆಗೆದು ವಾಲ್ಮೀಕಿ ಮುನಿಗೆ ಅದೇ ಬ್ರಹ್ಮದೇವರು ಸಂಕ್ಷಿಪ್ತವಾಗಿ ರಾಮಕಥೆಯನ್ನು ನಿರೂಪಿಸಿದರು. ಅದನ್ನು ವಾಲ್ಮೀಕಿಯು ಇಪ್ಪತ್ತುನಾಲ್ಕು ಸಾವಿರ ಶ್ಲೋಕಗಳಲ್ಲಿ ಕಾವ್ಯರೂಪದಿಂದ ರಾಮಕಥೆಯನ್ನು ರಚಿಸಿದನು.

ಹೀಗೆ ಒಟ್ಟು ಹದಿನೆಂಟು ಪುರಾಣಗಳು ಕೂಡಿ ನಾಲ್ಕು ಲಕ್ಷ ಶ್ಲೋಕಗಳು, ಮಹಾಭಾರತ ಒಂದು ಲಕ್ಷ ಶ್ಲೋಕ, ವಾಲ್ಮೀಕಿ ರಾಮಾಯಣ ಇಪ್ಪತ್ತುನಾಲ್ಕುಸಾವಿರ ಶ್ಲೋಕ. ಒಟ್ಟಾರೆ ಎಲ್ಲ ಸೇರಿ ಐದುಲಕ್ಷ. ಇಪ್ಪತ್ತುನಾಕುಸಾವಿರ ಶ್ಲೋಕಾತ್ಮಕವಾದ ಪರಮಪವಿತ್ರವಾದ ಪುರಾಣ ವಾಙ್ಮಯವು ಪಠಣ, ಪಾಠನ, ಪಾರಾಯಣ, ಶ್ರವಣ, ಮನನಮಾಡುವವರಿಗೆ ಪುಣ್ಯಪ್ರದವೂ ಮೋಕ್ಷಾದಿ ಪುರುಷಾರ್ಥ ಪ್ರದಾಯಕವೂ ಆಗಿರುತ್ತದೆ. ಪ್ರಕೃತ ಈ ಸ್ಕಂದಪುರಾಣದಲ್ಲಿ ಮಾಹೇಶ್ವರ ಖಂಡ, ವೈಷ್ಣವ ಖಂಡ, ಬ್ರಹ್ಮಖಂಡ, ಕಾಶೀಖಂಡ, ರೇವಾಖಂಡ, ನಾಗರಖಂಡ, ಪ್ರಭಾಸಖಂಡ ಎಂದು ಏಳು ಖಂಡಗಳು ಇರುತ್ತವೆ. ಸ್ಕಂದ ಪುರಾಣದ ಪ್ರತಿಯೊಂದು ಖಂಡದಲ್ಲಿ ತುಸು ಹೆಚ್ಚು ಕಡಿಮೆ ಹನ್ನೆರಡು ಸಾವಿರ ಶ್ಲೋಕಗಳು ಇರುತ್ತವೆ.

## ಪ್ರಭಾಸತೀರ್ಥದ ಮಹಿಮೆ;

**ಪಾರ್ವತಿ:-** ಪ್ರಭು, ಪರಮೇಶ್ವರ, ಪ್ರಭಾಸಕ್ಷೇತ್ರದ ಮಹಿಮೆಯನ್ನು ಹೇಳಿರಿ. ಎಲ್ಲ ಕ್ಷೇತ್ರಗಳಲ್ಲಿ ಪ್ರಭಾಸವೇ ಶ್ರೇಷ್ಠ ಎಂದು ತಾವು ಅಭಿಪ್ರಾಯ ಪಟ್ಟಿರಲ್ಲವೇ? ಅಂದ ಬಳಿಕ ಮಿಕ್ಕತೀರ್ಥಗಳನ್ನು ತೆಗೆದುಕೊಂಡು ಏನು ಮಾಡುವುದು? ಮುಖ್ಯವಾಗಿ ನಮಗೆ ಈ ಪ್ರಭಾಸಕ್ಷೇತ್ರದ ಮಹಿಮೆಯನ್ನು ಹೇಳಿರಿ.

**ಮಹಾದೇವ:-** ಎಲ್ಲ ಕ್ಷೇತ್ರಗಳಲ್ಲಿ ಈ ಪ್ರಭಾಸವು ನನಗೆ ಪ್ರಿಯತಮ. ಇದರ ಪೂರ್ವದಲ್ಲಿ ಸೂರ್ಯನಾರಾಯಣ ದೇವಸ್ಥಾನ, ಪಶ್ಚಿಮದಲ್ಲಿ ಮಾಧವ, ದಕ್ಷಿಣಕ್ಕೆ ಸಮುದ್ರ, ಉತ್ತರದಲ್ಲಿ ಭವಾನಿ. ಇವುಗಳ ಮಧ್ಯದಲ್ಲಿ ಇರುವ ಹನ್ನೆರಡು ಯೋಜನೆ ವಿಸ್ತೀರ್ಣವಾದ ಮಹಾಕ್ಷೇತ್ರವೇ ಪ್ರಭಾಸಕ್ಷೇತ್ರ. ಈ ಕ್ಷೇತ್ರದ ಪ್ರಥಮ ಭಾಗವು ಮಾಹೇಶ್ವರ ಭಾಗ ಎರಡನೇಯದು ವೈಷ್ಣವ. ಭಾಗ ಮೂರನೇಯದು ಬ್ರಹ್ಮಭಾಗ. ಈ ವೈಷ್ಣವ, ಹಾಗೂ ಬ್ರಹ್ಮ ಭಾಗಗಳ ಮಧ್ಯದಲ್ಲಿರುವ ರುದ್ರಭಾಗ ಅಥವಾ ಮಾಹೇಶ್ವರ ಭಾಗದಲ್ಲಿ ಒಂದು ಕೋಟಿತೀರ್ಥಗಳು ಇರುತ್ತವೆ. ಅವುಗಳಲ್ಲಿ ಪ್ರಭಾಸತೀರ್ಥವು ಸರ್ವತೀರ್ಥಗಳಲ್ಲಿ ಅತ್ಯುತ್ತಮ. ಈ ಬ್ರಹ್ಮಾಂಡದಲ್ಲಿ ಒಟ್ಟು ಮೂರುವರೆ ಕೋಟಿ ತೀರ್ಥಗಳು. ಇವುಗಳಲ್ಲೆಲ್ಲ ಗುಪ್ತವಾದ ಸರ್ವಶ್ರೇಷ್ಠ ತೀರ್ಥವೆಂದರೆ ಪ್ರಭಾಸತೀರ್ಥ. ಇಲ್ಲಿಯೇ ನನ್ನ ದಿವ್ಯವಾದ ಲಿಂಗವು ಪ್ರಕಟವಾಗಿದೆ. ಪ್ರಭಾಸಕ್ಷೇತ್ರದಲ್ಲಿ ಕ್ಷೇತ್ರಜ್ಞ ಎಂಬ ಹೆಸರಿನಿಂದ ನೆಲೆನಿಂತ ನನಗೆ ಸೋಮನಾಥ ಎಂದು ಕರೆಯುತ್ತಾರೆ. ಈ ನನ್ನ ಸೋಮನಾಥ ಲಿಂಗವು ಪೂರ್ವಕಾಲದಲ್ಲಿ ಭೈರವಕಲ್ಪದಲ್ಲಿ ಪ್ರಾದುರ್ಭೂತವಾಯಿತು. ಈ ದಿವ್ಯ ಕ್ಷೇತ್ರದಲ್ಲಿ ಸ್ವಯಂಭೂ ಲಿಂಗರೂಪದಿಂದ ಸಾಕ್ಷಾತ್ ಪರಮೇಶ್ವರನಾದ ನಾನು ನಿತ್ಯವೂ ನೆಲೆಸಿರುತ್ತೇನೆ. ನಾನು ಈ ಕ್ಷೇತ್ರದ ದಕ್ಷಿಣದಲ್ಲಿ ವಿಶ್ವನಾಥ ಹಾಗೂ ಉತ್ತರದಲ್ಲಿ ದಂಡಪಾಣಿಯನ್ನು ಸ್ಥಾಪನೆ ಮಾಡಿದ್ದೇನೆ. ಮಹಾರುದ್ರ, ಚಂಡೀಶ, ಘಂಟಾಕರ್ಣ, ಗೋಮುಖ, ವಿನಾಯಕ, ಏಕಾಕ್ಷ, ದುಂದುಭಿ, ತಾಲದಂಡ, ವೀರಭದ್ರ ಮುಂತಾದ ಗಣಾಧ್ಯಕ್ಷರನ್ನು ಈ ಕ್ಷೇತ್ರಪಾಲನೆಗಾಗಿ ನಾನು ನಿಯಮಿಸಿದ್ದೇನೆ. ಈ ಸೋಮನಾಥನ ಭಕ್ತಿಯುಕ್ತವಾದ ಆರಾಧನೆಯಿಂದ ಬ್ರಾಹ್ಮಣನಿಂದ ಚಾಂಡಾಲರವರೆಗೆ ಎಲ್ಲಜಾತಿಯ ಜನರೂ ಉದ್ಧಾರ ಹೊಂದುವರು.

## ಸೋಮನಾಥ ಎಂಬ ಹೆಸರು ಬರಲು ಕಾರಣ

**ಸೂತ:-** ಪಾರ್ವತಿಯು ಈ ಪ್ರಭಾಸದ ಮಹಿಮೆಯನ್ನು ಕೇಳಿ ಪತಿ ಪರಮೇಶ್ವರನನ್ನು ಕುರಿತು ಮತ್ತೆ ಪ್ರಶ್ನೆ ಮಾಡಿದಳು- ''ದೇವ ದೇವ, ಪ್ರಭಾಸಕ್ಷೇತ್ರದಲ್ಲಿ ಉದ್ಭೂತವಾದ ಮಹಾದೇವನ ಈ ಸ್ವಯಂಭೂಲಿಂಗಕ್ಕೆ ಸೋಮೇಶ್ವರ ಅಥವಾ ಸೋಮನಾಥ ಎಂಬ ಹೆಸರು ಬರಲು ಏನು ಕಾರಣ?

**ಮಹಾದೇವ:-** ದೇವಿ, ಒಂದೊಂದು ಬ್ರಹ್ಮಕಲ್ಪದ ಅನಂತರ ಮೊದಲಿನ ಬ್ರಹ್ಮ ಮುಕ್ತನಾಗಿ ಹೊಸ ಬ್ರಹ್ಮನ ಆಳಿಕೆ ಆರಂಭವಾಗುವುದು. ಬ್ರಹ್ಮನು ಬದಲಾದ ಕೂಡಲೇ ಈ ಪ್ರಭಾಸಕ್ಷೇತ್ರದಲ್ಲಿದ್ದ ನನ್ನ ಸ್ವಯಂಭೂಲಿಂಗದ ಹೆಸರು ಕೂಡ ಬದಲಾಗುವುದು. ಈಗ ಆರು ಬ್ರಹ್ಮರ ಆಳಿಕೆ ಮುಗಿದು ಏಳನೇ ಬ್ರಹ್ಮನ ಶಾಸನ ಕಾಲ ನಡೆದಿದೆ. ಈ ಬ್ರಹ್ಮನ ಹೆಸರು ಶತಾನಂದ. ಇದಕ್ಕೂ ಹಿಂದಿನ ಬ್ರಹ್ಮನ ಹೆಸರು ವಿರಿಂಚಿ. ವಿರಿಂಚಿ ಬ್ರಹ್ಮನಾಗಿ ಇದ್ದಾಗ ಈ ಪ್ರಭಾಸಕ್ಷೇತ್ರದ ಸೋಮನಾಥನಿಗೆ ಮೃತ್ಯುಂಜಯ ಎಂದು ಹೆಸರಿದ್ದಿತು.

ಎರಡನೆಯ ಪದ್ಮಭೂ ಎಂಬ ಹೆಸರಿನ ಬ್ರಹ್ಮನ ಶಾಸನ ಕಾಲದಲ್ಲಿ ಈ ಸ್ವಯಂಭೂಲಿಂಗದ ಹೆಸರು ಕಾಲಾಗ್ನಿರುದ್ರ. ಮೂರನೇಯ ಬ್ರಹ್ಮನಿಗೆ ಸ್ವಯಂಭೂ ಎಂದೇ ಹೆಸರು ಆ ತೃತೀಯ ಬ್ರಹ್ಮಕಲ್ಪದಲ್ಲಿ ಸೋಮನಾಥನ ಹೆಸರು ಅಮೃತೇಶ. ನಾಲ್ಕನೆಯ ಪರಮೇಷ್ಠಿ ಎಂಬ ಬ್ರಹ್ಮನ ಕಾಲದಲ್ಲಿ ಈ ಸೋಮೇಶ್ವರನ ಹೆಸರು ಕೃತ್ತಿವಾಸ. ಆರನೇಯ ಬ್ರಹ್ಮನೇ ಹೇಮಗರ್ಭ. ಅವನ ಕಾಲದಲ್ಲಿ ಈ ಸೋಮನಾಥ ಭೈರವನಾಥ. ಈ ಬ್ರಹ್ಮಪದವಿಯಲ್ಲಿದ್ದ ಏಳನೇಯ ಬ್ರಹ್ಮನಿಗೆ ಶತಾನಂದ ಎಂದು ಹೆಸರು. ಈ ಕಾಲದಲ್ಲಿ ಈ ನನ್ನ ಲಿಂಗವು ಸೋಮನಾಥ ಎಂದು ಪ್ರಸಿದ್ಧವಾಗಿದೆ. ಇದರ ಮುಂದಿನ ಆಗಾಮಿ ಕಲ್ಪದಲ್ಲಿ ಚತುರ್ಮುಖ ಎಂಬ ಹೆಸರಿನವ ಬ್ರಹ್ಮ ಆಗುವನು. ಆ ಕಾಲದಲ್ಲಿ ಸೋಮೇಶ್ವರ ದೇವನ ಹೆಸರು ಪ್ರಾಣನಾಥ ಎಂದು ಆಗುವುದು. ಯಾವ ಯಾವ ಹೊಸ ಹೊಸ ಬ್ರಹ್ಮರು ಪ್ರಳಯಕಾಲದ ಅನಂತರದಲ್ಲಿ ಮೈದೋರುವರೋ ಅವರೆಲ್ಲರೂ ಎಂಟು ವರ್ಷಗಳವರೆಗೆ ಈ ಸೋಮೇಶ್ವರದೇವನ ಹೆಸರಿನಿಂದಲೇ ಜೀವಿಸುತ್ತಾರೆ.

**ಪಾರ್ವತಿ:-** ಪ್ರಿಯದೇವ, ಮಾನವರ ಮೇಲೆ ದಯೆದೋರಲು ನೀವು ಮೇಲಿಂದ ಮೇಲೆ ಭೂಲೋಕದಲ್ಲಿ ಪ್ರಕಟರಾಗುವಿರಿ. ಆಗೆಲ್ಲ ನಾನು ಯಾವ ಯಾವ ಹೆಸರುಗಳಿಂದ ನಿಮ್ಮನ್ನು ಪತಿಪರಮೇಶ್ವರ ಎಂದು ಸೇವಿಸುತ್ತೇನೆ?

**ಮಹಾದೇವ:-** ಆದಿಕಲ್ಪದಲ್ಲಿ ನೀನು ಜಗನ್ಮಾತಾ ಎಂಬ ಹೆಸರಿನಿಂದ ನನ್ನನ್ನು ಸೇವಿಸಿದೆ. ಎರಡನೇಯ ಕಲ್ಪದಲ್ಲಿ ಜಗದ್‌ಯೋನಿ ಮುಂದಿನ ಎಲ್ಲ ಕಲ್ಪಗಳಲ್ಲಿ ಕ್ರಮವಾಗಿ ಶಾಂಭವೀ, ವಿಶ್ವರೂಪಿಣೀ, ನಂದಿನೀ ಗಣಾಂಬಿಕಾ, ವಿಭೂತಿ, ಸುಭ್ರು, ಆನಂದಾ, ವಾಮಲೋಚನಾ, ಪಿತೃಕಲ್ಪಾ, ಮುಂತಾದ ಬಗೆಬಗೆಯ ನಾಮಗಳಿಂದ ನೀನು ನನ್ನನ್ನು ಸೇವಿಸುವಿ. ಈ ಎಲ್ಲ ನಿನ್ನ ಅನ್ವರ್ಥಕ ಅವತಾರಗಳ ನಂತರ ದಕ್ಷ ಪ್ರಜಾಪತಿಯ ಮಗಳಾಗಿ ಸತೀ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದೆ. ಯಜ್ಞ ಸಮಯದಲ್ಲಿ ಆ ದಕ್ಷನು ಅವಮಾನಿಸಿದ್ದರಿಂದ ಹಾಗೂ ಶಿವನಿಂದೆಯನ್ನು ಮಾಡಿದ್ದರಿಂದ ನೀನು ಅದನ್ನು ಕೇಳಲಾರದೇ ನಿನ್ನ ಶರೀರ ತ್ಯಾಗಮಾಡಿದೆ. ಅನಂತರ ವರಾಹಕಲ್ಪ ಬಂದ ಬಳಿಕ ಗಿರಿರಾಜನಾದ ಹಿಮವಂತನು ನಿನ್ನನ್ನು ಆರಾಧಿಸಿ ಪುತ್ರಿಯರೂಪದಿಂದ ಪಡೆದನು. ಅನಂತರ ನೀನು ಘೋರ ತಪಸ್ಸನ್ನು ಮಾಡಿ ನನ್ನನ್ನು ಪತಿರೂಪದಿಂದ ಹೊಂದಿ ಪಾರ್ವತೀ ಎಂಬ ಹೆಸರಿನಿಂದ ಪ್ರಸಿದ್ಧಳಾಗಿರುವಿ. ಮುಂದೆ ಈ ಕಲ್ಪಕಾಲದವರೆಗೆ ನಾನು ನಿನ್ನೊಡನೆ ಈ ಕ್ಷೇತ್ರದಲ್ಲಿ ಸೋಮನಾಥ ರೂಪದಿಂದ ಇಲ್ಲಿ ನೆಲೆಸಿದ್ದೇನೆ. ದ್ವಾಪರದಲ್ಲಿ ಮಹಿಷಾಸುರನನ್ನು ವಧಿಸಲಿಕ್ಕಾಗಿ ಭಗವಾನ್ ಶ್ರೀವಿಷ್ಣುವಿನೊಂದಿಗೆ ಕೃಷ್ಣಪಿಂಗಲಾ ಎಂಬ ಹೆಸರಿನಿಂದ ನೀನು ಪ್ರಕಟಳಾದೆ. ಅಂದಿನಿಂದ ನೀನು ಕಾತ್ಯಾಯಿನಿ, ದುರ್ಗಾ, ಮುಂತಾದ ನಾಮಗಳಿಂದ ಒಂಭತ್ತು ಕೋಟಿ ರೂಪಗಳಲ್ಲಿ ಈ ವಸುಧಾತಳದ ಮೇಲೆ ಪ್ರಕಟಳಾಗಿರುವಿ.

ವಜ್ರಿಣೀನದಿಯ ಪೂರ್ವಕ್ಕೆ ನ್ಯಂಕುಮತಿನದಿಯ ವರೆಗೆ ನಾಲ್ಕು ಯೋಜನ ಅಗಲ, ಐದು ಯೋಜನ ಉದ್ದವಾದ ಸೋಮನಾಥನ ಗರ್ಭಗೃಹ. ಪಶ್ಚಿಮದಿಕ್ಕಿನ ಸಮುದ್ರದ ಸಮೀಪದಲ್ಲಿ ಕೃತಸ್ಮರಸ್ಥಾನದ ಮುಂದೆ ನೂರು ಬಿಲ್ಲಿನ ಅಂತರದಲ್ಲಿ ನನ್ನ ಸೋಮನಾಥ ಎಂಬ ಸ್ವಯಂಭೂಲಿಂಗ ಇರುತ್ತದೆ. ಪೂರ್ವಕಲ್ಪದಲ್ಲಿ ಈ ಶಿವಲಿಂಗವು ಸಪ್ತಪಾತಾಲಗಳ ಭೇದನಮಾಡಿ ಉದ್ಭೂತವಾಗಿದ್ದಿತು. ಕೋಟಿಸೂರ್ಯರಿಗೆ ಸಮನಾಗಿತ್ತು ಈ ಲಿಂಗದ ಕಾಂತಿ. ಇದಕ್ಕೆ ಆ ಕಾಲದಲ್ಲಿ ಕಾಲಾಗ್ನಿರುದ್ರ ಎಂದು ಕರೆಯುತ್ತಿದ್ದರು. ದಕ್ಷಿಣ

ಸಮುದ್ರದಿಂದ ಉತ್ತರದ ಸೂರ್ಯಪುತ್ರಿಯಾದ ಕೌರವೇಶ್ವರೀ ನದಿಯವರೆಗೆ ಇರುವ ಕ್ಷೇತ್ರದಲ್ಲಿ ನಾನು ಕ್ಷೇತ್ರಜ್ಞ ರೂಪದಿಂದ ವಾಸಮಾಡಿದ್ದೇನೆ. ಇದು ಸೂರ್ಯ ನಾರಾಯಣನ ಕಿರಣಗಳಿಂದ ಎಲ್ಲೆಡೆಗೂ ಪ್ರಭಾಸಿತವಾಗಿದೆ. ಆದ್ದರಿಂದ ಇದಕ್ಕೆ ಪ್ರಭಾಸಕ್ಷೇತ್ರ ಎಂಬ ಹೆಸರು ಬಂದಿದೆ. ಇಲ್ಲಿ ಪ್ರತಿಷ್ಠಿತನಾದ ಅರ್ಕ ಎಂಬ ಹೆಸರಿನ ಸೂರ್ಯನದರ್ಶನ ಮಾಡಿಕೊಂಡವರು ಸರ್ವಪಾಪಗಳಿಂದ ಮುಕ್ತರಾಗುವರು. ಈ ಸೂರ್ಯಮಂದಿರದ ಸಮೀಪದ ಆಗ್ನೇಯ ಕೋಣದಲ್ಲಿ ಸಿದ್ದೇಶರ ಎಂಬ ಶಿವಲಿಂಗವು ಶೋಭಿಸುತ್ತಲಿದೆ. ಸತ್ಯಯುಗದಲ್ಲಿ ಜೈಗೀಷವ್ಯ ಮುನಿಯು ಇದರ ಆರಾಧನೆಯಿಂದ ಸಿದ್ಧಿ ಪಡೆದ್ದರಿಂದ ಈ ಸಿದ್ಧೇಶ್ವರನನ್ನು ಜೈಗೀಷವ್ಯೇಶ್ವರ ಎಂದೂ ಕರೆಯುತ್ತಿದ್ದರು. ಕಲಿಯುಗದಲ್ಲಿ ಸಿದ್ದೇಶ್ವರನೆಂಬ ಹೆಸರಿನಿಂದ ಈ ಲಿಂಗವು ಪ್ರಸಿದ್ಧವಾಗುತ್ತದೆ. ಪೂರ್ವಕಾಲದಲ್ಲಿ ಮಂದೇಹ, ಶಾಲಕಟಾಂಕಟ ಎಂಬ ರಾಕ್ಷಸರು ಸೂರ್ಯನ ತೇಜಸ್ಸಿನಿಂದ ದಗ್ಧರಾಗಿ ಸೂರ್ಯಮಂದಿರದ ನೈಋತ್ಯ ಕೋಣೆಯಲ್ಲಿರುವ ಪಾತಾಳದಲ್ಲಿ ಓಡಿ ಅಡಗಿದರು. ಪೂರ್ವಕಲ್ಪದಲ್ಲಿ ಮಹೋದಯ ಎಂಬ ಹೆಸರಿನ ಒಂದು ಶಿವಲಿಂಗವು ಸ್ವಯಂ ಪ್ರಕಟವಾಯಿತು. ಮಹಾತ್ಮಾ ಜೈಗೀಷವ್ಯ ಮುನಿಗಳು ಅದರ ಪೂಜೆಯನ್ನು ಮಾಡಲು ಮೊದಲು ಮಾಡಿದರು. ಮೈ ತುಂಬಾ ಬೂದಿ ಬಳಿದುಕೊಂಡು ಬೂದಿಯಲ್ಲಿಯೇ ಕುಳಿತು ಬೂದಿಯಲ್ಲಿಯೇ ಮಲಗುವ ಆ ಮುನಿಯು ಜಪ, ತಪ, ಧ್ಯಾನ ಗಾನ ನೃತ್ಯಗಳಿಂದ ಮಹಾದೇವನನ್ನು ಸಂತೋಷಪಡಿಸಿದರು. ಆಗ ಆ ಮುನಿಯ ಮೇಲೆ ಪ್ರಸನ್ನನಾಗಿ ಶಿವನು ಅರ್ಥಾತ್ ನಾನು ಆ ಮುನಿಗೆ ಯೋಗಶಾಸ್ತ್ರದಲ್ಲಿ ಅಪ್ರತಿಮ ಪಾಂಡಿತ್ಯವನ್ನು ದಯಪಾಲಿಸಿದೆನು. ನನ್ನ ದಯೆಯಿಂದ ಆ ಮುನಿಯು ಮುಂದೆ ಜಗತ್ತಿನಲ್ಲಿ ಯೋಗಾಚಾರ್ಯ ಎಂದು ಹೆಸರುವಾಸಿಯಾದನು. ಕಲಿಯುಗ ಬಂದ ಬಳಿಕ ಎಂಭತ್ತೆಂಟುಸಾವಿರ ಊರ್ಧ್ವರೇತಸ್ಕರಾದ ಮಹರ್ಷಿಗಳು ಹತ್ತುಸಾವಿರ ವರ್ಷ ತಪಸ್ಸು ಮಾಡಿ ಪ್ರಮೋದಮಯೀ ಎಂಬ ಸಿದ್ಧಿಯನ್ನು ಪಡೆದರು. ಅಂದಿನಿಂದ ಆ ಜೈಗೀಷವ್ಯೇಶ್ವರ ಲಿಂಗವು ಸಿದ್ಧೇಶ್ವರ ಎಂಬ ಹೆಸರಿನಿಂದ ಪ್ರಖ್ಯಾತವಾಯಿತು.

**ಪಾರ್ವತೀ:-** ಜಗದೀಶ್ವರ! ಪ್ರಭಾಸಕ್ಷೇತ್ರದಲ್ಲಿ ಸೋಮನಾಥನ ಸ್ಥಾಪನೆ ಎಂದು ಆಯಿತು? ಚಂದ್ರನು ಆ ಸೋಮನಾಥನನ್ನು ಎಂತು ಆರಾಧಿಸಿದನು?

**ಮಹಾದೇವ:-** ಪ್ರಿಯೆ, ವೈವಸ್ವತಮನ್ವಂತರದ ಹತ್ತನೇ ತ್ರೇತಾಯುಗದಲ್ಲಿ ಅತ್ರಿ ಅನುಸೂಯಾ ದಂಪತಿಗಳಿಂದ ದತ್ತ, ದುರ್ವಾಸ, ಚಂದ್ರ ಮೂವರೂ ಹುಟ್ಟಿದರು. ಆಗ ಚಂದ್ರನು ಒಂದು ಸಾವಿರ ವರ್ಷ ತಪಸ್ಸು ಮಾಡಿ ಶಂಕರನನ್ನು ಅರ್ಥಾತ್ ನನ್ನನ್ನು ಸಾಕ್ಷಾತ್ಕರಿಸಿಕೊಂಡ. ಮತ್ತು ಬ್ರಹ್ಮದೇವನ ಕಡೆಯಿಂದ ನನ್ನ ಶಿವಲಿಂಗವನ್ನು ಪ್ರತಿಷ್ಠಾಪನೆ ಮಾಡಿಸಿದ. ಅನಂತರ ಅವನು ಮತ್ತೆ ಸಾವಿರ ವರ್ಷ ತಪಸ್ಸುಮಾಡಿ ಶಿವನ ವಿಶೇಷ ಅನುಗ್ರಹವನ್ನು ಪಡೆದ. ಆದರಿಂದ ಸುಪ್ರಸನ್ನನಾದ ನಾನು ಚಂದ್ರನಿಗೆ ಹೇಳಿದೆ.

**ಮಹಾದೇವ:-** "ಚಂದ್ರ, ಈ ಲಿಂಗದಲ್ಲಿ ನಾನು ಮೊದಲಿನಿಂದಲೂ ಇದ್ದೇನೆ. ನಿನ್ನ ಈ ಆರಾಧನೆಯ ಫಲವಾಗಿ ನಾನು ವಿಶೇಷರೂಪದಿಂದ ನನ್ನ ಹೆಂಡತಿಯಾದ ಉಮಾದೇವಿ ಸಹಿತವಾಗಿ ಇಲ್ಲಿ ನಿರಂತರ ನೆಲೆಸುವೆನು. ನನ್ನ ವಿಶೇಷ ಅನುಗ್ರಹದಿಂದ ನಿನಗೆ ಇಂಥ ದಿವ್ಯ ಕಾಂತಿಯ ಪ್ರಭೆಯು ಪ್ರಾಪ್ತವಾಗಿದೆ. ಈ ಕ್ಷೇತ್ರಕ್ಕೆ ಪ್ರಭಾಸ ಎಂದು ಹೆಸರು ಬರಲು ಇದೂ ಒಂದು ಕಾರಣ. ಸೋಮ ಎಂಬ ಹೆಸರಿನ ನೀನು ನನ್ನನ್ನು ಸ್ಥಾಪನೆ ಮಾಡಿದ್ದರಿಂದಲೂ

ಉಮಾದೇವಿಯ ನಾಥನಾದ ನಾನು ಉಮೆಯಿಂದ ಸಹಿತನಾಗಿ ಇಲ್ಲಿ ನೆಲೆಸಿದ್ದರಿಂದಲೂ ಇದಕ್ಕೆ ಸೋಮನಾಥ ಎಂದು ಹೆಸರು ಬಂದಿರುತ್ತದೆ.'' ಹೀಗೆ ಹೇಳಿ ಶಂಕರನು ಮತ್ತೆ ಆ ಲಿಂಗದಲ್ಲಿಯೇ ಲೀನನಾದನು. ಮುಂದೆ ಈ ಸೋಮನಾಥನ ಸೇವೆಯಿಂದ ಚಂದ್ರನಿಗೆ ಬಡಿದುಕೊಂಡ ಕ್ಷಯರೋಗದಿಂದ ಮುಕ್ತಿ ಆಯಿತು. ಆಗ ಚಂದ್ರನು ವಿಶ್ವಕರ್ಮನನ್ನು ಕರೆದು ಸೋಮನಾಥ ಸ್ವಾಮಿಗಾಗಿ ಶುದ್ಧಸ್ಪಟಿಕದಂತಿರುವ ಒಂದು ದಿವ್ಯ ಮಂದಿರವನ್ನು ನಿರ್ಮಾಣ ಮಾಡಿಸಿದನು. ಅದರ ನಾಲ್ಕೂ ದಿಕ್ಕುಗಳಲ್ಲಿ ಬೇರೆಬೇರೆ ಹದಿನಾಲ್ಕು ಮಂದಿರಗಳನ್ನು ಬ್ರಹ್ಮಾದಿದೇವತೆಗಳಿಗಾಗಿ ಬೇರೆ ಹತ್ತು ಮಂದಿರಗಳನ್ನು ಸಿದ್ಧಪಡಿಸಿದನು. ವೈವಸ್ವತ ಮನ್ವಂತರದ ತ್ರೇತಾಯುಗದಲ್ಲಿ ಮಂಟಪ, ಗೃಹ, ಸಾವಿರಾರು ವಾಪೀಕೂಪ ತಡಾಗಗಳೊಂದಿಗೆ ಒಂದು ದಿವ್ಯ ನಗರವನ್ನು ನಿರ್ಮಿಸಿ ಯೋಗ್ಯ ಬ್ರಾಹ್ಮಣರನ್ನು ಸೋಮನಾಥನ ಪೂಜೆಗೆಂದು ನಿಯಮಿಸಿದನು. ಈ ಸೋಮನಾಥನ ಸೇವೆ, ಪೂಜೆಮಾಡಿದ ಭಕ್ತರು ಪಾಪಮುಕ್ತರಾಗಿ ಶಿವಸಾನ್ನಿಧ್ಯವನ್ನು ಪಡೆದವರು.

**ಪಾರ್ವತೀ:-** ಪ್ರಾಣನಾಥ, ದೈತ್ಯರು ಹಾಗೂ ದಾನವರು ನಿನ್ನನ್ನು ಆರಾಧಿಸಿ ನಿನ್ನಿಂದ ವರಪಡೆದುಕೊಂಡು ಎಲ್ಲ ಲೋಕಗಳಲ್ಲಿಯೂ ಅನರ್ಥವನ್ನುಂಟು ಮಾಡುವರು. ಇಂದ್ರಾದಿ ದೇವತೆಗಳನ್ನು ಕೂಡ ನೀನಿತ್ತ ವರಗಳ ಬಲದಿಂದ ಸೋಲಿಸಿ ಸ್ಥಾನ ಭ್ರಷ್ಟರನ್ನಾಗಿ ಮಾಡುವರು. ಇಂಥ ದುಷ್ಟ ಪಾಪಿ ದೈತ್ಯರಿಗೆ ನೀನು ಏಕೆ ವರಗಳನ್ನು ನೀಡುವೆ? ನಿನ್ನ ಭಕ್ತರಾದ ಆ ದುರುಳು ದಾನವರನ್ನು ವಿಷ್ಣು ಏಕೆ ಸಂಹರಿಸುವನು?

**ಮಹಾದೇವ:-** ದೇವಿ, ಈ ಜಗತ್ತಿನಲ್ಲಿ ಸಾತ್ವಿಕ, ರಾಜಸ, ತಾಮಸ, ಎಂಬ ಮೂರು ವಿಧರಾದ ಜೀವರು ಇರುತ್ತಾರೆ. ಅವರಲ್ಲಿ ದೈತ್ಯರೆಲ್ಲರೂ ಪ್ರಾಯಃ ತಾಮಸ ಪ್ರಕೃತಿಯವರು. ಅವರು ಭಕ್ತಿಯಿಂದ ನನ್ನನ್ನು ಆರಾಧಿಸಿದಾಗ ನಾನು ಭಕ್ತಿಪರವಶನಾಗಿ ವರಗಳನ್ನು ಕರುಣಿಸುತ್ತೇನೆ. ಆ ವರಗಳಿಂದ ಉನ್ಮತ್ತರಾದ ದೈತ್ಯರು ಲೋಕಹಿಂಸೆಗೆ ತೊಡಗಿದಾಗ ವಿಷ್ಣು ಅವರನ್ನು ಸಂಹರಿಸುತ್ತಾನೆ. ವಿಷ್ಣು ಹಾಗೂ ನನ್ನಲ್ಲಿ ಯಾವುದೇ ಭೇದಬುದ್ಧಿಯಿಲ್ಲ. ವಿಷ್ಣುವಿನ ಚರಣದಿಂದ ಹೊರಟ ಗಂಗೆಯನ್ನು ಭಕ್ತಿಯಿಂದ ನನ್ನ ತಲೆಯ ಮೇಲೆ ಧಾರಣಮಾಡುತ್ತೇನೆ. ಆ ವಿಷ್ಣುವಾದರೂ ಬಹುಕಾಲ ನನ್ನನ್ನು ಕುರಿತು ತಪಸ್ಸುಮಾಡಿ ದೈತ್ಯವಿನಾಶಕವಾದ ಸುದರ್ಶನ ಚಕ್ರವನ್ನು ಪಡೆದಿದ್ದಾನೆ. ಜಗತ್ತಿನ ಸೃಷ್ಟಿ ಸ್ಥಿತಿಗಳಿಗೆ ಕಾರಣನಾದ ಹರಿಯನ್ನು ನಾನು ಭಕ್ತಿಯಿಂದ ಆರಾಧನೆ ಮಾಡುತ್ತೇನೆ. ಮಹಾವಿಷ್ಣುವು ನನ್ನ ಅಪ್ಪಣೆಯನ್ನು ತಲೆಯ ಮೇಲೆ ಹೊತ್ತು ಜಗತ್ತಿನ ರಕ್ಷಣಾಕಾರ್ಯವನ್ನು ಮಾಡುತ್ತಾನೆ ಹಿರಣ್ಯಕಶ್ಯಪನ ಸಂಹಾರಕ್ಕಾಗಿ ನರಸಿಂಹರೂಪ ಧರಿಸಿದ ಶ್ರೀಹರಿಯನ್ನು ನಾನೇ ಶಾಂತಗೊಳಿಸಿದೆ. ಬಾಣಾಸುರನ ರಕ್ಷಣೆಗಾಗಿ ತ್ರಿಶೂಲವನ್ನು ಎತ್ತಿದ ನನ್ನನ್ನು ಮಾನವ ರೂಪದಲ್ಲಿ ಅವತರಿಸಿದ ಆ ಕೃಷ್ಣನು ಲೀಲೆಯಿಂದ ಸ್ತಬ್ಧಗೊಳಿಸಿದನು. ತಿಳುವಳಿಕೆಯಿಲ್ಲದೇ ಇರುವ ಮಾನವರು ನಮ್ಮಿಬ್ಬರಲ್ಲಿ ಭೇದವನ್ನೂ, ನ್ಯೂನಾಧಿಕಭಾವವನ್ನೂ ಬಗೆದು ತೊಂದರೆಗೀಡಾಗುವರು. ನಾನೇ ವಿಷ್ಣುರೂಪವನ್ನು ಧರಿಸಿ ದುಷ್ಟದೈತ್ಯರನ್ನು ಸಂಹಾರಮಾಡುತ್ತೇನೆ. ಆ ದೈತ್ಯರು ನಮ್ಮಿಬ್ಬರ ಪ್ರಭಾವದಿಂದ ತಮ್ಮ ಎಲ್ಲ ಪಾಪ ಕಳೆದುಕೊಂಡು ಬ್ರಹ್ಮರ್ಷಿಗಳ ಕುಲದಲ್ಲಿ ಜ್ಞಾನಿಗಳಾಗಿ ಹುಟ್ಟುತ್ತಾರೆ. ಆಗ ಪಾಶುಪತ ಯೋಗವನ್ನು ಆಶ್ರಯಿಸಿ ಪೂರ್ವಜನ್ಮ ಸಂಸ್ಕಾರದಿಂದ ಮತ್ತೆ ನನ್ನ ಉಪಾಸನೆ ಮಾಡುತ್ತಾರೆ. ಸದಾಚಾರ ಸಂಪನ್ನರಾದ ಅವರು ತೀರ್ಥಯಾತ್ರೆಯ ಪ್ರಸಂಗದಿಂದ ಇಲ್ಲಿ ಈ ಸೋಮನಾಥನ ಪೂಜೆಮಾಡಿ ದುರ್ಲಭವಾದ ಮೋಕ್ಷವನ್ನು ಹೊಂದುತ್ತಾರೆ.

## ಸೋಮವಾರ ವ್ರತದ ವಿಧಿ ಮತ್ತು ಮಹಿಮೆ;

**ಮಹಾದೇವ:-** ಪಾರ್ವತಿ, ಕೈಲಾಸದ ಉತ್ತರ ದಿಕ್ಕಿನಲ್ಲಿ ಇರುವ ನಿಷಧ ಪರ್ವತದ ಶಿಖರದ ಮೇಲೆ ಸ್ವಯಂಪ್ರಭಾ ಎಂಬ ವಿಶಾಲವಾದ ಒಂದು ಪಟ್ಟಣ ಇರುತ್ತದೆ. ಅಲ್ಲಿ ಹಿಂದೆ ಧನವಾಹನ ಎಂಬ ಓರ್ವ ಗಂಧರ್ವರಾಜನು ನೆಲೆಸಿದ್ದನು. ಅವನ ಮಡದಿ ಪರಮ ಪತಿವ್ರತೆ. ರೂಪವತಿ, ಗುಣವತಿ, ವಿನಯವತಿ. ಹೀಗೆ ಆ ದಂಪತಿಗಳು ಅನ್ಯೋನ್ಯ ಅನುರಾಗದಿಂದ ಭೋಗಾನುಭೋಗಗಳನ್ನೆಲ್ಲ ಅನುಭವಿಸುತ್ತ ಇರುವಾಗ ಅವರಿಗೆ ಸಮಯಾನುಸಾರ ಎಂಟು ಜನ ಗಂಡುಮಕ್ಕಳು ಜನಿಸಿದರು. ಕನ್ಯೆ ಮಾತ್ರ ಒಬ್ಬಳೇ. ಅವಳ ಹೆಸರು ಗಂಧರ್ವಸೇನೆ. ಅವಳು ಉಪವರಳಾದಾಗ ಅವಳ ಬಳ್ಳಿ ಮೈಯಲ್ಲಿ ಸೌಂದರ್ಯದ ಸಹಸ್ರಾರವೇ ಅರಳಿ ನಿಂತಿತ್ತು. ತಂದೆಯ ಅಪ್ಪಣೆಯಿಂದ ಅವಳು ತನ್ನ ಗೆಳತಿಯರ ಜೊತೆ ಉಪವನಗಳಲ್ಲಿ ಸ್ವಚ್ಛಂದವಾಗಿ ಆನಂದದಿಂದ ಸಂಚರಿಸುತ್ತಿದ್ದಳು. ಸಖಿಯರೊಂದಿಗೆ ಬಗೆ ಬಗೆಯ ಆಟವಾಡುತ್ತಿದ್ದಳು. ಹರೆಯದ ಸಿರಿಸೂಸುವ ಅವಳ ಲಾವಣ್ಯ ತಾರುಣ್ಯಗಳನ್ನು ಕಂಡು ಚಿಂತೆಯಾಯಿತು ಅವಳ ತಾಯಿತಂದೆಗಳಿಗೆ. ಒಂದು ದಿನ ಧನವಾಹನನು ಮಗಳನ್ನು ಕರೆದು ಹೇಳಿದ- "ವತ್ಸೇ, ನಮ್ಮ ಗಂಧರ್ವ ಕುಲದಲ್ಲಿ ನಿನ್ನ ಮನಸ್ಸಿಗೆ ಮೆಚ್ಚಿಗೆಯಾಗುವ ವರ ಯಾರು ಹೇಳು. ನೀನು ಬಯಸಿದ ವರನಿಗೇ ನಿನ್ನನ್ನು ಮದುವೆ ಮಾಡಿಕೊಡುತ್ತೇನೆ.

**ಗಂಧರ್ವಸೇನಾ:-** ಪೂಜ್ಯ ತಂದೆಯೇ, ಈ ಮೂರು ಲೋಕಗಳಲ್ಲಿ ನನ್ನ ಸೌಂದರ್ಯದ ಕೋಟಿ ಅಂಶಕ್ಕೆ ಸರಿಸಾಟಿಯಾಗುವ ಒಬ್ಬನಾದರೂ ಈ ಪ್ರಪಂಚದ ಮಾನವರಲ್ಲಿ ಇರುವನೇ? ನನ್ನ ಸುಸ್ವರೂಪ ಹಾಗೂ ಸೌಂದರ್ಯಗಳಿಗೆ ಸರಿತೂಗುವ ವ್ಯಕ್ತಿಯಾರಾದರೂ ಇದ್ದರೆ ಕರೆತನ್ನಿ. ನಾನು ವಿಚಾರಮಾಡುತ್ತೇನೆ." ಮಗಳ ಈ ಸೌಂದರ್ಯದ ಮದದಿಂದ ತುಂಬಿತುಳುಕುವ ಅಹಂಕಾರದ ಮಾತು ಆ ತಾಯಿ ತಂದೆಗಳಿಗೆ ಎಳ್ಳಷ್ಟೂ ಸರಿಬರಲಿಲ್ಲ.

ಮುಂದೆ ಒಂದು ದಿನ ವಸಂತಮಾಸದ ಆವಿರ್ಭಾವ. ವನ, ಉಪವನ, ಗ್ರಾಮ ನಗರ ಧಾಮಾರಾಮಗಳಲ್ಲೆಲ್ಲ ಚಿಗುರು ಹೊಗರು. ಸುಗಂಧದ ಅಂಜಲಿಯನ್ನು ಹೊತ್ತು ಮುದಮಂದವಾಗಿ ತಂಗಾಳಿ ತೀಡುತ್ತಲಿತ್ತು. ಗಂಧರ್ವಸೇನೆಯು ತನ್ನ ಗೆಳತಿಯರೊಂದಿಗೆ ಮನೋಹರವಾದ ಹೂವಿನ ಭಾರದಿಂದ ತೂಗಿ ತೊನೆದಾಡುವ ಉಪವನದ ಬಳ್ಳಿವಾಡದಲ್ಲಿ ಆಟವಾಡುತ್ತಲಿದ್ದಳು. ಅದೇ ಸಮಯದಲ್ಲಿ ಶಿಖಂಡಿ ಎಂಬ ಹೆಸರಿನ ಗಣನಾಯಕ ವಿಮಾನಾರೂಢನಾಗಿ ಅಲ್ಲಿಗೆ ಆಗಮಿಸಿದ. ಆಗ ಸಂಧ್ಯಾಸಮಯ. ಪಡುವಕಡಲಿನ ಅಂಚಿಗೆ ಇಳಿದ ಸೂರ್ಯನ ಅರುಣ ಕಿರಣಗಳಿಂದ ಭೂವಲಯವೆಲ್ಲವೂ ಕುಂಕುಮಾಂಕಿತ. ಆಗ ಗಣನಾಯಕನಾದ ಶಿಖಂಡಿಯು ವಿಮಾನದಿಂದ ಇಳಿದು ಗಂಧರ್ವಸೇನೆ ಇದ್ದಲ್ಲಿಗೆ ಆಗಮಿಸಿದ. ಅವಳು ಶಿಖಂಡಿಯ ಕಡೆಗೆ ಕಣ್ಣೆತ್ತಿ ನೋಡದೇ "ಈ ಪ್ರಪಂಚದಲ್ಲಿ ನನ್ನ ಸೌಂದರ್ಯದ ಕೋಟಿ ಅಂಶಕ್ಕೆ ಸರಿಸಾಟಿಯಾಗುವ ಪುರುಷರು ಇರುವರೆ? ಪ್ರಪಂಚದ ಪುರುಷರೆಲ್ಲರೂ ನನ್ನ ಪಾದ ಪಾಂಸುವಿನ ಪಾಸಂಗಕ್ಕೂ ಹೋಲಲಾರರು" ಎಂದು ನುಡಿದಳು. ಅವಳ ಈ ಗರ್ವಾಂಧ ದುರ್ವಚನವನ್ನು ಕೇಳಿ ಆ ಗಣನಾಯಕನು "ಸೌಂದರ್ಯದ ಈ ದುರಭಿಮನದಿಂದ ನಿನ್ನ ದೇಹವೆಲ್ಲವೂ ಕುಷ್ಠ ರೋಗಿಷ್ಠವಾಗಲಿ" ಎಂದು ಶಪಿಸಿದ. ಶಾಪಾಕ್ಷರಗಳನ್ನು ಕೇಳಿ ಗದುಗುಟ್ಟ ನಡುಗಿ ಹೋದಳು ಆ ಗಂಧರ್ವ ಕನ್ಯೆ. ಪಶ್ಚಾತ್ತಾಪದಿಂದ

ದಗ್ಧಳಾಗಿ ಅವಳು ಆ ಗಣಾಧಿನಾಥನಿಗೆ ನಮಸ್ಕರಿಸಿದಳು ತಪ್ಪನ್ನು ಕ್ಷಮಿಸಬೇಕು ಎಂದು ಕೇಳಿಕೊಂಡಳು. ಅವಳ ಈ ದೀನ ಪ್ರಾರ್ಥನೆಯನ್ನು ಕೇಳಿ ಗಣನಾಯಕನ ಹೃದಯದಲ್ಲಿ ಕರುಣೆಯ ಸೆಲೆಯೊಡೆಯಿತು. ಮೃದುಮಧುರವಾಗಿ ನುಡಿದ ಆ ಶಿಖಂಡಿ.

**ಶಿಖಂಡಿ:-** ಈ ರೋಗ ನಿನ್ನ ಗರ್ವದ ಫಲ. ಮಾನವರು ಎಂದೂ ಮದಾಂಧರಾಗಿ ವರ್ತಿಸಬಾರದು. ಹಿಮಾಚಲದಲ್ಲಿ ಗೋಶೃಂಗ ಎಂಬ ಮಹಾಮುನಿ ಇರುತ್ತಾನೆ. ನಿನಗೆ ಈ ವಿಷಯದಲ್ಲಿ ಆ ಮಹಾಮುನಿಯು ಉಪಕಾರಗೈಯುವನು.

ಹೀಗೆ ಹೇಳಿ ಆ ಗಣನಾಯಕನು ಹೊರಟು ಹೋದನು. ಗಂಧರ್ವ ಸೇನೆಯು ತನ್ನ ತಾಯಿ ತಂದೆಯವರಿಗೆ ನಡೆದ ಸಮಾಚಾರ ತಿಳಿಸಿದಳು. ಆಗಲೇ ಅವಳ ದೇಹವನ್ನೆಲ್ಲ ವ್ಯಾಪಿಸಿಬಿಟ್ಟಿತ್ತು ಆ ಮಹಾರೋಗ. ದುಃಖದಿಂದ ದಗ್ಧರಾದ ಆ ತಂದೆ ತಾಯಿಗಳು ಮಗಳನ್ನು ಕರೆದುಕೊಂಡು ಕೂಡಲೇ ಹಿಮಾಲಯ ಪರ್ವತಕ್ಕೆ ನಡೆದರು. ಅಲ್ಲಿ ಕಷ್ಟಪಟ್ಟು ಹುಡುಕಿ ತನ್ನ ಆಶ್ರಮದ ಅಂಗಳದಲ್ಲಿ ತಪೋನಿರತನಾದ ಗೋಶೃಂಗ ಮುನಿಯನ್ನು ಸಂಧಿಸಿದರು. ಮಗಳ ದುರವಸ್ಥೆಯನ್ನು ಶಾಪವೃತ್ತಾಂತವನ್ನು ಬಿನ್ನವಿಸಿ ಅದರ ಪರಿಹಾರಕ್ಕೆ ಉಪಾಯವನ್ನು ಕೇಳಿದರು. ಆ ಬಾಲಿಕೆಯ ಬಾಲಿಶತನದಿಂದ ಬಂದು ಬಡಿದುಕೊಂಡ ಆ ಹಿರಿ ಬೇನೆಯ ಬವಣೆಗಳನ್ನು ಕಂಡು ಮರುಕಗೊಂಡ ಆ ಗೋಶೃಂಗಮುನಿಗಳು ವಾತ್ಸಲ್ಯದಿಂದ ನುಡಿದರು.

**ಗೋಶೃಂಗ:-** ಭಾರತ ವರ್ಷದ ಸಮುದ್ರದ ಸಮೀಪದಲ್ಲಿ ವಿರಾಜಮಾನವಾದ ಸೋಮನಾಥನ ಆರಾಧನೆಯಿಂದ ಮಾತ್ರ ಈ ರೋಗ ನಿವಾರಣೆ ಸಾಧ್ಯ. ಅಲ್ಲಿ ಹೋಗಿ ಒಪ್ಪತ್ತು ಊಟ ಮಾಡಿ ತಪ್ಪದೇ ಸೋಮನಾಥನ ಪೂಜೆಯನ್ನು ಮಾಡು. ಇದರಿಂದ ನಿನ್ನ ಮಗಳ ಈ ಭೀಕರ ರೋಗವು ತಾನಾಗಿಯೇ ತೊಲಗಿ ಹೋಗುವುದು.

**ಗಂಧರ್ವರಾಜ:-** ಪೂಜ್ಯರೇ, ಈ ಸೋಮವಾರ ವ್ರತವನ್ನು ಹೇಗೆ ಆಚರಿಸುವುದು? ಅನುಷ್ಠಾನ ಸಮಯ ಯಾವುದು?

**ಗೋಶೃಂಗ:-** ಈ ವ್ರತವನ್ನು ಕೈಕೊಂಡವರು ಬೆಳಗಿನ ಬ್ರಾಹ್ಮೀಮೂಹೂರ್ತ ದಲ್ಲಿಯೇ ಎದ್ದು ಶೌಚ, ದಂತಧಾವನ, ಸ್ನಾನ, ಸಂಧ್ಯೆ, ದೇವಪೂಜೆ ಮುಂತಾದ ನಿತ್ಯ ಕರ್ಮಗಳನ್ನು ಯಥಾಪ್ರಕಾರ ಮಾಡಬೇಕು. ಅನಂತರ ಶುದ್ಧಸ್ಥಳದಲ್ಲಿ ಕಲಶಸ್ಥಾಪನೆಮಾಡಿ ಅದರ ಮೇಲೆ ಒಂದು ಪಾತ್ರವನ್ನು ಇರಿಸಬೇಕು. ಅದರ ನಟ್ಟನಡುವೆ ಜಟಾಮುಕುಟ ಮಂಡಿತ ಸರ್ವಾಭರಣಭೂಷಿತ ಶ್ವೇತವಸ್ತ್ರಧಾರಿ ಅರ್ಧನಾರೀಶ್ವರ ಶಿವನ ಪ್ರತಿಮೆಯನ್ನು ಸ್ಥಾಪಿಸಬೇಕು. ಅನಂತರ ಶಿವಪಾರ್ವತಿಯರ ಪೂಜೆಯನ್ನು ವಿಧಿಪೂರ್ವಕವಾಗಿ ಮಾಡಿ ಭಕ್ಷಭೋಜ್ಯಗಳನ್ನು ನಿವೇದಿಸಬೇಕು. ಧೂಪದೀಪ ನೀರಾಜನ ಮಂಗಳಾರತಿ ಮುಂತಾದ ಎಲ್ಲ ಷೋಡಶೋಪಚಾರ ಪೂಜೆಗಳನ್ನು ಶಾಸ್ತ್ರೋಕ್ತ ಪದ್ಧತಿಯಿಂದ ಮಾಡಬೇಕು.

**ಓಂ ನಮಃ ಪಂಚವಕ್ತ್ರಾಯ ದಶಬಾಹುತ್ರಿನೇತ್ರಿಣೇ ।**
**ದೇವ ಶ್ವೇತವೃಷಾರೂಢ ಶ್ವೇತಾಭರಣ ಭೂಷಿತ ।**
**ಉಮಾದೇಹಾರ್ಧ ಸಂಯುಕ್ತ ನಮಸ್ತೇ ಸರ್ವಮೂರ್ತಯೇ ॥**

ಎಂಬ ಮಂತ್ರದಿಂದ ಸ್ತುತಿಸಿ ನಮಸ್ಕಾರ ಮಾಡಬೇಕು. ಹೀಗೆ ಸಾಯಂಕಾಲದ ವರೆಗೆ ಶಿವನ ಪೂಜೆ, ಭಜನೆ, ಧ್ಯಾನ, ಆರಾಧನೆ, ಗಾಯನ, ನರ್ತನ, ಕೀರ್ತನ ಪಾರಾಯಣಾದಿಗಳಿಂದ ಸೇವೆಗೈದು ರಾತ್ರಿಕಾಲದಲ್ಲಿ ಭೋಜನಮಾಡಬೇಕು. ಅನಂತರ ಮಹಾದೇವರನ್ನು ನೆನೆಯುತ್ತ

ದರ್ಭೆಯ ಚಾಪೆಯ ಮೇಲೆ ಮಲಗಬೇಕು. ಹೀಗೆ ಸೋಮವಾರ ವ್ರತವನ್ನು ಆಚರಿಸುವುದರಿಂದ ಎಲ್ಲ ತರಹದ ಕುಷ್ಠಾದಿರೋಗಗಳು ದೂರವಾಗುವವು. ಎರಡನೇ ಸೋಮವಾರ ಜ್ಯೇಷ್ಠಶಕ್ತಿಯಿಂದ ಯುಕ್ತನಾದ ಶಿವನನ್ನು ಕಮಲಪುಷ್ಪದಿಂದ, ಮೂರನೇ ಸೋಮವಾರ ದಿವ್ಯಪುಷ್ಪದಿಂದ ಸಿದ್ಧಿನಾಮಕ ಶಕ್ತಿ ಸಹಿತನಾದ ಶಿವನನ್ನು, ನಾಲ್ಕನೇ ಸೋಮವಾರ ದಿನ ಉಮಾಸಹಿತನಾದ ಗೌರೀಪತಿಯ ಪೂಜೆಯನ್ನು ದವನ ಮರಗು ಮುಂತಾದವುಗಳನ್ನು ಏರಿಸಿ ಪೂಜೆ ಮಾಡಬೇಕು. ಐದನೇಯ ಸೋಮವಾರ ವಿಭೂತಿಸಹಿತ ಗಣೇಶರನನ್ನು ಕುಂದಕುಸುಮಗಳಿಂದ ಪೂಜಿಸಬೇಕು. ಆರನೇ ಸೋಮವಾರ ಭದ್ರಾಸಹಿತ ಸ್ವರೂಪ ಎಂಬ ಶಿವನನ್ನು ಪೂಜಿಸಬೇಕು. ಏಳನೇಯ ಸೋಮವಾರ ದೀಪ್ತಾ ಎಂಬ ಶಕ್ತಿಯಿಂದ ಸಹಿತನಾದ ಸರ್ವಜ್ಞನನ್ನು ಪೂಜಿಸಬೇಕು. ಎಂಟನೇ ಸೋಮವಾರ ಅಮೋಘಾಶಕ್ತಿಯಿಂದ ಸಹಿತನಾದ ಪರಮೇಶ್ವರನನ್ನು ಪೂಜಿಸಬೇಕು. ಒಂಭತ್ತನೇ ಸೋಮವಾರ ಈ ವ್ರತದ ಉದ್ಯಾಪನೆಯನ್ನು ಮಾಡಬೇಕು. ಸೋಮನಾಥನ ಬಂಗಾರದ ಪ್ರತಿಮೆಯನ್ನು ಹಾಗೂ ಮನೋಮತಿ ಎಂಬ ಶಕ್ತಿಯ ಒಂದು ಸುವರ್ಣ ಪ್ರತಿಮೆಯನ್ನು ಮಾಡಿಸಿ ಅವೆರಡನ್ನೂ ಬಂಗಾರದ ಶಯ್ಯೆಯ ಮೇಲೆ ಸ್ಥಾಪಿಸಬೇಕು. ವಸ್ತ್ರ, ಅಭೂಷಣ, ತಾಂಬೂಲ, ಛತ್ರ, ಚಾಮರ, ದೀಪ, ಗಂಟೆ, ಕನ್ನಡಿ, ಹಾಸಿಗೆ ಮುಂತಾದ ವಸ್ತುಗಳನ್ನು ಸೋಮನಾಥನ ಪ್ರೀತಿಯ ಉದ್ದೇಶದಿಂದ ಪುರಾಣ ಪ್ರವಚನ ಮಾಡುವ ಆಚಾರ್ಯರಿಗೆ ದಾನಕೊಡಬೇಕು. ಹೋಮಹವನ ಮಾಡಿಸಬೇಕು. ಅಂದು ರಾತ್ರಿ ಜಾಗರಣವನ್ನು ಮಾಡಬೇಕು. ಸೋಮನಾಥ ಸ್ವಾಮಿಯನ್ನು ನೆನೆಯುತ್ತ ಅಂದು ಕೇವಲ ಪಂಚಗವ್ಯವನ್ನು ಮಾತ್ರ ಪ್ರಾಶನ ಮಾಡಿ ಇರಬೇಕು. ಮರುದಿನ ಪ್ರಾತಃಕಾಲದಲ್ಲಿ ಸ್ನಾನಮಾಡಿ ಸೋಮನಾಥನ ಪೂಜೆಯನ್ನು ವಿಧಿಪೂರ್ವಕವಾಗಿ ಮಾಡಬೇಕು. ಅನಂತರ ಹಾಲು, ಸಕ್ಕರೆಗಳಿಂದ ತಯಾರಿ ಮಾಡಿದ ಬಗೆ ಬಗೆಯ ಭಕ್ಷ್ಯಭೋಜ್ಯಗಳನ್ನು ಒಡಿಸಿ ಒಂಭತ್ತು ಜನ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಪ್ರತಿಯೊಬ್ಬರಿಗೂ ಜೋಡು ಬಟ್ಟೆ ಒಂದೊಂದು ಹಸುಗಳನ್ನು ದಾನ ನೀಡಬೇಕು. ಇಂಥ ಸೋಮವಾರ ವ್ರತವನ್ನು ಭಕ್ತಿಯಿಂದ ಮಾಡಿದ ಮನುಷ್ಯನು ಧನ, ಧಾನ್ಯ, ಅಧಿಕಾರ, ಐಶ್ವರ್ಯ, ಸಂತಾನ, ಸಂಪತ್ತು, ಮಡದಿ ಮಕ್ಕಳು ಮನೆಮಾರು ಮುಂತಾದವುಗಳನ್ನೆಲ್ಲ ಪರ್ಯಾಪ್ತ ಪ್ರಮಾಣಗಳಲ್ಲಿ ಪಡೆದು ಇಹಲೋಕದಲ್ಲಿ ಇರುವವರೆಗೆ ಆನಂದದಿಂದ ಇದ್ದು ಪಶ್ಚಾತ್ ಶಿವಸಾರೂಪ್ಯವನ್ನು ಹೊಂದುವನು.

**ಮಹಾದೇವ:-** ಗೋಶೃಂಗ ಮುನಿಯ ಹೇಳಿಕೆಯಂತೆ ಗಂಧರ್ವ ರಾಜನಾದ ಧನವಾಹನನು ತನ್ನ ಮಗಳೊಂದಿಗೆ ಸೋಮನಾಥನ ಪೂಜೆಯನ್ನು ಮಾಡಿದನು. ಸೋಮವಾರ ವ್ರತವನ್ನು ವಿಧಿಪೂರ್ವಕವಾಗಿ ಆಚರಿಸಿದನು. ಆ ತಂದೆ ಮಕ್ಕಳ ಭಕ್ತಿಯುಕ್ತವಾದ ಈ ಸೇವೆಯಿಂದ ಸೋಮನಾಥನು ಪರಮ ಪ್ರೀತನಾದನು. ಅವನ ದಯೆಯಿಂದ ಮಗಳಿಗೆ ಅಂಟಿಕೊಂಡ ಕುಷ್ಠರೋಗವು ಸಂಪೂರ್ಣವಾಗಿ ನಷ್ಟವಾಗಿ ಹೋಯಿತು. ಅದರ ಕಾಮನೆಗಳೆಲ್ಲವೂ ಸಿದ್ಧಿಸಿದವು. ಸ್ವಯಂ ಸೋಮನಾಥ ಸ್ವಾಮಿಯು ಸುಪ್ರಸನ್ನನಾಗಿ ಅವರಿಗೆ ಪ್ರತ್ಯಕ್ಷ ದರ್ಶನವಿತ್ತನು. ಅವರು ಬೇಡಿದ ವರಗಳನ್ನು ದಯಪಾಲಿಸಿದನು. ಮಹಾದೇವರಿಂದ ವರಪಡೆದುಕೊಂಡು ಧನವಾಹನ ಗಂಧರ್ವನು ಕೃತಾರ್ಥ ನಾದನು. ಸೋಮನಾಥನ ಉತ್ತರಭಾಗದಲ್ಲಿ ಗಂಧರ್ವೇಶ್ವರ ಎಂಬ ಶಿವಲಿಂಗವನ್ನು ಸ್ಥಾಪಿಸಿದನು. ಗಂಧರ್ವಸೇನೆಯು ವಿಮಲೇಶ್ವರ ಎಂಬ ಶಿವಲಿಂಗವನ್ನು ಸ್ಥಾಪಿಸಿದಳು. ಈ ಎರಡೂ ಶಿವಲಿಂಗಗಳ ಸೇವನೆಯಿಂದ ಕುಷ್ಠಾದಿ ಸಕಲ ರೋಗಗಳೂ ದೂರವಾಗುವವು.

## ಸೋಮನಾಥದ ಯಾತ್ರಾವಿಧಿ

**ಪಾರ್ವತಿ:-** ಪ್ರಾಣನಾಥ, ಸೋಮನಾಥ ಯಾತ್ರೆಯ ಮಹಿಮೆ ಹಾಗೂ ಕ್ಷೇತ್ರದ ಮಹಿಮೆಯನ್ನು ನನಗೆ ಹೇಳಿರಿ.

**ಮಹಾದೇವ:-** ಪರಮೇಶ್ವರಿ, ಹೇಮಂತ, ಶಿಶಿರ, ವಸಂತ ಋತುಗಳಲ್ಲಿ ಈ ಕ್ಷೇತ್ರದ ಯಾತ್ರೆ ಮಾಡಬೇಕು ಅಥವಾ ಹಣವೇ ಮುಂತಾದ ಯಾತ್ರೆಯ ಸೌಕರ್ಯವು ಸಿದ್ಧವಾದಾಗ ಮನಸ್ಸಿಗೆ ಉತ್ಸಾಹ ತೋರಿದಾಗ ಸೋಮನಾಥನ ಯಾತ್ರೆ ಮಾಡಬಹುದು. ಎಲ್ಲ ಯಾತ್ರೆಗಳನ್ನು ಪಾದಾಚಾರಿಯಾಗಿ ನಡೆದುಕೊಂಡು ಹೋಗಿ ಮಾಡುವುದೇ ಉತ್ತಮಕಲ್ಪ. ವಾಹನಗಳ ಮೇಲೆ ಹೋಗುವುದು ಗೌಣ. ವಾಹನಗಳ ಮೇಲೆ ಆರೋಹಣಮಾಡಿ ಗೈಯುವ ಯಾತ್ರೆಯ ನಾಲ್ಕುಪಟ್ಟು ಪುಣ್ಯವು ಕಾಲಿನಿಂದ ನಡೆದು ಮಾಡಿದ ತೀರ್ಥಯಾತ್ರೆಯಿಂದ ಲಭಿಸುವುದು.

**"ತೀರ್ಥಾನುಗಮನಂ ಪದ್ಭ್ಯಾಂ ತಪಃ ಪಲಮಿಹೋಚ್ಯತೇ ।**
**ತದೇವ ಕೃತ್ವಾ ಯಾನೇನ ಸ್ನಾನಮಾತ್ರ ಫಲಂ ಲಭೇತ್" ॥**

ಪಾದಗಳಿಂದ ನಡೆದುಕೊಂಡು ತೀರ್ಥಯಾತ್ರೆ ಮಾಡುವುದು ಒಂದು ದೊಡ್ಡ ತಪಸ್ಸು. ವಾಹನಗಳನ್ನು ಏರಿಕೊಂಡು ಮಾಡಿದ ತೀರ್ಥಯಾತ್ರೆಯಿಂದ ಸ್ನಾನಮಾಡಿದ ಪುಣ್ಯವು ಮಾತ್ರ ಬರುವುದು. ತೀರ್ಥಯಾತ್ರೆಯ ಪೂರ್ಣಪುಣ್ಯ ಪಾದಚಾರಿಗೆ ಮಾತ್ರ ಮೀಸಲು.

**"ಯೇಚಾನ್ಯೇ ಕುರ್ವತೇ ಶಕ್ತ್ಯಾ ತೀರ್ಥಯಾತ್ರಾಂ ತಥೇಶ್ವರಿ ।**
**ಸ್ವಕೀಯ ದ್ರವ್ಯ ಪಾದಾಭ್ಯಾಂ ತೇಷಾಂ ಪುಣ್ಯಂ ಚತುರ್ಗುಣಮ್ ॥**

ಬೇರೆಯವರಿಂದ ಹಣವನ್ನು ಪಡೆದು ವಾಹನಾರೂಢರಾಗಿ ತೀರ್ಥಕ್ಷೇತ್ರ ಯಾತ್ರೆ ಮಾಡುವವರಿಗಿಂತ ತನ್ನ ಸ್ವಂತ ದ್ರವ್ಯದಿಂದ ಕಾಲುನಡಿಗೆಯಿಂದ ಮಾಡಿದ ತೀರ್ಥಯಾತ್ರೆಗೆ ನಾಲ್ಕುಪಟ್ಟು ಅಧಿಕ ಪುಣ್ಯಫಲವು ಬರುತ್ತದೆ. ತೀರ್ಥಯಾತ್ರೆಯಲ್ಲಿ ಬೇರೊಬ್ಬರ ಅನ್ನವನ್ನು ಊಟಮಾಡಿದರೆ ಅವನಿಗೆ ತೀರ್ಥಯಾತ್ರೆಯ ಪುಣ್ಯದ ಹದಿನಾರನೇ ಭಾಗ ಮಾತ್ರ ಲಭಿಸುವದು. ಕುರುಡ, ಕುಂಟ, ಹಾಗೂ ಗ್ರಾಮೈಕರಾತ್ರ ಸಂಚಾರಿಯಾದ ಯಾತ್ರಿಕ ಇವರು ಯಾತ್ರೆಗೈಯುವ ಕಾಲದಲ್ಲಿ ದಾರಿಯಲ್ಲಿ ಬೇರೊಬ್ಬರಿಂದ ಹಣವನ್ನು ಅನ್ನವನ್ನು ಇತರ ಸೌಕರ್ಯವನ್ನು ಪಡೆದರೂ ದೋಷವಿಲ್ಲ. ತೀರ್ಥಯಾತ್ರೆ ಮಾಡುವ ಬ್ರಾಹ್ಮಣರಿಗೆ ಅಥವಾ ಭಕ್ತರಿಗೆ ಹಣವನ್ನು ಕೊಟ್ಟು ಊಟ ಉಪಹಾರದ ಸೌಕರ್ಯವನ್ನು ಏರ್ಪಡಿಸಿದವರಿಗೂ ತೀರ್ಥಯಾತ್ರೆಯ ಪೂರ್ಣಫಲ. ತೀರ್ಥಕ್ಷೇತ್ರಗಳಿಗೆ ಹೋಗಿ ತಾಯಿ, ತಂದೆ, ಅಣ್ಣ ತಮ್ಮ ಗೆಳೆಯ ಗುರು ಮುಂತಾದವರ ನಾಮೋಚ್ಚಾರಣ ಮಾಡಿ ಅವರ ಉದ್ದೇಶದಿಂದ ಪುಣ್ಯತೀರ್ಥದಲ್ಲಿ ಮುಳುಗು ಹಾಕಿದರೆ ಇವರಿಗೂ ಅವನಿಗೂ ಪುಣ್ಯಫಲ. ಗಂಗಾನದಿಗೆ ಸಮಾನವಾದ ತೀರ್ಥವಿಲ್ಲ. ಕೃಷ್ಣನಿಗೆ ಸಮಾನವಾದ ದೇವರಿಲ್ಲ. ಗಾಯತ್ರಿಗೆ ಸಮಾನವಾದ ಮಂತ್ರವಿಲ್ಲ. ವ್ಯಾಹೃತಿ ಹೋಮಕ್ಕೆ ಸಮಾನವಾದ ಹೋಮವಿಲ್ಲ. ಅಘಮರ್ಷಣ ಮಂತ್ರ ಜಪಕ್ಕೆ ಸಮಾನವಾದ ಪುಣ್ಯಕರ್ಮವಿಲ್ಲ. ತೀರ್ಥಕ್ಷೇತ್ರಗಳಲ್ಲಿ ಉಪವಾಸಕ್ಕೆ ಮಂತ್ರ ಜಪಕ್ಕೆ ಸಮಾನವಾದ ಪುಣ್ಯಕರ್ಮವಿಲ್ಲ. ತೀರ್ಥಕ್ಷೇತ್ರಗಳಲ್ಲಿ ಉಪವಾಸಕ್ಕೆ ಸಮಾನವಾದ ಪುಣ್ಯಸಾಧನವಿಲ್ಲ. ಆದ್ದರಿಂದ ಯಾತ್ರಿಕರೆಲ್ಲರೂ ತೀರ್ಥಕ್ಷೇತ್ರಗಳಲ್ಲಿ ಮೊದಲು ಉಪವಾಸ ಅನಂತರ ಶ್ರಾದ್ಧ ಬಳಿಕ ಕ್ಷೇತ್ರಸ್ವಾಮಿಯ ಪೂಜೆ, ದಾನ ಅಲ್ಲಿರುವ ಸಕಲ ದೇವತಾದರ್ಶನಗಳನ್ನು ಮಾಡಿಕೊಂಡರೆ ತೀರ್ಥಯಾತ್ರೆಯ ಪೂರ್ಣಫಲ ಪ್ರಾಪ್ತವಾಗುವುದು.

## ಸಮುದ್ರಸ್ನಾನದ ವಿಧಿ ಮತ್ತು ಮಹಿಮೆ

ಸೋಮನಾಥನ ದಕ್ಷಿಣದಲ್ಲಿ ಪದ್ಮಕ ಎಂಬ ತೀರ್ಥ. ಅದು ಸರ್ವಪಾಪ ಪರಿಹಾರಕ. ಸೋಮನಾಥನ ಸಮೀಪದಲ್ಲಿ ಉಪವಾಸವಿದ್ದು ಕ್ಷೌರ ಮಾಡಿಸಿಕೊಂಡು ಈ ಪದ್ಮಕ ತೀರ್ಥದಲ್ಲಿ ತಮ್ಮ ಕೂದಲವನ್ನು ಹಾಕಬೇಕು. ಸೌಭಾಗ್ಯವತೀ ಸ್ತ್ರೀಯರು ಕೂಡ ತಮ್ಮ ಕೂದಲಿನ ತುದಿಭಾಗದ ಎರಡು ಬೆರಳಿನಷ್ಟು ಕೂದಲುಗಳನ್ನು ಕತ್ತರಿಸಿ ಸೋಮನಾಥೇಶ್ವರನಿಗೆ ವೇಣೀದಾನವನ್ನು ಮಾಡಬೇಕು. ಅನಂತರ ಮತ್ತೆ ಸ್ನಾನಮಾಡಿ. ಕೆಳಗಿನ ಮಂತ್ರ ಹೇಳಿ ಸಮುದ್ರ ಸ್ನಾನಮಾಡಬೇಕು.

''ಓಂ ನಮೋ ವಿಷ್ಣುಗುಪ್ತಾಯ ವಿಷ್ಣುರೂಪಾಯ ತೇ ನಮಃ ।
ಸಾನ್ನಿಧ್ಯೇ ಭವ ದೇವೇಶ ಸಾಗರೇ ಲವಣಾಂಭಸಿ ॥''

ಈ ಮಂತ್ರದಿಂದ ಸಮುದ್ರದಲ್ಲಿ ಸ್ನಾನ ಮಾಡಿ, ಶ್ರದ್ಧೆಯಿಂದ ಎಳ್ಳು, ನೀರುಗಳಿಂದ ದೇವತೆಗಳಿಗೂ ಪಿತೃಗಳಿಗೂ ತರ್ಪಣ ಕೊಡಬೇಕು. ಸೋಮನಾಥನ ಸಮೀಪದ ಸಮುದ್ರದಲ್ಲಿ ಐದು ಕೋಟಿ ಶಿವಲಿಂಗಗಳು ಇರುತ್ತವೆ. ಅವೆಲ್ಲವೂ ಈಗ ಅದೃಶ್ಯ. ಮಾನವರ ದೃಷ್ಟಿಗೋಚರವಾಗುವುದಿಲ್ಲ.

## ಸೋಮನಾಥನ ದರ್ಶನ ಪೂಜನ, ಸರಸ್ವತಿಯ ಆವಿರ್ಭಾವ.

**ಮಹಾದೇವ:-** ದೇವಿ, ಹೀಗೆ ಸಮುದ್ರ ಸ್ನಾನಮಾಡಿ, ಅರ್ಘ್ಯಕೊಟ್ಟು, ತರ್ಪಣ ಬಿಟ್ಟು ಸೋಮನಾಥನ ಬಳಿಗೆ ಬರಬೇಕು. ಅಲ್ಲಿ ಮತ್ತೊಮ್ಮೆ ಸ್ನಾನಮಾಡಿ ರುದ್ರ ಸಂಹಿತಾ, ಶತರುದ್ರ, ಶಿವಸ್ತುತಿ, ಮುಂತಾದವುಗಳನ್ನು ಪಠಿಸುತ್ತ ಪಂಚಾಮೃತದಿಂದ ಸೋಮೇಶ್ವರನಿಗೆ ಅಭಿಷೇಕ, ಅನಂತರ ಶುದ್ಧೋದಕದಿಂದ ಸ್ನಾನ ಧೂಪ, ದೀಪ ನೈವೇಧ್ಯಾದಿಗಳಿಂದ ಸೋಮನಾಥನ ಪೂಜೆಯನ್ನು ವಿಧಿಪೂರ್ವಕವಾಗಿ ಮಾಡಬೇಕು. ಅನಂತರ ಅಲ್ಲಿಗೆ ಬಂದ ಬ್ರಾಹ್ಮಣರಿಗೂ, ತಪಸ್ವಿಗಳಿಗೂ, ಭಿಕ್ಷುಕರಿಗೂ, ದೀನದರಿದ್ರರಿಗೂ ಭೋಜನ ಮಾಡಿಸಿ ಯಥಾಶಕ್ತಿ ದಾನ ದಕ್ಷಿಣೆಗಳನ್ನು ನೀಡಬೇಕು. ಸೋಮನಾಥನಿಗೆ ತ್ರಿಕಾಲದಲ್ಲಿ ಮಾಡುವ ಮಂಗಳಾರತಿಯನ್ನು ನೋಡಿದವರಿಗೆ ಪುನರ್ಜನ್ಮವಿಲ್ಲ.

**ಪಾರ್ವತಿ:-** ಪೂಜ್ಯ ಪ್ರಿಯಕರ, ಪ್ರಭಾಸಕ್ಷೇತ್ರದಲ್ಲಿ ಐದು ಪ್ರವಾಹಗಳಿಂದ ಒಡಗೂಡಿ ಸರಸ್ವತೀ ನದಿ ಹರಿಯುತ್ತದೆ ಎಂದು ಹೇಳುತ್ತಾರೆ. ಆ ಪಂಚಪ್ರವಾಹಗಳು ಯಾವವು? ಪ್ರಭಾಸಕ್ಷೇತ್ರದಲ್ಲಿ ಸರಸ್ವತೀ ನದಿ ಹೇಗೆ ಬಂದಿತು?

**ಮಹಾದೇವ:-** ಹರಿಣೀ, ವಜ್ರೀಣ, ನ್ಯಂಕು, ಕಪಿಲಾ, ಸರಸ್ವತೀ, ಈ ಐದು ತೊರೆಗಳೊಂದಿಗೆ ಸರಸ್ವತೀ, ನದಿಯು ಈ ಪ್ರಭಾಸಕ್ಷೇತ್ರದಲ್ಲಿ ಪ್ರವಹಿಸುತ್ತದೆ. ಇದರ ಕಾರಣವನ್ನು ಹೇಳುತ್ತೇನೆ ಕೇಳು. ಹಿಂದೆ ಒಮ್ಮೆ ಮಹಾವಿಷ್ಣುವು ಸರಸ್ವತೀ ನದಿಯನ್ನು ಕರೆದು ಆಜ್ಞೆ ಮಾಡಿದನು- ''ಕಲ್ಯಾಣಿ, ಐರ್ವ ಮುನಿಯು ನಿರ್ಮಿಸಿದ ಈ ವಡವಾ ಎಂಬ ಅಗ್ನಿಯು ಪ್ರಪಂಚವನ್ನೇ ಸುಡುತ್ತಲಿದೆ. ಇದಕ್ಕೆ ಏನಾದರೂ ಆಹಾರವನ್ನು ಕೊಡಬೇಕು. ಇಲ್ಲದಿದ್ದರೆ ಇದು ಎಲ್ಲವನ್ನೂ ಸುಟ್ಟು ಹಾಕುವುದು. ಆದ್ದರಿಂದ ನೀನು ಈ ವಡವಾಗ್ನಿಯ್ನನು ತಗೆದುಕೊಂಡು ಪಶ್ಚಿಮ ದಿಕ್ಕಿನಲ್ಲಿ ಇರುವ ಉಪ್ಪು ನೀರಿನ ಸಮುದ್ರದಲ್ಲಿ ಹಾಕಿಬಿಡು. ಇದರಿಂದ ದೇವತೆಗಳ ಭೀತಿ ತೊಲಗಿ ಹೋಗುವುದು.'' ವಿಷ್ಣುವಿನ ಈ ಆದೇಶವನ್ನು ಬ್ರಹ್ಮದೇವನು ಅನುಮೋದಿಸಿದನು.

**ಸರಸ್ವತಿ:-** ಪೂಜ್ಯರೇ, ನಿಮ್ಮ ಆಜ್ಞೆ ನನಗೆ ಶಿರೋಮಾನ್ಯ. ಆದರೆ ಈ ವಡವಾಗ್ನಿ ನನ್ನನ್ನೇ ಸುಟ್ಟುಹಾಕುವುದು. ಮೇಲಾಗಿ ಈಗ ಭೂಲೋಕದಲ್ಲಿ ಕಲಿಯುಗ. ಜನರೆಲ್ಲರೂ ಮಹಾಪಾಪಿಗಳು. ಅವರನ್ನು ಮುಟ್ಟಲು ನನಗೆ ಮೈತುಂಬ ನಡುಕ. ಕಲಿಯುಗದಲ್ಲಿ ಭೂಲೋಕದ ಮಾನವರೆಲ್ಲರೂ ತಮ್ಮ ದುಷ್ಕೃತ್ಯಗಳಿಂದ ದಾನವರಾಗಿದ್ದಾರೆ. ಆ ವಡವಾನಲದಷ್ಟೇ ಅವರನ್ನು ಕಂಡರೆ ನನಗೆ ಮೈ ಉರಿ.

**ಬ್ರಹ್ಮ:-** "ಹಾಗಿದ್ದರೆ ನೀನು ಪಾಪಿಗಳು ತುಂಬಿದ ಪೃಥ್ವಿಯಲ್ಲಿ ಪೂರ್ತಿಯಾಗಿ ಪ್ರವಹಿಸುವುದು ಬೇಡ. ಪಾತಾಳದಲ್ಲಿ ಇದ್ದೇ ಈ ವಡವಾಗ್ನಿಯನ್ನು ಸಮುದ್ರಕ್ಕೆ ಒಯ್ದು ಹಾಕು. ಇದರ ತಾಪ. ಉಲ್ಬಣಿಸಿದಾಗ ಮಾತ್ರ ಭೂಮಿಯನ್ನು ಭೇದಿಸಿಗೊಂಡು ಪೃಥ್ವಿಯಲ್ಲಿ ಅಲ್ಲಲ್ಲಿ ಪ್ರತ್ಯಕ್ಷಳಾಗು. ಪೂರ್ವವಾಹಿನಿಯಾಗಿ ಪ್ರವಹಿಸಿ ಪ್ರಾಚೀ ಸರಸ್ವತೀ ಎಂದು ಹೆಸರುವಾಸಿಯಾಗು."

ಬ್ರಹ್ಮ ಹಾಗೂ ವಿಷ್ಣು ಇವರಿಬ್ಬರ ಆದೇಶದಂತೆ ಸರಸ್ವತೀ ದೇವಿಯು ಸತ್ಯ ಲೋಕದಿಂದ ಹೊರಟು ಗಂಗೆ, ಗಾಯತ್ರಿ, ಸಾವಿತ್ರಿ, ಮುಂತಾದ ತನ್ನ ಸಖಿ ಸೋದರಿಯರಿಂದ ಬೀಳ್ಕೊಡಲ್ಪಟ್ಟವಳಾಗಿ ಹಿಮಾಲಯ ಪರ್ವತಕ್ಕೆ ಬಂದಳು. ಅಲ್ಲಿಯ ಒಂದು ಹೆಮ್ಮರದಿಂದ ನದಿಯಾಗಿ ಹರಿದು ವಡವಾನಲವನ್ನು ತನ್ನ ಸಲಿಲ ಶರೀರದಲ್ಲಿ ಹೊತ್ತುಕೊಂಡು ವೇಗದಿಂದ ಹರಿದಳು. ನದೀರೂಪವಾಗಿ ಹೊಮ್ಮಿ ಹರಿಯುತ್ತಲಿರುವ ಸರಸ್ವತೀ ದೇವಿಯನ್ನು ಬ್ರಹ್ಮರ್ಷಿಗಳು ವೇದ ಮಂತ್ರಗಳಿಂದ ಸ್ತುತಿಸಿದರು. ಮುಂದೆ ಅವಳು ಪೃಥ್ವಿಯನ್ನು ಸೀಳಿ ಭೂಗರ್ಭದಲ್ಲಿ ಪ್ರವಿಷ್ಟಳಾದಳು. ಮತ್ತೆ ಅಲ್ಲಲ್ಲಿ ಪೃಥ್ವಿಯಲ್ಲಿ ತಲೆ ಎತ್ತಿ ಪ್ರತ್ಯಕ್ಷ ಗೋಚರಳಾಗುತ್ತ ಮತ್ತೊಮ್ಮೆ ಗುಪ್ತಳಾಗಿ, ಮಗದೊಮ್ಮೆ ಪ್ರಕಟಳಾಗಿ, ಪಾತಾಳ ಮಾರ್ಗದಿಂದ ಪಡುವಲ ಕಡಲತೀರದ ಪ್ರಭಾಸ ಪ್ರದೇಶದಲ್ಲಿ ಪ್ರವೇಶಿಸಿದಳು. ಖಜರಾಮೋದ ಎಂಬ ವನಕ್ಕೆ ಬಂದು ಸರಸ್ವತಿಯು ಸಮುದ್ರವನ್ನು ಕಂಡಳು. ಅನಂತರ ಅವಳು ಆ ಸಾಗರದಲ್ಲಿ ತಾನು ಹೊತ್ತು ತಂದ ವಡವಾನಲವನ್ನು ವಿಸರ್ಜಿಸಬೇಕೆಂದು ದಕ್ಷಿಣಕ್ಕೆ ಹೊರಳಿ ಸಮುದ್ರದೆಡೆಗೆ ಹೊರಟಳು. ಆಗ ವೇದಪಾರಂಗತರಾದ ನಾಲ್ಕು ಜನ ಮಹಾಮಹರ್ಷಿಗಳು ಪ್ರಭಾಸ ಕ್ಷೇತ್ರದಲ್ಲಿ ಬಂದರು. ಹಿರಣ್ಯ, ವಜ್ರ, ನ್ಯಂಕು, ಮತ್ತು ಕಪಿಲ ಎಂಬ ಹೆಸರಿನ ಆ ನಾಲ್ಕು ಜನ ಮಹರ್ಷಿಗಳು ಬೇರೆ ಬೇರೆ ನಿಟ್ಟಿನಲ್ಲಿ ನಿಂತು ತಮ್ಮ "ಸ್ನಾನಕ್ಕೆ ಅನುಕೂಲಳಾಗಿ ಬಾ" ಎಂದು ಸರಸ್ವತಿಯನ್ನು ಪ್ರಾರ್ಥಿಸಿ ವೇದಮಂತ್ರಗಳಿಂದ ಆವಾಹನೆಗೈದರು. ಅಷ್ಟರಲ್ಲಿ ಸಮುದ್ರನೂ ಸರಸ್ವತಿಯ ಸಮ್ಮುಖದಲ್ಲಿ ಉಪಸ್ಥಿತನಾದನು. ಆಗ ಸರಸ್ವತಿಯು ಐದು ಪ್ರವಾಹಗಳಾಗಿ ಹರಿದು ಎಲ್ಲರನ್ನೂ ಸಂತೋಷಪಡಿಸಿದಳು. ಸರಸ್ವತಿಯನ್ನು ಆವಾಹಿಸಿದ ಆ ಮುನಿಗಳ ಹೆಸರಿನಿಂದಲೇ ಹರಿಣೀ, ವಜ್ರಿಣೀ, ನ್ಯಂಕುಮತೀ, ಕಪಿಲಾ, ಸರಸ್ವತೀ ಎಂದು ಪಂಚಸ್ರೋತಳಾಗಿ ಹರಿದು ಹೆಸರಾಗಿದ್ದಾಳೆ ಸರಸ್ವತೀ ನದಿ. ಅನಂತರ ಅವಳು ಸಮುದ್ರದ ಸಮೀಪಕ್ಕೆ ಐದು ಸರಳುಗಳಾಗಿ ಹರಿದು ಬಂದು ಸಮುದ್ರನನ್ನು ಕರೆದು ಹೇಳಿದಳು.

**ಸರಸ್ವತಿ:-** ಸಮುದ್ರರಾಜ, ನೀನು ಎಲ್ಲ ದೇವತೆಗಳ ಪ್ರಾಣ, ಪೃಥ್ವಿಯ ಆಧಾರ, ಪ್ರಾಣಿಗಳ ಸರ್ವಸ್ವ, ವಿಷ್ಣುವಿನ ಅಪ್ಪಣೆಯಂತೆ ನಾನು ಹೊತ್ತು ತಂದ ಈ ವಡವಾನಲ ವನ್ನು ಸ್ವೀಕರಿಸು. ಅಗ್ನಿಯು ತುಪ್ಪದ ಆಹುತಿಯನ್ನು ಸ್ವೀಕರಿಸುವಂತೆ ಸೂಜಿಯಂತೆ ಮುಖವನ್ನು ಮಾಡಿ ಈ ವಡವಾಗ್ನಿಯು ನಿನ್ನ ನೀರನ್ನು ನಿರಂತರವೂ ಕುಡಿಯುತ್ತಲಿರಲಿ.

ಸಮುದ್ರರಾಜನು ವಿಷ್ಣುವಿನ ಆದೇಶದಂತೆ ವಡವಾಗ್ನಿಯನ್ನು ಸ್ವೀಕರಿಸಿ ತನ್ನ ಕಡಲಿನ ಒಡಲಿನಲ್ಲಿ ಅಡಗಿಸಿಕೊಂಡನು. ಅನಂತರ ಸರಸ್ವತಿಯು ನಾರದೇಶ್ವರ ಮಾರ್ಗದಿಂದ ಸಮುದ್ರದೊಂದಿಗೆ ಸಂಗಮಿಸಿದಳು. ಸ್ವಯಂ ತನ್ನ ಸ್ವರೂಪದಿಂದಲೇ ಪವಿತ್ರವಾದ ಆ ಸರಸ್ವತಿ ನದಿಯು ಈ ಪ್ರಭಾಸಕ್ಷೇತ್ರ ಹಾಗೂ ಆ ಸಮುದ್ರದ ಸಂಪರ್ಕದಿಂದ ಮತ್ತಿಷ್ಟು ಪುಣ್ಯತರವೂ ಪಾವನತಮವೂ ಆಯಿತು. ಸಮುದ್ರದ ಸಮೀಪದಲ್ಲಿ ಸೋಮನಾಥೇಶ್ವರನ ದಕ್ಷಿಣಕ್ಕೆ ಆಗ್ನೇಯ ದಿಕ್ಕಿನಲ್ಲಿ ಸರಸ್ವತಿಯ ಸ್ಥಿತಿ ಇರುತ್ತದೆ. ಯಾತ್ರಿಕರು ಮೊದಲು ಅಲ್ಲಿ ಸ್ನಾನಮಾಡಿ ಕಪರ್ದಿ ಎಂಬ ಗಣನಾಥನನ್ನು ಪೂಜಿಸಬೇಕು.

## ಕಪರ್ದಿಯ ಪ್ರಥಮ ಪೂಜೆಯಕಾರಣ ಮತ್ತು ಮಹಿಮೆ

**ಪಾರ್ವತಿ:-** ಪ್ರಿಯ ದೇವಾ! ಈ ಸೋಮನಾಥ ಯಾತ್ರೆಯಲ್ಲಿ ಮೊದಲು ಕಪರ್ದಿಯ ದರ್ಶನ ಪಡೆಯಬೇಕೆಂದು ನೀನು ಅಪ್ಪಣೆ ಕೊಡಿಸಿದೆ. ಅವನು ನಿನ್ನ ಸೇವಕನಲ್ಲವೆ? ನಿನಗಿಂತ ಮೊದಲು ಅವನಿಗೇಕೆ ದರ್ಶನ ಪೂಜೆ ಸಲ್ಲಬೇಕು? ಮೊದಲು ಸ್ವಾಮಿಗೆ ನಂತರ ಸೇವಕನಿಗೆ ಸೇವೆ ಸಲ್ಲಬೇಕಾದದ್ದು ನ್ಯಾಯ ಪ್ರಾಪ್ತ. ಆದರೆ ಇಲ್ಲಿ ವೈಪರೀತ್ಯಕ್ಕೆ ಕಾರಣವೇನು?

**ಮಹಾದೇವ:-**ದೇವಿ! ಇದೊಂದು ಪೂರ್ವಕಾಲದ ಘಟನೆ. ನೀನು ಮರೆತಿರಬಹುದು. ಪ್ರಭಾಸಕ್ಷೇತ್ರದಲ್ಲಿ ನೆಲಸಿದ ಸೋಮನಾಥೇಶ್ವರನ ಎಡಭಾಗದಲ್ಲಿ ವರಾಹ ರೂಪಿಯಾದ ವಿಷ್ಣು. ಬಲಬದಿಯಲ್ಲಿ ಪ್ರಜಾಪತಿ ಬ್ರಹ್ಮ. ಮಧ್ಯದಲ್ಲಿ ನಾನು ಅರ್ಥಾತ್ ಸೋಮನಾಥೇಶ್ವರ. ಈ ತ್ರಿಮೂರ್ತಿಗಳ ದರ್ಶನ, ಸೇವನಾದಿಗಳಿಂದ ಚಂಡಾಲರಿಗೂ ಉದ್ಧಾರ. ಮ್ಲೇಂಛರಿಗೂ ಪಾಪ ಪರಿಹಾರ. ಪಾಪಿಗಳಿಗೂ ಸದ್ಗತಿ. ಇದರಿಂದ ಭೂಲೋಕದ ಎಲ್ಲ ಜಾತಿ ಜನಾಂಗ ಜನರೂ ಪಾತಕಿಗಳೂ ಘಾತಕಿಗಳೂ ಶಿಷ್ಟರೂ ದುಷ್ಟರೂ ಸುಲಭವಾಗಿ ಸೋಮನಾಥನ ಸಂದರ್ಶನ ಸೇವೆಗಳಿಂದ ಸ್ವರ್ಗಲೋಕವನ್ನು ಸೇರತೊಡಗಿದರು. ಮಾನವ ಲೋಕದ ಮನುಷ್ಯರಿಂದ ಕಿಕ್ಕಿರಿದು ತುಂಬಿಹೋಯಿತು ಅಮರಾವತಿ. ಜನದಟ್ಟನೆಯಿಂದ ಅಮರಾವತಿಯು ಉಬ್ಬಸಪಡುತ್ತಿರಲಾಗಿ ದೇವತೆಗಳಿಗೆ ನೆಮ್ಮದಿಯಿಂದ ತಮ್ಮ ನಾಕ ನಗರಿಯಲ್ಲಿ ನೆಲಸಲು ಬಾರದಂತಾಯಿತು. ಆಗ ಅವರೆಲ್ಲರೂ ಪಾರ್ವತಿಯಾದ ನಿನಗೆ ಶರಣು ಬಂದರು. ಭೂಲೋಕದಿಂದ ಸೋಮನಾಥನ ಸೇವೆಗೈದು ಸಾಲು ಸಾಲಾಗಿ ಬಂದು ಕೇಳಿ ಕೊಂಡರು. ಆಗ ನಿನಗೆ ಇಂದ್ರಾದಿ ದೇವತೆಗಳ ಮೇಲೆ ಕರುಣೆ ಉಕ್ಕಿ ಬಂದಿತು. ಮುಂದೆ ಹೇಗೆ ಮಾಡುವುದು ಎಂದು ನೀನು ನಿನ್ನ ಕೈಗೆ ತಿಕ್ಕಿದಾಗ ಆನೆಯ ಮುಖದ ನಾಲ್ಕು ಬಾಹುಗಳ ಓರ್ವ ಸುಂದರ ಕುಮಾರನು ಪ್ರಕಟನಾದನು. ಆ ಬಾಲಗಜಾನನನು ನಿನಗೆ ಕೈಮುಗಿದು "ತಾಯಿ ಅಪ್ಪಣೆ ನೀಡು. ನಾನು ನಿನ್ನ ಯಾವ ಸೇವೆಯನ್ನು ಮಾಡಲಿ?"

**ಪಾರ್ವತಿ:-** ವತ್ಸ! ಗಜಾನನ, ನೀನು ಪ್ರಭಾಸಕ್ಷೇತ್ರಕ್ಕೆ ಹೋಗು. ಅಲ್ಲಿ ಸೋಮನಾಥನ ಲಿಂಗರೂಪದಿಂದ ಮಹಾದೇವರ ನಿತ್ಯ ಸನ್ನಿಧಾನ. ಅವರ ಸೇವೆಯಿಂದ ಜನರಿಗೆ ಖಂಡಿತ ಸ್ವರ್ಗ ಪ್ರಾಪ್ತಿ. ಈ ಸುಲಭ ಉಪಾಯದಿಂದ ನೆಲದಲ್ಲಿ ನೆಲಸಿದ ನರರೆಲ್ಲರೂ ನೇರವಾಗಿ ನಾಕ ಲೋಕವನ್ನು ಸೇರಿ ಸುರಸಮಾಹದಲ್ಲಿ ಸೇರಿ ಬಿಡುತ್ತಲಿದ್ದಾರೆ. ಇದರಿಂದ ಅಮರಾವತಿಯ ಮೂಲ ನಿವಾಸಿಗಳಾದ ದೇವತಾ ಗಣಕ್ಕೆಲ್ಲ ಸಂಕಟ. ಆಹಾರ ಸಂಕಟ, ಪ್ರಾಣ ಸಂಕಟ. ಆದುದರಿಂದ ನೀನು ಈಗ ಪ್ರಭಾಸಕ್ಷೇತ್ರಕ್ಕೆ ಹೋಗು. ಅಲ್ಲಿ ಜನರು ಗುಂಪುಕಟ್ಟಿ ಸೋಮನಾಥನ ದರ್ಶನಕ್ಕೆ ಬಾರದಂತೆ ಮಾಡು."
ಪಾರ್ವತಿಯ ಈ ಅಣತಿಯನ್ನು ತಲೆಯ ಮೇಲೆ ಹೊತ್ತು ಆ ಗಣಾಧ್ಯಕ್ಷನು ಪ್ರಭಾಸಕ್ಷೇತ್ರಕ್ಕೆ

ಬಂದು ನೆಲಿಸಿದ್ದಾನೆ. ಇಲ್ಲಿ ಬರುವ ಯಾತ್ರಿಕರಿಗೆಲ್ಲಾ ದಾರಿಯಲ್ಲಿಯೇ ಮನೆ, ಮಡದಿ, ಮಕ್ಕಳು, ಹಣ, ಹೊಲ, ಕಾಳು, ಕಡಿ, ಬಂಗಾರ ಮುಂತಾದವುಗಳ ಆಶೆತೋರಿಸಿ, ಮೋಹ ಹುಟ್ಟಿಸಿ ಆ ಸೋಮೇಶ್ವರನ ದರ್ಶನಕ್ಕೆ ಬಾರದಂತೆ ಮಾಡುತ್ತಾನೆ. ಅಥವಾ ಬಗೆ ಬಗೆಯ ರೋಗಗಳು ಬರುವಂತೆ ಮಾಡುತ್ತಾನೆ. ಹೀಗೆ ಬೇರೆ ಬೇರೆ ಆಶೆ, ಆಮಿಷ, ರೋಗ ಮತ್ತು ಬೇರೆ ಎಳೆತ ಸೆಳೆತಗಳಿಂದ ಮೂಢಮಂಡ ಜನರು ಸೋಮನಾಥನ ದರ್ಶನಕ್ಕೆ ಬರುವುದನ್ನೇ ತಡೆಗಟ್ಟಿ ಬಿಟ್ಟಿದ್ದಾನೆ. ಹೀಗೆ ವಿಘ್ನ ಮಾಡುವ ವಿಘ್ನೇಶ್ವರನೇ ಕಪರ್ದಿ ಎಂಬ ನನ್ನ ಸೇವಕ. ಮೊದಲು ಅವನನ್ನು ಪೂಜಿಸಿ ಸಂತೋಷಪಡಿಸಿದರೇ ಮುಂದೆ ಸೋಮನಾಥ ಯಾತ್ರೆಗೆ ಯಾವ ಆತಂಕವೂ ಬರುವುದಿಲ್ಲ ಆದುದರಿಂದ ಆ ಕಪರ್ದಿಯನ್ನು ''ಓಂ ವಿಘ್ನರಾಜಾಯ ನಮಃ, ಕಪರ್ದಿನೇ ನಮಃ, ಪ್ರಭಾಸಕ್ಷೇತ್ರ ನಿವಾಸಿನೇ ನಮಃ, ಶ್ರೀ ಗಣೇಶಾಯ ನಮಃ'' ಎಂದು ನಮಿಸಿ ಕಪರ್ದಿಯನ್ನು ಭಕ್ತಿಯಿಂದ ಸೇವಿಸಿ ಪೂಜಿಸಿದವರಿಗೆ ಮಾತ್ರ ಸೋಮನಾಥನು ದರ್ಶನ ನೀಡುತ್ತಾನೆ.

## ಕೇದಾರ ಲಿಂಗದ ಮಹಿಮೆ. ಶಶಿ ಬಿಂದು ಮಹಾರಾಜನ ಪೂರ್ವವೃತ್ತಾಂತ

**ಮಹಾದೇವ:-** ದೇವಿ! ಕಪರ್ದಿಯ ಪೂಜೆಯ ಅನಂತರ ಯಾತ್ರಿಕರು ಕೇದಾರೇಶ್ವರ ಎಂಬ ಹೆಸರಿನ ಸ್ವಯಂಭೂ ಲಿಂಗದ ಬಳಿಗೆ ಪ್ರಯಾಣ ಮಾಡಬೇಕು. ಪ್ರಾಚೀ ಯುಗದಲ್ಲಿ ಈ ಕೇದಾರೇಶ್ವರನಿಗೆ 'ರುದ್ರೇಶ್ವರ' ಎಂದು ಹೆಸರಿದ್ದಿತು. ಕಲಿಯುಗದಲ್ಲಿ ಮ್ಲೇಂಛರ ಸ್ಪರ್ಶದ ಭಯದಿಂದ ಕೇದಾರೇಶ್ವರನು ಸಮುದ್ರ ಸಮೀಪದ ಈ ಲಿಂಗದಲ್ಲಿ ಲೀನನಾದದ್ದರಿಂದ ಇವನಿಗೆ ಕೇದಾರೇಶ್ವರ ಎಂದು ಹೆಸರು ಬಂದಿದೆ. ಮಾಘ ಮಾಸದಲ್ಲಿ ಸಮುದ್ರದ ಪದ್ಮಕೇತು ಎಂಬ ಮಹಾಕುಂಡದಲ್ಲಿ ಸ್ನಾನಮಾಡಿ ಕೇದಾರೇಶ್ವರನ ಪೂಜೆ ಮಾಡಿದವರ ಬ್ರಹ್ಮಹತ್ಯಾದಿ ಪಾಪಗಳು ಬಿಟ್ಟು ಹೋಗುತ್ತವೆ.

ಪ್ರಾಚೀನ ಕಾಲದಲ್ಲಿ ಓರ್ವ ಚಕ್ರವರ್ತಿ. ಅವನ ಹೆಸರು ಶಶಿಬಿಂದು ಅವನ ಮಹಿಷಿ ರಾಜನ ಪ್ರಾಣ ಪ್ರಿಯಪ್ರೇಯಸಿ. ಒಂದು ಬಂಗಾರದ ವಿಮಾನ ಆ ಮಹಾರಾಜನ ಅಧೀನದಲ್ಲಿ ಅದು ಕಾಮಗಾಮಿ. ಸ್ವೈರ ಸಂಚಾರಿ. ಅದರಲ್ಲಿ ಕುಳಿತು ಮಹಾರಾಜ ಬ್ರಹ್ಮಾಂಡವನ್ನೇ ಸುತ್ತುತ್ತಿದ್ದ. ಒಂದು ಫಾಲ್ಗುಣ ಕೃಷ್ಣ ಚತುರ್ದಶಿಯ ಪರ್ವಕಾಲದಂದು ಪ್ರಭಾಸಕ್ಷೇತ್ರಕ್ಕೆ ಶಶಿಬಿಂದುರಾಜನ ಆಗಮನ. ಆಗ ಅಲ್ಲಿ ಅಸಂಖ್ಯ ಬ್ರಹ್ಮರ್ಷಿಗಳು, ಅಗಣಿತ ಮುನೀಶ್ವರರು. ಅಂದು ರಾತ್ರಿ ಜಾಗರಣ ಮಾಡಲಿಕ್ಕಾಗಿ ಆ ಎಲ್ಲ ಮುನಿ ಮಹರ್ಷಿ ಪ್ರಮುಖರು ಸೋಮನಾಥನೆದುರು ಸಿದ್ಧರಾಗಿ ಕುಳಿತಿದ್ದರು. ಶಶಿಬಿಂದುವು ಅವರೆಲ್ಲರಿಗೂ ವಂದಿಸಿ ಅಲ್ಲಿಂದ ಹೊರಟು ಕೇದಾರ ಲಿಂಗದ ಬಳಿಗೆ ಬಂದನು. ಅಲ್ಲಿ ಹೂಹಾರಗಳನ್ನು ಹಾಕಿ, ವಸ್ತ್ರಾಲಂಕಾರಗಳಿಂದ ಕೇದಾರೇಶ್ವರನನ್ನು ಪೂಜಿಸಿ, ಮಂಗಳಾರತಿ ಮುಂತಾದ ಸೇವೆಸಲ್ಲಿಸಿ, ಜಾಗರಣವನ್ನು ಭಕ್ತಿಯಿಂದ ಮಾಡಿದನು. ಆಗ ಋಷಿಮುನಿಗಳೆಲ್ಲ ಅಲ್ಲಿಗೆ ಬಂದು ''ರಾಜನೇ, ನೀನು ಸೋಮೇಶ್ವರನನ್ನು ಬಿಟ್ಟು ಬಂದು ಈ ಕೇದಾರೇಶ್ವರನ ಎದುರು ಕುಳಿತು ಜಾಗರ ಸೇವೆಯನ್ನು ಏಕೆ ಮಾಡಿದೆ? ಇದಕ್ಕ ಏನು ಕಾರಣ?''

**ಶಶಿಬಿಂದುರಾಜ:-** ವಿಪ್ರೋತ್ತಮರೇ, ನಾನು ಕಳೆದ ಜನ್ಮದಲ್ಲಿ ಓರ್ವಶೂದ್ರ. ನಾನು ನೆಲಿಸಿದ ಸೌರಾಷ್ಟ್ರ ದೇಶದಲ್ಲಿ ಆ ಕಾಲದಲ್ಲಿ ಅನಾವೃಷ್ಟಿಯಿಂದ ಭಯಂಕರ ಕ್ಷಾಮ. ಹಸಿವೆ ಬಾಯಾರಿಕೆಗಳಿಂದ ಬೆಂದು ಬಸವಳಿದ ನಾನು ಪ್ರಭಾಸ ಕ್ಷೇತ್ರಕ್ಕೆ ಆಗಮಿಸಿದೆ. ಇಲ್ಲಿ ಅರಳಿದ

ಹೊಂದಾವರೆಗಳಿಂದ ಸುಂದರವಾದ ರಾಮಸರೋವರದಲ್ಲಿ ಮಿಂದು, ಪಿತೃದೇವತೆಗಳ ತರ್ಪಣಗೈದು, ಅಮೃತದಂತಿರುವ ಆ ನೀರನು ಕುಡಿದು ತೃಪ್ತಿಪಟ್ಟೆ. ಆಗ ನನ್ನ ಮಡದಿಯು "ಈ ಪುಷ್ಕರಣಿಯಲ್ಲಿ ವಿಕಸಿತವಾದ ತಾವರೆ ಹೂಗಳು ಬಹಳ ಸುಂದರ ಸರ್ವೇಂದ್ರಿಯಗಳಿಗೆ ಆಪ್ಯಾಯನವಾಗಿದೆ ಇವುಗಳ ಸೌಗಂಧ. ಇಲ್ಲಿಯ ಕೆಲವು ಕುಸುಮಗಳನ್ನು ಆಯ್ದುಕೊಂಡು ಸಮೀಪದ ಪಟ್ಟಣದಲ್ಲಿ ಮಾರಾಟ ಮಾಡೋಣ. ಆದರಿಂದ ನಮ್ಮ ಹಸಿವು ಹಿಂಗಬಹುದು." ಆಪತ್ಕಾಲದಲ್ಲಿ ನನಗೆ ಅತ್ಯಂತ ಗ್ರಾಹ್ಯವೆನಿಸಿತು ಆ ಮಡದಿಯ ಸೂಚನೆ. ಕೂಡಲೇ ನಾನು ಆ ಹೊಕ್ಕರಣಿಯನ್ನು ಹೊಕ್ಕು ಕೈಗೆ ಸಿಕ್ಕಷ್ಟು ಪದ್ಮಪುಷ್ಪಗಳನ್ನು ಎತ್ತಿಕೊಂಡು ತಂದೆ. ಬಳಿಯಲ್ಲಿಯೇ ಇರುವ ನಗರಕ್ಕೆ ಮಡದಿಯೊಂದಿಗೆ ತ್ವರಿಗತಿಯಿಂದ ನಡೆದೆ. ಅಲ್ಲಿಯ ಕೂಡು ರಸ್ತೆಗಳಲ್ಲಿ ಪೇಟೆ, ಕಾರ್ಯಾಲಯಗಳ ಬಳಿಯಲ್ಲಿ ನಿಂತು ತಿರುಗಿ ಆ ಕಮಲಗಳನ್ನು ಮಾರಾಟ ಮಾಡಲು ಪ್ರಯತ್ನಿಸಿದೆ. ನಮ್ಮ (ಸುದೈವ) ದುರ್ದೈವದಿಂದ ಆ ತುಂಬು ತಾವರೆಯ ಹೂಗಳನ್ನು ಕೊಳ್ಳಲು ಯಾರೂ ಮುಂದೆ ಬರಲಿಲ್ಲ. ಊರೆಲ್ಲ ಸುತ್ತಿ ಸುತ್ತಿ ನಾನು ಸುಸ್ತಾದೆ. ಹೊತ್ತು ಹೊರಳಿತು. ಹಸಿವೆ ಹೊಟ್ಟೆಯಲ್ಲಿ ಕಸಿವಿಸಿಯನ್ನುಂಟುಮಾಡಿತು. ಸನಿಹದಲ್ಲಿಯೇ ಆಗ ನನಗೆ ಕಂಡಿತು ದೇವಾಲಯ. ಒಳಗೆ ಹೊಕ್ಕೆವು. ರುದ್ರೇಶ್ವರ ಎಂಬ ವೃದ್ಧಿ ಲಿಂಗದ ದರ್ಶನ ಮಾಡಿಕೊಂಡೆವು. ಆಗ ಅಲ್ಲಿ 'ಅನಂಗವತಿ' ಎಂಬ ಬೆಲೆ ವೆಣ್ಣು ಶಿವರಾತ್ರಿ ವ್ರತವನ್ನು ಆಚರಿಸುತ್ತಲಿದ್ದಳು. ಅವಳು ಸ್ವಯಂ ತನ್ನ ಮಧುರ ಕಂಠದಿಂದ ಶಿವನ ಮಹಿಮೆಯನ್ನು ಹಾಡಿ ಪಾಡಿ ಕುಣಿದು ಭಜನೆ ಮಾಡಿ ಜಾಗರ ಸೇವೆಯನ್ನು ಮಾಡುತ್ತಲಿದ್ದಳು. ಆಗ ಅಲ್ಲಿ ನೆರದವರಲ್ಲಿ ಓರ್ವ ಮನುಷ್ಯನನ್ನು ನಾನು ಪ್ರಶ್ನಿಸಿದೆ. "ಇದು ಏನು? ಎಂದು. ಆಗ ಆ ಅಪರಿಚಿತ ನನಗೆ ಹೇಳಿದ. "ಇಂದು ಶಿವರಾತ್ರಿ. ಇಲ್ಲಿ ಸಂಗೀತ ನೃತ್ಯ ಸೇವೆಯನ್ನು ಶಿವನಿಗೆ ಸಲ್ಲಿಸುತ್ತಲಿರುವ ಮಹಿಳೆ ಓರ್ವ ವೇಶ್ಯೆ. 'ಅನಂಗವತಿ' ಎಂದು ಅವಳ ಹೆಸರು. ಶಿವರಾತ್ರಿ ದಿನ ಉಪವಾಸ ಹಾಗೂ ಜಾಗರವನ್ನು ಮಾಡಿದವರ ದೌರ್ಭಾಗ್ಯ ದುಃಖ, ದುರವಸ್ಥೆ ಉಳಿಯುವುದಿಲ್ಲ ದಾರಿದ್ರ್ಯ ದೂರಾಗುವುದು. ರೋಗಭಯ ಇಲ್ಲದಾಗುವುದು." ಅದನ್ನು ಕೇಳಿ ನಾವಿಬ್ಬರೂ ಪತಿ-ಪತ್ನಿಯರು ವಿಚಾರಿಸಿ ಕಡಲ ತಡಿಯ ಪದ್ಮಕ ತೀರ್ಥದಲ್ಲಿ ಸ್ನಾನಮಾಡಿ ಹೊಕ್ಕರಣಿಯಿಂದ ಹರಿದು ತಂದ ಸುಗಂಧಿ ಹೊಂದಾವರೆ ಗಳಿಂದ ರುದ್ರೇಶ್ವರನನ್ನು ಪೂಜೆ ಮಾಡಿದೆವು. ನನ್ನ ಪ್ರಾಣ ಪ್ರೇಯಸಿಯೊಂದಿಗೆ ಭಕ್ತಿಯಿಂದ ಜಾಗರ ಸೇವೆಯನ್ನು ಆಚರಿಸಿದೆ.

ಬೆಳಕು ಹರಿಯಿತು. ಅನಂಗವತಿಯ ಜಾಗರ ಸೇವೆ ಪೂರೈಸಿತು. ನನ್ನ ಜಾಗರ ಸೇವೆಯು ಮುಕ್ತಾಯವಾಯಿತು. ಶಿವನಿಗೆ ಸಮರ್ಪಿತವಾದ ಆ ಹೊಂದಾವರೆಗಳ ಸೌಗಂಧ ಸೌಂದರ್ಯಗಳನ್ನು ಕಂಡು ಅನಂಗವತಿಗೆ ಪರಮಾನಂದ. ಅವಳು ಶ್ರೀಮಂತ ವೇಶ್ಯೆ. ಲಕ್ಷಾಧಿಕ ಅಪಾರ ಐಶ್ವರ್ಯ ಅವಳ ಕಾಲ ಬುಡದಲ್ಲಿ. ಲಕ್ಷ್ಮಿಯ ಕೃಪಾಕಟಾಕ್ಷದಿಂದ ಲಕ್ಷಿತಳಾದ ಆ ಗಣಿಕೆಯು ನಾನು ಪರಮೇಶ್ವರನ ಪೂಜೆಗೆ ನೀಡಿದ ಹೊಂದಾವರೆಗಳ ಬೆಲೆಯೆಂದು ಹಿಡಿ ಹಿಡಿ ಹೊನ್ನನ್ನು ನನ್ನ ಮುಂದೆ ತಂದು ಸುರುವಿದಳು. ಆದರೆ ಆಗ ನನಗೆ ಉಪರತಿಯ ಸಮಯ. ಶಿವನ ಕೃಪೆಗಾಗಿ ಹೃದಯ ತುಡಿಯುತ್ತಿತ್ತು. ನನಗೂ ಪುಣ್ಯದಲ್ಲಿ ಲೋಭ ಮೂಡಿತ್ತು. ಶಿವಪ್ರಸಾದದಲ್ಲಿ ಆಶೆ ಅಂಕುರಿಸಿತ್ತು. ಶಿವನಿಗಾಗಿ ತಂದು ಕೊಟ್ಟ ಹೂಗಳಿಗಾಗಿ ಹಣವನ್ನು ಕೊಳ್ಳಲು ಮನಸ್ಸು ಒಪ್ಪಲಿಲ್ಲ. 'ಸರ್ವಂ ಶಿವಾರ್ಪಿತಂ ಪುಷ್ಪಂ' ಎಂದು ನುಡಿದು ಪರಮೇಶ್ವರನ ಪಾದಗಳಿಗೆ ಪೊಡೆಮೊಟ್ಟೆ. ಅನಂಗವತಿಯು ಕೊಡಮಾಡಿದ ಹೊನ್ನನ್ನು ಹಿಡಿಯಲಿಲ್ಲ. ಹಣವನ್ನು ಮುಟ್ಟಲಿಲ್ಲ. ಭಿಕ್ಷೆ ಬೇಡಿ ಹಸಿವೆ ಹಿಂಗಿಸಿ ಕೊಂಡೆ. ಶಿವಭಕ್ತನಾಗಿ ಕೆಲಕಾಲ ಜೀವಿಸಿದ್ದೆ. ಕೆಲದಿನಗಳ ಮೇಲೆ ಮೃತ್ಯುವಿನ ಹಸ್ತ ನನ್ನ ತಲೆಯ

ಮೇಲೆ. ನನ್ನ ಮನದನ್ನೆಗೆ ಸ್ವಯಂ ಪ್ರೇರಿತ ಅಗ್ನಿ ಸ್ನಾನ. ಆ ಜನ್ಮದಲ್ಲಿ ಮಾಡಿದ ಶಿವರಾತ್ರಿಯ ಉಪವಾಸ ಹಾಗೂ ಜಾಗರಣಗಳ ಪುಣ್ಯದಿಂದ ಈ ಜನ್ಮದಲ್ಲಿ ನಾನು ಚಕ್ರವರ್ತಿ ದೊರೆ. ಶಿವಪ್ರಸಾದದಿಂದ ಇಂದಿಗೂ ನನಗೆ ಹೋದ ಜನ್ಮದ ನೆನಪು ಹೃದಯದ ಹೊಲದಲ್ಲಿ ಹಚ್ಚಹಸಿರು. ಆದುದರಿಂದಲೇ ನಾನು ಎಲ್ಲ ಕ್ಷೇತ್ರಗಳನ್ನು ತೊರೆದು ಈ ಕೇದಾರೇಶ್ವರನು ಇದ್ದಲ್ಲಿಗೆ ಬಂದದ್ದು. ನನಗೆ ಇಂಥ ಭೋಗ ಭಾಗ್ಯಗಳನ್ನು ತಂದು ಕೊಟ್ಟ ಈ ಕೇದಾರೇಶ್ವರನ ಎದುರೇ ನಿನ್ನೆ ರಾತ್ರಿ ನಾನು ಜಾಗರ ಸೇವೆಯನ್ನು ಮಾಡಿದೆ.''

ಇದನ್ನು ಕೇಳಿ ಆ ಎಲ್ಲ ಋಷಿಮುನಿಗಳ ನೇತ್ರಗಳು ಆಶ್ಚರ್ಯದಿಂದ ವಿಸ್ಫಾರಿತ. ಅವರೆಲ್ಲರ ಹೃದಯಗಳು ವಿಸ್ಮಯ ಸ್ತಿಮಿತ. ಶಶಿಬಿಂದು ಮಹಾರಾಜನಿಗೆ ಆ ಕೇದಾರೇಶ್ವರನ ಪ್ರಸಾದದಿಂದ ಸಿದ್ದಿಪ್ರಾಪ್ತಿ. ಆ ಅನಂಗವತಿ ಎಂಬ ವೇಶ್ಯೆಯು ಶಿವರಾತ್ರಿ ವ್ರತದ ಆಚರಣೆ ಹಾಗೂ ಜಾಗರಣದ ಪ್ರಭಾವದಿಂದ ಜನ್ಮಾಂತರದಲ್ಲಿ ಸ್ವರ್ಗಲೋಕದ ರಾಜಧಾನಿಯಾದ ಅಮರಾವತಿಯಲ್ಲಿ ಮರುಹುಟ್ಟನ್ನು ಪಡೆದಳು. 'ರಂಭಾ' ಎಂಬ ದೇವೇಂದ್ರನ ಮೆಚ್ಚಿನ ಅಪ್ಸರೆ ಆದಳು.

## ಪ್ರಭಾಸಕ್ಷೇತ್ರದಲ್ಲಿ ಇದ್ದ ಅನೇಕ ಶಿವಲಿಂಗಗಳ ಮಹಿಮೆ

**ಮಹಾದೇವ:-** ಪಾರ್ವತಿ! ಮುಗಿಲು ಮಂಟಪದಲ್ಲಿರುವ ಚುಕ್ಕೆಗಳಿಗೆ ಲೆಕ್ಕವಿಲ್ಲ. ಪ್ರಭಾಸಕ್ಷೇತ್ರದಲ್ಲಿರುವ ಶಿವಲಿಂಗಗಳಿಗೆ ಸಂಖ್ಯೆಯಿಲ್ಲ. ಸ್ವಾಯಂಭುವ ಮನ್ವಂತರದಲ್ಲಿ ಶ್ವೇತಕೇತು ಮಹಾರಾಜನು ಹದಿನಾಲ್ಕು ವರ್ಷ ತಪಸ್ಸನ್ನು ಮಾಡಿ ಶಿವನನ್ನು ಸಾಕ್ಷಾತ್ಕರಿಸಿ ಕೊಂಡ. ಮತ್ತು ''ನೀನು ಇಲ್ಲಿಯೇ ಸನ್ನಿಹಿತನಾಗಿ ಇರಬೇಕು'' ಎಂದು ವರವನ್ನು ಬೇಡಿಕೊಂಡ. ಆಗಲೇ ಶಿವಾಧಿಷ್ಠಿತವಾದ ಸ್ವಯಂಭುವ ಲಿಂಗಕ್ಕೆ ಶ್ವೇತಕೇತೇಶ್ವರ ಎನ್ನುವರು. ಮುಂದೆ ಭೀಮಸೇನನು ತನ್ನ ಪಾಂಡವ ಸಹೋದರರೊಂದಿಗೆ ಈ ಪ್ರಭಾಸ ಕ್ಷೇತ್ರಕ್ಕೆ ಬಂದು ಈ ಲಿಂಗವನ್ನು ಆರಾಧಿಸಿ ಪ್ರಸನ್ನಗೊಳಿಸಿದನು. ಆದುದರಿಂದ ಮುಂದೆ ಅದಕ್ಕೆ ಭೀಮೇಶ್ವರ ಎಂಬ ಹೆಸರು ಬಂದಿತು. ಸೋಮನಾಥನಿಂದ ಏಳು ಬಿಲ್ಲಿನ ದೂರದಷ್ಟು ಅಳತೆಯಲ್ಲಿ ಎಂಬ ಹೆಸರು ಬಂದಿತು. ಸೋಮನಾಥನಿಂದ ಏಳು ಬಿಲ್ಲಿನ ದೂರದಷ್ಟು ಅಳತೆಯಲ್ಲಿ ಸೂರ್ಯನು ಸ್ಥಾಪನೆಮಾಡಿದ ಆದಿತ್ಯೇಶ್ವರ. ಅಲ್ಲಿಂದ ತುಸು ಮುಂದೆ ಭೂಮಿಯ ಪುತ್ರ ಅಂಗಾರಕನು ಶಿವನನ್ನು ಆರಾಧಿಸಿ ಗ್ರಹ ಗಣದಲ್ಲಿ ಸ್ಥಾನವನ್ನು ಪಡೆದ ಅಂಗಾರೇಶ್ವರ. ಬುಧನಿಗೆ ಗ್ರಹತ್ವವನ್ನು ಕರುಣಿಸಿದ ಬುಧೇಶ್ವರ. ಬೃಹಸ್ಪತ್ಯಾಚಾರ್ಯನ ಸೇವೆಯಿಂದ ತುಷ್ಟನಾಗಿ ಅವನಿಗೆ ದಿವ್ಯ ಜ್ಞಾನ ಹಾಗೂ ದೇವತಾ ಗುರುತ್ವವನ್ನು ದಯಪಾಲಿಸಿದ ಬೃಹಸ್ಪತೀಶ್ವರ, ಶುಕ್ರಾಚಾರ್ಯರಿಗೆ ಸಂಜೀವಿನಿ ವಿದ್ಯೆಯನ್ನು ಕರುಣಿಸಿದ ಶುಕ್ರೇಶ್ವರ, ಶನಿಗ್ರಹದ ಒಡೆಯನಾದ ಶನೈಶ್ಚರನ ಸೇವೆಯಿಂದ ಪರಿತುಷ್ಟನಾಗಿ ಗ್ರಹಮಂಡಲದಲ್ಲಿ ಅವನನ್ನು ಪ್ರವೇಶ ಮಾಡಿಸಿದ ಶನೈಶ್ವರೇಶ್ವರ, ವಿಪ್ರಚಿತ್ತಿಯ ಮಗನಾದ ರಾಹುವು ಒಂದು ಸಾವಿರ ವರ್ಷ ತಪಸ್ಸು ಮಾಡಿ ಗ್ರಹಗಳ ಮಾಲೆಯಲ್ಲಿ ಸ್ಥಾನ ಪಡೆದು ಸ್ಥಾಪಿಸಿದ ರಾಹುವೇಶ್ವರ ಮತ್ತು ಕೇತು ಲಿಂಗೇಶ್ವರ ಮುಂತಾದ ಈಶ್ವರ ಲಿಂಗಗಳನ್ನು ಯಾತ್ರಿಕರು ದರ್ಶನ ಮಾಡಿಕೊಂಡು ಯಥಾಶಕ್ತಿ ಪೂಜೆಮಾಡಬೇಕು. ಇದರಂತೆ ಆ ಕ್ಷೇತ್ರದಲ್ಲಿದ್ದ ಕಲಕಲೇಶ್ವರ, ಉತ್ತಂಕೇಶ್ವರ, ವೈಶ್ವಾನರೇಶ್ವರ, ಗೌತಮೇಶ್ವರ, ಪಾಂಡವೇಶ್ವರ, ಚಂದ್ರೇಶ್ವರ, ಪ್ರತ್ಯೂಷೇಶ್ವರ,

ಅನಿಲೇಶ್ವರ, ರಾವಣೇಶ್ವರ, ಪೌಲೋಮೀಶ್ವರ, ಅಕ್ಷಮಾಲೇಶ್ವರ ಧ್ರುವೇಶ್ವರ, ಮುಂತಾದ ಶಿವಲಿಂಗ ದರ್ಶನ ಪೂಜೆ ಪ್ರದಕ್ಷಿಣ ನಮಸ್ಕಾರಾದಿಗಳನ್ನು ಮಾಡಿದವರು ಸರ್ವಪಾಪಗಳಿಂದ ಮುಕ್ತರಾಗಿ ಮೋಕ್ಷವನ್ನು ಪಡೆಯುವರು.

**ಸೂತಾಚಾರ್ಯ:-** ಮಹರ್ಷಿಗಳೇ, ಈ ವರೆಗೆ ನಾನು ನಿಮ್ಮ ಅಪೇಕ್ಷೆಯ ಮೇರೆಗೆ ಪ್ರಭಾಸಕ್ಷೇತ್ರದ ಮಹಾಮಹಿಮೆಯನ್ನು ಅಲ್ಲಿ ನೆಲಿಸಿರುವ ಸೋಮನಾಥೇಶ್ವರ ಉಳಿದ ಶಿವಲಿಂಗಗಳ ಮಾಹಾತ್ಮ್ಯವನ್ನು ಪಾರ್ವತೀ ಪರಮೇಶ್ವರರ ಸಂವಾದ ರೂಪದಿಂದ ವಿವರಿಸಿ ಹೇಳಿದೆ. ಪ್ರಭಾಸಕ್ಷೇತ್ರದಲ್ಲಿ ಇರುವ ಪ್ರತಿಯೊಂದು ಲಿಂಗದ ಹಿಂದೆ ಒಂದು ಇತಿಹಾಸವಿದೆ. ಪ್ರತಿಯೊಂದು ಲಿಂಗದ ಪ್ರತಿಷ್ಠೆಗೆ ಒಂದು ಕಾರಣವಿದೆ. ಇಲ್ಲಿಯ ಪುಣ್ಯಪ್ರದೇಶದ ಪರಿಸರದಲ್ಲಿ ಪ್ರತಿಷ್ಠೆಗೊಂಡ ಯಾವ ಲಿಂಗವೂ ವ್ಯರ್ಥವಲ್ಲ. ಈ ಎಲ್ಲ ಲಿಂಗದ ಸ್ಥಿತಿ, ಸ್ಥಾಪನೆ, ಹೆಸರು ಬರಲು ಕಾರಣ, ಮಹಿಮೆ ಪ್ರಭಾವಗಳನ್ನು ಪೂರ್ಣವಾಗಿ ಯಾರಿಗೂ ನಿರೂಪಿಸಲು ಸಾಧ್ಯವಿಲ್ಲ. ಹಲವು ಪ್ರಮುಖ ಲಿಂಗಗಳ ಪ್ರತಿಷ್ಠೆ, ಉದ್ಭವ, ಪ್ರಸಿದ್ಧಿಗಳ ಹಿನ್ನೆಲೆಯನ್ನು ಸಂಕ್ಷಿಪ್ತವಾಗಿ ವಿವರಿಸುತ್ತೇನೆ ಕೇಳು.

ಪ್ರಭಾಸಕ್ಷೇತ್ರದಲ್ಲಿ ಗೌರೀತಪೋವನವು ಐವತ್ತು ಮಾರು ಉದ್ದ ಅಷ್ಟೇ ಅಗಲವಾದ ಪ್ರಖ್ಯಾತವಾದ ಉಪವನ. ಅದರ ಮಧ್ಯಭಾಗದಲ್ಲಿ ಸತೀದೇವಿಯು ಒಂಟಿಗಾಲಿನಿಂದ ನಿಂತು ತಪಿಸಿದಳು. ಪರಮೇಶ್ವರನನ್ನು ಒಲಿಸಿಕೊಂಡಳು. ಅವಳಿಗೆ ಪ್ರಸನ್ನನಾದ ಈಶ್ವರ, ಗೌರೀಶ್ವರಲಿಂಗ ಎಂದು ಹೆಸರಾಗಿದೆ. ಗೌರೀತಪೋವನದಿಂದ ಆಗ್ನೇಯ ನಿಟ್ಟಿನಲ್ಲಿ ವರುಣೇಶ್ವರ ಲಿಂಗ. ವರುಣೇಶ್ವರದಿಂದ ದಕ್ಷಿಣಕ್ಕೆ ಮೂರು ಮಾರು ಅಂತರದಲ್ಲಿ ಈಶೇಶ್ವರ ಲಿಂಗ. ಪತಿವಿರಹದುಃಖದಿಂದ ಬಳಲಿದ ಈಶಾ ಎಂಬ ವರುಣನ ಪತ್ನಿಯು ಶಿವನ ಸೇವೆಯಿಂದ ತನ್ನ ಪತಿಯೊಡನೆ ಪುನರ್ಮಿಲನ ಹೊಂದಿದಳು. ಅದಕ್ಕಾಗಿ ಈ ಲಿಂಗಕ್ಕೆ ಹೆಸರು ಈಶೇಶ್ವರ ಲಿಂಗ. ವರುಣೇಶ್ವರದಿಂದ ನೈಋತ್ಯ ನಿಟ್ಟಿನಲ್ಲಿ ಮೂವತ್ತು ಬಿಲ್ಲಿನ ಅಳತೆಯಲ್ಲಿ ಸ್ಕಂದನು ಸ್ಥಾಪಿಸಿದ ಕುಮಾರೇಶ್ವರಲಿಂಗ. ಅಲ್ಲಿಂದ ತುಸು ಅಂತರದಲ್ಲಿ ವಾಯವ್ಯ ಕೋಣದಲ್ಲಿ ಶಾಕಲ್ಯ ಎಂಬ ರಾಜರ್ಷಿಯು ಘೋರ ತಪವನ್ನು ಆಚರಿಸಿದ. ಅವನ ತಪಸ್ಸಿಗೆ ಮೆಚ್ಚಿ ನಾನು ಅವನ ಆರಾಧ್ಯ ಲಿಂಗದಲ್ಲಿ ಶಾಕಲ್ಯೇಶ್ವರ ಎಂಬ ಹೆಸರಿನಿಂದ ಪ್ರತ್ಯಕ್ಷನಾದೆ. ಸತ್ಯಯುಗದಲ್ಲಿ ಅದೇ ಶಿವಲಿಂಗಕ್ಕೆ ಭೈರವೇಶ್ವರ. ತ್ರೇತಾಯುಗದಲ್ಲಿ ಸಾವರ್ಣಕೇಶ್ವರ, ದ್ವಾಪರಯುಗದಲ್ಲಿ ಗಾಲವೇಶ್ವರ, ಕಲಿಯುಗದಲ್ಲಿ ಶಾಕಲ್ಯೇಶ್ವರ ಎಂದು ಭಿನ್ನ ಭಿನ್ನ ನಾಮಗಳು.

ಈ ಶಾಕಲ್ಯೇಶ್ವರದಿಂದ ನೈಋತ್ಯ ದಿಕ್ಕಿನಲ್ಲಿ ಕಲಕಲೇಶ್ವರ. ಇದಕ್ಕೆ ಕೃತಯುಗದಲ್ಲಿ ಕಾಮೇಶ್ವರ, ತ್ರೇತಾಯುಗದಲ್ಲಿ ಪುಲಹೇಶ್ವರ, ದ್ವಾಪರದಲ್ಲಿ ಸಿದ್ಧನಾಥ, ಕಲಿಯುಗದಲ್ಲಿ ನಾರದೇಶ್ವರ ಎಂದು ಪ್ರಸಿದ್ಧಿ. ಕಲಕಲೇಶ್ವರ ಎಂದೂ ಈ ಸಿದ್ಧಲಿಂಗವನ್ನು ಕರೆಯುತ್ತಾರೆ. ಎರಡು ಕಾರಣ ನನಗೆ ಈ ಹೆಸರು ಬರಲು. ಹಿಂದೆ ಸರಸ್ವತೀ ನದಿಯು ಸಮುದ್ರದೊಡನೆ ಸಂಗಮಿಸಲು ರಭಸದಿಂದ ಹರಿದು ಬರುವಾಗ ಆ ನದೀ ಪ್ರವಾಹದ ಕಲಕಲನಾದ, ಸಾಗರದ ಗರ್ಜನೆ, ದೇವಗಂಧರ್ವರ ಹರ್ಷಧ್ವನಿಗಳಿಂದ ಉಂಟಾದ ಕಲಕಲನಾದಗಳಿಂದ ಈ ನನ್ನ ಲಿಂಗದ ಉದ್ಭವ ಆಯಿತು. ಆದರಿಂದ ಇದಕ್ಕೆ ಕಲಕಲೇಶ್ವರ ಎಂಬ ಹೆಸರು ಬಂದಿತು. ಇದಕ್ಕೆ ಇನ್ನೂ ಒಂದು ಕಾರಣ ಉಂಟು. ಕಲಿದ್ವಾಪರಗಳ ಸಂಧಿ ಕಾಲದಲ್ಲಿ ನಾರದ ಮುನಿಯು ಪೌಂಡರೀಕ ಎಂಬ ಮಹಾಯಜ್ಞವನ್ನು ಮಾಡಿದ. ಆ ಯಜ್ಞದಲ್ಲಿ

ಪ್ರಭಾಸಕ್ಷೇತ್ರದಲ್ಲಿ ನೆಲೆಸಿದ ಸಾವಿರಾರು ಬ್ರಾಹ್ಮಣರಿಗೆ ಮುತ್ತು ರತನ, ಬಂಗಾರಗಳನ್ನು ಕೊಟ್ಟು ಸುವರ್ಣ ವೃಷ್ಟಿಯನ್ನೇ ಮಾಡಿದ. ಅಲ್ಲಿ ನೆರೆದ ಭಿಕ್ಷುಕರೂ ಬ್ರಾಹ್ಮಣರೂ ಹರ್ಷೋದ್ರೇಕದಿಂದ ಮಾಡಿದ ಕಲಕಲ ಶಬ್ದದಿಂದಾಗಿ ನನ್ನ ಅರ್ಥಾತ್ ಆ ಶಿವಲಿಂಗದ ಹೆಸರು ಕಲಕಲೇಶ್ವರ ಎಂದು ಆಯಿತು.

ಪಾರ್ವತಿ, ಕಲೇಕಲೇಶ್ವರದಿಂದ ದಕ್ಷಿಣಕ್ಕೆ ತುಸು ಅಂತರದಲ್ಲಿ ಉತ್ತಂಕ ಋಷಿಯು ಸ್ಥಾಪಿಸಿದ ಉತ್ತಂಕೇಶ್ವರ. ಅಲ್ಲಿಂದ ಆಗ್ನೇಯ ಕೋಣದಲ್ಲಿ ಐದು ಮಾರು ಅಂತರದಲ್ಲಿ ವೈಶ್ವಾನರೇಶ್ವರ. ಪೂರ್ವಕಾಲದಲ್ಲಿ ಒಂದು ಗಿಳಿ ಈ ವೈಶ್ವಾನರೇಶ್ವರ ಮಂದಿರದ ಒಳಗೆ ಬಂದು ಗೂಡನ್ನು ನಿರ್ಮಿಸಿತ್ತು. ತನ್ನ ಮಡದಿಯೊಡನೆ ಬಹುಕಾಲ ಅದು ಶಿವಮಂದಿರದಲ್ಲಿ ಆನಂದದಿಂದ ನೆಲೆಸಿತ್ತು. ಪ್ರತಿದಿನವೂ ಅದು ಮುಂಜಾವಿನಲ್ಲಿ ತನ್ನ ಗೂಡನ್ನು ಬಿಟ್ಟು ಹೋಗುವಾಗ ಆ ಶಿವಲಿಂಗಕ್ಕೂ ಮತ್ತು ಅನಂತರ ಆ ಶಿವಮಂದಿರಕ್ಕೂ ಮಡದಿಯೊಡನೆ ಒಂದು ಪ್ರದಕ್ಷಿಣೆ ಹಾಕಿ ಆಹಾರಕ್ಕೆಂದು ಹಾರಿಹೋಗುತ್ತಿತ್ತು. ಸಂಜೆ ಗೂಡು ಸೇರುವಾಗಲೂ ಆ ಶುಕ ದಂಪತಿಗಳು ಶಿವಮಂದಿರಕ್ಕೆ ಪ್ರದಕ್ಷಿಣೆ ಹಾಕಿಯೇ ಗೂಡು ಸೇರುತ್ತಿದ್ದವು. ಗಿಳಿಯ ಜನ್ಮದಲ್ಲಿ ಮಾಡಿದ ಈ ವೈಶ್ವಾನರೇಶ್ವರ ಲಿಂಗದ ಪ್ರದಕ್ಷಿಣೆಯ ಪುಣ್ಯದಿಂದ ಅವರಿಬ್ಬರೂ ಈ ಜನ್ಮದಲ್ಲಿ ಅಗಸ್ತ್ಯ, ಲೋಪಾಮುದ್ರಾ ಎಂಬ ಬ್ರಹ್ಮರ್ಷಿ ದಂಪತಿಗಳಾಗಿ ಈ ಶಿವನ ಪೂಜೆಯನ್ನು ಮಾಡುತ್ತಲಿದ್ದಾರೆ. ಈವೈಶ್ವಾನರೇಶ್ವರ ಅಥವಾ ವಹ್ನೀಶ್ವರ ದೇವಸ್ಥಾನದಿಂದ ಪೂರ್ವಕ್ಕೆ ಮದ್ರದೇಶದ ಶಲ್ಯರಾಜನು ಆರಾಧಿಸಿದ ಗೌತಮೇಶ್ವರ ಲಿಂಗ. ಈ ಗೌತಮೇಶ್ವರ ಸ್ಥಾನದಿಂದ ಅನತಿ ದೂರದಲ್ಲಿ ದೈತ್ಯಸೂದನ ಎಂಬ ವಿಷ್ಣುವಿನ ಕ್ಷೇತ್ರವಿದೆ. ಈ ಪ್ರಪಂಚದಲ್ಲಿ ಗಯಾಕ್ಷೇತ್ರದ ವಟವೃಕ್ಷ, ಸ್ವರ್ಗ ಲೋಕದ ಕಲ್ಪವೃಕ್ಷ. ವರುಣಲೋಕದ ವೈಡೂರ್ಯಪರ್ವತ, ಭೂಲೋಕದ ದೈತ್ಯಸೂದನ ಮತ್ತು ಮಾರ್ಕಂಡೇಯ ಮಹಾಮುನಿ ಇವು ಐದು ಚಿರಂಜೀವಿ ಎಂದು ಹೇಳಲ್ಪಡುತ್ತವೆ. ದೇವಿ, ದೈತ್ಯಸೂದನ ಇದು ವಿಷ್ಣುವಿನ ಹೆಸರು. ಪ್ರತಿಯೊಂದು ಕಲ್ಪದಲ್ಲಿಯೂ ಅವನಿಗೆ ಹೊಸ ಹೊಸ ಹೆಸರುಗಳಿಂದ ಪ್ರಸಿದ್ಧಿ. ಮೊದಲನೇಯ ಕಲ್ಪದಲ್ಲಿ ಶ್ರೀಯಾವೃತ. ಎರಡನೇಯ ಕಲ್ಪದಲ್ಲಿ ವಾಮನ. ಮೂರರಲ್ಲಿ ವಜ್ರಾಂಗದ. ನಾಲ್ಕರಲ್ಲಿ ಕಮಲಾಪ್ರಿಯ ಐದನೇಯ ಕಲ್ಪದಲ್ಲಿ ದುಃಖಹರ್ತಾ. ಆರರಲ್ಲಿ ಪುರುಷೋತ್ತಮ. ಏಳನೇಯದಾದ ಈ ಕಲ್ಪದಲ್ಲಿ ದೈತ್ಯಸೂದನ ಎಂದು ಪ್ರಸಿದ್ಧನಾಗಿದ್ದಾನೆ ಆ ಭಗವಾನ್ ನಾರಾಯಣ.

ಹಿಂದೆ ದೇವದೈತ್ಯರ ಯುದ್ಧದಲ್ಲಿ ದೇವತೆಗಳಿಗೆ ಭಾರೀ ಸೋಲು, ಅಪಜಯದ ವ್ಯಥೆಯಿಂದ ವಿಹ್ವಲರಾದ ದೇವತೆಗಳಿಂದ ವಿಷ್ಣುವಿಗೆ ಶರಣಾಗತಿ ಬಗೆಬಗೆಯ ಮಂತ್ರಸ್ತುತಿ. ಅವರ ಸ್ತೋತ್ರ ಹಾಗೂ ಬಿನ್ನಹಗಳನ್ನು ಮನ್ನಿಸಿ ವಿಷ್ಣುವಿನ ಆಗಮನ. ಸುದರ್ಶನ ಚಕ್ರದಿಂದ ದೈತ್ಯನ ಸಂಹಾರ. ಭಯಭ್ರಾಂತರಾದ ಅಸುರರ ಪಲಾಯನ. ಎಲ್ಲ ದೈತ್ಯರು ಪ್ರಭಾಸಕ್ಷೇತ್ರಕ್ಕೆ ಆಗಮಿಸಿ ಸಮುದ್ರನಾಥನಿಗೆ ಮೊರೆಹೊಕ್ಕರು. ಅಲ್ಲಿಯೇ ಅವರೆಲ್ಲರ ಜಲಸಮಾಧಿ. ಅಳಿದುಳಿದವರೆಲ್ಲರೂ ಸುದರ್ಶನ ಚಕ್ರಕ್ಕೆ ಆಹುತಿ ರಕ್ಕಸರ ಸಾಮೂಹಿಕ ಪರಾಜಯ, ಪರಾಹತಿ. ಇದರಿಂದ ಲೋಕಕ್ಕೆಲ್ಲ ಕ್ಷೇಮ. ದೇವತೆಗಳು ನಿರ್ಭಯ. ಅಂದಿನಿಂದ ವಿಷ್ಣುವಿಗೆ ದೈತ್ಯಸೂದನ ಎಂದು ನಾಮಪ್ರಾಪ್ತಿ. ಲೋಕಕಂಟರಾದ ದೈತ್ಯರನ್ನು ಸಂಹರಿಸಿ ವಿಷ್ಣುವು ಈ ಪ್ರಭಾಸದ ಒಂದು ತೀರ್ಥದಲ್ಲಿ ದೈತ್ಯರ ನೆತ್ತರು ಮೆತ್ತಿದ ತನ್ನ ಸುದರ್ಶನ ಚಕ್ರವನ್ನು ತೊಳೆದ. ಅದೇ ಈಗ ಚಕ್ರತೀರ್ಥ. ಅದರಲ್ಲಿ ಎಂಟು

ಕೋಟಿ ಎಂಬತ್ತು ಸಾವಿರ ತೀರ್ಥಗಳ ಸನ್ನಿಧಾನ. ಆದ್ದರಿಂದಲೇ ಅದಕ್ಕೆ ಮೊದಲನೇ ಕಲ್ಪದಲ್ಲಿ ಕೋಟಿತೀರ್ಥ ಎಂದು ಹೆಸರು. ತ್ರೇತಾಯುಗದಲ್ಲಿ ಶ್ರೀನಿಧಾನ. ದ್ವಾಪರಯುಗದಲ್ಲಿ ಶತಧಾರ. ನಾಲ್ಕನೇ ಈ ಕಲಿಯುಗದಲ್ಲಿ ಚಕ್ರತೀರ್ಥ ಎಂದು ಖ್ಯಾತಿ. ಪೂರ್ಣಕೀರ್ತಿ. ಈ ವಿಷ್ಣು ಕ್ಷೇತ್ರದ ವ್ಯಾಪ್ತಿ ಒಂದೂವರೆ ಮೈಲು. ಚಕ್ರತೀರ್ಥದ ಪೂರ್ವಕ್ಕೆ ಯೋಗೀಶ್ವರೀ ಎಂಬ ಮಹಾದೇವಿಯ ಸ್ಥಾನ. ಹಿಂದೆ ಮಹಿಷಾಸುರ ಎಂಬ ಓರ್ವ ದುಷ್ಟ ದೈತ್ಯ. ಮನಬಂದಂತೆ ರೂಪಧರಿಸುವ ಶಕ್ತಿ ಈ ದೈತ್ಯ ರಾಜನಿಗೆ. ಮೂರು ಲೋಕಗಳು ಅವನ ಕೈಯಲ್ಲಿ. ಎಲ್ಲ ದೇವ-ದೇವತೆಗಳು ಅವನ ಅಧೀನದಲ್ಲಿ.

ಬ್ರಹ್ಮದೇವ ಒಂದು ಕಾಲದಲ್ಲಿ ತನ್ನ ಮನಸ್ಸಿನಿಂದ ಯೋಗೀಶ್ವರೀ ಎಂಬ ಒಂದು ಕನ್ಯಾಮಣಿಯನ್ನು ನಿರ್ಮಿಸಿದ. ಅವಳ ಸೌಂದರ್ಯದ ಖ್ಯಾತಿ ಮೂರು ಲೋಕಗಳಲ್ಲೆಲ್ಲ ಬೆಳದಿಂಗಳಾಗಿ ಬೆಳೆಗಿತು. ರೂಪರಾಶಿಯಾದ ಆ ರಮಣೀಮಣಿಯು ಪರಮೇಶ್ವರನನ್ನು ಕುರಿತು ಘೋರತಪಸ್ಸನ್ನು ಆಚರಿಸಿದಳು. ಒಂದು ದಿನ ಮಹಿಷಾಸುರನ ಆ ಸ್ಥಾನಕ್ಕೆ ನಾರದರ ಆಗಮನ. ಯೋಗೀಶ್ವರಿಯ ಸೌಂದರ್ಯದ ಬಣ್ಣನೆ ಮಹಿಷಾಸುರನ ಎದುರು. ತ್ರಿಭುವನ ಲೋಭನೀಯವಾದ ಆ ಲಲನಾಮಣಿಯ ಲಾವಣ್ಯದ ಬಣ್ಣನೆಯನ್ನು ಕೇಳಿ ಮಹಿಷಾಸುರನಿಗೆ ಭ್ರಮಾವೇಶ. ಅವಳ ಉನ್ಮಾದಕ ಸೌಂದರ್ಯ ಹಾಗೂ ಕಾಯ ಕಾಂತಿಗಳಿಂದ ಮಹಿಷಾಸುರನಿಗೆ ಮತಿಭ್ರಾಂತಿ. ದೀನಧ್ವನಿಯಲ್ಲಿ ಆ ದೈತ್ಯಾಧಮನಿಂದ ದೇವಿಯ ಎದುರು ಪ್ರೇಮಯಾಚನೆ "ತಪಸ್ಸನ್ನು ತೊರೆದು ನನ್ನನ್ನು ಮದುವೆಯಾಗು. ಸ್ವರ್ಗದ ಸುಖವನ್ನು ಈ ಲೋಕದಲ್ಲಿಯೇ ಅನುಭವಿಸು. ನೀನು ಒಳ್ಳೆಯ ಮಾತಿನಿಂದ ನನ್ನ ವಶಳಾಗದಿದ್ದರೆ ಮೃತ್ಯುವಶಳಾಗಬೇಕಾದೀತು." ದುರುಳ ದಾನವನ ಈ ಮರುಳು ಮಾತುಗಳನ್ನು ಕೇಳಿ ನಕ್ಕುಬಿಟ್ಟಳು ಆ ಯೋಗೀಶ್ವರಿ. ಆ ರಕ್ಕಸನನ್ನು ಧಿಕ್ಕರಿಸಿ ಅಟ್ಟಹಾಸಗೈಯುತ್ತ ಅವಳು ಬಾಯಿ ತೆರೆದಾಗ ಸಾವಿರಾರು ಮಾರಿ ನಾರಿಯರು ಅವಳ ಮುಖದಿಂದ ಹೊರಬಿದ್ದು ಶಸ್ತ್ರಾಸ್ತ್ರಗಳಿಂದ ಸಂಹರಿಸತೊಡಗಿದರು ಮಹಿಷಾಸುರನ ಸೇನೆಯನ್ನು. ಯೋಗೀಶ್ವರಿಯು ತನ್ನ ಕಾಲುಗಳಿಂದ ಆ ಮಹಿಷನನ್ನು ತುಳಿದು ಒತ್ತಿಹಿಡಿದು ತನ್ನ ತ್ರಿಶೂಲದಿಂದ ಹೊಡೆದು ಕೊಂದಳು. ಮತ್ತು ತನ್ನ ಖಡ್ಗದಿಂದ ಅವನ ಕುತ್ತಿಗೆಯನ್ನು ಕತ್ತರಿಸಿ ಹಾಕಿದಳು. ಆದರಿಂದ ಸಂತುಷ್ಟರಾದ ದೇವತೆಗಳು ದೇವಿಯ ಹೂಗಳ ಮಳೆ ಗರೆದರು. ಹೀಗೆ ಪುಷ್ಪ ವೃಷ್ಟಿಯನ್ನು ಮಾಡಿ ಪ್ರಶಂಸಾ ವೃಷ್ಟಿಯನ್ನು ಮಾಡಿದ ದೇವತೆಗಳಿಗೆ ಮೇಲೆ "ಬೇಕಾದ ವರ ಬೇಡಿರಿ" ಎಂದು ಹೇಳಿದಳು ಆ ಮಹಾತಾಯಿ. ಆಗ ಆ ಸುರರುಕೇಳಿದರು- "ತಾಯಿ, ನೀನು ಈ ಪ್ರಭಾಸಕ್ಷೇತ್ರದಲ್ಲಿ ನಿರಂತರ ನೆಲಸಬೇಕು." ದೇವತೆಗಳ ಪ್ರಾರ್ಥನೆಯಂತೆ ಆ ದೇವಿಯ ನೆಲೆಸಿದ ಸ್ಥಾನವೇ ಯೋಗೀಶ್ವರಿ ಕ್ಷೇತ್ರ ಎಂದು ಕರೆಯಲ್ಪಡುತ್ತದೆ. ಈ ಯೋಗೀಶ್ವರೀಕ್ಷೇತ್ರದಿಂದ ಪೂರ್ವದಿಕ್ಕಿನಲ್ಲಿ ಆರ್ಯನಾರಾಯಣ ಎಂಬ ವಿಷ್ಣುವಿನ ಕ್ಷೇತ್ರ. ಪೂರ್ವಕಾಲದಲ್ಲಿ ಮೇಘವಾಹನ ಎಂಬ ಓರ್ವ ದೈತ್ಯ ಬ್ರಹ್ಮದೇವರನ್ನು ಕುರಿತು ತಪಸ್ಸನ್ನು ಮಾಡಿದ. ವರಗಳನ್ನು ಬೇಡಿದ. ಅವನಿಗೆ ಚತುರಮತಿಯಾದ ಆ ಚತುರಾನನು "ನಿನಗೆ ಬೇರೆಯಾರಿಂದಲೂ ಮರಣವಿಲ್ಲ. ಶ್ರೀಹರಿಯು ತನ್ನ ಪಾದರಕ್ಷೆಯಿಂದ ಹೊಡೆದರೆ ಮಾತ್ರ ನಿನಗೆ ಸಾವು. ಅಲ್ಲಿಯವರೆಗೆ ನೀನು ಮೃತ್ಯುಂಜಯ" ಬ್ರಹ್ಮದೇವರ ವರದಿಂದ ಮದಾಂಧನಾದ ದೈತ್ಯನ ಉಪದ್ರವ ದೇವತೆಗಳಿಗೆ. ಹಿಂಸೆ ಎಲ್ಲ ಪ್ರಜರಿಗಳಿಗೆ, ಸಂಕಟ ಮೂರು ಲೋಕಕ್ಕೆ ಮಹಾಪೀಡೆ

ಸರ್ವಪ್ರಾಣಿಗಳಿಗೆ. ಇದರಿಂದ ಸುರರೆಲ್ಲರೂ ಸಂತ್ರಸ್ತ. ಮಾನವರೆಲ್ಲರೂ ಭಯ ಭ್ರಾಂತ. ಕೊನೆಗೆ ಎಲ್ಲ ದೇವತೆಗಳಿಂದ ವಿಷ್ಣುವಿನಲ್ಲಿ ಮೊರೆ. ದೈತ್ಯ ಸಂಹಾರಕ್ಕಾಗಿ ಕರೆ. ಅವರ ಪ್ರಾರ್ಥನೆಯನ್ನು ಮನ್ನಿಸಿ ಭೂಲೋಕಕ್ಕೆ ಶ್ರೀಹರಿಯ ಅವತರಣ. ಮೇಘ ವಾಹನದೈತ್ಯ ನೊಂದಿಗೆ ಹಣಾಹಣಿ ಹೋರಾಟ. ಕೊನೆಗೆ ತನ್ನ ಕಾಲಲ್ಲಿಯ ಜೋಡು ಮೆಟ್ಟುಗಳಿಂದ ಆ ದೈತ್ಯನ ವಕ್ಷಸ್ಥಳಕ್ಕೆ ದಾರುಣಪ್ರಹಾರ. ತಕ್ಷಣದಲ್ಲಿಯೇ ದೈತ್ಯನ ಸಂಹಾರ. ಸಮುದ್ರದ ನೀರಿನಲ್ಲಿ ರಕ್ಷಸ ದೇಹದ ನಿಪಾತ. ಆ ದೈನ್ಯನ್ನು ಸಂಹರಿಸಿ ಅದೇ ಸ್ಥಾನದಲ್ಲಿ ವಿಷ್ಣುವಿನ ನಿಲುಗಡೆ. ದೈತ್ಯನನ್ನು ಹೊಡೆದು ಕೊಂದ ಪಾದುಕೆಗಳ ಮೇಲೆ ಶ್ರೀಹರಿಯ ಅವಸ್ಥಿತಿ. ಶ್ರೀಹರಿಯು ನಿಂತ ಸ್ಥಿತಿ. ಅವನಿಗೇ ಈಗ ಆದಿನಾರಾಯಣ ಎಂದು ಲೋಕದಲ್ಲಿ ಪ್ರಸಿದ್ಧಿ.

ಈ ಆದಿನಾರಾಯಣನ ಸ್ಥಾನದಿಂದ ಮೂರು ಮಾರಿನ ಅಳತೆಯಲ್ಲಿಯೇ ಪಶ್ಚಿಮ ಮಹಾನದಿಯು ಹರಿಯುತ್ತಲಿದೆ. ಜರಾಸಂಧನ ಭಯದಿಂದ ಶ್ರೀಕೃಷ್ಣನು ಎಲ್ಲ ಯಾದವರೊಂದಿಗೆ ಮಥುರಾಪಟ್ಟಣವನ್ನು ತೊರೆದು ಬಿಟ್ಟು ದ್ವಾರಕೆಗೆ ಹೊರಟ. ಅದಕ್ಕೂ ಮೊದಲು ಪ್ರಭಾಸಕ್ಷೇತ್ರಕ್ಕೆ ಬಂದು ಸಮುದ್ರವನ್ನು ಸ್ಥಾನ ಕೊಡಲಿಕ್ಕೆ ಕೇಳಿದ. ಆಗ ಸೂರ್ಯಗ್ರಹಣದ ಸಮಯ. ಎಲ್ಲ ಯಾದವರ ಸ್ನಾನಕ್ಕಾಗಿ ಸನ್ನಿಹಿತ ಎಂಬ ಸರೋವರನ್ನು ನಿರ್ಮಿಸಿದ. ಅದರಲ್ಲಿ ಯದುಕುಮಾರರೆಲ್ಲರೂ ಸ್ನಾನಮಾಡಿ ಧನ್ಯರಾದರು. ಅದರ ದಕ್ಷಿಣಕ್ಕೆ ಪಾಂಡವೇಶ್ವರ. ಪಂಚಪಾಂಡವರು ಅಜ್ಞಾತವಾಸದಲ್ಲಿ ಪರಮೇಶ್ವರನಿಂದ ಆ ಪ್ರಭಾಸಕ್ಷೇತ್ರದ ಮಹಾಮಹಿಮೆಯನ್ನು ಕೇಳಿ ಪರಿತುಷ್ಟರಾದರು ಭವಾನೀ ದೇವಿಯು ತನ್ನ ಪತಿ ಪರಮೇಶ್ವರನೊಂದಿಗೆ ಈ ಪ್ರಭಾಸಕ್ಷೇತ್ರದ ಯಾತ್ರೆ ಮಾಡುವವರ ಮೇಲೆ ಪ್ರಸಾದ ವೃಷ್ಟಿಯನ್ನು ಯಾವಾಗಲೂ ಮಾಡುತ್ತಲಿರುವಳು. ನೀವಾದರೂ ತಪ್ಪದೇ ಆ ಪ್ರಭಾಸಕ್ಷೇತ್ರಕ್ಕೆ ಹೋಗಿ ಅಲ್ಲಿ ಇರುವ ಸೋಮನಾಥೇಶ್ವರನೇ ಮೊದಲಾದ ಸ್ವಯಂಭೂ ಶಿವಲಿಂಗಗಳ ದರ್ಶನ ಪಡೆದು ಸೇವೆ ಶುಶ್ರೂಷೆಗಳನ್ನು ಸಲ್ಲಿಸಿ ಪರಮೇಶ್ವರ ಪ್ರಸಾದಕ್ಕೆ ಪಾತ್ರರಾಗಿರಿ.

**ಶೌನಕರು:-** ಪೂಜ್ಯ ಸೂತಾಚಾರ್ಯರೇ, ನಿಮ್ಮ ಮುಖದಿಂದ ಪರಮ ಶ್ರೇಷ್ಠ ಶೈವ ಕ್ಷೇತ್ರವಾದ ಪ್ರಭಾಸಕ್ಷೇತ್ರ ಹಾಗೂ ಸೋಮನಾಥೇಶ್ವರ ಮೊದಲಾದ ಶಿವಲಿಂಗ ಮಹಾಮಹಿಮೆಯನ್ನು ಕೇಳಿ ನಾವು ಧನ್ಯರಾದೆವು. ಅದರಂತೆ ತಮ್ಮ ಮುಖಾರವಿಂದದಿಂದ ದ್ವಾರಕಾ ಕ್ಷೇತ್ರದ ಮಹಿಮೆಯನ್ನೂ ಅಲ್ಲಿ ಅವತಾರ ಮಾಡಿದ ಶ್ರೀಕೃಷ್ಣನ ಬಗೆಬಗೆಯ ಕೌತುಕದ ಲೀಲಾ ವಿಶೇಷಗಳನ್ನೂ ಮತ್ತು ಆ ಕೃಷ್ಣಾವತಾರದ ಹಿನ್ನೆಲೆಯ ವಂಶ ವಿಸ್ತಾರದ ಇತಿಹಾಸವನ್ನೂ ಹಾಗೂ ಕೃಷ್ಣ ಪರಮಾತ್ಮನ ಹಾಗೂ ಬಲರಾಮ ದೇವರ ಚಿತ್ರ ವಿಚಿತ್ರವಾದ ಚಾರು ಚರಿತ್ರದ ಚಮತ್ಕಾರಿಕ ಕಥಾ ಸಂದರ್ಭಗಳನ್ನೂ ವಿಸ್ತಾರವಾಗಿ ಕೇಳಬೇಕೆಂದು ನಮ್ಮ ಅಪೇಕ್ಷೆ. ದಯವಿಟ್ಟು ತಾವು ಆ ಶ್ರೀಹರಿಯ ಸಾಕ್ಷಾತ್ ಅಂಶಾವತಾರವಾದ ಶ್ರೀಕೃಷ್ಣನ ವಂಶಾವಳಿ ಹಾಗೂ ದಿವ್ಯ ಮಹಿಮಾವಳಿಗಳನ್ನೂ ಅದರ ಹಿಂದಿನ ಮುಂದಿನ ಇತಿಹಾಸ ನಿರ್ಮಾಪಕವಾದ ಮುಖ್ಯ ಮಹತ್ವದ ಘಟನಾವಳಿಗಳನ್ನೂ ನಿರೂಪಿಸಬೇಕು.

**ಸೂತ:-** ನಿಮ್ಮ ಅಪೇಕ್ಷೆಯಂತೆ ನಾನು ಕೃಷ್ಣ ಕ್ಷೇತ್ರವಾದ ದ್ವಾರಕಾ ಕ್ಷೇತ್ರ, ಮತ್ತು ಅಲ್ಲಿ ಇದ್ದು ಶ್ರೀ ಕೃಷ್ಣನು ಮಾಡಿದ ಅನೇಕ ಅವತಾರ ಚರಿತ್ರಗಳನ್ನು ವಿಶದವಾಗಿ ನಿರೂಪಿಸುತ್ತೇನೆ ಕೇಳಿರಿ. ಹಿಂದೊಮ್ಮೆ ಪೂರ್ವಕಾಲದಲ್ಲಿ ಕೆಲವು ತಪಸ್ವಿಗಳು ಮಹಾತ್ಮರು ದೈತ್ಯರಾಜನಾದ ಬಲಿಚಕ್ರವರ್ತಿಯೊಂದಿಗೆ ಅಸುರ ಸಮ್ರಾಟನಾದ ಪ್ರಲ್ಹಾದನ ಬಳಿಗೆ

ಹೋದರು. ಆಗ ಪ್ರಲ್ಹಾದ ರಾಜನು ಆ ಎಲ್ಲ ಮುನಿ ಮಹರ್ಷಿ ಮಹಾನುಭಾವರ ಸ್ವಾಗತ ಸತ್ಕಾರ ಮಾಡಿ ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಿ ಹೇಳಿದನು. ''ನನಗೆ ಪರಮ ಸಂತೋಷವಾಯಿತು ನಾನು ನಿಮ್ಮ ಯಾವ ಸೇವೆಯನ್ನು ಮಾಡಲಿ?''

**ತಪಸ್ವಿಗಳು:-** ಪ್ರಲ್ಹಾದ! ನೀನು ಪರಮ ಭಗವದ್ಭಕ್ತ. ವಿಷ್ಣು ನಿನ್ನ ಆರಾಧ್ಯದೇವ. ಶ್ರೀಕೃಷ್ಣ ಪರಮಾತ್ಮನು ಪರಂಧಾಮವನ್ನು ಕುರಿತು ತೆರಳಿದ ಬಳಿಕ ಈ ಭೂಲೋಕದಲ್ಲಿ ಆ ಶ್ರೀವಿಷ್ಣುವಿನ ವಿಶೇಷ ಸನ್ನಿಧಾನವಿದ್ದ ಆ ಸ್ಥಳವು ಯಾವುದು ಎಂಬುದನ್ನು ತಿಳಿಸು. ಮತ್ತು ಶ್ರೀಕೃಷ್ಣಪರಮಾತ್ಮನು ಈ ಭೂಲೋಕದಲ್ಲಿ ಅವತರಿಸಿದಾಗ ಮಾಡಿದ ಲೀಲಾವತಾರದ ವಿವಿಧ ಚರಿತ್ರೆಗಳನ್ನೂ ಹಾಗೂ ಆ ಅವತಾರದ ಹಿನ್ನೆಲೆಗಳನ್ನೂ ಭಕ್ತಶ್ರೇಷ್ಠನಾದ ನಿನ್ನ ಬಾಯಿಂದ ಕೇಳಬೇಕೆಂದು ತೀವ್ರ ಉತ್ಕಂಠೆ. ಅವುಗಳನ್ನೆಲ್ಲ ಇಡಿಕಿಡಿಯಾಗಿ ನಮಗೆ ನಿರೂಪಿಸು.

**ಪ್ರಲ್ಹಾದ:-** ಮಹರ್ಷಿಗಳೇ! ಶ್ರೀಹರಿಯ ಸ್ಥಾನ ಹಾಗೂ ಮಹಿಮೆಯ ಜ್ಞಾನ ಮತ್ತು ಪರಿಚಯಗಳನ್ನು ಮಾಡಿಕೊಡುವ ಸದವಕಾಶವು ನನಗೆ ದೊರೆತದ್ದು ಒಂದು ಶ್ರೀಹರಿಯ ಕೃಪೆಯೇ ಸರಿ. ಪಶ್ಚಿಮ ಸಮುದ್ರದ ತೀರದಲ್ಲಿ ಕುಶಸ್ಥಲಿ ಎಂಬ ನಗರ. ಅದರ ಮೊಟ್ಟಮೊದಲು ನಿರ್ಮಾಪಕ ಕುಶ ಮಹಾರಾಜ. ಗೋಮತೀ ನದಿಯು ಅಲ್ಲಿ ಹರಿದು ಸಮುದ್ರವನ್ನು ಸೇರುತ್ತದೆ. ಆದಕ್ಕೆ ಆನರ್ತಾ ಎಂದೂ ದ್ವಾರಾವತೀ ಎಂದು ಕರೆಯುತ್ತಾರೆ. ಅಲ್ಲಿ ಶ್ರೀಕೃಷ್ಣ ಪರಮಾತ್ಮನು ಹದಿನಾರು ಕಲೆಗಳಿಂದಲೂ ಹನ್ನೆರಡು ಮೂರ್ತಿಗಳಿಂದಲೂ ಒಡಗೂಡಿಕೊಂಡು ನೆಲೆ ನಿಂತಿದ್ದಾನೆ. ಆ ದ್ವಾರಕಾಪುರಿಯು ಒಂದು ಭೂಲೋಕದ ವೈಕುಂಠ. ಶಂಖ ಚಕ್ರ ಗದಾ ಪದ್ಮ ಧಾರಿಯಾದ ಶ್ರೀಹರಿಯು ಅಲ್ಲಿ ಸದಾ ಸನ್ನಿಹಿತ. ಅಲ್ಲಿ ಹರಿಯುವ ಗೋಮತೀ ನದಿಯಲ್ಲಿ ಸ್ನಾನಮಾಡಿ, ಅಲ್ಲಿ ನೆಲಿಸಿದ ತ್ರಿವಿಕ್ರಮ ಮೂರ್ತಿಯನ್ನು ಪೂಜಿಸಿ, ಅಲ್ಲಿಯೇ ಇರುವ ಚಕ್ರತೀರ್ಥದಲ್ಲಿ ಮಿಂದು ಕೃಷ್ಣಾವತಾರದ ಸಾಗ್ರಸಮಗ್ರ ಚರಿತ್ರೆಯನ್ನು ಶ್ರವಣ ಮಾಡಿದವರಿಗೆ ಕೈಯಳತೆಯಲ್ಲಿಯೇ ಕೈವಲ್ಯ. ಭಗವಾನ್ ಶ್ರೀವೇದವ್ಯಾಸ ದೇವರು ನಿರೂಪಿಸಿದ ಆ ಶ್ರೀಕೃಷ್ಣನ ದಿವ್ಯಾವತಾರದ ರಮಣೀಯವಾದ ಚರಿತ್ರೆಯನ್ನು ನಾರದರ ಮುಖಾಂತರ ನಾನು ಕೇಳಿದೆ. ಅದನ್ನೇ ನಿಮಗೆ ಅದೇ ವ್ಯಾಸರ ಅಕ್ಷರ ಅನುಪೂರ್ವೀ ಸಹಿತವಾಗಿ ಸಂಪೂರ್ಣವಾಗಿ ನಾನು ತಿಳಿಸುತ್ತೇನೆ. ನೀವು ಸಾವಧಾನ ಚಿತ್ತರಾಗಿ ಆ ಮಹಾವಿಷ್ಣುವಿನ ಹಾಗೂ ಅವನ ಪೂರ್ಣಾವತಾರಿಯಾದ ಶ್ರೀಕೃಷ್ಣನು ಸಾದ್ಯಂತ ಚರಿತ್ರವನ್ನು ಸಾವಧಾನ ಚಿತ್ತರಾಗಿ ಆಲಿಸಿರಿ.

**ಶೌನಕ:-** ಸೂತಾಚಾರ್ಯ! ನೀನೀಗ ಅನೇಕ ಮಹತ್ವಪೂರ್ಣ ಆಖ್ಯಾನಗಳನ್ನು ಹೇಳಿದೆ. ದೇವ, ದಾನವ, ಮಾನವ, ಮುನಿ, ಗಂಧರ್ವ, ಸರ್ಪ, ಹಕ್ಕಿ, ರಾಕ್ಷಸ, ಸಿದ್ಧ, ಗುಹ್ಯಕ ಮುಂತಾಗಿ ಬೇರೆಬೇರೆ ಜಾತಿ ಜನಾಂಗ ಜನ್ಮ ಕರ್ಮಗಳುಳ್ಳ ಎಲ್ಲ ಪ್ರಾಣಿಗಳ ಚಿತ್ರವಿಚಿತ್ರವಾದ ಚರಿತ್ರ ಆಖ್ಯಾನ ಕಥೆ ಹಾಗೂ ವೃತ್ತಾಂತಗಳನ್ನು ನಮಗೆ ತಿಳಿಸಿದಿರಿ. ಆದರೆ ಯಾದವಕುಲದ ವೃಷ್ಣಿ ಅಂಧಕ ಎಂಬ ಎರಡು ವಂಶಗಳ ವಿಸ್ತರದ ಬಗೆಯನ್ನು ತಾವು ನಮಗೆ ಹೇಳಲಿಲ್ಲ. ಈಗ ದಯವಿಟ್ಟು ತಾವು ಅದನ್ನೆಲ್ಲ ತಿಳಿಸಬೇಕು. ಶ್ರೀಹರಿಯ ಕಥಾರೂಪವಾಗಿ ತಾವು ಹೇಳಿದ ಪುರಾಣವೆಲ್ಲವೂ ನಮಗೊಂದು ಅಮೃತ. ತಮ್ಮ ಪುರಾಣವಾಣಿ ಕೇಳಲು ಇಂಪು ಹೃದಯಕ್ಕೆ ಆಪ್ಯಾಯನ.

**ಉಗ್ರಶವಸೂತ:-** ಹಿಂದೆ ಶ್ರೀವೇದವ್ಯಾಸರ ಶಿಷ್ಯರಾದ ವೈಶಂಪಾಯನ ಮಹರ್ಷಿಗಳನ್ನು ಕುರಿತು ಜನಮೇಜಯ ಮಹಾರಾಜ ನಿನ್ನಂತೆಯೇ ಶ್ರೀಹರಿಯು ಹುಟ್ಟಿ ಬೆಳಗಿದ ಅಂಧಕ ವೃಷ್ಣಿವಂಶಗಳ ವಿಸ್ತಾರವನ್ನು ಬಣ್ಣಿಸಿರಿ ಎಂದು ಕೇಳಿದ್ದ, ಅದಕ್ಕೆ ಶ್ರೀವ್ಯಾಸರು ಉತ್ತರರೂಪವಾಗಿ ಬಿತ್ತರಿಸಿದ ಆ ಹರಿಯ ಕಥಾಮೃತವನ್ನೇ ನಾನು ನಿಮಗೆ ಹೇಳುತ್ತೇನೆ ಕೇಳಿರಿ. ಈ ಚರಾಚರಾತ್ಮಕವಾದ ಪ್ರಪಂಚವನ್ನು ಸೃಷ್ಟಿಸಿದವ ಪರಮಾತ್ಮ. ಅವನು ಮೊದಲು ಚತುರ್ಮುಖ ಬ್ರಹ್ಮನನ್ನು ಸೃಷ್ಟಿಮಾಡಿ ಅವನಿಂದ ಸ್ಥಾವರ ಜಂಗಮಾತ್ಮಕವಾದ ಈ ವಿಶ್ವವನ್ನೆಲ್ಲ ನಿರ್ಮಾಣ ಮಾಡಿಸಿದ. ಈ ಜಗತ್ತಿಗೆಲ್ಲ ಕಾರಣ ಬ್ರಹ್ಮ, ಆ ಬ್ರಹ್ಮನಿಗೆ ಕಾರಣ ಶ್ರೀಹರಿ. ಆ ಶ್ರೀಹರಿಗೆ ಮಾತ್ರ ಯಾರೂ ಕಾರಣರಿಲ್ಲ. ಅವನನ್ನು ಯಾರೂ ಹುಟ್ಟಿಸಿಲ್ಲ. ಅವನು ಸ್ವಯಂಭೂ ಅಜ. ಭಗವಂತ ಮೊಟ್ಟ ಮೊದಲು ಸೃಷ್ಟಿಮಾಡಬೇಕು ಎಂದು ಬಯಸಿದ. ಅವ್ಯಕ್ತ, ಪ್ರಧಾನ, ಎಂದು ಕರೆಯುವ ಜಡಪ್ರಕೃತಿಯಿಂದ ಮಹತ್ ಎಂಬ ತತ್ವವನ್ನು ಸೃಷ್ಟಿಸಿದ. ಈ ಜಡಪ್ರಕೃತಿಗೆ ಅಭಿಮಾನಿಯಾದ ಲಕ್ಷ್ಮೀದೇವಿಯಿಂದ ಚತುರ್ಮುಖ ಬ್ರಹ್ಮದೇವರನ್ನು ಹಡೆದ. ಮಹತ್ತತ್ವವೇ ಬ್ರಹ್ಮದೇವರಿಗೆ ಶರೀರ. ಆ ಮಹತ್ತತ್ವದಿಂದ ಅಹಂಕಾರ ತತ್ವವು ಜನಿಸಿತು. ಅಹಂಕಾರದಿಂದ ಭೂತ ಸೂಕ್ಷ್ಮಗಳು ಎಂದರೆ ಪಂಚತನ್ಮಾತ್ರೆಗಳ ಉತ್ಪತ್ತಿ. ಈ ತನ್ಮಾತ್ರೆಗಳಿಂದ ಪಂಚಭೂತಗಳ ಉತ್ಪತ್ತಿ. ಇವು ಸ್ಥೂಲ ಭೂತಗಳು. ಇವುಗಳಲ್ಲಿ ಮೊದಲು ನೀರಿನ ಸೃಷ್ಟಿ, ಬ್ರಹ್ಮಾಂಡದ ಒಳಗಿನ ಈ ನೀರಿನಲ್ಲಿ ಶ್ರೀ ದೇವಮಾನದ ಒಂದು ಸಾವಿರ ವರ್ಷ ಶೇಷಶಾಯಿಯಾಗಿ ವಾಸಿಸಿದ ಶ್ರೀಹರಿ. ನೀರಿನಲ್ಲಿ ವಾಸಮಾಡಿದ್ದರಿಂದ ಅವನಿಗೆ ನಾರಾಯಣ ಎಂದು ಹೆಸರು.

**''ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ।**
**ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ ॥**

ನಾರ ಎಂದರೆ ನೀರು. ಅದೇ 'ಅಯನ' ಎಂದರೆ ಆಶ್ರಯವಾಗಿ ಉಳ್ಳವ ನಾರಾಯಣ. (೧) ಆರ ಎಂದರೆ ದೋಷ. 'ನ+ಅರ' ದೋಷ ಇಲ್ಲದವ. ನಿರ್ದೋಷ ಪುರುಷ ಎಂತಲೂ ಅರ್ಥ ಈ ನಾರಾಯಣಶಬ್ದಕ್ಕೆ. (೨) ''ನ+ಅರ'' ದೋಷವಲ್ಲದ ಗುಣ ಎಂದು 'ನಾರ' ಶಬ್ದದ ಅರ್ಥ. ''ನಾರಾಣಾಂ = ಗುಣಾನಾಂ 'ಅಯನಂ' ಆಶ್ರಯಃ = ನಾರಾಯಣಃ' ಗುಣಗಳಿಂದ ಪರಿಪೂರ್ಣನಾದವನೇ ನಾರಾಯಣ. (೩) ನಿರ್ದುಷ್ಟಳಾದ ಲಕ್ಷ್ಮಿದೇವಿಗೆ (೪) ಆಶ್ರಯ. ಮುಕ್ತರಿಗೆ ಆಶ್ರಯ ಜ್ಞಾನಿಗಮ್ಯ. ಮೋಕ್ಷದಾತ ಎಂದು ಮುಂತಾಗಿ ಅನೇಕ ಅರ್ಥ ಗರ್ಭಿತವಾದ ನಾರಾಯಣ ಶಬ್ದ ವಾಚ್ಯನಾಗಿದ್ದಾನೆ ಆ ಶ್ರೀಹರಿ. ಈ ನೀರಿನಲ್ಲಿ ನಾರಾಯಣನು ತನ್ನ ವೀರ್ಯವನ್ನು ಇರಿಸಿದನು. ಹಿರಣ್ಯವರ್ಣದ ಅದು ಬಂಗಾರ ಬಣ್ಣದ ಅಂಡದ ಆಕಾರವಾಗಿ ಆ ನೀರಿನಲ್ಲಿ ಬೆಳೆಯಿತು. ಆದುದರಿಂದ ಚತುರ್ಮುಖನು ಉತ್ಪನ್ನನಾದ. ಹಿರಣ್ಮಯವಾದ ಅಂಡದಿಂದ ಹುಟ್ಟಿದ್ದರಿಂದ ಅವನು 'ಹಿರಣ್ಯಗರ್ಭ' ಎಂದು ಹೆಸರಾದ. ಒಂದು ವರ್ಷದವರೆಗೆ ಬ್ರಹ್ಮನು ಆ ಅಂಡದಲ್ಲಿದ್ದ. ನಂತರ ಅದನ್ನು ಇಬ್ಭಾಗವಾಗಿ ಮಾಡಿ ಹೊರಗೆ ಬಂದ. ಬ್ರಹ್ಮ ಹುಟ್ಟಿದ ಅಂಡ ಪರಬ್ರಹ್ಮನ ವೀರ್ಯದಿಂದ ರೂಪಗೊಂಡ ಅಂಡವಾದುದರಿಂದ ಅದು ಬ್ರಹ್ಮಾಂಡ ಎನಿಸಿತು. ಬ್ರಹ್ಮ ಹೊರಬಿದ್ದು ಬಂದ ಬಳಿಕ ಸೀಳಿ ಎರಡು ಹೋಳಾದ ಆ ಬ್ರಹ್ಮಾಂಡದ ಮೇಲ್ಭಾಗವೇ ಸ್ವರ್ಗಾದಿಗಳು ಕೆಳಭಾಗವೇ ಭೂಭಾಗ.

ಇವೆರಡರನಡುವಿನದೇ ಆಕಾಶದ ಅವಕಾಶ. ಈ ಬ್ರಹ್ಮಾಂಡದ ಮಧ್ಯದಲ್ಲಿ ನೀರಿನಲ್ಲಿ ತೇಲಾಡುತ್ತಿದೆ ಈ ಪೃಥ್ವೀಮಂಡಲ. ಆಕಾಶ ಪಥದಲ್ಲಿ ಸೂರ್ಯ, ಚಂದ್ರ, ನಕ್ಷತ್ರ, ನೀ ಹಾರಿಕೆ, ಗ್ರಹೋಪಗ್ರಹಗಳನ್ನೂ ಆ ಪರಮಾತ್ಮನೇ ನಿರ್ಮಿಸಿದ್ದಾನೆ. ಸೂರ್ಯನ ಮೂಲಕ ಎಂಟು ದಿಕ್ಕು ಹಾಗೂ ಉಪದಿಕ್ಕುಗಳ ನಿರ್ಮಾಣವಾಯಿತು. ಈ ಬ್ರಹ್ಮಾಂಡದ ಒಳಗಡೆ ಮಾತ್ರ ಈ ದಿಕ್ಕು ವಿದಿಕ್ಕುಗಳ ಕಲ್ಪನೆ. ಇದರ ಹೊರಗಡೆ ದಿಕ್ಕಿನ ಪ್ರಸಕ್ತಿಯೇ ಇಲ್ಲ. ಈ ಬ್ರಹ್ಮಾಂಡ ಸೃಷ್ಟಿಗೆ ಅನುಗುಣವಾಗಿಯೇ ಪಿಂಡಾಂಡದ ರಚನೆಯನ್ನು ನಾರಾಯಣನ ಆದೇಶದಿಂದ ಬ್ರಹ್ಮದೇವರು ಗೈದರು. ಅದಕ್ಕಾಗಿ ಮೊದಲು ಕಾಲ, ಮನಸ್ಸು, ಮಾತು, ಕಾಮ, ಕ್ರೋಧ, ಪ್ರೀತಿ ಮುಂತಾದವುಗಳನ್ನು ಸೃಷ್ಟಿ ಮಾಡಲಾಯಿತು.

ಈ ಸೃಷ್ಟಿಯಕಾರ್ಯವನ್ನು ಬೆಳೆಯಿಸಲಿಕ್ಕಾಗಿ ಬ್ರಹ್ಮದೇವರು ಮರೀಚಿ, ಅತ್ರಿ ಅಂಗಿರಸ್, ಪುಲಸ್ತ್ಯ, ಪುಲಹ, ಕ್ರತು, ವಶಿಷ್ಠ ಎಂಬ ಸಪ್ತ (ಏಳು) ಋಷಿಗಳನ್ನು ತನ್ನ ಮನಸ್ಸಿನಿಂದಲೇ ಹುಟ್ಟಿಸಿದ. ಇವರಿಗೆ ಸಪ್ತಬ್ರಹ್ಮರು ಎಂದು ಹೆಸರು. ಇವರಲ್ಲದೇ ಬ್ರಹ್ಮದೇವರು ಸನಕ ಸನಂದನ ಸನಾತನ ಸನತ್ಕುಮಾರ ಸ್ಕಂದ ನಾರದ ರುದ್ರ ಎಂಬ ಇನ್ನೂ ಏಳು ಪುತ್ರರನ್ನು ಪಡೆದರು. ಇವರಲ್ಲಿ ಸನತ್ಕುಮಾರನು ಮರೀಚಿ ಮೊದಲಾದ ಸಪ್ತರ್ಷಿಗಳಿಗಿಂತ ಹಿರಿಯ. ಬ್ರಹ್ಮನ ಕೋಪದಿಂದ ಜನಿಸಿದವನೇ ರುದ್ರ. ಇವರಲ್ಲಿ ಸನತ್ಕುಮಾರ ಹಾಗೂ ಸ್ಕಂದ ಸನಕ ಸನಂದ ಸನಾತನ ನಾರದ ಈ ಆರು ಜನರು ನೈಷ್ಠಿಕ ಬ್ರಹ್ಮಚರ್ಯ ನಿಷ್ಠರಾಗಿ ಸೃಷ್ಟಿಯನ್ನು ಮುಂದುವರಿಸಲಿಲ್ಲ. ಉಳಿದೆಲ್ಲ ಏಳೂ ಬ್ರಹ್ಮ ಮಾನಸ ಪುತ್ರರು ತಂದೆ ಬ್ರಹ್ಮದೇವರ ಆಣತಿಯಂತೆ ವಂಶಾಭಿವೃದ್ಧಿಯನ್ನು ಸಾಧಿಸಿದರು. ಈ ಏಳು ಸಪ್ತರ್ಷಿಗಳ ವಂಶಗಳಲ್ಲಿ ಸೂರ್ಯ ಚಂದ್ರಾದಿ ದೇವತೆಗಳೂ ಕಶ್ಯಪ ಮೊದಲಾದ ಬ್ರಹ್ಮರ್ಷಿಗಳೂ ಯಜ್ಞ ಯಾಗಾದಿಗಳನ್ನು ಮಾಡುವ ಬ್ರಾಹ್ಮಣರೂ ಜನಿಸಿ ತಮ್ಮ ತಮ್ಮ ಕುಲಗಳನ್ನು ಬೆಳಗಿಸಿದರು. ಅನಂತರ ಬ್ರಹ್ಮದೇವರು ಯಜ್ಞಕಾರ್ಯಗಳಿಗೆ ಉಪಯುಕ್ತವಾದ ಋಗ್ವೇದ ಯಜುರ್ವೇದ ಸಾಮವೇದಗಳನ್ನು ಆವಿಷ್ಕಾರಗೊಳಿಸಿದರು. ಮತ್ತು ಹವಿಸ್ಸು, ಮಂತ್ರ, ಮೋಡ, ಮಿಂಚು, ಇಂದ್ರಚಾಪ, ಔಷಧಿ, ವನಸ್ಪತಿ ಮುಂತಾದವುಗಳನ್ನೂ ಯಜ್ಞಾರ್ಥವಾಗಿಯೇ ಬ್ರಹ್ಮದೇವರು ಸೃಷ್ಟಿಸಿದರು.

ಯಜ್ಞದಲ್ಲಿ ಉದ್ದೇಶ ಭೂತರಾದ ದೇವತೆಗಳನ್ನು ಬ್ರಹ್ಮನು ತನ್ನ ಮುಖದಿಂದ ಉತ್ಪಾದಿಸಿದ. ಪಿತೃಗಳನ್ನು ವಕ್ಷಸ್ಥಳದಿಂದ, ಮಾನವರನ್ನು ಜನನೇಂದ್ರಿಯದಿಂದ, ದೈತ್ಯರನ್ನು ಪೃಷ್ಠ ಭಾಗದಿಂದ ನಿರ್ಮಿಸಿದ. ಉಳಿದೆಲ್ಲ ಪ್ರಾಣಿಗಳೂ ಆ ಬ್ರಹ್ಮದೇವನ ಅಗಾಂಗಳಿಂದ ಹುಟ್ಟನ್ನು ಪಡೆದವು. ಬ್ರಹ್ಮದೇವರ ಮಾನಸ ಪುತ್ರರಲ್ಲಿ ಒಬ್ಬರಾದ ವಶಿಷ್ಠರಿಗೆ ಆಪವ ಪ್ರಜಾಪತಿ ಎಂದು ಹೆಸರು. ಅವರು ಬ್ರಹ್ಮನ ಆದೇಶದಂತೆ ಪ್ರಜಾಸೃಷ್ಟಿಯನ್ನು ವಿಪುಲಗೊಳಿಸಬೇಕು ಎಂದು ಪ್ರಯತ್ನಿಸಿದರು. ಆದರೂ ಅವರ ಅಪೇಕ್ಷೆಯಂತೆ ಸೃಷ್ಟಿಯುಭರದಿಂದ ಬೆಳೆಯಲಿಲ್ಲ. ಆಗ ಅವರೇ ತಮ್ಮ ದೇಹವನ್ನು ಹೆಣ್ಣು ಗಂಡು ಎಂದು ಎರಡು ಭಾಗ ಮಾಡಿದರು. ಆ ಹೆಣ್ಣು ಶತರೂಪಾ. ಹೆಣ್ಣು-ಕುದುರೆ, ಜಿಂಕೆ ಮುಂತಾದ ಹೆಣ್ಣು ಪ್ರಾಣಿಗಳ ರೂಪತಳೆದಳು ಆ ಶತರೂಪೆ. ಆಗ ಆಪವ ಪ್ರಜಾಪತಿಗಳು ತಾವು ಎತ್ತು, ಗಂಡುಕುದುರೆ, ಗಂಡು ಚಿಗರೆಗಳ ರೂಪ ಪಡೆದು ವಿಹಾರ ಮಾಡಿ ಮೈಥುನ ರೀತಿಯಿಂದ ಪ್ರಜೆಗಳ ವೃದ್ಧಿಯನ್ನು ಸಾಧಿಸಿದರು. ಮೊದಲು ವಿಷ್ಣು ವಿರಾಟ್ ನಾಮಕನಾದ ಬ್ರಹ್ಮನನ್ನು ಹುಟ್ಟಿಸಿದ. ಬ್ರಹ್ಮನ ಮೂಲಕ ಮೊದಲು ಅಯೋನಿಜವಾದ ಸಂತಾನವನ್ನೆ,

ಶ್ರೀಹರಿಯು ಉತ್ಪಾದಿಸಿದ. ಇದು ಶ್ರೀಹರಿಯ ಮೊದಲನೆಯ ಸರ್ಗ. ಬ್ರಹ್ಮನನ್ನು ಮುಂದು ಮಾಡಿಕೊಂಡು ವ್ಯವಧಾನದಿಂದ ಅವನ ನಿಮಿತ್ತದಿಂದ ಆದ ಮೊದಲು ಸೃಷ್ಟಿಗೆ ನಾರಾಯಣನ ವಿಸರ್ಗ ಎನ್ನುವರು. ವ್ಯವಹಿತ ಸರ್ಗ ವಿಸರ್ಗ. ಮುಂದೆ ಅಪವಮನು ಸ್ತ್ರೀಯಾಗಿ ಮೈಥುನ ಸೃಷ್ಟಿ ಮಾಡಿದ್ದು ಮನ್ವಂತರ. ಬ್ರಹ್ಮ ದೇವರನ್ನು ಅಂತರ ಮಾಡಿಕೊಂಡು ಎಂದರೆ ಮಧ್ಯದಲ್ಲಿ ವ್ಯವಧಾನವಾಗಿಸಿ ಶ್ರೀಹರಿ ಗೈದ ಅಯೋನಿಜ ಸೃಷ್ಟಿ ಮೊದಲನೆಯ ವಿಷ್ಣುವಿನ ವಿಸರ್ಗ. ಅದೇ ವಿಷ್ಣು ಅಪವ ಮನುವಿನ ಮೂಲಕ ಹೆಣ್ಣನ್ನು ಅಂತರದಲ್ಲಿ ಇರಿಸಿ ತನ್ಮೂಲಕ ಮಾಡಿದ ಯೋನಿಜ ಸೃಷ್ಟಿ ಮನ್ವಂತರ ಎನಿಸಿತು. ಅಯೋನಿಜ ಮತ್ತು ಯೋನಿಜ ಎರಡೂ ವಿಧವಾದ ಸೃಷ್ಟಿಗೆ ಮುಖ್ಯ ಕಾರಣ ಶ್ರೀಹರಿಯೆ. ಅಯೋನಿಜ ಸೃಷ್ಟಿ ವಿಸರ್ಗ. ಯೋನಿಜ ಸೃಷ್ಟಿ ಮನ್ವಂತರ.

## ಧ್ರುವನಹುಟ್ಟು ಹಾಗೂ ವಂಶ ವಿಸ್ತಾರ — ಅಧ್ಯಾಯ - ೭೯

ಅಯೋನಿಜೆಯಾದ ಶತರೂಪೆಯು ಹತ್ತು ಸಾವಿರ ವರ್ಷ ಘೋರ ತಪಸ್ಸನ್ನು ಮಾಡಿ ಸ್ವಾಯಂಭುವಮನುವಿನಂತಹ ದಿವ್ಯತೇಜೋಭಾಸುರನಾದ ಪತಿಯನ್ನು ಪಡೆದಳು. ಅವನಿಂದ ಅವಳಿಗೆ ವೀರ ಎಂಬ ಗಂಡು ಮಗು ಹುಟ್ಟಿತು. ಈ ವೀರನಿಗೆ ಕಾಮ್ಯಾ ಎಂಬ ಪತ್ನಿ ಇದ್ದಳು. ಕಾಮ್ಯೆಯಲ್ಲಿ ವೀರನಿಗೆ ಪ್ರಿಯವ್ರತ ಉತ್ತಾನಪಾದ ಎಂಬ ಇಬ್ಬರು ಪುತ್ರರು ಉತ್ಪನ್ನರಾದರು. ಪ್ರಿಯವ್ರತನಿಗೆ ಕರ್ದಮ ಪ್ರಜಾಪತಿಯ ಮಗಳನ್ನು ಕೊಟ್ಟಿದ್ದರು. ಅವಳ ಹೆಸರಾದರೂ ಅತ್ತೆಯಂತೆ ಕಾಮ್ಯಾ ಎಂದೇ ಇದ್ದಿತು ಪ್ರಿಯವ್ರತನಿಂದ ಕಾಮ್ಯೆಗೆ ಸಮ್ರಾಟ್, ಕುಕ್ಷಿ, ವಿರಾಟ್, ಪ್ರಭು, ಎಂದು ನಾಲ್ಕು ಜನ ಮಕ್ಕಳಾದರು.

ಅತ್ರಿನಾಮಕ ಪ್ರಜಾಪತಿಯು ಉತ್ತಾನಪಾದನನ್ನು ದತ್ತಕ ತೆಗೆದುಕೊಂಡನು. ಉತ್ತಾನಪಾದನಿಗೆ ಸೂನೃತಾ ಎಂಬ ಹೆಂಡತಿಯಿಂದ ಧ್ರುವ, ಕೀರ್ತಿಮಂತ, ಶಿವ, ಅಯಸ್ಪತಿ ಎಂಬ ಕುಮಾರರಿದ್ದರು. ಪರಮಭಗವದ್ಭಕ್ತನಾದ ಧ್ರುವರಾಜನ ತಾಯಿಯಾದ ಸೂನೃತೆಯನ್ನು ಅವಳ ತಂದೆಯಾದ ಧರ್ಮನು ಅಶ್ವಮೇಧಯಾಗವನ್ನು ಮಾಡಿ ಆ ಯಜ್ಞ ಫಲರೂಪವಾಗಿ ಪಡೆದಿದ್ದನು. ಧ್ರುವನು ಮೂರು ಸಾವಿರ ವರ್ಷ ಅತ್ಯುಗ್ರವಾದ ಮಹಾ ತಪಸ್ಸನ್ನು ಮಾಡಿ ಭಗವಾನ್ ನಾರಾಯಣನನ್ನು ಅರ್ಚಿಸಿ ಮೆಚ್ಚಿಸಿದನು. ಅವನೆದುರು ಪ್ರತ್ಯಕ್ಷನಾದ ಆ ಪರಬ್ರಹ್ಮನು ಧ್ರುವನಿಗೆ ಸಪ್ತರ್ಷಿಗಳ ಮುಂದೆ ಅಚಲವಾದ ಒಂದು ಧ್ರುವಸ್ಥಾನವನ್ನಿತ್ತು ಸಂತೋಷಾತಿಶಯದಿಂದ ಅವನನ್ನು ಅತ್ಯರ್ಥ ಪ್ರಸಾದದಿಂದ ಅನುಗ್ರಹಿಸಿದ್ದಾನೆ.

ಧ್ರುವರಾಜನ ಲೋಕೋತ್ತರವಾದ ಮಹಾ ಮಹಿಮೆಯನ್ನು ಕಂಡು ಕೇಳಿದ ದೈತ್ಯ ಗುರುವಾದ ಶುಕ್ರಾಚಾರ್ಯರೂ ಕೂಡ 'ಅಬ್ಬಾ ಏನಿದು ಧ್ರುವನ ಪುಣ್ಯ! ಎಂಥ ಭಾಗ್ಯ! ಸಪ್ತರ್ಷಿಗಳೂ ಕೂಡ ಇವನನ್ನು ಪ್ರದಕ್ಷಿಣೆ ಹಾಕುತ್ತಿರುವರಲ್ಲ!' ಎಂದು ಪ್ರಶಂಸೋದ್ಗಾರ ತೆಗೆದರಂತೆ.

ವೈಷ್ಣವ ಶಿಖಾಮಣಿಯಾದ ಈ ಧ್ರುವರಾಜನಿಗೆ ಶಂಭು ಎಂಬ ಪತ್ನಿಯಿಂದ ಶ್ಲಿಷ್ಟಿ, ಭವ್ಯರೆಂಬಿಬ್ಬರು ಪುತ್ರರು ಜನಿಸಿದರು. ಶ್ಲಿಷ್ಟಿಯ ಹೆಂಡತಿಯಾದ ಸುಚ್ಛಾಯೆಯು ರಿಪು, ರಿಪುಂಜಯ, ಪುಣ್ಯ, ವೃಕಲ, ವೃಕತೇಜಸ ಎಂಬ ಐದು ಸತ್ ಪುತ್ರರನ್ನು ಪಡೆದಳು.

ರಿಪುವಿಗೆ ಬೃಹತೀ ಎಂಬ ಭಾರ್ಯೆಯಲ್ಲಿ ಅತ್ಯಂತ ತೇಜಃಪುಂಜನಾದ ಚಾಕ್ಷುಷ ಎಂಬ ಕಾಂತಿವಂತನಾದ ಪುತ್ರನು ಜನಿಸಿದನು. ಆ ಚಾಕ್ಷುಷನಿಗೆ ವೀರಣ ಪ್ರಜಾಪತಿಯ ಮಗಳಾದ ಪುಷ್ಕರಿಣಿ ಎಂಬ ಮಡದಿಯಿದ್ದಳು. ಅವಳಿಗೆ ಮನು ಎಂಬ ಮಗನು ಜನಿಸಿದನು. ಮಹಾ ಪರಾಕ್ರಮಿಯಾದ ಮನುವಿಗೆ ಅರಣ್ಯ ಪ್ರಜಾಪತಿಯ ಕನ್ಯೆಯಾದ ನಡ್ವಲಾ ಎಂಬ ನಾರೀಮಣಿಯಿಂದ ಉರು, ಪುರು, ಶತದ್ಯುಮ್ನ, ತಪಸ್ವಿ, ಸತ್ಯವಾನ್, ಕವಿ, ಅಗ್ನಿಷ್ಟುತ್, ಅತಿರಾತ್ರ, ಸದ್ಯುಮ್ನ, ಅಭಿಮನ್ಯು ಎಂಬ ಹತ್ತು ಮಕ್ಕಳು ಹುಟ್ಟಿದರು. ಇವರಲ್ಲಿ ಉರು ಎಂಬ ರಾಜಕುಮಾರನಿಗೆ ಅಗ್ನಿಕನ್ಯೆಯಲ್ಲಿ ಅಂಗ, ಸುಮನ, ಖ್ಯಾತಿ, ಕ್ರತು, ಅಂಗಿರಸ, ಗಮ ಎಂಬ ಆರು ಮಕ್ಕಳು ಜನಿಸಿದರು. ಇವರಲ್ಲಿ ಅಂಗರಾಜನು ಸುನೀಥಾ ಎಂಬ ಅಂಗನೆಯಲ್ಲಿ ವೇನ ಎಂಬಮಗುವನ್ನು ಪಡೆದನು. ವೇನನ ಅಪಚಾರ, ಅನಾಚಾರ, ಅತ್ಯಾಚಾರಗಳಿಂದ ನೊಂದು ಕ್ರುದ್ಧರಾದ ಸಿದ್ಧಮುನಿ ಮಹರ್ಷಿಗಳು ಅವನನ್ನು ನಿಗ್ರಹಿಸಿ ಅವನ ಬಲಗೈಯನ್ನು ಕಡೆದರು. ಆಗ ಪೃಥುರಾಜನು ಹುಟ್ಟಿಬಂದನು. ಅವನನ್ನು ಕಂಡಕೂಡಲೇ ಋಷಿಗಳು 'ಇವನು ಪ್ರಜೆಗಳಿಗೆ ಸಂತಸ ಶಾಂತಿಗಳನ್ನಿತ್ತು ರಕ್ಷಿಸುವನು' ಎಂದು ಹಾಡಿ ಹೊಗಳಿ ಹರಸಿದರು.

ಪ್ರಪಂಚದ ಪ್ರಪ್ರಥಮ ಪಟ್ಟಾಭಿಷಿಕ್ತನಾದ ರಾಜರ್ಷಿ ಎನಿಸಿದ ಆ ಪೃಥು ಮಹಾರಾಜನಿಂದ ಸೂತ, ಮಾಗಧರು ಹುಟ್ಟಿದರು. ಹಾಗೂ ಭೂಮಿಯು ಎಲ್ಲರಿಗೂ ಅಭೀಪ್ಸಿತಗಳನ್ನು ಕರೆದು ಕೊಟ್ಟಳು.

ಆ ಪೃಥುವಿನಿಂದ ಮುಂದೆ ಅಂತರ್ಧಿ ಪಲಿತ ಎಂಬ ಮಕ್ಕಳಾದರು. ಅಂತರ್ಧಿಗೆ ಶಿಖಂಡಿನಿಯೆಂಬ ಕಾಂತೆಯಿಂದ ಹವಿರ್ಧಾನ; ಹವಿರ್ಧಾನನಿಗೆ ಅಗ್ನಿ ಕುಮಾರಿಯಾದ ಧಿಷಣೆಯಿಂದ ಪ್ರಾಚೀನಬರ್ಹಿ, ಶುಕ್ಲ, ಗಯ, ಕೃಷ್ಣ, ವ್ರಜ, ಅಜಿನ ಎಂಬ ಷಟ್‌ಸುತರು ಸಂಭೂತರಾದರು.

ಇವರಲ್ಲಿ ಪ್ರಾಚೀನ ಬರ್ಹಿ ಎಂಬ ಪ್ರಜಾಧಿನಾಥನು ಸರ್ವಶ್ರೇಷ್ಠನಿದ್ದನು. ಅವನು ಯಜ್ಞಮಾಡಿ ಪೂರ್ವಾಭಿಮುಖನಾಗಿ ಇರಿಸಿದ ದರ್ಭಗಳಿಂದ ಭೂಮಿಯೆಲ್ಲ ತುಂಬಿ ಹೋದದ್ದರಿಂದ ಅವನಿಗೆ ಪ್ರಾಚೀನಬರ್ಹಿ ಎಂಬ ಹೆಸರು ಬಂದಿತ್ತು. ಅವನು ಸಮುದ್ರನಾಥನ ಮಗಳಾದ ಸವರ್ಣೆಯನ್ನು ಮದುವೆಯಾಗಿ ಹತ್ತು ಜನ ಪ್ರಾಚೇತಸರೆಂಬ ಖ್ಯಾತರಾದ ವೀರಕುಮಾರರನ್ನು ಹೆತ್ತನು. ಅವರೆಲ್ಲರೂ ಹತ್ತು ಸಾವಿರ ವರ್ಷಗಳವರೆಗೆ ಸಮುದ್ರ ಗರ್ಭದಲ್ಲಿ ಕುಳಿತು ಘೋರತಪಶ್ಚರ್ಯೆಯನ್ನು ಆಚರಿಸಿದರು. ಆಗ ಅಸಾಯಕವಾದ ಭೂಮಿಯ ಮೇಲೆಲ್ಲ ಗಿಡ ಬಳ್ಳಿಗಳು ನಿಬಿಡವಾಗಿ ಅತಿಶಯ ಬೆಳೆದು ನಿಂತು ಬಿಟ್ಟಿದ್ದವು. ಲಕ್ಷಲಕ್ಷ ವೃಕ್ಷರಾಶಿಗಳ ಅತಿಕ್ರಮಣ, ಸ್ಥಲಾಕ್ರಮಣಗಳಿಂದ ಜನರಿಗೆಲ್ಲ ವಾಸಿಸಲಿಕ್ಕೆ ಸ್ಥಳಸಿಕ್ಕದೇ ಪ್ರಜಾಕ್ಷಯವಾಗ ಹತ್ತಿತು. ಘನ ನಿಬಿಡವಾದ ನೀರಂಧ್ರ ವಸುಂಧರೆಯಲ್ಲಿ ಗಾಳಿಗೂ ಕೂಡ ಸುಳಿಯಲು ಸಂಚರಿಸಲು ಕೂಡ ಅವಕಾಶವಿದ್ದಿದ್ದಿಲ್ಲ.

## ಮರಗಳನ್ನು ಸುಟ್ಟು ಮರಗಳ ಮಗಳು ಮಾರಿಷಾಳನ್ನು ಮದುವೆ ಆದರು

ತಪಸ್ಸಿನಿಂದ ಎದ್ದು ಬಂದ ಪ್ರಾಚೇತಸರು ವೃಕ್ಷಲಕ್ಷಗಳ ಈ ಅಕ್ರಮ ಆಕ್ರಮಣದ ಪ್ರಕ್ರಮವನ್ನು ಕಂಡು ಕೆಂಡವಾಗಿ ಕೆರಳಿ ಒಮ್ಮಿಂದೊಮ್ಮೆ ಕಣ್ಣಿನಿಂದ ಕಿಡಿಗಳನ್ನೂ ಬಾಯಿಯಿಂದ ಗಾಳಿಯನ್ನೂ ಬಿಡಹತ್ತಿದರು. ಅವರ ಮುಖದಿಂದ ಹೊರಟ ಗಾಳಿಯು ದೊಡ್ಡ ದೊಡ್ಡ ನಭಶ್ಚುಂಬಿಯಾದ ಹೆಮ್ಮರಗಳನ್ನೂ ಕೂಡ ಬುಡ ಬೇರು ಸಹಿತವಾಗಿ ಕಿತ್ತೆಸೆದು

ಒಣಗಿಸಿ ಬಿಡುತ್ತಿತ್ತು. ಶುಷ್ಕವಾದ ಆ ತರುಲ ತಾಗುಲ್ಮ ರಾಶಿಯನ್ನು ಕಣ್ಣಿನ ಕಿಡಿಗಳು ಹಾರಿ ಕ್ಷಣಾರ್ಧದಲ್ಲಿ ಸುಟ್ಟು ಬೂದಿಮಾಡಿ ಬಿಡುತ್ತಿದ್ದವು. ಹೀಗೆ ಇನ್ನೂ ಕೆಲವು ಸಮಯ ನಡೆದರೆ ಜಗತ್ತಿನಲ್ಲಿ ಔಷಧಕ್ಕೂ ಕೂಡ ಗಿಡ ಸಿಕ್ಕದಂತಾಗುವ ಪ್ರಸಂಗ ಬಂದಿತು.

ವನಸ್ಪತಿ ಪ್ರಪಂಚದ ಈ ಸರ್ವನಾಶ ಪ್ರಸಂಗವನ್ನು ಕಂಡು ವೃಕ್ಷರಾಜನಾದ ಚಂದ್ರನು ಬಂದು ಆ ಪ್ರಾಚೇತಸರನ್ನು ಸಂತೈಸುತ್ತ ''ಶಾಂತರಾಗಿರಿ, ಕುಮಾರರೆ! ಪ್ರಾಯಃ ಪೃಥಿವಿಯೆಲ್ಲ ವೃಕ್ಷಶೂನ್ಯವಾಗುವಂತೆ ಮಾಡಿದ್ದೀರಿ. ಇನ್ನು ಮೇಲಾದರೂ ಆ ಮುಖ ಮಾರುತ, ನೇತ್ರಾಗ್ನಿಗಳು ಕಡಿಮೆಯಾಗುವಂತೆ ಮಾಡಿ ಶಾಂತರಾಗಿರಿ. ದೇವರ ಸೃಷ್ಟಿಯಲ್ಲಿ ಹಾಗೂ ಜ್ಞಾನದೃಷ್ಟಿಯಲ್ಲಿ ವ್ಯರ್ಥವಾದ ಪದಾರ್ಥವೇ ಇಲ್ಲ. ವೃಕ್ಷಗಳಂತೂ ಅತ್ಯಂತ ಅವಶ್ಯಕವಾದ ಜೀವನಪ್ರದ ಪದಾರ್ಥ. ಅವುಗಳನ್ನು ಸರ್ವಾತ್ಮನಾ ವಿಧ್ವಂಸನ ಗೈಯುವುದು ಭಗವತ್ ಸಂಕಲ್ಪಕ್ಕೆ ವಿಸಂಗತ.'' ಎಂದು ಹೇಳಿ ಸಮಾಧಾನಪಡಿಸಿದನು. ಮತ್ತು *ವೃಕ್ಷಕನ್ಯೆಯಾದ ಮಾರಿಷೆಯನ್ನು ತನ್ನ ಅರ್ಧ ತಪಸ್ಸು-ತೇಜಸ್ಸುಗಳೊಂದಿಗೆ ಆ ಹತ್ತೂ ಪ್ರಾಚೇತನ ಕುಮಾರರಿಗೆ ಮದುವೆ ಮಾಡಿಕೊಟ್ಟನು.

ಚಂದ್ರನ ಅಮೃತೋಪಮವಾದ, ಸಕಾರಣವಾದ ಮಾತುಗಳನ್ನು ಕೇಳಿ ಶಾಂತರಾದ ವಿವೇಕಿಗಳಾದ ಆ ಹತ್ತೂ ರಾಜಕುಮಾರರು ಮಾರಿಷೆಯನ್ನು ಆನಂದದಿಂದ ಸ್ವೀಕರಿಸಿ ಮದುವೆಯಾದರು. ಮತ್ತು ಅವರೆಲ್ಲರೂ ಕೂಡಿ ಮನಸಾ ಅವಳಲ್ಲಿ ಗರ್ಭಾಧಾನವನ್ನು ಮಾಡಿದರು. ಆಗ ಚಂದ್ರನ ಅಂಶದಿಂದ ದಕ್ಷ ಪ್ರಜಾಪತಿಯು ಹುಟ್ಟಿದನು. ಈ ದಕ್ಷ ಪ್ರಜಾಪತಿಯು ಎರಡು ಕಾಲಿನ ಹಾಗೂ ನಾಲ್ಕು ಕಾಲಿನ ಜೀವಿಗಳನ್ನೂ ಚರಾಚರ ನಾನಾ ಪ್ರಾಣಿಗಳನ್ನೂ ನಿರ್ಮಿಸಬೇಕು ಎಂದು ವಿಚಾರಿಸಿ ಅದಕ್ಕಾಗಿ ನಾನಾ ಜಾತಿಯ ಅರವತ್ತು ಹೆಣ್ಣು ಮಕ್ಕಳನ್ನು ಹಡೆದನು.

## ಚಂದ್ರನಿಗೆ ನಕ್ಷತ್ರನಾರಿಯರೊಂದಿಗೆ ಮದುವೆ

ಅವರಲ್ಲಿ ಹತ್ತು ಕನ್ಯೆಯರನ್ನು ಧರ್ಮನಿಗೂ ಹದಿಮೂರು ಕನ್ಯೆಯರನ್ನು ಕಶ್ಯಪರಿಗೂ ಇಪ್ಪತ್ತೇಳು ಹೆಣ್ಣುಮಕ್ಕಳನ್ನು ಚಂದ್ರನಿಗೂ ಮದುವೆ ಮಾಡಿ ಕೊಟ್ಟನು. ಆ ಚಂದ್ರನ ಹೆಂಡಂದಿರೇ ಅಶ್ವಿನೀ, ಭರಣೀ ಮೊದಲಾದ ನಕ್ಷತ್ರನಾಮದಿಂದ ನಿತ್ಯವೂ ಆಗಸದ ಅಂಗಣವನ್ನು ಬೆಳಗುತ್ತಲಿರುವರು. ಈ ಎಲ್ಲ ಕನ್ಯೆಯರಿಂದ ದೇವ-ದಾನವ, ಖಗ-ಮೃಗ, ಪಶು-ಪಕ್ಷಿ, ಯಕ್ಷ, ಗಂಧರ್ವ, ಅಪ್ಸರ, ನಾಗ ಮೊದಲಾದ ಜಾತಿಯ ಪ್ರಜೆಗಳು ಉಂಟಾದರು. ಇದಕ್ಕೂ ಮೊದಲು ಕೇವಲ ಸಂಕಲ್ಪದಿಂದ ಅಥವಾ ದರ್ಶನ ಸ್ಪರ್ಶನಾದಿಗಳಿಂದಲೂ ಅಯೋನಿಜ ಸೃಷ್ಟಿಯಾಗುತ್ತಲಿತ್ತು. ಈ ದಕ್ಷ ಕನ್ಯೆಯರಿಂದ ಸ್ತ್ರೀ-ಪುರುಷ ಸಂಯೋಗದಿಂದ ಸೃಷ್ಟಿಕ್ರಮವು ಪ್ರಾರಂಭವಾಯಿತು.

---

*ಹಿಂದಕ್ಕೆ ಕಂಡು ಋಷಿಯ ತಪಸ್ಸಿಗೆ ವಿಘ್ನಮಾಡಲೆಂದು ಇಂದ್ರನು ಪ್ರಮ್ಲೋಚೆಯೆಂಬ ಅಪ್ಸರೆಯನ್ನು ಕಳಿಸಿದನು. ಅವಳನ್ನು ನೋಡಿ ಮುಗ್ಧನಾದ ಮುನಿಯು ಅವಳೊಂದಿಗೆ ಎಷ್ಟೋವರುಷ ಸಂಸಾರ ಮಾಡಿಕೊಂಡು ಇದ್ದನು. ಒಂದು ದಿನ ಅವನಿಗೆ ವೈರಾಗ್ಯವುಂಟಾಗಿ ತನ್ನ ತಪಸ್ಸಿಗೆ ವಿಘ್ನಳಾದ ಪ್ರಮ್ಲೋಚೆಯೆಡೆಗೆ ಸಿಟ್ಟಿನಿಂದ ನೋಡಿದನು. ಆಗ ಅವಳ ಗರ್ಭವು ಕರಗಲು ಅದರ ರಸವನ್ನು ಅಲ್ಲಿಯೇ ಇದ್ದ ಗಿಡಗಳಿಗೆ ಒರಿಸಿ ಅವಳು ಸ್ವರ್ಗಕ್ಕೆ ಹೋದಳು. ವಿದ್ರುತವಾದ ಆ ಗರ್ಭವು ವೃಕ್ಷಗಳಲ್ಲಿ ಬೆಳೆದು ಮಾರಿಷಾ ಎಂಬ ಕನ್ಯೆಯಾಗಿ ಬೆಳೆಯಿತು.

**ಜನಮೇಜಯ:-** ಬ್ರಹ್ಮದೇವರ ದಕ್ಷಿಣ ಅಂಗುಷ್ಠವೆಂದರೆ ಬಲಗೈಹೆಬ್ಬೆರಳಿನಿಂದ ದಕ್ಷನೂ ಎಡಗೈ ಹೆಬ್ಬೆರಳಿನಿಂದ ಅವನ ಪತ್ನಿಯೂ ಉತ್ಪನ್ನರಾದರೆಂದು ಹಿಂದೆ ಸೃಷ್ಟಿ ಪ್ರಕರಣದಲ್ಲಿ ನೀವು ಹೇಳಿದ್ದೀರಿ. ಈಗ ಪ್ರಾಚೇತಸರಿಂದ ಮಾರಿಷೆಯಲ್ಲಿ ದಕ್ಷನು ಹುಟ್ಟಿದನೆಂದು ಹೇಳಿದಿರಿ. ಇದು ಪರಸ್ಪರ ವಿರುದ್ಧವಾಗುವದಿಲ್ಲವೆ? ಮತ್ತು ಒಬ್ಬ ತಂದೆಯಿಂದ ಹುಟ್ಟಿದ ಅವರಿಬ್ಬರೂ ಅಣ್ಣತಂಗಿಯರಾದಂತಾ ಗಲಿಲ್ಲವೇ? ಅವರು ಮದುವೆ ಹೇಗೆ ಆದರು? ಹಾಗೂ ಚಂದ್ರನ ಅಂಶದಿಂದ ಹುಟ್ಟಿದ ದಕ್ಷನು ತನ್ನ ಹೆಣ್ಣುಮಕ್ಕಳನ್ನು ಅವರ ಅಜ್ಜನಾಗಬೇಕಾದ ಚಂದ್ರನಿಗೆ ಹೇಗೆ ಕೊಟ್ಟನು? ಇವೆಲ್ಲ ನನ್ನ ಸಂಶಯಗಳನ್ನು ಪರಿಹರಿಸಬೇಕು.

**ವೈಶಂಪಾಯನ:-** ಸೃಷ್ಟಿಯ ಆರಂಭಕಾಲದಲ್ಲಿ ಪ್ರಜಾಭಿವೃದ್ಧಿಯನ್ನು ಮಾಡಲು ಭಗವಂತನಿಂದ ಆಜ್ಞಪ್ತರಾದ ಆ ದೇವ ಮುನಿಗಳಿಗೆ ನಮ್ಮ ವಿಧಿನಿಮಯಗಳು ಬಂಧನಕಾರಿಯಾಗಿದ್ದಿಲ್ಲ. ಭಗವದಾಜ್ಞೆಯೇ ಪರಮ ಧರ್ಮ. ದಕ್ಷಪ್ರಜಾಪತಿಯು ಒಂದು ಕಲ್ಪದಲ್ಲಿ ಬ್ರಹ್ಮನಿಂದಲೂ ಮತ್ತೊಂದು ಕಲ್ಪದಲ್ಲಿ ಪ್ರಾಚೇತಸರಿಂದಲೂ ಹುಟ್ಟಿದ್ದು ವ್ಯಾಹತವಾಗುವದಿಲ್ಲೆಂದು ತಿಳಿಯಬೇಕು. ಮತ್ತು ಆ ಕಾಲದಲ್ಲಿ ಜ್ಯೇಷ್ಠ, ಕನಿಷ್ಠ ಭಾವಗಳು ಇರಲಿಲ್ಲ. ಆದ್ದರಿಂದ ಚಂದ್ರನ ಮೊಮ್ಮಗನಾದ ದಕ್ಷನು ಅವನ ಮಾವನೂ ಆದನು. ಅಂದಿನ ಕಾಲದಲ್ಲಿ ತಪಃಶಕ್ತಿ, ಪ್ರಭಾವ, ಭಗವದ್ಭಕ್ತಿ ಮೊದಲಾದವುಗಳೇ ಯೋಗ್ಯತಾನಿರ್ಣಾಯಕಗಳಾಗಿದ್ದವು. ಕಾರಣ ದಕ್ಷನು ತನ್ನ ತಪಃಶಕ್ತ್ಯಾದಿಗಳನ್ನು ಬೆಳೆಯಿಸಿಕೊಂಡು ಜನ್ಮಕನಿಷ್ಠನಾದರೂ ಸೋಮ, ಕಶ್ಯಪಾದಿಗಳ ಶ್ವಶುರನಾದನು.

## ಮರುದ್ಗಣದ ಉತ್ಪತ್ತಿ

ಬ್ರಹ್ಮದೇವರ ಅಪ್ಪಣೆಯಂತೆ ದಕ್ಷಪ್ರಜಾಪತಿಯು ದೇವ, ದಾನವ, ಗಂಧರ್ವ, ಯಕ್ಷ, ರಾಕ್ಷಸ, ಪಶುಪಕ್ಷಿ ಮೊದಲಾದವುಗಳನ್ನೆಲ್ಲ ಮನಸ್ಸಿನಿಂದಲೇ ನಿರ್ಮಾಣ ಮಾಡಿದ. ಆದರೆ ಪಾರ್ವತೀಪತಿಗೂ ದಕ್ಷನಿಗೂ ವೈಮನಸ್ಯ ಹಿಂದಿನಕಲ್ಪದಲ್ಲಿಯೂ ಇದ್ದುದರಿಂದ ಆ ಶಿವನ ಅಪೇಕ್ಷೆಯಂತೆ ದಕ್ಷನ ಮಾನಸ ಸೃಷ್ಟಿಯು ಅಭಿವೃದ್ಧಿಯನ್ನೇ ಹೊಂದಲಿಲ್ಲ ಆಗ ದಕ್ಷನು ಮೈಥುನ ಧರ್ಮದಿಂದ ಪ್ರಜಾಭಿವೃದ್ಧಿಯನ್ನು ಮಾಡಬೇಕೆಂದು ಬಯಸಿ ವೀರಣ ಪ್ರಜಾಪತಿಯ ಮಗಳಾದ ಆಸಿಕ್ನಿಯನ್ನು ಪ್ರಾಣಿಗ್ರಹಣ ಮಾಡಿದನು. ಪರಮ ಪತಿವ್ರತೆಯೂ ನಿತ್ಯತಪಃ ಪರಿಪೂತಳೂ ಆದ ಆ ಅಸಿಕ್ನಿಯಿಂದ ಅವನಿಗೆ ಐದು ಸಾವಿರ ಜನ ಗಂಡುಮಕ್ಕಳು ಉದ್ಭೂತರಾದರು. ತಂದೆಯಂತೆ ಪ್ರಬಲ ಪರಾಕ್ರಮ ಶಾಲಿಗಳಾದ ಆ ಪಂಚ ಸಹಸ್ರಪುತ್ರರೂ ಉತ್ಸಾಹದಿಂದ ಸೃಷ್ಟಿಕಾರ್ಯಕ್ಕೆ ಉಜ್ಜುಗಿಸಬೇಕೆನ್ನುವಷ್ಟರಲ್ಲಿ ದೇವರ್ಷಿಗಳಾದ ನಾರದರು ಅಲ್ಲಿಗೆ ದಯಮಾಡಿಸಿದರು. ಸರ್ಜನೋದ್ಯತರಾದ ಆ ದಕ್ಷಕುಮಾರರನ್ನು ಕುರಿತು ನಾರದರು "ಈ ಭೂಮಿಯ ಪ್ರಮಾಣ ಹಾಗೂ ವ್ಯಾಪ್ತಿವಿಸ್ತಾರಗಳು ತಿಳಿಯದೇ ಇದರ ಮೇಲೆ ಬದುಕಿಬಾಳಬಹುದಾದ ಪ್ರಜೆಗಳನ್ನು ನಿರ್ಮಿಸಹೊರಟ ನೀವು ಮೂಢರೇ ಸರಿ. ಈ ಭೂಮಿಯ ಒಳಗೂ ಹೊರಗೂ ಮೇಲೆಕೆಳಗೂ ವ್ಯಾಪ್ತವಾಗಿ ಭೂ ಭುವಕ್ಕೆಲ್ಲ ಆಧಾರಭೂತವಾಗಿರುವ ಪರತತ್ವವನ್ನು ತಿಳಿಯದೇ ಮಾಡುವ ನಿಮ್ಮ ಶ್ರಮವೆಲ್ಲ ವಿಫಲವೇ ಆಗುವದು" ಎಂದು ಹೇಳಿದರು.

ನಾರದರ ಈ ಮಾರ್ಮಿಕವಾದ ಮಾತನ್ನು ಕೇಳಿ ಹರ್ಯಶ್ವರೆಂಬ ದಕ್ಷಪುತ್ರರೆಲ್ಲ ಭೂಮಿಯ ಪ್ರಮಾಣ ಹಾಗೂ ತದಂತರ್ಗತವಾದ ಪರಮಪ್ರಮೇಯವನ್ನು ಹುಡುಕಲಿಕ್ಕೆ ಹೊರಟರು. ಅನ್ನ ನೀರುಗಳನ್ನು ಬಿಟ್ಟು ವಾಯುಭಕ್ಷರಾಗಿ ಪರತತ್ವ ಸಂಶೋಧನೆಗೆ ಹೊರಟ ಆ ಪ್ರಾಚೇತಸರೆಂಬ ದಕ್ಷದಾಯಾದರು ಸಿಂಧುಲೀನವಾದ ಸರಿತ್‌ಪ್ರವಾಹದಂತೆ

ಎಂದಿಗೂ ಇಂದಿಗೂ ತಿರುಗಿಬರಲಿಲ್ಲ. ಅದನ್ನು ನೋಡಿ ದುಃಖಿತನಾದ ದಕ್ಷಪ್ರಜಾಪತಿಯು ಮತ್ತೆ ಅಸಿಕ್ನಿಯಲ್ಲಿ ಸಹಸ್ರ ಸುತರನ್ನು ಪಡೆದನು. ಶಬಲಾಶ್ವರೆಂದು ಸುಪ್ರಸಿದ್ಧರಾದ ಆ ದಕ್ಷಕುಮಾರರಾದರೂ ಅಭಿವೃದ್ಧಿ ಕಾಮುಕರಾಗಿ ಕಾರ್ಯೋನ್ಮುಖರಾದಾಗ ಮತ್ತೆ ಮಹರ್ಷಿನಾರದರು ಬಂದು ಹಿಂದಿನಂತೆ ಇವರ ಮನಸ್ಸೂ ತಿರುಗುವಂತೆ ಉಪದೇಶವನ್ನು ಮಾಡಿದರು. ''ನಿಮ್ಮ ಹಿರಿಯರು ಅಣ್ಣಂದಿರು ಹಿಡಿದ ದಾರಿಯನ್ನು ಅನುಸರಿಸುವುದೇ ಕಿರಿಯರ ಕರ್ತವ್ಯ' ಎಂಬ ಅವರ ಪರಿಣಾಮಕಾರಿಯಾದ ವಚನ ರಚನಾ ವಿಶೇಷವನ್ನು ಕೇಳಿ ಆ ಶಬಲಾಶ್ವರೂ ಕೂಡ ಪೃಥ್ವಿಯ ಪ್ರಮಾಣದ ಮತ್ತು ತದಂತರ್ಗತಪ್ರಮೇಯಗಳನ್ನು ಅರಿಸಲಿಕ್ಕೆ ಹೊರಟು ಹೋದವರು ಮರಳಲೇ ಇಲ್ಲ.

## ಮದುಮಕ್ಕಳಿಗೆ ವೈರಾಗ್ಯ ಬೋಧಿಸಿದ ನಾರದನಿಗೆ ಶಾಪ

ಈ ಸಮಾಚಾರವನ್ನು ತಿಳಿದು ಕೋಪಕಷಾಯಿತನಾದ ದಕ್ಷ ಪ್ರಜಾಪತಿಯು ತನ್ನ ಮಕ್ಕಳನ್ನೆಲ್ಲ ದೂರಮಾಡತಕ್ಕ ನಾರದರಿಗೆ 'ನೀನು ನಾಶವನ್ನಾಗಲೀ ಗರ್ಭವಾಸ ದುಃಖವನ್ನಾಗಲೀ ಅನುಭವಿಸು'' ಎಂದು ಶಾಪವನ್ನಿತ್ತನು. ಈ ಶಾಪದಿಂದಲೇ ನಾರದನು ದಕ್ಷ ಪ್ರಜಾಪತಿಯ ಹೆಂಡತಿಯಾದ ಅಸಿಕ್ನಿಯ ಕಿರಿಯ ತಂಗಿ ವೀರಣಿ ಎಂಬ ಕಶ್ಯ ಭಾರ್ಯೆಯಲ್ಲಿ ಮತ್ತೊಮ್ಮೆ ಹುಟ್ಟ ಬೇಕಾಯಿತು. ಹೀಗೆ ತನಗೆ ಹುಟ್ಟಿದ ಗಂಡು ಮಕ್ಕಳೆಲ್ಲ ನಾರದನ ಉಪದೇಶದಿಂದ ಪ್ರಭಾವಿತರಾಗಿ ವೈರಾಗ್ಯ ಹುಟ್ಟಿ ಪ್ರಪಂಚದಿಂದ ವಿಮುಖರಾಗುವದನ್ನು ಕಂಡು ದಕ್ಷನು ವೀರಣಿಯಲ್ಲಿ ಅರವತ್ತು ಜನ ಬರಿ ಹೆಣ್ಣು ಮಕ್ಕಳನ್ನೆ ಹಡೆದನು.

## ದಕ್ಷನ ಅರವತ್ತು ಮಕ್ಕಳಿಂದ ಅರ್ಧಪ್ಪ ಪಂಚವೇ ತುಂಬಿತು

ಅವರಲ್ಲಿ ಹತ್ತು ಕನ್ಯೆಯರನ್ನು ಧರ್ಮನಿಗೂ, ಹದಿಮೂರು ಜನರನ್ನು ಕಶ್ಯಪರಿಗೂ, ಇಪ್ಪತ್ತೇಳು ಚಂದ್ರನಿಗೂ, ನಾಕು ಅರಿಷ್ಟನೇಮಿಗೂ, ಇಬ್ಬರನ್ನು ಅಂಗಿರಸನಿಗೂ, ಮತ್ತಿಬ್ಬರನ್ನು ಕೃಶಾಶ್ವನಿಗೂ, ಉಳಿದಿಬ್ಬರನ್ನು ಭೃಗುಪುತ್ರನಿಗೂ ಕೊಟ್ಟನು.

ಧರ್ಮನಿಗೆ ಕೊಟ್ಟ ಅರುಂಧತೀ ವಸು, ಯಾಮಿ, ಲಂಬಾ, ಭಾನು, ಮರುತ್ವತೀ, ಸಂಕಲ್ಪಾ, ಮುಹೂರ್ತಾ ಸಾಧ್ಯಾ, ವಿಶ್ವಾ, ಎಂಬ ದಶದಾಕ್ಷಾಯಣಿಯರಿಂದ ವಿವಿಧ ಪ್ರಜಾ ಸೃಷ್ಟಿಯಾಯಿತು. ವಿಶ್ವೆಯಿಂದ ವಿಶ್ವೇದೇವತೆಗಳೂ ಸಾಧ್ಯೆಯೆಂಬವಳಿಂದ ಸಾಧ್ಯರೂ, ಮರುತ್ವತಿಯಿಂದ ಮರುತ್ವಂತರೂ, ವಸುವಿನಿಂದ ವಸುಗಳೂ, ಭಾನು ಎಂಬ ಸ್ತ್ರೀಯಿಂದ ಭಾನುಗಳೂ, ಮುಹೂರ್ತೆಯಿಂದ ಕ್ಷಣ, ಲವಾದಿ ಕಾಲಾಭಿಮಾನಿದೇವತೆಗಳೂ, ಲಂಬೆ ಯಿಂದ ಘೋಷ ಎಂಬ ಮಂತ್ರಾಭಿಮಾನಿದೇವತೆಗಳೂ, ಯಾಮಿ ಎನ್ನುವವಳಿಂದ ಸ್ವರ್ಗ ಮಾರ್ಗಗಳ ಅಭಿಮಾನಿದೇವತೆಯೂ, ಅರುಂಧತಿಯಿಂದ ಭೂಮಿಯಲ್ಲಿರುವ ಎಲ್ಲ ಪಶು, ಔಷಧಿ ಮೊದಲಾದವುಗಳೂ, ಸಂಕಲ್ಪೆಯಿಂದ ಎಲ್ಲರ ಮನಃಸಂಕಲ್ಪದ ಅಧಿದೇವತೆಯೂ, ಯಾಮಿ ಪುತ್ರಿಯಾದ ನಾಗವೀಥಿಯಿಂದ ವೃಷಲಂಬಾ ಎಂಬ ವೃಷ್ಟಿಕಾರಕ ಅಭಿಮಾನಿ ದೇವತೆಯೂ ಹುಟ್ಟಿದರು. ದಕ್ಷಪ್ರಾಚೇತಸನು ಚಂದ್ರನಿಗೆ ಕೊಟ್ಟ ಅಶ್ವಿನೀ, ಭರಣಿ. ಮೊದಲಾದ ನಕ್ಷತ್ರ ಕನ್ಯೆಯರ ಹೆಸರುಗಳು ಜ್ಯೋತಿಃಶಾಸ್ತ್ರದಲ್ಲಿ ಸುಪ್ರಸಿದ್ಧವಾಗಿರುತ್ತವೆ.

(ಅಶ್ವಿನೀ, ಭರಣೀ, ಕೃತ್ತಿಕಾ, ರೋಹಿಣೀ, ಮೃಗಶಿರಾ, ಆರ್ದ್ರಾ, ಪುನರ್ವಸು, ಪುಷ್ಯಾ, ಆಶ್ಲೇಷಾ, ಮಘಾ, ಪೂರ್ವಾ, ಉತ್ತರಾ, ಹಸ್ತಾ, ಚಿತ್ರಾ, ಸ್ವಾತೀ, ವಿಶಾಖಾ, ಅನುರಾಧಾ, ಜ್ಯೇಷ್ಠಾ, ಮೂಲಾ, ಪೂರ್ವಾಷಾಢಾ, ಉತ್ತರಾಷಾಢಾ, ಶ್ರವಣಾ, ಧನಿಷ್ಠಾ, ಶತತಾರಾ, ಪೂರ್ವಾಭಾದ್ರಪದಾ, ಉತ್ತರಾಭಾದ್ರಪದಾ, ರೇವತೀ॥ ಇವರೇ ಚಂದ್ರನಿಗೆ ಮದುವೆ ಮಾಡಿಕೊಟ್ಟ ಇಪ್ಪತ್ತೇಳು ದಕ್ಷಪುತ್ರಿಯರಾದ ನಕ್ಷತ್ರನಾರೀಮಣಿಗಳು).

ಇವರಲ್ಲಿ ವಸು ಎಂಬ ದಕ್ಷಕುಮಾರಿಯ ಮಕ್ಕಳು ಆಪ, ಧ್ರುವ, ಸೋಮ, ಧರ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ ಎಂಬ ಶುಭನಾಮದಿಂದ ಅಷ್ಟವಸುಗಳೆಂದು ಪ್ರಖ್ಯಾತರಾಗಿದ್ದಾರೆ. ಈ ಅಷ್ಟವಸುಗಳ ವಂಶವೂ ವಿಸ್ತಾರವಾಗಿ ಅಭಿವೃದ್ಧಿಯನ್ನು ಪಡೆಯಿತು. ವಸುಗಳಲ್ಲಿ ಹಿರಿಯನಾದ ಆಪನಿಗೆ ವೈತಂಡ್ಯ, ಶ್ರಮ, ಶಾಂತಿಮುನಿ ಎಂದು ಮಕ್ಕಳು ನಾಕು. ಧ್ರುವನಿಗೆ ಲೋಕಸಂಹಾರನಾದ ಕಾಲ ಪುತ್ರ, ಸೋಮನಿಗೆ ವರ್ಚ, ವರ್ಚನಿಂದ ವರ್ಚಸ್ವಿ, ಧರನಿಗೆ ದ್ರವಿಣ ಹುತಹವ್ಯವಹ ಇಬ್ಬರು ಪುತ್ರರು. ಧರನಿಗೆ ಮನೋಹರಾ ಎಂಬ ಬೇರೊಬ್ಬ ಮಡದಿಯಿಂದ ಮೂರು ಜನ ಮಕ್ಕಳು. ಶಿಖಿರ, ಪ್ರಾಣ, ರಮಣ ಎಂದು. ಅನಿಲನ ಮಡದಿ ಶಿವಾಳಿಗೆ, ಮನೋಜವ ಅವಿಜ್ಞಾತಗತಿ ಇಬ್ಬರು ಗಂಡುಮಕ್ಕಳು. ಅನಲ ನಾಮಕನಾದ ಅಗ್ನಿದೇವನಿಗೆ ಶಾಖ, ವಿಶಾಖ, ನೈಗಮೇಯ, ಸ್ಕಂದ ಎಂದು ನಾಲ್ಕು ಮಕ್ಕಳು. ಅವರಲ್ಲಿ ಅಗ್ನಿಯ ಪುತ್ರನಾಗಿ ಹುಲ್ಲಿನ ಜೊಂಡಿನಲ್ಲಿ ಹುಟ್ಟಿ ಕೃತ್ತಿಕಾಮಾತೆಯರಿಂದ ಬೆಳೆಸಲ್ಪಟ್ಟ ಶಿವಕುಮಾರ ಸ್ಕಂದನು ಕಾರ್ತಿಕೇಯ ಎಂದು ಪ್ರಥಿತನಾಗಿದ್ದಾನೆ. ಹಿಂದೆ ಬ್ರಹ್ಮಮಾನಸ ಪುತ್ರನಾಗಿ ಹುಟ್ಟಿದ ಆ ಸನತ್ಕುಮಾರನೇ ಈಗ ಕುಮಾರನಾಗಿ ಜನಿಸಿದ್ದಾನೆ. ಅಗ್ನಿಯ ಕಾಲುಭಾಗ ಅಂಶದಿಂದ ಈ ಸ್ಕಂದನ ಉತ್ಪತ್ತಿ.

ಪ್ರತ್ಯೂಷ ಎಂಬ ವಸುವಿಗೆ ಋಷ್ಟಿ ಎಂಬ ಮಗ. ಅವನಿಗೆ ದೇವಲ ಎಂದೂ ಹೆಸರು. ದೇವಲನಿಗೆ ಒಂದು ಗಂಡು ಒಂದು ಹೆಣ್ಣು ಎರಡು ಮಕ್ಕಳು. ಇಬ್ಬರೂ ತಪಸ್ವಿಗಳು ಮತ್ತು ಕ್ಷಮಾವಂತರು. ಬ್ರಹಸ್ಪತಿ ಮತ್ತು ಬ್ರಹ್ಮಚಾರಿಣಿ ಎಂದು ಅವರ ಹೆಸರು. ಬ್ರಹ್ಮಚಾರಿಣಿಯು ಯೋಗಸಿದ್ಧಿಯನ್ನು ಪಡೆದು ಸಂಸಾರದಲ್ಲಿ ಆಸಕ್ತಿ ಇಲ್ಲದೆ ಜಗದಂಡ ಮಂಡಲದ ಅಗಲುದ್ದ ಸಂಚಾರಗೈದಳು. ಇವಳು ಪ್ರಭಾಸ ಎಂಬ ಎಂಟನೆಯ ವಸುವಿನ ಕೈ ಹಿಡಿದು ವಿಶ್ವಕರ್ಮಾ ಎಂಬ ಪ್ರಜಾಪತಿಗೆ ಜನ್ಮವಿತ್ತಳು. ಇವನು ದೇವ ಶಿಲ್ಪಿ, ವಿಮಾನಶಾಸ್ತ್ರದ ಆದ್ಯವಿಜ್ಞಾನಿ. ಸ್ಥಾಪತ್ಯ ವಿಜ್ಞಾನದ ಆಚಾರ್ಯ ಪುರುಷ, ಶಿಲ್ಪಿ ಸಾರ್ವಭೌಮ. ಭೂಲೋಕದ ಮಾನವರೆಲ್ಲರೂ ಇವನ ವಿದ್ಯೆಯನ್ನೇ ಉಪಜೀವಿಸಿ ಶಿಲ್ಪಕಲೆಯಲ್ಲಿ ಕೌಶಲ್ಯವನ್ನು ಪಡೆಯುತ್ತಾರೆ.

## ಹದಿಮೂರು ಕಶ್ಯಪ ಕುಟುಂಬಿನಿ ದೇವದೈತ್ಯರ ವಂಶವಿಸ್ತಾರ

ಇನ್ನು ಕಶ್ಯಪರಿಗೆ ಕೊಟ್ಟ ಹದಿಮೂರುಜನ ದಾಕ್ಷಾಯಣಿಯರಿಂದ ಬಹಳೇ ಚಿತ್ರವಿಚಿತ್ರವಾದ ಪ್ರಜಾಸೃಷ್ಟಿಯಾಯಿತು. ಅದಿತಿ, ದಿತಿ, ದನು, ಅರಿಷ್ಟಾ, ಸುರಸಾ, ಖಶಾ, ಸುರಭಿ, ವಿನತಾ, ತಾಮ್ರಾ, ಕ್ರೋಧವಶಾ, ಇರಾ, ಕದ್ರು, ಮುನಿ ಎಂಬ ಈ ಹದಿಮೂರು ಜನ ಹೆಣ್ಣುಮಕ್ಕಳ ಸಂತಾನ ಸಂಪತ್ತಿಯಿಂದ ಬ್ರಹ್ಮಾಂಡವೇ ತುಂಬಿ ತುಳುಕಿಹೋಯಿತು.

ಹಿಂದಿನ ಮನ್ವಂತರವಾದ ಚಾಕ್ಷುಷಮನ್ವಂತರದ ಕೊನೆಯಲ್ಲಿ ತುಷಿತರೆಂಬ ಹನ್ನೆರಡು ದೇವಗಣಾಧೀಶರು ಪ್ರಜಾಕ್ಷೇಮಕ್ಕಾಗಿ ಕೂಡಿ ವಿಚಾರಿಸಿ ಇನ್ನು ಮುಂದೆ ಬರಲಿರುವ ವೈವಸ್ವತ ಮನ್ವಂತರದಲ್ಲಿ ಮಹಾಸತಿ ಅದಿತಿ ದೇವಿಯ ಹೊಟ್ಟೆಯಿಂದ ಹುಟ್ಟಬರೋಣ. ಅದರಿಂದ ನಮಗೂ ಶ್ರೇಯಸ್ಸುಂಟು ಎಂದು ಮಾತನಾಡಿಕೊಂಡು ಈ ವೈವಸ್ವತಮನ್ವಂತರದಲ್ಲಿ ಮರೀಚಿ ಪುತ್ರರಾದ ಕಶ್ಯಪರಿಂದ ಅದಿತಿಪುತ್ರರಾಗಿ ಅವತಾರ ಮಾಡಿದರು. ವಿಷ್ಣು, ಇಂದ್ರ, ಅರ್ಯಮಾ, ಧಾತಾ, ತ್ವಷ್ಟಾ, ಪೂಷಾ, ವಿವಸ್ವಾನ್, ಸವಿತಾ, ಮಿತ್ರ, ವರುಣ, ಅಂಶು, ಭಗ ಎಂಬ ಹೆಸರಿನಿಂದ ವಿಶ್ವವಿಖ್ಯಾತರಾದ ದೇವತೆಗಳು ದ್ವಾದಶ-ಆದಿತ್ಯರ ರೂಪದಿಂದ ಈ ಮನ್ವಂತರದಿಂದ ನಿಯಾಮಕರಾಗಿದ್ದಾರೆ. ಇದರಂತೆ ಸೋಮನ ಅರ್ಧಾಂಗಿನಿಯರಾದ

ಇಪ್ಪತ್ತೇಳು ದಕ್ಷ ಕನ್ಯೆಯರಿಗೆ ಚಂದ್ರನಿಂದ ತೇಜಃಪುಂಜರಾದ ಅನೇಕ ಮಕ್ಕಳು ಆದರು. ಅರಿಷ್ಟನೇಮಿಯ ಪುತ್ರಿಯರಾದ ನಾಲ್ಕು ದಕ್ಷಕುಮಾರಿಯರಿಂದ ಹದಿನಾರು ಜನ ಮಕ್ಕಳು ಉಂಟಾದರು. ಬ್ರಹ್ಮಪುತ್ರನೆಂಬ ಪ್ರಜಾಪತಿಯಿಂದ ವಿದ್ಯುತ್, ಅಶನಿ, ಮೇಘ, ಇಂದ್ರಧನು ಎಂಬ ನಾಲ್ಕು ಜನ ಮಕ್ಕಳು ಜನಿಸಿದರು.

ತನ್ನ ಮೂಲ ವಂಶವಾದ ಅಂಗಿರಸಗೋತ್ರವನ್ನು ಬಿಟ್ಟು ಬೇರೆ ಕಡೆಗೆ ಹೋದದ್ದರಿಂದ ಪ್ರತ್ಯಾಂಗಿರಸನೆಂದು ಹೆಸರಾದ ಶೌನಕನಿಂದ ಬ್ರಹ್ಮರ್ಷಿಗಳಿಗೆಲ್ಲ ಪರಮ ಮಾನ್ಯವಾದ ಶಾಂತಿಕರವಾದ ಮಂತ್ರಗಳೂ ಅರ್ಥಾತ್ ತದಭಿಮಾನಿದೇವತೆಗಳೂ ಮತ್ತು ಕೃಶಾಶ್ವನೆಂಬ, ರಾಜರ್ಷಿಯ ಸಂಸರ್ಗದಿಂದ ಪ್ರಜಾಯುಧಾದಿ ಅಭಿಮಾನಿ ದೇವತೆಗಳೂ ಹುಟ್ಟಿಬಂದರು.

ಜನಮೇಜಯ, ಈ ಮೇಲೆ ಹೇಳಿದ ದೇವಗಣದವರೆಲ್ಲ ಪ್ರತಿಕಲ್ಪದಲ್ಲಿಯೂ ಇವೇ ರೀತಿಯಾಗಿ ಉತ್ಪನ್ನರಾಗುತ್ತಾರೆ. ಆದರೆ ಅದರಲ್ಲಿ ಮೂವತ್ತುಮೂರು ಜನರು ಸ್ವೇಚ್ಛಾ ಜನನವುಳ್ಳವರು. ಉಳಿದವರಿಗೆಲ್ಲ ಪುನಃ ಪುನಃ ಉತ್ಪತ್ತಿ ವಿನಾಶಗಳು ಉಂಟು. ಆದರೆ ಈ ಮೂವತ್ತುಮೂರು ಜನರಿಗೆ ಮಾತ್ರ ಒಂದು ಕಲ್ಪದಲ್ಲಿ ಒಮ್ಮೆಯೇ ಉತ್ಪತ್ತಿ. ಅವರು ಯಾರು ಯಾರು ಎಂದರೆ-ಪೃಥ್ವಿ, ಅಗ್ನಿ, ವಾಯು, ಅಂತರಿಕ್ಷ, ಸೂರ್ಯ, ದ್ಯು, ಚಂದ್ರ, ನಕ್ಷತ್ರಾದ್ಯಭಿಮಾನಿಗಳಾದ ಎಂಟು ವಸುಗಳು ಮತ್ತು ಐದು ಕರ್ಮೇಂದ್ರಿಯ ಐದು ಜ್ಞಾನೇಂದ್ರಿಯ ಹಾಗೂ ಮನಸ್ಸು ಇವುಗಳಿಗೆಲ್ಲ ನಿಯಾಮಕರಾದ ಏಕಾದಶರುದ್ರರು, ಮತ್ತು ಚೈತ್ರವೈಶಾಖಾದಿ ಮಾಸಾಭಿಮಾನಿಗಳಾದ ಹನ್ನೆರಡು ದೇವತೆಗಳು, ಹಾಗೂ ಪರ್ಜನ್ಯ ಪ್ರೇರಕನಾದ ಇಂದ್ರ, ಜೀನಿವಯಾಮಕನಾದ ಪ್ರಜಾಪತಿ ಈ ಮೂವತ್ತುಮೂರು ಜನ ದೇವತೆಗಳು ಕಾಮಜರು, ಅಂದರೆ ಒಂದು ಕಲ್ಪದಲ್ಲಿ ಒಂದೇ ಸಲ ಅವತರಿಸುವವರು. ಇವರು ಕಾಮಜರಾದ ದೇವತೆಗಳಾದರೂ ಸೂರ್ಯಚಂದ್ರರಂತೆ ಇವರಿಗೆ ಉದಯಾಸ್ತಗಳು ಉಂಟೇ ಉಂಟು. ಆದ್ದರಿಂದ ಇವರೆಲ್ಲ ಪ್ರತಿಯುಗದ ಆರಂಭದಲ್ಲಿ ಹುಟ್ಟಿ ಪ್ರಳಯ ಕಾಲದಲ್ಲಿ ನಾಶವನ್ನು ಭಗವದಿಚ್ಛೆಯಿಂದ ಪಡೆಯುವರು.

## ದಿತಿಯ ದೈತ್ಯರು

ಇದರಂತೆ ಕಶ್ಯಪರ ಇನ್ನೊಬ್ಬ ಹೆಂಡತಿಯಾದ ದಿತಿಯಿಂದ ದೈತ್ಯ ಸಂತತಿಯು ಬೆಳೆಯಿತು. ದಿತಿಗೆ ಹಿರಣ್ಯಾಕ್ಷ, ಹಿರಣ್ಯಕಶಿಪು ಎಂಬ ಇಬ್ಬರು ಗಂಡು ಮಕ್ಕಳೂ ಸಿಂಹಿಕಾ ಎಂಬ ಹೆಣ್ಣು ಮಗಳೂ ಜನಿಸಿದರು. ಈ ಸಿಂಹಿಕೆಯನ್ನು ವಿಪ್ರಚಿತ್ತಿ ಎಂಬ ದಾನವೇಂದ್ರನಿಗೆ ಧಾರೆಯೆರೆದು ಕೊಟ್ಟಿದ್ದರು. ಅವಳಿಂದ ಸೈಂಹಿಕೇಯರೆಂದು ಹತ್ತು ಸಾವಿರ ಅತ್ಯಂತ ಪ್ರಬಲ ಪರಾಕ್ರಮಿಗಳಾದ ಪುತ್ರರು ಹುಟ್ಟಿದರು. ಅವರ ಪುತ್ರ ಪೌತ್ರಾದಿ ಸಂತತಿ ಪರಂಪರೆ ಅಸಂಖ್ಯಾತವಿದೆ. ಹಿರಣ್ಯಕಶಿಪುವಿಗೆ ಅನುಲ್ಹಾದ, ಲ್ಹಾದ, ಪ್ರಲ್ಹಾದ, ಸಲ್ಹಾದ ಎಂಬ ನಾಲ್ಕು ಪುತ್ರರು. ಲ್ಹಾದನಿಗೆ ಹ್ಲದನೂ, ಸಲ್ಹಾದನಿಗೆ ಸುಂದ ನಿಸುಂದರೂ, ಅನುಲ್ಹಾದನಿಗೆ ಆಯು ಶಿಬಿ ಕಾಲರೂ, ಪ್ರಲ್ಹಾದನಿಗೆ ವಿರೋಚನನೂ ಮಕ್ಕಳಾಗಿ ಹುಟ್ಟಿದರು. ಪ್ರಲ್ಹಾದ ಪುತ್ರನಾದ ವಿರೋಚನನಿಗೆ ಬಲಿರಾಜನು ಮಗನಾಗಿ ಜನಿಸಿದನು. ಈ ಬಲಿಚಕ್ರವರ್ತಿಗೆ ನೂರು ಜನ ಮಕ್ಕಳು, ಅವರಲ್ಲಿ ಬಾಣಾಸುರನೇ ಜೇಷ್ಠಪುತ್ರನು, ಧೃತರಾಷ್ಟ್ರ ಸೂರ್ಯ, ಚಂದ್ರ ಇಂದ್ರತಾಪನ, ಶುಭಲಾಬ, ಗರ್ಧಭೇಕ್ಷಣ, ಕುಕ್ಷಿ ಮುಂತಾದವರು ಅವನ ಸೋದರರು.

ಈ ಬಾಣಾಸುರನಿಗೆ ಲೋಹಿತಿ ಎಂಬ ಪತ್ನಿಯಿಂದ ಇಂದ್ರದಮನ ಎಂಬ ಪುತ್ರನು ಜನಿಸಿದನು. ಅವನಿಗೆ ಅನೇಕ ಸಹಸ್ರ ದೈತ್ಯರು ಅನುಯಾಯಿಗಳಾಗಿದ್ದರು. ಈ ಬಾಣಾಸುರ ಹಿಂದಿನ ಕಲ್ಪದಲ್ಲಿ

ತಪಂಗೈದು ಶಂಕರನ ಪಾರ್ಷದನಾಗಿ ವಿಹರಿಸಬೇಕು ಎಂದು ವರವನ್ನು ಪಡೆದುಕೊಂಡಿದ್ದನು. ಹಿರಣ್ಯಾಕ್ಷನಿಗೆ ಝುರ್ಝುರ, ಶಕುನಿ, ಭೂತಸಂತಾಪನ, ಮಹಾನಾಭ ಮತ್ತು ಕಾಲನಾಭ ಎಂಬ ವಿದ್ವಾಂಸರೂ ತಪಸ್ವಿಗಳೂ ಬಲಾಢ್ಯರೂ ಆದ ಐದು ಜನ ಪುತ್ರರು ಜನಿಸಿದರು.

## ದನುವಿನಿಂದ ದಾನವರು

ದನು ಎಂಬ ಕಶ್ಯಪ ಭಾರ್ಯೆಯಿಂದ ನೂರುಜನ ಅತ್ಯಂತ ಶೂರ ವೀರರಾದ ಮಕ್ಕಳು ಹುಟ್ಟಿದರು. ಸ್ವರ್ಭಾನು, ವೃಷಪರ್ವ, ಪುಲೋಮ, ಶಂಬರ, ವಿಕ್ಷೋಭಣ, ಮೊದಲಾದ ಈ ನೂರು ದಾನವ ಕುಮಾರರಿಗೆಲ್ಲ ವಿಪ್ರಚಿತ್ತಿಯೇ ಮುಖ್ಯನು. ದನುವಿನ ಹೊಟ್ಟೆಯಿಂದ ಹುಟ್ಟಿದ್ದರಿಂದ ಇವರಿಗೆ ದಾನವರೆಂಬ ಹೆಸರು. ಇವರೆಲ್ಲರ ಅಸಂಖ್ಯ ವಂಶ ವಿಸ್ತಾರವನ್ನು ಇಲ್ಲಿ ಬಿತ್ತರಿಸುವುದು ಶಕ್ಯವಿಲ್ಲ. ಸ್ವರ್ಭಾನುವಿಗೆ ಪ್ರಭಾ ಎಂಬ ರೂಪವತಿಯಾದ ಕನ್ಯೆಯಿದ್ದಳು. ಅವಳನ್ನು ಯಯಾತಿ ರಾಜನು ಪಾಣಿಗ್ರಹಣ ಮಾಡಿದನು. ಅವಳ ಮಗನೇ ನಹುಷನೆಂದು ಪ್ರಸಿದ್ಧನಾದನು. ಪುಲೋಮನಿಗೆ ಮೂವರು ಹೆಣ್ಣುಮಕ್ಕಳು. ಹಯಶಿರನಿಗೆ ಉಪದಾನವೀ ಎಂಬ ಓರ್ವ ಕನ್ಯೆ, ಹಾಗೂ ವೃಷಪರ್ವನಿಗೆ ಶರ್ಮಿಷ್ಠೆ ಎಂಬ ಕನ್ಯೆಯೂ ಇದ್ದರು. ವೈಶ್ವಾನರ ಎಂಬ ದಾನವನಿಗೆ ಕಾಲಿಕಾ, ಪುಲೋಮಾ ಎಂಬ ಇಬ್ಬರು ಕನ್ಯೆಯರು ಇದ್ದರು. ಇವರನ್ನು ಮರೀಚಿ ಋಷಿಯ ಮಗನಾದ ಮಾರೀಚಿಗೆ ಕೊಟ್ಟಿದ್ದರು. ಮಾರೀಚಿಯು ತನ್ನ ತಪಃ ಸಾಮರ್ಥ್ಯದಿಂದ ಇವರಲ್ಲಿ ಅರವತ್ತು ಸಾವಿರ ಮಕ್ಕಳನ್ನು ಪಡೆದನು. ಪೌಲೋಮ ಹಾಗೂ ಕಾಲಿಕೇಯ ಎಂದು ಹೆಸರಾದ ಇವರು ಬ್ರಹ್ಮದೇವರ ವರದ ಬಲದಿಂದ ದೇವತೆಗಳಿಗೂ ಅಜೇಯರಾಗಿ ಹಿರಣ್ಯಪುರದಲ್ಲಿ ವಾಸವಾಗಿದ್ದರು. ಮುಂದೆ ಇವರೆಲ್ಲರನ್ನೂ ಅರ್ಜುನನು ಸಂಹರಿಸಿದನು. ಪುಲೋಮನ ಶಚೀ ಎಂಬ ಮಗಳಿಂದ ಸೃಂಜಯನು ಉತ್ಪನ್ನನಾದನು. ಶರ್ಮಿಷ್ಠೆಯಿಂದ ಪುರು, ಉಪದಾನವಿಯಿಂದ ದುಷ್ಯಂತನೂ ಹುಟ್ಟಿದರು.

ಸಿಂಹಿಕಾ ವಿಪ್ರಚಿತ್ತಿ ಇವರೀರ್ವರ ದೈತ್ಯದಾನವ ಸಮಾಗಮದಿಂದ ದಾರುಣ ವೀರ್ಯ ರಾದ ಹದಿಮೂರು ಗಂಡುಗಲಿಗಳು ಜನಿಸಿದರು. ವಾತಾಪಿ ಇಲ್ವಲ, ನಮುಚಿ, ಮೊದಲಾದ ಈ ಸೈಂಹಿಕೇಯ ಕುಟುಂಬಕ್ಕೆಲ್ಲ ಸೂರ್ಯ-ಚಂದ್ರರನ್ನು ಕಬಳಿಸುವ ರಾಹುವೇ ಜ್ಯೇಷ್ಠನು. ಸಲ್ಹಾದನಿಂದ ದೇವತೆಗಳಿಗೂ ಅವಧ್ಯರಾದ ನಿವಾತಕವಚರೆಂಬ ಮೂರು ಕೋಟಿ ದೈತ್ಯರು ಹುಟ್ಟಿದರು. ಅವರೆಲ್ಲರನ್ನೂ ಶ್ರೀಕೃಷ್ಣನ ಅನುಗ್ರಹದಿಂದ ಅರ್ಜುನನು ಸಂಹರಿಸಿದನು.

## ಕಶ್ಯಪರಿಂದ ಹಾವು ಹದ್ದುಗಳ ವಂಶ ವಿಸ್ತಾರ

ತಾಮ್ರಾ ಎಂಬ ಕಶ್ಯಪ ಭಾರ್ಯೆಗೆ ಕಾಕೀ, ಶ್ಯೇನೀ, ಭಾಸೀ, ಸುಗ್ರೀವೀ, ಶುಚಿ, ಗೃಧ್ರಿಕಾ ಎಂಬ ಆರು ಜನ ಹೆಣ್ಣು ಮಕ್ಕಳು ಹುಟ್ಟಿದರು. ಇವರಲ್ಲಿ ಕಾಕಿ ಎಂಬವಳಿಂದ ಕಾಗೆಗಳೂ ಉಲೂಕಿ ಎಂಬವಳಿಂದ ಗೂಗೆಗಳು, ಶ್ಯೆನಿಯಿಂದ ಮೊಲಗಳೂ ಭಾಸಿಯಿಂದ ಕೋಳಿಗಳೂ, ಗೃಧ್ರಿಯಿಂದ ಹದ್ದುಗಳೂ ಶುಚಿಯಿಂದ ಹಂಸಕಾರಂಡವಾದಿ ಜಲಚರ ಪ್ರಾಣಿಗಳೂ ಸುಗ್ರೀವಿಯಿಂದ ಕುದುರೆ, ಒಂಟೆ, ಕತ್ತೆ, ಮೊದಲಾದವುಗಳೂ ಹುಟ್ಟಿದವು ಹೀಗೆ ತಾಮ್ರೆಯ ವಂಶವು ವಿಶ್ವವ್ಯಾಪಿಯಾಯಿತು.

ಕಶ್ಯಪ ಮಹರ್ಷಿಗಳ ಮತ್ತೊಬ್ಬ ಹೆಂಡತಿಯಾದ ವಿನತೆಯಿಂದ ಗರುಡ, ಅರುಣ ಎಂಬ ಇಬ್ಬರು ಪಕ್ಷಿ ಪ್ರಪಂಚದ ಸಾರ್ವಭೌಮರಾದ ಸತ್ವಶಾಲಿ ಮಕ್ಕಳು ಜನಿಸಿದರು.

ಕದ್ರೂ ಮತ್ತು ಸುರಸಾ ಎಂಬ ಕಶ್ಯಪಕಾಂತೆಯರಿಂದ ಅನೇಕ ಹೆಡೆಗಳಿರುವ ಉಲ್ಬಣ ವಿಷದ ಭೀಕರವಾದ ಸಹಸ್ರ ಸಹಸ್ರ ಸರ್ಪಗಳು ಹುಟ್ಟಿದವು. ಅವರಲ್ಲಿ ವಾಸುಕಿ, ಶೇಷ, ತಕ್ಷಕ, ಶಂಖಪಾಲ, ನಹುಷ, ಶಂಖರೋಮ, ಕರ್ಕೋಟಕ, ಧನಂಜಯ, ಮಹಾನೀಲ, ಮಹಾಕರ್ಣ, ಧೃತರಾಷ್ಟ್ರ, ಬಲಾಹಕ ಮೊದಲಾದವರು ಪ್ರಬಲರು ಮತ್ತು ಪ್ರಧಾನರು, ಇವರೆಲ್ಲರ ಮಕ್ಕಳು ಮೊಮ್ಮಕ್ಕಳನ್ನು ಗರುಡನು ಹೊಡೆದು ಕೊಂದನು. ಹಾವು ತಿನ್ನುವ ಘೋರಕರ್ಮಿಗಳೂ-ಉರಗಾಶಹಿಗಳೂ ಆದ ಹದಿನಾಲ್ಕು ಸಾವಿರ ಹದ್ದುಗಳ ಒಂದು ದೊಡ್ಡ ಗುಂಪೇ ಇರುವುದು. ಅದಕ್ಕೆ ಕ್ರೋಧ ವಶ ಎಂಬ ಹೆಸರು. ಜಲಚರ ಹಾಗೂ ಸ್ಥಲಚರ ಪ್ರಾಣಿಗಳೆಲ್ಲವೂ ಧರಾ ಎಂಬ ಕಶ್ಯಪ ಪತ್ನಿಯ ಸಂತತಿ. ಸುರಭಿ ಎಂಬ ಕಶ್ಯಪ ಸೀಮಂತಿನಿಯು ಆಕಳು, ಎಮ್ಮೆ, ಮೊದಲಾದವುಗಳನ್ನೂ ಮತ್ತು ಶಿವನ ಆರಾಧನೆಯ ಫಲವಾಗಿ ಹರ, ಬಹುರೂಪ, ತ್ರ್ಯಂಬಕ ಅಪರಾಜಿತ ವೃಷಾಕಪಿ, ಶಂಭು, ಕಪರ್ದಿ, ಶೈವತ, ಮೃಗವ್ಯಾಧ, ಅಜೈಕಪಾದ ಅಹಿಬುರ್ಧ್ನ ಎಂದು ಹನ್ನೊಂದು ರುದ್ರರನ್ನೂ ಪಡೆದಳು. ಇರಾ ಎಂಬ ಹೆಸರಿನ ಅವರ ಹೆಂಡತಿಯು ಗಿಡ, ಬಳ್ಳಿ, ಹುಲ್ಲು ಹಸಿರುಗಳನ್ನು ಹಬ್ಬಿಸಿದಳು. ಖಶಾ ಎಂಬ ಋಷಿಪತ್ನಿಯಿಂದ ಯಕ್ಷ ರಾಕ್ಷಸ, ಮುನಿ, ಅಪ್ಸರೆಯರು, ಜನಿಸಿದರು. ಅರಿಷ್ಟಾ ಎಂಬ ಮಡದಿಯಿಂದ ಅತ್ಯಂತ ಸತ್ವಸಂಪನ್ನರೂ ರಸಿಕರೂ ಆದ ಗಂಧರ್ವರು ಜನಿಸಿದರು. ಈ ಎಲ್ಲ ಕಶ್ಯಪರ ಮಕ್ಕಳು ಮೊಮ್ಮಕ್ಕಳಿಂದ ಆದ ಸ್ಥಾವರ ಜಂಗಮಾತ್ಮಕವಾದ ಪ್ರಪಂಚದ ವಿಸ್ತಾರ, ಅಂಕಿ ಸಂಖ್ಯೆಗೆ ಮೀರಿ ಅನಂತವಾಗಿ ನಿಂತಿದೆ. ಜಯಮೇಜಯ! ಇಷ್ಟು ಹೊತ್ತಿನವರೆಗೆ ಹೇಳಿದ ಇದೆಲ್ಲವೂ ಸ್ವಾರೋಚಿಷ ಮನ್ವಂತರದ ಸಮಾಚಾರ. ಇನ್ನು ಈಗ ಈ ಪ್ರಕೃತ ವೈವಸ್ವತ ಮನ್ವಂತರದ ವಿಷಯವನ್ನು ತಿಳಿಸುತ್ತೇನೆ ಕೇಳು. ಈ ವೈವಸ್ವತಮನ್ವಂತರದ ಆರಂಭ ಕಾಲದಲ್ಲಿ ವರುಣನು ಒಂದು ದೀರ್ಘಕಾಲೀನವಾದ ಯಜ್ಞವನ್ನು ಮಾಡಿದನು. ಆದರಲ್ಲಿ ಬ್ರಹ್ಮನೇ ಋತ್ವಿಜನಾಗಿ ಭಗವಂತನನ್ನು ಉದ್ದೇಶಿಸಿ ಹೋಮ ಮಾಡಿದನು. ತದನಂತರ ಕಾಲದ ಸೃಷ್ಟಿಯ ಸಮಾಚಾರವನ್ನೀಗ ವಿವರಿಸುತ್ತೇನೆ.

ಚತುರ್ಮುಖನು ಮೊದಲು ತನ್ನ ಮಾನಸಪುತ್ರರಾದ ಸಪ್ತರ್ಷಿಗಳನ್ನು ಸೃಷ್ಟಿ ಮಾಡಿದನು. ಆಗ ದೇವ ದಾನವರಿಗೆ ಭೀಕರವಾದ ವಿರೋಧ ಬಂದು ಸಂಗ್ರಾಮದಲ್ಲಿ ದೈತ್ಯರೆಲ್ಲ ಸೋತು ಬಿದ್ದು ಸತ್ತು ಹೋದರು. ಆಗ ದೈತ್ಯರ ತಾಯಿಯಾದ ದಿತಿಯು ಪತಿಯಾದ ಕಶ್ಯಪರನ್ನು ಪರಿಪರಿಯಿಂದ ಸೇವಿಸಿದಳು. ಅವಳ ಅತ್ಯಂತಿಕ ಸ್ನೇಹ ಪೂರ್ಣವಾದ ಮಧುರ ಸೇವಾಭಾವದಿಂದ ಪ್ರೀತಿಪ್ರಸನ್ನರಾದ ಕಶ್ಯಪರು ತಮ್ಮ ಪ್ರೇಯಸಿಗೆ ''ಬೇಕಾದ ವರವನ್ನು ಬೇಡು'' ಎಂದು ಹೇಳಿದರು. ಆಗ ಅವಳು ಇಂದ್ರನನ್ನು ಕೊಲ್ಲತಕ್ಕ ಚಂಡವಿಕ್ರಮನಾದ ಓರ್ವ ಮಗನನ್ನು ದಯಪಾಲಿಸಬೇಕೆಂದು ಕೇಳಿಕೊಂಡಳು. ಆಗ ಬ್ರಹ್ಮರ್ಷಿಗಳಾದ ಕಶ್ಯಪರು ಅವಳ ದುರಭಿಸಂಧಿಯನ್ನು ತಿಳಿದು ಹೇಳಿದರು. ''ನಾನು ಹೇಳಿದಂತೆ ನೀನು ನೂರುವರ್ಷ ಅತ್ಯಂತ ಶುಚಿರ್ಭೂತಳಾಗಿ ಯಾವುದೇ ನ್ಯೂನತೆ, ಲೋಪದೋಷಗಳು ಬಾರದಂತೆ ಈ ಘೋರ ವ್ರತವನ್ನು ಅನೂಚಾನವಾಗಿ ಪಾಲಿಸಿದರೆ ಇಂದ್ರನನ್ನು ಕೊಲ್ಲುವ ಮಗನು ಜನಿಸುವನು. ಇಲ್ಲದಿದ್ದರೆ ಮಾತ್ರ ನಿನ್ನ ಪರಿಶ್ರಮವೆಲ್ಲ ವ್ಯರ್ಥವಾಗುವುದು'' ಎಂದು ಹೇಳಿದರು. ಆದರಂತೆ ಅವಳು ಮಹರ್ಷಿಗಳ ಪ್ರಸಾದದಿಂದ ದುರ್ಧರ್ಷವಾದ ಗರ್ಭಧಾರಣೆಯನ್ನು ಮಾಡಿದಳು. ಆ ಮೇಲೆ ಮುನಿಗಳು ತಪಸ್ಸಿಗೆ ಹೊರಟುಹೋದರು. ಇತ್ತ ವ್ರತಸ್ಥಳಾದ ದಿತಿಯು ಸದಾಸರ್ವದಾ ಅತ್ಯಂತ ಶುಚಿರ್ಭೂತಳಾಗಿ ನಿಯಮ ಬಂಧದಂತೆ ಎಲ್ಲಿಯೂ ಚ್ಯುತಿ ಬಾರದಹಾಗೆ ಜಾಗರೂಕಳಾಗಿಯೇ ಇದ್ದಳು. ಇದನ್ನೆಲ್ಲ ತಿಳಿದ

ಇಂದ್ರನು ಗಾಬರಿಯಾಗಿ ಅವಳಲ್ಲಿ ವ್ರತಲೋಪವನ್ನೇ ಹುಡುಕುತ್ತಲಿದ್ದನು. ಅವಳ ವ್ರತ ಶೌಚಗಳಲ್ಲಿ ಎಂದೂ ಎಲ್ಲಿಯೂ ಚ್ಯುತಿ ಲೋಪಗಳು ಬರಲಿಲ್ಲ. ಆದರೂ ಸುರೇಶನು ಕಾಯುತ್ತಲೇ ಇದ್ದನು. ಒಂದು ದಿನ ದಿತಿಯು ಬಚ್ಚಲಕ್ಕೆ ಹೋಗಿ ಪಾದ ಪ್ರಕ್ಷಾಲನೆಯನ್ನು ಮಾಡಿಕೊಳ್ಳದೇ ಮಲಗಿದಳು. ಇದನ್ನೇ ನೋಡುತ್ತ ಕುಳಿತ ಇಂದ್ರನು ಸೂಕ್ಷ್ಮರೂಪದಿಂದ ಅವಳ ಗರ್ಭದಲ್ಲಿ ಪ್ರವೇಶಿಸಿ ತನ್ನ ವಜ್ರದಿಂದ ಆ ಗರ್ಭವನ್ನು ಏಳು ಭಾಗವಾಗಿ ಹೊಡೆದು ಬಡೆದು ಒಡೆದು ಹಾಕಿದನು. ಇವನ ಏಟಿಗೆ ಆ ಗರ್ಭವು ಅಳಹತ್ತಿತ್ತು. ಅಳಬೇಡ ನಿಲ್ಲು ಎಂದು ಹೇಳಿ ಇಂದ್ರನು ಅದರ ಒಂದೊಂದು ಭಾಗವನ್ನು ಮತ್ತೆ ಒಡೆದು ಏಳು ಏಳು ಹೋಳಾಗುವಂತೆ ಸೀಳಿದನು. ಇಂದ್ರನು ''ಮಾರುತಃ'' ಅಳಬೇಡಿರಿ ಅಳಬೇಡಿರಿ ಎನ್ನುತ್ತಲೇ ಹೊಡೆದದ್ದರಿಂದ ಅವುಗಳಿಗೆ ಮರುತ ಎಂಬ ಹೆಸರು ಬಂದಿತು. ಈ ನಲವತ್ತೊಂಬತು ಭಾಗಗಳು ಮರುದ್ಗಣ ಎಂಬ ಹೆಸರಿನಿಂದ ಪ್ರಸಿದ್ಧರಾಗಿ ದೇವೇಂದ್ರನಿಗೆ ಸಹಾಯಕರಾದ ದೇವತೆಗಳಾದರು.

## ಪೃಥುವಿನ ಕಥೆ

(ಸೃಷ್ಟಿಯ ಪ್ರಾರಂಭ ಕಾಲದಲ್ಲಿ ರಾಜ ಪ್ರಜಾ ಶಾಸನಪದ್ಧತಿ ಮೊದಲಾದವುಗಳು ಇರಲಿಲ್ಲ. ''ಧರ್ಮೇಣೈವ ಪ್ರಜಾಃ ಸರ್ವಾ ರಕ್ಷಂತಿ ಸ್ಮ ಪರಸ್ಪರಮ್'' ಜನರೆಲ್ಲರೂ ಧರ್ಮ ಮಾರ್ಗಾನುವರ್ತಿಗಳಾಗಿ ಪರಸ್ಪರವಾಗಿ ರಕ್ಷಿಸುತ್ತ ಬರುತ್ತಲಿದ್ದರು. ಆದರೆ ದುಷ್ಟನೂ ದೈತ್ಯ ಸಹಜ ದುರ್ಬುದ್ಧಿಯುಳ್ಳವನೂ ಆದ ವೇನನು ಜನರಿಗೆಲ್ಲ ಸ್ವಧರ್ಮಾಚರಣಕ್ಕೆ ವಿಘ್ನವ್ಯೂಹವನ್ನು ಒಡ್ಡಿ ಜನಜೀವನಕ್ಕೆ ಗಂಡಾಂತರವನ್ನು ತಂದನು. ಆಗ ಮುನಿಗಳು ಅವನನ್ನು ಹುಂಕಾರದಿಂದ ಸಂಹರಿಸಿ ಪೃಥು ಎಂಬ ಕುಮಾರರನ್ನು ಅವನಿಂದ ಮಥಿಸಿ ತೆಗೆದರು. ಅವನು ''ನನಗಾಗಿ ನಾನು ಅಲ್ಲ. ನಾನು ಪ್ರಜೆಗಳಿಗಾಗಿ'' ಎಂಬ ಆದರ್ಶವನ್ನು ಇಟ್ಟುಕೊಂಡು ಪ್ರಜಾಕೋಟಿ ಕಲ್ಯಾಣಕ್ಕಾಗಿ ತನ್ನತನುವನ್ನು ತೇದನು. ಹೀಗೆ ಅತ್ಯಂತ ಬಲ ಬುದ್ಧಿಶಾಲಿಯಾದ ಓರ್ವ ಧರ್ಮವೀರನು ಸ್ವಾರ್ಥವನ್ನು ಬದಿಗೆ ಸರಿಸಿ ಲೋಕೋಪಕಾರಕ್ಕಾಗಿಯೇ ಆತ್ಮವನ್ನು ಮೀಸಲಾಗಿಟ್ಟು ವಿಶ್ವಕ್ಷೇಮಕ್ಕಾಗಿ ಹೋರಾಡ ಹತ್ತಿದ್ದರಿಂದ ಜಗದ ಜನ ಜಂಗುಳಿಗೆಲ್ಲ ದುಃಖ ದಾರಿದ್ರ್ಯ ದೈನ್ಯಗಳು ದೂರವಾಗಿ ಸುಖ ಶಾಂತಿಗಳು ನಿತ್ಯಾನುಭೂತಿಯ ಸೊತ್ತಾದವು. ಭೀತಿ ಬಾಧೆಗಳೆಲ್ಲ ತೊಲಗಿ ಪ್ರೀತಿ ಬಾಂಧವ್ಯಗಳು ಪ್ರತಿಪ್ರಾಣಿಯಲ್ಲಿಯೂ ಅರಳಿ ಆತ್ಮವಿಶ್ವಾಸಕ್ಕೂ, ಆಧ್ಯಾತ್ಮ ಸಾಧನೆಗೂ ಅನುವಾಯಿತು. ಬ್ರಹ್ಮದೇವರ ಮನಸ್ಸಿನಲ್ಲಿ ಇದರಂತೆ ಎಲ್ಲ ಕ್ಷೇತ್ರಗಳಲ್ಲಿಯೂ ನಿಃಸ್ವಾರ್ಥ ಸೇವೆಗೆ ಸಿದ್ಧವಾದ ಸರ್ವಸದ್ಗುಣ ಸಂಪನ್ನವಾದ ''ರಾಜ'' ಎಂಬ ಅಧಿಕಾರಿಯನ್ನು ನಿಯಮಿಸಿದರೆ ಎಲ್ಲವೂ ಸುವ್ಯವಸ್ಥಿತವಾಗಿ ನಿಯಮಬದ್ಧವಾಗಿ ಸಾಗುವದು ಎಂದು ವಿಚಾರ ಹೊಳೆಯಿತು. ಆಗ ಅವರು ಮುಂದಿನಂತೆ ಬೇರೆ ಬೇರೆ ವಿಷಯ ವಿಭಾಗಗಳನ್ನು ಕಲ್ಪಿಸಿ ಅದಕ್ಕೆಲ್ಲ ಒಬ್ಬೊಬ್ಬ ರಾಜನನ್ನು ನಿಯಮಿಸಿದರು.

## ಒಂದೊಂದು ವಿಭಾಗಕ್ಕೆ ಒಬ್ಬೊಬ್ಬ ಅಧಿರಾಜರು

ಹಿಂದೆ ಹೇಳಿದಂತೆ ಬ್ರಹ್ಮದೇವರು ರಾಜಾಧಿರಾಜ ಪದವಿಯಲ್ಲಿ ಪೃಥುರಾಜನನ್ನು ಪ್ರಸ್ಥಾಪಿಸಿ ಬ್ರಾಹ್ಮಣ, ಬಳ್ಳಿ, ಚಿಕ್ಕೆ, ಗ್ರಹ, ಯಜ್ಞ, ತಪ, ಮೊದಲಾದವುಗಳ ಮೇಲೆ ಸೋಮ (ಚಂದ್ರ)ನನ್ನು ಅಧಿರಾಜನನ್ನಾಗಿ ನಿಯಮಿಸಿದರು. ಅದರಂತೆ ಜಲರಾಜ್ಯಕ್ಕೆ ವರುಣನನ್ನೂ ಯಕ್ಷಜಾತಿಗೆಲ್ಲ ಕುಬೇರನನ್ನೂ ವಿಶ್ವೇದೇವತೆಗಳಿಗೆ ಬೃಹಸ್ಪತಿಯನ್ನೂ, ಭೃಗು

ಕುಲಾಧಿಪತ್ಯವನ್ನು ಶುಕ್ರಾಚಾರ್ಯರಿಗೂ, ದೇವಗಣಕ್ಕೆಲ್ಲ ವಿಷ್ಣುವನ್ನೂ, ಅಷ್ಟ ವಸುಗಳಿಗೆ ಅಗ್ನಿಯನ್ನೂ, ಪ್ರಜಾಪತಿಗಳಿಗೆ ದಕ್ಷನನ್ನೂ, ಮರುದ್ಗಣಕ್ಕೆ ಇಂದ್ರನನ್ನೂ, ದೈತ್ಯದಾನವರಿಗೆ ಪ್ರಲ್ಹಾದನನ್ನೂ, ಪಿತೃಗಳಿಗೆ ಯಮಧರ್ಮನನ್ನೂ, ವ್ರತ ಮಂತ್ರಿ, ಮಾತೃ*ಕಾ ಯಕ್ಷ ರಾಕ್ಷಸ ರಾಜಮಹಾರಾಜರಿಗೆಲ್ಲ ಭಗವಾನ್ ನಾರಾಯಣನನ್ನೂ ಅಧಿರಾಜನೆಂದು ನಿಯಮಿಸಿದರು. ದುಷ್ಟದಾನವಾಧಿ ಪತ್ಯವನ್ನು ವಿಪ್ರಚಿತ್ತಿಗೂ, ರುದ್ರಗಣ ಹಾಗೂ ಭೂತ ಪಿಶಾಚ ಶಾಖೆಗಳಿಗೆ ಶ್ರೀ ಶಂಕರನನ್ನೂ ಹರಿಯ ಆಜ್ಞೆಯಂತೆ ಸ್ವಾಮಿಯನ್ನಾಗಿ ನಿಯೋಜಿಸಿದರು. ಅದರಂತೆ ಪರ್ವತಗಳಿಗೆಲ್ಲ ಹಿಮಾಲಯವನ್ನೂ, ನದಿಗಳಿಗೆಲ್ಲ ಸಮುದ್ರವನ್ನೂ ರಾಜನನ್ನಾಗಿ ಮಾಡಿದರು. ಯಾವತ್ತೂ ಪರಿಮಳದ್ರವ್ಯಗಳಿಗೂ ಭೇರ್ಯಾದಿ ಧ್ವನಿಗಳಿಗೂ ವಾಯವನ್ನು ಅಧಿಪತಿಯನ್ನಾಗಿರಿಸಿದರು. ಅದರಂತೆ ಗಂಧರ್ವರಿಗೆ ಚಿತ್ರ ರಥ, ಸರ್ಪಗಳಿಗೆ ತಕ್ಷಕ, ನಾಗಗಳಿಗೆ ವಾಸುಕಿ, ಆನೆಗಳಿಗೆ ಐರಾವತ, ಕುದುರೆಗಳಿಗೆ ಉಚ್ಚೈಶ್ರವ, ಪಕ್ಷಿಗಳಿಗೆ ಗರುಡ, ಶ್ವಾಪದಗಳಿಗೆ ಸಿಂಹ, ಆಕಳುಗಳಿಗೆ ಎತ್ತು, ವೃಕ್ಷಗಳಿಗೆ ಅಶ್ವತ್ಥವೂ ಅಧಿರಾಜರೆಂದು ನಿಯಮಿಸಲ್ಪಟ್ಟವು. ಸಮುದ್ರ ಮೋಡ ಮಳೆ ಹೊಳೆ ಮುಂತಾದವುಗಳಿಗೂ ಮತ್ತು ಇವುಗಳ ನೀರನ್ನೆಲ್ಲ ತಮ್ಮ ಕಿರಣಗಳ ಕಾವಿನಿಂದ ಹೀರಿ ಆವಿಯನ್ನಾಗಿ ಮಾಡಿ ಮಳೆಬೆಳೆಗಳನ್ನುಂಟು ಮಾಡುವ ರವಿರಶ್ಮಿಗಳಿಗೂ ಪರ್ಜನ್ಯನು ಅಧಿಪತಿಯಾಗಿ ಮಾಡಲ್ಪಟ್ಟನು. ಗಂಧರ್ವ ಅಪ್ಸರೆಯರಿಗೆ ಕಾಮನು ರಾಜನಾದನು. ಋತು, ಮಾಸ, ದಿವಸ, ಪಕ್ಷ, ರಾತ್ರಿ, ತಿಥಿ, ಪರ್ವ, ಕಲಾ, ಕಷ್ಠಾ, ಮೊದಲಾದ ಕಾಲ ಮಾನಗಳಿಗೂ ಮತ್ತು ಅಯನಗಳ ಗತಿ, ಗ್ರಹಗಳಯುತಿ, ಗಣಿತ, ಗ್ರಹ, ಯೋಗಾದಿಗಳಿಗೂ ಸಂವಚ್ಛರವನ್ನು ಪ್ರಭುವನ್ನಾಗಿ ಮಾಡಿದರು.

ಹೀಗೆ ಎಲ್ಲ ರಾಜ್ಯಗಳನ್ನು ವಿಭಾಗಮಾಡಿ ಆ ಆ ಕ್ಷೇತ್ರಗಳಿಗೆ ಸಮರ್ಥರಾದ ರಾಜರನ್ನು ಬ್ರಹ್ಮದೇವರು ನಿಯಮಿಸಿದ ಬಳಿಕ ನಾಲ್ಕು ದೆಸೆಗಳಿಗೆ ದಿಕ್ಪಾಲಕರನ್ನೂ ನಿಯಮಿಸಿದರು. ಪೂರ್ವದಿಕ್ಕಿಗೆ ವೈರಾಜ ಪ್ರಜಾಪತಿಯ ಮಗನಾದ ಸುಧನ್ವನನ್ನೂ ದಕ್ಷಿಣಕ್ಕೆ ಕರ್ದಮ ಪ್ರಜಾಪತಿಯ ಪುತ್ರನಾದ ಶಂಖಪದನನ್ನೂ ಪಶ್ಚಿಮ ದಿಕ್ಕಿಗೆ ರಜಃಪುತ್ರನಾದ ಕೇತುಮಂತ ನನ್ನೂ ಉತ್ತರದಿಕ್ಕಿಗೆ ಪರ್ಜನ್ಯ ಪ್ರಜಾಪತಿಯ ಪುತ್ರನಾದ ಹಿರಣ್ಯರೋಮನನ್ನೂ ದಿಶಾಧಿಪತಿಗಳನ್ನಾಗಿ ನಿಯೋಜಿಸಿದರು. ಇವರೆಲ್ಲರಿಂದ ಸಪ್ತದ್ವೀಪವತಿಯಾದ ವಿಶಾಲಪೃಥಿವಿಯು ಇಂದಿಗೂ ವ್ಯವಸ್ಥಿತವಾದ ರೀತಿಯಿಂದ ಪಾಲಿಸಲ್ಪಡುತ್ತದೆ. ಮೇಲೆ ಹೇಳಿದ ಎಲ್ಲ ರಾಜ್ಯ ಸಾಮ್ರಾಜ್ಯಗಳ ರಾಜಮಹಾಜರೆಲ್ಲರೂ ಸೇರಿ ಆದಿರಾಜನಾದ ಪೃಥು ಮಹಾರಾಜನನ್ನು ತಮ್ಮೆಲ್ಲ ರಾಜಮಂಡಲದ ಅಧಿರಾಜನೆಂದು ರಾಜಸೂಯ ಯಾಗದಲ್ಲಿ ವೇದೋಕ್ತವಿಧಿಯಿಂದ ಪಟ್ಟಾಭಿಷೇಕಗೈದರು. ಆದ್ದರಿಂದ ಪೃಥು ರಾಜಾಧಿರಾಜನೆಂದು ಕರೆಯಲ್ಪಡುತ್ತಾನೆ. ಈ ರೀತಿಯಿಂದ ಸುವ್ಯವಸ್ಥಿತವಾಗಿ ಚಾಕ್ಷುಷ ಮನ್ವಂತರವು ಧರ್ಮಮಾರ್ಗದಲ್ಲಿ ಮುನ್ನಡೆದು ಯಶಸ್ವಿಯಾಗಿ ಕೊನೆಗೊಂಡಬಳಿಕ ಬ್ರಹ್ಮದೇವರು ವೈವಸ್ವತಮನುವಿಗೆ ಮುಂದಿನ ಮನ್ವಂತರದ ಆಧಿಪತ್ಯವನ್ನು ವಹಿಸಿಕೊಟ್ಟರು. ಈಗ

---

*ಬ್ರಾಹ್ಮೀ, ಮಾಹೇಶ್ವರೀ, ನಾರಾಯಣೀ, ಐಂದ್ರೀ, ವಾರಾಹೀ, ಕೌಮಾರೀ, ನಾರಸಿಂಹೀ, ಅಪರಾಜಿತಾ, ಎಂಬ ಈ ಎಂಟು ಮಾತೃ ರೂಪಿಗಳಿಂದ ದೈವೀ ಶಕ್ತಿಗಳಿಗೆಲ್ಲ ಮಾಃಜ್ಞಾನವನ್ನು ಕೊಟ್ಟು ತೃಃರಕ್ಷಣೆ ಮಾಡುವ ಮಾತೃ ಶಬ್ದ ವಾಚ್ಯನಾದ ನಾರಾಯಣನೇ ಪ್ರೇರಕ, ಶಕ್ತಿಪ್ರದ, ಸತ್ತಾಪ್ರದ.

ಪ್ರವೃತ್ತವಾದ ಪ್ರಕೃತ ವೈವಸ್ವತ ಮನ್ವಂತರದ ವಿವರ ವಿಸ್ತರಗಳನ್ನು ಜನಮೇಜಯ! ನಿನಗೆ ಕೇಳಲು ಅನುಕೂಲ ಇಚ್ಛೆಗಳಿದ್ದರೆ ಹೇಳ ಬಯಸುತ್ತೇನೆ.

**ಜನಮೇಜಯ-** ಗುರುಗಳೇ! ರಾಜಕುಲಶೇಖರಮಂಡನಮಣಿಯಾದ ಆ ಪೃಥುರಾಜನ ದಿವ್ಯ ಭವ್ಯವಾದ ಧೀರೋದಾತ್ತ ವ್ಯಕ್ತಿತ್ವ ಹಾಗೂ ಸತ್ವ ಮಹತ್ವಗಳನ್ನು ಸಂಕ್ಷೇಪ್ತವಾಗಿ ತಮ್ಮ ಬಾಯಿಂದ ಕೇಳಿ ನನ್ನ ಕೌತುಕ ಕೆರಳಿದೆ. ಈಗ ಆ ರಾಜ ಚಕ್ರವರ್ತಿಯ ಸಮಗ್ರ ಚರಿತ್ರೆಯನ್ನು ಇಡಿಯಾಗಿ ಕೇಳಲು ಚಿತ್ತವು ಉತ್ಸುಕಿತವಾಗಿದೆ. ದಯೆದೋರಿ ಪೃಥುಕಥೆಯನ್ನು ನಿರೂಪಿಸಬೇಕು.

**ವೈಶಂಪಾಯನ-** ಪೂರ್ವಕಾಲದಲ್ಲಿ ಅತ್ರಿವಂಶದಲ್ಲಿ ಅಂಗನೆಂಬ ಪ್ರಜಾಪತಿಗೆ ಧರ್ಮದ್ರೋಹಿಯಾದ ವೇನನೆಂಬ ಪುತ್ರನು ಹುಟ್ಟಿದನು. ಅವನ ತಂದೆಯಾದ ಅಂಗರಾಜನು ಧರ್ಮಶೀಲನಿದ್ದರೂ ಸುನೀಥಾ ಎಂಬ ಅವನ ತಾಯಿ ಮೃತ್ಯುವಿನ ಮಗಳಾಗಿದ್ದುದರಿಂದ ಆ ಅಜ್ಜನ ದುರ್ಗುಣಗಳೆಲ್ಲ ಈ ಮೊಮ್ಮಗನಲ್ಲಿ ಮೇಳವಿಸಿ ಧರ್ಮಭ್ರಷ್ಟನನ್ನಾಗಿ ಮಾಡಿದ್ದವು. ವೇದೋಕ್ತವಾದ ಧರ್ಮಕರ್ಮಗಳನ್ನೆಲ್ಲ ಆ ದುರಭಿಮಾನಿಯಾದ ದುರುಳರಾಜನು ಪ್ರತಿಬಂಧಿಸಿ "ನನ್ನ ರಾಜ್ಯದಲ್ಲಿ ಯಾರೂ ಯಜ್ಞ ಯಾಗ ಪೂಜೆ ಭಜನೆ ಮೊದಲಾದವುಗಳನ್ನು ಮಾಡತಕ್ಕದ್ದಲ್ಲ. ಮಾಡುವುದೇ ಆದರೆ ನನ್ನನ್ನೇ ಉದ್ದೇಶಿಸಿ "ಶ್ರೀ ವೇನ ಪ್ರೇರಣಯಾ ವೇನಪ್ರೀತ್ಯರ್ಥಂ" ಎಂದು ಸಂಕಲ್ಪಿಸಿ ಮಾಡಬೇಕು. ಎಂದು ಘೋರವಾದ ಆಜ್ಞೆಯೊಂದನ್ನು ಹೊರಡಿಸಿದನು. ಆದ್ದರಿಂದ ಲೋಕದಲ್ಲೆಲ್ಲ ಸ್ವಾಧ್ಯಾಯ ಪಾಠ ಪ್ರವಚನ ಪೂಜೆ ಭಜನೆ ಹೋಮಹವನಾದಿ ವೇದೋಕ್ತ ವಿಧಿಗಳೆಲ್ಲ ಪ್ರತಿಬಧಕವಾಗಿಬಿಟ್ಟವು. ಯಾರೂ ಯಜ್ಞ ಯಾಗ ಮಾಡಲಿಲ್ಲ. ಎಲ್ಲಿಯೂ ವೇದ ಘೋಷ ಕೇಳಿ ಬರಲಿಲ್ಲ. ದೇವತೆಗಳು ಸೋಮಪಾನ ಮಾಡಲಿಲ್ಲ.

ಹೀಗೆ ಜಾತ್ಯತೀತ ಧರ್ಮಾತೀತವಾದ ದುರಾಚಾರ ದುರ್ವಿಚಾರಗಳಿಂದ ದುರಾರಾಧ್ಯನಾದ ಆ ದುಷ್ಟವೇನನ ಧರ್ಮಧ್ವಂಸಿ ವ್ಯಾಪಾರಗಳಿಂದ ಮನನೊಂದು ಮರೀಚಿ ಮೊದಲಾದ ಮಹರ್ಷಿಗಳು ಅಲ್ಲಿಗೆ ಬಂದು ಅವನಿಗೆ "ವೇನ! ನಾವು ಇನ್ನು ಮುಂದೆ ಬಹುಕಾಲದ ಯಜ್ಞ ದೀಕ್ಷೆಯನ್ನು ಸ್ವೀಕರಿಸಲಿರುವೆವು. ಧರ್ಮವಿರುದ್ಧವಾದ ನಡೆನುಡಿಗಳನ್ನು ನೀನು ಆಡುವುದೂ ಬೇಡ. ಮಾಡುವುದೂ ಬೇಡ. ನೀನು ಪ್ರಜಾಪತಿಗಳ ವಂಶದಲ್ಲಿ ಹುಟ್ಟಿರುವುದರಿಂದ ಧರ್ಮದಿಂದ ಪ್ರಜೆಗಳನ್ನು ರಕ್ಷಿಸು" ಎಂದು ಬುದ್ಧಿ ಹೇಳಿದರು.

ಆಗ ದೌಷ್ಟ್ಯ ಧಾರ್ಷ್ಟ್ಯಗಳ ಪರಾಕಾಷ್ಠೆಗಳನ್ನು ಮುಟ್ಟಿದ ಆ ಮೂಢಶಿರೋಮಣಿಯು ಉಪಹಾಸಗರ್ಭವಾಗಿ ನಕ್ಕು ಆ ಮಹಾಮುನಿಗಳನ್ನು ಕುರಿತು ಮದದಿಂದ "ಸಾರಾಸಾರ ವಿಚಾರ ಶೂನ್ಯರಾದ ಮೂಢಮುನಿಗಳೇ ! ನಿಮಗೆ ನನ್ನ ಸ್ವರೂಪಜ್ಞಾನವೇ ಆಗಿಲ್ಲ. ಧರ್ಮವನ್ನು ನಿರ್ಮಿಸಿದವನೇ ನಾನು. ನನಗೆ ಧರ್ಮವನ್ನು ಹೇಳಬಂದ ನೀವೆಂಥ ಮೂರ್ಖರು! ಬಲ ಜ್ಞಾನ ತಪ ಸತ್ವ ಮೊದಲಾದವುಗಳಲ್ಲಿ ನನ್ನ ಸಮಾನರು ಜಗತ್ತಿನಲ್ಲಿ ಯಾರಾದರೂ ಉಂಟೇ? ಮನಸು ಬಂದರೆ ನಿಂತ ನೆಲವನ್ನೇ ಸುಟ್ಟು ಬಿಡಬಲ್ಲೆ. ಸಮಗ್ರ ಭೂಮಿಯನ್ನೆಲ್ಲ ನೀರಿನಲ್ಲಿ ಮುಳುಗಿಸಬಲ್ಲೆ. ಭೂಮ್ಯಾಕಾಶಗಳನ್ನು ಸಿಗಿದು ಹಾಕಬಲ್ಲೆ. ನನ್ನ ಇಂಥ ಲೋಕೋತ್ತರವಾದ ದಾರುಣ ಶಕ್ತಿಯ ಬಗ್ಗೆ ನಿಮಗೆ ಸಂಶಯವೇ ಬೇಡ."

ಮದೋನ್ಮತ್ತನಾದ ಅವನ ಈ ಮರ್ಮಾಂತಕ ಹಾಗೂ ಧರ್ಮಾಂತಿಕವಾದ ಬಿರುನುಡಿಗಳನ್ನು ಕೇಳಿ ಆ ಮುನೀಶ್ವರರ ಶಾಂತವೃತ್ತಿಗೆ ಸಿಡಿಮದ್ದನ್ನಿಟ್ಟಂತಾಯಿತು. ಕೆಂಪಡರಿದ ಕಣ್ಣುಗಳಿಂದ ಕೆಂಗಿಡಗಳನ್ನು ಉಗ್ಗಿ ಹುಂಕಾರ ಮಾತ್ರದಿಂದ ಆ ದುರಾತ್ಮನನ್ನು ನಿಗ್ರಹಿಸಿ ಅವನ ಬಲತೊಡೆಯನ್ನು ಕಡೆದರು. ಅದರಿಂದ ಅತ್ಯಂತ ಕುಳ್ಳನಾದ ಓರ್ವ

ಕಪ್ಪುಮೈಯ್ಯುಳ್ಳ ಮಾನವನು ಹುಟ್ಟಿದನು. ಅವನು ಭಯಭ್ರಾಂತನಾಗಿ ನಡುಗುತ್ತ ಕೈ ಮುಗಿದು ನಿಂತುಕೊಂಡಾಗ ಅತ್ರಿಋಷಿಗಳು ಅವನಿಗೆ ''ನಿಷೀದ'' ಕುಳಿತುಕೋ ಎಂದು ಹೇಳಿದರು. ಆದ್ದರಿಂದ ಅವನು ನಿಷಾದ ಜಾತಿಗೆ ಮೂಲ ಪುರುಷನಾದನು. ಅನಂತರ ವೇನನ ಕಿಲ್ಬಿಷದಿಂದ ಮೀನಗಾರರೂ ಮತ್ತು ವಿಂಧ್ಯವಾಸಿಗಳಾದ ತುಷಾರ. ತುಂಬುರು ಮೊದಲಾದ ಭಿಲ್ಲಜಾತಿಯವರೂ ಹುಟ್ಟಿದರು. ಇದಲ್ಲದೆ. ಜಗತ್ತಿನಲ್ಲಿ ಧರ್ಮದ್ರೋಹಿಗಳಾದ ನಾಸ್ತಿಕರೆಲ್ಲರೂ ವೇನನ ವಂಶಜರೇ* ಎಂದು ಹೇಳಬಹುದು.

ಆಮೇಲೆ ಋಷಿಪುಂಗವರು ವೇನನ ಬಲಗೈಯನ್ನು ರೋಷಾವೇಶದ ಸಂಭ್ರಮದಿಂದ ಬಲವಾಗಿ ಕಡೆದರು. ಅದರಿಂದ ಅಗ್ನಿಯಂತೆ ದೇದೀಪ್ಯಮಾನವಾದ ಕಾಂತಿ ಕಮನೀಯನಾದ ಪೃಥುವು ಅವಿರ್ಭವಿಸಿದನು. ಕವಚ ಕುಂಡಲ ಸನಾಥನಾದ ಅವನ ಕೈಯಲ್ಲಿ ಅಜಗವ ಧನುಸ್ಸೂ ದಿವ್ಯ ಬಾಣಗಳೂ ಕಂಗೊಳಿಸುತ್ತಲಿದ್ದವು. ಅವನು ಹುಟ್ಟಿದಕೂಡಲೇ ಸಕಲ ಜೀವಿಜಾತಗಳೂ ಆನಂದಭರಿತವಾದವು. ಮಗನ ಪುಣ್ಯದಿಂದ ವೇನನೂ ಸ್ವರ್ಗಕ್ಕೆ ಹೋದನು. ಚತುಃಸಾಗರಗಳೂ ಎಲ್ಲ ನದಿಗಳೂ ರತ್ನಗಳನ್ನು ತಂದು ಪೃಥುವಿಗೆ ಕಾಣಿಕೆಯನ್ನು ಅರ್ಪಿಸಿದವು. ಅಂಗಿರಸವಂಶದ ಋಷಿಗಳೆಲ್ಲರನ್ನೂ ಕೂಡಿಕೊಂಡು ಬ್ರಹ್ಮದೇವರು ಸ್ವತಃ ಬಂದು ಸ್ಥಾವರ ಜಂಗಮಾತ್ಮಕ ಪ್ರಪಂಚದ ಪ್ರತಿನಿಧಿಗಳೊಂದಿಗೆ ಅವನಿಗೆ ರಾಜಾಧಿರಾಜ ಪಟ್ಟದಲ್ಲಿ ಅಭಿಷೇಕಗೈದರು. ತಂದೆಯಿಂದ ಪೀಡಿತರಾದ ಪ್ರಜೆಗಳನ್ನೆಲ್ಲ ತನ್ನ ಸೇವಾ ಸತ್ಕರ್ಮಗಳಿಂದ ಪೃಥುವು ಸಂತೋಷಪಡಿಸಿದನು. ಜನರನ್ನು ರಂಜನೆಮಾಡಿದ್ದರಿಂದ ಅವನಿಗೆ ಮೊದಲು ''ರಾಜ'' ಎಂಬ ಶಬ್ದವು ಬಂದಿತು. ಅವನ ಕಾಲದಲ್ಲಿ ಭೂಮಿಯು ಕಾಮ* ಧೇನುವಿನಂತೆ ಬಯಸಿದ್ದನ್ನೆಲ್ಲ ಕೊಡುತ್ತಿತ್ತು. ಜನಜೀವನದಲ್ಲಿ ಎಲ್ಲೆಡೆಗೂ ಜೇನು ತುಂಬಿ ತುಳುಕಿ ನಿಂತಿತ್ತು. ಆಗ ಬ್ರಹ್ಮದೇವರು ಸೋಮಯಜ್ಞವನ್ನು ಮಾಡಿದರು. ಆ ಸಂದರ್ಭದಲ್ಲಿ ಸೋಮವಲ್ಲಿಯನ್ನು ಕುಟ್ಟಿ ಹಿಂಡುವದಿನ* ಸೂತನು ಹುಟ್ಟಿದನು ಮತ್ತು ಒಳ್ಳೇ ಬುದ್ಧಿವಂತನಾದ ಮಾಗಧನೆಂಬುವವನೂ ಹುಟ್ಟಿದನು. ಆ ಸೂತ ಮಾಗಧರಿಬ್ಬರಿಗೂ ಋಷಿಗಳು ಪೃಥುರಾಜನ ಭಾವಿಗುಣಗಣಗಳ ಗೌರವ ಗಾಥೆಯ ಗಾಯನ ಮಾಡಿ ಹೊಗಳಲು ಹೇಳಿದರು.

ಅದರಂತೆ ಅವರು ಪೃಥುವಿನ ಪ್ರಶಸ್ತಿಯನ್ನು ದಿವ್ಯಕಂಠದಿಂದ ಹಾಡಿ ಹೋಗಳಿದಾಗ ಪೃಥುವು ಸಂತೋಷಪಟ್ಟು ಮಗಧನಿಗೆ ಮಾಗಧ ಎಂಬ ದೇಶವನ್ನೂ ಸೂತನಿಗೆ ಅನೂಪದೇಶವನ್ನೂ ಕೊಟ್ಟನು. ಸೂತ ಮಾಗಧರು ಹೊಗಳಿ ಹಾಡಿ ಹೇಳಿದ ಪೃಥುರಾಜನ ಜ್ಞಾನದಾನಗಳ ಮಹಿಮೆಗಳನ್ನು ಕೇಳಿ ಪ್ರಜೆಗಳೆಲ್ಲ ಅವನ ಹತ್ತಿರ ಬಂದು ನಮ್ಮೆಲ್ಲರಿಗೂ ಏನಾದರೂ ಉಪಜೀವನ ಸಾಧನವಾದ ವೃತ್ತಿ ದತ್ತಿಗಳನ್ನು ಕೊಡು ಎಂದು ಕೇಳಿಕೊಂಡರು.

---

* ಅಧರ್ಮ ರಾಚಯೋ ಯೇಚ ಏದ್ಧಿ ತಾನ್ ವೇನ ಸಂಭವಾನ್ ಪೃಥುವಿನ ಪುಣ್ಯದಿಂದ ವೇನನಿಗೆ ಕಿಂಚಿತ್ ಸ್ವರ್ಗದರ್ಶನವಾದಂತಾದರೂ ಕಲಿಸ್ವರೂಪನಾದ ಅವನು ಕೊನೆಗೆ ಅಂಧಂ ತಮಸ್ಸಿಗೇ ಹೋದನೆಂದು ಶ್ರೀಮದಾಚಾರ್ಯರು ಸಿದ್ಧಾಂತಿಸಿದ್ದಾರೆ.

* ಪಿತ್ರಾsಪಂರಜಿತಾಸ್ತಸ್ಯ ಪ್ರಜಾಸ್ತೇನಾನುರಂಜಿತಾಃ
ಅನುರಾಗಾತ್ತತಸ್ತಸ್ಯ ನಾಮ ರಾಜೇತ್ಯಜಾಯತ ॥

* ಪುಟಕೇಪುಟಕೇಮಧು
ಸೂತ=ಸೋಮದಬಳ್ಳಿ, ಅದರಿಂದ ಹುಟ್ಟಿದ್ದರಿಂದ ಸೂತ

## ಭೂಮಾತೆ ಗೋಮಾತೆ ಆದುದು

ಆಗ ಪ್ರಜೆಗಳ ಕ್ಷೇಮಕ್ಕಾಗಿ ಟೊಂಕಕಟ್ಟಿದ ಪೃಥುರಾಜನು ಧನುರ್ಬಾಣಗಳನ್ನು ತೆಗೆದುಕೊಂಡು ಭೂದೇವಿಯನ್ನು ಕೊಲ್ಲ ಹೊರಟನು. ಆ ರಾಜನ ಉಗ್ರರೂಪವನ್ನು ಕಂಡು ವ್ಯಗ್ರಳಾದ ಭೂದೇವಿಯು ಆಗ ಆಕಳಿನ ರೂಪವನ್ನು ಧರಿಸಿ ಓಡಹತ್ತಿದಳು. ಬ್ರಹ್ಮಾದಿ ಲೋಕಗಳನ್ನೆಲ್ಲ ಹತ್ತಿ ಸುತ್ತಿ ಅವಳು ಎತ್ತ ಓಡಿದರೂ ಬಾಣವನ್ನು ಹೆದೆಯೇರಿಸಿ ತನ್ನ ಬೆನ್ನ ಹಿಂದೆಯೆ ಬರುತ್ತಲಿರುವ ವೀರವರೇಣ್ಯನಾದ ಆ ರಾಜೇಶ್ವರನನ್ನು ನೋಡಿ ಭೂಮಿ ನಡುಗಿ ಹೋದಳು. ಕೊನೆಗೆ ಕೈಮುಗಿದು ಭಯಭಕ್ತಿಯಿಂದ ಕಾತರಳಾದ ಆ ಭೂಮಿ ಕಾಮಿನಿಯ ವೇಷವಾಂತು "ರಾಜೇಶ್ವರ! ನೀನು ಇಂಥ ಪುರುಷಾಧಿರಾಜನಾಗಿ ನನ್ನಂಥ ಸ್ತ್ರೀಯಳನ್ನು ವಧಿಸಬಹುದೇ? ನಿನ್ನ ಪ್ರಜೆಗಳಿಗೆಲ್ಲ ನಾನೇ ಆಧಾರಳು. ನನ್ನನ್ನು ಕೊಂದರೆ ನಿನ್ನ ಪ್ರಜೆಗಳೆಲ್ಲ ಇರುವುದೆಲ್ಲಿ? ನಿಲ್ಲುವುದೆಲ್ಲಿ? ನನ್ನನ್ನು ಕೊಂದರೆ ಅವರೆಲ್ಲರೂ ನಾಶ ಹೊಂದುವರು. ನನ್ನನ್ನು ಕೊಂದ ಬಳಿಕಾದರೂ ನಿನ್ನ ಪ್ರಜೆಗಳಿಗೆ ಆಗುವ ಲಾಭವೇನು? ಆದುದರಿಂದ ನನ್ನನ್ನು ನಾಶಮಾಡಬೇಡ. ನಿಜವಾಗಿಯೂ ನಿನಗೆ ಪ್ರಜಾಕಲ್ಯಾಣ ಮಾಡಬೇಕೆಂದು ಇಚ್ಛೆ ಇದ್ದರೆ ಬೇರೆ ಏನಾದರೂ ಹೊಸ ಹಂಚಿಕೆಯನ್ನು ಹುಡುಕಿ ತೆಗೆ. ನೀನು ಹೇಳಿದಂತೆ ನಡೆಯಲು ನಾನು ಸಿದ್ಧಳಿದ್ದೇನೆ" ಎಂದು ಗೋ ರೂಪಧಾರಿಣಿಯಾದ ಧರಿಣಿಯು ಬಗೆಬಗೆಯಿಂದ ಬೇಡಿಕೊಂಡಾಗ ಪೃಥುರಾಜನ ಸಿಟ್ಟು ಶಾಂತವಾಗಿ ಅವನು ಪೃಥಿವಿಗೆ ಈ ರೀತಿ ಉತ್ತರಿಸಿದನು.

**ಪೃಥು:-** "ಭೂದೇವಿ! ಹಿಂಸೆ ಯಾವಾಗಲೂ ಅಧರ್ಮ ಪಾಪಕಾರಿ ಎಂದು ಹೇಳಲಿಕ್ಕೆ ಬರುವುದಿಲ್ಲ. ಅಹಿಂಸೆ ಯಾವಾಗಲೂ ಧರ್ಮ ಎಂತಲೂ ಅಲ್ಲ. ಸ್ವಾರ್ಥಕ್ಕಾಗಿ ಮಾಡಿದ ಹಿಂಸೆ ಅಥವಾ * ಓರ್ವ ವ್ಯಕ್ತಿಯ ಹಿತಕ್ಕಾಗಿ ಮಾಡಿದ ಬಹುಜನರ ಹಿಂಸೆ ಪಾತಕ ಅಧರ್ಮ. ಆದರೆ ಬಹುಜನರ ಕಲ್ಯಾಣಕ್ಕಾಗಿ ಒಂದು ವ್ಯಕ್ತಿಯ ಹಿಂಸೆ ಪಾತಕವಲ್ಲ. ಅನೇಕ ಜನರ ಸುಖವನ್ನು ಹಾಳು ಮಾಡಿ ಸಮಾಜದ ಶಾಂತಿಸುವ್ಯವಸ್ಥೆಗಳನ್ನು ಕದಡುವ ದುಷ್ಟ ವ್ಯಕ್ತಿಯನ್ನು ಕೊಂದರೆ ಪಾಪವಿಲ್ಲ. ಇಷ್ಟೇ ಅಲ್ಲ ಬಹಳೇ ಪುಣ್ಯವಿದೆ. ಅದಕ್ಕಾಗಿ ನಾನು ಪ್ರಜಾಕೋಟಿಯ ಕಲ್ಯಾಣಕ್ಕಾಗಿ ನಿನ್ನನ್ನು ವಧಿಸಿದರೆ ನನಗೆ ಪಾಪವಿಲ್ಲ. ನನ್ನ ಮಾತನ್ನು ಮೀರಿ ನಡೆದ ನಿನ್ನನ್ನು ಕೊಂದರೆ ನನ್ನ ಪ್ರಜೆಗಳಿಗೆಲ್ಲ ನಿಲ್ಲಲು ನೆಲವಿಲ್ಲದೇ ಎಲ್ಲರೂ ಸತ್ತು ಹೋಗುವರು ಎಂಬುದು ನಿನ್ನ ಭ್ರಮೆ. ತಪಃಪ್ರಭಾವದಿಂದ ನನ್ನ ಶರೀರವನ್ನೇ ಹಿಗ್ಗಿಸಿ ಹರವು ಮಾಡಿ ಅದರ ಮೇಲೆಯೇ ಎಲ್ಲ ಪ್ರಜೆಗಳನ್ನು ಧಾರಣ ಮಾಡುವೆನು. ಆದರೆ ನಿನಗೆ ಬದುಕಬೇಕೆಂದು ಇಚ್ಛೆಯಿದ್ದರೆ ನಾನು ಹೇಳಿದಂತೆ ಕೇಳು. ನೀನು ಮನಸ್ಸು ಮಾಡಿದರೆ ಜಗತ್ತಿನಲ್ಲಿಯ ಎಲ್ಲ ಪ್ರಾಣಿಗಳಿಗೂ ಅನ್ನ ವಸ್ತ್ರಗಳನ್ನು ಒದಗಿಸಬಲ್ಲೆ. ನೀನು ಈಗ ನನ್ನ ಮಗಳಾಗಿ ಪ್ರಜಾಕೋಟಿಕಲ್ಯಾಣಕ್ಕಾಗಿ ಕಾಮಧೇನುವಿನಂತೆ ಕೇಳಿದ್ದನ್ನೆಲ್ಲ ಕರೆದು ಕೊಟ್ಟರೆ ನಾನು ನಿನಗೆ ಏನೂ ಮಾಡುವುದಿಲ್ಲ. ಇದೋ ಈಗ ನಿನ್ನ ಎದುರೇ ಹೂಡಿದ ಈ ಬಾಣವನ್ನು ಹೆದೆಯಿಳಿಸಿ ಬತ್ತಳಿಕೆಗೆ ಸೇರಿಸುತ್ತೇನೆ."

---

* ಏಕಸ್ಯಾರ್ಥಾಯ ಯೋ ಹನ್ಯಾದಾತ್ಮನೋ ವಾ ಪರಸ್ಯ ವಾ
ಬಹೂನ್ ವೈ ಪ್ರಾಣಿನೋ ಲೋಕೇ ಭವೇತ್ತಸ್ಯ ಪಾತಕಮ್
ಏಕಸ್ಮಿನ್ ಯತ್ರ ನಿಧನ ಪ್ರಾಪಿತೇ ದುಷ್ಟಕಾರಿಣೀ
ಬಹೂನಾಂ ಭವತಿ ಕ್ಷೇಮಂ ತತ್ರಪುಣ್ಯಪ್ರದೋ ವಧಃ

**ಪೃಥಿವೀ:-** ರಾಜನ್! ನೀನು ಹೇಳಿದ್ದನ್ನೆಲ್ಲ ಮಾಡುತ್ತೇನೆ. ಉಪಾಯದಿಂದ ಮಾಡಿದರೆ ಎಲ್ಲ ಕಾರ್ಯಗಳೂ ಸಿದ್ಧಿಸುವವು. ನಿನ್ನ ಪ್ರಜೆಗಳು ಬಯಸಿದ್ದನ್ನೆಲ್ಲ ಹಿಂಡಲು ನಾನು ಸಿದ್ಧಳಿದ್ದೇನೆ. ಆದಕ್ಕಾಗಿ ಒಂದು ಕರುವನ್ನು ನೋಡು ಮತ್ತು ತೆಗ್ಗು ಮಿಟ್ಟಿಯಿರುವ ಈ ನನ್ನ ಹೊರಮೈಯನ್ನು ನಿನ್ನ ಧನುಷ್ಕೋಟಿಯಿಂದ ಸವರಿ ಸರಿಪಡಿಸು. ಅಂದರೆ ನಾನು ಕರೆದ ಹಾಲು ಎಲ್ಲೆಡೆಗೆ ಸರಿಯಾಗಿ ಹರಿದು ಹೋಗುವುದು.*

ಆಗ ಪೃಥುರಾಜನು ಅವಳ ಹೇಳಿಕೆಯಂತೆ ನೆಲದ ತುಂಬೆಲ್ಲ ಹಬ್ಬಿನಿಂತ ಸಹಸ್ರಾರು ದಿಬ್ಬದಿನ್ನೆಗಳನ್ನೆಲ್ಲ ತನ್ನ ಅಜಗವಧನುಷದಿಂದ ಸವರಿ ಸರಸಿದನು. ಕಳೆದ ಮನ್ವಂತರ ಗಳಲ್ಲಿ ಈಗಿನಂತೆ ಭೂಮಿ ಸಮನಾಗಿರದೇ ಗಿರಿದರಿ ಕೆರೆತೊರೆ ದಿಬ್ಬದಿನ್ನೆಗಳಿಂದ ವಿಷಮವಾಗಿತ್ತು. ಆಗ ಊರುಕೇರೆ ಹೊಲಮನೆ ವ್ಯಾಪಾರ ಒಕ್ಕಲುತನ ಲಾಭ ಲೋಭ ಸುಳ್ಳು ಮೋಸ ಅಸೂಯೆ ಒಂದೂ ಇರಲಿಲ್ಲ. ಯಾರೂ ಊರು ಕಟ್ಟಿಕೊಂಡು ಮನೆಮಾಡಿ ಒಂದೆಡೆ ನಿಂದು ಸಾಂಘಿಕ ಜೀವನವನ್ನು ನಡೆಸುತ್ತಲೂ ಇರಲಿಲ್ಲ. ಪೃಥುರಾಜನಿಂದಲೇ ಇದೆಲ್ಲವೂ ಪ್ರಾರಂಭವಾಯಿತು. ಪ್ರತಾಪಶಾಲಿಯಾದ ಪೃಥುರಾಜನು ಸ್ವಾಯಂಭುವಮನುವನ್ನು ಕರುವನ್ನಾಗಿ ಮಾಡಿಕೊಂಡು ತನ್ನ ಕೈಯಲ್ಲಿ ಪೃಥಿವಿಯಿಂದ ಕಾಡುಕಡಿಗಳನ್ನು ಹಿಂಡಿಕೊಂಡನು ಅಂದು ಅವನು ಪೃಥಿವಿಯನ್ನು ಹಿಂಡಿ ತೆಗೆದ ಸಸ್ಯವರ್ಧನದ ಪದ್ಧತಿಯಿಂದಲೇ ಇಂದಿಗೂ ಜನರು ಸರ್ವವಿಧವಾದ ಧಾನ್ಯಗಳನ್ನು ಪಡೆದು ಅನ್ನವನ್ನು ಹೊಂದುತ್ತಲಿದ್ದಾರೆ. ಜಗತ್ತಿಗೆಲ್ಲ ಕೊನೆಯವರೆಗೆ ಅನ್ನ ನೀಡಿದ ಶ್ರೇಯಸ್ಸು ಭಗವದಂಶಸಂಭೂತನಾದ ಪೃಥುರಾಜನಿಗೆ ಸಲ್ಲುತ್ತದೆ.

ಅದನ್ನು ನೋಡಿ ಋಷಿಗಳು ಸೋಮನನ್ನು ಕರುವನ್ನಾಗಿ ಕಲ್ಪಿಸಿ ಮತ್ತೆ ಭೂಮಿಯನ್ನು ಹಿಂಡಿದರು. ಅಂಗಿರಾ ಋಷಿಯ ಮಗನಾದ ಬೃಹಸ್ಪತಿಯು ಛಂದಃ ಪಾತ್ರದಲ್ಲಿ ಬ್ರಹ್ಮಸಾಕ್ಷಾತ್ಕಾರ ಸಾಧನವಾದ ತಪೋರೂಪವಾದ ಕ್ಷೀರವನ್ನು ಹಿಂಡಿದಾಗ ಮುನಿಗಳೆಲ್ಲ ಅದರಿಂದ ಸಂತೃಪ್ತರಾದರು. ಇದರಂತೆ ದೇವತೆಗಳು ಇಂದ್ರನನ್ನು ಕರುವನ್ನಾಗಿ ಮಾಡಿ ಸೂರ್ಯನ ಕೈಯಿಂದ ಬಂಗಾರದ ಪಾತ್ರೆಯಲ್ಲಿ ಭೂಮಿಯನ್ನು ಹಿಂಡಿಸಿ ಅಮೃತ-ಹವಿಷ್ಯರೂಪವಾದ ಹಾಲನ್ನು ಪಡೆದರು. ಪಿತೃಗಳು ಯಮನನ್ನು ಕರುವನ್ನಾಗಿ ಮಾಡಿ ಬೆಳ್ಳಿಯ ಪಾತ್ರದಲ್ಲಿ ಹಿಂಡಿ ಸ್ವಧಾ ಎಂಬ ತಮ್ಮ ಅನ್ನವನ್ನು ಪಡೆದರು. ಹಾವುಗಳಾದರೂ ತಕ್ಷಕನನ್ನು ವತ್ಸನನ್ನಾಗಿರಿಸಿ ವಿಷವನ್ನು ಹಿಂಡಿಕೊಂಡವು. ಇದರಂತೆ ಅಸುರರಾದರೂ ವಿರೋಚನನ್ನು ಕರು ಮಾಡಿ ಉಕ್ಕಿನ ಪಾತ್ರೆಯಲ್ಲಿ ವೈರಿ ವಿಮೋಹಕದಾದ ಮಾಯೆಯನ್ನೆ ಕ್ಷೀರ ರೂಪದಿಂದ ಹಿಂಡಿಕೊಂಡರು. ಅದರಿಂದಲೇ ಹಾವುಗಳು ಇಂದಿಗೂ ವಿಷಜಂತುಗಳಾಗಿಯೂ ದೈತ್ಯರೆಲ್ಲ ಮಾಯಾವಿಗಳಾಗಿಯೂ ಉಳಿದಿರುವರು. ಇದೇ ಪ್ರಕಾರ

---

* ಪೃಥುರಾಜನು ಭೂಮಿಯಲ್ಲಿಯ ದಿಬ್ಬದಿನ್ನೆಗಳನ್ನೆಲ್ಲ ಕಡೆದು ತೆಗ್ಗು ತೆವರುಗಳನ್ನು ತುಂಬಿ ಅವನ್ನೆಲ್ಲ ಸರಿಪಡಿಸಿದ ಬಳಿಕ ಗುಡ್ಡಗಳಿಂದ ಉರುಳಿದ ನೀರು ಸಮಪಾತಳಿಯಲ್ಲಿ ನಿಂತು ಬೆಳೆ ಬರುವಂತಾಯಿತು. ಭೂಮಿಯನ್ನು ಉತ್ತಿ ಬಿತ್ತಿ ಬೆಳೆ ಬಂದು ಜನ ಬದುಕುವಂತೆ ಮಾಡಿದ ಪ್ರಥಮ ರಾಜನೇ ಪೃಥು. ಅವನ ಕಥೆ ಬಂಜರು ನೆಲ ಸುಫಲಾ ಆಗಿ ಮಾರ್ಪಾಡಾದುದರ ಒಂದು ಸಂಕೇತ ಎಂದು ಪಾಶ್ಚಾತ್ಯ ವಿಮರ್ಶಕರು ಹೇಳಿ ಇದೊಂದು ರೂಪಕ ಕಥೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ಯಕ್ಷರೆಲ್ಲ ಕೂಡಿ ಕುಬೇರನನ್ನು ಕರು ಎಂದು ಕಲ್ಪಿಸಿ ಮಣ್ಣಿನ ಪಾತ್ರೆಯಲ್ಲಿ ಭೂಮಿಯನ್ನು ಹಿಂಡಿ ಅಂತರ್ಧಾನ ರೂಪವಾದ ಕ್ಷೀರವನ್ನು ಪಡೆದು ಕೊಂಡರು. ಆಮೇಲೆ ರಾಕ್ಷಸರೂ ಪಿಶಾಚರೂ ಸೇರಿ ಹೆಣದ ತಲೆಬುರುಡಿಯಲ್ಲಿ ರಕ್ತ ರೂಪವಾದ ಕ್ಷೀರವನ್ನು ಭೂಮಿಯಿಂದ ಹಿಂಡಿಕೊಂಡರು. ಗಂಧರ್ವ ಅಪ್ಸರೆಯರು ಕೂಡಿ ಪದ್ಮಪತ್ರದ ಪಾತ್ರದಲ್ಲಿ ಚಿತ್ರರಥನನ್ನು ವತ್ಸನನ್ನಾಗಿ ಮಾಡಿ ದಿವ್ಯವಾದ ಗಂಧ ಪರಿಮಳಗಳನ್ನು ಹಿಂಡಿಕೊಂಡರು. ಪರ್ವತಗಳೆಲ್ಲವೂ ಕೂಡಿ ಹಿಮಾಲಯವನ್ನು ಕರುವನ್ನು ಮಾಡಿ ಮೇರು ಪರ್ವತವನ್ನು ಹಿಂಡುವವನನ್ನು ಮಾಡಿ ಅನಂತರತ್ನ ಹಾಗೂ ಔಷಧಿಗಳನ್ನು ಕ್ಷೀರರೂಪವಾಗಿ ಹಿಂಡುಕೊಂಡವು. ಇದರಂತೆ ಬಳ್ಳಿಗಳೆಲ್ಲ ಕೂಡಿ ತಮ್ಮ ಎಲೆಯ ಪಾತ್ರದಲ್ಲಿ ಭೂಮಿಯನ್ನು ಹಿಂಡಿ, ಕಡಿದು ಚಿವಟಿ ಒಗೆದರೂ ಮತ್ತೆ ಚಿಗುರುವ ಶಕ್ತಿಯನ್ನು ಹಾಲಿನ ರೂಪದಿಂದ ಪಡೆದವು.

ಹೀಗೆ ಜಗತ್ತಿನಲ್ಲಿಯ ಎಲ್ಲ ಚರಾಚರಜೀವ ಜಂತುಗಳಿಗೆಲ್ಲ ಪೃಥಿವಿಯೇ ಪಾಲನೆ ಪೋಷಣೆ ಧಾರಣೆ ಮರಣ ಜೀವನ ಪಾವನಕಾರಿಣಿಯಾಗಿ ಸರ್ವಕಾರಣಳಾಗಿದ್ದಾಳೆ. ಎಲ್ಲ ವಿಧ ಬೆಳೆಗಳನ್ನೂ ಬೆಳೆಯುವ ಇವಳೇ ನಿಜವಾದ ಕಾಮಧೇನು. ಮಧು ಕೈಟಭರ ಮೇದಸ್ಸಿನಿಂದ ಮೊದಲು ತುಂಬಿದ್ದರಿಂದ ಇವಳಿಗೆ ಮೇದಿನಿಯೆಂದೂ ಪೃಥುವಿನ ಮಗಳಾಗಿ ಗ್ರಾಮಾರಾಮ ಕ್ಷೇತ್ರಗಳಿಂದ ಸಸ್ಯಶಾಲಿನಿಯೂ ಪಟ್ಟಣ ಮಾಲಿನಿಯೂ ಆದುದರಿಂದ ಪೃಥಿವಿಯೆಂದು ಇವಳನ್ನು ಕರೆಯುವರು. ಇಂತು ಆದಿರಾಜನೂ ಸಾಕ್ಷಾತ್ ವಿಷ್ಣುವಿನ ಅಂಶಭೂತನೂ ಆದ ಧರ್ಮಾತ್ಮ ಪೃಥುರಾಜನು ಸರ್ವವರ್ಣದವರಿಗೂ ವಂದ್ಯನೂ ಜಗದಭಿನಂದ್ಯನೂ ಆಗಿದ್ದಾನೆ.

## (ಮನ್ವಂತರಗಳ ವರ್ಣನೆ)

ಮನುಗಳು ಒಟ್ಟು ಹದಿನಾಲ್ಕು. ಈಗ ನಡೆದದ್ದು ವೈವಸ್ವತಮನು. ಇದಕ್ಕೂ ಹಿಂದೆ ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ ಎಂದು ಆರು ಮನ್ವಂತರಗಳು ಆಗಿ ಹೋಗಿವೆ. ಮುಂದೆ *ಸಾವರ್ಣಿ, ಭೌತ್ಯ, ರೌಚ್ಯ, ಬ್ರಹ್ಮಸಾವರ್ಣಿ, ರುದ್ರಸಾವರ್ಣಿ, ಮೇರು ಸಾವರ್ಣಿ ದಕ್ಷಸಾವರ್ಣಿ ಎಂಬ ಏಳು ಮನ್ವಂತರಗಳು ಬರಲಿವೆ. ಪ್ರತಿಯೊಂದು ಮನ್ವಂತರಕ್ಕೂ ಮನು, ಋಷಿ, ದೇವಗಣ ಮನುಸಂತತಿ ಬೇರೆ ಬೇರೆ ಇರುತ್ತವೆ.

ಮೊದಲನೆಯದಾದ ಸ್ವಾಯಂಭುವಮನ್ವಂತರದಲ್ಲಿ ಮರೀಚಿ, ಅತ್ರಿ, ಅಂಗಿರ, ಪುಲಹ, ಕ್ರತು, ಅಗಸ್ತ್ಯ ವಶಿಷ್ಠ ಮೊದಲಾದ ಏಳು ಬ್ರಹ್ಮದೇವರ ಮಾನಸಪುತ್ರರೇ* ಸಪ್ತರ್ಷಿಗಳೆಂದು ಪೂಜಿಸಲ್ಪಡುತ್ತಾರೆ. ಮತ್ತು ಈ ಮನ್ವಂತರದ ದೇವಗಣವನ್ನು ಯಮ ಎಂದು ಕರೆಯುವರು. ಅಗ್ನೀಧ್ರ, ಅಗ್ನಿಬಾಹು, ಮೇಧಾ, ಮೇಧಾತಿಥಿ, ವಸು, ಜ್ಯೋತಿಷ್ಮಾನ್, ದ್ಯುತಿಮಾನ್, ಹವ್ಯ, ಸವನ ಎಂಬ ತೇಜಸ್ವಿಗಳಾದ ಹತ್ತು ಜನರು ಈ ಮನ್ವಂತರದ ಮನುಕುಮಾರರು. ಇದರಂತೆ ವಶಿಷ್ಠ ಪುತ್ರರಾದ ಔರ್ವ, ಸ್ತಂಬ, ಕಾಶ್ಯಪ, ಪ್ರಾಣ, ಬೃಹಸ್ಪತಿ, ದತ್ತ, ನಿಶ್ಚವನ ಎಂಬ ಹೆಸರಿನ

---

* ಭಾಗವತದಲ್ಲಿ ಇವರ ಹೆಸರುಗಳನ್ನು ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮ ಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ ಎಂದು ಕೊಟ್ಟಿದ್ದಾಟ್ಟರೆ.

* ಭಾಗವತದಲ್ಲಿ ಇವರು ಏಳುಜನರು ಸ್ವಾಯಂಭುವ ಮನ್ವಂತರದ ಧರ್ಮೋಪದೇಶಿಗಳಾದ ಸಪ್ತರ್ಷಿಗಳೆಂದು ಹೇಳಿದೆ.

*ಸಪ್ತರ್ಷಿಗಳೂ, ತುಷಿತರೆಂಬ ದೇವತೆಗಳೂ, ಹವಿರ್ಧ್ರ, ಸುಕೃತಿ, ಜ್ಯೋತಿ, ಅಪಮೂರ್ತಿ, ಅಯಸ್ಮಯ, *ಪ್ರಥಿತ, ನಭಸ್ಯ, ನಭ, ಊರ್ಜ, ಎಂಬ ಮನುಪುತ್ರರೂ ಎರಡನೆಯದಾದ ಸ್ವಾರೋಚಿಷ ಮನ್ವಂತರದಲ್ಲಿ ಹೆಸರಾಗಿದ್ದರು.

ಇನ್ನು ಆರನೆಯದಾದ ಚಾಕ್ಷುಷ, ಮನ್ವಂತರದಲ್ಲಿ ಭೃಗು,. ನಭ, ವಿವಸ್ವಾನ್ ಸುಧಾಮ, ವಿರಜ, ಅತಿನಾಮ, ಸಹಿಷ್ಣು ಎಂಬ ಸಪ್ತರ್ಷಿಗಳೂ; ಆಢ್ಯ, ಪ್ರಭೂತ ಋಭು, ಪೃಥಗ್‌ಭಾವ, ಲೇಖ ಎಂಬ ಐದು ಅಂಗಿರಾ ಋಷಿಯಿಂದಲೇ ಜನಿತವಾದ ದೇವತಾಗಣಗಳೂ ಊರು ಮೊದಲಾದ ಮನುತನುಜರೂ ಪ್ರಥಿತರಾಗಿದ್ದರು. ಇವರೆಲ್ಲರೂ ನಡ್ವಲೆಯ ಮಕ್ಕಳಾದ್ದರಿಂದ ಇವರಿಗೆ ನಾಡ್ವಲೇಯರೆಂದು ಹೆಸರು.

ಏಳನೆಯ ಮನ್ವಂತರವಾದ ಪ್ರಕೃತ ವೈವಸ್ವತದಲ್ಲಿ ವಸಿಷ್ಠ, ಕಶ್ಯಪ, ಗೌತಮ, ವಿಶ್ವಾಮಿತ್ರ, ಭರದ್ವಾಜ, ಜಮದಗ್ನಿ ಎಂಬ ಸಪ್ತರ್ಷಿಗಳಿರುವರು. ಸಾಧ್ಯ ರುದ್ರ, ವಿಶ್ವೇದೇವ, ಮರುತ, ವಸು, ಆದಿತ್ಯ ಮೊದಲಾದ ದೇವಗಣಗಳೂ ಮತ್ತು ಇಕ್ಷ್ವಾಕು ಮೊದಲಾದ ಹತ್ತು ಜನ ಮನುತನಯರೂ ಈಗ ಇರುವರು. ಮೇಲೆ ಹೇಳಿದ ಮಹರ್ಷಿಗಳ ಪುತ್ರಪೌತ್ರಾದಿ ಸಂತತಿಯು ದಶದಿಕ್ಕುಗಳಲ್ಲಿಯೂ ವ್ಯಾಪಿಸಿರುವದು.

## "ಮರುದ್ಗಣದ ಬ್ರಹ್ಮಲೋಕಾಭಿಯಾನ"

ಇದರಂತೆ ಪ್ರತಿ ಮನ್ವಂತರಕ್ಕೂ ನಲವತ್ತೊಂಭತ್ತು ಮರುತ್ತುಗಳ ಒಂದೊಂದು ಗುಂಪು ಇರುವುದು. ಇವರೆಲ್ಲರೂ ತಮ್ಮ ತಮ್ಮ ಮನುವಿನ ಅವಧಿಯಲ್ಲಿ ಲೋಕವ್ಯವಸ್ಥೆಯನ್ನು ಮಾಡುತ್ತ ಭಗವದಾರಾಧನೆಯಲ್ಲಿ ನಿರತರಾಗಿದ್ದು ಮನ್ವಂತರ ಮುಗಿದ ಬಳಿಕ ತಮ್ಮ ಪುಣ್ಯ ಕರ್ಮ ಪ್ರಭಾವದಿಂದ ಮುಕ್ತರಾಗಿ ಬ್ರಹ್ಮಲೋಕವನ್ನು ಹೊಂದುವರು. ಇವರ ಸ್ಥಾನಕ್ಕೆ ಮತ್ತೆ ಬೇರೆ ಇಪ್ಪತ್ತೆಂಟು ತಪೋಯೋಗಿಗಳು ಬಂದು ಮರುದ್ಗಣದ ನಲವತ್ತರೊಂಬತ್ತರ ಸಂಖ್ಯೆ ನಿರಂತರಪೂರ್ಣವಾಗಿಯೇ ಇರುವುದು. ಇದೆಲ್ಲ ಹಿಂದೆ ಆಗಿಹೋದ ಮನ್ಮಂತರಗಳ ವಿವರವಾಯಿತು. ಈಗ ಮುಂದೆ ಬರಲಿರುವ ಏಳು ಮನ್ವಂತರಗಳ ಋಷಿ ದೇವತಾದಿಗಳು ಇಂತಿವೆ.

ಮುಂಬರುವ ಐದೂ ಮನುಗಳಿಗೆಲ್ಲ ಸಾವರ್ಣ ಮನು ಎಂದೇ ಹೆಸರು. ಇದರಲ್ಲಿ ಮೊದಲಿನವನು ವೈವಸ್ವತ ಮನುವಿನ ಮಗನಾಗಿದ್ದು ಉಳಿದ ನಾಲ್ವರು ಬ್ರಹ್ಮದೇವರ ಮಕ್ಕಳು. ದಕ್ಷಪ್ರಜಾಪತಿಯ ಪ್ರಿಯಾ ಎಂಬ ಹೆಣ್ಣುಮಗಳ ಹೊಟ್ಟೆಯಿಂದ ಹುಟ್ಟಿದ ಈ ನಾಲ್ಕು ಜನರೂ ಮೇರು ಶಿಖರದಲ್ಲಿ ಅಖಂಡ ತಪವನ್ನು ಆಚರಿಸುತ್ತಲಿದ್ದುದರಿಂದ ಇವರಿಗೆ ಮೇರು ಸಾವರ್ಣರೆಂದು ಕರೆಯುವರು. ಹೀಗೆ ಒಟ್ಟು ಐದು ಸಾವರ್ಣ ಮನುಗಳು ಮುಂದೆ ಬರಲಿರುವರು. ರುಚಿ ಎಂಬ ಪ್ರಜಾಪತಿಯ ಹೊಟ್ಟೆಯಿಂದ ರೌಚ್ಯನೆಂದು ಹೆಸರಾಂತ ಮನುವು ಹುಟ್ಟಿದನು. ಮತ್ತು ಅದೇ ರುಚಿ ಪ್ರಜಾಪತಿಯ ಭೂತಿ ಎಂಬ ಭಾಮೆಯಲ್ಲಿ ಭೌತ್ಯನೆಂಬ ಮನು ಜನಿಸಿದನು. ಹೀಗೆ ಒಟ್ಟು ಹದಿನಾಲ್ಕು ಮನುಗಳು.

---

* ಬಂಗಾಲಿಯ ಹರಿವಂಶಪ್ರತಿಯಲ್ಲಿ ಕಶ್ಯಪನಿಗೆ ಬದಲಾಗಿ ಅತ್ರಿ, ನಿಶ್ಚವನನಿಗೆ ಬದಲಾಗಿ ಚ್ಯವನ ಎಂದು ಹೆಸರುಗಳಿವೆ.

* ಮತ್ಸ್ಯಪುರಾಣದಲ್ಲಿ ಈ ಮುಂದಿನ ನಾಲ್ಕು ಹೆಸರುಗಳು ಕಾಣುವದಿಲ್ಲ. ಬರಿ ಏಳೇ ಜನರ ನಾಮ ಹೇಳಿದ್ದಾರೆ.

## ''ಸಪ್ತಲಕ್ಷಣಗಳಿಂದ ಸಪ್ತರ್ಷಿಗಳು''

ಎಂಟನೆಯ ಬ್ರಹ್ಮ ಸಾವರ್ಣ ಮನ್ವಂತರದಲ್ಲಿ ರಾಮ, ವ್ಯಾಸ, ದೀಪ್ತಿಮಾನ್, ದ್ರೋಣಪುತ್ರ, ಅಶ್ವತ್ಥಾಮ, ಕೃಪ, ಗಾಲವರು ಎಂಬ ಸಪ್ತರ್ಷಿಗಳು ಜನಿಸಲಿದ್ದು ಅವರೆಲ್ಲರೂ ತಮ್ಮ ದಿವ್ಯದರ್ಶನ, ತಪೋಬಲ, ದಿವ್ಯಶಕ್ತಿ, ಅಷ್ಟಸಿದ್ಧಿ ಹಾಗೂ ತ್ರಿಕಾಲ ಜ್ಞಾನಗಳಿಂದ ಬ್ರಹ್ಮಲೋಕದಲ್ಲಿಯೂ ಗೌರವಿಸಲ್ಪಡುತ್ತಾರೆ.

ದೀರ್ಘಾಯುಷ್ಯ, ಮಂತ್ರದ್ರಷ್ಟೃತೆ, ತಪಸ್ಸಿದ್ಧಿ, ತ್ರಿಕಾಲಜ್ಞಾನ, ಬ್ರಹ್ಮಾಪರೋಕ್ಷ ಗೋತ್ರಪ್ರವರ್ತಕತ್ವ, ವರ್ಣಾಶ್ರಮಧರ್ಮವ್ಯವಸ್ಥಾಪಕತ್ವ ಇವು ಏಳು ಸಪ್ತರ್ಷಿಗಳ ಲಕ್ಷಣಗಳಾಗಿವೆ. ಸತ್ಯಧರ್ಮಪರಾಯಣರಾದ ಇಂಥ ಮಹಾಮಹಿಮ ಸಪ್ತರ್ಷಿಗಳ ವಂಶದಲ್ಲಿ ಹುಟ್ಟಿದ ಮಹನೀಯರೇ ಮುಂದೆ ಧರ್ಮಗ್ಲಾನಿಯಾದಾಗಲೆಲ್ಲ ಮಂತ್ರ ಬ್ರಾಹ್ಮಣ ಸ್ಮೃತ್ಯಾದಿಗಳನ್ನು ರಚಿಸಿ ಧರ್ಮಸಂಸ್ಥಾಪನೆಯ ಮಹತ್ಕಾರ್ಯವನ್ನು ಕೈಕೊಳ್ಳುತ್ತಾರೆ. ಅವರಲ್ಲಿ ತಪಸ್ಸು ತೇಜಸ್ಸುಗಳೇ ಮುಖ್ಯ, ವಯಸ್ಸು ಕಾರಣವಲ್ಲ. ವಯಸಾ ಕಿರಿಯರಾದರೂ ಎಷ್ಟೋ ಋಷಿಗಳು ತಮ್ಮ ತಪೋಬಲದಿಂದ ಮಹತೋ ಮಹೀಯರಾಗಿ ಬೇಕಾದ ವರಪ್ರದಾನ ಮಾಡಬಲ್ಲರು. ವರೀಯಾನ್, ಅವರೀಯಾನ್, ಸಮ್ಮತ, ಧೃತಿಮಾನ್, ವಸು, ಚರಿಷ್ಣು, ಅದೃಷ್ಣು, ವಾಜ, ಸುಮತಿ, ಅಪಿ ಎಂದು ಸಾವರ್ಣ ಮನುವಿಗೆ ಹತ್ತು ಜನ ಮಕ್ಕಳು ಹುಟ್ಟಲಿರುವರು.

ಒಂಬತ್ತನೆಯದಾದ ಮೇರುಸಾವರ್ಣ ಅಥವಾ ರೋಹಿತ ಮನ್ವಂತರದಲ್ಲಿ ಮೇಧಾತಿಥಿ, ವಸು, ಜ್ಯೋತಿಷ್ಮಾನ್, ದ್ಯುತಿಮಾನ್, ಸವನ, ಹವ್ಯವಾಹನ, ಪೌಲಹ ಎಂಬ ಏಳು ಸಪ್ತರ್ಷಿಗಳಾಗಲಿರುವರು. ಈ ಮನ್ವಂತರದಲ್ಲಿ ಮೂರು ದೇವಗಣಗಳಿದ್ದು ದೃಷ್ಟಕೇತು, ಪಂಚಹೋತ್ರ, ನಿರಾ, ಕೃತಿ, ಪೃಥುಶ್ರವಾ, ಭೂರಿದ್ಯುಮ್ನ, ಋಚೀಕ, ಬೃಹತ, ಗಯ, ಎಂಬ ಒಂಬತ್ತು ಜನರು ಮನುಪುತ್ರರು ಆಗುವರು. ಈ ರೋಹಿತ ಪ್ರಜಾಪತಿಯು ದಕ್ಷನ ಮಗಳ ಮಗನಾದರೂ ಅಜ್ಜನಿಂದ ದತ್ತಕ ತೆಗೆದುಕೊಳ್ಳಲ್ಪಟ್ಟಿದ್ದರಿಂದ ದಕ್ಷಪುತ್ರನೆಂದೇ ಕರೆಯಲ್ಪಡುವನು. ಹತ್ತನೆಯದಾದ ದ್ವಿತೀಯ ಮೇರುಸಾವರ್ಣ ಮನ್ವಂತರದಲ್ಲಿ ಹವಿಷ್ಮಾನ್ ಸುಕೃತಿ, ಅಪೋಮೂರ್ತಿ, ಅಷ್ಟಮ, ಪ್ರಮಿತಿ, ನಭೋಗ, ಸತ್ಯ, ಎಂಬ ಸಪ್ತರ್ಷಿಗಳೂ, ಅರ್ಚಿರಾದಿ ಮಾರ್ಗ ಸಂರಕ್ಷಕರೂ, ಋಷಿಮಂತ್ರಪ್ರತಿಪಾದ್ಯರೂ ಆದ ಎರಡು ದೇವತಾಗಣಗಳೂ, ಮನುಸುತ, ಉತ್ತಮೌಜ, ನಿಕುಷುಜ, ವೀರ್ಯಮಾನ್, ಶತಾನೀಕ, ನಿರಾಮಿತ್ರ, ವೃಷ್ಣಸೇನ, ಜಯದ್ರಥ, ಭೂರಿದ್ಯುಮ್ನ, ಸುವರ್ಚ ಎಂಬ ಹತ್ತು ಮನು ಪುತ್ರರೂ ಇರುವರು. ಹನ್ನೊಂದನೆಯದಾದ (ಮೂರನೆಯ) ಸಾವರ್ಣ ಮನ್ವಂತರದಲ್ಲಿ ಹವಿಷ್ಮಾನ್ (ಕಶ್ಯಪವಂಶಜ) ಹವಿಷ್ಮಾನ್, (ಭೃಗುವಂಶಜ) ತರುಣ, ಅನಘ, ಉದಧಿಷ್ಣ್ಯ, ನಿಶ್ಚರ, ಅಗ್ನಿತೇಜ ಎಂಬ ಸಪ್ತರ್ಷಿಗಳೂ, ಬ್ರಹ್ಮಪುತ್ರರಾದ ಮೂರು ದೇವಗಣಗಳೂ, ಸಂವರ್ತಕ, ಸುಶರ್ಮ, ದೇವಾನೀಕ, ಪುರೂದ್ವಹ, ಕ್ಷೇಮಧನ್ವ, ಧೃಡಾಯು, ಪಂಡಕ ಆದರ್ಶ, ಮನು ಎಂಬ ಒಂಭತ್ತು ಮನುಪುತ್ರರೂ ಆಗುವರು. ಹನ್ನೆರಡನೆಯದಾದ ಮೇರುಸಾವರ್ಣ ಮನ್ವಂತರದಲ್ಲಿ ದ್ಯುತಿ, ಸಂತಪ, ತಪೋಮೂರ್ತಿ, ತಪಸ್ವಿ, ತಪೋಶನ, ತಪೋರವಿ, ತಪೋಧೃತಿ ಎಂಬ ಸಪ್ತರ್ಷಿಗಳೂ, ಬ್ರಹ್ಮದೇವರ ಮಾನಸಪುತ್ರರಾದ ಐದು

ದೇವಗಣಗಳೂ, ದೇವವಾಯು, ಅದೂರ, ದೇವಶ್ರೇಷ್ಠ, ವಿದೂರಥ, ಮಿತ್ರವಾನ್, ಮಿತ್ರದೇವ, ಮಿತ್ರಸೇನ, ಮಿತ್ರಕೃತ್, ಮಿತ್ರಬಾಹು, ಸುವರ್ಚ, ಎಂಬ ದಶಕುಮಾರರೂ ದ್ವಾದಶ ಮನುವಿಗೆ ಆಗಲಿರುವರು.

ಹದಿಮೂರನೆಯದಾದ ರೌಚ್ಯ ಮನ್ವಂತರದಲ್ಲಿ ಧೃತಿಮಾನ್, ಹವ್ಯಪ, ತತ್ವದರ್ಶಿ, ನಿರುಚ್ಛಕ, ನಿಷ್ಪ್ರಕಂಪ, ನಿರ್ಮೋಹ, ಸಂತಪ ಎಂಬ ಸಪ್ತರ್ಷಿಗಳೂ ಚಿತ್ರಸೇನ, ವಿಚಿತ್ರ, ನಯ, ಧರ್ಮಭೃತ, ಧೃತ, ಸುನೇತ್ರ, ಕ್ಷತ್ರವೃದ್ಧಿ, ಸಂತಪ, ನಿರ್ಭಯ, ದೃಢ ಎಂಬ ಮನುಪುತ್ರರೂ ಮೂರು ದೇವತಾಗಣಗಳೂ ಉಂಟಾಗುವವು. ಕೊನೆಯದಾದ ಭೌತ್ಯ ಮನ್ವಂತರದಲ್ಲಿ ಅತಿಬಾಹು, ಶುಚಿ, ಯುಕ್ತ, ಶುಕ್ರ. ಅಜಿತ, ಅಗ್ನೀಧ್ರ, ಭಾರ್ಗವ ಎಂಬ ಸಪ್ತರ್ಷಿಗಳೂ, ಐದು ದೇವಗಣಗಳೂ, ತರಂಗ ಭೀರು, ವಪ್ರ, ತರಿಸ್ವಾನ್, ಉಗ್ರ, ಅಭಿಮಾನಿ, ಪ್ರವೀಣ, ಜಿಷ್ಣು, ಸಂಕ್ರಂದನ, ಸಬಲ, ತೇಜಸ್ವಿ ಎಂಬ ಹತ್ತು ಮನುಕುಮಾರರೂ ಜನಿಸಲಿರುವರು. ಹೀಗೆ ಭೌತ್ಯಮನುವಿನ ಅಧಿಕಾರದ ಅವಧಿ ಮುಕ್ತಾಯವಾದಾಗ ಒಂದು ಕಲ್ಪಪೂರ್ತಿ ಯಾಗುತ್ತದೆ. ಈ ಹದಿನಾಲ್ಕು ಮನುಗಳು ತಮ್ಮ ತಮ್ಮ ಮಕ್ಕಳಿಂದಲೂ ಹಾಗೂ ದೇವಗಣ ಮತ್ತು ಸಪ್ತರ್ಷಿಗಳಿಂದಲೂ ಒಡಗೂಡಿ ಗಿರಿಗ್ರಾಮಗಳಿಂದ ತುಳುಕುವ ಹಾಗೂ ಸಮುದ್ರ ಸೀಮಿತವಾದ ಪೃಥ್ವೀ ಮಂಡಲವನ್ನು ಸಹಸ್ರಯುಗ ಪರ್ಯಂತರ ತಮ್ಮ ತಪೋಬಲದಿಂದ ಆಳುವರು. ತಮ್ಮ ತಮ್ಮ ಅವಧಿ ಮುಕ್ತಾಯವಾದ ಬಳಿಕ ಲಯವನ್ನು ಹೊಂದುವರು. ಇದೆಲ್ಲವೂ ಭಗವಂತನ ಇಚ್ಛೆಯ ಮೇರೆಗೆ ಅವಿಚ್ಛಿನ್ನವಾಗಿ ನಡೆಯುವುದು.

## ಮನ್ವಂತರಗಳ ಕಾಲಗಣನೆ

ಲೌಕಿಕದಲ್ಲಿ ಮನುಷ್ಯರ ಕಾಲಗಣನೆಯು ಸೂರ್ಯನ ಉದಯಾಸ್ತಗ ಮೇಲಿಂದ ಆಗುತ್ತಲಿರುವ ಹಗಲಿರುಳುಗಳ ಸಂಖ್ಯೆಯನ್ನು ಅವಲಂಬಿಸಿ ಮಾಡಲ್ಪಡುತ್ತದೆ. ಅದೇ ಮಾನದಿಂದ ದೇವ ಮತ್ತು ಮನು ಹಾಗೂ ಬ್ರಾಹ್ಮ ಮಾನಗಳ ಪ್ರಮಾಣವು ಇಲ್ಲಿ ವಿವರಿಸಲ್ಪಡುತ್ತದೆ.

ಮೊಟ್ಟ ಮೊದಲು ಕಾಲಮಾಪನದ ಅತ್ಯಂತ ಸಣ್ಣದಾದ ಸೂಕ್ಷ್ಮ ಮಾನವೆಂದರೆ ಒಮ್ಮೆ ಕಣ್ಣವೆಗಳನ್ನು ಪಿಳಕಿಸುವದಕ್ಕೆ ಹತ್ತು ಅತ್ಯಲ್ಪ ಕಾಲಕಲೆ. ಇದಕ್ಕೆ ನಿಮೇಷ ಎನ್ನುವರು. ಇಂಥ ಹದಿನೈದು ನಿಮೇಷಗಳಷ್ಟು ಕಾಲಕ್ಕೆ ಒಂದು ಕಾಷ್ಠಾ ಎನ್ನುವರು. ಇಂಥ ಮೂವತ್ತು ಕಾಷ್ಠಾಗಳಾದರೆ ಒಂದು ಕಲೆ, ಮೂವತ್ತು ಕಲೆಗಳೆಂದರೆ ಒಂದು ಮುಹೂರ್ತ, ಇಂಥ ಮೂವತ್ತು ಮುಹೂರ್ತಗಳಾದರೆ ಒಂದು ಅಹೋರಾತ್ರ. ಅಂದರೆ ಹಗಲಿರುಳುಗಳಿಂದ ಕೂಡಿದ ಒಂದು ದಿವಸವಾಗುವುದು. ಒಂದು ಅಹೋರಾತ್ರವೆಂದರೆ ಚಂದ್ರಸೂರ್ಯರ ಗತಿಯ ಒಂದು ಸುತ್ತು ಆಗುವದು. ಈ ಅಹೋರಾತ್ರಿಯ ಕಾಲಮಾನದ ಮಾಪನ ಪದ್ಧತಿಯು ಮೇರುಪರ್ವತದ ಅರ್ಥಾತ್ ವಿಷುವ ವೃತ್ತದ ಸುತ್ತುಮುತ್ತಲಿನ ದೇಶಪ್ರದೇಶಗಳಲ್ಲಿ ಅನ್ವಯಿಸುವುದು. ಇಂಥ ಹದಿನೈದು ಹಗಲಿರುಳುಗಳು ಸೇರಿದರೆ ಒಂದು ಪಕ್ಷ, ಎರಡು ಪಕ್ಷಗಳು ಕ್ರಮಿಸಿದರೆ ಒಂದು ತಿಂಗಳು. ಎರಡು ತಿಂಗಳುಗಳು ಕಳೆದರೆ ಒಂದು ಋತು, ಮೂರು ಋತುಗಳು ತಿರುಗಿದರೆ ಒಂದು ಅಯನ, ಎರಡು ಅಯನಗಳು ಪೂರ್ಣವಾದರೆ ಒಂದು ವರ್ಷ ಎನ್ನುವರು. ಎರಡು ಅಯನಗಳಲ್ಲಿ ಒಂದಕ್ಕೆ ದಕ್ಷಿಣಾಯನ ಇನ್ನೊಂದಕ್ಕೆ ಉತ್ತರಾಯಣ ಎಂದೂ ಕರೆಯುವರು.

ಈ ಮಾನದಿಂದ ಎರಡು ಪಕ್ಷಗಳು ಕೂಡಿ ಆದ ಒಂದು ತಿಂಗಳಿಗೆ ಪಿತೃಗಳ ಒಂದು ದಿನವೆನ್ನುವರು. ಕೃಷ್ಣಪಕ್ಷವು ಪಿತೃಗಳ * ಹಗಲು, ಶುಕ್ಲಪಕ್ಷವೇ ಅವರ ರಾತ್ರಿ. ಆದ್ದರಿಂದಲೇ ಮಹಾಲಯಾದಿ ಪಿತೃ ಶ್ರಾದ್ಧಗಳನ್ನು ಕೃಷ್ಣಪಕ್ಷದಲ್ಲಿಯೇ ಮಾಡುವ ಸಂಪ್ರದಾಯವುಂಟು.

ಇದರಂತೆ ಮನುಷ್ಯರ ಮಾನದಿಂದ ಒಂದು ವರ್ಷವಾದರೆ ಅದು ದೇವತೆಗಳ ಒಂದು ದಿವಸವೆಂದು ಲೆಕ್ಕ. ನಮ್ಮ * ಉತ್ತರಾಯಣವು ದೇವತೆಗಳಿಗೆ ಹಗಲಾದರೆ ದಕ್ಷಿಣಾಯಣವು ಅವರಿಗೆ ರಾತ್ರಿ ಎಂದು ಜ್ಯೋತಿಃಶಾಸ್ತ್ರ ವಿಶಾರದರು ಹೇಳುತ್ತಾರೆ.

ಇದು ದೇವತೆಗಳ ದಿನಮಾನವಾಯಿತು. ಈ ಮಾನದಿಂದ ದೇವತೆಗಳ ಹತ್ತು ವರ್ಷಗಳಾದರೆ ಮನುವಿನ ಒಂದು ಅಹೋರಾತ್ರ ಅಂದರೆ ಇಡೀ ಒಂದು ದಿವಸವಾಗುವದು. ಇಂಥ ಹತ್ತು ದಿನಗಳಾದರೆ ಮನುವಿನ ಒಂದು ಪಕ್ಷ. ಇಂಥ ಹತ್ತು ಪಕ್ಷಗಳಾದರೆ ಮನುಮಾನದ ಒಂದು ತಿಂಗಳು. ಇಂಥ ಹನ್ನೆರಡು ತಿಂಗಳುಗಳಾದರೆ ಒಂದು ಋತು. ಇಂಥ ಮೂರು ಋತುಗಳಾದರೆ ಒಂದು ಅಯನ. ಎರಡು ಅಯನಗಳಿಂದ ಮನುವಿನ ಒಂದು ವರುಷವಾಗುವುದು. ಇದೇ ಮಾನದಿಂದ ಮನುವಿನ ನಾಲ್ಕು ಸಾವಿರ ವರ್ಷಗಳು ಗತಿಸಿದರೆ ಕೃತಯುಗವು ಪೂರ್ಣವಾಗುವುದು. ಇದೇ ಮಾನದ ನಾಲ್ಕು ನೂರು ವರ್ಷ ಕೃತಿಯುಗದ * ಸಂಧ್ಯಾಕಾಲವೂ ನಾಲ್ಕು ನೂರು ವರ್ಷದ ಸಂಧ್ಯಾಂಶಭಾಗವೂ ಇರುವುದು.

ಇದರಂತೆ ತ್ರೇತಾಯುಗದ ಪರಿಮಾಣ ಮನುಮಾನದ ಮೂರು ಸಾವಿರ ವರುಷವಿರುವುದು. ಹಾಗೂ ಇದಕ್ಕೆ ಇನ್ನೂರು ವರುಷದ ಪೂರ್ವಸಂಧ್ಯೆ ಮುನ್ನೂರು ವರ್ಷದ ಪರಸಂಧ್ಯೆ ಇರುವವು. ದ್ವಾಪರಯುಗ ಪ್ರಮಾಣ ಎರಡು ಸಾವಿರ ವರ್ಷ, ಮತ್ತು ಇನ್ನೂರು ವರುಷ ಪೂರ್ವಸಂಧ್ಯೆ. ಇನ್ನೂರು ವರುಷ ಪರಸಂಧ್ಯೆಗಳು ಇರುವವು. ಕಲಿಯುಗದ ಪ್ರಮಾಣ ಒಂದು ಸಾವಿರ ವರ್ಷ ಮಾತ್ರವಿದ್ದು ಪೂರ್ವಾಪರ ಸಂಧ್ಯೆಗಳೆರಡೂ ಒಂದೊಂದು ನೂರು ವರ್ಷವಿರುವವು. ಒಟ್ಟು ಯುಗ ಸಂಖ್ಯೆ ಹನ್ನೆರಡು ಸಾವಿರ ವರುಷವೆಂದು ತಿಳಿಯತಕ್ಕದ್ದು.

ಇನ್ನು ದೇವಮಾನದಿಂದ ಯುಗ ಸಂಖ್ಯೆಯನ್ನು ಅಳೆಯುವುದಾದರೆ ಕೃತತ್ರೇತಾ, ದ್ವಾಪರ, ಕಲಿ ಈ ನಾಲ್ಕೂ ಯುಗಗಳು ಕೂಡಿದರೆ ಒಂದು ಮಹಾಯುಗವಾಗುವುದು.

---

* ಪಿತೃಗಳು ಚಂದ್ರಲೋಕದಲ್ಲಿರುವದರಿಂದ ಶುಕ್ಲಪಕ್ಷದಲ್ಲಿ ಚಂದ್ರನಿಂದ ಸೂರ್ಯನು ಮರೆಯಾಗಿ ಅವರಿಗೆ ಕಾಣುವದಿಲ್ಲ. ಸೂರ್ಯದರ್ಶನವಿಲ್ಲದಿದ್ದರಿಂದ ಆ ಶುಕ್ಲಪಕ್ಷವೇ ಅವರಿಗೆ ರಾತ್ರಿ. ಕೃಷ್ಣಪಕ್ಷದಲ್ಲಿ ಸೂರ್ಯಚಂದ್ರರು ಸಂಮುಖದಲ್ಲಿ ಬರುವದರಿಂದ ಅವರಿಗೆ ಸೂರ್ಯದರ್ಶನವಾಗಿ ಅದೇ ಹಗಲೆನಿಸುವದು.

* ಮಕರದಿಂದ ಮಿಥುನರಾಶಿಯ ವರೆಗೆ ಸೂರ್ಯನ ರಥ, ಗಾಲಿ ಹಾಗೂ ಕುದುರೆಗಳ ರಶ್ಮಿಗಳನ್ನು ಧ್ರುವ ನಕ್ಷತ್ರವು ಆಕರ್ಷಿಸಿ ರವಿ ಮಂಡಲವನ್ನು ಉತ್ತರಾಭಿಮುಖವಾಗಿ ಮಾಡುವದರಿಂದ ಮೇರು ಪರ್ವತದ ಮೇಲ್ಭಾಗದಲ್ಲಿರುವ ದೇವತೆಗಳಿಗೆ ಈ ಆರು ತಿಂಗಳು ಸೂರ್ಯದರ್ಶನವಾಗಿ ಅದು ಅವರಿಗೆ ಹಗಲೆನಿಸುವದು. ಮುಂದೆ ಕರ್ಕದಿಂದ ಧನುರಾಶಿಯವರೆಗೆ ಧ್ರುವನು ರಶ್ಮಿಗಳನ್ನು ಸಡಿಲುಬಿಡುವದರಿಂದ ಸೂರ್ಯನು ದಕ್ಷಿಣಾಭಿಮುಖನಾಗಿ ದೇವತೆಗಳ ಕಣ್ಮರೆಯಾಗುವನು. ಆದುದರಿಂದ ದಕ್ಷಿಣಾಯನ ಅವರಿಗೆ ರಾತ್ರಿಯೆನಿಸುವದು.

* ಇದಕ್ಕೆ ಪೂರ್ವಸಂಧ್ಯಾ ಪರಸಂಧ್ಯಾ ಎಂದೂ ಅನ್ನುವರು. ಪೂರ್ವಾಸಂಧ್ಯಾ ಎಂದರೆ ಹೊಸ ಯುಗ ಪ್ರಾರಂಭದ ಸಂಧಿಕಾಲ. ಪರ ಸಂಧ್ಯೆಯೆಂದರೆ ಯುಗ ಸಮಾಪ್ತಿಯ ಸಂಧಿಸಮಯ.

ಇಂಥ ಎಪ್ಪತ್ತೊಂದು ಮಹಾಯುಗಗಳು ಕೂಡಿದರೆ ಒಂದು ಮನ್ವಂತರವಾಗುವುದು. ಇಷ್ಟು ಕಾಲವಾದ ಬಳಿಕ ಮನುವು ಬ್ರಹ್ಮಲೋಕವನ್ನು ಕುರಿತು ಹೋಗುವುದರಿಂದ ಇದಕ್ಕೆ ಅಯನ (ಅಂದರೆ ಹೋಗುವುದು) ಎಂದು ಕರೆಯುವರು. ಉತ್ತರಾಯಣ ದಕ್ಷಿಣಾಯನ ಎಂಬ ಎರಡು ಅಯನಗಳುಂಟು. ಒಬ್ಬ ಮನುವು ಅಯನವನ್ನು ಹೊಂದಿ ಬ್ರಹ್ಮಲೋಕಕ್ಕೆ ಹೋದಕೂಡಲೇ ಇನ್ನೊಬ್ಬನು ಆ ಮನುವಿನ ಸ್ಥಾನಕ್ಕೆ ಬಂದು ಅಷ್ಟೇ ದಿನ ಅವನೂ ಮನ್ವಂತರಾಧಿಪತಿಯಾಗಿ ಆಳುತ್ತಾನೆ. ಇಂಥ ಐದು ಸಾವಿರ ಮನ್ವಂತರಗಳಿಗೆ ಬ್ರಹ್ಮದೇವರ ಒಂದು ಹಗಲು ಆಗುವುದು. ಅದಕ್ಕೆ ಕಲ್ಪ ಎಂತಲೂ ಹೆಸರು. ಇಷ್ಟೇ ಅಂದರೆ ಐದು ಸಾವಿರ ಮನ್ವಂತರದ ಕಾಲ ಬ್ರಹ್ಮದೇವರ ಒಂದು ರಾತ್ರಿ ಎನಿಸುವುದು. ಸಹಸ್ರಯುಗಾವಧಿಕವಾದ ಆ ಬ್ರಾಹ್ಮೀಕರಾತ್ರಿಯಲ್ಲಿ ವನ ವೃಕ್ಷಾದಿ ಸಹಿತ ಸಮಗ್ರ ಪೃಥ್ವಿಯು ನೀರಿನಲ್ಲಿ ಮುಳುಗಿದ್ದು ಸಾವಿರ ಯುಗಗಳು ಉರುಳಿದ ಬಳಿಕ ಬ್ರಹ್ಮದೇವರ ಒಂದು ಅಹೋರಾತ್ರವು ಮುಗಿದಂತಾಗುವುದು. ಮತ್ತು ಒಂದು ಕಲ್ಪವು ಕೊನೆಗಂಡಂತಾಗುವುದು. ಒಂದು ಮನ್ವಂತರದ ಸಮಾಪ್ತಿಯಾಗುವಾಗ ಹುಟ್ಟಿದ ಸೃಷ್ಟಿಯೆಲ್ಲ ವಿನಾಶವಾಗಿ ಕೆಲವು ಕಾಲದ ಬಳಿಕ ಮತ್ತೆ ಸೃಷ್ಟಿ ಪ್ರಾರಂಭವಾಗುವುದು. ಆಗ ಎಲ್ಲ ಪ್ರಾಣಿಗಳೂ ಸಂಹೃತರಾದರೂ ಆ ಆ ಮನ್ವಂತರದ ಸಂರಕ್ಷಕರೆಂದು ನಿಯಮಿಲ್ಪಟ್ಟಿರುವ ದೇವತೆಗಳೂ ಸಪ್ತರ್ಷಿಗಳೂ ಮಾತ್ರ ಯಾವುದೇ ಚ್ಯುತಿ ಇಲ್ಲದೆ ಸುರಕ್ಷಿತವಾಗಿ ಉಳಿದುಕೊಂಡಿರುತ್ತಾರೆ. ಅದಕ್ಕೆ ಅವರ ಭಗವದ್ಭಕ್ತಿ ತಪಃಶಕ್ತಿಗಳೇ ಕಾರಣ.

ಹೀಗೆ ಸಹಸ್ರ ಯುಗಗಳು ತಿರುಗಿದ ಬಳಿಕ ಮಹಾಕಲ್ಪವು ನಿಶ್ಶೇಷವಾಗುತ್ತದೆ. ಆಗ ಮಹಾಪ್ರಳಯವು ಪ್ರಾರಂಭವಾಗಿ ಸರ್ವಭೂತಗಳೂ ಪ್ರಖರತಮವಾದ ಸೂರ್ಯನ ಉರಿಯಿಂದ ಬೆಂದುಹೋಗುವವು. ಆಗ ಎಲ್ಲ ದೇವತೆಗಳೂ ಬ್ರಹ್ಮದೇವರನ್ನು ಮುಂದೆ ಮಾಡಿಕೊಂಡು ಯೋಗೇಶ್ವರನೂ ನಾಶರಹಿತನೂ ದೇವದೇವೋತ್ತಮನೂ ಆದ ಸಾಕ್ಷಾತ್ ನಾರಾಯಣನ ಉದರದಲ್ಲಿ ಪ್ರವೇಶಮಾಡುತ್ತಾರೆ. ಪರಮಾತ್ಮನು ಬ್ರಹ್ಮಾದಿ ದೇವತೆಗಳನ್ನೆಲ್ಲ ತನ್ನ ಉದರದಲ್ಲಿ ಇಟ್ಟುಕೊಂಡು ಸಹಸ್ರವರ್ಷ ಪರ್ಯಂತರ ಯೋಗ ನಿದ್ರೆಯನ್ನು ಮಾಡುವನು. ಇದೇ ದೈವೀ ರಾತ್ರಿ. ಪ್ರತಿಮನ್ವಂತರದ ಆದಿ ಅವಸಾನಗಳಲ್ಲಿ ಲಯೋದಯಗಳನ್ನು ಮಾಡಲಿಕ್ಕೆ ಕಾರಣೀಭೂತನಾದ ಮತ್ತು ಈ ಲಯೋದಯಗಳ ನಡುವಿನ ಶಾಂತಿಕಾಲದಲ್ಲಿ ಸರ್ವಚೇತನರಾಶಿಗಳನ್ನೂ ತನ್ನ ಉದರದಲ್ಲಿ ಇಟ್ಟುಕೊಂಡು ಜಲಶಾಯಿಯಾಗಿ ಯೋಗನಿದ್ರಾಲೋಲನಾದ ಆ ಪರಬ್ರಹ್ಮನ ಸ್ವರೂಪವನ್ನು ಸಾಕಲ್ಯೇನ ಬಣ್ಣಿಸುವುದು ನೂರಾರು ವರ್ಷಗಳಾದರೂ ನನ್ನಿಂದ ಸಾಧ್ಯವಿಲ್ಲ.

ಇದರಂತೆ ಈ ಸಹಸ್ರಯುಗದ ರಾತ್ರಿ ಮುಗಿದ ಬಳಿಕ ಆ ಸರ್ವಜಗಜ್ಜನ್ಮಾದಿ ಕಾರಣನಾದ ಈ ಶ್ರೀಹರಿಯೇ ಮುಂದೆ ಕಲ್ಪಾಂತಕಾಲದಲ್ಲಿ ಮತ್ತೆ ಸೃಷ್ಟಿಯನ್ನು ಪ್ರಾರಂಭಿಸುವನು. ಆ ಭಗವಂತನ ಆದೇಶದಂತೆ ಬ್ರಹ್ಮದೇವರು ಮತ್ತೆ ಸೃಷ್ಟಿಯನ್ನು ಪ್ರಾರಂಭಿಸುವರು. ಪೂರ್ವಸೃಷ್ಟಿಯ ಸ್ಮರಣೆಯ ಬಲದಿಂದ ಇದ್ದಕ್ಕಿದ್ದಂತೆ* ಸೃಷ್ಟಿಯನ್ನು ಅವರು ನಿರ್ಮಿಸುವರು. ಬ್ರಹ್ಮಾಂಡ ಪಿಂಡಾಂಡಗಳಲ್ಲಿ ಸೂರ್ಯಾದಿ ದೇವತೆಗಳೂ ಆಕಾಶ

---

* ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್॥

ಚಕ್ಷುರಾದಿ ಸ್ಥಾನಗಳೂ ಅವೇ ಇದ್ದು ಯಾವತ್ತೂ ದೇವ, ಋಷಿ, ಯಕ್ಷ ಗಂಧರ್ವರೂ, ಪಿಶಾಚೋರಗ ರಾಕ್ಷಸರೂ ಮತ್ತೆ ಹುಟ್ಟುವರು. ಆದರೆ ತಮ್ಮ ತಪೋಭಕ್ತಿಯೋಗಗಳಿಂದ ಮುಕ್ತರಾದವರು ಮಾತ್ರ ತಿರುಗಿ ಸಂಸಾರದಲ್ಲಿ ಬರುವುದಿಲ್ಲ. ವಸಂತ, ಹೇಮಂತಾದಿ ಋತುಗಳೂ ಅವುಗಳ ಶೀತೋಷ್ಣಾದಿ ಭಾಗಗಳೂ ಮತ್ತೆ ಮೊದಲಿನಂತೆ ಯಥಾಪ್ರಕಾರ ಪ್ರಾರಂಭವಾಗುವವು. ಹೀಗೆ ಪ್ರಾರಬ್ಧವಾದ ಈ ವೈವಸ್ವತ ಮನ್ವಂತರದಲ್ಲಿ ಮಹಾದೇವನಾದ ಸಾಕ್ಷಾತ್ ನಾರಾಯಣರೂಪಿಯಾದ ಆ ಹರಿಯು ಯಾದವಕುಲದಲ್ಲಿ ಹುಟ್ಟಿ ದುಷ್ಟರಾದ ಅನೇಕ ದೈತ್ಯದಾನವರನ್ನು ಸಂಹರಿಸಿ ಸಜ್ಜನಕುಲಕೋಟಿಯ ಕಲ್ಯಾಣವನ್ನು ಮಾಡಿದ್ದಾನೆ. ಆ ಶ್ರೀಕೃಷ್ಣನ ವಂಶ ಹಾಗೂ ಅಂಶ ಅವತಾರಗಳ ಮಹಾಮಹಿಮೆ ಮತ್ತು ಲೀಲಾವಿಲಾಸಗಳನ್ನು ಹೇಳುವದಕ್ಕಾಗಿ ಪೀಠಿಕಾರೂಪವಾಗಿ ಈ ವೈವಸ್ವವತ ಮನ್ವಂತರದ ವೃತ್ತಾಂತಗಳು ಸಂಕ್ಷೇಪವಾಗಿ ನಿರೂಪಿಸಲ್ಪಡುತ್ತವೆ.

## ಬೆಳಗಿಬಂದ ಬೆಳಕಿನೊಡೆಯ

ದೇವಮಾತೆಯಾದ ಅದಿತಿಯ ರೂಪ ಅಪರೂಪ. ಶೀಲ ಶ್ಲಾಘನೀಯ, ಅವಳ ಗುಣ ಜಗನ್ಮಾತೃತ್ವಕ್ಕೆ ಅನುಗಣ. ಅವಳ ಈ ಎಲ್ಲ ಗುಣ ಗೌರವವನ್ನು ಕಂಡೇ ಚಾಕ್ಷುಷಮನ್ವಂತರದಲ್ಲಿ ದೇವತೆಗಳೆಲ್ಲ ಕೂಡಿ ಮುಂದಿನ ಮನ್ವಂತರ ಅಂದರೆ ಈಗಿರುವ ವೈವಸ್ವತ ಮನ್ವಂತರದಲ್ಲಿ ನಾವೆಲ್ಲರೂ ಅದಿತಿ ದೇವಿಯ ಹೊಟ್ಟೆಯಿಂದಲೇ ಹುಟ್ಟೋಣ ಎಂದು ನಿರ್ಧರಿಸಿದರಂತೆ.

**"ಆಗಚ್ಛತ ದ್ರುತಂ ದೇವಾಃ ಅದಿತಿಂ ಸಂಪ್ರವಿಶ್ಯ ವೈ ।**
**ಮನ್ವಂತರೇ ಪ್ರಸೂಯಾಮಃ ತನ್ನಃ ಶ್ರೇಯೋ ಭವಿಷ್ಯತಿ" ॥**

ಆ ದೈವೀ ಸಂಕಲ್ಪದಂತೆ ಸಾಕ್ಷಾತ್ ವಿಷ್ಣುವೇ ಅದಿತಿಯ ಚೊಚ್ಚಲು ಗಂಡು ಮಗುವಾಗಿ ಹುಟ್ಟಿದನು. ಇಂದ್ರನು ಮರಚಲು ಮಗುವಾಗಿ ಬಂದನು. ನಿಜವಾಗಿಯೂ ಅದಿತಿದೇವಿ ಮಾನವ ಕುಲಕ್ಕೆ ದೇವಲೋಕದಲ್ಲಿಯೂ ಗೌರವವನ್ನು ತಂದುಕೊಟ್ಟ ಸಾಧ್ವೀಮಣಿ, ದೇವಾಧಿದೇವತೆಗಳಿಗೂ ಜನ್ಮಕೊಟ್ಟ ಋಷಿರಮಣಿ. ಅವಳು ಸೂರ್ಯನಿಗೆ ಗರ್ಭಿಣಿಯಿದ್ದಾಗ ಅವಳ ಸ್ವಭಾವಸುಂದರವಾದ ಮುಖಮಂಡಲದಲ್ಲಿ ಅಪೂರ್ವವಾದ ಉಜ್ವಲಕಾಂತಿಯು ತಾಂಡವವಾಡತೊಡಗಿತ್ತು. ಅವಳ ಅಂಗಾಂಗಗಳಿಂದಲೂ ಹೊರಹೊಮ್ಮಿ ಚಿಮ್ಮಿ ಬರುತ್ತಲಿರುವ ಕಾಂತಿಪೂರವನ್ನು ಕಂಡು ಅವಳ ಪತಿ ಕಶ್ಯಪರಿಗೂ ಅತ್ಯಂತ ಆಶ್ಚರ್ಯವಾಯಿತು. ಅವರು ಆನಂದದಿಂದ 'ಅದಿತಿ! ಈಸಲ ನೀನು ಹಡೆಯಲಿರುವ ಮಗು ಬೆಳಕಿನ ಭಾಂಡಾರ ತೇಜೋನಿಧಿ" ಎಂದಾಗ ಅವಳ ಕಪೋಲಗಳಲ್ಲಿ ಸಂಜೆಗೆಂಪು ಸೊಗಸುಪಡೆದು ರಂಜಿಸುತ್ತಲಿತ್ತು. ಒಂದು ದಿನ ಕಶ್ಯಪರು ಮಂದಾಕಿನೀ ಸ್ನಾನಕ್ಕೆ ಹೋದಾಗ ದೇವರ ಮನೆಯಲ್ಲಿ ಅದಿತಿ ಪತಿಯ ಪ್ರತಿಮಾಪೂಜೆಗೆ ಅಣಿಗೊಳಿಸುತ್ತಲಿದ್ದಳು. ಹೊರಗೆ "ಓಂ ಭವತಿ ಭಿಕ್ಷಾಂ ದೇಹಿ" ಎಂದು ಯಾರೋ ಬ್ರಾಹ್ಮಣರು ಕೂಗಿದಂತಾಯಿತು. ಅದಿತಿದೇವಿ ತುಂಬು ಗರ್ಭಿಣಿ ಇದ್ದುದರಿಂದ ದೇವರ ಮನೆಯಿಂದ ಧಾನ್ಯಾಗಾರಕ್ಕೆ ಹೋಗಿ ಧಾನ್ಯವನ್ನು ತರಲು ತುಂಬ ವಿಲಂಬವಾಯಿತು. ಗರ್ಭದ ಭಾರದಿಂದ ಅವಳಿಗೆ ಬೇಗ ಬೇಗ ಹೆಜ್ಜೆಯನ್ನೂ ಇಡಲಿಕ್ಕೆ ಬರುತಿರಲಿಲ್ಲ. ನಿದಾನವಾಗಿ ಹೆಜ್ಜೆಯಿಟ್ಟು ಮೆಲ್ಲನೆ ನಡೆಯುತ್ತ ಆದಿತಿ ಹೊರಗೆ ಬಂದಾಗ ಭಿಕ್ಷೆಗೆ ಬಂದ ಬುಧನಿಗೆ ಬ್ರಹ್ಮಾಂಡ ಕೋಪ ಬಂದು ಬಿಟ್ಟಿತ್ತು ಕೋಪಾಟೋಪದಿಂದ ನಡುಗುತ್ತಲಿರುವ ಬುಧನು "ನಿನ್ನ ಹೊಟ್ಟೆಯಲ್ಲಿರುವ ಕೂಸು ಸತ್ತುಹೋಗಲಿ" ಎಂದು ಶಾಪವನ್ನಿತ್ತು ಬಿಮ್ಮನೆ ಹೊರಟು ಹೋದನು.

ಅದನ್ನು ಕೇಳಿದ ಅದಿತಿಯ ಎದೆ ಒಡೆದುಹೋಯಿತು. ಧಾರಾಕಾರವಾಗಿ ಕಣ್ಣೀರು ಸುರಿಸುತ್ತ ಅವಳು ಬಿಕ್ಕಿಸಿ ದುಃಖಿಸಿ ಅಳಹತ್ತಿದಳು. ಮನೆಗೆ ಬಂದ ಕಶ್ಯಪರು ಆ ಸಮಾಚಾರವನ್ನು ತಿಳಿದು ತಕ್ಷಣದಲ್ಲಿ ತಮ್ಮ ತಪಸ್ಸಿನಿಂದ ಬುಧನ ಶಾಪವನ್ನು ಪರಿಹರಿಸಿ ಆ ಮಗು ಮತ್ತಿಷ್ಟೂ ತೇಜಸ್ವಿಯಾಗುವಂತೆ ಮಾಡಿದರು. ಹಾಗೂ ಅದಿತಿಗೆ ''ಜಗತ್ತನ್ನೇ ಬೆಳಗುವ ಮಗನು ಹುಟ್ಟುತ್ತಾನೆ. ನೀನೇನೂ ಗಾಬರಿಯಾಗಬೇಡ'' ಎಂದು ಸಮಾಧಾನ ಹೇಳಿ ಸಂತೈಸಿದರು.

ಆದರೂ ಅದಿತಿಗೆ 'ಬುಧನು ತಪಸ್ವಿಗಳು ಅವನ ಶಾಪ ಸುಳ್ಳಾಗಲಾರದು. ನನ್ನ ಅಂಡ-ಗರ್ಭ-ಮೃತವಾಗಿದೆ'' ಎಂದೇ ಅನಿಸುತ್ತಲಿತ್ತು ಮೃತವಾದ ಅಂಡದಿಂದ ಹುಟ್ಟಿದವನೆಂದು ಮಾರ್ತಾಂಡ ಎಂದು ಆ ಮಗು ಪ್ರಸಿದ್ಧವಾಯಿತು. ದಿವ್ಯ ತೇಜಸ್ಸಿನಿಂದ ಎಲ್ಲರ ಕಣ್ಣುಗಳನ್ನು ಕುಕ್ಕಿಸುತ್ತಲೇ ಆ ತೇಜಃಪುಂಜನಾದ ಮಗನು ಹುಟ್ಟಿ ಬೆಳೆದರೂ ಅವನಿಗೆ ಅದಿತಿಯ ಅಂತಃಕರಣದ ಭ್ರಮದ ಮೂಲಕವಾಗಿ ಮಾರ್ತಂಡ ಎಂಬ ಹೆಸರುಮಾತ್ರ ಅಳಿಸಲಿಲ್ಲ. ದಿನದಿನಕ್ಕೆ ಅವನ ಕಾಂತಿ ಬೆಳೆಯುತ್ತಲೇ ಇತ್ತು. ಅವನ ಜ್ಯೋತಿಃ ಸ್ವರೂಪವನ್ನು ಕಂಡಾಗಲೆಲ್ಲ ಅದಿತಿಯ ಮುಖ ಅರಳಿ ಸಹಸ್ರಾರವಾಗುತ್ತಲಿತ್ತು. ಅವನೇ ಸೂರ್ಯ.

ದೇವಬಡಿಗನಾದ ವಿಶ್ವಕರ್ಮನು ತನ್ನ ಮಗಳಾದ ಸಂಜ್ಞೆಯನ್ನು ಸೂರ್ಯನಿಗೆ ಕೊಟ್ಟು ಮದುವೆ ಮಾಡಿದನು. ಸತೀ ಶಿರೋಮಣಿಯಾದ ಸಂಜ್ಞೆಗೆ ಸೂರ್ಯದೇವನಿಂದ ಮನು ಎಂಬ ಮಗನು ಹುಟ್ಟಿದನು. ಅನಂತರ ಅವಳು ಒಂದು ಗಂಡು ಒಂದು ಹೆಣ್ಣು ಹೀಗೆ ಎರಡು ಅವಳಿಜವಳಿ ಮಕ್ಕಳನ್ನು ಹೆತ್ತಳು. ಗಂಡು ಮಗುವಿಗೆ ಯಮಧರ್ಮನೆಂದೂ ಹೆಣ್ಣು ಕೂಸಿಗೆ ಯಮುನೆಯೆಂದೂ ಹೆಸರಿಟ್ಟರು. ತಾರುಣ್ಯ ಬಂದಂತೆ ಸೂರ್ಯದೇವನ ತೇಜಸ್ಸು ದಿನೇ ದಿನೇ ಅಭಿವೃದ್ಧಿಯನ್ನು ಹೊಂದುತ್ತಲೇ ಇತ್ತು. ಅವನ ದಿವ್ಯದೀಧಿತಿಗಳ ದೀಪ್ತಕಾಂತಿಯಿಂದ ಮೂರು ಲೋಕಗಳೇ ಹುರಪಳಿಸಿ ಹೋಗುತ್ತಲಿದ್ದವು.

ಸಂಜ್ಞೆಗೆ ಬೆಳೆಯುತ್ತಲಿರುವ ರವಿಯ ಈ ತೇಜಃಪ್ರಕರ್ಷ ಅಸಹ್ಯವಾಯಿತು. ಒಮ್ಮೆಯಂತೂ ಅವನ ಪ್ರಖರವಾದ ತೇಜೋದೇಹದ ಸನಿಹಕ್ಕೆ ಹೋದಾಗ ಅವಳ ಅವಯವಗಳೆಲ್ಲ ಸುಟ್ಟುಹೋದವು. ಪತಿಯ ಜೊತೆಗೆ ಸರಸಾಟವೆಂದರೆ ಅವಳಿಗೊಂದು ಅಗ್ನಿಚುಂಬನ. ಅವನ ಆಲಿಂಗನದಿಂದ ಅವಳಿಗೆ ಬೆಂಕಿಯನ್ನು ಬಿಗಿದಪ್ಪಿದಂತಾಗಿ ಮೈಯೆಲ್ಲ ಬೆಂದು ಹೋಗುತ್ತಲಿತ್ತು. ನಿಷೇಧಿಸದರೆ ಪತಿದ್ರೋಹ. ಅವನ ದೇಹಾಗ್ನಿಗೆ ಒಲ್ಲೆನೆಂದರೆ ಕೋಪಾಗ್ನಿಗೆ ಆಹುತಿಯಾಗಬೇಕಾಗುತ್ತಿತ್ತು. 'ಹೂಂ' ಎಂದರೆ ನಿತ್ಯ ಅಗ್ನಿಪ್ರವೇಶ. ಬೆಳತನಕ ದೇಹದಾಹ. ಉರಿಯೊಂದಿಗೆ ಈ ಜ್ವಾಲಾಕ್ರೀಡೆ ಇನ್ನು ಮುಂದೆ ಅಶಕ್ಯವೆಂದು ಅವಳಿಗೆ ತೋರಿತು. ಅದಕ್ಕಾಗಿ ಇದರಿಂದ ಪಾರಾಗಲು ಅವಳೊಂದು ಯುಕ್ತಿಯನ್ನು ಮಾಡಿದಳು.

ತನ್ನ ನೆರಳಿನಲ್ಲಿಯೇ ತಿರುಳನ್ನು ತುಂಬಿ ತನ್ನ ಪ್ರತಿಚ್ಛಾಯೆಯಂತೆ ಇರತಕ್ಕೆ ಹೆಣ್ಣೊಂದನ್ನು ನಿರ್ಮಿಸಿದಳು. ಅವಳಿಗೆ ಸುವರ್ಣಾ ಎಂದು ಹೆಸರಿಟ್ಟು ''ತಂಗಿ, ನಾನು ನನ್ನ ತಂದೆಯ ಮನೆಗೆ ಹೋಗುತ್ತೇನೆ. ನೀನು ಈ ಸಮಾಚಾರವನ್ನು ನನ್ನ ಪತಿಯಾದ ಸೂರ್ಯದೇವನಿಗೆ ತಿಳಿಸದೇ ನೀನೇ ನಾನು (ಸಂಜ್ಞಾ) ಎಂದು ಇದ್ದು ಬಿಡು. ನೀನು ನನ್ನ ಪ್ರತಿಬಿಂಬವೇ ಆದುದರಿಂದ ನನ್ನ ಪತಿಗೆ ಗೊತ್ತೇ ಆಗುವುದಿಲ್ಲ. ಈ ನನ್ನ ಮೂರು ಮಕ್ಕಳನ್ನೂ ನಿನಗೆ ಒಪ್ಪಿಸಿದ್ದೇನೆ. ಇವರನ್ನು ನಿನ್ನ ಹೊಟ್ಟೆಯ ಮಕ್ಕಳಂತೆ ರಕ್ಷಿಸು'' ಎಂದು ಹೇಳಿ ತಂದೆಯಾದ ವಿಶ್ವಕರ್ಮನ ಮನೆಗೆ ಹೊರಟಳು. ಆಗ ಅವಳ ಪಡಿನೆಳಲಾದ ಸವರ್ಣೆಯು ''ನನ್ನನ್ನು ನಿನ್ನ ಪತಿ ಕೂದಲು ಹಿಡಿದು ಹೊಡೆಯಲು ಬರುವವರೆಗೆ ನಾನು ಈ ಸಮಾಚಾರವನ್ನು ತಿಳಿಸುವುದಿಲ್ಲ. ನೀನು ಸುಖವಾಗಿ ಹೋಗು'' ಎಂದು ಹೇಳಿದಳು.

ಆಗ ಸಂಜ್ಞೆಯು ನೇರವಾಗಿ ತಂದೆಯ ಮನೆಗೆ ಬಂದಳು. ಆದರೆ ವಿಶ್ವಕರ್ಮನು ಅವಳು ತನ್ನ ಗಂಡನನ್ನು ಬಿಟ್ಟು ಹೇಳದೇ ಕೇಳದೇ ಬಂದಿದ್ದಾಳೆಂದು ತಿಳಿದು ಮನೆಯಲ್ಲಿ ಇಟ್ಟುಕೊಳ್ಳಲಿಲ್ಲ. ''ಏನೇ ಆದರೂ ನೀನು ಪತಿಯ ಸಮೀಪದಲ್ಲಿಯೇ ಇರುವುದು ನ್ಯಾಯ. ಆದ್ದರಿಂದ ಈಗಲೇ ಅಲ್ಲಿಗೇ ಹೊರಟು ಹೋಗು'' ಎಂದು ಬೈದು ಕಳಿಸಿದನು. ಆಗ ಸಂಜ್ಞೆ ಅಳುತ್ತ ತಂದೆಯ ಮನೆಯಿಂದ ಹೊರಬಿದ್ದು ಕುರುಕ್ಷೇತ್ರಕ್ಕೆ ಬಂದಳು. ಅವಳ ಲೋಕೋತ್ತರವಾದ ಲಾವಣ್ಯವೊಂದು ಅವಳಿಗೆ ಮುಳುವಾಗಿತ್ತು. ಯಾರಾದರೂ ದೈತ್ಯದಾನವರು ತನ್ನನ್ನು ಕಂಡು ಮೋಹಿಸಿ ತೊಂದರೆ ಕೊಡಬಹುದೆಂದು ಅವಳು ಹೆಣ್ಣು ಕುದುರೆಯ ರೂಪವನ್ನು ಸ್ವೀಕರಿಸಿ ಆ ಧರ್ಮಕ್ಷೇತ್ರದ ಹುಲ್ಲುಗಾವಲಿನಲ್ಲಿ ಪತಿಯನ್ನು ಧ್ಯಾನ ಮಾಡುತ್ತ ಕಾಲಕಳೆಯಹತ್ತಿದಳು. ಇತ್ತ ಸೂರ್ಯದೇವನಿಗೆ ಎಷ್ಟೋ ದಿನಗಳವರೆಗೆ ಈ ಸಮಾಚಾರವೇ ತಿಳಿದಿರಲಿಲ್ಲ. ಅವನು ಸಂಜ್ಞೆಯಂತೆಯೇ ಇರುವ ಸವರ್ಣೆಯನ್ನು ತನ್ನ ನೆಚ್ಚಿನ ಮಡದಿಯೆಂದೇ ತಿಳಿದು ಮೊದಲಿನಂತೆ ಪ್ರೇಮಿಸಿ, ಕಾಮಿಸಿ, ನಲಿಯುತ್ತಿದ್ದನು. ಆ ಸವರ್ಣೆಯಲ್ಲಿ ಅವನಿಗೆ ಇಬ್ಬರು ಗಂಡು ಮಕ್ಕಳು ಹುಟ್ಟಿದರು. ಮೊದಲಿನವನು ಸಂಜ್ಞೆಯ ಹಿರಿಯ ಮಗನಾದ ಮನುವಿನಂತೆಯೇ ಇದ್ದುದರಿಂದ ಇವನಿಗೂ ಸಾವರ್ಣಮನು ಎಂದು ಹೆಸರಿಟ್ಟರು. ಎರಡನೆಯವನು ಶನೇಶ್ವರ. ಸವರ್ಣೆಯು ತನಗೆ ಮಕ್ಕಳಾಗುವವರೆಗೆ ಸಂಜ್ಞೆಯ ಮಕ್ಕಳಾದ ಮನು ಯಮ ಯಮುನೆಯರನ್ನು ಬಹಳ ಪ್ರೀತಿಯಿಂದ ನೋಡಿಕೊಳ್ಳುತ್ತಲಿದ್ದಳು. ಆದರೆ ತನಗೂ ಇಬ್ಬರು ಮಕ್ಕಳಾದ ಬಳಿಕ ಅವರಲ್ಲಿ ಮಲಮಕ್ಕಳೆಂದು ತಾತ್ಸಾರ ಭಾವನೆ ಬೆಳೆಯಹತ್ತಿತು. ಅವಳು ತನ್ನ ಹೊಟ್ಟೆಯ ಮಕ್ಕಳ ಮೇಲೆಯೆ ಪಕ್ಷಪಾತವನ್ನು ಮಾಡಿ ಪ್ರೇಮದಿಂದ ಸವಿಯಾದ ತಿಂಡಿ-ತಿನಿಸುಗಳನ್ನು ಕೊಡುತ್ತಲಿದ್ದಳು. ಆ ಸವತಿಯ ಮಕ್ಕಳನ್ನು ಕಂಡರೆ ಅಸಹ್ಯಪಟ್ಟುಕೊಂಡು ಬೈಯುತ್ತಲಿದ್ದಳು. ಇಷ್ಟಾದರೂ ಸಂಜ್ಞೆಯ ಹಿರಿಯ ಮಗನಾದ ಮನುವು ಮಾತ್ರ ಸಹನಶೀಲತೆಯಿಂದ ಎಲ್ಲವನ್ನೂ ಮೌನದಿಂದ ತಾಳಿಕೊಳ್ಳುತ್ತಲಿದ್ದನು. ಆದರೆ ಸಣ್ಣವನೂ, ಮುಂಗೋಪಿಯೂ ಆದ ಯಮನಿಗೆ ಮಾತ್ರ ತನ್ನ ತಾಯಿಯ ಈ ಪಕ್ಷಪಾತವನ್ನು ಸಹನೆ ಮಾಡುವುದು ಆಗುತ್ತಿರಲಿಲ್ಲ.

ಒಂದು ದಿನ ಅವಳು ನಿಷ್ಕಾರಣವಾಗಿ ಬೈಯ್ಯತೊಡಗಿದಾಗ ಯಮನು ಸಿಟ್ಟುತಡೆಯದೆ ಅವಳನ್ನು ಒದೆಯಲು ಕಾಲನ್ನೆತ್ತಿದನು. ಆಗ ಅವಳು ''ಮೂರ್ಖಾ! ತಾಯಿಯ ಮೇಲೆ ಎತ್ತಿದ ಈ ನಿನ್ನ ಕಾಲುಗಳು ಕತ್ತರಿಸಿ ಬೀಳಲಿ'' ಎಂದು ಶಾಪಕೊಟ್ಟಳು.

ತಾಯಿಯ ಈ ಘೋರ ಶಾಪದಿಂದ ಸಂಭ್ರಾಂತನಾದ ಯಮನು ತಂದೆಯ ಮುಂದೆ ಎಲ್ಲ ಸಮಾಚಾರವನ್ನು ತಿಳಿಸಿ ''ಎಲ್ಲ ಮಕ್ಕಳನ್ನು ಸರಿಯಾಗಿ ನೋಡುವುದು ತಾಯಿಯ ಕರ್ತವ್ಯ. ಆದರೆ ಈ ತಾಯಿ ನಮ್ಮನ್ನು ಅಸಡ್ಡೆಯಿಂದ ಕಂಡು ಚಿಕ್ಕಮಗನಾದ ಶನಿಯನ್ನು ಮಾತ್ರ ಉಣಿಸಿ ಉಡಿಸಿ ತೊಡಿಸಿ ಪಕ್ಷಪಾತ ತೋರುವಳು. ಮಕ್ಕಳಾದ ನಾವು ಏನೇ ತಪ್ಪು ಮಾಡಿದರೆ ಹೀಗೆ ಶಾಪವನ್ನು ಕೊಡುವದಂತೂ ಆತಾಯ್ಗರುಳಿಗೆ ಶೋಭಿಸುವುದಿಲ್ಲ. ಆದುದರಿಂದ ಅವಳಿಗೆ ಹೇಳಿ ಈ ಶಾಪವನ್ನು ತಿರುಗಿ ತೆಗೆದುಕೊಳ್ಳುವಂತೆ ಮಾಡು'' ಎಂದು ಬೇಡಿಕೊಂಡನು.

ಆಗ ಸೂರ್ಯನು ''ನೀನು ಏನಾದರೂ ತಾಯಿಯ ಮೇಲೆ ಕಾಲನ್ನೆತ್ತಿದ್ದು ಅಕ್ಷಮ್ಯ ಅಪರಾಧ, ಆ ಶಾಪವನ್ನು ತಿರುಗಿಸುವುದು ಸಾಧ್ಯವಿಲ್ಲ. ಆದರೆ ನಿನ್ನ ಕಾಲೊಳಗಿನ ಮಾಂಸವನ್ನೆಲ್ಲ ಕ್ರಿಮಿಗಳು ತಿಂದು ಭೂಮಿಗೆ ಕೊಂಡೊಯ್ಯುತ್ತವೆ. ಆಮೇಲೆ ನಿನಗೆ ಮತ್ತೆ ಕಾಲುಗಳು ಚಿಗಿಯುವವು'' ಎಂದು ಮಗನನ್ನು ಸಂತೈಸಿದನು. ರವಿಯು ಅಂತಃಪುರಕ್ಕೆ ಬಂದು ಸವರ್ಣೆಯನ್ನು

''ಹೀಗೇಕೆ ಮಲ ತಾಯಿಯಂತೆ ಯಮನನ್ನು ಶಪಿಸಿದೆ'' ಎಂದು ಕೇಳಿದನು. ಸಹಜವಾಗಿ ಅವನು ನುಡಿದರೂ ಆ ಮಾತನ್ನು ಕೇಳಿ ಸವರ್ಣೆ ಕಕ್ಕಾಬಿಕ್ಕಿಯಾಗಿ ನಾಲಿಗೆಯನ್ನು ಸವರಾಡಹತ್ತಿದಳು. ಅವಳ ಸಂಭ್ರಮ ಹಾಗೂ ತೊದಲುವುಕೆಯನ್ನು ಕಂಡು ಆದಿತ್ಯನಿಗೆ ಏನೋ ಸಂಶಯ ಬಂದು ತಾನೇ ತನ್ನ ಯೋಗ ಶಕ್ತಿಯಿಂದ ನೋಡಿ ಎಲ್ಲವನ್ನೂ ತಿಳಿದುಕೊಂಡನು. ತನ್ನನ್ನು ವಂಚಿಸಿ ತನ್ನ ಮಡದಿಯ ಸ್ಥಾನದಲ್ಲಿ ಬಂದು ನಿಂತ ಸವರ್ಣೆಯ ಮೇಲೆ ಅವನಿಗೆ ಬಹಳ ಕೋಪ ಬಂದಿತು. ಶಾಪಕೊಡಬೇಕೆಂದು ಅವಳ ಕೂದಲವನ್ನು ಹಿಡಿದೆಳೆದು ''ನಿಜವಾದುದನ್ನು ನುಡಿಯದಿದ್ದರೆ ನಿನ್ನನ್ನು ಇಲ್ಲಿಯೇ''.... ಎಂದು ಮುಷ್ಟಿಯನ್ನು ಎತ್ತಿದನು. ಆಗ ಸವರ್ಣೆ ಯಾವತ್ತೂ ನಡೆದ ಸಮಾಚಾರವನ್ನು ತಿಳಿಸಿ ಕ್ಷಮೆಯನ್ನು ಕೇಳಿಕೊಂಡಳು. ಅದನ್ನು ಕೇಳಿ ಸಂಭ್ರಾಂತನಾದ ಸೂರ್ಯನು ಇವಳು ನನ್ನ ಹೆಂಡತಿಯೇ ಅಲ್ಲವೆಂಬುದನ್ನು ತಿಳಿದು ಅವಳನ್ನು ಬಿಟ್ಟು ಮಾವನಾದ ವಿಶ್ವಕರ್ಮನ ಮನೆಗೆ ಬಂದನು.

ಪ್ರೀತಿ, ಭೀತಿ, ಸಂತಾಪ, ಕರುಣೆ, ಸ್ನೇಹ, ಸಂಭ್ರಮಗಳಿಂದ ಉದ್ಭ್ರಾಂತನಾಗಿ ಬಂದ ಅಳಿಯನನ್ನು ವಿಶ್ವಕರ್ಮನು ಮೊದಲು ಆತ್ಮಾದರದಿಂದ ಸತ್ಕರಿಸಿದನು. ಆಮೇಲೆ ತನ್ನ ಮಗಳಾದ ಸಂಜ್ಞೆಯ ಕಷ್ಟಗಳನ್ನೆಲ್ಲ ಹೇಳಿ 'ನಿನ್ನ ತೇಜಸ್ಸಿನಿಂದ ಮೈಯ್ಯನ್ನೆಲ್ಲ ಸುಟ್ಟು ಕೊಂಡು ನಿರ್ವಾಹವಿಲ್ಲದೇ ನಿನ್ನನ್ನು ಬಿಟ್ಟುಬಂಥ ನನ್ನ ಮಗಳು ಅಂದಿನಿಂದ ಇಂದಿನವರೆಗೆ ನಿನ್ನ ಧ್ಯಾನಲ್ಲಿಯೇ ಲೀನಳಾಗಿದ್ದಾಳೆ. ನಿನ್ನಿಂದ ಅಗಲಿದ ಬಳಿಕ ಅವಳು ಅನ್ನ ನೀರುಗಳನ್ನು ಬಿಟ್ಟು ಕೊರಗಿ ಸೊರಗಿ ಹೋಗಿದ್ದಾಳೆ. ನಿನಗಾಗಿ ಮೀಸಲಾದ ತನ್ನ ರೂಪದಿಂದ ಜನರು ಮೋಹಿಸದಿರಲಿ ಎಂದು ಕುದುರೆಯ ರೂಪವನ್ನು ಧರಿಸಿ ಅದ್ಭುತ ತಪಸ್ಸನ್ನು ಮಾಡುತ್ತ ಕುರುಕ್ಷೇತ್ರದಲ್ಲಿರುವಳು. ನಿನಗೆ ಅವಳ ಪುನರ್ಮಿಲನವಾಗ ಬೇಕಾಗಿದ್ದರೆ ಪ್ರಚಂಡ ತಾಪವೀಯುವ ಈ ನಿನ್ನ ಶರೀರವನ್ನು ನಾನು ತುಸುಗಾಡಕ್ಕೆ ಹಚ್ಚಿ ಸಣ್ಣದಾಗಿ ಮಾಡುತ್ತೇನೆ. ಅದರಿಂದ ನಿನ್ನ ಈ ದೇಹದ ತೇಜಸ್ಸಿನದಾಹದ ಪ್ರಮಾಣವು ಕಡಿಮೆಯಾಗಿ ಅವಳ ಜೊತೆಗೆ ಬಾಳುವೆ ಮಾಡಲು ಅನುಕೂಲವಾಗುವುದು'' ಎಂದು ಹೇಳಿದನು. ತನ್ನ ಹೆಂಡತಿಯ ತಪೋವೃತ್ತಿ ಹಾಗೂ ಅವಳು ಅಷ್ಟು ದಿನ ಬಟ್ಟ ಬವಣೆಗಳ ಕತೆಯನ್ನು ಕೇಳಿದ ಸೂರ್ಯನ ಹೃದಯ ಕರಗಿತು. ಅವಳು ತನ್ನನ್ನು ಬಿಟ್ಟು ಹೋಗಲಿಕ್ಕೆ ತನ್ನ ಅಸಹ್ಯವಾದ ಪ್ರಖರ ತೇಜಸ್ಸೇ ಕಾರಣ. ಇದನ್ನು ತುಸು ಕಡಿಮೆ ಮಾಡಿಕೊಂಡು ಅವಳನ್ನು ಮತ್ತೆ ಮನೆಗೆ ಕರೆದುಕೊಂಡು ಬಂದು ಮೊದಲಿನಂತೆ ಸಂಸಾರ ಮಾಡಬೇಕೆಂದು ಅವನಿಗೆ ಅನಿಸಿತು. ತಕ್ಷಣದಲ್ಲಿಯೇ ಅವನು ತನ್ನನ್ನು ಸಾಣೆ ಹಿಡಿಯಲಿಕ್ಕೆ ವಿಶ್ವಕರ್ಮನಿಗೆ ಅನುಮತಿಯನ್ನಿತ್ತನು.

ಆಗ ಆ ದೇವಬಡಿಗನು ಅಂಕುಡೊಂಕಾಗಿರುವ ಸೂರ್ಯಮಂಡಲವನ್ನು ತನ್ನ ದಿವ್ಯವಾದ ಗಾಡಕ್ಕೆ ಏರಿಸಿ ಸಾಣಿ ಹಿಡಿದು ನ್ಯೂನಾಧಿಕ ಭಾಗಗಳನ್ನೆಲ್ಲ ಕತ್ತರಿಸಿ ತೆಗೆದನು. ಅದರಿಂದ ಸೂರ್ಯನ ಮುಖವು ಕೆಂಪಗಾಗಿ ಅದರಿಂದ ಹನ್ನೆರಡು ಜನ ಮರಿ ಸೂರ್ಯರು ಹುಟ್ಟಿದರು. ಮತ್ತೂ ಸೂರ್ಯದೇವನ ಆಕಾರ ಸರಿಯಾಗಿ ಸಣ್ಣದಾಗಿ ಮೊದಲಿನಕ್ಕಿಂತ ಸುಂದರವೂ, ಸಹ್ಯಪ್ರಕಾಶವೂ ಆಯಿತು. ಆಗ ಕಡಿದು ಕತ್ತರಿಸಿ ಬಿದ್ದ ಸೂರ್ಯ ಶರೀರದ ಶಕಲಗಳಿಂದ ಧಾತಾ,- ಅರ್ಯಮಾ, ಮಿತ್ರ, ವರುಣ, ಅಂಶ, ಭಗ, ಇಂದ್ರ, ಪೂಷಾ, ವಿವಸ್ವಾನ್, ಪರ್ಜನ್ಯ, ತ್ವಷ್ಟಾ, ವಿಷ್ಣು ಎಂಬ ಹೆಸರಿನಿಂದ ದ್ವಾದಶಾದಿತ್ಯರು ಹುಟ್ಟಿದರು. ಅವರಲ್ಲಿ ಕೊನೆಗೆ ಹುಟ್ಟಿದರೂ ಯೋಗ್ಯತೆಯಿಂದ ಅಜನಾದ ವಿಷ್ಣುವೇ ಸರ್ವಶ್ರೇಷ್ಠನೂ ಉಳಿದೆಲ್ಲರಿಗೂ ಶಕ್ತಿಪ್ರದನೂ ಆಗಿದ್ದಾನೆ. ಇದನ್ನು ಕಂಡು ಸೂರ್ಯನಿಗೆ ಪರಮ ಸಂತೋಷವಾಯಿತು. ಮತ್ತು ವಿಶ್ವಕರ್ಮನು ತನ್ನ ಅಳಿಯನ ಸಹ್ಯದೀಪ್ತಿಯನ್ನು ಕಂಡು ಕಿರೀಟ ಗಂಧಮಾಲ್ಯಾದಿಗಳನ್ನು ಕೊಟ್ಟು ಪೂಜಿಸಿದನು.

ಇಂಥ ಅಳಿಯನನ್ನು ಕರೆದುಕೊಂಡು ತನ್ನ ಮಗಳಾದ ಸಂಜ್ಞೆಯು ಕುದುರೆಯ ರೂಪದಿಂದ ನಿಂತು ಅಖಂಡ ತಪವನ್ನು ಮಾಡುತ್ತಲಿರುವ ಕುರುಕ್ಷೇತ್ರಕ್ಕೆ ಬಂದನು. ಅಲ್ಲಿ ತನ್ನನ್ನೇ ನೆನೆಯುತ್ತನಿಂತ ಆ ಹೆಣ್ಣು ಕುದುರೆಯನ್ನು ಕಂಡಕೂಡಲೇ ಸೂರ್ಯನಿಗೆ ಪ್ರೇಮವುಕ್ಕೇರಿ ಗಂಡುಕುದುರೆಯ ರೂಪದಿಂದ ಬಂದು ಅವಳನ್ನು ಚುಂಬಿಸಿದನು. 'ಇದಾವ ಗಂಡುಗುದುರೆ ತನ್ನ ಹತ್ತಿರ ಬಂದಿತು'' ಎಂದು ಸಿಟ್ಟಿನಿಂದ ಸರಿಯುತ್ತಲಿರುವ ಆ ವಡವೆ* ಯನ್ನು ಪ್ರೇಮದಿಂದ ತಬ್ಬಿ ಮುಖದಲ್ಲಿ ರಮಿಸಿದನು. ಕೋಪಾಟೋಪದಿಂದ ಉರಿಯುತ್ತಲಿರುವ ವಡವೆ ಅವನ ತೇಜಸ್ಸನ್ನು ತನ್ನ ಎರಡೂ ಮೂಗಿನ ಹೊರಳೆಗಳಿಂದ ಹೊರಚೆಲ್ಲಿತು. ಅದರಿಂದಲೇ ಎರಡು ಅವಳಿ ಮಕ್ಕಳು ಹುಟ್ಟಿದರು. ಅಶ್ವಿನೀ ಎಂದರೆ ಹೆಣ್ಣು ಕುದುರೆಯಿಂದ ಹುಟ್ಟಿದ್ದರಿಂದ ಅವರಿಗೆ ಅಶ್ವಿನೀಕುಮಾರರೆಂದು ಹೆಸರಾಯಿತು. ಅವರೇ ಮುಂದೆ ಅಶ್ವಿನೀಕುಮಾರರು ಎಂದು ದೇವತೆಗಳ ವೈದ್ಯರಾದರು.

ಆಗ ಸೂರ್ಯನು ತನ್ನ ನಿಜರೂಪವನ್ನು ತೋರಿಸಿದನು. ಆಗ ಅವಳು ಆಶ್ಚರ್ಯ ಆನಂದ ಸಂಭ್ರಮಗಳಿಂದ ಅವನನ್ನು ಬಂದು ವಂದಿಸಿದಳು. ಆ ಮೇಲೆ ಅವರಿಬ್ಬರೂ ಮೊದಲಿನಂತೆ ಸುಖವಾಗಿ ಇರಹತ್ತಿದರು.

ಎಂಟನೆಯ ಪ್ರಜಾಪತಿಯಾದ ಮಾರ್ತಂಡನಿಂದ ಉತ್ಪಾದಿತರಾದ ಈ ಅಶ್ವಿನೀ ಕುಮಾರರಲ್ಲಿ ಒಬ್ಬನಿಗೆ ನಾಸತ್ಯನೆಂದೂ ಇನ್ನೊಬ್ಬನಿಗೆ ದಸ್ರನೆಂದೂ ಹೆಸರು. ಇತ್ತ ಸಂಜ್ಞೆಯ ಮಗನಾದ ಯಮನು ಆ ಶಾಪದ ಪ್ರಕರಣವು ನಡೆದುದಿನಿಂದ ಬಹಳೇ ಶಾಂತನೂ ಧರ್ಮಶೀಲನೂ ಆಗಿ ಪ್ರಜಾಜನರನ್ನು ರಂಜಿಸಿ ರಕ್ಷಿಸುವುದರಲ್ಲಿಯೇ ದತ್ತಚಿತ್ತನಾದನು. ನಿತ್ಯನಿರಂತರವಾದ ಅವನ ಈ ಲೋಕಸೇವೆ ಹಾಗೂ ಧರ್ಮ ಕರ್ಮಾನುಷ್ಠಾನಗಳಿಂದ ಅವನಿಗೆ ಭಗವದನುಗ್ರಹವು ವಿಶೇಷವುಂಟಾಗಿ ಅವನು ಧರ್ಮರಾಜನೆಂದು ಖ್ಯಾತಿಯನ್ನು ಹೊಂದಿದನು. ಮತ್ತು ಪಿತೃಗಣದ ಅಧಿಪತ್ಯವನ್ನೂ ಲೋಕಪಾಲತ್ವವನ್ನೂ ಪಡೆದನು. ಅವನ ತಮ್ಮನಾದ ಸಾವರ್ಣ ಮನುವು ಬ್ರಹ್ಮನಿಷ್ಠನಾಗಿ ಮೇರು ಪರ್ವತದಲ್ಲಿ ಇಂದಿಗೂ ಮಹಾತಪವನ್ನು ಆಚರಿಸುತ್ತಲೇ ನಿಂತುಕೊಂಡಿದ್ದಾನೆ. ಮುಂದಿನ ಮನ್ವಂತರಕ್ಕೆ ಅವನೇ ಅಧಿಪತಿಯಾಗಿ ಬರುವನು. ಆದುದರಿಂದ ಅದು ಸಾವರ್ಣ ಮನ್ವಂತರವೆಂದು ಪ್ರಸಿದ್ಧವಾಗಲಿರುವದು. ಸವರ್ಣೆಯ ಎರಡನೆಯ ಮಗನಾದ ಶನೇಶ್ವರನು ಗ್ರಹಗಣದಲ್ಲಿ ಪರಿಗಣಿತನಾದನು. ಅಶ್ವಿನೀಕುಮಾರರಂತೂ ಸ್ವರ್ಗಲೋಕದ ದೇವಧನ್ವಂತರಿಗಳಾದರು. ಸೂರ್ಯನನ್ನು ಗಾಡಕ್ಕೆ ತಿಕ್ಕಿ ತೀಡಿದಾಗ ಕೆಳಗೆ ಬಿದ್ದ ತೇಜಸ್ಸಿನ ತುಣುಕು ಮಿಣುಕುಗಳಿಂದ ಆ ಸಗ್ಗದ ಬಡಿಗನು ಸುದರ್ಶನವೆಂಬ ಚಕ್ರವನ್ನು ನಿರ್ಮಿಸಿದನು. ಜ್ವಾಲಾಜಟಾಲವಾದ ಆ ಭಾಸುರ ಚಕ್ರವನ್ನು ದೇವಾಸುರ ಯುದ್ಧಗಳಲ್ಲಿ ದೈತ್ಯ ದಾನವರ ಸಂಹಾರ ಮಾಡಲಿಕ್ಕೆಂದು ವಿಶ್ವಕರ್ಮನು ಸ್ವಯಂಸಮರ್ಥನಾದ ಶ್ರೀಹರಿಗೆ ಅಲಂಕಾರ ರೂಪವಾಗಿ ಕೊಟ್ಟನು. ಯಮನ ಕಿರಿಯ ತಂಗಿಯಾದ ಯಮುನೆಯು ಲೋಕಪಾವನಿಯಾದ ಯಮುನಾ ಎಂಬ ಮಹಾನದಿಯಾಗಿ ತನ್ನ ಪುಣ್ಯೋದಕದ ತೀರ್ಥಮಹಿಮೆಯಿಂದ ಜಗದೋದ್ಧಾರವನ್ನು ಮಾಡುತ್ತಲಿದ್ದಾಳೆ.

---

* ಹೆಣ್ಣು ಕುದುರೆ

ವೈವಸ್ವತ ಮನುವಿಗೆ ಇಕ್ಷ್ವಾಕು ಮೊದಲಾದ ನವಪುತ್ರರು ಹುಟ್ಟುವುದಕ್ಕೆ ಮೊದಲು ಅವನು ಸಂತಾನಾರ್ಥವಾಗಿ ಯಜ್ಞವನ್ನು ಮಾಡಿದನು. ಆ ಯಾಗದಲ್ಲಿ ಅವನು ಮಿತ್ರಾವರುಣ ಎಂಬ ದೇವತೆಗಳನ್ನು ಉದ್ದೇಶಿಸಿ ಹೋಮವನ್ನು ಮಾಡಿದಾಗ ಅವರ ಅನುಗ್ರಹದಿಂದ ಅತ್ಯಂತ ತೇಜಸ್ವಿನಿಯಾದ ಇಲಾ ಎಂಬ ಮಗಳು ಹುಟ್ಟಿದಳು. ದಿವ್ಯವಾದ ವಸ್ತ್ರಾಭರಣಗಳಿಂದ ಭೂಷಿತಳಾದ ಆ ಇಲೆಯ ಸರ್ವಾಂಗ ಸೌಂದರ್ಯ ಮತ್ತು ಕಾಂತಿ ಕಮನೀಯತೆಗಳನ್ನು ಕಂಡು ಮುನಿ-ಮನುಜರೂ, ದೇವಗಂಧರ್ವರೂ ಅವಳನ್ನೂ ಮತ್ತು ಮಹಾರಾಜನ ತಪೋವೀರ್ಯವನ್ನೂ ಬಾಯಿತುಂಬ ಕೊಂಡಾಡಿದರು.

ಆ ಚಾರುಸರ್ವಾಂಗಿಯವನ್ನು ಮನುವು ಪುತ್ರೀಸ್ನೇಹದಿಂದ ಆದರಿಸಿ ಬಾ ಎಂದು ಕರೆಯಲು ಅವಳು ವಿನಯದಿಂದ "ನಾನು ಮಿತ್ರಾವರುಣ ದೇವತೆಗಳ ಅನುಗ್ರಹದಿಂದ ಹುಟ್ಟಿಬಂದದ್ದರಿಂದ ಮೊದಲು ಅವರ ಬಳಿಗೆ ಹೋಗಿ ಅಪ್ಪಣೆ ಪಡೆದುಕೊಂಡು .ರುವೆ" ಎಂದು ಹೇಳಿ ಮಿತ್ರಾವರುಣರಿದ್ದಲ್ಲಿ ಬಂದಳು. ಅವರಿಗೆ ಭಕ್ತಿಯಿಂದ ವಂದಿಸಿ ಮನು ಮಹಾರಾಜನ ಹತ್ತಿರ ಇರಲು ಅವರ ಸಮ್ಮತಿಯನ್ನು ಕೇಳಿದಳು. ಅದಕ್ಕೆ ಅವರು ಅತ್ಯಂತ ಸಂತೋಷದಿಂದ ಒಪ್ಪಿ ಅವಳ ಪಿತೃಭಕ್ತಿ ಹಾಗೂ ದೇವಭಕ್ತಿಗಳಿಗೆ ಮೆಚ್ಚಿ ಹೇಳಿದರು. "ನೀನು ಜಗತ್ತಿನಲ್ಲಿ ನಮ್ಮ ತಪಃಪ್ರಭಾವಯುಕ್ತವಾದ ಆಶೀರ್ವಾದದ ಬಲದಿಂದ ಮನು ಮಹಾರಾಜನ ಗಂಡಸುಮಗನೂ ಆಗಿ ಅವನ ವಂಶವನ್ನು ಬೆಳಗಿಸುವಿ. ನಿನಗೆ ಹೆಂಗಸಿದ್ದಾಗ ಇಲಾ ಎಂತಲೂ ಗಂಡಸಾದಾಗ ಸುದ್ಯುಮ್ನ ಎಂತಲೂ ಹೆಸರು ಬರುವದು." ಹೀಗೆ ಮಿತ್ರಾವರುಣರ ಪೌರುಷಪ್ರಾಪಕವಾದ ಆಶೀರ್ವಾದವನ್ನು ಪಡೆದುಕೊಂಡು ತಂದೆಯಾದ ವೈವಸ್ವತ ಮನುವಿನ ಮನೆಯೆಡೆಗೆ ಆ ಇಲೆಯು ಮರಳಿ ಬರುವಾಗ ಚಂದ್ರನ ಮಗನಾದ ಬುಧನು ಅವಳನ್ನು ನೋಡಿ ಮೋಹಿಸಿ ಕಾಮಕೇಳಿಗೆ ಆಹ್ವಾನಿಸಿದನು. ಆಗ ಇಲೆಗೆ ಬುಧನಿಂದ ಪುರೂರವನೆಂಬ ಮಗನು ಹುಟ್ಟಿದನು. ಆ ಮಗನನ್ನು ಕರೆದುಕೊಂಡು ಮನುವಿನ ಮನೆಗೆ ಬಂದ ಕೆಲದಿನಗಳಲ್ಲಿಯೇ ಮಿತ್ರಾವರುಣರ ವರದ ಬಲದಿಂದ ಅವಳು ಗಂಡಾಗಿ ಸುದ್ಯುಮ್ನನಾದನು. ಮನುವು ಆ ಸುದ್ಯುಮ್ನನಿಗೆ ಮದುವೆ ಮಾಡಿದನು. ಆಗ ಅವನಿಗೆ ಉತ್ಕಲ, ಗಯ, ವಿನತಾಶ್ವ ಎಂದು ಮೂರು ಮಕ್ಕಳಾದರು. ಇಲೆಯು ಗಂಡುರೂಪುದಲ್ಲಿದ್ದಾಗ ಹುಟ್ಟಿದ ಉತ್ಕಲನು ಆಳಿದ ದೇಶಕ್ಕೆ ಇಂದಿಗೂ ಉತ್ಕಲವೆಂದೇ ಕರೆಯುವರು. ಅವಳ (ಅವನ) ಇನ್ನೊಬ್ಬ ಗಯನೆಂಬ ಮಗನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡ ಊರಿಗೆ ಇಂದಿಗೂ ಗಯಾ ಎಂದು ಹೆಸರಿದೆ. ವಿನತಾಶ್ವನು ಪಶ್ಚಿಮ ದೇಶಕ್ಕೆ ಅಧಿಪತಿಯಾಗಿದ್ದನು. ಅವಳ ನಾರೀ ಭಾವದಲ್ಲಿ ಹುಟ್ಟಿದ ಮಗನಾದ ಪುರೂರವನನ್ನು ಸುದ್ಯುಮ್ನನು ಪ್ರತಿಷ್ಠಾನ ಪಟ್ಟಣದಲ್ಲಿ ಪ್ರತಿಷ್ಠಾಪಿಸಿ ರಾಜ್ಯಾಭಿಷೇಕವನ್ನು ಮಾಡಿ ತನ್ನ ಸಾಮ್ರಾಜ್ಯವನ್ನೆಲ್ಲ ಒಪ್ಪಿಸಿದನು. ಪುರೂರವನಿಗೆ ಆಯು, ಅಮಾವಸು, ವಿಶ್ವಾಯು, ದೃಢಾಯು, ಶತಾಯು, ವನಾಯು ಮೊದಲಾಗಿ ಅನೇಕ ಮಕ್ಕಳಾದರು. ಉತ್ಕಲನಿಗೆ ಧೃಷ್ಟಕ, ಅಂಬರೀಷ, ದಂಡ ಎಂದು ತ್ರಿಲೋಕ ಪ್ರಸಿದ್ಧರಾದ ಮೂರುಜನ ಮಕ್ಕಳಾದರು. ದಂಡನಿಂದಲೇ ದಂಡಕಾರಣ್ಯವೆಂಬ ತಪಸ್ವಿಗಳಿಗೆಲ್ಲ ಆಶ್ರಯಸ್ಥಾನವಾದ ಪುಣ್ಯಭೂಮಿಯು ನಿರ್ಮಿತವಾಯಿತು. ಈ ದಂಡಕಾರಣ್ಯದಲ್ಲಿ ಪ್ರವೇಶಮಾತ್ರದಿಂದಲೇ ಮಾನವನ ಪಾಪರಾಶಿಗಳೆಲ್ಲ ಪರಿಹೃತವಾಗುವವು. ಪುರೂರವನು ಹುಟ್ಟಿದ ಬಳಿಕ ಸ್ತ್ರೀಪುಂಲಕ್ಷಣಗಳಿಂದ ಕೂಡಿದ ಸುದ್ಯುಮ್ನನು ದಿವ್ಯಲೋಕವನ್ನು ಕುರಿತು ಪ್ರಯಾಣ ಮಾಡಿದನು. ವೈವಸ್ವತ ಮನುವಿಗೆ ಸುದ್ಯುಮ್ನನ ತರುವಾಯ ಇಕ್ಷ್ವಾಕು, ನಾಭಾಗ, ಧೃಷ್ಣು, ಶರ್ಯಾತಿ, ನರಿಷ್ಯನ್, ಪ್ರಾಂಶು, ನಾಭಾಗಾರಿಷ್ಟ, ಕರೂಷ, ಪೃಷಧ್ರ ಎಂಬ ಒಂಬತ್ತು ಜನ ಗಂಡುಮಕ್ಕಳಾದರು.

ವೈವಸ್ವತ ಮನುವಿನ ಮಗನಾದ ನಾಭಾಗಾರಿಷ್ಟನಿಗೆ ವೈಶ್ಯಭಾರ್ಯೆಯಿಂದ ಹುಟ್ಟಿ ವೈಶ್ಯರಾದ ಇಬ್ಬರು ಮಕ್ಕಳು ತಮ್ಮ ತಪಃಸಾಮರ್ಥ್ಯದಿಂದ ಬ್ರಾಹ್ಮಣರಾದರು. ಪ್ರಷಧ್ರನು ತನ್ನ ಗುರುವಿನ ಆಕಳವನ್ನು ಕೊಂದದ್ದರಿಂದ ಶಪಿತನಾಗಿ ಶೂದ್ರತ್ವವನ್ನು ಹೊಂದಿದನು. ಹೀಗೆ ವೈವಸ್ವತ ಮನುವಿನ ಒಂಬತ್ತು ಜನ ಮಕ್ಕಳ ವಂಶವು ವಿಸ್ತೃತವಾಯಿತು.

ಈ ವೈವಸ್ವತನು ಶೀನಿದಾಗ ಹುಟ್ಟಿದ್ದರಿಂದ ಇಕ್ಷ್ವಾಕು ಎಂದು ಹೆಸರಾದ ಮನುವಿನ ಜ್ಯೇಷ್ಠಪುತ್ರನಿಗೆ ನೂರುಜನ ಮಕ್ಕಳಾದರು. ಅವರಲ್ಲಿ ವಿಪುಲ-ಕುಕ್ಷಿ ಅಂದರೆ ದೊಡ್ಡ ಹೊಟ್ಟೆಯಿದ್ದುದರಿಂದ ಎಲ್ಲಿಯೂ ಯುದ್ಧಕ್ಕೆ ಹೋಗಲು ಬಾರದೇ ಅಯೋಧ್ಯೆಯಲ್ಲಿಯೇ ರಾಜ್ಯವನ್ನಾಳುತ್ತ ಕುಳಿತುಕೊಂಡ ಪರಮ ಧಾರ್ಮಿಕನಾದ ಇಕ್ಷ್ವಾಕುವಿನ ಜ್ಯೇಷ್ಠಪುತ್ರನಿಗೆ ವಿಕುಕ್ಷಿ ಎಂದು ಹೆಸರಾಯಿತು. ಅವನಿಗೆ ಶಕುನಿಯೆ ಮುಂತಾದ ಐವತ್ತು ಜನ ಧರ್ಮಶೀಲರಾದ ಸತ್ಕುಮಾರರು ಜನಿಸಿ ಉತ್ತರಾಪಥಕ್ಕೆ ಅಧೀಶರಾಗಿ ರಕ್ಷಿಸುತ್ತಲಿದ್ದರು. ನಲವತ್ತೆಂಟು ಜನ ಅವನ ಮಕ್ಕಳು ದಕ್ಷಿಣಾಪಥಕೆ ಅಧಿಪತಿಗಳಾಗಿ ರಕ್ಷಿಸುತ್ತಿದ್ದರು. ಇವರಿಗೆ ಶಶಾದನ ಅರ್ಥಾತ್ ವಿಕುಕ್ಷಿಯ ಸಹಾಯವಿದ್ದಿತು.

ಈ ವಿಕ್ಷುಕಿಗೆ ಶಶಾದ ಎಂದು ಹೆಸರು ಬರಲು ಒಂದು ಕಾರಣವಾಯಿತು. ಒಂದು ದಿನ ಇಕ್ಷ್ವಾಕುವು ಅಷ್ಟಮಿಯ ಶ್ರಾದ್ಧಕ್ಕಾಗಿ ಚಿಗರೆಯ ಮಾಂಸವನ್ನು ತರಲು ವಿಕುಕ್ಷಿಗೆ ಅಪ್ಪಣೆ ಮಾಡಿದನು. ಅವನು ಅಡವಿಗೆ ಹೋಗಿ ಶ್ರಾದ್ಧದ ಉದ್ದೇಶದಿಂದ ಅನೇಕ ಚಿಗರೆ ಮೊಲಗಳನ್ನು ಹೊಡೆದನು. ತಿರುಗಿ ಬರುವಾಗ ಅವನಿಗೆ ಬಹಳ ಹಸಿವೆಯೆನಿಸಿದ್ದರಿಂದ ಅದರಲ್ಲಿಯ ಒಂದು ಮೊಲದ ಮಾಂಸವನ್ನ ಭಕ್ಷಣಮಾಡಿ ಉಳಿದುದನ್ನು ತಿಂದು ತಂದೆಗೆ ಒಪ್ಪಿಸಿದನು. ಆಗ ವಶಿಷ್ಠರು ಉಚ್ಛಿಷ್ಟ ಮಾಂಸವನ್ನು ತಂದು ಶ್ರಾದ್ಧಕ್ಕೆ ಇಟ್ಟಿದ್ದನ್ನು ತಿಳಿದು ಇಂಥ ದುರ್ವ್ಯಾಪಾರ ಮಾಡಿದ ಆ ಮಗನನ್ನು ಊರಬಿಟ್ಟು ಹೊರಗೆ ಹಾಕಲು ಇಕ್ಷ್ವಾಕುವಿಗೆ ತಿಳಿಸಿದರು. ಅಂದಿನಿಂದ ಅವನಿಗೆ 'ಶಶಾದ' ಮೊಲ ತಿನ್ನುವವ ಎಂದು ಹೆಸರು ಬಿದ್ದಿತು. ಅವರ ಮಾತಿನಂತೆ ಇಕ್ಷ್ವಾಕು ಅವನನ್ನು ಹೊರಗೆ ಹಾಕಿದನು. ಮುಂದೆ ತಂದೆ ತೀರಿಕೊಂಡ ಬಳಿಕ ಶಶಾದನು ಊರಿಗೆ ಬಂದು ರಾಜ್ಯಸೂತ್ರಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡನು. ಶಶಾದನಿಗೆ ಕಕುಸ್ಥನೆಂಬ ಅಪ್ರತಿಮ ವೀರವರೇಣ್ಯನಾದ ಮಗನು ಹುಟ್ಟಿದನು.

ಪೂರ್ವದಲ್ಲಿ ದೇವದಾನವರ ಯುದ್ಧದ ಸಂದರ್ಭಲ್ಲಿ ಸೋಲಲು ಬಂದ ದೇವತೆಗಳು ಇವನನ್ನುಸಹಾಯಕ್ಕೆ ಕರೆದರು. ಅದಕ್ಕೆ ಇವನು ''ಇಂದ್ರನು ನನ್ನ ವಾಹನನಾದರೆ ನಾನು ಯುದ್ಧಕ್ಕೆ ಬರುವೆನೆಂದು'' ಹೇಳಿದನು. ಆಗ ಇಂದ್ರನು ಎತ್ತಿನ ರೂಪದಿಂದ ಇವನ ವಾಹನನಾದನು. ಆ ಇಂದ್ರರೂಪವಾದ ಎತ್ತಿನ ಮೇಲೆ ಹತ್ತಿ ಕುಳಿತು ಯುದ್ಧಮಾಡಿ ರಾಕ್ಷಸರನ್ನು ಸೋಲಿಸಿ ದೇವತೆಗಳಿಗೆ ವಿಜಯವನ್ನು ತಂದು ಕೊಟ್ಟದ್ದರಿಂದ ಇವನಿಗೆ ಕಕುಸ್ಥ ಎಂಬ ಹೆಸರು ಬಂದಿತು. ಈ ಕಕುಸ್ಥನಿಗೆ ಅನೇನ, ಅನೇನನಿಗೆ ಪೃಥು, ಪೃಥುವಿನಿಂದ ಆರ್ದ, ಆರ್ದನಿಂದ ಯುವನಾಶ್ವ, ಯುವನಾಶ್ವನಿಗೆ ಶ್ರಾವಸ್ತ ಎಂಬ ಮಗನು ಹುಟ್ಟಿದನು. ವೈವಸ್ವತ ಪುತ್ರನಾದ ನರಿಷ್ಯಂತನಿಗೆ ಶಕರೆಂಬ ಪುತ್ರರಿದ್ದರು ನಾಭಾಗನಿಗೆ ಅಂಬರೀಷನೆಂಬ ಪರಮ ಭಗವದ್ಭಕ್ತನೂ ರಾಜಶ್ರೇಷ್ಠನೂ ಆದ ಸತ್ಪುತ್ರನು ಹುಟ್ಟಿದನು. ಧೃಷ್ಣು ಎಂಬ ಮನು ಪುತ್ರನಿಂದ ರಣರಂಗಧೀರರಾದ ಧಾರ್ಷ್ಟಕನಾಮಕರಾದ ಕ್ಷತ್ರಿಯರ ಒಂದು ಕುಲವೇ ನಿರ್ಮಿತವಾಯಿತು. ಕರೂಷನಿಂದ ಕಾರೂಷನೆಂಬ ರಣಮತ್ತರಾದ ಸಾವಿರ ಕ್ಷತ್ರಿಯರ ಮತ್ತೊಂದು ಪಡೆ ಪ್ರವೃತ್ತವಾಯಿತು ನಾಭಾಗಾರಿಷ್ಟನ ಮಕ್ಕಳು ಜನ್ಮದಿಂದ

ಕ್ಷತ್ರಿಯರಿದ್ದರೂ ಕರ್ಮದೋಷದಿಂದ ವೈಶ್ಯರಾದರು. ಪ್ರಾಂಶುವಿಗೆ ಶರ್ಯಾತಿಯೆಂಬ ಒಬ್ಬನೇ ಆದರೂ ಅತ್ಯಂತ ಸುಪ್ರಸಿದ್ಧನಾದ ಪ್ರತಾಪಿ ಪುತ್ರನು ಹುಟ್ಟಿದನು. ನರಿಷ್ಯಂತನಿಗೆ ಶಾಸನಸಮರ್ಥನಾದ ದಮ ಎಂಬ ಮಗನಾದನು. ಶರ್ಯಾತಿಗೆ ಅನರ್ತನೆಂಬ ಗಂಡು ಮಗುವೂ ಸುಕನ್ಯೆ ಎಂಬ ಮಗಳೂ ಜನಿಸಿದರು. ಇವಳನ್ನು ಮುಂದೆ ಚ್ಯವನಋಷಿಗೆ ಮದುವೆ ಮಾಡಿಕೊಟ್ಟರು. ಅನರ್ತನಿಗೆ ರೇವನೆಂಬ ತೇಜಸ್ವಿಯಾದ ಮಗನು ಉತ್ಪನ್ನನಾದನು. ಆನರ್ತನ ದೇಶಕ್ಕೆ ಆನರ್ತವೆಂದೇ ಹೆಸರಾಗಿದ್ದು ಕುಶಸ್ಥಲಿಯೇ ಅದರ ರಾಜಧಾನಿ. ರೇವತನಿಗೆ ನೂರು ಜನ ಮಕ್ಕಳು. ಅವರಲ್ಲಿ ಕಕುದ್ಮಿ ಎಂಬ ಜ್ಯೇಷ್ಠಪುತ್ರನು ಪರಮ ಧಾರ್ಮಿಕನಾಗಿದ್ದನು. ಇವನಿಗೆ ರೈವತನೆಂಬ ಹೆಸರು. ಇವನಿಗೆ ರೇವತಿ ಎಂಬ ಹೆಸರಿನ ಸ್ಫುರದ್ರೂಪಿಣಿಯಾದ ಕನ್ಯೆಯಿದ್ದಳು. ರೈವತನು ತನ್ನ ಮಗಳಾದ ರೇವತಿಯೊಂದಿಗೆ ಬ್ರಹ್ಮಲೋಕಕ್ಕೆ ಹೋಗಿದ್ದನು. ಆಗ ಅಲ್ಲಿ ಸಂಗೀತ ಕಾರ್ಯಕ್ರಮ ನಡೆದಿತ್ತು. ಅದು ಮುಗಿದ ಬಳಿಕ ಬ್ರಹ್ಮದೇವರ ದರ್ಶನ ತೆಗೆದುಕೊಂಡು ಹೋದರಾಯಿತು ಎಂದು ರೈವತನು ಅರೆ ಮೂಹೂರ್ತ ಮಾತ್ರ ಅಲ್ಲಿ ಕುಳಿತನು. ಬ್ರಹ್ಮಮಾನದ ನಿಮಿಷಾರ್ಧದಲ್ಲಿ ಭೂಲೋಕದಲ್ಲಿ ಯುಗಪರಿವರ್ತನೆ ಯಾಗಿತ್ತು. ಅವನ ಕುಶಸ್ಥಲಿಯಿದ್ದಲ್ಲಿ ಈಗ ದ್ವಾರಕಾಪಟ್ಟಣವೆಂಬ ಹೆಸರಿನಿಂದ ಯಾದವರ ರಾಜಧಾನಿಯಾಗಿತ್ತು. ಕುಶಸ್ಥಲದಲ್ಲಿದ್ದ ರೈವತನ ನೂರು ಅಣ್ಣ ತಮ್ಮಂದಿರನ್ನು ದುಷ್ಟದೈತ್ಯರು ಅವನು ಬ್ರಹ್ಮಲೋಕಕ್ಕೆ ಹೋದ ಕೂಡಲೇ ಇತ್ತ ಹೊಡೆದು ಓಡಿಸಿಬಿಟ್ಟಿದ್ದರು. ಓಡಿ ಅಡವಿಪಾಲಾದ ಅವರ ವಂಶವು ಅಲ್ಲಲ್ಲಿ ಬೆಳೆದು ಮುಂದೆ ಅದೇ ಶಾರ್ಯತರೆಂಬ ಹೆಸರಿನಿಂದ ದೊಡ್ಡ ಕ್ಷತ್ರಿಯ ಗಣವಾಗಿ ಪ್ರಸಿದ್ಧವಾಯಿತು. ಮಾನವರ ಮಾನದಿಂದ ಅನೇಕ ಸಾವಿರ ವರುಷ ಬ್ರಹ್ಮಸಭೆಯಲ್ಲಿ ರೈವತರೇವತೀ ಇಬ್ಬರೂ ಕುಳಿತಿದ್ದರೂ ಅಲ್ಲಿಯ ಸ್ಥಾನವ ಹಿಮೆಯಿಂದ ಅವರಿಗೆ ಮುಪ್ಪು ಬಾರದೇ ಮೊದಲಿನಂತೆ ಅವರು ತರುಣರಾಗಿಯೇ ಉಳಿದಿದ್ದರು. ಬ್ರಹ್ಮದೇವರ ಅಪ್ಪಣೆಯಂತೆ ರೈವತನು ದ್ವಾರಕಾ ಪಟ್ಟಣಕ್ಕೆ ಬಂದು ಶ್ರೀಕೃಷ್ಣನ ಅಣ್ಣನಾದ ಬಲರಾಮನಿಗೆ ತನ್ನ ಮಗಳಾದ ರೇವತಿಯನ್ನು ಮದುವೆಮಾಡಿಕೊಟ್ಟು ತಪೋನುಷ್ಠಾನ ಮಾಡಲಿಕ್ಕೆಂದು ಮೇರುಪರ್ವತಕ್ಕೆ ಹೋದನು.

## ಕುವಲಾಶ್ವನ ಕರುಣಕತೆ

**"ಧರ್ಮ್ಯಾದ್ಧಿ ಯುದ್ಧಾತ್ ಶ್ರೇಯೋನ್ಯತ್ ಕ್ಷತ್ರಿಯಸ್ಯ ನ ವಿದ್ಯತೆ"**

ಶ್ರಾವಸ್ತಿ ನಗರವನ್ನು ನಿರ್ಮಿಸಿದ ಶ್ರಾವಸ್ತ ಮಹಾರಾಜನಿಗೆ ಬೃಹದಶ್ವನೆಂಬ ಧೀರಾಗ್ರೇಸರನಾದ ಕುಮಾರನಿದ್ದನು. ಬೃಹದಶ್ವನು ಧೀರನಿದ್ದಂತೆ ಧಾರ್ಮಿಕನೂ ಆಗಿದ್ದನು. ಯೌವನದಲ್ಲಿ ರಾಜ್ಯಭೋಗ ವಿಷಯಾನುಭವವನ್ನೆಲ್ಲ ತ್ಯಾಗಮಾಡಿ ಮಗನಾದ ಕುವಲಾಶ್ವನು ಪ್ರಬುದ್ಧನಾದ ಕೂಡಲೇ ರಾಜ್ಯಭಾರವನ್ನೆಲ್ಲ ಅವನಿಗೆ ಒಪ್ಪಿಸಿಬಿಟ್ಟನು.

ಕುವಲಾಶ್ವನಾದರೂ ತಂದೆಯಂತೆ ಬಲಿಷ್ಠ ಮತ್ತು ಪರಮ ಧಾರ್ಮಿಕ. ಅವನಿಗೆ ಪ್ರಬಲ ಪರಾಕ್ರಮ ಶಾಲಿಗಳಾದ ನೂರು ಜನ ಮಕ್ಕಳಿದ್ದರು. ಅವರೆಲ್ಲರೂ ವಿಶಾಲ ಸಾಮ್ರಾಜ್ಯದ ಮೂಲೆ ಮೂಲೆಗಳಿಗೆಲ್ಲ ಹೋಗಿ ಪ್ರಜಾಜನರ ದುಃಖದಾರಿದ್ರ್ಯಗಳನ್ನೆಲ್ಲ ಪರಿಹರಿಸಿ ಸಮಸ್ತ ಜನರೂ ಸುಖಸಂತಸದಿಂದ ಇರುವಂತೆ ಮಾಡಿದ್ದರು.

ಹೀಗೆ ತನ್ನ ಮಕ್ಕಳೂ ಹಾಗೂ ಮೊಮ್ಮಕ್ಕಳೂ ಕೂಡಿ ರಾಜ್ಯದಲ್ಲೆಲ್ಲ ಸುಖಶಾಂತಿಗಳು ನೆಲಿಸಿ ಪ್ರಜೆಗಳೆಲ್ಲ ರಾಮರಾಜ್ಯದಲ್ಲಿಯಂತೆ ನೆಮ್ಮದಿಯಿಂದ ಬಾಳುವಂತೆ ಮಾಡಿದ್ದನ್ನು

ಕಂಡು ತೃಪ್ತನಾದ ಬೃಹದಶ್ವನು ತಪಸ್ಸಿಗಾಗಿ ಅರಣ್ಯಕ್ಕೆ ಹೊರಟು ನಿಂತಿದ್ದನು. ಆಕಸ್ಮಾತ್ತಾಗಿ ಮಹರ್ಷಿಗಳಾದ ಉತ್ತಂಕರು ರಾಜಧಾನಿಗೆ ದಯಮಾಡಿಸಿ ಬೃಹದಶ್ವನಿಗೆ ತಪಸ್ಸಿಗೆ ಅರಣ್ಯಕ್ಕೆ ಹೋಗಕೂಡದೆಂದು ಹೇಳಿದರು. ''ರಾಜರಿಗೆ ಪ್ರಜಾಪಾಲನೆಯೇ ಮುಖ್ಯ ತಪಸ್ಸು. ಅದನ್ನೆಲ್ಲ ಬಿಟ್ಟು ಅವರು ಗುಡ್ಡ ಸೇರಿ ಗುಹಾದಲ್ಲಿ ಮೂಗು ಹಿಡಿದುಕೊಂಡು ಕುಳಿತರೆ ಅದರಿಂದ ಪುಣ್ಯವಿಲ್ಲ. ದುಷ್ಟರಿಂದ ಪ್ರಜೆಗಳನ್ನು ರಕ್ಷಿಸಿದರೆ ಅದರಂಥ ಪುಣ್ಯವು ಕ್ಷತ್ರಿಯರಿಗೆ ಯಾವ ಧರ್ಮಕರ್ಮ ಗಳಿಂದಲೂ ಬಾರದು.'' ''ಮಹಾರಾಜ, ಈಗ ನಾವಿರುವ ಮರುಪ್ರದೇಶದಲ್ಲಿ ಒಂದು ದೊಡ್ಡ ಉಸುಕಿನ ಕಡಲೇ ಇದೆ. ಉಜ್ಜಾನಕವೆಂಬ ಹೆಸರಿನ ಆ ಮರುಳುಗಾಡಿನಲ್ಲಿ ಮಧು ಎಂಬ ಹೆಸರಿನ ರಾಕ್ಷಸನ ಮಗನಾದ ಧುಂಧು ಎಂಬ ಅಸುರನು ಅಡಗಿಕೊಂಡು ಕುಳಿತು ಎಲ್ಲರನ್ನೂ ಕಾಡಿಸಿ ಪೀಡಿಸುತ್ತಲಿದ್ದಾನೆ. ಅವನು ವರ್ಷಕ್ಕೊಂದು ಸಲ ದೊಡ್ಡದಾದ ಒಂದು ನಿಟ್ಟುಸಿರನ್ನು ಬಿಟ್ಟನೆಂದರೆ ಭೂಮಿಯೆಲ್ಲ ನಡುಗಿಹೋಗುತ್ತದೆ. ಆಗ ಆ ಮರಳೆಲ್ಲ ಹಾರಹತ್ತುತ್ತದೆ. ಅವನು ತನ್ನ ಬಾಯಿಂದ ಭಯಂಕರವಾದ ಜ್ವಾಲಾಮುಖಿಯನ್ನೇ ಕಾರುತ್ತಾನೆ. ಹೀಗೆ ಏಳು ದಿನಗಳವರೆಗೆ ಅವನ ನಿಶ್ವಾಸದಿಂದ ಭೂಕಂಪ, ಬಿರುಗಾಳಿ. ಜ್ವಾಲಾಮುಖಿ ಸ್ಫೋಟ, ಬೆಂಕಿಯ ಮಳೆಗಳು ಆಗಿ ಆ ಉಸುಕೆಲ್ಲವೂ ಪುರಗ್ರಾಮಗಳ ಮೇಲೆ ಬಿದ್ದು ಜೀವ ಹಾನಿ, ಧನ ಹಾನಿ, ಪ್ರಾಣ ಹಾನಿಗಳಾಗಿ ಸರ್ವಸ್ವವೂ ನಾಶವಾಗಿ ಹೋಗುತ್ತದೆ. ಇಂಥದರಲ್ಲಿ ನಾವು ಕುಳಿತು ತಪಸ್ಸು ಮಾಡುವುದು ಹೇಗೆ? ಕಾರಣ ಮಹಾರಾಜ ! ನೀನೀಗ ತಪಸ್ಸಿಗೆಂದು ಕಾಡಿಗೆ ಹೋಗದೆ ಆ ರಕ್ಕಸನನ್ನು ಕೊಂದು ನಮ್ಮನ್ನು ರಕ್ಷಿಸಿದರೆ ನಿನಗೆ ಆ ತಪಸ್ಸಿನ ಪುಣ್ಯವು ಇಲ್ಲಿಯೇ ಬಂದುಹೋಗುತ್ತದೆ'' ಎಂದು ಉತ್ತಂಕರು ದೀನರಾಗಿ ನುಡಿದಾಗ ಮಹಾರಾಜ ಬೃಹದಶ್ವನು ವಿನಯದಿಂದ ನುಡಿದನು.

''ಸ್ವಾಮಿ! ಈ ಕೆಲಸಕ್ಕೆ ವೃದ್ಧನಾದ ನನಗಿಂತ ತರುಣನೂ ಪರಾಕ್ರಮಿಯೂ ಆದ ನನ್ನ ಮಗ ಕುವಲಾಶ್ವನೇ ಹೆಚ್ಚು ಯೋಗ್ಯ, ಅವನನ್ನೇ ಕಳಿಸುತ್ತೇನೆ'' ಎಂದು ಹೇಳಿ ಕುವಲಾಶ್ವನಿಗೆ ದುಂಧುವನ್ನು ನಿಗ್ರಹಿಸಿ ಋಷಿಗಳನ್ನು ಸಂತೋಷಪಡಿಸು ಎಂದು ಅಪ್ಪಣೆ ಮಾಡಿ ಅವರ ಅನುಮತಿ ಪಡೆದು ತಾನು ತಪಸ್ಸಿಗೆ ಹೋದನು. ಇತ್ತ ಕುವಲಾಶ್ವನು ಕದನಕೇಲೀ ಕುತೂಹಲಿಗಳಾದ ತನ್ನ ನೂರುಜನ ವೀರಪುತ್ರ ರೊಡನೆ ಧುಂಧುವನ್ನು ನಿಗ್ರಹಿಸಲು ಚೈತ್ರಯಾತ್ರೆ ಹೊರಟನು. ಉತ್ತಂಕರನ್ನು ಮುಂದೆ ಮಾಡಿಕೊಂಡು ಅಸುರಮರ್ದನಕ್ಕಾಗಿ ಹೊರಟ ಅವರ ಮಿಕ್ರಮಾಭಿಕ್ರಮಣವನ್ನು ಪುಷ್ಪವೃಷ್ಟಿಯಿಂದ ದೇವತೆಗಳು ಹರಸಿದರು. ಆ ಉಜ್ಜಾನಕ ಎಂಬ ಮರಳುಗಾಡಿಗೆ ಹೋಗಿ ಅದರ ಬುಡದಲ್ಲಿ ಅಡಗಿಕೊಂಡು ಕುಳಿತ ರಕ್ಕಸನನ್ನು ಹುಡುಕಿತೆಗೆಯಲಿಕ್ಕಾಗಿ ಕುವಲಾಶ್ವನು ತನ್ನ ಮಕ್ಕಳಿಗೆ ಆಜ್ಞೆ ಮಾಡಿದನು. ಆಗ ಅವರು ಉಸುಕಿನ ಸಾಗರವನ್ನು ಸುತ್ತಲೂ ಅಗೆದು ತೆಗೆಯ ಹತ್ತಿದನು. ಆಗ ಆ ಮಳಲ ರಾಶಿಯ ಕೆಳಗೆ ಅಡಗಿದ ಮಹಾದೈತ್ಯನು ತನ್ನನ್ನು ಅಟ್ಟಿಸಿಗೊಂಡು ಬಂದ ಆ ಕುವಲಾಶ್ವಕುಮಾರರನ್ನು ದಿಟ್ಟಿಸಿನೋಡಿ ನಿಟ್ಟುಸಿರಿಟ್ಟು ಸುಟ್ಟುಬಿಡಲು ಯತ್ನಿಸಿದನು.

ರಾಕ್ಷಸನು ಬಾಯಿಂದ ಸಮುದ್ರಾಕಾರವಾಗಿ ನೀರನ್ನೂ ಕಣ್ಣಿನಿಂದ ಕಿಡಿಗಳನೂ ಉದುರಿಸಲು ಶುರುಮಾಡಿದನು. ಅವನು ತಾನು ಹಿಂದೆ ಮಾಡಿದ ತಪೋಬಲದ ಮಹಿಮೆಯಿಂದ ಜಲಪ್ರಳಯವನ್ನೇ ಮಾಡಿ ಮೇಲೆ ಅಗ್ನಿವೃಷ್ಟಿಯನ್ನು ಕರೆಯುತ್ತಲಿದ್ದನು. ಅವನ ಆ ಕೋಪಾಟೋಪಸ್ಫುಲಿಂಗ ಸಂಘಗಳ ವಿಸ್ಫುರಣಕ್ಕೆ ಕುವಲಾಶ್ವನ ತೊಂಬತ್ತಾರು ಜನ ಮಕ್ಕಲು ಆಹುತಿಯಾಗಿ ಗತಪ್ರಾಣರಾಗಿ ಬಿದ್ದುಬಿಟ್ಟರು. ಅದರಿಂದ ಪ್ರೋತ್ಸಾಹಿತನಾಗಿ

ದುಷ್ಟ ದಾನವನು ಆ ಮಹಾರಾಜನನ್ನೇ ಕಬಳಿಸಬೇಕೆಂದು ಬಂದಾಗ ಸಾಕ್ಷಾತ್ ಭಗವಂತನೇ ಸತ್ಕಾರ್ಯಕ್ಕಾಗಿ ಸರ್ವಸ್ವವನ್ನೂ ಹೋಮಮಾಡಲು ಸಿದ್ಧನಾದ ಆ ರಾಜರ್ಷಿಯ ಕೈಯ್ಯಾಸರೆಯಾಗಿ ಬೆನ್ನಿಗೆ ಭೀಮನ ರಕ್ಷನಾಗಿ ಬಂದು ನಿಂತನು. ದೈವೀಬಲದಿಂದ ಪ್ರೋತ್ಸಾಹಿಕನಾದ ಮಹಾರಾಜ ಆ ನೀರನ್ನೆಲ್ಲ ಕುಡಿದು ಅವನು ಸೃಜಿಸಿದ ಬೆಂಕಿಯನ್ನೆಲ್ಲ ನುಂಗಿ ಕಾಳಭೈರವನಾಗಿ ನಿಂತುಕೊಂಡ. ಕ್ಷಣಾರ್ಧದಲ್ಲಿ ಆದುಷ್ಟ ದೈತ್ಯನನ್ನು ಸಂಹಾರ ಮಾಡಿ ತನ್ನ ಮಕ್ಕಳನ್ನು ಕೊಂದುದರ ಸೇಡನ್ನು ತೀರಿಸಿಕೊಂಡ.

ಹೀಗೆ ಲೋಕಕಂಟಕನಾದ ಆ ಜಲರಾಕ್ಷಸನನ್ನು ಕೊಂದು ನಿಂದ ಮಹಾರಾಜನನ್ನು ಉತ್ತಂಕ ಮಹರ್ಷಿಗಳು ಸಂತೋಷದಿಂದ ಅಭಿನಂದಿಸಿ ಅವನಿಗೆ ಬೇಕಾದ ವರಗಳನ್ನು ದಯಪಾಲಿಸಿದರು. ಅವನ ಯುದ್ಧದಲ್ಲಿ ಹತರಾದ ಮಕ್ಕಳಿಗೆ ಸದ್ಗತಿ ಶುಭಲೋಕಗಳನ್ನು ಇತ್ತು ಇದ್ದ ಮಕ್ಕಳಿಗೆ ಪೂರ್ಣಆಯುಷ್ಯ ಭಾಗ್ಯ-ಭೋಗ್ಯಗಳನ್ನು ಕರುಣಿಸಿದರು. ಕುವಲಾಶ್ವನ ಅಳಿದುಳಿದ ಮೂರು ಜನ ಮಕ್ಕಳಲ್ಲಿ ದೃಢಾಶ್ವನೇ ಹಿರಿಯನು. ಚಂದ್ರಾಶ್ವ ಕಪಿಲಾಶ್ವರು ಚಿಕ್ಕವರು. ದೃಢಾಶ್ವನಿಂದ ಮುಂದೆ ಈ ವಂಶದಲ್ಲಿ ಕ್ರಮವಾಗಿ ಹರ್ಯಶ್ವ, ನಿಕುಂಭ, ಸಂಹತಾಶ್ವ, ಎಂಬ ರಾಜರಾದರು. ಸಂಹತಾಶ್ವನಿಗೆ ಅಕೃಶಾಶ್ವ, ಕೃಶಾಶ್ವ ಎಂಬ ಇಬ್ಬರು ಗಂಡು ಮಕ್ಕಳು ಆದರು. ಹಿಮಾಲಯದ ಮಗಳಾದ ದೃಷ್ಟದ್ವತಿಯನ್ನು ಸಂಹತಾಶ್ವನಿಗೆ ಕೊಟ್ಟಿತ್ತು. ಅವನಿಗೆ ದೃಷ್ಟದ್ವತಿಯಿಂದ ಪ್ರಸೇನಜಿತ್ ಎಂಬ ಮಗನು ಜನಿಸಿದನು. ಪ್ರಸೇನನ ಹೆಂಡತಿಯಾದ ಗೌರಿಯು ಪರಮ ಪತಿವ್ರತೆಯಾದರೂ ಪತಿಯ ಶಾಪದಿಂದ ಬಾಹುದಾ ಎಂಬ ನದಿಯಾದಳು. ಅವಳ ಮಗನಾದ ಯುವನಾಶ್ವನಿಂದ ತ್ರಿಲೋಕ ವಿಜಯಿಯಾದ ಮಾಂಧಾತ ಮಹಾರಾಜನು ಸಂಭೂತನಾದನು. ಅವನಿಗೆ ಶಶಬಿಂದು ರಾಜನ ಮಗಳಾದ ಚೈತ್ರರಥೀ ಅಥವಾ ಬಿಂದುಮತಿ ಎಂಬ ಹೆಸರಿನ ಒಳ್ಳೇ ರೂಪವತಿಯೂ ಗುಣವತಿಯೂ ಆದ ಭಾರ್ಯೆಯಿದ್ದಳು. ಅವಳಿಂದ ಪುರುಕುತ್ಸ, ಮಂಚುಕುಂದರೆಂಬ ಧರ್ಮಾತ್ಮರಾದ ಇಬ್ಬರು ಸುಶೀಲ ಸಂಪನ್ನರಾದ ತನುಜರು ಜನಿಸಿದರು. ಪುರುಕುತ್ಸನಿಗೆ ನರ್ಮದಾ ಎಂಬ ಕಾಂತೆಯಲ್ಲಿ ತ್ರಸದ್ದಸ್ಯು, ತ್ರಸದ್ದಸ್ಯುವಿಗೆ ಸುಧನ್ವ, ಸುಧನ್ವನಿಗೆ ಚಿತ್ತಧನ್ವ, ಚಿತ್ರಧನ್ವನಿಗೆ ತ್ರಯ್ಯಾರಣ್ಯನೆಂಬ ಮಕ್ಕಳಾದರು.

## ಸತ್ಯವ್ರತನು ತ್ರಿಶಂಕುವಾದ ಬಗೆ

ಇಕ್ವಾಕುವಂಶದ ತ್ರಯ್ಯಾರುಣಮಹಾರಾಜನಿಗೆ ಸತ್ಯವ್ರತನೆಂಬ ಮಹಾಬಲ ಶಾಲಿಯಾದ ಮಗನಿದ್ದನು. ಅವನು ತನ್ನ ದಯಾ-ದಾಕ್ಷಿಣ್ಯ ಸತ್ವ-ಸಾಮರ್ಥ್ಯಾದಿ ರಾಜೋ ಚಿತವಾದ ಸದ್ಗುಣಗಳಿಂದ ಅಯೋಧ್ಯಾಪುರವಾಸಿಗಳಾದ ನಾಗರಿಕರಿಗೆಲ್ಲ ಬಹಳ ಮೆಚ್ಚಿನ ರಾಜಕುವರನಾಗಿದ್ದನು. ತರುಣನಾದ ಸತ್ಯವ್ರತ ಒಂದು ದಿನ ರಾಜಧಾನಿಯಲ್ಲಿ ಲಾವಣ್ಯವತಿಯಾದ ಓರ್ವ ಕನ್ಯಾಮಣಿಯ ಅನ್ಯಾದೃಶವಾದ ಸೌಂದರ್ಯವನ್ನು ಕಂಡು ಮುಗ್ಧನಾದನು. ಅವಳನ್ನು ತಾನೇ ವರಿಸಬೇಕೆಂದು ಮನಸಾ ಸಂಕಲ್ಪವನ್ನು ಮಾಡಿದರೂ ನಾಚಿಕೆಯಿಂದ ಆ ವಿಷಯವನ್ನು ತನ್ನ ತಂದೆಗೆ ತಿಳಿಸಲಿಲ್ಲ. ಅಷ್ಟರಲ್ಲಿ ಒಂದು ದಿನ ಆ ಹುಡಿಗಿಯನ್ನು ಅವಳ ತಂದೆ ಬೇರೊಬ್ಬರಿಗೆ ಮದುವೆ ಮಾಡಿಕೊಡುತ್ತಲಿದ್ದಾನೆ ಎಂಬ ಸಮಾಚಾರ ಅವನಿಗೆ ಬಂದಿತು. ಅವನು ಧಾವಿಸಿ ವಿವಾಹ ಮಂಟಪಕ್ಕೆ ಬಂದಾಗ ಸಪ್ತಪದಿಯೊಂದನ್ನುಳಿದು ಮಿಕ್ಕೆಲ್ಲ ವೈವಾಹಿಕ ವಿಧಿಗಳೂ ಮುಗಿದುಹೋಗಿದ್ದವು. ಆಗ ಬಲಿಷ್ಠನಾದ ಆ ರಾಜಕುಮಾರನು ವಿವಾಹ ವೇಷದಲ್ಲಿದ್ದ ಆ ಲಾವಣ್ಯವತಿಯನ್ನು

ಅಪಹರಿಸಿಕೊಂಡು ಹೋದನು. ಮತ್ತು ಲಾಜಾಹೋಮ ಸಪ್ತಪದಿಗಳು ಆಗುವವರೆಗೆ ಸಂಪೂರ್ಣ ಮದುವೆಯಾದಂತೆ ಅಲ್ಲ ಎಂಬ ಧರ್ಮಶಾಸ್ತ್ರವನ್ನು ಮುಂದೆಮಾಡಿ ತಾನು ಅವಳನ್ನು ಮದುವೆಯಾದನು. ಆ ಸಮಾಚಾರವು ರಾಜನಿಗೆ ಗೊತ್ತಾಯಿತು. ಆಗ ನ್ಯಾಯನಿಷ್ಠ ಹಾಗೂ ನೀತಿ ನಿಷ್ಠುರನಾದ ಮಹಾರಾಜನು ಮಗನೆಂದು ಪಕ್ಷಪಾತ ಮಾಡದೆ ಅವನನ್ನು ಧರ್ಮಾಸನದ ಮುಂದೆ ತಂದು ನಿಲ್ಲಿಸಿದನು. ನ್ಯಾಯಾಸ್ಥಾನದಲ್ಲಿದ್ದ ಮಗನಿಗೆ ''ನೀನು ಪರಸ್ತ್ರೀ ಅಪಹಾರವನ್ನು ಮಾಡಿದ್ದು ನಿಜವೇ?'' ಎಂದು ಕೇಳಿದನು. ಅದಕ್ಕೆ ಸತ್ಯವ್ರತನು ''ಅವಳು ಇನ್ನೂ ಪರಸ್ತ್ರೀ ಆಗದಿರುವಾಗ ಅಂದರೆ ಇನ್ನೂ ಕನ್ಯೆ ಇದ್ದಾಗಲೇ ನಾನು ಅವಳನ್ನು ಅಪಹರಿಸಿ ತಂದಿದ್ದೇನೆ. ಪರ ಕನ್ಯೆಯರನ್ನು ಹೀಗೆ ಅಪಹರಿಸಿ ಮದುವೆಯಾಗುವುದು ಕ್ಷತ್ರಿಯರಲ್ಲಿ ಸಂಪ್ರದಾಯವಿದೆ. ಇದಕ್ಕೆ ಬೇಕಾದಷ್ಟು ದೃಷ್ಟಾಂತಗಳಿವೆ. ಆದುದರಿಂದ ನಾನು ನಿರಾಪರಾಧಿ'' ಎಂದು ವಾದಿಸಿದನು. ''ಅಂತಃಪಟವನ್ನು ಹಿಡಿದು ಅಕ್ಷತೆ ಬಿದ್ದ ಬಳಿಕ ಅವಳ ಮದುವೆ ಆದಂತಾಗಲಿಲ್ಲವೆ?'' ಎಂದು ಎದುರು ಪಕ್ಷದವರು ಕೇಳಿದರು. ಅದಕ್ಕೆ ರಾಜಕುಮಾರನು ಅನೇಕ ಸ್ಮೃತಿವಾಕ್ಯ ಪ್ರಮಾಣಗಳನ್ನು ಉದಾಹರಿಸಿ ''ಸಖಾಸಪ್ತದೀಭವ'' ಎಂಬ ಮಂತ್ರೋಚ್ಚಾರಣದ ವಿಧಿ ಮುಗಿಯುವವರೆಗೆ ವಿವಾಹ ಪೂರ್ತಿಯಾಗುವುದಿಲ್ಲ. ನಾನು ಅದಕ್ಕಿಂತ ಮೊದಲೇ ಅವಳನ್ನು ಅಪಹರಿಸಿದ್ದೇನೆ. ಆಗ ಅವಳು ಯಾರ ಹೆಂಡತಿಯೂ ಆಗಿರಲಿಲ್ಲ. ಇನ್ನೂ ಕನ್ಯೆ ಇದ್ದಳು. ಕನ್ಯಾಹರಣವು ರಾಜಕುಮಾರರಿಗೆ ದೋಷವಲ್ಲ'' ಎಂದು ತನ್ನ ಪಕ್ಷವನ್ನು ಸಮರ್ಥಿಸಿದನು. ಆಗ ಮಹಾರಾಜನಿಗೆ ನಿರ್ಣಯ ಕೈಕೊಳ್ಳುವುದು ದುಸ್ತರವಾಯಿತು ಅವನು ಆಗ ವಶಿಷ್ಠರ ಮುಖವನ್ನು ನೋಡಿದನು. ಆದರೆ ಅವರು ಗಂಭೀರ ಮೌನ ಮುದ್ರಿತಮುಖರಾಗಿ ಕುಳಿತಿದ್ದರು.

ಅವರ ಭಾವಗರ್ಭಿತವಾದ ಮೌನಮುದ್ರೆಯನ್ನು ಕಂಡು ಮಹಾರಾಜನು ಅವರಿಗೆ ಸತ್ಯವ್ರತನ ವಾದ ಸಮ್ಮತವಿಲ್ಲವೆಂದು ತಿಳಿದುಕೊಂಡನು. ಹಾಗೂ ಉಕ್ಕಿಬರುತ್ತಲಿರುವ ತನ್ನ ಪುತ್ರವಾತ್ಸಲ್ಯವನ್ನು ಬದಿಗಿರಿಸಿ ಮನಸ್ಸನ್ನು ಕಲ್ಲುಮಾಡಿ ನ್ಯಾಯಶಾಸ್ತ್ರವನ್ನು ಓದತೊಡಗಿದನು. ಪ್ರಜಾ-ಪರಿವಾರ ಮಂತ್ರಿ ಮಂಡಲ, ಪೌರಗ್ರಾಮೀಣ ಜನರೆಲ್ಲ ನಿರ್ಣಯವನ್ನು ಕುತೂಹಲದಿಂದ ಆಲಿಸುತ್ತಿದ್ದರು. ''ತಂದೆಯಿಂದ ವಾಚಾ ದತ್ತಳಾಗಿ ಮಂತ್ರಾಕ್ಷತೆ ಬಿದ್ದುಹೋದ ಕನ್ಯೆಯನ್ನು ರಾಜಕುಮಾರನು ಅಪಹಾರ ಮಾಡಿದ್ದು ದಂಡಾರ್ಹವಾದ ಅಪರಾಧವಾಗಿದೆ. ಕಾರಣ ಅವನನ್ನು ರಾಜಧಾನಿಯನ್ನು ಬಿಟ್ಟು ಹೊರಗೆ ಹಾಕತಕ್ಕದ್ದು'' ಎಂದು ಘೋರಶಾಸನವನ್ನು ಓದಿದನು. ಇದನ್ನು ಕೇಳಿದ ಸತ್ಯವ್ರತನಿಗೆ ಸಿಡಿಲುಬಡಿದಂತಾಯಿತು. ಅವನಿಗೆ ಮುಂದೆ ರಾಜ್ಯಾಧಿಕಾರವೇ ತಪ್ಪಿದಂತಾಗಿತ್ತು. ಅವನು ಓಡುತ್ತ ಗಾಬರಿಯಾಗಿ ಮನೆಗೆಬಂದು ''ನೀವು ಇಷ್ಟು ಕಠೋರರಾಗಿ ನನ್ನನ್ನು ಊರು ಮನೆ ಬಿಟ್ಟು ಹೊರಗೆ ಹಾಕಿದರೆ ನಾನೆಲ್ಲಿಗೆ ಹೋಗಲಿ'' ಎಂದು ಗೋಳಿಟ್ಟನು. ಅದಕ್ಕೆ ಮಹಾರಾಜನು ಸಿಟ್ಟಿನಿಂದ ''ಹೊಲಗೇರಿಗೆ ಹೋಗು. ನಾನೇನು ಮಾಡಲಿ? ಇಂಥ ಕುಲಕಂಟಕನಾದ ಮಗನು ಎಲ್ಲಿದ್ದರೂ ಅಷ್ಟೇ'' ಎಂದು ಸಂಸಾರವೇ ಸಾಕಾಗಿ ಅರಣ್ಯಕ್ಕೆ ತಪಸ್ಸಿಗಾಗಿ ಹೊರಟು ಹೋದನು.

ಸತ್ಯವ್ರತನು ತಂದೆಯ ಅಪ್ಪಣೆಯಂತೆ ಅಯೋಧ್ಯೆಯ ಸಮೀಪ ಅರಣ್ಯದಲ್ಲಿ ಚಂಡಾಲಕೇರಿಯ ಹತ್ತಿರವೇ ಗುಡಿಸಲು ಒಂದನ್ನು ಕಟ್ಟಿಕೊಂಡು ಇರಹತ್ತಿದನು.

ಅದೇ ವೇಳೆಯಲ್ಲಿ ಆ ಅಯೋಧ್ಯಾರಾಜದಲ್ಲೆಲ್ಲ ಭಯಂಕರ ಬರಬಿದ್ದು ಜನರೆಲ್ಲ ಅನ್ನ ನೀರುಗಳಿಲ್ಲದೆ ಪಟ ಪಟ ಸಾಯಹತ್ತಿದರು. ಹಾದಿ ಬೀದಿಗಳಲ್ಲಿ ಹೆಣಗಳ ಹಾದಿಯನ್ನು ಹಾಸಿದಂತಾಗಿತ್ತು. ಎಲ್ಲಿ ನೋಡಿದಲ್ಲೆಲ್ಲ ಸಾಯುತ್ತಲಿರುವ ಜನ ದನಗಳ ನರಳಾಟ ಗೋಳಾಟ ಹೃದಯ ದ್ರಾವಕವಾಗಿದ್ದವು. ರಾಜನಿಲ್ಲದ ರಾಜಧಾನಿ ಒಂದು ಸ್ಮಶಾನದಂತೆ ಮೃತ ಹಾಗೂ ಜೀವನ್ಮೃತರ ಪ್ರೇತಪುರಿಯಾಗಿತ್ತು. ಆಗ ಅದೇ ಅಯೋಧ್ಯೆಯಲ್ಲಿ ಮಹರ್ಷಿ ವಿಶ್ವಾಮಿತ್ರರು ಹೆಂಡತಿ ಕೌಶಿಕಿಯನ್ನೂ ಮಕ್ಕಳನ್ನೂ ಅಯೋಧ್ಯೆಯಲ್ಲಿರಿಸಿ ಹನ್ನೆರಡು ವರುಷದ ದೀರ್ಘ ತಪೋನುಷ್ಠಾನಕ್ಕೆಂದು ಸಾಗರಾನೂಪಕ್ಕೆ ಹೋಗಿದ್ದರು. ಕೌಶಿಕಿಗೆ ಈ ಭೀಕರ ಬರಗಾಲದಲ್ಲಿ ಆ ಮಕ್ಕಳನ್ನು ರಕ್ಷಿಸುವುದು ಅಶಕ್ಯವಾಯಿತು. ಕಣ್ಣೆದುರೇ ತನ್ನ ಕರುಳಿನ ಬಳ್ಳಿಗಳಾದ ಕಂದಮ್ಮಗಳು 'ಅನ್ನ, ಅಮ್ಮಾ, ಅನ್ನ' ಎಂದು ಕಣ್ಣು ಮುಚ್ಚಿ ಗೋಣು ಚೆಲ್ಲುವ ದೃಶ್ಯ ಅವಳ ತಾಯ್ಗರುಳಿಗೆ ಕಿಚ್ಚಿನಿಟ್ಟಿತ್ತು. ಆಗ ಅವಳು ಮನಸ್ಸನ್ನು ಕಲ್ಲು ಮಾಡಿ ಎದ್ದಳು. ಎಲ್ಲ ಮಕ್ಕಳನ್ನು ಉಪವಾಸ ಕೊಲ್ಲುವುದಕ್ಕಿಂತ ಒಬ್ಬ ಮಗನನ್ನು ಮಾರಿ ಅದರಿಂದ ಉಳಿದೆರಡು ಮಕ್ಕಳನ್ನಾದರೂ ಬದುಕಿಸಿಕೊಳ್ಳಬೇಕೆಂದು ನಿರ್ಧರಿಸಿದಳು. ಯಾವ ಮಗುವನ್ನು ಮಾರುವುದು? ಪಂಚಪ್ರಾಣಗಳಲ್ಲಿ ಯಾವುದನ್ನು ಬಿಡುವದು! ಆ ಮಾತೃಹೃದಯಕ್ಕೆ ಈ ಸಮಸ್ಯೆ ಅಗ್ನಿಸ್ಪರ್ಶವನ್ನು ಮಾಡಿಸಿತ್ತು. ಮೂರೂ ಮಕ್ಕಳೂ ತೊಳೆದ ಮುತ್ತುಗಳಾಗಿದ್ದವು. ಯಾರನ್ನು ಮಾರಲೂ ಅವಳ ಕೈ ಎತ್ತಲಿಲ್ಲ. ಎಲ್ಲ ಮಕ್ಕಳನ್ನೂ ಎತ್ತಿ ಮತ್ತೊಮ್ಮೆ ಮುದ್ದಾಡಿದಳು. ಎಲ್ಲವೂ ಆನಂದ ಗ್ರಂಥಿಗಳೇ. ಎಲ್ಲವೂ ಮುದ್ದಿನ ಮಣಿಗಳೇ. ಎಲ್ಲವೂ ಹೃದಯ ಪಂಜರದ ಅರಗಿಣಿಗಳೇ. ಆದರೆ ಎಲ್ಲವೂ ಪ್ರೇತಪ್ರಾಯವಾಗಿ ಶವಾಕಾರವಾಗಿ ಬಿದ್ದಿದ್ದವು. ಅದರೊಳಗಿಂದ ಅವಳು ಕೊನೆಯದಾದ ಕೂಸೊಂದನ್ನು ಎತ್ತಿದಳು. ಎದೆಗೆ ಅಡ್ಡವಾಗಿ ಅರಿವೆಯಿಂದ ಬಿಗಿದು ಆ ಬಟ್ಟೆಯನ್ನು ಕೊರಳಿಗೆ ಕಟ್ಟಿಕೊಂಡು ಅಯೋಧ್ಯೆಯ ಬೀದಿಗೆ ಇಳಿದಳು.

ದಾರಿಗುಂಟ 'ಕೂಸು ಬೇಕೇ ಕೂಸು' ಎಂದು ಕೂಗತೊಡಗಿದಳು. ಹೀಗೆ ಒದರುವಾಗ ಕೊರಳಿಗೆ ಕಟ್ಟಿದ ಕೂಸು ಅವಳ ಹೃದಯವನ್ನು ಹಿಂಡುತ್ತಲಿತ್ತು; ಗಲ-ಅಂದರೆ ಕೊರಳು, ಅದಕ್ಕೆ ಕಟ್ಟಿ ಮಾರ ಹೊರಟಿದ್ದರಿಂದ ಅದಕ್ಕೆ ಗಾಲವ ಎಂಬ ಹೆಸರು ಬಂದಿತು. ಈ ಸಮಾಚಾರವನ್ನು ಕೇಳಿದ ಸತ್ಯವ್ರತನು ಅಲ್ಲಿಗೆ ಧಾವಿಸಿದ. ತನ್ನ ಪ್ರಾಣಪದಕವನ್ನೇ ಮಾರ ಹೊರಟ ಮಾತೃಹೃದಯದ ದುರವಸ್ಥೆಯಲ್ಲಿ ಕಂಡು ಅವನ ಎದೆ ಕರಗಿತ್ತು. ಕಣ್ಣು ತುಂಬಿ ಬಂದಿತ್ತು. ಅವನು ತಕ್ಷಣದಲ್ಲಿ ನೂರು ಆಕಳುಗಳನ್ನು ಕೊಟ್ಟು ಆ ಗಾಲವನನ್ನು ಬಿಡಿಸಿ ಆ ತಾಯಿಯ ಕೈಗೆ ಇರಿಸಿದನು. ಕೃತಜ್ಞತೆಯ ಕಂಬನಿದುಂಬಿದ ನೋಟದಿಂದ ಆ ಋಷಿಪತ್ನಿ ರಾಜಕುಮಾರನನ್ನು ಒಮ್ಮೆ ನೋಡಿದಳು. "ದೀರ್ಘಾಯುವಾಗು ಪುಣ್ಯವಂತ" ಎಂದು ಆಶೀರ್ವದಿಸಿ ಮಗುವನ್ನೂ ನೂರು ಹಸುಗಳನ್ನೂ ಪಡೆದುಕೊಂಡು ಮನೆಗೆ ಮರಳಿದಳು. ಸತ್ಯವ್ರತನು ತಂದೆಯ ಅಪ್ಪಣೆಯಂತೆ ಹನ್ನೆರಡು ವರುಷದ ಅಜ್ಞಾತವಾಸ ಹಾಗೂ ಅಜ್ಞಾತವೇಷದಲ್ಲಿ ಇದ್ದುದರಿಂದ ಅವಳಿಗೆ ಅವನು ಯಾರೆನ್ನುವುದು ಮಾತ್ರ ಗೊತ್ತಾಗಲಿಲ್ಲ. ತನ್ನ ಕೊನೆಯ ಮಗನಾದ ಗಾಲವನಿಗೆ ಪುನರ್ಜನ್ಮವನಿತ್ತುದಲ್ಲದೇ ನೂರಾರು ಹಸುಗಳನ್ನಿತ್ತು ತನ್ನ ಉಳಿದ ಮಕ್ಕಳನ್ನೂ ಬದುಕಿಸಿದ ಆ ಪುಣ್ಯಾತ್ಮನಿಗೆ ಪೂರ್ಣಾರೋಗ್ಯ ಪೂರ್ಣಾಯುಷ್ಯ ಪೂರ್ಣೈಶ್ವರ್ಯಗಳನ್ನು ಹಾರೈಸಿದಳು.

ಮುಂದಾದರೂ ಸತ್ಯವ್ರತನು ತಂದೆಯಿಲ್ಲದ ಆ ತಬ್ಬಲಿ ಮಕ್ಕಳು ಮತ್ತು ಪತಿವ್ರತೆಯಾದ ಆ ಋಷಿಪತ್ನಿ ಇವರಿಗೆ ಎಂದೂ ಉಪವಾಸ ಬೀಳುವ ಪ್ರಸಂಗಬಾರದಂತೆ ನೋಡಿಕೊಂಡನು.

ತಾನು ಅಜ್ಞಾತವಾಸದಲ್ಲಿದ್ದುದರಿಂದ ಸಾಕ್ಷಾತ್ತಾಗಿ ಬಂದು ಅವರಿಗೆ ಆಹಾರಪದಾರ್ಥಗಳನ್ನು ತಂದುಕೊಡುವುದು ಸಾಧ್ಯವಿಲ್ಲದಿದ್ದರೂ ಪ್ರತಿನಿತ್ಯವೂ ಅವರ ಊಟದ ಹೊತ್ತಿಗೆ ಸಾಕಷ್ಟು ಆಹಾರವು ಅವರಿಗೆ ಅನಾಯಾಸವಾಗಿ ಸಿಗುವಂತೆ ಏರ್ಪಾಡು ಮಾಡಿದನು. ವಿಶ್ವಾಮಿತ್ರನ ಕುಟುಂಬದವರು ವಾಸಮಾಡುವ ಮನೆಯ ಅಂಗಳದಲ್ಲಿ ಒಂದು ಗಿಡವಿದ್ದಿತು. ರಾಜಕುಮಾರ ಸತ್ಯವ್ರತನು ಬೆಳಗಾಗುವದರೊಳಗಾಗಿ ಯಾರಿಗೂ ಗೊತ್ತಾಗದಂತೆ ಬಂದು ಆ ಗಿಡದ ಟೊಂಗೆ ಹಾಗೂ ಹೊದರುಗಳಲ್ಲಿ ರುಚಿಕರವಾದ ಆಹಾರಪದಾರ್ಥಗಳನ್ನು ಗೌಪ್ಯವಾಗಿ ತಂದಿರಿಸಿಬಿಡುತ್ತಿದ್ದನು. ಹೀಗೆ ಹನ್ನೆರಡು ವರುಷಗಳವರೆಗೆ ವಿಶ್ವಾಮಿತ್ರ ಕುಟುಂಬಕ್ಕೆ ಇಚ್ಛಾಭೋಜನವನ್ನು ಒದಗಿಸಿ ಭಕ್ತಿಯಿಂದ ಸಂರಕ್ಷಿಸಿದನು.

ಈ ಸಂದರ್ಭಲ್ಲಿ ಅವನ ಕೈಯಿಂದ ಒಂದು ಅಚಾತುರ್ಯ ನಡೆಯಿತು. ಒಂದು ದಿನ ಅವನಿಗೆ ಎಷ್ಟು ಹುಡುಕಿದರೂ ಆಹಾರ ಸಿಕ್ಕಲಿಲ್ಲ. ಹಸಿವೆಯ ವಿಪರೀತ ಬಾಧೆಯಿಂದ ಕಂಗೆಟ್ಟು ಅವನು ಕೊನೆಗೆ ಅಡವಿಯಲ್ಲಿ ಮೇಯಬಂದ ಒಂದು ಆಕಳಿನ ಕರುವನ್ನು ಕೊಂದು ತಿಂದನು. ಮತ್ತು ಅದರ ಮಾಂಸದಿಂದ ಭಕ್ಷ್ಯಗಳನ್ನು ಮಾಡಿ ವಿಶ್ವಾಮಿತ್ರಕುಮಾರರೂ ಅದನ್ನು ತಿನ್ನುವಂತೆ ಮಾಡಿ ನೀಡಿದನು. ಅದು ವಶಿಷ್ಠರ ಆಕಳ ಕರುವೇ ಆಗಿತ್ತು. ಆಗ ವಶಿಷ್ಠರಿಗೆ ಅನಿವಾರ್ಯವಾದ ಕೋಪ ಬಂದು ಬಿಟ್ಟಿತು. ಅವರು ಸತ್ಯವ್ರತನು ಮಾಡಿದ ಮೊದಲನೇ ಶಂಕು-ಪಾಪವಾದ ಪರಸ್ತ್ರೀ ಅಪಹಾರವನ್ನು ಕ್ಷಮಿಸಿಬಿಟ್ಟಿದ್ದರು. ಅದು ಅಪರಾಧವಾಗಿದ್ದರೂ ಅವರ ದೃಷ್ಟಿಯಲ್ಲಿ ಅಕ್ಷಮ್ಯವಾಗಿದ್ದಿಲ್ಲ. ರಾಜಕುಮಾರನಿಗೆ ಈಗಾದ ಶಿಕ್ಷೆ ಸಾಕು. ಇನ್ನು ಮುಂದೆ ಅವನನ್ನೆ ಸಿಂಹಾಸನದ ಮೇಲೆ ಪಟ್ಟಾಭಿಷೇಕ ಮಾಡಬೇಕೆಂದು ಅವರು ಮನಸಾ ಸಂಕಲ್ಪಿಸಿದರು. ಆದರೆ ರಾಜಕುಮಾರನಿಗೆ ಅವರ ಈ ಸದಾಶಯವು ತಿಳಿಯದೇ ಅವರ ಮೇಲೆ ಸಿಟ್ಟಾಗಿದ್ದನು. ಅಂಥ ಬ್ರಹ್ಮರ್ಷಿಗಳ ಮೇಲೆ ರಾಜಕುಮಾರ ಕೋಪಗೊಂಡು ಗುರುದ್ರೋಹ ಮಾಡಿದ್ದರಿಂದಲೇ ಅವನ ರಾಜ್ಯದಲ್ಲಿ ಹನ್ನೆರಡು ವರುಷದ ದೀರ್ಘದುಷ್ಕಾಲವಾಗಿತ್ತು.

ಬರಗಾಲ ಮುಗಿಯುವಷ್ಟರಲ್ಲಿ ಇತ್ತ ವಿಶ್ವಾಮಿತ್ರರ ದ್ವಾದಶ ವಾರ್ಷಿಕವಾದ ತಪೋನುಷ್ಠಾನವು ಪರಿಸಮಾಪ್ತವಾಯಿತು. ಅವರು ಊರಿಗೆ ಬರುವಾಗ ದಾರಿಯಲ್ಲಿ ಅಯೋಧ್ಯೆಯ ಭೀಕರ ಬರಗಾಲದ ಸಮಾಚಾರವನ್ನು ಕೇಳಿ ಗಾಬರಿಯಾದರು. ಅಲ್ಲಿದ್ದ ತಮ್ಮ ಹೆಂಡತಿ ಮಕ್ಕಳ ಪರಿಸ್ಥಿತಿ ಏನಾಗಿರಬಹುದು? ಅನ್ನ ನೀರುಗಳಿಲ್ಲದೇ ಅವರೆಲ್ಲ ಸತ್ತು ಬರಕ್ಕೆ ಬಲಿಯಾಗಿರಲಿಕ್ಕಿಲ್ಲವಷ್ಟೆ? ಅವರ ಎದೆ ಹೊಡೆದು ಕೊಳ್ಳಹತ್ತಿತ್ತು. ಆತುರದಿಂದ ಅಯೋಧ್ಯೆಗೆ ಬಂದು ತಮ್ಮ ಆಶ್ರಮವನ್ನು ಹೊಕ್ಕರು. ಎಲ್ಲ ಮಕ್ಕಳೂ ಆನಂದದಿಂದ ಬಂದು ಬಾಗಿ ನಮಸ್ಕರಿಸಿದರು. ಅಂಥ ಬರಗಾಲದಲ್ಲಿಯೂ ಮೈಕೈ ತುಂಬಿಕೊಂಡು ಪೀವರಾಂಗರಾಗಿರುವ ತನ್ನ ಪುತ್ರ ಪರಿವಾರವನ್ನು ಕಂಡು ಅವರ ಹೃದಯ ಸಂತಸದಿಂದ ನಲಿಯಿತು. ರಾಜಕುಮಾರ ಸತ್ಯವ್ರತನೇ ಇವರೆಲ್ಲರ ಜೀವಧಾರಣ ಹಾಗೂ ಕುಟುಂಬ ಪೋಷಣಕ್ಕೆ ಕಾರಣ ಎಂದು ತಿಳಿದು ಬಂದಾಗ ಆ ಬ್ರಹ್ಮರ್ಷಿಯ ಆನಂದ ಬಾಷ್ಪಗಳು ಅವನಿಗೆ ಸರ್ವೈಶ್ವರ್ಯವನ್ನು ಹಾರೈಸಿದ್ದವು. ಅವರ ತಪಃಫಲವೆಲ್ಲ ಅವನ ಉತ್ಕರ್ಷಕ್ಕಾಗಿ ಕಾದು ನಿಂತಿತ್ತು. ಅವನ ಅಖಂಡ ಶುಶ್ರೂಷಾ ಹಾಗೂ ಗುರುಭಕ್ತಿಗಳಿಂದ ಪ್ರೀತಿಪ್ರಸನ್ನರಾದ ಅವರು ತಮ್ಮ ಪುಣ್ಯಪ್ರಭಾವದಿಂದ ಅವನಿಗಾಗಿ ಬೇಕೆಂದರೆ ಅವರ ಅರಮನೆಯ ಅಂಗಳದಲ್ಲಿಯೇ ಅಮರಾವತಿಯನ್ನು ಇಳಿಸಲೂ ಸಿದ್ಧರಾಗಿದ್ದರು.

ಆದರೆ ವಶಿಷ್ಠರು ಮಾತ್ರ ಅವನು ಮೂರು ತಪ್ಪುಗಳನ್ನು ಮಾಡಿದ್ದರಿಂದ ತ್ರಿಶಂಕು ಎಂದು ಅವನನ್ನು ಕರೆದರು. ಅವನ ಮೊದಲಿನ ತಪ್ಪಾದ ಪರಕನ್ಯಾಪಹಾರವನ್ನು ಕ್ಷಮಿಸಿದ್ದರೂ ಎರಡನೆಯದಾದ ಗೋಹತ್ಯೆ ಹಾಗೂ ಮೂರನೆಯದಾದ ಮಾಂಸಭಕ್ಷಣ ಮೊದಲಾದ ಅರಾಧಗಳು ಮಾತ್ರ ಅಕ್ಷಮ್ಯವೆಂದು ಬಗೆದು ಅವರು ಅನನ್ನು ಉಪೇಕ್ಷೆ ಮಾಡಿ ಬಿಟ್ಟುಬಿಟ್ಟಿದ್ದರು. ಹೀಗೆ ''ತ್ರಿಶಂಕು'' ಎಂದು ಜರೆದು ವಶಿಷ್ಠ ವಾಶಿಷ್ಠರಿಂದ ಪರಿತ್ಯಕ್ತನಾದ ಆ ರಾಜಕುಮಾರನನ್ನು ವಿಶ್ವಾಮಿತ್ರರು ಊಗಲ್ಲಿ ಕರೆದುಕೊಂಡು ಬಂದು ಅಯೋಧ್ಯಾ ಸಾಮ್ರಾಜ್ಯದ ಸಿಂಹಾಸನದಮೇಲೆ ಕೂಡಿಸಿ ಪಟ್ಟಾಭಿಷೇಕಗೈದರು. ಹಾಗೂ ಹನ್ನೆರಡು ವರುಷಗಳವರೆಗೆ ತಮ್ಮ ಕುಟುಂಬವನ್ನು ಹಿಡಿದು ಪೋಷಿಸಿದ ಅವನ ಉಪಕಾರವನ್ನು ನೆನೆದು ಅವನಿಗೆ ಬೇಕಾದ ವರಗಳನ್ನು ಬೇಡು ಎಂದು ಹೇಳಿದರು. ಆಗ ಆ ತ್ರಿಶಂಕುವು ತಾನು ಇದೇ ಮನುಷ್ಯ ದೇಹದಿಂದ ಸಾಯದೇ ಸ್ವರ್ಗಕ್ಕೆ ಹೋಗಬೇಕೆಂದು ಬೇಡಿಕೊಂಡರು. ಅದಕ್ಕೆ 'ಆಗಲಿ' ಎಂದು ಕೌಶಿಕರು ಮಹಾಯಜ್ಞವೊಂದನ್ನು ಅವನ ಕಡೆಯಿಂದ ಮಾಡಿಸಿ ಅವನನ್ನು ಸಶರೀರವಾಗಿಯೇ ಸ್ವರ್ಗಕ್ಕೆ ಕಳಿಸಿದರು. ವಶಿಷ್ಠಾದಿ ಮಹಾಮುನಿಗಳೂ, ಹಾಗೂ ಅಯೋಧ್ಯೆಯ ನಾಗಿರಕರೂ, ಮೇಲೆ ಎಲ್ಲ ದೇವಾಧಿದೇವತೆಗಳೂ ನೋಡ ನೋಡುತ್ತಿರುವಾಗಲೇ ತ್ರಿಶಂಕುವು ಬ್ರಹ್ಮರ್ಷಿಗಳ ಪುಣ್ಯಪ್ರತಾಪದಿಂದ ಸಾಯದೇ ಶರೀರ ಸಹಿತವಾಗಿಯೇ ಸ್ವರ್ಗವನ್ನು ಸೇರಿ ದಿವ್ಯ ಭೋಗಭಾಗಿಯಾದನು.

ಅವನಿಗೆ ಕೇಕಯ ವಂಶದ ಸತ್ಯರತಾ ಎಂಬ ಪತ್ನಿಯಿದ್ದಳು. ಅವರಿಬ್ಬರ ಮಗನೇ ಸತ್ಯಸಂಧನಾದ ಹರಿಶ್ಚಂದ್ರ ರಾಜರ್ಷಿ, ತ್ರೈಶಂಕವನೆಂದು ಸುಪ್ರಸಿದ್ಧನಾದ ಅವನು ರೂಜಸೂಯಯಾಗವನ್ನು ಮಾಡಿ ಸಮ್ರಾಟ್ ಎಂದು ಪ್ರಸಿದ್ಧನಾದನು. ಅವನ ಮಗನಾದ ರೋಹಿತನು ರೋಹಿತಪುರವೆಂಬ ಪಟ್ಟಣವನ್ನು ಕಟ್ಟಿಸಿ ಅದನ್ನು ಬ್ರಾಹ್ಮಣರಿಗೆ ದಾನವಾಗಿತ್ತು ಅರಣ್ಯಕ್ಕೆ ತಪಸ್ಸಿಗೆ ಹೋದನು. ರೋಹಿತನ ಮೊಮ್ಮಗನಾದ ಚಂಚುಹಾರೀತನಿಗೆ ವಿಜಯ, ಸುದೇವ ಎಂಬ ಇಬ್ಬರು ಮಕ್ಕಳಾದರು. ಎಲ್ಲ ಕ್ಷತ್ರಿಯ ರಾಜರನ್ನು ಗೆದ್ದು ಬಹು ಪರಾಕ್ರಮಶಾಲಿಯೆಂದು ಪ್ರಖ್ಯಾತನಾದ ವಿಜಯನಿಗೆ ಮರುಕ ಎಂಬ ಮಗನಿದ್ದನು. ಅವನ ಮಗನಾದ ವ್ಯಕನ ಹೊಟ್ಟೆಯಿಂದ ಹುಟ್ಟಿದ ಬಾಹುರಾಜನು ಮಾತ್ರ ಧಾರ್ಮಿಕನಿರಲಿಲ್ಲ. ಅಧರ್ಮಾಭಿನಿವೇಶವುಳ್ಳ ಬಾಹುವಿನ ರಾಜ್ಯವನ್ನು ಶಕರೂ ಯವನರೂ ಕಾಂಭೋಜರೂ ಎಲ್ಲರೂ ಹೈಹಯ ತಾಲಜಂಘರೊಡನೆ ಸೇರಿ ಅಪಹರಿಸಿದರು. ರಾಜ್ಯಭ್ರಷ್ಟನಾಗಿ ಹೆಂಡಿರು ಮಕ್ಕಳೊಡನೆ ಅಡವಿಯನ್ನು ಸೇರಿದ ಬಾಹುವು ದುಃಖದಿಂದ ವನದಲ್ಲಿಯೇ ಪ್ರಾಣಬಿಟ್ಟನು.

ಆಗ ಅವನ ಹೆಂಡತಿಯಾದ ಯಾದವಿಯು ಗರ್ಭಿಣಿಯಿದ್ದರೂ ಪತಿಯ ವಿರಹವನ್ನು ತಾಳಲಾರದೇ ದುಃಖಾಗ್ನಿಯಿಂದ ದಗ್ಧಳಾಗಿ ಚಿತೆಯನ್ನು ಏರಿದಳು. ಆಗ ಅದೇ ವನದಲ್ಲಿರುವ ಮಹರ್ಷಿ ಔರ್ವರು ಬಂದು ''ತಾಯಿ! ಗರ್ಭಿಣಿಯರಾದ ಸ್ತ್ರೀಯರು ಸಹಗಮನ ಮಾಡಬಾರದು. ನಿನ್ನ ಹೊಟ್ಟೆಯಿಂದ ಚಕ್ರವರ್ತಿಯಾಗಿ ನಿಮ್ಮ ವಂಶವನ್ನೆಲ್ಲ ಬೆಳಗುವ ಮಹಾತೇಜಸ್ವಿಯಾದ ವೀರಪುರುಷನು ಅವತರಿಸಲಿರುವನು. ದಯಮಾಡಿ ಚಿತೆಯನ್ನು ಬಿಟ್ಟು ಕೆಳಗೆ ಇಳಿ'' ಎಂದು ಹೇಳಿದರು.

ಆ ಮಹರ್ಷಿಗಳ ಮಾತನ್ನು ಕೇಳಿ ಪತಿಕುಲದ ದೀಪಾಂಕುರವನ್ನು ನಂದಾದೀಪವಾಗಿ ಬೆಳಗಿಸುವ ಉದ್ದೇಶದಿಂದ ಅವಳು ಚಿತೆಯಿಂದ ಕೆಳಗಿಳಿದಳು. ಆದರೆ ಮಕ್ಕಳ ಸಲುವಾಗಿ

ಪ್ರಾಣಧಾರಣೆ ಮಾಡಿಕೊಂಡು ಹೇಗೋ ಬದುಕಿರುವ ಆ ಸಾಧ್ವಿಯಾದ ಯಾದವಿಗೆ ಅವಳ ಸವತಿಯೋರ್ವಳು ಭಯಂಕರವಾದ ವಿಷವನ್ನು ಊಡಿಸಿಬಿಟ್ಟಳು. ಉಲ್ಬಣವಾದ ವಿಷದ ಬಾಧೆಯಿಂದ ಸಂಕಟಪಡುತ್ತ ಯಾದವಿಯು ಔರ್ವರ ಆಶ್ರಮಕ್ಕೆ ಬಂದು ಗೋಳಿಟ್ಟಳು. ಅದನ್ನು ನೋಡಿ ಎದೆ ಕರಗಿದ ಮಹರ್ಷಿಗಳು ತಮ್ಮ ತಪಃಸಾಮರ್ಥ್ಯದಿಂದ ಕೂಸಿಗಾಗಲಿ ಅವಳಿಗಾಗಿ ಆ ವಿಷದಿಂದ ಏನೂ ಬಾಧೆ ತಟ್ಟದಂತೆ ನೋಡಿಕೊಂಡರು. ಹಾಗೂ ಅವಳನ್ನು ತಮ್ಮ ಪುಣ್ಯಾಶ್ರಮದಲ್ಲಿಯೇ ಇಟ್ಟುಕೊಂಡು ಮಗು ಹುಟ್ಟಿದ ಬಳಿಕ ಅದಕ್ಕೆ ರಾಜವಂಶಕ್ಕೆ ಉಚಿತವಾದ ಕ್ಷತ್ರಿಯ ಸಂಸ್ಕಾರಗಳನ್ನೆಲ್ಲ ಮಾಡಿದರು. ಗರ-ಎಂದರೆ ವಿಷ, ಆ ಗರದಿಂದ ಸಹಿತನಾಗಿಯೇ ಹುಟ್ಟಿದುದರಿಂದ ಅವನಿಗೆ ಸಗರ ಎಂದು ಹೆಸರು ಬಂದಿತು. ಆ ಸಗರನು ತುಸು ದೊಡ್ಡವನಾದ ಬಳಿಕ ಸ್ವತಃ ಔರ್ವ ಮಹರ್ಷಿಗಳೇ ಅವನಿಗೆ ಶಸ್ತ್ರ ಶಾಸ್ತ್ರ ಎರಡೂ ವಿದ್ಯೆಗಳನ್ನು ಹೇಳಿಕೊಟ್ಟು ವೇದವಿದ್ಯಾ, ಧನುರ್ವಿದ್ಯಾ ಎರಡರಲ್ಲಿಯೂ ಅವನು ಪಾರಂಗತನಾಗುವಂತೆ ಮಾಡಿದರು.

ಮುಂದೆ ಔರ್ವರ ಅನುಗ್ರಹದಿಂದ ಪ್ರಬಲ ಪ್ರತಾಪಶಾಲಿಯಾದ ಆ ಸಗರನು ತಮ್ಮ ತಂದೆಯ ರಾಜ್ಯವನ್ನು ಅಪಹರಿಸಿ ಹೈಹಯತಾಲಜಂಘರನ್ನು ಮತ್ತು ಅವರಿಗೆ ಸಹಾಯಕರಾಗಿ ನಿಂತುಕೊಂಡಿರುವ ಶಕ ಯವನ ಕಾಂಭೋಜ ಪಲ್ಲವ ಪಾರದರನ್ನೂ ಹೊಡೆದೋಡಿಸಿ ತನ್ನ ರಾಜಧಾನಿ ಹಾಗೂ ರಾಜ್ಯಗಳನ್ನೂ ತಿರುಗಿ ಸಂಪಾದನೆ ಮಾಡಿದನು. ಮತ್ತು ಅವರೆಲ್ಲರೂ ತನ್ನ ತಂದೆಗೆ ಮಾಡಿದ ಅಪಕಾರದ ಸೇಡನ್ನು ತೀರಿಸಲಿಕ್ಕೆಂದು ಅವರನ್ನು ಕಂಡಲ್ಲೆಲ್ಲ ಕೊಲ್ಲಹತ್ತಿದನು. ದಿಗ್ದೇಶಗಳಲ್ಲಿ ಓಡಿ ಹೋದ ಶಕ ಯವನರನ್ನು ಬೆನ್ನಟ್ಟಿ ಇದ್ದಲ್ಲಿಂದ ಎಳೆದು ತಂದು ಸಂಹಾರಸತ್ರವನ್ನು ಪ್ರಾರಂಭಿಸಿದನು. ಅವನ ಈ ಘೋರ ವ್ಯಾಪಾರಗಳಿಂದ ಸಂತ್ರಸ್ತರಾದ ಅವರೆಲ್ಲರೂ ವಶಿಷ್ಠರಿಗೆ ಶರಣು ಹೋಗಿ ಸಗರನಿಂದ ತಮ್ಮ ವಂಶ ಧ್ವಂಸವನ್ನು ನಿಲ್ಲಿಸಲಿಕ್ಕೆ ಬೇಡಿಕೊಂಡರು. ಆಗ ವಶಿಷ್ಠರು ಸೇಡಿನ ಈ ಪ್ರತಿಶೋಧದ ಅತಿಹಿಂಸಾವ್ಯಾಪಾರದಿಂದ ಅವನನ್ನು ಪರಾವರ್ತನ ಗೊಳಿಸಿದರು. ಆಗ ಸಗರನು ಆ ಎಲ್ಲ ಶಕ, ಯವನ, ಕಾಂಭೋಜ ಮೊದಲಾದವರನ್ನು ಕ್ಷತ್ರಿಯ ಧರ್ಮದಿಂದ ದೂರ ಮಾಡಿದನು. ಅಂದಿನಿಂದ ಅವರೆಲ್ಲರೂ ವೇದಾಧಿಕಾರ ವರ್ಜಿತರಾಗಿ ವರ್ಣಬಾಹ್ಯ ರಾದರು. ಶಕರಿಗೆ ಅರ್ಧ ಮುಂಡನವನ್ನೂ ಯವನ ಕಾಂಭೋಜರಿಗೆ ಅರ್ಧಕ್ಷೌರವನ್ನೂ ಪಾರದರಿಗೆ ಬಿಡಿಗೂದಲಗಳನ್ನೂ ಪಹ್ಲವನರಿಗೆ ಹಿಡಿಮೀಸೆಗಳನ್ನೂ ಬಿಡಿಸಿದ.

ಆ ಮೇಲೆ ಸಗರನು ಸಮಗ್ರ ಭೂಖಂಡವನ್ನೆಲ್ಲ ಗೆದ್ದು ಅಶ್ವಮೇಧವನ್ನು ಆರಂಭಿಸಿದನು. ಅವನು ಯಜ್ಞ ದೀಕ್ಷಿತನಾಗಿ ಕುಳಿತಾಗ ಅವನ ಅರವತ್ತು ಸಹಸ್ರಜನ ಮಕ್ಕಳು ಅಶ್ವಮೇಧದ ಕುದುರೆಯನ್ನು ಕಾಯಲು ಅದರ ಬೆಂಗಾವಲಿಗರಾಗಿ ಹೋದರು. ಸಗರ ಚಕ್ರವರ್ತಿಯ ಅಶ್ವಮೇಧದ ಸಂಭ್ರಮವನ್ನು ನೋಡಿ ಈರ್ಷೆಗೊಂಡ ದೇವರಾಜನು ಅವರೆಲ್ಲರ ಕಣ್ಣು ತಪ್ಪಿಸಿ ಆ ಯಜ್ಞಾಶ್ವವನ್ನು ಅಪಹರಿಸಿ ಪಾತಾಳದಲ್ಲಿ ಕಪಿಲ ಋಷಿಯ ಆಶ್ರಮದಲ್ಲಿ ಬಿಟ್ಟುಬಂದನು. ಆಗ ಸಗರ ರಾಜಕುಮಾರರು ಅಖಂಡ ಭೂಖಂಡವನ್ನು ಹುಡುಕಿದರೂ ಕುದುರೆಯು ಸಿಕ್ಕದಾದಾಗ ಪೂರ್ವ ಸಾಗರದ ದಂಡೆಯ ಹತ್ತಿರ ನೆಲವನ್ನು ಅಗಿದು ಪಾತಾಳಕ್ಕೆ ಇಳಿದರು. ಅಲ್ಲಿ ಹುಡುಕುತ್ತಿರುವಾಗ ತಪಃಸಮಾಧಿಮಗ್ನರಾದ ಕಪಿಲ ಮಹರ್ಷಿಗಳ ಹಿಂದೆಯೇ ಮೇಯುತ್ತಲಿರುವ ಕುದುರೆಯನ್ನು ಕಂಡರು. ಈ ಕಪಿಲನೇ ಕುದುರೆಯನ್ನು ಕಳುವು ಮಾಡಿ ಕಣ್ಣು ಮುಚ್ಚಿಕೊಂಡು ಕುಳಿತಿರುವನೆಂದು ಅವರ ಮೇಲೆ

ಅಪಚಾರವೆಸಲಿಗರುವ ಆ ಎಲ್ಲ ಸಗರ ರಾಜಕುಮಾರರನ್ನು ಕ್ರುದ್ಧರಾದ ಕಪಿಲರು ಕಣ್ಣು ಬಿಟ್ಟು ನೋಡಿದರು. ನಾರಾಯಣಾಂಶಸಂಭೂತರಾದ ಅವರು ಸಿಟ್ಟಿನಿಂದ ತೆರೆದ ಕಣ್ಣಿನ ಕಿಡಿ ಪ್ರಜ್ವಲಿತ ಪ್ರಳಯಾಗ್ನಿಯಾಗಿ ಅರವತ್ತು ಸಾವಿರ ಸಗರಕುಮಾರರೆಲ್ಲರನ್ನೂ ಕ್ಷಣಾರ್ಧದಲ್ಲಿ ಸುಟ್ಟು ಬೂದಿಮಾಡಿತು. ಅದರಲ್ಲಿ ಉಳಿದವರು ಬರ್ಹಕೇತು, ಸುಕೇತು, ಧರ್ಮರಥ, ಪಂಚಜನ ಈ ನಾಲ್ಕು ಜನರು ಮಾತ್ರ. ಉಳಿದ ಈ ನಾಲ್ವರೂ ಮತ್ತು ಸಗರಮಹಾರಾಜನೂ ಭಯಭಕ್ತಿಗಳಿಂದ ಭಗವಂತನನ್ನು ಬೇಡಿಕೊಂಡಾಗ ಆ ಕಪಿಲದೇವನು ಶಾಂತನಾಗಿ ಅವರನ್ನು ಕ್ಷಮಿಸಿದನು. ಹಾಗೂ ವಿಷ್ಣುಪಾದೋದಕವಾದ ಗಂಗೆಯಿಂದ ಇವರೆಲ್ಲರ ಉದ್ಧಾರವಾಗುವುದೆಂದು ಹೇಳಿ ಇದ್ದ ನಾಲ್ಕು ಜನರಿಗೆ ಆಯುರಾರೋಗ್ಯಗಳನ್ನಿತ್ತು, ಸಮುದ್ರನನ್ನು ಸಗರನಿಗೆ ಮಗನನ್ನಾಗಿ ಮಾಡಿದನು. ಅದಕ್ಕಾಗಿ ಸಮುದ್ರಕ್ಕೆ ಸಾಗರ-ಸಗರನ ಮಗ ಎಂಬ ಹೆಸರು ಬಂದಿತು. ಸಮುದ್ರನಾಥನು ಆ ಕುದುರೆಯನ್ನು ಪಾತಾಳದಿಂದ ತಂದು ಸಗರ ರಾಜನಿಗೆ ಒಪ್ಪಿಸಿ ಮೇಲೆ ತನ್ನಲ್ಲಿರುವ ಅನರ್ಘ್ಯವಾದ ಮುತ್ತುರತ್ನಗಳನ್ನೆಲ್ಲ ಮುಂದೆ ತಂದು ಸುರವಿದನು. ಅದರಿಂದ ಸಗರನು ನೂರು ಅಶ್ವಮೇಧಯಾಗಗಳನ್ನು ಮಾಡಿ ಪುಣ್ಯರಾಶಿಯನ್ನು ಪಡೆದನು. ಸಗರನಿಗೆ ಅರವತ್ತು ಸಾವಿರ ಮಕ್ಕಳು ಹೇಗಾದರು ಎಂಬ ಜನಮೇಜಯನ ಪ್ರಶ್ನೆಗೆ ವೈಶಂಪಾಯನರು ಹೀಗೆ ಉತ್ತರಿಸುತ್ತಾರೆ.

## ''ಅರವತ್ತು ಸಾವಿರ ಮಕ್ಕಳಾದರೆ ಸಾಕೆ?''

**ವೈಶಂಪಾಯನ:-** ಕೇಶಿ* ನೀ ಈಲಿನೀ ಸಗರರಾಜನ ಇಬ್ಬರು ಹೆಂಡಂದಿರಿಗೆ ಔರ್ವ ಮುನಿಗಳು ಎರಡು ವರಗಳನ್ನು ಕೊಟ್ಟು ''ಒಂದರಿಂದ ಅರವತ್ತು ಸಾವಿರ ಪುತ್ರರೂ, ಇನ್ನೊಂದರಿಂದ ವಂಶವರ್ಧನಕನಾದ ಒಬ್ಬನೇ ಮಗನೂ ಆಗುವರು. ನಿಮಗೆ ಬೇಕಾದುದನ್ನು ತೆಗೆದುಕೊಳ್ಳಬಹುದೆಂದು'' ಹೇಳಿದರು. ಲೋಭಿಯಾದ ಈಲಿನಿಯು ತನಗೇ ಅರವತ್ತು ಸಹಸ್ರ ಮಕ್ಕಳಾಗಲೆಂದು ಬೇಡಿಕೊಂಡಳು. ಅತ್ಯಂತ ಆಕರ್ಷಕವಾದ ಅಂಗಕಾಂತಿಯಿಂದ ಕಂಗೊಳಿಸುವ ಗುಣಶೀಲವತಿಯಾದ ಕೇಶಿನಿಯು ಮುತ್ತಿನಂಥ ಒಬ್ಬ ಮಗನಾದರೂ ಸಾಕೆಂದು ಕೇಳಿಕೊಂಡಳು. ಅದರಂತೆ ಅವಳು ಪಂಚಜನನೆಂಬ ಶಕ್ತಿಶಾಲಿ ಯಾದ ಸತ್ಪುತ್ರನನ್ನು ಹೆತ್ತಳು. ಅರಿಷ್ಟನೇಮಿಯ ಮಗಳಾದ ಈಲಿನಿಯು ಒಂದು ಬೀಜ ತುಂಬಿದ ಹಾಲ್ಗುಂಬಳ ಕಾಯಿಯನ್ನು ಹೆತ್ತಳು. ಅದರಲ್ಲಿ ಎಳ್ಳು ಕಾಳಿನಾಕಾರದ ಅರವತ್ತು ಸಹಸ್ರ ಗರ್ಭಾಣುಗಳಿದ್ದವು. ರಾಜನು ಅವನ್ನೆಲ್ಲ ತುಪ್ಪತುಂಬಿದ ಕೊಡಗಳಲ್ಲಿ ಇಡಿಸಿ ದಾಸಿಯರಿಂದ ಪೋಷಿಸಿದನು. ಅವರೇ ಅರವತ್ತು ಸಹಸ್ರ ಸಗರ ಸಂತರೆಂದು ಪ್ರಸಿದ್ಧರಾದರು. ಪಂಚಜನನಿಗೆ ಅಸಮಂಜಸ ಎಂದೂ ಹೆಸರಿದ್ದಿತು. ಈ ಪಂಚಜನನಿಗೆ ಅಂಶುಮಾನ್, ಅವನಿಂದ ದಿಲೀಪನು ಜನಿಸಿದನು. ಖಟ್ವಾಂಗ ಎಂದೂ ಅವನನ್ನು ಕರೆಯುವರು. ಖಟ್ವಾಂಗನು ಸ್ವರ್ಗದಿಂದ ಬಂದಕೂಡಲೇ ತನ್ನ ಆಯುಷ್ಯ ಮುಹೂರ್ತಮಾತ್ರ ಉಳಿದಿದೆ ಎಂದು ತಿಳಿದು ಅತ್ಯಂತಿಕ ಭಕ್ತಿಯಿಂದ ಭಗವಂತನನ್ನು ಧ್ಯಾನಮಾಡಿ ಅವನ ತದೇಕತಾನಧ್ಯಾನಯೋಗದ ಬಲದಿಂದ ಅಷ್ಟು ಅತ್ಯಲ್ಪಕಾಲದಲ್ಲಿಯೇ ಮೋಕ್ಷವನ್ನು ಪಡೆದನು. ಆ ಖಟ್ವಾಂಗನಿಗೆ ಭಗೀರಥನೆಂಬ ದೀರ್ಘ ಸಾಹಸೈಕರಸನಾದ ಮಗನು ಹುಟ್ಟಿದನು. ಇವನು ಗಂಗೆಯನ್ನು ಸ್ವರ್ಗದಿಂದ

---

* ಮತ್ಸ್ಯಪುರಾಣದಲ್ಲಿ ಇವರ ಹೆಸರನ್ನು ಭಾನುಮತಿ ಪ್ರಭಾ ಎಂದು ಕೊಟ್ಟಿದ್ದಾರೆ.

ಭೂಮಿಗೆ ಕರೆತಂದು ಪಾತಾಲ ಪ್ರದೇಶಕ್ಕೆ ವೈಯ್ದು ಕಪಿಲರ ಕೋಪಾಗ್ನಿಯಿಂದ ಬೂದಿಯಾಗಿ ಬಿದ್ದ ಅರವತ್ತು ಸಹಸ್ರ ಸಗರಕುಮಾರರನ್ನು ಉದ್ಧರಿಸಿದನು. ಭಗೀರಥನ ಹಿಂದೆ ಹೇಳಿದಂತೆ ಹರಿದು ಬಂದು ಮಗಲಾಗಿ ಮೂರು ಲೋಕಗಳನ್ನೂ ಪಾವನ ಗೈದುದರಿಂದ ಆ ಸುರರ ಸರಿತೆಗೆ ಭಾಗೀರಥಿ ಎಂದು ಹೆಸರು ಬಂದಿತು.

ಈ ಭಗೀರಥನ ವಂಶದಲ್ಲಿ ಮುಂದೆ ಪುತ್ರಪರಂಪರೆಯಿಂದ ಶ್ರುತ, ನಾಭಾಗ, ಅಂಬರೀಷ, ಅಯುತಾಜಿತ್, ಲೆತ್ತದಾಟದಲ್ಲಿ ಕುಶಲನಾದ ಋತುಪರ್ಣ, ಆತಪರ್ಣ, ಸುದಾಸ, ಕಲ್ಮಾಷಪಾದ, ಸರ್ವಕರ್ಮ, ಅನರಣ್ಯ, ನಿಘ್ನ, ಅನಮಿತ್ರ ರಘು, ದುಲಿಜಹ, ದಿಲೀಪ (ಎರಡನೆಯವ) ರಘುರಾಜ, ಅದರಾಜ, ದಶರಥ, ಶ್ರೀರಾಮ, ಕುಶ, ಅತಿಥಿ, ನಿಷಧ, ನಲ, ನಭ ಪುಂಡಲೀಕ, ಪ್ರೇಮಧನ್ವ, ದೇವಾನೀಕ, ಅಹೀಗು, ಸಂಧನ್ವ, ಅನಲ, ಉಕ್ಥ, ವಜ್ರನಾಭ, ಶಂಖ, ಧ್ಯುಷಿತಾಶ್ವ, ಪುಷ್ಪ, ಅರ್ಥಸಿದ್ಧಿ, ಅನಲ, ಸುದರ್ಶನ, ಅಗ್ನಿವರ್ಣ, ಶೀಘ್ರ, ಮರು, ಬೃಹದ್ಬಲ ಎಂದು ಅನೇಕ ಶೂರವೀರರಾದ ರಾಜರಾದರು. ಇವರಿಷ್ಟು ಜನ ಇಕ್ಷ್ವಾಕುವಂಶದ ಪ್ರಮುಖರಾದ ರಾಜರೆಂದು ತಿಳಿಯಬೇಕು.

## ಶ್ರಾದ್ಧಕಲ್ಪ

ಪಿತಗಳು ಎಂದರೆ ಯಾರು? ನಾವು ಮಾಡಿದ ಶ್ರಾದ್ಧಗಳಿಂದ ಅವರಿಗೆ ತೃಪ್ತಿ ಹೇಗಾಗುವುದು? ಶ್ರಾದ್ಧಗಳಲ್ಲಿ ಭೂಲೋಕದ ಮಾನವರಾದ ನಾವು ಇಲ್ಲಿ ಇತ್ತ ಪಿಂಡಾನ್ನವು ಸ್ವರ್ಗದಲ್ಲಿಯೇ ನರಕದಲ್ಲಿಯೇ ಇದ್ದ ಪಿತೃಗಳಿಗೆ ಮುಟ್ಟುವ ಬಗೆ ಹೇಗೆ? ಹಾಗೂ ಬೇರೆ ಬೇರೆ ಪಶುಪಕ್ಷಿ ಕ್ರಿಮಿ ಕೀಟ ಜನ್ಮಗಳಲ್ಲಿ ಹುಟ್ಟಿರಬಹುದಾದ ಪಿತೃಗಳಿಗೆ ಇಲ್ಲಿ ನಾವಿತ್ತ ಅಕ್ಕಿಯ ಅನ್ನ ಉಪಯೋಗವಾಗುವ ಕ್ರಮ ಯಾವುದು? ಅದನ್ನು ಮಾಡಿದರೆ ನಮಗೆ ಬರುವ ಫಲವೇನು? ಇದನ್ನೆಲ್ಲ ನನಗೆ ವಿಶದವಾಗಿ ನಿರೂಪಿಸಬೇಕು ಎಂದು ಜನ ಮೇಜಯ ಮಹಾರಾಜನು ಪ್ರಶ್ನೆ ಮಾಡಲು ವೈಶಂಪಾಯನರು ಈ ವಿಷಯದಲ್ಲಿ ಧರ್ಮರಾಜ ಹಾಗೂ ಭೀಷ್ಮಾಚಾರ್ಯರ ನಡುವೆ ನಡೆದ ಸಂಭಾಷಣೆಯನ್ನು ಉದಾಹರಿಸುತ್ತಾರೆ.

**ಭೀಷ್ಮ**:- ''ಧರ್ಮರಾಜ! ನಾನು ನನ್ನ ತಂದೆಯಾದ ಶಂತನುಮಹಾರಾಜನ ಶ್ರಾದ್ಧವನ್ನು ಒಂದು ಸಲ ಮಾಡುತ್ತಿದ್ದೆ. ಸಂದರ್ಭದಲ್ಲಿ ಪುರೋಹಿತರ ಹೇಳಿಕೆಯಂತೆ ನಾನು ಪಿಂಡವನ್ನು ದರ್ಭದ ಮೇಲೆ ಇಡಲಿಕ್ಕೆ ಹೊರಟಿದ್ದೆ. ಆಗ ಒಮ್ಮಿಂದೊಮ್ಮೆಲೆ ನನ್ನ ತಂದೆಯಾದ ಶಂತನುರಾಜನು ನೆಲದದೆಯನ್ನು ಸೀಳಿ ಎದ್ದು ಬಂದು ಅದೃಶ್ಯನಾಗಿ ನಿಂತುಕೊಂಡು ಕೈಯನ್ನು ಮಾತ್ರ ನನಗೆ ಕಾಣುವಂತೆ ಚಾಚಿ ''ಭೀಷ್ಮ! ಪಿಂಡವನ್ನು ದರ್ಭದ ಮೇಲಿಡದೇ ನನ್ನ ಅಂಗೈಯಲ್ಲಿಯೇ ಇಟ್ಟುಕೊಟ್ಟು ಬಿಡು'' ಎಂದು ಹೇಳಿ ಕೈ ಮುಂದೆ ಮಾಡಿದನು. ಅವನು ಬದುಕಿದಾಗ ಅವನ ಬೆರಳಿನ ಉಂಗುರ ಕನಕ ಕಂಕಣ ಹಾಗೂ ಅನೇಕ ರತ್ನಾಭರಣಗಳಿಂದ ಶೋಭಿಸುವ ಆ ಕೈಯನ್ನು ನೋಡಿದ ನನಗೆ ಇದು ನನ್ನ ತಂದೆಯದೇ ಅಂಗೈ ಎಂದು ನಿಶ್ಚಯವಾಯಿತು. ಆದರೂ ನಾನು ''ಶಾಸ್ತ್ರದಲ್ಲಿ ಸತ್ತ ಪಿತೃಗಳಿಗೆ ದರ್ಭದ ಮೇಲೆಯೇ ಪಿಂಡವನ್ನು ಇಡಬೇಕೆಂದು ಹೇಳಿದ್ದಾರೆ ಕಾರಣ ನಾನು ಶಾಸ್ತ್ರ ವಿರುದ್ಧವಾಗಿ ಸಾಕ್ಷಾತ್ತಾಗಿ ಬಂದರೂ ನಿಮ್ಮ ಕೈಯಲ್ಲಿ ಪಿಂಡವನ್ನು ಕೊಡಲಾರೆ'' ಎಂದು ಸ್ಪಷ್ಟವಾಗಿ ಹೇಳಿದೆ. ಅದನ್ನು ಕೇಳಿ ನನ್ನ ತಂದೆಗೆ ಕೋಪ ಬಾರದೇ ಅತ್ಯಂತ ಸಂತೋಷವಾಗಿ ''ಸತ್‌ಪುತ್ರ! ನಿನ್ನ ಈ ಶಾಸ್ತ್ರೋಕ್ತವಾದ ಶ್ರಾದ್ಧವಿಧಿಯಿಂದ ನನಗೆ ನಿಜವಾಗಿಯೂ ಅತ್ಯಾನಂದವಾಗಿದೆ. ವೈದಿಕವಾದ ವಿಧಿ ವಿಧಾನಗಳಲ್ಲಿ ನಿನಗಿರುವ ಶ್ರದ್ಧೆಯನ್ನು ಕಂಡು ನಾನು ಪ್ರಸನ್ನನಾಗಿದ್ದೇನೆ. ನಿನಗೆ ಬೇಕಾದ ವರವನ್ನು ಬೇಡು'' ಎಂದು ಅಂತಃಕರಣದಿಂದ ಹೇಳಿದನು.

ಆಗ ಅಲ್ಲಿಯೇ ಅಂತರ್ಹಿತನಾಗಿ ಅದೃಶ್ಯವಾದ ರೂಪದಿಂದ ನಿಂತು ನನಗೆ ಸ್ಪಷ್ಟವಾಗಿ ಕೇಳುವಂತೆ ಮಾತನಾಡುತ್ತಲಿರುವ ನನ್ನ ತಂದೆಗೆ ಕೈಮುಗಿದು ಭಕ್ತಿಯಿಂದ ವಂದನೆ ಮಾಡಿ ನಾನು ವಿನಯದಿಂದ ಶ್ರಾದ್ಧದ ವಿಧಿ ವಿಧಾನ ಫಲ ಪರಿಣಾಮ ಹಾಗು ಅವರಿಗೆ ಪಿಂಡ ಮುಟ್ಟುವ ಪ್ರಕಾರ ಪ್ರಣಾಲಿಕೆ ಮೊದಲಾದವುಗಳ ಬಗೆಗೆ ವಿಚಾರಿಸಿದೆ. ಅದಕ್ಕೆ ಶಂತನುಮಹಾರಾಜನು "ಪಿತೃಗಳೆಂದರೆ ಬ್ರಹ್ಮದೇವರ ಮಕ್ಕಳು, ಅವರನ್ನು ದೇವತೆಗಳೂ ಮಾನವರೂ ದಾನವರೂ ಯಕ್ಷ ರಕ್ಷ ಗಂಧರ್ವಕಿನ್ನರರೂ ಶ್ರದ್ಧೆಯಿಂದ ಅರ್ಚಿಸಿ ಫಲವನ್ನೂ ಪುಣ್ಯವನ್ನೂ ಪಡೆಯುತ್ತಾರೆ. ಮಕ್ಕಳು ಇತ್ತ ಶ್ರಾದ್ಧದ ಅನ್ನವನ್ನು ಆದಿದೇವನ ಪುತ್ರರಾದ ಈ ಪಿತೃಗಳು ಎಂಬ ಹೆಸರಿನ ದೇವತೆಗಳೇ ತಾವು ಸ್ವೀಕರಿಸಿ ಆ ಶ್ರಾದ್ಧಮಾಡಿದವನ ತಂದೆ ತಾತ ಮುತ್ತಾತರು ಇದ್ದಲ್ಲಿಗೆ ವೈಯ್ದು ಅವರ ಜಾತಿಗೆ ಯೋಗ್ಯವಾದ ಆಹಾರವನ್ನಾಗಿ ಪರಿವರ್ತಿಸಿ ಕೊಡುವರು. ಹಾಗೂ ಈ ಶ್ರಾದ್ಧ ಮಾಡಿದವನಿಗೂ ಅವರೇ ಪುಣ್ಯಪ್ರದಾನವನ್ನು ಮಾಡುವರು. ಇದರಿಂದ ಅವನ ಸಾಕ್ಷಾತ್ ಪಿತೃಗಳೂ ಪಿತೃಗಣ ಎಂದು ಹೆಸರಾದ ದೇವತೆಗಳೂ ಸುಪ್ರೀತರಾಗಿ ಶ್ರಾದ್ಧವನ್ನು ಮಾಡಿದವನನ್ನೂ ಅವನ ಪಿತೃಗಳನ್ನೂ ನರಕದಿಂದ ಉದ್ಧಾರಮಾಡಿ ಅನುಗ್ರಹಿಸುವರು. ಈ ವಿಷಯದಲ್ಲಿ ನಿನ್ನ ಹಾಗೂ ನನ್ನ ಸುದೈವದಿಂದ ನನ್ನ ಈ ಶ್ರಾದ್ಧಕ್ಕೆ ಬ್ರಾಹ್ಮಣರಾಗಿ ಬಂದ ಮಹರ್ಷಿ ಮಾರ್ಕಂಡೇಯರನ್ನು ವಿಚಾರಿಸು. ಪಿತೃಭಕ್ತರಾದ ಅವರು ನಿನಗೆ ತಾವು ಪ್ರತ್ಯಕ್ಷ ಕಂಡ ಹಾಗೂ ಕೇಳಿದ ಅನೇಕ ವಿಷಯಗಳನ್ನು ನಿರೂಪಿಸಿ ನಿನ್ನ ಎಲ್ಲ ಶಂಕೆಗಳನ್ನು ಸಮಾಧಾನಮಾಡಬಲ್ಲರು" ಎಂದು ಹೇಳಿ ನನ್ನ ತಂದೆಯು ಅಂತರ್ಧಾನವನ್ನು ಹೊಂದಿದರು. ಆಗ ನಾನು ಆದರಾತಿಶಯದಿಂದ ನಮಿಸಿ ಕೇಳಲಾಗಿ ಜ್ಞಾನನಿಧಿಗಳಾದ ಮಾರ್ಕಂಡೇಯರು ಹೀಗೆ ನುಡಿದರು.

**ಮಾರ್ಕಂಡೇಯ:-** ಸತ್ಯಸಂಧನಾದ ಭೀಷ್ಮ! ನಿನ್ನ ಈ ಪಿತೃಜಿಜ್ಞಾಸೆಯನ್ನೂ ಜ್ಞಾನ ಪಿಪಾಸೆಯನ್ನೂ ಕಂಡು ನಾನು ಅತ್ಯಂತ ಸುಪ್ರೀತನಾಗಿದ್ದೇನೆ. ಸತ್ಯವ್ರತ! ನನಗೆ ದೀರ್ಘಾಯುಷ್ಯ ಲಾಭವಾದದ್ದು ಪಿತೃಗಳ ಆಶೀರ್ವಾದದಿಂದಲೇ. ನನ್ನ ಪಿತೃಭಕ್ತಿಯಿಂದಲೇ ನಾನು ದಿವ್ಯಜ್ಞಾನವನ್ನು ಹೊಂದಿ ದಿಗಂತ ವಿಶ್ರಾಂತವಾದ ಕೀರ್ತಿಯನ್ನು ಪಡೆದಿದ್ದೇನೆ. ಹಿಂದೆ ಒಮ್ಮೆ ನಾನು ಮೇರುಪರ್ವತದ ಉತ್ತುಂಗಶೃಂಗ-ರಂಗದಲ್ಲಿ ಸಹಸ್ರ ವಾರ್ಷಿಕವಾದ ತಪೋನುಷ್ಠಾನದಲ್ಲಿ ನಿರತನಾಗಿದ್ದೆ. ಆಗ ಒಂದು ದಿನ ತನ್ನ ಪ್ರಭಾವಿತಾನದಿಂದ ದಶದಿಙ್ಮಂಡಲವನ್ನೆಲ್ಲ ಬೆಳಗುತ್ತಲಿರುವ ದಿವ್ಯ ವಿಮಾನವೊಂದು ಮೇರುಗಿರಿಯ ಉತ್ತರದೆಶೆಯ ಶಿಖರಶ್ರೇಣಿಯಲ್ಲಿ ಇಳಿಯುತ್ತಲಿರುವುದನ್ನು ನಾನು ಕಂಡೆನು. ಸ್ವರ್ಣಕಾಂತಿಯಿಂದ ದೇದೀಪ್ಯಮಾನವಾದ ಆ ವಿಮಾನ ಪರ್ಯಂಕದ ಅಗ್ನಿಮಂಚದಲ್ಲಿ ಮಿಂಚುವ, ವೈಶ್ವಾನರ ಕುಮಾರನಂತೆ ಹೆಬ್ಬೆರಳಿನ ಆಕಾರದ ಓರ್ವ ತೇಜಃಪುಂಜನಾದ ಕುಮಾರನು ಪವಡಿಸಿದ್ದು ಕಂಡು ಬಂದಿತು.

ಅಂಗುಷ್ಠಮಾತ್ರಾಕಾರದ ಆ ಜ್ಯೋತಿಷ್ಪುರು, ನನ್ನು ಕಂಡು ನಾನು ದಿಗ್ಗನೆ ಎದ್ದು ಬಗ್ಗಿ ನಮಸ್ಕರಿಸಿದೆ. ಆಗ ಅಂಗುಷ್ಠಪ್ರಮಾಣದ ಆ ಪುರುಷನು ಎದ್ದು ಕುಳಿತು ಪ್ರಸನ್ನ ದೃಷ್ಟಿಯಿಂದ ನನ್ನನ್ನು ನಿರೀಕ್ಷಿಸಿದನು. ಅದರಿಂದ ಪಾವಿತನೂ ಅಮೃತಪ್ಲಾವಿತನೂ ಆದ ನಾನೂ ಉತ್ಸಾಹದಿಂದ ಅವರ ಬಳಿಸಾರಿ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಭಕ್ತಿಯಿಂದ ಕೈಮುಗಿದು ವಿನಯದಿಂದ ಬಾಗಿ ತಾವು ಯಾರೆಂದು ಕೇಳಿದೆ. ಆಗ ಅವರು ಮಂದಾರಕುಸುಮಗಳನ್ನು ಮುಂದೆ ಎರಚಿದಂತೆ ಒಮ್ಮೆ ಮಂದಹಾಸ ಮಾಡಿ ಸ್ನಿಗ್ಧ

ಕಟಾಕ್ಷದಿಂದ ನನ್ನನ್ನೊಮ್ಮೆ ಅವಲೋಕಿಸಿ, ಅನುಗ್ರಹಿಸಿ ಅಮೃತಸಿಂಚಿತವಾದ ಮಧುರ ಮಾತುಗಳನ್ನು ಮುತ್ತಿನಂತೆ ಉದುರಿಸಿದರು. ''ಪಿತೃನಿಷ್ಠನಾದ ಮಾರ್ಕಂಡೇಯ! ನಾನು ಬ್ರಹ್ಮದೇವರ ಮಾನಸ ಪುತ್ರ. ಶ್ರೀಮನ್ನಾರಾಯಣನ ಅಂಶಸಂಭೂತನಾದ ನನ್ನನ್ನು ಸನತ್‌ಕುಮಾರ ಎಂದು ಕರೆಯುವರು. ನನಗೆ ಏಳು ಜನ ತಮ್ಮಂದಿರಿರುವರು. ಕ್ರತು, ವಶಿಷ್ಠ, ಪುಲಹ, ಪುಲಸ್ತ್ಯ, ಅತ್ರಿ, ಅಂಗಿರ, ಮರೀಚಿ ಎಂಬ ಹೆಸರುಳ್ಳ ಅವರು ಸಪ್ತರ್ಷಿಗಳೆಂದು ಏಳು ಲೋಕಗಳಲ್ಲೆಲ್ಲ ಖ್ಯಾತಿ ಕೀರ್ತಿಗಳನ್ನು ಹೊಂದಿದ್ದಾರೆ. ಅವರೆಲ್ಲರ ಜ್ಯೇಷ್ಠ ಸೋದರನಾದ ನಾನು ಪ್ರಜಾ ಧರ್ಮಕಾಮಕರ್ಮಗಳನ್ನು ಬಿಟ್ಟು ನೈಷ್ಠಿಕ ಬ್ರಹ್ಮಚರ್ಯದಿಂದ ಸನ್ಯಾಸ ಧರ್ಮವನ್ನು ಪಾಲಿಸುತ್ತಿದ್ದೇನೆ. ಹಾಗೂ ನಿತ್ಯ ಕುಮಾರನೂ ಆಗಿದ್ದೇನೆ. ಸನತ್-ನಿರಂತರ, ಕುಮಾರ-ಶಿಶು=ಸನತ್ಕುಮಾರ ಎಂದರೆ ಸದಾ (ಸರ್ವಕಾಲದಲ್ಲಿಯೂ ಹಸುಗೂಸಿನಂತೆ ರಾಗದ್ವೇಷ ಪ್ರೇಮಕಾಮಾದಿ ರಹಿತವಾದ ಶುದ್ಧ ಕನ್ನಡಿಯಂತೆ ಸ್ವಚ್ಛ ಹೃದಯದ ಬಾಲಕ ಎಂದು ಅರ್ಥ). ನಿನ್ನ ಈ ಘೋರವಾದ ತಪೋನುಷ್ಠಾನದಿಂದ ಸುಪ್ರೀತನಾಗಿ ಬಂದಿದ್ದೇನೆ. ವಾಂಛಿತವಾದ ವರಗಳನ್ನು ಕೇಳಿಕೊಳ್ಳು'' ಎಂದು ಭಗವಾನ್ ಸನತ್‌ಕುಮಾರರು ಅಪ್ಪಣೆ ಮಾಡಿದರು. ಆಗ ನಾನು ಇದೇ ಶ್ರಾದ್ಧ ಹಾಗೂ ಪಿತೃಸಂತರ್ಪಣದ ಬಗೆಗೆ ಅವರನ್ನು ವಿಚಾರಿಸಿದೆ.

ಆಗ ಶ್ರೀಮತ್ ಪರಮ ಪೂಜ್ಯರಾದ ಆ ನೈಷ್ಠಿಕರು ಪ್ರಸನ್ನ ಮುಖದಿಂದ ನುಡಿದರು. ''ಸೃಷ್ಟಿಯ ಆರಂಭಕಾಲದಲ್ಲಿ ಬ್ರಹ್ಮದೇವರು ಭಗವದಾರಾಧನೆಗಾಗಿ ದೇವಗಣವನ್ನು ನಿರ್ಮಿಸಿದರು. ''ಜೀವೋತ್ತಮರಾದ ಆ ದೇವೋತ್ತಮರೆಲ್ಲ ಜಗತ್ತಿನ ಹುಟ್ಟು, ಸಾವು, ನೋವು, ನಲಿವು, ಉಲಿವು, ಒಲವುಗಳಿಗೆಲ್ಲ ಕಾರಣೀಭೂತನಾದ ಪರಮೇಶ್ವರನನ್ನು ಯಜ್ಞಯಾಗ, ಭಕ್ತಿಯೋಗಗಳಿಂದ ಅರ್ಚಿಸಿ ತಾವೂ ಸದ್ಗತಿಯನ್ನು ಹೊಂದಿ ಭಾವೀ ಮಾನವಕುಲಕ್ಕೂ ಮಾರ್ಗದರ್ಶನ ಮಾಡಿಸಲಿ'' ಎಂದು ಬ್ರಹ್ಮದೇವರ ಮನೀಷೆಯಾಗಿತ್ತು. ಆದರೆ ಸ್ವಾರ್ಥವಶರಾದ ಆ ದೇವತೆಗಳು ಆ ದೇವದೇವರ ಆರಾಧನೆಯನ್ನು ಮರೆತುಬಿಟ್ಟು ತಮ್ಮ ಇಂದ್ರಿಯ ಸುಖಕ್ಕಾಗಿ ಮನಸೋತು ವಿಷಯೋಪಭೋಗಗಳಲ್ಲಿ ಆಸಕ್ತರಾದರು. ಆಗ ಈಶ್ವರೋಪಾಸನೆಯಿಂದ ವಿಮುಖರಾದ ಆ ವೃಂದಾರಕರನ್ನು ಕಂಡು ಕುಪಿತನಾದ ಚತುರ್ಮುಖನು ''ನೀವೆಲ್ಲರೂ ಮೂಢಮತಿಗಳಾಗಿರಿ'' ಎಂದು ಅವರಿಗೆ ಶಾಪಕೊಟ್ಟನು.

ಆಗ ಪಶ್ಚಾತ್ತಾಪದಿಂದ ಬೆಂದು ಹೋದ ನೊಂದ ಮನದ ಆ ಸುರಪುರದ ಪೌರರು ಬ್ರಹ್ಮದೇವರ ಪಾದಕ್ಕೆ ಎರಗಿ ಕ್ಷಮೆ ಕೇಳಿಕೊಂಡರು. ಅವರ ಸಕರುಣಯಾಚನೆ ಹಾಗೂ ದೀನ ಪ್ರಾರ್ಥನೆಗಳಿಂದ ಮನಕರಗಿದ ಬ್ರಹ್ಮದೇವರು ಅವರಿಗೆ ''ಶಾಪ ಪ್ರಕ್ಷಾಲನೆಗಾಗಿ ನೀವು ನಿಮ್ಮ ಮಕ್ಕಳಾದ ಪಿತೃಗಳನ್ನು ಕೇಳಿರಿ. ಅವರು ಹೇಳಿದಂತೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ದೇವದೇವೋತ್ತಮನ ಸೇವೆಯನ್ನು ಮಾಡಿದರೆ ನಿಮ್ಮ ಮತಿಯ ಮಾಂದ್ಯ ಮೌಢ್ಯಗಳೆಲ್ಲವೂ ತೊಲಗಿ ಮೊದಲಿನಂತೆ ಪ್ರತಿಭಾಪ್ರಕಾಶವುಂಟಾಗುವದು'' ಎಂದು ಹೇಳಿದರು. ಅದರಂತೆ ದೇವತೆಗಳು ತಾವು ಹಿರಿಯರಾದರೂ ಮಾನಾಪಮಾನಗಳನ್ನು ಬಿಟ್ಟು ತಮಗಿಂತ ಜ್ಞಾನದಿಂದಲೂ ವಯಸ್ಸಿನಿಂದಲೂ ಚಿಕ್ಕವರಾದ ಹಾಗೂ ತಮ್ಮ ಮಕ್ಕಳೇ ಆದ ಪಿತೃಗಳ ಹತ್ತಿರಬಂದು ತಮ್ಮ ಪಾಪಗಳಿಗೆ ಪ್ರಾಯಶ್ಚಿತ್ತವೇನೆಂದು ಕೇಳಿದರು. ಆಗ ಆ ಪಿತೃಗಳು ಪ್ರಣಿಧಾನದಿಂದ ಎಲ್ಲವನ್ನೂ ಚಿಂತನೆ ಮಾಡಿ ಅವರಿಗೆ ಕಾಯಿಕ, ವಾಚಿಕ, ಮಾನಸಿಕವಾದ ಪ್ರಾಯಶ್ಚಿತ್ತದ ಪ್ರಕಾರಗಳನ್ನು ತಿಳಿಸಿ ಹೇಳಿ ''ಮಕ್ಕಳೇ! ವೇದೋಕ್ತ. ಈ ವಿಧಿಗಳಿಂದ

ಪ್ರಾಯಶ್ಚಿತ್ತಗಳನ್ನು ನೆರವೇರಿಸಿರಿ. ಅಂತರಂಗದಲ್ಲಿ ಅಹರ್ನಿಶವೂ ಅವನನ್ನೇ ಧ್ಯಾನಮಾಡಿ ಬಹಿರಂಗದಲ್ಲಿಯೂ ಆ ಭಗವನ್ಮೂರ್ತಿಯನ್ನು ಪ್ರದಕ್ಷಿಣೆ ನಮಸ್ಕಾರಾದಿಗಳಿಂದ ಪೂಜಿಸಿರಿ. ಇದರಿಂದ ನಿಮ್ಮ ಅಜ್ಞಾನಮೌಢ್ಯಗಳೆಲ್ಲ ಕಳೆದು ನಿಮಗೆ ನಿಮ್ಮ ಮೊದಲಿನ ಯಥಾರ್ಥಜ್ಞಾನವು ಮಿಂಚುವುದು.'' ಎಂದು ಹೇಳಿದರು.

ತಮ್ಮ ಮಕ್ಕಳಾದ ಪಿತೃಗಳು ತಮ್ಮನ್ನು ಕೊನೆಗೆ 'ಮಕ್ಕಳೇ' ಎಂದು ಸಂಬೋಧಿಸಿದ್ದು ದೇವತೆಗಳಿಗೆ ಸಿಟ್ಟು ಬಂದಿತು. ಆಗ ಅವರು ಆ ಬಗೆಗೆ ಬ್ರಹ್ಮನಲ್ಲಿ ದೂರಿದಾಗ ಆ ಬ್ರಹ್ಮನು ಇಂತೆಂದನು. ''ಯಸ್ತಾ ವ್ಯಜಾನಾತ್ ಸ ಪಿತುಃ ಪಿತಾಸದ್'' ಎಂಬ ಔಪನಿಷದಿಕವಾದ ಮಂತ್ರದ ಅರ್ಥವನ್ನು ಅನುಸರಿಸಿ ಅವರು ನಿಮ್ಮ ಮಕ್ಕಳಾದರೂ ಒಂದು ದೃಷ್ಟಿಯಿಂದ ನಿಮಗೆ ತಂದೆಗಳೂ ಆಗಿದ್ದಾರೆ. ''ಶ್ರುತಿತಾತ್ಪರ್ಯ ವಿಷಯೀಭೂತನಾದ ಶ್ರೀಹರಿರೂಪವಾದ ವೇದಗುಹ್ಯ ಪರಾತ್ ಪರತತ್ವವನ್ನು ತಿಳಿದವನು ತಂದೆಯ ತಂದೆ'' ಎಂಬ ಈ ಮಂತ್ರಾರ್ಥ ವನ್ನು ಅನುಶೀಲಿಸಿದರೆ ಭಗವತ್ತತ್ವವನ್ನು ಕೊಟ್ಟಿದ್ದರಿಂದ ಅವರು ನಿಮಗೆ ತಂದೆಗಳಾದರು. ಇಂದಿನಿಂದ ಅವರು ನಿಮ್ಮನ್ನು ದೇವತೆಗಳೆಂದೂ ನೀವು ಅವರನ್ನು ಪಿತೃಗಳೆಂದೂ ಪರಸ್ಪರವಾಗಿ ಪೂಜಿಸಿ ಕೃತಕೃತ್ಯರಾಗಿರಿ. ಇದರಿಂದ ನಿಮ್ಮನ್ನು ಅನುಕರಿಸಿ ಭಾವಿಜನಾಂಗದ ಮಾನವರೆಲ್ಲರೂ ಈ ಪಿತೃಗಳನ್ನು ಶ್ರಾದ್ಧವಿಧಿಯಿಂದ ಆರಾಧಿಸಿ ಸದ್ಗತಿಯನ್ನು ಪಡೆಯಲಿ. ಪಿತೃಗಳನ್ನು ಕುರಿತು ಶ್ರಾದ್ಧಮಾಡದಿರುವ ಮನುಷ್ಯನು ಆಚರಿಸಿದ ಸತ್ಕರ್ಮಗಳ ಪುಣ್ಯಫಲವನ್ನೆಲ್ಲ ದೈತ್ಯರೂ, ರಾಕ್ಷಸರೂ ನಾಗರೂ ಅನುಭೋಗಿಸಲಿ.''

ಬ್ರಹ್ಮದೇವರ ಈ ಮಾತುಗಳನ್ನು ದೇವತೆಗಳೂ ಪಿತೃಗಳೂ ಕೂಡಿಯೇ ಅನುಮೋದಿಸಿ ''ನಾವಿಬ್ಬರೂ ಪರಸ್ಪರ ಮಕ್ಕಳೂ ಅಹುದು, ಪರಸ್ಪರ ಪಿತೃಗಳೂ ಅಹುದು'' ಎಂದು ಒಬ್ಬರಿಗೊಬ್ಬರು ಪೂಜಿಸುತ್ತಲಿರುವರು. ಹೀಗೆ ಹೇಳಿ ಶಾಂತರಾದ ಸನತ್‌ಕುಮಾರರನ್ನು ಮಾರ್ಕಂಡೇಯರು ''ಇವರಿಗೆ ಪಿತೃಗಣ ಎಂದು ಹೆಸರು ಬರಬೇಕಾದರೆ ಅವರು ಎಷ್ಟು ಜನರು ಇರುವರು? ಯಾವ ಲೋಕದಲ್ಲಿರುವರು? ಇದನ್ನೆಲ್ಲ ತಿಳಿಸಬೇಕು'' ಎಂದು ಕೇಳಿಕೊಂಡರು. ಆಗ ಸನತ್‌ಕುಮಾರರು ಮುಂದುವರೆದರು.

**ಸನತ್ಕುಮಾರ:-** ''ಈ ಪಿತೃಗಣದಲ್ಲಿ ಏಳು ಮುಖ್ಯವಾದ ಗುಂಪುಗಳು ಇವೆ. ಇದರಲ್ಲಿ ಸುಕಾಲರು, ಅಂಗಿರಸರು, ಸುಸ್ವಧರು, ಸೋಮಪರು ಎಂಬ ನಾಕು ಗಣದವರಿಗೆ ತಮ್ಮ ಕರ್ಮ ಜನ್ಯವಾದ ದಿವ್ಯಶರೀರವಿದ್ದುದರಿಂದ ಇವರು ಮೂರ್ತರು ಎಂದು ಕರೆಯಲ್ಪಡುತ್ತಾರೆ. ವೈರಾಜ, ಅಗ್ನಿಷ್ವಾತ್ತ, ಬರ್ಹಿಷದ ಎಂಬ ಮೂರು ಗಣದವರು ಮಾತ್ರ ಕಾಮರೂಪಿಗಳು. ಅತ ಏವ ಅವರು ಅಮೂರ್ತರೆಂದು ಕರೆಯಲ್ಪಡುತ್ತಾರೆ. ಅಮೂರ್ತರು ತಮ್ಮ ದಿವ್ಯವಾದ ಅದ್ಭುತ ತಪಃಸಾಮರ್ಥ್ಯದಿಂದ ಸ್ವಾಧೀನಸಿದ್ಧಿಮಂತರಾಗಿ ಆಗಸಕ್ಕಿಂತಲೂ ಅಗಲವಾದ ಶರೀರವನ್ನೂ ಬೇಕೆಂದರೆ ಧರಿಸಬಲ್ಲರು. ಅದರಂತೆ ಪರಮಾಣುವಿನ ಸೂಕ್ಷ್ಮತಮವಾದ ಉದರದಲ್ಲಿ ಪ್ರವೇಶಿಸಬಹುದಾದಷ್ಟು ಸೂಕ್ಷ್ಮ ರೂಪವನ್ನೂ ತಾಳಬಲ್ಲರು. ಬ್ರಹ್ಮನ ಮಾನಸ ಪುತ್ರರಾದ ಇವರು ಮಹಾಜ್ಞಾನಿಗಳು. ಪರಮ ಶ್ರೇಷ್ಠರಾದುದರಿಂದ ಅಮೂರ್ತರಾದ ಈ ಮೂರು ಪಿತೃಗಣಗಳ ಸ್ಥಾನಗಳನ್ನು ಮೊದಲು ಹೇಳುವೆ.

ಆದರಲ್ಲಿಯೂ ವಿರಾಜನಾಮಕನಾದ ಪ್ರಜಾಪತಿಯ (ಬ್ರಹ್ಮದೇವರ) ಮಕ್ಕಳಾದುದರಿಂದ ವೈರಾಜರೆಂದು ಪ್ರಸಿದ್ಧರಾದ ಈ ಪಿತೃಗಳನ್ನು ದೇವತೆಗಳೂ ಕೂಡ ವಿಧಿಪೂರ್ವಕವಾಗಿ ಆರಾಧಿಸುತ್ತಾರೆ. ಇವರು ಬ್ರಹ್ಮಲೋಕದಲ್ಲಿ ಇದ್ದರೂ ಆತ್ಯಂತಿಕವಾದ ವೈರಾಗ್ಯವಿಲ್ಲದ್ದರಿಂದ ಭಗವಂತನ ಅತ್ಯರ್ಥ ಪ್ರಸಾದಕ್ಕೆ ಪಾತ್ರರಾಗದೆ ಯೋಗದಿಂದ ಕಿಂಚಿತ್‌ಚ್ಯುತರಾಗಿ ಉಳಿದುಕೊಂಡು ಬಿಡುತ್ತಾರೆ. ಬ್ರಹ್ಮದೇವರು ಕಲ್ಪಾಂತರದಲ್ಲಿ ಮೋಕ್ಷಕ್ಕೆ ಹೊರಟರೂ ಇವರಿಗೆ ಮುಕ್ತಿಯಿಲ್ಲ. ಮುಂದೆ ಕಲ್ಪಾಂತರದಲ್ಲಿ ಮತ್ತೆ ಹುಟ್ಟಿ ತಮ್ಮ ತ್ರಿಕಾಲ ಜ್ಞಾನಬಲದಿಂದ ಸಾಧನೆ ಮಾಡಿಕೊಂಡು ಬ್ರಹ್ಮಜ್ಞಾನವನ್ನು ಪಡೆದು ಸನಕಾದಿ ರೂಪದಿಂದ ಹುಟ್ಟಿ ಭಗವಂತನನ್ನು ಆರಾಧಿಸಿ ಆತ್ಯಂತಿಕವಾದ ಜ್ಞಾನಭಕ್ತಿ ವೈರಾಗ್ಯಗಳಿಂದ ಮುಕ್ತಿಯನ್ನು ಪಡೆಯುತ್ತಾರೆ.

## ಮೂರು ಮಹಿಳಾ ಮಹರ್ಷಿಗಳು

ಈ ವೈರಾಜಪಿತೃಗಳ ಮಾನಸ ಕನ್ಯೆಯೇ ಮೇನೆ. ಅವಳನ್ನು ನಗಾಧಿರಾಜನಾದ ಹಿಮಾಲಯ ಪರ್ವತೇಶ್ವರನಿಗೆ ಕೊಟ್ಟಿತ್ತು. ಆ ಹಿಮವತ್ ಪರ್ವತದ ಚೊಚ್ಚಲು ಗಂಡು ಮಗುವೇ ಮೈನಾಕ ಪರ್ವತ. ಮೈನಾಕನ ಮಗ ಕ್ರೌಂಚಗಿರಿ. ಆ ಹಿಮಾಲಯ ಪರ್ವತದಿಂದ ಮೇನೆಯಲ್ಲಿ ಅಪರ್ಣಾ, ಏಕವರ್ಣಾ, ಪಾಟಲವರ್ಣಾ ಎಂಬ ಮೂರು ಹೆಣ್ಣು ಮಕ್ಕಳು ಜನಿಸಿದರು. ಮೇನೆಯ ಈ ಮೂವರು ಕನ್ಯೆಯರೂ ಮಹಾ ತಪಸ್ವಿಯರು, ಬ್ರಹ್ಮವಾದಿನಿಯರು. ಪೂರ್ಣ ಯೋಗಿನಿಯರು. ಇಂದ್ರಿಯ ನಿಗ್ರಹಿಗಳು. ಈ ಮೂರು ಮಹಿಳಾ ಮುನಿಗಳ ಅಭೂತಪೂರ್ವವಾದ ದಾರುಣ ತಪಸ್ಸಿನತೀವ್ರತೆಗೆ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವೆಲ್ಲವೂ ಸಂತ್ರಸ್ತವಾಗಿ ನಿಂತಿತ್ತು.

ಅವರಲ್ಲಿ ಒಬ್ಬಳು ದಿನಕ್ಕೊಂದು ಪಾಟಲ ಪುಷ್ಪವನ್ನು ಮಾತ್ರ ಸ್ವೀಕರಿಸಿ ಉಪವಾ ಸನಿಂತು ಅಹರ್ನಿಶಘೋರವಾದತಪೋನುಷ್ಠಾನವನ್ನು ಆಚರಿಸುತ್ತಲಿದ್ದುದರಿಂದ ಅವಳಿಗೆ ಏಕಪಾಟಲಾ ಎಂಬ ಹೆಸರು ಬಂದಿತು. ತಮ್ಮ ಅದ್ವಿತೀಯ ಯೋಗಬಲದಿಂದ ಸರ್ವಸಿದ್ಧಿಗಳನ್ನೂ ಪಡೆದುಕೊಂಡು ಸನತ್ಕುಮಾರರಂತೆ ನೈಷ್ಠಿಕಬ್ರಹ್ಮಚಾರಿಯರಾಗಿದ್ದರೂ ಸ್ತ್ರೀಯರಿಗೆ ಮದುವೆಯಿಲ್ಲದೇ ಮುಕ್ತಿಯಿಲ್ಲವೆಂದು ತಿಳಿದು ಆ ಮೂವರೂ ಯೋಗ್ಯರಾದ ಪತಿಗಳನ್ನು ವರಿಸಿದರು.

ಅವರಲ್ಲಿ ಮಹಾಯೋಗಿನಿಯಾದ ಏಕಪಾಟಲೆಯು ಯೋಗಾಚಾರ್ಯರಾದ ಬ್ರಹ್ಮದರ್ಶಿ ಜೈಗೀಷವ್ಯರನ್ನು ಕೈಹಿಡಿದು ಸಕುಟುಂಬವಾಗಿ ಉದ್ಧಾರ ಹೊಂದಿದಳು.

ಏಕಪರ್ಣೆಯ ತಪಸ್ಸು ಇನ್ನೂ ತೀವ್ರತರ. ಇವಳದಕ್ಕಿಂತಲೂ ಅತ್ಯುಗ್ರ. ಅವಳು ಉಳಿದೆಲ್ಲ ಆಹಾರ ವಿಹಾರಗಳನ್ನು ಬಿಟ್ಟು ಪ್ರತಿನಿತ್ಯವೂ ಒಂದೇ ಗಿಡದೆಲೆಯನ್ನು ತಿಂದು ಘೋರ ತಪಸ್ಸನ್ನು ಆಚರಿಸಿದಳು. ಆದುದರಿಂದ ಅವಳಿಗೆ ಏಕಪರ್ಣಾ ಎಂದು ಹೆಸರು ಬಂದಿತು. ಮಹಾತಪಸ್ವಿನಿಯಾದ ಇವಳನ್ನು ದೇವಲವಂಶದ ಅಸಿತ ಮಹರ್ಷಿಗಳಿಗೆ ಕೊಟ್ಟು ಮದುವೆಯನ್ನು ಮಾಡಲಾಯಿತು.

ಮೂರನೇಯವಳಾದ ಅಪರ್ಣೆಯೇ ಅನ್ನಪೂರ್ಣೆ. ಸಾಕ್ಷಾತ್ ಪರಮೇಶ್ವರಿ. ಮಹಾದೇವನನ್ನು ವರಸಲಿಕ್ಕೆಂದು ಅತ್ಯುಗ್ರವಾದ ತೀಕ್ಷ್ಣ ತಪಸ್ಸನ್ನು ಕೈಕೊಳ್ಳಲು ಅವಳು ಗೌರೀಶಂಕರ ಶಿಖರಕ್ಕೆ ಹೊರಟು ನಿಂತಾಗ ತಾಯಿ ಮೇನೆ ಅವಳ ಕಮಲ ಕೋಮಲವಾದ

ಶರೀರ ಸೌಷ್ಠವನ್ನು ಕಂಡು 'ಉ' 'ಮಾ' ಎಂದಳಂತೆ (ಉ=ಎಲೆ ಮಗಳೆ! ಮಾ=ತಪಸ್ಸಿಗೆ ಹೋಗಬೇಡ) ಅದಕ್ಕಾಗಿ ಅಂದಿನಿಂದ ಪಾರ್ವತಿಗೆ "ಉಮಾ"ಎಂದು ಹೆಸರು ಬಂದಿತಂತೆ*. ಆ ಉಮೆಯು ಯಾವ ಹೆಂಗಸೂ ಎಂದಿಗೂ ಮಾಡದಿರುವಂಥ, ಮುನಿಮಹರ್ಷಿಗಳ ಮನೋರಥಕ್ಕೂ ಮೀರಿದ ಮಹಾತಪಸ್ಸನ್ನು ಆಚರಿಸಿ ಮಹಾದೇವನನ್ನು ಮೆಚ್ಚಿಸಿ ಅವನ ನೆಚ್ಚಿನ ನಲ್ಲೆಯಾದಳು. ಜಗದಂಬೆಯೆಂದು ವಿಶ್ವವಂದ್ಯಳಾದಳು.

ಅಮೂರ್ತಗಣದಲ್ಲಿಯ ಎರಡನೆಯ ಗುಂಪಿನವರಾದ ಅಗ್ನಿಷ್ವಾತ್ತರು ಎಂಬ ಪಿತೃಗಳು ಸೋಮಯಾಜಿಗಳು ಹೊಂದತಕ್ಕ ಮರೀಚಿ ಲೋಕದಲ್ಲಿರುವರು.

ಅವರಿಗೆ ಅಚ್ಛೋದಾ ಎಂಬ ಮಾನಸಕನ್ನೆ ಇದ್ದಳು. ಅವಳಿಂದಲೇ ಹೈಮಾಚಲದ ಸುಪ್ರಸಿದ್ಧವಾದ ಅಚ್ಛೋದ ಸರೋವರವು ಉತ್ಪನ್ನವಾಯಿತು. ಅಚ್ಛೋದೆಯು ಅಮೂರ್ತರಾದರೂ ತನ್ನ ಪಿತೃಗಾದ ಅಗ್ನಿಷ್ವಾತ್ತರನ್ನು ಕಾಣಬೇಕೆಂದು ಕುತೂಹಲದಿಂದ ಮುಗಿಲು ಮಂದಿರದಲ್ಲಿ ತಂದೆಗಳನ್ನು ಅರಸುತ್ತ ಹೊರಟಿದ್ದಳು. ತನ್ನ ದೈವೀಪ್ರಭಾವದಿಂದ ದಿವ್ಯದೃಷ್ಟಿಯನ್ನು ಪಡೆದು ಪಿತೃ ನಿರೀಕ್ಷಣಕ್ಕೆ ಹೊರಟ ಅವಳಿಗೆ ತನ್ನ ಕಣ್ಣೆದುರೇ ಆ ಅಗ್ನಿಷ್ವಾತ್ತರ ಬಂದರೂ ಈ ಮೊದಲು ಎಂದೂ ಅವರನ್ನು ನೋಡದ್ದರಿಂದ ಗುರುತೇ ಹತ್ತಲಿಲ್ಲ. ಅವಳು ಹಾಗೆಯೇ ಮುಂದುವರೆದು ಬೇರೆ ವಿಮಾನದಲ್ಲಿ ಕುಳಿತು ಅದ್ರಿಕಾ ಎಂಬ ಅಪ್ಸರೆಯ ಜೊತೆಗೆ ಮಧುಚಂದ್ರಕ್ಕಾಗಿ ಹೊರಟು ಅಮಾವಸು* ಎಂಬ ಗಂಧರ್ವನನ್ನು ನೋಡಿ 'ನೀನೇ ನನ್ನ ತಂದೆ ಎಂದು ಅಪ್ಪಿಕೊಂಡು ಬಿಟ್ಟಳು.

ಹೀಗೆ ತನ್ನ ನಿಜವಾದ ತಂದೆಯನ್ನು ಕಾಣುವ ದಿವ್ಯದೃಷ್ಟಿಯನಾಂತು ಅವರು ಎದುರೇ ಬಂದರೂ ಕಣ್ಣಿಗೆಬಿದ್ದರೂ ಪರಾಮರ್ಶಮಾಡದೇ ಒಮ್ಮೆಲೇ ಬೇರೊಬ್ಬರನ್ನು ತಂದೆ ಎಂದು ನಂಬಿವರಿಸಿದ್ದರಿಂದ ಅವಳಿಗೆ ಪಿತೃ ಅತಿಕ್ರಮಣದ ಪಾಪತಟ್ಟಿ ಅದರಿಂದ ಅವಳು ತಕ್ಷಣದಲ್ಲಿ ವಿಮಾನದಿಂದ ಕೆಳಗೆ ಉರುಳ ಹತ್ತಿದಳು.

ಕೆಳಗುರುಳುವಾಗ ಮೂರು ವಿಮಾನಗಳಲ್ಲಿ ತ್ರ್ಯಣುಕ ಪ್ರಮಾಣವಾಗಿಯಾದರೂ ತೇಜೋಭಾಸುರರಾಗಿ ಕುಳಿತುಕೊಂಡ ತಮ್ಮ ತಂದೆಗಳಾದ ಅಗ್ನಿಷ್ವಾತ್ತರನ್ನು ಕಂಡಳು. ಆಗ ಉರುಳುತ್ತಲಿರುವಾಗಲೇ ಅವರಿಗೆ ಅಲ್ಲಿಯೇ ಕೈಮುಗಿದು ಶೀರ್ಷಾಸನದಲ್ಲಿಯೇ 'ರಕ್ಷಿಸಿರಿ

---

* ಪಾರ್ವತಿಗೆ ಉಮಾ ಎಂಬ ಹೆಸರು ಬರಲು ಇದೇ ಕಾರಣವನ್ನು ಕಾಲಿದಾಸನಾದರೂ ಹೇಳಿ ಈ ಅಭಿಪ್ರಾಯವನ್ನೇ ಪ್ರತಿಧ್ವನಿಸಿದ್ದಾನೆ.
ಉಮೇತಿ ಮಾತ್ರಾ ತಪಸೇ ನಿಷಿದ್ಧಾ ಪಶ್ಚಾದುಮಾಖ್ಯಾಂ ಸುಮುಖೀ ಜಗಾಮ
ಕುಮಾರ ಸಂಭವ೧-೨೬
ಪಾರ್ವತಿಯು ಮೊದಲು ಪರ್ಣ=ಎಲೆ ಮಾತ್ರ ತಿಂದು ಶಿವನನ್ನು ಕುರಿತು ತಪಸ್ಸುಗೈಯುತ್ತಿದ್ದಳು. ಮುಂದೆ ಅದನ್ನೂ ಬಿಟ್ಟು ಒಂದೂ ಪರ್ಣ=ಎಲೆಯನ್ನು ತಿನ್ನದೆ ತಪಿಸಿ, ಶಂಕರನನ್ನು ಒಲಿಸಿ ಅಪರ್ಣಾ ಎಂದು ಹೆಸರಾದಳು ಎಂದು ಕಾಲಿದಾಸ ಇದೇ ಕುಮಾರ ಸಂಭವದಲ್ಲಿ ಬಣ್ಣಿಸಿದ್ದಾನೆ.

* ಈ ಅಮಾವಸುವು ಇಂದ್ರನನ್ನು ಕುರಿತು ತಪಸ್ಸುಮಾಡಿದ. ಸಂತುಷ್ಟನಾದ ಅವನಿಂದ ಅವನ ಕೊರಳೊಳಗಿನ ಮಣಿಮಾಲೆಯನ್ನು ಪಡೆದನು. ಆ ಇಂದ್ರಮಾಲೆಯ ಪ್ರಭಾವದಿಂದ ಅವನು . ಉಪರಿ= ಮೇಲೆ, ಆಕಾಶದಲ್ಲಿ ಬೇಕಾದಕಡೆ ಸಂಚರಿಸುತ್ತಲಿದ್ದನು ಆದ್ದರಿಂದ ಅವನಿಗೆ ಉಪರಿಚರವಸು ಇಂದ್ರಮಾಳಿ ಎಂದು ಕರೆಯುತ್ತಲಿದ್ದರು.
ಮಹಾಭಾರತ ಆದಿಪರ್ವ ೬೩ ಅಧ್ಯಾಯ

ಕಾಯಿರಿ' ಎಂದು ಆರ್ತಳಾಗಿ ಕೂಗಿ ಕರೆದು ಬಿನ್ನವಿಸಿಕೊಂಡಳು. ಆಗ ಅವರು 'ಗಾಬರಿಯಾಗಬೇಡ, ಮಗು! ನಿಲ್ಲು' ಎಂದು ಅಂತಃಕರಣದಿಂದ ಕೈ ಎತ್ತಿ ನಿಲ್ಲ ಹೇಳಿದರು. ಅವರ ತಪಃಪ್ರಭಾವದಿಂದ ಅವಳು ಆ ಅಂತರಿಕ್ಷದ ಅಂತರಾಲದಲ್ಲಿಯೇ ಗಟ್ಟಿಯಾಗಿ ನಿಂತು ದೀನಳಾಗಿ ಕೇಳಿಕೊಂಡು ತನ್ನ ತಂದೆಗಳನ್ನು ಪ್ರಾರ್ಥಿಸಿಕೊಂಡಳು. ಅವಳ ಮುಗ್ಧ ಭಾವ ಹಾಗೂ ಪಿತೃಭಕ್ತಿಯಿಂದ ಪ್ರಸನ್ನರಾದ ಪಿತೃಗಳೂ ಮುಂದಿನ ಅವಳ ಭವಿಷ್ಯವನ್ನೆಲ್ಲ ತಿಳಿದು ಅವಳನ್ನು ಸಂತೈಸುತ್ತ ಹೇಳಿದರು.

''ಪುತ್ರಿ ಅಚ್ಛೋದೆ! ದೈವಸಂಕಲ್ಪವನ್ನು ಯಾರೂ ಮೀರಿ ನಿಲ್ಲುವದು ಸಾಧ್ಯವಿಲ್ಲ. ಪಿತೃಗಳ ಅತಿಕ್ರಮಣಪಾತಕದಿಂದ ನಿನಗೆ ನರಜನ್ಮವು ತಪ್ಪಿದ್ದಲ್ಲ. ನೀನು ಯಾರನ್ನು ತಂದೆಯೆಂದು ಭ್ರಮಿಸಿ ಹೋಗಿದ್ದೆಯೋ ಆ ಅಮಾವಸುವಿನ ಮಗಳಾಗಿ ನೀನು ಭೂಲೋಕದಲ್ಲಿ ಹುಟ್ಟಿಬರುವೆ. ಪರಾಶರರ ಪರಮಾನುಗ್ರಹದಿಂದ ನಿನ್ನಲ್ಲಿ ವೇದವ್ಯಾಸ ರೂಪದಿಂದ ಹುಟ್ಟಲಿರುವ ಆ ಕೃಷ್ಣಭಗವಾನರು ವೇದ ವಿಭಾಗಮಾಡಿ ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಬಿತ್ತರಿಸಲಿರುವರು. ಕನ್ಯಾವಸ್ಥೆಯಲ್ಲಿಯೇ ಆ ಮಹರ್ಷಿಗೆ ಜನ್ಮವನ್ನೀಯಲಿರುವ ನೀನೆ ಧನ್ಯೆ.'' ಎಂದು ಹೇಳಿ ಪ್ರೇಮದಿಂದ ಅವಳನ್ನು ಬೀಳ್ಕೊಟ್ಟರು. ಮುಂದೆ ಅವಳೇ ಇಪ್ಪತ್ತೆಂಟನೇ ದ್ವಾಪರಯುಗದಲ್ಲಿ ಅಮಾವಸು ಮಹಾರಾಜನಿಂದ (ಉಪರಿಚರ ಮಹಾರಾಜ) ಅದೇ ಅದ್ರಿಕಾ ಎಂಬ ಅಪ್ಸರೆಯಲ್ಲಿ ಸತ್ಯವತಿ ಎಂಬ ಹೆಸರಿನಿಂದ ಹುಟ್ಟಿದಳು.

ಆ ಅಮಾವಸು ಗಂಧರ್ವನೇ ದ್ವಾಪರದಲ್ಲಿ ಉಪರಿಚರ ಮಹಾರಾಜನಾಗಿ ಅವತರಿಸಿದ್ದನು. ಅವನು ಒಂದು ದಿನ ಬೇಟೆಗೆ ವನಕ್ಕೆ ಹೋದಾಗ ಊರು ಬಿಟ್ಟು ಬಹುದೂರ ಬಂದು ಬಿಟ್ಟದ್ದರಿಂದ ಅಂದೇ ರಾತ್ರಿ ರಾಜಧಾನಿಗೆ ಮರಳುವುದು ಸಾಧ್ಯವಿಲ್ಲವೆನಿಸಿತು. ಆದರೆ ಅಂದೇ ಅವನ ಹೆಂಡತಿಯು ಋತುಸ್ನಾತಳಾಗಿ ಒಳಗೆ ಬಂದದ್ದರಿಂದ ಅಂದು ರಮಿಸದಿದ್ದರೆ ಭ್ರೂಣ ಹತ್ಯಾದೋಷವು ಬರುತ್ತಿತ್ತು. ಅದಕ್ಕಾಗಿ ಮಹಾರಾಜನು ತನ್ನ ವೀರ್ಯವನ್ನು ಒಂದು ದ್ರೋಣದಲ್ಲಿ ತುಂಬಿ ಅದನ್ನು ರಾಣಿಗೆ ಮುಟ್ಟಿಸು ಎಂದು ಅಪ್ಪಣೆಮಾಡಿ ಒಂದು ಪಕ್ಷಿಯ ಕೈಯಲ್ಲಿ ಕೊಟ್ಟನು. ಅದನ್ನು ಆ ಪಕ್ಷಿಯು ಬಾಯಿಯಲ್ಲಿ ಹಿಡಿದುಕೊಂಡು ಬರುತ್ತಲಿರುವಾಗ ದಾರಿಯಲ್ಲಿ ದೊಡ್ಡದಾದ ನದಿಯೊಂದು ಬಂದಿತು. ಅದು ಆ ನದೀಪ್ರವಾಹವನ್ನು ಮೇಲೆ ಆಕಾಶದಲ್ಲಿಯೇ ಹಾಯಾಗಿ ತೇಲುತ್ತ ದಾಟುತ್ತಲಿರುವಾಗ ಮತ್ತೊಂದು ಪಕ್ಷಿಯು ಆಹಾರವೆಂದು ಅದನ್ನು ತಿಳಿದು ಕಸಿಯಲು ಬಂದಿತು. ಅವರೆಡೂ ಪಕ್ಷಿಗಳ ಕಾದಾಟದಲ್ಲಿ ಈ ದೊನ್ನೆಯು ನೀರಿನಲ್ಲಿ ಬಿದ್ದುಬಿಟ್ಟಿತು. ನೀರಿನಲ್ಲಿ ಬಿದ್ದ ಆ ವೀರ್ಯವನ್ನು ಒಂದು ಹೆಣ್ಣು ಮೀನವು* ನುಂಗಿತು. ಅದನ್ನು ಮೀನಗಾರರು ಬಲಿಹಾಕಿ ಹಿಡಿದು ಮನೆಗೆ ತಂದು ಕೊಟ್ಟಾಗ ಅದರ ಗರ್ಭದಿಂದ ಮಣಿ-ಮುತ್ತುಗಳಂತೆ ತಳತಳ ಸುಂದರವಾಗಿ ಹೊಳೆಯುವ ಎರಡು ಕೂಸುಗಳು ಹೊರಬಂದವು. ಆ ಎಳೆಗೂಸುಗಳ ಮುಗ್ಧ ಮನೋಹರವಾದ ಮುಖಮಂಡಲದಲ್ಲಿ ಉಕ್ಕುಕ್ಕಿನಿಂತ ಕಳೆಕಾಂತಿ ಹಾಗೂ ರಾಜವರ್ಚಸ್ಸನ್ನು ಕಂಡು ಚಕಿತರಾಗಿ ಆ ಅಂದಿನಕಾಲದ

* ಅಮಾವಸುವಿನ ಹಿಂದಿನ ಹೆಂಡತಿಯಾದ ಅದ್ರಿಕೆಯೇ ಶಾಪದಿಂದ ಈಗ ಮೀನಯೋನಿಯಲ್ಲಿ ಹುಟ್ಟಿದಳು.

ನಂಬಿಗಸ್ಥರಾದ ಅಂಬಿಗರು ಇದು ರಾಜಪಿಂಡವೆಂದು ತಿಳಿದು ಅವುಗಳ ತಮ್ಮ ಮಹಾರಾಜನಾದ ಉಪರಿಚರವಸುವಿಗೆ ತಂದು ಒಪ್ಪಿಸಿದರು. ತನ್ನಂತೆಯೇ ಇದ್ದ ಆ ಇಬ್ಬರೂ ಮಕ್ಕಳೂ ತನ್ನ ಸಂತತಿಯೇ ಎಂದು ಮುಖಲಕ್ಷಣ ಸಾಮುದ್ರಿಕಶಾಸ್ತ್ರ ಹಾಗೂ ದಿವ್ಯಜ್ಞಾನಿಗಳ ಹೇಳಿಕೆಗಳಿಂದ ಮಹಾರಾಜನು ತಿಳಿದು ಆ ಅಂಬಿಗರ ಪ್ರಾಮಾಣಿಕತೆಗೆ ಮೆಚ್ಚಿ ಎರಡು ಕೂಸುಗಳಲ್ಲಿ ಗಂಡು ಕೂಸನ್ನು ತಾನಿಟ್ಟುಕೊಂಡು ಹೆಣ್ಣು ಕೂಸನ್ನು ಆ ಅಂಬಿಗರ ರಾಜನಿಗೆ ಕೊಟ್ಟುಬಿಟ್ಟನು. ಆ ದಾಶರಾಜನು ದೇವದತ್ತಳಾದ ಅವಳನ್ನು ತಾನೇ ಪ್ರೀತಿಯಿಂದ ಸಾಕಿಸಲಹಿ ದೊಡ್ಡವಳನ್ನು ಮಾಡಿದನು.

ಮತ್ಸ್ಯಗಂಧಾ ಎಂಬ ಹೆಸರಿನ ಆ ಕನ್ಯೆ ಒಂದು ದಿನ ಯಮನೆಯ ತೀರದಲ್ಲಿ ತನ್ನ ಮನೆತನದ ಮುಖ್ಯ ಉಪಜೀವನದ ಸಾಧನವಾದ ನೌಕೆಯಲ್ಲಿ ಒಬ್ಬಳೇ ಕುಳಿತಾಗ ಪರಾಶರ ಮಹರ್ಷಿಗಳು ನದಿಯನ್ನು ದಾಟಲಿಕ್ಕೆಂದು ಬಂದರು. ಅವರನ್ನು ಕರೆದುಕೊಂಡು ಹುಟ್ಟು ಕಡೆಯುತ್ತ ಮತ್ಸ್ಯಗಂಧೆ ನಡುನದಿಗೆ ಬಂದಾಗ ಅವಳ ಯೌವನೋದ್ಭಾಸಿತವಾದ ಸೌಂದರ್ಯಸಾರವನ್ನು ಕಂಡು ಮುನಿಯ ಮನಸ್ಸು ಮರುಳಾಯಿತು. ಆಗ ಅವರು ದರ್ಭದಿಂದ ಆ ನೌಕೆಯ ಸುತ್ತಮುತ್ತಲು ಪರಿಸ್ತರಣವೊಂದನ್ನು ನಿರ್ಮಿಸಿ ತಮ್ಮ ಕಾಮನೆಯನ್ನು ಪೂರಯಿಸಿಕೊಂಡು ಅವಳಿಗೆ ಅಕ್ಷತ ಕನ್ಯಾತ್ವವನ್ನು ಪ್ರದಾನ ಮಾಡಿ ತಪಸ್ಸಿಗೆ ಹೊರಟುಹೋದರು. ಆಗ ಅಲ್ಲಿಯೇ ಒಂದು ನಡುಗಡ್ಡೆಯಲ್ಲಿ ಆ ದಾಶಕನ್ಯೆ ಜ್ಞಾನನಿಧಿಗಳಾದ ಭಗವಾನ್ ಬಾದರಾಯಣರನ್ನು ಪ್ರಸವಿಸಿದಳು. ದ್ವೀಪದಲ್ಲಿ ಹುಟ್ಟಿದುದರಿಂದ ಅವರಿಗೆ ದ್ವೈಪಾಯನರೆಂದು ಹೆಸರು ಬಂದಿತು. ದಂಡ ಕಮಂಡಲ ಪಾಣಿಯಾಗಿ ತಂದೆಯಂತೆಯೇ ತಪಸ್ವೀ ವೇಷದಿಂದ ಹೊರಟುನಿಂತ ಮಗನನ್ನು ನೋಡಿ ನನ್ನ ಗತಿ ಏನೆಂದು ಅವಳು ಕೇಳಿದಾಗ ಬಾದರಾಯಣರು ಅವಳಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ ಕೈಜೋಡಿಸಿ "ತಾಯಿ! ಪರಾಶರರ ಅನುಗ್ರಹದಿಂದ ನಾನು ಹುಟ್ಟಿದರೂ ನಿನ್ನ ಕನ್ಯಾತ್ವಕ್ಕೆ ಚ್ಯುತಿ ಇಲ್ಲ. ಯಾಕಂದರೆ ನಾನು ಹುಟ್ಟಲಿಕ್ಕೆ ನೀನು ನಿಮಿತ್ತ ಮಾತ್ರ, ನನಗೆ ಗರ್ಭವಾಸವಿಲ್ಲ. ನೀನು ಮುಂದೆ ಮಹಾರಾಜನೊಬ್ಬನ ಕೈ ಹಿಡಿದು ಬೇರೆ ಇಬ್ಬರು ಗಂಡು ಮಕ್ಕಳನ್ನು ಹಡೆಯುವೆ. ನಿನಗೆ ಏನಾದರೂ ಅನುವು ಆಪತ್ತು ಬಂದಾಗ ನನ್ನನ್ನು ಸ್ಮರಿಸು. ನೀನು ನೆನೆದಾಗೊಮ್ಮೆ ನಾನು ಬಂದು ನಿನ್ನ ಅಪೇಕ್ಷೆಯನ್ನು ಪೂರೈಸಿ ಕೊಟ್ಟು ಹೋಗುತ್ತೇನೆ" ಎಂದು ಹೇಳಿ ಬದರಿಕಾಶ್ರಮಕ್ಕೆ ತೆರಳಿದರು.

ಮುಂದೆ ಯೋಜನಗಂಧಾ ಸತ್ಯವತೀ ಎಂದು ಹೆಸರಾದ ಅವಳನ್ನು ಶಂತನು ಮಹಾರಾಜನು ಕೈಹಿಡಿದನು. ಅವಳಿಂದ ಚಿತ್ರವೀರ್ಯ, ವಿಚಿತ್ರವೀರ್ಯ ಎಂಬ ಮಕ್ಕಳು ಹುಟ್ಟಿದರು. ಅವರ ಕ್ಷೇತ್ರದಲ್ಲಿ ಪಾಂಡು, ಧೃತರಾಷ್ಟ್ರ, ವಿದುರರು ಜನಿಸಿದರು. ಹಿರಿಯ ಅಣ್ಣನಾದ ಶ್ರೀ ವೇದವ್ಯಾಸರ ಅನುಗ್ರಹದಿಂದ ಜನಿಸಿದ ಅವರೆಲ್ಲರೂ ದೊಡ್ಡವರಾದ ಬಳಿಕ ಸತ್ಯವತಿಯು ಅರ್ಥಾತ್ ಅಚ್ಛೋದಾ ಎಂಬ ಹೆಸರಿನ ಆ ಪಿತೃಕನ್ಯೆಯು ತನ್ನ ಚಿರಂಜೀವನ ಪ್ರಭಾವದಿಂದ ಪರಮ ಪದವ ನೈದಿದಳು.

ಈ ಪಿತೃಗಳ ಮೂರನೆಯ ಗಣವಾದ ಬರ್ಹಿಷದರು ಎಂಬ ಪಿತೃಗಳು ವೈಭ್ರಾಜ ಎಂಬ ಲೋಕದಲ್ಲಿರುವರು. ಇವರೆಲ್ಲರೂ ಪುಲಸ್ತ್ಯ ಪ್ರಜಾಪತಿಯ ಪುತ್ರರಿದ್ದು ಭಗವಂತನನ್ನು ಸಾಕ್ಷಾತ್ಕರಿಸಿಕೊಂಡು ಸುದರ್ಶನರು ಎಂದು ಖ್ಯಾತರಾಗಿದ್ದಾರೆ. ಅವರನ್ನು ದೇವ, ಗಂಧರ್ವ, ಯಕ್ಷ, ರಾಕ್ಷಸರೆಲ್ಲರೂ ಭಕ್ತಿಯಿಂದ ಪೂಜಿಸುತ್ತಾರೆ.

ಬರ್ಹಿಷದಪಿತೃಗಳಿಗೆ ಪೀವರೀ ಎಂಬ ಮಾನಸಕನ್ನೆಯಿದ್ದಳು. ಯೋಗಶಾಸ್ತ್ರದಲ್ಲಿ ಪೀವರಿಯು ಸಾಧಿಸಿದ ಸಿದ್ಧಿ ಅನನ್ಯಸಾಮಾನ್ಯ. ಕರ್ಮಕೌಶಲದ ಆ ಯೌಗಿಕಮಟ್ಟವನ್ನು ಮುಟ್ಟಿದವರು ಮುನಿಮಂಡಲದಲ್ಲಿಯೂ ಇಲ್ಲವೆನ್ನುವಷ್ಟು ಅಪರೂಪ. ಯೋಗೀಶ್ವರರಾದ ಶುಕಾಚಾರ್ಯರಂಥ ಬ್ರಹ್ಮಚಾರಿಗಳು ಅವಳ ಯೋಗಶಕ್ತಿಯನ್ನು ಕಂಡು ತಮ್ಮ ಬ್ರಹ್ಮಚರ್ಯವ್ರತಕ್ಕೆ ಉದ್ಯಾಪನೆಯನ್ನು ಮಾಡಿ ಅವಳನ್ನು ಮದುವೆಯಾಗಲು ಮುಂದೆ ಬಂದದ್ದು ಯೋಗಾಯೋಗವೇ ಸರಿ. ಮುಂದೆ* ಯೋಗಾ, ಯೋಗಿನೀ ಎಂದು ಹೆಸರಾದ ಅವಳ ಹೊಟ್ಟೆಯಲ್ಲಿ ಹುಟ್ಟಿದ* ಕೃಷ್ಣ, ಗೌರ, ಪ್ರಭು, ಶಂಭು ಎಂಬ ನಾಕುಜನ ಮಕ್ಕಳೂ ತಾಯಿತಂದೆಗಳ ಯೋಗಪ್ರಭಾವದಿಂದ ಯೋಗಾಚಾರ್ಯರಾಗಿಯೇ ಜನಿಸಿದರು. ಅವರ ಒಬ್ಬಳೇ ಮಗಳಾದ ಕೃತ್ವೀ* ಎಂಬುವಳನ್ನು ಅಣುಹ ಎಂಬ ಮಹಾರಾಜನಿಗೆ ಕೊಟ್ಟಿತ್ತು. ಅವಳ ಮಗನೇ ಬ್ರಹ್ಮಹತ್ತ.

ಈಗ ನಾನು ಹೇಳಿದ ಮೂರು ಅಮೂರ್ತವಾದ ಪಿತೃಗಣಗಳು ದೇವಪೂಜ್ಯವಾಗಿವೆ. ಏಳು ಗಣಗಳಲ್ಲಿ ಉಳಿದ ನಾಲ್ಕು ಪಿತೃಗಳು ಮನುಷ್ಯರಿಗೆ ಪೂಜ್ಯರಾಗಿ ದಿವ್ಯ ದೇಹಗಳನ್ನು ಧರಿಸಿಕೊಂಡು ಧರ್ಮಮೂರ್ತಿಗಳಾಗಿ ಇದ್ದುದರಿಂದ ಮೂರ್ತರು ಎಂದು ಕರೆಯಲ್ಪಡುತ್ತಾರೆ.

ಜ್ಯೋತಿಃ ಪ್ರಕಾಶದಿಂದ ಅಭಿಭಾಸುರವಾದ ವಸಿಷ್ಠಪ್ರಜಾಪತಿಯ ಲೋಕಗಳಲ್ಲಿ ವಾಸಮಾಡುತ್ತಿರುವ ಮಾನವ ಪೂಜ್ಯರಾದ ಪಿತೃಗಳ ಮೊದಲನೆಯ ಗಣಕ್ಕೆ ಸುಕಾಲರು ಎಂದು ಹೆಸರು. ಸರ್ವಕಾಮೋಪಭೋಗಗಳಿಂದ ಕೂಡಿದ ಆ ಲೋಕದಲ್ಲಿರುವ ಪರಮ ಧಾರ್ಮಿಕರಾದ ಈ ಸುಕಾಲ ಪಿತೃಗಳನ್ನು ಯೋಗ್ಯರಾದ ಬ್ರಾಹ್ಮಣರು ಪೂಜಿಸುತ್ತಾರೆ. ಈ ಪಿತೃಗಳ ಮಾನಸಪುತ್ರಿಯಾದ ಗೌ ಎಂಬುವಳನ್ನು ಭಾಗವತಾಚಾರ್ಯರಾದ ಶ್ರೀ ಶುಕರಾಚಾರ್ಯರಿಗೆ ಕೊಟ್ಟಿದ್ದರು. ಇವಳು ಶುಕಾಚಾರ್ಯರ ಎರಡನೇಯ ಹೆಂಡತಿ. ಏಕಶೃಂಗಾ ಎಂತಲೂ ಸುಪ್ರಸಿದ್ಧಳಾದ ಈ ಶುಕಸೀಮಂತಿನಿಯಿಂದ ಸಾಧ್ಯ ಎಂಬ ದೇವಗಣದ ಕೀರ್ತಿ ಶತಗುಣಿತವಾಗಿ ಶಾರದಕೌಮುದಿಯಂತೆ ದಿಗಂತಲಂಬಿಯಾಯಿತು.

ಮೂರ್ತಗಣದಲ್ಲಿ ಎರಡನೇಯವರಾದ ಅಂಗಿರಸರೆಂಬ ಪಿತೃಗಳು ಮರೀಚಿ ಮಾಲಿಯ ಲೋಕದಲ್ಲಿರುವರು. ಅವರನ್ನು ಕ್ಷತ್ರಿಯರು ಶ್ರದ್ಧೆಯಿಂದ ಆರಾಧಿಸುವರು. ಅವರ ಮಾನಸಕುವರಿಯಾದ ಯಶೋದೆಯನ್ನು ವೃದ್ಧಶರ್ಮನೆಂಬ ರಾಜರ್ಷಿಯ ಮಗನಾದ ವಿಶ್ವಮಹತ್‌ನಿಗೆ ಕೊಟ್ಟಿತ್ತು. ಅವನಿಂದ ದಿಲೀಪನೆಂಬ ಆ ದೇವ ಯುಗದಲ್ಲಿಯೇ ಮಹಾತ್ಮನೆಂದು ಸುಪ್ರಥಿತನಾದ ರಾಜಶ್ರೇಷ್ಠನು ಹುಟ್ಟಿದನು. ಆ ದಿಲೀಪನು ಅಂದು ಮಾಡಿದ ಅಶ್ವಮೇಧದ ವೈಭವ ವಿಜೃಂಭಣೆಗಳನ್ನು ಮಹರ್ಷಿಗಳು ಇಂದಿಗೂ ಹಾಡಿ ಹೊಗಳುತ್ತಲಿದ್ದಾರೆ. ''ಪುಣ್ಯಾತ್ಮನಾದ ದಿಲೀಪನನ್ನು ಕಂಡರೆ ಸಾಕು. ಆ ಪುಣ್ಯದಿಂದ ಸ್ವರ್ಗವನ್ನೇ ಗೆದ್ದು ತರಬಹುದು'' ಎಂಬ ನಾಣ್ಣುಡಿ ಅಂದಿನ ಧರ್ಮಯುಗದ ಆರ್ಷವಾಣಿಯಲ್ಲಿ ರೂಢವಾಗಿತ್ತು.

---

* ಯೋಗಾಚ ಯೋಗಿ ಪತ್ನೀಚ ಯೋಗಿ ಮಾತಾ ತಥೈವ ಚ

* ಕೃಷ್ಣ, ಗೌರಪ್ರಭು, ಶಂಭು, ಭೂರಿಶ್ರುತ ಮತ್ತು ಜಯ ಎಂದು ಐದು ಜನ ಶುಕಕುಮಾರರ ಹೆಸರುಗಳೂ ಕೆಲವು ಪುರಾಣಗಳಲ್ಲಿ ಕಂಡು ಬರುವವು.

* ಇವಳಿಗೆ ಕೀರ್ತಿಮತಿ ಎಂತಲೂ ಹೆಸರಿತ್ತು.

ಮೂರನೆಯ ಗಣವಾದ ಸುಸ್ವಧರೆಂಬ ಪಿತೃಗಳು ಮಹಾಮಹರ್ಷಿಗಳಾದ ಪುಲಹ ಪುತ್ರರು. ಕರ್ದಮ ಪ್ರಜಾಪತಿಯ ತಂದೆಗಳಾದ ಅವರು ವಿಷ್ಣುಪದಿಯಲ್ಲಿ ವಾಸ್ತವ್ಯ ಮಾಡಿರುತ್ತಾರೆ. ಕಾಮಗಾಮಿಗಳಾಗಿ ವಿಹಂಗಮ ರೂಪದಿಂದ ವಾಯುವಿತಾನದಲ್ಲೆಲ್ಲ ಸ್ವಚ್ಛಂದ ಸಂಚಾರವನ್ನು ಮಾಡತಕ್ಕ ಇವರನ್ನು ವೈಶ್ಯಜನಾಂಗದವರು ಭಕ್ತಿಶ್ರದ್ಧೆಗಳಿಂದ ಸೇವಿಸಿ ಅಭೀಪ್ಸಿತಾರ್ಥಗಳನ್ನು ಪಡೆಯುತ್ತಾರೆ. ಈ ಸುಸ್ವಧ ಪಿತೃಗಳ ಮಾನಸ ಪುತ್ರಿಯಾದ ವಿರಜಾ ಎಂಬ ಹೆಸರಿನ ಕನ್ಯಾಮಣಿಯನ್ನು ಸುರೇಂದ್ರ ಸಿಂಹಾಸನವನ್ನೇರಿದ ನಹುಷ ಮಹಾರಾಜನಿಗೆ ಕೊಟ್ಟಿತ್ತು. ಅವನಿಗೆ ಈ ವಿರಜೆಯಲ್ಲಿ ಪುರಾಣ ಪ್ರಸಿದ್ಧವಾದ ಪೃಥ್ವೀಪಾಲ ಯಯಾತಿ ಮಹಾರಾಜನು ಹುಟ್ಟಿದನು. ಅವನ ರೋಮಹರ್ಷಣವಾದ ಕಾವ್ಯಮಯ ಕಥಾನಕವು ಮುಂದೆ ಬರುಲಿರುವುದು.

ನಾಲ್ಕನೆಯವರಾದ ಸೋಮಪರೆಂಬ ಪಿತೃಗಣಪ್ರಮುಖರು ಶುಕ್ರಾಚಾರ್ಯರ ಮಗಳಾದ ಸ್ವಧಾ ಎಂಬುವಳಲ್ಲಿ ಸಾಕ್ಷಾತ್ ಹಿರಣ್ಯಗರ್ಭ ಅಗ್ನಿಯಿಂದ ಹುಟ್ಟಿದರು. ಅತ್ಯಂತ ತೇಜಸ್ವಿಗಳಾದ ಈ ಸೋಮಪರನ್ನು ಶೂದ್ರರು ಪೂಜಿಸುತ್ತಾರೆ. ಅವರ ಮಾನಸ ಕುಮಾರಿಯಾದ ನರ್ಮದೆಯು ಸಮಗ್ರ ದಕ್ಷಿಣಾ ಪಥವನ್ನೆಲ್ಲ ಪಾವನಗೈಯುವ ಸರಿತ್ ಪ್ರವರಳಾಗಿದ್ದಾಳೆ. ಅವನ್ನು ಪುರುಕುತ್ಸ ಮಹಾರಾಜನಿಗೆ ಕೊಟ್ಟಿತ್ತು. ಅವಳ ಮಗನೇ ಮುಂದೆ ದಸ್ಯುಗಳನ್ನೆಲ್ಲ ನಿಗ್ರಹಮಾಡಿ ಮುನಿಕುಲದ ನಿತ್ಯಾಹ್ನಿಕವು ನಿರ್ವಿಘ್ನವಾಗಿ ನಡೆಯುವಂತೆ ಮಾಡಿದನು. ಆದುದರಿಂದ ಅವನಿಗೆ ತ್ರಸದ್ದಸ್ಯು ಎಂದು ಅನ್ವರ್ಥಕವಾದ ಹೆಸರು ಬಂದಿತು.

ಹೀಗೆ ಸುಕಾಲ, ಅಗ್ನಿಷ್ವಾತ್ತ, ಬರ್ಹಿಷದ ಎಂಬ ಮೂರು ಅಮೂರ್ತಗಣಗಳೂ ಕೂಡಿ ಒಟ್ಟು ಏಳುಪಿತೃಗಣಗಳು ಇದ್ದು ''ಯಮಃ ಪಿತೄಣಾಮಧಿ ಪತಿಃ'' ಎಂಬ ವೇದ ವಾಕ್ಯಾನುಸಾರವಾಗಿ ಇವರಿಗೆಲ್ಲ ಯಮದೇವರೇ ಅಧಿಪತಿಗಳು. ಆದುದರಿಂದಲೇ ಯಮನಿಗೆ ಶ್ರಾದ್ಧದೇವನೆಂದು ಕರೆಯುವುದುಂಟು. ಸ್ವಧಾಶಬ್ದೋಚ್ಚಾರಣ ಪೂರ್ವಕವಾಗಿ ಈ ಯಮಧರ್ಮನಿಗೂ ಅಗ್ನಿಗೂ, ಸೋಮನಿಗೂ ಮೂರು ಆಹುತಿಗಳನ್ನು ಅಗ್ನಿಯಲ್ಲಿ ಕೊಡತಕ್ಕದ್ದು. ಸ್ವಧಾ ಶಬ್ದೋಚ್ಚಾರಣ ಪೂರ್ವಕವಾಗಿ ಈ ಆಹುತಿಗಳನ್ನು ಅಗ್ನಿಯಲ್ಲಿ ಕೊಡತಕ್ಕ ಮಂತ್ರ.

''ಸೋಮಾಯ ಪಿತೃಮತೆ ''ಸ್ವಧಾ'' ನಮೋಽಗ್ನಯೇ ಕವ್ಯವಾಹನಾಯ ಸ್ವಧಾ'', ''ನಮೋ ಯಮಾಯ ಅಂಗಿರಸೇ ಸ್ವಧಾ'' ಎಂಬ ಮಂತ್ರಗಳಿಂದ ಆಹುತಿಯನ್ನಿತ್ತರೆ ಪಿತೃಪತಿಯಾದ ಸಮವರ್ತಿಯು ಪರಿತುಷ್ಟನಾಗುವನು. ''ಅಗ್ನಿಮುಖಾ ವೈ ದೇವಾಃ, ಪಾಣಿಮುಖಾ ವೈ ಪಿತರಃ'' ಎಂದು ಪ್ರಮಾಣವಿದ್ದು ದರಿಂದ ಪಿತೃಗಳು ಬ್ರಾಹ್ಮಣ ಸಂತರ್ಪಣೆಯಿಂದ ಹೆಚ್ಚು ಸಂತುಷ್ಟರಾಗುವರು. ಆದುದರಿಂದಲೇ ಪಿತೃಗಳ ಉದ್ದೇಶವಾಗಿ ಬ್ರಾಹ್ಮಣ ಭೋಜನವು ಅವಶ್ಯ ಕರ್ತವ್ಯವಾಗಿದೆ. ದೇವತೆಗಳನ್ನು ಒಲಿಸುವದು ಕಷ್ಟಸಾಧ್ಯವಾದ ಶ್ರಮದ ಕೆಲಸ, ಪಿತೃಗಳು ಬಹುಬೇಗ ಪ್ರಸನ್ನರಾಗಿ ಮಾನವರಿಗೆ ಇಷ್ಟಾರ್ಥಗಳನ್ನು ಪ್ರದಾನ ಮಾಡುವರು. ಆದುದರಿಂದ ಪಿತೃಸಮಾರಾಧನೆಯು ಮನುಷ್ಯರ ಮುಖ್ಯಕರ್ತವ್ಯಗಳಲ್ಲಿ ಒಂದಾಗಿದೆ.

''ಮಾರ್ಕಂಡೇಯ!'' ಶ್ರಾದ್ಧದ ಪ್ರಯೋಜನ, ವಿಧಿ, ವಿಧಾನ, ಅಧಿದೇವತಾ, ಪೂರ್ವಾಪರಗಳನ್ನೆಲ್ಲ ನಿರೂಪಿಸಿ ಸನತ್‌ಕುಮಾರರು ಮುಂದೆ ಹೇಳುತ್ತಾರೆ. ''ಇಷ್ಟು ಹೊತ್ತಿನವರೆಗೆ ನಾನು ಹೇಳಿದ್ದನ್ನೆಲ್ಲ ನೀನು ಭಕ್ತಿಯಿಂದ ಕೇಳಿದೆ. ಆದರೆ ನಿನ್ನಂಥ ಪಿತೃಭಕ್ತನಾದ ಜ್ಞಾನಯೋಗಿ ಮಹಾಮುನಿಯು ಕಣ್ಣಿನಿಂದ ಕಾಣದ ಎಷ್ಟೋ ವಿಷಯಗಳು

ಇದರಲ್ಲಿ ಬೇಕಾದಷ್ಟು ಉಂಟು. ಅದನ್ನೆಲ್ಲ ಕಾಣಲು ನಿನಗೆ ನಾನು ದಿವ್ಯದೃಷ್ಟಿಯನ್ನು ಕೊಡುತ್ತೇನೆ. ಒಳಗೆ ಆ ದಿವ್ಯ ದರ್ಶನ ಮೂಡಿದರೆ ಸಾಕು. ಹೊರಗಿನ ಈ ಮಾಂಸದ ಕಣ್ಣು ಇದ್ದರೂ ಪರವಾ ಇಲ್ಲ. ಇದರಿಂದಲೇ ಅಲ್ಲಿ ಸತ್ಯದ ಬೆಳಕು ಬಿದ್ದು ವಾಸ್ತವತೆಯ ಅರಿವು ಮೂಡುತ್ತದೆ. ಅದೇ ಯೋಗಿಪ್ರತ್ಯಕ್ಷ. ಅದರ ಬಲದಿಂದ ನೀನು ಮುಂದಿನ ಘಟನೆಗಳನ್ನೆಲ್ಲ ಸಾಕ್ಷಾತ್ ನೋಡಿ ತಿಳಿದುಕೋ.

## ಪೂಜನೀಯಾಪಕ್ಷಿಯ ಕಥೆ

ಬೃಹತ್ಕ್ಷತ್ರನ ಮಗನಾದ ಸುಹೋತ್ರನಿಗೆ ಹಸ್ತಿ ಎಂಬ ಮಗನಿದ್ದನು. ಆತನೇ ಎಂದಿನಿಂದಲೂ ಭಾರತವರ್ಷದ ರಾಜಧಾನಿಯಾದ ಹಸ್ತಿನಾವತೀ ಪಟ್ಟಣವನ್ನು ಕೂಡಿಸಿದನು. ಆ ಹಸ್ತಿ ಮಹಾರಾಜನಿಗೆ ಅಜಮೀಢ, ದ್ವಿಮೀಢ, ಪುರುಮೀಢ ಎಂಬ ಮೂರು ಗಂಡುಮಕ್ಕಳು. ಈ ಅಜಮೀಢನಿಗೆ ಧೂಮಿನಿ ಎಂಬ ಮಹಿಷಿಯಲ್ಲಿ ಬೃಹದಿಷು ಹುಟ್ಟಿದನು. ಬೃಹದಿಷುವಿನಿಂದ ಮುಂದೆ ಈ ವಂಶದಲ್ಲಿ ಬೃಹದ್ಧನು, ಸತ್ಯಜಿತ್, ವಿಶ್ವಜಿತ್, ಸೇನಜಿತ್ ಎಂಬ ಲೋಕವಿಖ್ಯಾತರಾದ ರಾಜರಾದರು. ಸೇನಜಿತ್‌ನಿಗೆ ರುಚಿಕ, ಶ್ವೇತಕೇತು, ಮಹಿಮ್ನಾರ, ವತ್ಸ ಎಂದು ನಾಲ್ಕುಜನ ತನಯರಾದರು. ಇವರಲ್ಲಿ ವತ್ಸನು ಅವಂತಿಗೆ ಒಡೆಯನಾದನು. ರುಚಿಕನಿಗೆ ಪೃಥುಸೇನ, ಅವನಿಗೆ ನೀಪ ಮುಂತಾದವರು ಜನಿಸಿದರು. ಅಜಮೀಢನ ವಂಶದಲ್ಲಿ ನೀಪ ಎಂಬ ರಾಜನು ಬಹಳೇ ಪ್ರಖ್ಯಾತಿಯನ್ನು ಹೊಂದಿದನು. ಅವನಿಗೆ ನೂರುಮಂದಿ ಸಮರಶೂರರಾದ ವೀರಪುತ್ರರಿದ್ದರು. ನೀಪಗಣವೆಂದು ಅವರ ಗುಂಪು ಚಿರಕಾಲ ಪ್ರಸಿದ್ಧಿಯನ್ನು ಹೊಂದಿತ್ತು. ಆ ವಂಶದಲ್ಲಿಯ ಸಮರನೆಂಬ ರಣರಂಗಧೀರಜೆರನು ಕಾಂಪಿಲ್ಯನಗರದಲ್ಲಿದ್ದು ತನ್ನ ಯಶೋದುಂದುಭಿಯನ್ನು ಚತಃಸಾಗರಪರ್ಯಂತ ಮೊಳಗಿಸಿದನು. ಆ ಸಮರನಿಗೆ ಪರ, ಪಾರ, ಸದಶ್ವರೆಂದು ಮೂರು ಮಕ್ಕಳು. ಪರನಿಗೆ ಪೃಥು, ಪೃಥುವಿಗೆ ಸುಕೃತ, ಸುಕೃತನಿಂದ ವಿಭ್ರಾಜನು ಈ ಹುಟ್ಟಿದನು. ವಿಭ್ರಾಜನ ಮಗನಾದ ಅಣುಹನಿಗೆ ಶ್ರೀಶುಕಮುನಿಗಳ ಮಗಳಾದ ಕೃತ್ವಿಯಲ್ಲಿ ಬ್ರಹ್ಮದತ್ತನೆಂಬ ರಾಜರ್ಷಿ ಉತ್ಪನ್ನನಾದನು. ವೀತರಾಗನಾದ ಈ ವಿಭ್ರಾಜ ರಾಜಮಹಾಜನು ಯೋಗಶಕ್ತಿಯ ಮಹಾಮಹಿಮೆಯಿಂದ ತನ್ನ ಸೊಸೆಯಾದ ಆ ಶುಕಪುತ್ರಿಕೆಯಲ್ಲಿ ಮತ್ತೊಮ್ಮೆ ಹುಟ್ಟಿ ಬಂದನು. ಅವನಿಗೆ ಆಗ ವಿಷ್ವಕ್ ಸೇನನೆಂದು ಹೆಸರು. ಇವನ ಅಣ್ಣನ ಹೆಸರು ಸರ್ವಸೇನ. ಸರ್ವಸೇನನು ಹಿರಿಯನಾದರೂ ಪೂಜನೀಯಾ ಪಕ್ಷಿಯು ಚಿಕ್ಕವನಿದ್ದಾಗ ಅವನ ನೇತ್ರಗಳನ್ನು ತನ್ನ ಕೊಕ್ಕಿನಿಂದ ಚುಚ್ಚಿ ಕಣ್ಣುಗುಡ್ಡೆಗಳನ್ನೇ ಕಿತ್ತುಬಿಟ್ಟದ್ದರಿಂದ ಧೃತರಾಷ್ಟ್ರನಂತೆ ಅವನು ಅಂಧನಾಗಿದ್ದನು. ಆ ಕಾರಣ ಅವನ ತಮ್ಮನಾದ ವಿಷ್ವಕ್ ಸೇನನೇ ರಾಜ್ಯವಾಳಿದನು.

ಹಿಂದಕ್ಕೆ ಕಾಂಪಿಲ್ಯನಗರದಲ್ಲಿ ರಾಜರ್ಷಿಯಾದ ಬ್ರಹ್ಮದತ್ತನು ರಾಜ್ಯವನ್ನು ಬಹುಕಾಲ ಆಳಿದನು. ಬಹುಶ್ರುತನಾದ ಆ ಬ್ರಹ್ಮದತ್ತನಿಗೆ ವಿವಿಧ ಪಶುಪಕ್ಷಿಗಳ ಭಾಷೆಗಳೆಲ್ಲ ಚೆನ್ನಾಗಿ ತಿಳಿದು ಅರ್ಥವಾಗುತ್ತಲಿದ್ದವು. ಅವನಿಗೆ ಪೂಜನೀಯಾ ಎಂಬ ಹೆಣ್ಣು ಗುಬ್ಬಿ ಜೀವದ ಗೆಳತಿಯಾಗಿತ್ತು. ಅರಮನೆಯ ಚಂದ್ರಶಾತಿಯ ಆಸಂದಿಯೊಂದರಲ್ಲಿ ಗೂಡು ಕಟ್ಟಿಕೊಂಡು ಬೀಡುಬಿಟ್ಟಿರುವ ಪೂಜನೀಯಾಪಕ್ಷಿಯು ಹಗಲು ಹೊತ್ತು ದಿಗ್ ದೇಶಗಳನ್ನೆಲ್ಲ ಸುತ್ತಾಡಿ ಬಂದು ಸಾಯಂಕಾಲದಲ್ಲಿ ರಾಜನಿಗೆ ಪ್ರಪಂಚದ ಸಮಾಚಾರವನ್ನೆಲ್ಲ ತಿಳಿಸುತ್ತಲಿತ್ತು. ರಮ್ಯವಾದ ಅನೇಕ ಕತೆಕಾದಂಬರಿಗಳನ್ನು ಹೇಳಿ

ಕವನಗಳನ್ನು ಹಾಡಿ ಅದು ಪ್ರತಿನಿತ್ಯ ರಾಜನ ಮನಸ್ಸನ್ನು ರಂಜಿಸುತ್ತಲಿತ್ತು. ಚತುರಮತಿಯಾದ ಆ ಶಕುಂತಿಕೆ ತನ್ನ ಮಧುರ ಭಾಷಣ ಹಾಗೂ ವಿವಿಧವಾರ್ತಾ ನಿವೇದನಗಳಿಂದ ಬ್ರಹ್ಮದತ್ತನಿಗೆ ಪ್ರಾಣಪ್ರಿಯ ಪಕ್ಷಿಯಾಗಿತ್ತು. ವಿನೋದಗೈಯುವ ವಿದೂಷಕವಾಗಿತ್ತು. ಸಲಹೆ ನೀಡುವ ಸಚಿವವಾಗಿತ್ತು. ಮಾರ್ಗದರ್ಶಕ ಮಿತ್ರವಾಗಿತ್ತು.

ಅದರ ಬಣ್ಣ ಕಣ್ಣು ಕೋರೈಸುತ್ತಿತ್ತು. ರೆಕ್ಕೆಗಳು ಹಾಲಿನಂತೆ ಬೆಳ್ಳಗೆ, ತಲೆ ಅಚ್ಚಗೆಂಪು, ಕತ್ತು ಹುಚ್ಚಗೆಂಪು. ಬೆನ್ನುಮಾತ್ರ ತುಂಬಕಪ್ಪು, ಹೀಗೆ ಇಂದ್ರಚಾಪವೇ ಈದ ಮರಿಯಂತಿದ್ದ ಆ ಪೂಜನೀಯಾ ಪಕ್ಷಿಯ ಮೈ-ಕೈಗಳಲ್ಲಿ ವಿವಿಧ ವರ್ಣಗಳ ಸ್ವರ್ಣ ಸಮ್ಮೇಲನವಾದಂತೆ ಕಾಣುತ್ತಲಿತ್ತು. ಅದರ ಮಯೂರಸೌಂದರ್ಯದ ಈ ಮನೋಹರ ಕಾಂತಿಗೆ ಅದರ ಮಧುರಾಲಾಪವೊಂದು ಸೇರಿದ್ದರಿಂದ ಅದು ಬ್ರಹ್ಮದತ್ತನ ಹೃದಯ ಪಂಜರದ ಅರಗಿಣಿಯಾಗಿತ್ತು.

ಪ್ರತಿದಿನ ಪ್ರಾತಃಕಾಲದಲ್ಲಿ ಸೂರ್ಯೋದಯ ಸಮಯದಲ್ಲಿ ಕಾಂಪಿಲ್ಯ ನಗರದ ರಾಜಭವನದಿಂದ ಹೊರಟು ಆ ಕಾಂತ ಶಕುಂತಿಕೆಯು ತನ್ನ ಹಾಲಿನ ಹಾಳೆಗಳಂತಿರುವ ರೆಕ್ಕೆಗಳನ್ನು ಬೀಸಿ ಬಾನ್ನಡಲನ್ನು ಈಸುತ್ತ ಹೋಗುತ್ತಲಿತ್ತು. ನಾನಾದೇಶಗಳ ವನೋಪವನಗಳನ್ನೂ, ಗಿರಿದರಿಗಳ ಸಾಲುಗಳಲ್ಲಿರುವ ತೋಪು ತೋಟಗಳನ್ನೂ, ನದ-ನದೀತೀರಗಳ ಕುಂಜನಿಕುಂಜಗಳನ್ನೂ, ಸುತ್ತಾಡಿ ಹಳ್ಳಿ-ಪಳ್ಳಿ-ನಗ-ನಗರ-ಸಂತೆ-ಸಭೆ-ಜಾತ್ರೆ ಜನಪದಗಳನ್ನೆಲ್ಲ ತಿರುಗಾಡಿ ನೋಡಿಕೊಂಡು ಸಾಯಂಕಾಲ ಕಾಂಪಿಲ್ಯ ನಗರಕ್ಕೆ ಮರುಳುತ್ತಿತ್ತು. ರಾತ್ರಿಯ ಹೊತ್ತು ಬ್ರಹ್ಮದತ್ತನಿಗೆ ದೇಶವಿದೇಶಗಳ ಸುದ್ದಿ ಸಮಾಚಾರಗಳನ್ನೆಲ್ಲ ತನ್ನ ರಸಾಳ ವಾಣಿಯಿಂದ ತಿಳಿಸಿ ರಂಜನೆಯನ್ನು ಮಾಡುತ್ತಲಿತ್ತು. ರಸಭರಿತವಾದ ಅದರ ವಾರ್ತಾವಿವರಣೆಯ ವಿನೋದದಲ್ಲಿ ರಾಜನಿಗೆ ಇಡೀ ರಾತ್ರಿಯೆಲ್ಲವೂ ಒಂದು ರಸನಿಮಿಷದಂತೆ ಕಳೆಯುತ್ತಲಿತ್ತು.

ಒಂದು ದಿನ ಮಹಾರಾಜನು ತನ್ನ ಪ್ರಾಣಸಖಿಯಾದ ಪೂಜನೀಯೆಗೆ ತನ್ನ ಪಟ್ಟದರಸಿಯಾದ ಸನ್ನತಿಯು ಗರ್ಭಿಣಿಯಾದ ಸಂತೋಷದ ಸುದ್ದಿಯನ್ನು ತಿಳಿಸಿದನು. ಆಗ ಆನಂದತುಂದಿಲವಾದ ಗುಬ್ಬಿಯು 'ಮಹಾರಾಜ! ಹಾಗಾದರೆ ನಿನ್ನ ಆ ರಾಜಕುಮಾರನಿಗೆ ಆಡಲಿಕ್ಕೆ ಜೋಡಿಯ ಗೆಳೆಯನೆಂದು ನಾನೂ ಒಂದು ಗಂಡು ಗುಬ್ಬಿಯನ್ನು ಹಡೆದುಕೊಡುವೆನೆಂದು' ನಾಚುತ್ತ ಹೇಳಿತು. ಮಹಾರಾಣಿ ಸರ್ವಸೇನ ಎಂಬ ಗಂಡುಮಗುವನ್ನು ಹೆತ್ತ ದಿನವೇ ಪೂಜನೀಯಾ ತನ್ನ ಗೂಡಿನಲ್ಲಿ ತತ್ತಿ ಇಟ್ಟಿತ್ತು. ತತ್ತಿ ಒಡೆದು ಮರಿ ಹೊರಗೆ ಬಂದಾಗ ಅದು ಇನ್ನೂ ಪೂರ್ಣ ಆಕಾರ ಪಡೆದಿರಲಿಲ್ಲ. ಇಂಥ ಅಶಕ್ತ ಹಾಗೂ ವಿಕಾರ ಮುಖದ ಊನ ಹೀನ ಮಗನನ್ನು ಕಂಡು ಪೂಜನೀಯೆಗೆ ದುಃಖವಾಯಿತು. ಆಗ ಅದು ದಿಗ್‌ದೇಶಾಂತರಗಳನ್ನೆಲ್ಲ ಸುತ್ತಿ ಅರಸಿ ಒಂದು ಅಮೃತಫಲವನ್ನು ತಂದು ದಿನಾಲು ತನ್ನ ವ್ಯಂಗ ಮಗನಿಗೆ ತಿನ್ನಿಸಹತ್ತಿತು. ಅಮೃತ ಫಲದ ರಸಪ್ರಾಶನದ ಪರಿಣಾಮವಾಗಿ ಅವಳ ಅಂಗಹೀನ ಮತ್ತು ಚಕ್ಷುಃಶೂನ್ಯವಾದ ಮಗುವಿಗೆ ಕಣ್ಣುಬಂದು ಮೈಕೈ ತುಂಬಿಕೊಂಡು ಅದು ಚಂದ ಕಾಣಹತ್ತಿತು. ಮತ್ತು ಅದರಿಂದ ಅದಕ್ಕೆ ಮೈಯಲ್ಲಿ ಕಸುವು ಬಂದು ಅದು ರಾಜಾಂಗಣದಲ್ಲಿ ಸ್ವಚ್ಛಂದವಾಗಿ ಆಡತೊಡಗಿತು, ಅಲ್ಲಿಯೇ , ಆಡುತ್ತಲಿರುವ ರಾಜಕುಮಾರ ಸರ್ವಸೇನನಿಗೂ ಆ ಗುಬ್ಬೀಮರಿಗೂ ಸ್ನೇಹವಾಗಿ ಅವರಿಬ್ಬರೂ ಕೂಡಿಯೇ ಆಡುತ್ತಿದ್ದರು.

ಪುತ್ರಪ್ರಣಯಿನಿಯಾದ ಪೂಜನೀಯೆ ತನ್ನ ಮಗನ ಜೊತೆಗೆ ರಾಜನ ಮಗನ ಸಲುವಾಗಿಯೂ ಒಂದು ಅಮೃತದ ಹಣ್ಣನ್ನು ತೆಗೆದುಕೊಂಡು ಬರತೊಡಗಿತು. ಆ ಅಮೃತ

ಫಲದ ಪ್ರಭಾವದಿಂದ ಆ ರಾಜಪುತ್ರನೂ ಈ ಗುಬ್ಬೀಮರಿಯೂ ಒಳ್ಳೆ ಸತ್ವಯುತರೂ ತೇಜೋವಂತರೂ ಆಗಿ ದಿವ್ಯದೀಪ್ತಿ ಕಳಕಳಿಸಿ ಕಮನೀಯ ಕಾಂತಿಕಳೆಯ ಜೀವದ ಗೆಳೆಯರಾಗಿ ಬೆಳೆಯಹತ್ತಿದರು.

ಬ್ರಹ್ಮದತ್ತನ ಮಗನು ಒಮ್ಮೊಮ್ಮೆ ಬಹಳ ಹಟ ಮಾಡಿ ಅಳಹತ್ತಿದನೆಂದರೆ ಅರಮನೆಯ ದಾಸಿಯರು ಪೂಜನೀಯೆಯ ಗೂಡಿಗೆ ಹೋಗಿ ಕೈಹಾಕಿ ಅವಳ ಆ ಗಂಡು ಗುಬ್ಬೀಮರಿಯನ್ನು ಎತ್ತಿಕೊಂಡು ಬರುತ್ತಲಿದ್ದರು. ಅದನ್ನು ತಂದು ಕೈಯಲ್ಲಿಟ್ಟಕೂಡಲೇ ಎಂಥ ಹಟ ಬಂದರೂ ಸುಮ್ಮನಾಗಿ ಬಿಟ್ಟು ಅದರ ಜೊತೆಗೆ ರಾಜಕುಮಾರನು ಆಟದಲ್ಲಿ ಮೈ ಮರೆತುಬಿಡುತ್ತಲಿದ್ದನು. ಒಂದು ದಿನ ಅರಸುಕುವರನಿಗೆ ಬಹಳ ಸಿಟ್ಟುಬಂದಿತ್ತು. ದಾಸಿಯರು ಏನು ಕೊಟ್ಟರೂ ಎಷ್ಟು ರಮಿಸಿದರೂ ಅವನು ಸಮಾಧಾನವಾಗಲಿಲ್ಲ. ಕೈಯಲ್ಲಿ ಕೊಟ್ಟದ್ದನ್ನೆಲ್ಲ ಮುರಿದು ಹರಿದು ಒಗೆದು ಒಡೆದು ಹಾಕಿ ಬಿಡುತ್ತಲಿದ್ದನು. ಆಗ ಓರ್ವ ದಾಸಿಯು ಪೂಜನೀಯೆಯ ಗೂಡಿನಿಂದ ಅವಳ ಮಗುವನ್ನು ಹಿಡಿದು ತಂದು ರಾಜಕುಮಾರನ ಕೈಯಲ್ಲಿ ಕೊಟ್ಟಳು. ಹಟಕ್ಕೆ ಬಿದ್ದು ಸಿಟ್ಟು ನೆತ್ತಿಗೇರಿದ ಆ ಬಾಲಕನು ಹಿಂದು ಮುಂದೆ ನೋಡದೇ ಉಳಿದ ವಸ್ತುಗಳಂತೆ ಆ ಗುಬ್ಬಿಯ ಮರಿಯನ್ನೂ ಕೈಯಲ್ಲಿ ಹಿಡಿದು ಕುತ್ತಿಗೆಯನ್ನು ಮುರಿದು ನೆಲಕ್ಕೆ ಒಗೆದು ಬಿಟ್ಟನು. ಪೂಜನೀಯೆಯ ಪುತ್ರನ ಈ ಆಕಸ್ಮಿಕ ಮರಣವನ್ನು ಕಂಡು ರಾಜನ ಮನದಲ್ಲಿ ಸಿಟ್ಟು, ಕರುಣೆ, ದಿಗ್ಭ್ರಮೆ, ಶೋಕ, ಸಂಭ್ರಮಗಳೆಲ್ಲ ಒಟ್ಟಿಗೆ ದಟ್ಟಿಸಿ ಬಂದು ದಿಙ್ಮೂಢನಾಗಿ ನಿಂತನು. ಕ್ರುದ್ಧನಾದ ಉದ್ಧಟರಾಜಕುಮಾರನ ಕೈಯಲ್ಲಿ ಆ ಗುಬ್ಬಿಯ ಮರಿಯನ್ನು ತಂದುಕೊಟ್ಟ ದಾಸಿಯನ್ನು ಹಳಿದನು.

ಸಾಯಂಕಾಲದಲ್ಲಿ ಮಗನಿಗಾಗಿ ಅಮೃತ ಫಲವನ್ನು ಚಂಚುವಿನ ತುದಿಯಲ್ಲಿ ಎತ್ತಿ ಹಿಡಿದುಕೊಂಡು ಪುತ್ರವಾತ್ಸಲ್ಯದಿಂದ ಧಾವಿಸಿ ಬಂದ ಪೂಜನೀಯೆಯು ತನ್ನ ಮಗನ ದುರಂತ ಮರಣವನ್ನು ಕಂಡು ಮೂರ್ಛಿತಳಾಗಿ ಬಿದ್ದು ಬಿಟ್ಟಿತು. ತುಸು ಹೊತ್ತಿನಮೇಲೆ ಮತ್ತೆ ಚೇತರಿಸಿಕೊಂಡು ಎದ್ದು ಎಲ್ಲರ ಎದೆ ಕರಗುವಂತೆ ದೀನವಾಗಿ ವಿಲಾಪಗೈದಿತು. ಸತ್ತ ಮಗನ ಬೇರೆ ಬೇರೆಯಾಗಿ ಬಿದ್ದ ರುಂಡದಂಡಗಳನ್ನು ಒತ್ತಟ್ಟಿಗಿಟ್ಟು ಅದರ ಮೇಲೆ ಬಿದ್ದು ಹೊರಳಾಡಿತು. ಅರಮನೆಯ ಅಂಗಳದ ತುಂಬೆಲ್ಲ ಅಳುತ್ತ ಉರುಳಾಡಿತು. ಮಗನ ಗುಣಗಳನ್ನು ನೆನೆನೆನಿಸಿ ಹಾಡಿಹಾಡಿ ಅತ್ತಿತ್ತು ಆಗ ಅಲ್ಲಿಯೇ ಆಡುತ್ತಲಿರುವ ಅರಸುಗುವರ ಸರ್ವಸೇನನನ್ನು ಕಂಡು ಬಳಿಕಂತೂ ಅದರ ಶೋಕಸಂತಾಪಗಳು ಉರಿದೆದ್ದು ಕಿಚ್ಚು ಕೆದರಿದಂತಾಯಿತು. ತನ್ನ ಮಗನ ಮೃತ್ಯುವಿಗೆ ಕಾರಣವಾದ ಆ ಕೂಸನ್ನು ಕೆಂಗಣ್ಣಿನಿಂದ ಕೆಕ್ಕರಿಸಿ ಕಂಡು ಆ ಪಕ್ಷಿಯ ಕ್ರೋಧವು ಪ್ರತಿಶೋಧದ ರೂಪವನಾಂತು ನಿಂತಿತು. ಅವಳ ಕೋಪದ ಕಿಡಿ ಸೇಡಿನ ಸಿಡಿಲಾಗಿ ಸಿಡಿಯಹತ್ತಿತು. ನಿಮಿಷಾರ್ಧದಲ್ಲಿ ಪೂಜನೀಯೆ ರಾಜಕುಮಾರನಿದ್ದಲ್ಲಿಗೆ ಗಕ್ಕನೆಹಾರಿ ಬಂದು ತನ್ನ ಚೂಪಾದ ಕೊಕ್ಕೆಯಿಂದ ಪಟ್ಟನೆ ಬಡೆದು ಅವನ ಕಣ್ಣು ಗುಡ್ಡೆಗಳನ್ನು ಕಿತ್ತುಕೊಂಡು ಬಿಟ್ಟಿತು. ಇದೇನಾಯಿತು ಎಂದು ಜನರು ನೋಡ ನೋಡುವಷ್ಟರಲ್ಲಿಯೇ ಅದು ಚಂಗನೆ ಆಗಸಕ್ಕೆ ಜಿಗಿದು ರಾಜನಿಗೆ ಹೇಳಿತು- ''ರಾಜನ್, ನೀನು ರಾಜಧರ್ಮಗಳನ್ನೆಲ್ಲ ಚೆನ್ನಾಗಿ ತಿಳಿದವನಿದ್ದು ನನ್ನ ಮಗನನ್ನು ನಿನ್ನ ಚಿರಂಜೀವನಿಂದ ಹೇಗೆ ಕೊಲ್ಲಿಸಿದೆ? ನಾನು ನಿನ್ನ ಮೇಲೆ ವಿಶ್ವಾಸವಿಟ್ಟು ನನ್ನ ಕರುಳಿನ ಕೂಸನ್ನು ನಿನಗೆ ಒಪ್ಪಿಸಿ ನಿನ್ನ ಮಗನಿಗಾಗಿ ಅಮೃತ ಫಲವನ್ನು ತರಲು ಹೋಗಿರುತ್ತಿದ್ದೆ. ನೀನು ವಿಶ್ವಾಸಘಾತವನ್ನು ಮಾಡಿದ್ದಲ್ಲದೇ ನನ್ನ ಇಡೀ ಜೀವನವೇ ಒಂದು ದುಃಖದ ದಳ್ಳುರಿಯಲ್ಲಿ ಬೇಯುವಂತೆ ಮಾಡಿದೆ. ಶುಕ್ರನೀತಿಯಲ್ಲಿ ''ಹಸಿದುಬಂದವರನ್ನೂ ಶರಣು

ಬಂದವರನ್ನೂ ಮತ್ತು ತನ್ನ ಕೂಡ ಇರುವವರನ್ನೂ ರಾಜರು ರಕ್ಷಿಸಲೇಬೇಕೆಂದು'' ಒತ್ತಿ ಹೇಳಿದ್ದು ನಿನಗೆ ಗೊತ್ತಿಲ್ಲವೇ! ನಂಬಿ ನಿಂದವರನ್ನು ಕೊಂದು ನಿಷ್ಕರುಣಿಗಳಾದ ರಾಜರು ಕುಂಭೀ ಪಾಕದಲ್ಲಿ ಕೊಳೆಯುವರು. ಇದನ್ನೆಲ್ಲ ತಿಳಿದೂ ನನ್ನ ಮಗನನ್ನು ಕೊಲ್ಲಿಸಿದ ಕ್ಷತ್ರಿಯಾಧಮ! ನಿನಗೆ ಧಿಕ್ಕಾರವಿರಲಿ.''

ರಾಜನು ಕ್ರುದ್ಧಳಾದ ತನ್ನ ಜೀವಸಖಿಯ ಈ ಬಿರುನುಡಿಗಳನ್ನೂ ಹಾಗೂ ಅವಳು ತನ್ನ ಮಗನ ಕಣ್ಣು ಕಿತ್ತಿ ಕುರುಡನನ್ನು ಮಾಡಿ ಹಾರಿಹೋಗಿ ದೂರ ನಿಂತು ಮಾಡಿದ ಧಿಕ್ಕಾರವನ್ನೂ ತಮ್ಮ ಚಿರಂತನ ಗೆಳೆತನಕ್ಕೆ ಬಾಧೆಬರಬಾರದೆಂದು ಸುಮ್ಮನೆ ತಾಳಿಕೊಂಡನು. ಮತ್ತು ತಾನು ಅದರ ಪುತ್ರಿನೇತ್ರಘಾತದಂಥ ಘೋರಕೃತಿಯಿಂದ ತುಸುವೂ ಕೋಪತಾಪಗಳನ್ನು ಹೊಂದದೇ ಸೌಮ್ಯವಾಗಿಯೇ ಮಾತನಾಡಿದನು. ''ಗುಣವಂತಿಯಾದ ಗುಬ್ಬಿಗೆಳತಿಯೇ! ನನ್ನ ಕಡೆಯಿಂದ ತಿಳಿಯದೇ ಈ ತಪ್ಪಾದದ್ದು ನಿಜ. ಅದಕ್ಕಾಗಿ ನೀನು ನನ್ನ ಮಗನ ಕಣ್ಣು ಕಿತ್ತಿ ಶಾಸನಮಾಡಿದ್ದಕ್ಕೆ ನನಗೇನೂ ಅಸಮಾಧಾನವಿಲ್ಲ. ಆ ತೀವ್ರವಾದ ತಪ್ಪಿಗೆ ತಕ್ಕುದಾದ ಶಾಸನವಾದಂತಾಯಿತು. ಇನ್ನಾದರೂ ಶಾಂತಳಾಗಿ ಬಂದು ಮೊದಲಿನಂತೆ ನನ್ನ ಗೆಳತಿಯಾಗಿ ನನ್ನ ಅರಮನೆಯಲ್ಲಿ ಇರಲು ಬಾ, ಕೆಳಗಿಳಿ, ನಾವಿಬ್ಬರೂ ಗೆಳಯರಾಗಿರೋಣ.''

ಆಗ ಗುಬ್ಬಿಯಾದ ಪೂಜನೀಯೆ ಅಂದಿತು- ''ಮಹಾರಾಜ, ನಿನ್ನ ಮಗನ ಕಣ್ಣು ಹೋದದ್ದಕ್ಕಾಗಿ ನಿನಗೇನು ಅಂಥ ದುಃಖವಾಗಿಲ್ಲವೆಂದು ನೀನು ಬಾಯಿಂದ ಹೇಳಿದರೂ ನಾನು ನಂಬುವುದಿಲ್ಲ. ಮಕ್ಕಳಿಗೆ ಸಾವು ನೋವು ಬಂದರೆ ಎಂಥ ವೇದನೆ ತಾಯಿತಂದೆಯರಿಗೆ ಆಗುವುದು ಎನ್ನುವುದನ್ನು ನಾನು ನನ್ನ ಅನುಭವದಿಂದಲೇ ಕಂಡುಕೊಂಡಿದ್ದೇನೆ. ನಿನಗೆ ಅಪಕಾರ ಬಗೆದು ನಿನ್ನ ಮಗನ ಕಣ್ಣು ಕಳೆದ ಬಳಿಕ ನಿನ್ನ ಮನೆಯಲ್ಲಿ ನಾನಿರುವುದೆಂದರೆ ಮೃತ್ಯು ಪಂಜರದಲ್ಲಿರವುದೇ ಸರಿ. ನೀನು ಕ್ಷಮಿಸಿದರೂ ನಿನ್ನ ಸೇವಕರಾದರೂ ನನ್ನ ಮೇಲೆ ಸೇಡು ತೀರಿಸಿಗೊಳ್ಳದೇ ಬಿಡಲಾರರು. ಕಾರಣ ನಾನು ನಿನ್ನಲ್ಲಿಗೆ ಬರಲಾರೆ. ನಿನ್ನ ಕಲ್ಯಾಣವಾಗಲಿ ನಾನು ಹೋಗಿ ಬರುತ್ತೇನೆ'' ಎಂದು ಹೇಳಿ ಅದು ಹಾರಿಹೋಯಿತು.

## ಕೀಳು ಕೃತಿಯಿಂದ ಏಳು ಜನುಮದಿ ಗೋಳನುಂಡಿಹ ಕುಶಿಕರು

ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಬ್ರಹ್ಮರ್ಷಿ ವಿಶ್ವಾಮಿತ್ರರ ಏಳು ಜನ ಮಕ್ಕಳು ವಾಸ ಮಾಡುತ್ತಲಿದ್ದರು. ವಾಗ್ದುಷ್ಟ, ಕ್ರೋಧನ, ಹಿಂಸ್ರ, ಪಿಶುನ, ಕವಿ, ಖಸ್ರಮ, ಪಿತೃವರ್ತಿ ಎಂಬ ಹೆಸರಿನ ಆ ಸಪ್ತ ಋಷಿಕುಮಾರರು ತಮ್ಮ ತಂದೆ ತಪಸ್ಸಿಗೆ ತೆರಳಿದ ಬಳಿಕ ಮಹರ್ಷಿ ಗಾರ್ಗ್ಯರ ಹತ್ತಿರ ಬಂದು ಅವರ ಶಿಷ್ಯರಾಗಿ ಅಧ್ಯಯನವನ್ನು ಮುಂದುವರಿಸಿದರು. ಪ್ರತಿದಿನವೂ ಆ ಋಷಿಪುತ್ರರೂ ಜ್ಞಾನಯೋಗಿಗಳಾದ ಗಾರ್ಗ್ಯರ ಹತ್ತಿರ ಪ್ರಾತಃಕಾಲದಲ್ಲಿ ಸರಹಸ್ಯ ಉಪನಿಷತ್ ಪಾಠವನ್ನು ಮುಗಿಸಿಕೊಂಡು ಬಳಿಕ ಆಶ್ರಮದ ಆಕಳನ್ನು ಕರುಸಹಿತವಾಗಿ ಹುಲ್ಲುಗಾವಲುಗಳಲ್ಲಿ ಮೇಯಿಸಿಕೊಂಡು ಬರುತ್ತಲಿದ್ದರು.

ಒಂದು ಬೆಳಗಿನ ಜಾವದಲ್ಲಿ ವೇದಾಂತಪಾಠವನ್ನು ಮುಗಿಸಿದಬಳಿಕ ಗುರುಕುಲದ ಗೋವನ್ನು ಕರುವಿನೊಂದಿಗೆ ಅಟ್ಟಿಸಿಕೊಂಡು ಹೊಸ ಹುಲ್ಲಿನಿಂದ ಹಸಿರು ಮುರಿಯುತ್ತಲಿರುವ ವನಾಂತರದ ಶಾದ್ವಲಪ್ರದೇಶಕ್ಕೆ ಹೋದರು. ಅಂದು ಮಧ್ಯಾಹ್ನದಲ್ಲಿ ಅಲ್ಲಿಯ ಉರಿಬಿಸಿಲಿನ ಬೇಗೆಯಿಂದ ಬೆಂದು ಬಸವಳಿದ ಅವರು ಹಸಿವೆಯಿಂದ ಕಂಗೆಟ್ಟರು. ದುರ್ದೈವದಿಂದ ಆಗ ಅವರಿಗೆ ಅಲ್ಲಿ ಎಷ್ಟು ಹುಡುಕಿದರೂ ಏನೂ ಸಿಕ್ಕದೆ ಪ್ರಾಣಾಂತಿಕ ಪ್ರಸಂಗ ಬಂದಿತು. ಹೀಗೆ ಕ್ಷುಧಾಬಾಧೆಯಿಂದ ವಿವೇಕಶೂನ್ಯರಾದ ಅವರಿಗೆ ಆಗ ಒಂದು

ದುರ್ಬುದ್ಧಿ ಹುಟ್ಟಿತು. ತಾವು ಕಾಯಲಿಕ್ಕೆಂದು ತಂದ ಗುರುಗಳ ಆ ಆಕಳವನ್ನೇ ಕೊಂದು ಅದರ ಮಾಂಸದಿಂದ ತಮ್ಮ ಹಸಿವೆಯನ್ನು ಹಿಂಗಿಸಿಕೊಳ್ಳಬೇಕೆಂಬ ದುರ್ವಿಚಾರ ಅವರಿಗೆ ಬಂದಿತು. ಆದರೆ ಆ ಏಳು ಜನ ಕೌಶಿಕಕುಮಾರರಲ್ಲಿ ಧರ್ಮಭೀರುಗಳಾದ ಕವಿ ಮತ್ತು ಖಸ್ರಮ ಎಂಬ ಇಬ್ಬರಿಗೆ ಮಾತ್ರ ಈ ಕ್ರೂರ ವಿಚಾರವು ಮನಸ್ಸಿಗೆ ಬರಲಿಲ್ಲ. ಅವರು ಗೋಹತ್ಯೆ, ಗುರುದ್ರೋಹ, ಮಾಂಸಭಕ್ಷಣಗಳ ದುರಂತ ದುಷ್ಪರಿಣಾಮಗಳನ್ನು ಬಣ್ಣಿಸಿ ಅದನ್ನು ಕೊಲ್ಲುವುದು ಬೇಡವೆಂದು ಹೇಳಿದರು. ಆದರೆ ಹಸಿವೆಯ ಕಸಿವಿಸಿಯಿಂದ ವಿವೇಕವನ್ನು ಕಳೆದುಕೊಂಡ ಅವರಿಗೆ ಇವರ ಮಾತು ರುಚಿಸಲಿಲ್ಲ. ಅವರು ಆಕಳವನ್ನು ಕೊಲ್ಲಲು ಸಿದ್ಧರಾದರು. ಆಗ ಅವರಲ್ಲಿ ಪಿತೃನಿಷ್ಠನೂ ನಿತ್ಯಶ್ರಾದ್ಧ ವಿಧಿವಿಧಾನಜ್ಞನೂ ಆದ ಪಿತೃವರ್ತಿ ಎಂಬ ಋಷಿಕುಮಾರನು ''ನೀವು ಈ ಗೋವನ್ನು ಕೊಲ್ಲುವುದೇ ನಿಶ್ಚಯವಾದರೆ ಇದನ್ನು ನಮ್ಮ ಪಿತೃಗಳ ಶ್ರಾದ್ಧಕ್ಕಾಗಿಯಾದರೂ ಉಪಯೋಗಿಸಿ ಉಳಿದುದನ್ನು ನಾವು ಭಕ್ಷಿಸುವ'' ಎಂದು ಉಳಿದವರಿಗೆಲ್ಲರಿಗೂ ಸೂಚಿಸಿದನು. ಅವನ ಮಾತಿಗೆ ಎಲ್ಲರೂ ಸಮ್ಮತಿಸಿದರು. ಆಮೇಲೆ ಅವರೆಲ್ಲರೂ ಕೂಡಿ ಆ ಹಸುವನ್ನು ಕೊಂದು ಅವರ ಮಾಂಸವನ್ನು ಪ್ರೋಕ್ಷಣಮಾಡಿ ಪಿತೃಗಳಿಗೆ ಶ್ರದ್ಧೆಯಿಂದ ಸಮರ್ಪಣೆಗೈದರು. ಬಳಿಕ ತಾವೆಲ್ಲರೂ ಕುಳಿತು ಹೊಟ್ಟೆತುಂಬ ತಿಂದು ಹಸಿವೆಯನ್ನು ಹಿಂಗಿಸಿಕೊಂಡರು.

ಮನೆಗೆ ಬಂದಬಳಿಕ ಗುರುಗಳಾದ ಗಾರ್ಗ್ಯರು ಬರೀ ಕರುವು ಮಾತ್ರ ಬಂದುದನ್ನು ಕಂಡು ಆಕಳು ಎಲ್ಲಿ ಹೋಯಿತೆಂದು ಕೇಳಿದರು. ಆಗ ಅವರು ''ಘೋರವಾದ ಅಡವಿಯಲ್ಲಿ ಕ್ರೂರವಾದ ಹೆಬ್ಬುಲಿಯೊಂದು ಬಂದು ಆಕಳವನ್ನು ಕೊಂದು ತಿಂದುಹೋಯಿತು'' ಎಂದು ಸುಳ್ಳು ಹೇಳಿ ಅಧೋವದನರಾಗಿ ನಿಂತುಕೊಂಡರು.

ಗುರುಗಳ ವಂಚನೆ ಹಾಗೂ ಗೋಹತ್ಯೆ ಮಾಂಸಭಕ್ಷಣಾದಿ ಘೋರ ಪಾಪಲೇಪದಿಂದ ''ಅತ್ಯುತ್ಕಟೈಃ ಪುಣ್ಯಪಾಪೈಃ ಇಹೈವ ಫಲಮಶ್ನುತೆ'' (ಅತಿ ಪಾಪ ಅತಿ ಪುಣ್ಯಗಳ ಫಲವು ಇಲ್ಲಿಯೇ ದೊರೆಯುವದು). ಎಂಬ ಮಾತಿನಂತೆ ಅವರ ಆಯುಷ್ಯವೆಲ್ಲ ಕ್ಷೀಣವಾಯಿತು. ಪರಮಪವಿತ್ರವಾದ ಬ್ರಹ್ಮರ್ಷಿಗಳ ವಂಶದಲ್ಲಿ ಋಷಿಕುಮಾರರಾಗಿ ಜನಿಸಿದ ಅವರು ಆ ಘೋರಪಾಪದಿಂದ ಪತಿತರಾಗಿ ಅತ್ಯಂತ ಹೇಯವಾದ ಬೇಡರ ಜಾತಿಯಲ್ಲಿ ಕಾಡು ಕಿರಾತರಾಗಿ ಹುಟ್ಟಿದರು.

ದಶಾರ್ಣದೇಶದಲ್ಲಿ ಹಿಂಸಾಚಾರದಲ್ಲಿ ನಿರಂತರವೂ ನಿರತನಾದ ಕ್ರೂರ ಕಿರಾತನೊಬ್ಬನಿಂದ ಹುಟ್ಟಿಬಂದ ಅವರು ಪ್ರಾಯದಲ್ಲಿ ತಮ್ಮ ಜಾತಿ ಧರ್ಮಕ್ಕುಚಿತವಾದ ಘಾತಪಾತ, ಚೌರ್ಯ, ಕ್ರೌರ್ಯ, ಮುಂತಾದ ಕುಕೃತ್ಯಗಳಲ್ಲಿ ಆಸಕ್ತರಾಗಿದ್ದರು. ಆದರೆ ಪೂರ್ವಜನ್ಮದಲ್ಲಿ ಅವರು ಅನೇಕ ಪುಣ್ಯಕರ್ಮಗಳನ್ನು ಮಾಡಿದ್ದರಿಂದಲೂ ಹಾಗೂ ಸಾಯುವ ಮುನ್ನ ಪಿತೃಗಳನ್ನು ಉದ್ದೇಶಿಸಿ ಶ್ರದ್ಧೆಯಿಂದ ತರ್ಪಣಗೈದ ಮೂಲಕವೂ ಅವರಿಗೆ ತಮ್ಮ ದುಷ್ಕರ್ಮದ ಸ್ಮರಣೆಯುಂಟಾಯಿತು.

ಅದನ್ನೆಲ್ಲ ನೆನೆದಕೂಡಲೇ ಅವರಿಗೆ ತಮ್ಮ ಈ ಅಧಃಪಾತದಬಗೆ ಅತ್ಯಂತ ಪಶ್ಚಾತ್ತಾಪ ವಾಯಿತು. ಹಸುವನ್ನು ಕೊಂದು, ಗುರುಗಳನ್ನು ವಂಚಿಸಿದ ಈ ದುಷ್ಟಕರ್ಮಗಳೇ ಈಗಿನ ತಮ್ಮ ನೀಚಜಾತಿ ಜನನಕ್ಕೆ ಕಾರಣವೆಂದು ಖಾತ್ರಿಯಾದ ಅವರು ತಕ್ಷಣದಲ್ಲಿ ಹಿಂಸಾ ಅತ್ಯಾಚಾರ ಹತ್ಯಾಕಾರ್ಯಗಳನ್ನೆಲ್ಲ ಬಿಟ್ಟುಬಿಟ್ಟರು. ಮತ್ತು ತಮ್ಮ ಬೇಡರ ತಂದೆ-ತಾಯಂದಿರನ್ನು ಹಗಲಿರುಳು ಸೇವಿಸಿ ಶುಶ್ರೂಷೆ ಮಾಡಿದರು. ಸುಳ್ಳು, ವಂಚನೆ, ಕಪಟ, ಕಳವು ಮಾಡುವದನ್ನೆಲ್ಲ ಸರ್ವಥಾ ಬಿಟ್ಟು ಹಗಲಿರುಳೂ ಭಗವಂತನ ಧ್ಯಾನವನ್ನು ಮಾಡಹತ್ತಿದರು. ಬದುಕಿರುವಮಟ್ಟಿಗೆ ಮಾತ್ರ ಆಹಾರವನ್ನು ಸ್ವೀಕರಿಸತೊಡಗಿದರು.

ನಿರ್ವೈರ, ನಿರ್ವೃತಿ, ಶಾಂತ, ನಿರ್ಮನ್ಯು, ಕೃತಿ, ವೈಧಸ, ಮಾತೃವರ್ತಿ ಎಂಬ ಹೆಸರಿನಿಂದ ಪ್ರಸಿದ್ಧರಾದ ಆ ಪುಲಿಂದಪುತ್ರರು ತಮ್ಮ ಬೇಡ ಜಾತಿಯಲ್ಲಿಯೂ ಧ್ಯಾನಯೋಗ ಹಾಗೂ ಮಿತಾಹಾರ ಮೊದಲಾದವುಗಳಿಂದ ಮುನಿವೃತ್ತಿಯನ್ನು ಸಾಧಿಸಿದರು. ವೃದ್ಧರಾದ ಅವರ ತಾಯಿ-ತಂದೆಗಳು ತೀರಿಕೊಂಡಬಳಿಕ ಅವರೆಲ್ಲರೂ ತಮ್ಮ ಧನುರ್ಬಾಣಗಳನ್ನು ಬಿಟ್ಟು ಆ ಅರಣ್ಯದಲ್ಲಿಯೇ ಪ್ರಾಣ ಪರಿತ್ಯಾಗಮಾಡಿದರು. ಆ ಕಿರಾತ ಕುಲದಲ್ಲಿ ಅವರು ಮಾಡಿದ ಮಾತೃಭಕ್ತಿ, ಪಿತೃಸೇವೆ ಮತ್ತು ಸತ್ಯ ಅಹಿಂಸಾದಿ ಧರ್ಮಾಚರಣೆಗಳ ಪ್ರಭಾವದಿಂದ ಅವರೆಲ್ಲ ಮುಂದಿನ ಜನ್ಮದಲ್ಲಿ ಕಾಲಂಜರ ಗಿರಿಯಲ್ಲಿ ಚಿಗರೆಯಾಗಿ ಹುಟ್ಟಿದರು. ಉನ್ಮುಖ, ನಿತ್ಯವಿತ್ರಸ್ತ, ಸ್ತಬ್ಧಕರ್ಣ, ವಿಲೋಚನ, ಪಂಡಿತ, ಘಸ್ಮರ, ನಾದೀ ಎಂಬ ಹೆಸರಿನಿಂದ ಹರಿಣ ಬಾಲಕರಾಗಿ ಹುಟ್ಟಿದ ಅವರು ಈ ಜನ್ಮದಲ್ಲಿಯೂ ಜಾತಿಸ್ಮರಣವನ್ನು ಪಡೆದಿದ್ದರು.

ಚಿಗರೆಗಳ ಜೀವನವೇ ಪರಿಶುದ್ಧ, ಮುನಿಸಮ್ಮಿತ, ಯಾರಿಗೂ ಉಪದ್ರವವೀಯದ ಸುಂದರ ಶರೀರದ ಸಾಧುಸ್ವಭಾವದ ಸ್ವಚ್ಛಪ್ರಾಣಿಗಳು ಅವು. ಅವು ಯಾರಿಗೂ ಭಾರವಲ್ಲ. ಅಡವಿಯಲ್ಲಿ ಇದ್ದು, ಹರಿವ ತೊರೆಯ ನೀರು ಕುಡಿದು ಹಸಿಯ ಹುಲ್ಲು ತಿಂದು, ತಮ್ಮ ನೆರಳಿಗೆ ತಾವೇ ಅಂಜಿಕೊಂಡಿರುವ ಇಂಥ ಪವಿತ್ರ ಜೀವಿಗಳಾದ ಮೃಗಕುಲದಲ್ಲಿ ಹುಟ್ಟಿದ ಆ ಏಳು ಜನ ಋಷಿಕುಮಾರರಂತೂ ಹಸಿವೆ ನೀರಡಿಕೆಗಳನ್ನು ಕಟ್ಟಿ ಯೋಗ ಸಾಧನವನ್ನು ಮಾಡತೊಡಗಿದರು.

ಚಿಗರೆ ದ್ವಂದ್ವಜೀವಿ. ರಸಿಕಚೇತನ. ಪ್ರೇಮಮಾಧುರಿ ಹರಿಣಗಳ ದಾಂಪತ್ಯ ಜೀವನದಲ್ಲಿ ಪೂರ್ಣಪಾಕವನ್ನು ಪಡೆದಿರುತ್ತದೆ. ಹರಿಣ ಕುಲದಲ್ಲಿ ರತಿ ಒಂದು ಭೋಗವಲ್ಲ. ಅದೂ ಒಂದು ಆಹಾರ ನಿದ್ರೆಗಳಂತೆ ದೇಹಧರ್ಮ. ಅಲ್ಲಿ ಸಂಯಮ ಶಬ್ದ ಇಲ್ಲ. ವೈರಾಗ್ಯದ ವಾರ್ತೆಇಲ್ಲ. ಅಂಥ ಪ್ರಣಯ ಪ್ರವಣವಾದ ಜಾತಿಯಲ್ಲಿ ಹುಟ್ಟಿದರೂ ಆ ಮುನಿತನೂಜರು ತಮ್ಮ ಪೂರ್ವಜನ್ಮ ಸ್ಮರಣದಿಂದ ಜಾಗರೂಕರಾಗಿ ಚಿಗರೀ ದೇಹದಲ್ಲಿಯೂ ಚಂಚಲ ಚಿತ್ತರಾಗದೇ ಇದ್ದು ಯೋಗೋಪಾಸನೆ ಮಾಡಿದರು.

ಕೊನೆಕೊನೆಗಂತೂ ಯೋಗಾರೂಢವಾದ ಆ ತಪಸ್ವಿ ಚಿಗರೆಗಳು ಆಹಾರವನ್ನು ಬಿಟ್ಟು ದೇವರ ಧ್ಯಾನ ಮಾಡತೊಡಗಿದವು. ನೀರನ್ನೂ ಬಿಟ್ಟು ನಾರಾಯಣನನ್ನು ಭಜಿಸಹತ್ತಿದವು. ಹೆಜ್ಜೆ ಹೆಜ್ಜೆಗೊಂದು ಹೆಜ್ಜೇನಿನಂಥ ಶುಚಿ ರುಚಿಯಾದ ನೀರಿನ ನೂರಾರು ಕಾರಂಜಿಗಳು ಪುಟಿಯುತ್ತಲಿರುವ ಆ ಕಾಲಂಜರ ಪರ್ವತದಲ್ಲಿದ್ದರೂ ಮರುಸ್ಥಳದಲ್ಲಿ ಕುಳಿತವರಂತೆ ಜಲತ್ಯಾಗ ಮಾಡಿ ಆ ಹರಿಣಕುಮಾರರು ಘೋರತಪವನಾಚರಿಸಿದರು. ಕಾಲಂಜರ ಕಾನನದ ಶೈಲಶ್ರೇಣಿಗಳ ಶಿಖರಗಳಲ್ಲಿ ಇಂದಿಗೂ ಆ ತಪೋ ಹರಿಣಗಳ ಹೆಜ್ಜೆಗಳನ್ನು ನಾವು ಗುರುತಿಸಬಹುದು. ಕ್ರಮೇಣ ತಪಃಕೃಶವಾಗಿ ಆ ಹರಿಣಗಳು ದೇಹತ್ಯಾಗ ಮಾಡಿದವು.

ಹೀಗೆ ಅಖಂಡ ತಪವನ್ನಾಚರಿಸಿದ್ದರಿಂದ ಆ ವಿಶ್ವಾಮಿತ್ರನ ಮಕ್ಕಳು ಚಿಗರೆಯ ಜನ್ಮದಿಂದ ಮುಕ್ತರಾಗಿ ಅದಕ್ಕಿಂತಲೂ ಪರಿಶುದ್ಧವಾದ ಸ್ವಚ್ಛ ಶರೀರದ ಚಕ್ರವಾಕ ಪಕ್ಷಿಯ ಜನ್ಮವನ್ನು ಹೊಂದಿದರು. ಶರದ್ವೀಪದಂಥ ಪುಣ್ಯಕ್ಷೇತ್ರದಲ್ಲಿಯ ಪವಿತ್ರ ತೀರ್ಥಗಳಲ್ಲಿ ನಡುನೀರಲ್ಲಿ ನಿಂತೇ ತಪವನ್ನಾಚರಿಸಿದವು.

ಚಕ್ರವಾಕಕ್ಕೆ ಗೆಣೆವಕ್ಕಿ ಎಂದು ಹೆಸರು. ಜಗತ್ತಿನ ಎಲ್ಲ ಪಕ್ಷಿಗಳಲ್ಲಿ ಚಕ್ರವಾಕವು ಅತ್ಯಂತ ಕಾಮಿ ಹಾಗೂ ಪ್ರೇಮಿ ಪಕ್ಷಿ. ಇದು ಒಂದು ಕ್ಷಣ ಪ್ರೇಯಸಿ ಅತ್ತಿತ್ತ ಹೋದರೂ ವಿರಹ ವೇದನೆಯಿಂದ ಕೂಗಿಕೊಳ್ಳುವುದು. ಕಾಮಕೇಲಿಯೊಂದು ಚಕ್ರವಾಕ ಜೀವನದ

ಉಸಿರು ಇದ್ದಂತೆ. ಇಂಥ ಕಾಮಕೇಲೀಲೋಲವಾದ ಪ್ರಣಯಿ ಪಕ್ಷಿಗಳ ಜಲಚರಜಾತಿಯಲ್ಲಿ ಏಳು ಋಷಿಕುಮಾರರು ಹುಟ್ಟಿದರೂ ಜನ್ಮಾಂತರ ಸಂಸ್ಕಾರದಿಂದ 'ಬ್ರಹ್ಮಚರ್ಯ ವ್ರತಸ್ಥ ರಾಗಿಯೇ ಉಳಿದರು. ವಿಷಯ ಸುಖದ ಆಶೆಯನ್ನು ಸಂಪೂರ್ಣವಾಗಿ ಬಿಟ್ಟು ಬಿಟ್ಟು ಈ ಜಲೇಚರ ಯೋನಿಯಲ್ಲಿಯೂ ಯೋಗಾಭ್ಯಾಸವನ್ನು ಮಾಡಿ ಅವರು ಭಗವದಾರಾಧನೆಯ ತಮ್ಮ ಕಾರ್ಯವನ್ನು ಮುಂದುವರಿಸಿದರು. ಈ ಜನ್ಮದಲ್ಲಿಯೂ ಅವರಿಗೆ ಶೀಲವೃತ್ತಿಗಳಿಗೆ ಅನುಸರಿಸಿ ನಿಸ್ಪೃಹ, ನಿರ್ಮಮ, ಕ್ಷಾಂತ, ನಿರ್ದ್ವಂದ್ವ, ನಿಷ್ಪರಿಗ್ರಹ, ನಿವೃತ್ತಿ, ನಿಭೃತ, ಎಂದು ಏಳು ಹೆಸರುಗಳು ಗುಣಾನುಗುಣವಾಗಿ ಸ್ವಭಾವೋಚಿತವಾಗಿ ಬಂದಿದ್ದವು.

ಈ ಜಾತಿಯಲ್ಲಿಯೂ ಅವು ಅನ್ನ ನೀರುಗಳನ್ನೆಲ್ಲ ತ್ಯಾಗಮಾಡಿ ತಪೋವೃತ್ತಿಯಿಂದಲೇ ತಮ್ಮ ತನು ತ್ಯಾಗ ಮಾಡಿದವು. ಮುಂದಿನ ಜನ್ಮದಲ್ಲಿ ಅವರೆಲ್ಲ ಅತ್ಯಂತ ವಿಶುದ್ಧವಾದ ಮಾನಸ ಸರೋವರದ ಹಂಸಪಕ್ಷಿಗಳಾಗಿ ಹುಟ್ಟಿ ಬಂದರು. ಅದರ ಹಾಲಿನಂತೆ ಬೆಳ್ಳಗಾದ ಮೈಬಣ್ಣ ಹೃದಯದ ಪರಿಶುದ್ಧ ಸ್ವರೂಪದ ತಿಳಿಮೆಗೆ ಸಂಕೇತವಾಗಿ ಬಂದಂತಿತ್ತು. ಅವುಗಳ ಅಂತರಂಗ ಶುದ್ಧಿ ಹಾಗೂ ಬಹಿರಂಗ ಶುದ್ಧಿಗೆ ಅನುರೂಪವಾಗಿ ಆಗಿನ ಅವರ ಶುಭನಾಮಗಳೂ ಆ ಪಾವನ ಜೀವನದ ಪಾವಿತ್ರ್ಯವನ್ನು ಎತ್ತಿ ತೋರುತ್ತಲಿದ್ದವು.

ಪದ್ಮಗರ್ಭ, ಅರವಿಂದಾಕ್ಷ, ಹೈಮಗರ್ಭ, ಸುಲೋಚನ, ಉರುಬಿಂದು, ಸುಬಿಂದು, ಕ್ಷೀರಗರ್ಭ ಎಂಬ ಅನ್ವರ್ಥವಾದ ಹೆಸರುಗಳಿಂದ ಒಡಗೂಡಿದ ಆ ಹಂಸಗಳು ಮಾನಸ ಸರೋವರದ ತರಂಗಪೀಠದಲ್ಲಿ ಕುಳಿತು ತಪಸ್ಸನ್ನು ಆಚರಿಸ ತೊಡಗಿದವು. ಕೇವಲ ಗಾಳಿಯನ್ನು ತಿಂದು ನೀರು ಕುಡಿದು, ಅಖಂಡ ಧ್ಯಾನಮಾಡುತ್ತ ಅನೇಕ ವರುಷಗಳವರೆಗೆ ಆ ಹಾಲಿನ ಬಣ್ಣದ ಹಂಸಗಳು ಜಲಾಶಯದಲ್ಲಿದ್ದು ಜಪ ಮಾಡುವ ಬಗೆಯನ್ನು ಕಂಡು ಮುನಿಮನುಜರೆಲ್ಲ ಆಚ್ಚರಿಪಟ್ಟರು. ಎಷ್ಟೋ ತಪಸ್ವಿಗಳೂ ಕೂಡ ಅಲ್ಲಿಗೆ ಬಂದು ನೋಡಿ ಕೌತುಕ ಪಟ್ಟು ಅವುಗಳ ತಪಸ್ತೀವ್ರತೆಯನ್ನು ಕಂಡು ನಾಚುವ ಪ್ರಸಂಗ ಬರುತ್ತಿತ್ತು.

ಹೈಮಾಚಲದ ಉತ್ತುಂಗ ಶೃಂಗಭೂಮಿಯಾದ ಕೈಲಾಸ ಪರ್ವತದ ಚಂದ್ರ ಚುಂಬಿನೀ ಶೈಲ ಶ್ರೇಣಿಯಲ್ಲಿ ಗೌರೀಶಿಖರವೊಂದು ಧರಾತಲದ ಪುಣ್ಯಸ್ತಂಭವಾಗಿ ಪಾವಿತ್ರ್ಯ ಪ್ರತೀಕವಾಗಿ ನಿಂತುಕೊಂಡಿದೆ. ಆ ಪುಣ್ಯಕ್ಷೇತ್ರದ ಪಾವಿತ್ರ್ಯವೆಲ್ಲವು ಕರಗಿನಿಂತು ಪರಶಿವನ ಕಾರುಣ್ಯ ಮಡುವುಗಟ್ಟಿದ ಪುಣ್ಯತೀರ್ಥವೇ ಮಾನಸ ಸರೋವರ.

ಹೀಗೆ ಪಾವಿತ್ರ್ಯ ಮಾಂಗಲ್ಯಗಳ ಸಂಗಮದ ಹೃದಯಂಗಮವಾದ ರಂಗಸ್ಥಲದಂತಿದ್ದ ಆ ಸರಸ್ತೀರದಲ್ಲಿ ಜಲತರಂಗಗಳ ಉತ್ಸಂಗಾಸವನ್ನೇರಿ ಏಳು ಹಂಸಪಕ್ಷಿಗಳು ತಪವನ್ನಾಚರಿಸುತ್ತಲಿದ್ದವು. ನಿಸ್ತಬ್ಧವನಾಂತರಾಳದ ಅಂದಿನ ಪ್ರಶಾಂತ ಏಕಾಂತ ಆ ರಾಜಹಂಸಕುಲದ ಸಪ್ತರ್ಷಿಗಳ ಮೌನಧ್ಯಾನಸಮಾಧಿಗೆ ಏಕತಾನತೆಯನ್ನು ಒದಗಿಸಿತ್ತು. ಅಲ್ಲಿ ಬೀಸುವ ಮಂದಗಾಳಿಕೂಡ ನಿಷ್ಪಂದ ನೀರವತೆಯಿಂದ ಜೀರ್ಣಪರ್ಣಗಳಲ್ಲಿ ಮರ್ಮರನಾದ ಗೈಯ್ಯದೆ ಮೂಕವಾಹಿಯಾಗಿತ್ತು. ಇಂಥ ಪ್ರಶಾಂತವಾತಾವರಣದ ಪ್ರಕೃತಿಸಾಮ್ರಾಜ್ಯದ ಮೌನಮಂಜೂಷಿಕೆಯ ಮುಚ್ಚಳವನ್ನು ಅದೆಷ್ಟೋ ದಿನ ಯಾರೂ ತೆಗೆಯದೇ ಇದ್ದುದರಿಂದ ಅಲ್ಲಿಯ ಚಿರಂತನ ಮೌನಮೂರ್ಛೆಯಲ್ಲಿ ಮಲಗಿದ ಆ ಸರೋವರದ ಸಿರಿಗನ್ನಡಿಯಲ್ಲಿ ಅಚಲ ಪ್ರತಿಮೆಗಳಾಗಿ ನೀರ್ಗಲ್ಲುಗಳಾಗಿ ಕುಳಿತು ತಪಿಸುವ ಸಪ್ತಹಂಸಗಳ ಧ್ಯಾನಯೋಗ ನಿರಾತಂಕವಾಗಿ ನಡೆದಿತ್ತು.

ಒಂದು ದಿನ ಕಾಂಪಿಲ್ಯ ನಗರಾಧೀಶ್ವರನಾದ ವಿಭ್ರಾಜ ಮಹಾರಾಜನು ವನವಿಹಾರ, ಜಲವಿಹಾರ, ವಸಂತವಿಹಾರಕ್ಕೆಂದು ತನ್ನ ರಾಣೀವಾಸದೊಂದಿಗೆ ಅಲ್ಲಿಗೆ ಬಿಜಯಗೈದಾಗ ಅಲ್ಲಿಯ ಮೌನದ ಮುಗಿಲಿಗೆ ಶಬ್ದಸ್ಪರ್ಶವಾದಂತಾಯಿತು. ದಾಸದಾಸೀ ಗಣದಿಂದಲೂ ಹಾಗೂ ಅಂತಃಪುರದ ಚೆಲ್ವಿಕೆಯ ಚಾರು ಪುತ್ಥಳಿಗಳಂತಿರುವ ರಮಣೀಮಣಿಯರಿಂದಲೂ ಒಡಗೂಡಿ ಮಹಾರಾಜನು ಅಲ್ಲಿಗೆ ಬಂದನು. ಸ್ವಚ್ಛಂದ ಜಲಕ್ರೀಡೆಯನ್ನು ಮಾಡಿ ಕೇಲೀ ವಿಲಾಸ ವಿಹಾರ ವಿನೋದಗಳಿಂದ ಆ ರಾಜನು ತೀರ್ಥಕ್ಷೇತ್ರವಾದ ಮಾನಸವನ್ನು ಶೃಂಗಾರ ರಂಗಮಂಟಪವನ್ನಾಗಿ ಪರಿವರ್ತಿಸಿದನು. ಆ ರಸಿಕರಾಜನು ಮದ್ದಾನೆಯಂತೆ ಉದ್ದಾಮ ಜಲಕ್ರೀಡೆಯನ್ನು ಮಾಡಿ, ಮೇಲೆ ಬಂದಾಗ ದಾಸಿಯರು ಅವನಿಗೆ ಆಸನವನ್ನು ಸಿದ್ಧಪಡಿಸಿದ್ದರು. ಮತ್ತೊಬ್ಬ ದಾಸಿ ಬೆಳ್ಮುಗಿಲಿನಂತೆ ತೆಳ್ಳಗಾದ ಹಾಗೂ ಬೆಳ್ಳಗಾದ ರೇಶಿಮೆಯ ಬಟ್ಟೆಯನ್ನು ಕೈಯಲ್ಲಿ ಹಿಡಿದು ನಿಂತಿದ್ದಳು. ಅದನ್ನು ರಾಜ ಧರಿಸಿದಕೂಡಲೇ ಮಗದೊಬ್ಬದಾಸಿ ಮಿಂಚಿನೆಳೆಗಳನ್ನು ನೆಯ್ದು ಮಾಡಿದಂತಿರುವ ಜರದ ಮೇಲುದವನ್ನು ತಂದು ಮೈಮೇಲೆ ಹೊಚ್ಚಿದಳು. ಇನ್ನೊಬ್ಬಳು ಮರಿಚಂದ್ರನಂತಿರುವ ರನ್ನಗನ್ನಡಿಯೊಂದನ್ನು ತಂದು ಮುಂದೆ ಹಿಡಿದಳು. ಅವನ ನೆಚ್ಚಿನಮಡದಿ ಬಂದು ಹಣೆಗೆ ಕುಂಕುಮದ ಬಟ್ಟನ್ನಿಟ್ಟಳು. ಗಂಗೆಗೌರಿಯರಂತೆ ಧವಲವಸನಧಾರಿಣಿಯರಾದ ಇಬ್ಬರು ವಾರವನಿತೆಯರು ಬಂದು ಚಾಮರಗಳನ್ನು ಬೀಸಹತ್ತಿದರು. ಅವನ ಪಾದಸಂವಾಹನಕ್ಕಾಗಿ ನಾಲ್ಕುಜನ ತೊತ್ತುಗಳು ಮುಂದೆ ಬಂದು ಕುಳಿತರು. ಅವನ ಪಕ್ಕದ ಆಸನದಲ್ಲಿ ಆಗ ಅವನ ಪಟ್ಟದರಾಣಿ ರತಿಗಿಂತ ಅತಿಶಯವಾದ ರೂಪಸಿರಿಯಿಂದ ಬಳಕುತ್ತ ಬಂದು ಕುಳಿತಳು.

ಮಹಾರಾಜನ ರಾಜೈಶ್ವರ್ಯದ ಈ ವೈಬವ ವಿಜೃಂಭಣೆಗಳನ್ನು ಕಂಡು ಅಲ್ಲಿಯೇ ತಪೋಮಗ್ನವಾದ ಕೆಲವು ಹಂಸಗಳ ಮನಸ್ಸು ವಿಚಲಿತವಾಯಿತು. ''ನಾನಿಷ್ಟು ದಿನ ಅನ್ನನೀರುಗಳನ್ನೆಲ್ಲ ಬಿಟ್ಟು ಉಪವಾಸಬಿದ್ದು ಇಷ್ಟೆಲ್ಲ ತಪಸ್ಸು ಮಾಡಿದೆ. ಒಮ್ಮೆಯೂ ಇಂಥ ಸುಖವನ್ನು ಕಾಣಲಿಲ್ಲ. ನಾನು ಇಷ್ಟು ದಿನ ಮಾಡಿದ ತಪಸ್ಸಿನಿಂದ ಏನಾದರೂ ಪುಣ್ಯವು ಬಂದಿದ್ದರೆ ಅದರಿಂದ ಇಂಥ ರಾಜಭೋಗವಾದರೂ ದೊರೆತರೆ ನಾವು ಹುಟ್ಟಿದ್ದೂ, ಇಷ್ಟು ಕಷ್ಟಪಟ್ಟದ್ದೂ, ತಪಸ್ಸು ಮಾಡಿದ್ದೂ ಸಾರ್ಥಕ, ದೇವರೆ! ನನ್ನನ್ನು ಇಂಥ ರಾಜವಂಶದಲ್ಲಿ ಹುಟ್ಟಿಸಲಾರೆಯಾ!'' ಎಂದು ಅವುಗಳಲ್ಲಿಯ ಒಂದು ಹಂಸವು ನಿಟ್ಟುಸಿರನ್ನು ಎಳೆಯಿತು. ಅದನ್ನು ಕೇಳಿ ಅದರ ಎಡಬಲದಲ್ಲಿ ಕುಳಿತ ಎರಡು ಹಂಸಗಳು 'ನೀನು ರಾಜನಾಗುವುದಾದರೆ ನಾವೂ ನಮ್ಮ ತಪಸ್ಸಿನ ಪುಣ್ಯದಿಂದ ನಿನ್ನ ಮಂತ್ರಿಗಳಾಗಿ ಮಿತ್ರರಾಗಿ ಹುಟ್ಟಿಬರುವೆವು'' ಎಂದು ಅಂದವು.

ಈ ಮೂರು ಮರಾಳಗಳ ಮಗ್ಗಲಿನ ವೀಚೀವಿಷ್ಟರದಲ್ಲಿ ಅಧಿಷ್ಠಿತವಾದ ಶುಚಿ ವಾಕ್ ಎಂಬ ಹಕ್ಕಿಯು ರಾಜನಾಗಬೇಕೆಂದು ಬಯಸಿದ ಮೊದಲಿನ ಹಂಸವನ್ನು ಕುರಿತು ಹೇಳಿತು. ''ಎಲೋ ಹುಚ್ಚ ಹಂಸವೇ! ಬ್ರಹ್ಮರ್ಷಿಕುಮಾರರಾಗಿ ಹುಟ್ಟಿದ ನಾವು ಒಂದು ಜನ್ಮದಲ್ಲಿ ಮಾಡಿದ ದುಷ್ಕರ್ಮದಿಂದ ಅನೇಕ ನೀಚ ಜನ್ಮಗಳಲ್ಲಿ ತೊಳಲಿ ಬಳಲಿ ಪಾಪವನ್ನು ಕಳೆದುಕೊಂಡು ಈ ಜನ್ಮದಲ್ಲಿ ತುಸು ಶುದ್ಧಿ ಸಿದ್ಧಿಗಳನ್ನು ಪಡೆದುಕೊಂಡಿದ್ದೇವೆ. ಇನ್ನು ಮುಂದಿನ ಜನುಮದಲ್ಲಿಯಾದರೂ ವೈರಾಗ್ಯಭಾಗ್ಯದಿಂದ ಯೋಗಾರೂಢರಾಗಿ ಬ್ರಹ್ಮಜ್ಞಾನವನ್ನು ಪಡೆದು ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂದಿದ್ದೆವು. ಆದರೆ ನಿಮಗೆ ಇದೀಗ ಈ ಕ್ಷುಲ್ಲಕವಾದ ರಾಜೈಶ್ವರ್ಯವನ್ನು ಕಂಡು ವಿಷಯಲಾಲಸೆಯುಂಟಾಗಿ ನಿಮ್ಮ ತಪವನ್ನೆಲ್ಲ ಅದಕ್ಕಾಗಿ ಧಾರೆಯೆರೆಯಲು ಸಿದ್ಧರಾಗಿರುವಿರಿ. ನೀನು ಬಯಸಿದಂತೆ

ಕಾಂಪಿಲ್ಯದೇಶದ ಮಹಾರಾಜನಾಗಿ ಭೂಮಿಯಲ್ಲಿ ಜನಿಸುವಿ. ಇವರಿಬ್ಬರೂ ನಿನ್ನ ಸಹಾಯಕ ಮಂತ್ರಿಗಳಾಗುವರು. ನೀವು ಮೂವರೂ ಸಂಸಾರಜಾಲದಲ್ಲಿ ಮತ್ತೆ ಸಿಕ್ಕಿಕೊಂಡಿರಿ. ಹಾಳಾಗಿ ಹೋಗಿರಿ. ಉಳಿದ ನಾವಂತೂ ನಾಲ್ಕು ಜನರು ಪರಮ ಪದಕ್ಕೆ ಹೊರಟೆವು'' ಎಂದು ಹೇಳಿತು.

ಹೀಗೆ ಯೋಗಭ್ರಷ್ಟರಾದ ಆ ಮೂವರನ್ನು ಜರಿದು ತಪಿಸಿ ಅಧ್ಯಾತ್ಮ ಪ್ರವಣ ಮನಸ್ಕರಾದ ಉಳಿದ ನಾಲ್ಕು ಜನರಿಗೆ ಚಂಚಲಚಿತ್ತರಾದ ಇವರ ಜೊತೆಗೆ ಮಾತನಾಡಲೂ ಅಸಹ್ಯವೆನಿಸಿತು. ಆಗ ಭೋಗಾಭಿಲಾಷುಕರಾದ ಮೂವರು ಉಳಿದ ಚತುರಮತಿಗಳಾದ ಆ ಚತುರ್ಯೋಗಿಗಳನ್ನು ಬೇಡಿಕೊಂಡು ದೀನವಾಗಿ ಪ್ರಾರ್ಥಿಸಿಕೊಂಡರು. ''ನಮ್ಮ ತಪ್ಪನ್ನು ಕ್ಷಮಿಸಿ ಉದ್ಧಾರದ ದಾರಿ ತೋರಿರೆಂದು'' ಕೇಳಿಕೊಂಡು ''ನಮ್ಮನ್ನು ಬಿಟ್ಟು ಮುಕ್ತಿಮಾರ್ಗಕ್ಕೆ ಹೋಗದೇ ನಮ್ಮನ್ನೂ ನಿಮ್ಮ ಜೊತೆಗೇ ಕರೆದೊಯ್ಯಿರಿ'' ಎಂದು ಬಿನ್ನವಿಸಿದರು. ಆಗ ಅವರ ದೀನ ಪ್ರಾರ್ಥನೆಯನ್ನು ಕೇಳಿ ಮನ ಕರಗಿದ ಅವರು ತಮ್ಮ ಸೋದರರೇ ಆದ ಆ ಮೂವರು ಮುಗ್ಧರಿಗೆ ಒಂದು ಮಂತ್ರವನ್ನು ಹೇಳಿ ''ಈ ಮಂತ್ರವರ್ಣವನ್ನು ಕೇಳಿದ ಕೂಡಲೇ ನಿಮಗೆ ವೈರಾಗ್ಯ ಉದಯವಾಗುವದು. ತಕ್ಷಣ ನೀವು ಮನೆಮಾರು ಅಧಿಕಾರ ಐಸಿರಿಗಳನ್ನು ಬಿಟ್ಟು ವಿರಕ್ತರಾಗಿ ನಮ್ಮನ್ನು ಬಂದುಕೂಡಿಕೊಳ್ಳಿರಿ. ಬಳಿಕ ಎಲ್ಲರೂ ಕೂಡಿಯೇ ಭಗವದಾರಾಧನೆಯನ್ನು ಮಾಡಿ ಉದ್ಧೃತರಾಗೋಣ'' ಎಂದು ಹೇಳಿ ಸಮಾಧಾನಮಾಡಿ ಕಳಿಸಿದರು.

ಇತ್ತ ಆ ಸರೋವರದ ನೀರಿನಾಸನದ ಮೇಲೆ ನಿಸ್ತಬ್ಧವಾಗಿ ಕುಳಿತು ಧ್ಯಾನಾರೂಢವಾದ ಆ ಸಪ್ತಹಂಸಗಳ ಮೌನ ಹಾಗೂ ಯೋಗಸಾಧನೆಗಳನ್ನು ಕಂಡು ಅದರ ತೀರದಲ್ಲಿಯೇ ರಾಣೀವಾಸದೊಂದಿಗೆ ವಿಶ್ರಮಿಸುತ್ತಲಿರುವ ಮಹಾರಾಜ ನಿಗಾದರೂ ಮಹಾಶ್ಚರ್ಯವಾಯಿತು. ರಾಜರ್ಷಿಯಾದ ಅವನಿಗೆ ನಾಚಿಕೆಯೂ ಆಯಿತು. ''ಇಂಥ ಚಂಚಲಯೋನಿಯಲ್ಲಿ ಹುಟ್ಟಿದ ಪಶುಪಕ್ಷಿಗಳೂ ಕೂಡ ಯೋಗಾರೂಢವಾಗಿ ಧ್ಯಾನೈಕಲೀನಮಾನಸಗಳಾಗಿ ಮಾನಸ ಸರೋವರದಲ್ಲಿ ಆತ್ಮಸಾಧನೆ ಮಾಡಿಕೊಳ್ಳುತ್ತಲಿರುವಾಗ ನಾನು ಮನುಷ್ಯನಾಗಿ ಹುಟ್ಟಿದರೂ ಅಂಥ ಅಧ್ಯಾತ್ಮಸಾಧನೆಯನ್ನು ಮಾಡಿ ಕೊಳ್ಳಲಿಲ್ಲ. ಈ ಹಕ್ಕಿಗಳಗಿಂತ ನನ್ನ ಜನ್ಮ ಕಡೆಯಾಯಿತು. ನಾನು ಇನ್ನೊಮ್ಮೆ ಹುಟ್ಟಿದರೆ ಈ ಏಳು ಮರಾಳಗಳಲ್ಲಿಯೇ ಯಾವುದಾದರೊಂದರ ಹೊಟ್ಟೆಯಿಂದಲೇ ಹುಟ್ಟಿ ಬರಬೇಕು. ಅಂದರೆ ಇಂಥ ಯೋಗಿಗಳ ಹೊಟ್ಟೆಯಿಂದ ಜನಿಸಿದ ನಾನೂ ಯೋಗಿಯೇ ಆಗಬಹುದು'' ಎಂದು ವಿಭ್ರಾಜನು ಮನದಲ್ಲಿ ಅಂದುಕೊಂಡನು. ಅದೇ ಬಲವತ್ತರವಾದ ವಾಸನೆಯ ಬಲದಮೇಲಿಂದ ಅವನು ಮುಂದೆ ಇದೇ ತನ್ನ ಮೊಮ್ಮಗನಾಗಿ ಹುಟ್ಟಿದ ಆ ಹಂಸದ (ಬ್ರಹ್ಮದತ್ತನ) ಮಗನಾಗಿ ವಿಷ್ವಕ್‌ಸೇನನೆಂಬ ಹೆಸರಿನಿಂದ ಹುಟ್ಟಿಬಂದನು.

ಆ ಹಕ್ಕಿಗಳ ಧ್ಯಾನಯೋಗ ಮತ್ತು ತಪಃಸಮಾಧಿಗಳನ್ನು ಕಂಡು ವಿಭ್ರಾಜ ಮಹಾರಾಜನ ಮನದಲ್ಲಿ ವೈರಾಗ್ಯದ ವಿವೇಕ ಮೂಡಿತು. ಅವನು ರಾಜಧಾನಿಗೆ ಮರಳಿಬಂದು ತನ್ನ ಮಗನಾದ ಅಣುಹನ್ನು ಪಟ್ಟದಮೇಲೆ ಕುಳ್ಳಿರಿಸಿ ಅವನಿಗೆ ಎಲ್ಲ ಕೌಟುಂಬಿಕ ಮತ್ತು ರಾಜ್ಯದಭಾರವನ್ನೆಲ್ಲ ಒಪ್ಪಿಸಿ ತಾನು ಮಾನಸಸರೋವರದ ತಪಸ್ತೀರಕ್ಕೆ ಬಂದನು. ಮತ್ತು ಆ ರಾಜಹಂಸ ಪಕ್ಷಿಗಳಂತೆ ರಾಜನಾದರೂ ಜಪತಪೋನುಷ್ಠಾನ ಮಗ್ನನಾಗಿ ಪರಮಹಂಸಪದವಿಯನ್ನು ಹೊಂದಿದನು. ರಾಜ ರಾಜೇಶ್ವರನಾದ ಬ್ರಹ್ಮದತ್ತನು ಈ ಅಣುಹ ಮಹಾರಾಜನ ಸುಪುತ್ರ. ಭಾಗವತ ಸಂಹಿತೆಯ ಮಂತ್ರದ್ರಷ್ಟಾರರಾದ ಶ್ರೀಶುಕಾಚಾರ್ಯರ ಮಗಳಾದ ಕೃತ್ವಿ ಇವನ ತಾಯಿ.

ದೇವಲ ಮಹರ್ಷಿಗಳ ಮಗಳಾದ ಸನ್ನತಿ ಬ್ರಹ್ಮದತ್ತನ ಪಟ್ಟದರಸಿಯೂ ಪ್ರೇಯಸಿಯೂ ಆಗಿದ್ದಳು. ಬ್ರಹ್ಮದತ್ತನಿಗೆ ಪಶುಪಕ್ಷಿ ಹಾಗೂ ಕ್ರಿಮಿಕೀಟಗಳ ಭಾಷೆಯೆಲ್ಲವೂ ತಿಳಿಯುತ್ತಿತ್ತು. ಒಂದು ದಿನ ಅವನು ತನ್ನ ಒಲವಿನ ಮಡದಿಯಾದ ಸನ್ನತಿಯೊಡನೆ ವನವಿಹಾರಕ್ಕೆಂದು ನಿಸರ್ಗದ ನೆಲೆವೀಡಾದ ಒಂದು ತರುಲತಾ ಪ್ರತಾನಗಳಿಂದ ಗಹನ ಗೂಢವಾದ ವಿಪಿನ ಗರ್ಭಕ್ಕೆಬಂದನು. ಅಲ್ಲಿಯ ಪ್ರಕೃತಿಯ ಚೆಲುವು, ಹೂವು ಹಸಿರುಗಳ ಕುಸುರು, ಶಕುಂತಗಳ ಕಿಲಕಿಲಾಟ, ಏಕಾಂತ ಪ್ರಶಾಂತಿ ಅವನ ಮನಸ್ಸನ್ನು ಸೂರೆಗೊಂಡವು. ರಮಣೀಯವಾದ ಆ ಶ್ರೀಶೈಲಸಾನುಪ್ರದೇಶದ ತಂಪಿನೊಡಲಿನಲ್ಲಿ ಒಂದೆಡೆ ರಾಜರಾಣಿಯರು ವಿಶ್ರಮಿಸುತ್ತಲಿದ್ದಾಗ ಮಹಾರಾಜನು ಒಮ್ಮಿಂದೊಮ್ಮೆಲೇ ನಗಹತ್ತಿದನು.

ಅವನ ಪಕ್ಕದಲ್ಲಿ ಚಿಗುರು ಹಾಸಿಗೆಯಮೇಲೆ ಹೂವಿನಂತೆ ಹಗುರಾಗಿ ಪವಡಿಸಿದ ರಾಣಿಗೆ ರಾಜನ ಈ ಆಕಸ್ಮಿಕ ಅಟ್ಟಹಾಸವನ್ನು ಕೇಳಿ ಅಚ್ಚರಿಯಾಯಿತು. "ಅದೇನು ಪ್ರಿಯ ! ಹೀಗೇಕೆ ನಗುತ್ತಿರುವಿರಿ?" ಎಂದು ಸಲುಗೆಯ ಸರಸದಿಂದ ಕೇಳಿದಳು ಆ ರಾಣಿ. ರಾಜನ ನಗೆ ಇನ್ನೂ ಹೆಚ್ಚಾಯಿತು. ರಾಣಿಗೆ ಏನೂ ಉತ್ತರ ಕೊಡದೇ ಅವನು ತನ್ನ ನಗೆಯ ತಾನಗಳನ್ನು ತೆಗೆದುಕೊಳ್ಳಹತ್ತಿದನು. ರಾಣಿಗೆ ಬಹಳ ಅವಮಾನ ಎನ್ನಿಸಿತು. ಅವಳು ಆ ವನಾಂತರದ ಪ್ರತ್ಯಂತ ಪ್ರಾಂತದಲ್ಲೆಲ್ಲ ತನ್ನ ಚಿಗರಿಗಂಗಳ ನೋಟವಿರಿಸಿ ನೋಡಿದಳು. ಅಲ್ಲಿ ತನ್ನ ಹೊರತು ರಾಜನಿಗೆ ನಗಲಿಕ್ಕೆ ಬೇರೆ ಯಾವ ವಸ್ತುವೂ ಇಲ್ಲವೆಂದು ಅವಳಿಗೆ ಅನಿಸಿತು. ಮತ್ತು ರಾಜನು ತನ್ನನ್ನು ನೋಡಿಯೇ ನಗುತ್ತಲಿರುವನೆಂದು ಖಾತ್ರಿಯೂ ಆಯಿತು.

ಆಗ ಅವಳ ತುಟಿಪಕಳೆಯ ತುದಿಕಳಿಸಿನಿಂತಿದ್ದ ನಗೆ ಮಾಯವಾಗಿ ಹುಬ್ಬಿನ ಗುಂಟ ಕಗ್ಗಂಟು ಹಬ್ಬಿನಿಂತಿತು. ಹಣೆಯ ಹಲಗೆಯಲ್ಲಿ ನರಗಳು ಉಬ್ಬಿ ಬಂದವು. ನಿಟ್ಟನಿಂದ ಅವಳು ಎದ್ದುನಿಂತು "ನೀವೇಕೆ ನಗುತ್ತಿರುವಿರಿ? ಹೇಳಿರಿ" ಎಂದು ಒಕ್ಕರಿಸಿ ರಾಜನೆಡೆಗೆ ಪ್ರಶ್ನೆಯ ಸರಳನ್ನು ಎಸೆದಳು. ರಾಜನು ಗುಲಗಂಜಿಯಾದ ಅವಳ ಕಣ್ಣುಗಳನ್ನೂ ಕಾಯ್ದು ಕೆಂಜಗದಂತಾದ ಕಪೋಲಪಾಲಿಯನ್ನೂ ಕಂಡು ನಗೆಯನ್ನು ತಡೆಹಿಡಿದು "ಪ್ರೇಯಸಿ ! ನಾನು ನಕ್ಕರೆ ನಿನಗೆ ಇಷ್ಟೇಕೆ ಕೋಪ? ಇಷ್ಟೇಕೆ ಆಟೋಪ? ಏನೋ ನನಗೆ ನಗೆಬಂದಿತು, ಸಹಜವಾಗಿ ನಕ್ಕೆ, ಅಷ್ಟೆ" ಎಂದ. ಆಗ ರಾಣಿಯು "ನಿಮ್ಮಿಂದ ನಗಿಸಿಗೊಂಡು ಬಾಳುವದಕ್ಕಿಂತ ಸಾ".... ರಾಣಿಯ ದುಃಖ ಉಕ್ಕರಿಸಿ ಬಿಕ್ಕುಗಳಲ್ಲಿ ಉಕ್ಕಹತ್ತಿತು. ಆಡಾಡುತ್ತಲೇ ನಗೆಹೋಗಿ ಹೊಗೆಯೇಳುವ ಈ ವಿಷಮ ಸಂದರ್ಭವನ್ನು ನೋಡಿ ರಾಜನ ಮನಸ್ಸಿಗೆ ನೋವಾಯಿತು. ಅವನು ಪ್ರೇಮತರಂಗಿತವಾದ ತನ್ನ ಕೈಯಿಂದ ರಾಣಿಯ ಚಿಬುಕವನ್ನು ಹಿಡಿದೆತ್ತಿ ಸ್ನೇಹಸಿಂಚಿತ ದೃಷ್ಟಿಯಿಂದ ಅವಳನ್ನು ನೋಡುತ್ತ ಹೇಳಿದನು.

"ಇಲ್ಲ ರಾಣಿ! ನಿಜವನ್ನು ಹೇಳಬೇಕೆಂದರೆ ನಾನು ನಕ್ಕದ್ದು ಆ ಇರುವೆದಂಪತಿಗಳನ್ನು ನೋಡಿ. ಇಕೋ ಈ ಗಿಡದಡಿಯಲ್ಲಿ ಮಣ್ಣಿನ ಬಂಡೆಯ ಮೇಲೆ ಎರಡು ಇರುವೆ ಗಂಡ-ಹೆಂಡತಿಯರು ಪ್ರಣಯ ಕಲಹ ನಡೆಯಿಸಿದ್ದವು. ಗಂಡ ತನ್ನ ಹೆಂಡತಿಯ ಕಾಲುಬಿದ್ದು ಬೇಡಿಕೊಂಡು ಕೇಳಿಕೊಂಡು ಎಷ್ಟು ಹೇಳಿದರೂ ಹೆಂಡತಿ ಇರುವೆ ಕೇಳದೆ ಮೋರೆತಿರುವಿಕೊಂಡೇ ಹೊರಟಿತು. ಗಂಡು ಮತ್ತೆ ಮತ್ತೆ ಬಿದ್ದು ಬೇಡಿಕೊಳ್ಳುತ್ತಲಿತ್ತು. ಅದರ ದೈನ್ಯ ಮತ್ತು ಹೆಣ್ಣಿರುವೆಯ ದರ್ಪಗಳನ್ನು ಕಂಡು ನಗೆಬಂದಿತು" ಇದನ್ನು ಕೇಳಿ ರಾಜರಮಣಿಗೆ ಮತ್ತಷ್ಟು ಕೋಪ ಕೆರಳಿ ಬಿರುಸಾಗಿ ನುಡಿದಳು. "ನಾನು ಈ ಲೋಕದಲ್ಲಿ ಬೇಕಾದಷ್ಟು ಪಂಡಿತರನ್ನು ಕಂಡಿದ್ದೇನೆ. ಅವರು ವೇದಗುಹ್ಯವಾದ ಬ್ರಹ್ಮನನ್ನು ತಿಳಿದರೂ ಪ್ರಾಣಿಗಳ ಭಾಷೆಯನ್ನು ಮಾತ್ರ ಇಂದಿನವರೆಗೆ ಯಾರೂ ತಿಳಿದಿಲ್ಲ. ನಿಮಗೊಬ್ಬರಿಗೆ ಮಾತ್ರ ಅದು ಹೇಗೆ ತಿಳಿಯುತ್ತದೆ? ನನ್ನನ್ನು ಉಪಹಾಸಮಾಡಿ ತಿರಸ್ಕರಿಸಿದ್ದನ್ನು ಮರೆಮಾಚಲು ಇದೊಂದು ನೆಪಮಾತ್ರ."

"ಸತ್ಯವಾಗಿಯೂ ನನಗೆ ಇರುವೆಗಳ ಭಾಷೆ ತಿಳಿಯುವುದು ಅರಸಿ!"

"ಹಾಗಾದರೆ ಅದನ್ನು ನನಗೂ ಕಲಿಸಿರಿ ನೋಡೋಣ. ನಾನೂ ಕಲಿತು ತಿಳಿದು ಕೊಳ್ಳುತ್ತೇನೆ."

"ಅದು ಇನ್ನೊಬ್ಬರಿಗೆ ಕಲಿಸಲಿಕ್ಕೆ ಬರುವ ವಿದ್ಯೆಯಲ್ಲ. ನನಗೆ ಮಾತ್ರ ತಿಳಿಯುವುದು."

"ಅಹುದು, ಅದು ಹೇಗೆ ಕಲಿಸಲಿಕ್ಕೆ ಬಂದೀತು! ಹೆರವರನ್ನು ಉಪಹಾಸ ಮಾಡಿ ಅಪಮಾನಮಾಡುವ ವಿದ್ಯೆ ಕಲಿಸಿದರೆ ಬರುವುದಲ್ಲ. ಆ ಕಪಟ, ಈ ಕೌರ್ಯ, ಇಂಥ ವಂಚಕತೆಗಳು ನಿಮ್ಮಂಥ ಪುರುಷರಿಗೆ ಮಾತ್ರ ಹುಟ್ಟಾಬರುವ ಗುಣಗಳು."

"ಇಂದಿನಿಂದ ನಾನು ಊಟವನ್ನೂ ಮಾಡುವುದಿಲ್ಲ. ಮಾತನ್ನೂ ಆಡುವದಿಲ್ಲ. ನನ್ನನ್ನು ಕಂಡರೇ ಅಸಹ್ಯಪಟ್ಟುಕೊಳ್ಳುವ ನಿಮ್ಮ ಕಡೆಗೆ ನೋಡುವುದೂ ಇಲ್ಲ. ಹೀಗೇ ಅನ್ನ ನೀರು ಬಿಟ್ಟು ನಿದ್ದೆಗೆಟ್ಟು ಒದ್ದಾಡುತ್ತ ಪ್ರಾಣ ಬಿಟ್ಟು ಬಿಡುವೆನು. ಆ ಮೇಲಾದರೂ ನೀವು ನನ್ನ ಈ ದುರ್ಮುಖವನ್ನು ನೋಡಿ ಹೇಸಿಕೊಂಡು ತ್ರಾಸಪಟ್ಟುಕೊಳ್ಳುವದು ತಪ್ಪುವುದು" ಎಂದು ಪೂತ್ಕರಿಸಿ ಅತ್ತುಕರೆದು ಹುಬ್ಬುಗಂಟಿಕ್ಕಿ ಬಿಗಿದುಕೊಂಡು ಕುಳಿತಳು.

ಇಷ್ಟರಲ್ಲಿ ಆ ಇರಿವೆಗಳ ಪ್ರೇಮಕಲಹ ಸುಂಖಾಂತವಾಗಿ ಕೊನೆಗೊಂಡು ಗಂಡು ಇರುವೆ ಒಂದು ಸಕ್ಕರೆಯ ಕಣವನ್ನು ಬಾಯಲ್ಲಿ ಹಿಡಿದು ಹೆಂಡತಿಗೆ ಕೊಡುತ್ತಲಿತ್ತು. ಹೆಣ್ಣಿರಿವೆ ಅದನ್ನು ಅಕ್ಕರತೆಯಿಂದ ನಕ್ಕು ಸ್ವೀಕರಿಸುತ್ತಲಿತ್ತು. ರಾಜ ಆ ದೃಶ್ಯವನ್ನು ಹೆಂಡತಿಗೆ ತೋರಿಸಿದ. ಅವಳು ಅತ್ತ ನೋಡದೇ ಮುಖ ತಿರುವಿಕೊಂಡು ಅಳುತ್ತಲೇ ಕುಳಿತುಕೊಂಡಳು. ಊರಿಗೆ ಬಂದುಬಳಿಕಾದರೂ ರಾಣಿಯ ಉರಿ ಮೋರೆ ಪ್ರಸನ್ನವದನವಾಗಲೇ ಇಲ್ಲ. ರಾಜ ಹಾಗೂ ಅವನ ಸರ್ಮ ಸಚಿವರು ದಾಸದಾಸಿಯರು ಎಲ್ಲರೂ ಬಂದು ಎಷ್ಟೇ ಸಮಾಧಾನಪಡಿಸಿದರೂ ಅವಳಿಗೆ ತನ್ನ ಗಂಡನ ಬಗೆಗೆ ಸದಭಿಪ್ರಾಯ ಮೂಡಲಿಲ್ಲ. ದುಮ್ಮಾನ ದೂರಾಗಲಿಲ್ಲ. ಬಿಗುವು ಸಡಿಲಾಗಲಿಲ್ಲ. ರಾಣೀವಾಸದ ಸರಸ ಶೃಂಗಾರಗಳೆಲ್ಲ ಅಸ್ತವಾದವು. ನಗೆ ವಿನೋದ ಪರಿಹಾಸಗಳಂತೂ ಎಂದೋ ನಿಂತುಹೋದವು. ಸಂಗೀತ ಸರಸಾಲಾಪಗಳು ಗತಗೋಷ್ಠಿಯಾಗಿ ಅಂತಃಪುರವೆಲ್ಲ ಮೋಡ ತುಂಬಿದ ಮುಂಗಾರು ಮುಗಿಲು ಆಯಿತು. ಅಲ್ಲಿ ಯಾವಾಗಲೂ ಗುಡುಗು ಸಿಡಿಲು ಅರ್ಭಟಿಸಿ, ಶೋಕ ವಿಲಾಪ ಪ್ರಲಾಪ ನಿಟ್ಟುಸಿರುಗಳು ಹಗಲಿರುಳೂ ಒಟ್ಟಣಿಸಿ ನಿಂತವು.

ಅರಮನೆಯ ಆ ಶೃಂಗಾರಭೂಮಿಯು ಸ್ಮಶಾನಭೂಮಿಯಂತೆ ಯಾವಾಗಲೂ ಮೂಕ ಶೋಕದ ಅವ್ಯಕ್ತ ವೇದನೆಯಿಂದ ನರಳುವಂತೆ ಭಾಸವಾಗುತ್ತಲಿತ್ತು. ವಿರಸವಿದೀರ್ಣವಾದ ಆ ತನ್ನ ಸುಂದರವಾದ ಮಂದಿರದಲ್ಲಿ ಮೊದಲಿನಂತೆ ನಗೆ ವಿನೋದ ಸರಸಾಲಾಪ ಶೃಂಗಾರಗಳ ರಂಗು ತುಂಬಬೇಕೆಂದು ಬ್ರಹ್ಮದತ್ತ ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾಗಿ ಆದರಿಂದ ಮತ್ತಿಷ್ಟು ವೈರಸ್ಯ ವಿಲಾಪ ವಿದ್ವೇಷಗಳೇ ಹೆಚ್ಚಾಗಹತ್ತಿದವು. ಆಗ ಆ ರಾಜನು ಪ್ರಯತ್ನ ಮಾಡಿ ಮಾಡಿ ಬೇಸತ್ತು ಕೊನೆಗೆ ನಿರಾಶನಾಗಿ ನಿರ್ವೇದವನ್ನು ಹೊಂದಿದನು.

"ಈ ಹೆಂಡತಿಯನ್ನು ಒಲಿಸುವ ಇಷ್ಟು ಪ್ರಯತ್ನವನ್ನು ನಾನು ದೇವರನ್ನು ಒಲಿಸಲು ಮಾಡಿದ್ದರೆ ಈ ನಾರಿಯ ಬದಲು ನಾರಾಯಣನನ್ನೇ ಸಾಕ್ಷಾತ್ಕರಿಸಿ ಕೊಳ್ಳಬಹುದಾಗಿತ್ತು. ಛೀ! ಧಿಕ್ಕಾರವಿರಲಿ ನನ್ನ ಈ ಸ್ತ್ರೈಣ ಬುದ್ದಿಗೆ" ಎಂದಂದು ಒಮ್ಮಿಂದೊಮ್ಮೆಲೆ ಸಂಸಾರ ವನ್ನೆಲ್ಲ ಬಿಟ್ಟು ತಪಸ್ಸಿಗಾಗಿ ತಪೋವನಕ್ಕೆ ಬಂದನು. ಘೋರವಾದ ಅರಣ್ಯವೊಂದರಲ್ಲಿ

ಸಂಸಾರದಿಂದ ಸಂತ್ರಸ್ತನಾಗಿ ನಿರ್ವಿಣ್ಣನಾದ ಆ ರಾಜರ್ಷಿ ಒಂಟಿಗಾಲಿನಿಂದ ಉಪವಾಸನಿಂತು ಅತ್ಯುಗ್ರವಾದ ತಪಸ್ಸನ್ನು ಆಚರಿಸಿದನು. ಆದರಿಂದ ಅವನ ದಾರುಣವಾದ ತೀಕ್ಷ್ಣ ತಪಸ್ಸಿಗೆ ಭಗವಾನ್ ನಾರಾಯಣನು ಮೆಚ್ಚಿ ಅನುಗ್ರಹಿಸಿದನು. ಭಗವಂತನ ಸಾಕ್ಷಾತ್ಕಾರದಿಂದ ಅವನಿಗೆ ದಿವ್ಯಜ್ಞಾನೋದಯವಾಯಿತು. ಅವನ ಮನದ ಕೋಪ ಕಾಲುಷ್ಯ ತಾಪತ್ವೇಷಗಳೆಲ್ಲ ಅಳಿದುಹೋಗಿ ಹೃದಯವು ತಿಳಿಗನ್ನಡಿ ಯಂತೆ ಸುಪ್ರಸನ್ನವಾಯಿತು. ಹೆಂಡತಿಯೊಂದು ತನ್ನ ಮೇಲೆ ಮಹೋಪಕಾರವನ್ನೇ ಮಾಡಿದಳೆಂದು ಅವಳ ಬಗೆಗೆ ಅವನಿಗೆ ಕೃತಜ್ಞತೆಯೆನಿಸಿತು.

ವಿಶ್ವಾಮಿತ್ರರ ಏಳುಜನ ಮಕ್ಕಳು ಗೋಹತ್ಯೆ ಗುರುದ್ರೋಹಗಳ ಪಾತಕದಿಂದ ಜನ್ಮಜನ್ಮಾಂತರಗಳಲ್ಲಿ ತೊಳಲಾಡಿ ಕೊನೆಗೆ ಮನುಷ್ಯರಾಗಿ ಕಾಂಪಿಲ್ಯ ನಗರದಲ್ಲಿ ತಮ್ಮ ಕೊನೆಯ ಜನ್ಮವನ್ನು ಎತ್ತಿದರು. ಆ ಕೌಶಿಕ ಕುಮಾರರಲ್ಲಿ ಕೊನೆಯವನಾದ ಪಿತೃವರ್ತಿ ಎನ್ನುವವನೇ ಹಂಸಜನ್ಮದಲ್ಲಿ ರಾಜನಾಗಬೇಕೆಂದು ಬಯಸಿ ಆ ಕಾಂಪಿಲ್ಯನಗರದ ರಾಜನಾಗಿ ಬ್ರಹ್ಮದತ್ತ ಎಂಬ ಹೆಸರಿನಿಂದ ಹುಟ್ಟಿಬಂದಿದ್ದನು. ಅವನ ಪಾರ್ಶ್ವವರ್ತಿಗಳಾದ ಎರಡು ಹಂಸಗಳಲ್ಲಿ ಕವಿ ಎಂಬ ಕೌಶಿಕ ಪುತ್ರನು ಪಾಂಚಿಕ ಎಂಬ ಹೆಸರಿನಿಂದ ಹುಟ್ಟಿಬಂದು ಬ್ರಹ್ಮದತ್ತನ ಮಂತ್ರಿಯಾದನು. ಋಷಿಪುತ್ರರಲ್ಲಿ ಆರನೆಯವನಾದ ಖಸ್ರಮನು ಕೊನೇಯದಾದ ಈ ಮನುಷ್ಯ ಜನ್ಮದಲ್ಲಿ ಕಂಡರೀಕನೆಂದು ಬ್ರಹ್ಮದತ್ತನ ಪ್ರಧಾನ ಅಮಾತ್ಯನಾಗಿ ಪ್ರಾಣಪ್ರಿಯಮಿತ್ರನೂ ಆದನು.

ಹಂಸ ಜನ್ಮದಲ್ಲಿಯೇ ವೈರಾಗ್ಯ ಭಾಗ್ಯವನ್ನು ಪಡೆದು ಯೋಗಸಾಧನವನ್ನು ಮಾಡಿಕೊಂಡ ಇನ್ನುಳಿದ ನಾಲ್ಕು ಕೌಶಿಕ ಕುಮಾರರಾದರೂ ಅದೇ ಕಾಂಪಿಲ್ಯ ನಗರದಲ್ಲಿ ವೇದವೇದಾಂತ ಪಾರಂಗತನಾದ ಓರ್ವ ಕಡುಬಡವ ಬ್ರಾಹ್ಮಣನ ಮನೆಯಲ್ಲಿ ಹುಟ್ಟಿದರು ಅವನ ಜ್ಞಾನವಿಜ್ಞಾನ ಪ್ರಾಜ್ಞತೆಗೆ ಅನುಗುಣವಾಗಿ ಅವರಿಗೆ ಧೃತಿಮಾನ್, ಸುಮನ, ವಿದ್ವಾನ್, ತತ್ವದರ್ಶಿ ಎಂದು ಅನ್ವರ್ಥಕ ಹೆಸರುಗಳಿದ್ದವು. ಈ ವಿಪ್ರಯೋನಿಯಲ್ಲಿಯಂತೂ ಅವರ ಜಾತಿಸ್ಮರಣೆ ನಿತ್ಯಜಾಗರೂಕವಾಗಿದ್ದು ದರಿಂದ ಬಾಲ್ಯದಲ್ಲಿಯೇ ಸಕಲ ಶಾಸ್ತ್ರಗಳನ್ನೂ ಚೆನ್ನಾಗಿ ಅಧ್ಯಯನವನ್ನು ಮಾಡಿ ಬ್ರಹ್ಮ ಮೀಮಾಂಸೆಯಲ್ಲಿ ಅತ್ಯಂತ ಪಾರಂಗತರಾದರು. ಭಕ್ತಿವಿರಕ್ತಿಗಳು ಅವರಿಗೆ ರಕ್ತಗತವಾಗಿ ಬಂದರೆ ಶಮದಮಗಳು ಅವರನ್ನೇ ಹುಡುಕಿಕೊಂಡು ಬಂದವು. ಯಮ-ನಿಯಮ-ಪ್ರಾಣಾಯಾಮ-ಪ್ರತ್ಯಾಹಾರ-ಧ್ಯಾನ-ಧಾರಣೆ ಮೊದಲಾದವುಗಳಿಂದ ಅವರ ಯೋಗಶಕ್ತಿ ಬೆಳೆದು ಬ್ರಹ್ಮಾಪರೋಪಕ್ಷದ ಫಲಾವಾಪ್ತಿಗೆ ಅವರ ಜ್ಞಾನ ಪರಿಪಾಕಗೊಂಡಿತ್ತು. ಸಂಸಾರದಲ್ಲಿ ಅಸಾರತೆಯ ಬುದ್ಧಿ ಅವರಿಗೆ ಎಂದೋ ಹುಟ್ಟಿಬಿಟ್ಟದ್ದರಿಂದ ವನಿತಾವಿತ್ತಾದಿ ವಿಷಯಗಳ ಕಡೆಗೆ ಕಣ್ಣೆತ್ತಿಕೂಡ ನೋಡದೇ ವೀತರಾಗರಾದ ಆ ನಾಲ್ವರೂ ಬ್ರಾಹ್ಮಣ ಕುಮಾರರು ಒಂದುದಿನ ಮನೆ ಬಿಟ್ಟು ತಪಸ್ಸಿಗೆ ಹೊರಟು ನಿಂತರು.

ಆಗ ಮುಪ್ಪಿನಿಂದ ಹಣ್ಣಾದ ಅವರ ತಂದೆ ಮಕ್ಕಳ ಹತ್ತರ ಬಂದು "ನೀವು ಇಷ್ಟು ಪಂಡಿತರಾಗಿ ಧರ್ಮಶಾಸ್ತ್ರದ ಮರ್ಮವನ್ನೆಲ್ಲ ಚೆನ್ನಾಗಿ ತಿಳಿದುಕೊಂಡಿದ್ದೀರಿ. ಮುಪ್ಪಿನ ಮುದುಕರಾದ ತಾಯಿ-ತಂದೆಗಳು ದಾರಿದ್ರ್ಯದಿಂದ ಉಪವಾಸ ಮನೆಯಲ್ಲಿ ಸಾಯುತ್ತ ಲಿರುವಾಗ ಅವರನ್ನು ಉಪೇಕ್ಷಿಸಿ ತಪಸ್ಸಿಗೆ ಹೋದರೆ ಅದು ಏನು ಧರ್ಮ? ದೊಡ್ಡವರಾದ ಬಳಿಕ ವೃದ್ಧರಾದ ತಂದೆ-ತಾಯಿಂದಿರ ಹೊಟ್ಟೆಗೂ ಹಾಕದ, ಬಟ್ಟೆಯನ್ನೂ ಈಯದ, ದಾರಿದ್ರ್ಯವನ್ನೂ ಪರಿಹರಿಸದ ಮಕ್ಕಳು ಯಾತರ ಮಕ್ಕಳು? ನೀವು ನಮ್ಮ ವ್ಯವಸ್ಥೆಮಾಡದೆ ತಪಸ್ಸಿಗೆ ಹೋಗಕೂಡದು" ಎಂದು ಅಪ್ಪಣೆ ಮಾಡಿದರು.

ಆಗ ಋಷಿಕುಮಾರರು ತಮ್ಮ ಸ್ಥವಿರನಾದ ತಂದೆಗೆ ಎರಡು ಪದ್ಯಗಳನ್ನು ಹೇಳಿ ಕೊಟ್ಟು ''ಈ ಶ್ಲೋಕಗಳನ್ನು ರಾಜ ಹಾಗೂ ಅವನ ಇಬ್ಬರೂ ಮಂತ್ರಿಗಳಾದ ಪಾಂಚಿಕ ಮತ್ತು ಕಂಡರೀಕ ಈ ಮೂವರೂ ಕೂಡಿ ಇದ್ದಾಗ ಅವರೆದುರಿಗೆ ಹೇಳಿಬಿಡು. ಇದನ್ನು ಕೇಳಿದ ರಾಜಾಮಾತ್ಯರು ವಂಶಪರಂಪರಾ ನಿನ್ನ ಬಡತನವೇ ಹಿಂಗುವಷ್ಟು ವಿಪುಲೈಶ್ವರ್ಯ ವನ್ನು ಕೊಡುತ್ತಾರೆ. ಈ ಎರಡು ಪದ್ಯಗಳು ಕಲ್ಪವೃಕ್ಷ ಕಾಮಧೇನುಗಳಿದ್ದಂತೆ. ಇವುಗಳನ್ನು ಒಮ್ಮೆ ನೀವು ಬ್ರಹ್ಮದತ್ತನ ಎದುರು ಹೇಳಿಬಿಟ್ಟರೆ ಸಾಕು. ಅದರಿಂದ ನಿಮ್ಮ ಕಾಮಿತಾರ್ಥ ಗಳನ್ನೆಲ್ಲ ಅವನು ನೀಡುವನು. ಅಕ್ಷರಕ್ಕೊಂದು ಲಕ್ಷರೂಪಾಯಿ ಬೇಡಿದರೂ ಕೊಡಲು ಸಾಕು'' ಎಂದು ಹೇಳಿ ಚತುರ್ವಿಧ ಪುರುಷಾರ್ಥಗಳೇ ಮೈವೆತ್ತು ಬಂದಂತಿರುವ ಆ ನಾಕೂ ಬ್ರಾಹ್ಮಣಕುಮಾರರು ತಮ್ಮ ತಂದೆ-ತಾಯಂದಿರಿಗೆ ವಂದಿಸಿ ಅವರ ಅಪ್ಪಣೆ ಆಶೀರ್ವಾದ ಗಳನ್ನು ಪಡೆದುಕೊಂಡು ತಪಸ್ಸಿಗೆ ಹೊರಟರು. ಅವರ ತಂದೆಯಾದ ಆ ಮುದುಕ ಬ್ರಾಹ್ಮಣನು ಮಕ್ಕಳು ಹೇಳಿದ ಆ ಎರಡು ಶ್ಲೋಕಗಳನ್ನು ಬಾಯಿಪಾಠ ಮಾಡಿಕೊಂಡು ರಾಜನೆದುರು ಗಟ್ಟಿಯಾಗಿ ಪಠಿಸಬೇಕೆಂದು ಅರಮನೆಯ ಕಡೆಗೆ ಹೊರಟನು.

ಅದೇ ಸಂದರ್ಭದಲ್ಲಿ ಬ್ರಹ್ಮದತ್ತನು ಅರಣ್ಯದಲ್ಲಿ ಏಳುದಿನ ತಪಸ್ಸುಮಾಡಿ ದೇವರ ದರ್ಶನ ಮಾಡಿಕೊಂಡು ಸಿದ್ಧಿಯನ್ನು ಪಡೆದುಕೊಂಡು ತೃಪ್ತಭಾವದಿಂದ ಕಾಂಪಿಲ್ಯನಗರಕ್ಕೆ ಮರಳಿ ಬರುತ್ತಲಿದ್ದನು. ಭಗವಂತನಿಂದ ವರವನ್ನು ಹೊಂದಿ ತಪೋವಿಜಯಶಾಲಿಯಾಗಿ ಬರುತ್ತಲಿರುವ ಬ್ರಹ್ಮದತ್ತನನ್ನು ಪ್ರಜಾ-ಪರಿವಾರ ಮಂತ್ರಿಮಂಡಲ ಆಪ್ತೇಷ್ಟ ಪೌರ ಪರಿವಾರದವರೆಲ್ಲ ಕೂಡಿ ಹೊಂಗಳಸದಿಂದ ಹೊಳೆಯುತ್ತಲಿರುವ ಬಂಗಾರದ ರಥದಲ್ಲಿ ಕುಳ್ಳಿರಿಸಿಗೊಂಡು ಬಹಳ ಸಂತಸ ಹಾಗೂ ಸಂಭ್ರಮದಿಂದ ತಾನೇ ಕುದುರೆ ಲಗಾಮ ಹಿಡಿದು ರಥವನ್ನು ಹೊಡೆಯುತ್ತಲಿದ್ದನು. ರಾಜನ ಮಿತ್ರನಾದ ಪಾಂಚಿಕ ಮಂತ್ರಿಯು ಹಂಸ, ದವಲವಾದ ಚಾರುಚಾಮೀಕರದ ಚಾಮರವನ್ನು ಕೈಯಲ್ಲಿ ಹಿಡಿದು ಅಲ್ಲಿಯೇ ರಥದಲ್ಲಿ ನಿಂದು ರಾಜನಿಗೆ ಬೀಸುತ್ತಲಿದ್ದನು. ರಾಜಧಾನಿಯಲ್ಲಿಯ ನರನಾರಿಯರೆಲ್ಲ ನಾರಾಯಣ ನಿಂದ ವರವನ್ನು ಪಡೆದುಕೊಂಡು ಬಂದ ಪ್ರಜಾನಾಥನಿಗೆ ಮನೆಮನೆಗೆ ಆರತಿ ಎತ್ತಿ ಅರಳು ತೂರಿ ಜಯ ಘೋಷ ಮಾಡಿ ಆದರಾಭಿಮಾನಗಳನ್ನು ತೋರ್ಪಡಿಸುತ್ತಲಿದ್ದರು. ರಾಜರಥವು ವಿಪರೀತವಾದ ಜನಸಂದಣಿಯಲ್ಲಿ ಮಂದಮಂದವಾಗಿ ಮುಂದುವರೆಯುತ್ತಲಿತ್ತು.

ಆ ಭಯಂಕರವಾದ ಜನಸಮ್ಮರ್ದದ ನೂಕುನುಗ್ಗಲಲ್ಲಿಯೇ ಮುದುಕನಾದ ಆ ಕಡುಬಡವ ಬ್ರಾಹ್ಮಣನು ಎಡವುತ್ತ ಮುಗ್ಗರಿಸುತ್ತ ಬಂದನು. ಏಳುತ್ತ ಬೀಳುತ್ತಲಿರುವ ಈ ವೃದ್ಧಬ್ರಾಹ್ಮಣನ ಸಾಹಸ ಹಾಗೂ ಗಡಿಬಿಡಿಯನ್ನು ಕಂಡು ಜನರೆಲ್ಲ ದಾರಿಬಿಟ್ಟರು. ಅವನು ಧಾವಿಸಿ ರಾಜನ ರಥದ ಹತ್ತಿರ ಬಂದನು.

ರಥಾರೂಢನಾದ ರಾಜ ಜನಸ್ತೋಮದ ಸಹಸ್ರಾರು ಕಣ್ಣುಗಳಲ್ಲಿರುವ ವಂದನೆ ಅಭಿನಂದನೆಗಳನ್ನೆಲ್ಲ ಮಂದಹಾಸದಿಂದಲೇ ಸ್ವೀಕರಿಸುತ್ತ ಸಾಕ್ಷಾದ್ ಇಂದ್ರನಂತೆ ಆನಂದ ದಿಂದ ಕುಳಿತಿದ್ದ. ಆ ಇಬ್ಬರೂ ಮಂತ್ರಿಗಳಂತೂ ನಮ್ಮ ಸಮಾನರಾರಿದ್ದಾರೆ. ಎಂಬ ಧನ್ಯತೆಯ ಭಾವದಿಂದ ತಲೆಯೆತ್ತಿ ಶ್ರೀಮದ್ ಗಾಂಭೀರ್ಯದಿಂದ ರಥಾಂಗಣದಲ್ಲಿ ಆಸೀನ ರಾಗಿದ್ದರು. ತೇರು ಮೆಲ್ಲಮೆಲ್ಲನೆ ಮುಂದೆ ಸಾಗುತ್ತಲಿತ್ತು.

ಹೀಗೆ ಮೆರವಣಿಗೆ ಒಳ್ಳೆ ವಿಜೃಂಭಣೆಯಿಂದ ಮುಂದುವರೆಯುತ್ತಲಿದ್ದಾಗ ಆ ಬ್ರಾಹ್ಮಣನು ತೇರಿನ ತೀರ ಹತ್ತಿರಕ್ಕೆ ಬಂದು ಗಂಟಲವನ್ನು ಸರಿಪಡಿಸಿಕೊಂಡು ಉಚ್ಚಕಂಠದಿಂದ ಹೇಳ ತೊಡಗಿದ. ರಾಜ ಮಂತ್ರಿಗಳು ಆ ಸಂಸ್ಕೃತ ಪದ್ಯಗಳನ್ನು ಲಕ್ಷ್ಯವಿಟ್ಟು ಆಲಿಸ ತೊಡಗಿದರು. ಜನವೆಲ್ಲ ಒಮ್ಮೆಲೆ ನಿಶ್ಶಬ್ದವಾಯಿತು. ಬ್ರಾಹ್ಮಣನ ದನಿ ಸ್ಪಷ್ಟವಾಗಿ ಕೇಳಿಬರಹತ್ತಿತು.

**"ಸಪ್ತ ವ್ಯಾಧಾ ದಶಾರ್ಣೇಷು ಮೃಗಾಃ ಕಾಲಂಜರೆ ಗಿರೌ**
**ಚಕ್ರವಾಕಾಃ ಶರದ್ವೀಪೇ ಹಂಸಾಸ್ಸರಸಿ ಮಾನಸೇ ॥**
**ತೇಽಪಿ ಜಾತಾಃ ಕುರುಕ್ಷೇತ್ರೇ ಬ್ರಾಹ್ಮಣಾ ವೇದ ಪಾರಗಾಃ**
**ಪ್ರಸ್ಥಿತಾ ದೀರ್ಘಮಧ್ವಾನಂ ಯೂಯಂ ತೇಭ್ಯೋಽವಸೀದಥ" ॥**

ವೇದಪಾರಂಗತರಾಗಿ ಕುರುಕ್ಷೇತ್ರದಲ್ಲಿದ್ದ ಋಷಿ ಕುಮಾರರೇ! ನೀವು ದುಷ್ಕರ್ಮದಿಂದ ಪತಿತರಾಗಿ ಮೊದಲು ದಶಾರ್ಣದೇಶದಲ್ಲಿ ಬೇಡರಾದಿರಿ. ಬಳಿಕ ಕಾಲಂಜರ ಗಿರಿಯಲ್ಲಿ ಚಿಗರೆಗಳಾದಿರಿ. ಆ ಮೇಲೆ ಶರದ್ವೀಪದಲ್ಲಿ ಚಕ್ರವಾಕಗಳಾದಿರಿ. ತದನಂತರ ಮಾನಸ ಸರೋವರದಲ್ಲಿ ಹಂಸಗಳಾದಿರಿ. ಕೊನೆಯದಾದ ಈ ಜನ್ಮದಲ್ಲಿಯೂ ನಿಮ್ಮ ಜೊತೆಗಾರರು ವಿರಕ್ತರಾಗಿ ಸರ್ವಸಂಗ ಪರಿತ್ಯಾಗಮಾಡಿ ವೈಕುಂಠಕ್ಕೆ ಹೊರಟಿರುವರು. ಈಗ ಅವರು ಎಷ್ಟೋ ಮುಂದೆ ಹೋಗಿದ್ದಾರೆ. ಅವರ ತಮ್ಮಂದಿರಾದ ನೀವು ಮಾತ್ರ ಇಲ್ಲಿ ಏಕೆ ಕೊಳೆಯುತ್ತಿವಿರಿ. ಏಕೆ ಹಿಂದೆ ಬೀಳುವಿರಿ?

ಈ ಪದ್ಯವನ್ನು ಕೇಳಿದಕೂಡಲೇ ತಕ್ಷಣದಲ್ಲಿ ಬ್ರಹ್ಮದತ್ತನು ಕುಳಿತಲ್ಲಿಯೇ ಮೂರ್ಛೆ ಹೊಂದಿ ಬಿದ್ದುಬಿಟ್ಟನು. ಕುದುರೆ ಹೊಡೆಯುವ ಕಂಡರೀಕನೂ ಒಮ್ಮೆಲೇ ಮೂರ್ಛಿತನಾದ. ಚಾಮರ ಬೀಸುವ ಪಾಂಚಿಕ ನಿಂತಲ್ಲಿಂದಲೇ ಉರುಳಿ ರಥೋಸ್ಥದಲ್ಲಿ ಬಿದ್ದುಬಿಟ್ಟನು. ಜನರೆಲ್ಲರೂ ಗಾಬರಿಯಾದರು. ಮೂವರ ತಲೆಗೂ ತಣ್ಣೀರು ತಟ್ಟಿ ಗಾಳೀ ಹಾಕಿ ಶೈತ್ಯೋಪಚಾರ ಮಾಡಿದರು. ಮೆಲ್ಲಮೆಲ್ಲನೆ ಮೂವರೂ ಮೂರ್ಛೆ ತಿಳಿದು ಎದ್ದು ಕುಳಿತರು. ಅವರಿಗೆ ಹಿಂದಿನ ಜನುಮದ ತಮ್ಮ ಕತೆಯೆಲ್ಲವೂ ನೆನಪಿಗೆ ಬಂದು ದುಃಖವಾಯಿತು. ತಮ್ಮ ವಿಷಯಲಂಪಟತೆ ರಾಜ್ಯಮೋಹಗಳನ್ನು ತಿಳಿದು ನಾಚಿಕೆಯಾಯಿತು. ನಮ್ಮ ಸೋದರರು ವೈಕುಂಠಮಾರ್ಗದಲ್ಲಿದ್ದಾಗ ನಾವು ಮೂವರು ಮಾತ್ರ ಹಿಂದುಳಿದೆವಲ್ಲ ಎಂದು ಪಶ್ಚಾತ್ತಾಪವಾಯಿತು. ಆ ಮೂರು ಜನರಿಗೂ ತಾವು ಕಳೆದ ಜನುಮದಲ್ಲಿ ಮಾನಸಸರೋವರದಲ್ಲಿ ಕುಳಿತದ್ದೂ, ರಾಜನ ಐಸಿರಿಯನ್ನು ಕಂಡು ಅದಕ್ಕೆ ಅಪೇಕ್ಷೆಪಟ್ಟದ್ದೂ, ಅದರಂತೆ ತಾವು ರಾಜಮಂತ್ರಿಗಳಾಗಿ ಹುಟ್ಟಿಬಂದದ್ದೂ ಎಲ್ಲವೂ ಕಣ್ಣು ಮುಂದೆ ಕಟ್ಟಿದಂತಾಯಿತು. ಇದರಿಂದ ಮುಕ್ತರಾಗಿ ಮುಕ್ತಿಯ ಮಾರ್ಗ ಹಿಡಿಯಬೇಕೆಂದು ಅವರು ಸಂಕಲ್ಪಿಸಿದರು.

ಆ ಶ್ಲೋಕವನ್ನು ಹೇಳಿದ ಬ್ರಾಹ್ಮಣನು ತನ್ನ ಪದ್ಯವನ್ನು ಕೇಳಿ ರಾಜಮಂತ್ರಿಗಳೆಲ್ಲರೂ ಮೂರ್ಛೆಬಂದು ಬಿದ್ದುದನ್ನು ಕಂಡು "ನಾನೇಕೆ ಈ ಪದ್ಯ ಹೇಳಿದೆ!" ಎಂದು ಅನುತಾಪ ಬಟ್ಟನು. ರಾಜದೂತರು ಬಂದು ತನಗೇನು ಮಾಡುವರೋ ಎಂದು ಗಾಬರಿಯಾದನು. ರಾಜನಿಗೆ ಪ್ರಾಣಾಂತಿಕವಾದ ಅಂಥ ಘೋರ ಪದ್ಯವನ್ನು ಹೇಳಿ ರಾಜನನ್ನೂ ತನ್ನನ್ನೂ ಕೂಡಿಯೇ ಸಂಕಟಕ್ಕೆ ಗುರಿಪಡಿಸಿದ ಮಕ್ಕಳನ್ನು ಹಳಿಯುತ್ತ ಕುಳಿತಿದ್ದನು.

ರಾಜನು ಅವನನ್ನು ಕರೆಯಿಸಿಗೊಂಡು ಎಲ್ಲ ಸಮಾಚಾರವನ್ನು ಕೇಳಿ ತಿಳಿದುಕೊಂಡನು. ಬ್ರಹ್ಮಜ್ಞಾನಿಗಳಾದ ತನ್ನ ಅಣ್ಣಂದಿರಿಗೆ ಜನ್ಮವಿತ್ತು ತನಗಾದರೂ ಆ ಪದ್ಯದ ನೆವದಿಂದ ಸ್ವರೂಪಜ್ಞಾನವನ್ನು ತಂದುಕೊಟ್ಟದ್ದಕ್ಕಾಗಿ ಅವನಿಗೆ ಭಕ್ತಿಯಿಂದ ವಂದಿಸಿ

ಅಭಿನಂದಿಸಿ ಅಪಾರವಾದ ಧನರಾಶಿಯನ್ನು ಅವನಿಗೆ ದಾನವಾಗಿ ಇತ್ತನು. ಆಕಸ್ಮಿಕವಾಗಿ ಬಂದ ಹೇರಳವಾದ ಹಣ, ಮುತ್ತು, ರತ್ನ, ಹೊಲ, ಮನೆ ಮೊದಲಾದ ವಿಪುಲೈಶ್ವರ್ಯದಿಂದ ಈ ವೃದ್ಧ ಬ್ರಾಹ್ಮಣನು ಪರಮ ಸಂತುಷ್ಟನಾಗಿ ರಾಜನನ್ನು ಆಶೀರ್ವದಿಸಿದನು. ಇಷ್ಟೆಲ್ಲ ಕುಬೇರೈಶ್ವರ್ಯವನ್ನು ತನ್ನಂಥ ಜನ್ಮದರಿದ್ರಸುದಾಮನಿಗೆ ತಂದುಕೊಟ್ಟ ಅಮೂಲ್ಯವಾದ ಎರಡು ಪದ್ಯಗಳನ್ನು ಹೇಳಿಹೋದ ತನ್ನ ಮಕ್ಕಳನ್ನು ಮನಸಾ ಅಭಿನಂದಿಸಿ ಅವರ ಕವಿತ್ವದ ಬಗೆಗೆ ಕೌತುಕಪಡುತ್ತ ಮನೆಗೆ ಮರಳಿದನು.

ಅತ್ತ ಮಹಾರಾಜ ಬ್ರಹ್ಮದತ್ತನು ಅರಮನೆಗೆ ಬಂದು ಮಗನಾದ ವಿಷ್ವಕ್ ಸೇನನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿ ರಾಜ್ಯಭಾರವನ್ನೆಲ್ಲ ಒಪ್ಪಿಸಿದನು. ತಾನು ವಿರಕ್ತನಾಗಿ ಕಂಡರೀಕ ಹಾಗೂ ಪಾಂಚಿಕರೊಂದಿಗೆ ಅರಣ್ಯಕ್ಕೆ ಹೊರಟನು. ಅವನು ತಪೋವನಕ್ಕೆ ಬಂದು ಅನುಷ್ಠಾನಕ್ಕೆ ಕೂಡಬೇಕೆನ್ನುಷ್ಟರಲ್ಲಿ ಅವನ ಹೆಂಡತಿ ಯಾದ ಸನ್ನತಿಯೂ ಕೂಡ ಅಲ್ಲಿಗೆ ಬಂದಳು. ಮಹಾರಾಜನಿಗೆ ನಮಸ್ಕಾರ ಮಾಡಿ ತನ್ನ ಮೊಂಡುತನವನ್ನೂ ಚಂಡಿತನವನ್ನೂ ಕ್ಷಮಿಸಬೇಕೆಂದು ಬೇಡಿಕೊಂಡಳು. ತನ್ನ ಕಮಲ ದಳದಂತಿರುವ ಆಯತಾಕ್ಷಗಳ ಅಶ್ರುಧಾರೆಯಿಂದ ಅವನ ಚರಣಗಳನ್ನು ತೊಳೆದು ದೀನವಾಣಿಯಿಂದ ಹೇಳಿದಳು. ''ಪ್ರಾಣನಾಥ! ಅಂದು ಇರುವೆಗಳ ಪ್ರಣಯಕಲಹವನ್ನು ಕಂಡು ನೀವು ನಕ್ಕಾಗ ಅದು ನನಗೆ ತಿಳಿದಿದ್ದರೂ 'ನೀವು ನಕ್ಕದ್ದೇಕೆ ಹೇಳಿರೆಂದು' ನಾನು ಬುದ್ಧಿಪೂರ್ವಕವಾಗಿಯೇ ಹಟಹಿಡಿದೆ. ನಿಮಗೆ ಇರುವೆಗಳ ಮಾತು ತಿಳಿಯುವುದು ನನಗೆ ಗೊತ್ತಿತ್ತು. ನನ್ನ ರೂಪ ಸೌಂದರ್ಯ ಹಾಗೂ ಹಾವಭಾವಗಳಿಂದ ಮುಗ್ಧರಾಗಿ ಅನವರತವೂ ರತಿ ಲೀಲಾರತರಾದ ನಿಮ್ಮ ಸೋದರರು ವೈಕುಂಠಕ್ಕೆ ಹೊರಟು ನಿಂತಿದ್ದೂ ನನಗೆ ತಿಳಿಯಿತು. ಆಗ ನಿಮಗೆ ನನ್ನ ಮೇಲಿನ ಮೋಹ ಮಮತೆಗಳು ದೂರಾಗುವವರೆಗೆ ವೈರಾಗ್ಯ ಹುಟ್ಟುವುದು ಸಾಧ್ಯವಿಲ್ಲ ವೆಂದು ಬಗೆದೆ. ಇರುವೆಯ ನೆಪಮಾಡಿ ನಿಮ್ಮ ಜೊತೆಗೆ ಬಡೆದಾಡಿ ವಿರಸವನ್ನುಂಟು ಮಾಡಿದೆ. ನನ್ನ ಪ್ರೇಮರಾಗದ ರತಿರಸವು ಸಿಕ್ಕದಂತಾದಾಗ ನಿಮಗೆ ವೈರಾಗ್ಯ ಮೂಡಿ ಅಡವಿಗೆ ಹೋಗಿ ತಪಸ್ಸುಮಾಡಿ ಒಂದು ಸಪ್ತಾಹದಲ್ಲಿ ಭಗವಂತನನ್ನು ಒಲಿಸಿಗೊಂಡು ಬಂದಿರಿ. ಆ ಭಗವಂತನ ಅನುಗ್ರಹದಿಂದಲೇ ಜಾತಿಸ್ಮರಣವುಂಟಾಗಿ ರಾಜ್ಯಕೋಶಗಳನ್ನೆಲ್ಲ ತೊರೆದು ಇಲ್ಲಿಗೆ ಬಂದು ತಪಸ್ಸಿಗೆ ನಿಂತಿರಿ. ಇನ್ನು ಮೇಲೆ ನಿಮ್ಮ ಆತ್ಮೋದ್ಧಾರ ದೂರಿಲ್ಲ. ನೀವು ವಿಶ್ವಾಮಿತ್ರರ ಮಕ್ಕಳಾಗಿದ್ದಾಗ ಕೊಂದು ತಿಂದ ಗಾರ್ಗ್ಯಗುರುಗಳ ಆಕಳವೇ ನಾನು. ಈ ಜನ್ಮದಲ್ಲಿ ನಿಮ್ಮ ಹೆಂಡತಿಯಾಗಿ ನಿಮ್ಮಲ್ಲಿ ಆತ್ಮದ ಅರಿವು ಬೇಗ ಮೂಡಲಿ ಎಂದು ಚಂಡಿಯಾಗಿ ಕಠೋರವಾಗಿ ನಡೆದುಕೊಂಡೆನು. ನನ್ನ ಪತಿದ್ರೋಹದ ಈ ದುರ್ವ್ಯಾಪಾರವನ್ನು ತಾವು ಕ್ಷಮಿಸಬೇಕೆಂದು'' ಮತ್ತೊಮ್ಮೆ ಬಾಗಿ ಬೇಡಿಕೊಂಡಳು.

ಸನ್ನತಿಯ ಈ ಸಮಯಜ್ಞತೆ ಹಾಗೂ ದೂರದೃಷ್ಟಿ ಮತ್ತು ಪತಿಪ್ರವಣತೆಗಳನ್ನು ಕಂಡು ಸಂತುಷ್ಟನಾದ ಬ್ರಹ್ಮದತ್ತನು ಅವಳ ಯುಕ್ತಿ ಹಾಗೂ ಯೋಗ ಶಕ್ತಿಗಳನ್ನು ಹೊಗಳಿ 'ನಿನ್ನಿಂದಲೇ ನನ್ನ ಉದ್ಧಾರವಾಯಿತೆಂದು' ಹೇಳಿದನು. ಬಳಿಕ ಅವರಿಬ್ಬರೂ ತಪಃಸಮಾಧಿಲೀನರಾಗಿ ಭಗವದನುಗ್ರಹದಿಂದ ತಮ್ಮ ಅಣ್ಣಂದಿರಂತೆ ದಿವ್ಯವಾದ ಗತಿಯನ್ನು ಹೊಂದಿದರು. ಕಂಡರೀಕನು ಸಾಂಖ್ಯಯೋಗದಿಂದ ಬ್ರಹ್ಮಜ್ಞಾನವನ್ನು ಪಡೆದುಕೊಂಡು ಅವಿಚ್ಛಿನ್ನ ಭಗವದ್ಧ್ಯಾನದಿಂದ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಂಡು ಉದ್ಧೃತನಾದನು. ರಾಜಮಿತ್ರನಾದ ಪಾಂಚಿಕನು ವೇದವಾದ ವಿಶಾರದನಾಗಿ ವೇದಪಾಠಕ್ಕೆ ಅನುಕೂಲ ವಾಗಲಿ

ಎಂದು ಕ್ರಮಪಾಠವನ್ನು ವ್ಯವಸ್ಥಿತಗೊಳಿಸಿದನು. ಹಾಗೂ ವೇದಾರ್ಥ ನಿರ್ಣಯಕ್ಕೆ ಅತ್ಯಂತ ಉಪಯುಕ್ತವಾದ ಶಿಕ್ಷಾ ಪದ್ಧತಿಯನ್ನು ಪ್ರಸಾರದಲ್ಲಿ ತಂದನು. ಆಮೇಲೆ ಅವನಾದರೂ ಯೋಗಾಚಾರ್ಯ ಪದವಿಯನ್ನು ಹೊಂದಿ ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗಗಳ ಅನುಷ್ಠಾನದಿಂದ ಯೋಗಾಚಾರ್ಯ ಪದವಿಯನ್ನು ಹೊಂದಿ ಉತ್ತಮ ಗತಿಯನ್ನು ಪಡೆದನು.

## ಚಾರುಚಂದ್ರನ ಚಿತ್ರಚರಿತ್ರ

ಸೃಷ್ಟಿಯ ಆದಿಕಾಲ, ಸೃಜಿಸಬೇಕೆಂದು ಬ್ರಹ್ಮನ ಬಯಕೆ. ಅದಕ್ಕಾಗಿ ಮೊದಲು ಮಾನಸಸೃಷ್ಟಿ. ಅದರಲ್ಲಿ ಮೂಡಿ ಬಂದವ ಅತ್ರಿ. ಮಹಾತಪಸ್ವಿ ಬ್ರಹ್ಮವರ್ಚಸ್ವಿ. ಅವನು ಕೈಕೊಂಡ ತಪಸ್ಸು ಮಹಾಘೋರ ಎರಡು ಕೈಮೇಲೆ. ಎರಡು ಕಣ್ಣುಸೂರ್ಯನಲ್ಲಿ. ಎರಡು ಕಾಲಿನ ಹೆಬ್ಬೆರಳು ಮಾತ್ರ ನೆಲದಲ್ಲಿ. ನೋಡಲು ಹೆಬ್ಬಂಡೆ, ಮೈಯೆಲ್ಲ ಒಣಗಿ ನಿಂತ ಕಾಷ್ಠ ಹೀಗೆ ಮೂರುಸಾವಿರ ವರ್ಷ ದಾರುಣ ತಪಸ್ಸು ಎಮೆಗಳಲ್ಲಿ ಪಿಳಕು ಇಲ್ಲ. ಮೈಯಲ್ಲಿ ಬಳಕು ಇಲ್ಲ. ಮನದಲ್ಲಿ ಅಳಕು ಇಲ್ಲ. ರಕ್ತಮಾಂಸವಿಲ್ಲದ ಮುನಿಯ ಮೈಯೆಲ್ಲ ಬೆಳ್ಳಬೆಳ್ಳಗೆ ಅವನ ಅಂತರಂಗದಲ್ಲಿ ಚಿತ್ತಕಾಶ. ಅದನ್ನುಕಂಡ ಮುನಿಯ ಕಣ್ಣು ಹನಿಯಿತು. ಆ ತಪೋಧನನ ಕಣ್ಣೀರನ್ನು ಹತ್ತು ದೆಸೆವೆಣ್ಣುಗಳೆಲ್ಲರೂ ಕುಡಿದರು. ಹೊಟ್ಟೆಯಲ್ಲಿ ಹೊತ್ತರು. ಆದರೆ ಆ ತೇಜೋಂಶವನ್ನು ಹೊಟ್ಟೆಯಲ್ಲಿ ಅವರಿಗೆ ಹೊರಲಿಕ್ಕೆ ಆಗಲಿಲ್ಲ. ಆಗ ಆ ಹತ್ತೂ ದಿಗ್ಗರ್ಭದಿಂದ ಸರ್ವಜಗತ್ತಿಗೂ ಆಪ್ಯಾಯನವಾದ ತೇಜಃಪಿಂಡ ಹೊರಬಿದ್ದಿತು. ಅವನೇ ಚಂದ್ರ, ಭೂಮಿಗೆ ಬಿದ್ದ ಈ ಚಂದ್ರನನ್ನು ಬ್ರಹ್ಮದೇವರು ಸಾವಿರಾರು ಮಂತ್ರರೂಪ ಕುದುರೆ ಹೂಡಿದ ವೇದ-ರಥದಲ್ಲಿ ಕೂಡಿಸಿದರು. ಸಪ್ತರ್ಷಿಗಳು ಚತುರ್ವೇದ ಸೂಕ್ತಗಳಿಂದ ಹೊಗಳಿದರು. ಆ ಚಂದ್ರ ಬಹು ದೀರ್ಘಕಾಲ ತಪಂಗೈದ. ಅದರಿಂದ ಅವನಿಗೆ ಮತ್ತಿಷ್ಟು ತೇಜಃ ಪ್ರಾಪ್ತಿ. ಕಳೆಕಾಂತಿ ವೃದ್ಧಿ.

ಮಹರ್ಷಿ ಅತ್ರಿಗಳ ತಪೋಲೋಚನದಿಂದ ಹುಟ್ಟಿದ ಚಂದ್ರನ ಚಾರು ವಿಗ್ರಹದಲ್ಲಿ ಸೌಂದರ್ಯಕ್ಕೆ ತೇಜಃಸಂಗಮವಾಗಿ ದೀಪ್ತಿಗೆ ದಿವ್ಯತೆಯ ಪ್ರಾಪ್ತಿಯಾಗಿತ್ತು. ಕಾಂತಿಗೆ ಶಾಂತಿಯ ಸಾಹಚರ್ಯ ಲಭಿಸಿತ್ತು. ವನ ಪ್ರಭಾಮಂಡಲದ ಕಿರಣಕಮನೀಯತೆ ಹಾಗೂ ಜ್ಯೋತ್ಸ್ನಾ ರಮಣೀಯತೆಗಳನ್ನು ಕಂಡು ಸುಪ್ರೀತರಾದ ಬ್ರಹ್ಮದೇವರು ಅವನನ್ನು ಬ್ರಾಹ್ಮಣ ಬೀಜ, ಔಷಧಿ ಮತ್ತು ನೀರು ಈ ನಾಲ್ಕು ವಸ್ತುಗಳ ವಿಸ್ತಾರವಾದ ರಾಜ್ಯದಲ್ಲಿ ರಾಜನನ್ನು ಮಾಡಿ ಪಟ್ಟಾಭಿಷೇಕಗೈದರು. ಆಗ ದ್ವಿಜರಾಜನಾಗಿ ದಿವ್ಯದೀಧಿತಿಯಿಂದ ತೊಳಗಿಬೆಳಗುತ್ತಲಿರುವ ಆ ಚಂದ್ರನಿಗೆ ದಕ್ಷಪ್ರಜಾಪತಿಯು ಇಪ್ಪತ್ತೇಳು ಜನ ಹೆಣ್ಣುಮಕ್ಕಳನ್ನೂ ಕೊಟ್ಟು ಮದುವೆ ಮಾಡಿದನು. ಅಶ್ವಿನಿ, ಭರಣಿ ಮೊದಲಾಗಿ ಇಂದಿಗೂ ನಭೋಮಂಡಲದಲ್ಲಿ ಮಿನುಗುತ್ತಲಿರುವ ತೇಜಸ್ವಿನೀ ತಾರಕೆಯರೆ ಆ ಚಂದ್ರನ ಚಾರುಗಾತ್ರಿಯರಾದ ಪತ್ನಿಯರು.

ಹೀಗೆ ಚಂದ್ರನು ಇಪ್ಪತ್ತೇಳು ನಕ್ಷತ್ರಮಾಲೆಯ ನಾರಿಯರನ್ನು ವಿವಾಹವಾಗಿ ತನ್ನ ತೇಜೋಬಲದಿಂದ ಇಪ್ಪತ್ತೊಂದು ಸಲ ಬ್ರಹ್ಮದತ್ತವಾದ ಸುವರ್ಣ ರಥದಲ್ಲಿ ಕುಳಿತು ಭೂಪ್ರದಕ್ಷಿಣೆಯನ್ನು ಮಾಡಿಕೊಂಡು ಬಂದನು. ಈ ದಿಗ್ವಿಜಯದಲ್ಲಿ ಅವನಿಗೆ ಅಪರಂಪಾರವಾದ ಐಶ್ವರ್ಯ ಮತ್ತು ಮುತ್ತು ರತ್ನಾದಿಗಳ ವೈಭವವು ಪ್ರಾಪ್ತವಾಗಿತ್ತು. ತನ್ನ ಅಮೂಲ್ಯ ಸಂಪತ್ತು ಹಾಗೂ ಅತುಲ್ಯ ಪರಾಕ್ರಮಗಳನ್ನು ತಿಳಿದು ಅವನಿಗೆ ರಾಜಸೂಯಯಾಗ ಮಾಡಬೇಕೆಂದು ಬಯಕೆಯಾಯಿತು. ತನ್ನ ತಂದೆ ಹಾಗೂ ಬ್ರಹ್ಮದೇವರ ಅಪ್ಪಣೆಯನ್ನು ಪಡೆದು ಆ ಮಹಾಕ್ರತುವನ್ನು ಪ್ರಾರಂಭ ಮಾಡಿದನು. ಚಂದ್ರನ ಆ ಯಜ್ಞದಲ್ಲಿ ಅವನ

ತಂದೆಯಾದ ಅತ್ರಿ ಋಷಿಗಳು ಹೋತೃಗಳಾದರು. ಭೃಗುಗಳು ಅಧ್ವರ್ಯುಗಳಾಗಿ ನಿಂತುಕೊಂಡರು. ಬ್ರಹ್ಮದೇವರಂತೂ ಸ್ವಯಂ ಬ್ರಹ್ಮನೇ ಆದರು. ಹಿರಣ್ಯಗರ್ಭ ಋಷಿಗಳು ಉದ್ಗಾತೃಗಳಾದರು. ಸನತ್‌ಕುಮಾರರೇ ಮೊದಲಾದ ಬ್ರಹ್ಮರ್ಷಿಗಳಿಂದ ಒಡಗೂಡಿದ ಸಾಕ್ಷಾತ್ ನಾರಾಯಣನೇ ಸ್ವಯಂ ಸಭಾಸದನಾಗಿ ನಿಂತುಕೊಂಡಿದ್ದನು.

ಇಂಥ ದಿವ್ಯ ಯಜ್ಞದಲ್ಲಿ ಚಂದ್ರನು ಗೆದ್ದುಕೊಂಡ ಮೂರು ಲೋಕಗಳನ್ನೆಲ್ಲ ಆ ಬ್ರಹ್ಮರ್ಷಿಗಳಿಗೆ ದಾನರೂಪವಾಗಿ ಕೊಟ್ಟುಬಿಟ್ಟನು. ಬಂದ ಬ್ರಹ್ಮರ್ಷಿಗಳೆಲ್ಲ ಚಂದ್ರನ ಆ ಐಶ್ವರ್ಯ ಈ ಔದಾರ್ಯಗಳನ್ನು ಬಾಯಿತುಂಬ ಹೊಗಳಿದರು. ದೇವ-ಗಂಧರ್ವರು ಅವನ ಕೀರ್ತಿಯಕತೆಯನ್ನು ಹಾಡಿಪಾಡಿದರು. ಅಪ್ಸರೆಯರು ಅವನ ಪ್ರತಾಪಕೀರ್ತಿಗಳನ್ನು ಕೊಂಡಾಡಿ ಕುಣಿದು ಗೀತನೃತ್ಯಗಳಲ್ಲಿ ಅಭಿನಯಿಸಿದರು. ಸಿನೀ, ಕುಹೂ, ದ್ಯುತಿ, ಪುಷ್ಟಿ, ಪ್ರಭಾ, ವಸು, ಕೀರ್ತಿ, ಧೃತಿ, ಲಕ್ಷ್ಮಿ ಎಂಬ ನವನಾರಿಯರು ಪ್ರೀತಿಯಿಂದ ಅವನ ಸೇವೆಗೈದರು. "ಇಷ್ಟೆಲ್ಲ ಬಣ್ಣ ಬಣ್ಣನೆಗಳಿಂದ ದೃಪ್ತನಾದ ಚಂದ್ರನ ತಲೆ ತಿರುಗಿ ಹೋಯಿತು. ಅತಿ ಪ್ರಶಂಸೆ, ಲೋಕೋತ್ತರ ಯಶಸ್ಸು, ಅತುಲನೀಯವಾದ ಐಶ್ವರ್ಯ, ಮೇಲೆ ತಾನು ಇಪ್ಪತ್ತೊಂದುಸಲ ಮಾಡಿದ ಜಗಜ್ಜಯ ಇವೆಲ್ಲ ಕೂಡಿ ಅವನ ವಿವೇಕದ ತೂಕವನ್ನು ತಪ್ಪಿಸಿ ಬಿಟ್ಟವು.

ರಾಜಸೂಯ ಯಾಗದ ಅವಭೃಥ ಸ್ನಾನಕ್ಕಾಗಿ ಆಕಾಶಗಂಗೆಯ ತೀರದಲ್ಲಿ ಎಲ್ಲರೂ ಮಿಲಿತರಾಗಿದ್ದರು. ಯಜ್ಞಕ್ಕಾಗಿ ಬಂದ ಎಲ್ಲ ಋಷಿಮುನಿಗಳೂ ದೇವಗಂಧರ್ವರೂ ಸ್ವರ್ಗಸೀಮಂತಿನಿಯರೂ ಆ ಪುಣ್ಯಸ್ನಾನಕ್ಕಾಗಿ ಜಾಹ್ನವೀತೀರದ ಸ್ಫಟಿಕ ನಿರ್ಮಲವಾದ ನೀರಿನಲ್ಲಿ ನಿಂತಿದ್ದರು. ಅವರಲ್ಲಿ ಸುರುಗುರುವಾದ ಬೃಹಸ್ಪತಿಯ ಪತ್ನಿ ತಾರೆಯೂ ದೇವತಾ ಸ್ತ್ರೀಯರೊಡನೆ ಸ್ನಾನಕ್ಕಾಗಿ ಜಾನುದಘ್ನವಾದ ಜಲದಲ್ಲಿ ನಿಂತುಕೊಂಡಿದ್ದಳು. ಆರ್ದ್ರವಸ್ತ್ರಾಂತರದಿಂದ ಅಭಿವ್ಯಕ್ತವಾದ ಅವಳ ಅಂಗಸೌಷ್ಠವ ಹಾಗೂ ಕಾಯಕಾಂತಿ ಗಳನ್ನು ಕಂಡು ಮುಗ್ಧನಾದ ಚಂದ್ರಮನು ಬಲದರ್ಪದಿಂದ ಯಾರಿಗೂ ಗೊತ್ತಾಗದಂತೆ ಅವಳನ್ನು ಅಪಹರಿಸಿ ಬಿಟ್ಟನು. ಗಂಗಾತೀರದಲ್ಲಿ ನೇರವಾಗಿ ತನ್ನ ಅಂತಃಪುರಕ್ಕೆ ತಂದು ಸ್ವರ್ಗೀಯ ಸೌಂದರ್ಯದ ಸಾರಭೂತಳಾದ ತಾರೆಯ ರೂಪಸಿರಿಯನ್ನು ಸೂರೆಗೊಂಡನು. ತ್ರಿಭುವನ ಸುಂದರನಾದ ಚಾರುಚಂದ್ರನ ಸ್ವಚ್ಛಂದಭೋಗ ಸಾನಂದ ವಿಹಾರಗಳಿಂದ ತಾರೆಯ ಮನಸ್ಸು ನೊಂದರೂ ಅವಳ ಬಳ್ಳಿ ಮೈ ಮಾತ್ರ ಅವನ ಉದ್ದಾಮ ಯೌವನದ ರತಿರಭಸಗಳಲ್ಲಿ ರಾಗರಸವನ್ನು ಪಡೆಯುತ್ತಲಿತ್ತು. ಚಂದ್ರನಿಗಂತೂ ಅಂತಃಪುರದಲ್ಲಿಯೇ ಇಂದ್ರಪುರಿ ಇಳಿದಂತಾಗಿತ್ತು. ಪ್ರೇಮಾಂಧನಾಗಿ ಕಾಮಕೇಳೀ ಲೋಲನಾದ ಚಂದಿರ ತನ್ನ ಶಯ್ಯಾ ಮಂದಿರವನ್ನೇ ಬಿಟ್ಟು ಹೊರಬೀಳದಂತಾದಾಗ ಅಮರಾವತಿಯ ಪೌರರಿಗೆಲ್ಲ ಆ ಸಮಾಚಾರ ತಿಳಿದು ಹೋಯಿತು. ಅದನ್ನು ತಿಳಿದು ಗರ ಬಡೆದಂತಾದ ದೇವಗುರು, ಗಾಬರಿಯಾಗಿ ಓಡುತ್ತ ಚಂದ್ರನ ಮನೆಗೆ ಬಂದು ತಾರೆಯನ್ನು ಕೊಡು ಎಂದು ಕೇಳಿದ. ತಾರೆಯ ತಾವರೆ ಮೊಗದ ಸೊಬಗು ಮೆರಗುಗಳಿಗೆ ಮಾರುಹೋದ ಸುಧಾಕರ ಮದೋನ್ಮತ್ತನಾಗಿ ಅವಳನ್ನು 'ಕೊಡುವುದಿಲ್ಲ' ಎಂದು ಹೇಳಿದ. ನಿರುಪಾಯನಾದ ಆ ಸುರಾಚಾರ್ಯನು ದೇವೇಂದ್ರನಿಗೆ ಈ ಸಮಾಚಾರವನ್ನು ತಿಳಿಸಿದಾಗ ಅವನ ಕಣ್ಣು ಕೋಪದಿಂದ ಕೆಂಡದ ಕುಂಡವಾಯಿತು. ಅವನು ತನ್ನ ಸೇನಾಪತಿಯಾದ ಸ್ಕಂದನನ್ನು ಕರೆದು ಚಂದ್ರಲೋಕದ ಮೇಲೆ ಅಭಿಯೋಗಕ್ಕಾಗಿ ಹೊರಡಬೇಕೆಂದು ಹೇಳಿದನು. ದೇವಗುರುಗಳ ಮೇಲಿನ ದ್ವೇಷದಿಂದ ದೈತ್ಯಗುರು ಶುಕ್ರಾಚಾರ್ಯರು ಚಂದ್ರನ ಪಕ್ಷವನ್ನು ವಹಿಸಿದರು. ಅವರ ಆದೇಶದಂತೆ ದೈತ್ಯ

ದಾನವರೆಲ್ಲರೂ ಧವಲದೀಧಿತಿಯ ಸೈನಿಕರಾಗಿ ರಣಂಗಕ್ಕಿಳಿದರು. ದೇವಗಣದಲ್ಲಿದ್ದ ಚಂದ್ರನು ತಮ್ಮ ಗುರುಪತ್ನಿಯನ್ನು ಬಲಾತ್ಕಾರದಿಂದ ಅಪಹರಿಸಿ ಆ ದುರ್ವ್ಯಾಪಾರದಿಂದ ದೈತ್ಯ ಸಜಾತೀಯನಾದದ್ದು ಅವರಿಗೆ ತುಂಬ ಸಂತಸವನ್ನು ತಂದಿತ್ತು. ನಿಶಾಕರನು ವ್ಯಭಿಚಾರದಿಂದ ನಿಶಾಚರನಂತಾದಾಗ ಆ ಎರಡೂ ಸೇನಾಸಾಗರಗಳು ದೇವಸೇನೆಯನ್ನು ಎದುರಿಸಿದವು.

ಚಂದ್ರನ ಈ ಗುರುದ್ರೋಹವನ್ನು ಕಂಡು ಮನನೊಂದು ಕೈಲಾಸಾಧಿಪತಿ ಪರಶಿವನು ದೇವಪಕ್ಷಕ್ಕೆ ಬಂದು ಕೂಡಿದನು. ಬೃಹಸ್ಪತಾಚ್ಯಾರ್ಯರ ತಂದೆಯಾದ ಅಂಗಿರಸರಲ್ಲಿಯೇ ಮಹಾದೇವರು ಅಧ್ಯಯನಮಾಡಿದ್ದು. ತಮ್ಮ ಗುರುಪುತ್ರನಿಗೆ ಒದಗಿದ ಈ ದುರವಸ್ಥೆಯನ್ನು ಕಂಡು ಕೋಪಕಷಾಯಿತನಾದ ಕೈಲಾಸಪತಿಯು ತನ್ನ ಶಿಷ್ಯರಾದ ದೈತ್ಯರ ಮೇಲೆಯೇ ಪಿನಾಕವನ್ನು ಎತ್ತ ಬೇಕಾಯಿತು. ದೇವದಾನವರ ನಡುವೆ ಗುರುಪತ್ನಿ ತಾರೆಯ ಸಲುವಾಗಿ ನಡೆದ ಈ ಘೋರ ಸಂಗ್ರಾಮವು ತಾರಕಾಮಯ ಯುದ್ಧವೆಂದು ಪೌರಾಣಿಕ ಪ್ರಪಂಚದಲ್ಲೆಲ್ಲ ಅತ್ಯಂತ ಸುಪ್ರಸಿದ್ಧವಾಗಿದೆ. ಈ ಸಂಗ್ರಾಮದಲ್ಲಿ ಅಳಿದುಳಿದ ದೇವತೆಗಳು ಬ್ರಹ್ಮದೇವರಿಗೆ ಮೊರೆ ಹೊಕ್ಕರು. ಆಗ ಬ್ರಹ್ಮನು ಚಂದ್ರ ಶುಕ್ರರಿಗೆ ಛೀ ಮಾಡಿದ. ಶಿವನಿಗೆ ಸಮಾಧಾನ ಮಾಡಿದ. ತಾರೆಯನ್ನು ತಾನೇ ಬೃಹಸ್ಪತಿಗೆ ಒಪ್ಪಿಸಿದ. ಆಗ ತಾರೆ ಗರ್ಭಿಣಿ. ಅವಳ ಬಸಿರು ಬೃಹಸ್ಪತಿಗೆ ಕಣ್ಣಸಿರು. ನನ್ನ ಮಡದಿಯ ಮೈಯಲ್ಲಿ ಬೇರಯವರ ಬೀಜ! ''ಛೀ! ಆ ಪಿಂಡವನ್ನು ಎಲ್ಲಿಯಾದರೂ ಚೆಲ್ಲಿ ಬಾ'' ಎಂದು ಗರ್ಜಿಸಿದ. ಹೆದರಿದ ತಾರೆ ಹುಲ್ಲು ಜೊಂಡಿನಲ್ಲಿ ಇಳಿಸಿದಳು ಗಂಡಗೆ ಬೇಡಾದ ಆ ಬಸಿರನ್ನು. ಹುಲ್ಲುಗರಿಕೆಯಲ್ಲಿಯೇ ಹೊಳೆಯ ತೊಡಗಿತು ಹೊಳಪಿನಿಂದ ಆ ಹಸುಗೂಸು. ಆ ಕೂಸಿನ ಕಳೆಕಾಂತಿಯ ಕಿರಣಗಳು ದೇವತೆಗಳ ಕಣ್ಣನ್ನು ಕುಕ್ಕಿದವು. ಆಗ ದೇವತೆಗಳಿಗೆಲ್ಲ ಸಂಶಯ ಈ ತೇಜಃಪಿಂಡ ಚಂದ್ರನದೋ ಅಥವಾ ಬೃಹಸ್ಪತಿಯದೋ! ಅವರು ತಾರೆಯನ್ನೇ ಕೇಳಿದರು. ''ಈ ತೇಜೋಬೀಜ ಯಾರದು? ಏನು ಹೇಳಿಯಾಳು ದಾರಿತಪ್ಪಿದ ಆ ತರಳ ತಾರೆ ! ತಾರೆ ತೆರೆಯಲೇ ಇಲ್ಲ ತನ್ನ ಬಾಯನ್ನು ದೇವತೆಗಳಿಗೂ ಕುತೂಹಲ ತಾರೆಯ ಹೊಟ್ಟೆಯ ಗುಟ್ಟನ್ನು ರಟ್ಟು ಮಾಡಲು. ಮತ್ತೆ ಮತ್ತೆ ಅವರು ತಾರೆಯನ್ನು ಒತ್ತಾಯ ಪಡಿಸಿದರು. ಈ ಮಗುವಿನ ತಂದೆ ಯಾರು ಎಂಬುದನ್ನು ಹೇಳು'' ಎಂದು. ಅವಳೋ ಮೌನ ಗೌರಿ. ಇದನ್ನು ನೋಡಿ ಅದೇಹುಟ್ಟಿದ ತಾರೆಯ ಹಸುಗೂಸಿಗೇ ಕೋಪ ಬಂದಿತು. ಆಗಲೇ ಹುಟ್ಟಿದ ಹುಡುಗ ಗುಡುಗಿ ತಾಯಿಗೇ ಶಾಪಹಾಕಲು ಹೊರಟಿತು. ಅದನ್ನು ತಡೆದ ಬ್ರಹ್ಮ. ತಾನೇ ತಾರೆಯ ಬಳಿಗೆ ಬಂದ. ಅನುನಯದಿಂದ ಸಂತೈಸಿ ಕೇಳಿದ ''ತಾರೆ, ನಿಜ ಹೇಳು. ಇದು ಯಾರ ಮಗು?'' ಆಗ ಆ ನೀರೆ ನಾಚಿಕೆಯಿಂದ ಕರಗಿ ನೀರಾಗಿ ಮೆಲ್ಲನೆ ಉಸುರಿದಳು ''ಈ ಚೆಲುವಿನ ಮಗು ಚಂದ್ರಾಮನದು'' ಎಂದು. ಆಗ ಚಂದ್ರ ಧಾವಿಸಿ ಬಂದ. ಆ ಮುದ್ದು ಮಗುವನ್ನು ಮುದ್ದಾಡಿದ. ಮಸ್ತಕವನ್ನು ಮೂಸಿದ. ಮಮತೆಯಿಂದ ಮೈದಡವಿದ. 'ಬುಧ' ಎಂದು ಹೆಸರಿಟ್ಟ ತನ್ನ ಆ ಕರುಳಿನ ಕುಡಿಗೆ. ಚಂದ್ರನ ಸುಂದರ ಮಗನಾದ ಈ ಬುಧ ವೈವಸ್ವತ ಮಗುವಿನ ಮಗಳಾದ ಇಳಾ ಎಂಬ ರಾಜಕುಮಾರಿಯಲ್ಲಿ ಪುರೂರವ ಎಂಬ ಗಂಡು ಮಗುವನ್ನು ಪಡೆದ. ಸ್ವರ್ಗದ ಅಪ್ಸರೆ ಊರ್ವಶಿ ಈ ಪುರೂರವ ಪ್ರೇಯಸಿ. ಇವನಿಗಾಗಿ ನಾಕಲೋಕ ಬಿಟ್ಟು ನೆಲಕ್ಕೆ ಇಳಿದಿದ್ದಳು. ಆ ಸುರಲೋಕದ ರೂಪರಾಣಿ. ಪುರೂರವನಿಂದ ಊರ್ವಶಿಗೆ ಏಳು ಜನ ಮಕ್ಕಳಾದರು. ಇತ್ತ ಸ್ತ್ರೀಲಂಪಟನಾದ ಚಂದ್ರನಿಗೆ ಕ್ಷಯ ಹಿಡಿಯಿತು. ಕಾಂತಿ ಕಂದಿತು. ಕಳೆ ಕುಂದಿತು. ಬಿಂಬ ಕ್ಷೀಣಿಸಿತು. ಆಗ ಅವನು ಮತ್ತೆ ತನ್ನ ಹಡೆದಪ್ಪ

ಅತ್ರಿಯ ಬಳಿಗೆ ಬಂದ. ತನ್ನ ರೋಗವನ್ನು ಕಳೆಯಬೇಕೆಂದು ಬೇಡಿಕೊಂಡ. ಸರ್ವಸಮರ್ಥ ಆ ಚಂದಪ್ಪನ ಅಪ್ಪ. ತನ್ನ ತಪಃ ಸಾಮರ್ಥ್ಯದಿಂದ ಮಗನಿಗೆ ಹಿಡಿದ ಕ್ಷಯವನ್ನು ತೊಡೆದು ಹಾಕಿದ. ತಂದೆಯ ತಪೋಬಲದಿಂದ ತೇಜೋದೀಪ್ತಿಯನ್ನು ಪಡೆದು ಚಂದ್ರ ಮತ್ತೆ ಪ್ರಕಾಶ ಪುಂಜನಾಗಿ ಮೊದಲಿನಂತೆ ಮಿಂಚತೊಡಗಿದ.

## ಪುರೂರವ

ವೇದ ಪ್ರತಿಪಾದ್ಯರಾದ ಕೆಲವೇ ಪೌರಾಣಿಕ ರಾಜರ್ಷಿಗಳಲ್ಲಿ ಪುರೂರವನು ಒಬ್ಬನೆಂದು ಹೇಳಬಹುದು. ಬ್ರಹ್ಮದೇವರಿಂದ ಶಪಿತಳಾದ ಊರ್ವಶಿಯು ಪುರೂರವನ ಧೀರೋದಾತ್ತ ವ್ಯಕ್ತಿತ್ವ ಹಾಗೂ ಅಮಾನುಷ ಸೌಂದರ್ಯ ಮತ್ತು ವೀರ ವಿಕ್ರಮಗಳನ್ನು ಕಂಡು ಮುಗ್ಧಳಾಗಿ ಬಂದಳು. ಗಂಧರ್ವಕನ್ನೆಯರು ತಮ್ಮ ದೇವಭಾವದ ಅಭಿಮಾನವನ್ನು ಬಿಟ್ಟು ಮಾನವರನ್ನು ಅರಿಸುವುದು ಅಪರೂಪ, ವರಿಸುವುದು ವಿರಳ. ಆದರೆ ಪುರೂರವನ ಪ್ರಭಾವಿಯಾದ ಆಕರ್ಷಕಸೌಂದರ್ಯ ಆ ದೇವ ಕನ್ಯೆಯನ್ನು ಎಳೆದುಭೂಮಿಗೆ ಬರಮಾಡಿತ್ತು.

ರೂಪದಿಂದ ಮನ್ಮಥನಾದ ಆ ರಾಜರ್ಷಿಯ ಜೊತೆಗೆ ಆ ಸುರಸುಂದರಿ ಅನುಭವಿಸಿದ ದಿವ್ಯ ಭೋಗಗಳಿಗೆ ಲೆಕ್ಕವಿಲ್ಲ. ಮಾಡಿದ ಲೀಲಾವಿಹಾರ, ಕೇಳೀವಿಲಾಸಗಳಿಗೆ ಮಿತಿಯಿಲ್ಲ. ರಸಿಕ ರಮಣಿಯಾದ ಆ ದೇವಗಣಿಕೆ ಭೂಲೋಕದ ತರುಣ ರಾಜಕುಮಾರನನ್ನು ಕರೆದು ಕೊಂಡು ಹೋಗಿ ಕುಬೇರನ ಚೈತ್ರವನದಲ್ಲಿ ಹದಿನೈದು ವರುಷ ಮಧುಚಂದ್ರದ ಮಾಧುರ್ಯವನ್ನು ಸವಿದಳು. ಹನ್ನೊಂದುವರುಷ ಆಕಾಶಗಂಗೆಯ ಉತ್ಪುಲ್ಲಕಲ್ಹಾರ ವನಗಳಲ್ಲಿ ವಿಹರಿಸಿದಳು. ಅಲಕಾಪಟ್ಟಣದ ಬೆಳದಿಂಗಳಿನ ತಂಪಿನಲ್ಲಿ ಏಳು ವರುಷಗಳ ವರೆಗೆ ಯಕ್ಷಭೋಗಗಳನ್ನು ಭೋಗಿಸಿದಳು. ನಂದನವನದ ಮಂದಾರ ವೃಕ್ಷದಡಿಯಲ್ಲಿ ಹತ್ತುವರುಷ ರತಿ ರಸಾನುಭವವನ್ನು ಪಡೆದಳು. ಅದರಂತೆ ವಿಶಾಲಾಉತ್ತರಕುರು ಮೊದಲಾದ ನಿಸರ್ಗ ಸೌಂದರ್ಯದ ನೆಲೆವೀಡಾದ ಚೆಲುವಿನ ಮಡಿಲುಗಳಲ್ಲೆಲ್ಲ ಸ್ವಚ್ಛಂದ ವಾಗಿ ವಿಹರಿಸಿ ಅವನನ್ನು ದೇವಭೋಗ್ಯವಾದ ಕಾಮಕೇಳಿಗಳಿಂದ ರಮಿಸಿ ಆನಂದಿಸಿದಳು.

ಅವಳು ಮೊದಲು ಅವನ ಹತ್ತಿರ ಬರುವಾಗ ಕೆಲವು ಕರಾರುಗಳನ್ನು ಹಾಕಿದ್ದಳು. ರಾಜನು ದಿಗಂಬರನಾಗಿದ್ದಾಗ ತನ್ನ ಕಣ್ಣಿಗೆ ಬೀಳಬಾರದು. ತಾನು ಬಯಸಿದಾಗಷ್ಟೇ ಬರಬೇಕು. ತನ್ನ ಪ್ರೀತಿಯ ಮಕ್ಕಳಾದ ಎರಡು ಹೋತುಗಳನ್ನು ರಾಜನು ರಕ್ಷಿಸಬೇಕು. ತಾನು ಈ ಲೋಕದಲ್ಲಿ ಉಣ್ಣುವುದು ಕೇವಲ ತುಪ್ಪ ಮಾತ್ರ. ಅದೂ ಕೂಡ ಒಪ್ಪತ್ತು. ಮೊದಲು ಮಾನವರ ಸಂಪರ್ಕ ಮಾಡುವಾಗ ಬೇಗನೇ ಭೂಮಿಯಿಂದ ಬಿಡುಗಡೆ ಹೊಂದಿ ಸ್ವರ್ಗಕ್ಕೆ ಬೇಕಾದಾಗ ಹೋಗಲಿಕ್ಕೆ ನೆಪಗಳು ಇರಲಿ ಎಂದು ಅವಳು ಈ ಎಲ್ಲ ನಿರ್ಬಂಧಗಳನ್ನು ತಾನಾಗಿ ಹಾಕಿ, ರಾಜನಿಗೆ ಅದನ್ನು ಒತ್ತಿ ಹೇಳಿ ಇಟ್ಟಿದ್ದಳು. ಆದರೆ ಇಲ್ಲಿ ಬಂದು ಆ ಪುರೂರವನ ಪ್ರಣಯಪಾಶದ ಸುಳಿವಿನಲ್ಲಿ ಸಿಕ್ಕ ಬಳಿಕ ಅವನ ಪ್ರೇಮಬಂಧನ ಅವಳಿಗೆ ಇಷ್ಟವೆನಿಸಿ ಇದರಿಂದ ಬಿಡಿಸಿಗೊಳ್ಳುವುದೇ ಬೇಡವಾಯಿತು. ವನಿತಾವಿನೋದನ ಕಲೆಯಲ್ಲಿ ವಿದಗ್ಧನಾದ ಆ ತರುಣ ರಾಜಕುಮಾರನೊಂದಿಗೆ ಐವತ್ತೊಂಬತ್ತು ವರ್ಷ ಉದ್ದಾಮ ವಿಹಾರ ಕೇಳಿಗಳನ್ನು ಮಾಡಿ ಭೋಗಾನುಭವವನ್ನು ಪಡೆದರೂ ಅವಳಿಗೆ ತಾನು ಮಾಡಿಕೊಂಡ ಯಾವುದಾದರೂ ನೆಪವನ್ನು ಮುಂದೆ ಮಾಡಿ ಅವನನ್ನು ಬಿಟ್ಟು ಹೋಗಬೇಕೆನ್ನಿಸಲಿಲ್ಲ. ಕಲ್ಪಾಂತಕಾಲದವರೆಗೆ ಇದ್ದರೂ ಪುರೂರವನ ಪ್ರಣಯಾ ಮೃತಸಿಂಚನ ಅವಳಿಗೆ ಸಾಕಾಗುತ್ತಲಿರಲಿಲ್ಲ. ಆದರೆ ಅತ್ತ ಗಂಧರ್ವರಿಗೆಲ್ಲ ದೊಡ್ಡ

ಚಿಂತೆಗಿಟ್ಟುಕೊಂಡಿತು. ಊರ್ವಶಿ ಇಲ್ಲದ ಸ್ವರ್ಗ ಆನಂದಶೂನ್ಯವಾದ ದುಃಖ ದುರ್ಗವಾಯಿತು. ಹೇಗಾದರೂ ಮಾಡಿ ಊರ್ವಶಿಯನ್ನು ಈ ಮಾನವೀಯ ಮೋಹದಬಲೆಯಿಂದ ಬಿಡಿಸಿ ತಂದು ಸ್ವರ್ಗ ಸೀಮೆಯಲ್ಲಿ ಸ್ಥಾಪಿಸಬೇಕಾಗಿತ್ತು. ಅದಕ್ಕಾಗಿ ದೇವಗಂಧರ್ವರೆಲ್ಲ ತಲೆ ಕೆರೆಯುತ್ತ ಕುಳಿತಾಗ ವಿಶ್ವಾವಸು ಎಂಬ ಚತುರಮತಿಯಾದ ಚಾಣಾಕ್ಷ ಗಂಧರ್ವನು ಊರ್ವಶಿಯನ್ನು ನಾನು ಮರಳಿ ಸ್ವರ್ಗಕ್ಕೆ ಕರತರುವೆನೆಂದು ಪ್ರತಿಜ್ಞೆಗೈದು ಕೆಲವು ಗಂಧರ್ವರನ್ನು ಸಹಾಯಕ್ಕೆ ತೆಗೆದುಕೊಂಡು ಪ್ರತಿಷ್ಠಾನಕ್ಕೆ ಬಂದನು.

ಊರ್ವಶಿಯು ಮಹಾರಾಜನೊಂದಿಗೆ ಮಾಡಿಕೊಂಡ ಕರಾರುಗಳನ್ನೆಲ್ಲ ಅರಿತ ಅವನು ಒಂದು ದಿನರಾತ್ರಿ ಗಾಢಾಂಧಕಾರದಲ್ಲಿ ಊರ್ವಶಿಯ ಪ್ರೇಮದಪುತ್ಥಳಿಗಳಾದ ಹೋತು ಗಳಲ್ಲಿ ಒಂದನ್ನು ಅಪಹರಿಸಿ ಎತ್ತಿಕೊಂಡು ಹೊರಟನು. ಅದರ ದನಿಯನ್ನು ಕೇಳಿ ಸಂಭ್ರಾಂತಳಾದ ಊರ್ವಶಿಯು ಗಂಧರ್ವರು ಬಂದಿರಬಹುದೆಂದು ಶಂಕಿಸಿದಳು. ಮಹಾರಾಜನು ಆಗ ನಗ್ನಾವಸ್ಥೆಯಲ್ಲಿ ಇದ್ದುದರಿಂದ ಅವಳ ಪ್ರೀತಿಯ ಹೋತಿನ ದನಿಯನ್ನು ಕೇಳಿಯೂ ಏಳಲಾರದೆ ಹಾಗೇ ಒರಗಿದನು. ಆದರೆ ಗಂಧರ್ವರು ಮತ್ತೊಂದು ಹೋತನ್ನೂ ಎತ್ತಿಕೊಂಡು ಹೊರಟರು. ಆಗ ಊರ್ವಶಿ ತನ್ನ ಮಕ್ಕಳನ್ನು ಕಾಯಬೇಕೆಂದು ರಾಜನನ್ನು ಬೇಡಿಕೊಂಡಳು. ಆಗ ಮಹಾರಾಜ ಆ ಬಯಲಬಟ್ಟೆಯ ಅವಸ್ಥೆಯಲ್ಲಿಯೇ ಆ ಮೇಷಗಳನ್ನು ಬಿಡಿಸಿ ಕೊಂಡು ಬರಲು ಧಾವಿಸಿದನು. ರಾಜನು ತಮ್ಮನ್ನು ಅಟ್ಟಿಸಿಕೊಂಡು ಬರುವಾಗ ಗಂಧರ್ವರು ಸೆಳೆಮಿಂಚುಗಳ ಅಚಂಚಲ ಗೊಂಚಲುಗಳನ್ನೇ ಸೃಷ್ಟಿಸಿ ಅವನ ನಗ್ನ ರೂಪವು ಊರ್ವಸಿಯ ಕಣ್ಣಿಗೆ ಬೀಳುವಂತೆ ಮಾಡಿದರು. ಆ ಅವಸ್ಥೆಯಲ್ಲಿರುವ ರಾಜನನ್ನು ಕಂಡಕೂಡಲೇ ಊರ್ವಶಿಗೆ ತನ್ನ ನಿಯಮ ನಿಬಂಧನೆಗಳ ಸ್ಮರಣೆ ಬಂದು ಒಮ್ಮೆಲೇ ಭೂಲೋಕಬಿಟ್ಟು ಸ್ವರ್ಗಕ್ಕೆ ಹೋದಳು.

ಮಹಾರಾಜನು ಹೋತುಗಳೆರಡನ್ನೂ ಬಿಡಿಸಿಕೊಂಡು ಮನೆಗೆ ಬರುವಷ್ಟರಲ್ಲಿ ಊರ್ವಶಿ ಇಲ್ಲದ್ದನ್ನು ಕಂಡು ಬಹಳ ದುಃಖಪಟ್ಟನು. ಆಗ ಅವನು ಅವಳ ಪ್ರೇಮಾತಿರೇಕದಿಂದ ಉದ್ಭ್ರಾಂತನಾಗಿ ರಾಜ್ಯ, ಕೋಶ, ಮನೆ, ಮಾರುಗಳನ್ನೆಲ್ಲ ಬಿಟ್ಟು ಊರು ಊರು ತಿರುಗಿದನು. ಇಡೀ ಭೂಮಂಡಲವನ್ನು ಸುತ್ತು ಹಾಕಿದನು. ಕೊನೆಗೆ ಒಂದು ದಿನ ಅವನು ಹುಚ್ಚನಂತೆ ತೀರ್ಥಕ್ಷೇತ್ರ, ನದನದೀ, ಪುರಗಿರಿ, ಗ್ರಾಮಾರಾಮಗಳಲ್ಲೆಲ್ಲ ಅಂಡಲೆಯುತ್ತ ಊರ್ವಶಿ "ಊರ್ವಶಿ" ಎಂದು ಬಡಬಡಿಸುತ್ತ ಕುರುಕ್ಷೇತ್ರಕ್ಕೆ ಬಂದಾಗ ಅಲ್ಲಿಯ ಪ್ಲಕ್ಷತೀರ್ಥ ಎಂಬ ಹೊಂದಾವರೆಗಳರಳಿ ನಿಂತ ಹೊಕ್ಕರಣಿಯಲ್ಲಿ ಊರ್ವಶಿ ಮೈ ತೊಳೆದುಕೊಳ್ಳುತ್ತಲಿದ್ದಳು. ಐವರು ಅಪ್ಸರೆಯರೂ ಅಲ್ಲಿ ಇರುವುದನ್ನು ಕಂಡನು. ಆಗ ರಾಜನು ಅವಳ ಹತ್ತಿರ ಬಂದಾಗ ಊರ್ವಶಿ ತನ್ನ ಗೆಳತಿಯರಾದ ಗಂಧರ್ವಕನ್ನೆಯರಿಗೆಲ್ಲ ಪುರೂರವನ ಶೌರ್ಯ, ಧೈರ್ಯ, ಚಾತುರ್ಯಾದಿ ಲೋಕೋತ್ತರವಾದ ಗುಣಗಳನ್ನು ಬಾಯಿ ತುಂಬ ಹೊಗಳಿ ಹೇಳಿದಳು.

ಆಗ ಸಖಿಯರು ಮತ್ತೆ ಅವಳೆಲ್ಲಿ ಆ ರಾಜನ ಜೊತೆಗೆ ಭೂಲೋಕದ ಭೋಗಾಭಿ ಲಾಷೆಯಿಂದ ಹೊರಟು ಹೋಗುವಳೋ ಎಂದು ಗಾಬರಿಯಾದರು. ಆಗ ರಾಜ ಮತ್ತು ಊರ್ವಶಿಯರಲ್ಲಿ ಸರಸಾಲಾಪಗಳಾದವು. "ಪ್ರಿಯತಮ, ನಾನು ಈಗ ನಿನ್ನಿಂದ ಗರ್ಭಿಣಿ ಯಾಗಿದ್ದೇನೆ. ನಿನ್ನ ಮಕ್ಕಳು ಹುಟ್ಟಿದ ಬಳಿಕ ಅವರನ್ನು ಕರೆದುಕೊಂಡು ನಿನ್ನ ಹತ್ತಿರ ನಾನು ಬರುತ್ತೇನೆ. ಆಗ ನಿನ್ನ ಜೊತೆಗೆ ಒಂದು ರಾತ್ರಿಯನ್ನು ಕಳೆಯುತ್ತೇನೆ" ಎಂದು ಹೇಳಿದಳು.

ರಾಜನಿಗೆ ಪರಮ ಸಂತೋಷವಾಗಿ ಉಬ್ಬಿನಿಂದ ಪ್ರತಿಷ್ಠಾನಕ್ಕೆ ಹಿಂತಿರುಗಿದನು. ಒಂದು ವರುಷ ಕಳೆಯುವಷ್ಟರಲ್ಲಿ ಊರ್ವಶಿ ಹೇಳಿದಂತೆ ಬಂದು ಮಹಾರಾಜನ ಅಂತಃಪುರವನ್ನು ತನ್ನ ನಗೆಯ ಬೆಳದಿಂಗಳಿಂದ ತುಂಬಿದಳು. ಆ ರಾತ್ರಿ ರಾಜನಿಗೆ ರಸನಿಮಿಷ. ಅಂದಿನ ಆನಂದ ಅವನಿಗೊಂದು ಅಮೃತಾನುಭವ. ಆ ದಿನ ರಾತ್ರಿ ಬೆಳಗಾಗುತ್ತ ಬಂದಂತೆ ಊರ್ವಶಿ ರಾಜನ ವಿರಹ ಕಲ್ಪನೆಯಿಂದ ಉದ್ವಿಗ್ನಳಾದಳು. ಈ ರಸರಾತ್ರಿಯು ಎಂದೆಂದಿಗೂ ಕರಗದಂತೆ ಮಾಡಲು ಅವಳು ರಾಜನಿಗೆ ಒಂದು ಯುಕ್ತಿಯನ್ನು ಹೇಳಿದಳು. ''ನಾಳೆ ನನ್ನನ್ನು ಕರೆಯಲು ಸ್ವರ್ಗದಿಂದ ಗಂಧರ್ವರು ಬರಲಿರುವರು. ನೀನು ಆದರಾತಿಥ್ಯದಿಂದ ಅವರನ್ನು ಸಂತೋಷಪಡಿಸು. ರಾಜೋಪಚಾರದಿಂದ ಸುಪ್ರೀತರಾದ ಅವರು ನಿನಗೆ ಬೇಕಾದ ವರವನ್ನು ಬೇಡು ಎಂದು ಹೇಳುವರು. ಆಗ ನೀನು ''ನಾನೂ ಗಂಧರ್ವನಾಗಬೇಕು'' ಎಂದು ವರವನ್ನು ಕೇಳು. ಆದರಿಂದ ನೀನೂ ಗಂಧರ್ವನಾಗಿಬಿಟ್ಟರೆ ನಾವಿಬ್ಬರೂ ಅನುದಿನವೂ ಶೃಂಗಾರ ಲೀಲಾಲೋಲರಾಗಿ ಕೊನೆಯವರೆಗೂ ಇರಬಹುದು. ಆ ಮೇಲೆ ನಮ್ಮಿಬ್ಬರಿಗೂ ನಿತ್ಯಶ್ರೀ, ನಿತ್ಯಭೋಗ'' ಎಂದು.

ಅದರಂತೆ ಮರುದಿನ ಗಂಧರ್ವರು ಬಂದಾಗ ರಾಜನು ವರವನ್ನು ಕೇಳಿದನು. ಆಗ ಅವರು 'ತಥಾಸ್ತು' ಎಂದು ಅವನಿಗೊಂದು ಅಗ್ನಿಸ್ಥಾಲಿಯನ್ನು ಕೊಟ್ಟು ''ಇದರಿಂದ ನೀನು ಯಜ್ಞವನ್ನು ಮಾಡಿದರೆ ನೀನು ಗಂಧರ್ವ ಲೋಕವನ್ನು ಹೊಂದುವಿ'' ಎಂದು ಹೇಳಿದರು. ಆ ಅಗ್ನಿಯನ್ನು ಅಲ್ಲಿಯೇ ಸಮೀಪದ ಅರಣ್ಯದಲ್ಲಿಟ್ಟು ಅವನು ಮೊದಲು ಊರ್ವಶಿಯು ತಂದು ಒಪ್ಪಿಸಿದ ತನ್ನ ಮಕ್ಕಳನ್ನು ಊರೊಳಗಿನ ಅರಮನೆಯಲ್ಲಿ ಕೂಡಿಸಿ ಬಂದನು. ಬೆಂಕಿ ಮತ್ತು ಮಕ್ಕಳು ಇಬ್ಬರನ್ನೂ ಕೂಡಿ ಏಕಕಾಲಕ್ಕೆ ಊರಲ್ಲಿ ಕರೆದುಕೊಂಡು ಹೋಗಬಾರದೆಂದು ಮೊದಲು ಮಕ್ಕಳನ್ನು ಮನೆಯಲ್ಲಿರಿಸಿ ಅರಣ್ಯಕ್ಕೆ ಬರುವಷ್ಟರಲ್ಲಿ ಅವನು ಅಗ್ನಿಯನ್ನು ಇಟ್ಟ ಆ ಸ್ಥಳದಲ್ಲಿ ಶಮೀ ಗರ್ಭದಲ್ಲಿ ಒಂದು ಅರಳೆಯ ಗಿಡವು ಬೆಳೆದಿತ್ತು. ಅದನ್ನು ನೋಡಿ ರಾಜನಿಗೆ ಅಚ್ಚರಿಯಾಯಿತು. ಅವನು ಗಂಧರ್ವರು ಆ ಅಶ್ವತ್ಥದ ಕೊರಡಿನಿಂದ ಅಗ್ನಿಯ್ನನು ಕಡೆದು ಆದರಿಂದ ಯಜ್ಞ ಮಾಡಲು ಹೇಳಿದರು. ಮುಂದೆ ಮಹಾರಾಜನು ಗಂಧರ್ವರು ಆಜ್ಞೆಯಂತೆ ಆ ಅಶ್ವತ್ಥಗಿಡದಿಂದ ಅರಣಿಯನ್ನು ತಂದು ಅವುಗಳನ್ನು ತಿಕ್ಕಿ ಅಗ್ನಿಯನ್ನು ನಿರ್ಮಿಸಿ ಆದರಿಂದ ಯಜ್ಞವನ್ನು ಮಾಡಿದನು. ಆ ಯಾಗದ ಪ್ರಭಾವದಿಂದ ಪುರೂರವನು ಗಂಧರ್ವಲೋಕವನ್ನು ಹೊಂದಿ ತನ್ನ ಮನದನ್ನೆಯಾದ ಊರ್ವಶಿಯ ನಿರಂತರ ಸಂಗಾಲಿಂಗನದ ಶೃಂಗಾರ ಸುಖ ಸೌಭಾಗ್ಯವನ್ನು ಪಡೆದು ಆನಂದಸಾಗರದ ತೆರೆಗಳಲ್ಲಿ ಮೈ ಮರೆತನು. ಅವನು ಇಲ್ಲಿ ಇರುವವರೆಗೆ ಗಂಗೆಯ ಉತ್ತರ ತೀರದಲ್ಲಿ ಸಾಮ್ರಾಜ್ಯವನ್ನು ಪ್ರಯಾಗ ಅಥವಾ ಪ್ರತಿಷ್ಠಾನ ಪುರದಲ್ಲಿದ್ದು ಆಳಿದನು.

## ಮಡದಿಯಾಗಬಯಸಿದಳು, ಮಗಳಾಗಿ ಬಂದಳು

ಪುರೂರವನಿಗೆ ಊರ್ವಶಿಯಲ್ಲಿ ಆಯು, ಅಮಾವಸು, ವಿಶ್ವಾಯು, ಶ್ರುತಾಯು, ದೃಢಾಯು, ಶತಾಯು ಎಂಬ ದೇವಕುಮಾರರಂತೆ ಸತ್ವಸಂಪನ್ನರಾದ ಸಪ್ತ ಸತ್ಪುತ್ರರು ಜನಿಸಿದರು. ಅಮಾವಸುವಿಗೆ ಭೀಮ, ನಗ್ನಜಿತ, ಎಂಬ ಇಬ್ಬರು ಮಕ್ಕಳಾದರು. ಭೀಮನಿಂದ ಕಾಂಚನಪ್ರಭನು ಆ ಕಾಂಚನನಿಂದ ಸುಹೋತ್ರ ಎಂಬ ಪ್ರಬಲ ಪ್ರತಾಪಿಯೂ ಪ್ರಚಂಡ ಪಂಡಿತನೂ ಆದ ಪುತ್ರನು ಜನಿಸಿದನು. ಸುಹೋತ್ರನಿಂದ ಕೇಶಿನಿಯೆಂಬ ಕಾಮಿನಿಯಲ್ಲಿ ಜನ್ಹುನಾಮಕ ತನಯನು ಉತ್ಪನ್ನನಾದನು. ಈ ಜನ್ಹುವು ಸರ್ವಮೇಧವೆಂಬ ದೊಡ್ಡ ಯಜ್ಞವನ್ನು ಮಾಡಿದನು.

ಜನ್ಹುವಿನ ಅದ್ಭುತವಾದ ಶೀಲ ಶಕ್ತಿ ಹಾಗೂ ಮಹಾಮಹಿಮೆಗಳನ್ನು ಕಂಡು ದೇವಗಂಗೆ ಮೋಹಿತಳಾಗಿ ತನ್ನನ್ನು ಮದುವೆಯಾಗು ಎಂದು ಅವನ ಹತ್ತಿರ ಬಂದು ಪ್ರಣಯ ಭಿಕ್ಷೆಯನ್ನು ಕೇಳಿದಳು. ಅವಳ ಈ ಒಲವಿನ ಕರೆಯನ್ನು ಜನ್ಹುವು ತಿರಸ್ಕರಿಸಿದಾಗ ಗಂಗೆಗೆ ಪ್ರಣಯಭಂಗದಿಂದ ಬ್ರಹ್ಮಾಂಡ ಸಿಟ್ಟು ಬಂದಿತು. ಅವಳು ತನ್ನ ಭೀಷ್ಮ ಪ್ರವಾಹದಲ್ಲಿ ಜನ್ಹುವಿನ ಯಜ್ಞವಾಟ ಆಶ್ರಮ ಹಾಗೂ ಯಜ್ಞೋಪಕರಣಗಳನ್ನೆಲ್ಲ ಮುಳುಗಿಸಿ ಬಿಟ್ಟಳು. ಇದನ್ನು ನೋಡಿ ಜನ್ಹುವು ಕೋಪಾಟೋಪದಿಂದ ಕಣ್ಣಿನಿಂದ ಕಿಡಿಗಳನ್ನು ಹಾರಿಸುತ್ತ "ಗಂಗೆ! ನಿನ್ನ ಈ ದುರಭಿಮಾನದ ದುಷ್ಫಲವನ್ನು ಈಗಲೇ ಅನುಭವಿಸುವಿ. ನೀರನ್ನೆಲ್ಲ ಕುಡಿದು ನಿನ್ನ ಅಬ್ಬರವನ್ನೆಲ್ಲ ಈಗಲೇ ಅಡಗಿಸಿಬಿಡುವೆ. ನಿಲ್ಲು" ಎಂದು ಹೇಳಿ ಅಗಸ್ತ್ಯನಂತೆ ತತ್ಕಾಲದಲ್ಲಿ ಗಂಗೆಯ ಅಪಾರವಾದ ಜಲರಾಶಿಯನ್ನೆಲ್ಲ ಕುಡಿದುಬಿಟ್ಟನು. ಆಗ ಮುನಿಗಳು ಲೋಕಪಾವನೆಯಾದ ಗಂಗೆಯೆಲ್ಲ ಏಕಾಪೋಶನವಾದದ್ದನ್ನು ನೋಡಿ ಗಾಬರಿಯಾಗಿ ಜನ್ಹುವಿನನ್ನು ಪ್ರಾರ್ಥಿಸಿ ದೇವನದಿಯನ್ನು ಹೊರಬಿಡಲು ಹೇಳಿದರು. ಋಷಿಗಳ ಪ್ರಾರ್ಥನೆಯಂತೆ ಜನ್ಹುವು ಭಾಗೀರಥಿಯನ್ನು ಬಿಟ್ಟನು. ಬಳಿಕ ಅವಳನ್ನು 'ಜಾನ್ಹವಿ' ಅಂದರೆ ಜನ್ಹುವಿನ ಮಗಳು ಎಂದು ಮುನಿಗಳು ಕರೆದರು. ಹೀಗೆ ಮಡದಿಯಾಗಬೇಕೆಂದು ಬಂದು ಮಗಳಾಗಿನಿಂದ ಸುರಸರಿತೆಯ ಸಂಕಲ್ಪ ಬೇರೊಂದು ರೀತಿಯಿಂದ ಪೂರ್ಣವಾಯಿತು. ಯುವನಾಶ್ವ ಮಹಾರಾಜನು ಹಿಂದಕ್ಕೆ ಯಾವುದೋ ಕಾರಣಕ್ಕಾಗಿ ಗಂಗೆಗೆ ಮಾನವಿಯಾಗು ಎಂದು ಶಾಪಕೊಟ್ಟಿದ್ದನು. ಆಗ ಅವಳು ಅವನ ಹೊಟ್ಟೆಯಿಂದಲೇ ಹುಟ್ಟಿಬಂದು ಕಾವೇರಿಯೆಂದು ಪ್ರಸಿದ್ಧಳಾಗಿದ್ದಳು. ಉಪವರಳಾದ ಈ ಕಾವೇರಿಯನ್ನು ಯುವನಾಶ್ವನು ಜನ್ಹುವಿಗೆ ಕೊಟ್ಟು ಮದುವೆ ಮಾಡಿದನು. ಜನ್ಹುವನ್ನು ಮದುವೆಯಾಗಬೇಕೆಂಬ ಭಾಗೀರಥಿಯ ಬಯಕೆ ಹೀಗೆ ಅವಳ ಅರ್ಧಭಾಗದಿಂದ ನಿರ್ಮಿತಳಾದ ಕಾವೇರೀನದಿಯಿಂದ ಪೂರ್ಣವಾಯಿತು.

ಜನ್ಹುವಿಗೆ ಗಂಗಾಂಶ ಸಂಭೂತಳಾದ ಕಾವೇರಿಯಿಂದ ಸುನಹ ಎಂಬ ಧಾರ್ಮಿಕನಾದ ಮಗನು ಉತ್ಪನ್ನನಾದನು. ಸುನಹನಿಂದ ಮುಂದೆ ಆ ವಂಶದಲ್ಲಿ ಅಜಕ ಬಲಾಕಾಶ್ವ ಕುಶ ಎಂಬ ರಾಜರು ಹುಟ್ಟಿದರು. ಕುಶನಿಗೆ ಕುಶಿಕ ಕುಶನಾಭ ಕುಶಾಂಬ ಮೂರ್ತಿಮಾನ್ ಎಂಬ ನಾಲ್ಕು ಮಕ್ಕಳು. ಅವರಲ್ಲಿ ಕುಶಿಕನು ಪಲ್ಹವರೆಂಬ ಕಾಡುಜನರ ಜೊತೆಗೆ ವನಚರನಾಗಿಯೇ ಬೆಳೆದನು. ಮತ್ತು ಅವನು ತನಗೆ ಇಂದ್ರಸಮಾನನಾದ ತೇಜಸ್ವೀಮಗನಾಗಬೇಕೆಂದು ಅತ್ಯಂತ ಉಗ್ರವಾದ ಘೋರ ತಪವನ್ನು ಆಚರಿಸಿದನು. ಸಾವಿರ ವರುಷಗಳ ಇಂಥ ದಾರುಣವಾದ ತಪಸ್ಸನ್ನು ನಿರಾತಂಕವಾಗಿ ಆಚರಿಸುತ್ತ ಬಂದ ಕುಶಿಕನ ಸ್ಥೈರ್ಯ ಹಾಗೂ ತಪೋವೀರ್ಯಗಳನ್ನು ಕಂಡು ಇಂದ್ರನಿಗೆ ಭಯವಾಯಿತು. ಇವನ ಈ ಭಯಂಕರ ತಪಃಫಲರೂಪನಾಗಿ ಇನ್ನೊಬ್ಬ ಇಂದ್ರನು ಇವನ ಹೊಟ್ಟೆಯಿಂದ ಹುಟ್ಟಿಬಂದರೆ ನನ್ನ 'ಗೌರವ ಕಡಿಮೆಯಾಗುವುದು' ಎಂದು ತಿಳಿದು ದೇವೇಂದ್ರನು ತಾನೇ ಒಂದು ಅಂಶದಿಂದ ಕುಶಿಕನ ಮಗನಾಗಿ ಜನಿಸಿಬಂದನು. ಕುಶಿಕನ ಹೆಂಡತಿಯಾದ ಪೌರುಕುತ್ಸಿಯಲ್ಲಿ ಸುರರಾಜನೇ ಗಾಧಿಯೆಂಬ ಹೆಸರಿನಿಂದ ಹುಟ್ಟಿದ್ದರಿಂದ ಅವನಿಗೆ ಕೌಶಿಕ ಎಂದೂ ಹೆಸರು ಬಂದಿತು. ಆ ಗಾಧಿಗೆ ಸತ್ಯವತಿಯೆಂಬ ಮಹಾನುಭಾವಳಾದ ಓರ್ವ ಮಗಳು ಇದ್ದಳು. ಅವಳನ್ನು ಭೃಗುಋಷಿಯ ಚಿರಂಜೀವರಾದ ಋಷಿಪ್ರವರ ಋಚೀಕರಿಗೆ ಕೊಟ್ಟಿತ್ತು. ಋಚೀಕರು ತಮ್ಮ ಪತ್ನಿಯಾದ ಸತ್ಯವತಿಯ ಸೇವೆ ಶುಶ್ರೂಷೆಗಳಿಂದ

ಪರಿತುಷ್ಟರಾಗಿ ಅವಳಿಗೂ ಅವಳ ತಾಯಿಗೂ ಸಂತತಿಯಾಗಲೆಂದು ಎರಡು ಬೇರೆ ಬೇರೆ ಚರುಗಳನ್ನು ತಮ್ಮ ಮಂತ್ರಶಕ್ತಿಯಿಂದ ಸಿದ್ಧಪಡಿಸಿದರು. ಮತ್ತು ತಮ್ಮ ಮಡದಿಯನ್ನು ಕರೆದು ಅವಳ ಕೈಯಲ್ಲಿ ಚರುಗಳನ್ನು ಕೊಡುತ್ತ "ಇದು ನಿನಗಾಗಿ ತಯಾರಿಸಿದ ಚರು. ಇದರಿಂದ ನಿನಗೆ ಅತ್ಯಂತ ಶಾಂತನೂ ಒಳ್ಳೇ ತೇಜಸ್ವಿಯೂ ಆದ ತಪಸ್ವೀಪುತ್ರನು ಜನಿಸುವನು. ಈ ಎರಡನೆಯ ಚರು ನಿನ್ನ ತಾಯಿಗಾಗಿ ಸಿದ್ಧಪಡಿಸಲ್ಪಟ್ಟಿದೆ. ಇದರಿಂದ ಕ್ಷತ್ರಿಯಾಣಿಯಾದ ಅವಳಿಗೆ ಮಹಾಪ್ರಬಲ ಪರಾಕ್ರಮಶಾಲಿಯೂ ಕ್ಷತ್ರಿಯಾಂತಕನೂ ಜಗಜ್ಜೇತಾರನೂ ಆದ ದೀಪ್ತಿಮಂತನಾದ ಧೀರಪುತ್ರನು ಜನಿಸುವನು" ಎಂದು ಹೇಳಿ ತಪೋನುಷ್ಠಾನಗಳಲ್ಲಿ ನಿತ್ಯಾಭಿಯುಕ್ತರಾದ ಋಚೀಕರು ಅರಣ್ಯಕ್ಕೆ ಹೊರಟು ಹೋದರು.

ಮುಂದೆ ಒಂದು ದಿನ ಮಹಾರಾಜ ಗಾಧಿಯು ಮಗಳನ್ನು ಕಾಣಬೇಕೆಂದು ತೀರ್ಥಯಾತ್ರೆಯ ಪ್ರಸಂಗದಿಂದ ಋಚೀಕರ ಆಶ್ರಮಕ್ಕೆ ಸಕುಟುಂಬ ಬಂದನು. ಆಗ ಸತ್ಯವತಿಯು ತಾಯಿಗೆ ತನ್ನ ಗಂಡ ಕೊಟ್ಟ ಎರಡೂ ಚರುಗಳನ್ನೂ ತೋರಿಸಿ ಅವುಗಳ ಫಲ ಪ್ರಯೋಜನಗಳನ್ನು ವಿವರಿಸಿ ಅದರಿಂದಾಗಬಹುದಾದ ಸಂತಾನದ ಸ್ವರೂಪ ಸ್ವಭಾವಗಳ ಪ್ರಭೇದಗಳನ್ನು ತಿಳಿಸಿ ಎರಡನ್ನೂ ಅವಳ ಕೈಯಲ್ಲಿ ಕೊಟ್ಟಳು. ಆದರೆ ಅವಳ ತಾಯಿಯು ದೈವವಶಾತ್ ಪ್ರಮಾದದಿಂದ ಆ ಚರುಗಳನ್ನು ಬದಲುಮಾಡಿ ತನ್ನದನ್ನು ಮಗಳಿಗೆ ಕೊಟ್ಟು ಮಗಳದನ್ನು ತಾನು ತಿಂದು ಬಿಟ್ಟಳು. ಗಾಧಿಯು ಋಷಿವರ ಋಚೀಕರ ಪರಮ ಪ್ರಸಾದದಿಂದ ಕೃತಾರ್ಥನಾಗಿ ಸಂತಸದಿಂದ ರಾಜಧಾನಿಗೆ ಮರಳಿದನು.

ಇತ್ತ ಋಚೀಕರು ನಡುವೊಮ್ಮೆ ಆಶ್ರಮಕ್ಕೆ ಬಂದಾಗ ಗರ್ಭಿಣಿಯಾದ ತಮ್ಮ ಸತಿ ಸತ್ಯವತಿಯ ಮುಖದಲ್ಲಿ ಉಕ್ಕುವ ರೌದ್ರ ರಸವನ್ನೂ ರಾಜಸ ಕಳೆಯನ್ನೂ ಕಂಡು ಆಶ್ಚರ್ಯಚಕಿತರಾದರು. ನಿಮಿಷಾರ್ಧದಲ್ಲಿ ಅವರು ತಮ್ಮ ದಿವ್ಯ ದೃಷ್ಟಿಯಿಂದ ನಡೆದ ಘಟನೆಗಳನ್ನೆಲ್ಲ ಚೆನ್ನಾಗಿ ತಿಳಿದು ನೋಡಿ ತಮ್ಮ ಹೆಂಡತಿಗೆ "ಸತ್ಯವತಿ! ಮುಗುದೆಯಾದ ನೀನು ತಾಯಿಯಿಂದ ವಂಚಿಸಲ್ಪಟ್ಟಿರುವಿ. ಅವಳು ನಿನ್ನ ಚರುವನ್ನು ತಾನು ತಿಂದು ತನ್ನದನ್ನು ನಿನಗೆ ಕೊಟ್ಟಿದ್ದಾಳೆ. ಇದರಿಂದ ಈಗಲೇ ನಿನ್ನ ಗರ್ಭವು ದಾರುಣದೀಪ್ತಿಯಿಂದ ದುರ್ದರ್ಶವಾಗಿದೆ. ಇದರಿಂದ ನಿನಗೆ ಮುಂದೆ ಕ್ಷತ್ರಿಯರ ವಂಶವನ್ನೆಲ್ಲ ಧ್ವಂಸಮಾಡುವ ಕ್ರೂರಕರ್ಮಿಯಾದ ಘೋರ ರೂಪಿ ಮಗನು ಹುಟ್ಟುವನು. ನಿನ್ನ ತಾಯಿಗೆ ಮಾತ್ರ ನಿನ್ನ ಚರುವಿನ ಪ್ರಭಾವದಿಂದ ಶಾಂತಿದಾಂತಿ ಕಾಂತಿಗಳಿಂದ ಕೂಡಿದ ತಪೋಧನನೂ ಬ್ರಹ್ಮಜ್ಞಾನಿಯೂ ಆದ ಓರ್ವ ಬ್ರಹ್ಮರ್ಷಿಯಾದ ಕುವರನು ಜನಿಸುವನು. ಆ ನಿನ್ನ ಚರುವಿನಲ್ಲಿ ನಾನು ನನ್ನ ಬ್ರಹ್ಮತೇಜಸ್ಸನ್ನೆಲ್ಲ ತುಂಬಿ ಅದಕ್ಕಾಗಿ ಅನಂತಕಾಲದ ನನ್ನ ಪ್ರದೀರ್ಘ ತಪಃ ಫಲವಾದ ಪುಣ್ಯವನ್ನೆಲ್ಲ ಪ್ರದಾನ ಮಾಡಿದ್ದೆ. ಅಂಥ ಮಗುವನ್ನು ಪಡೆಯಲು ನಿನಗೆ ಭಾಗ್ಯವಿಲ್ಲದೇ ಹೋಯಿತು. ನನ್ನ ತಪಃಫಲವೆಲ್ಲ ನಿನಗೆ ಮಗನಾಗಿ ಬಾರದೆ ತಮ್ಮನಾಗಿ ಬರುವುದು. ಆದರೆ ಇದರಿಂದ ನನಗೆ ಮಾತ್ರ ಬಹುದಿನದಿಂದ ಬೇಡಿ ಬಯಸಿದ ಬ್ರಹ್ಮರ್ಷಿ ಮಗನು ಹುಟ್ಟದೆ ನಮ್ಮ ವಂಶಗುಣ ವಿರುದ್ಧವಾಗಿ ಸಂಗ್ರಾಮ ವ್ಯಸನಿಯೂ ರಾಜಕುಲಾಂತಕನೂ ಆದ ಘೋರ ಕ್ರೂರ ಸಂತತಿಯಾಗುವದು" ಎಂದು ನಿರಾಶರಾಗಿ ನುಡಿದರು.

ಅದನ್ನು ಕೇಳಿ ವಿಷಾದದಿಂದ ವಿಚ್ಛಾಯಳಾದ ಸತ್ಯವತಿಯು ಗಾಬರಿಯಾಗಿ "ಸ್ವಾಮಿ! ದಯಮಾಡಿ ನನಗೆ ಇಂಥ ಕ್ರೂರ ಮಗನು ಆಗದಂತೆ ಅನುಗ್ರಹಿಸಿರಿ. ನನ್ನ ಮಗು ಬ್ರಾಹ್ಮಣಾಧಮನಾಗಬಾರದು. ನಿಮ್ಮಂಥ ಬ್ರಹ್ಮರ್ಷಿಗಳಿಂದ ಪಡೆದ ಸಂತತಿ

ಬ್ರಹ್ಮಬಂಧುವಾಗಿ ಹಿಂಸಾಚಾರಿಯಾದರೆ ಮುಂದೆ ಏನು ಗತಿ? ಏನಾದರೂ ಮಾಡಿ ನನಗೆ ತಮ್ಮಂತೆಯೇ ಶಮದಮಾದಿ ಸಂಪನ್ನನಾದ ಬ್ರಹ್ಮಕುಮಾರನೇ ಹುಟ್ಟುವಂತೆ ಮಾಡಿರಿ'' ಎಂದು ದೈನ್ಯದಿಂದ ಅಂಗಲಾಚಹತ್ತಿದಳು. ತರುವಾಯ ಋಚೀಕರು ''ನನಗಾದರೂ ಇಂಥ ದಾರುಣ ಸಂತತಿಯಾಗುವುದು ಎಲ್ಲಿ ಬೇಕಾಗಿತ್ತು! ನಿಮ್ಮ ತಾಯಿಯ ಕುಹಕತನದಿಂದ ಇದೆಲ್ಲ ನಡೆದು ಹೋಗಿದೆ. ಇದರಲ್ಲಿ ವ್ಯತ್ಯಾಸವಾಗುವುದು ಸಾಧ್ಯವಿಲ್ಲ'' ಎಂದು ಹೇಳಿದರು. ಆಗ ಸತ್ಯವತಿಯು ಪ್ರಣಯಕೋಪದಿಂದ ತನ್ನ ಪತಿಗೆ ''ಪತಿದೇವ! ನಿಮ್ಮ ಬ್ರಹ್ಮ ತೇಜಸ್ಸಿನಿಂದ ನೀವು ಪ್ರತಿಸೃಷ್ಟಿಯನ್ನೇ ನಿರ್ಮಿಸಬಲ್ಲಿರಿ. ಒಬ್ಬ ಯೋಗ್ಯ ಮಗನನ್ನು ಕರುಣಿಸುವುದು ನಿಮಗೆ ಏನು ಮಹಾ! ನನಗೆ ನಿಮ್ಮ ಯೋಗ್ಯತೆ ತಪಃಶಕ್ತಿಗಳು ಗೊತ್ತಿಲ್ಲವೇ? ಕೈಹಿಡಿದವಳ ಮೇಲೆ ದಯೆದೋರಿ ಶಮದಮಾದಿ ಸಂಪನ್ನನಾದ ಮಗನನ್ನೇ ಅನುಗ್ರಹಿಸಬೇಕು. ಇದು ಅಶಕ್ಯವೇ ಆದರೆ ಅಂಥ ಮೊಮ್ಮಗನನ್ನಾದರೂ ಕರುಣಿಸಿರಿ'' ಎಂದು ಬೇಡಿಕೊಂಡಳು. ಆಗ ಅವಳ ಸರಳ ಹೃದಯದ ನಿಷ್ಕಲ್ಮಷ ಭಾವವನ್ನು ಕಂಡು ಪ್ರೀತರಾದ ಋಚೀಕರು ''ಪ್ರಿಯೇ! ಕೊಡಬೇಕೆಂದರೆ ಮೊಮ್ಮಗನೇಕೆ! ನಿನ್ನ ನನ್ನ ಮಗನೇ ನೀನು ಬಯಸಿದಂತೆ ಶಾಂತೋದಾಂತನಾಗುವಂತೆ ವರಕೊಡುವೆ. ನಿನ್ನ ಇಚ್ಛೆ ಇದ್ದಂತೆಯೇ ಆಗಲಿ'' ಎಂದು ತಮ್ಮ ತಮ್ಮ ಪ್ರೀತಿಯ ಸತ್ಯವತಿಯನ್ನು ಸಂತೈಸಿ ಸಮಾಧಾನಪಡಿಸಿ ಅನುಗ್ರಹಿಸಿದರು.

ಆದರಿಂದ ಅವರಿಗೆ ನಿತಾಂತ ಪ್ರಶಾಂತರೂ ತಪೋಮೂರ್ತಿಗಳೂ ಆದ ಜಮದಗ್ನಿ ಎಂಬ ವೈಷ್ಣವಾಂಶ ಪ್ರದೀಪಿತರಾದ ಮುನಿಗಳು ಹುಟ್ಟಿದರು. ಮುಂದೆ ತನ್ನ ಸತ್ಯ ಹಾಗೂ ಪಾತಿವ್ರತ್ಯಗಳಿಂದ ಪ್ರಖ್ಯಾತಳಾದ ಋಚೀಕಸತಿ ಸತ್ಯವತಿಯು ಲೋಕಪಾವನಗೈಯ್ಯಲು ನದಿಯಾಗಿ ಕೌಶಿಕಿ ಎಂಬ ಹೆಸರಿನಿಂದ ಹರಿಯುತ್ತಲಿದ್ದಾಳೆ.

ಇಕ್ಷ್ವಾಕು ವಂಶದಲ್ಲಿ ರೇಣು ಎಂಬ ರಾಜನಿಗೆ ಕಾಮಲೀ ಅಥವಾ ರೇಣುಕಾ ಎಂಬ ಹೆಸರಿನ ಮಗಳಿದ್ದಳು. ಅವಳನ್ನು ಜಮದಗ್ನಿಗೆ ಧಾರೆಯೆರೆದು ಕೊಟ್ಟಿದ್ದರು. ಆ ಕಾಮಲಿಯಲ್ಲಿ ಜಮದಗ್ನಿಗೆ ಸರ್ವವಿದ್ಯಾಪಾರಂಗತನೂ ಕ್ಷತ್ರಿಯಾಂತಕನೂ ಭಗವದವತಾರನೂ ಜ್ಯೋತಿಃ ಸ್ವರೂಪನೂ ಆದ ರಾಮ(ಪರಶುರಾಮ)ನೆಂಬ ಪ್ರಚಂಡನಾದ ಪುತ್ರನು ಹುಟ್ಟಿದನು. ಋಚೀಕನಿಗೆ ಜಮದಗ್ನಿಯಲ್ಲದೆ ಶುನಃಶೇಪ, ಶುನಃಪುಚ್ಛ ಎಂಬ ಹೆಸರಿನ ಬೇರೆ ಇಬ್ಬರು ಗಂಡುಮಕ್ಕಳೂ ಇದ್ದರು. ಇತ್ತ ಕುಶಿಕ ಪುತ್ರನಾದ ಗಾಧಿಗೆ ಋಚೀಕರ ಬ್ರಾಹ್ಮೀತೇಜಸ್ಸಿನಿಂದ ಪ್ರಪೂರ್ಣವಾದ ಆ ಅರ್ಷಚರುವಿನ ಪ್ರಭಾವದಿಂದಾಗಿ ತಪೋವಿದ್ಯಾ ವಿರಕ್ತ್ಯಾದಿಗಳಿಂದ ಭಾಸುರನಾದ ಭೂಸುರ ಸ್ವಭಾವದ ಪುತ್ರನು ಜನಿಸಿದನು. ಅವನೇ ವಿಶ್ವಾಮಿತ್ರ. ಮುಂದೆ ಅವನು ಜಾತ್ಯಾ ಕ್ಷತ್ರಿಯನಾದರೂ ಅವಿಚಲವಾದ ತೀವ್ರ ತಪೋನುಷ್ಠಾನದ ಮಹಾಮಹಿಮೆಯಿಂದ ಬ್ರಹ್ಮರ್ಷಿ ಪದವಿಯನ್ನು ಹೊಂದಿ ಸಪ್ತರ್ಷಿಗಳ ಪಾವನಪಂಕ್ತಿಯಲ್ಲಿ ಪ್ರವೇಶವನ್ನೂ ಪಡೆದನು. ಧರ್ಮನಿಷ್ಠನಾದ ಈ ವಿಶ್ವಾಮಿತ್ರನಿಗೆ ವಿಶ್ವರಥನೆಂದೂ ಹೆಸರುಂಟು. ವಿಶ್ವಾಮಿತ್ರನು ಕ್ಷತ್ರಿಯನಾಗಿ ಹುಟ್ಟಿಯೂ ಬ್ರಹ್ಮರ್ಷಿಪದವಿಗೇರಿದ್ದು ಋಚೀಕರ ಮಂತ್ರಪೂತವಾದ ಚರುವಿನ ಪ್ರಭಾವವೇ ಸರಿ. ಆ ಬ್ರಹ್ಮರ್ಷಿ ವಿಶ್ವಾಮಿತ್ರರಿಗೆ ದೇವರಾತ ಮೊದಲಾದ ಅನೇಕ ಸುಪ್ರಸಿದ್ಧರಾದ ಪುತ್ರರಾದರು. ಆ ವಿಶ್ವಾಮಿತ್ರಸಂತಾನದ ಕೀರ್ತಿ ಮೂರು ಲೋಕದಲ್ಲಿಯೂ ವ್ಯಾಪಿಸಿದೆ. ವಿಶ್ವಾಮಿತ್ರರಿಗೆ ಶಾಲಾವತೀ ಎಂಬ ಭಾರ್ಯೆಯಿಂದ ಹಿರಣ್ಯಾಕ್ಷ, ದೇವಶ್ರವ, ಕತಿ, ಎಂದು ಮೂರು ಮಕ್ಕಳಾದರು ಇವರಲ್ಲಿ ಕತಿ ಎಂಬವನ ವಂಶಜರೇ ಮುಂದೆ ಕಾತ್ಯಾಯನರೆಂದು ಪ್ರಸಿದ್ಧರಾದರು.

ರೇಣು ಎಂಬ ಎರಡನೆಯ ಪತ್ನಿಯಿಂದ ಆ ಬ್ರಹ್ಮರ್ಷಿಗೆ ರೇಣುಮಾನ್, ಸಾಂಕೃತಿ, ಗಾಲವ, ಮುದ್ಗಲ, ಮಧುಚ್ಛಂದ, ಜಯ, ದೇವಲ ಎಂಬ ಪುತ್ರರು ಉದ್ಭೂತರಾದರು. ಅದರಂತೆ ದೃಷದ್ವತಿಯೆಂಬ ಭಾರ್ಯೆಯಲ್ಲಿ ಅಷ್ಟಕ, ಕಚ್ಛಪ, ಹಾರೀತ ಎಂಬ ಮೂವರು ಮಕ್ಕಳಾದರು. ಇವರೆಲ್ಲರೂ ಕೌಶಿಕ ವಂಶದಲ್ಲಿಯ ಅತ್ಯಂತ ಪ್ರಸಿದ್ಧಿಯನ್ನು ಪಡೆದ ಋಷಿಕುಮಾರರು. ಇದಲ್ಲದೆ ಇವರ ಮುಂದಿನವರ ವಂಶವೂ ಕೂಡ ಇತಿಹಾಸದಲ್ಲಿ ಸಾಕಷ್ಟು ಕೀರ್ತಿ ಖ್ಯಾತಿಗಳನ್ನು ಪಡೆದಿದೆ. ಪಾಣಿನ, ಬಭ್ರವ, ಧ್ಯಾನಜಪ್ಯ, ದೇವರಾತ, ಶಾಲಂಕಾಯನ, ಬಾಷ್ಕಲ, ಲೋಹಿತ, ಯಾಮದೂತ, ಕಾರೀಷವ, ಸೌಶ್ರುತ, ಕೌಶಿಕ ಮತ್ತು ಸೈಂಧವಾಯನ ಎಂಬ ಹನ್ನೆರಡು ಕುಲಗಳು ದೇವರಾತನ ವಂಶದಲ್ಲಿ ಪ್ರಸಿದ್ಧವಾದವು. ದೇವಲನ ವಂಶದವರು ಮುಂದೆ ದೇವಲರೆಂದೇ ಪ್ರಸಿದ್ಧರಾದರು. ರೇಣುವಿನ ಕುಲದವರಿಗೆ ಮುಂದೆ ರೇಣುವರೆಂದು ಖ್ಯಾತಿಯಾಯಿತು.

ಯಾಜ್ಞವಲ್ಕ್ಯ, ಅಘಮರ್ಷಣ, ಔದಂಬರ, ಅಭಿಷ್ಣಾತ, ತಾರಕಾನಯನ, ಚಂಚುಲ, ಎಂಬ ಆರುಜನ ಋಷಿಕುಲಪ್ರತಿಷ್ಠಾಪಕರು ಶಾಲಾವತಿಯ ಮಗನಾದ ಹಿರಣ್ಯಾಕ್ಷನ ಮಕ್ಕಳು. ಮತ್ತು ಸಾಂಕೃತ್ಯ, ಗಾಲವ, ಬಾದರಾಯಣಿಗಳೆಂಬುವವರೂ ವಿಶ್ವಾಮಿತ್ರನ ಸಂತತಿಯ ವಂಶವಿಸ್ತಾರಕ್ಕೆ ಕಾರಣರಾದರು.

ಇದಲ್ಲದೆ ಪ್ರವರ ಭೇದದಿಂದ ಬೇರೆ ಬೇರೆ ಋಷಿಕುಲಗಳ ಜೊತೆಗೆ ಸಂಬಂಧವನ್ನು ಬೆಳೆಯಿಸಬಹುದಾದ ಎಷ್ಟೋ ಕೌಶಿಕರು ಇರುವರು. ಈ ವಂಶದ ಇನ್ನೊಂದು ವೈಶಿಷ್ಟ್ಯವೆಂದರೆ ಇದಕ್ಕೆ ಒಂದು ಕಡೆಯಿಂದ ವಾಶಿಷ್ಠರ ಸಂಬಂಧವಿದ್ದರೆ ಇನ್ನೊಂದು ಕಡೆಯಿಂದ ಪೌರವ ವಂಶದ ಸಂಬಂಧವೂ ಇದೆ. ಹೀಗೆ ಬ್ರಹ್ಮಕ್ಷತ್ರಗೋತ್ರಗಳ ಸಂಬಂಧಗಳನ್ನು ಬೆಳೆಯಿಸಿ ವಿಶ್ವಬಾಂಧವ್ಯದ ಸ್ನೇಹಸೂತ್ರಗಳನ್ನು ಹುರಿಗೊಳಿಸಿದ್ದು ವಿಶ್ವಾಮಿತ್ರವಂಶದ ಬೃಹತ್ಕಾರ್ಯವೆನ್ನುವುದು ಪ್ರಸಿದ್ಧವೆ ಇದೆ. ವಿಶ್ವಾಮಿತ್ರರ ಮಕ್ಕಳಲ್ಲಿ ಶುನಃಶೇಪನೇ ಹಿರಿಯನೆಂದು ಹೇಳುವರು. ವಾಸ್ತವಿಕವಾಗಿ ಜಮದಗ್ನಿಯ ತಮ್ಮ ಈ ಶುನಃಶೇಪನು ಋಚೀಕರ ನಡುವಿನ ಮಗನು. ಭೃಗುಕುಲದಲ್ಲಿ ಜನಿಸಿದ ಇವನು ಮುಂದೆ ಕೌಶಿಕ ವಂಶಕ್ಕೆ ಬಂದನು. ಹರಿದಶ್ವನ ಯಜ್ಞದಲ್ಲಿ ಯಾಗೀಯ ಪಶುವಿನ ಸ್ಥಾನದಲ್ಲಿ ನಿಲ್ಲಿಸಲ್ಪಟ್ಟ ಶುನಃಶೇಪನು ದೇವತೆಗಳನ್ನು ವೈದಿಕಮಂತ್ರಗಳಿಂದ ಪ್ರಾರ್ಥಿಸಿದಾಗ ಅವರು ಬಂದು ಇವನನ್ನು ಬಿಡಿಸಿ ವಿಶ್ವಾಮಿತ್ರನಿಗೆ ಒಪ್ಪಿಸಿದರು. ದೇವತೆಗಳಿಂದ ಈ ಮುನಿಗೆ ಕೊಡಲ್ಪಟ್ಟವನಾದ ಅವನಿಗೆ ದೇವರಾತ ಎಂದೂ ಹೆಸರು ಬಂದಿತು. ವಿಶ್ವಾಮಿತ್ರನಿಗೆ ದೇವರಾತ ಮೊದಲಾದ ಏಳು ಜನ ಮಕ್ಕಳಲ್ಲದೇ ದ್ವಷದ್ವತಿಯಿಂದ ಅಷ್ಟಕ ಎಂಬ ಹೆಸರಿನ ಎಂಟನೆಯ ಮಗನೂ ಒಬ್ಬನಿದ್ದನು. ಈ ಅಷ್ಟಕನಿಗೆ ಲೌಹಿ ಎಂಬ ಸುತನಾದನು. ಇಂತು ಊರ್ವಶಿಯ ಮಗನಾದ ಅಮಾವಸುವಿನ ವಂಶವಿಖ್ಯಾತನಾದ ಜನ್ಹುವಿನ ಕುಲಕ್ರಮಾಗತಿಯನ್ನು ತಿಳಿಸಿ ಮುಂದೆ ಅದೇ ಪುರೂರವನ ಪ್ರೇಯಸಿಯಾದ ಸ್ವರ್ಗಸೀಮಂತಿನಿಯ ಜ್ಯೇಷ್ಠಪುತ್ರ ಆಯುವಿನ ವಂಶ ವಿಸ್ತಾರವು ನಿರೂಪಿಸಲ್ಪಡುತ್ತದೆ.

## "ವಿಜಯ ಬೆನ್ನುಹತ್ತಿ ಬರುವ ರಜಿಯು ಸ್ವರ್ಗರಾಜನೇ?"

ಪುರೂರವನಾದ ಆಯುವಿಗೆ ರಾಹುವಿನ ಮಗಳಾದ ಪ್ರಭಾ ಎಂಬ ಪತ್ನಿಯಿಂದ ನಹುಷ, ವೃದ್ಧಶರ್ಮ, ರಂಭ, ರಜಿ, ಅನೇನ ಎಂಬ ಪಂಚಪುತ್ರ ಪ್ರವರರು ಜನಿಸಿದರು. ಇವರಲ್ಲಿ ರಜಿಗೆ ರಾಜೇಯರೆಂದು ಹೆಸರಾದ ಐದು ನೂರು ಜನ ಮಕ್ಕಳಾದರು. ಹಿಂದೆ ಒಂದು ದಿನ ದೇವ-ದಾನವರಲ್ಲಿ ಘನಘೋರವಾದ ಸಂಗ್ರಾಮ ನಡೆದಾಗ ಜಯಲಕ್ಷ್ಮಿ

ಯಾವದೊಂದು ಕಡೆಗೂ ಸ್ಥಿರವಾಗಿ ನಿಲ್ಲದೇ ತೂಗುಯ್ಯಾಲೆಯಾಡು ತ್ತಲಿದ್ದಳು. ಅವರಿಬ್ಬರೂ ಬ್ರಹ್ಮದೇವರ ಹತ್ತಿರ ಹೋಗಿ ''ಪ್ರಭು, ಈ ಯುದ್ಧದಲ್ಲಿ ಗೆಲುವು ಯಾರಿಗೆ ಬರುವುದು? ದಯವಿಟ್ಟು ಹೇಳಬೇಕು'' ಎಂದು ಅಂಗಲಾಚಿ ಕೇಳಿದರು. ಆಗ ಆ ಹಂಸವಾಹನನು ನಸುನಗುತ್ತ ''ಭೂಲೋಕದ ಆಯುಪುತ್ರನಾದ ರಜಿಯು ಯಾರ ಪಕ್ಷವನ್ನು ಹಿಡಿದು ಧನುರ್ಬಾಣಪಾಣಿಯಾಗಿ ನಿಂತು ಯುದ್ಧವನ್ನು ಮಾಡುವನೋ ಅವರಿಗೇ ಜಯವು ಖಂಡಿತ. ಧರ್ಮಾತ್ಮನಾದ ರಜಿ ಎಲ್ಲಿರುವನೊ ಅಲ್ಲಿಗೆ ಗೆಲವು, ನಲಿವು, ಧರ್ಮ, ನೀತಿ ಇರುವವು. ಧರ್ಮನೀತಿಗಳಿದ್ದಲ್ಲಿ ಜಯಲಕ್ಷ್ಮಿಯ ಒಲವು ಇದ್ದೇ ಇರುವದು.'' ಎಂದು ಹೇಳಿದರು. ಅದನ್ನು ಕೇಳಿ ದೇವದೈತ್ಯರೆಲ್ಲ ಭೂಲೋಕದ ರಜಿರಾಜನ ಹತ್ತಿರಬಂದು ತಮ್ಮ ತಮ್ಮ ಪಕ್ಷಕ್ಕೆ ಸೇರಬೇಕೆಂದು ಬೇಡಿಕೊಳ್ಳತೊಡಗಿದರು.

ಅವನ ತಾಯಿಯಾದ ಪ್ರಭಾದೇವಿಯು ದಾನವೇಶ್ವರನಾದ ರಾಹುವಿನ ಮಗಳಾದದ್ದರಿಂದ ದೈತ್ಯದಾನವರೆಲ್ಲರೂ ಅವನಿಗೆ ಕಿಂಚಿತ್ ಸಂಬಂಧಿಕರಾಗಿದ್ದರು ಮತ್ತು ಅದರಂತೆ ಅವನ ತಂದೆಯಾದ ಆಯು ದೇವಕನ್ನೆಯಾದ ಊರ್ವಶೀ ಸಂಭವನಾದ್ದರಿಂದ ದೇವತಾಗಣವೂ ಅವನಿಗೆ ಹತ್ತಿರದ ಸಂಬಂಧವುಳ್ಳದ್ದೇ ಆಗಿತ್ತು. ಆದ್ದರಿಂದ ಇಬ್ಬರೂ ಬಂದು ಅವನನ್ನು ತಮ್ಮ ಪರವಾಗಿ ಶಸ್ತ್ರಗ್ರಹಣ ಮಾಡಲು ಒತ್ತಾಯಪಡಿಸಿದರು.

ಆಗ ಮಡದಿ ಮಕ್ಕಳ ಸೂಚನೆಯಂತೆ ರಜಿಯು ''ಯಾರು ನನ್ನನ್ನು ತಮ್ಮ ರಾಜಸಿಂಹಾಸನದಲ್ಲಿ ಕುಳ್ಳಿರಿಸಿ ಸಾರ್ವಭೌಮನೆಂದು ಮನ್ನಿಸುವರೋ ಅವರಿಗೆ ಸಹಾಯ ಮಾಡುತ್ತೇನೆಂದು'' ಹೇಳಿದನು. ಆಗ ದೈತ್ಯರು ''ನಮ್ಮ ರಾಜನು ಪ್ರಲ್ಹಾದನಿದ್ದಾನೆ. ನಾವು ನಿಮ್ಮನ್ನು ದೈತ್ಯಸಾಮ್ರಾಜ್ಯದ ಸಿಂಹಾಸನದಲ್ಲಿ ಕೂಡಿಸಿ ದೈತ್ಯವಂಶದ ಅಧಿರಾಜನೆಂದು ಕರೆಯಲು ಎಂದಿಗೂ ಸಿದ್ಧರಿಲ್ಲ. ಬೇಕಾದರೆ ನೀನು ದೇವತೆಗಳಿಗೇ ಸಹಾಯಮಾಡು'' ಎಂದು ಹೇಳಿ ಹೊರಟು ಹೋದರು.

ರಜಿಯು ದೇವತೆಗಳಿಗೆ ''ನಾನು ದಾನವರನ್ನು ಗೆದ್ದಬಳಿಕ ನನ್ನನ್ನು ನೀವು ಇಂದ್ರನೆಂದು ಒಪ್ಪಿಕೊಂಡು ಇಂದ್ರಸಿಂಹಾಸನದಲ್ಲಿ ಕೂಡಿಸುವುದಾದರೆ ನಾನು ಶಸ್ತ್ರಪಾಣಿಯಾಗಿ ನಿಮಗೆ ಸಹಾಯಮಾಡಲು ಬರುತ್ತೇನೆಂದು'' ಹೇಳಿದ.

ಆಗ ದೇವತೆಗಳು ಹಾಗೇ ಆಗಲಿ ಎಂದು ಸಂತೋಷದಿಂದ ನುಡಿದು ರಜಿಯನ್ನು ಯುದ್ಧಕ್ಕೆ ಕರೆದುಕೊಂಡು ಹೋದರು. ಆ ದೇವಾಸುರ ಸಂಗ್ರಾಮದಲ್ಲಿ ರಣರಂಗಧೀರನಾದ ರಜಿಯು ಅಮೋಘವಾದ ತನ್ನ ಶಸ್ತ್ರಾಸ್ತ್ರಗಳಿಂದ ವಜ್ರಾಯುಧಕ್ಕೂ ಮೀರಿ ನಿಂತಿರುವ ಯಾವತ್ತೂ ದೃಪ್ತದೈತ್ಯ ದಾನವರನ್ನು ಲೀಲಾಜಾಲವಾಗಿ ಸೋಲಿಸಿದನು. ಮತ್ತು ತನ್ನ ವೀರಶ್ರೀಯ ನಿಲ್ದಾಣವಾದ ನೀಳ್ದೋಳುಗಳಿಂದ ವೈರಿ ವಂದ್ಯವನ್ನೆ ತರಿದೊಗೆದು ದೇವತೆಗಳು ಕಳೆದುಕೊಂಡ ರಾಜಶ್ರೀಯನ್ನು ಮರಳಿ ತಂದುಕೊಟ್ಟನು.

ಆಗ ಕಳೆದುಹೋದ ತಮ್ಮ ರಾಜ್ಯಸಂಪತ್ತು ಸ್ಥಾನಮಾನಗಳನ್ನೆಲ್ಲ ರಜಿಯ ವೀರರಸದಿಂದ ಮತ್ತೆ ಪಡೆದು ಪರಿತುಷ್ಟರಾದ ದೇವತೆಗಳು ಇಂದ್ರನನ್ನು ಮುಂದೆ ಮಾಡಿಕೊಂಡು ರಜಿರಾಜನನ್ನು ಗೌರವಿಸಲು ಬಂದರು. ಆಗ ಇಂದ್ರನು ಮುಂದೆ ಬಂದು ಸ್ನೇಹದಿಂದ ''ರಜಿರಾಜ! ಇಂದಿನಿಂದ ನೀನೇ ಸ್ವರ್ಗಕ್ಕೆಲ್ಲಕ್ಕೂ ಇಂದ್ರ. ನನಗೂ ನೀನೇ ತಂದೆ ಇದ್ದಂತೆ. ಇಂದಿನಿಂದ ನಾನು ರಜಿಯಪುತ್ರನೆಂದು ಹೇಳಿಕೊಳ್ಳುತ್ತೇನೆ. ಇದೋ ಸ್ವರ್ಗಾಧಿಪತ್ಯ ಹಾಗೂ ಈ ಇಂದ್ರಪದವಿಗಳೆಲ್ಲ ನಿನ್ನ ಅಧೀನ''ಎಂದು ಧೂರ್ತ

ವಿನಯದಿಂದ ಸವಿಮಾತನಾಡಿದನು. ಆಗ ಪರಮ ಸಾತ್ವಿಕನೂ ಸೌಹಾರ್ದಸ್ನೇಹಶೀಲನೂ ಆದ ರಜಿಯು ದೇವರಾಜನ ಬಾಯಿಂದ ಬಂದ ಈ ದೊಡ್ಡ ಮಾತುಗಳನ್ನು ಕೇಳಿಯೆ ಸಂತುಷ್ಟನಾಗಿ ಅವನ ರಾಜ್ಯವನ್ನು ಅವನಿಗೇ ಬಿಟ್ಟುಬಿಟ್ಟನು. ನಿಸ್ಪೃಹಿಯಾದ ರಜಿ ಮರಳಿ ಭೂಲೋಕಕ್ಕೆ ಬಂದು ಕೆಲವು ದಿನವಿದ್ದ ಬಳಿಕ ಮರಣವನ್ನು ಹೊಂದಿ ದಿವ್ಯಗತಿಯನ್ನು ಪಡೆದು ಬ್ರಹ್ಮಲೋಕವನ್ನು ಸೇರಿದನು.

ಮುಂದೆ ರಜಿಯು ಐದುನೂರುಜನ ಮಕ್ಕಳೆಲ್ಲರೂ ತಂದೆಯಂತೆ ಮಹಾಪರಾಕ್ರಮ ಶಾಲಿಗಳಾದದ್ದರಿಂದ ಸ್ವರ್ಗಲೋಕಕ್ಕೆ ಹೋಗಿ ''ದೇವೇಂದ್ರ! ನೀನು ನಮ್ಮ ತಂದೆಯಾದ ರಜಿಯ ಮಗನೆಂದು ಒಪ್ಪಿಕೊಂಡಿದ್ದಿ. ಆದ್ದರಿಂದ ನಮ್ಮ ತಂದೆಯ ಅಧಿಕಾರದ ಈ ಸ್ವರ್ಗ ರಾಜ್ಯಕ್ಕೆ ನಿನ್ನಂತೆ ನಾವು ಐದುನೂರು ಜನರೂ ಬಾಧ್ಯಸ್ಥರೇ ಇರುವೆವು. ಆದ್ದರಿಂದ ಈ ತ್ರಿವಿಷ್ಟಪರಾಜ್ಯವನ್ನು ಐದನೂರ ಒಂದು ಭಾಗವಾಗಿ ಹಂಚಿ ಒಂದುಭಾಗ ನೀನು ತೆಗೆದು ಕೊಂಡು ಉಳಿದುದೆಲ್ಲವನ್ನೂ ನಮಗೆ ಬಿಟ್ಟುಬಿಡು'' ಎಂದು ಹೇಳಿ ಅಮರಾವತಿಯನ್ನೆಲ್ಲ ಆಕ್ರಮಿಸಿಬಿಟ್ಟರು.

ದುಸ್ಸಹವೀರ್ಯ ಪರಾಕ್ರಮಿಗಳಾದ ಅವರನ್ನು ಎದುರಿಸುವುದು ಆ ಸುರನಾಥನಿಗೆ ಅಶಕ್ಯವಾಯಿತು. ಅವರು ಹೇಳಿದ್ದನ್ನೆಲ್ಲ ಕೊಟ್ಟು ರಾಜ್ಯವನ್ನೇ ಕಳೆದುಕೊಂಡನು. ಯಜ್ಞದ ಹವಿಷ್ಯಾನ್ನವೂ ಕೂಡ ಬಹುಶಃ ಲುಪ್ತವಾಗಿ ದೇವರಾಜ ಬಹಳೇ ದುರ್ಬಲನಾಗಿ ಹೋದನು. ಕೊನೆಗೆ ದೇವಗುರು ಬೃಹಸ್ಪತ್ಯಾಚಾರ್ಯರ ಹತ್ತಿರ ಬಂದು ಕ್ಷೀಣಕಂಠದಿಂದ ದೀನನಾಗಿ ಕೇಳಿದನು. ''ಗುರುದೇವ! ಒಂದು ಬೋರೇಹಣ್ಣಿನಷ್ಟಾದರೂ ಪುರೋಡಾಶವನ್ನು ನಿರ್ಮಿಸಿಕೊಡಿರಿ. ಅದರಿಂದಲಾದರೂ ನನ್ನಲ್ಲಿಯ ದೈವೀತೇಜ ಆರದಂತೆ ಜೀವ ಹಿಡಿದು ಕೊಂಡು ಬದುಕಿರುವೆನು. ರಜಿಯ ಪುತ್ರರು ನನ್ನ ರಾಜ್ಯ ಹಾಗು ನನ್ನ ಆಹಾರವಾದ ಯಾಜ್ಯ ಆಜ್ಯಗಳನ್ನೂ ಅಪಹರಿಸಿಬಿಟ್ಟರುವರು. ಅದರಿಂದ ನನ್ನ ಶರೀರವೆಲ್ಲ ಕಳೆಗೆಟ್ಟು, ಕಾಂತಿಗುಂದಿ, ಶಕ್ತಿ ಅಡಗಿ, ಹೀನ ದೀನನಾಗಿದ್ದೇನೆ'' ಎಂದು ಹೇಳಿಕೊಂಡನು.

ಶಿಷ್ಯೋತ್ತಮನಾದ ಸುರಪತಿಯ ಈ ದೈನ್ಯಕಾರ್ಪಣ್ಯಗಳನ್ನು ಕಂಡು ಎದೆಕರಗಿದ ಬೃಹಸ್ಪತಿಗಳಿಗೆ ಕರಳು ಕಿವಿಚಿದಂತಾಯಿತು. ಆಗ ಅವರು ''ಇಂದ್ರ! ನೀನು ಈ ಸಮಾಚಾರ ವನ್ನು ನನಗೆ ಮೊದಲೇ ಏಕೆ ತಿಳಿಸಲಿಲ್ಲ? ಆಗಲೇ ಇದನ್ನು ನನಗೆ ತಿಳಿಸಿದ್ದರೆ ನಿನಗಾಗಿ ನಾನು ಈಗ ಮಾಡಬಾರದ್ದನ್ನು ಮಾಡುವ ಪ್ರಸಂಗ ಬರುತ್ತಿರಲಿಲ್ಲ. ಇರಲಿ ಈಗಾದರೂ ನೀನು ಚಿಂತಿಸುವ ಕಾರಣವಿಲ್ಲ. ನಿನಗಾಗಿ ನಾನು ಎಂಥ ಅಕರ್ತವ್ಯವನ್ನಾದರೂ ಮಾಡಲು ಸಿದ್ಧನಿದ್ದೇನೆ. ನೀನೇನೂ ಗಾಬರಿಯಾಗಬೇಡ. ನಾನು ಪ್ರಯತ್ನಮಾಡಿ ಬೇಗನೇ ನಿನ್ನ ರಾಜ್ಯ ಐಶ್ವರ್ಯ ಸ್ಥಾನಮಾನಗಳೆಲ್ಲ ನಿನಗೆ ಮರಳಿ ದೊರಕುವಂತೆ ಮಾಡುವೆ'' ಎಂದು ಹೇಳಿದರು.

ಅದರಂತೆ 'ಬುದ್ಧಿವಂತಾಂವರಿಷ್ಠ'ರಾದ ವಾಚಸ್ಪತಿಗಳು ಅಜ್ಞಜನಮೋಹಕವೂ, ಆಪಾತರಮಣೀಯವೂ, ಭೋಗಲಾಲಸೆಯುಳ್ಳ ಚಪಲಚಿತ್ತರಾದ ಮಂದಮತಿಗಳಿಗೆಲ್ಲ ಒಳ್ಳೆ ಸಮಂಜಸ ಮತ್ತು ಯುಕ್ತಿಯುಕ್ತವೂ ಎಂದು ತೋರುವ ಚಾರ್ವಾಕದರ್ಶನವನ್ನು ನಿರ್ಮಿಸಿದರು. ಅದರಲ್ಲಿ ದೇವರಿಲ್ಲ, ಧರ್ಮವಿಲ್ಲ, ಪ್ರತ್ಯಕ್ಷ ಮಾತ್ರ ಪ್ರಮಾಣ ಇಂದ್ರಿಯಗಳ ಸಂತರ್ಪಣವೇ ಜೀವಿತದ ಸಾಫಲ್ಯ. ಧರ್ಮಕರ್ಮಗಳಿಂದ ವೃಥಾ ದೇಹದಂಡನೆ ಅನಾವಶ್ಯಕ, ಮುಂತಾಗಿ ಪ್ರತಿಪಾದಿಸಿದ್ದರಿಂದ ವಿಷಯ ಲಂಪಟರಾದ ರಜಿಪುತ್ರರೆಲ್ಲರಿಗೂ ಆ ನಾಸ್ತಿಕತರ್ಕ ಮನಸ್ಸಿಗೆ ಹಿಡಿಸಿತು. ದೇವಧರ್ಮಗಳಲ್ಲಿ ಶ್ರದ್ಧಾಳುಗಳಾದ ಸಜ್ಜನರಿಗೆ ಮಾತ್ರ ಅದು ಅಸಬ್ಧಾಸ್ತವೆಂದು ಅನುಪಾದೇಯವಾದರೂ

ಚಪಲೇಂದ್ರಿಯಗಳಿಂದುಂಟಾಗುವ ಚಂಚಲ ಸುಖಶೀಕರಗಳಿಗೆ ಮನಸೋತ ಎಲ್ಲ ಕಾಲದ ದುರುಳ ಮರುಳರಿಗೆ ಈ ಬೃಹಸ್ಪತಿಶಾಸ್ತ್ರದ ನ್ಯಾಯವಿಸಂಗತವಾದ ವಾಗ್ವಿಲಾಸ ಹಾಗೂ ಉಕ್ತಿಯುಕ್ತಿಗಳು ಅತ್ಯಂತ ಸ್ಪೃಹಣೀಯವೆನಿಸುವಲ್ಲಿ ಸಂದೇಹವಿಲ್ಲ.

ಅಂತೂ ಈ ಚಾರ್ವಾಕ ದರ್ಶನವು ಅನುಕೂಲಸಿಂಧು ಎನಿಸಿ ಮದಾಂಧರಾದ ರಜಿಪುತ್ರರಿಗೆ ಒಂದು ಆನಂದಸಿಂಧುವೇ ದೊರೆತಂತಾಯಿತು. ಆದರಿಂದ ಅವರಿಗೆ ಧರ್ಮನೀತಿ ಹಾಗೂ ವೇದಶಾಸ್ತ್ರಗಳ ಕಟ್ಟುಕಟ್ಟಳೆಗಳೆಲ್ಲ ಸಡಿಲಾಗಿ ಇಂದ್ರಪುರಿಯ ಸ್ವಚ್ಛಂದಭೋಗಕ್ಕೆ ಹಾಗೂ ಸ್ವೈರಾಚಾರಕ್ಕೆ ಒಳ್ಳೇ ಅನುಕೂಲವಾಯಿತು. ರಾಗರಸೋನ್ಮತ್ತರಾಗಿ ಕೇವಲ ಶೃಂಗಾರ ಕೇಳೀ ಲೋಲುಪರಾದ ಅವರು ದೇವಧರ್ಮದ್ರೋಹಿಗಳಾಗಿ ಬ್ರಹ್ಮದ್ವೇಷವನ್ನೂ ವೇದ ವಿರೋಧವನ್ನೂ ಮಾಡತೊಡಗಿದರು. ಇದರಿಂದ ಕೆಲವೇ ದಿನಗಳಲ್ಲಿ ಅವರ ಶಕ್ತಿಪರಾಕ್ರಮಗಳೆಲ್ಲ ಕ್ಷೀಣವಾಗಿ ಪುಣ್ಯಹ್ರಾಸವಾಗಿ ಅವರು ನಿಸ್ತೇಜರಾದರು. ಬೃಹಸ್ಪತಿಯ ಬುದ್ಧಿಪ್ರಧಾನವಾದ ಶಾಸ್ತ್ರದಿಂದ ಅವರ ಬುದ್ಧಿಭೇದವಾಗಿ ಮತಿಭ್ರಂಶವಾದ ಬಳಿಕ ತೇಜೋಹೀನರೂ ತಪಃಕ್ಷೀಣರೂ ಆದ ಆ ಮೂಢಮಾನವರನ್ನು ಸುರರಾಜನು ಅನಾಯಾಸದಿಂದ ಸೋಲಿಸಿ ಸಂಹರಿಸಿದನು. ಶಿಷ್ಯನಿಗಾಗಿ ಅವನ ಗುರುಗಳು ಹಾಕಿದ ಮಂತ್ರ ಫಲಿಸಿತು. ಆದರಿಂದ ಇಂದ್ರ ಮತ್ತೆ ತನ್ನ ಸ್ಥಾನದ ಅಧಿಪತ್ಯ ಅಧಿಕಾರ ಹಾಗೂ ಐಶ್ವರ್ಯಗಳನ್ನು ಹೊಂದುವಂತಾಯಿತು.

ಆಯುವಿನ ಮಕ್ಕಳಲ್ಲಿ ರಂಭನಿಗಂತೂ ಮಕ್ಕಳೇ ಆಗಲಿಲ್ಲ. ಅನೇನಸನೆಂಬ ಆಯುಃಕುಮಾರನಿಗೆ ಪ್ರತಿಕ್ಷತ್ರ, ಪ್ರತಿಕ್ಷತ್ರನಿಗೆ ಸೃಂಜಯ, ಅವನಿಂದ ಜಯ, ಜಯನಿಗೆ ವಿಜಯ, ವಿಜಯನಿಂದ ಕೃತಿ, ಕೃತಿಗೆ ಹರ್ಯಶ್ವ, ಹರ್ಯಶ್ವನಿಗೆ ಸಹದೇವ, ಸಹದೇವನಂದ ನದೀನ, ಅವನಿಂದ ಜಯತ್ಸೇನ, ಜಯತ್ಸನನಿಗೆ ಸಂಕೃತಿ, ಸಂಕೃತಿಗೆ ನಿರಂತರ ಧರ್ಮಾಚರಣದಲ್ಲಿತತ್ಪರನಾದ ಕ್ಷತ್ರಧರ್ಮ ಎಂಬ ಮಗನೂ ಆದರು.

ವೃದ್ಧಶರ್ಮ ಎಂಬ ಆಯುವಿನ ತನುಜನಿಗೆ ಕ್ಷತ್ರವೃದ್ಧ ಎಂದು ಕರೆಯುತ್ತಲಿದ್ದರು. ಈ ಕ್ಷತ್ರನಿಗೆ ಸುನಹೋತ್ರನೆಂಬ ಮಗನಿದ್ದು ಅವನಿಗೆ ಕಾಶ, ಶಲ, ಗೃತ್ಸಮದ ಎಂಬ ಮೂವರು ಮಕ್ಕಳಾದರು. ಗೃತ್ಸಮದನಿಗೆ ಶುನಕನೆಂಬ ಮಗನು ಹುಟ್ಟಿದನು. ಈ ಶುನಕನಿಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಹಾಗೂ ಶೂದ್ರ ಎಂಬ ನಾಲ್ಕು ಜಾತಿಯ ಮಕ್ಕಳಿದ್ದು ಅವರೆಲ್ಲರಿಗೂ ಶೌನಕರೆಂದೇ ಕರೆಯುವರು. ಈ ಗೃತ್ಸಮದನ ಅಣ್ಣನಾದ ಶಲನಿಗೆ ಆರ್ಷ್ಟಿಷೇಣ ಆರ್ಷ್ಟಿಷೇಣನಿಗೆ ಕಾಶಕ, ಕಾಶಕನಿಂದ ಕಾಶಯ ಮತ್ತು ದೀರ್ಘತಪ, ದೀರ್ಘತಪನಿಂದ ಧನ್ವ ಎಂಬ ಮಕ್ಕಳು ಆದರು. ಈ ಧನ್ವನೇ ಮುಂದೆ ಧನ್ವಂತರಿ ಎಂದು ಪ್ರಸಿದ್ಧನಾದ.

ಪೂರ್ವಕಾಲದಲ್ಲಿ ದೇವದಾನವರು ಕೂಡಿ ಆ ಹಾಲಿನ ಹೆಗ್ಗಡಲನ್ನು ಭರದಿಂದ ಕಡೆಯುತ್ತಲಿರುವಾಗ ಪರಿತಃ ಪಸರಿಸುವ ಪ್ರಭಾಪುಂಜದ ಮಧ್ಯದಲ್ಲಿ ಒಂದು ಜ್ಯೋತಿರ್ಮೂರ್ತಿಯು ಉದಿಸಿ ಬಂದಿತು. ವಿಷ್ಣುವಿನ ನಾಮವನ್ನು ಜಪಿಸುತ್ತ ನಿಂತುಕೊಂಡ ಅವನನ್ನು ಕಂಡು ಭಗವಾನ್ ನಾರಾಯಣನು "ನೀನು ನೀರಿನಿಂದ ಹುಟ್ಟಿದುದರಿಂದ 'ಅಬ್ಜ' ನಿರುವಿ" (ಅಪ್-ನೀರಿನಿಂದ ಜ-ಹುಟ್ಟಿದವ) ಎಂದು ಹೇಳಿದನು. ಆಗ ಆ ಅಬ್ಜನು ಭಗವಂತನನ್ನೇ ಮೊರೆ ಹೋಗಿ "ಸ್ವಾಮಿ! ನಾನು ನಿನ್ನ ಮಗ. ಆದ್ದರಿಂದ ನೀನು ನನಗೆ ಯಜ್ಞದಲ್ಲಿ ಹವಿರ್ಭಾಗವನ್ನೂ ದೇವತಾಪಂಕ್ತಿಯಲ್ಲಿ ಸ್ಥಾನವನ್ನೂ ಕೊಡಿಸಿ ಕೃಪೆಮಾಡು" ಎಂದು ಬೇಡಿಕೊಂಡನು.

(ಭಾಗವತ ಬ್ರಹ್ಮಪುರಾಣ ವಾಯು ಪುರಾಣಗಳಲ್ಲಿ ಧನ್ವಂತರಿಯು ವಿಷ್ಣುವಿನ ಅವತಾರ ಎಂದು ಹೇಳಿದ್ದಾರೆ. ಆಚಾರ್ಯರೂ ನಿರ್ಣಯದಲ್ಲಿ ಹಾಗೇ ಹೇಳಿದ್ದಾರೆ.)

ಆಗ ಭಗವಂತನಾದ ವಿಷ್ಣುವು ಅವನಿಗೆ "ಪುತ್ರ! ದೇವಾಧಿದೇವತೆಗಳಲ್ಲಿ ಬಹುಪೂರ್ವಕಾಲದ ಹಿಂದೆಯೇ ಯಜ್ಞದ ವಿಭಾಗಗಳನ್ನೆಲ್ಲ ಹಂಚಿ ಕೊಟ್ಟು ಬಿಟ್ಟದ್ದರಿಂದ ಈಗ ಅದರಂತೆಯೇ ಮುನಿ ಮನುಜರೆಲ್ಲ ಅವರವರಿಗೆ ಕ್ಲಪ್ತವಾದ ಆಹುತಿಯನ್ನು ಈಯುತ್ತಲಿದ್ದಾರೆ. ಇಂದು ಹುಟ್ಟಿದ ನಿನಗೆ ಈ ಪುರಾತನ ದೇವಶ್ರೇಣಿಗೆ ಸಲ್ಲತಕ್ಕ ಮುಖ್ಯ ಯಜ್ಞಗಳ ಹವಿರ್ಭಾಗ ಸಿಗುವದು ಸಾಧ್ಯವಿಲ್ಲ. ಕ್ಷುಲ್ಲಕ ಯಾಗಗಳ ಹವಿಸ್ಸುಗಳನ್ನು ನಿನಗೆ ಕೊಡಿಸಬಹುದಾದರೂ ಅದು ನಿನ್ನ ಗೌರವ ಘನತೆಗಳಿಗೆ ತಕ್ಕುದಲ್ಲ. ಕಾರಣ ನೀನು ದ್ವಾಪರಯುಗದಲ್ಲಿ ಮತ್ತೊಮ್ಮೆ ಜನಿಸಿ ಗರ್ಭದಲ್ಲಿರುವಾಗಲೇ ಅಣಿಮಾದಿ ಅಷ್ಟಸಿದ್ಧಿಗಳನ್ನು ಪಡೆಯುವಿ. ಮತ್ತು ಆಗ ನೀನು ಸಾಕ್ಷಾದ್ ದೇವಾಂಶ ಸಂಭೂತನಾಗಿಯೇ ಹುಟ್ಟುವದರಿಂದ ಎಲ್ಲ ಬ್ರಾಹ್ಮಣರೂ ನಿನ್ನನ್ನು ಕುರಿತೇ ಯಜ್ಞಯಾಗ ಜಪತಪಗಳನ್ನು ಮಾಡುವರು" ಎಂದು ಹೇಳಿ ಸಂತೈಸಿದನು. ಮುಂದೆ ದ್ವಾಪರಯುಗದಲ್ಲಿ ಕಾಶಿರಾಜನಾದ ದೀರ್ಘತಪನು ಧನ್ವಂತರಿ ದೇವನನ್ನು ಕುರಿತು ದೀರ್ಘತಪಸ್ಸನ್ನು ಮಾಡಿದನು. ತಪಸ್ತುಷ್ಟನಾದ ಧನ್ವಂತರಿ ಬಂದು "ಬೇಕಾದ ವರವನ್ನು ಕೇಳಿಕೋ" ಎಂದು ಆದೇಶವಿತ್ತಾಗ ದೀರ್ಘತಪನು "ನೀನೇ ನನ್ನ ಮಗನಾಗಿ ಹುಟ್ಟಿ ಬರಬೇಕೆಂದು" ಬೇಡಿಕೊಂಡನು. ತಥಾಸ್ತು ಎಂದು ಹೇಳಿ ಧನ್ವಂತರಿಯು ಅವನ ಮಗನಾಗಿ ಹುಟ್ಟಿ ಬಂದು ಭರದ್ವಾಜನಿಂದ ಆಯುರ್ವೇದ ವಿದ್ಯೆಯನ್ನು ಸಂಪಾದಿಸಿ ಅದನ್ನು *ಎಂಟು ವಿಧವಾಗಿ ವಿಂಗಡಿಸಿ ಶಿಷ್ಯರಿಗೆ ಉಪದೇಶಿಸಿದನು. ಈ ಧನ್ವಂತರಿಯ ಮಗ ಕೇತುಮಾನ್, ಕೇತುವಂತನ ಮಗ ಭೀಮರಥ ಭೀಮರಥನ ಮಗ ದಿವೋದಾಸ ಎಂದು ಪ್ರಸಿದ್ಧರಾದರು.

## ಕಾಶಿಯ ಕಥೆ

ಮಹಾ ಪರಾಕ್ರಮಿಯಾದ ದಿವೋದಾಸನು ಭದ್ರಶ್ರೇಣ್ಯನೆಂಬ ಕಾಶೀರಾಜನ ನೂರು ಜನ ಮಕ್ಕಳನ್ನೆಲ್ಲ ಕೊಂದು ಆ ವಾರಾಣಸಿಯನ್ನು ವಶಪಡಿಸಿಗೊಂಡನು. ಅತ್ಯಂತ ವಿಶಾಲವೂ ಗಂಗಾತರಂಗಪವಿತ್ರವೂ ಆದ ಆ ಸುಂದರವಾದ ಕಾಶೀಪಟ್ಟಣದಲ್ಲಿ ದಿವೋದಾಸನು ಸುಖವಾಗಿ ರಾಜ್ಯವಾಳುತ್ತಲಿದ್ದನು.

ಅದೇ ಸಮಯದಲ್ಲಿ ಪಾರ್ವತಿಯನ್ನು ಮದುವೆಯಾಗಿ ಮಹಾದೇವರು ಅವಳ ಸಮಾಧಾನಕ್ಕಾಗಿ ಮಾವನ ಮನೆಯಾದ ಹಿಮಾಲಯದ ಗೌರೀಶಂಕರ ಶಿಖರದಲ್ಲಿಯೇ ಇದ್ದರು. ಪರಮೇಶ್ವರನ ಅಪ್ಪಣೆಯಂತೆ ಅವನ ಪಾರ್ಷದರೂ ಭಕ್ತರಾದ ಋಷಿಮುನಿಗಳೂ

---

* ಕಾಯ-ಬಾಲ ಗ್ರಹೋರ್ಧ್ವಾಂಗ-ಶಲ್ಯ-ದಂಷ್ಟ್ರಾ-ಜರಾ-ವೃಷಾನ್
ಅಷ್ಟಾವಂಗಾನಿ ತಸ್ಯಾಹುಶ್ಚಿಕಿತ್ಸಾ ಯೇಷು ಸಂಶ್ರಿತಾ ॥

ಕಾಯ=ಶರೀರಚಿಕಿಚ್ಛೆ, ಬಾಲ=ಹುಡುಗರ ರೋಗ ಚಿಕಿತ್ಸೆ, ಗ್ರಹ=ಭೂತ ಪ್ರೇತಗಾಳಿ ಬಾಧೆಗಳ ಚಿಕಿಚ್ಛೆ, ಊರ್ಧ್ವಾಂಗ=ಕಣ್ಣು, ಕಿವಿ ಮೂಗು ಮೊದಲಾದ ಮೇಲಿನ ಭಾಗಗಳ ಚಿಕಿತ್ಸೆ, ಶಲ್ಯ= ಶಸ್ತ್ರಕ್ರಿಯಾ ಅಪಘಾತಾದಿಗಳ ಚಿಕಿತ್ಸೆ, ದಂಷ್ಟ್ರಾ=ವಿಷಚಿಕಿಚ್ಛೆ, ಜರಾ=ಮುಪ್ಪನ್ನು ದೂರಮಾಡುವ ಕಾಯಕಲ್ಪ ಚಿಕಿಚ್ಛೆ, ವೃಷ=ವಾಜೀಕರಣಾ, ಜಾದಿ ತಂತ್ರ ಹೀಗೆ ಆಯುರ್ವೇದವನ್ನು ಎಂಟುಭಾಗ ಮಾಡಿದ್ದಾರೆ.

ಬಂದು ಆ ಮಹಾದೇವಿಯನ್ನು ಸ್ತುತಿಸಿ ಸಂತೋಷಪಡಿಸುತ್ತಲಿದ್ದರು. ಶಿವಭಕ್ತರ ಭಕ್ತಿಗೀತಗಳಿಂದ ಪಾರ್ವತಿಗೆ ಸಂತೋಷವಾದರೂ ಅವಳ ತಾಯಿಯಾದ ಮೇನೆಗೆ ಮಾತ್ರ ಆ ಶಿವಗಣದ ಲೀಲೆಗಳನ್ನು ಕಂಡು ಅಸಹ್ಯವಾಗುತ್ತಲಿತ್ತು.

ಶಂಕರ ಹಾಗೂ ಅವನ ಆ ರುದ್ರಗಣದ ವೇಷಭೂಷಣ ಭಾಷಣಗಳನ್ನೆಲ್ಲ ಕಟಾಕ್ಷದಿಂದ ನೋಡಿ ಅವಳು ಮಗಳಿಗೆ ''ಪಾರ್ವತಿ! ಇದೇನು ನಿನ್ನ ಗಂಡನ ವೇಷ! ಏನು ಅವನ ಈ ಅನಾಚಾರಿ ಪರಿವಾರ! ಅಷ್ಟದರಿದ್ರನಾದ ಇವನಿಗೆ ಶೀಲಸದಾಚಾರಗಳಂತೂ ಗೊತ್ತೇ ಇಲ್ಲ. ಇಶ್ಯ್! ಸಾಕಾಗಿದೆ ಇವನ ಈ ಡಂಭಾಚಾರ! ಹೆಸರು ನೋಡಿದರೆ ಮಹಾ ಈಶ್ವರ-ದೊಡ್ಡ ಸಾಹುಕಾರ. ಆದರೆ ತನಗೋ ಇರಲಿಕ್ಕೂ ಜಾಗವಿಲ್ಲದ ಜನ್ಮದರಿದ್ರ'' ಎಂದು ಹಂಗಿಸುತ್ತಲಿದ್ದಳು. ತನ್ನ ಪಂಚಪ್ರಾಣನಾದ ಪತಿಪರಮೇಶ್ವರನ ಈ ನಿಂದೆಯನ್ನು ಕೇಳಿ ಸತೀ ಹೈಮವತಿಗೆ ಸ್ವಾಭಾವಿಕವಾಗಿ ಕಡುಕೋಪ ಬಂದಿತು. ಆದರೆ ಹಿಂದಿನ ಜನ್ಮದಲ್ಲಿ ನನ್ನ ಪತಿಯನ್ನು ನಿಂದಿಸಿದ ತಂದೆ ದಕ್ಷನು ಹತನಾದನು. ಈ ಜನ್ಮದಲ್ಲಿ ನಾನು ಮತ್ತೆ ಮೊದಲಿನಂತೆ ಸಿಟ್ಟಾದರೆ ಈ ತಾಯಿಗೂ ಅದೇ ಹಾಡಾದೀತು ಎಂದು ಉಕ್ಕಿಬರುತ್ತಲಿರುವ ಕೋಪವನ್ನು ಬಿಗಿ ಹಿಡಿದು ಮೇಲೆ ಮೇಲೆ ಮಂದಹಾಸ ಮಾಡಿದಂತೆ ಮಾಡಿ ತನ್ನ ನೆಚ್ಚಿನ ನಲ್ಲನಾದ ಚಂದ್ರಶೇಖರನ ಹತ್ತಿರ ಬಂದಳು. ಪರಮೇಶ್ವರನ ಎದುರು ವಿವರ್ಣ ಮುಖಿಯಾಗಿ ''ದೇವ! ನನಗಿನ್ನು ಈ ತವರು ಮನೆಯ ವಾಸ ಸಾಕು. ಆದ್ದರಿಂದ ನಿಮ್ಮ ಮನೆಗೆ ನನ್ನನ್ನು ಕರೆದುಕೊಂಡು ಹೋಗಿರಿ'' ಎಂದು ಹೇಳಿದಳು.

ಆಗ ಮಹಾದೇವರು ಪ್ರೇಯಸಿಯಾದ ಪಾರ್ವತೀದೇವಿಯ ಪ್ರಾರ್ಥನೆಯಂತೆ ಭೂಲೋಕದಲ್ಲಿ ತನ್ನ ವಾಸಕ್ಕೆ ಯೋಗ್ಯಸ್ಥಳವಾಗಬಹುದೆಂದು ಯೋಚಿಸಿದನು. ಆಗ ಅವನಿಗೆ ಸಿದ್ಧಿ ಕ್ಷೇತ್ರವಾದ ವಾರಾಣಸಿಯೇ ಸರ್ವಾತ್ಮನಾ ತನಗೆ ಉಚಿತವಾದ ಆವಾಸ ಎಂದು ತೋರಿತು. ಆದರೆ ಅಲ್ಲಿ ದಿವೋದಾಸನು ಬಂದು ನೆಲಸಿರುವನೆಂದು ತಿಳಿದು ತನ್ನ ಪಕ್ಕದಲ್ಲಿ ನಿಂತ ಗಣೇಶ್ವರನಾದ ನಿಕುಂಭನನ್ನು ಕರೆದು 'ನಿಕುಂಭ! ಕಾಶೀಪಟ್ಟಣವನ್ನು ನಮಗೆ ಇರಲಿಕ್ಕೆ ತೆರವು ಮಾಡಿಸು. ಈಗ ಅಲ್ಲಿ ವಾಸಮಾಡಿರುವ ದಿವೋದಾಸ ಅಸಾಧಾರಣ ಪರಾಕ್ರಮಿ. ಆದ್ದರಿಂದ ಮೃದು ಮಾರ್ಗದಿಂದಲೇ ಉಪಾಯವಾಗಿ ಆ ಕಾರ್ಯವನ್ನು ಸಾಧಿಸಬೇಕು'' ಎಂದು ಹೇಳಿದನು. ಆಗ ಅತಿ ಚತುರನಾದ ನಿಕುಂಭನು ಕಾಶಿರಾಜನಾದ ದಿವೋದಾಸನನ್ನು ಆ ಊರಿನಿಂದ ಹೊರಗೆ ಹಾಕಲು ಒಂದು ಬಹು ಚಮತ್ಕಾರವಾದ ಹಂಚಿಕೆಯನ್ನೆ ಹುಡುಕಿದನು.

ಅಲ್ಲಿ ಕಾಶೀನಗರದಲ್ಲಿ ಕಂಡುಕ ಎಂಬ ಕ್ಷೌರಿಕನಿದ್ದನು. ಗಣೇಶ್ವರನು ಅವನ ಕನಸಿನಲ್ಲಿ ಬಂದು ''ನನಗೆ ಈ ಊರಲ್ಲಿ ಒಂದು ಗುಡಿ ಕಟ್ಟಿಸಿ ಅಲ್ಲಿ ನನ್ನ ಮೂರ್ತಿಯನ್ನು ಸ್ಥಾಪಿಸಿ ನಮ್ಮ ಪೂಜೆ ನಡೆಯುವಂತೆ ಮಾಡಿಸು. ಅಂದರೆ ನಾನು ನಿನಗೆ ಬೇಕಾದ ವರವನ್ನು ಕೊಡುತ್ತೇನೆ.'' ಎಂದು ಹೇಳಿದನು. ಆಗ ರಾಜಕುಲದ ಕ್ಷೌರಿಕನಾದ ಆ ಕಂಡುಕನು ಮಹಾರಾಜ ದಿವೋದಾಸನ ಮುಂದೆ ತನ್ನ ಸ್ವಪ್ನದ ಸಮಾಚಾರವನ್ನೆಲ್ಲ ತಿಳಿಸಿದನು. ಆಗ ರಾಜನು ವಿಶಾಲವಾದ ದೇವ ಮಂದಿರವನ್ನು ನಿರ್ಮಿಸಿ ಅಲ್ಲಿ ಗಣೇಶ್ವರನನ್ನು ಪ್ರತಿಷ್ಠಾಪಿಸಿದನು. ಮತ್ತು ಪ್ರತಿ ನಿತ್ಯವೂ ಧೂಪದೀಪ ನೈವೇದ್ಯ ಮಂಗಳಾರತಿ ವಾದ್ಯ ವೈಭವಗಳು ಒಳ್ಳೇ ಅದ್ಧೂರಿಯಿಂದ ನಡೆಯುವಂತೆ ಮಾಡಿದನು.

ಇದರಿಂದ ದೂರ ದೂರ ದೇಶದಿಂದ ಜನರು ಬರಹತ್ತಿದರು. ಸೇವಾ ಸೂತ್ರಗಳೂ ನಡೆಯತೊಡಗಿದವು. ಗಣೇಶ್ವರನಿಗೆ ಹರಕೆ ಹೊತ್ತವರ ಮನೋರಥಗಳೆಲ್ಲ ತಪ್ಪದೇ

ಪೂರ್ಣವಾಗುತ್ತಲಿದ್ದವು. ಇದರಿಂದ ಬಹಳ ಜಾಗೃತ ದೇವರು ಎಂದು ಭೂಲೋಕದಲ್ಲೆಲ್ಲ ಹಗಲಿರುಳೂ ಸೇವೆ ಭಜನೆಗಳನ್ನು ಮಾಡತೊಡಗಿದರು. ಅವರ ಸೇವಾಭಾವಕ್ಕೆ ಮೆಚ್ಚಿ ಆ ಗಣಪತಿಯಾದರೂ ಸಂತಾನ, ಸಂಪತ್ತು, ರಾಜ್ಯ, ಬಂಗಾರ, ಅಧಿಕಾರ, ಆಯುಷ್ಯ, ಆರೋಗ್ಯ, ಮೊದಲಾದ ಬಯಸಿದ ಫಲಗಳನ್ನೆಲ್ಲ ಕಾಮಧೇನುವಿನಂತೆ ಈಯುತ್ತಲಿದ್ದ.

ಹೀಗೆ ಸಾವಿರಾರು ನಾಗರಿಕರ ಅಪೇಕ್ಷೆಗಳನ್ನೆಲ್ಲ ಗಣೇಶನು ತಪ್ಪದೇ ಪೂರೈಸಿದ್ದನ್ನು ಕಂಡು ದಿವೋದಾಸ ಮಹಾರಾಜನು ತನ್ನ ಪಟ್ಟದರಸಿಯಾದ ಸುಯಶಾ ರಾಣಿಗೆ ಸಂತತಿಗಾಗಿ ಗಣೇಶನ ಸೇವೆ ಮಾಡಲು ಹೇಳಿದನು. ಆಗ ಮಹಾರಾಣಿಯು ಪ್ರತಿದಿನವೂ ಬಂದು ಭಕ್ತಿಯಿಂದ ಗಣೇಶನನ್ನು ಪರಿಪರಿಯಿಂದ ಆರಾಧಿಸಿ ಸಂತತಿಯನ್ನು ಕರುಣಿಸೆಂದು ದೀನವಾಗಿ ಪ್ರಾರ್ಥಿಸುತ್ತಲಿದ್ದಳು. ಸುಕುಮಾರವಾದ ತನ್ನ ಶರೀರದ ಪೇಲವ ಪ್ರಕೃತಿಯನ್ನು ಲಕ್ಷಿಸದೇ ದೇಹದಂಡನೆಯನ್ನು ಮಾಡುತ್ತ ಸಂತತಿಯ ಅಪೇಕ್ಷೆಯಿಂದ ಸರ್ವಮನೋರಥಪೂರಕನಾದ ಆ ಗಣನಾಥನನ್ನು ಹಗಲಿರುಳು ಸೇವಿಸಿದಳು. ಆದರೂ ಅವಳಿಗೆ ಫಲವಾಗಲೇ ಇಲ್ಲ. ಆದರೂ ರಾಣಿಯು ನಿರಾಶಳಾಗದೇ ಪುನಃ ಪುನಃ ಎಡೆಬಿಡದೇ ಕಠೋರ ವ್ರತೋಪವಾಸಗಳಿಂದ ಸೇವೆಗಾಗಿ ತನುವನ್ನೇ ತೇದಳು. ಎಷ್ಟೋ ದಿನಗಳು ಹೀಗೆ ಕಳೆದರೂ ಊರಜನರಿಗೆಲ್ಲ ಬೇಡಿದ ಫಲವನ್ನು ಕೊಡುತ್ತಲೇ ಇದ್ದರೂ ಆ ಗಣಪತಿಯು ರಾಣಿ ಒಬ್ಬಳಿಗೆ ಮಾತ್ರ ಫಲವನ್ನು ಕೊಡಲಿಲ್ಲ.

ಇದನ್ನು ನೋಡಿ ಕಾಶೀರಾಜನಾದ ದಿವೋದಾಸನಿಗೆ ಬಹಳ ಸಿಟ್ಟು ಬಂದು ಬಿಟ್ಟಿತು. ಕ್ರೋಧಾತಿರೇಕದಿಂದ ಹುಚ್ಚನಂತಾಗಿ ''ಎಲ! ಇದಾವ ಪಿಶಾಚಿ ನಮ್ಮ ಊರಬಾಗಿಲದಲ್ಲಿ ಬಂದುಕುಳಿತಿದೆ! ಊರಲ್ಲಿಯ ಸಾವಿರಾರು ಜನರಿಗೆಲ್ಲ ಬೇಡಿ ಬಯಸಿದ ಬೇಕುಬೇಕಾದ ಫಲಅಭೀಷ್ಟಗಳನ್ನು ಕೊಟ್ಟು ನನ್ನ ಪಾಲಿಗೆಮಾತ್ರ ಕಲ್ಲಾಗಿ ಕುಳಿತಿದೆ. ನಾನು ಇದನ್ನು ತಂದು ಗುಡಿ ಕಟ್ಟಿಸಿ ಪ್ರತಿಷ್ಠೆಯನ್ನು ಮಾಡಿಸಿ ಪ್ರತಿದಿನವೂ ಪೂಜಾ ನೈವೇದ್ಯ ಪುಷ್ಪಾರ್ಚನೆ ದೀಪ ಧೂಪ ಮುಂತಾದ ಎಲ್ಲ ವ್ಯವಸ್ಥೆ ಮಾಡಿಸಿದ್ದೇನೆ. ಗಂಡಹೆಂಡಿರಿಬ್ಬರೂ ಹಗಲೂರಾತ್ರಿ ಸೇವಿಸಿ ಪ್ರಾರ್ಥಿಸಿದರೂ ಈ ಕೃತಘ್ನ ಗಣೇಶನು ನಮಗೆ ಫಲವನ್ನು ಕೊಡುವದಿಲ್ಲ. ಆದ್ದರಿಂದ ಸಾಕಿವನ ಪೂಜೆ'' ಎಂದು ಆ ಗಣಪತಿಯ ದೇವಸ್ಥಾನವನ್ನೂ ಮೂರ್ತಿಯನ್ನೂ ಕಿತ್ತಿ ಒಡೆದು ನಾಶಮಾಡಿ ಬಿಟ್ಟನು. ಇದರಿಂದ ಸಂತಪ್ತನಾದ ಆ ಗಣಪತಿಯು ''ಮದಾಂಧನಾದ ರಾಜಾಧಮ! ನಿನಗೆ ಯಾವ ಅಪರಾಧವನ್ನೂ ಮಾಡದ ನನ್ನ ದೇವಾಲಯವನ್ನು ನೀನು ನಾಶಪಡಿಸಿದ್ದರಿಂದ ನಿನ್ನ ರಾಜಧಾನಿಯಾದ ಕಾಶೀಪಟ್ಟಣವು ಒಂದು ಸಾವಿರ ವರುಷಗಳವರೆಗೆ ಶೂನ್ಯವಾಗಲಿ'' ಎಂದು ಶಾಪಕೊಟ್ಟನು.

ಅದರಿಂದ ಆ ಪಟ್ಟಣವೆಲ್ಲ ಶೂನ್ಯವಾಗಿ ಜನರಹಿತವಾಯಿತು. ದಿವೋದಾಸನಾದರೂ ನಿರುಪಾಯನಾಗಿ ಊರಬಿಟ್ಟು ತನ್ನ ರಾಜ್ಯದ ಸೀಮಾಂತ ಪ್ರದೇಶದಲ್ಲಿದ್ದ ಗೋಮತೀ ನದಿಯ ದಂಡೆಯ ಮೇಲೆ ಮತ್ತೊಂದು ಅತ್ಯಂತ ಮನೋಹರವಾದ ರಾಜಧಾನಿಯನ್ನು ಕಟ್ಟಿಸಿ ಅಲ್ಲಿ ಇರಹತ್ತಿದನು.

ಇತ್ತ ನಿಕುಂಭನು ಉಪಾಯದಿಂದ ಕಾಶೀಪಟ್ಟಣವನ್ನು ತೆರವು ಮಾಡಿಸಿ ಮಹಾದೇವರ ಹತ್ತಿರ ಬಂದು ''ಸ್ಥಾನ ಸಿದ್ಧವಾಗಿದೆ, ದಯಮಾಡಿಸಬೇಕೆಂದು'' ಬಿನ್ನವಿಸಿಗೊಂಡನು.

ಪಾರ್ವತೀ ಸಹಿತನಾಗಿ ಪರಮೇಶ್ವರನು ಬಂದು ಅಲ್ಲಿ ಇರಹತ್ತಿದನು. ಆ ಚಂದ್ರ ಕಲಾವಂತಸನಾದ ಮಹಾದೇವನು ತನ್ನ ಪ್ರಾಣದರಸಿಯಾದ ಅಪರ್ಣೆಯನ್ನು ಬಗೆಬಗೆಯಿಂದ ರಮಿಸಿ ರಂಜಿಸಿ ತಾನೂ ಆನಂದದಿಂದ ವಾಸಮಾಡಿದನು.

ಈ ಕಾಶಿಯ ವಾಸ ಪರಮೇಶ್ವರನಿಗೆ ಉಲ್ಲಾಸದಾಯಕವಾಗಿ ಹಿತಾವಹವೆನಿಸಿದರೂ ಪಾರ್ವತಿಗೆ ಮಾತ್ರ ತನ್ನ ಜನ್ಮಭೂಮಿ ತವರು ಮನೆಗಳನ್ನು ಬಿಟ್ಟು ಬಂದದ್ದರಿಂದ ಸ್ಥಳ ಬದಲಾಗಿ ಅವಳಿಗೆ ಸಮಾಧಾನವಾಗಲಿಲ್ಲ. ಆಗ ಅವಳು "ಈ ಸ್ಥಳವೂ ಸಾಕು. ಮತ್ತೆ ನಾವು ನಮ್ಮೂರಾದ ಕೈಲಾಸಕ್ಕೆ ಹೋಗೋಣ ಬನ್ನಿ" ಎಂದು ಕೇಳಿಕೊಂಡಳು. ಆಗ ಪರಮೇಶ್ವರನು ನಕ್ಕು "ನಾನಿನ್ನು ನಿಮ್ಮ ತವರುಮನೆಗೆ ಬರುವುದಿಲ್ಲ. ಇದೇ ನನ್ನ ಅವಿಮುಕ್ತ ಸ್ಥಳ. ನಾನೆಂದಿಗೂ ಬಿಟ್ಟಿರಲಾರದ ಮನೆ ಬೇಕಾದರೆ ನೀನು ಇರು. ನಿಮ್ಮ ತವರುಮನೆಗೆ ಹೋಗಬಹುದು" ಎಂದು ತ್ರಿಪುರಾಂತಕನೂ ತ್ರ್ಯಂಬಕನೂ ಆದ ಪರಶಿವನು ಉತ್ತರಿಸಿದನು. ಶಿವನು ಇದನ್ನು ಬಿಟ್ಟು ನಾನೆಲ್ಲಿಯೂ ಹೋಗುವುದಿಲ್ಲವೆಂದು ಹೇಳಿದ್ದರಿಂದಲೇ ಕಾಶಿಯು ಅವಿಮುಕ್ತ ಕ್ಷೇತ್ರವೆಂದು ಪ್ರಸಿದ್ಧವಾಯಿತು. ಸರ್ವದೇವ ನಮಸ್ಕೃತನಾದ ಆ ಪರಶಿವನು ಪರಮೇಶ್ವರಿಯೊಂದಿಗೆ ಅಲ್ಲಿ ಕೃತ, ತ್ರೇತಾ, ದ್ವಾಪರಾದಿ ಮೂರು ಯುಗಗಳಲ್ಲಿ ಇದ್ದು ಕಲಿಯುಗದಲ್ಲಿ ಮಾತ್ರ ಅದೃಶ್ಯನಾಗುತ್ತಾನೆ. ಅದೃಶ್ಯನಾದರೂ ಕಲಿಯುಗದಲ್ಲಿಯೂ ಅವನ ಸನ್ನಿಧಾನ ಅಲ್ಲಿ ಇದ್ದೇ ಇರುವುದು.

ದಿವೋದಾಸನು ಭದ್ರಶೇಣ್ಯನ ನೂರುಜನ ಮಕ್ಕಳಲ್ಲಿ ತೊಂಬತ್ತೊಂಬತ್ತು ಜನರನ್ನು ಕೊಂದ ಬಳಿಕ ಕಡೆಯ ಹಡುಗನು ಬಹಳ ಚಿಕ್ಕ ವಯಸ್ಸಿನ ಹಸುಗೂಸೆಂದು ಉಪೇಕ್ಷೆ ಮಾಡಿ ಬಿಟ್ಟುಬಿಟ್ಟದ್ದನು. ಮುಂದೆ ದುರ್ದಮ ಎಂಬ ಹೆಸರಿನ ಆ ಹುಡುಗನು ದೊಡ್ಡವನಾದ ಬಳಿಕ ಕಾರ್ತಿವೀರ್ಯನನ್ನು "ನೀನೇ ನನಗೆ ತಂದೆ" ಯೆಂದು ಮೊರೆಹೋಗಿ ಅವನ ಮಗನಾಗಿ ಅವನ ಸಹಾಯದಿಂದ ಕಾಶೀಪಟ್ಟಣವನ್ನು ವಶಪಡಿಸಿಕೊಂಡನು. ಆದರೆ ದಿವೋದಾಸನಿಗೆ ದೃಷದ್ವತಿಯೆಂಬ ಕಾಂತಾಮಣಿಯಿಂದ ಪ್ರತರ್ದನನೆಂಬ ವೀರಾಗ್ರಣಿಯಾದ ಕುಮಾರನು ಜನಿಸಿದ್ದನು. ಅವನು ಚಿಕ್ಕವನಿರುವಾಗಲೇ ದುರ್ದಮನಿಂದ ಮತ್ತೆ ಆ ಕಾಶೀಪಟ್ಟಣವನ್ನು ಗೆದ್ದು ವಶಪಡಿಸಿಕೊಂಡು ಮುಯ್ಯಕ್ಕೆ ಮುಯ್ಯತೀರಿಸಿ ಮನೆತನದ ಗಲಿತಗೌರವನ್ನು ಮರಳಿ ಸಂಪಾದಿಸಿದನು.

ಆ ಪ್ರತರ್ದನನಿಗೆ ವತ್ಸ ಭಾರ್ಗಎಂಬ ಇಬ್ಬರು ಮಕ್ಕಳು. ವತ್ಸನಿಗೆ ಅಲರ್ಕ, ಅಲರ್ಕನಿಗೆ ಸನ್ನತಿ ಎಂಬ ಮಗನಿದ್ದನು. ಅಲರ್ಕನು ಲೋಪಾಮುದ್ರೆಯ ಅನುಗ್ರಹದಿಂದ ಮನ್ಮಥಸಮಾನವಾದ ಸೌಂದರ್ಯವನ್ನೂ ದೀರ್ಘಾಯುಷವನ್ನೂ ಹೊಂದಿ ಅರವತ್ತಾರು ಸಾವಿರ ವರುಷ ರಾಜ್ಯವಾಳಿದನು.

ಹಿಂದೆ ಹೇಳಿದಂತೆ ನಿಕುಂಭನ ಸಹಸ್ರವರ್ಷಾತ್ಮಕವಾದ ಶಾಪದ ಅವಧಿ ಮುಗಿಯುತ್ತ ಬಂದಾಗ ಅಲರ್ಕನು ಈ ಕಾಶೀಪಟ್ಟಣವನ್ನು ಪುನರ್ನಿಯೋಜನ ಮಾಡಿದನು. ಶಾಪದ ಸಮಯದಲ್ಲಿ ಶೂನ್ಯವಾದ ಆ ನಗರಿಯನ್ನು ಕ್ಷೇಮಕ ಎಂಬ ರಾಕ್ಷಸ ಆಕ್ರಮಿಸಿದ್ದ. ಕ್ಷೇಮಕನನ್ನು ಅಕರ್ಲಕನು ಕೊಂದು ಕಾಶಿಯ ಪುನರ್ನಿಮಾಣ ಮಾಡಿದ.

ಅವನ ಮಗನಾದ ಸನ್ನತಿಗೆ ಸುನೀಥ, ಸುನೀಥನಿಗೆ ಕ್ಷೇಮ್ಯ, ಕ್ಷೇಮ್ಯನಿಗೆ ಕೇತುಮಾನ್, ಕೇತುಮಂತನಿಗೆ ಸುಕೇತು, ಸುಕೇತುವಿಗೆ ಧರ್ಮಕೇತು, ಧರ್ಮಕೇತುವಿಗೆ ಸತ್ಯಕೇತು, ಸತ್ಯಕೇತುವಿಗೆ ವಿಭು, ವಿಭುವಿನಿಂದ ಆನರ್ತ, ಆನರ್ತನಿಂದ ಸುಕುಮಾರ, ಅವನಿಗೆ

ಧೃಷ್ಟಿಕೇತು, ಧೃಷ್ಟಕೇತುವಿಗೆ ವೀತಿಹೋತ್ರ ಅವನಿಂದ ಭರ್ಗ ಎಂಬ ಮಕ್ಕಳಾದರು. ಅಲರ್ಕನ ತಂದೆಯಾದ ವತ್ಸರಾಜನಿಗೆ ವತ್ಸಭೂಮಿ, ಭರ್ಗವಿನಿಂದ ಭೃಗುಭೂಮಿ ಎಂಬ ಇಬ್ಬರು ಮಕ್ಕಳಾದರು. ಇವರೆಲ್ಲರೂ ಭಾರ್ಗವವಂಶದ ಗಾಲವಾಂಗಿರಸಕುಲದಲ್ಲಿ ಹುಟ್ಟಿದ ರಾಜ-ಮಹಾರಾಜರು. ಇವರಿಂದ ಮುಂದೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮೊದಲಾದ ನಾನಾ ಜಾತಿಯ ಸಾವಿರಾರು ಕಾಶಿ ವಂಶದ ಜನರು ಹುಟ್ಟಿದರು. ಇನ್ನು ಮುಂದೆ ನಹುಷನ ವಂಶಾವಳಿಯು ಬಿತ್ತರಿಸಲ್ಪಡುತ್ತದೆ.

## ನಹುಷನ ವಂಶ ವಿಸ್ತರಣೆ

ಸುಸ್ವಧಾ ನಾಮಕರಾದ ಪಿತೃಗಳ ಮಾನಸಕನ್ಯೆ ವಿರಜೆಯನ್ನು ನಹುಷ ಮಹಾರಾಜನಿಗೆ ಕೊಟ್ಟಿತ್ತು. ವಿರಜೆಯಿಂದ ನಹುಷನಿಗೆ ಯತಿ, ಯಯಾತಿ, ಸಂಯಾತಿ, ಆಯಾತಿ, ಸುಯಾತಿ ಎಂಬ ಇಂದ್ರ ಸಮಾನ ತೇಜಸ್ಕರಾದ ಪಂಚಪುತ್ರರು ಜನಿಸಿದರು. ಇವರಲ್ಲಿ ಯತಿಯೇ ಜ್ಯೇಷ್ಠನಾದರೂ ಅವನು ವಿರಕ್ತನಾಗಿ ಮೋಕ್ಷಮಾರ್ಗದಲ್ಲಿ ಮುನ್ನಡೆದು ಬ್ರಹ್ಮಾಪರೋಕ್ಷವನ್ನು ಹೊಂದಿದನು. ಆದ್ದರಿಂದ ಎರಡನೇಯವನಾದ ಯಯಾತಿಯೇ ಪಟ್ಟವನ್ನೇರಿದನು. ಸಮುದ್ರವಲಯಾಂಕಿತವಾದ ಅಖಂಡ ಭೂಮಂಡಲವನ್ನೆಲ್ಲ ಗೆದ್ದು ಪಾದಾಕ್ರಾಂತ ಮಾಡಿಕೊಂಡ ಯಯಾತಿಗೆ ದೇವಯಾನಿ, ಶರ್ಮಿಷ್ಠಾ ಎಂಬ ಇಬ್ಬರು ಹೆಂಡತಿಯರಿದ್ದರು. ದೇವಯಾನಿಯಿಂದ ಯದು, ತುರ್ವಸು, ಶರ್ಮಿಷ್ಠೆಯಿಂದ ದ್ರುಹ್ಯು, ಅನು, ಪೂರು ಎಂಬ ಮಕ್ಕಳು ಜನಿತರಾದರು.

ಯಯಾತಿಗೆ ದೇವೇಂದ್ರನು ಸುಪ್ರೀತನಾಗಿ ಮನೋವೇಗವುಳ್ಳ ಅಚ್ಚ ಬಿಳಿಕುದುರೆಗಳನ್ನು ಹೂಡಿದ ಒಂದು ಬಂಗಾರದ ರಥವನ್ನು ಕೊಟ್ಟನು. ಆ ರಥದಲ್ಲಿ ಕುಳಿತು ಜೈತ್ರಯಾತ್ರೆ ಹೊರಟ ಯಯಾತಿಯು ಆರುದಿನಗಳಲ್ಲಿ ಜಗಜ್ಜಯವನ್ನು ಮಾಡಿಕೊಂಡು ಬಂದನು. ಮುಂದೆ ಆ ರಥವು ಬಹುಕಾಲ ಪುರುವಂಶದ ರಾಜರ ಹತ್ತಿರವೇ ಇದ್ದು ವಸುನಾಮಕ ಕೌರವನಿಂದ ಕುರುಕುಲಕ್ಕೆ ಬಂದಿತು. ಕುರುಕುಲದ ಪರೀಕ್ಷಿತ ರಾಜನ ಮಗನಾದ ಮೊದಲನೆ ಜನಮೇಜಯರಾಜನು ಗಾರ್ಗ್ಯ ಮುನಿಯ ವಾಕ್ಕ್ರೂರ ಎಂಬ ವಾಚಾಳಿಯಾದ ಮಗನನ್ನು ಅವನ ನಿಷ್ಠುರ ಭಾಷಣಕ್ಕಾಗಿ ಸಂಹಾರ ಮಾಡಿದನು. ಅದನ್ನು ಕಂಡು ಗಾರ್ಗ್ಯನು ಸಿಟ್ಟಿಗೆದ್ದು ನಿನ್ನ ರಥವು ನಾಶವಾಗಲಿ ಎಂದು ಶಾಪಕೊಟ್ಟನು. ಮತ್ತು ಜನಮೇಜಯನಿಗೆ ಅದರಿಂದ ಬ್ರಹ್ಮಹತ್ಯೆಯ ಪಾತಕವೂ ತಟ್ಟಿತು. ಆ ಪಾತಕದ ನಿಮಿತ್ತವಾಗಿ ಅವನ ಮೈಯಿಂದ ಒಂದು ತರಹದ ದುರ್ವಾಸನೆ ಹೊರಡಹತ್ತಿತ್ತು. ಅದರಿಂದ ಅವನಿಗೆ ತನ್ನದೇ ತನಗೆ ಹೇಸಿಕೆಯೆನಿಸಿತು. ಎಲ್ಲಿ ಹೋದರೂ ಅವನ ದೇಹದ ದುರ್ವಾಸ ಕಡಿಮೆಯಾಗಲಿಲ್ಲ. ಇವನ ಸಮೀಪಕ್ಕೆ ಬಂದ ಪ್ರಜೆಗಳು ಮೂಗು ಮುಚ್ಚಿಕೊಳ್ಳುವ ಪ್ರಸಂಗ ಬಂದಿತು. ಕೊನೆಗೆ ಅವನು ಇಂದ್ರೋತ ಎಂಬ ಶೌನಕ ವಂಶದ ಬ್ರಾಹ್ಮಣನಿಗೆ ಶರಣು ಹೋದನು. ಆಗ ಇಂದ್ರೋತನು ಅವನ ಕಡೆಯಿಂದ ಅಶ್ವಮೇಧ ಯಾಗವನ್ನು ಮಾಡಿಸಿದನು. ಆ ಅಶ್ವಮೇಧ ಯಾಗದ ಕೊನೆಗೆ ಮಾಡಿದ ಅವಭೃಥಸ್ನಾನದಿಂದ ಜನಮೇಜಯನ ಮೈಯ ದುರ್ವಾಸನೆ ಕಡಿಮೆಯಾಯಿತು. ಇಂತು ಕುರುಕುಲದಲ್ಲಿ ಹಿಂದಿನ ಜನಮೇಜಯ ರಾಜನವರೆಗೆ ಇದ್ದ ಆ ದಿವ್ಯರಥವನ್ನು ಜನಮೇಜಯನು ಶಪಿತನಾದ ಬಳಿಕ ಮತ್ತೆ ಸರಿಪಡಿಸಿ ಇಂದ್ರನು ಚೇದಿರಾಜನಾದ ವಸುವಿಗೆ ಇತ್ತನು. ಅದು ವಸುವಿನಿಂದ ಬೃಹದ್ರಥನಿಗೂ ಬೃಹದ್ರಥನಿಂದ ಜರಾಸಂಧನಿಗೂ ಬಂತು. ಜರಾಸಂಧನನ್ನು ಕೊಂದಬಳಿಕ ಭೀಮಸೇನನು ಭಕ್ತಿಯಿಂದ ಅದನ್ನು ಶ್ರೀಕೃಷ್ಣನಿಗೆ ಕೊಟ್ಟು ಕೃಷ್ಣಾರ್ಪಣ ಎಂದನು.

ಯಯಾತಿಯು ಸಪ್ತದ್ವೀಪವುಳ್ಳ ಅಖಂಡ ಪೃಥ್ವೀ ಮಂಡಲವನ್ನೆಲ್ಲ ಗೆದ್ದು ಅದರ ಅಗ್ನೇಯ ಭಾಗವನ್ನು ತುರ್ವಸುವಿಗೂ, ಪಶ್ಚಿಮ ಭಾಗವನ್ನು ದ್ರುಹ್ಯುವಿಗೂ, ಉತ್ತರ ಪ್ರದೇಶವನ್ನೆಲ್ಲ ಅನುವಿಗೂ, ಜೇಷ್ಠ ಪುತ್ರನಾದ ಯದುವಿಗೆ ಈಶಾನ್ಯ ದಿಗ್ಭಾಗವನ್ನೂ ಹಂಚಿಕೊಟ್ಟನು. ಮಧ್ಯಪ್ರಾಂತದಲ್ಲಿ ಪೂರುವಿಗೆ ಪಟ್ಟಾಭಿಷೇಕ ಗೈದನು. ಮುಂದೆ ಕೆಲಸಮಯದ ನಂತರ ಮುಪ್ಪು ಬರಲು ಯಯಾತಿಯು ತನ್ನ ಹಾಗೂ ದೇವಯಾನಿಯ ಮಗನಾದ ಯದುವಿಗೆ ತನ್ನ ವಾರ್ಧಕ್ಯವನ್ನು ತೆಗೆದುಕೊಂಡು ಅವನ ನವತಾರುಣ್ಯವನ್ನು ಕೊಡಲು ಕೇಳಿದನು. ಆಗ ಯದುವು "ನಾನೊಬ್ಬ ಬ್ರಾಹ್ಮಣನಿಗೆ ಬೇಡಿದ್ದನ್ನು ಕೊಡುತ್ತೇನೆಂದು ಮಾತು ಕೊಟ್ಟಿದ್ದೇನೆ. ಅವನು ಏನು ಕೇಳುವನೋ ಗೊತ್ತಿಲ್ಲ. ನಾನು ಮುದುಕನಾಗಿ ಕುಳಿತರೆ ಆ ಬ್ರಾಹ್ಮಣನ ಮನೋರಥವನ್ನು ಪೂರೈಸುವದು ಹೇಗೆ! ಮುಪ್ಪು ಬಂದಿತೆಂದರೆ ಉಣ್ಣುವುದು ತಿನ್ನುವುದು ಕುಡಿಯುವುದು ಎಲ್ಲದಕ್ಕೂ ಪ್ರತಿಬಂಧಕ. ನಿನಗೆ ನನಗಿಂತ ಹೆಚ್ಚಿನ ಪ್ರೀತಿಯ ಮಕ್ಕಳಿದ್ದಾರೆ. ಬೇಕಾದರೆ ಅವರನ್ನು ಕೇಳು" ಎಂದು ಹೇಳಿದನು.

ಆಗ ಯಯಾತಿಯು ಸಂತಾಪದಿಂದ "ದುರ್ಬುದ್ಧಿಯೇ ! ಹಡೆದ ತಂದೆಯ ಮಾತನ್ನು ಮೀರಿ ಯಾವನೋ ಅತಿಥಿ ಸತ್ಕಾರ ಮಾಡುವ ನಿನಗೆ ಧರ್ಮವೆಲ್ಲಿ ಬಂತು? ಜನ್ಮದಾತನೂ ವಿದ್ಯಾದಾತನೂ ಗುರುವೂ ಆದ ನನ್ನನ್ನು ತಿರಸ್ಕರಿಸಿದ ನಿನ್ನ ಸಂತತಿಗೆ ರಾಜ್ಯಾಧಿಕಾರ ಇರದಂತಾಗಲಿ" ಎಂದು ಶಾಪಕೊಟ್ಟನು. ಇದರಂತೆ ತುರ್ವಸು, ದ್ರುಹ್ಯು, ಅನು ಎಂಬ ಮೂರು ಮಕ್ಕಳನ್ನೂ ತಾರುಣ್ಯವನ್ನು ಕೊಡಲು ಕೇಳಿದನು. ಅವರೆಲ್ಲರೂ ಸಮ್ಮತಿಸದಿದ್ದಾಗ ಅವರಿಗೂ ಇದರಂತೆ ಶಾಪವಿತ್ತು ಕೊನೆಯದಾದ ಪೂರುವನ್ನು ಕೇಳಿದನು. ಪಿತೃನಿಷ್ಠನೂ ಶರ್ಮಿಷ್ಠೆಯ ಮಗನೂ ಆದ ಪೂರು ಮಾತ್ರ ತಂದೆಯ ವಚನವನ್ನು ಮನ್ನಿಸಿ ತನ್ನ ಯೌವನವನ್ನು ಅವನಿಗೆ ಕೊಟ್ಟು ಅವನ ಮುಪ್ಪನ್ನು ತಾನು ತೆಗೆದುಕೊಂಡನು.

ಆ ಮೇಲೆ ತರುಣನಾದ ಯಯಾತಿಗೆ ಹರೆಯು ತಿರುಗಿತು. ದೊರೆಯು ಪ್ರೀತಿಯ ತೊರೆಗೆ ನೆರೆಯು ಬಂದಿತು. ತನ್ನ ಮೊದಲಿನ ಹೆಂಡದಿರಾದ ದೇವಯಾನಿ ಮತ್ತು ಶರ್ಮಿಷ್ಠಾ ಇಬ್ಬರೂ ಮುದುಕಿಯರಾಗಿ ಬಿಟ್ಟಿದ್ದರಿಂದ ಗೌ ಎಂಬ ಕಾಕುಸ್ಥ ಕನ್ಯೆಯನ್ನು ಮದುವೆಯಾದನು. ವಿಶ್ವಾಚೀ ಎಂಬ ಅಪ್ಸರೆಯು ಇಂದ್ರನ ಶಾಪದಿಂದ ಕಾಕುಸ್ಥನ ಮಗಳಾಗಿ ಗೌ ಎಂಬ ಹೆಸರಿನಿಂದ ಹುಟ್ಟಿಬಂದಿದ್ದಳು. ಅವಳನ್ನು ಶರ್ಮಿಷ್ಠಾ ದೇವಯಾನಿಯರಿಗಿಂತ ಮೊದಲೇ ಯಯಾತಿಗೆ ಮದುವೆಮಾಡಿ ಕೊಡಲಾಗಿತ್ತು. ಆದರೆ ಅವಳು ಅಪ್ಸರೆಯಾದುದರಿಂದ ಉಳಿದಿಬ್ಬರಂತೆ ಅವಳಿಗೆ ಮುಪ್ಪು ಆವರಿಸಿರಲಿಲ್ಲ. ನಿತ್ಯ ನವಯೌವನೆಯಾದ ಆ ಸುರಸುಂದರಿಯ ಜೊತೆಗೆ ನವತಾರುಣ್ಯ ಹಾಗು ಸ್ಫುರದ್ರೂಪ ಕಾಂತಿಗಳನ್ನು ಪಡೆದ ಯುವಕ ಯಯಾತಿಯು ಕುಬೇರನ ಉದ್ಯಾನವಾದ ಚೈತ್ರರಥದ ಮಂಜುಲತಾಕುಂಜಗಳಲ್ಲಿ ಸ್ವಚ್ಛಂದ ಮಧುಚಂದ್ರದ ಸುಖಸಾರವನ್ನೆಲ್ಲ ಸವಿದನು. ಹೀಗೆ ಎಷ್ಟೋ ದಿನಗಳವರೆಗೆ ಆ ದಿವ್ಯ ಸ್ತ್ರೀಯೊಂದಿಗೆ ಬಗೆಬಗೆಯ ಭೋಗ, ವಿವಿಧ ವಿಲಾಸ ವಿಹಾರಗಳನ್ನು ಭೋಗಿಸಿದರೂ ಅವನ ಕಾಮವಾಸನೆ ತೃಪ್ತಿಯಾಗಲಿಲ್ಲ. ಪ್ರೇಮ ಪಿಪಾಸೆ ಹಿಂಗಲಿಲ್ಲ. ಆಗ ಅವನಿಗೆ ಬಹಳ ಕೆಡಕೆನಿಸಿ ವೈರಾಗ್ಯ ಹುಟ್ಟಿತು.

ಅವನು ತಕ್ಷಣದಲ್ಲಿ ಆ ಭೋಗಾಭಿಲಾಷೆಯನ್ನೆಲ್ಲ ತೊರೆದು ಒಳ್ಳೇ ಏರು ಜವ್ವನದಲ್ಲಿಯೇ ಯೌವ್ವನ ದಾನಮಾಡಿ ಮುದುಕನಾಗಿ ಕುಳಿತ ಪಿತೃಭಕ್ತ ಪೂರುವಿನ

ಹತ್ತಿರ ಬಂದು ಅವನನ್ನು ಆಶೀರ್ವದಿಸಿ ಅವನ ಯೌವ್ವನವನ್ನು ಅವನಿಗೆ ಕೊಟ್ಟು ತನ್ನ ಮುಪ್ಪನ್ನು ತಾನು ವಾಪಸು ತೆಗೆದುಕೊಂಡನು. ಅಂದು ಆ ಯಯಾತಿಯು ಹೇಳಿದ ಅನುಭವೋಕ್ತಿಯು ಮನನೀಯವಾಗಿದೆ.

**''ನ ಜಾತು ಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ**
**ಹವಿಷಾ ಕೃಷ್ಣವರ್ತ್ಮೇವ ಬೂಯ ಏವಾದಭಿವರ್ಧತೆ ॥**
**ಯತ್‌ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।**
**ನಾಲಮೇಕಸ್ಯ ತತ್ಸರ್ವಂ ಇತಿ ಪಶ್ಯನ್ನ ಮುಹ್ಯತಿ ॥**

ಜಗತ್ತಿನಲ್ಲಿ ಕಾಮವಾಸನೆಯು ಕಾಮೋಪಭೋಗದಿಂದ ಎಂದಿಗೂ ಶಾಂತವಾಗುವುದಿಲ್ಲ. ತುಪ್ಪ ಹಾಕಿದ ಬೆಂಕಿಯಂತೆ ಭೋಗ ಮಾಡಿದಷ್ಟೂ ಕಾಮ ಹೆಚ್ಚುತ್ತಲೇ ಹೋಗುವುದು.

ಪ್ರಪಂಚದಲ್ಲಿರುವ ಅನ್ನ ಹೊನ್ನು ಹೆಣ್ಣುಗಳನ್ನೆಲ್ಲ ಒಬ್ಬನೇ ಮನುಷ್ಯನಿಗೆ ಕೊಟ್ಟರೂ ಅದು ಸಾಕೆನಿಸುವುದಿಲ್ಲ. ಇದೆಲ್ಲದಕ್ಕೂ ಒಂದೇ ಉಪಾಯವೆಂದರೆ ಆಶೆಯನ್ನು ಬಿಟ್ಟು ಭಗವಂತನಲ್ಲಿ ಮನಸ್ಸನ್ನು ತೊಡಗಿಸುವುದೊಂದೇ ಆಗಿದೆ. ಕಾಮಭೋಗ ಜನ್ಯವಾದ ಸುಖಗಳೆಲ್ಲ ಕೂಡಿದರೂ ಆಶೆಯನ್ನು ಬಿಟ್ಟ ನಿಶ್ಚಿಂತ ಮನಸ್ಸಿನ ನೆಮ್ಮದಿಯ ಒಂದು ಅಂಶದಷ್ಟೂ ಆಗುವುದಿಲ್ಲ'' ಎಂದಂದು ಆ ರಾಜನು ತನ್ನ ಪತ್ನಿಯರಿಂದ ಕೂಡಿಕೊಂಡು ಅರಣ್ಯಕ್ಕೆ ತಪಸ್ಸಿಗೆ ಹೋದನು. ಅಲ್ಲಿ ಭೃಗುತುಂಗವೆಂಬ ಶೈಲಶೃಂಗದಲ್ಲಿ ಘೋರ ತಪಸ್ಸನ್ನ ಆಚರಿಸಿ ಕೊನೆಗೆ ಅನ್ನನೀರುಗಳನ್ನೆಲ್ಲ ಬಿಟ್ಟು ಸಕುಟುಂಬವಾಗಿ ಶರೀರತ್ಯಾಗ ಮಾಡಿದನು.

ಆ ಯಯಾತಿ ಮಹಾರಾಜನ ಐದುಮಂದಿ ಮಕ್ಕಳ ವಂಶಜರಿಂದ ಸೂರ್ಯನ ಗಭಸ್ತಿಗಳಿಂದ ಅಖಂಡ ಬ್ರಹ್ಮಾಂಡವೇ ವ್ಯಾಪಿಸಲ್ಪಡುವಂತೆ ಇಡೀ ಭೂಮಂಡಲವೆಲ್ಲವೂ ವ್ಯಾಪಿಸಲ್ಪಟ್ಟಿತು. ಅದರಲ್ಲಿಯೂ ಸಾಕ್ಷಾತ್ ಶ್ರೀಮನ್ನಾರಾಯಣನೇ ಕೃಷ್ಣರೂಪದಿಂದ ಅವತರಿಸಿದ ಯದುವಂಶದ ಕತೆಯಂತೂ ಪರಮ ಪಾವನ, ಅತ್ಯಂತ ಮನೋರಂಜಕ ಮತ್ತು ಬೋಧಪ್ರದವಿದ್ದು ಕೇಳುವವರಿಗೆಲ್ಲ ಕೀರ್ತಿಕಲ್ಯಾಣಗಳ್ನು ತಂದುಕೊಡುವದು.

## ಯದುಬಂಧುಗಳ ವಂಶಾವಳಿ

ಪೂರುವಿಗೆ ಜನಮೇಜಯನೆಂಬ ಪುತ್ರನಿದ್ದನು. ಅವನಿಂದ ಮುಂದೆ ಪಿತಾಪುತ್ರ ಪರಂಪರೆಯಿಂದ ಪ್ರಚಿನ್ವಾನ್, ಪ್ರವೀರ, ಮನಸ್ಸು, ಅಭಯದ, ಸುಧನ್ವ, ಬಹುಗದ, ಶಮ್ಯಾತಿ, ರಹಸ್ಯಾತಿ, ರೌದ್ರಾಶ್ವ, ಮುಂತಾದ ರಾಜರಾದರು. ರೌದ್ರಾಶ್ವನಿಗೆ ಘ್ರುತಾಚೀ ಎಂಬ ಅಪ್ಸರೆಯಲ್ಲಿ ಋಚೇಯು, ಕೃಕಣೇಯು, ಕಕ್ಷೇಯು, ಸ್ಥಂಡಿಲೇಯು, ಸನ್ನತೇಯು, ದಶಾರ್ಣೇಯು, ಧನೇಯು, ಜಲೇಯು, ಸ್ಥಲೇಯು, ವನೇಯು ಎಂಬ ಹತ್ತುಜನ ಗಂಡುಮಕ್ಕಳೂ, ರುದ್ರಾ, ಶೂದ್ರಾ, ಮಲದಾ, ಮಲಹಾ, ಖಲದಾ, ನಲದಾ, ಸುರಸಾ, ಗೋ ಮತ್ತು ಚಪಲಾ ಎಂಬ ಲಲನಾಕುಲ ಲಲಾಮರಾದ ಹತ್ತುಜನ ಲಾವಣ್ಯವತಿ ಕನ್ನೆಯರೂ ಜನಿಸಿದರು. ಅತ್ರಿವಂಶದ ಪ್ರಭಾಕರನೆಂಬ ಮಹರ್ಷಿಯು ಈ ಹತ್ತೂಜನ ಸುರಸುಂದರಿಯರಂತಿರುವ ಕನ್ಯಾಮಣಿಗಳನ್ನು ಪ್ರಾಣಿಗ್ರಹಣ ಮಾಡಿದನು. ಅವನಿಗೆ ರುದ್ರೆಯಲ್ಲಿ ಸೋಮನೆಂಬ ತೇಜಸ್ವಿಯಾದ ಮಗನು ಜನಿಸಿದನು.

ಹಿಂದೆ ಒಂದು ದಿನ ರಾಹುವಿನ ಅಘಾತದಿಂದ ಸೂರ್ಯನು ಕೆಳಗೆ ಬೀಳುತಲಿದ್ದಾಗ ದಶದಿಕ್ಕುಗಳಲ್ಲೆಲ್ಲ ವ್ಯಾಪಿಸಿದ ಕತ್ತಲೆಯ ಮೊತ್ತವನ್ನು ಈ ಆತ್ರೇಯನು ತನ್ನ ಸ್ವಯಂ

ಪ್ರಕಾಶದಿಂದ ಪರಿಹರಿಸಿ ಎಲ್ಲ ಕಡೆಗೂ ಬೆಳಕನ್ನು ಉಂಟುಮಾಡಿದನು. ಮತ್ತು ಅಧಃಪಾತೋನ್ಮುಖನಾದ ಸೂರ್ಯನಿಗೆ 'ನಿನಗೆ ಕಲ್ಯಾಣವಾಗಲಿ' ಎಂದು ಹರಿಸಿದ್ದರಿಂದ ಸೂರ್ಯನು ಆಕಾಶದಲ್ಲಿಯೇ ಗಟ್ಟಿಯಾಗಿ ನಿಂತನು. ಆದುದರಿಂದ ಅವನಿಗೆ ಪ್ರಭಾಕರನೆಂದು ಹೆಸರಾಗಿ ಅವನ ವಂಶವಾದ ಅತ್ರಿವಂಶಕ್ಕೆ ಯಜ್ಞಯಾಗಾದಿಗಳಲ್ಲಿ ದೇವತೆಗಳೂ ಕೂಡ ವಿಶೇಷ ಮಾನಮರ್ಯಾದೆ ಮಾಡುವಂತಾಯಿತು. ಅವನು ಆ ಹತ್ತು ಹೆಣ್ಣು ಮಕ್ಕಳಲ್ಲಿಯೂ ವೇದವೇದಾಂತಪಾರಂಗತರೂ ಮಹಾ ತಪಸ್ವಿಗಳೂ ಆದ ಅನೇಕ ಪುತ್ರರನ್ನು ಉತ್ಪಾದಿಸಿದನು. ಅವರೆಲ್ಲರೂ ಗೋತ್ರ ಪ್ರವರ್ತಕರಾದ ಋಷಿಗಳಾಗಿ ಸ್ವಸ್ಯಾತ್ರೇಯರೆಂದು ಪ್ರಸಿದ್ಧರಾದರು. ಆದರೆ ಅತ್ರಿಋಷಿಯ ಧನದಲ್ಲಿ ಮಾತ್ರ ಇವರಿಗೆ ಪಾಲು ಬರಲಿಲ್ಲ.

ರೌದ್ರಾಶ್ವನ ಗಂಡುಮಕ್ಕಳಲ್ಲಿ ಕಕ್ಷೇಯು ಎನ್ನುವವನಿಗೆ ಸಭಾನರ, ಚಾಕ್ಷುಷ, ಪರಮನ್ಯು ಎಂಬ ಮೂರುಜನ ಪುತ್ರರು ಜನಿಸಿದರು. ಸಭಾನರನಿಂದ ಮುಂದೆ ಪಿತಾಪುತ್ರ ಪರಂಪರೆಯಿಂದ ಕಾಲಾನಲ, ಸೃಂಜಯ, ಪುರಂಜಯ, ಜನಮೇಜಯ, ಮಹಾಶಾಲಿ, ಅಥವಾ ದೇವೇಷು ಮಹಾಮನ, ಎಂಬ ರಾಜರಾದರು. ಮಹಾಮನನಿಗೆ ಉಶೀನರ, ತಿತಿಕ್ಷು ಎಂಬ ಇಬ್ಬರು ಮಕ್ಕಳು. ಧರ್ಮಜ್ಞನಾದ ಉಶೀನರನಿಗೆ ನೃಗಾ, ಕ್ರಿಮಿ, ನವಾ, ದೂರ್ವಾ, ದೃಷದ್ವತಿ ಎಂಬ ಐದು ಜನ ಮಡದಿಯರಿದ್ದರು. ಇವರಿಂದ ಉಶೀನರನಿಗೆ ಮುಪ್ಪಿನಕಾಲದಲ್ಲಿ ಕ್ರಮವಾಗಿ ನೃಗ, ಕೃಮಿ, ನವ, ಸುವ್ರತ ಎಂಬ ಪುತ್ರರು ಉತ್ಪನ್ನರಾದರು. ದೃಷದ್ವತಿಯಲ್ಲಿ ಶಿಬಿರಾಜನು ಹುಟ್ಟಿದನು. ಈ ಶಿಬಿ ಚಕ್ರವರ್ತಿಗೆ ವೃಷದರ್ಭ, ಸುವೀರ, ಮದ್ರಕ, ಕೇಕಯ ಎಂದು ನಾಲ್ಕು ಜನ ಮಕ್ಕಳಿದ್ದರು. ಅವರ ದೇಶಗಳಿಗೆ ಈಗಲೂ ಅದೇ ಹೆಸರಿರುತ್ತದೆ.

ಉಶೀನರನ ಸೋದರನಾದ ತಿತಿಕ್ಷುವಿಗೆ ಉಪದ್ರಥ, ಉಪದ್ರಥನಿಗೆ ಫೇನ, ಫೇನನಿಂದ ಸಂತಪ, ಸಂತಪನಿಂದ ಮಹಾಯೋಗಿ ಬಲಿರಾಜನು ಹುಟ್ಟಿದನು. ಆ ಬಲಿಯಿಂದ ಅಂಗ, ವಂಗ, ಸುಮ್ನ, ಕಲಿಂಗ, ಪುಂಡ್ರ ಎಂಬ ಪಂಚಪುತ್ರರು ಜನಿಸಿದರು. ಈ ಕ್ಷತ್ರಿಯ ಪುತ್ರರಲ್ಲದೇ ಬಲಿರಾಜನಿಗೆ ಬ್ರಾಹ್ಮಣ ಸ್ತ್ರೀಯಲ್ಲಿ ಅನೇಕ ಬ್ರಾಹ್ಮಣಪುತ್ರರೂ ಹುಟ್ಟಿದರು. ಹಿಂದಿನ ಜನ್ಮದಲ್ಲಿ ದಾನವನಾಗಿ ಹುಟ್ಟಿದ ಪ್ರಬಲ ಪರಾಕ್ರಮಿಯಾದ ಆ ಬಲಿಚಕ್ರವರ್ತಿಯೇ ಈಗ ಮಾನವನಾಗಿ ಅವತರಿಸಿದ್ದನು. ಅವನಿಗೆ ಬ್ರಹ್ಮದೇವರು ಚಿರಂಜೀವಿಯಾಗಿ ವರ್ಣಾಶ್ರಮ ವ್ಯವಸ್ಥಾಪಕನೂ ಮಹಾಯೋಗಿಯೂ ಆಗು ಎಂದು ಆಶೀರ್ವದಿಸಿದ್ದರು. ಬಲಿರಾಜನು ಊರ್ಧ್ವರೇತಸ್ಕನಿದ್ದುದರಿಂದ ಈ ಎಲ್ಲ ಮಕ್ಕಳೂ ಅವನ ಸುದೇಷ್ಣಾ ಎಂಬ ಹೆಂಡತಿಯಲ್ಲಿ ದೀರ್ಘತಪ ಎಂಬ ಮಹಾಮುನಿಯಿಂದ ನಿಯೋಗ ವಿಧಿಯಿಂದ ಹುಟ್ಟಿದವರು ಆದುದರಿಂದಲೇ ಅವರಿಗೆ ಕ್ಷೇತ್ರಜರೆಂದು ಹೆಸರು. ಹೀಗೆ ತನ್ನ ಹೆಂಡತಿಯ ಮಕ್ಕಳಾದ ಆ ಐದೂ ಜನರನ್ನು ಒಂದೊಂದು ದೇಶದ ರಾಜ್ಯ ಸಿಂಹಾಸನದ ಮೇಲೆ ಕುಳ್ಳಿರಿಸಿ ಬಲಿರಾಜನು ಸ್ವಸ್ಥಾನವಾದ ಸುತಲ ಲೋಕವನ್ನು ಸೇರಿ ಯೋಗ ಧರ್ಮದಿಂದ ಭಗವದಾರಾಧನೆಯಲ್ಲಿ ನಿರತನಾದನು.

ಅವನ ಐದು ಜನ ಮಕ್ಕಳಾಳಿದ ದೇಶಗಳಿಗೆ ಅವರ ಹೆಸರೇ ಬಿದ್ದು ಅವು ಅಂಗ, ವಂಗ, ಕಲಿಂಗ, ಸುಹ್ಮ, ಪುಂಡ್ರಕ ಎಂದು ಪ್ರಸಿದ್ಧವಾದವು. ಅಂಗ ವಂಶದಲ್ಲಿ ಮುಂದೆ ದಧಿವಾಹನ, ದಿವಿರಥ, ಚಿತ್ರರಥ ಮೊದಲಾದ ರಾಜರಾದರು. ಇಂದ್ರನ ಜೊತೆಗೆ ಸೋಮಪಾನ ಮಾಡಿದನು. ಚಿತ್ರರಥನಿಗೆ ದಶರಥ, ಅಥವಾ ಲೋಮಪಾದನೆಂಬ ಮಗನು ಹುಟ್ಟಿದನು. ಆ ಚತುರಂಗನ ಮೊಮ್ಮಗನಾದ ಚಂಪರಾಜನೇ ಚಂಪಾ ಎಂಬ ರಾಜಧಾನಿಯನ್ನು ನಿರ್ಮಿಸಿದನು. ಆ ಚಂಪನ ಚಿರಂಜೀವನಾದ ಹರ್ಯಂಗ ಎಂಬ ರಾಜಕುಮಾರನಿಗಾಗಿ ಋಷ್ಯ ಶೃಂಗನು ತನ್ನ ಮಂತ್ರ ಸಾಮರ್ಥ್ಯದಿಂದ ಇಂದ್ರನ ಐರಾವತವನ್ನು ಭೂಮಿಗೆ ಇಳಿಸಿದನು.

ಮುಂದೆ ಈ ವಂಶದಲ್ಲಿ ಹುಟ್ಟಿದ ಬೃಹನ್ಮನ ಎಂಬ ರಾಜನಿಗೆ ಚೈದ್ಯ ರಾಜಕುಮಾರಿಯರಾದ ಯಶೋದೇವಿ, ಸತ್ಯಾ, ಎಂಬಿಬ್ಬರನ್ನು ಕೊಟ್ಟಿತ್ತು. ಯಶೋದೇವಿಗೆ ಜಯದ್ರಥನೆಂಬ ಮಗನು ಹುಟ್ಟಿದನು. ಜಯದ್ರಥನಿಂದ ದೃಢರಥ, ವಿಶ್ವಜಿತ್, ಕರ್ಣ, ವಿಕರ್ಣ, ಅವನಿಂದ ನೂರು ಜನ ಮಕ್ಕಳೂ ಹುಟ್ಟಿದರು. ಎರಡನೆಯ ಪತ್ನಿ ಸತ್ಯೆಗೆ ವಿಜಯನೆಂಬ, ಶಮದಮಾದಿಗಳಿಂದ ಬ್ರಾಹ್ಮಣರನ್ನೂ ವೀರ್ಯ ವಿಕ್ರಮಗಳಿಂದ ಕ್ಷತ್ರಿಯರನ್ನೂ ಮೀರಿಸುವ ಸತ್‌ಪುತ್ರನು ಜನಿಸಿದನು. ವಿಜಯನಿಂದ ಮುಂದೆ ಧೃತಿ, ಧೃತವ್ರತ ಸತ್ಯಕರ್ಮ ಮೊದಲಾದ ರಾಜರಾದರು. ಸತ್ಯಕರ್ಮನಿಗೆ ಬ್ರಾಹ್ಮಣ ಸ್ತ್ರೀಯಲ್ಲಿ ಹುಟ್ಟಿದ್ದರಿಂದ ಸೂತ ಜಾತಿಯವನಾದ ಅಧಿರಥನು ಹುಟ್ಟಿದನು. ಈ ಅಧಿರಥನು ಕುಂತಿಯ ಮಗನಾದ ಕರ್ಣನನ್ನು ಮಗನೆಂದು ಪರಿಗ್ರಹಿಸಿದನು. ಕರ್ಣನಿಂದ ವೃಷಸೇನ ವೃಷಸೇನನಿಗೆ ವೃಷ ಹೀಗೆ ಸತ್ಯಸಂಧರಾದ ಅಂಗರಾಜನ ವಂಶವು ವಿಸ್ತಾರವಾಯಿತು.

ರೌದ್ರಾಶ್ವನ ಜ್ಯೇಷ್ಠ ಪುತ್ರನಾದ ಋಚೇಯುವಿಗೆ ತಕ್ಷಕನ ಮಗಳಾದ ಜ್ವಲನಾ ಎಂಬ ಭಾರ್ಯೆಯಿದ್ದಳು. ಅವಳಿಂದ ಮತಿನಾರ ಎಂಬ ರಾಜರ್ಷಿಯು ಜನಿಸಿದನು. ಮತಿನಾರನಿಗೆ ತಂಸು, ಪ್ರತಿರಥ, ಸುಬಾಹು ಎಂಬ ಮೂವರು ಗಂಡು ಮಕ್ಕಳು ಗೌರಿ ಎಂಬ ಹೆಣ್ಣುಮಗಳೂ ಉತ್ಪನ್ನರಾದರು. ಈ ಗೌರಿಯಿಂದ ಮುಂದೆ ಯುವನಾಶ್ವರಾಜನಿಗೆ ಮಾಂಧಾತನು ಹುಟ್ಟಿದನು. ಪ್ರತಿರಥನಿಂದ ಕಣ್ವ, ಕಣ್ವನ ಮಗ ಮೇಧಾತಿಥಿ, ಈ ಮೇಧಾತಿಥಿಯಿಂದಲೇ ಮುಂದೆ ಕಾಣ್ವಾಯನ ಎಂಬ ಬ್ರಾಹ್ಮಣರ ಕುಲವು ಪ್ರವೃತ್ತವಾಯಿತು. ತಂಸುಕುಮಾರನು ಬ್ರಹ್ಮವಾದಿನೀ ಸ್ತ್ರೀಯಾದ ಈಲಿನೀ ಎಂಬವಳನ್ನು ಮದುವೆ ಯಾದನು. ಅವಳಿಂದ ತಂಸುವಿಗೆ ಸುರೋಧ ಎಂಬ ಬ್ರಹ್ಮಜ್ಞಾನಿಯೂ ಅತ್ಯಂತ ಧಾರ್ಮಿಕನೂ ಆದ ಮಗನು ಜನಿಸಿದನು. ಈ ಸುರೋಧನಿಂದ ಉಪದಾನವೀ ಎಂಬ ಸ್ತ್ರೀ ಯಿಂದ ದುಷ್ಯಂತ, ಸುಶ್ರುತ, ಪ್ರವೀರ, ಅನಘ ಎಂಬ ನಾಲ್ಕು ಜನ ಪುತ್ರರು ಉಂಟಾದರು. ಅದರಲ್ಲಿ ದುಷ್ಯಂತನಿಗೆ ಭರತನೆಂಬ ವೀರ್ಯಶಾಲಿಯಾದ ಶೂರಪುತ್ರನು ಹುಟ್ಟಿದನು. ಹತ್ತುಸಾವಿರ ಆನೆಗಳ ಬಲವುಳ್ಳ ಆ ದೌಷ್ಯಂತಿಗೆ ಸರ್ವದಮನ ಎಂದೂ ಕರೆಯುತ್ತಲಿದ್ದರು.

ಗಾಂಧರ್ವ ವಿಧಿಯಿಂದ ಶಕುಂತಲೆಯನ್ನು ದುಷ್ಯಂತನು ವನದಲ್ಲಿ ಮದುವೆಯಾಗ್ಗಿದರೂ ಹಸ್ತಿನಾವತಿ ಪಟ್ಟಣದಲ್ಲಿ ಎದುರು ಬಂದು ನಿಂತಾಗ ''ನನಗೆ ನಿನ್ನ ಪರಿಚಯವೇ ಇಲ್ಲ. ಈ ನಿನ್ನ ಮಗನಿಗೂ ನನಗೂ ಸಂಬಂಧವೇ ಇಲ್ಲ''ವೆಂದನು. ಆಗ ಆಕಾಶವಾಣಿಯಾಗಿ ''ತಾಯಿಯು ಮಗುವಿಗೆ ಒಂದು ಚರ್ಮದ ಚೀಲವಿದ್ದಂತೆ. ಮಗು ಯಾರ ವೀರ್ಯದಿಂದ ಹುಟ್ಟಿರುವದೋ ಅದು ಅವನ ಅಧಿಕಾರಕ್ಕೇ ಸೇರಿದ್ದು. ಶಕುಂತಲೆಯ ಈ ಮಗನು ನಿನ್ನಿಂದಲೇ ಹುಟ್ಟಿರುವನು. ಔರಸ ಪುತ್ರನು ನರಕದಿಂದ ಪಿತೃಗಳನ್ನು ಉದ್ಧರಿಸುವನು. ಆದ್ದರಿಂದ ನಿನ್ನ ಹೊಟ್ಟೆಯಿಂದ ಹುಟ್ಟಿದ ಈ ಮಗನನ್ನು ಪೋಷಿಸು ಮತ್ತು ಶಕುಂತಲೆಯನ್ನು ಅವಮಾನ ಮಾಡಬೇಡ'' ಎಂದು ದುಷ್ಯಂತನಿಗೆ ಸ್ಪಷ್ಟ ಪ್ರೇರಣೆ ದೊರಕಿತು. ಅದರಂತೆ ಅವನು ಆ ಶಾಕುಂತಲೇಯನಾದ ಭರತನನ್ನೂ ಶಕುಂತಲೆಯನ್ನೂ ಆನಂದದಿಂದ ಸ್ವೀಕರಿಸಿದನು.

ಭರತನ ಮೂರು ಜನ ಹೆಂಡಂದಿರು ತಮ್ಮ ಮಕ್ಕಳು ಅವಿವೇಕಿಗಳಾಗುವರೆಂದು ಕೇಳಿ ತಿಳಿದು ಅದರಿಂದ ರಾಜನು ತಮ್ಮನ್ನು ಬಿಡಬಹುದೆಂಬ ಭಯದಿಂದ ತಮ್ಮ ಮಕ್ಕಳನ್ನು ತಾವೇ ಸಂಹರಿಸಿದರು. ಆಗ ಮರುತ್ ಎಂಬ ಯಜ್ಞದ ದೇವತೆಗಳೆಲ್ಲ ಕೂಡಿ

ಬೃಹಸ್ಪತಿಯ ಮಗನಾದ ಭರದ್ವಾಜನನ್ನು ಭರತನಿಗೆ ಧರ್ಮಸಂಕ್ರಮಣದಿಂದ ಮಗನನ್ನಾಗಿ ಮಾಡಿದರು. ಬುದ್ಧಿವಂತನಾದ ಭರದ್ವಾಜನಾದರೂ ಯಜ್ಞಮಾಡಿ ಆಹುತಿಗಳಿಂದ ಆ ಮರುದ್ಗಣವನ್ನು ಸಂತೋಷಪಡಿಸಿದನು.

ಹೀಗೆ ಬ್ರಾಹ್ಮಣನಾದ ಭರದ್ವಾಜನು ಕ್ಷತ್ರಿಯನಾಗಿ ಭರತವಂಶಕ್ಕೆ ಬಂದಬಳಿಕ ಉಚ್ಛಿನ್ನವಾದ ಭರತವಂಶ ಮತ್ತೆ ಚಿಗುರಿತು. ಇಲ್ಲಿ ಬಂದ ಬಳಿಕ ಅವನಿಗೆ ವಿತಥನೆಂಬ ಮಗನು ಹುಟ್ಟಿದನು. ಮೊಮ್ಮಗನು ಜನಿಸಿದ್ದನ್ನು ನೋಡಿ ಬಳಿಕ ಭರತನು ಸ್ವರ್ಗವನ್ನೇರಿದನು. ಆ ಮೇಲೆ ಕೆಲವು ದಿನಗಳಮೇಲೆ ವಿತಥನನ್ನು ಸಾಮ್ರಾಜ್ಯ ಸಿಂಹಾಸನದಲ್ಲಿ ಕೂಡಿಸಿ ಭರದ್ವಾಜನು ತಾನು ಅರಣ್ಯಾಶ್ರಮಕ್ಕೆ ತಪಸ್ಸಿಗಾಗಿ ತೆರಳಿದನು. ಆ ವಿತಥನಿಗೆ ಸುಹೋತ್ರ, ಹೋತಾ, ಗಯ, ಗರ್ಗ, ಕಪಿಲ ಎಂಬ ಮಕ್ಕಳಾದರು. ಬೃಹತ್‌ನಿಗೆ ಅಜಮೀಢ, ದ್ವಿಮೀಢ, ಪುರುಮೀಡ ಎಂದು ಮೂರುಜನ ಮಕ್ಕಳು. ಅಜಢನಿಗೂ ಧೂಮಿನೀ, ನೀಲಿನೀ, ಕೇಶಿನೀ, ಎಂದೂ ಮೂರುಜನ ಹೆಂಡಂದಿರಿದ್ದರು. ಈ ಅಜಮೀಢನ ಕೇಶಿನೀ ಎಂಬ ಕಾಮಿನಿಯಿಂದ ಜನ್ಹುಹುಟ್ಟಿ ಅವನಿಂದ ಮುಂದೆ ಕೌಶಿಕಗೋತ್ರವು ವಿಸ್ತಾರವಾದುದರ ಕಥೆಯನ್ನು ಹೇಳಿದೆ. ಆ ಅಜಮೀಢನಿಗೆ ಇನ್ನೊಬ್ಬ ನೀಲಿನೀ ಎಂಬ ನಾರೀಮಣಿಯಿಂದ ಸುಶಾಂತಿ ಎಂಬ ರಾಜಕುಮಾರನು ಹುಟ್ಟಿದನು. ಆ ಸುಶಾಂತಿಗೆ ಬಾಹ್ಯಾಶ್ವ, ಬಾಹ್ಯಾಶ್ವನಿಗೆ ಮುದ್ಗಲ, ಸೃಂಜಯ, ಬೃಹದಿಷು, ಯವೀನರ, ಕೃಮೀಲಾಶ್ವ ಎಂಬ ಐದು ಜನ ಮಕ್ಕಳಾದರು. ಈ ಪಂಚಪುತ್ರರು ಕೂಡಿ ರಕ್ಷಿಸುವ ದೇಶಕ್ಕೆ ಪಾಂಚಾಲ ಎಂದು ಹೆಸರು ಬಂದಿದೆ.

ಮುದ್ಗಲನಿಗೆ ಮೌದ್ಗಲ್ಯನೆಂಬ ಮಗನು ಹುಟ್ಟಿದನು. ಇವರೆಲ್ಲರೂ ಕ್ಷತ್ರ ಧರ್ಮವನ್ನು ಆಶ್ರಯಿಸಿದ ಬ್ರಾಹ್ಮಣರು. ಕಣ್ವ ಮೌದ್ಗಲ್ಯರು ಅಂಗಿರಸ ಪಕ್ಷವನ್ನು ಆಶ್ರಯಿಸಿದರು. ಮೌದ್ಗಲ್ಯನ ಜೇಷ್ಠಪುತ್ರನಾದ ಇಂದ್ರಸೇನನು ಬ್ರಹ್ಮರ್ಷಿ ಎಂದು ಪ್ರಸಿದ್ಧನಾದನು. ಆ ಇಂದ್ರಸೇನನಿಂದ ವಧ್ರ್ಯಶ್ಚ, ವಧ್ರ್ಯಶ್ವನಿಗೆ ಮೇನಕೆಯಲ್ಲಿ ರಾಜರ್ಷಿಯಾದ ದಿವೋದಾಸ, ಹಾಗೂ ಅಹಲ್ಯೆ ಎಂಬ ಇಬ್ಬರು ಮಕ್ಕಳು ಜನಿಸಿದರು. ಈ ಅಹಲ್ಯೆಯನ್ನು ಗೌತಮನಿಗೆ ಕೊಟ್ಟಿತ್ತು. ಗೌತಮನಿಂದ ಅಹಲ್ಯೆಯಲ್ಲಿ ಶತಾನಂದನು ಜನಿಸಿದನು. ಶತಾನಂದನಿಂದ ಸತ್ಯಧೃತಿ ಎಂಬ ಮಗನು ಹುಟ್ಟಿದನು. ಈ ಸತ್ಯಧೃತಿಗೆ ಶರದ್ವಾನ್ ಎಂದು ಅಜ್ಜನ ಹೆಸರಿನಿಂದಲೂ ಕರೆಯುತ್ತಲಿದ್ದರು.

ಒಮ್ಮೆ ಈ ಶರದ್ವಂತನು ನದೀತಟಾಕದಲ್ಲಿ ತಪಸ್ಸು ಮಾಡುತ್ತಲಿದ್ದಾಗ ಜಾಲಪದೀ ಎಂಬ ಅಪ್ಸರೆಯು ಅವನ ತಪಸ್ಸಿಗೆ ವಿಘ್ನಮಾಡಬೇಕೆಂದು ಬಂದಳು. ಅವಳ ರತಿ ರಮಣೀಯವಾದ ರೂಪಸಿರಿಯನ್ನು ಕಂಡು ಶರದ್ವಂತನ ಮನಸ್ಸು ಚಂಚಲವಾಗಿ ಅವನು ಅವಳನ್ನು ತನ್ನ ಭುಜಾಂತರದಲ್ಲಿ ರಾಗರಸಾತಿರೇಕದಿಂದ ಬಂಧಿಸಿದನು. ಲೀಲಾ ಲೋಲಳಾದ ಜಾಲಪದಿಯು ಅವನ ಬೆನ್ನು ಹತ್ತಿದಳು. ಆಗ ಅವನ ಅಂತಃಕರಣ ಕರಗಿ ನೀರಾಗಿ ಅಲ್ಲಿಯ ಹುಲ್ಲುಗಾವಲಿನ ಹಸಿರಿನ ಮೇಲೆ ಬಿದ್ದಿತು. ಅದರಿಂದ ಅಲ್ಲಿಯೇ ಸಸ್ಯಶಾದ್ವಲದಲ್ಲಿ ಒಂದು ಗಂಡು ಮತ್ತು ಹೆಣ್ಣು ಕೂಸುಗಳು ಜನಿಸಿದವು. ಆ ಎರಡೂ ಮಕ್ಕಳನ್ನು ಬೇಟೆಗಾಗಿ ಬಂದ ಶಂತನು ರಾಜನು ನೋಡಿ ಪರದೇಶಿ ಮಕ್ಕಳೆಂದು ಕೃಪೆಯಿಂದ ಎತ್ತಿಕೊಂಡು ಮನೆಗೆ ತಂದು ಜೋಕೆ ಮಾಡಿದನು. ಆದುದರಿಂದ ಅವರಿಬ್ಬರಿಗೂ ಕೃಪ ಮತ್ತು ಕೃಪೀ ಎಂದು ಹೆಸರಾಯಿತು. (ಈ ಕೃಪಿಯನ್ನು ದ್ರೋಣಾಚಾರ್ಯರಿಗೆ ಕೊಟ್ಟು ಮದುವೆ ಮಾಡಲಾಯಿತು) ಇವರಿಗೆಲ್ಲ ಶಾರದ್ವತ ಅಥವಾ ಗೌತಮ ಎಂದು ಕರೆಯುವರು.

ಅಹಲ್ಯೆಯ ಅಣ್ಣನಾದ ದಿವೋದಾಸನಿಗೆ ಬ್ರಹ್ಮರ್ಷಿಯಾದ ಮಿತ್ರಯು ಎಂಬ ಮಗನಿದ್ದನು. ಅವನಿಂದಲೇ ಮೈತ್ರಾಯಣೀ ಶಾಖೆ ಪ್ರವೃತ್ತವಾಯಿತು. ಮತ್ತು ಮೈತ್ರೇಯ ಎಂಬ ಹೆಸರಿನ ಎಷ್ಟೋ ಕುಲದೀಪಕರು ಸುಪ್ರಸಿದ್ಧರಾದರು. ಮುದ್ಗಲನ ತಮ್ಮನಾದ ಸೃಂಜಯನಿಂದ ಮುಂದೆ ಆ ವಂಶದಲ್ಲಿ ಪಿತಾಪುತ್ರ ಕ್ರಮದಿಂದ ಪಂಚಜನ, ಸೋಮದತ್ತ, ಸಹದೇವ, ಸೋಮಕ, ಜಂತು, ಮೊದಲಾದ ಅನೇಕ ರಾಜರಾದರು. ಜಂತುವಿಗೆ ನೂರು ಜನ ಮಕ್ಕಳಿದ್ದರು. ಅವರಲ್ಲಿ ಕೊನೆಯವನೇ ಪೃಷತ್, ಈ ಪೃಷದ್ ರಾಜನಾದ ದ್ರುಪದನಿಂದ ದೃಷ್ಟದ್ಯುಮ್ನ, ದೃಷ್ಟದ್ಯುಮ್ನನಿಂದ ಧೃಷ್ಟಕೇತು ಎಂಬ ಮಗನೂ ಜನಿಸಿದನು. ಇವರಿಗೆ ಸೋಮಕರೆಂದೂ ಕರೆಯುವರು. ಇದು ಅಜಮೀಢನ ನೀಲಿನಿಯ ವಂಶ ಕ್ರಮವಾಯಿತು.

ಇನ್ನು ಅಜಮೀಢನ ಧೂಮಿನೀ ಎಂಬ ಪಟ್ಟದರಸಿಯ ಸಂತತಿಯು ಬೆಳೆದು ಬೆಳಗಿದ ಬಗೆಯನ್ನು ನಿರೂಪಿಸುವೆ.

ಜನಮೇಜಯ ! ಈ ಧೂಮಿನಿಯೇ ನಿನ್ನ ಪೂರ್ವ ಪುರುಷರ ಮಹಾತಾಯಿ. ಸುಜ್ಞಾನಾಪೇಕ್ಷಿಣಿಯಾದ ಆ ಧೂಮಿನಿ ಕಾಮಿನಿಯು, ಅನೇಕ ವ್ರತೋಪವಾಸಗಳನ್ನು ಮಾಡಿದಳು ಮತ್ತು ಸತ್ಸಂತಾನ ಪ್ರಾಪ್ತಿಗಾಗಿ ಹತ್ತುಸಾವಿರ ವರುಷ ಅತ್ಯುಗ್ರವಾದ ತಪವನ್ನು ಆಚರಿಸಿದಳು. ಮಿತಾಹಾರದಿಂದ ಹೋಮಹವನಾದಿಗಳನ್ನು ಮಾಡಿ ಅಗ್ನಿಹೋತ್ರಕ್ಕಾಗಿ ತಂದ ದರ್ಭಾಸನದ ಮೇಲೆಯೇ ಪವಡಿಸುತ್ತಲಿದ್ದಳು. ಇಂಥ ದೀರ್ಘ ವ್ರತತಪೋನುಷ್ಠಾನಾ ನಂತರದಲ್ಲಿ ಅಜಮೀಢನು ಅವಳನ್ನು ಮೋಹಿಸಿಬಂದನು. ಆಗ ಅವಳಿಗೆ ಅತ್ಯಂತ ಸುಂದರನೂ ಆದರೆ ಕಿಂಚಿದ್ ಧೂಮ್ರ ವರ್ಣದವನೂ ಆದ ಋಕ್ಷ ಎಂಬ ಮಗನು ಹುಟ್ಟಿದನು. ಋಕ್ಷನಿಂದ ಸಂವರಣ, ಸಂವರಣನಿಂದ ಕುರು, ಎಂಬ ಕುಮಾರನು ಜನಿಸಿದನು. ಈ ಕುರುವೇ ಪ್ರಯಾಗ ಪ್ರದೇಶದ ಪರಿಸೀಮಾ ಪ್ರಾಂತವನ್ನು ದಾಟಿ ಕುರುಕ್ಷೇತ್ರವನ್ನು ನಿರ್ಮಿಸಿದನು. ಆ ಕುರುವಿನಿಂದ ಕೌರವರ ವಂಶವು ಜಗತ್ ಪ್ರಸಿದ್ಧವಾಯಿತು.

ಆ ಕುರುವಿಗೆ ಸುಧನ್ವ, ಸುಧನು, ಪರೀಕ್ಷಿತ್ ಮತ್ತು ಅರಿಭಯಂಕರನಾದ ಪ್ರವರ ಎಂಬ ನಾಲ್ಕುಜನ ಗಂಡುಮಕ್ಕಳಾದರು. ಸುಧನ್ವನಿಂದ ಮುಂದೆ ಸುಹೋತ್ರ, ಚ್ಯವನ, ಕೃತಯಜ್ಞ ಮೊದಲಾದ ರಾಜರಾದರು. ಕೃತಯಜ್ಞನು ಅನೇಕ ಯಜ್ಞಗಳನ್ನು ಮಾಡಿ ಚೇದಿಜೆಯಿಂದ ಇಂದ್ರ ಸದೃಶನಾದ ವಸು ಎಂಬ ಮಗನನ್ನು ಪಡೆದನು. ಇವನು ಅಂತರಿಕ್ಷದಲ್ಲಿ ಬೇಕಾದ ಕಡೆ ಸಂಚರಿಸಲು ಸಮರ್ಥನಿದ್ದುದರಿಂದ ಉಪರಿಚರವಸು ಎಂತಲೂ ಚೇದಿ ವಂಶದ ಸಂಬಂಧವಿದ್ದುದರಿಂದ ಚೈದ್ಯವಸು ಎಂತಲೂ ಕರೆಯುತ್ತಲಿದ್ದರು. ಈ ಉಪರಿಚರವಸುವಿಗೆ ಗಿರಿಕಾ ಎಂಬ ಹೆಂಡತಿಯಿಂದ ಮಹಾರಥ, ಪ್ರತ್ಯಗ್ರಹ, ಕುಶ, ಮಾರುತ, ಯದು, ಮತ್ಸ್ಯ ಎಂಬ ಆರು ಜನ ಗಂಡುಮಕ್ಕಳೂ ಮತ್ತು ಕಾಲೀ ಎಂಬ ಒಬ್ಬ ಹೆಣ್ಣು ಮಗಳೂ ಹುಟ್ಟಿದರು. ಈ ವಸುವಿನ ಜ್ಯೇಷ್ಠಪುತ್ರನಾದ ಬೃಹದ್ರಥನಿಂದ ಮುಂದೆ ಕುಶಾಗ್ರ, ವೃಷಭ, ಪುಷ್ಪವಾನ್, ಸತ್ಯಹಿತ, ಊರ್ಜಸಂಭವ ಮುಂತಾದ ರಾಜರು ಆದರು. ಈ ಸಂಭವನ ಅತ್ಯಂತ ಪ್ರತಾಪಿಯಾದ ಪುತ್ರನು ಎರಡು ಭಾಗವಾಗಿ ಹುಟ್ಟಿ ಬಂದನು. ಆ ಎರಡೂ ತುಣುಕುಗಳನ್ನು ಜರಾ ಎಂಬ ರಾಕ್ಷಸಿಯು ಜೋಡಿಸಿ ಕೂಡಿಸಿದ್ದರಿಂದ ಅವನಿಗೆ ಜರಾಸಂಧ ಎಂಬ ಹೆಸರಾಯಿತು. ಇವನು ಬಹಳ ಬಲಾಢ್ಯನಿದ್ದುದರಿಂದ ಎಲ್ಲ ಕ್ಷತ್ರಿಯ ರಾಜರನ್ನು ಗೆದ್ದು ಪಾದಾಕ್ರಾಂತರನ್ನಾಗಿ

ಮಾಡಿಕೊಂಡಿದ್ದನು. ಈ ಜರಾಸಂಧನಿಂದ ಮುಂದೆ ಈ ವಂಶದಲ್ಲಿ ಸಹದೇವ, ಉದಾಯು, ಶ್ರುತಧರ್ಮ ಎಂಬ ರಾಜರಾದರು. ಶ್ರುತಧರ್ಮನು ಮಗಧ ದೇಶದಲ್ಲಿ ವಾಸಮಾಡಿದನು. ಇದೆಲ್ಲ ಕುರುಕ್ಷೇತ್ರ ಸುಧನ್ವನ ವಂಶಾವಳಿ ವಿಸ್ತರಣದ ರೀತಿಯಾಯಿತು.

ಆ ಕುರುವಿನ ಎರಡನೆಯ ಮಗನಾದ ಪರೀಕ್ಷಿತ್ ರಾಜನಿಗೆ ಜನಮೇಜಯ (ಇವರು ಭಾಗವತ ಭಾರತ ಶ್ರವಣ ಮಾಡಿದ ಪಿತಾ-ಪುತ್ರರಿಗಿಂತ ಹಿಂದಿನವರು)ನೆಂಬ ಮಗನಿದ್ದನು. ಜನಮೇಜಯನಿಗೆ ಶ್ರುತಸೇನ, ಉಗ್ರಸೇನ, ಭೀಮಸೇನ, ಎಂಬ ಮೂರು ಜನ ಗಂಡು ಮಕ್ಕಳಿದ್ದರು. ಇವರಲ್ಲದೇ ಅವನಿಗೆ ಮಣಿಮತಿ ಎಂಬ ಮಹಿಳಾಮಣಿಯಾದ ಮಡದಿಯಿಂದ ಸುರಥ ಮತಿಮಾನ್ ಎಂಬ ಇಬ್ಬರು ಮಕ್ಕಳಿದ್ದರು. ಈ ಸುರಥನಿಂದ ವಿಕ್ರಾಂತ, ವಿಕ್ರಾಂತನಿಂದ ವಿದೂರಥ ವಿದೂರಥನಿಂದ ಋಕ್ಷ ಎಂಬ ಮಗನು ಹುಟ್ಟಿದನು.

ಕುರುಕುಲಪಿತಾಮಹನಾದ ಧೂಮಿನಿಯ ಮಗ ಋಕ್ಷನು ಬೇರೆ ಇವನು ಬೇರೆ. ಕುಲಜ್ಯೇಷ್ಠನಾದ ಆ ಋಕ್ಷನ ಹೆಸರನ್ನೇ ಇವನಿಗೂ ಇಟ್ಟಿತ್ತು. ಇವನಾದರೂ ಅವನಂತೆಯೇ ಶೂರನಿದ್ದನು. ಒಟ್ಟು ಜನಮೇಜಯ! ನಿಮ್ಮ ಕುಲದಲ್ಲಿ ಇಬ್ಬರು ಋಕ್ಷರು, ಇಬ್ಬರು ಪರೀಕ್ಷಿತ ಜನಮೇಜಯರು ಹಾಗೂ ಮೂವರು ಭೀಮಸೇನರು ಇರುವರು. ಈ ಎರಡನೆಯ ಋಕ್ಷನಿಗೆ ಭೀಮಸೇನ ಎಂಬ ಮಗನಿದ್ದನು. ಅವನಿಗೆ ಪ್ರತೀಪನೆಂಬ ಪುತ್ರ. ಪ್ರತೀಪನಿಗೆ ಶಂತನು ದೇವಾಪಿ ಬಾಹ್ಲಿಕ ಎಂಬ ಮೂವರು ಮಕ್ಕಳಾದರು. ಜನಮೇಜಯ! ನೀನು ಹುಟ್ಟಿದ್ದು ಶಂತನುವಿನ ಶಾಖೆಯಲ್ಲಿ ಬಾಹ್ಲೀಕನಿಗೆ ಸೋಮದತ್ತನೆಂಬ ಪುತ್ರನಿದ್ದನು. ಸೋಮದತ್ತನಿಗೆ ಭೂರಿ, ಭೂರಿಶ್ರವ, ಶಲ ಎಂಬ ಮಕ್ಕಳಾದರು. ಮೂರನೆಯವನಾದ ದೇವಾಪಿಯು ದೇವತೆಗಳಿಗೆ ಉಪಾಧ್ಯಾಯನಾಗಿದ್ದು ಚ್ಯವನ ಋಷಿಗೆ ಅತ್ಯಂತ ಪ್ರೀತ್ಯಾಸ್ಪದನಾಗಿದ್ದನು. ಇವನನ್ನು ಚ್ಯವನನು ಪುತ್ರನೆಂದೆ ಪರಿಗ್ರಹಿಸಿದನು. ಈಗ ನೀವೆಲ್ಲ ಜನಿಸಿದ ಶಂತನುವಿನ ವಂಶ ವಿಸ್ತರಗೊಂಡ ಬಗೆಯನ್ನು ನಿರೂಪಿಸುತ್ತೇನೆ.

ಶಂತನು ರಾಜನಿಗೆ ದೇವನದಿಯಾದ ಗಂಗೆಯಲ್ಲಿ ದೇವವ್ರತ ಅಥವಾ ಭೀಷ್ಮನೆಂಬ ಸತ್ಯಸಂಧನಾದ ಸತ್ಪುತ್ರನು ಜನಿಸಿದನು. ಶಂತನು ರಾಜನಿಗೆ ಎರಡನೆಯ ಹೆಂಡತಿಯಾದ ಕಾಳಿಯಿಂದ ವಿಚಿತ್ರವೀರ್ಯನೆಂಬ ಮಗನಾದನು. ಕೃಷ್ಣದ್ವೈಪಾಯನರು ಅರ್ಥಾತ್ ವೇದವ್ಯಾಸರು ವಿಚಿತ್ರವೀರ್ಯನ ಹೆಂಡತಿಗೆ ತನ್ನ ತಾಯಿಯಾದ ಸತ್ಯವತಿಯ ಅಪೇಕ್ಷೆಯಂತೆ ಧೃತರಾಷ್ಟ್ರ ಪಾಂಡು ಎಂಬ ಪುತ್ರರನ್ನೂ ಬೇರೆ ದಾಸಿಯೋರ್ವಳಿಗೆ ವಿದುರನನ್ನೂ ಕರುಣಿಸಿದರು. ಧೃತರಾಷ್ಟ್ರನಿಗೆ ಗಾಂಧಾರಿಯಲ್ಲಿ ದುರ್ಯೋಧನಾದಿ ನೂರು ಜನರು ಹುಟ್ಟಿದರು. ಪಾಂಡುವಿಗೆ ಅರ್ಜುನಾದಿ ಪಂಚಪಾಂಡವರು ಜನಿಸಿದರು. ಅರ್ಜುನನಿಂದ ಅಭಿಮನ್ಯು, ಅಭಿಮನ್ಯುವಿಗೆ ನಿನ್ನ ತಂದೆಯಾದ ಪರೀಕ್ಷಿತನು ಮಗನಾಗಿ ಹುಟ್ಟಿದನು. ಇದು ನೀನು ಹುಟ್ಟಿದ ಪುರುವಂಶದ ಕಥೆ.

ಈ ಪುರುರಾಜನ ಸೋದರನಾದ ಯಯಾತಿಪುತ್ರ ತುರ್ವಸುವಿನ ವಂಶದಲ್ಲಿ ವನ್ಹಿ, ಗೋಭಾನು, ತ್ರೈಸಾನು, ಕರಂಧಮ, ಮರುತ್ತ ಎಂಬ ರಾಜಪುತ್ರರು ಜನಿಸಿದರು. ಅವೀಕ್ಷಿತನ ಮಗನಾದ ಮರುತ್ತ ಬೇರೆ ಇವನು ಬೇರೆ. ಈ ಮರುತ್ತನಿಗೆ ಸಂತತಿಯಿಲ್ಲದ್ದರಿಂದ ವಿಪುಲ ದಕ್ಷಿಣೆಯನ್ನು ಕೊಟ್ಟು ಯಜ್ಞಮಾಡಿದನು. ಆದರಿಂದ ಅವನಿಗೆ ಸಂಮತಾ ಎಂಬ ಮಗಳು ಹುಟ್ಟಿದಳು. ಅವಳನ್ನು ಯಜ್ಞದ ದಕ್ಷಿಣೆಯೆಂದು ಪುರೋಹಿತನಾದ ಸಂವರ್ತನಿಗೆ

ದಾನರೂಪವಾಗಿ ಕೊಟ್ಟುಬಿಟ್ಟನು. ಸಂವರ್ತನು ಆ ರಾಜಕುಮಾರಿಯನ್ನು ಪುರುವಂಶದ ಮಹಾರಾಜನಾದ ಘೋರನಿಗೆ ಮದುವೆ ಮಾಡಿಕೊಟ್ಟನು. ಆ ಸಂಮತೆಗೆ ಅವನಿಂದ ದುಷ್ಯಂತನೆಂಬ ಮಗನು ಹುಟ್ಟಿದನು. ಹೀಗೆ ತುರ್ವಸುವಿನ ವಂಶವು ಯಯಾತಿಯ ಶಾಪದಿಂದ ಪ್ರತಿಬದ್ಧವಾಗಿ ಪುರುವಿನ ವಂಶದಲ್ಲಿಯೇ ಲೀನವಾಗಿಹೋಯಿತು. ಪುರುಕುಲ ಪ್ರದೀಪನಾದ ದುಷ್ಯಂತನಿಗೆ ಶಕುಂತಲೆಯಲ್ಲಿ ಭರತನೂ ಮತ್ತೊಬ್ಬ ಹೆಂಡತಿಯಲ್ಲಿ ಕರುಥ್ಥಾಮನೂ ಹುಟ್ಟಿದನು. ಕರುಥ್ಥಾಮನ ಮಗನಾದ ಆಕ್ರೀಡನಿಗೆ ಪಾಂಡ್ಯ, ಕೇರಲ, ಕೋಸಲ, ಚೋಲ ಎಂಬ ನಾಕುಜನ ಮಕ್ಕಳಾದರು. ಅವರ ಹೆಸರಿನ ದೇಶಗಳೂ ಪ್ರಸಿದ್ಧವೇ ಆಗಿವೆ.

ಯಯಾತಿಯ ಮತ್ತೊಬ್ಬ ಮಗನಾದ ದ್ರುಹ್ಯುವಿಗೆ ಬಭ್ರು, ಕೇತು, ಎಂದಿಬ್ಬರು ಮಕ್ಕಳಿದ್ದರು. ಸೇತುವಿನ ಮಗನಾದ ಮರುದ್ಗಣದ ಒಡೆಯನಾದ ಅಂಗಾರ ಕೇತುವು ಯುವನಾಶ್ವನ ಜೊತೆಗೆ ಹದಿನಾಲ್ಕು ತಿಂಗಳ ಘನಘೋರ ಯುದ್ಧವನ್ನು ಮಾಡಿ ಕೊನೆಗೆ ಸೋತು ಮಡಿದನು. ಅಂಗಾರ ಕೇತುವಿಗೆ ಗಾಂಧಾರನೆಂಬ ಮಗನಿದ್ದನು. ಅವನಿಂದ ದೇಶಕ್ಕೆ ಅವನ ಹೆಸರಿನಿಂದಲೇ ಗಾಂಧಾರದೇಶ ಎಂದು ಪ್ರಸಿದ್ಧಿ ಬಂದಿದೆ. ಯಯಾತಿಯ ಮಗದೊಬ್ಬ ಪುತ್ರನಾದ ಅನುವಿಗೆ ಧರ್ಮ, ಧರ್ಮನಿಗೆ ಶ್ರುತ, ಶ್ರುತನಿಗೆ ದುದುಹ, ದುದುಹನಿಂದ ಪ್ರಜಾತ, ಪ್ರಜಾತನಿಗೆ ಸುಚೇತ ಎಂಬ ಮಕ್ಕಳಾದರು. ಹೀಗೆ ಯದುಸಹೋದರರಾದ ನಾಲ್ಕುಜನ ಯಯಾತಿ ಪುತ್ರರ ವಂಶೋಪವಂಶಗಳು ವಿಸ್ತರಣೆಗೊಂಡವು. ಇನ್ನು ಯದುವಂಶದ ವಿಸ್ತಾರಕ್ರಮವನ್ನು ನಿರೂಪಿಸುತ್ತೇನೆ.

## ಕೀರ್ತಿವಂತನಾದ ಕಾರ್ತವೀರ್ಯ

ಯದುಮಹಾರಾಜನಿಗೆ ಸಹಸ್ರದ, ಪಯೋದ, ಕ್ರೋಷ್ಟು, ನೀಲ, ಅಂಜಿಕ ಎಂಬ ಐದು ದೇವಪುತ್ರರಂಥ ಮಕ್ಕಳಾದರು. ಅವರಲ್ಲಿ ಸಹಸ್ರದನಿಗೆ ಹೈಹಯ, ಹಯಮೇಧ, ಹಯ ಎಂಬ ಮೂವರು ಮಕ್ಕಳು ಹುಟ್ಟಿದರು.

ಹೈಹಯನಿಗೆ ಧರ್ಮನೇತ್ರ, ಧರ್ಮನೇತ್ರನಿಗೆ ಸಾಹುಜ, ಸಾಹುಜನಿಗೆ ಮಾಹಿಷ್ಮತಿ ನಗರವನ್ನು ಕೂಡಿಸಿದ ಮಹಿಷ್ಮಾನ್ ಮಹಿಷ್ಮಾನನಿಂದ ಹಿಂದೆ ಹೇಳಿದ ಕಾಶೀಪತಿಯಾದ ಭದ್ರಶ್ರೇಣ್ಯ, ಭದ್ರಶ್ರೇಣ್ಯನಿಗೆ ದುರ್ದಮನ, ಅವನಿಂದ ಕನಕ ಎಂಬ ಮಕ್ಕಳು ಜನಿಸಿದರು. ಕನಕನಿಗೆ ಕೃತವೀರ್ಯ, ಕೃತೌಜ, ಕೃತವರ್ಮ, ಕೃತಾಗ್ನಿ ಎಂಬ ನಾಕುಜನ ಪುತ್ರರು.

ಕೃತವೀರ್ಯನಿಂದ ಕಾರ್ತವೀರ್ಯನೆಂಬ ಸಪ್ತದ್ವೀಪಾಧಿಪತಿಯಾದ ಸಾವಿರ ತೋಳಿನ ವೀರಾಗ್ರಣಿಯಾದ ಮಗನು ಹುಟ್ಟಿದನು. ಅವನು ಮೊದಲು ಅತ್ರಿಪುತ್ರನಾದ ದತ್ತಾತ್ರೇಯನನ್ನು ಕುರಿತು ಹತ್ತು ಸಾವಿರ ವರುಷ ಘೋರ ತಪವನ್ನಾಚರಿಸಿದನು. ಅವನ ಲೋಕೋತ್ತರವಾದ ತೀವ್ರ ತಪಶ್ಚರ್ಯೆಯಿಂದ ಪ್ರಸನ್ನನಾದ ಆ ದತ್ತಸ್ವಾಮಿಯು ಬೇಕಾದ ನಾಕುವರಗಳನ್ನು ಕೇಳಲು ಹೇಳಿದನು. ಆಗ ಕಾರ್ತವೀರ್ಯಾರ್ಜುನನು ''ನನಗೆ ಸಾವಿರ ತೋಳುಗಳು ಇರಬೇಕು. ನಾನು ಅಧರ್ಮ ಪ್ರವೃತ್ತನಾದರೆ ಯಾರಾದರೂ ದೊಡ್ಡವರು ಬಂದು ನನ್ನನ್ನು ಅದರಿಂದ ತಿರುಗಿಸಬೇಕು. ಅಖಂಡ ಭೂಮಂಡಲವನ್ನೆಲ್ಲ ನಾನು ನನ್ನ ಶೌರ್ಯದಿಂದ ಗೆದ್ದು ಪ್ರಜಾಜನರನ್ನು ಸರ್ವರೀತಿಯಿಂದಲೂ

ಸಂತೋಷಪಡಿಸಬೇಕು, ಅನೇಕ ಯುದ್ಧಗಳನ್ನು ಮಾಡಿ ಅಸಂಖ್ಯ ವೈರಿಗಳನ್ನು ಕೊಂದು ಕೊನೆಗೆ ನನಗಿಂತ ಬಲಿಷ್ಠರಿಂದ ರಣರಂಗದಲ್ಲಿ ಯುದ್ಧಮಾಡುತ್ತಲೇ ಮಡಿಯಬೇಕು'' ಹೀಗೆ ನಾಕು ವರಗಳನ್ನು ಕೇಳಿಕೊಂಡನು.

ಅದರಂತೆ ಆವನಿಗೆ ಯುದ್ಧಕ್ಕೆ ಹೊರಟಕೂಡಲೇ ಸಂಕಲ್ಪಮಾತ್ರದಿಂದಲೇ ಸಹಸ್ರಭುಜಗಳು ಚಿಗಿತು ನಿಲ್ಲುತ್ತಲಿದ್ದವು. ಅವನು ಸಪ್ತದ್ವೀಪವತಿಯಾದ ಸಮುದ್ರ ವಲಯಾಂಕಿತ ಭೂಮಂಡಲವನ್ನೆಲ್ಲ ವಶಪಡಿಸಿಕೊಂಡು ಆ ಏಳು ದ್ವೀಪಗಳಲ್ಲೆಲ್ಲ ಏಳೇಳುನೂರು ಯಜ್ಞಗಳನ್ನು ಮಾಡಿದನು. ಅವನ ಆ ಯಜ್ಞಗಳೆಲ್ಲ ಬಂಗಾರದ ವೇದಿಕೆ, ಸುವರ್ಣಯೂಪ, ಪ್ರಭೂತ ದಕ್ಷಿಣೆಗಳಿಂದ ಪ್ರೇಕ್ಷಣೀಯವಾದುದರಿಂದ ಅವುಗಳನ್ನು ನೋಡಲು ದೇವ ಗಂಧರ್ವರೆಲ್ಲ ಅಪ್ಸರೆಯರಿಂದೊಡಗೂಡಿ ವಿಮಾನಾರೂಢರಾಗಿ ಬರುತ್ತಲಿದ್ದರು. ಅವನ ಈ ಯಜ್ಞ, ಯಾಗ, ಹೋಮ, ಹವನಗಳ ಸಂಭ್ರಮದ ವೈಭವಗಳನ್ನು ಕಂಡು ಉಪಬರ್ಹಣನೆಂಬ ಗಂಧರ್ವನೂ ನಾರದರೂ ಕೂಡಿ ಅವನನ್ನು ಬಾಯಿತುಂಬ ಹಾಡಿ ಹೊಗಳಿದ್ದಾರೆ.

ಕಾರ್ತವೀರ್ಯನಂಥ ರಾಜನು ''ನ ಭೂತೋ ನ ಭವಿಷ್ಯತಿ'' ಯಜ್ಞ, ದಾನ, ತವಸ್ಸು, ಪರಾಕ್ರಮ ಮೊದಲಾದ ಯಾವ ಗುಣದಲ್ಲಿಯೂ ಅವನನ್ನು ಸರಿಗಟ್ಟುವ ರಾಜರು ಸಿಗುವುದು ಶಕ್ಯವಿಲ್ಲ. ತನ್ನ ಯೋಗಶಕ್ತಿಯಿಂದ ಒಮ್ಮೆಲೇ ಏಳು ದ್ವೀಪಗಳಲ್ಲಿಯೂ ಸರ್ವದಾ ಧನುರ್ಬಾಣಪಾಣಿಯಾಗಿ ಕಾಣಿಸಿಕೊಳ್ಳುತ್ತಾನೆ. ಆದ್ದರಿಂದ ಅವನ ರಾಜ್ಯದಲ್ಲಿ ತುಡುಗುಮಾಡುವಧೈರ್ಯವೇ ಯಾರಿಗೂ ಇಲ್ಲ. ಅಲ್ಲಿ ಎಂದಿಗೂ ಕಳವು ಆಗುವುದಿಲ್ಲ. ದುಃಖದರ್ಶನವಿಲ್ಲ. ರೋದನದ ದನಿ ಇಲ್ಲ. ಅಜ್ಞಾನದ ಸಂಪರ್ಕವಿಲ್ಲ. ಹೀಗೆ ಎಂಬತ್ತೈದು ಸಾವಿರ ವರುಷ ಚಕ್ರವರ್ತಿಯಾಗಿ ಅವನು ಆಳಿದನು. ಅವನು ತನ್ನ ಶಕ್ತಿಯಿಂದ ಮೋಡಗಳಲ್ಲಿ ನಿಂತು ಬೇಕಾದಷ್ಟು ಮಳೆಗಳೆಯುತ್ತಲಿದ್ದನು. ಮಾಹಿಷ್ಮತಿ ನಗರದಲ್ಲಿಯ ಕರ್ಕೋಟಕ ಎಂಬ ಹಾವುಗಳನ್ನು ಗೆದ್ದು ಅಲ್ಲಿ ಮನುಷ್ಯರ ವಸತಿಯನ್ನು ಕಲ್ಪಿಸಿದನು. ಅವನು ಲಂಕಾಧಿಪತಿಯಾದ ರಾವಣನನ್ನು ಐದು ಬಾಣಗಳಿಂದ ಸೇನಾ ಪರಿವಾರ ಸಹಿತವಾಗಿ ಸೋಲಿಸಿ, ಬಿಗಿದು ಕಟ್ಟಿ ಮಾಹಿಷ್ಮತಿಯಲ್ಲಿ ಕೈದಿಯನ್ನಾಗಿ ಇಟ್ಟಿದ್ದನು. ಆ ಸಮಾಚಾರವನ್ನು ತಿಳಿದು ಪುಲಸ್ತ್ಯ ಋಷಿಯು ಕಾರ್ತವೀರ್ಯಾರ್ಜುನನ ಹತ್ತಿರ ಬಂದು ತಮ್ಮ ಮೊಮ್ಮಗನನ್ನು ಬಿಡಲಿಕ್ಕೆ ಪ್ರಾರ್ಥಿಸಿ ಬಿಡಿಸಿಗೊಂಡು ಹೋದರು. ಒಂದು ದಿನ ಅಗ್ನಿಯು ಬಂದು ''ಹಸಿವೆ ಬಹಳ ಆಗಿದೆ. ಏನಾದರೂ ಭಿಕ್ಷೆ ಕೊಡು'' ಎಂದು ಕಾರ್ತವೀರ್ಯಾರ್ಜುನನನ್ನು ಕೇಳಿದನು. ಅದಕ್ಕೆ ಉದಾರ ಹೃದಯದ ಅವನು ಸಪ್ತ ದ್ವೀಪವತಿಯಾದ ಸಮಗ್ರ ಭೂಮಿಯನ್ನೇ ಭಿಕ್ಷೆಕೊಟ್ಟು ಬಿಟ್ಟನು. ಆದರಿಂದ ಪ್ರೋತ್ಸಾಹಿತ ನಾದ ಅಗ್ನಿಯು ಗಿಡಬಳ್ಳಿ ಬೆಟ್ಟ ಬಯಲುಗಳನ್ನೆಲ್ಲ ಕಬಳಿ ಸುತ್ತ ವರುಣಪುತ್ರನಾದ ಆಪವ ವಶಿಷ್ಠನ ಆಶ್ರಮವನ್ನೂ ಸುಟ್ಟು ಬಿಟ್ಟನು. ಅದರಿಂದ ಸಿಟ್ಟಿಗೆದ್ದ ಆ ವಶಿಷ್ಠಮುನಿಯು ''ಪರಶುರಾಮನೆಂಬ ಬ್ರಾಹ್ಮಣನು ಬಂದು ನಿನ್ನ ಈ ಸಾವಿರ ತೋಳುಗಳನ್ನು ಕತ್ತರಿಸಿ ನಿನ್ನನ್ನು ಸಂಹರಿಸಲಿ'' ಎಂದು ಶಾಪಕೊಟ್ಟನು. ಅದರಂತೆ ಪರಶುರಾಮನು ಕಾರ್ತವೀರ್ಯನ ತೋಳು ಗಳನ್ನು ಕತ್ತರಿಸಿ ಅವನೇ ಮೊದಲು ಬೇಡಿಕೊಂಡ ವರಾನುಸಾರವಾಗಿ ಸಂಹರಿಸಿದನು.

ರಾಮನ ಪರಶುಧಾರೆಗೆ ಕಾರ್ತವೀರ್ಯಾರ್ಜುನನ ತೊಂಬತ್ತಾರು ಜನ ಮಕ್ಕಳೆಲ್ಲ ತುತ್ತಾಗಿ ಶೂರಸೇನ, ಶೂರ, ಧೃಷ್ಟ, ಕೃಷ್ಣ, ಜಯಧ್ವಜ ಎಂಬ ಐದು ಜನ ಮಕ್ಕಳು ಮಾತ್ರ

ಉಳಿದರು. ಕೊನೆಯವನಾದ ಜಯಧ್ವಜನ ಮಗನಾದ ತಾಲ ಜಂಘನಿಂದ ಅದೇ ಹೆಸರಿನ ನೂರು ಜನ ಮಕ್ಕಳು ಹುಟ್ಟಿದರು. ಅವರ ವಂಶದಲ್ಲಿ ವೀತಿಹೋತ್ರರು, ಸುಜಾತರು, ಭೋಜರು ಅಮರ್ತ್ಯರು, ತೌಂಡಿಕೇರರು ಮುಂತಾದ ಅನೇಕ ಹೈಹಯ ಕುಲಶಾಖೆಗಳು ಪ್ರವೃತ್ತವಾದವು. ಇಲ್ಲಿಯವರೆಗೆ ಯದುಮಹಾರಾಜನ ಜ್ಯೇಷ್ಠ ಪುತ್ರನಾದ ಸಹಸ್ರದನ ಸಂತತಿಯ ಸಮಾಚಾರವನ್ನು ಹೇಳಿದಂತಾಯಿತು. ಇನ್ನು ಅವನ ಎರಡನೆಯ ಮಗನಾದ ಪಯೋದನ ಸಂತಾನಾಭಿವೃದ್ಧಿ ಕ್ರಮವನ್ನು ನಿರೂಪಿಸುತ್ತೇನೆ.

ಈ ಪಯೋದನಿಗೆ ವೃಷ ಎಂತಲೂ ಹೆಸರು. ಪುಣ್ಯಕರ್ಮಿಯಾದ ಈ ವೃಷನಿಗೆ ಮಧು ಎಂಬ ಮಗನಿದ್ದನು. ಮಧುನಿಗೆ ನೂರು ಜನ ಮಕ್ಕಳಾದರು. ಅವರಲ್ಲಿ ವೃಷಣನೊಬ್ಬನೇ ವಂಶವೃದ್ಧಿಯನ್ನು ಮಾಡಿದನು. ಈ ವೃಷಣನಿಂದ ಬೆಳೆದು ಬಂದುದರಿಂದ ವೃಷ್ಣಿಗಳೆಂದೂ ಮಧುವಿನ ಸಂತತಿಯವರಾದುದರಿಂದ ಮಾಧವರೆಂದೂ, ಯದು ಮೂಲಕರಾದುದರಿಂದ ಪುಣ್ಯಕರ್ಮಿಗಳಾದ ಈ ವಂಶದವರಿಗೆ ಯಾದವರೆಂದೂ ಹೆಸರಾಯಿತು.

ಯಯಾತಿ ಪುತ್ರರಾದ ಈ ಐದು ನೃಪೋತ್ತಂಸರ ವಂಶಾವಳೀ ಚಾರುಚಿತ್ರ ಚರಿತ್ರೆಗಳನ್ನು ಕೇಳಿದವರಿಗೆ ಐದುಜನ ಗಂಡುಮಕ್ಕಳಾಗುವವಲ್ಲದೇ ಆಯುಷ್ಯ ಕೀರ್ತಿ ಸಂತಾನ ಸಂಪತ್ತು ಹಾಗು ಭೂಮಿ ಈ ಪಂಚಫಲ ಪ್ರಾಪ್ತಿಯೂ ಆಗುವುದರಲ್ಲಿ ಸಂದೇಹವಿಲ್ಲ. ಇನ್ನು ಯದು ರಾಜನ ಮೂರನೆಯ ಮಗನಾದ ಕ್ರೋಷ್ಟುವಿನ ಸಂತಾನದ ವಿಸ್ತರಣದ ವಿಷಯವನ್ನು ವಿವರಿಸುವೆ.

ಕೋಷ್ಟುವಿಗೆ ಗಾಂಧಾರೀ ಮಾದ್ರಿ ಎಂಬ ಇಬ್ಬರು ಹೆಂಡಂದಿರಿದ್ದರು. ಗಾಂಧಾರಿಗೆ ಅನುಮಿತ್ರನೆಂಬ ಮಗನು ಹುಟ್ಟಿದರೆ ಮಾದ್ರಿಗೆ ಯುಧಾಜಿತ, ದೇವ ಮೀಢುಷ ಎಂಬ ಇಬ್ಬರು ಮಕ್ಕಳಾದರು. ಹೀಗೆ ವೃಷ್ಣಿಗಳ ವಂಶ ಈ ಮೂವರಿಂದ ವಿಶೇಷವಾಗಿ ಬೆಳೆಯಿತು. ಯುಧಾಜಿತನಿಗೆ ವೃಷಿ ಅಂಧಕ ಎಂಬ ಇಬ್ಬರು ಮಕ್ಕಳಾದರು. ವೃಷ್ಣಿಗೆ ಶ್ವಫಲ್ಕ, ಮತ್ತು ಚಿತ್ರಕ, ಎಂಬ ಇಬ್ಬರು ಮಕ್ಕಳಾದರು. ಅವರಲ್ಲಿಯೂ ಶ್ವಫಲ್ಕನು ಬಹಳ ಧರ್ಮಿಷ್ಠನಿದ್ದುದರಿಂದ ಅವನು ಇದ್ದಲ್ಲಿ ರೋಗರುಜಿನಗಳಾಗಲಿ ದುರ್ಭಿಕ್ಷ ದಾರಿದ್ರ್ಯಗಳಾಗಲಿ ಇರುತ್ತಿದ್ದಿಲ್ಲ.

ಹಿಂದಕ್ಕೊಮ್ಮೆ ಕಾಶೀರಾಜನ ರಾಜ್ಯದಲ್ಲಿ ಮೂರು ವರ್ಷಗಳವರೆಗೆ ಮಳೆಯೇ ಆಗಲಿಲ್ಲ. ಅದರಿಂದ ಭಯಂಕರವಾದ ಬರಗಾಲ ಬಿದ್ದು ಜನರೆಲ್ಲ ಹಾಹಾಕಾರ ಮಾಡತೊಡಗಿದರು. ಶ್ವಫಲ್ಕನ ಕಾಲ್ಗುಣವನ್ನು ಕೇಳಿ ತಿಳಿದ ಕಾಶೀರಾಜನು ಅತ್ಯಾದರದಿಂದ ಅವನನ್ನು ತನ್ನ ಊರಿಗೆ ಬರಮಾಡಿಕೊಂಡನು. ಶ್ವಫಲ್ಕನು ಊರಲ್ಲಿ ಕಾಲಿರಿಸುತ್ತಲೇ ಧಾರಾಕಾರವಾಗಿ ಮಳೆ ಸುರಿಯಹತ್ತಿತು. ಆಗ ಕಾಶೀರಾಜನು ಆನಂದ ಬಾಷ್ಪದೊಂದಿಗೆ ಅವನನ್ನು ಸಂಭ್ರಮದಿಂದ ತನ್ನ ಅರಮನೆಗೆ ಕರೆದೊಯ್ದು ಗೌರವಿಸಿದನು.

ಆ ಕಾಶಿ ರಾಜನಿಗೆ ಗಾಂದಿನೀ ಎಂಬ ಒಬ್ಬ ಮಗಳಿದ್ದಳು. ಅವಳು ತನ್ನ ತಾಯಿಯ ಗರ್ಭದಲ್ಲಿದ್ದಾಗ ನವಮಾಸ ಕಳೆದು ಎಷ್ಟೋ ವರುಷಗಳು ಉರುಳಿದರೂ ಗರ್ಭ ಕೋಶವನ್ನು ಬಿಟ್ಟು ಹೊರಗೇ ಬರಲಿಲ್ಲ. ಆಗ ತಂದೆಯು ಬಂದು "ಮಗಳೇ ಹೊರಗೆ ಬಾ. ಎಷ್ಟು ದಿನ ಗರ್ಭಗುಡಿಯಲ್ಲಿಯೇ ಕುಳಿತು ಕೊಳ್ಳುವಿ?" ಎಂದು ಕೇಳಲು ಹೊಟ್ಟೆಯಲ್ಲಿದ್ದ ಆ ಹೆಣ್ಣು ಕೂಸು "ಪೂಜ್ಯ ತಂದೆಯೇ! ನಾನು ಭೂಮಿಗೆ ಬಂದಬಳಿಕ ಪ್ರತಿದಿನ ಒಂದು ಆಕಳವನ್ನು ದಾನ ಮಾಡಬೇಕೆಂದು ಸಂಕಲ್ಪ ಮಾಡಿರುವೆನು. ಈ ನನ್ನ ಮನೋರಥವನ್ನು

ಪೂರೈಸಲಿಕ್ಕೆ ನೀನು ಸಿದ್ಧನಿದ್ದರೆ ನಾನು ಹೊರಬರುವೆನು'' ಎಂದು ಹೇಳಿತು. ಆಗ ಅವಳ ತಂದೆಯು ''ಹಾಗೇ ಆಗಲಿ. ನಿನ್ನ ಕಡೆಯಿಂದ ಪ್ರತಿದಿನ ಹಸುವನ್ನು ದಾನ ಕೊಡಿಸುವೆ. ಬೇಗ ಹುಟ್ಟಿ ಬಾ'' ಎಂದು ಕರೆಯಲು ಆ ಕೂಸು ಜನಿಸಿ ಬಂದಿತು. ಅವಳು ಹುಟ್ಟಿದಂದಿನಿಂದ ಕಾಶಿರಾಜನು ಅವಳಿಂದ ದಿನಾಲು ಒಂದೊಂದು ಗೋದಾನವನ್ನು ಹೇಳಿದಂತೆ ಮಾಡಿಸುತ್ತಲೇ ಇದ್ದನು. ಆದುದರಿಂದ ಅವಳಿಗೆ ಗಾಂದಿನೀ ಎಂಬ ಹೆಸರು ಬಂದಿತು. ಗಾಂದಿನಿಯನ್ನು ಕಾಶಿರಾಜನು ತನ್ನ ದೇಶಕ್ಕೆಲ್ಲ ನಿರಂತರ ಸುಭಿಕ್ಷವನ್ನು ತಂದ ಶ್ವಫಲ್ಕನಿಗೆ ಕೊಟ್ಟು ಮದುವೆ ಮಾಡಿದನು. ಶ್ವಫಲ್ಕನಿಗೆ ಆ ಗಾಂದಿನಿಯಿಂದ ಅಕ್ರೂರನೆಂಬ ಉದಾರ ಹೃದಯದ ಜ್ಞಾನಿ ಶ್ರೇಷ್ಠನಾದ ಯಾಗಿ ಯೋಗಿಯಾದ ಮಗನು ಜನಿಸಿದನು. ಇವನಲ್ಲದೆ ಶ್ವಫಲ್ಕ ದಂಪತಿಗಳಿಗೆ ಉಪಾಸಂಗ, ಮಧು, ಮೃದುರ, ಅರಿಮೇಜಯ, ಅರಿಕ್ಷಿಪ, ಉಪೇಕ್ಷ, ಶತ್ರುಘ್ನ, ಅರಿಮರ್ದನ, ಧರ್ಮಧೃಕ್, ಯತಿಧರ್ಮ, ಗೃಧ್ರಭೋಜ, ಅಂಧಕ, ಆಬಾಹು, ಪ್ರತಿಬಾಹು ಎಂದು ಮಕ್ಕಳು ಹುಟ್ಟಿದರು. ಮತ್ತು ವಸುಂಧರಾ ಎಂಬ ಅತ್ಯಂತ ರೂಪವತಿಯಾದ ಕನ್ನೆಯು ಜನಿಸಿದಳು. ಅವಳನ್ನು ಸಾಂಬನಿಗೆಕೊಟ್ಟು ಮದುವೆ ಮಾಡಿದ.

ಅಕ್ರೂರನಿಗೆ ಲಾವಣ್ಯೋದ್ಭಾಸಿನಿಯಾದ ಇನ್ನೊಬ್ಬ ಉಗ್ರಸೇನೆಯೆಂಬ ಕಾಂತೆಯಲ್ಲಿ ಪ್ರಸೇನ, ಉಪದೇವ ಎಂಬ ಇಬ್ಬರು ಮಕ್ಕಳು ಜನಿಸಿದರು.

ಶ್ವಫಲ್ಕನ ಸಹೋದರನಾದ ಚಿತ್ರಕನಿಗೆ ಪೃಥು, ವಿಪ್ರಥು, ಅಶ್ವಗ್ರೀವ, ಅಶ್ವಬಾಹು, ಸುಪಾರ್ಶ್ವಕ, ಗವೇಷಣ, ಅರಿಷ್ಟನೇಮಿ, ಅಶ್ವ, ಸುಧರ್ಮ, ಧರ್ಮಭೃತ್, ಸುಬಾಹು, ಬಹುಬಾಹು ಎಂಬ ಗಂಡು ಮಕ್ಕಳೂ ಶ್ರವಿಷ್ಠಾ, ಶ್ರವಣಾ ಎಂಬಿಬ್ಬರು ಹೆಣ್ಣುಮಕ್ಕಳೂ ಸಂಜಾತರಾದರು.

ಮಾದ್ರಿಯ ಮತ್ತೊಬ್ಬ ಮಗನಾದ ದೇವಮೀಢುಷನು ಅಶ್ಮಕೀ ಎಂಬ ಅಂಗನೆಯಲ್ಲಿ ಶೂರನೆಂಬ ಪುತ್ರನನ್ನು ಉತ್ಪಾದಿಸಿದನು. ಶೂರನಿಗೆ ಭೋಜ್ಯಾ ಎಂಬ ಪಟ್ಟದರಸಿಯಲ್ಲಿ ವಸುದೇವ ಮೊದಲಾದ ಹತ್ತು ಜನ ಪುತ್ರರು ಜನಿಸಿದರು. ಇವರಲ್ಲಿ ಜ್ಯೇಷ್ಠನಾದ ವಸುದೇವನು ಹುಟ್ಟಿದಕೂಡಲೇ ದೇವದುಂದುಭಿಗಳು ಮೊಳಗಿ ಪುಷ್ಪವೃಷ್ಟಿ ಯಾದದ್ದರಿಂದ ಇವನಿಗೆ ಆನಕದುಂದುಭಿಯೆಂದೂ ಕರೆಯುತ್ತಿದ್ದರು. ಚಂದಿರನಂತೆ ಸುಂದರನಾದ ಆ ಆನಕದುಂದುಭಿಯ ಚೆಲುವು ನಿಲುವುಗಳು ಇಡೀ ಮಾನವ ಕುಟುಂಬದಲ್ಲಿ ಯಾರಿಗೂ ಇರಲಿಲ್ಲ. ವಸುದೇವನ ಬೆನ್ನಮೇಲೆ ಶೂರನಿಗೆ ದೇವಭಾವ, ದೇವಶಿವ, ಅನಾಧೃಷ್ಟಿ, ಕನವಕ, ವತ್ಸವಾನ್, ಗೃಂಜಿಮ, ಶ್ಯಾಮ, ಶಮೀಕ, ಗಂಡೂಷ ಎಂಬ ಒಂಬತ್ತು ಜನ ಪುತ್ರರು ಪ್ರಸೂತರಾದರು. ಇದಲ್ಲದೇ ಪೃಥುಕೀರ್ತಿ ಪೃಥಾ ಶ್ರುತಶ್ರವಾ ಶ್ರುತದೇವಾ ರಾಜಾಧಿದೇವಿ ಎಂಬ ಐದುಜನ ಕನ್ಯಾಮಣಿಗಳು ಜನಿಸಿದರು. ಅವರಲ್ಲಿ ಪೃಥಾ ಎಂಬ ಕನ್ನೆಯನ್ನು ಕಂಡು ಕುಂತೀಭೋಜನು ''ಇವಳು ನನ್ನ ಮಗಳು'' ಎನ್ನಲು ಶೂರನೂ ಹಿರಿಯನೂ ಪೂಜ್ಯನೂ ಆದ ಅವನಿಗೆ ಆ ಹುಡುಗಿಯನ್ನು ಶೂರನು ಕೊಟ್ಟು ಬಿಟ್ಟನು.

ಆದುದರಿಂದ ಅವಳು ಕುಂತೀ ಎಂಬ ಹೆಸರಿನಿಂದ ಖ್ಯಾತಳಾದಳು. ಕುಂತಿಯ ತಂಗಿಯಾದ ಶ್ರುತದೇವಾಳಿಗೆ ಅಂತ್ಯ ಎಂಬ ಪತಿಯಿಂದ ಜಗ್ಗಹು ಎಂಬ ಪುತ್ರನು ಉತ್ಪನ್ನನಾದನು. ಶ್ರುತಶ್ರವೆಯನ್ನು ಚೇದಿರಾಜನಾದ ದಮಘೋಷನಿಗೆ ಕೊಟ್ಟಿತ್ತು. ಅವಳಿಗೆ ದಮಘೋಷನಿಂದ ಶಿಶುಪಾಲನೆಂಬ ಮಹಾಬಲಿಷ್ಠನಾದ ಮಗನು ಹುಟ್ಟಿದನು. ಈ ಶಿಶುಪಾಲನೇ ಹಿಂದಿನ ಜನ್ಮದಲ್ಲಿ ಹಿರಣ್ಯಕಶಿಪುವಾಗಿ ಹುಟ್ಟಿದ್ದನು. ಪೃಥುಕೀರ್ತಿಯನ್ನು ವೃದ್ಧಶರ್ಮನಿಗೆ ಮದುವೆಮಾಡಿ ಕೊಡಲಾಗಿತ್ತು. ಅವಳಿಗೆ ಆ ವೃದ್ಧ ಶರ್ಮನಿಂದ ಕರೂಷ ದೇಶಾಧಿಪತಿಯೂ ಮಹಾಬಲಿಷ್ಠನೂ ಆದ ದಂತವಕ್ತ್ರನು ಜನಿಸಿದನು.

ಕುಂತಿಭೋಜನು ಮಗಳೆಂದು ಸ್ವೀಕರಿಸಿದ್ದರಿಂದ ಕುಂತಿಯೆಂದು ಪ್ರಥಿತಳಾದ ಪೃಥೆಯನ್ನು ಕುರುವಂಶ ಪ್ರದೀಪನಾದ ಪಾಂಡುರಾಜನು ಪಾಣಿಗ್ರಹಣ ಮಾಡಿದನು. ಅವಳಿಗೆ ಯಮಧರ್ಮನಿಂದ ಧರ್ಮರಾಜನೂ ವಾಯುದೇವರಿಂದ ಭೀಮಸೇನನೂ ದೇವೇಂದ್ರನಿಂದ ಅರ್ಜುನನೂ ಹುಟ್ಟಿದರು. ಇವರೆಲ್ಲರೂ ಅಪ್ರತಿಮ ಪ್ರತಾಪ ಶಾಲಿಗಳಾಗಿ ಇಂದ್ರಸಮಾನ ವೀರ್ಯ ಧೈರ್ಯೋಪಪನ್ನರೆಂದು ಮಹೀ ಮಂಡಲದಲ್ಲಿ ಚಿರಂತನ ಕೀರ್ತಿ ಕೌಮುದಿಯಿಂದ ಕಂಗೊಳಿಸಿದರು.

ವೃಷ್ಣಿಯ ಕೊನೆಯ ಮಗನಾದ ಅನಮಿತ್ರನಿಂದ ಶಿನಿಯೆಂಬವನು ಜಾತನಾದನು. ಶಿನಿಯಿಂದ ಸತ್ಯಕ, ಸತ್ಯಕನಿಗೆ ಸಾತ್ಯಕಿ ಯುಯುಧಾನ ಎಂಬಿಬ್ಬರು ಸುತರು. ಯುಯುಧಾನನಿಗೆ ಅಸಂಗ, ಅಸಂಗನಿಗೆ ಭೂಮಿ, ಭೂಮಿಯಿಂದ ಯುಗಧರ, ಯುಗಂಧರನಿಗೆ ಈ ವಂಶವು ನಿಂತಿತು.

ವಸುದೇವನು ತಮ್ಮನಾದ ದೇವಭಾಗನಿಂದ ಭಕ್ತಾಗ್ರೇಸರನಾದ ಉದ್ಧವನು ಜನಿಸಿದನು. ಇವನು ಮಹಾ ಪಂಡಿತನೂ ಮಹಾನುಭಾವನೂ ಇದ್ದು ದೇವಸಮಾನವಾದ ಕೀರ್ತಿಶಾಲಿಯಾದುದರಿಂದ ದೇವಶ್ರವಾ ಎಂದೂ ಹೆಸರಾದನು. ಅನಾಧೃಷ್ಟಿಯು ಅಶ್ಮಕಿಯಲ್ಲಿ ನಿವೃತ್ತಶತ್ರು ಎಂಬ ತನಯನನ್ನು ಪಡೆದನು. ದೇವಶ್ರವನೆಂಬ ವಸುದೇವನ ಮೂರನೆಯ ಸೋದರನಿಗೆ ಶತ್ರುಘ್ನನೆಂಬ ಕುಮಾರನು ಪ್ರಸೂತನಾದನು. ಯಾವದೋ ಒಂದು ಕಾರಣಕ್ಕಾಗಿ ಈ ಮಗನನ್ನು ಹುಟ್ಟಿದ ಕೂಡಲೇ ದೇವಶ್ರವನು ಬಿಟ್ಟು ಬಿಟ್ಟದ್ದರಿಂದ ಅವನು ಅಡವಿಯಲ್ಲಿ ಭಿಲ್ಲರಿಂದ ಪರಿಪೋಷಿತನಾಗಿ ಏಕಲವ್ಯನೆಂದು ನಿಷಾದ ಜಾತಿಯಲ್ಲಿ ಹೆಸರಾದನು. ವತ್ಸಾವತನೆಂಬ ತನ್ನ ತಮ್ಮನಿಗೆ ಸಂತತಿಯಿಲ್ಲದ್ದರಿಂದ ವಸುದೇವನೇ ತನ್ನ ಮಗನಾದ ಕೌಶಿಕನನ್ನು ದತ್ತಕ ಕೊಟ್ಟನು.

ವಸುದೇವನ ಇನ್ನೊಬ್ಬ ತಮ್ಮನಿಗೂ ಸಂತಾನವಿಲ್ಲದ್ದರಿಂದ ಸ್ವತಃ ಶ್ರೀಕೃಷ್ಣನೇ ತನ್ನ ಚಾರುದೇಷ್ಣ, ಸಂಚಾಲ, ಪಂಚಾಲ, ಕೃತಲಕ್ಷಣ ಎಂಬನಾಕು ಮಕ್ಕಳನ್ನು ದತ್ತಕೊಟ್ಟನು. ರುಕ್ಮಿಣೀದೇವಿಯ ಕಡೆ ಹುಟ್ಟಿ ಮಗನಾದ ಚಾರುದೇಷ್ಣನು ಒಳ್ಳೇ ವಿಕ್ರಮಶಾಲಿಯಿದ್ದು ಸಂಗ್ರಾಮಾಂಗಣದಲ್ಲಿ ವೈರಿವೃಂದವನ್ನೆಲ್ಲ ನಿಶ್ಚಿತವಾಗಿಯೂ ಕೊಂದು ಹಾಕುತ್ತಿದ್ದ. ಅದರಿಂದ ತಮಗೆ ಅಲ್ಲಿ ಮೃಷ್ಟಾನ್ನ ದೊರೆಯುವುದೆಂದು ಅವನು ಯುದ್ಧಕ್ಕೆ ಹೊರಟ ಕೂಡಲೇ ಹದ್ದು ಕಾಗೆಗಳು ಗುಂಪು ಗಟ್ಟಿ ಬೆನ್ನು ಹತ್ತುತ್ತಿದ್ದವಂತೆ.

ಕನವಕನೆಂಬ ಕೃಷ್ಣನ ಕಕ್ಕನಿಗೆ ತಂದ್ರಿಜ ತಂದ್ರಿಪಾಲ ಎಂಬ ಪುತ್ರರೂ ಅವಗ್ರಂಜಿಮನೆಂಬ ಮತ್ತೊಬ್ಬ ಕಕ್ಕನಿಗೆ ವೀರ ಅಶ್ವಹನು ಎಂಬ ತನುಜರೂ ಜನಿಸಿದರು. ಶ್ಯಾಮನೆಂಬ ಮಗದೊಬ್ಬ ಕೃಷ್ಣನ ಪಿತೃವ್ಯನಿಗೆ ಸಂತತಿ ಇಲ್ಲದ್ದರಿಂದ ಅವನು ತನ್ನ ತಮ್ಮನಾದ ಶಮೀಕನನ್ನೇ ತನ್ನ ಮಗನನ್ನಾಗಿ ಮಾಡಿಕೊಂಡನು. ಶಮೀಕನಿಗೆ ಯಾದವ ವಂಶದವರ ಪ್ರಾದೇಶ ಮಾತ್ರವಾದ ಪರಿಮಿತ ರಾಜ್ಯವನ್ನು ಕಂಡು ಅವಮಾನವೆನಿಸಿತು. ತಾನು ಮಹಾರಾಜ ಗೌರವವನ್ನು ಪಡೆಯಬೇಕೆಂದು ಧರ್ಮರಾಜನ ಸಹಾಯದಿಂದ ರಾಜಸೂಯ ಯಾಗವನ್ನು ಮಾಡಿ ಸರ್ವಶತ್ರುಗಳನ್ನೂ ಭೀಮಾರ್ಜುನಾದಿ ಪಂಚಪಾಂಡವರ ಬೆಂಬಲದಿಂದ ಸಂಹರಿಸಿ ಸಾರ್ವಭೌಮನಾದನು.

ಶ್ರೀಕೃಷ್ಣನ ಜನಕನಾದ ವಸುದೇವನಿಗೆ ರೋಹಿಣೀ, ಇಂದಿರಾ, ವೈಶಾಖೀ, ಭದ್ರಾ, ಸುನಾಮ್ನೀ, ಸಹದೇವಾ, ಶಾಂತಿದೇವಾ, ಶ್ರೀದೇವಾ, ದೇವರಕ್ಷಿತಾ, ವೃಕದೇವೀ ಉಪದೇವೀ

ಮತ್ತು ದೇವಕೀ ಎಂಬ ಹನ್ನೆರಡು ಜನ ಅನಿಂದ್ಯ ಸೌಂದರ್ಯ ಶಾಲಿನಿಯರಾದ ಧರ್ಮ ಪತ್ನಿಯರೂ, ಸುತನು ವಡವಾಯುರಾ ಎಂಬಿಬ್ಬರು ಭೋಗ ಪತ್ನಿಯರೂ ಇದ್ದರು. ಅದರಲ್ಲಿ ಮೊದಲನೆಯವರು ಪುರುಕಲೋದ್ಭವರಿದ್ದು ರೋಹಿಣಿಯು ಬಾಲ್ಹೀಕನ ತನುಜಾತಳಾಗಿದ್ದಳು. ದೇವಕೀ ಮೊದಲಾದ ಕೊನೆಯ ಏಳು ಜನರು ದೇವಕನ ಮಕ್ಕಳು.

ವಸುದೇವನ ಜ್ಯೇಷ್ಠಪತ್ನಿಯೂ ಮೆಚ್ಚಿನ ಮಡದಿಯೂ ಆದ ರೋಹಿಣಿಗೆ ಬಲರಾಮನೆಂಬ ಚೊಚ್ಚಿಲು ಮಗನಿದ್ದನು. ರಾಮನ ನಂತರ ರೋಹಿಣಿಗೆ ಸಾರಣ. ಶಠ, ದುರ್ದಮ, ದಮನ, ಶ್ವಭ್ರ, ಪಿಂಡಾರಕ, ಉಶೀನರ ಎಂಬ ಗಂಡು ಮಕ್ಕಳೂ ಚಿತ್ರಾ ಎಂಬ ಹೆಣ್ಣುಮಗಳೂ ಹುಟ್ಟಿದರು. ಈ ಚಿತ್ರೆಯೇ ಸುಭದ್ರಾ ಎಂದು ಪ್ರಖ್ಯಾತಳಾದಳು.

ಆ ವಸುದೇವನಿಂದ ದೇವಕಿಯಲ್ಲಿ ಪರಬ್ರಹ್ಮವೇ ಕೃಷ್ಣರೂಪದಿಂದ ಪ್ರಾದುರ್ಭೂತವಾಯಿತು. ಬಲರಾಮನಿಗೆ ರೇವತಿಯಿಂದ ನಿಶಠನೆಂಬ ತನಯನು ಜನಿತನಾದನು. ಸುಭದ್ರೆಗೆ ಧನಂಜಯನಿಂದ ಅಸಾಮಾನ್ಯ ಪರಾಕ್ರಮಿಯಾದ ಅಭಿಮನ್ಯುವೆಂಬ ಸುತನಾದನು. ಅಕ್ರೂರನಿಗೆ ಕಾಶೀರಾಜನ ಕನ್ಯೆಯಲ್ಲಿ ಸತ್ಯಕೇತುವೆಂಬ ಪುತ್ರನು ಉತ್ಪನ್ನನಾದನು. ವಸುದೇವನಿಗೆ ಶಾಂತಿದೇವಾ ಎಂಬ ಭಾರ್ಯೆಯಿಂದ ಭೋಜ, ವಿಜಯ ಎಂಬಿಬ್ಬರು ಮಕ್ಕಳು ಹುಟ್ಟಿದರು. ಸುನಾಮಾ, ಎಂಬವಳಿಗೆ ವೃಕದೇವ ಗದ ಎಂಬ ಪುತ್ರರಾದರು. ತ್ರಿಗರ್ತರಾಜಕುಮಾರಿ ವೃಕದೇವಿ ಎಂಬ ವಸುದೇವ ಭಾರ್ಯೆಗೆ ಅಗಾವಹನೆಂಬ ಮಹಾತ್ಮನಾದ ಮಗನು ಹುಟ್ಟಿದನು. ದೇವರಕ್ಷಿತೆಯಿಂದ ಉಪಾಸಂಗವರ ಎಂಬ ವಸುದೇವ ಪುತ್ರ ಜನಿಸಿದ.

## ರಾಜರು ಋಷಿಯಾಗುವ ಬಗೆಯನ್ನು ಕಂಡುಹಿಡದ ಶಶಿಬಿಂದು

ಯದುಪುತ್ರನಾದ ಕ್ರೋಷ್ಟುವಿಗೆ ವ್ರಜನೀವಾನ್ ಎಂಬ ಮಗನಿದ್ದನು. ಅವನಿಗೆ ಸ್ವಾಹಾಕಾರ ಮಾಡುವುದರಲ್ಲಿ ಕುಶಲನಾದ ಸ್ವಾಹಿ ಎಂಬ ಸುತನು ಸಂಭೂತನಾದನು. ಸ್ವಾಹಿಗೆ ಉತ್ತಮ ವಕ್ತೃತ್ವಶಕ್ತಿಯುಳ್ಳ ರುಷದ್ಗು ಎಂಬ ಪುತ್ರನು ಪ್ರಜಾತನಾದನು. ಈ ರುಷದ್ಗುವು ತನಗೆ ಸತ್ಸಂತಾನಕರನಾದ ಮಗನು ಜನಿಸಬೇಕೆಂದು ವಿಪುಲ ದಾನ ಭೂರಿ ದಕ್ಷಿಣೆಗಳನ್ನು ಕೊಟ್ಟು ಅನೇಕ ಯಜ್ಞಯಾಗಾದಿಗಳನ್ನು ಆಚರಿಸಿದನು. ಅದರಿಂದ ಅವನಿಗೆ ಚಿತ್ರರಥನೆಂಬ ಕರ್ಮಠನಾದ ಪುತ್ರನು ಜನಿಸಿದನು. ಅವನ ಮಗನಾದ ಶಶಿಬಿಂದುವಾದರೂ ಬಹಳ ಉದಾರನಿದ್ದು ಅವನ ರೀತಿನೀತಿ ನ್ಯಾಯಮಾರ್ಗಗಳನ್ನು ಅನುಸರಿಸಿ ಅನೇಕ ರಾಜರು ರಾಜರ್ಷಿಪದವಿಯನ್ನು ಪಡೆದರು.

ಶಶಿಬಿಂದುವಿಗೆ ದಿಗಂತ ವಿಶ್ರಾಂತ ವಿಶಮಗದಯಶೋಭಾಸುರನಾದ ಪೃಥುಶ್ರವನೆಂಬ ಹುಟ್ಟಿದನು. ಪುರಾಣವಾಙ್ಮಯದಲ್ಲಿ ಪ್ರವೀಣರಾದ ಪಂಡಿತರು ಇವನಿಗೆ ಉತ್ತರ ಎಂದೂ ಕರೆಯುವರು. ಆ ಉತ್ತರನಿಗೆ ಸುಯಜ್ಞ, ಸುಯಜ್ಞನಿಗೆ ಉಶತ, ಉಶತನಿಗೆ ಶಿನೇಯು, ಶಿನೇಯುನಿಗೆ ಮರುತ್ತನೆಂಬ ಋಷಿಕಲ್ಪನಾದ ಮಗನೂ ಆದರು. ಭೂಮಿಯಲ್ಲಿ ಮಾಡಿದ ಸತ್ಕರ್ಮ ದಾನ ಧರ್ಮ ದಕ್ಷಿಣಾದಿಗಳಿಗೆಲ್ಲ ಸತ್ತಮೇಲೆಯೇ ಫಲ ಎಂಬ ಮಾತನ್ನು ಕೇಳಿ ಸಿಟ್ಟಿನಿಂದ ಇದ್ದಾಗಲೂ ತಾನು ಮಾಡಿದ ಪುಣ್ಯಕರ್ಮಗಳ ಕಿಂಚಿತ್ ಫಲವನ್ನಾದರೂ ಇದೇ ಜನ್ಮದಲ್ಲಿ ಇದೇ ಲೋಕದಲ್ಲಿ ಪಡೆಯಬೇಕೆಂದು ಹವ್ಯಾಸದಿಂದ ಅವನು ಲೆಕ್ಕವಿಲ್ಲದಷ್ಟು ಧರ್ಮಕರ್ಮಗಳನ್ನು ಆಚರಿಸಿದನು. ಅದರಿಂದ ಅವನಿಗೆ ಕಂಬಲಬರ್ಹಿಷ ಎಂಬ ಪುತ್ರನು ಹುಟ್ಟಿದನು. ಕಂಬಲ ಬರ್ಹಿಷನಿಗೆ ಸುತನ ಪ್ರಸೂತಿಯಾಗಬೇಕೆಂದು ಅಪೇಕ್ಷೆಯಂತೆ ಅವನಿಗೆ

ಸುತಪ್ರಸೂತಿ ಎಂತಲೇ ಒಬ್ಬ ಮಗನಾದನು. ಆ ಸುತಪ್ರಸೂತಿಗೆ ಕವಚಧನುರ್ಧಾರಿಗಳಾದ ನೂರಾರು ಶೂರ ವೈರಿರಾಜರನ್ನೆಲ್ಲ ಸೋಲಿಸಿ ಸಂಹರಿಸತಕ್ಕ ರುಕ್ಮಕವಚನೆಂಬ ಸುತನು ಪ್ರಸೂತ ನಾದನು. ಆ ರುಕ್ಮಕವಚನಿಗೆ ಪರಾಜಿತ್ ಎಂಬ ಮಗನಾದನು. ಆ ಪರಾಜಿತ್‌ನಿಗೆ ರುಕ್ಮೇಷು ಪೃಥುರುಕ್ಮ ಜ್ಯಾಮಘ ಪಲಿತ ಹರಿ ಎಂಬ ಐದು ಜನ ಮಕ್ಕಳು ಜನಿಸಿದರು. ಇವರಲ್ಲಿ ಪಲಿತ ಹರಿ ಈ ಇಬ್ಬರನ್ನು ವಿದೇಹ ರಾಜ್ಯರಕ್ಷಣೆಗಾಗಿ ವಿದೇಹಾಧಿಪತಿಗೇ ಅವರ ತಂದೆಯು ಇತ್ತನು. ಆಪರಾಜಿತನ ರಾಜ್ಯಕ್ಕೆ ರುಕ್ಮೇಷುವು ರಾಜನಾದನು.

ರುಕ್ಮೇಷುವು ರಾಜನಾದ ಬಳಿಕ ಪೃಥುರುಕ್ಮನೊಂದಿಗೆ ದುರಾಲೋಚನೆಯನ್ನು ಮಾಡಿ ಕುತಂತ್ರದಿಂದ ತಮ್ಮ ಮೂರನೆಯ ತಮ್ಮನಾದ ಜ್ಯಾಮಘನಿಗೆ ಏನೂ ದಾಯದಿಭಾಗವನ್ನು ಕೊಡದೇ ದೇಶಬಿಟ್ಟು ಹೊರಗೆ ಹಾಕಿದರು. ಅತ್ಯಂತ ಶಾಂತ ಸ್ವಭಾವದವನೂ ಉದಾರ ಹೃದಯಿಯೂ ಆದ ಆ ಜ್ಯಾಮಘನು ತನ್ನನ್ನು ಹೊರಗೆ ಹಾಕಿದ ಅಣ್ಣಂದಿರ ವಿರುದ್ಧ ಚಕಾರ ಶಬ್ದವನ್ನೂ ಎತ್ತದೆ ವನಾಂತರದ ಏಕಾಂತದಲ್ಲಿ ಗುಡಿಸಲನ್ನು ಕಟ್ಟಿಕೊಂಡು ಇದ್ದುಬಿಟ್ಟನು. ಆದರೆ ಅರಣ್ಯೌಕಸರಾದ ತಪಸ್ವೀ ಬ್ರಾಹ್ಮಣ ಅವನಿಗೆ ಕ್ಷತ್ರಧರ್ಮದ ವೀರವೃತ್ತಿಯನ್ನು ಬೋಧಿಸಿ ಬಿಂಬಿಸಿ ಅವನ ವಿಕ್ರಮರಸಕ್ಕೆ ಆವಾಹನೆಯನ್ನಿತ್ತರು. ಬ್ರಹ್ಮವೃಂದದ ಧರ್ಮೋಪದೇಶದಿಂದ ಉತ್ತೇಜಿತನಾದ ಆ ರಾಜಕುಮಾರನು ರಥಾರೂಢನಾಗಿ ದಿಗ್ವಿಜಯಕ್ಕೆ ಹೊರಟು ಸುದೂರ ಪ್ರಾಂತವಾದ ನರ್ಮದಾ ತೀರ ಪರಿಸರದ ಪ್ರದೇಶವನ್ನೆಲ್ಲ ಗೆದ್ದುಕೊಂಡನು. ಆದರ ರಾಜಧಾನಿಯಾದ ಮೃತ್ತಿಕಾವತಿ ಎಂಬ ನಗರವನ್ನು ವಶಪಡಿಸಿ ಋಕ್ಷವಂಶ ಪರ್ವತ ಶೈಲ ಶ್ರೇಣಿಗಳನ್ನೆಲ್ಲ ಸ್ವಾಧೀನ ಮಾಡಿಕೊಂಡು ಶುಕ್ತಿಮತಿ ಎಂಬ ಪಟ್ಟಣವನ್ನು ತನ್ನ ರಾಜಧಾನಿಯನ್ನಾಗಿರಿಸಿ ಅಲ್ಲಿ ವಾಸಮಾಡಹತ್ತಿದನು. ಇವನಿಗೆ ಶೈಬ್ಯಾ ಎಂಬ ಪತ್ನಿ ಇದ್ದಳು. ಇವಳು ಪತಿವ್ರತೆಯಾದರೂ ಪ್ರಬಲಳಿದ್ದು ಸ್ವಾಭಿಮಾನಿನಿಯಾದ ಮಾನಿನಿಯಾಗಿದ್ದಳು. ಇವಳಿಗೆ ಮಕ್ಕಳಾಗಲಿಲ್ಲ. ಆದರೂ ರಾಣಿಯ ಭಯದಿಂದ ರಾಜನಿಗೆ ಬೇರೆ ಹೆಂಡತಿಯನ್ನು ಮದುವೆಯಾಗುವ ಧೈರ್ಯವಾಗಲಿಲ್ಲ.

ಒಮ್ಮೆ ಅವನು ದೂರದೇಶಕ್ಕೆ ದಿಗ್ವಿಜಯಕ್ಕೆ ಹೋದಾಗ ಯುದ್ಧ ಕೈದಿಗಳಲ್ಲಿ ಸ್ಫುರ ದ್ರೂಪಿಣಿಯಾದ ಓರ್ವ ಕನ್ನೆಯಿದ್ದಳು. ಆ ಹುಡುಗಿಯನ್ನು ಕರೆದುಕೊಂಡು ರಾಜನು ಮನೆಗೆ ಮರಳಿದಾಗ ಕೆರಳಿದ ಕೇಸರಿಣಿಯಂತೆ ಪೂತ್ಕರಿಸಿ ಶೈಬ್ಯೆ ಇವಳಾರೆಂದು ಕೇಳಿದಳು. ಅವಳ ಕೆಂಗಣ್ಣಿನ ಅಬ್ಬರದ ನುಡಿಕಿಡಿಗಳಿಗೆ ಬೆದರಿ ಬೆಮ್ಮನೆ ಬೆವತು ಹೋದ ಮಹಾರಾಜ ನಾಲಿಗೆ ಯನ್ನು ಸವರಾಡುತ್ತ ''ನಿನ್ನ ಸೊಸೆ'' ಎಂದು ಅಂಜುತ್ತ ಅಳಕುತ್ತ ನುಡಿದನು. ''ಇವಳನ್ನು ಯಾರ ಕೊರಳಿಗೆ ಕಟ್ಟಬೇಕೆಂದು ತಂದಿರುವಿರಿ'' ಎಂದು ಪೂತ್ಕರಿಸಿ ಮರು ಪ್ರಶ್ನೆ ಕೇಳಿದಾಗ ಜ್ಯಾಮಘನಿಗೆ ತಬ್ಬಿಬ್ಬಾಗಿ ಏನು ಹೇಳಬೇಕೋ ತಿಳಿಯದೆ ''ನಿನಗೆ ಮುಂದೆ ಹುಟ್ಟಲಿರುವ ಮಗನಿಗಾಗಿ ಹೆಂಡತಿಯಿರಲಿ ಎಂದು ತಂದಿದ್ದೇನೆ'' ಎಂದು ಏನೋ ಹೇಳಿ ಪಾರಾದನು.

ಆದರೆ ಇದರಿಂದ ಆ ಹುಡುಗಿಯ ಮನಸ್ಸಿನ ಮೇಲೆ ಒಂದು ಬೇರೆಯೇ ಪರಿಣಾಮ ವಾಯಿತು. ಈ ಗಂಡಹೆಂಡಂದಿರ ವಿರಸಾಲಾಪ ಅವಳ ಹೃದಯದಾಳವನ್ನು ತಳದಿಂದಲೇ ಕದಡಿ ಮುಗ್ಧಭಾವಗಳನ್ನೆಲ್ಲ ಕಲಕಿ ಬಿಟ್ಟಿತ್ತು. ಅಂದಿನಿಂದ ಉಪದಾನವೀ ಎಂಬ ಆ ಹುಡುಗಿಯು ದೇವರನ್ನು ಕುರಿತು ಏಕಾಗ್ರ ಮನಸ್ಸಿನಿಂದ ಅತ್ಯುಗ್ರವಾದ ತಪವನಾಚರಿಸಿದಳು. ಅವಳ ನಿಷ್ಕಲ್ಮಷ ಭಾವದ ನಿಶ್ಚಲವಾದ ತಪೋನುಷ್ಠಾನದ ಪ್ರಭಾವದಿಂದ ಮುಪ್ಪಡರಿ ತಲೆ ನಡುಗುವ ಮಹಾರಾಣಿ ಶೈಬ್ಯೆಗೆ ತಾರುಣ್ಯ ಬಂದು ಅವಳು

ಗರ್ಭಿಣಿಯಾದಳು. ಮತ್ತು ಯುದ್ಧಕೈದಿನಿಯಾದ ಆ ಕನ್ಯೆಯ ಪುಣ್ಯದಿಂದ ವಿದರ್ಭನೆಂಬ ತೇಜೋಭಿಮಂಡಿತನಾದ ಸುಂದರ ರಾಜಕುಮಾರನನ್ನು ಹೆತ್ತಳು. ಉಪದಾನವಿಯು ತನ್ನ ತಪಃಫಲದಂತಿರುವ ಆ ವಿದರ್ಭರಾಜತನಯನನ್ನು ಆನಂದದಿಂದ ಮದುವೆಯಾದಳು.

ಆ ವಿದರ್ಭನಿಗೆ ಅವಳಲ್ಲಿ ರಣಧೀರರಾದ ಕ್ರಥ, ಕೈಶಿಕ, ಲೋಮಪಾದ ಎಂಬ ಮೂರು ಜನ ಮಕ್ಕಳು ಜನಿಸಿದರು. ಲೋಮಪಾದನಿಗೆ ಬಭ್ರು, ಬಭ್ರುವಿಗೆ ಆವೃತಿ, ಆವೃತಿಯಿಂದ ಪಂಡಿತ ಪ್ರವರನಾದ ಕೌಶಿಕ, ಕೌಶಿಕನಿಗೆ ಚೇದಿ, ಎಂಬ ರಾಜಕುಮಾರರು ಹುಟ್ಟಿದರು. ಈ ಚೇದಿರಾಜನಿಂದಲೇ ಮುಂದಿನವರೆಲ್ಲ ಚೈದ್ಯರೆಂದು ಪ್ರಥಿತರಾದರು. ಶೈಬ್ಯಾಪುತ್ರನಾದ ವಿದರ್ಭನಿಗೆ ಭೀಮನೆಂಬ ಇನ್ನೊಬ್ಬ ಮಗನಿದ್ದನು. ಆ ಭೀಮ ನಿಂದ ಕುಂತಿ, ಕುಂತಿಗೆ ಧೃಷ್ಟ ಧೃಷ್ಟನಿಗೆ ಧೀರರೂ ಧಾರ್ಮಿಕರೂ ಆದ ಆವಂತ, ದಶಾರ್ಹ, ವಿಷಹರ ಎಂಬ ಮೂವರು ಮಕ್ಕಳಾದರು. ದಶಾರ್ಹನಿಂದ ಮುಂದೆ ಪಿತಾಪುತ್ರ ಕ್ರಮದಿಂದ ವ್ಯೋಮ, ಜೀಮೂತ, ಬೃಹತಿ, ಭೀಮರಥ, ನವರಥ, ದಶರಥ, ಶಕುನಿ, ಕರಂಭ, ದೇವರಾತ, ದೇವಕ್ಷತ್ರ ಮೊದಲಾದ ರಾಜರಾದರು. ದೇವಕ್ಷತ್ರನಿಗೆ ಮಧವಂಶಕ್ಕೆ ಮೂಲ ಪುರುಷನೂ ಮಧುಮಧುರ ಭಾಷಿಯೂ ಸುರಸಮಾನನೂ ಆದ ಮಧು ಎಂಬ ಮಗನು ಹುಟ್ಟಿದನು. ಮಧುವಿಗೆ ವೈದರ್ಭಿ ಎಂಬ ವನಿತೆಯಿಂದ ಮರುವಸನೆಂಬ ಪುತ್ರನು ಜನಿಸಿದನು. ಮರವಸನ ಮಗನಾದ ಪುರದ್ವಾನರಿಗೆ ಭದ್ರವತೀ ಎಂಬ ಎರಡನೆಯ ಹೆಂಡತಿಯಿಂದ ಮತ್ತೊಬ್ಬ ಮಧು ಎಂಬ ಮಗನೂ ಜನಿಸಿದರು. ಈ ಸತ್ವಾನ್‌ನ ವಂಶಜರೇ ಮುಂದೆ ಸಾತ್ವತರೆಂದು ಸುಪ್ರಸಿದ್ಧರಾದರು. ಇಲ್ಲಿಯವರೆಗೆ ಜ್ಯಾಮಘನ ಸಂತತಿಯ ವಿಸ್ತೃತಿಯ ಬಗೆಗೆ ಹೇಳಿದಂತಾಯಿತು.

ಸತ್ವಗುಣ ಸಂಪನ್ನನಾದ ಸಾತ್ವತನಿಗೆ ಕೌಶಲ್ಯಾ ಎಂಬ ಹೆಂಡತಿಯಿದ್ದಳು. ಅವರಿಗೆ ಭಜಿ, ಭಜಮಾನ, ದೇವಾವೃಧ, ಅಂಧಕ, ವೃಷ್ಣಿ ಎಂಬ ಸತ್ಪುತ್ರರು ಉತ್ಪನ್ನರಾದರು. ಅವರಲ್ಲಿ ಭಜಮಾನನಿಗೆ ಬಾಹ್ಯಕಾ, ಉಪಬಾಹ್ಯಕಾ ಎಂಬ ಸೃಂಜಯ ಕನ್ಯೆಯರಿಂದ ಅನೇಕ ಮಕ್ಕಳಾದರು. ಅವರಲ್ಲಿ ಬಾಹ್ಯಕೆಯಿಂದ ಕೃಮಿ, ಕ್ರಮಣ, ಧೃಷ್ಟ, ಶೂರ, ಪುರಂಜಯ ಎಂಬ ಪುತ್ರರು ಉದಿಸಿದರು. ಉಪಬಾಹ್ಯಕೆಯಿಂದ ಅಯುತಾಜಿತ್, ಸಹಸ್ರಾಜಿತ್, ಶತಾಜಿತ್, ದಾಶಕ ಎಂಬ ಪುತ್ರರು ಜನಿಸಿದರು.

ಸತ್ವತನ ಇನ್ನೊಬ್ಬ ಮಗನಾದ ದೇವಾವೃಧನು ಸರ್ವಗುಣ ಸಂಪನ್ನನಾದ ಶ್ರೇಷ್ಠ ಮಗನು ಹುಟ್ಟಬೇಕೆಂಬ ಆಶೆಯಿಂದ ಚಿತ್ತವನ್ನು ನಿಗ್ರಹಮಾಡಿ ಅಖಂಡ ಧ್ಯಾನಯೋಗದಿಂದ ಅತ್ಯುಗ್ರವಾದ ತಪಸ್ಸನ್ನು ಮಾಡತೊಡಗಿದನು. ಪರ್ಣಾಶಾನದಿಯ ಪಾವನ ತೀರದಲ್ಲಿ ನಿಂತು ಅದರ ನೀರಿನಿಂದಲೇ ಸ್ನಾನಪಾನಾಚಮನಾದಿಗಳನ್ನು ಮಾಡಿ ತೀಕ್ಷ್ಣವಾದ ತಪಸ್ತಪಿಸುತ್ತಲಿರುವ ಆ ದೇವಾವೃಧನ ನಿತ್ಯಸಂಪರ್ಕ ಹಸ್ತಸಂಸ್ಪರ್ಶ ನಿರಂತರ ಸಹವಾಸಗಳಿಂದ ಆ ನದಿಗೆ ಅವನ ಬಗ್ಗೆ ಆಸ್ಥೆ ಹುಟ್ಟಿ ಅವನಿಗೆ ಪ್ರಿಯವಾದುದನ್ನು ಮಾಡಬೇಕೆಂದು ಮನಸ್ಸಾಯಿತು.

''ಈ ರಾಜರ್ಷಿಯ ಮನಸ್ಸಿನಂತೆ ಗುಣ ಶೀಲ ವಿದ್ಯಾವಯ ಕುಲ ರೂಪ ಮೊದಲಾದ ಸಕಲ ಲಕ್ಷಣ ಸಂಪನ್ನನಾದ ಮಗನು ಹುಟ್ಟಬೇಕಾದರೆ ಅಂಥ ಲೋಕೋತ್ತರ ಗುಣಗಣ ಯಂತಿರುವ ಮಹಿಳಾಮಣಿ ಯಾರಿರುವರು ಈ ಜಗದಲ್ಲಿ?'' ಎಂದು ಅವಳು ವಿಚಾರಿಸಿ

ನೋಡಿದಳು. ಆದರೆ ಅಂಥ ಶೀಲ ಗುಣಶಾಲಿನಿಯಾದ ಹೆಂಗಸು ಅವಳಿಗೆ ಯಾರೂ ಕಾಣಲೇ ಇಲ್ಲ. ''ಹಾಗಾದರೆ ಈ ರಾಜನ ಬಯಕೆ ಪೂರ್ಣವಾಗುವ ಬಗೆ ಹೇಗೆ? ಇವನು ಹೀಗೆಯೇ ನಿರಾಹಾರ ತಪಸ್ಸಿನಿಂದ ಎಷ್ಟು ದಿನಗಳವರೆಗೆ ಕಷ್ಟಪಡಬೇಕು?'' ಎಂದು ಆ ಪರ್ಣಾಶಾ ಪಯಸ್ವಿನಿಗೆ ಬಹಳ ಚಿಂತೆಯಾಯಿತು.

ಕೊನೆಗೆ ಅವಳು ಆ ರಾಜನ ಮನೋಭೀಷ್ಟವನ್ನು ಈಡೇರಿಸಲಿಕ್ಕೆಂದು ತಾನೇ ಸೌಂದರ್ಯೈಕಸಾರದಂತಿರುವ ನಿರವದ್ಯವಾದ ನಾರೀ ರೂಪವನ್ನು ತೆಗೆದುಕೊಂಡು ಅವನ ಹತ್ತಿರ ಬಂದಳು. ಅವಳ ಲಾವಣ್ಯಪೂರ್ಣವಾದ ಲಲಿತಾಂಗಯಷ್ಟಿಯ ಚೆಲವು ಹೊಳವುಗಳನ್ನು ಕಂಡು ಅವಳಿಂದ ತನ್ನ ಬಯಕೆ ಪೂರ್ಣವಾಗಬಹುದೆಂದು ದೇವಾವೃಧನು ಅವಳನ್ನು ವರಿಸಿದನು. ಮುಂದೆ ಅವನ ಸಂಕಲ್ಪದಂತೆ ಸರಿತ್ತ್ವರೆಯಾದ ಪರ್ಣಾಶೆಯು ತೇಜಸ್ವಿಯಾದ ಗರ್ಭವನ್ನು ಧರಿಸಿ ಹತ್ತು ತಿಂಗಳು ತುಂಬಿದ ಬಳಿಕ ಸರ್ವಲಕ್ಷಣ ಸಂಪನ್ನನಾದ ಬಭ್ರು ಎಂಬ ಮಗನನ್ನು ಹೆತ್ತಳು.

''ಈ ದೇವಾವೃಧ ಹಾಗೂ ಅವನ ಮಗನಾದ ಬಭ್ರು ಇವರಿಬ್ಬರೂ ದೇವತುಲ್ಯರಾದ ಮಾನವಶ್ರೇಷ್ಠರಿದ್ದಾರೆ. ರಣಾಂಗಣದಲ್ಲಿ ಇವರಿಬ್ಬರಿಂದ ಹತಪತಿತರಾದ ಏಳುಸಾವಿರದ ಅರವತ್ತಾರು ಜನರು ಮೋಕ್ಷವನ್ನು ಹೊಂದಿದರು'' ಎಂದು ಮುಂತಾಗಿ ಪ್ರಾಚೀನರು ಇವರಿಬ್ಬರನ್ನು ಹೊಗಳಿ ಹಾಡಿದ್ದುಂಟು. ಈ ಬಭ್ರುವಿನ ವಂಶದಲ್ಲಿ ಮಾರ್ತಿಕಾವತರೆಂಬ ಸುಪ್ರಸಿದ್ಧರಾದ ಭೋಜರಾಜರಾದರು. ಅಂಧಕನಿಂದ ದೃಢಾಶ್ವದುಹಿತೆಯು ಕುಕುರ, ಭಜಮಾನ, ಶಮಿ, ಕಂಬಲ ಬರ್ಹಿಷ ಎಂಬ ನಾಲ್ಕು ಜನ ತನುಜರನ್ನು ಪ್ರಸವಿಸಿದಳು. ಅವರಲ್ಲಿ ಕುಕುರನಿಂದ ಮುಂದೆ ಧೃಷ್ಣ, ಕಪೋತರೋಮ, ತೈತ್ತಿರಿ, ಪುನರ್ವಸು, ಅಭಿಜಿತ್ ಮುಂತಾದ ರಾಜರಾದರು. ಅಭಿಜಿತ್ತನಿಗೆ ಅಹುಕನೆಂಬ ಗಂಡು ಮಗನೂ ಆಹುಕೀ ಎಂಬ ಕನ್ಯೆಯೂ ಜನಿಸಿದರು. ಈ ಆಹುಕನನ್ನು ಹಿಂದಿನ ಐತಿಹಾಸಿಕರು ಹೆಚ್ಚಾಗಿ ಹೊಗಳಿ ಹಾಡಿದ್ದಾರೆ. ಅವನ ಪರಿವಾರದಲ್ಲಿ ಯಾರೂ ಅಲ್ಪಾಯುಷಿಗಳಾಗಲಿ ಅಪುತ್ರಿಕರಾಗಲಿ ಅನಾಚಾರಿಗಳಾಗಲಿ ಇರಲಿಲ್ಲ.

ಅಂಧಕರು ಆಹುಕನ ತಂಗಿಯಾದ ಆಹುಕಿಯನ್ನು ಅವಂತಿರಾಜನಿಗೆ ಕೊಟ್ಟರು. ಅವಳೇ ಅವಂತಿರಾಜನ ಪಟ್ಟದರಸಿಯಾಗಿದ್ದಳು. ಆಹುಕನು ಕಾಶಿರಾಜನ ಮಗಳನ್ನು ಮದುವೆಯಾಗಿದ್ದನು. ಅವನಿಗೆ ದೇವತೆಗಳಿಂತ ವರ್ಚಸ್ವಿಗಳಾದ ದೇವಕ, ಉಗ್ರಸೇನ ಎಂಬ ಇಬ್ಬರು ತನುಜರು ಉತ್ಪನ್ನರಾದರು. ದೇವಕನಿಗೆ ದೇವವಾನ್, ಉಪದೇವ, ಸುದೇವ, ದೇವರಕ್ಷಿತ ಎಂಬ ನಾಲ್ಕು ಜನ ಗಂಡುಮಕ್ಕಳೂ ದೇವಕೀ, ಶಾಂತಿದೇವಾ, ಸುದೇವಾ, ದೇವರಕ್ಷಿತಾ, ವೃಕದೇವೀ, ಉಪದೇವಿ, ಸುನಾಮಿ, ಎಂಬ ಏಳು ಜನ ಹೆಣ್ಣುಮಕ್ಕಳೂ ಆದರು. ಈ ಏಳೂ ಜನ ಕನ್ಯೆಯರನ್ನೂ ವಸುದೇವನಿಗೇ ಕೊಟ್ಟು ಮದುವೆ ಮಾಡಲಾಗಿತ್ತು. ಉಗ್ರಸೇನನಿಗೆ ಕಂಸ, ನ್ಯಗ್ರೋಧ, ಸುನಾಮ, ಕಂಕ, ಶಂಕು, ರಾಷ್ಟ್ರಪಾಲ, ಸುತನು, ಅನಾಧೃಷ್ಟಿ, ಪುಷ್ಟಿಮಾನ್ ಎಂಬ ನವಕುಮಾರರು ಜನಿಸಿದರು. ಇವರಿಗೆ ಕಂಸಾ, ಕಂಸವತೀ, ಸುತನೂ, ರಾಷ್ಟ್ರಪಾಲೀ ಮತ್ತು ಕಂಕಾ ಎಂಬ ಚಿರಚಾರು ಚೆಲ್ವಿಕೆಯಿಂದ ಸಂಚರಿಸುವ ಕಾಂಚನ ಪಾಂಚಾಲಿಕೆಯರಂತಿದ್ದ ಪಂಚಸೋದರಿಯರು ಇದ್ದರು. ಉಗ್ರಸೇನ ಮತ್ತು ಅವನ ಮಗ ಕಂಸನ ಹಿಂದಿನವರಾದ ಕುಕುರವಂಶದ ಸಮಾಚಾರವನ್ನು ತಿಳಿಸಿದಂತಾಯಿತು.

## ಸ್ಯಮಂತಕದ ದುರಂತ

ಸತ್ವತನ ಮಗನಾದ ಭಜಮಾನನಿಗೆ ಅತಿರಥಮಹಾರಥಿಕರಲ್ಲಿ ಅತಿ ಶ್ರೇಷ್ಠನಾದ ವಿದೂರಥನೆಂಬ ಮಗನು ಜನಿಸಿದನು. ಈ ವಿದೂರಥನಿಗೆ ರಾಜಾಧಿದೇವನೆಂಬ ಶೂರಸುತನಾದನು. ರಾಜಾಧಿದೇವನಿಗೆ ವೀರ್ಯಾತಿರೇಕದಿಂದ ವಿಜೃಂಭಿಸುತ್ತಲಿದ್ದ ದತ್ತ, ಅತಿದತ್ತ, ಶೋಣಾಶ್ವ, ಶ್ವೇತವಾಹನ, ಶಮೀ, ದಂಡಶರ್ಮ, ದಂಡಶತ್ರು, ಶತ್ರುಜಿತ್ ಎಂಬ ಗಂಡುಮಕ್ಕಳೂ ಶ್ರವಣೀ ಶ್ರವಿಷ್ಠಾ ಎಂಬಿಬ್ಬರು ಹೆಣ್ಣುಮಕ್ಕಳೂ ಉತ್ಪನ್ನರಾದರು.

ಇವರಲ್ಲಿ ಶಮೀ ಎಂಬವನಿಗೆ ಪ್ರತಿಕ್ಷತ್ರ, ಪ್ರತಿಕ್ಷತ್ರನಿಗೆ ಸ್ವಯಂಭೋಜ, ಸ್ವಯಂ ಭೋಜನಿಗೆ ಹೃದೀಕ, ಹೃದೀಕನಿಗೆ ಚಂಡವಿಕ್ರಮರಾದ ಕೃತವರ್ಮ ಶತಧನ್ವರೆಂಬ ಇಬ್ಬರು ಮಕ್ಕಳೂ ಆದರು. ಶತಧನ್ವನಿಗೆ ದೇವರ್ಷಿಗಳಾದ ಚ್ಯವನ ಮಹಾಮುನಿಗಳ ಆಶೀರ್ವಾದ ಪ್ರಭಾವದಿಂದ ಭಿಷಕ್, ವೈತರಣ ಸುದಾಂತ ಮತ್ತು ವಿದಾಂತ ಎಂಬ ನಾಲ್ಕು ಜನ ಗಂಡು ಮಕ್ಕಳೂ; ಕಾಮದಾ ಕಾಮದಂತಿ ಎಂಬಿಬ್ಬರು ಕನ್ನಿಕೆಯರೂ ಹುಟ್ಟಿದರು.

ಕಂಬಲಬರ್ಹಿಷ ಎಂಬ ಹಿಂದೆ ಹೇಳಿದ ಮರುತ್ತ ಪುತ್ರನಿಗೆ ದೇವವಾನ್, ದೇವವಾನನಿಗೆ ಅಸಮೌಜ ವೀರ ಮತ್ತು ನಾಸಮೌಜ ಎಂಬ ಮೂವರು ಮಕ್ಕಳಾದರು. ಇವರಲ್ಲಿ ಅಸಮೌಜನಿಗೆ ಸಂತತಿಯಿಲ್ಲದ್ದರಿಂದ ಅವನು ಅಂಧಕ ವಂಶದವರೇ ಆದ ಸುದಂಷ್ಟ ಚಾರುರೂಪ ಕೃಷ್ಣ ಎಂಬ ಮೂವರನ್ನು ತನ್ನ ಮಕ್ಕಳನ್ನಾಗಿ ಮಾಡಿಕೊಂಡನು. ಕ್ರೋಷ್ಟುವಿಗೆ ಗಾಂಧಾರಿ ಮಾದ್ರೀ ಎಂದಿಬ್ಬರು ಪತ್ನಿಯರು. ಮಾದ್ರಿಯ ಮಗ ಯುಧಾಜಿತ ಅವನ ಮಗ ದೇವಮೀಢುಷ. ಗಾಂಧಾರಿಯ ಮಗ ಅನಮಿತ್ರ.

ಕ್ರೋಷ್ಟುವಿನ ಹೆಂಡತಿಯಾದ ಗಾಂಧಾರಿಯ ಮಗ ಅನಮಿತ್ರನಿಗೆ ನಿಘ್ನ, ನಿಘ್ನನಿಗೆ ಪ್ರಸೇನ, ಸತ್ರಾಜಿತ್ ಎಂಬ ಇಬ್ಬರು ಮಕ್ಕಳಿದ್ದರು. ಪ್ರಸೇನನ ತಮ್ಮನಾದ ಈ ಸತ್ರಾಜಿತನು ಒಂದು ದಿನ ಪಂಚಪಂಚ ಉಷಃಕಾಲದಲ್ಲಿ ಎದ್ದು ಅರುಣದೇವನ ಹೊಂಗಿರಣಗಳ ಚಂಬೆಳಕಿನಿಂದ, ಕತ್ತಲೆಯ ಮೊತ್ತವೆಲ್ಲ ಮೆಲ್ಲಮೆಲ್ಲನೆ ಜಗದಂಚಿನಿಂದ ಜಾರುತ್ತಲಿದ್ದಾಗ ಸ್ನಾನ ಸಂಧ್ಯಾವಂದನೆ ಮಾಡಲೆಂದು ಸಮುದ್ರತೀರಕ್ಕೆ ಬಂದನು. ಉದಯಗಿರಿ ಗುಹಾಕಂದರದಿಂದ ಸವಿತೃದೇವನ ಛಂದೋಮಯವಾದ ಹೊಂದೇರು ಕ್ಷಿತಿಜಾಂಗಣದಿಂದ ಮೇಲೇರಿ ಬಾಂದಳದಲ್ಲಿ ಕಾಣಿಸಿ ಕೊಂಡಾಗ ಸತ್ರಾಜಿತನು ಸ್ನಾನಮಾಡಿ ಅರ್ಘ್ಯವಿತ್ತು ಗಾಯತ್ರಿಯ ಮಂತ್ರವನ್ನು ಜಪಿಸಿ ಸೂರ್ಯೋಪಸ್ಥಾನಕ್ಕೆ ಎದ್ದು ನಿಂತಿದ್ದನು. ಪೂರ್ವಾಭಿಮುಖನಾಗಿ ಕಣ್ಣು ಮುಚ್ಚಿ ಕೈ ಮುಗಿದು ಸೂರ್ಯದೇವನನ್ನು ಮನಸಾ ಧ್ಯಾನಿಸುತ್ತಲಿದ್ದಾಗ ಸಾಕ್ಷಾತ್ ಸೂರ್ಯದೇವನು ಅವನ ಎದುರೇ ಬಂದಿಳಿದು ''ಸತ್ರಾಜಿತ! ನನ್ನ ಸ್ನೇಹಿತನಾದ ನೀನು ಮನಸಾ ಏಕೆ-ಕಣ್ಣು ತೆರೆದರೆ-ಚಕ್ಷುಷಾ ಏವ ನನ್ನನ್ನು ಕಾಣಬಲ್ಲೆ. ಇಕೋ ನಿನ್ನೆದುರೇ ಬಂದು ನಿಂತಿದ್ದೇನೆ ನೋಡು.'' ಎಂದನು. ಆಗ ಸತ್ರಾಜಿತನು ಆನಂದದಿಂದ ಪಳಕ್ಕನೆ ಕಣ್ಣು ಬಿಟ್ಟು ಸಾಕ್ಷಾತ್ತಾಗಿ ಎದುರು ಬಂದು ನಿಂತ ದಿವಾಕರನನ್ನು ನೋಡಿದನು. ಆದರೆ ಸುತ್ತಲೂ ಪಸರಿಸುವ ಪ್ರಭಾಪುಂಜದ ಮಧ್ಯದಲ್ಲಿ ದನಿ ಕೇಳುತ್ತಲಿದ್ದರೂ ಸೂರ್ಯದೇವನ ಮುಖ ಮಾತ್ರ ತೇಜಃ ಪ್ರಕರ್ಷದಿಂದ ಕಾಣಲಿಲ್ಲ.

ಆಗ ಸತ್ರಾಜಿತನು ''ಗೆಳೆಯ, ನೀನು ನನ್ನ ಪಕ್ಕದಲ್ಲಿದ್ದರೂ ಆಕಾಶದಲ್ಲಿದ್ದಂತೆ. ನನಗೆ ನಿನ್ನ ಪ್ರಭಾಮಂಡಲವು ಮಾತ್ರ ಗೋಚರಿಸುತ್ತಲಿದೆ. ನನ್ನ ಮಿತ್ರನ ಮುಖ ಮಂದಹಾಸ,

ಸ್ನೇಹದೃಷ್ಟಿ, ದೇಹಸ್ಪರ್ಶ ಯಾವುದೂ ನನಗೆ ಲಭ್ಯವಿಲ್ಲದಂತಾಗಿದೆ. ಆದ್ದರಿಂದ ನೀನು ಮಿತ್ರಪ್ರೇಮದಿಂದ ವ್ಯೋಮಬಿಟ್ಟು ಭೂಮಿಗೆ ಬಂದುದರ ಉಪಯೋಗವೇನು?'' ಎಂದು ಸ್ನೇಹದ ಸಲುಗೆಯಿಂದ ಕೇಳಿದನು. ಆಗ ದೇವವರೇಣ್ಯನಾದ ದಿವಾಕರನು ತನ್ನ ಕೊರಳೊಳಗಿನ ಒಂದು ರತ್ನವನ್ನು ತೆಗೆದು ದೂರವಿಟ್ಟು ಸತ್ರಾಜಿತ ಹತ್ತಿರ ಬಂದನು. ಆಗ ಸವಿತೃದೇವನ ಶಾಂತಕಾಂತವಾದ ಶರೀರದ ಸಿರಿಸೊಬಗುಗಳನ್ನು ಕಣ್ಣಾರೆ ಕಂಡು ಕೈಯಿಂದ ಮುಟ್ಟಿತಟ್ಟಿ ಆಲಿಂಗಿಸಿ ಸತ್ರಾಜಿತನು ಆನಂದ ಪರವಶನಾದನು. ಇಬ್ಬರೂ ಗೆಳೆಯಂದಿರೂ ಕೆಲ ನಿಮಿಷ ಅಲ್ಲಿಯೇ ಶರಧಿ ತೀರದ ಶರ್ಕರಾಚೂರ್ಣದಂತೆ ಶುಭ್ರವಾದ ಪುಲಿನ ಪೀಠದ ಮೇಲೆ ಕುಳಿತು ಲೋಕಾಭಿರಾಮವಾಗಿ ಮಾತು ಕತೆಯಾಡಿದ ಬಳಿಕ ರವಿಯು ಹೊರಟು ನಿಂತನು.

ಆಗ ಸತ್ರಾಜಿತನು ಸುಹೃದ್ವರನಾದ ದಿನಕರನಿಗೆ ''ಮಿತ್ರ! ಈ ಜಗದಂಡ ಮಂಡಲವನ್ನೆಲ್ಲ ಪ್ರಕಾಶಪುಂಜದಿಂದ ಜ್ಯೋತಿರ್ಮಯವನ್ನಾಗಿ ಮಾಡುತ್ತಲಿರುವ ನಿನ್ನ ಈ ಉಜ್ವಲ ರತ್ನವನ್ನು ನಮ್ಮ ಸ್ನೇಹದ ಸಂಕೇತವೆಂದು ನನಗೆ ಕೊಟ್ಟು ಹೋಗು'' ಎಂದು ಕೇಳಿದನು. ಉದಾರಹೃದಯನೂ ಸ್ನೇಹ ಪರತಂತ್ರನೂ ಆದ ಆ ದಿನಮಣಿಯು ಮಿತ್ರನ ಅಪೇಕ್ಷೆಯಂತೆ ಆ ರತ್ನವನ್ನು ತೆಗೆದು ಸತ್ರಾಜಿತನ ಕೈಯಲ್ಲಿ ಕೊಟ್ಟು ಹೊರಟು ಹೋದನು. ಅದೇ ಸ್ಯಮಂತಕ ರತ್ನ. ಸತ್ರಾಜಿತನು ದಿವಾಕರದತ್ತವಾದ ಆ ಮಣಿಯನ್ನು ಕೊರಳಲ್ಲಿ ಧರಿಸಿಕೊಂಡು ದ್ವಾರಕೆಗೆ ಬಂದಾಗ ಅಲ್ಲಿಯ ಜನ ಸೂರ್ಯನು ನೆಲಕ್ಕಿಳಿದು ನಡೆಯುತ್ತ ಹೊರಟಿದ್ದಾನೆಂದು ಭ್ರಮಿಸಿ ದಾರಿ ಕೇರಿಗಳಲ್ಲಿ ನೋಡಲು ನೆರೆದರು. ಅವನು ಮುಖ್ಯ ಬೀದಿ ಬದಿಗಳಲ್ಲೆಲ್ಲ ಸಂಚರಿಸಿ ತಮ್ಮ ಅಂತಃಪುರಕ್ಕೆ ಹೋದನು. ದ್ವಾರಕೆಯ ಜನರ ಆಶ್ಚರ್ಯಕ್ಕೆ ಅಂತ ಪಾರವಿಲ್ಲದಾಯಿತು. ಮನೆಗೆ ಬಂದು ಸತ್ರಾಜಿತನು ಆ ದಿವ್ಯಮಣಿಯನ್ನು ಹಿರಿಯಣ್ಣನಾದ ಪ್ರಸೇನನಿಗೆ ಒಪ್ಪಿಸಿದನು. ಅದು ಅವರ ಮನೆಯಲ್ಲಿದ್ದಾಗ ಪ್ರತಿದಿನವೂ ಬಂಗಾರವನ್ನು ಈಯುತ್ತಲಿತ್ತು. ಮತ್ತು ದಿನಮಣಿಯ ಆ ಮಣಿ ಇದ್ದಲ್ಲಿ ರೋಗರುಜಿನಗಳಾಗಲಿ, ದುರ್ಭಿಕ್ಷ ದಾರಿದ್ರ್ಯಗಳಾಗಲಿ ಸಮೀಪಕ್ಕೂ ಸುಳಿಯುತ್ತಲಿರಲಿಲ್ಲ.

ಆ ರತ್ನದ ಇವೆಲ್ಲ ಗುಣಗಳನ್ನು ಕೇಳಿ ಶ್ರೀಕೃಷ್ಣನು ಒಮ್ಮೆ ಅದರ ಬಗ್ಗೆ ತನ್ನ ಇಚ್ಛೆಯನ್ನು ತೋರಿಸಿದನು. ಆದರೆ ಅದು ಅವನಿಗೆ ದೊರಕಲಿಲ್ಲ. ಸರ್ವಸಮರ್ಥನಾದರೂ ಭಗವಂತನು ಅದನ್ನು ಅವನಿಂದ ಕಸಿದುಕೊಳ್ಳಲಿಲ್ಲ. ಸ್ವಯಂ ಶ್ರೀನಿಧಿಯಾದ ಅವನಿಗೆ ಅದರ ಅವಶ್ಯಕತೆಯೂ ಇರಲಿಲ್ಲ. (ಆಪ್ತಕಾಮಸ್ಯ ಕಾ ಸ್ಪೃಹಾ)

ಮುಂದೆ ಒಂದು ದಿನ ಪ್ರಸೇನನು ಆ ರತ್ನವನ್ನು ಧರಿಸಿ ಬೇಟೆಯಾಡಲು ಗಹನಾರಣ್ಯಕ್ಕೆ ಹೋದನು. ಅಲ್ಲಿಯ ಗೊಂಡಾರಣ್ಯದಲ್ಲಿಯ ಗಂಡುಸಿಂಹವೊಂದು ಇವನ ಕೊರಳಲ್ಲಿಯ ಅದ್ಭುತವಾದ ಮಣಿಯನ್ನು ಕಂಡು ಕುತುಹಲದಿಂದ ಆ ಪ್ರಸೇನನನ್ನು ಕೊಂದು ಆ ರತ್ನವನ್ನು ತೆಗೆದುಕೊಂಡು ಹೋಯಿತು. ಇಂಥ ಅನರ್ಘ್ಯವಾದ ಮಹಾಮಣಿಯನ್ನು ಕೊಂಡೊಯ್ಯುತ್ತಲಿರುವ ಆ ಸಿಂಹವನ್ನು ಕರಡಿಗಳ ರಾಜನಾದ ಜಾಂಬವಂತನು ಆಕಸ್ಮಾತ್ತಾಗಿ ಕಂಡು ಅದನ್ನು ಕೊಂದು ಆ ರತ್ನವನ್ನು ತಾನು ತೆಗೆದುಕೊಂಡು ತನ್ನ ಗುಹೆಗೆ ಹೋದನು.

ಇತ್ತ ದ್ವಾರಕೆಯಲ್ಲಿ ರತ್ನವನ್ನು ಧರಿಸಿಕೊಂಡು ಹೋದ ಪ್ರಸೇನನು ಮರಳಿ ಬಾರದಾದಾಗ ಜನರೆಲ್ಲ ಕೃಷ್ಣನ ಮೇಲೆ ಸಂಶಯವನ್ನು ತೆಗೆದುಕೊಂಡರು. ಕೃಷ್ಣನಿಗೆ ಅದರ ಮೇಲೆ ಆಶೆಯಿದ್ದದ್ದೂ, ಅದನ್ನು ತನಗೆ ಕೊಡು ಎಂದು ಅವನು ಕೇಳಿದ್ದೂ,

ಆ ಅಣ್ಣತಮ್ಮಂದಿರು ಕೊಡದೆ ಇದ್ದದ್ದೂ ಎಲ್ಲವೂ ಅಲ್ಲಿಯ ಜನರಿಗೆ ಗೊತ್ತಿತ್ತು. ಆದ್ದರಿಂದ ಅವರು ಕೃಷ್ಣನೇ ಆ ರತ್ನದ ಆಶೆಗೆ ಪ್ರಸೇನನನ್ನು ಕೊಲ್ಲಿಸಿ ಅಪಹರಿಸಿದ್ದಾನೆಂದು ಆಡಿಕೊಳ್ಳಹತ್ತಿದರು. ಆಗ ಈ ಮಿಥ್ಯಾಪವಾದವನ್ನು ಕಳೆದುಕೊಳ್ಳಬೇಕೆಂದು ನಿತ್ಯ ನಿರ್ದೋಷನಾದ ನಾರಾಯಣಾತ್ಮಕ ಶ್ರೀಕೃಷ್ಣನು ಆ ಸ್ಯಮಂತಕ ಮಣಿಯನ್ನು ಹುಡುಕಿಕೊಂಡೇ ಬರುವೆನೆಂದು ಪ್ರತಿಜ್ಞೆಗೈದು ಬಲರಾಮ ಹಾಗು ಕೆಲವು ಯಾದವರಿಂದ ಕೂಡಿಕೊಂಡು ದ್ವಾರಕೆಯಿಂದ ಹೊರಟನು

ಪ್ರಸೇನನು ಬೇಟೆಗೆ ಹೋದ ನಿಬಿಡಾರಣ್ಯದಲ್ಲಿ ಅವನ ಕುದುರೆಯ ಹೆಜ್ಜೆಗಳನ್ನೇ ಗುರುತಿಸುತ್ತ ಆ ದುರ್ಗಮವಾದ ಕಾಂತಾರಪಥದಲ್ಲಿ ಹುಡುಕುತ್ತ ಹೊರಟರು. ಆ ಹೆಜ್ಜೆಗಳು ಋಕ್ಷವಂತ ಗಿರಿಯ ಗಹನಾಟವೀ ವೀಥಿಗಳನ್ನೆಲ್ಲ ಬಳಸಿಗೊಂಡು ವಿಂಧ್ಯಾಚಲದ ಕಾನನ ಪಂಕ್ತಿಗಳಲ್ಲಿ ಲೀನವಾಗಿದ್ದವು. ಆ ವಿಂಧ್ಯಶೈಲ ಶ್ರೇಣಿಗಳ ಒಂದು ನೀರಂಧ್ರ ನಿಬಿಡ ಕಂದರದಲ್ಲಿ ಪ್ರಸೇನನ ಕುದುರೆ ಸತ್ತು ಬಿದ್ದಿದ್ದು ಕಂಡಿತು. ಅಲ್ಲಿಯೇ ಮುಂದೆ ತುಸು ದೂರದಲ್ಲಿ ಪ್ರಸೇನನು ಒಂದು ಸಿಂಹದಿಂದ ಹತಮೃತನಾಗಿ ಬಿದ್ದಿದ್ದನು. ಅಲ್ಲಿಂದ ಮುಂದೆ ರಕ್ತರಂಜಿತವಾದ ಸಿಂಹದ ಹೆಜ್ಜೆಗಳನ್ನು ಅರಸುತ್ತ ಹೋಗುವಷ್ಟರಲ್ಲಿ ಆ ಸಿಂಹವೂ ಸತ್ತುಬಿದ್ದದ್ದು ಕಂಡು ಬಂದಿತು. ಅಲ್ಲಿಂದ ಮುಂದೆ ಒಂದು ಕರಡಿಯ ಹೆಜ್ಜೆಗಳು ಮೂಡಿದ್ದವು. ಆ ಹೆಜ್ಜೆಗಳನ್ನು ಹಿಡಿದು ಗುರುತಿಸುತ್ತ ಕೃಷ್ಣನೂ, ಅವನ ಪರಿವಾರದವರೂ ದುರ್ಗಾರಣ್ಯ ಮಾರ್ಗದಲ್ಲಿ ಮುಂಬರಿದರು. ಆ ಕರಡಿಯ ರಕ್ತಿಸಿಂಚಿತವಾದ ಪದಚಿಹ್ನೆಗಳು ಗಿರಿಗರ್ಭದ ಗಹನತರವಾದ ದುರ್ಗಮಾರ್ಗಗಳನ್ನೆಲ್ಲ ಬಳಸಿಗೊಂಡು ಒಂದು ದರೀ ಮುಖದಲ್ಲಿರುವ ಗುಹಾದ್ವಾರದಲ್ಲಿ ಪ್ರವಿಷ್ಟವಾಗಿದ್ದವು.

ಕೃಷ್ಣಬಲರಾಮ ಉಳಿದ ಯಾದವರೆಲ್ಲರೂ ಆ ಗುಹೆಯ ಬಾಗಿಲಿಗೆ ಬಂದು ನಿಂತರು. ಆಗ ಅವರಿಗೆ ಅಲ್ಲಿ ಓರ್ವ ತರುಣಿಯು ತನ್ನ ಕೋಮಲ ಕಂಠದಿಂದ ಕೂಸನ್ನು ಆಡಿಸುತ್ತ ಹಾಡುತ್ತಿರುವದು ಕೇಳಿಸಿತು. ಆ ಶಿಶು ಗೀತದ ಮಂಜುಳನಾದ ಗುಂಜಾರವದಂತೆ ಗುಹಾಂತರಾಳದಿಂದ ಸುಸ್ಪಷ್ಟವಾಗಿ ತೆರೆತೆರೆಯಾಗಿ ತೇಲಿ ಬರುತ್ತಿತ್ತು.

**''ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬವತಾ ಹತಃ''**

**''ಸುಕುಮಾರಕ ಮಾ ರೋದೀಃ ತವ ಹ್ಯೇಷ ಸ್ಯಮಂತಕಃ''**

''ಸುಕುಮಾರನೇ ಅಳಬೇಡ. ಸಿಂಹವು ಪ್ರಸೇನನನ್ನು ಕೊಂದಿತು. ಆ ಸಿಂಹವನ್ನು ಜಾಂಬವಂತನು ಕೊಂದನು. ಆದ್ದರಿಂದ ಈ ಸ್ಯಮಂತಕ ರತ್ನವು ಆ ಜಾಂಬವಂತನ ಮಗುವಾದ ನಿನ್ನದೇ.''

ಹೆಂಗೊರಳಿನ ನುಣ್ಣನಿಯಲ್ಲಿ ತಾನವಿತಾನವರ್ತುಲಮಧ್ಯದಿಂದ ಎದ್ದು ಬರುತ್ತಲಿರುವ ಗೀತಗುಂಜಾರವದ ಈ ಮುಗ್ಧವಾದ ಪಾದಪಲ್ಲವಿಯನ್ನು ಕೇಳಿ ಶ್ರೀಕೃಷ್ಣನು ಉಳಿದೆಲ್ಲ ಯಾದವರಿಗೂ ಮತ್ತು ಬಲರಾಮನಿಗೂ ಅಲ್ಲಿಯೇ ಬಾಗಿಲದಲ್ಲಿ ನಿಲ್ಲಹೇಳಿ ತಾನು, ಗುಹಾಗರ್ಭದಲ್ಲಿ ಪ್ರವೇಶಿಸಿದನು. ಆ ಗುಹೆಯಲ್ಲಿದ್ದ ಜಾಂಬವಂತನಿಗೂ ಕೃಷ್ಣನಿಗೂ ಘನಘೋರವಾದ ಯುದ್ಧ ವಾಯಿತು. ಗೋವಿಂದನಾದರೂ ಆ ಕರಡಿಗಳ ಕುಲಪಿತಾಮಹನಾದ ಜರಠ ಜಾಂಬುವಂತನ ಜೊತೆಗೆ ಬರಿಕೈಗಳಿಂದ ಇಪ್ಪತ್ತೊಂದುದಿನ ಘೋರವಾಗಿ ಕಾದಿದನು. ಗುಹೆಯ ಬಳಿಗೆ ಹೋದ ಕೃಷ್ಣನು ಮೂರುವಾರಗಳು ಕಳೆದರೂ

ಮರಳಿ ಮೇಲೆ ಬಾರದ್ದರಿಂದ ನಿರಾಶರಾದ ಬಲರಾಮ ಮೊದಲಾದ ಪರಿವಾರದವರು ತಿರುಗಿ ದ್ವಾರಕೆಗೆ ಬಂದು ಕೃಷ್ಣನು ಕರಡಿಯಿಂದ ಗುಹೆಯಲ್ಲಿ ಕೊಲ್ಲಲ್ಪಟ್ಟನು ಎಂದು ಯಾದವರಿಗೆಲ್ಲ ತಿಳಿಸಿದರು.

ಇತ್ತ ಕೃಷ್ಣನು ವಿನೋದಕ್ಕಾಗಿ ಕೆಲದಿನ ಕಾದಾಡಿ ಜಾಂಬವಂತನನ್ನು ಗೆದ್ದು ಶ್ರೀರಾಮನ ಅಪರಾವತಾರಿಯಾದ ತನ್ನ ನಿಜ ಸ್ವರೂಪವನ್ನು ಅವನಿಗೆ ತಿಳಿಸಿ ಕೊಟ್ಟನು. ಅದನ್ನು ತಿಳಿದ ಜಾಂಬವಂತನು ಸಂತೋಷಭರಿತನಾಗಿ ಅವನ ಪಾದದ ಮೇಲೆ ಬಿದ್ದು ತನ್ನ ಈ ಯುದ್ಧದ ಅಪರಾಧವನ್ನು ಕ್ಷಮಿಸೆಂದು ಪ್ರಾರ್ಥಿಸಿಗೊಂಡನು. ಮತ್ತು ತನ್ನ ಮಗಳಾದ ಕೃಷ್ಣನಿಗೆಂದೇ ಸಂಕಲ್ಪಮಾಡಿದ ಜಾಂಬವತಿಯನ್ನು ಆ ಜಗದೀಶ್ವರನಿಗೆ ಇತ್ತು ವರದಕ್ಷಿಣೆಯೆಂದು ಸ್ಯಮಂತಕ ಮಣಿಯನ್ನು ಅರ್ಪಿಸಿದನು. ಆ ಮೇಲೆ ಕೃಷ್ಣನು ಜಾಂಬವಂತನನ್ನು ಸಂತೈಸಿ ಪರಮಾನುಗ್ರಹಗೈದು ಅವನಿಂದ ಬೀಳ್ಕೊಲ್ಪಟ್ಟವನಾಗಿ ದ್ವಾರಕೆಗೆ ಬಂದನು. ಮೃತ್ಯುಗುಹೆಯಂತಿರುವ ಆ ಋಕ್ಷ ಗುಹೆಯಿಂದ ಅಕ್ಷತನಾಗಿ ಸುರಕ್ಷಿತವಾಗಿ ಹೊರಬಂದು ಸ್ಯಮಂತಕ ಮಣಿಯೊಂದಿಗೆ ಕನ್ಯಾಮಣಿಯನ್ನು ಕರೆದುಕೊಂಡು ಬಂದ ಭಗವಂತನನ್ನು ಕಂಡು ದ್ವಾರಕೆಯ ಪೌರರಿಗೆಲ್ಲ ಪರಮಾನಂದವಾಯಿತು.

ಆಮೇಲೆ ದೋಷದೂರನಾದ ಆ ದಾಮೋದರನು ಯಾವತ್ತೂ ಯಾದವರನ್ನು ಕರೆದು ಸಭೆ ಮಾಡಿ ಅಲ್ಲಿ ಸತ್ರಾಜಿತನನ್ನೂ ಕರೆಯಿಸಿ ಎಲ್ಲರ ಸಮಕ್ಷ ಆ ಸ್ಯಮಂತಕವನ್ನು ಅವನ ಕೈಯಲ್ಲಿ ಕೊಟ್ಟನು. ಇದರಿಂದ ಕೃಷ್ಣನ ಮೇಲಿನ ಅಪವಾದಗಳೆಲ್ಲ ಕಳೆದು, ಅಪಕೀರ್ತಿ ತೊಳೆದು ಅವನೊಬ್ಬ ನಿಷ್ಕಲಂಕವಾದ ನರಸಿಂಹ ಎಂದು ಎಲ್ಲರಿಗೂ ನಿಶ್ಚಿತವಾಯಿತು. ಸತ್ರಾಜಿತನಂತೂ ವ್ಯರ್ಥವಾಗಿ ಆ ಶುದ್ಧಾತ್ಮನ ಮೇಲೆ ಸಂಶಯ ತೆಗೆದುಕೊಂಡದ್ದಕ್ಕಾಗಿಯೇ ಬಹಳೇ ಪಶ್ಚಾತ್ತಾಪಟ್ಟನು. ಮತ್ತು ಇದರಿಂದ ಅವನಿಗೆ ಭಗವಂತನಲ್ಲಿ ಭಕ್ತಿಭಾವವು ಇಮ್ಮಡಿಸಿ ಮಹಿಳಾಕುಲಮಂಡನಮಣಿಯಂತಿದ್ದ ಸತ್ಯಭಾಮಾ ಎಂಬ ತನ್ನ ಮಗಳನ್ನು ಅವನಿಗೆ ಧಾರೆಯೆರೆದು ಕೊಟ್ಟನು.

ಸತ್ರಾಜಿತನಿಗೆ ಹತ್ತು ಜನ ಹೆಂಡಂದಿರೂ ಅವರಿಂದ ನೂರು ಜನ ಮಕ್ಕಳೂ ಇದ್ದರು. ಅವರಲ್ಲಿ ಭಂಗಕಾರಿ, ವಾತಪತಿ, ಉಪಸ್ವಾವಾನ್ ಎಂಬ ಮೂವರು ಮುಖ್ಯರಿದ್ದರು. ಇದರಂತೆ ಸತ್ಯಭಾಮಾ, ವ್ರತಿನೀ, ಪ್ರಸ್ವಾಪಿನೀ ಎಂಬ ಮೂವರು ಕನ್ಯೆಯರೂ ಇದ್ದರು. ಭಂಗಕಾರಿಗೆ ಸಮಾಕ್ಷ, ನಾರೇಯರೆಂಬ ಇಬ್ಬರು ಮಕ್ಕಳಿದ್ದರು.

ಚೆಲ್ವಿಕೆಯ ಚಾರುಚೈತನ್ಯಮಯ ಪುತ್ಥಳಿಯಂತಿರುವ ಸತ್ಯಭಾಮೆಯನ್ನು ತನಗೆ ಮದುವೆ ಮಾಡಿಕೊಡಬೇಕೆಂದು ಅಕ್ರೂರ ಶತಧನ್ವರು ಈ ಮೊದಲೇ ಕೇಳಿದ್ದರು. ಸತ್ಯಭಾಮೆಯನ್ನು ಮದುವೆಯಾದರೆ ಅವಳ ಜೊತೆಗೆ ಬಂಗಾರವನ್ನು ಈಯುವ ಆ ಸ್ಯಮಂತಕ ಮಣಿಯೂ ಬರುವದೆಂದು ಅವರ ಹೃದ್ಗತವಾದ ಆಶೆಯಾಗಿದ್ದಿತು ಆದರೆ ಸಾಕ್ಷಾತ್ ಲಕ್ಷ್ಮೀ ಸ್ವರೂಪಿಣಿಯಾದ ಅವಳನ್ನು ಸ್ವತಃ ಶ್ರೀಕೃಷ್ಣನೇ ಪಾಣಿಗ್ರಹಣ ಮಾಡಿದ ಬಳಿಕ ಅಕ್ರೂರನು ಅವಳ ಆಶೆಯನ್ನು ಬಿಟ್ಟರೂ ಸ್ಯಮಂತಕಮಣಿಯ ಮೇಲಿನ ಮೋಹವು ಮಾತ್ರ ಅವನಿಗೆ ಹೋಗಲಿಲ್ಲ. ಹೇಗಾದರೂ ಮಾಡಿ ಆ ಮಣಿಯನ್ನು ತೆಗೆದುಕೊಳ್ಳಬೇಕೆಂದು ಅವನು ಒಂದು ಕುತಂತ್ರವನ್ನು ಹೂಡಿದನು. ಶತಧನ್ವನನ್ನು ಪ್ರೇರಿಸಿ ಹುರಿದುಂಬಿಸಿ ಅವನ ಮುಖಾಂತರ ಆ ಮಣಿರತ್ನವನ್ನು ತರಿಸಿ ಸ್ವಾಧೀನದಲ್ಲಿ ಇಟ್ಟುಕೊಳ್ಳುವ ಹಂಚಿಕೆ ಮಾಡಿದನು. ಮಹಾಬಲಿಷ್ಠನಾದ ಶತಧನ್ವನು ಒಂದು ದಿನ ರಾತ್ರಿ

ಸತ್ರಾಜಿತನ ಮನೆಗೆ ಹೋಗಿ ಅವನು ಮಲಗಿದಾಗ ಅವನನ್ನು ಕೊಂದು ಸ್ಯಮಂತಕವನ್ನು ಕದ್ದು ತಂದು ಆಗಲೇ ಅಕ್ರೂರನ ಕೈಯಲ್ಲಿ ಕೊಟ್ಟನು. ಅದನ್ನು ಅವನು ಸಂತೋಷದಿಂದ ಸ್ವೀಕರಿಸಿ ತನ್ನ ಹತ್ತಿರ ತೆಗೆದಿಟ್ಟುಕೊಂಡು "ಈ ರತ್ನವು ನನ್ನ ಹತ್ತಿರ ಇದೆ ಎಂಬ ಸಮಾಚಾರವನ್ನು ಮಾತ್ರ ಯಾರಿಗೂ ಯಾವಕಾಲಕ್ಕೂ ನೀನು ತಿಳಿಸತಕ್ಕದ್ದಲ್ಲ." ಎಂದು ಕರಾರುಮಾಡಿದನು. ಮತ್ತು "ಕೃಷ್ಣನು ನಿನ್ನನ್ನು ಹೊಡೆಯ ಬಂದರೆ ನಾವೆಲ್ಲರೂ ನಿನ್ನ ಪಕ್ಷಗಟ್ಟಿ ನಿಲ್ಲುವೆವು. ಇಡೀ ದ್ವಾರಕಾಪಟ್ಟಣವೆಲ್ಲವೂ ಈಗ ನನ್ನ ಕೈಯಲ್ಲಿದೆ. ನೀನೇನೂ ಗಾಬರಿಯಾಗುವ ಕಾರಣವಿಲ್ಲ." ಎಂದು ಹೇಳಿ ಸಮಾಧಾನಮಾಡಿ ಕಳಿಸಿದನು.

ಆಗ ಕೃಷ್ಣನು ದ್ವಾರಕೆಯಲ್ಲಿ ಇದ್ದಿದ್ದಿಲ್ಲ. ಅರಗಿನ ಮನೆಯಲ್ಲಿ ಅಗ್ನಿಯ ಅನಾಹುತದಿಂದ ಪಂಚಪಾಂಡವರೆಲ್ಲರೂ ಕುಂತಿ ಸಹಿತವಾಗಿ ಸಿಕ್ಕು ಸುಟ್ಟು ಸತ್ತು ಹೋದರೆಂಬ ಸುದ್ದಿಯನ್ನು ಕೇಳಿ ಧೃತರಾಷ್ಟ್ರಾದಿಗಳನ್ನು ಮಾತನಾಡಿಸಿ ಬರಬೇಕೆಂದು ಆ ಕಪಟ ನಾಟ ಸೂತ್ರಧಾರಿಯು ಸಾತ್ಯಕಿ ಸಹಿತನಾಗಿ ಹಸ್ತಿನಾವತಿಗೆ ಹೋಗಿದ್ದನು. ಇತ್ತ ದ್ವಾರಕೆಯಲ್ಲಿ ಆಕಸ್ಮಿಕವಾಗಿ ಒಂದಿರುಳು ತನ್ನ ತಂದೆಯ ಕಗ್ಗೊಲೆಯಾದುದನ್ನು ಕಂಡು ಸತ್ಯಭಾಮೆಯ ಕರುಳಿಗೆಲ್ಲ ಕಿಚ್ಚಿಟ್ಟಂತಾಗಿ ಅಚ್ಚರಿಯಿಂದ ಅವಳು ಹುಚ್ಚಳಾದಳು. ಆದರೂ ಚತುರಮತಿಯಾದ ಅವಳು ತಕ್ಷಣದಲ್ಲಿ ರಥವನ್ನು ಹತ್ತಿ ಹಸ್ತಿನಾವತಿಗೆ ಧಾವಿಸಿದಳು. ಅಲ್ಲಿ ಭಗವಂತನಿಗೆ ಭೋಜಕುಲದ ಶತಧನ್ವನ ಕಪಟಕಾರಸ್ಥಾನದಿಂದ ತನ್ನ ತಂದೆ ತೀರಿಕೊಂಡ ಸಮಾಚಾರವನ್ನು ತಿಳಿಸಿ ದುಃಖಾರ್ತಳಾಗಿ ಕಣ್ಣೀರಿನ ಕೋಡಿ ಹರಿಸಿ ವಿಲಪಿಸಿದಳು. ಪ್ರಾಣಪ್ರಿಯಳಾದ ತನ್ನ ಪ್ರೇಯಸಿಯ ಎದೆಯ ತಳಮಳ ಹಾಗು ಅಂತರಂಗದ ಶೋಕ ಸಂತಾಪಗಳನ್ನು ನೋಡಿ ಆ ಯಾದವೇಂದ್ರನಿಗೂ ದುಃಖವಾಗಿ ಸತ್ರಾಜಿತನ ಗೂಢ ಕೊಲೆಯ ಬಗ್ಗೆ ಅಚ್ಚರಿಯಾಯಿತು. ಅವನು ಮಿದುನುಡಿಗಳಿಂದ ಶೋಕವಿಕಲಳಾದ ಭಾಮೆಯನ್ನು ಸಂತೈಸಿ ಕೂಡಲೇ ದ್ವಾರಕೆಗೆ ಹೊರಡಬೇಕೆಂದು ನಿರ್ಧರಿಸಿದ. ಲೀಲಾಮಾನುಷನಾದ ಕೃಷ್ಣನು ಬೆಂಕಿಯಲ್ಲಿ ಬೆಂದ ಪಾಂಡುಪುತ್ರರಿಗೆ ನೀರು ಬಿಟ್ಟು ತರ್ಪಣಕೊಟ್ಟು ಅವರವೆಂದು ಭಾವಿಸಲಾದ ಅಸ್ಥಿಗಳನ್ನು ಪುಣ್ಯತೀರ್ಥದಲ್ಲಿ ವಿಸರ್ಜಿಸಿ ಉಳಿದ ಉತ್ತರಕ್ರಿಯೆಯನ್ನೆಲ್ಲ ಸಾಂಗವಾಗಿ ಮಾಡಿಕೊಂಡು ಬರಲು ಸಾತ್ಯಕಿಯನ್ನು ವಾರಣಾವತದಲ್ಲಿಯೇ ಇರಿಸಿ ತಾನು ಭಾಮೆಯೊಂದಿಗೆ ದ್ವಾರಕೆಗೆ ಬಂದನು.

ತನ್ನ ಹಿರಿಯ ಅಣ್ಣನಾದ ಬಲರಾಮನನ್ನು ಕರೆಯಿಸಿ "ಪ್ರಸೇನನನ್ನು ಸಿಂಹವು ಕೊಂದಿದೆ. ಸತ್ರಾಜಿತನನ್ನು ಶತಧನ್ವನು ಸಂಹರಿಸಿದ್ದಾನೆ. ಈಗ ಅವರಿಬ್ಬರೂ ಸತ್ತ ಬಳಿಕ ಆ ಸ್ಯಮಂತಕ ರತ್ನಕ್ಕೆ ಇನ್ನು ನಾವೇ ಭಾಗೀದಾರರು. ಇನ್ನು ಮೇಲೆ ಅದು ತಮ್ಮದೇ. ಆದ್ದರಿಂದ ಪಾಪಕಾರಿಯಾದ ಆ ಶತಧನ್ವನನ್ನು ಕೊಂದು ನಮ್ಮ ರತ್ನವನ್ನು ನಾವು ತೆಗೆದುಕೊಳ್ಳೋಣ ನಡೆ. ಬೇಗ ರಥವನ್ನು ಹತ್ತು" ಎಂದು ಹೇಳಿ ಇಬ್ಬರೂ ಕೂಡಿ ಶತಧನ್ವನ ಮೇಲೆ ಏರಿಹೋದರು.

ಮೊದಲೇ ತಾವು ಕರಾರು ಮಾಡಿಕೊಂಡಂತೆ ಅಕ್ರೂರ ಮೊದಲಾದ ಯಾದವರು ತನ್ನ ಸಹಾಯಕ್ಕೆ ಬರಬಹುದೆಂದು ಎಣಿಸಿ ಶತಧನ್ವನು ರಾಮಕೃಷ್ಣರ ಜೊತೆಗೆ ಯುದ್ಧಕ್ಕೆ ನಿಂತನು. ಅವರಲ್ಲಿ ಯುದ್ಧ ಸಂಭ್ರಮವನ್ನು ನೋಡಿ ಅಕ್ರೂರನು ಗಾಬರಿಯಾಗಿ ಕೃಷ್ಣನ ವಿರುದ್ಧ ಹೋಗಲು ಧೈರ್ಯವಾಗದೇ ಸುಮ್ಮನಿದ್ದನು. ಆಗ ಶತಧನ್ವನು ಹೇಳಿದವರಾರೂ ಸಹಾಯಕ್ಕೆ ಬಾರದಿರಲು ದಿಗ್ಭ್ರಾಂತನಾಗಿ ಓಡಿಹೋದನು. ಶತಧನ್ವನ ಹತ್ತಿರ ಹೃದಯಾ ಎಂಬ ಸರ್ವಶ್ರೇಷ್ಠವಾದ ಕುದುರೆಯೊಂದಿತ್ತು. ಅದು ಗಂಟೆಗೆ ನೂರು ಯೋಜನ

ಓಡುತ್ತಲಿತ್ತು. ಶತಧನ್ವನು ಆ ಕುದುರೆಯನ್ನು ಏರಿಯೇ ಕೃಷ್ಣನ ಜೊತೆಗೆ ಯುದ್ಧ ಮಾಡುತ್ತಲಿದ್ದನು. ಆದರೆ ರಾಮಕೃಷ್ಣರ ಎದುರು ತನ್ನ ಕೈಸಾಗದೆ ಸಾಯುವ ಸಮಯ ಸಮೀಪಿಸಿದಂತೆನಿಸಿದಾಗ ಅವನು ರಣರಂಗದಿಂದ ಪಲಾಯನ ಮಾಡಿದ. ಗಂಟೆಗೆನೂರು ಯೋಜನ ಧಾವಿಸುವ ಆ ಹೃದಯೆಯನ್ನು ಏರಿ ಓಡತೊಡಗಿದ. ಆದರೆ ಹಿಂದಿನಿಂದ ರಾಮಕೃಷ್ಣರಾದರೂ ಬೆಂಬಿಡದೆ ಗರುಡವೇಗದಿಂದ ರಥಾರೂಢರಾಗಿ ಬೆನ್ನಟ್ಟಿಬರಲು ಓಡಿಓಡಿ ಅವನ ಕುದುರೆಯು ದಾರಿಯಲ್ಲಿಯೇ ಪ್ರಾಣನೀಗಿ ಬಿದ್ದುಬಿಟ್ಟಿತು. ಆಗ ಶತಧನ್ವನು ಅದನ್ನು ಬಿಟ್ಟು ಕಾಲಿನಿಂದಲೇ ಓಟ ಕಿತ್ತಿದ.

ಅದನ್ನು ನೋಡಿ ಕೃಷ್ಣನು ಬಲರಾಮನಿಗೆ ''ಅಣ್ಣ ರಥವನ್ನು ಇಲ್ಲಿಯೇ ನಿಲ್ಲಿಸು. ಶತಧನ್ವನ ಕುದುರೆ ಸತ್ತಿದ್ದು ಅವನು ಕಾಲ್ನಡಿಗೆಯಿಂದಲೇ ಓಡುತ್ತಲಿದ್ದಾನೆ. ನಾನೂ ಕೂಡ ಅವನ ಬೆನ್ನ ಹಿಂದಿನಿಂದಲೇ ಓಡಿಹೋಗಿ ಅವನನ್ನು ಕೊಂದು ಆ ಸ್ಯಮಂತಕವನ್ನು ತರುವೆನು. ನೀನಿಲ್ಲಿಯೇ ರಥದಲ್ಲಿರು'' ಎಂದು ಹೇಳಿ ಅವನ ಬೆನ್ನಟ್ಟಿದನು. ಮುಂದೆ ಮುಂದೆ ಶತಧನ್ವ, ಅವನ ಹಿಂದಿನಿಂದ ಕೃಷ್ಣ. ಇಬ್ಬರೂ ಓಡೋಡುತ್ತ ಮಿಥಿಲಾಪಟ್ಟಣದ ಸಮೀಪಕ್ಕೆ ಬಂದಾಗ ಶತಧನ್ವ ಕೃಷ್ಣನ ಕೈಗೆ ಸಿಕ್ಕ. ಕೃಷ್ಣನು ಅವನನ್ನು ಸಂಹರಿಸಿ ಅವನ ಮೈಮೇಲೆ ಹಾಕಿರುವ ವಸ್ತ್ರೋಪವಸ್ತ್ರಗಳನ್ನೆಲ್ಲ ಶೋಧಿಸಿ ನೋಡಿದನು. ಆದರೆ ಆದರೆ ಸ್ಯಮಂತಕ ಮಣಿಯು ದೊರೆಯಲಿಲ್ಲ.

ಅವನು ತಿರುಗಿ ಬಂದ ಕೂಡಲೇ ಬಲರಾಮನು ''ಎಲ್ಲಿದೆ ಸ್ಯಮಂತಕ? ಆ ಮಣಿಯನ್ನು ನನಗೆ ಬೇಗ ಕೊಡು'' ಎಂದು ಕೇಳಿದನು. ಆಗ ಕೃಷ್ಣನು ''ಶತಧನ್ವನ ಹತ್ತಿರ ಆ ರತ್ನವು ಇರಲೇ ಇಲ್ಲ'' ಎಂದು ಹೇಳಲು ''ಥೂ! ಕೃಷ್ಣ, ಧಿಕ್ಕಾರವಿರಲಿ ನಿನ್ನ ಆಶಾಲು ಸ್ವಭಾವಕ್ಕೆ. ನಿನ್ನಂಥ ಸ್ವಾರ್ಥಾಂಧರಾದ ಕೃಷ್ಣ ಹಾಗೂ ವಂಚಕ ಜನರ ಸಹವಾಸವೇ ನನಗೆ ಬೇಡ. ತಮ್ಮನೆಂದು ನಿನ್ನನ್ನು ಬಿಟ್ಟಿದ್ದೇನೆ. ಇರಲಿ. ಆ ಸ್ಯಮಂತಕವನ್ನು ನೀನೇ ಹತ್ತಿರ ಇಟ್ಟುಕೊಂಡು ಶ್ರೀಮಂತನಾಗಿ ಸುಖಿಸು. ನನಗೆ ನೀನೂ ಬೇಡ, ನಿನ್ನ ದ್ವಾರಕೆಯೂ ಬೇಡ,'' ಎಂದು ಹೇಳಿ ಸಿಟ್ಟಿನಿಂದ ಅಲ್ಲಿಯೇ ಸಮೀಪದಲ್ಲಿರುವ ಮಿಥಿಲಾ ಪಟ್ಟಣವನ್ನು ಪ್ರವೇಶಿದನು. ಮಿಥಿಲಾಪತಿಯಾದ ವಿದೇಹ ರಾಜನು ಅಪರೂಪವಾಗಿ ಸ್ವಯಂಪ್ರೇರಣೆಯಿಂದ ತನ್ನ ನಗರಕ್ಕೆ ದಯಮಾಡಿಸಿದ ಆ ಕೃಷ್ಣಾಗ್ರಜನನ್ನು ಅತ್ಯಂತ ಗೌರವದಿಂದ ಬರಮಾಡಿಕೊಂಡು ಸಂಭ್ರಮದ ಸ್ವಾಗತವನ್ನಿತ್ತು ಅತ್ಯಾನಂದದಿಂದ ಪೂಜಿಸಿದನು.

ಇತ್ತ ಧೂರ್ತನಾದ ಅಕ್ರೂರನು ತನ್ನ ಮೇಲೆ ಯಾರಿಗೂ ಸಂದೇಹ ಬರಬಾರದೆಂದು ನಾನಾ ತರಹದ ಯಜ್ಞಗಳನ್ನು ಪ್ರಾರಂಭ ಮಾಡಿದನು. ಉತ್ತಮೋತ್ತಮವಾದ ರತ್ನ ಮುತ್ತು ಧನಕನಕಾದಿ ದ್ರವ್ಯಗಳನ್ನು ವಿಪುಲವಾಗಿ ವಿದ್ವಾಂಸರಾದ ಬ್ರಾಹ್ಮಣರಿಗೆ ದಾನಕೊಡುತ್ತ ಅಖಂಡ ಅರವತ್ತು ವರುಷಗಳವರೆಗೆ ಯಜ್ಞಸತ್ರವನ್ನು ಅವಿಚ್ಛಿನ್ನವಾಗಿ ನಡೆಯಿಸಿದನು. ಸ್ಯಮಂತಕ ಮಣಿಯು ಪ್ರತಿದಿನವೂ ತನಗೆ ಕೊಡುವ ಸುವರ್ಣರಾಶಿಯ ಶೇಖರಣೆಯಿಂದ ಬೇರೆ ರಾಜರ ಕಾಕದೃಷ್ಟಿ ತನ್ನ ಮೇಲೆ ಬೀಳಬಾರದೆಂದು ಅವನು ಈ ಯಜ್ಞಯಾಗಗಳ ನೆವದಿಂದ ತನ್ನಲ್ಲಿದ್ದ ವಿಪುಲೈಶ್ವರ್ಯವನ್ನೆಲ್ಲ ಬಡಬಗ್ಗರಿಗೂ ಪಂಡಿತಪಾಮರರಿಗೂ ದಾನದಕ್ಷಿಣಾದಿ ರೂಪದಿಂದ ಹಂಚಿ ಪುಣ್ಯವನ್ನೂ ಕೀರ್ತಿಯನ್ನೂ ಪಡೆದನು. ಅವನು ಶ್ರೌತವಿಭಾಗದಲ್ಲಿ ಹೇಳಿದ ಸಕಲ ಯಜ್ಞಗಳನ್ನೂ ಸ್ಯಮಂತಕದ ಸಹಾಯದಿಂದ ಅನೂಚಾನವಾಗಿ ಯಶಿಸ್ವೀ ರೀತಿಯಿಂದ ಆಚರಿಸಿದ್ದರಿಂದ ಅವುಗಳಿಗೆಲ್ಲ

ಅಕ್ರೂರಯಜ್ಞಗಳೆಂಬ ಹೊಸ ಹೆಸರೇ ಬಿದ್ದಿತು. ಯಜ್ಞದೀಕ್ಷೆಯನ್ನು ತೆಗೆದು ಕೊಂಡದ್ದರಿಂದ ರಾಮಕೃಷ್ಣರಾಗಲಿ ಅನ್ಯರಾಜರಾಗಲಿ ಅವನನ್ನು ಯುದ್ಧಕ್ಕೆ ಕರೆಯುವ ಭಯವೇ ಇರಲಿಲ್ಲ. ಹೀಗೆ ಅತ್ಯಂತ ಚಾಣಾಕ್ಷನೂ ದೂರದರ್ಶಿಯೂ ಆದ ಅಕ್ರೂರನು ಸ್ಯಮಂತಕ ಮಣಿಯನ್ನು ಪರಭಾರೆ ಶತಧನ್ವನಿಂದ ಕೌಶಲ್ಯದಿಂದ ದೊರಕಿಸಿಗೊಂಡು ತನ್ನ ಹೆಸರನ್ನು ಕೆಡಿಸಿಗೊಳ್ಳದೇ ಅದರಿಂದ ಕೀರ್ತಿಶಾಲಿಯಾಗಿ ನಿರಂತರ ಅನ್ನಸಂತರ್ಪಣೆ ಭೂರಿದಕ್ಷಿಣೆಗಳಿಂದ ಭೂತಲದ ಕಾಮಧೇನು ಕಲ್ಪವೃಕ್ಷವೆಂದು ಖ್ಯಾತಿಪಡೆದನು.

ಇತ್ತ ದುರ್ಯೋಧನನು ರಾಮಕೃಷ್ಣರಲ್ಲಿ ವೈಮನಸ್ಯ ಹುಟ್ಟಿ ಬಡೆದಾಡಿ ಬಲರಾಮನು ದ್ವಾರಕೆಯನ್ನು ಬಿಟ್ಟು ಮಿಥಿಲೆಯಲ್ಲಿರುವ ಸಮಾಚಾರವನ್ನು ತಿಳಿದು ಸಂತೋಷಪಟ್ಟ. ಅವನ ಆಜನ್ಮ ವೈರಿಯಾದ ಭೀಮಸೇನನು ಗದಾವಿದ್ಯೆಯಲ್ಲಿ ಅಪ್ರತಿಮ ವೀರನಿದ್ದುದರಿಂದ ದುರ್ಯೋಧನನಿಗೆ ಭೀಮನ ಭೀತಿಯ ಭೂತವೇ ಬಡಿದು ಕೊಂಡಂತಾಗಿತ್ತು. ಭೀಮನಂತೆಯೇ ಬಲರಾಮನಾದರೂ ಗದಾಚಾಲನ ವಿದ್ಯೆಯಲ್ಲಿ ಒಳ್ಳೇ ಪರಿನಿಷ್ಠಿತ ನಿದ್ದುದರಿಂದ ಈ ಸಂಧಿಯನ್ನು ಸಾಧಿಸಿ ಸುಯೋಧನನು ಅವನಿಂದ ಆ ವಿದ್ಯೆಯನ್ನು ಚೆನ್ನಾಗಿ ಪಡೆದು ಪಂಡಿತನಾಗಿ ಬಲಭೀಮನ ಪ್ರತಿಮಲ್ಲನಾಗಿ ನಿಂತುಕೊಂಡನು.

ಮುಂದೆ ಕೆಲದಿನಗಳು ಕಳೆದ ಬಳಿಕ ಅಣ್ಣನು ದ್ವಾರಕೆಗೆ ಮರಳದೇ ಇದ್ದುದನ್ನು ನೋಡಿ ಶ್ರೀಕೃಷ್ಣನೇ ಮನದಲ್ಲಿ ನೊಂದುಕೊಂಡ. ಸ್ವಯಂ ತಾನೇ ಅನೇಕ ವೃಷ್ಣಿ ಅಂಧಕ ಪ್ರಮುಖರನ್ನು ಕರೆದುಕೊಂಡು ಮಿಥಿಲಾಪಟ್ಟಣಕ್ಕೆ ಹೋಗಿ ಹೇಳಿ ಸಂತೈಸಿ ಅವನನ್ನು ಕರೆದುಕೊಂಡು ಊರಿಗೆ ಬಂದನು. ರಾಮಕೃಷ್ಣರಿಬ್ಬರೂ ಮತ್ತೆ ಕೂಡಿದ್ದನ್ನು ನೋಡಿ ಅಕ್ರೂರ ತನ್ನ ಗುಟ್ಟುರಟ್ಟಾಗಿ ತನ್ನ ತಪ್ಪು ಹೊರಬಿದ್ದೀತೆಂಬ ಭಯದಿಂದ ಅಂಧಕರೊಂದಿಗೆ ಊರುಬಿಟ್ಟನು. ಅಕ್ರೂರನು ಸತ್ರಾಜಿತ ಹಾಗೂ ಶತಧನ್ವ ಇಬ್ಬರ ಮರಣಕ್ಕೂ ಕಾರಣನಾಗಿ ಮಣಿಯನ್ನು ತನ್ನಲ್ಲಿರಿಸಿ ಕೊಂಡದ್ದರಿಂದ ಅವನನ್ನು ನಿಗ್ರಹಿಸುವದು ನ್ಯಾಯ ಪ್ರಾಪ್ತವೆಂದು ಅನಿಸಿದರೂ ಕೃಷ್ಣನು ಯಾದವರಲ್ಲಿ ಅಂತಃಕಲಹ ಸುರುವಾಗಿ ಸ್ವಜನದ್ವೇಷವಾಗುವುದೆಂದು ಅವನನ್ನು ಉಪೇಕ್ಷೆಮಾಡಿ ಹೋಗಗೊಟ್ಟನು. ಹೀಗೆ ಅಕ್ರೂರನು ದ್ವಾರಕೆಯನ್ನು ತ್ಯಜಿಸಿ ಹೋದಕೂಡಲೇ ಆ ದೇಶದಲ್ಲೆಲ್ಲ ಮಳೆ ಯಾಗದೆ ಬೆಳೆಬಾರದೆ ಭೀಕರವಾದ ಬರಗಾಲ ತಲೆದೋರಿ ಜನರಲ್ಲಿ ಹಾಹಾಕಾರವೆದ್ದಿತು.

ಆಗ ಕುಕುರ ಅಂಧಕ ಮೊದಲಾದ ಎಲ್ಲ ಯಾದವರೂ ಕೂಡಿ ಹೋಗಿ ಬಗೆಬಗೆ ಯಿಂದ ಬಿನ್ನವಿಸಿ ಹೇಳಿಕೊಂಡು ಆ ಅಕ್ರೂರನನ್ನು ಮತ್ತೆ ದ್ವಾರಕೆಗೆ ಕರೆದುಕೊಂಡು ಬಂದರು. ಮರಳಿ ಬಂದು ಅಕ್ರೂರನು ದ್ವಾರಕಾವತಿಯ ದ್ವಾರದಲ್ಲಿ ಕಾಲಿರಿಸುವದೊಂದೇ ತಡ ಒಂದೇ ಸಮನೆ ಮಳೆಗರೆಯಲು ಸುರುವಾಯಿತು. ಅಕ್ರೂರನ ಅದ್ಭುತವಾದ ಸಾಮರ್ಥ್ಯ ವನ್ನು ಕಂಡು ಜನರೆಲ್ಲ ಆನಂದಪಟ್ಟು ಅವನನ್ನು ಆತ್ಮಾದರದಿಂದ ಕಾಣಹತ್ತಿದರು.

ಚತುರಮತಿಯಾದ ಅವನು ಊರಿಗೆ ಬಂದ ಬಳಿಕ ಕೃಷ್ಣನ ಮನಸ್ಸನ್ನು ಒಲಿಸಿಕೊಳ್ಳಲು ಗುಣಶೀಲ ಸೌಂದರ್ಯ ಸಂಪನ್ನಳಾದ ತನ್ನ ತಂಗಿಯನ್ನು ಅವನಿಗೆ ಮದುವೆ ಮಾಡಿಕೊಟ್ಟನು. ಇದರಿಂದ ಅವರಲ್ಲಿಯ ಮನಸ್ತಾಪಗಳೆಲ್ಲ ಅಳಿದುಹೋಗಿ ಮತ್ತೆ ಮೊದಲಿನ ಸ್ನೇಹ ಕುದುರಲು ಅವಕಾಶವಾಯಿತು. ಸರ್ವಜ್ಞನಾದ ಶ್ರೀಕೃಷ್ಣನಿಗೆ 'ಅಕ್ರೂರ ಯಜ್ಞ'ಗಳಲ್ಲಿ ದಾನ ಧನ ರೂಪವಾಗಿ ಅಖಂಡ ಅರವತ್ತು ವರುಷಗಳ ಕಾಲ ಹಣದ ಹುಚ್ಚುಹೊಳೆ ಹರಿದದ್ದನ್ನು ಕಂಡು ಸ್ಯಮಂತಕ ಮಣಿ ಅಕ್ರೂರನ ಹತ್ತಿರ ಇರಲೇಬೇಕೆಂದು ಖಾತ್ರಿಯಾಗಿದ್ದಿತು.

ಆದುದರಿಂದ ಒಂದು ದಿನ ಯಾದವರ ಸಭೆಯಲ್ಲಿ ಕುಳಿತಾಗ ಕೃಷ್ಣನು ಅಕ್ರೂರನನ್ನು ಕುರಿತು ಪ್ರಶಾಂತವಾದ ಸ್ವರದಲ್ಲಿ- ''ಅಕ್ರೂರ! ಆ ಸ್ಯಮಂತಕವು ಖಂಡಿತವಾಗಿಯೂ ನಿನ್ನ ಹತ್ತಿರವೇ ಇದೆ. ಒಳ್ಳೆಯವನೂ ಖ್ಯಾತನೂ ನನಗೆ ಆಪ್ತಸ್ನೇಹಿತನೂ ಆದ ನೀನು ಇನ್ನು ನನಗೆ ವಂಚನೆ ಮಾಡದೆ ಅದನ್ನು ಕೊಟ್ಟುಬಿಡು. ಅದರಿಂದಾಗಿ ನನಗೆ ನಿನ್ನ ಮೇಲಿನ ಕೋಪವು ಆ ಮಾತಿಗೆ ಇಂದು ಅರವತ್ತು ವರುಷಗಳು ಕಳೆದರೂ ಕಡಿಮೆಯಾಗಿಲ್ಲ. ಕಾರಣ ಅದನ್ನು ತಂದು ಒಪ್ಪಿಸು'' ಎಂದು ಸ್ಪಷ್ಟವಾಗಿ ಹೇಳಿದನು.

ಕೃಷ್ಣನ ಈ ಮೃದು ಗಂಭೀರವಾದ ಮಾತುಗಳನ್ನು ಕೇಳಿ ಬುದ್ಧಿವಂತನಾದ ಅಕ್ರೂರನು ಎದುರು ಮಾತನಾಡದೆ ಆ ಸ್ಯಮಂತಕ ಮಣಿಯನ್ನು ತಂದು ಶ್ರೀಕೃಷ್ಣನಿಗೆ ಸಭೆಯಲ್ಲಿಯೇ ಒಪ್ಪಿಸಿ ಕೈಮುಗಿದು ತನ್ನ ತಪ್ಪನ್ನು ಮನ್ನಿಸಬೇಕೆಂದು ಬೇಡಿಕೊಂಡನು. ಆ ಭಕ್ತ ವತ್ಸಲನಾದ ಭಗವಂತನು ಅವನ ಆಗಿನ ಸರಳ ವೃತ್ತಿ ಪ್ರಾರ್ಥನಾ ನಮ್ರತೆ ಮತ್ತು ಭಕ್ತಿಭಾವಗಳನ್ನು ಕಂಡು ಸಂತುಷ್ಟನಾಗಿ ಸ್ವಾಧೀನವಾದ ಆ ಸ್ಯಮಂತಕಮಣಿ ರತ್ನವನ್ನು ಮತ್ತೆ ಅಕ್ರೂರನನ್ನೇ ಅಂತಕರಣದಿಂದ ಕರೆದು ಅವನ ಕೊರಳಲ್ಲಿ ತನ್ನ ಕೈಯಿಂದಲೇ ಹಾಕಿ ಆಶೀರ್ವದಿಸಿ ಕಳಿಸಿದನು. ಕೃಷ್ಣನ ಕೈಯಿಂದ ಕರುಣೆಯ ಪರಮ ಪ್ರಸಾದರೂಪವಾಗಿ ಬಂದ ಆ ಮಣಿರತ್ನದಿಂದ ಅಕ್ರೂರನು ಆಗ ಸಾಕ್ಷಾತ್ ಸವಿತೃದೇವನಂತೆ ಓಜೋ ಭರದಿಂದ ತೇಜೋಭಾಸುರನಾಗಿ ಕಂಗೊಳಿಸಿದನು.

ಈ ಸ್ಯಮಂತಕ ಮಣಿಯ ಆಖ್ಯಾನವನ್ನು ಕೇಳಿದರೆ ಅಕ್ರೂರನ ಅಪರಾಧ ಅಕ್ಷಮ್ಯ ವೆನಿಸುವುದು. ಅವನನ್ನು ನಿಗ್ರಹಮಾಡುವ ಶಕ್ತಿ ತನ್ನಲ್ಲಿದ್ದರೂ ಮಾಡದೆ ಅವನನ್ನು ಕ್ಷಮಿಸಿ ಮರಳಿ ಆ ಮಣಿಯನ್ನು ಅವನಿಗೇ ಕೊಟ್ಟ ಭಕ್ತರ ಕೈವಾರಿಯಾದ ಆ ಭಗವಂತನ ಕರುಣೆ ಭಕ್ತವಾತ್ಸಲ್ಯ ದೊಡ್ಡಸ್ತಿಕೆ, ಮೊದಲಾದ ಗುಣಗಳನ್ನು ಕೇಳಿ ಮುಗ್ಧನಾದ ಜನಮೇಜಯ ಆ ಪರಮಾತ್ಮನ ಉಳಿದ ಅವತಾರ ಲೀಲೆಗಳನ್ನೂ ಕೃಷ್ಣಾವತಾರದ ಕ್ರೀಡಾ ಕೌತುಕವನ್ನೂ ಹೆಚ್ಚು ಹೆಚ್ಚಾಗಿ ಕೇಳಬೇಕೆಂಬ ಬಯಕೆಯಿಂದ ಭಾರತಾಚಾರ್ಯರಾದ ಶ್ರೀ ವೈಶಂಪಾಯನರಿಗೆ ಪ್ರಶ್ನೆ ಮಾಡುತ್ತಾನೆ.

## ವಿಷ್ಣುವಿನ ಅವತಾರ ಲೀಲೆ

**ಜನಮೇಜಯ-** ಅಮಿತತೇಜಃಶಕ್ತಿಗಳುಳ್ಳ ಪರಬ್ರಹ್ಮನಾದ ಆ ವಿಷ್ಣುವಿನ ಅನೇಕ ಅವತಾರಗಳಲ್ಲಿ ವರಾಹಾವತಾರವೂ ಒಂದು ಎಂದು ಪುರಾಣಿಕರಿಂದ ಕೇಳಿದ್ದೇನೆ. ಆ ವರಾಹವತಾರದ ಚರಿತ್ರೆ, ಉದ್ದೇಶ, ವಿಧಿವಿಸ್ತಾರಗಳೂ, ಪ್ರಭಾವ ಪ್ರಯೋಜನಗಳೂ ನನಗೆ ತಿಳಿದಿಲ್ಲ. ಹಿಂದೆ ಒಮ್ಮೆ ಮಹಾಯಜ್ಞದಲ್ಲಿ ಯೋಗ್ಯ ಬ್ರಾಹ್ಮಣರೆಲ್ಲ ಕೂಡಿದಾಗ ಭಗವಾನ್ ಬಾದರಾಯಣರು ಸಾಕ್ಷಾತ್ ಶ್ರೀಮಾನ್ ಮೂಲ ನಾರಾಯಣನ ವಾರಾಹರೂಪದ ಸ್ವರೂಪ ಸಂಪ್ರದಾಯಾದಿ ಮಹಾಮಹಿಮೆಗಳನ್ನು ನಿರೂಪಣೆ ಗೈದಿದ್ದರಂತೆ. ತಾವೀಗ ತನ್ನ ಕೋರೆದಾಡೆಗಳಿಂದ ಭೂಮಿಯನ್ನು ಸಮುದ್ರ ತಳದೊಳಗಿಂದ ಎತ್ತಿ ಲೀಲೆಯಿಂದ ಹೊತ್ತುತಂದ ಆ ವರಾಹ ವಿಭುವಿನ ಚರಿತ್ರೆಯನ್ನು ನನಗೆ ಹೇಳಬೇಕು. ಮತ್ತು ಉಳಿದ ಅವತಾರ ಚರಿತ್ರೆಗಳನ್ನೂ ನಿರೂಪಿಸಬೇಕು. ಮತ್ತು ವಿಶ್ವವಂದ್ಯ, ವಿಭೂತಿಯಾದ ವಿಷ್ಣುವು ಮನುಷ್ಯಮಾತ್ರನಾಗಿ ವಸುದೇವನ ಮನೆಯಲ್ಲಿ ಕೃಷ್ಣನಾಗಿ ಏಕೆ ಹುಟ್ಟಿದನು? ಪ್ರಪಂಚಪಾಲನಾದ ಅವನು ಪಶುಪಾಲನಾಗಿ, ಶ್ರೀಗರ್ಭನಾದ ಅವನು ಸ್ತ್ರೀಗರ್ಭವಾಸ ದುಃಖವನ್ನು ಹೇಗೆ ಅನುಭವಿಸಿದನು?

ಮತ್ತು ಇದರಂತೆ ವರಾಹ ನರಸಿಂಹ ವಾಮನಾದಿರೂಪಗಳಿಂದ ಭಗವಂತನು ಏಕೆ ಪ್ರಾದುರ್ಭೂತನಾದನು? ಇದನ್ನೆಲ್ಲ ವಿಸ್ತಾರವಾಗಿ ನನಗೆ ತಿಳಿಸಿರಿ.

ನಿಖಿಲ ಯಜ್ಞಮಯನೂ, ಯಜ್ಞಪತಿಯೂ, ದಕ್ಷಿಣಾ ಗಾರ್ಹಪತ್ಯ ಆಹವನೀಯಾದಿ ಅಗ್ನಿರೂಪನೂ, ವೇದೀ, ಸ್ರುಕ್, ಮೊದಲಾದ ಯಜ್ಞಾಂಗನೂ, ಯಜ್ಞಫಲಪ್ರದನೂ, ಯಜ್ಞಮಂತ್ರ ಪ್ರತಿಪಾದ್ಯನೂ ಆಗಿ ದೇವತೆಗಳಿಗೂ ಪಿತೃಗಳಿಗೂ ಹವ್ಯಕವ್ಯ ವಿಭಾಗವನ್ನು ಕಲ್ಪಿಸಿ ಯೂಪ, ಸಮಿಧಾ, ಸ್ರುಚ, ಸೋಮಾದಿ ಯಾಜ್ಞಿಕ ದ್ರವ್ಯಗಳನ್ನೆಲ್ಲ ನಿರ್ಮಿಸಿ, ಅಗ್ನಿ ಮತ್ತು ಅದನ್ನು ಸ್ಥಾಪಿಸಲಿಕ್ಕೆ ಬೇರೆ ಬೇರೆ ಸ್ಥಾನಗಳನ್ನು ವ್ಯವಸ್ಥಿತಗೊಳಿಸಿ, ಸದಸ್ಯ, ಯಜಮಾನ ಮೊದಲಾವುಗಳಿಂದ ಉತ್ತಮೋತ್ತಮವಾದ ಯಜ್ಞಗಳನ್ನು ಸೃಷ್ಟಿಸಿದವ ಆ ಶ್ರೀಹರಿಯೆ. ಕಲಾ ಕಾಷ್ಠಾ-ಕ್ಷಣ-ಲವ-ಮೂಹೂರ್ತ-ತಿಥಿ-ಪಕ್ಷ-ಮಾಸ ಋತು-ವತ್ಸರಾದಿ ಕಾಲನಿಯಾಮಕನೂ ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂಬ ಮೂರು ವರ್ಣಗಳನ್ನೂ, ಋಗ್ವೇದ ಯಜುರ್ವೇದ ಸಾಮವೇದವೆಂಬ ಮೂರು ವೇದಗಳನ್ನೂ, ದಕ್ಷಿಣಾ ಆಹವನೀಯ ಗಾರ್ಹಪತ್ಯವೆಂಬ ಮೂರು ಅಗ್ನಿಗಳನ್ನೂ, ಭೂತಭವಿಷ್ಯ ವರ್ತಮಾನ ಗಳೆಂಬ ಮೂರು ಕಾಲಗಳನ್ನೂ, ಸತ್ವ ರಜ ತಮ ಎಂಬ ಮೂರು ಗುಣಗಳನ್ನೂ, ಹೊನ್ನು ಹೆಣ್ಣು ಮಣ್ಣು ಎಂಬ ಮೂರು ಆಸೆಗಳನ್ನೂ, ಭೂಮಿ ಅಂತರಿಕ್ಷ ಸ್ವರ್ಗ ಮೂರು ಲೋಕಗಳನ್ನೂ ಮತ್ತು ಇದಲ್ಲದೇ ಅನಂತಾನಂತ ಲೋಕಗಳನ್ನೂ ಸೃಷ್ಟಿಮಾಡಿದ ಇದೇ ಮಹಾವಿಷ್ಣು. ಬ್ರಾಹ್ಮಣಾದಿ ನಾಲ್ಕು ವರ್ಣಗಳನ್ನೂ ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳನ್ನೂ ಹೋತಾ ಉದ್ಗಾತಾದಿ ನಾಲ್ಕು ತರಹದ ಋತ್ವಿಜರನ್ನೂ ಆನ್ವೀಕ್ಷಿಕೀ ತ್ರಯೀ ವಾರ್ತಾ ದಂಡನೀತಿ ಎಂಬ ನಾಲ್ಕು ವಿದ್ಯೆಗಳ್ನ ಇವನೇ ನಿರ್ಮಿಸಿದ.

ಪಂಚಮಹಾ ಭೂತಾತ್ಮಕನೂ ತನ್ನಿಯಾಮಕನೂ ಚಂದ್ರಸೂರ್ಯ ಅಗ್ನಿ ಗ್ರಹನಕ್ಷತ್ರಾದಿ ಜ್ಯೋತಿರ್ಮೂರ್ತಿಗಳಿಗೆಲ್ಲ ದೀಪ್ತಿದಾನಮಾಡುವವನೂ ವೇದ ಪ್ರತಿಪಾದ್ಯನೂ ಯಜ್ಞಯಾಗಾದಿ ಕ್ರಿಯೆಗಳ ಪರಮ ಪ್ರಯೋಜನ ಭೂತನೂ, ಮೋಕ್ಷಪ್ರದನೂ ಅಂತಕಾಂತಕನೂ ಪ್ರಾಣಾಪಾನಾದಿ ವಾಯು ಪ್ರೇರಕನೂ ಸರ್ವದೇಹಾಂತರ್ಯಾಮಿಯೂ ಪಿಂಡಾಂಡ ಬ್ರಹ್ಮಾಂಡಗಳನ್ನೆಲ್ಲ ವ್ಯಾಪಿಸಿ ಚರಾಚರ ಪ್ರಪಂಚವನ್ನೆಲ್ಲ ತನ್ನಿಚ್ಛೆಯಂತೆ ನಡೆಸುವವನೂ ಆದ ಆ ಸಾಕ್ಷಾತ್ ಶ್ರೀವಿಷ್ಣುವು ಮನುಷ್ಯರಲ್ಲಿ ಹೇಗೆ ಅವತರಿಸಿದನು? ಅದೆಲ್ಲವನ್ನೂ ನನಗೆ ನಿರೂಪಿಸಬೇಕು.''

ಜನಮೇಜಯನ ಈ ಎಲ್ಲ ಪ್ರಶ್ನೆ ಪರಂಪರೆಯನ್ನು ಕೇಳಿ ಅವನ ಭಗವದ್ಭಕ್ತಿ ಜಿಜ್ಞಾಸಾವೃತ್ತಿ ಹಾಗೂ ಸತ್ಯ ಪ್ರವೃತ್ತಿಗಳನ್ನು ನೋಡಿ ವೈಶಂಪಾಯನರು ಮೆಚ್ಚಿ ಅವನನ್ನು ಇಂಥ ಸೂಕ್ಷ್ಮ ಪ್ರಶ್ನೆಗಳನ್ನು ಮಾಡಿದ್ದಕ್ಕಾಗಿ ಅಭಿನಂದಿಸಿ ''ಆ ಭಗವನ್ಮಹಾ ಮಹಿಮೆಯನ್ನು ಸಾಕಲ್ಯೇನ ಬಣ್ಣಿಸುವುದು ನನ್ನಿಂದ ಸಾಧ್ಯವಿಲ್ಲ. ಕಾರಣ ಯಥಾಶಕ್ತಿ ಆ ಶ್ರೀವಿಷ್ಣುವಿನ ಅವತಾರ ವಿಶೇಷಗಳ ಪ್ರಯೋಜನ ಪ್ರಭಾವಗಳನ್ನು ನಿರೂಪಿಸುತ್ತೇನೆಂದು'' ಹೇಳಲು ಶುರುಮಾಡಿದರು.

**''ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ''**

ಎಂದು ಸ್ವತಃ ಭಗವತನೇ ಹೇಳಿದಂತೆ ಧರ್ಮಗ್ಲಾನಿಯಾಗಿ ಅಧರ್ಮ ಪ್ರಸಾರವೂ ಆದಾಗಲೆಲ್ಲ ಪರಮಾತ್ಮನು ಅವತಾರ ಮಾಡುತ್ತಾನೆ.

ಹದಿನಾಲ್ಕು ಲೋಕಗಳನ್ನೆಲ್ಲ ತನ್ನ ಉದರದಲ್ಲಿಟ್ಟುಕೊಂಡು ಪರಾತ್ಪರನಾದ ಪರಮಾತ್ಮ ಶ್ರೀಮನ್ನಾರಾಯಣನು ಪ್ರಳಯ ಜಲಧಿಯಲ್ಲಿ ಲಕ್ಷ್ಮೀ ಭುಜಾಂತರಗತನಾಗಿ ಸಹಸ್ರಯುಗಪರ್ಯಂತರದ ಯೋಗನಿದ್ರೆಯಿಂದ ಎದ್ದ ಬಳಿಕ ಸೃಷ್ಟಿಯನ್ನು ಮಾಡಬೇಕೆಂದು ಬಯಸಿ ಮೊದಲ ಚತುರ್ಮುಖ ಬ್ರಹ್ಮದೇವರನ್ನೂ ತದನಂತರ ಲೋಕಪಾಲರನ್ನೂ, ಸಪ್ತರ್ಷಿ ದೇವಗಣ, ಮಹಾದೇವ, ಸಮುದ್ರ, ಪರ್ವತ, ವಾಯು, ಸನತ್‌ಕುಮಾರ, ಮನ್ವಂತರಾಧಿಪತಿಗಳೇ ಮೊದಲಾದವರನ್ನೂ ನಿರ್ಮಿಸಿದನು. ಮತ್ತು ಸಮುದ್ರದ ಮಧ್ಯದಲ್ಲಿರುವ ಯುದ್ಧದುರ್ಮದಾಂಧವಾದ ಮಧು ಮತ್ತು ಕೈಟಭ ಎಂಬ ದುರ್ಧರ್ಷದಾನವರನ್ನು ಲೀಲಾಜಾಲವಾಗಿ ಸಂಹರಿಸಿ ವರವಿತ್ತು ಮಧೂಸೂದನ ಕೈಟಭಾರಿ ಎಂದು ಹೆಸರಾದನು. ಪ್ರಳಯ ಸಾಗರದಲ್ಲಿ ಶಯನ ಮಾಡಿದ ಆ ಪದ್ಮನಾಭನ ನಾಭೀ ಪುಷ್ಕರದಿಂದ ಋಷಿಗಣ ಸಹಿತ ಎಲ್ಲ ದೇವಾಧಿದೇವತೆಗಳೂ ಜನಿಸಿದ್ದರಿಂದ ಅದಕ್ಕೆ ಪುಷ್ಕರ ಪ್ರಾದುರ್ಭಾವವೆನ್ನುವರು. ವೇದಾರ್ಥದ ಉಪಬೃಂಹಣವನ್ನು ಮಾಡುವ ಪುರಾಣಗಳಲ್ಲಿ ಪರಮಾತ್ಮನ ವರಾಹ ಪ್ರಾದುರ್ಭಾವದ ಬಣ್ಣನೆ ವಿಶೇಷವಾಗಿ ಬರುತ್ತದೆ. ಶ್ರುತಿಮುಖನಾದ ಈ ವರಾಹನಿಗೆ ಯಜ್ಞವರಾಹನೆಂದೂ ಕರೆಯುವರು. ಋಗ್ವೇದ ಯಜುರ್ವೇದ, ಸಾಮವೇದ ಅಥರ್ವಣವೇದ ಎಂಬ ನಾಲ್ಕು ವೇದಗಳೇ ಈ ಯಜ್ಞವರಾಹನ ನಾಲ್ಕು ಕಾಲುಗಳಿದ್ದಂತೆ. ಯಜ್ಞದಯೂಪವೇ (ಸ್ತಂಭ) ಅವನ ಕೋರೆದಾಡೆ. ಯಜ್ಞಾಗ್ನಿಯ ಜ್ವಾಲೆಗಳೇ ಅವನ ಜಿಹ್ವೆ. ದರ್ಭೆಗಳೇ ಕೂದಲುಗಳು. ಹಗಲಿರುಳುಗಳೇ ಕಣ್ಣುಗಳು. ಶಿಕ್ಷಾಕಲ್ಪಾದಿ ವೇದಾಂಗಗಳೇ ಕಿವಿಯ ಆಭರಣಗಳು. ಆಜ್ಯವೇ ಮೂಗು, ಸಾಮಘೋಷವೇ ಅವನ ಸ್ವರ. ಯಜ್ಞವೇದಿಯೇ ಹೆಗಲು. ಹವಿಯೇ ಉಸಿರು. ಹವ್ಯಕವ್ಯಗಳೇ ಗತಾಗತಿಗಳು. ಉಪನಿಷತ್ತೆ ಆಸನ, ಛಾಯೆಯೇ ಪತ್ನಿ. ಇಂಥ ಯಜ್ಞರೂಪಿಯಾದ ವೇದಮಯನಾದ ಆದಿವರಾಹನು ಏಕಾರ್ಣವವಾದ ಅಗಾಧವಾದ ಸಮುದ್ರಜಲದಲ್ಲಿ ಮುಳುಗಿದ ಸಶೈಲವನ ಕಾನನವಾದ ಈ ಸಮಸ್ತ ಪೃಥ್ವಿಯನ್ನೂ ತನ್ನ ದಂಷ್ಟ್ರಾದಂಡದಮೇಲೆ ಎತ್ತಿತಂದು ಉದ್ಧರಿಸಿದನು. ಭಗವಂತನ ಈ ವರಾಹರೂಪದ ವಿಶೇಷ ಮಹಿಮೆಯು ''ಯಸ್ಯರೂಪಂ ಬಿಭ್ರದಿ ಮಾಮವಿಂದದ್ ಗುಹಾಂ ಪ್ರವಿಷ್ಟಃ ಶರೀರಸ್ಯ ಮಧ್ಯೇ'' ಎಂಬ ವೇದಮಂತ್ರ ಪ್ರತಿಪಾದ್ಯವೂ ಆಗಿದೆ.

ಬ್ರಹ್ಮರ್ಷಿ ಕಶ್ಯಪರ ಹದಿಮೂರು ಜನ ಹೆಂಡಂದಿರಲ್ಲಿ ದಿತಿಯು ಒಳ್ಳೇ ರೂಪವತಿಯಾದ ಸುದತಿ. ಶೀಲ ಅವಳ ಸತೀತ್ವಕೆ ಕಳೆಕಟ್ಟಿದರೆ, ರೂಪ ಅವಳ ರಸಿಕತೆಗೆ ರಂಗಹೊಯ್ದಿತ್ತು. ಒಂದು ದಿನ ಸಂಧ್ಯಾಕಾಲದ ಸುಂದರ ಸನ್ನಿವೇಶದಲ್ಲಿ ಅವಳ ಪತಿ ಕಶ್ಯಪರು ಅಗ್ನ್ಯಾಗಾರದಲ್ಲಿ ಯಜ್ಞಾಹುತಿಗಳನ್ನು ಕೊಡುತ್ತ ಕುಳಿತಾಗ ಅವರ ತೇಜಃಪುಂಜವಾದ ಮುಖಮಂಡಲ ಹಾಗೂ ಆಕರ್ಷಕವಾದ ಆಕಾರ ಮತ್ತು ದಿವ್ಯ ಕಾಂತಿಗಳನ್ನು ಕಂಡು ದಿತಿಯ ತರುಣಹೃದಯ ಚಂಚಲವಾಯಿತು. ಮುಗ್ಧಮನೋಹರವಾದ ಅವರ ಮೊಗದ ಸೊಬಗನ್ನು ಬೊಗಸೆ ಗಣ್ಣಿನಿಂದ ಕುಡಿಯುತ್ತ ಅವಳು ತನ್ನ ಬಯಕೆಯನ್ನು ತಿಳಿಸಿದಾಗ ಕಶ್ಯಪರಿಗೆ ಅಚ್ಚರಿಯಾಯಿತು.

'ದಿತಿ ! ಸಂಧ್ಯಾಕಾಲವು ಪರಮಪವಿತ್ರವಾದ ಪುಣ್ಯಕಾಲ, ಪರಮೇಶ್ವರನು ಲೀಲಾತಾಂಡವವಾಡುತ್ತ ಸಂಚರಿಸುವ ಇಂಥ ಮಂಗಲ ಪ್ರಸಂಗದಲ್ಲಿ ಕಾಮಾತುರರಾಗಿ ವಾಮಾಚಾರಕ್ಕಿಳಿದರೆ ಕ್ಷೇಮವಾಗಲಿಕ್ಕಿಲ್ಲ. ಆದುದರಿಂದ ಪ್ರೇಯಸಿ ! ಒಂದು ಮುಹೂರ್ತ ತಾಳು. ರಾತ್ರಿಯಾಗಲಿ, ಆಗ ಕಾಮಕೇಲಿಗಳಿಂದ ನಿನ್ನ ಮನೋರಥವನ್ನು ತೃಪ್ತಿ

ಪಡಿಸುವೆನು' ಎಂದು ಹೇಳಿದರು. ಆದರೆ ಕಾಮನ ಕೈಗೊಂಬೆಯಂತಾದ ಅವಳ ಉತ್ತರಲವಾದ ಅಂತರಂಗದಲ್ಲಿ ಪತಿಯ ಮೃದು ಮಧುರವಾದ ನಿಷೇಧಾಕ್ಷರಗಳಿಂದ ಏನೂ ಪರಿಣಾಮವಾಗಲಿಲ್ಲ. ಬ್ರಹ್ಮವರ್ಚಸ್ವಿ ಗಳಾದ ಕಶ್ಯಪರ ಸರ್ವಾಂಗ ಸುಂದರವಾದ ಕಾಯಕಾಂತಿ ಅವಳ ಹೃದಯದ ನಾಡಿ ನಾಡಿಗಳಲ್ಲಿಯೂ ಉತ್ತಾನರಾಗದ ಉದ್ರೇಕವನ್ನು ತುಂಬಿ ತರಲವಿರಲವನ್ನಾಗಿ ಮಾಡಿತ್ತು. ಪ್ರೇಮಪರವಶಳಾದ ಆ ಮುನಿಮಾನಿನಿಯು ಮದನಾವಿಷ್ಟಳಾಗಿ ಮಡಿಯಿಂದ ಕುಳಿತು ಸಾಯಂತನ ಔಪಾಸನೆಯನ್ನು ಮಾಡುತ್ತಲಿರುವ ಮಹರ್ಷಿಗಳ ಧೋತರದ ಸೆರಗನ್ನು ಹಿಡಿದು ತನ್ನ ಅಭಿಲಾಷೆಯನ್ನು ಪೂರೈಸಿಕೊಡಬೇಕೆಂದು ಕಾಮಾಂಧಳಾಗಿ ಕೇಳಿಕೊಂಡಳು.

ಅವಳ ಭೋಗಾಭಿಲಾಷೆಯ ಈ ರಾಗಾತುರತೆಯನ್ನು ಕಂಡು, ಹೆಣ್ಣು ಹೃದಯದ ಉನ್ಮಾದಾವಸ್ಥೆಯ ಅತೃಪ್ತಿಯ ಘೋರ ಪರಿಣತಿಯನ್ನು ತಿಳಿದ ಕಶ್ಯಪರು 'ತಥಾಸ್ತು' ಎಂದು ಹೇಳಿ ದಿತಿದೇವಿಯ ಕಾಮನೆಯನ್ನು ಅಂದು ಆ ಸಂಧ್ಯಾಸಮಯದಲ್ಲಿಯೇ ಪೂರ್ತಿ ಗೊಳಿಸಿದರು. ಅದರ ದುರಂತ ಪರಿಣಾಮವನ್ನು ದಿವ್ಯದೃಷ್ಟಿಯಿಂದ ಕಂಡರಿಸಿ ಹೇಳಿದಾಗ ದಿತಿಗೆ ಗಾಬರಿಯಾಗಿ ಬಹಳೇ ಪಶ್ಚಾತ್ತಾಪವಾಯಿತು. ಅವಳ ಈ ಪಾಪಾಚಾರದ ಫಲವಾಗಿಯೇ ಹಿರಣ್ಯಾಕ್ಷ ಹಿರಣ್ಯಕಶ್ಯಪರು ಹುಟ್ಟಿದುದು. ಇವರು ವೈಕುಂಠಲೋಕದಲ್ಲಿ ವಿಷ್ಣುಪಾರ್ಷದರಾಗಿದ್ದು ಮುನಿ ಶಾಪದಿಂದ ಕ್ರೂರ ರಕ್ಕಸರಾಗಿ ದಿತಿಯ ಹೊಟ್ಟೆಯಿಂದ ಹುಟ್ಟಿಬಂದರು.

ಅವರಲ್ಲಿ ಕಿರಿಯವನಾದ ಹಿರಣ್ಯಾಕ್ಷನು ಮಹಾಬಲಿಷ್ಠನೂ, ದರ್ಪಿಷ್ಠನೂ ಇದ್ದುದರಿಂದ ತನ್ನ ತರುಣ ವಯದಲ್ಲಿ ಭೀಕರವಾದ ಗದೆಯನ್ನು ನೀಳ್ದೋಳುಗಳಲ್ಲಿ ತೂಗುತ್ತ ಸ್ವರ್ಗಕ್ಕೆ ಲಗ್ಗೆ ಇಟ್ಟನು. ಇವನ ಅತ್ಯುಗ್ರವಾದ ಆಕಾರ ಹಾಗೂ ಅವನು ಎತ್ತಿರುವ ಪ್ರಚಂಡ ಗದೆಯ ಪರಿಘ ಪರಿಣಾಮಗಳನ್ನು ಕಂಡೇ ದೇವತೆಗಳೆಲ್ಲ ಹೆದರಿ ಮೇರು ಮಂದರಗಳಲ್ಲಿ ತಲೆಮರೆಸಿಗೊಂಡರು. ಸ್ವರ್ಗಮಾರ್ಗಗಳೆಲ್ಲ ಶೂನ್ಯವಾದುದನ್ನು ಕಂಡು ದರ್ಪೋದ್ಧತ ದುಷ್ಟ ದಾನವನು ಅಥಾಹಸಾಗರದ ಗರ್ಭಗುಹೆಯಲ್ಲಿ ಪ್ರವೇಶಿಸಲಿಲ್ಲ ಸಂಸಾರದ ಸಾರ್ವಭೌಮನಾದ ವರುಣನ ಮನೆಯನ್ನು ಹೊಕ್ಕು ಅವನನ್ನು ಯುದ್ಧಕ್ಕಾಗಿ ಆಹ್ವಾನಿಸಿದನು. ಆಗ ವರುಣದೇವನು ಬಲವೀರ್ಯಮದೋತ್ಸಿಕ್ತನಾದ ಆ ದುರುಳ ದಾನವನನ್ನು ಕುರಿತು ''ವೀರವರ! ನಿನ್ನ ಜೊತೆಗೆ ಯುದ್ಧ ಮಾಡಲು ಉಪರತಿಯ ಮಾರ್ಗವನ್ನು ಹಿಡಿದು ಉಪಾಸನಾಕ್ರಮವನ್ನು ಕೈಕೊಂಡ ನಮ್ಮಂಥ ಸಾಮಾನ್ಯ ದೇವತೆಗಳು ಯೋಗ್ಯರಲ್ಲ. ಸರ್ವದೇವಾಧಿದೇವನಾದ ಆ ಶ್ರೀಹರಿಯೇ ನಿಮ್ಮಂಥ ದರ್ಪಾಂಧ ದಾನವರನ್ನು ದಮನ ಮಾಡಲು ಸಮರ್ಥನು. ನೀನು ಅವನೆಡೆಗೇ ಹೋಗು.'' ಎಂದು ಹೇಳಿಕಳುಹಿದನು. ಆಗ ಅಲ್ಲಿಂದ ಮರಳಿದ ಹಿರಣ್ಯಾಕ್ಷನು ದಾರಿಯಲ್ಲಿ ನಾರದರಿಂದ ಆ ಶ್ರೀ ಹರಿಯು ರಸಾತಲಗರ್ಭದಲ್ಲಿ ವರಾಹದ ವೇಷದಿಂದ ಭುವನೋದ್ಧರಣಮಾಡುತ್ತಲಿರುವನೆಂದು ಕೇಳಿ ತಿಳಿದುಕೊಂಡು ಸಮುದ್ರಮುಖಾಂತರವಾಗಿ ಪಾತಾಳಮೂಲವನ್ನು ಪ್ರವೇಶಿಸಿದನು.

ಅಲ್ಲಿ ಏಕಾಕಾರವಾದ ಅಗಾಧ ಅಪರಂಪಾರವಾದ ಜಲರಾಶಿಯಲ್ಲಿ ಮುಳುಗಿ ಹೋದ ಅಖಂಡ ಪೃಥ್ವೀಮಂಡಲವನ್ನು ತನ್ನ ಪ್ರಚಂಡವಾದ ಕೋರೆದಾಡೆಗಳ ಮೇಲೆ ಹೊತ್ತುಕೊಂಡು ಕಾಡುಹಂದಿಯೊಂದು ಮೇಲಕ್ಕೇಳುತ್ತಲಿತ್ತು. ಅದರ ದಂಷ್ಟ್ರಾದಂಡದಿಂದ ಸುತ್ತಲೂ ಚೆಲ್ವರಿದು ಚಿಮ್ಮುವ ಬೆಳಕಿನ ಸೆಳಕುಗಳನ್ನು ಕಂಡು ನಾರದರು ಹೇಳಿದ ಶ್ರೀಹರಿಯ ಸೂಕರರೂಪವು ಇದೇ ಎಂದು ನಿಶ್ಚಯಿಸಿ ತನ್ನ ಗದೆಯನ್ನು ಬೀಸಿ ಗದರಿಸಿದನು. ''ಎಲೋ

ಕಾಡಮಿಕವೇ! ಆ ಭೂಮಿಯನ್ನು ಹೊತ್ತುಕೊಂಡು ಎಲ್ಲಿಗೆ ನಡೆದಿರುವೆ? ಅದನ್ನು ಇಲ್ಲಿಯೇ ರಸಾತಲಮೂಲದಲ್ಲಿಯೇ ಇಟ್ಟುಬಿಡು. ಇಲ್ಲದಿದ್ದರೆ ಜೀವದಾಶೆಯನ್ನಾದರೂ ಬಿಟ್ಟುಬಿಡು.'' ಎಂದು ತನ್ನ ಗದೆಯನ್ನು ಬೀಸಿದನು.

ಆಗ ಶ್ರೀ ಹರಿಯು ನಕ್ಕು ''ಎಲೋ ದುರುಳ ದೈತ್ಯ! ನಿನ್ನಂಥ ಗ್ರಾಮಸಿಂಹ (ನಾಯಿ) ಗಳನ್ನು ಹುಡುಕಿ ಹೊಡೆಯುವದಕ್ಕಾಗಿಯೇ ನಾನಿಂಥ ವನವರಾಹ ವೇಷವನ್ನು ಧರಿಸಿದ್ದೇನೆ. ನಿನ್ನ ದರ್ಪಧಾಷ್ಟ್ರ್ಯಗಳ ಸದ್ದನ್ನು ಅಡಗಿಸುತ್ತೇನೆ ನಿಲ್ಲು'' ಎಂದು ಹೇಳಿ ಕೈಯಿಂದ ಕಿವಿಗಡ್ಡೆಯ ಮೇಲೆ ಬಲವಾಗಿ ಹೊಡೆದನು. ಆಗ ಅವನು ಭಾರೋದಗ್ರವಾದ ತನ್ನ ಗದಾಗ್ರದಿಂದ ಹರಿಯನ್ನು ಹೊಡೆಯ ಬಂದಾಗ ಆ ಸ್ವೇಚ್ಛಾ ವರಾಹನು ತನ್ನ ಎಡಗಾಲಿನಿಂದ ಅವನ ಗದೆಯನ್ನು ಒದ್ದು ಸುದರ್ಶನ ಚಕ್ರದಿಂದ ಲೀಲಾಜಾಲವಾಗಿ ಹಿರಣ್ಯಾಕ್ಷನನ್ನು ಸಂಹರಿಸಿದನು. ಆಗ ಬ್ರಹ್ಮಾದಿ ದೇವತೆಗಳೇ ವಂದಿ ಮಾಗಧರಾಗಿ ಸ್ತುತಿಸುತ್ತಲಿರುವಾಗ ನಾಕಲೋಕದ ನಾಗರಿಕರು ಹೂ ಮಳೆಯನ್ನು ಕರೆಯ ಹತ್ತಿದರು.

ವ್ರಾತ್ಯಾಧಮನಾದ ತನ್ನ ದೈತ್ಯಪುತ್ರನ ಅತ್ಯಾಚಾರ ಹತ್ಯಾಕಾಂಡಗಳನ್ನು ಕಂಡು ದುಃಖಿತಳಾದ ದಿತಿದೇವಿಯು ಶ್ರೀಹರಿಯ ಕೈಯಿಂದಲೇ ಅವನ ಮರಣವಾದದ್ದನ್ನು ಕೇಳಿ ತುಸು ಸಮಾಧಾನ ಹೊಂದಿದ್ದರೂ ಪುತ್ರ ಶೋಕವು ಅವಳ ಕರುಳನ್ನು ಹಿಂಡಿತ್ತು. ತನ್ನ ಇಬ್ಬರು ಮಕ್ಕಳೂ ಹೀಗೆ ದೇವ ದ್ರೋಹಿಗಳೂ ಧರ್ಮ ದ್ವೇಷಿಗಳೂ ಆಗಿ ಲೋಕ ಕಂಟಕರಾಗಿದ್ದನ್ನು ನೆನೆದು ಅವಳಿಗೆ ಬಹಳೇ ದುಃಖವಾಯಿತು. ಆಗ ಅವಳು ನಾರಾಯಣನಿಗೆ ಶರಣು ಬಂದು ''ಮಕ್ಕಳಲ್ಲದಿದ್ದರೆ ಮೊಮ್ಮಕ್ಕಳಲ್ಲಿ ಒಬ್ಬನಾದರೂ ಯೋಗ್ಯನಾಗಿ ಶ್ರೀಹರಿಯ ಪ್ರೀತಿಪಾತ್ರನಾಗಿ ವಂಶೋದ್ಧಾರವನ್ನು ಮಾಡಲಿ'' ಎಂದು ಬೇಡಿಕೊಂಡಳು. ಅದಕ್ಕೆ ಜಗದೀಶ್ವರನು 'ಅಸ್ತು' ಎಂದು ಹೇಳಿ ಪರಮ ಭಗವದ್ಭಕ್ತನೂ, ವೈಷ್ಣವಾಗ್ರೇಸರನೂ, ಮಹಾತ್ಮನೂ ಆದ ಅವಳ ಮೊಮ್ಮಗನು ತ್ವರಿತದಲ್ಲಿಯೇ ಹುಟ್ಟಿ ಕುಲಕೋಟಿಯನ್ನು ಉದ್ಧರಿಸುವನೆಂದು, ಹೇಳಿ ಅನುಗ್ರಹಿಸಿದನು.

ಇತ್ತ ಹಿರಣ್ಯಕಶಿಪುವು ವಿಷ್ಣುವಿನಿಂದ ಆದ ತನ್ನ ತಮ್ಮನ ವಧದ ವಾರ್ತೆಯನ್ನು ಕೇಳಿ ಸಂತಾಪದಿಂದ ಉರಿದು ಬಿದ್ದನು. ಹೇಗಾದರೂ ಮಾಡಿ ಆ ಹರಿಯ ಹುಟ್ಟನ್ನೇ ಅಡಗಿಸಿಬಿಡಬೇಕೆಂದು ಅವನು ಸಂಕಲ್ಪಿಸಿದನು. ಅದಕ್ಕಾಗಿ ಮೊದಲು ಲೋಕೋತ್ತರವಾದ ಶಕ್ತಿ ಸಾಮರ್ಥ್ಯಗಳನ್ನು ಸಂಪಾದಿಸ ಬೇಕೆಂದು ಬಗೆದು ತಪಸ್ಸಿಗೆ ಹೊರಟ. ಮಂದರ ದ್ರೋಣಿಯಲ್ಲಿ ಆ ದೈತ್ಯರ ಆದಿ ಪುರುಷ ಹತ್ತು ಸಾವಿರಕ್ಕೂ ಹೆಚ್ಚು ದೀರ್ಘಕಾಲ ನೀರಿನ ಆಹಾರ ಹಾಗೂ ಹಲವಾರು ದಿನ ನಿರಾಹಾರನಾಗಿಯೂ ಉಗ್ರತಪವನ್ನು ಆಚರಿಸಿದ. ಅವನ ಉಗ್ರತಪ, ನಿಯಮ, ನಿಗ್ರಹ, ನಿಶ್ಚಲ ಧ್ಯಾನಗಳಿಂದ ಪರಿತುಷ್ಟನಾದ ಪರಿಮೇಷ್ಠಿಯು 'ಬಯಸಿದ ವರಬೇಡು' ಎಂದು ಪ್ರೀತಿ ದುಂಬಿ ನುಡಿದ.

**ಹಿರಣ್ಯಕಶಿಪು:-** ನಾನು ಸಾಯಬಾರದು. ಯಾವುದರಿಂದಲೂ ಯಾರಿಂದಲೂ ಸಾಯಬಾರದು. ದೇವ ಅಸುರ ಗಂಧರ್ವ ಯಕ್ಷ ರಾಕ್ಷಸರಲ್ಲಿ-ಯಾರೂ ನನ್ನನ್ನು ಕೊಲ್ಲಬಾರದು. ತಪಸ್ವಿ ಋಷಿಗಳು ನನ್ನನ್ನು ಶಪಿಸಬಾರದು. ಯಾವುದೇ ಅಸ್ತ್ರ ಶಸ್ತ್ರ ಗಿಡಗುಡ್ಡ ಹಸಿ ಒಣ ಎಂಥದೇ ವಸ್ತುವಿನಿಂದ ನನಗೆ ಮರಣ ಬರಬಾರದು. ಆದರೆ ಬರಿಗೈಯಿಂದಲೇ ನನ್ನನ್ನೂ ನನ್ನ ಸೇವಕ ಸೈನಿಕರನ್ನೂ ಹೊಡೆದು ಬಡೆದು ಕೊಲ್ಲಬಲ್ಲ ವೀರಪುರುಷನಿಂದ ಮಾತ್ರ ನನಗೆ ಮರಣ ಬರಬೇಕು. ಇಂದ್ರ, ಚಂದ್ರ, ಸೂರ್ಯ, ಯಮ,

ಅಗ್ನಿ, ವರುಣ, ವಾಯು, ಕುಬೇರ ಎಲ್ಲರ ಶಕ್ತಿಸಾಮರ್ಥ್ಯಗಳು ನನ್ನಲ್ಲಿ ಒಟ್ಟೈಸಿ ನಾನೇ ಎಲ್ಲ ದಿಕ್ಪಾಲಕನಾಗಬೇಕು.''

ಹಿರಣ್ಯಕಶಿಪುವಿನ ಈ ಹೆಬ್ಬಯಕೆ ಹಾರೈಕೆಗಳಿಗೆಲ್ಲ 'ಹೂ' ಎಂದು ಹೇಳಿ ವರವಿತ್ತು ಅಂತರ್ಧಾನ ಹೊಂದಿದ ಶಾರದಾಪತಿ.

ದುಷ್ಟದೈತ್ಯನಿಗೆ ಇಷ್ಟ ಬಂದುದನ್ನೆಲ್ಲ ಪರಮೇಷ್ಠಿಯು ನೀಡಿದ್ದನ್ನು ನೋಡಿ ದೇವತೆಗಳಿಗೆ ಭುಗಿಲು. ಮುನಿಮನುಜರಿಗೆ ದಿಗಿಲು. ಹೆದರಿ ಸತ್ಯಲೋಕಕ್ಕೆ ಸಾರಿದರು. ಇದೇನು ಮಾಡಿದೆ? ಹೀಗೇಕೆ ಮನಬಂದಂತೆ ವರ ನೀಡಿದೆ? ಎಂದು ಆಕ್ಷೇಪಿಸಿದರು ಪಿತಾಮಹನನ್ನು. ಅದಕ್ಕೆ ಚತುರಾನನನ ಉತ್ತರ ಚುರುಕೂ ಆಗಿತ್ತು ಚತುರವೂ ಆಗಿತ್ತು.

**ಚತುರ್ಮುಖ:-** ತಪಸ್ಸಿಗೆ ಫಲದೊರೆಯಲೇಬೇಕಷ್ಟೇ! ತಪಃ ಫಲವಾಗಿ ಆತ ವರಬೇಡಿದ. ನಾನು ನೀಡಿದೆ. ನಿಮಗೇಕೆ ಚಿಂತೆ! ನಮ್ಮ ನಿಮ್ಮನ್ನು ಕಾಯುವ ಹರಿಯೇ ಅವನನ್ನು ಕೊಲ್ಲುವ.

ವರಪಡೆದ ಮರುದಿನವೇ ದೇವಲೋಕದ ಮೇಲೆ ದೈತ್ಯರಾಜನ ದಾಳಿ. ಇಂದ್ರಾದಿ ದೇವತೆಗಳಿಗೆಲ್ಲ ಪರಾಜಯದ ಪಾಳಿ. ಸ್ವರ್ಗಸಾಮ್ರಾಜ್ಯ ಸೂರೆ. ದೇವತೆಗಳಿಗೆಲ್ಲ ಯಜ್ಞ ಭಾಗದ ಆಹುತಿಯಲ್ಲಿ ಸೊನ್ನೆ. ಎಲ್ಲ ಹವಿಸ್ಸು ಯಜ್ಞಭಾಗ ದೈತ್ಯಾಧಮರಿಗೆ. ದೇವಗಣ ಮರುದ್ಗಣ ರುದ್ರಗಣ ಎಲ್ಲರ ಸಾಮೂಹಿಕ ಮೊರೆ ಶ್ರೀಹರಿಯಲ್ಲಿ. ''ಹೆದರಬೇಡಿ ಕೆಲವೇ ದಿನಗಳಲ್ಲಿ ಸಂಹರಿಸುವೆ ಹಿರಣ್ಯಕಶಿಪುವನ್ನು'' ಎಂದು ಹರಿಯಿಂದ ಸುರರಿಗೆಲ್ಲ ಆಶ್ವಾಸನೆ.

ಅದರಂತೆ ಅಸುರ ಸಾರ್ವಭೌಮನ ಸಭೆಗೆ ಶ್ರೀಹರಿಯ ಆಗಮನ. ಅದೂ ವಿಚಿತ್ರ ವೇಷದಲ್ಲಿ. ಇತ್ತ ಮಾನವನಲ್ಲ ಅತ್ತ ಮೃಗವೂ ಅಲ್ಲ. ಅರ್ಧ ಮನುಷ್ಯ, ಅರ್ಧ ಸಿಂಹ. ವಿಚಿತ್ರವಾದ ನರಸಿಂಹ ರೂಪ. ದಟ್ಟ ಮೋಡಪಡೆ ಒಟ್ಟೈಸಿದಂತೆ. ಕೋಟಿ ಮಿಂಚುಗಳು ಏಕಕಾಲದಲ್ಲಿ ಮಿಂಚಿದಂತೆ, ಗುಡುಗುವ ಮೋಡದಂತೆ ಸಿಂಹನಾದದ ಅಬ್ಬರ. ಸಿಂಹದ ಗಾಂಭೀರ್ಯ, ಹುಲಿಯ ಚಾತುರ್ಯ. ನೇರವಾಗಿ ಹಿರಣ್ಯಕಶಿಪು ಇದ್ದಲ್ಲಿಗೆ ನಡೆದು ಬಂದ. ಸಹಸ್ರ ಸಹಸ್ರ ದೈತ್ಯವೀರರು ಸುತ್ತಮುತ್ತ. ನಟ್ಟನಡುವೆ ರಕ್ಕಸರಾಜ. ಅರೆಕ್ಷಣದಲ್ಲಿ ಸಾವಿರ ಸಾವಿರ ದೈತ್ಯ ಸೇನಾಪತಿಗಳೆಲ್ಲರೂ ಪುಡಿಪುಡಿ ನರಸಿಂಹನ ಒಂಟಿಗೈ ಏಟುಗಳಿಂದ. ಮರುಚಣದಲ್ಲಿ ಒಂದೇ ಮುಷ್ಟಿ ಪ್ರಹಾರದಿಂದ ಹಿರಣ್ಯಕಶಿಪು ಹತ ಪತಿತ. ಕ್ಷಣಾರ್ಧದಲ್ಲಿ ಸಮಸ್ತ ದೈತ್ಯಸೇನೆ ತಮ್ಮ ಸಮ್ರಾಟ ಸಹಿತ ವಿಧ್ವಸ್ತ.

ನೃಸಿಂಹಾವತಾರದ ಮುಂದಿನದೇ ವಾಮನಾವತಾರ. ಮಹಾಬಲಿಷ್ಠ ಬಲಿ ಚಕ್ರವರ್ತಿ. ಅವನ ಮುಂದೆ ಅಲ್ಪಿಷ್ಠ ವಾಮನ ಕುಳ್ಳವಾಮನ ಭೂಮಿಯಗಲ ಬಾನುದ್ದ ಬೆಳೆಯತೊಡಗಿದಾಗ ಹರಿಯ ಮೇಲೆ ಎರಗಿದ ದೈತ್ಯವೀರರು ಅಸಂಖ್ಯ. ವಿಪ್ರಚಿತ್ತಿ ಶಿಬಿ ಹಯಗ್ರೀವ ಪ್ರಲ್ಹಾದ ಅನುಲ್ಹಾದ ವೇಪನ ಮಹಾಜಿಹ್ವ ಪುಲೋಮ ನಮುಚಿ ಶಂಬರ ಕುಂಭ ಮೊದಲಾದ ದಾನವ ಕುಲದ ವೀರವರೇಣ್ಯರೆಲ್ಲ ಒಗ್ಗೂಡಿ ನುಗ್ಗಿದರು ಆ ತ್ರಿವಿಕ್ರಮನ ಮೇಲೆ, ಗಿಡ್ಡ ವಾಮನ ಗಗನದೆತ್ತರ ಬೆಳೆದು ತನ್ನ ಮೇಲೆ ಏರಿಬಂದ ದೈತ್ಯವೀರರನ್ನೆಲ್ಲ ಕೈಗಳಿಂದ ಗುದ್ದಿ ಕೆಡವಿದ. ಕಾಲಿನಿಂದ ಒದ್ದು ವಧಿಸಿದ. ತಿರೆಯನ್ನೆಲ್ಲ ತುಂಬಿ ಮುಗಿಲು ಮೀರಿ ಮೇಲೆ ಬೆಳೆದ ಬೆಳೆಯುತ್ತಲಿರುವ ತ್ರಿವಿಕ್ರಮನ ವಿರಾಟ್ ದೇಹದ ತಲೆ ಎದೆ ಬದಿಯಲ್ಲಿ ಹುದುಗಿದ ಚಂದ್ರಸೂರ್ಯರು ಅವನು ಬೆಳೆಬೆಳೆದಂತೆ ಹೊಟ್ಟೆ

ಹೊಕ್ಕಳಗಳಲ್ಲಿ ಅಡಗಿ ಕೊನೆಗೆ ಮಂಡೆಗಳಲ್ಲಿ ಮಿಂಚತೊಡಗಿದರು. ಹೀಗೆ ಆ ವಾಮನನು ವಿರಾಡ್ರೂಪದಿಂದ ಮೂರು ಲೋಕಗಳನ್ನೂ ವ್ಯಾಪಿಸಿ ಆಕ್ರಮಿಸಿ ದೈತ್ಯರಾಜನಿಂದ ಗೆದ್ದು ದೇವೇಂದ್ರನಿಗೆ ತ್ರೈಲೋಕ್ಯ ಸಾಮ್ರಾಜ್ಯವನ್ನು ನೀಡಿದ.

ಅನಂತರ ವೇದಗಳು ಲುಪ್ತವಾಗಿ ಯಜ್ಞಯಾಗಗಳು ನಷ್ಟವಾಗಿ ಧರ್ಮಶೈಥಿಲ್ಯದಿಂದ ವರ್ಣಸಂಕರವಾದಾಗಶ್ರೀಹರಿಯುದತ್ತಾತ್ರೇಯಎಂಬಕ್ಷಮಾಗುಣವಿಶಿಷ್ಟವಾದಒಂದುಅವತಾರವನ್ನು ಎತ್ತಿದನು. ಮತ್ತೆ ಭೂತಲದಲ್ಲಿ ಚಾತುರ್ವರ್ಣ್ಯವ್ಯವಸ್ಥೆಯನ್ನೂ ವೈದಿಕ ಸಂಪ್ರದಾಯವನ್ನೂ ಪುನರುಜ್ಜೀವನಗೊಳಿಸಿದ ಈಗ ದತ್ತನು ಕಾರ್ತವೀರ್ಯನಿಗೆ ಸಾವಿರ ತೋಳುಗಳನ್ನು ಇತ್ತು ಸಮಗ್ರ ಭೂಮಂಡಲವನ್ನುಧರ್ಮದಿಂದರಕ್ಷಿಸುಎಂದುವರನೀಡಿಅನುಗ್ರಹಿಸಿದ.

ಮುಂದೆ ಪರಶುರಾಮನಾಗಿ ಅದೇ ಶ್ರೀಹರಿಯು ಕಾರ್ತಿಕೇಯನಿಗೆ ತಾನು ನೀಡಿದ ಸಾವಿರ ತೋಳುಗಳನ್ನು ಸವರಿ ರಥದಲ್ಲಿ ಕುಳಿತವನನ್ನು ಕೆಳಗೆ ಎಳೆದು ತನ್ನ ಕೊಡಲಿಯಿಂದ ಕಡಿದು ಹಾಕಿದ. ಭೂಮಿಗೆ ಭಾರವಾದ ದುಷ್ಟ ಕ್ಷತ್ರಿಯ ರಾಜರನ್ನೆಲ್ಲ ಕಂಡಲ್ಲಿ ತುಂಡರಿಸಿದ. ಇಪ್ಪತ್ತೊಂದು ಬಾರಿ ಭೂಮಂಡಲವನ್ನು ಸುತ್ತಾಡಿ ಒಬ್ಬ ದುಷ್ಟ ಕ್ಷತ್ರಿಯನೂ ಉಳಿದಿಲ್ಲ ಎಂದೆನಿಸಿದ. ಹೀಗೆ ನಿಃಕ್ಷತ್ರಿಯ ಪೃಥ್ವಿಯನ್ನು ಮಾಡಿ ತಾನು ಸಂಪಾದಿಸಿದ ಐಶ್ವರ್ಯ ಹಾಗೂ ಭೂಲೋಕ ಸಾಮ್ರಾಜ್ಯವನ್ನೆಲ್ಲ ಮರೀಚಿ ಮಕ್ಕಳಾದ ಕಶ್ಯಪ ಮುನಿಗಳಿಗೆ ಅಶ್ವಮೇಧ ಯಜ್ಞದಲ್ಲಿ ದಕ್ಷಿಣಾರೂಪವಾಗಿ ಕೊಟ್ಟ ಬಿಟ್ಟ. ಬಂಗಾರ ಮತ್ತು ರತ್ನ ನಗನಾಣ್ಯ ಆನೆ ಕುದುರೆ ಹಸು ಎಲ್ಲವನ್ನೂ ಬೇರೆ ಬೇರೆ ಬ್ರಾಹ್ಮಣರಿಗೆ ದಾನ ನೀಡಿದ. ಇಂದಿಗೂ ಆ ಪರಶುರಾಮ ಚಿರಂಜೀವಿ ಪ್ರಭು ಆದುದರಿಂದ ಮಹೇಂದ್ರ ಪರ್ವತದಲ್ಲಿ ಇರುತ್ತಾನೆ.

ಇಪ್ಪತ್ತು ನಾಲ್ಕನೇ ಯುಗದಲ್ಲಿ ದಶರಥರಾಜನ ಮಗನಾಗಿ ಶ್ರೀರಾಮ ಪ್ರಭು ಭರತ ಲಕ್ಷ್ಮಣ ಶತ್ರುಘ್ನರೆಂಬ ತನ್ನ ಸೋದರರೊಂದಿಗೆ ಅವತರಿಸಿದ. ವಿಶ್ವಾಮಿತ್ರರ ಯಜ್ಞಕ್ಕೆ ಹೋಗಿ ಮಾರೀಚ ಸುಬಾಹುಗಳನ್ನು ನಿಗ್ರಹಮಾಡಿದ. ಜನಕರಾಜನ ಯಜ್ಞದಲ್ಲಿ ಶಿವಧನುಸ್ಸನ್ನು ಮುರಿದ. ಸಾಕ್ಷಾತ್ ಲಕ್ಷ್ಮೀ ಸ್ವರೂಪಳಾದ ಸೀತೆಯನ್ನುವರಿಸಿದ. ಅವಳೊಡನೆ ಹದಿನಾಲ್ಕು ವರ್ಷ ವನವಾಸಕ್ಕೆ ತೆರಳಿದ. ಜನಸ್ಥಾನದಲ್ಲಿ ದೇವತಾ ಕಾರ್ಯ ಮಾಡಿದ. ನಂತರ ರಾವಣ ಅಪಹರಿಸಿದ ಸೀತೆಯನ್ನು ಲಕ್ಷ್ಮಣನೊಡನೆ ಹುಡುಕುತ್ತ ವಿರಾಧ ಕಬಂಧರನ್ನು ಸಂಹರಿಸಿದ. ಸುಗ್ರೀವನ ಸಖ್ಯಗೈದು ವಾಲಿಯನ್ನು ವಧಿಸಿದ. ಅನಂತರ ವರದಿಂದ ಯಾರಿಂದಲೂ ಅವಧ್ಯನಾದ ಗರ್ವಿಷ್ಠ ಬಲಿಷ್ಠ ದುಷ್ಟಭ್ರಷ್ಟ ರಾವಣನನ್ನು ಶೂರಸೇನಾಪತಿ ಮಂತ್ರಿ ಸಹೋದರ ಬಂಧು ಪರಿವಾರ ಸಹಿತವಾಗಿ ಕೊಂದು ಹಾಕಿದ. ಅನಂತರ ಮಧು ದೈತ್ಯನ ಮಗನಾದ ಲವಣಾಸುರನು ಶತ್ರುಘ್ನನ ಮುಖಾಂತರ ಸಂಹರಿಸಲ್ಪಟ್ಟ.

ಹೀಗೆ ದುಷ್ಟಶಿಕ್ಷಣ ಶಿಷ್ಟರಕ್ಷಣೆಗೈದು ಶ್ರೀರಾಮ ಪ್ರಭು ಹತ್ತು ಅಶ್ವಮೇಧ ಯಜ್ಞಗಳನ್ನು ನೆರವೇರಿಸಿದ. ರಾಮರಾಜ್ಯದಲ್ಲಿ ಕಳವು, ಕೊಲೆ, ಅನ್ಯಾಯ, ಹೆದರಿಕೆ, ಆಕ್ರಮಣ, ಅಕಾಲಮರಣ, ದುಃಖ, ದುರವಸ್ಥೆ ಒಂದೂ ಇಲ್ಲ. ಎಂದೂ ಇಲ್ಲ. ಇಡೀ ರಾಮರಾಜ್ಯದಲ್ಲಿ ಒಬ್ಬ ವಿಧವೆಯೂ ಇರಲಿಲ್ಲ. ಒಬ್ಬ ಪ್ರಜೆಯೂ ಕಣ್ಣಿಂದ ಒಂದು ಹನಿನೀರು ಹಾಕಲಿಲ್ಲ. ಒಂದು ಪ್ರಾಣಿಯೂ ನಿಟ್ಟುಸಿರು ಬಿಡಲಿಲ್ಲ. ಒಂದು ಹೆಣ್ಣು ಗಂಡನ ಮಾತಿಗೆ ಪ್ರತಿ ಹೇಳಲಿಲ್ಲ. ಒಬ್ಬ ಗಂಡೂ ಹೆಂಡತಿಯನ್ನು ಕಾಡಲಿಲ್ಲ. ಬ್ರಾಹ್ಮಣರನ್ನು ಕ್ಷತ್ರಿಯರನ್ನು, ವೈಶ್ಯರು, ವೈಶ್ಯರನ್ನು ಶೂದ್ರರು ಅನುವರ್ತಿಸಿ ಪರಸ್ಪರ ಪ್ರೀತಿ ವಿಶ್ವಾಸದಿಂದ ಒಡಹುಟ್ಟಿದವರಂತೆ ಅನ್ಯೋನ್ಯರಾಗಿದ್ದರು. ರೋಗಗಳ ಹೆಸರೇ ಮರೆತು ಹೋಗಿತ್ತು ಆಗ

ಜನರಿಗೆ. ಈ ಭೂಮಿಯಲ್ಲಿ ಆಗ ಸುರರೂ ನರರೂ ವಾನರರೂ ಋಷಿಗಳೂ ಸಹಬಾಳುವೆಯನ್ನು ಸ್ನೇಹ ಸಾಮರಸ್ಯದಿಂದ ನಡೆಸಿದರು. ಹೀಗೆ ಹನ್ನೊಂದು ಸಾವಿರ ವರ್ಷ ಶ್ರೀರಾಮಚಂದ್ರನು ಅಯೋಧ್ಯಾಧಿ ಪತಿಯಾಗಿ ಈ ಧರಣೀ ಮಂಡಲದಲ್ಲಿ ಧರ್ಮರಾಜ್ಯವನ್ನು ಆಳಿದ. ಆ ರಾಮರಾಜ್ಯದಲ್ಲಿ ಋಗ್, ಯಜು, ಸಾಮ ಎಂಬ ಮೂರು ವೇದ ಘೋಷ ಒಮ್ಮೆಯೂ ಕಡಿಯಲಿಲ್ಲ. ರಾವಣ ಸಂಹಾರಾನಂತರದಲ್ಲಿ ಕೋದಂಡದ ಜ್ಯಾಘೋಷ ಕೇಳಲಿಲ್ಲ. ತಿನ್ನಿರಿ ಉಣಿರಿ ದಾನ ನೀಡಿರಿ ಎಂಬ ವಾಕ್ಯವಾಹಕ್ಕೆ ಎಂದಿಗೂ ಎಲ್ಲಿಯೂ ಚ್ಯುತಿ ಬರಲಿಲ್ಲ. ರಾಮಕಾಂತಿಯಿಂದ ಚಂದ್ರನನ್ನು ಮೀರಿಸಿದ ತೇಜದಿಂದ ಸೂರ್ಯನಿಗೂ ಮಿಗಿಲಾದ. ಪ್ರಭೂತ ದಾನ ದಕ್ಷಿಣೆ ನೀಡಿ ನೂರಾರು ಯಜ್ಞಯಾಗ ಮಾಡಿದ. ಹೀಗೆ ಆದರ್ಶ ರಾಜ್ಯವನ್ನು ಆಳಿ ಪ್ರಜೆಗಳನ್ನು ಸಂತೃಪ್ತರನ್ನಾಗಿ ಮಾಡಿ ಕೊನೆಗೆ ಶ್ರೀರಾಮ ಪ್ರಭು ತನ್ನ ಪರಂಧಾಮವನ್ನು ಐದಿದ.

**ವೈಶಂಪಾಯನ:-** ಮಾಥುರ ಕಲ್ಪದಲ್ಲಿ ಶ್ರೀಕೇಶವನು ಮತ್ತೊಂದು ಅವತಾರವನ್ನು ಎತ್ತಿದ. ಇದೇ ಕೃಷ್ಣಾವತಾರ. ಇದರಲ್ಲಿ ಶಾಲ್ವ ಮೈಂದ ದ್ವಿವಿದ ಕಂಸ ಅರಿಷ್ಟ ಋಷಭ ಕೇಶಿ ಪೂತನಾ ಯವನ ಕುವಲಯಾಪೀಡನಾಗ, ಚಾಣೂರ ಮುಷ್ಟಿಕ ನರಕ ಮುಂತಾದ ಅೀಕ ದುಷ್ಟದೈತ್ಯರನ್ನು ಸಂಹಾರಮಾಡಿದ. ಮತ್ತು ಅನೇಕಾನೇಕ ದುರಾಚಾರಿ ಧರ್ಮದ್ರೋಹಿ ರಾಜರನ್ನು ಸಮೂಲ ನಿರ್ಮೂಲ ಮಾಡಿ ಧರ್ಮ ಸಂಸ್ಥಾಪನೆಗೈದ.

ಅನಂತರ ವೇದವ್ಯಾಸ ರೂಪದಿಂದ ವೇದವಿಭಾಗಗೈದು ಭರತ ವಂಶವನ್ನು ಪಾಂಡು ಧೃತರಾಷ್ಟ್ರದ ಮುಖಾಂತರ ಮುಂದುವರಿಯುವಂತೆ ಮಾಡಿ ಕೊನೆಗೆ ಶಂಭಲಗ್ರಾಮ ಎಂಬ ಗ್ರಾಮದಲ್ಲಿ ವಿಷ್ಣುಯಶಾ ಎಂಬ ದ್ವಿಜನಿಂದ ಕಲ್ಕಿ ಅವತಾರವನ್ನು ಸರ್ವಲೋಕ ಕ್ಷೇಮಕ್ಕಾಗಿ ಶ್ರೀಹರಿಯು ಮಾಡಲಿರುವನು. ಕಲಿಯುಗದ ಸಂಧಿ ಕಾಲದಲ್ಲಿ ರಾಜರೆಲ್ಲರೂ ನಷ್ಟರಾಗಿ ಅರಾಜಕ ಪರಿಸ್ಥಿತಿಯಲ್ಲಿ ಪ್ರಜೆಗಳೆಲ್ಲ ಪರಸ್ಪರ ಕಾದಾಡಿ ಕಚ್ಚಾಡಿ ದುಃಖ ಪಟ್ಟು ನಾಶಹೊಂದುವರು. ಹೀಗೆ ಕಲಿಯುಗ ಮುಗಿದ ಬಳಿಕ ಮತ್ತೆ ಕೃತಯುಗ. ಮತ್ತೆ ಸನಾತನ ಧರ್ಮದ ಅಭ್ಯುದಯ, ಹೊಸಸೃಷ್ಟಿ ಪ್ರಾರಂಭ. ಹೀಗೆ ಹರಿಯ ಅನಂತ ಅವತಾರ ಲೀಲೆಗಳನ್ನು ತಿಳಿಯಲು ಯಾರು ಸಮರ್ಥರು?

ಹಿಂದೆ ಕೃತಯುಗದಲ್ಲಿ ವೃತ್ರಾಸುರ ಸಂಹಾರವಾದ ಬಳಿಕ ದೇವದಾನವರಲ್ಲಿ ತಾರಕಾಮಯ ಸಂಗ್ರಾಮ ಎಂಬ ಹೆಸರಿನ ಘೋರ ಯುದ್ಧವು ನಡೆಯಿತು. ಅದರಲ್ಲಿ ಸುರಸಮೂಹದಿಂದ ಪ್ರಾರ್ಥಿಸಲ್ಪಟ್ಟ ಶ್ರೀಹರಿಯು ಸ್ವಯಂ ಸಂಗ್ರಾಮರಂಗದಲ್ಲಿ ಇಳಿದು ಕಾಲನೇಮಿ ತಾರಕಾಸುರ ಮಯಾಸುರ ಹಯಗ್ರೀವ ವರಾಹ ಖರ ಅರಿಷ್ಟ ಲಂಬ ಹಂಸ ಮುಂತಾದ ದರ್ಪಿಷ್ಟರಾದ ದುರುಳ ದಾನವರನ್ನೆಲ್ಲ ತನ್ನ ಹರಿತವಾದ ಸುದರ್ಶನ ಚಕ್ರದಿಂದ ತರಿದೊಗೆದನು. ಉಳಿದ ದಾನವರನ್ನು ಗರುಡನು ತನ್ನ ರೆಕ್ಕೆಯಿಂದ ಹೊಡೆದು ಕೊಕ್ಕೆಯಿಂದ ಕುಕ್ಕಿ ಕೊಂದುಹಾಕಿದ. ಸುದರ್ಶನವೂ ಎಲ್ಲರನ್ನೂ ಅಟ್ಟಿಸಿಕೊಂಡು ಹೋಗಿ ಸುಟ್ಟು ಹಾಕಿತು. ಹೀಗೆ ಶ್ರೀಹರಿಯು ತಾರಕಾಮಯ ಸಂಗ್ರಾಮದಲ್ಲಿ ದೇವತೆಗಳಿಗೆ ಗೆಲವು ನಲಿವುಗಳನ್ನೂ ದೈತ್ಯರಿಗೆ ಅಳು ಅಳಿವು ಸಾವು ನೋವುಗಳನ್ನೂ ತಂದುಕೊಟ್ಟು ಬ್ರಹ್ಮ ದೇವರ ಬಿನ್ನಹದ ಮೇರೆಗೆ ಸತ್ಯಲೋಕಕ್ಕೆ ದಯಮಾಡಿಸಿದ. ಅಲ್ಲಿ ಬ್ರಹ್ಮದೇವರ ಸ್ವಾಗತ ಸತ್ಕಾರ ಬಿನ್ನವತ್ತಳೆಗಳನ್ನು ಸ್ವೀಕರಿಸಿ ಅನುಗ್ರಹಿಸಿ ತನ್ನ ನಾರಾಯಣಪೂರಕ್ಕೆ ತೆರಳಿದ. ಅಲ್ಲಿ ಯೋಗ

ನಿದ್ರೆಯಲ್ಲಿ ಬಹುಕಾಲ ವಿಶ್ರಮಿಸಿದ. ಕೃತಯುಗ ಮುಗಿಯಿತು. ತ್ರೇತಾಯುಗ ಉರುಳಿತು. ದ್ವಾಪರಯುಗದ ಕೊನೆಯ ಭಾಗ. ಬ್ರಹ್ಮ ದೇವರು ಜನರು ದುಃಖದಲಿತರಾದದ್ದನ್ನು ಕಂಡು ಪರಮಾತ್ಮನ ಪ್ರಬೋಧೋತ್ಸವ ಮಾಡಿ ಎಬ್ಬಿಸಿದರು.

**''ಉತ್ತಿಷ್ಠ ಶತಪತ್ರಾಕ್ಷ ಪದ್ಮನಾಭ ಮಹಾಮತೇ**
**ಕಾರಣಂ ಕಿಂಚಿದುತ್ಪನ್ನಂ ದೇವಾನಾಂ ಕಾರ್ಯಗೌರವಾತ್''**

''ತಾವರೆಗಣ್ಣಿನ ಪದ್ಮನಾಭ, ಏಳು. ದೇವತೆಗಳ ಕಾರ್ಯಗೌರವದಿಂದ ನೀನು ಈಗ ಎದ್ದು ಬರಲು ಕಾರಣ ಉಂಟಾಗಿದೆ'' ಎಂದು ಬಿನ್ನವಿಸಿದರು. ಆಗ ಭಗವಂತ ಎದ್ದು ಬಂದು ''ದೇವತೆಗಳಿಗೆ ಈಗ ಏನು ಭಯ?'' ಎಂದು ಕೇಳಿದ. ಅದಕ್ಕೆ ಬ್ರಹ್ಮದೇವರು ''ಭೂದೇವಿಯು ಅಸಂಖ್ಯರಾಜರ ಸೇನಾ ಭಾರದಿಂದ ಭಗ್ನಭುಗ್ನಳಾಗಿ ಬಂದಿದ್ದಾಳೆ. ಅವಳ ದುಃಖವನ್ನು ವಿಚಾರಿಸಲಿಕ್ಕಾಗಿ ಮೇರು ಗಿರಿಯಲ್ಲಿ ಎಲ್ಲ ದೇವತೆಗಳ ಸಭೆಯನ್ನು ಕರೆಯಲಾಗಿದೆ. ಅದಕ್ಕೆ ನೀನೇ ಅಧ್ಯಕ್ಷನಾಗಿ ಆಗಮಿಸಬೇಕು'' ಎಂದು ಬೇಡಿಕೊಂಡರು. ಗರುಢಾರೂಢನಾಗಿ ಸ್ವಾಮಿ ಶ್ರೀಹರಿ ಮೇರುಗಿರಿಯ ಉತ್ತುಂಗ ಶೃಂಗದಲ್ಲಿ ನೆರೆದ ಸುರಸಮಾಜದ ವಿರಾಟ್ ಸಭೆಗೆ ದಯಮಾಡಿಸಿದ. ಆ ಸಭೆಯಲ್ಲಿ ಭೂಮಾತೆಯು ಎದ್ದು ನಿಂತು ಭಗವಂತನಿಗೆ ತಲೆಬಾಗಿಸಿ ಕೈಜೋಡಿಸಿ ಗದ್ಗದ ಕಂಠದಿಂದ ತನ್ನ ದುಃಖವನ್ನು ತೋಡಿಕೊಂಡು ಬಿನ್ನವಿಸಿದಳು.

**ಭೂದೇವಿ:-** ಜಗನ್ನಿಯಾಮಕನಾದ ನಾರಾಯಣ, ನಿನಗೆ ನನ್ನ ಅನಂತಾನಂತ ನಮಸ್ಕಾರ. ನಾನು ನಾನಾ ಬಗೆಯ ಬೆಟ್ಟ ಬಯಲು ಮರಬಳ್ಳಿ ಪಶುಪಕ್ಷಿ ನರವಾನರ ಪುರಗ್ರಾಮ ನದೀ ಸಮುದ್ರ, ಕಾಡುನಾಡುಗಳಿಂದ ಒಡಗೂಡಿದ ಈ ಚರಾಚರ ಪ್ರಪಂಚವನ್ನೆಲ್ಲ ಹೊತ್ತಿದ್ದೇನೆ. ನನ್ನನ್ನು ನೀನು ಹೊತ್ತಿರುವೆ. ಇದಲ್ಲದೆ ಈ ಬ್ರಹ್ಮಾಂಡದ ಉಳಿದೆಲ್ಲ ಭಾರವನ್ನು ಹೊತ್ತವ ನೀನೇ. ನಿನ್ನ ದಯೆಯಿಂದ ಮಾತ್ರ ನಾನು ಅಲ್ಪಸ್ವಲ್ಪ ಭಾರವನ್ನು ಪ್ರಯತ್ನದಿಂದ ಹೊತ್ತು ನಿಂತಿದ್ದೇನೆ. ಮುಖ್ಯವಾಗಿ ಈ ಎಲ್ಲ ಜಗತ್ತಿನ ನಿಜವಾದ ಧಾರಕ ನೀನೇ. ಇಷ್ಟು ಭಾರವನ್ನೂ ಒಮ್ಮೊಮ್ಮೆ ನನಗೆ ತಾಳಲಿಕ್ಕೆ ಆಗುವುದಿಲ್ಲ. ಆಗ ನಾನು ನಿನಗೇ ಶರಣು ಬರುವೆ. ನೀನು ನನ್ನಲ್ಲಿ ಕೃಪೆಮಾಡಿ ನನ್ನ ಹೊರೆಯನ್ನು ಇಳಿಸುವೆ. ಹಿಂದೆ ದೈತ್ಯ ದಾನವರಿಂದ ನನಗೆ ಹಿಂಸೆ ಆದಾಗ ನೂರಾರು ಬಾರಿ ನಾನು ನಿನ್ನಲ್ಲಿ ಮೊರೆ ಇಟ್ಟಿದ್ದೆ. ಆಗೆಲ್ಲ ನೀನು ಅವತಾರ ಮಾಡಿ ಆ ದುಷ್ಟದೈತ್ಯರನ್ನು ವಧಿಸಿ ನನ್ನನ್ನು ರಕ್ಷಿಸಿದೆ. ಪೂರ್ವಕಾಲದಲ್ಲಿ ನಿನ್ನ ಕಿವಿಯಲ್ಲಿಯ ಮಲದಿಂದ ರೂಪಗೊಂಡವು ಇಬ್ಬರು ರಾಕ್ಷಸರ ದೇಹಗಳು. ಅವುಗಳಲ್ಲಿ ಒಂದು ಮೃದು. ಅದಕ್ಕೆ ಮಧು ಎಂದು ಹೆಸರು. ಇನ್ನೊಂದು ಕಠಿಣ, ಕೈಟಭ ಎಂದು ಅದಕ್ಕೆ ಹೆಸರು. ಸಮುದ್ರದ ಪೆರ್ದೆರೆಗಳಲ್ಲಿ ತೇಲಾಡುವ ಆ ಎರಡು ಚಂಡಪಿಂಡಗಳಿಗೆ ಪ್ರಾಣವಾಯು ಸ್ಪರ್ಶವಾಗಿ ನಿನ್ನ ಇಚ್ಛೆಯಂತೆ ಜೀವಕಳೆ ತುಂಬಿತು. ದೈತ್ಯಾಕಾರವಾಗಿ ಬೆಳೆದು ನಿನ್ನ ಚೊಚ್ಚಿಲು ಮಗನಾದ ಬ್ರಹ್ಮನನ್ನೇ ನುಂಗಲು ಬಂದರು. ಆಗ ಬ್ರಹ್ಮ ಗಾಬರಿಯಾಗಿ ನಿನ್ನ ಹೊಕ್ಕಳ ಹೊಂದಾವರೆಯಲ್ಲಿ ಅಡಗಿದ. ಕಮಲನಾಲದಿಂದ ನಿನ್ನನ್ನು ತಟ್ಟಿ ಎಚ್ಚರಿಸಿದ. ಜಲಶಾಯಿಯಾದ ನೀನು ಎದ್ದು ಅವರ ಅಪೇಕ್ಷೆಯಂತೆ ಕಾದಾಡಿ ಕೊಂದೆ ಆ ಇಬ್ಬರೂ ದಾನವರನ್ನು ಅವರ ಎರಡೂ ದೈತ್ಯಕಾಯಗಳ ಮೇದಸ್ಸು ಒಣಗಿ ಗಟ್ಟಿಗೊಂಡು ಈ ಮೇದಿನೀ ಆಯಿತು. ಇದನ್ನು ಮುಂದೆ

ಹಿರಣ್ಯಾಕ್ಷ ಕದ್ದು ಸಾಗರ ಗರ್ಭದಲ್ಲಿ ಮುಳುಗಿದ. ಆಗ ನೀನು ಭೂಮಿಯನ್ನು ವರಾಹವತಾರ ಮಾಡಿ ಸಮುದ್ರದಿಂದ ಮೇಲೆತ್ತಿ ನಿನ್ನ ಕೋರೆದಾಡೆಯಿಂದ ಹೊತ್ತುತಂದು ಸ್ಥಾಪಿಸಿದೆ. ಬಲಿರಾಜ ಆ ಬಳಿಕ ಇದನ್ನು ಆಕ್ರಮಿಸಿದ. ಆಗ ನೀನು ವಾಮನನಾಗಿ ಬಲಿಯ ಸೆರೆಯಿಂದ ನನ್ನನ್ನು ಬಿಡಿಸಿದೆ. ಮುಂದೆ ದುಷ್ಟ ರಾಜರು ನನ್ನ ಮೇಲೆ ತಮ್ಮ ಪ್ರಭುತ್ವ ಸ್ಥಾಪಿಸಿ ಪ್ರಜಾಪೀಡಕರಾದಾಗ ನೀನು ಪರಶುರಾಮ ರೂಪದಿಂದ ಆ ರಾಜರನ್ನೆಲ್ಲ ಕೊಂದು ನನ್ನ ಭಾರ ಇಳಿಸಿದೆ. ಇಪ್ಪತ್ತೊಂದು ಬಾರಿ ದಂಡಯಾತ್ರೆಗೈದು ನಿಃಕ್ಷತ್ರಿಯವಾದ ಪೃಥ್ವಿಯನ್ನು ತಂದೆಯ ಶ್ರಾದ್ಧದ ದಿನ ಕಶ್ಯಪರಿಗೆ ದಾನ ಕೊಟ್ಟೆ. ಆಗ ನೀನು ಕೊಂದ ಕ್ಷತ್ರಿಯಾಧಮರ ನೆತ್ತರ ಮೆತ್ತಿತ್ತು ನನ್ನ ಮೈಗೆ. ಮೈ ತುಂಬ ನೊಣ ಹತ್ತಿತ್ತು. ಕೀವು ಮಲ ಮಾಂಸ ಬಳಿದು ಭೂಭಾಗವೆಲ್ಲ ಹೊಲಸೆದ್ದು ದುರ್ಗಂಧವಾಸನೆ ಇಡಗಿತ್ತು. ಮುಟ್ಟಾದವರಂತೆ ಮಲಿನದಿಗ್ಧಾಂಗಿಯಾದ ನಾನು ದೀನ ಮುಖಿಯಾಗಿ ಕಶ್ಯಪರ ಬಳಿಗೆ ಹೋದಾಗ ಅವರು ಕರುಣೆಯಿಂದ ನನ್ನನ್ನು "ಇಷ್ಟೇಕೆ ಖಿನ್ನಳಾಗಿರುವಿ?" ಎಂದು ಕೇಳಿದರು. ಅವರಿಗೆ ನಾನು ನನ್ನ ದುರವಸ್ಥೆಯನ್ನು ಬಣ್ಣಿಸಿ "ಸ್ವಾಮಿ, ಒಳ್ಳೆ ರಾಜರೆಲ್ಲರೂ ಹತರಾದುದರಿಂದ ನಾನೀಗ ವಿಧವೆ. ನನ್ನ ಪುರಗ್ರಾಮಗಳೆಲ್ಲ ಹಾಳು, ದೇಶವೆಲ್ಲ ಬೋಳು, ಅದಕ್ಕಾಗಿ ನನಗೊಬ್ಬ ಒಳ್ಳೆ ರಾಜರೂಪಿ ಪತಿಯನ್ನು ಕರುಣಿಸಿರಿ" ಎಂದು ಕೇಳಿಕೊಂಡೆ.

ಆಗ ಆ ಮಹನೀಯರು ನನ್ನನ್ನು ಮನು ಮಹಾರಾಜನಿಗೆ ಒಪ್ಪಿಸಿದರು. ನಂತರ ಅವರ ಸಂತತಿಯ ಇಕ್ಷ್ವಾಕು ಕುಲದ ಮಹಾನುಭಾವರಾದ ಮಹಾರಾಜರು ನನಗೆ ಪತಿಗಳಾಗಿ ಆಳಿದರು. ಅಂಥ ಸಹಸ್ರಾರು ಪುಣ್ಯ ಪುರುಷರ ಧರ್ಮ ಶಾಸನದಲ್ಲಿ ನನಗೆ ಬಹುಕಾಲ ಮುತ್ತೈದೆತನದ ಸೌಭಾಗ್ಯ ಸಂತೋಷ ಸಂತೃಪ್ತಿ ಇದ್ದವು. ಆದರೆ ಸ್ವಾರ್ಥಾಂಧ ರಾಜಮಹಾರಾಜರು ಮುಂದೆ ತಮ್ಮ ಸುಖೋಪಭೋಗಕ್ಕಾಗಿ ನನ್ನನ್ನು ಶೋಷಿಸ ತೊಡಗಿದ್ದಾರೆ. ಈಗ ಆ ದುಷ್ಟರಾಜರ ದುರಾಡಳಿತದ ವಿಚಿತ್ರ ಹಿಂಸೆಯಿಂದ ನಾನು ದುರವಸ್ಥೆಗೀಡಾಗಿದ್ದೇನೆ. ಊರೂರಿಗೆ ರಾಜರು. ಹಳ್ಳಿಗೊಬ್ಬ ರಾಜ, ನಗರಕ್ಕೊಬ್ಬ ಭೂಪ. ನಾಡಿಗೊಬ್ಬ ನರಪತಿ. ಕಾಡಿಗೊಬ್ಬ ಭೂಪತಿ. ಈ ರಾಜ ಮಹಾರಾಜರ ಭಾರದಿಂದ ನಾನೀಗ ನಿಜವಾಗಿ ಕುಸಿಯುತ್ತಿದ್ದೇನೆ. ನನ್ನ ಮೇಲೆ ಕರುಣೆಯಿದ್ದರೆ ಈ ರಾಜಕುಲ ಕ್ಷಯವಾಗುವಂತೆ ಒಂದು ರಣರಂಗ ಏರ್ಪಡಿಸು. ಅಂಥ ಹೋರಾಟವಾದರೆ ನನ್ನ ಹೊರೆ ಹಗುರವಾಗುವುದು. ಶ್ರೀಹರಿಯೇ ಈ ವಿಷಯದಲ್ಲಿ ಮುಂದಾಗಲಿ. ದಾರಿತೋರಲಿ. ದಯೆತೋರಲಿ."

ಆಗ ದೇವತೆಗಳೆಲ್ಲರೂ ಭೂದೇವಿಯ ಕರುಣ ಕಥೆ ಹಾಗೂ ವಿಚಿತ್ರ ವ್ಯಥೆಯನ್ನು ಕೇಳಿ ಕರಗಿಹೋದರು. ಪಿತಾಮಹನಿಗೆ "ಹೇಗಾದರೂ ಮಾಡಿ ಈ ತಿರೆಯ ಹೊರೆಯನ್ನು ಹಗುರಗೊಳಿಸಿ. ಅದಕ್ಕಾಗಿ ನಾನು ಏನು ಮಾಡಬೇಕು ಹೇಳಿ. ಇಂದ್ರ,ಚಂದ್ರ, ವಾಯು ಯಮ ಅಶ್ವಿನೀ ಕುಮಾರ ವಸು ರುದ್ರ ಗುರು ಶುಕ್ರ ಸ್ಕಂದ ಶಂಕರ ಕುಬೇರ ಸಾಕ್ಷಾತ್ ಶ್ರೀಹರಿ ಎಲ್ಲರೂ ಈ ಭೂದೇವಿಗಾಗಿ ಏನು ಮಾಡಲಿಕ್ಕೂ ಸಿದ್ದರು. ಎಲ್ಲಿ ಇಳಿಯೋಣ? ಏನು ಮಾಡೋಣ? ಯಾವ ರೂಪ ಹೊಂದೋಣ! ಹೇಳಿರಿ." ಎಂದು ಕೇಳಿದರು.

**ಬ್ರಹ್ಮದೇವ:-** ಸುರಸತ್ತಮರೇ! ಬಹಳ ಸಂತೋಷ. ನೀವೆಲ್ಲರೂ ನಿಮಗೆ ಸರಿಸಮವಾದ ಒಂದೊಂದು ಅಂಶದಿಂದ ಭೂಲೋಕದಲ್ಲಿ ಅವತಾರಮಾಡಿರಿ. ಇದೆಲ್ಲ ನನಗೆ ಮೊದಲೇಗೊತ್ತು. ಅದಕ್ಕಾಗಿ ನಾನು ಪೂರ್ವಭಾವಿಯಾಗಿ ಮಾಡಬೇಕಾದುದನ್ನೆಲ್ಲ ಮಾಡಿದ್ದೇನೆ

ಹಿಂದೆ ನಾನು ಪಡುವಲ ಕಡಲಿನ ತಡಿಯಲ್ಲಿ ನನ್ನ ಮಗನಾದ ಕಶ್ಯಪನೊಡನೆ ಲೋಕೋದ್ಧಾರ ವೇದೋದ್ಧಾರದ ಬಗೆಗೆ ಮಾತನಾಡುತ್ತ ಕುಳಿತಿದ್ದೆ. ಸಮುದ್ರ ಆಗ ಗಂಗೆಯೊಡನೆ ಬಂದು ತನ್ನ ತರಲತರಂಗಗಳನ್ನು ತುಳುಕಿಸಿದ. ಆಗ ಹುಣ್ಣಿಮೆ, ತಿಂಗಳಿನ ತಂಗದಿರಗಳ ಆಕರ್ಷಣೆಯಿಂದ ಸಾಗರದ ನೀರಿನ ಅಗರವೆಲ್ಲ ಅಲ್ಲೋಲ ಕಲ್ಲೋಲ, ಆ ಉತ್ತಾಲ ವೀಚಿಮಾಲೆಗಳಿಂದ ನನ್ನ ದೇಹವನ್ನು ಆ ಸಮುದ್ರರಾಜ ತೋಯಿಸಿದಾಗ ನಾನು ಅವನಿಗೆ 'ಶಾಂತೋऽಸಿ' 'ಶಾಂತನಿರಬೇಕು' ಎಂದು ಹೇಳಿದೆ. ಕೂಡಲೇ ಸಾಗರ ಶಾಂತನಾದ. ಆಗ ಮುತ್ತು ರತ್ನಾಭರಣಗಳ ರಾಜಶ್ರೀ ವೇಷ ವೈಭವದಿಂದ ಬಂದು ನಮಿಸಿನಿಂದ ಆ ನದೀನಾಥನಿಗೆ ''ನೀನು ಗಂಗೆಯೊಡನೆ ಭೂಲೋಕದಲ್ಲಿ ರಾಜನಾಗಿ ಹುಟ್ಟು. ಈಗಾಗಲೇ ಅಷ್ಟವಸುಗಳು ನನ್ನ ಆಜ್ಞೆಯಿಂದ ನೆಲಕ್ಕೆ ಇಳಿದಿದ್ದಾರೆ. ನಾನು ಆಜ್ಞೆಗೈದ ಕೂಡಲೇ ನೀನು 'ಶಾಂತನು' ಆದದ್ದರಿಂದ ಶಂತನು ಎಂದು ಆ ಜನ್ಮದಲ್ಲಿ ಹೆಸರಾಗುವೆ. ಆಗ ಈ ಗಂಗೆ ನಿನ್ನ ಮಡದಿಯಾಗಿ ಬರುವಳು. ಅಷ್ಟವಸುಗಳು ನಿನ್ನಿಂದ ಅವಳ ಹೊಟ್ಟೆಯಲ್ಲಿ ಹುಟ್ಟಿ ಬರುವರು. ಮುಂದೆ ದೇವತಾಕಾರ್ಯವನ್ನು ಸಾಧಿಸುವದಕ್ಕಾಗಿ ನಿನಗೆ ಈಗ ನಾನು ಶಾಪವಿತ್ತಿದ್ದೇನೆ. ನೀನೀಗ ಸಾಮುದ್ರಿಕಸಲಿಲಮಯ ಶರೀರವನ್ನು ತೊರೆದು ಭೂಲೋಕದಲ್ಲಿ ಭರತವಂಶದ ರಾಜನಾಗಿ ಅವತರಿಸು. ಅಲ್ಲಿ ನೀನು ಅಖಂಡ ಭೂಮಂಡಲಕ್ಕೆಲ್ಲ ಏಕ ಛತ್ರಾಧೀಶ್ವರನಾಗಿ ವರ್ಣಾಶ್ರಮ ಸಂರಕ್ಷಣೆಯನ್ನು ಮಾಡುತ್ತ ಸಾರ್ವಭೌಮನಾಗಿ ಮೆರೆಯುವಿ. ನಿನ್ನ ರಮಣೀಯ ರೂಪಸಿಯಾದ ರಸಿಕ ರಮಣಿ ಗಂಗೆಯಾದರೂ ಮಹಾರಾಣಿಯಾಗಿ ಬಂದು ನಿನಗೆ ಪರಮಾನಂದವನ್ನು ಉಂಟುಮಾಡುವಳು. ಅಂಥ ಸಾಮ್ರಾಜ್ಯ, ಇಂಥ ಸುರಸುಂದರಿಯಾದ ಹೆಂಡತಿ, ಅವಳ ರಾಗ ಭೋಗಗಳ ರಸ ತರಂಗಗಳಲ್ಲಿ ನೀನು ಸಂತಸದಿಂದ ನಲಿದು ನರ್ತಿಸುತ್ತಲಿರುವಾಗ ನಿನಗೆ ನನ್ನ ಶಾಪವು ತಾಪದಾಯಕವೆನ್ನಿಸಲಾರದು. ಕಾರಣ ವಿಲಂಬಮಾಡದೇ ನನ್ನ ಅಪ್ಪಣೆಯನ್ನು ಪಾಲಿಸು.

ನದೀನಾಥ! ನಿನಗೆ ನಾನು ಶಾಪಕೊಡಲು ಇನ್ನೂ ಒಂದು ಕಾರಣವುಂಟು. ಅಷ್ಟವಸುಗಳಲ್ಲಿ ದ್ಯು ಎಂಬ ಹೆಸರಿನ ವಸುವಿಗೆ ವರಾಂಗಿ ಎಂಬ ಹೆಂಡತಿ ಇದ್ದಳು. ಅವಳು ತನ್ನ ಗೆಳತಿಯ ಸಲುವಾಗಿ ವಶಿಷ್ಠರ ಆಕಳವಾದ ನಂದಿನಿಯನ್ನು ತುಡುಗು ಮಾಡಿಕೊಂಡು ಬರಲು ಗಂಡನನ್ನು ಪ್ರೇರಿಸಿದಳು. ಪತ್ನಿಯ ಮಾತನ್ನು ಕೇಳಿಕೊಂಡು ದ್ಯುನಾಮಕ ವಸುವು ತನ್ನ ಇತರ ಏಳು ಸೋದರರೊಂದಿಗೆ ನಂದಿನಿಯನ್ನು ತುಡುಗುಮಾಡಲುಜ್ಜುಗಿಸಿದನು. ಆಗ ವಶಿಷ್ಠರು ಸಿಟ್ಟಾಗಿ ಅವರಿಗೆಲ್ಲರಿಗೂ ಭೂಲೋಕದಲ್ಲಿ ಮಾನವರಾಗಿ ಹುಟ್ಟಿರೆಂದು ಶಾಪಕೊಟ್ಟರು. ಆ ಶಾಪದಿಂದ ಸಂತ್ರಸ್ತರಾದ ಅವರು ''ಸ್ವಾಮಿ! ನಾವು ಸೋದರನ ಆಪೇಕ್ಷೆಯಂತೆ ತಪ್ಪು ಮಾಡಿದ್ದೇವೆ. ಸ್ವಯಂ ಪ್ರೇರಣೆಯಿಂದ ಅಲ್ಲ. ಆದುದರಿಂದ ಸತ್ಯವಚನರಾದ ತಮ್ಮ ಶಾಪದಂತೆ ನಾವು ಭೂಮಿಯಲ್ಲಿ ಹುಟ್ಟಿದರೂ ಆ ಮಾನವ ದೇಹದಲ್ಲಿ ಬಹುಕಾಲ ಬಾಳಲಾರೆವು. ಹುಟ್ಟಿದ ಕೂಡಲೇ ನಮಗೆ ಮರಣವಾಗಿ ಅಲ್ಲಿಂದ ನಿವೃತ್ತಿಯಾಗುವಂತೆ ಅನುಗ್ರಹಿಸಬೇಕೆಂದು'' ಕೇಳಿಕೊಂಡರು. ''ಸಾಕ್ಷಾದಪರಾಧಿಯಾದ ದ್ಯುನಾಮಕ ವಸುವನ್ನು ಒಬ್ಬನನ್ನು ಬಿಟ್ಟು ಉಳಿದವರೆಲ್ಲ ಉತ್ಪನ್ನವಿನಷ್ಟಘಟದಂತೆ ಜನಿಸಿದ ಉತ್ತರಕ್ಷಣದಲ್ಲಿಯೇ ಮರಣವನ್ನು ಹೊಂದಲಿ'' ಎಂದು ವಶಿಷ್ಠರಾದರೂ ಉಶ್ಶಾಪವನ್ನು ಕೊಟ್ಟರು. ಅವರೆಲ್ಲರೂ ಈಗ ಗಂಗೆಯು ಮಾನುಷಿಯಾಗಿ ನಿನ್ನ ಮಹಿಷಿಯಾದಾಗ ನಿಮ್ಮ ಹೊಟ್ಟೆಯಿಂದ ಹುಟ್ಟಿ ಮನುಷ್ಯ ಜನ್ಮದಿಂದ ಮುಕ್ತಿ ಪಡೆಯಲಿರುವರು. ಇಷ್ಟೆಲ್ಲ

ದೇವತಾಕಾರ್ಯವಿರುವುದರಿಂದ ನಾನು ನಿನಗೆ ಶಾಪಕೊಟ್ಟಿದ್ದೇನೆ. ನೀನು ಕೂಡಲೇ ಈ ಭಾಗೀರಥಿಯೊಂದಿಗೆ ಭೂತಲದ ಭಾರತ ಭೂಖಂಡಕ್ಕೆ ಹೋಗಿ ಕುರುಕುಲದ ಅಭಿವೃದ್ಧಿಯನ್ನು ಮಾಡಿದಬಳಿಕ ಆ ಮಾನವ ದೇಹ ತ್ಯಾಗಮಾಡಿ ನಿಜರೂಪವನ್ನು ಪಡೆಯುವಿ'' ಎಂದು ಹೇಳಿ ಸಂತೈಸಿ ಸಂತೋಷಪಡಿಸಿ ಕಳಿಸಿಕೊಟ್ಟೆನು.

ನನ್ನ ಆಜ್ಞೆಯಂತೆ ಆ ನದೀನಾಥನು ಈಗ ಮಧ್ಯಮಲೋಕದಲ್ಲಿ ಶಂತನು ರಾಜನಾಗಿ ಅವತರಿಸಿ ಗಂಗೆಯೊಂದಿಗೆ ಪ್ರಾಜಾಪತ್ಯವಿಧಿಯಿಂದ ಮದುವೆಮಾಡಿಕೊಂಡು ವಂಶಾಭಿವೃದ್ಧಿಯನ್ನು ಮಾಡಿದ್ದಾನೆ. ಆ ಏಳು ಮಂದಿ ವಸುಗಳನ್ನೂ ಹುಟ್ಟಿದಕೂಡಲೇ ತಾಯಿಯಾದ ಗಂಗೆಯು ಮೊದಲಿನ ಸಂಕೇತದಂತೆ ನದಿಯಲ್ಲಿ ಮುಳುಗಿಸಿ ಕೊಂದುಬಿಟ್ಟಿದ್ದರಿಂದ ಅವರೆಲ್ಲರೂ ಈಗ ಮರಳಿ ಸ್ವರ್ಗಕ್ಕೆ ಬಂದಿದ್ದಾರೆ. ಹೆಂಡತಿಯ ಹೇಳಿಕೆಯಂತೆ ಗೋಹರಣಮಾಡಿದ ತಪ್ಪಿಗಾಗಿ ದ್ಯುನಾಮಕವಸುವು ಮಾತ್ರ ಭೂಮಿಯಲ್ಲಿ ಬದುಕಿ ಉಳಿದು ಭೀಷ್ಮ ಎಂಬ ಹೆಸರಿನಿಂದ ಪ್ರಖ್ಯಾತನಾಗಿದ್ದಾನೆ. ಆ ಶಂತನು ಮಹಾರಾಜನಿಗೆ ಗಂಗೆಯು ಮದುವೆಯಾಗುವ ಕಾಲದಲ್ಲಿ ''ನಾನು ಏನೇ ಮಾಡಿದರೂ ನೀನು ನಿಷೇಧಿಸಬಾರದು. ನಾನು ಮಾಡಿದುದಕ್ಕೆ ನೀನು ಏಕೆ? ಎಂದರೆ ನಾನು ನಿನ್ನನ್ನು ಬಿಟ್ಟು ಹೋಗಿ ಬಿಡುವೆನು'' ಎಂದು ಕರಾರು ಮಾಡಿದ್ದಳು. ಅದರಂತೆ ಅವಳು ಹುಟ್ಟಿದ ಮಕ್ಕಳನ್ನೆಲ್ಲ ಒಂದೊಂದಾಗಿ ನದೀ ನೀರಿನಲ್ಲಿ ಎಸೆದು ಕೊಲ್ಲುತ್ತಿದ್ದಾಗ ಸಂಕಟವಾದರೂ ಮಹಾರಾಜ ಅವಳ ಸಮಯ ನಿರ್ಬಂಧಗಳನ್ನು ನೆನೆದು ಮಾತನಾಡಲಾರದೇ ಸುಮ್ಮನಿದ್ದನು. ಆದರೆ ಕೊನೆಯ ಕುಮಾರನಾದ ದೇವವ್ರತನು ಹುಟ್ಟಿದಕೂಡಲೇ ರಾಜನು ಅವಳನ್ನು ತಡೆದು 'ಈ ಮಗುವನ್ನು ಕೊಲ್ಲಬೇಡ. ವಂಶಾಕುರದ ಅಬಿವರ್ಧನೆಗೆ ಒಂದಾದರೂ ಮಗು ಇರಲಿ. ಇದನ್ನೂ ನೀನು ನೀರುಪಾಲುಮಾಡಬೇಡ'' ಎಂದು ನಿಷೇಧಿಸಿದನು. ಆಗ ಅವಳು ತನ್ನ ನಿಯಮದಂತೆ ಆ ಮಗುವನ್ನು ಅವನಿಗೇ ಒಪ್ಪಿಸಿ ಅಲ್ಲಿಂದ ಹೊರಟು ಬಂದು ಬಿಟ್ಟಳು. ಬಳಿಕ ಆ ಮಗು ದೊಡ್ಡದಾದ ಮೇಲೆ ಶಂತನುಮಹಾರಾಜನು ಒಂದು ದಿನ ಬೇಟೆಯಾಡಲಿಕ್ಕೆ ಹೋಗಿ ಓರ್ವ ಅಂಬಿಗರ ಕಾಲೀ ಎಂಬ ಹುಡುಗೆಯ ಚೆಲುವಿಕೆಯನ್ನು ಕಂಡು ಅನುರಕ್ತನಾದನು. ಆದರೆ ಅವಳ ತಂದೆಯಾದ ದಾಶರಾಜನು ''ನನ್ನ ಮಗಳ ಹೊಟ್ಟೆಯಿಂದ ಹುಟ್ಟಲಿರುವ ಮಗುವಿಗೇ ಮುಂದೆ ಭಾರತ ಸಾಮ್ರಾಜ್ಯದ ಸಿಂಹಾಸನದಲ್ಲಿ ಪಟ್ಟಾಭಿಷೇಕ ಮಾಡುವುದಾದರೆ ಮಾತ್ರ ನನ್ನ ಮಗಳನ್ನು ನಿನಗೆ ಕೊಡುವೆನೆಂದು'' ಹೇಳಿದನು. ಆಗ ಗಾಂಗೇಯನಂಥ ಪ್ರಬಲ ಪರಾಕ್ರಮಿಯಾದ ಪ್ರಬುದ್ಧ ಮಗನನ್ನು ಬಿಟ್ಟು ಆ ಮತ್ಸ್ಯ ಕನ್ಯೆಯ ಮಗನಿಗೆ ರಾಜ್ಯವನ್ನು ಬಿಟ್ಟುಕೊಡುವ ಯೋಚನೆಯೇ ಅಸಹ್ಯವೆನಿಸಿ ಮಹಾರಾಜನು ಹಾಗೆಯೇ ಮನೆಗೆ ಮರಳಿ ಬಂದನು.

ಆದರೆ ಪಿತೃಭಕ್ತನಾದ ದೇವವ್ರತನು ಇದನ್ನೆಲ್ಲ ತಿಳಿದುಕೊಂಡು ಆ ದಾಶರಾಜನ ಮನೆಗೆ ಹೋಗಿ ''ನಾನು ರಾಜ್ಯಾರೋಹಣ ಮಾಡುವದಿಲ್ಲ. ನಿನ್ನ ಮಗಳನ್ನು ನನ್ನ ತಂದೆಗೆ ಕೊಡು'' ಎಂದು ಕೇಳಿದನು. ಅದಕ್ಕೆ ಅವನು ನೀನಲ್ಲದಿದ್ದರೂ ನಿನ್ನ ಮಕ್ಕಳು ನಾಳೆ ದೊಡ್ಡವರಾದ ಬಳಿಕ ನನ್ನ ಮೊಮ್ಮಕ್ಕಳ ವಿರುದ್ಧ ನಿಂತು ಇವರನ್ನು ರಾಜ್ಯದಿಂದ ಉರುಳಿಸಿದರೆ ಹೇಗೆ?'' ಎಂದು ಸಂಶಯವನ್ನು ವ್ಯಕ್ತಪಡಿಸಿದನು. ಅದಕ್ಕೆ ಆ ಗಾಂಗೇಯನು ''ನಿನಗೆ ಹಾಗೆ ನನ್ನ ಸಂತತಿಯಿಂದ ಸಂದೇಹವಿದ್ದರೆ ನಾನು ಎಂದೆಂದೂ ಮದುವೆಯನ್ನೇ ಮಾಡಿಕೊಳ್ಳುವುದಿಲ್ಲ'' ಎಂದು ಪ್ರತಿಜ್ಞೆ

ಮಾಡಿ ಆ ಮತ್ಸ್ಯ ರಾಜಕುವರಿಯಾದ ಸತ್ಯವತಿಯನ್ನು ತಂದು ತಂದೆಗೆ ಲಗ್ನಮಾಡಿದನು. ಅಂದಿನಿಂದ ಅಂಥ ಭೀಷ್ಮ ಎಂದರೆ ಕಠಿಣವೂ ಉಗ್ರವೂ ಆದ ಪ್ರತಿಜ್ಞೆಮಾಡಿ ಅದರಂತೆ ನಡೆದದ್ದರಿಂದ ಆ ಗಾಂಗೇಯನಿಗೆ ಭೀಷ್ಮ ಎಂದೇ ಹೆಸರು ಬಂದಿದೆ.

ಶಂತನು ಮಹಾರಾಜನ ಎರಡನೆಯ ಹೆಂಡತಿಯಾದ ಸತ್ಯವತಿಗೆ ಚಿತ್ರಾಂಗದ ವಿಚಿತ್ರವೀರ್ಯರೆಂಬ ಇಬ್ಬರು ಮಕ್ಕಳಾಗಿದ್ದರು. ಅವರಲ್ಲಿ ಚಿತ್ರಾಂಗದನು ಗಂಧರ್ವರ ಜೊತೆಗೆ ಯುದ್ಧಮಾಡುವಾಗ ಮಡಿದನು. ಆಗ ವಿಚಿತ್ರವೀರ್ಯನಿಗೇ ಪಟ್ಟಗಟ್ಟಿ ಭೀಷ್ಮನು ಕಾಶಿರಾಜನ ಕುಮಾರಿಯರಾದ ಅಂಬಾ ಅಂಬಾಲಿಕಾ ಎಂಬಿಬ್ಬರು ಕನ್ನೆಯರನ್ನು ಸ್ವಯಂವರದಲ್ಲಿ ಗೆದ್ದು ತಂದು ಮದುವೆಮಾಡಿದನು. ಮುಂದೆ ಕೆಲವೇ ದಿನಗಳಲ್ಲಿ ಅನವರತಕಾಮ ಕೇಲೀರತನಾದ ಆ ವಿಚಿತ್ರವೀರ್ಯನೂ ರೋಗಗ್ರಸ್ತನಾಗಿ ಮರಣ ಹೊಂದಿದನು. ಆಗ ಸತ್ಯವತಿಯು ತನ್ನ ಕನ್ಯಾವಸ್ಥೆಯಲ್ಲಿಯೇ ಪರಾಶರರ ಅನುಗ್ರಹದಿಂದ ಜನಿಸಿದ ಜ್ಯೇಷ್ಠಪುತ್ರನಾದ ಬಾದರಾಯಣನನ್ನು ಬರಮಾಡಿಕೊಂಡು "ಕುರುಕುಲ ಕಲ್ಯಾಣಕ್ಕಾಗಿ ನನ್ನ ಸೊಸೆಂದಿರಿಗೆ ಸಂತಾನಪ್ರದಾನವನ್ನು ಮಾಡು" ಎಂದು ಕೇಳಿಕೊಂಡಳು. ಅವನ ಅನುಗ್ರಹದಿಂದ ವಿಚಿತ್ರವೀರ್ಯನ ಕ್ಷೇತ್ರದಲ್ಲಿ ಧೃತರಾಷ್ಟ್ರ ಹಾಗೂ ಪಾಂಡು ಎಂಬ ಇಬ್ಬರು ಮಕ್ಕಳು ಹುಟ್ಟಿದರು.

ಪಾಂಡುರಾಜನಿಗೆ ಸುರಪುರ-ಪುರಂಧ್ರಿಯರಂತೆ ಕಮನೀಯವಾದ ಕಳೆಕಾಂತಿ ಗಳಿಂದೊಪ್ಪುವ ಕುಂತೀ ಮಾದ್ರಿ ಎಂಬಿಬ್ಬರು ಮಡದಿಯರು. ಧೃತರಾಷ್ಟ್ರನಿಗೆ ಪರಮ ಪತಿವ್ರತೆಯಾದ ಗಾಂಧಾರಿ ಎಂಬ ಹೆಂಡತಿ ಇರುವಳು. ಈ ಧೃತರಾಷ್ಟ್ರ ಹಾಗೂ ಪಾಂಡುರಾಜರ ಮಕ್ಕಳಲ್ಲಿ ಮುಂದೆ ಮಹಾಭಯಂಕರವಾದ ಯುದ್ಧವೊಂದು ನಡೆಯಲಿರುವುದು. ಆಗ ಜಗತ್ತಿನ ರಾಜಮಹಾರಾಜರರೆಲ್ಲ ಒಂದೊಂದು ಪಕ್ಷ ಹಿಡಿದು ಪರಸ್ಪರ ಹೋರಾಡುವರು. ಆ ಭುವನ ಭೀಷಣವಾದ ಕುರುಕುಲದ ಕದನದಲ್ಲಿ ಶಾಂತಿ-ಹೋಮವಾಗಿ ಆ ಕ್ರಾಂತಿ ಕುಂಡದಲ್ಲಿ ಎಲ್ಲ ರಾಜರು ಮಾತ್ರವಲ್ಲದೇ ಪುರುಷವರ್ಗವೇ ಆಹುತಿಯಾಗುವುದೆಂದು ನನಗೆ ಈಗಲೇ ತಿಳಿದು ಹೋಗಿದೆ. ಆ ಯುದ್ಧದಲ್ಲಿ ಅಳಿದುಳಿದ ಇತರ ಜನರನ್ನು ಶಂಕರನ ಅಂಶನಾದ ಅಶ್ವತ್ಥಾಮನು ಅಗ್ನ್ಯಸ್ತ್ರದಿಂದ ಸುಟ್ಟು ಹಾಕುವನು. ಈ ಯುಗದ ಅಂತಿಮ ಭಾಗದಲ್ಲಿ ಈ ಪ್ರಳಯ- ವಿಪ್ಲವವಾದ ಬಳಿಕ ದ್ವಾಪರಯುಗ ಸಮಾಪ್ತವಾಗಿ ಭಗವಾನ್ ಶ್ರೀಕೃಷ್ಣನು ಪರಂಧಾಮವನ್ನು ಕುರಿತು ಪ್ರಯಾಣ ಮಾಡಿದ ನಂತರ ಕಲಿಯುಗವು ಪ್ರಾರಂಭವಾಗುವುದು.

ಅದಕ್ಕೆ ಮಾಹೇಶ್ವರಯುಗವೆಂತಲೂ ಕರೆಯುವರು. ಮುಂದೆ ಆಗ ವಿಷ್ಣು ವೈಷ್ಣವರ ಪೂಜೋಪಾಸನೆಗಳೆಲ್ಲ ಕಡಿಮೆಯಾಗಿ, ಧರ್ಮ ಕರ್ಮಗಳೆಲ್ಲ ಲೋಪವಾಗಿ ಸುಳ್ಳು ಕಪಟವಂಚನೆಗಳು ಬೆಳೆದು, ಜನರೆಲ್ಲ ಶ್ರದ್ಧಾ ಶೂನ್ಯರಾಗಿ, ಕೇವಲ ಶಿವಷಣ್ಮುಖರ ಪೂಜಾ ಪ್ರತಿಷ್ಠೆಗಳೇ ಬೆಳೆಯುತ್ತವೆ. ಜನರೆಲ್ಲರೂ ಅಲ್ಪಾಯುಷಿಗಳಾಗುವರು.

ಇದು ಭಾರತದ ಭವಿಷ್ಯ ಚಿತ್ರ. ಆದುದರಿಂದ ನೀವೆಲ್ಲ ದೇವತೆಗಳೂ ಆ ಭೂಭಾರ ಕ್ಷಪಣದ ಭಗವತ್ಕಾರ್ಯದಲ್ಲಿ ಸಹಾಯಕರಾಗಿ ಶ್ರೇಯೋಭಾಗಿಗಳಾಗಲು ಈಗಲೇ ಭೂಮಿಯಲ್ಲಿ ಅವತರಿಸಿರಿ.

ಧರ್ಮದ ಕೈವಾರಿಗಳಾದ ದೇವತಾ ಶ್ರೇಷ್ಠರು ಮೊದಲು ಕುಂತಿ ಹಾಗೂ ಮಾದ್ರಿಯರಲ್ಲಿ ಮಕ್ಕಳಾಗಿ ಹುಟ್ಟಲಿ. ಕಲಹ ಕಲಾಪಗಳಿಗೆಲ್ಲ ಮೂಲಕಾರಣನಾದ ಕಲಿಯೂ ಅವನು ಪಕ್ಷ-ಕುಕ್ಷಿ-ಪ್ರವಿಷ್ಟರೂ ಗಾಂಧಾರಿಯಲ್ಲಿ ಹುಟ್ಟುವಂತೆ ಮಾಡಿರಿ. ಅಂದರೆ ಮುಂದೆ ಪ್ರಪಂಚದ ರಾಜೋಪರಾಜರೆಲ್ಲರೂ ಈ ಎರಡರಲ್ಲಿ ಒಂದು ಪಕ್ಷವನ್ನು ಕಾಲಚೋದಿತರಾಗಿ

ತಾವಾಗಿ ಸೇರಿಕೊಂಡು ರಾಜ್ಯಲೋಭದಿಂದ ಹುರುಡುಕಟ್ಟಿ ಹೋರಾಟ ಹೂಡುವರು. ಸಾವಿನಜೊತೆಗೆ ಸರಸವಾಡುವರು. ಧರ್ಮಕ್ಷೇತ್ರವಾದ ಕುರುಕ್ಷೇತ್ರದ ಪುಣ್ಯಭೂಮಿಯನ್ನು ಮಸಣಗಟ್ಟೆಯನ್ನಾಗಿ ಮಾಡುವರು. ಭೂಭಾರ ಹರಣವಾಗಿ ಅದರಿಂದ ಭೂದೇವಿಯ ದುಃಖ ಕಡಿಮೆಯಾಗುವುದು. ಇನ್ನು ಇವಳು ನಿಶ್ಚಿಂತೆಯಿಂದ ತನ್ನ ಸ್ಥಾನಕ್ಕೆ ತೆರಳಲಿ. ಭಗವಂತನಾದ ಈ ಕಮಲಾಕಾಂತನ ಅಭಿಪ್ರಾಯವನ್ನು ತಿಳಿದೇ ನಾನು ಈಗ ಅವನ ಆದೇಶದಂತೆ ಇದನ್ನೆಲ್ಲ ತಿಳಿಸಿ ಹೇಳಿದ್ದೇನೆ.'' ಎಂದು ಬ್ರಹ್ಮದೇವರು ಸುದೀರ್ಘವಾದ ಭಾಷಣವನ್ನು ಶಾಂತರೀತಿಯಿಂದ ಮಾಡಿ ಮುಗಿಸಿ ಮುಕುಂದನ ಪಾದಾರವಿಂದಗಳಿಗೆ ಭಕ್ತಿಯಿಂದ ವಂದಿಸಿ ತಮ್ಮ ಸ್ಥಾನದಲ್ಲಿ ಕುಳಿತುಕೊಂಡರು. ಆಮೇಲೆ ಭಗವಂತನು ತಾನೂ ಯದುವಂಶದಲ್ಲಿ ಜನಿಸಿ ಕೃಷ್ಣರೂಪದಿಂದ ಭೂಭಾರ ಹರಣಕಾರ್ಯವನ್ನು ಕೈಕೊಳ್ಳುತ್ತೇನೆಂದು ಆಶ್ವಾಸನೆಯನ್ನು ಕೊಟ್ಟಬಳಿಕ ಮೇರುಶಿಖರದ ದೇವಸಭೆ ಮುಕ್ತಾಯವಾಯಿತು.

ಆಗ ಬ್ರಹ್ಮದೇವರು ಲೋಕಧಾರಕನಾದ ಶೇಷ, ಸನತ್‌ಕುಮಾರ, ಸಾಧ್ಯ, ಅಗ್ನಿ, ವರುಣ, ಯಮ, ಸೂರ್ಯ, ಚಂದ್ರ, ಗಂಧರ್ವ, ಅಪ್ಸರೆಯರು, ರುದ್ರ, ಆದಿತ್ಯ, ಅಶ್ವಿನೀಕುಮಾರರೇ ಮೊದಲಾದ ದೇವತೆಗಳನ್ನೆಲ್ಲ ಕರೆದು ಬೇಗ ಭೂಲೋಕದಲ್ಲಿ ಅವತಾರಮಾಡಿರೆಂದು ಹೇಳಿದರು. ಅವರ ಹೇಳಿಕೆಯಂತೆ ಅಸಂಖ್ಯ ದೈವೀಪುರುಷರು ಮಾನುಷಲೋಕದಲ್ಲಿಯೇ ನಿಜ ಮತ್ತು ಅಯೋನಿಜವಾದ ಅಂಶಾವತರಣವನ್ನು ಮಾಡಿದರು. ಅವರಲ್ಲಿ ಅನೇಕ ಆನೆಗಳ ಸತ್ವಗಳಿಂದ ಒಡಗೂಡಿದ, ಅದ್ಭುತ ಶಕ್ತಿ ಸಾಮರ್ಥ್ಯ ಸಹಿತರಾದ, ದಿವ್ಯಾಯುಧಧಾರಿ ಗಳಾದ ನೂರಾರು ಸಾವಿರಾರು ಲಕ್ಷಾವಧಿ ದೇವತೆಗಳು ವೃಷ್ಣಿವಂಶದಲ್ಲಿಯೂ ಕುರುಕುಲ ಪಾಂಚಾಲ ದೇಶಗಳಲ್ಲಿಯೂ ಹುಟ್ಟಿದುದಲ್ಲದೆ ಎಷ್ಟೋ ದೇವತೆಗಳು ಬ್ರಹ್ಮವರ್ಚಸ್ವಿ ಗಳಾದ ಬ್ರಾಹ್ಮಣ ವಂಶದಲ್ಲಿಯೂ ಅವತರಿಸಿದರು. ಬ್ರಾಹ್ಮಣರಾಗಿ ಹುಟ್ಟಿದರೂ ಶಾಸ್ತ್ರ ವಿದ್ಯೆಯಂತೆ ಶಸ್ತ್ರವಿದ್ಯೆಯಲ್ಲಿಯೂ ಪಾರಂಗತರಾಗಿ, ಬೇಕೆಂದರೆ ಆಕಾಶಕ್ಕೆ ನೆಗೆದು, ಸಾಗರವ ಜಿಗಿದು, ಗಿಡಗಳನ್ನು ತೂರಾಡಿ, ನೆಲವನ್ನು ನಡುಗಿಸಬಲ್ಲವರಾಗಿದ್ದರು. ಇತ್ತ ವೇದ-ವೇದಾಂಗ-ಪಾರಂಗತರಾಗಿ ಯಾಗಯೋಗಗಳಿಂದ ಯಜ್ಞೇಶ್ವರನನ್ನು ಸಾಕ್ಷಾತ್ಕಾರಿಸಿ ಕೊಳ್ಳಲು ಸಮರ್ಥರೂ ಆಗಿದ್ದರು. ಹೀಗೆ ಅವರೆಲ್ಲರಿಗೂ ಅಪ್ಪಣೆಯಿತ್ತು ಕೊಟ್ಟು ಕಳಿಸಿ ಮುಂದಿನ ಮಹಾಕಾರ್ಯ ಗೌರವದ ಭಾರವನ್ನೆಲ್ಲ ಭಗವಂತನಿಗೇ ಒಪ್ಪಿಸಿ ಆ ಸರಸ್ವತಿಯ ಹೃದಯದರಸನು ನಾರಾಯಣನಿಗೆ ನಮಸ್ಕರಿಸಿ ಸತ್ಯಲೋಕಕ್ಕೆ ತೆರಳಿದನು.

## ಕುರುವಂಶದ ವಿಸ್ತಾರ

ಭಗವಂತನ ಅಭಿಪ್ರಾಯದಮೇರೆಗೆ ಬ್ರಹ್ಮದೇವರು ಆದೇಶಗೈದಂತೆ ಇಂದ್ರವಾಯು ಸೂರ್ಯ ಯಮ ಮೊದಲಾದ ದೇವತೆಗಳು ಬೇರೆ ಬೇರೆ ರೂಪದಿಂದ ಭೂಮಿಯಲ್ಲಿ ಅವತರಿಸಿದರು.

ಕುಂತೀದೇವಿಯ ಪ್ರಾಣಪ್ರಿಯ ಪತಿಯಾದ ಪಾಂಡುರಾಜನು ಒಂದು ದಿನ ಬೇಟೆಗೆ ಹೋದಾಗ ಅಡವಿಯಲ್ಲಿ ಚಿಗರೆಯ ರೂಪವನ್ನು ಸ್ವೀಕರಿಸಿ ವಿಹರಿಸುತ್ತಲಿರುವ ಮುನಿ ಪುಂಗವನಮೇಲೆ ಬಾಣ ಪ್ರಯೋಗವನ್ನು ಮಾಡಿದನು. ಅದರಿಂದ ಮರಣೋನ್ಮುಖನಾದ ಆ ಋಷಿಯು ''ನೀನಾದರೂ ಇದೇ ರೀತಿಯಾಗಿ ಮಡದಿಯೊಂದಿಗೆ ರತಿಲೀಲಾ ಲೋಲನಾದಾಗ ಮೃತಿಯನ್ನು ಹೊಂದು'' ಎಂದು ಶಾಪವಿತ್ತನು. ಅದನ್ನು ಕೇಳಿ ವಿರಕ್ತನಾದ ಪಾಂಡುವು ತನ್ನ ಮಾದ್ರಿ ಕುಂತಿ ಎಂಬ ಇಬ್ಬರೂ ಹೆಂಡಂದಿರೊಡನೆ ಅರಣ್ಯಕ್ಕೆ ಹೋಗಿ ವ್ರತಸ್ಥನಾಗಿಯೇ ಇದ್ದನು.

ಒಂದು ದಿನ ಮಕ್ಕಳಾಗಲಿಲ್ಲವೆಂದು ಚಿಂತೆಯಿಂದ ಕೊರಗುತ್ತಲಿರುವ ಆ ಮಹಾರಾಜನ ಹತ್ತಿರ ಕುಂತೀದೇವಿಯು ಬಂದು "ಪ್ರಾಣನಾಥ! ನಾನು ಚಿಕ್ಕವಳಿದ್ದಾಗ ನಮ್ಮ ತಂದೆಯ ಮನೆಯಲ್ಲಿ ಒಂದು ಸಲ ಮಹರ್ಷಿ ದೂರ್ವಾಸರು ಚಾತುರ್ಮಾಸ್ಯ ಸಂಕಲ್ಪಕ್ಕೆ ಕುಳಿತಿದ್ದರು. ನಾನು ಆಗ ಅವರನ್ನು ಬಹಳ ಭಕ್ತಿಯಿಂದ ಸೇವಿಸಿದ್ದರಿಂದ ಪ್ರಸನ್ನರಾದ ಅವರು ನನಗೆ ಕೆಲವು ಮಂತ್ರಗಳನ್ನು ಉಪದೇಶಿಸಿದ್ದಾರೆ. ಈ ಮಂತ್ರಗಳ ಪ್ರಭಾವದಿಂದ ನೀನು ಬೇಕಾದ ದೇವತೆಯನ್ನು ಕರೆದು ಅದರ ಅನುಗ್ರಹದಿಂದ ಸರ್ವೋತ್ಕೃಷ್ಟರಾದ ಶ್ರೇಷ್ಠ ಪುತ್ರರನ್ನು ಪಡೆಯಬಹುದೆಂದು ಹೇಳಿದ್ದಾರೆ. ಅದಕ್ಕೆ ತಮ್ಮ ಅಪ್ಪಣೆಯಾದರೆ ನಾನು ನೀವು ಹೇಳಿದ ದೇವತೆಗಳನ್ನು ಕರೆಯುತ್ತೇನೆಂದು" ಬಿನ್ನವಿಸಿಗೊಂಡಳು.

ಅದನ್ನು ಕೇಳಿ ಮಹಾರಾಜನು ಅತ್ಯಂತ ಸಂತೋಷದಿಂದ ಅನುಮತಿಯನ್ನೀಯಲು ಅವಳು ಮೊದಲು ಯಮಧರ್ಮನನ್ನು ಆಹ್ವಾನಿಸಿ ಧರ್ಮರಾಜನೆಂಬ ಸತ್ಯಸಂಧನೂ ಪರಮ ಧಾರ್ಮಿಕನೂ ಆದ ಮಗನನ್ನು ಪಡೆದಳು. ಆ ಬಳಿಕ ವಾಯು ದೇವರನ್ನು ಪ್ರಾರ್ಥಿಸಿ ಅವರ ಅನುಗ್ರಹದಿಂದ ಅಪ್ರತಿಮ ವೀರನೂ ಜ್ಞಾನಿಶ್ರೇಷ್ಠನೂ ಜೀವೋತ್ತಮನೂ ಆದ ಸರ್ವೋತ್ತಮ ಮಗನನ್ನು ಪಡೆದು ಅವನಿಗೆ ಭೀಮಸೇನನೆಂಬ ನಾಮಕರಣ ಮಾಡಿದಳು. ಅದರಂತೆ ಮತ್ತೊಮ್ಮೆ ಸಾಕ್ಷಾತ್ ಶಚೀಪತಿಯಾದ ದೇವೇಂದ್ರನನ್ನೇ ಮೂರನೆಯ ಮಂತ್ರದಿಂದ ಬರಮಾಡಿಕೊಂಡು ಅವನಿಂದ ಅರ್ಜುನನೆಂಬ ಲೋಕೈಕವೀರನಾದ ಮಗುವನ್ನು ಪಡೆದಳು.

ಹೀಗೆ ತನ್ನ ಸವತಿಗೆ ಮೂರು ಜನ ಒಳ್ಳೇ ತೇಜಃಪುಂಜರಾದ ಪ್ರಭಾವಿ ಮಕ್ಕಳಾದದ್ದನ್ನು ನೋಡಿ ಮಾದ್ರಿಯು ಪತಿಯ ಮುಖಾಂತರವಾಗಿ ಯಾಚಿಸಿ ಕುಂತಿಯಿಂದ ಮಂತ್ರವನ್ನು ಹೇಳಿಸಿಕೊಂಡಳು. ಜಾತ್ಯಾ ಬುದ್ಧಿವಂತಳಾದ ಅವಳು ಕುಂತಿ ಹೇಳಿದ ಆ ಒಂದೇ ಮಂತ್ರವನ್ನು ಒಳ್ಳೇ ಕೌಶಲ್ಯದಿಂದ ಉಪಯೋಗಿಸಿ ಆ ಒಂದೇ ಮಂತ್ರದಿಂದ ಅವಳಿ-ದೇವತೆಗಳಾದ ಅಶ್ವಿನೀ ಕುಮಾರರಿಬ್ಬರೂ ಬರುವಂತೆ ಮಾಡಿದಳು. ಅವರ ಪ್ರೀತಿ ಪ್ರಸಾದದಿಂದ ಅವಳಿಗೆ ಒಳ್ಳೆ ಸುಂದರರೂ ಸುಕುಮಾರರೂ ಆದ ನಕುಲ ಸಹದೇವ ಎಂಬ ಇಬ್ಬರು ಮಕ್ಕಳು ಜನಿಸಿದರು. ಹೀಗೆ ಐದು ಜನ ಪಾಂಡು ಪುತ್ರರು ಲೋಕವಿಕ್ರಾಂತರಾಗಿ ಬೆಳೆಯುತ್ತಲಿದ್ದರು. ಯಮ ವಾಯು ಇಂದ್ರ ಅಶ್ವಿನೀ ದೇವತೆಗಳೇ ಭಗವತ್ಕಾರ್ಯಸಾಧನೆಗೆ ಪಂಚಪಾಂಡವರಾಗಿ ಅವತರಿಸಿ ಬಂದರು.

ಇತ್ತ ಅರಣ್ಯದಲ್ಲಿ ಕುಂತಿಯು ಗಂಡು ಮಗು ಹೆತ್ತಳೆಂಬ ಸುದ್ದಿಯನ್ನು ಕೇಳಿ ಗರ್ಭಿಣಿಯಾದ ಗಾಂಧಾರಿಯು ಈರ್ಷ್ಯಾ ಅಸೂಯಾರೋಷಗಳಿಂದ ಅಂಧಳಾಗಿ ತನ್ನ ಗರ್ಭವನ್ನು ಗುದ್ದಿಕೊಂಡಳು. ಅದರಿಂದ ಗರ್ಭಪಿಂಡವು ಸಿಡಿದು ಬಿದ್ದಿತು. ಆಗ ವೇದವ್ಯಾಸರು ಬಂದು ಜೇನುತುಪ್ಪದ ಕೊಡಗಳಲ್ಲಿ ಆ ಎಲ್ಲ ಗರ್ಭದ ನೂರಾರು ತುಣುಕುಗಳನ್ನು ಹಾಕಿಸಿಯಿಟ್ಟರು. ಅದರಿಂದ ಕಲಿಯ ಅಂಶನಾದ ದುರ್ಯೋಧನನೇ ಮೊದಲಾದ ನೂರು ಜನ ಕೌರವರು ಜನಿಸಿದರು.

ಇದಕ್ಕೂ ಮೊದಲೇ ಯಮನು ವೇದವ್ಯಾಸರ ಅನುಗ್ರಹದಿಂದ ಓರ್ವ ದಾಸಿಯಲ್ಲಿ ಅವತರಿಸಿ ವಿದುರ ಎಂದು ಪ್ರಸಿದ್ಧಿಯನ್ನು ಪಡೆದಿದ್ದನು. ಇದರಂತೆ ಬೃಹಸ್ಪತ್ಯಾಚಾರ್ಯರು ದ್ರೋಣರಾಗಿಯೂ, ಶುಕ್ರಾಚಾರ್ಯರು ಭೂರಿ ಶ್ರವಣನಾಗಿಯೂ, ಚಂದ್ರನು

ಅಭಿಮನ್ಯುವಾಗಿಯೂ, ವರುಣನು ಶ್ರುತಾಯುಧನಾಗಿಯೂ, ರುದ್ರದೇವರು ಅಶ್ವತ್ಥಾಮನಾಗಿಯೂ, ಕುಬೇರನು ಧೃತರಾಷ್ಟ್ರನಾಗಿಯೂ, ಉಳಿದ ಗಂಧರ್ವರೆಲ್ಲ ದೇವಕ ಉಗ್ರಸೇನಾದಿ ರೂಪದಿಂದಲೂ ಅಂಶಾವತರಣ ಮಾಡಿದರು.

ಹೀಗೆಲ್ಲ ದೇವದಾನವರೂ ಅವತರಿಸಿದ್ದನ್ನು ಕಂಡು ಸಾಕ್ಷಾತ್ ಜಗದೀಶ್ವರನನ್ನು ದೇವಪಕ್ಷದಲ್ಲಿ ಅವತರಿಸಲು ಬಿನ್ನವಿಸಿಕೊಳ್ಳಲೆಂದು ವೀಣಾವಿನೋದ ರಸಿಕ ಮುನಿಗಳಾದ ಪೂಜ್ಯ ನಾರದರು ಬ್ರಹ್ಮಲೋಕದಲ್ಲಿ ನೆರೆದ ಒಂದು ಸುರಸಭೆಗೆ ದಯಮಾಡಿಸಿದರು ಅಲ್ಲಿ ಅಧ್ಯಕ್ಷ ಪೀಠದಲ್ಲಿ ಆಸೀನನಾದ ಶ್ರೀಮನ್ನಾರಾಯಣನನ್ನು ಕಂಡು ದಂಡವತ್ ಪ್ರಣಾಮಮಾಡಿ ಅವನನ್ನು ಅಧಿಕ್ಷೇಪಿಸಿ ಮಾತನಾಡಿದರು. ''ವೈಕುಂಠಪತೇ! ಭೂಪತಿಗಳ ಭಾರದಿಂದ ಭಗ್ನ ಭುಗ್ನಳಾದ ಭೂದೇವಿಯ ದುಃಖಭಾರವನ್ನು ಕಳೆಯಲಿಕ್ಕಾಗಿ ಈಗ ದೇವತೆಗಳೆಲ್ಲರೂ ಅಂಶಾವತಾರವನ್ನು ಮಾಡಿದ್ದು ವಿಫಲವೇ ಸರಿ. ಮೇದಿನೀ ಮಂಡಲದಲ್ಲಿ ಮಹಾಪರಾಕ್ರಮ ಶಾಲಿಗಳಾಗಿ ಮಲೆತು ನಿಂತ ಈ ಮಹೀಪಾಲ ಕುಲವನ್ನು ದಂಡಿಸಲು ನೀನಿಲ್ಲದೇ ಇತರ ದೇವತೆಗಳಿಗೆ ಸಾಧ್ಯವೇ ಇಲ್ಲ. ಧರಾದೇವಿಯ ದೈನ್ಯ ದುರವಸ್ಥೆಗಳನ್ನು ಕಂಡು ಎಲ್ಲ ದೇವತೆಗಳೂ ದಯೆದುಂಬಿ ನಿನ್ನಾಜ್ಞೆಯಂತೆ ಭೂಮಿಯಲ್ಲಿ ಅವತರಿಸಿದರೂ ದಯಾಸಾಗರನೂ ಭೂಕಾಂತನೂ ಆದ ನೀನೇಕೆ ಇನ್ನೂ ಅವತಾರ ಮಾಡಲೊಲ್ಲೆ! ನಿನ್ನಿಂದ ಪ್ರೇರಿತರಾಗಿ ಭೂಮಿಯಲ್ಲಿ ಅವತಾರ ಮಾಡಿದ ದೇವತೆಗಳು ನಿನ್ನನ್ನೇ ನಿರಂತರ ಮನದಲ್ಲಿ ನೆನೆಯುತ್ತ ನಿನ್ನ ಅವತಾರದ ಪ್ರತೀಕ್ಷೆಯಲ್ಲಿರುವರು.

ಅದರಂತೆ ತಾರಕಾಮಯ ಸಂಗ್ರಾಮದಲ್ಲಿ ಮಧೂಸೂದನ! ನೀನು ಸಂಹರಿಸಿದ ದೈತ್ಯದಾನವರೆಲ್ಲರೂ ಆ ಹಿಂದಿನ ದ್ವೇಷವನ್ನು ಮನದಲ್ಲಿ ಹಿಡಿದು ಅದಕ್ಕೆ ಪ್ರತೀಕಾರ ಗೈಯ್ಯಬೇಕೆಂದು ಮರಳಿ ಭೂಮಿಯಲ್ಲಿ ಹುಟ್ಟಿ ಬಂದಿದ್ದಾರೆ. ಯಮುನಾನದಿಯ ದಂಡೆಯ ಮೇಲೆ ಪ್ರಚಂಡ ಜನಸ್ತೋಮದಿಂದ ತುಂಬಿ ತುಳುಕುತ್ತಲಿರುವ ಮಥುರಾ ಎಂಬ ಪಟ್ಟಣವಿದೆ. ಅಲ್ಲಿ ಇದಕ್ಕೂ ಮೊದಲು ಮಧುವನ ಎಂಬ ಘೋರ ಅರಣ್ಯವಿದ್ದಿತು. ಬಗೆಬಗೆಯ ಹೆಮ್ಮರ ಕಾಡುಕಂಟಿಗಳಿಂದ ನಿಬಿಡವಾದ ಆ ದುರ್ಗಮ-ವಿಪಿನ ಗರ್ಭದಲ್ಲಿ ಲೋಕಕಂಟಕನಾದ ಮಧು ಎಂಬ ಬಲಾಢ್ಯನಾದ ದುಷ್ಟದಾನವನು ವಾಸಿಸುತ್ತಿದ್ದನು. ಅವನಿಗೆ ವೀರ್ಯಾವಲೇಪದಿಂದ ಮತ್ತಚಿತ್ತನಾದ ಲವಣ ಎಂಬ ಮಗನಿದ್ದನು. ಆ ಲವಣಾಸುರನು ತನ್ನ ತಂದೆಯ ಸ್ಥಾನವಾದ ಆ ಮಧುವನದಲ್ಲಿಯೇ ಎಷ್ಟೋ ವರುಷ ಕ್ರೀಡಾ ಲೋಲನಾಗಿದ್ದು ದೇವತೆಗಳಿಗೆ ಪೀಡೆ ಕೊಡುತ್ತಲಿದ್ದನು. ಆ ಸಮಯದಲ್ಲಿ ಅಯೋಧ್ಯಾನಗರಿಯಲ್ಲಿ ಪ್ರಾತಃಸ್ಮರಣೀಯನಾದ ಮರ್ಯಾದಾ ಪುರುಷೋತ್ತಮನೆನಿಸಿದ ಪ್ರಭು ಶ್ರೀರಾಮಚಂದ್ರನು ರಾಜ್ಯವನ್ನಾಳುತ್ತಿದ್ದನು. ಲವಣನು ರಾಮನ ಕಡೆಗೆ ತನ್ನ ದೂತನೊಬ್ಬನನ್ನು ಕಳುಹಿಸಿ. ''ರಾಮ ! ನಾನು ನಿನ್ನ ವೈರಿಯಿದ್ದು ನನ್ನ ಸ್ಥಾನವಾದರೂ ನಿನ್ನ ಸಾಮ್ರಾಜ್ಯ ಸೀಮೆಗೆ ಹೊಂದಿಯೇ ಇದೆ. ನಿಜವಾದ ರಾಜರು ತಮ್ಮ ರಾಜ್ಯಸೀಮೆಯ ಸಮೀಪದಲ್ಲಿ ನನ್ನಂಥ ಪ್ರಚಂಡ ಶತ್ರುವನ್ನು ಬಲಿಷ್ಠನಾಗಿ ಬೆಳೆಯ ಬಿಡುವುದಿಲ್ಲ. ನೀನು ಪ್ರಜಾಜನರಿಗೆಲ್ಲ ಆದರ್ಶರಾಜನಾಗಿ ಮೆರೆಯಬೇಕೆಂದು ಸಂಕಲ್ಪಿಸಿದ್ದರೆ ಮೊದಲು ಬಲದರ್ಪಿತರಾದವರನ್ನು ನಿರ್ಮೂಲ ಮಾಡಬೇಕು.

ದಾಶರಥೇ ! ನೀನು ಹೆಂಡತಿಯ ಸಲುವಾಗಿ ಮೋಹದಿಂದ ಅಸಂಖ್ಯ ಸೇನಾಪರಿವಾರದಿಂದ ಒಡಗೂಡಿದ ರಾವಣನನ್ನು ಕೊಂದದ್ದು ಬಹಳೇ ನಿಂದ್ಯವಾದ

ಕಾರ್ಯವೆಂದು ನನಗೆನಿಸುವುದು. ನೀನು ವನವಾಸ ಧರ್ಮವನ್ನು ಅಂಗೀಕರಿಸಿ ವ್ರತ್ಯಸ್ಥನಾಗಿದ್ದರೂ ಮಡದಿಯ ಮೇಲಿನ ಮೋಹದಿಂದ ಹಿಂಸಾಚಾರಕ್ಕಿಳಿದಿದ್ದು ಅಕ್ಷಮ್ಯವಾದ ಅಪರಾಧವಾಗಿದೆ. ನಿನ್ನ ಈ ಗರ್ಹ್ಯವಾದ ಜಘನ್ಯ ಕೃತ್ಯದಿಂದ ಪುಣ್ಯಾಶ್ರಮಗಳಲ್ಲಿರುವ ತಪಸ್ವಿಗಳೆಲ್ಲ ನಾಚಿಕೆಯಿಂದ ತಲೆತಗ್ಗಿಸುವಂತಾಗಿದೆ. ನಿಜವಾದ ತಾಪಸರು ಎಂದಿಗೂ ಸಿಟ್ಟಿಗೇಳುವುದಿಲ್ಲ, ಶಸ್ತ್ರವನ್ನೂ ಎತ್ತುವುದಿಲ್ಲ, ಹಿಂಸೆಯನ್ನೂ ಮಾಡುವುದಿಲ್ಲ. ಆದರೆ ಧರ್ಮ-ದ್ರೋಹಿಯಾದ ನೀನು ಮಾತ್ರ ಯಃಕಶ್ಚಿತ್ ಒಂದು ಹೆಣ್ಣಿನ ಸಲುವಾಗಿ ಕೋಟ್ಯವಧಿ ರಾಕ್ಷಸರನ್ನು ಕೊಂದು, ರಕ್ತದ ಕಾಲುವೆಯನ್ನು ಹರಿಯಿಸಿ, ಹತ್ಯಾಕಾಂಡ ಹಿಂಸಾತಾಂಡವಗಳನ್ನು ನಡೆಯಿಸಿ ಬಿಟ್ಟದ್ದರಿಂದ ವನವಾಸಿಗಳಾದ ತಾಪಸರ ಮೋರೆಗೆಲ್ಲ ಮಸಿಬಳೆದಂತಾಗಿದೆ. ರಾವಣನನ್ನು ಕೊಂದು ಬಂದೆನೆಂದು ನಿನಗೆ ಸೊಕ್ಕು ಬೇಡ. ಸ್ತ್ರೀಲಂಪಟನೂ ಅನಾಚಾರಿಯೂ ಆದ ರಾವಣನು ತನ್ನ ದುರ್ವ್ಯಾಪಾರದಿಂದ ತಾನೇ ಸತ್ತುಹೋದಂತಾಗಿದ್ದನು. ಅಂಥ ಸ್ತ್ರೈಣ ದೈತ್ಯನನ್ನು ಕೊಲ್ಲುವುದೇನು ಮಹಾ! ನಿನ್ನಲ್ಲಿ ನಿಜ ವಾಗಿಯೂ ಶಕ್ತಿ ಸಾಮರ್ಥ್ಯಗಳಿದ್ದರೆ ನನ್ನ ಜೊತೆಗೆ ಯುದ್ಧಕ್ಕೆ ಬಾ'' ಎಂದು ಹೇಳಿ ಕಳಿಸಿದನು.

ಆಗ ರಾಮನು ನಕ್ಕು ''ಇಂಥ ಜಂಭ ಕೊಚ್ಚಿಕೊಳ್ಳುವ ಮಾತಿನ ಮಲ್ಲರನ್ನು ಕೊಲ್ಲಲಿಕ್ಕೆ ನಾನೇ ಏಕೆ ಬರಬೇಕು! ನನ್ನ ಕೊನೆಯ ತಮ್ಮನಾದ ಶತ್ರುಘ್ನನೊಬ್ಬನೇ ಸಾಕು. ನೀನು ನಡೆ'' ಎಂದು ಹೇಳಿ ಆ ದೂತನನ್ನು ಕೊಟ್ಟು ಕಳಿಸಿದನು. ರಘುಪತಿಯ ಅಪ್ಪಣೆಯಮೇರೆಗೆ ವೀರ ವಿಕ್ರಮನಾದ ಶತ್ರುಘ್ನನು ಮಧುವನಕ್ಕೆ ಹೋಗಿ ಆ ದಾನವನ ದರ್ಪ ಧ್ವಂಸಮಾಡಿ ತನ್ನ ಕೈಯಲ್ಲಿರುವ ನಿಶಿತವಾದ ತಲವಾರದಿಂದ ಅವನ ತಲೆಯನ್ನು ಚುಚ್ಚಿ ಕೊಚ್ಚಿ ಒಗೆದನು. ಮತ್ತು ಆ ರಕ್ಕಸನಿಗೆ ಅತ್ಯಂತ ಪ್ರೀತಿಯದಾದ ಆ ಮಧುವನದಲ್ಲಿಯ ಗಿಡ ಗುಂಪು ಲತಾ ವಿತಾನಗಳನ್ನೆಲ್ಲ ತರಿದೊಗೆದು ಜನರಿಗೆಲ್ಲ ವಾಸಮಾಡಲು ಅನುಕೂಲವಾಗಲೆಂದು ಮಥುರಾ ಎಂಬ ಪಟ್ಟಣವನ್ನು ಕೂಡಿಸಿದನು.

ಅಂದು ಆ ಸುಮಿತ್ರಾನಂದನನು ಕೂಡಿಸಿದ ಆ ಮಥುರಾಪುರಿಯು ಇಂದು ಮುಗಿಲು ಮೋರೆಗೆ ಮುದ್ದಿಡುವ ಅನೇಕ ಗುಡಿಗೋಪುರಗಳಿಂದಲೂ, ಚಂದ್ರಚುಂಬಿಯಾದ ಉತ್ತುಂಗ ಪ್ರಾಸಾದ ಶೃಂಗಗಳಿಂದಲೂ, ಜನ ನಿಬಿಡವಾದ ವಿವಿಧ ವಿಪಣಿ ವೀಥಿಗಳಿಂದಲೂ, ಅನೇಕ ಉದ್ಯಾನ ಉಪವನ ಕ್ಷೇತ್ರಾರಾಮಗಳಿಂದಲೂ ಒಡಗೂಡಿ, ಮಿಂಚಿನ ಮೂರುತಿಗಳಂತೆ ಅಲ್ಲಲ್ಲಿ ಸಂಚರಿಸುವ ನಾನಾದೇಶದ ನರನಾರಿಯರಿಂದ ನೆಲಕ್ಕಿಳಿದ ಅಮರಾವತಿಯಂತೆ ತೋರುತ್ತದೆ.

ಆ ಪಟ್ಟಣದಲ್ಲಿ ಉಗ್ರಸೇನ ಎಂಬ ಭೋಜ-ವಂಶ-ಲಲಾಮನಾದ ಮಹಾರಾಜನು ರಾಜ್ಯವಾಳುತ್ತಿದ್ದನು. ಅವನು ಅತ್ಯಂತ ಪರಾಕ್ರಮಶಾಲಿಯಿದ್ದು ದೇವ ಸೇನಾನಿಯಾದ ಷಣ್ಮುಖನಂತೆ ಸೇನಾಸನ್ನಾಹದಲ್ಲಿ ಒಳ್ಳೇ ಪರಿಣತನಿದ್ದನು.

ಭಗವನ್! ತಾರಕಾಮಯ ಸಂಗ್ರಾಮದಲ್ಲಿ ನೀನು ಕೊಂದ ಕಾಲನೇಮಿ ಎಂಬ ಘೋರಾಕಾರದ ವೀರಾಧಿವೀರನಾದ ಉಗ್ರದಾನವನು ಈಗ ಆ ಉಗ್ರಸೇನ ಮಹಾರಾಜನ ಹೊಟ್ಟೆಯಿಂದ ಹುಟ್ಟಿ ಕಂಸ ಎಂಬ ಹೆಸರನ್ನು ಧರಿಸಿ ಅಖಂಡ ಭೂಮಂಡಲದಲ್ಲೆಲ್ಲ ತನ್ನ ಪ್ರಚಂಡ ಪರಾಕ್ರಮದಿಂದ ಪ್ರಖ್ಯಾತನಾಗಿದ್ದಾನೆ. ಈ ಕಂಸನು ತನ್ನ ಸಿಂಹಸತ್ವ ಹಾಗೂ ದೋರ್ದಂಡದರ್ಪದಿಂದ ರಾಜಕುಲಕ್ಕೆಲ್ಲ ಧೂಮಕೇತುವಿನಂತಿದ್ದು ನೀತಿಮಾರ್ಗದಿಂದ ಎಂದೋ ಭ್ರಷ್ಟನಾಗಿದ್ದಾನೆ. ಅವನನ್ನು ಕಂಡರೇ ರಾಜರಿಗೆಲ್ಲ ಮೃತ್ಯುದರ್ಶನವಾದಂತಾಗು ವದು.

ಪ್ರಜೆಗಳಿಗಾದರೂ ಭಯಭ್ರಾಂತಿ ಬಂದು ಅವನ ಆ ದಾರುಣವೃತ್ತಿ ದುಷ್ಟ ಪ್ರವೃತ್ತಿ ಅನ್ಯಾಯಾಚರಣೆಗಳಿಂದ ಎಲ್ಲರೂ ಅವನ ಹೆಸರು ಕೇಳಿದರೆ ನಡುಗುವಂತಾಗಿದೆ. ಅವನಿಂದ ಅವನ ರಾಷ್ಟ್ರಕ್ಕೆ ಹಿತವಿಲ್ಲ, ಅವನ ಪ್ರಜರಿಗೆ ಸುಖವಿಲ್ಲ. ಅಪ್ತೇಷ್ಟರಿಗೂ ಅಭಯವಿಲ್ಲ. ಎಲ್ಲರಿಗೂ ಭಯಪ್ರದನಾಗಿ, ಯಾವಾಗಲೂ ಸಿಟ್ಟು ಸೊಕ್ಕುಗಳಿಂದ ಉರಿಯುತ್ತ, ನರಭಕ್ಷಕನೂ ಸಾಧು-ಶಿಕ್ಷಕನೂ ಆಗಿ ಭೂಮಿಯಲ್ಲಿ ಮೆರೆಯುತ್ತಿದ್ದಾನೆ, ದೇವಬ್ರಾಹ್ಮಣರನ್ನು ಜರೆಯುತ್ತ ಭೂಭಾರನಾಗಿ ನಿಂತುಕೊಂಡಿದ್ದಾನೆ ಅಂದು ನೀನು ಕೊಂದ ಆ ಕಾಲನೇಮಿ.

ಅದರಂತೆ ಪೂರ್ವದಲ್ಲಿ ತನ್ನ ಪ್ರಚಂಡವಾದ ಅಶ್ವಶಕ್ತಿಯಿಂದ ವಿಶ್ವವನ್ನೇ ನಡುಗಿಸಿದ ಹಯಗ್ರೀವನೆಂಬ ದೈತ್ಯನು ಈಗ ಕೇಶಿ ಎಂಬ ಕಂಸನ ಕಿರಿಯ ತಮ್ಮನಾಗಿ ಬಂದ್ದಿದಾನೆ. ಅವನು ಯಾವಾಗಲೂ ವೃಂದಾವನದ ಪುಣ್ಯಭೂಮಿಯ ಸುತ್ತಲೂ ಹೇಕರಿಸುತ್ತ ಸಂಚರಿಸಿ ಅಲ್ಲಿಗೆ ಬಂದವರನ್ನು ಕೊಂದು ನರಮಾಂಸವನ್ನು ತಿಂದು ಮಲೆತು ನಿತಂದ್ದಾನೆ.

ಇದರಂತೆ ಬಲಿಯ ಮಗನಾದ ಅರಿಷ್ಟನೂ ಗೋ ಗಣಕ್ಕೆಲ್ಲ ಅನಿಷ್ಟಕಾರಕವಾದ ಉನ್ಮತ್ತ ಘೂಳಿಯಾದರೆ ಅನಿಷ್ಟನೆಂಬ ದಾನವಶ್ರೇಷ್ಠನು ಕಂಸನ ವಾಹನವಾದ ಆನೆಯಾಗಿದ್ದಾನೆ. ಲಂಬಾಸುರನು ಪ್ರಲಂಬಾಸುರ ಎಂಬ ಹೆಸರಿನಿಂದ ಭಾಂಡೀರವಟವನ್ನು ಆಶ್ರಯಿಸಿದ್ದಾನೆ. ಅಂದಿನ ಖರ ರಾಕ್ಷಸನೇ ಇಂದು ಧೇನುಕಾಸುರನಾಗಿ ತಾಲವನವಲ್ಲಿದ್ದು ಜನರಿಗೆಲ್ಲ ತಾಪದಾಯಕನಾಗಿದ್ದಾನೆ. ಮತ್ತು ಅಂದು ವಾರಾಹ ಮತ್ತು ಕಿಶೋರ ಎಂಬ ಬಲಿಷ್ಠರಾದ ದೈತ್ಯರು ಈಗ ಮಲ್ಲಯುದ್ಧ ವಿಶಾರದರಾದ ಚಾಣೂರ ಮತ್ತು ಮುಷ್ಟಿಕ ಎಂಬ ಜಗಜಟ್ಟಿಗಳಾಗಿ ಕಂಸನ ಆಶ್ರಯದಲ್ಲಿರುವರು. ಇದಲ್ಲದೆ ಮಯ ಮತ್ತು ತಾರ ಎಂಬ ದೃಪ್ತದಾನವೇಶ್ವರರಿಬ್ಬರೂ ಧರಣೀಪುತ್ರನಾದ ನರಕಾಸುರನ ಪ್ರಾಗ್ಜ್ಯೋತಿಷ ಪುರದಲ್ಲಿ ವಾಸವಾಗಿದ್ದಾರೆ. ಒಟ್ಟಾರೆ ದೇವದೇವ! ಅಂದು ನೀನು ವಿನಾಶಗೈದ ರಕ್ಕಸರೆಲ್ಲರೂ ಇಂದು ಮತ್ತೆ ಮಾನವ ಜನ್ಮವನ್ನು ಪಡೆದು ಭೂಮಿಯಲ್ಲಿ ಜನಪೀಡೆಯನ್ನುಂಟುಮಾಡಿ ಹರಿ ಹಾಗೂ ಹರಿಭಕ್ತರನ್ನು ದ್ವೇಷ ಮಾಡುತ್ತಾರೆ. ಆ ಎಲ್ಲ ದುರುಳದಾನವರ ಸಂಹಾರವು ನಿನ್ನಿಂದಲೇ ಆಗಬೇಕಾಗಿದೆ. ಅವರು ನಿನ್ನ ಹೊರತು ಬೇರಾರಿಗೂ ಹೆದರುವುದಿಲ್ಲ. ನಿನಗೆ ಮಾತ್ರ ಜಲದಲ್ಲಿದ್ದರೂ ಬೆದರುವರು, ನೆಲದಲ್ಲಿದ್ದರೂ ಹೆದರುವರು. ಗಗನಕ್ಕೇರಿದರೂ ಅಂಜುವರು, ಪಾತಾಳಕ್ಕಿಳಿದರೂ ಅಳಕುವರು. ಅದುದರಿಂದ ಜಗಜನ್ಮಾದಿಕಾರಣನಾದ ಜಾನ್ಹವೀಜನಕ! ಏಳು, ಕಂಸಾದಿ ಹಿಂಸ್ರ ನೃಶಂಸರಾಕ್ಷಸರ ಕುಲವನ್ನು ವಿಧ್ವಂಸಗೈಯಲು ನರಸಿಂಹ! ನೀನೇ ನರರೂಪದಿಂದ ಅವತರಿಸು ಏಳು. ನಾನು ನಿನ್ನ ಜೊತೆಗೆ ಭೂಮಿಗೆ ಬರುವೆ. ಹರೇ! ಹೊರಡು'' ಎಂದು ನಾರದರು ಭಗವಂತನನ್ನು ಭೂಮಿಗೆ ಬರಲು ತ್ವರೆ ಪಡಿಸಿದರು.

ಆಗ ಬ್ರಹ್ಮದೇವರು ಭಗವಂತನ ಸಂಕಲ್ಪವನ್ನೂ ಅವನ ಅನುಗ್ರಹದಿಂದ ತಿಳಿದು ಆ ಸರ್ವಜ್ಞ ಮೂರ್ತಿಗೆ ಕೈ ಮುಗಿದು ವಿಜ್ಞಾಪಿಸಿಗೊಂಡರು. ''ಮುಕುಂದ! ನೀನು ಈಗ ದ್ವಾಪರಾಂತಿಮಭಾಗದಲ್ಲಿ ಕೃಷ್ಣನಾಗಿ ವಸುದೇವ ದೇವಕಿಯರ ಉದರದಿಂದ ತುರುಗಾಹಿಗಳ ವಂಶದಲ್ಲಿ ಜನಿಸಿ ಮೊದಲು ಗೋಪಾಲಕನಾಗಿ ಬಳಿಕ ಭೂಪಾಲಕರನ್ನೆಲ್ಲ ಅಳಿದು ಕೊನೆಗೆ ವಿಶ್ವಪಾಲಕನಾಗಬೇಕು. ನಿನ್ನ ಈ ಗೋಪಾಲವಂಶಜನನಕ್ಕೆ ಕಾರಣೀಭೂತವಾದ ಒಂದು ಪೂರ್ವೋತಿ ಹಾಸವಿದೆ. ಅದನ್ನು ಹೇಳುತ್ತೇನೆ. ಆಲಿಸು.

ಪೂರ್ವಕಾಲದಲ್ಲಿ ಮಹರ್ಷಿಕಶ್ಯಪರು ಮಹಾತ್ಮನಾದ ವರುಣನ ಪಯಸ್ವಿನಿ ಆದ ಆಕಳುಗಳನ್ನು ತಮ್ಮ ಯಜ್ಞಕಾರ್ಯಕ್ಕಾಗಿ ಹಿಡಿದುಕೊಂಡು ಬಂದರು. ಯಾಗವು

ವಿಧಿಪೂರ್ವಕವಾಗಿ ಮುಗಿದ ಬಳಿಕ ಅವರು ಆ ಆಕಳುಗಳನ್ನು ವರುಣನಿಗೆ ಕೊಡಬೇಕೆಂದಾಗ ಅವರ ಹೆಂಡಂದಿರಾದ ಆದಿತಿ ಮತ್ತು ಸುರಭಿಯರು ತಡೆದು "ಅಮೃತ ದಂತೆ ರುಚಿರಸ್ಯವಾದ, ಕೊಡಕೊಡ ಹಾಲನ್ನು ಹಿಂಡುವ ಈ ಹಸುಗಳು ನಮ್ಮಲ್ಲಿಯೇ ಇರಲಿ. ಇವುಗಳನ್ನು ತಿರುಗಿ ಕೊಡುವುದೇ ಬೇಡ" ಎಂದು ನಿಷೇಧ ಮಾಡಿದರು. ತನ್ನ ಮಡದಿಯರ ಮಾತನ್ನು ಕೇಳಿ ಕಶ್ಯಪರಾದರೂ ಮೋದದಿಂದ ಕೊಡಗೆಚ್ಚಲಿನ ಆ ವರುಣ ಗೋವುಗಳನ್ನು ಮರಳಿ ಕೊಡಲಿಲ್ಲ. ಆಗ ವರುಣನು ನನ್ನ (ಬ್ರಹ್ಮನ) ಕಡೆಗೆ ಬಂದು ವಂದಿಸಿ "ಗುರುಗಳಾದ ಕಶ್ಯಪರು ನಮ್ಮ ಧೇನುಗಳನ್ನು ವೈದಿದ್ದು ತಮ್ಮ ಯಾಜ್ಞಿಕ ಕ್ರಿಯೆ ಮುಗಿದರೂ ತಿರುಗಿ ತಂದು ಕೊಡಲಿಲ್ಲ. ದುಗ್ಧಲುಬ್ಧರಾದ ತನ್ನ ಪತ್ನಿಯರ ಮಾತಿಗೆ ಮುಗ್ಧರಾಗಿ ಅವರು ನ್ಯಾಯಮಾರ್ಗದಿಂದ ಚಲಿತರಾಗಿ ಚೌರ್ಯಚರ್ಯೆಯನ್ನು ಅಂಗೀಕರಿಸಿದ್ದಾರೆ. ಆ ನನ್ನ ಆಕಳುಗಳೆಂದರೆ ಬಯಸಿದಷ್ಟು ಹಾಲನ್ನು ಕೊಟ್ಟು ಬೇಡಿದ ವರಗಳನ್ನು ಕೂಡ ಕೊಡುವ ಕಾಮಧೇನುಗಳೇ. ಇಷ್ಟು ಸಮೃದ್ಧವಾದ ಹಾಲು ಹೈನ ಅಮೃತದಾನ ಮಾಡುತ್ತಲಿರುವ ಆ ಗೋವುಗಳನ್ನು ರಕ್ಷಿಸುವ ಭಾರವೂ ಕೂಡ ನನ್ನ ಮೇಲಿಲ್ಲ. ನಾನು ಅವುಗಳನ್ನು ಹಿಂಡಿಕೊಂಡು ಬಿಟ್ಟಕೂಡಲೇ ಅವು ಸಪ್ತಸಮುದ್ರ ಪ್ರದೇಶಗಳಲ್ಲೆಲ್ಲ ತಿರುಗಾಡಿ ತಮ್ಮ ತೇಜಸ್ಸಿನಿಂದ ತಮ್ಮ ರಕ್ಷಣೆ ಮಾಡಿಕೊಂಡು ತಮ್ಮ ತಮ್ಮ ಹೊಟ್ಟೆಯನ್ನು ತಾವು ತುಂಬಿಕೊಂಡು ಸಾಯಂಕಾಲಕ್ಕೆ ಮಾತ್ರ ನನ್ನ ಮನೆಗೆ ಬಂದು ನಮ್ಮ ಮನೆಯ ಪಾತ್ರೆಗಳು ಹಿಡಿಸಿದಷ್ಟು ಹಾಲನ್ನು ಕೊಡುತ್ತವೆ. ಅವುಗಳ ಕ್ಷೀರವಾದರೂ ದೇವತೆಗಳು ಪಾನ ಮಾಡುವ ಅಮೃತಕ್ಕಿಂತಲೂ ರುಚಿಯಿದ್ದು ಶುಚಿಯಿದ್ದು ಎಂದಿಗೂ ಅವುಗಳ ಹೈನವು ಕುಂದುವುದೂ ಇಲ್ಲ ಕಡಿಮೆಯೂ ಆಗುವುದಿಲ್ಲ. ಇಂಥ ದಿವ್ಯವಾದ ನನ್ನ ಆಕಳುಗಳನ್ನು ತುಡುಗು ಮಾಡಿ ಮುಚ್ಚಿಟ್ಟುಕೊಳ್ಳುವ ಧೈರ್ಯ ಶೌರ್ಯಗಳು ನಮ್ಮ ಗುರುಗಳಾದ ಕಶ್ಯಪರ ಹೊರತು ಬೇರಾರಿಗೂ ಇಲ್ಲ. ಅವರು ಗುರುಗಳಾದರೇನಾಯಿತು? ಅನ್ಯಾಯ ಮಾಡಿದರೆ ಶಾಸನವನ್ನು ಮಾಡಲೇಬೇಕು.

ರಾಜನಿರಲಿ ಗುರುವಿರಲಿ ಹಿರಿಯನಿರಲಿ ಯಾರೇ ಇದ್ದರೂ-ನಾವಲ್ಲದಿದ್ದರೂ ಬ್ರಹ್ಮದೇವರೇ! ನೀವಂತೂ-ಎಲ್ಲರಿಗೂ ಶಿಕ್ಷಾ ಶಾಸನಗಳನ್ನು ಮಾಡಲು ಅಧಿಕಾರವುಳ್ಳವರು. ತಮ್ಮ ಮುಂಗೈ ಜೋರಿನ ಮೇಲೆ ಮನಬಂದಂತೆ ನಡೆಯುವ ಉತ್ಪಥಗಾಮಿಗಳಾದ ದೊಡ್ಡವರಿಗೆ ದಂಡದೋಷಗಳೊಂದೂ ಇಲ್ಲವೆಂದಾದರೆ ಧರ್ಮ ಕರ್ಮ ರೀತಿನೀತಿಗಳ ಕಟ್ಟು ಕಟ್ಟಲೆಗಳೆಲ್ಲ ಸಡಿಲಾಗಿ ಅನವಸ್ಥೆಯಾದೀತು.

ಅದೇನೇ ಇರಲಿ ಈಗ ಪ್ರಾಣ ಸರ್ವಸ್ವವಾದ ಆ ನನ್ನ ಆಕಳುಗಳನ್ನು ಬೇಗನೇ ನನಗೆ ಮರಳಿ ಕೊಡಿಸಿರಿ. ಅವೇ ನನಗೆ ದೇವತೆಗಳು. ದೇವೇಶ! ಗೋಬ್ರಾಹ್ಮಣರನ್ನು ಕಾಯುವುದು ತಮ್ಮ ಆದ್ಯ ಕರ್ತವ್ಯವಾಗಿದೆ. ಮೊದಲು ಈ ನನ್ನ ಗೋಗಳನ್ನು ಕಾಯ್ದರೆ ಅದರಿಂದ ಬ್ರಾಹ್ಮಣರನ್ನೂ ರಕ್ಷಿಸಿದಂತಾಗುವುದು. ಅದರಿಂದ ಜಗತ್ತನೇ ರಕ್ಷಿಸಿದಂತಾಗುವದು."

ವರುಣನ ಈ ಸಕರುಣ ಪ್ರಾರ್ಥನೆಯನ್ನು ಕೇಳಿ ನಾನು ಕಶ್ಯಪನ ಅಪರಾಧವನ್ನು ಮನದಂದು ಅವನಿಗೆ ಅದಕ್ಕಾಗಿ "ಕಶ್ಯಪ ! ನೀನು ಯಾವ ಅಂಶದಿಂದ ಗೋಗಳನ್ನು ಅಪಹರಿಸಿರುವಿಯೋ ಅದೇ ಅಂಶದಿಂದ ಅದೇ ಕಾರಣಕ್ಕಾಗಿ ಭೂಲೋಕದಲ್ಲಿ ವಸುದೇವ ಎಂಬ ಹೆಸರಿನಿಂದ ತುರುಗಾಹಿಯಾಗಿ ಜನಿಸುವಿ. ಈ ನಿನ್ನ ಮಡದಿಯರಾದ ಆದಿತಿ ಸುರಭಿಯರಾದರೂ ದೇವಕೀ ರೋಹಿಣಿಯರೆಂಬ ಹೆಸರಿನ ಗೋಪಿಕಾ ಸ್ತ್ರೀಯರಾಗಿ ನಿನ್ನ

ಜೊತೆಗೆ ಬರುವರು.'' ಎಂದು ಶಾಪಕೊಟ್ಟೆನು. ಅದರಂತೆ ಅವನೀಗ ತನ್ನ ಇಬ್ಬರೂ ಪತ್ನಿಯರೊಂದಿಗೆ ಮಥುರಾ ಪಟ್ಟಣದ ಸಮೀಪ ದಲ್ಲಿರುವ ಗೋವರ್ಧನ ಪರ್ವತದ ಬಳಿಯಲ್ಲಿ ಕಂಸನಿಗೆ ಕರಕೊಡುವ ಗವಳಿಗನಾಗಿ ವಾಸಮಾಡಿದ್ದಾನೆ. ಜಗದೀಶ್ವರ! ನೀನೀಗ ಅಲ್ಲಿಯೇ ವಸುದೇವನಿಂದ ದೇವಕಿಯಲ್ಲಿ ಗೋಪಾಲ ಬಾಲಕನಾಗಿ ಶಿಶುರೂಪದಿಂದ ಅವತರಿಸು. ಯೋಗ ಶಕ್ತಿಯಿಂದ ಈ ನಿನ್ನ ಮೂಲರೂಪವನ್ನು ಆಚ್ಛಾದನಗೊಳಿಸಿ ನಿನಗಾಗಿ ಬಹುದಿನ ತಪಸ್ಸನ್ನಾಚರಿಸಿದ ವಸುದೇವ ದೇವಕೀ ರೋಹಿಣಿಯರನ್ನೂ, ಅದೇ ಕಶ್ಯಪ ದಂಪತಿಗಳ ಇನ್ನೊಂದು ಅಂಶವಾದ ಯಶೋದಾ ನಂದಗೋಪರನ್ನೂ ನೀನು ನಂದಕಂದ ಮುಕುಂದ ಗೋವಿಂದ ರೂಪದಿಂದ ಆನಂದ ಪಡಿಸು. ನಿನ್ನ ಸಹವಾಸಲಾಭಕ್ಕಾಗಿ ಕಾದು ಕುಳಿತ ಸಾವಿರಾರು ಗೋಪ ಕನ್ನೆಯರೊಡನೆ ಶರಚ್ಚಂದ್ರ ಚಂದ್ರಿಕಾವದಾತವಾದ ರಮಣೀಯ-ರಸರಾತ್ರಿಗಳಲ್ಲಿ ರಾಸ ಕ್ರೀಡೆಯನ್ನಾಡಿ, ಹಸಿರು ಹುಲ್ಲುಗಾವಲುಗಳಲ್ಲಿ ತಿರುಗಾಡಿ, ಮಧುರ, ಮುರಲೀ-ನಿನಾದದಿಂದ ದಿವ್ಯ- ಸಂಗೀತವನ್ನು ಹಾಡಿ, ಯಮುನೆಯ ನೀರಿನಲ್ಲಿ ಆಡಿ, ತೀರದಲ್ಲಿ ಓಡಿ, ಹಾಲು ಕದ್ದು, ಬೆಣ್ಣೆಮೆದ್ದು, ಮುದ್ದುರಂಗನ ವೇಷದಿಂದ ಭೂಲೋಕದ ಭಕ್ತರನ್ನೆಲ್ಲ ಉದ್ಧಾರಮಾಡು. ನಿನ್ನ ನಿರಂತರ ಚರಣ ಸೇವಕರಾದ ಏಕಾಂಕ ಭಕ್ತರೆಲ್ಲರೂ ಗೋಪಾಲ ಬಾಲಕರಾಗಿ ನಿನ್ನ ಗವಳಿಗ ಗೆಳೆಯರಾಗಿ ಬರಲಿರುವರು. ವಸುದೇವನ ಜೀವಿತವೇ ಧನ್ಯ ಮಾನ್ಯವಾಗಲಿರುವುದು. ಮುರವೈರಿಯೇ! ಆ ಅದಿತಿ ಕಶ್ಯಪರ ಹೊರತು ನಿನ್ನನ್ನು ಗರ್ಭದಲ್ಲಿ ಧರಿಸುವ ದಿವ್ಯ ತಪಸ್ಸು ಭವ್ಯಪುಣ್ಯ ಯಾರಿಗಿದೆ! ಆದುದರಿಂದ ನೀನು ಬೇಗನೇ ಅವರಲ್ಲಿ ಅವತಾರಮಾಡಲಿಕ್ಕಾಗಿ ಭೂಲೋಕಕ್ಕೆ ತೆರಳು. ಈ ದೇವತೆಗಳೆಲ್ಲರೂ ನಿನಗೆ ಮಂಗಲಾಶಾಂಸನಗಳನ್ನು ಮಾಡುವ ವಿಜಯ ಗೀತಗಳನ್ನು ಹೇಳುತ್ತಲಿದ್ದಾರೆ'' ಎಂದು ಬಿನ್ನವಿಸಿಗೊಂಡು ನಮಸ್ಕರಿಸಿದರು ಆ ಹಂಸವಾಹರು.

ಆಗ ಭಗವಂತನು ಸಂತುಷ್ಟನಾಗಿ ದೇವತೆಗಳಿಗೆಲ್ಲ ಅಪ್ಪಣೆಕೊಟ್ಟು ಕಳಿಸಿ ಕ್ಷೀರಸಾಗರದ ಉತ್ತರಕ್ಕೆ ಹೋಗಿ ಅಲ್ಲಿಯೇ ಮೇರುಪರ್ವತದ ಪಾರ್ವತಿ ಗುಹೆಯಲ್ಲಿ ತನ್ನ ಮೂಲರೂಪವನ್ನಿಟ್ಟು, ಭೂತಲಕ್ಕೆ ಬಂದು ವಸುದೇವನ ಮನೆಯನ್ನು ಭಾಗ್ಯದೇವತೆಯಾಗಿ ಪ್ರವೇಶಿಸಿದನು. ಭಗವಂತನು ಭೂಲೋಕಕ್ಕೆ ಬಂದದ್ದನ್ನು ನೋಡಿ ಇತರ ದೇವತೆಗಳು ಒಂದೊಂದು ಅಂಶದಿಂದ ಅವತೀರ್ಣರಾದದ್ದನ್ನು ತಿಳಿದು ಕಂಸನಿಗೆ ಅವನ ಮರಣವು ಸನ್ನಿಹಿತ ವಾಗಿದೆಯೆಂದು ತಿಳಿಸಲು ನಾರದರು ಮಥುರಾ ಪಟ್ಟಣಕ್ಕೆ ಹೊರಟರು. ಮೊದಲು ಅಲ್ಲಿಯ ಊರಹೊರಗಿನ ಉಪವನದಲ್ಲಿ ಇಳಿದು ದೂತನ ಮುಖಾಂತರವಾಗಿ ಕಂಸನಿಗೆ ಹೇಳಿಕಳಿಸಿದರು. ನಾರದರ ಆಗಮನದ ಶುಭ ವಾರ್ತೆಯನ್ನು ಕೇಳಿ ಕಂಸನು ಊರಹೊರಗಿನ ನಗರವನಕ್ಕೆ ಬಂದು, ತರುಣ ತರಣಿಯಂತೆ ತೇಜೋಭಾಸುರವಾದ ದಿವ್ಯ ದೇಹದಿಂದ ಶೋಭಿಸುತ್ತಲಿರುವ ಮುನಿಯನ್ನು ಕಂಡು, ವಂದಿಸಿ, ಅರ್ಘ್ಯ ಪಾದ್ಯಗಳಿಂದ ಪೂಜಿಸಿ, ದಿವ್ಯಾಸನದ ಮೇಲೆ ಕೂಡಿಸಿದನು.

ಆಗ ನಾರದರು ಅವನ ಸೇವಾಸತ್ಕಾರಗಳನ್ನು ಪ್ರಶಂಸಿಸಿ ''ಕಂಸ! ನಾನು ನಿನಗೊಂದು ರಹಸ್ಯವಾದ ಸಮಾಚಾರವನ್ನು ತಿಳಿಸಬೇಕೆಂದು ಬಂದಿದ್ದೇನೆ' ಎಂದು ಉಪಕ್ರಮಿಸಿ ಹೇಳಹತ್ತಿದರು. ''ಮಥುರಾನಾಥ! ತ್ರಿಲೋಕ ಸಂಚಾರವನ್ನು ಮಾಡುತ್ತ ಸದಾ ತಿರುಗುತ್ತಲೇ ಇರುವ ನಾನು ಕೆಲವು ದಿನಗಳ ಹಿಂದೆ ಸ್ವರ್ಗ ಸೀಮೆಯಲ್ಲಿರುವ ಲೋಕಗಳಲ್ಲಿಯೂ ತಿರುಗಾಡಿ, ಇಂದ್ರನ

ನಂದನವನದಲ್ಲಿ ವಿಶ್ರಾಂತಿ ಪಡೆದು, ಕುಬೇರನ ಚೈತ್ರವನವನ್ನು ನೋಡಿ ಕೊಂಡು, ಸೂರ್ಯನ ಪ್ರಿಯಮಿತ್ರವಾದ ಮೇರು ಪರ್ವತಕ್ಕೆ ಬಂದೆನು. ದಾರಿಯಲ್ಲಿ ಸ್ಮರಣಮಾತ್ರ ದಿಂದಲೇ ಎಲ್ಲ ಪಾಪಗಳನ್ನೂ ಪರಿಹರಿಸುವ ಆಕಾಶ ಗಂಗೆಯಲ್ಲಿ ಎಲ್ಲ ದೇವತೆಗಳೊಂದಿಗೆ ಸ್ನಾನಮಾಡಿಕೊಂಡು ಉಳಿದ ತೀರ್ಥೋದಕಗಳನ್ನೂ ಸ್ಪರ್ಶಮಾಡಿ ಬ್ರಹ್ಮಲೋಕಕ್ಕೆ ಹೋದೆನು. ಬ್ರಹ್ಮರ್ಷಿಗಳ ವೇದಘೋಷ, ದೇವತೆಗಳ ಪ್ರಾರ್ಥನಾ ಮಂತ್ರ ಗಂಧರ್ವರ ಗಾಯನ, ಅಪ್ಸರೆಯರ ನರ್ತನ ಮೊದಲಾದವುಗಳಿಂದ ಆ ಸತ್ಯಲೋಕವು ದುಮುದುಮುಸಿ ಹೋಗಿತ್ತು. ಇಂಥ ದಿವ್ಯವಾದ ಬ್ರಹ್ಮಸದನವನ್ನು ನಾನು ನೋಡಿ ಧನ್ಯನಾದೆ. ಆದರೆ ಕಂಸ! ನಾನು ಮೇರುಪರ್ವತದಲ್ಲಿರುವಾಗ ಒಂದು ಸಂಗತಿ ನಡೆಯಿತು. ಒಂದು ದಿನ ನಾನು ನನ್ನ ಮಧುರಾಲಾಪಿನಿಯಾದ ವೀಣೆಯ ತರಳ ತಂತಿಗಳನ್ನು ವಿರಳ ಬೆರಳುಗಳಿಂದ ಮೆಲ್ಲನೆ ಮೀಟುತ್ತ ಮೇರುಶಿಖರಕ್ಕೆ ಹೋದಾಗ ಅಲ್ಲಿ ಸಕಲ ದೇವತೆಗಳೂ ನೆರೆದು ಒಂದು ಪ್ರಚಂಡ ಬ್ರಹ್ಮ ಸಭೆ ನಡೆದಿತ್ತು. ಅಲ್ಲಿ ಬ್ರಹ್ಮಾದಿ ದೇವತೆಗಳೆಲ್ಲರೂ ಭದ್ರಾಸನಗಳಲ್ಲಿ ಮಂಡಿಸಿ ಏಕಾಂತದಲ್ಲಿ ಮಂತ್ರಾಲೋಚನೆಯನ್ನು ಮಾಡುತ್ತಲಿರುವಾಗ ನಾನೂ ಅಲ್ಲಿ ಹೋಗಿ ಕುಳಿತು ತುಸು ಕಿವಿಗೊಟ್ಟು ಕೇಳಿದೆ. ಆಗ ಅವರೆಲ್ಲರೂ ಸೋದರ ಪರಿವಾರ ಸಹಿತವಾಗಿ ನಿನ್ನನ್ನು ಕೊಲ್ಲುವ ಬಗ್ಗೆ ವಿಚಾರ ನಡೆಯಿಸಿ ಮಾತಾಡುತ್ತಿರುವುದು ನನಗೆ ಕೇಳಿಸಿತು.

ಆಗ ನನಗೆ ಕೇಳಿಸಿದ ಮಾತಿನ ತಾತ್ಪರ್ಯವಿಷ್ಟೇ. ಈ ಮಥುರಾಪಟ್ಟಣದಲ್ಲಿರುವ ನಿನ್ನ ಕೊನೆಯ ತಂಗಿಯಾದ ದೇವಕಿಯ ಹೊಟ್ಟೆಯಿಂದ ಹುಟ್ಟಲಿರುವ ಎಂಟನೆಯ ಗರ್ಭವೇ ನಿನಗೆ ಮೃತ್ಯುವಾಗುವುದು. ಯಾಕೆಂದರೆ ಆ ಅಷ್ಟಮ ಗರ್ಭವೇ ದೇವತೆಗಳ ಆಧಾರ. ಸ್ವರ್ಗದ ಸರ್ವಸ್ವ. ವೇದ ಗುಹ್ಯ, ಬ್ರಹ್ಮರ್ಷಿ ಕಾಮಧೇನು. ಅವನೇ ದೇವ-ದೇವೋತ್ತಮನಾದ ಪರಾತ್ಪರ ಪರಂಜ್ಯೋತಿಯಾದ ಪರಬ್ರಹ್ಮ. ಹಿಂದಕ್ಕೆ ನಿನ್ನನ್ನು ಸಂಹರಿಸಿದವನೂ ಅವನೇ. ಮುಂದೆ ಸಂಹರಿಸುವವನೂ ಅವನೇ. ಎಚ್ಚರ ಆದರೆ ಕಂಸ! ಇಂಥ ಪರಶಕ್ತಿಯಿಂದ ಮರಣಬಂದರೆ ನಿಜವಾಗಿ ನಿನಗೆ ಅದು ಶ್ಲಾಘನೀಯವೇ. ಅದು ನಿಶ್ಚಿತವೇ ಆದರೂ ಶಕ್ಯವಿದ್ದಷ್ಟು ಬದುಕುವ ಪ್ರಯತ್ನ ಮಾಡುವದು ಕರ್ತವ್ಯವಾಗಿದೆ. ನಿನ್ನ ಮೇಲೆ ನನಗೆ ಎಂದಿನಿಂದಲೂ ಪ್ರೇಮ ಪಕ್ಷಪಾತಗಳಿದ್ದುದರಿಂದ ಆತ್ಮೀಯ ಭಾವನೆಯಿಂದ ರಹಸ್ಯವಾಗಿ ಈ ಸಮಾಚಾರನ್ನು ನಿನಗೆ ತಿಳಿಸಲು ಬಂದಿದ್ದೇನೆ. ನೀನು ಆ ದೇವಕಿಯ ಗರ್ಭವನ್ನು ನಾಶ ಮಾಡಲು ಪ್ರಯತ್ನಿಸು. ನಿನಗೆ ಕಲ್ಯಾಣವಾಗಲಿ ನಾನು ಬರುವೆ.''

ನಾರದರು ಹೋದ ಬಳಿಕ ಅವರ ಮಾತನ್ನೇ ಮೆಲಕು ಹಾಕುತ್ತ ಕೆಲ ನಿಮಿಷ ಯೋಚಿಸಿ ಬಳಿಕ ಕಂಸನು ಗಹಗಹಿಸಿ ನಗಹತ್ತಿದನು. ತನ್ನೆದುರಿಗಿರುವ ಭೃತ್ಯಪರಿವಾರದವರವನ್ನು ಕುರಿತು ಕಂಸನು ''ಈ ನಕಲಿಯ ನಾರದನು ಒಳ್ಳೆಯ ಹಾಸ್ಯಗಾರನಾದರೂ ಅಷ್ಟು ಬುದ್ಧಿವಂತನಲ್ಲ. ದೇವತೆಗಳು ವಿನೋದಕ್ಕಾಗಿ ಏನಾದರೂ ಹೇಳಿದಕೂಡಲೇ ಗಾಬರಿಯಾಗಿ ಅದನ್ನು ಸತ್ಯವೆಂದು ಭ್ರಮಿಸಿ ತಾನೂ ಬೆದರಿ ಜನರಿಗೂ ಹೇಳಿ ಹೆದರಿಸುತ್ತಾನೆ. ಆದರೆ ನನ್ನನ್ನು ಈ ಇಂದ್ರಾದಿ ಎಲ್ಲ ದೇವತೆಗಳೂ ಕೂಡಿ ಮಲಗಿದಾಗ ಮೈ ಮರೆತಾಗ ಕೂಡ ಬೆದರಿಸುವದು ಸಾಧ್ಯವಿಲ್ಲ. ಈ ಉದ್ದಂಡವಾದ ಭುಜದಂಡಗಳಿಂದ ಅಖಂಡ ಧರಾಮಂಡಲವನ್ನೇ ತೂರಿಹಿಡಿಯಬಲ್ಲ. ಈ ಕಂಸನನ್ನು ಆದಾವನು ಅಂಜಿಸಬಲ್ಲನು! ನಾನು ಇಂದಿನಿಂದ ಎಲ್ಲ ದೇವತೆಗಳ ಹಾಗೂ ದೇವಾನುಚರರಾದ ಪಶುಪಕ್ಷಿ ಮುನಿಮನುಜರ ಸಂಹಾರ ಸತ್ರವನ್ನೇ ಆರಂಭಿಸುತ್ತೇನೆ.

ಎಲೇ ! ಕೇಶಿ, ಪ್ರಲಂಬ, ಧೇನುಕ, ಅರಿಷ್ಟ, ಪೂತನಾ ಕಾಲಿಯ ಮೊದಲಾದ ನನ್ನ ದೈತ್ಯ ಬಂಧುಗಳೇ ! ನೀವೆಲ್ಲರೂ ಇಂದಿನಿಂದ ಮನಬಂದ ವೇಷ ಭೂಷಣ ರೂಪಗಳಿಂದ ಇಡೀ ಪೃಥ್ವೀತಲವನ್ನೆಲ್ಲ ಸುತ್ತಿರಿ. ನಮ್ಮ ಪಕ್ಷವನ್ನು ನಿಂದಿಸಿ ನುಡಿಯುವವರನ್ನು ಕಂಡಲ್ಲಿ ತುಂಡರಿಸಿರಿ. ನಾರದನು ಎಂಟನೆಯ ಗರ್ಭದಿಂದ ನಮಗೆ ಭಯವುಂಟೆಂದು ಹೇಳಿದ್ದರಿಂದ ಜಗತ್ತಿನಲ್ಲಿ ಯಾರು ಯಾರು ಗರ್ಭಿಣಿಯರಿದ್ದಾರೆನ್ನುವುದನ್ನೂ ನೀವು ಶೋಧಮಾಡಿ ಸಂಹರಿಸಿರಿ. ಆದರೆ ನೀವಾರೂ ಕಲಹ-ಕೇಲೀ-ಪ್ರಿಯನಾದ ನಾರದನ ಪೊಳ್ಳುನುಡಿಗಳನ್ನು ಕೇಳಿ ಹೆದರುವ ಕಾರಣವಿಲ್ಲ. ನನ್ನಂಥ ಲೋಕೈಕ-ವಿಕ್ರಾಂತನಾದ ವೀರವರೇಣ್ಯನಾದ ನಾಯಕನನ್ನು ಅವಲಂಬಿಸಿದ ನಿಮಗೆ ಯಾತರ ಭಯ !

ಚೇಷ್ಟೆಗಾರನಾದ ಆ ನಾರದನು ಸದಾ ಕಲಹಪ್ರಿಯ. ಎಂಥ ಸ್ನೇಹಿತರಲ್ಲಿಯೂ ಅಂತಸ್ತಾಪದಿಂದ ಒಡಕು ಹುಟ್ಟಿಸಿ ಕಾದಾಟ ಹಚ್ಚಿ ಮೋಜು ನೋಡುವನು. ಕಾಲಿನಲ್ಲಿ ಕತ್ತರಿಯ ಗೆರೆಯಿದ್ದ ಅವನು ಚಂಚಲ ಚರಣಗಳಿಂದ ಎಲ್ಲ ಕಡೆಗೂ ಸಂಚರಿಸಿ ತೊಂದರೆಕೊಡುತ್ತಲೇ ಇರುತ್ತಾನೆ. ಯುಕ್ತಿಪ್ರಯುಕ್ತಿಗಳಿಂದ ರಾಜ ಮಹಾರಾಜರ ಅಂತಃಛಿದ್ರಗಳನ್ನೆಲ್ಲ ತಿಳಿದು, ಪರಸ್ಪರ ಚಾಡಿ ಹೇಳಿ, ಕಿವಿಯೂದಿ, ಕಿಡಿ ಕಿಚ್ಚಾಗುವಂತೆ ಕಲಹಾಗ್ನಿಗೆ ಗಾಳಿಹಾಕುವುದೇ ಅವನ ಸ್ವಭಾವವಾಗಿದೆ. ಹಿಂದೆ ನಡೆದ ಎಷ್ಟೋ ಯುದ್ಧಗಳಿಗೆ ಅವನೇ ಕಾರಣನಾಗಿದ್ದು ಈಗಲಾದರೂ ಆ ದೇವತೆಗಳ ಮೇಲೆ ನಮ್ಮ ತೋಳ ತಿಟ್ಟೆಯನ್ನು ತೀರಿಸಲು ಆ ವಾಚಾಲ ವಿದೂಷಕನು ಒಳ್ಳೆ ಅವಕಾಶವನ್ನು ಒದಗಿಸಿದ್ದಾನೆ. ಈ ನೆವದಿಂದ ದೈವತದಲದ ಬಲವನ್ನೆಲ್ಲ ಒರಿಸಿಹಾಕುವೆನು'' ಎಂದು ಏನೇನೋ ಬಡಬಡಿಸುತ್ತ ಅಂತರಂಗದಲ್ಲಿ ಹೆದರಿದರೂ ಬಹಿರಂಗದಲ್ಲಿ ಬಢಾಯಿ ಕೊಚ್ಚಿಕೊಳ್ಳುತ್ತ ಉರಿಯುವ ಹೃದಯದಿಂದಲೇ ಮನೆಯನ್ನು ಪ್ರವೇಶಿಸಿದನು.

ಆ ಬಳಿಕ ಅವನು ಏಕಾಂತದಲ್ಲಿ ತನ್ನ ಆಪ್ತ ಸಚಿವರನ್ನು ಬರಮಾಡಿಕೊಂಡು ಅವರಿಗೆಲ್ಲ ದೇವಕಿಯ ಗರ್ಭನಿರ್ಭೇದಮಾಡಲಿಕ್ಕೆ ಬದ್ಧ ಕಂಕಣರಾಗಿ ನಿಲ್ಲಲು ಹೇಳಿದನು. 'ನಾರದನು ಎಂಟನೆಯ ಗರ್ಭದಿಂದ ಮರಣಯೋಗವುಂಟು'' ಎಂದು ಹೇಳಿದರೂ ನಾವು ಮೊದಲಿನಿಂದಲೇ ಅವಳ ಏಳೂ ಗರ್ಭಗಳನ್ನೂ ನಾಶಪಡಿಸಿ ಎಂಟನೆಯದ್ದನ್ನೂ ವಿಧ್ವಂಸಗೊಳಿಸುವಾ. ಸಂಶಯವಿದ್ದಲ್ಲಿ ಅದರ ಮೂಲವನ್ನೆ ನಿರ್ಮೂಲಮಾಡಿ ಭಯದ ಅಂಕುರವೇ ಹುಟ್ಟದಂತೆ ಮಾಡುವುದೇ ಬುದ್ಧಿವಂತರ ಲಕ್ಷಣ. ನನ್ನ ತಂಗಿಯಾದ ದೇವಕಿಯು ನಮ್ಮ ಮನೆಯಲ್ಲಿ ಸುಖವಾಗಿ ತಿಂದುಂಡು ರಾಜಾತಿಥ್ಯವನ್ನು ಭೋಗಿಸುತ್ತ ನಿಶ್ಚಿಂತಳಾಗಿರಲಿ. ಮನೆಯಲ್ಲಿಯ ಹಿರಿಯ ಹೆಣ್ಣು ಮಕ್ಕಳಿಗೆ ಅವಳು ಋತುಮತಿಯಾದ ದಿನವನ್ನು ಲೆಕ್ಕದಲ್ಲಿಟ್ಟು ಗರ್ಭಧಾರಣೆಯ ದಿನಗಳನ್ನು ಮಾತ್ರ ಜಾಗರೂಕತೆಯಿಂದ ಎಣಿಸಲಿಕ್ಕೆ ತಿಳಿಸಿರಿ. ಗರ್ಭಧಾರಣೆಯಾದದ್ದು ನಿಶ್ಚಿತವೆಂದು ತಿಳಿದಕೂಡಲೇ ಅವಳಿಗೆ ಏನೂ ಸಂದೇಹಬಾರದಂತೆ ನನ್ನ ಕೆಲವು ಗುಪ್ತಚಾರರು ಅವಳನ ಕಾಯುತ್ತಲಿರಲಿ ಹತ್ತು ತಿಂಗಳ ತುಂಬಿದ ಬಳಿಕ ಮುಂದಿನದನ್ನು ನಾನು ನೋಡಿಕೊಳ್ಳುತ್ತೇನೆ. ಆದರೆ ಹಂಗಳೆಯರಿರುವಲ್ಲಿ ವಸುದೇವನು ಮಾತ್ರ ಮೇಲಿಂದಮೇಲೆ ಬಂದು ಹೋಗದಂತೆ ನಮ್ಮ ಅಂತಃಪುರದ ಸಂರಕ್ಷಕರಾದ ಮುದುಕಿಯರೂ ಷಂಢರೂ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕಾಯುತ್ತಲಿರಲಿ. ಯಾಕೆಂದರೆ ಅವನು ಯಾವ ಹೆಣ್ಣು ಮಗಳನ್ನು ಒಡೆದುಕೊಂಡು ಯಾವಾಗ ಗರ್ಭವನ್ನು ವೈಯ್ಯುವನೋ ನಿಯಮದಿವಿಲ್ಲ. ಆದರೆ ನಮ್ಮ ಮೇಲೆ

ಗುಪ್ತಚಾರರಿದ್ದಾರೆ ಎನ್ನುವ ಕಲ್ಪನೆಯ ಕೂಡ ಅವನಿಗೆ ಬಂದಿರಬಾರದು. ಇಷ್ಟೆಲ್ಲ ಮಾನವೀ ಪ್ರಯತ್ನಗಳಿಂದ ನಾನು ವಿಪರೀತವಾದ ದೈವವನ್ನೂ ಕೂಡ ಅನುಕೂಲಮಾಡಿಕೊಳ್ಳಬಲ್ಲೆ. ನಮ್ಮಂಥವರು ಮಂತ್ರ ಔಷಧ ಮತ್ತು ಸರಿಯಾದ ಪ್ರಯತ್ನಗಳಿಂದ ಎಂತ ವಿಮುಖವಾದ ದೈವವನ್ನಾದರೂ ತಿರುಗಿಸಿ ನಮ್ಮ ಪೌರುಷಾಧೀನವನ್ನಾಗಿ ಮಾಡಿಕೊಳ್ಳಬಲ್ಲೆವು.''

ಹೀಗೆ ಕಂಸನು ನಾರದರಿಂದ ತನ್ನ ಸಾವಿನ ಸಮಾಚಾರವನ್ನು ತಿಳಿದು ದೇವಕಿಯ ಗರ್ಭನಾಶಮಾಡಲು ಮಂತ್ರಿಗಳ ಜೊತೆಗೆ ಗುಪ್ತವಾಗಿ ಮಂತ್ರಾಲೋಚನೆಯನ್ನು ಮಾಡುತ್ತಲಿರುವಾಗ ಇತ್ತ ಶ್ರೀಹರಿಯು ಕಂಸನು ಏಳು ಗರ್ಭಗಳನ್ನು ಕೊಂದ ಬಳಿಕ ತಾನು ಎಂಟನೆಯ ಗರ್ಭವಾಗಿ ದೇವಕಿಯ ಜಠರದಲ್ಲಿ ಅವತಾರ ಮಾಡಬೇಕೆಂದು ಸಂಕಲ್ಪ ಮಾಡಿದನು. ಆಗ ಅವನ ಮನಸ್ಸು ಪಾತಾಳ ಲೋಕದೆಡೆ ತಿರುಗಿತು. ಅಲ್ಲಿ ಹಂಸ, ಸುವಿಕ್ರಮ, ಕ್ರೋಧ, ದಮನ, ರಿಪುಮರ್ದನ ಮತ್ತು ಕ್ರೋಧ ಹಂತಾ ಎಂಬ ಹೆಸರಿನಿಂದ ಪ್ರಖ್ಯಾತರಾದ ಷಡ್ಗರ್ಭಸಂಜ್ಞಿತರಾದ ಆರು ಜನ ದೈತ್ಯ ಬಂಧುಗಳು ಆ ಪಾತಾಲತಲದ ಜಲಗರ್ಭದಲ್ಲಿ ಅವಿತುಕೊಂಡಿದ್ದರು. ಅಮೃತ ರಸಪಾನಮಾಡಿದ ದೇವತೆಗಳಂತೆ ಒಳ್ಳೇ ವರ್ಚಸ್ವಿಗಳೂ ಮತ್ತು ರಣವಿಕ್ರಾಂತರೂ ಆದ ಅವರು ಆರೂ ಜನರೂ ಕಾಲನೇಮಿಯ ಮಕ್ಕಳಾಗಿದ್ದರು. ಅವರು ತಮ್ಮ ದೈತ್ಯಜಾತಿಗುರುವಾದ ಹಿರಣ್ಯಕಶಿಪುವನ್ನು ಬಿಟ್ಟು ತಂದೆಯ ತಂದೆಯೂ ಸರ್ವಲೋಕಪಿತಾಮಹರೂ ಆದ ಬ್ರಹ್ಮದೇವರನ್ನೇ ಕುರಿತು ತೀವ್ರತರವಾದ ತಪಸ್ಸನ್ನು ಮಾಡಿದರು. ಮಹಾಮುನಿಗಳಂತೆ ಜಟಾಮಂಡಲ ಧಾರಣೆಮಾಡಿಕೊಂಡು ಉತ್ಕಟ ಭಕ್ತಿಯಿಂದ ಘೋರತರವಾದ ತಪಸ್ಸನ್ನು ಮಾಡುತ್ತಲಿರುವ ಅವರ ತಪಸ್ಸೈಕ್ಷ್ಯಣಕ್ಕೆ ಮೆಚ್ಚಿ ಬ್ರಹ್ಮದೇವರು ಪ್ರಸನ್ನರಾಗಿ ''ಎಲೋ ದೈತ್ಯ ಬಾಲಕರೇ ! ನಿಮ್ಮ ಈ ದಾರುಣವಾದ ತಪಶ್ಚರ್ಯೆಯಿಂದ ನಾನು ಪ್ರಸನ್ನ ನಾಗಿದ್ದೇನೆ. ನಿಮಗೆ ಬೇಕಾದ ವರವನ್ನು ಬೇಡಿರಿ'' ಎಂದು ಹೇಳಿದರು.

ಆಗ ಸಮಾನವಾದ ಏಕ ಪ್ರಕಾರಕ ಆಶೋತ್ತರ ಹಿತಾಹಿತಗುಳ್ಳ ಆ ದಾನವೇಂದ್ರ ನಂದನರು ಆನಂದದಿಂದ ''ಶಾರದಾಪತೇ! ತಾವು ನಮ್ಮ ಮೇಲೆ ಕರುಣೋನ್ಮುಖರಾಗಿದ್ದರೆ ನಮಗೆ ದೇವದಾನವ ಸರ್ಪಾದಿಗಳಿಂದಲೂ ಹಾಗು ಮಹರ್ಷಿಗಳ ಅಮೋಘ ಅಸ್ತ್ರವಾದ ಶಾಪಕೋಪಾಕ್ಷರಗಳ ಮೂಲಕವೂ ಮರಣವು ಬಾರದಂತೆ ವರ ಕೊಡಬೇಕೆಂದು'' ಬೇಡಿಕೊಂಡರು. ಅದಕ್ಕೆ ವಿಧಾತೃವು ಹಾಗೇ ಆಗಲಿ ಎಂದು ವರಕೊಟ್ಟು ಬ್ರಹ್ಮಲೋಕಕ್ಕೆ ಹೋದರು.

ಇದನ್ನು ತಿಳಿದ ಹಿರಣ್ಯಕಶಿಪುವು ಅವರ ಮೇಲೆ ಸಿಟ್ಟಾಗಿ ''ಮೂರ್ಖರೇ'' ನಿಮ್ಮೆಲ್ಲ ದೈತ್ಯರಿಗೂ ಅಧಿಪತಿಯಾದ ನನ್ನನ್ನು ಬಿಟ್ಟು ನೀವು ಬ್ರಹ್ಮದೇವರನ್ನು ಆರಾಧಿಸಿದ್ದರಿಂದ ನೀವು ನನಗೆ ಇಂದಿನಿಂದ ವೈರಿಗಳೆಂದೇ ಭಾವಿಸುತ್ತೇನೆ. ಷಡ್ಗರ್ಭರೆಂಬ ವಿಶಿಷ್ಟನಾಮ ದಿಂದ ನಿಮ್ಮನ್ನು ಬೆಳೆಯಿಸಿದ ನಿಮ್ಮ ತಂದೆ ಕಾಲನೇಮಿಯೇ ಕಂಸ ರೂಪದಿಂದ ನಿಮ್ಮನ್ನು ಹುಟ್ಟಿದ ಕೂಡಲೇ ಕೊಂದು ಬಿಡಲಿ'' ಎಂದು ಶಾಪಕೊಟ್ಟನು. ಅದನ್ನೆಲ್ಲ ತಿಳಿದು ಸರ್ವಜ್ಞ ಶಿಖಾಮಣಿಯೂ ಸರ್ವಾಂತರ್ಯಾಮಿಯೂ ಆದ ಹೃಷೀಕೇಶನು ಪಾತಾಳಲೋಕಕ್ಕೆ ಹೋದನು. ಅಲ್ಲಿ ಕಾಲನಿದ್ರೆಯಿಂದ ಕವಲಿತರಾಗಿ ನೀರಿನಾಳದಲ್ಲಿ ಸುಪ್ತರಾದ ಆ ಷಡ್ಗರ್ಭದಾನವರ ದೇಹದಲ್ಲಿ ಸ್ವಪ್ನರೂಪದಿಂದ ಶ್ರೀಹರಿಯು ಪ್ರವೇಶಿಸಿ ಅವರ ಪ್ರಾಣಗಳನ್ನು ಸೆಳೆದು ತನ್ನ ಯೋಗ ಮಾಯೆಯ ಕೈಯಲ್ಲಿ ಕೊಟ್ಟು ''ಭದ್ರೆ! ಈ

ಷಡ್ಗರ್ಭದೈತ್ಯರನ್ನು ನೀನು ಕೊಂಡೊಯ್ದು ಒಂದಾದ ಬಳಿಕ ಒಂದರಂತೆ ದೇವಕೀ ಗರ್ಭದಲ್ಲಿ ಸ್ಥಾಪಿಸು. ಹುಟ್ಟಿದ ಕೂಡಲೇ ಒಬ್ಬೊಬ್ಬರನ್ನಾಗಿ ಕಂಸನು ಕೊಂದು ಆ ಆರೂ ಜನರನ್ನೂ ಸಂಹರಿಸಿದರೂ ಅವನ ನಿಜವಾದ ವೈರಿ ಸಾಯದ್ದರಿಂದ ಅವನ ಶ್ರಮವೆಲ್ಲ ವ್ಯರ್ಥವೇ ಆಗುವುದು. ನೀನಿಷ್ಟು ಕಾರ್ಯವನ್ನು ಮಾಡಿದ ಬಳಿಕ ನಿನ್ನ ಮೇಲೆ ನಾನು ಪರಮಾನುಗ್ರಹ ಮಾಡುತ್ತೇನೆ. ಅದರಿಂದ ಮಹಾ ಮಾಯೆ! ನೀನು ಈ ಭೂಲೋಕದಲ್ಲಿ ಎಲ್ಲ ಜನರಿಂದಲೂ ''ದೇವಿ'' ಎಂತೆಂದೇ ಉಪಾಸಿಸಲ್ಪಡುವಿ.

ದೇವಕಿಯ ಏಳನೆಯ ಗರ್ಭದಲ್ಲಿ ನನ್ನದೇ ಅಂಶವಿದ್ದು ಅವನು ನನ್ನ ಅಣ್ಣನಾಗಲಿರುವನು. ಆ ಏಳನೆಯ ಗರ್ಭಕ್ಕೆ ಏಳು ತಿಂಗಳಾದ ಕೂಡಲೇ ದೇವಕಿಯ ಗರ್ಭದಿಂದ ಅದನ್ನು ಸೆಳೆದೊಯ್ದು ವಸುದೇವನ ಹಿರಿಯ ಹೆಂಡತಿಯಾದ ರೋಹಿಣಿಯ ಉದರದಲ್ಲಿ ಸ್ಥಾಪಿಸಬೇಕು. ಹೀಗೆ ಗರ್ಭದಿಂದ ಗರ್ಭಕ್ಕೆ ಸೆಳೆದುಕೊಂಡೊಯ್ದುದ್ದರಿಂದ ಚೆಲುವಿನ ಚಂದ್ರಾಮನಂತಿದ್ದ ಆ ನಮ್ಮ ಅಣ್ಣನಿಗೆ ಸಂಕರ್ಷಣ ಎಂಬ ಹೆಸರು ಬರಲಿರುವುದು. ಆಗ ಜನರೆಲ್ಲರೂ 'ಕಂಸನ ಅಂಜಿಕೆಯಿಂದ ದೇವಕಿಯ ಏಳನೆಯ ಗರ್ಭಪಾತವಾಗಿ ಹೊಟ್ಟೆ ಬಿದ್ದಿತೆಂದು' ಮಾತನಾಡಿಕೊಳ್ಳುವರು. ಇದಾದ ಬಳಿಕ ದೇವಕೀ ದೇವಿಯ ಎಂಟನೆಯ ಗರ್ಭದಲ್ಲಿ ಸ್ವತಃ ನಾನೇ ಸನ್ನಿಹಿತನಾಗಲಿರುವೆನು. ಇದೇ ಎಂಟನೆಯ ಗರ್ಭವಾದುದರಿಂದ ಇದರಿಂದಲೇ ತನಗೆ ಮೃತ್ಯು ಎಂದು ತಿಳಿದ ಕಂಸನು ಅದನ್ನು ನಾಶಮಾಡಲು ವಿಶ್ವಪ್ರಯತ್ನ ಮಾಡಲಿರುವನು.

ವಸುದೇವನ ಆಪ್ತಮಿತ್ರನಾದ ನಂದಗೋಪನಿಗೆ ಗವಳಿಗರ ಕುಲಕ್ಕೆ ಭೂಷಣ ಪ್ರಾಯಳಾದ ಯಶೋದೆ ಎಂಬ ಪ್ರಖ್ಯಾತ ಪತ್ನಿಯಿರುವಳು. ಶ್ರಾವಣ ಕೃಷ್ಣಪಕ್ಷದ ನವಮಿಯದಿನ ನೀನು ಆ ಯಶೋದೆಯ ಹೊಟ್ಟೆಯಿಂದ ನಮ್ಮ ಅಣ್ಣತಮ್ಮಂದಿರಲ್ಲಿ ಒಂಬತ್ತನೆಯವಳಾಗಿ ಹುಟ್ಟಿಬಾ. ನಾನಾದರೂ ಅದೇ ಶ್ರಾವಣ ವದ್ಯ ಅಷ್ಟಮಿಯದಿನ ಮಧ್ಯರಾತ್ರಿಯ ಸಮಯದಲ್ಲಿ ಅಭಿಜಿತ್ ಎಂಬ ಮುಹೂರ್ತದಲ್ಲಿ ಸುಖವಾಗಿ ದೇವಕಿಯ ಗರ್ಭದಿಂದ ಪ್ರಾದುರ್ಭೂತನಾಗುವೆನು.

ಹೀಗೆ ನಾನು ಮತ್ತು ನೀನು ಇಬ್ಬರೂ ಎಂಟನೆಯ ತಿಂಗಳಲ್ಲಿಯೇ ಒಂದೇ ದಿನ ಒಂದೇ ರಾತ್ರಿ ಸುಮಾರು ಒಂದೇಕಾಲಕ್ಕೆ ಜನಿಸಿ ಕಂಸನನ್ನು ಕೊಲ್ಲುವ ಉದ್ದೇಶದಿಂದ ಗರ್ಭಗಳನ್ನು ಅದಲುಬದಲು ಮಾಡುವ. ಅಂದರೆ ಹುಟ್ಟಿದಕೂಡಲೇ ನಾನು ದೇವಕಿಯನ್ನು ಬಿಟ್ಟು ಯಶೋದೆಯ ಬಳಿಗೆ ಸಾರುವೆನು. ನೀನು ಅವಳನ್ನು ಬಿಟ್ಟು ದೇವಕಿಯ ಹತ್ತಿರಬಾ, ನಮ್ಮಿಬ್ಬರ ಈ ಗರ್ಭವಿನಿಮಯದಿಂದ ಮೂಢನಾದ ಕಂಸನು ನಿನ್ನನ್ನೇ ತನಗೆ ಮೃತ್ಯುರೂಪವಾದ ದೇವಕಿಯ ಎಂಟನೆಯ ಗರ್ಭವೆಂದು ತಿಳಿದು ಕಾಲುಹಿಡಿದೆತ್ತಿ ಕಲ್ಲುಬಂಡೆಯ ಮೇಲೆ ಸಿಟ್ಟಿನಿಂದ ಅಪ್ಪಳಿಸಹೋಗುವನು. ಆಗ ನೀನು ಅವನ ಕೈಯಿಂದ ಕೂಡಲೇ ಮೇಲಕ್ಕೆ ಮುಗಿಲಿಗೆ ಜಗಿದು ಪಾರಾಗಿ ಅಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆಯುವೆ.

ಆಗ ಗಗನಮಂಡಲದಲ್ಲಿ ಕಂಗೊಳಿಸುವ ನಿನಗೆ ನನ್ನ ದೇಹಕಾಂತಿಯಂತೆ ಕಪ್ಪಾದರೂ ಒಪ್ಪುವ ಒಳ್ಳೆಯಬಣ್ಣವಿದ್ದು ನಿನ್ನ ಮುಖಚರ್ಯೆಯು ನನ್ನ ಅಣ್ಣನಾದ ಬಲರಾಮ

ನಂತಿರುವದು. ನನ್ನ ಉದ್ದಂಡ ತೋಳುಗಳಂತೆ ನಿನ್ನ ಬಾಹುಗಳಾದರೂ ಉದ್ದವಿದ್ದು ನೀನು ಮೂರುಧಾರೆಯ ತ್ರಿಶೂಲ, ಬಂಗಾರದ ಹಿಡಿಕೆಯ ಖಡ್ಗ, ಮಧು ಪಾತ್ರ, ಮತ್ತು ಒಂದು ವಿಮಲ ಕಮಲವನ್ನೂ ಧರಿಸಿರುವೆ. ನೀಲವರ್ಣದ ರೇಷ್ಮೆಯ ಬಟ್ಟೆಯನ್ನು ಉಟ್ಟು ಪೀತಾಂಬರದ ಮೇಲುದವನ್ನು ಹೊದ್ದುಕೊಂಡು, ಶಶಿಪ್ರಭೆಯಂತೆ ಹೊಳೆಯುವ ಹಾರವನ್ನು ವೃಕ್ಷಸ್ಥಲದಲ್ಲಿ ಧರಿಸುವೆ. ದೇವಿ ! ನಿನ್ನ ಮುಖವು ದಿವ್ಯವಾದ ಕರ್ಣ ಕುಂಡಲಗಳಿಂದ ಚಂದ್ರಮಂಡಲದಂತೆ ವಿರಾಜಿಸುವದು. ಅದರ ಮೇಲೆ ಮನೋಹರವಾದ ಕೇಶ ಕಲಾಪಗಳ ಮೇಲೆ ಇರಿಸಿ ಆ ವಿಚಿತ್ರವಾದ ಮುಕುಟವು ನಿನ್ನ ಕಟ್ಟಿದ ಕುರುಳುಗಳಿಗೆ ಕಳೆಯ ಕಳಸವಿಟ್ಟಂತೆ ಒಳ್ಳೆ ಒಪ್ಪುವದು. ಭುಜಗಭೀಷಣವಾದ ಬಾಹುಗಳಿಂದ ದಶದಿಕ್ಕು ಗಳನ್ನೆಲ್ಲ ಬೆಳಗುವ ನಿನ್ನ ತೋಳು ಬಂದಿಗಳಲ್ಲಿ ನವಿಲು ಗರಿಗಳು ವಿಶೋಭಿಸುತ್ತಲಿದ್ದು ಆ ಮಯೂರ ಪಿಚ್ಛದಿಂದ ಅಚ್ಚುಚ್ಚವಾಗಿ ಒಪ್ಪುವ ನಿನ್ನ ಧ್ವಜಕೇತನವು ಉನ್ನತೋನ್ನತ ವಾಗಿ ಹಾರಾಡುವದು. ಘೋರಾಕಾರದ ಭೂತಗಣಗಳಿಂದ ಸುತ್ತುವರೆಯಲ್ಪಟ್ಟ ನೀನು ನನ್ನ ಅಪ್ಪಣೆಯಂತೆ ಕೌಮಾರವ್ರತವನ್ನು ಧರಿಸಿ ಸ್ವರ್ಗವನ್ನು ಪ್ರವೇಶಿಸುವೆ.

ಅಲ್ಲಿ ಸ್ವರ್ಗಾಧಿಪತಿಯಾದ ದೇವೇಂದ್ರನು ಆನಂದದಿಂದ ನೂರು ಕಣ್ಣುಗಳನ್ನು ಅರಳಿಸಿ ನಿನಗೆ ಸ್ವಾಗತ ನೀಡಿ ನಾನು ಹೇಳಿದ ಕ್ರಮದಲ್ಲಿ ಎಲ್ಲ ದೇವತೆಗಳಿಂದಲೂ ಒಡಗೂಡಿಕೊಂಡು ದೇವೀಪಟ್ಟದಲ್ಲಿ ನಿನಗೆ ಅಭಿಷೇಕ ಗೈಯ್ಯುವನು. ಮತ್ತು ಅಂದಿನಿಂದ ಶಚೀಪತಿಯು ನಿನ್ನನ್ನು ತನ್ನ ಒಡಹುಟ್ಟಿದ ತಂಗಿಯೆಂದೇ ತಿಳಿದುಕೊಳ್ಳುವನು. ಕುಶಿಕಗೋತ್ರದಿಂದ ಕೌಶಿಕೀ ಎಂದು ಹೆಸರಾದ ನಿನಗೆ ಗಿರಿಶ್ರೇಷ್ಠವಾದ ವಿಂಧ್ಯಾಚಲದಲ್ಲಿ ಶಾಶ್ವತವಾದ ಸ್ಥಾನವನ್ನು ಕಲ್ಪಿಸಿ ಪ್ರತಿಷ್ಠಾಪಿಸುವನು. ಆ ಬಳಿಕ ಬೇರೆ ಬೇರೆ ಕಡೆಗೆ ಸಾವಿರಾರು ನಿನ್ನ ಪ್ರತಿಮೆಗಳ ಪ್ರತಿಷ್ಠಾಪನೆಯಾಗಿ ಅದರಿಂದ ಭೂಮಂಡಲ ವೆಲ್ಲವೂ ಮಂಡಿತವಾಗುವುದು. ನಿನಗೆ ಮನಬಂದ ರೂಪವೇಷಗಳನ್ನು ಧರಿಸಬಲ್ಲ ನೀನು ಬೇಡಿದ ವರಗಳನ್ನೀಯುತ್ತ ಮೂರು ಲೋಕಗಳನ್ನೆಲ್ಲ ಸಂಚರಿಸಿ ಪಾವನಗೈಯ್ಯುವಿ. ಭಕ್ತರು ಯಾವ ಫಲಾಪೇಕ್ಷೆಯಿಂದ ನಿನ್ನನ್ನು ಆರಾಧಿಸಿ ಅರ್ಚಿಸುವರೋ ಅವರ ಆ ಎಲ್ಲ ಯಾಚನೆಗಳನ್ನು ನೀನು ಖಂಡಿತವಾಗಿಯೂ ಪೂರೈಸುವುದರಿಂದ ವರದ ಮಹಾದೇವಿಯೆಂದು ಎಲ್ಲರೂ ನಿನ್ನನ್ನು ಉಪಾಸಿಸುವರು. ಆ ವಿಂಧ್ಯಾಚಲದಲ್ಲಿರುವ ಶುಂಭ ನಿಶುಂಭ ಎಂಬ ರಕ್ಕಸರನ್ನು ನನ್ನನ್ನು ಸ್ಮರಿಸಿ ನೀನು ಸಂಹರಿಸಿ ಬಿಡುವಿ. ಶ್ರಾವಣ ವದ್ಯ ನವಮಿಯ ದಿನ ಜನರೆಲ್ಲರೂ ದೊಡ್ಡ ದೊಡ್ಡ ಜಾತ್ರೆಗಳನ್ನು ಕೂಡಿಸಿ ಉತ್ಸವ ಮಾಡಿ ಮದ್ಯ ಮಾಂಸಾದಿಗಳ ನೈವೇದ್ಯವಿಟ್ಟು ಪಶುಬಲಿ ಕೊಟ್ಟು ನಿನ್ನನ್ನು ಪೂಜಿಸುವರು. ಈ ನನ್ನ ಪ್ರಭಾವವನ್ನು ತಿಳಿದುಕೊಂಡು ಯಾವ ಮನುಜರು ನಿನ್ನನ್ನು ಭಕ್ತಿಯಿಂದ ವಂದಿಸಿ ಪೂಜಿಸಿ ಆರಾಧಿಸುವರೋ ಅವರಿಗೆ ಎಂದಿಗೂ ಸಂತಾನ ಸಂಪತ್ತುಗಳ ಕೊರತೆಯು ಆಗುವುದಿಲ್ಲ. ಅಡವಿಯಲ್ಲಿ ಗೋಳಿಗೀಡಾದವರಿಗೂ ಸಮುದ್ರದಲ್ಲಿ ಮುಳುಗುವವರಿಗೂ ಕಳ್ಳಕಾಕರಿಂದ ಉಪದ್ರುತರಾದವರಿಗೂ ದೇವಿ ! ನೀನೇ ಗತಿಯಾಗುವಿ. (ಅವರನ್ನು ಆ ಸಂಕಟದಿಂದ ಪಾರು ಮಾಡಿ ಸುಖ ಸುಖದಾತೆಯಾದ ಮಹಾಮಾತೆಯಾಗುವಿ). ಈ ಆರ್ಯಾಸ್ತವವನ್ನು ಭಕ್ತಿಯಿಂದ ಪಠಿಸಿ ನಿನ್ನನ್ನು ಯಾರು ಭಜಿಸುವರೋ ಅವರನ್ನು ನಾನು ಎಂದಿಗೂ ಬಿಡುವುದಿಲ್ಲ. ಅವರೂ ನನ್ನನ್ನು ಎಂದಿಗೂ ಬಿಟ್ಟಿರುವದಿಲ್ಲ.

# ಆರ್ಯಾಸ್ತವಃ

ವೈಶಂಪಾಯನ ಉವಾಚ

ಆರ್ಯಾಸ್ತವಂ ಪ್ರವಕ್ಷ್ಯಾಮಿ ಯಥೋಕ್ತಮೃಷಿಭಿಃ ಪುರಾ ।
ನಾರಾಯಣೀಂ ನಮಸ್ಯಾಮಿ ದೇವೀಂ ತ್ರಿಭುವನೇಶ್ವರೀಮ್ ॥೧॥

(ಭಾರತಾಚಾರ್ಯರಾದ ಶ್ರೀ ವೈಶಂಪಾಯನರು ಆರ್ಯಾಸ್ತವವನ್ನು ಜನಮೇಜಯ ರಾಜನಿಗೆ ಹೇಳುವಾಗ ಮೊದಲು ಭುವನತ್ರಯಕ್ಕೂ ಅಧೀಶ್ವರಿಯಾದ ಆ ನಾರಾಯಣೀ ದೇವಿಯನ್ನು ಭಕ್ತಿಯಿಂದ ವಂದಿಸಿ ಪೂರ್ವಕಾಲದ ಬ್ರಹ್ಮಜ್ಞಾನಿಗಳಾದ ಮಹಾ ಮುನಿಗಳು ನಿರೂಪಿಸಿದಂತೆ ಆರ್ಯಾಸ್ತೋತ್ರವನ್ನು ಹೇಳಲು ಉಪಕ್ರಮಿಸಿದರು).

ತ್ವಂ ಹಿ ಸಿದ್ಧಿರ್ಧೃತಿಃ ಕೀರ್ತಿಃ ಶ್ರೀರ್ವಿದ್ಯಾ ಸನ್ನತಿರ್ಮತಿಃ ।
ಸಂಧ್ಯಾ ರಾತ್ರಿಃ ಪ್ರಭಾ ನಿದ್ರಾ ಕಾಲರಾತ್ರಿಸ್ತಥೈವ ಚ ॥೨॥

ಆರ್ಯಾ ಕಾತ್ಯಾಯನೀ ದೇವೀ ಕೌಶಿಕೀ ಬ್ರಹ್ಮಚಾರಿಣೀ ।
ಜನನೀ ಸಿದ್ಧಸೇನಸ್ಯ ಉಗ್ರಚಾರೀ ಮಹಾಬಲಾ ॥೩॥

ಜಯಾ ಚ ವಿಜಯಾ ಚೈವ ಪುಷ್ಟಿಸ್ತುಷ್ಟಿಃ ಕ್ಷಮಾ ದಯಾ ।
ಜ್ಯೇಷ್ಠಾ ಯಮಸ್ಯ ಭಗಿನೀ ನೀಲಕೌಶೇಯವಾಸಿನೀ ॥೪॥

ಬಹುರೂಪಾ ವಿರೂಪಾ ಚ ಅನೇಕವಿಧಿಚಾರಿಣೀ ।
ವಿರೂಪಾಕ್ಷೀ ವಿಶಾಲಾಕ್ಷೀ ಭಕ್ತಾನಾಂ ಪರಿರಕ್ಷಿಣೀ ॥೫॥

ದೇವಿ ! ನಮ್ಮ ಸಿದ್ಧಿ, ಜೀವನ, ಕೀರ್ತಿ, ಸಂಪತ್ತು, ವಿದ್ಯೆ, ಸೌಜನ್ಯ, ಸನ್ಮತಿ, ಎಲ್ಲವೂ ನೀನೇ ಇದ್ದು ಬೈಗು, ಬೆಳಗು, ನಿದ್ರೆ, ಕಾಲರಾತ್ರಿಕೂಡ ನಿನ್ನಿಂದಲೇ ಪ್ರಪಂಚಕ್ಕಾಗುವವು. ಆರ್ಯಾ, ಕಾತ್ಯಾಯನಿ, ಕೌಶಿಕ ಎಂದು ನಿನಗೆ ಅನೇಕ ಹೆಸರುಗಳಿದ್ದು ಬ್ರಹ್ಮಚರ್ಯ ವ್ರತದ ಪಾಲನ ಕರ್ತ್ರಿಯಾದ ನೀನೇ ಕಾರ್ತಿಕ ಸ್ವಾಮಿಯ ಬಲಿಷ್ಠಳಾದ ತಾಯಿಯಿರುವಿ. ಜಯಾ ವಿಜಯಾ ಪುಷ್ಟಿ ತುಷ್ಟಿ ಕ್ಷಮಾ ದಯಾ ಎಲ್ಲ ನೀನೇ ಇದ್ದು ಕರಿಬಟ್ಟೆಯನ್ನು ಉಟ್ಟ ನೀನೇ ಯಮಧರ್ಮನ ಹಿರಿಯ ಅಕ್ಕನಿರುವಿ. ಬಹೂರೂಪಾ ವಿರೂಪಾ ವಿಶಾಲಾಕ್ಷೀ ಎಂದು ಬಗೆಬಗೆಯ ರೂಪವೇಷಗಳನಾಂತು ನೀನು ಭಕ್ತರನ್ನು ಸಂರಕ್ಷಿಸುವಿ.

ಪರ್ವತಾಗ್ರೇಷು ಘೋರೇಷು ನದೀಷು ಚ ಗುಹಾಸು ಚ ।
ವಾಸಸ್ತವ ಮಹಾದೇವಿ ವನೇಷೂಪವನೇಷು ಚ ॥೬॥

ಶಬರೈರ್ಬರ್ಬರೈಶ್ಚೈವ ಪುಲಿಂದೈಶ್ಚ ಸುಪೂಜಿತಾ ।
ಮಯೂರಪಿಚ್ಛಧ್ವಜಿನೀ ಲೋಕಾನ್ ಕ್ರಮಸಿ ಸರ್ವಶಃ ॥೭॥

ಗಿರಿ-ಶಿಖರ-ಮನೋಪವನ-ನದನದಿ-ಗವ್ಹರಗಳಲ್ಲಿ ನೀನು ವಾಸಮಾಡಿ ಶಬರ, ಬರ್ಬರ, ಪುಲಿಂದ ಮೊದಲಾದ ಕಾಡು ಬೇಡರಿಂದ ಪೂಜಿಸಲ್ಪಡುವಿ. ನವಿಲುಗರಿಯ ಗುರುತಿನ ಬಾವುಟವುಳ್ಳ ವಾಹನವನ್ನೇರಿಕೊಂಡು ಸರ್ವಲೋಕಗಳನ್ನೂ ಪರಿಭ್ರಮಣ ಮಾಡುವಿ.

ಕುಕ್ಕುಟೈಶ್ಛಾಗಲೈರ್ಮೇಷೈಸ್ಸಿಂಹೈರ್ವ್ಯಾಘ್ರೈಸ್ಸಮಾಕುಲಾ ।
ಘಂಟಾನಿನಾದಬಹುಲಾ ವಿಂಧ್ಯವಾಸಿನ್ಯಭಿಶ್ರುತಾ ॥೮॥

ತ್ರಿಶೂಲ ಪಟ್ಟಿಶಧರಾ ಸೂರ್ಯಚಂದ್ರಪತಾಕಿನೀ ।
ನವಮೀ ಕೃಷ್ಣಪಕ್ಷಸ್ಯ ಶುಕ್ಲಸ್ಯೈಕಾದಶೀ ತಥಾ ॥೯॥

ಭಗಿನೀ ಬಲದೇವಸ್ಯ ರಜನೀ ಕಲಹಪ್ರಿಯಾ ।
ಆವಾಸಃ ಸರ್ವಭೂತಾನಾಂ ನಿಷ್ಠಾ ಚ ಪರಮಾಗತಿಃ ॥೧೦॥

ವಿಂಧ್ಯಪರ್ವತದಲ್ಲಿ ವಾಸಿಸುವ ನಿನ್ನ ಸುತ್ತಲೂ ಕುರಿಕೋಳಿ ಹುಲಿಸಿಂಹಗಳು ಮುಕುರಿದ್ದು ಘಂಟಾವಾದ್ಯದ ಗಂಭೀರ ಘೋಷವು ನೀನಿದ್ದಲ್ಲಿ ನಿರಂತರ ಕೇಳಬರುವುದು. ನೀನು ವಿಂಧ್ಯವಾಸಿನಿ ಎಂದು ಪ್ರಸಿದ್ಧಳಾಗಿರುವಿ. ನಿನ್ನ ಕೈಯಲ್ಲಿ ತ್ರಿಶೂಲ ಪಟ್ಟಿಶ ಮೊದಲಾದ ಆಯುಧಗಳಿದ್ದು ನಿನ್ನ ಧ್ವಜವು ಸೂರ್ಯ ಚಂದ್ರಾಂಕಿತವಾಗಿದೆ. ಕೃಷ್ಣಪಕ್ಷದ ನವಮಿ ಶುಕ್ಲ ಏಕಾದಶಿಗಳು ನಿನ್ನತಿಥಿಗಳಿದ್ದು ನೀನು ಬಲರಾಷ್ಣಮನ ತಂಗಿಯೂ ಯುದ್ಧಪ್ರಿಯಳೂ ಆಗಿದ್ದರೂ ಜನರಂಜನ ಕಾರಿಣಿಯಾಗಿರುವಿ. ಸರ್ವಪ್ರಾಣಿಗಳಿಗೂ ಆವಾಸಭೂತಳಾದ ನೀನು ಎಲ್ಲರಿಗೂ ಸದ್ಗತಿಪ್ರದಳಾಗಿರುವಿ.

ನಂದಗೋಪಸುತಾ ಚೈವ ದೇವಾನಾಂ ವಿಜಯಾವಹಾ ।
ಚೀರವಾಸಾಸ್ಸುವಾಸಾಶ್ಚ ರೌದ್ರೀ ಸಂಧ್ಯಾಚರೀ ನಿಶಾ ॥೧೧॥

ನೀನು ನಂದಗೋಪನ ಮಗಳಾಗಿ ಹುಟ್ಟಿದರೂ ವೃಂದಾರಕರಿಗೂ ವಿಜಯವನ್ನು ತಂದುಕೊಡುವೆ. ನಿನ್ನ ಮೈ ಮೇಲಿನ ನಾರುಬಟ್ಟೆ ಪೀತಾಂಬರಕ್ಕಿಂತ ಅಂದಚಂದವಾಗಿ ಒಪ್ಪುತ್ತವೆ. ನೀನು ರೌದ್ರರೂಪದಿಂದ ಭಯಂಕರಳಾಗಿನಿಂತಿದ್ದರೂ ನೀನು ಸಂಧ್ಯಾರಾಗ ರಂಜಿತವಾದ ರಜನೀರಮಣಿಯಂತೆ ತೋರುವಿ.

ಪ್ರಕೀರ್ಣಕೇಶೀ ಮೃತ್ಯುಶ್ಚ ಸುರಾಮಾಂಸಬಲಿಪ್ರಿಯಾ ।
ಲಕ್ಷ್ಮೀರಲಕ್ಷ್ಮೀರೂಪೇಣ ದಾನವಾನಾಂ ವಧಾಯ ಚ ॥೧೨॥

ರೂಪದಿಂದ ನೀನು ಸಾಕ್ಷಾತ ಲಕ್ಷ್ಮಿಯೇ ಎನ್ನುವಂತಿದ್ದರೂ ದೈತ್ಯರ ಸಂಹಾರಕ್ಕಾಗಿ ಮುಡಿಕೆದರಿ ಮದ್ಯಮಾಂಸ ಪ್ರಿಯಳಾದ ಮಾರಿಯಂತೆ ಘೋರರೂಪವನ್ನು ಧರಿಸುವಿ.

ಸಾವಿತ್ರೀ ಚಾಪಿ ದೇವಾನಾಂ ಮಾತಾ ಮಂತ್ರಗಣಸ್ಯ ಚ ।
ಕನ್ಯಾನಾಂ ಬ್ರಹ್ಮಚರ್ಯತ್ವಂ ಸೌಭಾಗ್ಯಂ ಪ್ರಮದಾಸು ಚ ॥೧೩॥

ಅಂತರ್ವೇದೀ ಚ ಯಜ್ಞಾನಾಮೃತ್ವಿಜಾಂ ಚೈವ ದಕ್ಷಿಣಾ ।
ಕರ್ಷಕಾಣಾಂ ಚ ಸೀತೇತಿ ಭೂತಾನಾಂ ಧರಿಣೇತಿ ಚ ॥೧೪॥

ನೀನು ದೇವತೆಗಳಿಗೆ ಗಾಯತ್ರಿಯಿದ್ದಂತೆ, ಮಂತ್ರಗಣಕ್ಕೆಲ್ಲ ಮೂಲ ಮಾತೆಯಂತೆ ಇದ್ದು ಕನ್ಯೆಯರಿಗೆ ಬ್ರಹ್ಮಚರ್ಯದ ಪುಣ್ಯವನ್ನೂ, ಸುವಾಸಿನಿಯರಿಗೆ ಸೌಭಾಗ್ಯ ಫಲವನ್ನೂ ನೀನೇ ಪ್ರದಾನಮಾಡುವಿ. ಯಜ್ಞದಲ್ಲಿಯ ವೇದಿಕೆ, ಋತ್ವಿಜರ ದಕ್ಷಿಣೆ, ರೈತರ ನೇಗಿಲದಗೆರೆಕೂಡ ನೀನೇ ಇದ್ದು ನಿನಗೇ ಭೂತಧಾರಿಣೀ ಎಂದೆನ್ನುವರು.

ಸಿದ್ಧಿಃ ಸಾಯಂತ್ರಿಕಾಣಾಂ ತು ವೇಲಾ ತ್ವಂ ಸಾಗರಸ್ಯ ಚ ।
ಯಕ್ಷಾಣಾಂ ಪ್ರಥಮಾ ಯಕ್ಷೀ ನಾಗಾನಾಂ ಸುರಸೇತಿ ಚ ॥೧೫॥

ಬ್ರಹ್ಮವಾದಿನ್ಯಥೋ ದೀಕ್ಷಾ ಶೋಭಾ ಚ ಪರಮಾ ತಥಾ ।
ಜ್ಯೋತಿಷಾಂ ತ್ವಂ ಪ್ರಭಾ ದೇವಿ ನಕ್ಷತ್ರಾಣಾಂ ಚ ರೋಹಿಣೀ ॥೧೬॥

ಸಾಗರದ ಪಯಣಿಗರನ್ನು ಪರ್ವತ ಪ್ರಾಯವಾಗಿ ಬರುವ ಪೆರ್ದರೆಗಳ ಮಧ್ಯದಿಂದ ಸುರಕ್ಷಿತವಾಗಿ ಪಾರುಮಾಡಿ ತೀರಕ್ಕೆ ತಂದು ಹಚ್ಚುವವಳು ನೀನು. ಸಮುದ್ರರಾಜನು ತನ್ನ ಕ್ಲಪ್ತವಾದ ಶರಧಿ ಪರಿಯ ಸೀಮೆಗಲ್ಲನ್ನು ದಾಟದಂತೆ ವೀಚಿ ಮಾಲೆಗಳನ್ನು ಚಾಚಿ ನೆಲವನ್ನು ನುಂಗದಂತೆ ಅದನ್ನು ನಿಯಂತ್ರಿಸುವವಳು ನೀನೇ. ಯಕ್ಷರಲ್ಲಿ ನೀನು ಕುಬೇರನ ತಾಯಿಯಾದರೆ ಸರ್ಪಗಳಿಗೆಲ್ಲ ತಾಯಿ ಸುರಸೆಯಿದ್ದಂತೆ. ನೀನೇ ಬ್ರಹ್ಮವಾದಿನಿಯು, ನೀನೇ ಯಜ್ಞದೀಕ್ಷೆ, ನೀನೇ ಶೋಭೆಯ ಶೋಭೆ. ಜ್ಯೋತಿಗಳ ಪ್ರಭೆ, ನೀನೇ ನಕ್ಷತ್ರಗಳಲ್ಲಿ ರೋಹಿಣಿ.

ರಾಜದ್ವಾರೇಷು ತೀರ್ಥೇಷು ನದೀನಾಂ ಸಂಗಮೇಷು ಚ ।
ಪೂರ್ಣಾ ಚ ಪೂರ್ಣಿಮಾ ಚಂದ್ರೇ ಕಾಮುದೀತಿಚವಿಶ್ರು ॥೧೭॥

ನಿನ್ನಿಂದ ಅರಮನೆಗೊಂದು ಶೋಭೆ, ಅಗಸಿಗೊಂದು ಕಾಂತಿ, ತೀರ್ಥಗಳಿಗೊಂದು ಬೆಳಕು, ನದಿಗಳಿಗೊಂದು ಕಳೆ, ಸಂಗಮ ಕ್ಷೇತ್ರಗಳಿಗೊಂದು ಸೊಬಗು ಪ್ರಾಪ್ತವಾಗುವುದು. ಗಜಚರ್ಮ ಧಾರಿಣಿಯಾದ ನೀನೇ ಹುಣ್ಣಿಮೆಯ ಚಂದ್ರನಿಗೆ ಬಣ್ಣಬಳಿದು ಕಾಳರಾತ್ರಿಗಳನ್ನು ರಾಕಾ ರಜನಿಗಳ್ನಗಿ ಪರಿವರ್ತಿಸುವಿ.

ಸರಸ್ವತೀ ವಾಲ್ಮಿಕೇ ಸ್ಮೃತಿರ್ದ್ವೈಪಾಯನೇ ತಥಾ ।
ಸುರಾದೇವೀ ತು ಭೂತೇಷು ಸ್ತೂಯಸೇ ತ್ವಂ ಸ್ವಕರ್ಮಭಿಃ ॥೧೮॥

ಆದಿಕವಿ ವಾಲ್ಮಿಕಿಯ ಕಾವ್ಯವಾಣಿ ನೀನೇ ಇದ್ದು ಭಗವಾನ್ ಬಾದರಾಯಣರ ನಿರಂತರ ಸ್ಮರಣೆಯ ಪ್ರಭಾವದಿಂದ ಮಹಾಮಹರ್ಷಿಗಳ ಧರ್ಮಬುದ್ಧಿ ಪ್ರಚೋದಕಳೂ ನೀನೇ ಆಗಿರುವಿ. ದೈವೀಪುರುಷರ ಮಾನಸ ರಾಜಹಂಸಿಯೂ ನೀನೇ ಸರಿ.

ಲೋಕೋಪಕಾರಕವಾದ ಸತ್ಕರ್ಮಾನುಷ್ಠಾನದಿಂದ ನೀನು ದೇವತೆಗಳಿಗೂ ದೇವತೆ ಅರ್ಥಾತ್ ದೇವ-ದೇವೀ ಸುರದೇವಿ ಎಂದು ಸ್ತುತಿಸಲ್ಪಡುವೆ.

ಇಂದ್ರಸ್ಯ ಚಾರುದೃಷ್ಟಿಸ್ತ್ವಂ ಸಹಸ್ರನಯನೇತಿ ಚ
ತಾಪಸಾನಾಂ ಚ ದೇವಿ ತ್ವಮರಣೀ ಚಾಗ್ನಿಹೋತ್ರಿಣಾಂ ॥೧೯॥

ಕ್ಷುಧಾ ಚ ಸರ್ವಭೂತಾನಾಂ ತೃಪ್ತಿಸ್ತ್ವಂ ದೈವತೇಷು ಚ ।
ಸ್ವಾಹಾ ತೃಪ್ತಿರ್ಧೃತಿರ್ಮೇಧಾ ವಸೂನಾಂ ತ್ವಂ ವಸೂಮತಿ ॥೨೦॥

ಆಶಾ ತ್ವಂ ಮಾನುಷಾಣಾಂ ಚ ಪುಷ್ಟಿಶ್ಚ ಕೃತಕರ್ಮಣಾಂ ।
ದಿಶಶ್ಚ ವಿದಿಶಶ್ಚೈವ ತಥಾ ಹ್ಯಗ್ನಿಶಿಖಾ ಪ್ರಭಾ ॥೨೦॥

ಶಕುನೀ ಪೂತನಾ ತ್ವಂ ಚ ರೇವತೀ ಚ ಸುದಾರುಣಾ ।
ನಿದ್ರಾ ಪಿ ಸರ್ವಭೂತಾನಾಂ ಮೋಹಿನೀ ಕ್ಷತ್ರಿಯೋಜ್ವರಾ ॥೨೨॥

ಸಾವಿರಗಣ್ಣಿನ ತಾವರೆಮೊಗದ ನೀನು ಇಂದ್ರನ ಕಣ್ಣು. ಅಗ್ನಿಹೋತ್ರಿಗಳ ಅರಣಿ, ತಪಸ್ವಿಗಳ ಧ್ಯೇಯ, ಪ್ರಾಣಿಗಳ ಹಸಿವು, ಸುರರ ತೃಪ್ತಿ, ಸಾಧಕರ ಧೃತಿ, ಪಂಡಿತರ ಮೇಧಾ, ವಸುಗಳ ವಸುಮತಿ, ಮಾನವರ ಆಶೆ, ಕರ್ಮಯೋಗಿಗಳ ಪುಷ್ಟಿ, ದಶದಿಕ್ಕುಗಳನ್ನೂ ಅಗ್ನಿಶಿಖೆಯಂಥ ದಿವ್ಯಕಾಂತಿಯಿಂದ ಉದ್ದೀಪಿಸುವ ದಿವ್ಯಪ್ರಭೆಯಿದ್ದು ದುಷ್ಟಜನರಿಗೆಲ್ಲ ನೀನು ಅಮಂಗಳಕರವಾದ ಪೂತನೆಯಂತೆ ರೇವತಿಯೆಂತೆ ಭಯಂಕರಳಿರುವಿ.

**ವಿದ್ಯಾನಾಂ ಬ್ರಹ್ಮವಿದ್ಯಾ ತ್ವಮೋಂಕಾರೋಽಥ ವಷಟ್ ತಥಾ ।**
**ನಾರೀಣಾಂ ಪಾರ್ವತೀಂ ಚ ತ್ವಾಂ ಪೌರಾಣೀಮೃಷಯೋ ವಿದುಃ ॥೨೩॥**

**ಅರುಂಧತೀ ಚ ಸಾಧ್ವೀನಾಂ ಪ್ರಜಾಪತಿವಚೊ ಯಥಾ ।**
**ಯಥಾರ್ಥನಾಮಭಿರ್ದಿವ್ಯೈರಿಂದ್ರಾಣೀ ಚೇತಿ ವಿಶ್ರುತಾ ॥೨೪॥**

ಸರ್ವಪ್ರಾಣಿಗಳನ್ನು ಸಮ್ಮೋಹಿಸುವ ನಿದ್ರೆ ನೀನೇ ಇದ್ದರೂ ವಿದ್ಯೆಗಳಲ್ಲಿ ನೀನು ಬ್ರಹ್ಮ ವಿದ್ಯೆಯಂತೆ ಇರುವಿ. ಅಕ್ಷರಗಳಲ್ಲಿ ಓಂಕಾರದಂತೆ, ಸ್ತ್ರೀಯರಲ್ಲಿ ಪಾರ್ವತಿಯಂತೆ, ಪತಿವ್ರತೆಯರಲ್ಲಿ ಆರುಂಧತಿಯಂತೆ, ದೇವತೆಗಳಲ್ಲಿ ಇಂದ್ರಾಣಿಯಂತೆ ನೀನೇ ಪರಮ ಶ್ರೇಷ್ಠಳೂ ಪರಮಪೂಜ್ಯಳೂ ಇರುತ್ತೀ ಎಂದು ಬ್ರಹ್ಮದೇವರು ಹೇಳಿದ್ದು ಸಂಪೂರ್ಣ ಸತ್ಯವಾಗಿದೆ.

**ತ್ವಯಾ ವ್ಯಾಪ್ತಮಿದಂ ಸರ್ವಂ ಜಗತ್‌ಸ್ಥಾವರಜಂಗಮಂ**
**ಸಂಗ್ರಾಮೇಷು ಚ ಸರ್ವೇಷು ಅಗ್ನಿಪ್ರಜ್ವಲಿತೇಷು ಚ ।**
**ನದೀತೀರೇಷು ಚೋರೇಷು ಕಾಂತಾರೇಷು ಭಯೇಷು ಚ ॥೨೫॥**

**ಪ್ರವಾಸೇ ರಾಜಬಂಧೇ ಚ ಶತ್ರೂಣಾಂ ಚ ಪ್ರಮರ್ದನೇ ।**
**ಪ್ರಾಣಾತ್ಯಯೇಷು ಸರ್ವೇಷು ತ್ವಂ ಹಿ ರಕ್ಷಾ ನ ಸಂಶಯಃ ॥೨೬॥**

ಈ ಸ್ಥಾವರ ಜಂಗಮಾತ್ಮಕವಾದ ಪ್ರಪಂಚವನ್ನೆಲ್ಲ ನೀನು ವ್ಯಾಪಿಸಿದ್ದು ಘನಘೋರ ಸಂಗ್ರಾಮಗಳಲ್ಲಿ, ಅಗ್ನಿ ಪ್ರಳಯಗಳಲ್ಲಿ ನದೀಪ್ರವಾಹಗಳಲ್ಲಿ, ಕಳ್ಳರ ಭಯದಲ್ಲಿ ದುರ್ಗಮ ವನಮಾರ್ಗಗಳಲ್ಲಿ, ಪ್ರಯಾಣದಲ್ಲಿ, ರಾಜ್ಯಕ್ರಾಂತಿಯ ಅನಾಹುತಗಳಲ್ಲಿ, ವೈರಿವಿಜಯದ ಪ್ರಸಂಗಗಳಲ್ಲಿ ಅಥವಾ ಮತ್ತಿತರ ಯಾವದೇ ಪ್ರಾಣಾಪಾಯ, ಸಾವು, ಸಂಕಟಗಳಲ್ಲಿ ನೀನೇ ಎಲ್ಲ ಪ್ರಾಣಿಗಳ ರಕ್ಷಕಳು.

**ತ್ವಯಿ ಮೇ ಹೃದಯಂ ದೇವಿ ತ್ವಯಿ ಚಿತ್ತಂ ಮನಸ್ತ್ವಯಿ ।**
**ರಕ್ಷ ಮಾಂ ಸರ್ವಪಾಪೇಭ್ಯಃ ಪ್ರಸಾದಂ ಕರ್ತುಮರ್ಹಸಿ ॥೨೭॥**

ಆದುದರಿಂದಲೇ ದೇವಿ ನನಗೆ ನಿನ್ನ ಮೇಲೆ ಇಷ್ಟು ಪ್ರೇಮ. ನಿನಗೆ ನನ್ನ ಮೇಲೆ ಇಂಥ ವಿಶ್ವಾಸಗಳು ಇವೆ. ಆದುದರಿಂದ ದೇವಿ ನೀನು ಎಲ್ಲ ಪಾಪಗಳಿಂದ ರಕ್ಷಿಸು. ನನ್ನ ಮೇಲೆ ಅನುಗ್ರಹವನ್ನು ಮಾಡು.

**ಇಮಂ ಯಸ್ತು ಸ್ತವಂ ದಿವ್ಯಮಿತಿ ವ್ಯಾಸಪ್ರಕಲ್ಪಿತಂ ।**
**ಯಃ ಪಠೇತ್ಪ್ರಾತರುತ್ಥಾಯ ಶುಚಿಃ ಪ್ರಯತಮಾನಸಃ ॥೨೮॥**

**ತ್ರಿಭಿರ್ಮಾಸೈಃ ಕಾಂಕ್ಷಿತಂ ಚ ಫಲಂ ವೈ ಸಂಪ್ರಯಚ್ಛಸಿ ।**
**ಷಡ್‌ಭಿರ್ಮಾಸೈರ್ವರಿಷ್ಠಂ ತು ವರಮೇಕಂ ಪ್ರಯಚ್ಛಸಿ ॥೨೯॥**

ವೇದವ್ಯಾಸರು ರಚಿಸಿದ ಶ್ರೀಕೃಷ್ಣನು ಸ್ವಯಂ ಹೇಳಿದ ನಿನ್ನ ಈ ದಿವ್ಯ ಸ್ತೋತ್ರವನ್ನು ಪ್ರಾತಃಕಾಲದಲ್ಲಿ ಎದ್ದು ಶುಚಿರ್ಭೂತರಾಗಿ ಯಾರು ಭಕ್ತಿಯಿಂದ ಪಠಿಸುವರೋ ಅವರಿಗೆ ಮೂರುತಿಂಗಳಲ್ಲಿ ಅವರ ಮನೋರಥವನ್ನು ಪೂರ್ಣಮಾಡಿ. ಮುಂದೆ ಆರುತಿಂಗಳಲ್ಲಿ ಅತ್ಯಂತ ಶ್ರೇಷ್ಠವಾದ ಮಹತ್ತರ ವರವೊಂದನ್ನು ಅವರಿಗೆ ನೀನು ಕರುಣಿಸುವಿ.

**ಅರ್ಚಿತಾ ತು ತ್ರಿಭಿರ್ಮಾಸೈರ್ದಿವ್ಯಂ ಚಕ್ಷುಃ ಪ್ರಯಚ್ಛಸಿ ।**
**ಸಂವತ್ಸರೇಣ ಸಿದ್ಧಿಂ ಚ ಯಥಾಕಾಮಂ ಪ್ರಯಚ್ಛಸಿ ॥೩೦॥**

ಮೂರುತಿಂಗಳು ನಿನ್ನನ್ನು ಪೂಜಿಸಿದವರಿಗೆ ದಿವ್ಯ ದೃಷ್ಟಿಯನ್ನು ಕರುಣಿಸುವೆ, ಒಂದು ವರ್ಷ ನಿನ್ನ ಪೂಜೆಯಿಂದ ಸರ್ವಕಾಮನಾ ಸಿದ್ಧಿ ನಿಶ್ಚಿತ.

**ಸತ್ಯಂ ಬ್ರಹ್ಮ ಚ ದಿವ್ಯಂ ಚ ದ್ವೈಪಾಯನವಚೋ ಯಥಾ ।**
**ನೃಣಾಂ ಬಂಧಂ ವಧಂ ಘೋರಂ ಪುತ್ರನಾಶಂ ಧನಕ್ಷಯಂ ॥೩೧॥**

ನಿನ್ನನ್ನು ಪೂಜಿಸಿದವರಿಗೆ ಪುತ್ರನಾಶವೆಂದಿಗೂ ಆಗುವುದಿಲ್ಲ. ಧನಕ್ಷಯವಿಲ್ಲ. ಬಂಧನವಿಲ್ಲ. ಮರಣವಿಲ್ಲ ಬೇನೆಯಿಲ್ಲ. ಅವರ ಸರ್ವತಾಪ ಪಾಪಗಳನ್ನೂ ಕಾಮರೂಪಿಣಿಯೂ ಕಾಮಿತವರದೆಯೂ ಆದ ನೀನು ಪರಿಹರಿಸಿ ಅವರಿಗೆ ಸುಖಶಾಂತಿಗಳನ್ನೀಯುವಿ. ಎನ್ನುವ ವಿಷಯದಲ್ಲಿ ಬ್ರಹ್ಮಸ್ವರೂಪಿಗಳಾದ ದ್ವೈಪಾಯನರೇ (ವೇದವಾಸರು) ಸಾಕ್ಷಿ. ತ್ರಿಕಾಲ ಸತ್ಯವಾದ ಅವರ ವಚನಗಳೇ ಪ್ರಮಾಣ.

**ವ್ಯಾಧಿಮೃತ್ಯುಭಯಂ ಚೈವ ಪೂಜಿತಾ ಶಮಯಿಷ್ಯಸಿ ।**
**ಭವಿಷ್ಯಸಿ ಮಹಾಭಾಗೇ ವರದಾ ಕಾಮರೂಪಿಣೀ ।**
**ಮೋಹಯಿತ್ವಾ ಚ ತಂ ಕಂಸಮೇಕಾ ತ್ವಂ ಮೋಕ್ಷ್ಯಸೆ ಜಗತ್॥೩೨॥**

ನಿನ್ನನ್ನು ಪೂಜಿಸಿದವರ ರೋಗ ಮೃತ್ಯುಭಯಗಳನ್ನು ಪರಿಹರಿಸುವಿ. ಕಾಮರೂಪಿಣಿಯಾದ ನೀನು ಎಲ್ಲರಿಗೂ ವರಗಳನ್ನು ಕರುಣಿಸುವಿ.

ನಿನ್ನನ್ನು ಘಾತಮಾಡಲೆಳಸಿದ ಕಂಸನನ್ನು ಮೋಹಗೊಳಿಸಿ ಪಾರಾದ ನೀನು ಅವನು ಬೇಗ ಸತ್ತರೂ ನೀನು ಮಾತ್ರ ಚಿರಕಾಲ ಪರ್ಯಂತ ಈ ಜಗತ್ತಿನಲ್ಲಿ ಸುಖವನ್ನು ಅನುಭವಿಸುವಿ ಮತ್ತು ಎಲ್ಲರನ್ನೂ ಭವಬಂಧನದಿಂದ ಪಾರುಮಾಡುವೆ.

**ಅಹಮಪ್ಯಾತ್ಮನೋ ವೃತ್ತಿಂ ಗೋಷು ಕುರ್ಯಾಂಚ ಗೋಪವತ್ ।**
**ಸ್ವವೃತ್ತ್ಯರ್ಥಮಹಂ ಚೈವ ಕರಿಷ್ಯೇ ಕಂಸಗೋಪತಾಂ ॥೩೩॥**

ನಾನಾದರೂ ಇನ್ನು ಮುಂದೆ ಕಂಸನ ವಶವರ್ತಿಯಾದ ಗೋಪಕುಲದಲ್ಲಿಯೇ ಜನಿಸಿ ದನಕಾಯುವ ವೃತ್ತಿಯನ್ನೇ ಅನುಸರಿಸುವೆನು ಎಂದು ಶ್ರೀಕೃಷ್ಣನು ಯೋಗಮಾಯೆಗೆ ಅಪ್ಪಣೆಮಾಡಿದನು.

**ಏವಂ ತಾಂ ಸ ಸಮಾದಿಶ್ಯ ಗತೋಽನ್ತರ್ಧಾನಮೀಶ್ವರಃ ।**
**ಸಾ ಚಾಪಿ ತಂ ನಮಸ್ಕೃತ್ಯ ತಥಾಸ್ತ್ವಿತಿ ಚ ನಿಶ್ಚಿತಾ ॥೩೪॥**

ಆಗ ಅವಳಾದರೂ ''ನಿನ್ನ ಆಜ್ಞೆಯಂತೆಯೇ ಆಗಲಿ'' ಎಂದು ಹೇಳಿ ಭಗವಂತನಿಗೆ ನಮಸ್ಕಾರ ಮಾಡಿ ಅವನ ಅಪ್ಪಣೆಯನ್ನು ಶಿರಸಾ ಧಾರಣಮಾಡಿದಳು.

ಆಗಲೇ ಅಲ್ಲಿಯೇ ಆ ಜಗದೀಶ್ವರನು ಅಂತರ್ಧಾನವನ್ನು ಹೊಂದಿದನು.

**ಯಶ್ಚೈತತ್ಪಠತೇ ಸ್ತೋತ್ರಂ ಶೃಣುಯಾದ್ವಾಪ್ಯಭೀಕ್ಷ್ಣಶಃ ।**
**ಸರ್ವಾರ್ಥಸಿದ್ಧಿಂ ಲಭತೇ ನರೋ ನಾಸ್ತ್ಯತ್ರ ಸಂಶಯಃ ॥೩೫॥**

ಈ ಪುಣ್ಯಕರವಾದ ಸ್ತೋತ್ರವನ್ನು ಪಾರಾಯಣ ಮಾಡುವವರೂ ಮೇಲಿಂದ ಮೇಲೆ ಇದನ್ನು ಹೇಳುವರೂ ಅದರದಿಂದ ಕೇಳುವವರೂ ಸರ್ವಾರ್ಥ ಸಿದ್ಧಿಯನ್ನು ಹೊಂದಿ ಆ ದೇವಿಯ ಸಂಪೂರ್ಣ ಅನುಗ್ರಹಕ್ಕೆ ಪಾತ್ರರಾಗುವರು. ಈ ವಿಷಯದಲ್ಲಿ ಸಂದೇಹವೇ ಇಲ್ಲ.

ಈ ರೀತಿಯಾಗಿ ವಿಷ್ಣು ಹಾಗೂ ಅವನ ಅಜ್ಞಾನುವರ್ತಿನಿಯಾದ ಯೋಗಮಾಯೆ ಇಬ್ಬರೂ ಕೂಡಿ ದೇವಕೀ ದೇವಿಯಿಂದ ಜನಿಸಲಿರುವ ಎಲ್ಲ ಗರ್ಭಗಳ ಮೃತಿ ಗತಿ ಸ್ಥಿತಿಗಳ ಬಗೆಗೆ ಮಾತನಾಡಿ ಕರ್ತವ್ಯಾಂಶವನ್ನು ನಿರ್ಧರಿಸಿಗೊಂಡ ಬಳಿಕ ದೇವಾಂಗನೆಯಂತಿದ್ದ ಆ ದೇವಕಿಯು ಕ್ರಮಪ್ರಕಾರ ಏಳು ಗರ್ಭಗಳನ್ನು ಧರಿಸಿದಳು. ಮೊದಲಿನ ಆರು ಕೂಸುಗಳನ್ನಂತೂ ಕಂಸನು ಹುಟ್ಟಿದ ಕೂಡಲೇ ಕಸಿದುಕೊಂಡು ಕಲ್ಲುಬಂಡೆಗಳ ಮೇಲೆ ಅಪ್ಪಳಿಸಿ ಕೊಂದನು. ಅವಳ ಗರ್ಭದಲ್ಲಿ ಮೂಡಿದ ಏಳನೆಯ ಗರ್ಭವನ್ನು ಏಳನೆಯ ತಿಂಗಳಲ್ಲಿ ದೇವಕಿಯ ಗರ್ಭದಿಂದ ಯೋಗಮಾಯೆಯು ಸಂಕರ್ಷಣಮಾಡಿ ಅಂದರೆ ಸೆಳೆದು ರೋಹಿಣಿಯು ಗರ್ಭಾಗಾರಕ್ಕೆ ಸ್ಥಳಾಂತರಿಸಿದಳು.

ಇತ್ತ ಅದೇ ವೇಳೆಯಲ್ಲಿ ರೋಹಿಣಿಯು ಒಮ್ಮೆಲೆ ರಜಸ್ವಲೆಯಾಗಿ ಗರ್ಭಪಾತವಾದುದರಿಂದ ಮಧ್ಯರಾತ್ರಿಯಲ್ಲಿ ಎಚ್ಚರದಪ್ಪಿ ನೆಲದ ಮೇಲೆ ಮಲಗಿದ್ದಳು. ಅವಳಿಗೆ ಕನಸಿನಲ್ಲಿ ತನ್ನ ಗರ್ಭಬಿದ್ದು ಅದರ ಸ್ಥಾನದಲ್ಲಿ ಮತ್ತೊಂದು ಗರ್ಭವನ್ನು ಉದರದಲ್ಲಿ ಸ್ಥಾಪಿಸಿದಂತಾಗಿತ್ತು. ಅವಳು ಎಚ್ಚತ್ತು ಕಣ್ಣು ತೆರೆದು ನೋಡುವಷ್ಟರಲ್ಲಿ ಪಾತವಾದ ಗರ್ಭವೂ ಅಲ್ಲಿ ಕಾಣದಂತಾಗಿತ್ತು. ಅದರಿಂದ ಮತ್ತಿಷ್ಟೂ ಖಿನ್ನಳಾದ ಅವಳನ್ನು ಕುರಿತು ಆ ಕಾಳರಾತ್ರಿಯ ಕತ್ತಲೆಯಲ್ಲಿ ಯೋಗಮಾಯೆಯು "ರೋಹಿಣಿ ! ನೀನು ಗಾಬರಿಯಾಗಬೇಡ ನಿನ್ನ ಮೊದಲಿನ ಗರ್ಭವು ಪತಿತವಾದರೂ ಅದರ ಸ್ಥಾನದಲ್ಲಿ ಇನ್ನೊಂದು ಕರ್ಷಣಮಾಡಿ ತಂದಿಟ್ಟಿದ್ದೇನೆ ಕಲ್ಯಾಣಿ ! ಅದರಿಂದ ನಿನಗೆ ಸಂಕರ್ಷಣನೆಂಬ ಶ್ರೇಷ್ಠ ಸುಕುಮಾರನು ಸಂಭವಿಸಲಿರುವನು" ಎಂದು ಹೇಳಿ ಆಶ್ವಾಸನೆಯನ್ನಿತ್ತಳು. ಸತ್ಸಂತಾನವು ತನಗೆ ದೇವತಾನುಗ್ರಹದಿಂದ ಆಗಲಿರುವದೆಂಬ ಸಮಾಚಾರವನ್ನು ಕೇಳಿ ಸಮಾಧಾನ ಹೊಂದಿ ರೋಹಿಣೀನಕ್ಷತ್ರದಂತೆ ಉಲ್ಲಸಿತ ಕಾಂತಿಯನಾಂತು ರೋಹಿಣಿಯು ಸಂತೋಷಪಟ್ಟಳು.

ಇತ್ತ ಕಂಸನ ಭೂತಗಣದಂತಿರುವ ದೂತರು ದೇವಕಿಯ "ಗರ್ಭವು ಎಲ್ಲಿ ಬಿದ್ದಿತು? ಬಿದ್ದ ಗರ್ಭವಾದರೂ ಏನಾಯಿತು? ಎಂದು ಹುಡುಕುತ್ತಿರುವಷ್ಟರಲ್ಲಿಯೇ ದೇವಕಿಯು ಎಂಟನೆಯ ಗರ್ಭವನ್ನು ಧಾರಣ ಮಾಡಿದಳು. ಯಾವ ಗರ್ಭವನ್ನು ವಿನಾಶಗೈಯುವ ಉದ್ದೇಶದಿಂದ ಕಂಸನು ಹಿಂದಿನ ಏಳೂ ಗರ್ಭಗಳನ್ನು ವಿನಾಕಾರಣ ಕೊಂದಿದ್ದನೋ ಅವನಿಗೆ ಮೃತ್ಯುರೂಪವಾದ ಆ ಎಂಟನೆಯ ಗರ್ಭವನ್ನು ಅವನ ಮಂತ್ರಿ ಪರಿಚಾರಕ ಪರಿವಾರದವರು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಬಹು ಜಾಗರೂಕರಾಗಿ ಒಳ್ಳೇ ದಕ್ಷತೆಯಿಂದ ಕಾಯತೊಡಗಿದರು. ಭಗವಾನ್ ನಾರಾಯಣನಾದರೂ ಸ್ವೇಚ್ಛೆಯಿಂದ ದೇವಕಿಯ ಗರ್ಭಗುಡಿಯಲ್ಲಿ ನಿರಾತಂಕ ನಿಶ್ಶಂಕೆಯಿಂದ ಮೂಡಿ ತೊಳಗುತ್ತಲಿದ್ದನು.

ಇತ್ತ ನಂದಗೋಪಸುಂದರಿಯಾದ ಯಶೋದಾದೇವಿಯಾದರೂ ಅಂದೇ ದೇವಕಿಯು ಗರ್ಭಧಾರಣೆಮಾಡಿದ ದಿನವೇ-ತಾನೂ ಗರ್ಭಿಣಿಯಾಗಿ ಹರಿಯ ಆಜ್ಞಾಕಾರಿಣಿಯಾದ ಯೋಗಮಾಯೆಯನ್ನು ಉದರದಲ್ಲಿ ಧರಿಸಿದಳು.

## ಶ್ರೀಕೃಷ್ಣ ಜನನ ಮತ್ತು ಲೀಲಾವಿಸ್ತಾರ

ಜಯಂತೀ ಎಂಬ ರಾತ್ರಿಯ ಅಭಿಜಿತ್ ನಕ್ಷತ್ರದಲ್ಲಿ ವಿಜಯನಾಮಕ ಮುಹೂರ್ತದಲ್ಲಿ ಅನಂತಕೋಟಿ ಬ್ರಹ್ಮಾಂಡ ನಾಯಕನೂ ಚರಾಚರ ಪ್ರಪಂಚಕ್ಕೆಲ್ಲ ಸೃಷ್ಟಿಸ್ಥಿತಿ ಸಂಹಾರಗಳನ್ನು ಮಾಡುವವನೂ ಆದ ಜಗದೀಶ್ವರನು ದೇವಕಿಯ ಗರ್ಭ ಗುಹೆಯಿಂದ ಆವಿರ್ಭೂತನಾದನು. ಆಗ ಸಮುದ್ರಗಳು ಆನಂದದಿಂದ ಉಕ್ಕೇರಿದವು. ಕುಲಗಿರಿಗಳು ಆಂದೋಲಿತವಾದವು. ಮಂದ ಗಾಳಿಯು ಸುಗಂಧವನ್ನು ಹರಡಿತು. ಅಗ್ನಿಗಳು ತಾವಾಗಿ ಹೊತ್ತಿಕೊಂಡು ನಂದಾದೀಪವನ್ನು ಬೆಳಗಿದವು. ಆಕಾಶದಲ್ಲಿಯ ಅಸಂಖ್ಯ ಜ್ಯೋತಿಃಪುಂಜಗಳು ಉಜ್ಜಟ್ಟಂತೆ ಥಳಥಳಿಸಿದವು. ಹುಡಿಕಿಡಿಗಳೆಲ್ಲವೂ ಆರಿ ದಿಗಂತರಾಲವೆಲ್ಲವೂ ಪ್ರಶಾಂತವಾಯಿತು. ದಶದಿಕ್ಕುಗಳೆಲ್ಲವೂ ಪ್ರಸನ್ನವಾದವು.

ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದವು. ಆನಂದ ತುಂದಿಲರಾದ ಇಂದ್ರಾದಿ ದೇವತೆಗಳು ಹರ್ಷಾತಿರೇಕದಿಂದ ಹೂಮಳೆಗಳನ್ನು ಕರೆದರು. ದೇವಾಂಗನೆಯರು ಸುಸ್ವರ ಸಂಗೀತಭಂಗೀಯಿಂದ ಮಂಗಳಗೀತಗಳನ್ನು ಹಾಡಿ ಆ ರಂಗನಾಥನಿಗೆ ಶುಭವನ್ನು ಕೋರಿದರು. ಗಂಧರ್ವರು ಗೀತೆಗಳನ್ನು ಹೇಳಿದರು. ಮಹರ್ಷಿಗಳು ಮಂತ್ರಗಳಿಂದ ಸ್ತುತಿಸಿದರು. ಅಪ್ಸರೆಯರು ಹಾಡಿ ಪಾಡಿ ಕುಣಿದರು. ಒಟ್ಟಾರೆ ಅಂದು ರಾತ್ರಿ ಜಗದಂಡ ಮಂಡಲವೆಲ್ಲವೂ ಆನಂದ ನಿರ್ಭರವಾಗಿ ಕೃಷ್ಣಾವತಾರದ ಮಹೋತ್ಸವದಲ್ಲಿ ಮೈಮರೆತಿದ್ದಿತು.

ಇತ್ತ ಗರ್ಭಾಗಾರದಲ್ಲಿ ಶ್ರೀವತ್ಸ ಮೊದಲಾದ ದಿವ್ಯಲಕ್ಷಣಗಳಿಂದ ಒಡಗೂಡಿಯೇ ಹುಟ್ಟಿ ಬಂದ ಅಧೋಕ್ಷಜನನ್ನು ಕಂಡು ಪ್ರೀತನಾದರೂ ಭೀತನೂ ಆದ ವಸುದೇವನು ಮಾತನಾಡಿದನು.

''ಪುಂಡರೀಕಾಕ್ಷ ! ನಿನ್ನ ಈ ದಿವ್ಯರೂಪವನ್ನು ಕಂಡು ನಾನು ಧನ್ಯನಾದೆ. ಸರ್ವಕರ್ತನಾದ ಸಾಕ್ಷಾತ್ ಜಗದೀಶ್ವರನು ನೀನೇ ಇದ್ದು ಸಜ್ಜನರನ್ನು ರಕ್ಷಿಸುವುದಕ್ಕಾಗಿ ಭೂಭಾರಹರಣೋದ್ದೇಶದಿಂದ ನೀನು ನನ್ನ ಮನೆಯಲ್ಲಿ ಅವತರಿಸಿರುವಿ. ನಿನ್ನಂಥ ಪುರುಷೋತ್ತಮನು ನನ್ನ ಮಗನಾಗಿ ಹುಟ್ಟಿ ಬಂದದ್ದನ್ನು ನೋಡಿ ನನಗೆ ಪರಮಾನಂದವಾಗಿದ್ದರೂ ದೇವ ! ಭಯಂಕರವಾದ ಭೀತಿಯೂ ಬಂದಿದೆ.

''ಪ್ರಭೋ! ದುಷ್ಟನಾದ ಕಂಸನು ನೀನು ನಮ್ಮ ಹೊಟ್ಟೆಯಿಂದ ಹುಟ್ಟಿ ತನ್ನನ್ನು ಸಂಹರಿಸಲಿರುವಿ ಎಂದು ಕೇಳಿ ತಿಳಿದುಕೊಂಡು ನಿನ್ನ ಅಣ್ಣಂದಿರಾದ ನನ್ನ ಏಳು ಮಕ್ಕಳನ್ನು ಕೊಂದು ಒಗೆದಿದ್ದಾನೆ. ನೀನು ಜನಿಸಿದ ಸಮಾಚಾರವನ್ನು ಕೇಳಿ ಈಗಲೇ ಘೋರಾಸ್ತ್ರವನ್ನು ಪಿಡಿದು ನಾಶಪಡಿಸಲು ಧಾವಿಸುವನು. ಆದುದರಿಂದ ನಿನ್ನ ಈ ದಿವ್ಯ ರೂಪವನ್ನು ಉಪಸಂಹಾರ ಮಾಡಿ ಶಿಶುವೇಷದಿಂದ ಚಿಕ್ಕಮಗುವಾಗಿ ಮಲಗು. ನೃಶಂಸನಾದ ಆ ಖಲಕಂಸನು ಬಂದು ನಿನ್ನನ್ನೂ ಎಲ್ಲಿ ಹೊಡೆದು ಬಿಡುವನೋ ಎಂದು ನನಗೆ ಬಹಳ ಭಯವಾಗಿದೆ'' ಎಂದು ವಸುದೇವನು ಬೇಡಿಕೊಂಡನು.

ವಸುದೇವನ ಮಾತನ್ನು ಕೇಳಿ ತಕ್ಷಣದಲ್ಲಿ ಆ ಮಹಾವಿಷ್ಣುವು ತನ್ನ ಚತುರ್ಭುಜಾತ್ಮಕವಾದ ರೂಪವನ್ನು ತಾಳಿ ವಸುದೇವನನ್ನು ತನ್ನ ತಂದೆಯೆಂದು ಭಾವಿಸಿ ''ತಾತ ! ನನ್ನನ್ನು ಈಗಲೇ ನಂದಗೋಪನ ಮಂದಿರಕ್ಕೆ ಕರೆದುಕೊಂಡು ಹೋಗು'' ಎಂದು ತೊದಲು ನುಡಿಯಿಂದ ಹೇಳಿದನು. ಕೂಡಲೇ ವಸುದೇವನಿಗೆ ಆ ಮಗನ ಮೇಲೆ ವಿಚಿತ್ರವಾದ ವಾತ್ಸಲ್ಯ ಮೋಹ ಮಮತೆಗಳು ಉಕ್ಕಿ ಹೇಗಾದರೂ ಮಾಡಿ ಇಂಥ ಅಪರೂಪವಾದ ಕೂಸನ್ನು

ಕಂಸನ ಕೈಗೆ ಸಿಗದಂತೆ ರಕ್ಷಿಸಿ ಬದುಕಿಸಿಕೊಳ್ಳಬೇಕೆಂದು ಬಗೆದು ಆ ಬಾಲ ಮುಕುಂದನ ಅಪ್ಪಣೆಯಂತೆ ಅವನನ್ನು ತೆಗೆದುಕೊಂಡು ಹೊರಟನು ಮತ್ತು ಒಳ್ಳೇ ದ್ರುತಗತಿಯಿಂದ ನಡೆದು ಬೇಗನೆ ಯಶೋದೆಯ ಗರ್ಭಾಗಾರಕ್ಕೆ ಗೌಪ್ಯವಾಗಿ ಬಂದನು.

ನಿರಾತಂಕವಾಗಿ ಆ ಗರ್ಭಾಗಾರದಲ್ಲಿ ಪ್ರವೇಶಿಸಿ ತಾನು ತಂದ ಮುದ್ದುಮಗುವನ್ನು ಮಲಗಿದ ಯಶೋದೆಯ ಪಕ್ಕದಲ್ಲಿ ಮಲಗಿಸಿ ಅವಳ ಹೆಣ್ಣುಮಗುವನ್ನು ಮೆಲ್ಲನೆ ತಾನು ಎತ್ತಿಕೊಂಡು ಹೊರಟುಬಿಟ್ಟನು. ಬಂದ ದಾರಿಯಿಂದಲೇ ವೇಗವಾಗಿ ನಡೆದುಬಂದು ತಮ್ಮನಿಟ್ಟ ಬಂದಿಮನೆಯನ್ನು ತಲುಪಿ ತಾನು ತಂದ ಆ ಹೆಣ್ಣುಕೂಸನ್ನು ದೇವಕಿಯ ಮಗ್ಗುಲಲ್ಲಿ ಮಲಗಿಸಿ ಕೃತಕೃತ್ಯನಾಗಿ ಆ ಸೆರಮನೆಯಲ್ಲಿ ಕುಳಿತುಕೊಂಡನು.

ಮತ್ತು ಉಗ್ರಸೇನನ ಅತ್ಯುಗ್ರ ಕುಮಾರನಾದ ಕಂಸನಿಗೆ ತನಗೋರ್ವ ಸಲಕ್ಷಣವಾದ ಬಂಗಾರಬಣ್ಣದ ಹೆಣ್ಣುಮಗು ಹುಟ್ಟಿದೆ ಎಂದು ಕನ್ಯಾಜನನದ ಸಮಾಚಾರವನ್ನು ಕಾವಲುಗಾರರಿಂದ ತಿಳಿಸಿದನು. ಅದನ್ನು ಕೇಳಿದ ತಕ್ಷಣವೇ ಆ ವ್ರಾತ್ಯ ದೈತ್ಯನು ತನ್ನ ಅಂಗರಕ್ಷಕರೊಂದಿಗೆ ಧಾವಿಸಿ ವಸುದೇವನಿದ್ದ ಸರೆಮನೆಗೆ ಓಡಿಬಂದು ಬಾಗಿಲಲ್ಲಿ ಇರುವಾಗಲೇ ಆತುರತೆಯಿಂದ ''ಏನಾಯಿತು'' ಎಂದು ಕೇಳಿ ''ಅದೇನೆ ಆಗಲಿ'' ಮೊದಲು ಆ ಕೂಸನ್ನು ಇತ್ತ ತನ್ನಿರಿ. ಏನುಮಾಡುತ್ತಲಿರುವಿರಿ. ಎತ್ತ ನೋಡುತ್ತಲಿರುವಿರಿ, ಕೂಡಲೇ ಆ ಕೂಸನ್ನು ಇತ್ತ ಕೊಡಿರಿ'' ಎಂದು ಗರ್ಜಿಸಹತ್ತಿದನು.

ಅದನ್ನು ಕೇಳಿ ದೇವಕಿಯ ಪ್ರಸೂತಿ ಗೃಹದಲ್ಲಿದ್ದ ಹೆಂಗಳೆಯರೆಲ್ಲರೂ ಹಾಹಾಕಾರವನ್ನು ಮಾಡತೊಡಗಿದರು.

ಬಾಷ್ಪಗದ್ಗದವಾದ ಕಂಠದಿಂದ ದೇವಕಿಯು ಕರಳು ಕರಗುವಂತೆ ಅಂಗಲಾಚಿ ಕೇಳಿಕೊಂಡಳು ''ಅಣ್ಣ ! ಇದು ಈ ಸಲ ಹೆಣ್ಣುಕೂಸು ಹುಟ್ಟಿದೆ. ಹೆಣ್ಣುಕೂಸಿನಿಂದ ನಿನಗೆ ಮರಣ ಬಾರದು. ಮೇಲಾಗಿ ಇದು ಮೃತಕಲ್ಪವಾದ ಪ್ರೇತಪ್ರಾಯವಾದ ಕನ್ನೆ. ಇದರಿಂದ ನಿನಗೇನು ಭಯ! ಅಣ್ಣ, ಒಬ್ಬರಲ್ಲದಂತೆ ಏಳು ಜನ ನನ್ನ ಮಕ್ಕಳನ್ನು ನೀನು ಕೊಂದಬಳಿಕ ಈ ಒಂದು ಮಗುವನ್ನಾದರೂ ಹೆಣ್ಣೆಂದು ತಂಗಿಗೆ ಕರುಣಿಸು. ಇದಾದರೂ ಹೇಗೆ ಸತ್ತಂತಿದೆ ನೋಡು'' ಎಂದು ಗರ್ಭಕೋಶದ ರಸಗಳೆಲ್ಲ ಇನ್ನೂ ಹಸಿ ಬಸಿಯುತ್ತಲಿರುವ ಆ ಕೂಸನ್ನು ಅವನ ಮುಂದೆ ನೆಲದ ಮೇಲೆ ಮಲಗಿಸಿದಳು. ಆ ಹುಡುಗೆಯು ಸತ್ತಂತೆಯೇ ನಿಷ್ಪ್ರಾಣ ಇದೆ ಎನ್ನುವ ದೇವಕಿಯ ಮಾತನ್ನು ಕೇಳಿ ಕಂಸನಿಗೆ ಎಷ್ಟೋ ಸಮಾಧಾನವೆನಿಸಿ ಮೃತ್ಯುವಿನ ಅಂಜಿಕೆ ಕಡಿಮೆಯಾದಂತೆ ತೋರಿತು. ಆದರೂ ಅವನು ಸಿಟ್ಟಿನಿಂದ ಆ ಕೂಸನ್ನು ಸೆಳೆದುಕೊಂಡು ತನ್ನ ಕೈಯಿಂದ ಅದನ್ನು ಗರಗರ ತಿರುಗಿಸಿ ದೊಡ್ಡದಾದ ಒಂದು ಕಲ್ಲು ಬಂಡೆಯ ಮೇಲೆ ಅಪ್ಪಳಿಸಿದನು. ದೊಡ್ಡದಾದ ಕಲ್ಲುಬಂಡೆಗೆ ರಾಕ್ಷಸನಂಥ ಕಂಸನು ತನ್ನ ಇದ್ದ ಶಕ್ತಿಯನ್ನೆಲ್ಲ ಪ್ರಯೋಗಿಸಿ ಆ ಕೂಸನ್ನು ಅಪ್ಪಳಿಸಿದರೂ ಆ ಕೂಸಿಗೆ ಏನೂ ಆಗದೇ ಅದು ಗಕ್ಕನೆ ಗಗನಕ್ಕೆ ಹಾರಿ ಹೋಯಿತು. ಅಲ್ಲಿ ಆ ಕೂಸು ತನ್ನ ಗರ್ಭಸಂಭವವಾದ ಸುಕುಮಾರ ಶಿಶುರೂಪವನ್ನು ಬಿಟ್ಟು ಮುಡಿಕೆದರಿದ ಮಹಾಕಾಳಿಯಾಗಿ ಮಂದಾರಮಾಲೆಯನ್ನು ಧರಿಸಿ ದಿವ್ಯ ಚಂದನವನ್ನು ಲೇಪಿಸಿಗೊಂಡು ಹಾರ ಭೂಷಿತಳಾಗಿ ಮುಕುಟ ಮಂಡಿತಳಾಗಿ ಕಂಸನನ್ನು ತಿರಸ್ಕರಿಸಿ ನಡೆದಳು. ಚಂದ್ರಮುಖಿಯೂ ಚತುರ್ಭುಜಳೂ ಆದ ಅವಳು ಕಪ್ಪು ಬಟ್ಟೆಯನ್ನುಟ್ಟು ಹಳದಿ ಮೇಲುದತೊಟ್ಟು,

ಮಿಂಚಿನಂತೆ ಥಳಥಳಿಸುವ ಮೈಬಣ್ಣದಿಂದಲೂ ಉದಯರವಿ ಯಂತಿರುವ ಕೆಂಗಣ್ಣುಗಳಿಂದಲೂ ಗಾಢಾಂಧಕಾರದ ಆ ಕಾಳ ರಾತ್ರಿಯಲ್ಲಿ ಭೀಕರಳಾಗಿ ತೋರುತ್ತಿದ್ದಳು. ಅವಳ ಸುತ್ತಲೂ ಭೂತ ಪ್ರೇತಗಳು ಕುಣಿಯುತ್ತಲಿದ್ದು ಆ ಪಿಶಾಚ ಪರಿವಾರದೊಂದಿಗೆ ಅವಳೂ ಅಟ್ಟಹಾಸ ಮಾಡುತ್ತ ಮಧುಪಾನಮಾಡಿ ವಿಕಟ ತಾಂಡವನಾಡುತ್ತಲಿದ್ದಳು. ಇಂಥ ರುದ್ರಭೀಷಣವಾದ ಉಗ್ರರೂಪದಿಂದ ಅವಳು ಆಕಾಶದಲ್ಲಿ ನಿಂತುಕೊಂಡು ನಕ್ಕು 'ಕಂಸ! ನೀನು ನನ್ನ ನಾಶಕ್ಕಾಗಿಯೇ ನನ್ನನ್ನು ಎತ್ತಿ ಕಲ್ಲಿನಮೇಲೆ ಅಪ್ಪಳಿಸಿದಿ. ಆದುದರಿಂದ ನೀನು ನಿನ್ನ ವೈರಿಯಿಂದ ಸೆಳೆದು ಸೀಳಲ್ಪಡುತ್ತಲಿರುವಾಗ ನಾನು ಬಂದು ನನ್ನ ಕೈಯುಂಗುರುಗಳಿಂದ ನಿನ್ನ ಶರೀರವನ್ನು ಎಳೆದು ಸೀಳಿ ಬಿಸ ಬಿಸಿ ರಕ್ತವನ್ನು ಕುಡಿಯುತ್ತೇನೆ'' ಎಂದು ಹೇಳಿ ತನ್ನ ಪರಿವಾರ ದೊಂದಿಗೆ ಮುಗಿಲು ಮಂದಿರಕ್ಕೆಹೊರಟು ಹೋದಳು.

ಯಾದವ ವಂಶೀಯರಿಂದ ಪರಿಪೂಜಿತಳಾದ ಆ ಕನ್ಯೆಯು ದೇವಪೂಜ್ಯಳಾಗಿ ಸ್ವರ್ಗದಲ್ಲಿಯೇ ಬೆಳೆಯತೊಡಗಿದಳು. ವಾಸುದೇವನ ಆದೇಶದಂತೆ ದೇವಲೋಕ ದಲ್ಲಿಯೂ ದೇವತೆಗಳು ತಮ್ಮ ಮಗಳಂತೆ ಅವಳನ್ನು ರಕ್ಷಿಸಿದರು. ಅವಳು ಪ್ರಜಾಪತಿಯ ಅಂಶದಿಂದ ಬಹು ಪೂರ್ವಕಾಲದಲ್ಲಿಯೇ ಹುಟ್ಟಿ ಶ್ರೀಕೃಷ್ಣನ ರಕ್ಷಣೆಗಾಗಿ ಅವನ ಆಜ್ಞೆಯಂತೆ ಮತ್ತೀಗ ಅವತಾರಮಾಡಿದ್ದಳು. ಅದುದರಿಂದಲೇ ಯಾದವರ ರೂಪದಿಂದ ಅವತಾರ ಮಾಡಿ ಇಳಿದುಬಂದ ದೇವಾಧಿದೇವತೆಗಳೆಲ್ಲರೂ ಅವಳನ್ನು ಸದಾ ಆರಾಧಿಸಿ ಪೂಜಿಸುತ್ತಲಿರುವರು.''

ಹೀಗೆ ನುಡಿದು ಅವಳು ಗಗನ ಗಾಮಿನಿಯಾಗಿ ತೆರಳಿದಬಳಿಕ ಕಂಸನು ಇವಳೇ ನನಗೆ ಮಾರಿ ಎಂದೆಂದುಕೊಂಡು ನಾಚಿಕೆಯಿಂದ ತಲೆತಗ್ಗಿಸಿ ಖಿನ್ನನಾಗಿ ದೇವಕಿಗೆ

''ಸೋದರಿ! ನನಗೆ ಬರಲಿರುವ ಸಾವನ್ನು ತಪ್ಪಿಸಲು ನಾನು ನಿನ್ನ ಹಸುಗೂಸು ಗಳನ್ನೆಲ್ಲ ಕಟುಕನಂತೆ ಕೊಂದುಹಾಕಿದೆ. ಆದರೆ ಅದೆಲ್ಲ ನನ್ನ ಯತ್ನವು ವಿಫಲವಾಗಿ ಬೇರೆಕಡೆಯಿಂದಲೇ ಮೃತ್ಯು ತಾನು ಬರುವಂತೆ ಬಂದೇಬಿಟ್ಟಿತು. ನಿರಾಶಾ ಜನಿತವಾದ ಶೋಕೋದ್ರಿಕ್ತಾವಸ್ಥೆಯಲ್ಲಿ ನನಗೆ ನನ್ನ ಅತ್ಯಂತ ಆಪ್ತ ಬಂಧುಗಳ ಮೇಲೆಯೇ ಪ್ರಹಾರ ಗೈಯ್ಯುವ ಪ್ರಸಂಗಬಂದಿತು. ನನ್ನ ಶೌರ್ಯಸಾಮರ್ಥ್ಯಗಳ ಬಲದಿಂದ ಮತ್ತು ಪೌರುಷದ ಪ್ರಭಾವದಿಂದ ದೈವವನ್ನಾದರೂ ಮೆಟ್ಟಿಮೀರಿ ನಾನು ಯಶಸ್ವಿಯಾಗಿ ಮುನ್ನಡೆಯಬಲ್ಲೆ ಎಂಬ ನನ್ನ ಅಹಂಕಾರ ಇಂದು ಮಾಯವಾಯಿತು. ಯತ್ನದಿಂದ ದೈವವನ್ನು ತಪ್ಪಿಸುವದಾರಿಗೂ ಸಾಧ್ಯವಿಲ್ಲವೆಂದು ನನಗೆ ಈಗ ಅನಿಸುತ್ತದೆ.

ಆದಿರಲಿ, ದೇವಕಿ ! ನೀನೀಗ ಮಕ್ಕಳನ್ನು ಕಳೆದುಕೊಂಡ ದುಃಖವನ್ನು ಬಿಟ್ಟು ಬಿಡು. ಆ ನಿನ್ನ ಗರ್ಭಗಳ ವಿನಾಶಕ್ಕೆ ನಾನು ನೆಪಮಾತ್ರ. ಕಾಲವೇ ಮುಖ್ಯಕಾರಣ. ಪ್ರಾಣಿ ಮಾತ್ರರಿಗೆಲ್ಲ ಶತ್ರುವೆಂದರೆ ಕಾಲವೇ ಇದ್ದು ನನ್ನಂಥವರು ನಿಮಿತ್ತಮಾತ್ರ ಮಾರಕರು. ಆದುದರಿಂದ ಅಕ್ಕ! ನಿನ್ನ ಪಾದಗಳ ಮೇಲೆ ಬಿದ್ದು ನಾನು ಬೇಡಿಕೊಳ್ಳುತ್ತೇನೆ. ಮಗನಂತೆ ನನ್ನ ತಪ್ಪುಗಳನ್ನು ಕ್ಷಮಿಸು. ದಯಮಾಡಿ ನನ್ನ ಮೇಲೆ ಸಿಟ್ಟಾಗಬೇಡ.'' ಎಂದು ಅಂಗಲಾಚಿ ಬೇಡಿಕೊಳ್ಳುವ ಕಂಸನ ಮಾತುಗಳನ್ನು ಕೇಳಿ ದೇವಕಿಯ ಕೋಮಲ ಹೃದಯವು ಕರಗಿ ಹೋಯಿತು.

ಅವಳು ಕರಣಾರ್ದ್ರವಾದ ದೃಷ್ಟಿಯಿಂದೊಮ್ಮೆ ವಿಷಣ್ಣವದನನಾದ ವಸುದೇವನ ಕಡೆಗೆ ನೋಡಿ ತನ್ನ ಪಾದಗಳ ಮೇಲೆ ಬಿದ್ದು ಕ್ಷಮೆಯನ್ನು ಯಾಚಿಸತಕ್ಕ ಕಂಸನಿಗೆ ಎದೆತುಂಬಿ ''ಮಗ! ಏಳಪ್ಪಾ ಏಳು'' ಎಂದು ತಾಯ್ಗರುಳಿನ ಕರುಣಾಲಾಪದಲ್ಲಿ ನುಡಿದೆಬ್ಬಿಸಿದಳು.

"ಕಂಸ!" ಅವಳ ಕಂಠಶ್ರುತಿಗಳೆಲ್ಲವೂ ಕಂಪಿಸುತ್ತಲಿದ್ದವು. "ನನ್ನ ಕಣ್ಣೆದುರಿಗೇ ನನ್ನ ಎಲ್ಲ ಮಕ್ಕಳನ್ನೂ ಕಲ್ಲಿಗಪ್ಪಳಿಸಿ ಕೊಂದವನು ನೀನೇ ಆದರೂ ಮೃತ್ಯುವೂ ಅದಕ್ಕೆ ಕಾರಣವಾಗಿದೆ. ನೀನು ಮಾಡಿದ ಘೋರ ಪಾಪಕ್ಕೆ ಇಂದು ಕ್ಷಮೆಬೇಡಿ ಪಶ್ಚಾತ್ತಾಪವನ್ನು ವ್ಯಕ್ತಪಡಿಸಿದ್ದರಿಂದ ನನ್ನ ದುಃಖವು ಸಹ್ಯವಾಗಿ ಅದರ ತೀವ್ರತೆಯ ಉರಿ ಈಗ ಎಷ್ಟೋ ಶಾಂತವಾದಂತಾಗಿದೆ ಇದೆಲ್ಲದಕ್ಕೂ ನನ್ನ ಪ್ರಾರಬ್ಧವೇ ಕಾರಣ, ಪಾಪ ! ನೀನೇನು ಮಾಡುವಿ. ಈ ಮಕ್ಕಳ ಮರಣ ದುಃಖವನ್ನು ಈ ಜನ್ಮವಿರುವವರೆಗೆ ನನಗಂತೂ ಬಿಡುವುದು ಸಾಧ್ಯವಿಲ್ಲ. ಆ ದುಃಖ ಸುಮ್ಮನೇ ನಿನಗೇಕೆ. ನೀನು ಸುಖವಾಗಿ ಮನೆಗೆ ಹೋಗು" ಎಂದು ಉಪದೇಶ ಮಾಡಿ ಕಳಿಸಿದಳು. ಇದನ್ನು ಕೇಳಿ ಕಂಸನು ತನ್ನ ಮನೆಗೆ ತೆರಳಿದರೂ ಅವನ ಕಾರ್ಯವು ವಿಫಲ ವಾದುದರಿಂದ ಸಂತಾಪದಿಂದ ಎದೆ ಉರಿಯುತ್ತಲಿದ್ದಿತು. ತನಗೆ ಮೃತ್ಯುವು ಅಪರಿಹಾರ್ಯ ಎಂದು ಅವನಿಗೆ ದುರ್ಗಾದೇವಿಯ ಮಾತಿನಿಂದ ತಿಳಿದುಬಂದುದರಿಂದ ಚಿಂತಾಗ್ನಿಯು ಚಿತಾಗ್ನಿಯಂತೆ ಅವನ ಹೃದಯವನ್ನು ಸುಡಹತ್ತಿತ್ತು.

## ನಂದನ ಮಧುರಾ ಪ್ರಯಾಣ, ವಸುದೇವನ ಚಿಂತೆ

ಆಗ ಒಂದು ದಿನ ನಂದಗೋಪನು ಯಶೋದೆಯೊಂದಿಗೆ ಕಂಸಮಹಾರಾಜನಿಗೆ ಕರ ಕೊಡಲೆಂದು ಮಥುರಾಪಟ್ಟಣಕ್ಕೆ ಹೋದನು. ತಾನು ಬರುವವರೆಗೆ ಹಸುಗಳ ಹಿಂಡನ್ನು ಜಾಗರೂಕತೆಯಿಂದ ರಕ್ಷಿಸಲು ಉಳಿದ ಗೋಪಾಲಕರಿಗೆ ಹೇಳಿ ಬಂದಿದ್ದನು. ನಂದ ಗೋಪಾಲನು ಮಥುರೆಗೆ ಬಂದ ವರ್ತಮಾನವನ್ನು ಕೇಳಿ ವಸುದೇವನು ಅವನಿಗೆ ಭೇಟಿಯಾಗಿ ತನ್ನ ಮಗನಾದ ರೌಹಿಣೇಯನ-ಬಲರಾಮನ-ಮತ್ತು ನಂದನ ಮಗನಾದ ಕೃಷ್ಣನ ಯೋಗ ಕ್ಷೇಮಗಳನ್ನು ವಿಚಾರಿಸಿದನು. ಮತ್ತು ದೇವರದಯೆಯಿಂದ ವಯಸ್ಸಾದ ಬಳಿಕಾದರೂ ಅತ್ಯುತ್ತಮನಾದ ಮುತ್ತಿನಂಥ ಮಗ ಹುಟ್ಟಿದ್ದಕ್ಕಾಗಿ ನಂದನನ್ನು ಅಭಿನಂದಿಸಿದನು.

ನಂದಗೋಪನಾದರೂ ವಸುದೇವನ ಮುದ್ದು ಮಕ್ಕಳೆಲ್ಲರೂ ಹತರಾದದಕ್ಕಾಗಿ ಅನುತಾಪವನ್ನು ವ್ಯಕ್ತಮಾಡಿ "ಕೊನೆಯದಾದ ಹೆಣ್ಣು ಕೂಸನ್ನಾದರೂ ಉಳಿಸಿದ್ದರೆ ಒಳ್ಳೆಯದಾಗುತ್ತಿತ್ತು ಎಂದುಂದು ಸರ್ವವೂ ಅದೃಷ್ಟ ನಿಯಾಮಕನಾದ ಭಗವಂತನ ಅಧೀನವಾದುದರಿಂದ ನೀನು ದುಃಖಪಡಬೇಡ" ಎಂದು ಸಮಾಧಾನ ಮಾಡಿದನು. ಆಗ ಸ್ನೇಹ ಸಂಭ್ರಮಗಳಿಂದ ಕಾತರನಾದ ವಸುದೇವನು ತನ್ನ ಎಲ್ಲ ಹಿಂದಿನ ದುಃಖಗಳನ್ನು ನುಂಗಿಕೊಂಡು "ನಂದಗೋಪ, ನೀನೀಗಲೇ ಈ ಯಶೋದೆಯೊಂದಿಗೆ ಬೇಗನೇ ಗೋಕುಲಕ್ಕೆ ಹೋಗು. ನನ್ನ ಹಾಗೂ ನಿನ್ನ ಮಕ್ಕಳಾದ ರಾಮಕೃಷ್ಣರಿಗೆ ಕುಲೋಚಿತವಾದ ಸಂಸ್ಕಾರಗಳನ್ನು ಮಾಡಿ ಸಾವಧಾನವಾಗಿ ರಕ್ಷಿಸು.

ಇಷ್ಟು ಜನ ಮಕ್ಕಳನ್ನು ಹಡೆದರೂ ಒಬ್ಬ ಮಗನಾದರೂ ಮುಗ್ಧ ಮನೋಹರವಾದ ಶೈಶವಸುಂದರ ಮುಖವನ್ನು ನೋಡುವ ಭಾಗ್ಯವಾಗಲಿ ಹಡೆದ ಮಕ್ಕಳನ್ನು ಲಾಲನೆಪಾಲನೆ ಮಾಡುವ ಪುಣ್ಯವಾಗಲಿ ಇಲ್ಲದ ನನ್ನ ದಾರುಣವಾದ ದುರದೃಷ್ಟವನ್ನು ನೋಡಿ ನನಗೆ ನಾಚಿಕೆಯಾಗಿದೆ. ತಾಪವಾಗಿದೆ. ಕೋಪ ಉಕ್ಕುತ್ತದೆ. ಆದರೊಟ್ಟಿಗೆ ಶಿಶುಸಂಹಾರ ದೀಕ್ಷಿತನಾದ ಕಂಸನ ದೆಸೆಯಿಂದಾಗಿ ಭಯವೂ ಬರುತ್ತದೆ. ಈ ದುಷ್ಟನ ಕೈಯಿಂದ ಆ ನಮ್ಮ ರಾಮಕೃಷ್ಣರು ಹೇಗೆ ಪಾರಾದರು ಎಂಬ ಚಿಂತೆ ಹಗಲಿರುಳೂ ನನ್ನ ಕರುಳುಗಳನ್ನು ಕೊರೆಯುತ್ತಲಿದೆ.

ನಂದಗೋಪ! ನೀನು ನಿನ್ನ ಮಗನಾದ ಕೃಷ್ಣನನ್ನು ರಕ್ಷಿಸಿದಂತೆಯೇ ನನ್ನ ಮಗನಾದ ಬಲರಾಮನನ್ನಾದರೂ ಕೂಡ ಅದೇ ಪುತ್ರವಾತ್ಸಲ್ಯದಿಂದ ಸಲಹುತ್ತಲಿದ್ದರೂ ದೇಶದಲ್ಲಿ

ಶಿಶುಪೀಡೆ ಹೆಚ್ಚಾಗಿ ನೋಡಿದಲ್ಲೆಲ್ಲ ಬಾಲೋಪದ್ರವವು ಬೆಳೆದು ಮಕ್ಕಳು ಬದುಕುವುದೇ ಕಠಿಣವಾಗಿದೆ. ಆದಕ್ಕಾಗಿಯೇ ನಾನು ಊರಿಗೆ ಹೋಗಲು ನಿನಗೆ ಅವಸರಪಡಿಸುತ್ತಲಿದ್ದೇನೆ. ಸಮಾನ ನಾಮರೂ ಸಮಾನರೂಪರೂ ಸಮಾನ ವಯಸ್ಕರೂ ಆದ ನಿನ್ನ ಮಗನಾದ ಕೃಷ್ಣನಂತೆಯೇ ನನ್ನ ಮಗನಾದ ಸಂಕರ್ಷಣನಾದರೂ ನಿನಗೆ ಅತಿತರಾಮ್ ಆನಂದವನ್ನು ಉಂಟು ಮಾಡುವುದರಲ್ಲಿ ಸಂದೇಹವೇ ಇಲ್ಲ. ಆದರೆ ಎಲ್ಲಮಕ್ಕಳೂ ಬಾಲ್ಯದಲ್ಲಿ ಕಿಡಿಗೇಡಿಗಳಿರುವದು ಸ್ವಾಭಾವಿಕವಾದುದರಿಂದ ಚಪಲಚರಣರಾದ ನಮ್ಮ ಈ ಚಂಡ ಕುಮಾರರ ಬಗೆಗಾದರೂ ನೀನು ಜಾಗರೂಕನಾಗಿರು. ಅಲ್ಲಿಯೇ ಸಮೀಪದ ವೃಂದಾವನದಲ್ಲಿ ಮಾತ್ರ ಎಂದಿಗೂ ದನಗಳ ಹಟ್ಟಿಗಳನ್ನು ಕಟ್ಟಬೇಡ. ಯಾಕೆಂದರೆ ಅಲ್ಲಿ ದುಷ್ಟ ದೃಷ್ಟಿಯ ದೈತ್ಯನಾದ ಕೇಶಿಯು ಸರ್ವನಾಶಕ್ಕಾಗಿ ಯಾವಾಗಲೂ ಕಾದುಕುಳಿತಿರುವನು. ಅದರಂತೆ ಹಾವು, ಚೇಳು, ಪಶು, ಪಕ್ಷಿ, ಕ್ರಿಮಿ, ಕೀಟಗಳಿಂದಲೂ ಹಾಗೂ ಗೋಷ್ಠದಲ್ಲಿಯ ಹಸು ಮಣಕ ಮತ್ತು ಗರ್ವಿಷ್ಠ ಘೂಳಿಗಳಿಂದಲೂ ತುಂಬ ಎಚ್ಚರಿಕೆಯಿಂದ ಅವರನ್ನು ಜೋಪಾನಮಾಡು. ರಾತ್ರಿ ಕಳೆದು ಬೆಳಗಾಗುವ ಹೊತ್ತಾಯಿತು. ಶೀಘ್ರ ಗಾಮಿಯಾದ ವಾಹನವೊಂದನ್ನೇರಿ ಅವಸರದಿಂದ ನೀನು ಪ್ರಯಾಣ ಬೆಳಿಸು. ಇಕ್ಕೆಲದಲ್ಲಿಯ ಹಕ್ಕಿಗಳು ತಮ್ಮ ಮಧುರಾಲಾಪದಿಂದ ನಿನಗೆ ಮಂಗಳವನ್ನು ಕೋರುತ್ತಲಿವೆ'' ಎಂದು ವಸುದೇವನು ವಾತ್ಸಲ್ಯದುಂಬಿದನಾಗಿ ನುಡಿದು ಸ್ನೇಹ ಪೂರ್ವಕವಾಗಿ ನಂದಗೋಪನನ್ನು ಬೀಳ್ಕೊಂಡನು.

ನಂದನಾದರೂ ಅವನ ಆದೇಶದಂತೆ ವೇಗದಿಂದ ನಡೆದು ಯಮುನೆಯ ದಂಡೆಗೆ ಬಂದು ಯಶೋದೆಯೊಂದಿಗೆ ತಾನು ವಾಹನವನ್ನೇರಿದನು. ಮತ್ತು ಭೋಯಿಗಳು ವೈಯ್ಯುವ ಚಿಕ್ಕ ಮೇಣೆಯಲ್ಲಿ ಮೆತ್ತಗಿನ ಹಾಸಿಗೆಯ ಮೇಲೆ ಕೃಷ್ಣಕುಮಾರನನ್ನು ಹಗುರಾಗಿ ಮಲಗಿಸಿ ತಂಗಾಳಿ ನೀಡುವ ಆ ತೀರಮಾರ್ಗದಿಂದ ಗೋಕುಲಕ್ಕೆ ಹೊರಟನು.

ಯಮುನಾ ತೀರದ ಕುಂಜ ನಿಕುಂಜಗಳ ಬಳಸುದಾರಿಯಲ್ಲಿ ಜುಳುಜುಳು ಹರಿಯುವ ಪ್ರವಾಹದ ಕಲ ಕಲ ಮಂಜುಳನಾದವನ್ನು ಕೇಳುತ್ತ ನಡೆದ ಅವರು ಗೋವರ್ಧನ ಗಿರಿಯ ಸಮೀಪದಲ್ಲಿಯೇ ನದಿಯ ನೀರಿನಿಂದ ತೂರಿ ಬರುವ ತರಲ ತೆರೆ ತುಂತುರುಗಳಿಂದ ಸ್ನಾತಶೀತವಾದ ವ್ರಜಭೂಮಿಯನ್ನು ಕಂಡರು. ಹಕ್ಕಿಗಳ ಕಿಲಿ ಕಿಲಾಟ, ಕರುಗಳ ಹಂಬಾರವ, ತುರುಗಾಹಿ ಬಾಲಕರ ಕೊಳಲದನಿ, ಎತ್ತುಗಳ ಕೊರಳ ಕಿಂಕಿಣಿ, ನೀರಗ್ಹೊರಟ ನೀರೆಯರ ಪ್ರಜಣಗಳ ಝುಣತ್ಕಾರ, ಸರಭಸದಿಂದ ಮೊಸರು ಕಡೆಯುವ ಗೋಪಿಕೆಯರ ಕಂಕಣ ಝುಂಕಾರ ಮೊದಲಾವುಗಳಿಂದ ನಾದ ಬ್ರಹ್ಮಮಯವಾದಂತೆ ತೋರುವ ಆ ಹಚ್ಚಹಸುರಿನ ಪಚ್ಚೆಪಯರಿನ ನಾಡಾದ ಗೋಕುಲಕ್ಕೆ ನಂದಗೋಪನು ಬಂದಾಗ ಅಲ್ಲಿಯ ಗೋಪಾಲಕುಲದ ಹಿರಿಯರೆಲ್ಲರೂ ಹಸುಶಿಶು ಯುವಕ ಯುವತಿ ಯರೊಂದಿಗೆ ಮುಂದೆ ಬಂದು ಆದರದಿಂದ ಎದುರುಗೊಂಡು ಸ್ವಾಗತ ನೀಡಿದರು. ಆಗ ನಂದನು ಮನೆಗೆ ಬಂದು ವಸುದೇವನ ಪ್ರೀತ್ಯಾಸ್ಪದ ಪತ್ನಿಯಾದ ರೋಹಿಣಿಯ ಹತ್ತಿರ ಸಂಕರ್ಷಣನ ಪಕ್ಕದಲ್ಲಿಯೇ ತನ್ನ ಕೃಷ್ಣಾವಧೂತನನ್ನೂ ಮೆಲ್ಲನೆ ಮಲಗಿಸಿದನು.

ನಿಸರ್ಗ ಸೌಂದರ್ಯದ ನೆಲೆವೀಡಾದ ಆ ಗೋಕುಲದ ಸಸ್ಯ ಶ್ಯಾಮಲ ಹಾಗೂ ಕುಸುಮ ಕೋಮಲವಾದ ರಮ್ಯಭೂಮಿಯಲ್ಲಿ ನಂದಗೋಪನು ಆ ಸುಕುಮಾರರಾದ ನಂದನರೊಂದಿಗೆ ಕೆಲದಿನ ಆನಂದದಿಂದ ವಾಸವಾಗಿದ್ದನು. ನೀರು ತುಂಬಿದ ನೀಲ

ಮೇಘದಂತೆ ಕಪ್ಪುಬಣ್ಣವಿದ್ದರೂ ಕಳೆಕಾಂತಿಗಳಿಂದ ಒಪ್ಪುತ್ತಿದ್ದುದರಿಂದ ಮಾನುಷ ರೂಪಿಯಾದ ಆ ಮುಕುಂದನನ್ನು ಗೋವಳರೆಲ್ಲರೂ ಕೃಷ್ಣನೆಂದೇ ಕರೆಯುತ್ತಲಿದ್ದರು. ಹಿರಿಯನಾದರೂ ತನ್ನು ಶರೀರದ ಸಿರಿ ಸೊಬಗುಗಳಿಂದ ಅತ್ಯಂತ ಆಕರ್ಷಕ ನಾಗಿದ್ದುದರಿಂದ ಸಂಕರ್ಷಣ ಎಂದು ಕರೆಯುತ್ತಲಿದ್ದರು.

## ಶಕಟಾಸುರ ಸಂಹಾರ

ಒಂದು ದಿನ ಪುತ್ರವತ್ಸಲೆಯಾದ ಯಶೋದೆಯು ಮನೆಗೆಲಸಗಳು ಬಹಳವಿದ್ದುದರಿಂದ ಬಾಲಕೃಷ್ಣನನ್ನು ಒಂದು ಚಕ್ಕಡಿಯ ಕೆಳಗೆ ಮಲಗಿಸಿದ್ದಳು. ಅವನು ಏಳುವದರೊಳಗಾಗಿ ತಾನು ತನ್ನ ನದಿಯ ಕೆಲಸಗಳನ್ನೆಲ್ಲ ಮುಗಿಸಿಕೊಂಡು ಬರಬೇಕೆಂದು ಸನಿಹದಲ್ಲಿರುವ ಯಮುನೆಗೆ ಹೋದಳು.

ಇತ್ತ ಆ ಕುಮಾರನು ಎದ್ದು ತನ್ನ ಪುಟ್ಟ ಕೈಕಾಲುಗಳನ್ನು ಆಚೀಚೆ ಬಾಲಲೀಲೆಯಿಂದ ಬೀಸಾಡುತ್ತ ಮಧುರ ಕಂಠದಿಂದ ಅಳಹತ್ತಿದನು.

ಆ ಅಳುವ ಗಡಿಬಿಡಿಯಲ್ಲಿ ಮೇಲೆ ಮಾಡಿದ ಅವನ ಮಾಟ ಕಾಲು ಮೇಲಿನ ಚಕ್ಕಡಿಗೆ ತಾಗಿ ಅದರಿಂದ ಆ ಬಂಡಿಯು ಬುಡ ಮೇಲಾಗಿ ಹೊರಳಬಿದ್ದಿತು. ಆಗ ಶಿಶುವಾದರೂ ಹಸಿವೆಯಿಂದ ಕಸಿವಿಸಿಬಡುವವನಂತೆ ಹಾಲಿಗಾಗಿ ಅಳಹತ್ತಿದನು.

ಆಗ ನದಿಯಿಂದ ಓಡಿಬಂದ ಯಶೋದೆಯು ಪುತ್ರವಾತ್ಸಲ್ಯದಿಂದ ಹೃದಯತೊರೆದು 'ಅಯ್ಯೋ ನನ್ನ ಮಗು' ಎಂದು ಹೌಹಾರಿ ಬಂದು ಎತ್ತಿಕೊಂಡಳು. ಮತ್ತೆ ಮತ್ತೆ ಮುತ್ತುಕೊಟ್ಟು ಎದೆಗೊತ್ತಿಕೊಂಡು ಮೈಮೇಲೆಲ್ಲ ಕೈಯಾಡಿಸಿ ಎಂಥ ಕುತ್ತಿನಿಂದ ಬದುಕಿದೆಯೋ ಕಂದ ಎಂದಂದು ಭಯಭ್ರಾಂತಿ ಸ್ನೇಹ ಕಾತರ ವಾತ್ಸಲ್ಯ ಕರುಣೆಗಳಿಂದ ಕಲ್ಲೋಲಿತಳಾಗಿ ಮೊಲೆಯೂಡಿಸಿದಳು.

''ಗಾಳಿ ಇಲ್ಲದೆ ಗೂಳಿಯಿಲ್ಲದೆ ಇಂಥ ದೆವ್ವಿನಂಥ ಗಾಡಿಯು ಅದು ಹೇಗೆ ಹೀಗೆ ಹೊಡುಮರಳಿ ಉರುಳಿ ಬಿದ್ದಿರಬಹುದು? ಅದಾದರೂ ಮೇಲೆಬೀಳದೇ ಈ ಮಗು ಈ ಶಕಟ ಸಂಕಟದಿಂದ ಅಯ್ಯೋ ಹೇಗೆ ಪಾರಾಗಿರಬಹುದು? ಎಲ್ಲವೂ ದೈವ ಲೀಲೆ, ನನ್ನ ಮನೆಗೆಲಸ ಹಾಳಾಗಲಿ. ಯಾರಿಗೆ ಬೇಕಾಗಿತ್ತು ಈಗ ಸ್ನಾನ! ನಾನೇಕೆ ಮುದ್ದುಮಗನನ್ನು ಬಿಟ್ಟು ನದಿಗೆ ಹೋದೆ! ಈಗ ಈ ಕೃಷ್ಣನ ತಂದೆ ಬಂದು ಕೂಸನ್ನೊಂದನ್ನೇ ಬಿಟ್ಟು ನದಿಗೇಕೆ ಹೋದೆಯೆಂದು ಕೇಳಿದರೆ ಮುಂಗೋಪಿಯಾದ ವನಿಗೆ ನಾನೇನು ಉತ್ತರಹೇಳಲಿ? ಅದೇನೇ ಇರಲಿ ಇಂಥ ಅನಾಹುತ ನಡೆದರೂ ನನ್ನ ಚಿನ್ನ ಕೃಷ್ಣಯ್ಯ! ನೀನು ಸುರಕ್ಷಿತವಾಗಿರುವಿ ಯಲ್ಲ! ''ಎಂದೆನ್ನುತ್ತ ತನ್ನ ಕುಲದೇವರನ್ನು ನೆನೆಯ ಹತ್ತಿದಳು''.

ಅಷ್ಟರಲ್ಲಿ ಮುನಿವೇಷದಲ್ಲಿರುವ ತಪಸ್ವಿಯಾದ ನಂದಗೋಪನು ಅರಣ್ಯದಿಂದ ಆಕಳುಗಳ ಹಿಂಡಿನೊಂದಿಗೆ ಬಂದು ನೋಡಿದನು. ಅಲ್ಲಿ ನಿಲ್ಲಿಸಿದ ದೊಡ್ಡ ಗಾಡಿಯ ನೊಗವು ಮುರಿದು, ಹಲ್ಲುಸಿಡಿದು, ಗಾಲಿ ಮೇಲೆ ಆಗಿ, ಒಳಗಿದ್ದ ಪಾತ್ರಪರಡಿಗಳೆಲ್ಲ ಒಡೆದು ಪುಡಿಪುಡಿಯಾಗಿ ದೊಡ್ಡ ಚಕ್ಕಡಿಯೇ ಚಕ್ಕಾಚೂರಾಗಿ ಬಿದ್ದುದ್ದು ಕಂಡಿತು. ಅದನ್ನು ದೂರಿಂದ ಕಂಡಕೂಡಲೇ ಮೊದಲು ಅದರ ಕೆಳಗೆ ಮಲಗಿಸಿದ ಕೃಷ್ಣನ ನೆನಪಾಗಿ ''ದೇವಾ! ನನ್ನ ಕೂಸು ಸುರಕ್ಷಿತ ವಿರಲಿ'' ಎಂದು ಮನಸಾ ಪ್ರಾರ್ಥಿಸಿ ಕಣ್ಣೀರು ತುಂಬಿ ಗಾಬರಿಯಿಂದ ಓಡಿಬಂದು ಏದುತ್ತ ''ಮಗು ಸುಖವಾಗಿದೆಯೇ'' ಎಂದು ಗದ್ಗದಿಸಿದನು.

ಮಗು ತಾಯಿಯ ತೊಡೆಯ ಮೇಲೆ ಮಲಗಿ ಹಾಯಾಗಿ ಮೊಲೆಚೀಪುತ್ತಲಿತ್ತು. ಅದನ್ನು ನೋಡಿ ಮನದ ದುಗುಡ ಕಡಿಮೆಯಾಗಿ ಹೆಂಡತಿಯನ್ನು ಕುರಿತು ''ಘಾಳಿಗಳು ಕಾದಾಡದೇ ಬಿರುಗಾಳಿ ಬೀಸದೇ ಚಕ್ಕಡಿ ಹೊರಳಿ ಹೊಡ ಮರಳಿ ಉರುಳಿಬಿದ್ದ ಕಾರಣವೇನು?'' ಎಂದು ಕೇಳಿದನು.

ಆಗ ಗಾಬರಿಯಿಂದ ಕಂಗೆಟ್ಟ ಯಶೋದೆಯು ಅಂಜುತ್ತ ನಡುಗಿ ಕಾತರಳಾಗಿ ''ಗಾಡಿ ಹೇಗೆ ಹೊರಳಿತೋ ನನಗೇನು ಗೊತ್ತಿಲ್ಲ. ಶಾಂತಮೂರ್ತಿಯೇ! ನಿಜವಾಗಿ ಹೇಳಬೇಕೆಂದರೆ ಆಗ ನಾನು ಬಟ್ಟೆಗಳನ್ನು ಒಗೆದುಕೊಂಡು ಬರಬೇಕೆಂದು ನದಿಗೆ ಹೋಗಿದ್ದೆ. ಬರುವದರೊಳಗಾಗಿ ಗಾಡಿ ಬುಡಮೇಲಾಗಿ ಬಿದ್ದಿತ್ತು.

ಹೀಗೆ ಅವರು ಮಾತನಾಡುತ್ತಲಿರುವಾಗಲೇ ಅಲ್ಲಿಯೇ ಸನಿಹದಲ್ಲಿ ಆಟವಾಡುತ್ತಲಿರುವ ಹುಡುಗರು ಬಂದು ''ನಾವಿಲ್ಲಿ ಆಟವಾಡುತ್ತಲಿರುವಾಗ ಈ ನಿಮ್ಮ ಕೂಸೇ ಕಾಲಿಂದ ಒದ್ದು ಈ ಗಾಡಿಯನ್ನು ಕೆಡವಿತು. ಇದನ್ನು ನಾವು ಒಬ್ಬರಲ್ಲ-ಎಲ್ಲರೂ ಕೂಡಿಯೇ ನಿಂತು ನೋಡಿದ್ದೇವೆ'' ಎಂದು ಆತ್ಮವಿಶ್ವಾಸದಿಂದ ಹೇಳಿದರು. ಆದರೆ ಗೋಪಾಲಕರಿಗೆ ಮಾತ್ರ ಪ್ರತ್ಯಕ್ಷದರ್ಶಿಗಳಾದ ಆ ಬಾಲಕರು ಹೇಳಿದರೂ ಅದು ಪ್ರಮಾಣವೆನಿಸಲಿಲ್ಲ. ಚಿಕ್ಕ ಬಾಲಕನು ಚೋಟುದ್ದಪಾದ ಚಾಚಿದರೆ ದೊಡ್ಡ ಚಕ್ಕಡಿಯೊಂದು ಬೊಕ್ಕ ಬೋರಲಾಗಿ ಬಿದ್ದಿತೆನ್ನುವ ಮಾತು ಅವರಿಗೆ ಬರಿ ಅಚ್ಚರಿಯೆನಿಸಲಿಲ್ಲ ಅಸತ್ಯವೇ ಎನ್ನಿಸಿತು. ಅದು ಬಿದ್ದುದಕ್ಕೆ ಸಮಂಜಸವಾದ ಕಾರಣ ತಿಳಿಯದೇ, ಕಣ್ಣಾರೆ ಕಂಡುದನ್ನು ಹೇಳಿದವರ ಮಾತನ್ನೂ ಅಶಕ್ಯವೆಂದು ನಂಬದೇ, ಆಶ್ಚರ್ಯ ವಿಭ್ರಾಂತರಾಗಿ ಕುಳಿತರು. ಆ ಬಳಿಕ ಅವರೆಲ್ಲರೂ ಕೂಡಿ ಆ ಬಂಡಿಯನ್ನು ಎತ್ತಿ ಅದರ ಸ್ಥಾನದಲ್ಲಿರಿಸಿ ಅದಕ್ಕೆ ಗಾಲಿಗಳನ್ನು ಗಟ್ಟಿಯಾಗಿ ಕೂಡಿಸಿ ನಿಲ್ಲಿಸಿದರು.

## ಪೂತನಾವಧೆ

ಮುಂದೆ ಕಾಲ ಕಾಲ ಕಳೆದ ಬಳಿಕ ಭೋಜರಾಜನಾದ ಕಂಸನ ಪೂತನಾ ಎಂಬ ಹೆಸರಿನ ಓರ್ವ ದುಷ್ಟದಾಯಿಯಾದ ಪ್ರಾಣಾಂತಿಕ ಪಕ್ಷಿಣಿಯು ಕೃಷ್ಣನನ್ನು ಕೊಲ್ಲಲಿಕ್ಕೆಂದು ವ್ರಜಕ್ಕೆ ಬಂದಳು. ಬಕ ಸೋದರಿಯಾದ ಅವಳು ಸಿಟ್ಟಿನಿಂದ ತನ್ನ ಎರಡೂ ರೆಕ್ಕೆಗಳನ್ನು ಪಟ ಪಟ ಬಡೆಯುತ್ತ ಬಂದಳು. ಘೋರಸ್ವರದಿಂದ ಗರ್ಜಿಸುತ್ತ ಅಲ್ಲಿರುವ ಒಂದು ಚಕ್ಕಡಿಯ ಗಾಲಿಯ ಮೇಲೆ ಕುಳಿತು ರಾತ್ರಿಯಲ್ಲಿ ಎಲ್ಲವನ್ನೂ ನೋಡಿಕೊಂಡಳು. ಆ ಬಳಿಕ ಅವಳು ತನ್ನ ನಿಜರೂಪವನ್ನು ಮರೆಮಾಚಿ ಅತ್ಯಂತ ಸುಂದರವಾದ ಓರ್ವ ಸ್ತ್ರೀರೂಪವನ್ನು ತೆಗೆದುಕೊಂಡು ನಂದಗೋಕುಲವನ್ನು ಪ್ರವೇಶಿಸಿದಳು. ಎಲ್ಲರೂ ಮಲಗಿದ ಬಳಿಕ ಮೆಲ್ಲನೆ ಕೃಷ್ಣನನ್ನು ಮಲಗಿಸಿದಲ್ಲಿ ಬಂದು ಆ ಮಗುವನ್ನು ಎತ್ತಿಕೊಂಡು ಕಾಲಕೂಟ ವಿಷಕ್ಕಿಂತಲೂ ಉಲ್ಬಣ ನಂಜನ್ನು ಲೇಪಿಸಿದ ತನ್ನ ಮೊಲೆಯನ್ನು ಅವನ ಬಾಯಿಯಲ್ಲಿರಿಸಿದಳು.

ಆಗ ದುಷ್ಟದಮನದಲ್ಲಿ ದತ್ತದೀಕ್ಷನು ಆದ ಆ ಶೈಶವ ವೇಷದ ಶ್ರೀಹರಿಯು ಅವಳ ಸ್ತನವನ್ನು ಎರಡೂ ತನ್ನ ಪುಟ್ಟ ಕೈಗಳಿಂದ ಬಲವಾಗಿ ಅದುಮಿ ಅವಳ ಸ್ತನಕ್ಕೆ ಹಲ್ಲು ಹಚ್ಚಿ ಹರಣ ಕರಣ ಎರಡನ್ನೂ ಶ್ರೀಹರಿಯು ಸೆಳೆಯಹತ್ತಿದ. ಆಗ ವಿಲಕ್ಷಣವಾದ ವೇದನೆಯಿಂದ ಕರಳು ಕಿತ್ತಿದಂತಾಗಿ ಅವಳು ಕೆಟ್ಟದನಿಯಿಂದ ಚೀರಿ ಕೈಕಾಲು ಚೆಲ್ಲಿ ಕಣ್ಣು ಬೆಳ್ಳಗೆಮಾಡಿ ಒದರಿ

ಕೂಗಿ ಅಳಹತ್ತಿದಳು. ಅವಳ ಆ ಘೋರವಾದ ರೋದನ ಧ್ವನಿಗೆ ನೆಲನಡುಗಿ ಮುಗಿಲು ಬಿರಿದು ಗಂಡ್ಡ ಗವ್ಹರಗಳೂ ಕೂಡ ಗದಗಮಿಸಿ ಹೋದವು. ಆದರೂ ಬಾಲಕೃಷ್ಣನು ಅವಳನ್ನು ಬಿಡದೇ ಮೊಲೆಯನ್ನೇ ಕತ್ತರಿಸಿ ಪಂಚಪ್ರಾಣಗಳನ್ನೇ ಹೀರಿದಾಗ ಅವಳ ನಿಜರೂಪ ಬಯಲಾಗಿ ಆ ವಿದ್ರೂಪ ರಕ್ಕಸಿಯು ವಿಕರಾಳ ವೇಷದಿಂದ ಹತಳಾಗಿ ಕೆಳಗೆ ಬಿದ್ದಳು.

ಉಳಿದೆಲ್ಲ ಗೋಪಾಲಕರೂ ವಜ್ರಾಯುಧದಿಂದ ಹೊಡೆದು ಕೆಡವಿದಂತೆ ವ್ರಜಾಂಗಣದ ತುಂಬ ಆ ಉದ್ದ ಈ ಉದ್ದ ಬಿದ್ದ ಆ ದುರ್ದಾನವಿಯ ದೀರ್ಘೋತ್ತುಂಗ ದೇಹವನ್ನು ಕಂಡು ಆಶ್ಚರ್ಯಚಕಿತರಾಗಿ ಇದೇನು ಇದೇನು ಎನ್ನುತ್ತ ನಿಂತು ನೋಡಿ ನಂತರ ತಮ್ಮ ತಮ್ಮ ಮನೆಗೆ ಹೋದರು.

ಆಗ ನಂದಗೋಪನು ಯಶೋದೆಗೆ ''ಇವಳಾರು? ಇಲ್ಲಿಗೆ ಹೇಗೆ ಬಂದಿದ್ದಳು'' ಎಂದು ಕೇಳಲು ''ತನಗಾವುದೂ ಗೊತ್ತಿಲ್ಲ ಈ ಗದ್ದಲಕ್ಕೆ ನಾನು ಎಚ್ಚತ್ತೆ ಎಂದಳು. ಇದೆಲ್ಲದಕ್ಕೂ ಕಂಸನ ಕಪಟಕಾರಸ್ಥಾನವೇ ಕಾರಣ ಎಂದು ನಂದಗೋಪನು ಭಾವಿಸಿದ.

ಮುಂದೆ ಕೆಲದಿನ ಕಳೆದ ಬಳಿಕ ಚಿಕ್ಕ ಚಂದ್ರಸೂರ್ಯರಂತೆ ಎಸೆಯುವ ಆ ಬಲರಾಮ-ಕೃಷ್ಣರು ಅಂಬೆಗಾಲಿಕ್ಕುತ್ತ ವ್ರಜಭೂಮಿಯಲ್ಲಿ ಸಂಚರಿಸಹತ್ತಿದರು. ಸಮಾನವಾದ ವೇಷ, ವಯಸ್ಸು ವಪುಸ್ಸು ವರ್ಚಸ್ಸುಗಳಿಂದ ಒಂದೆ ಜೀವ ಎರಡು ಮೈಗಳಲ್ಲಿ ಬೆಳೆಯುತ್ತಿರುವಂತಿದ್ದ ಅವರಿಬ್ಬರೂ ಅಣ್ಣತಮ್ಮಂದಿರು ಹಾವಿನಂತೆ ಗೋಕುಲತುಂಬ ಹರಿದಾಡಿ ಹುಡಿಯಾಡಿದ ಆನೆಯ ಮರಿಯಂತೆ ಶೋಭಿಸುತ್ತಿದ್ದರು. ಒಮ್ಮೊಮ್ಮೆ ಮೈತುಂಬ ಬೂದಿ ಬಳೆದುಕೊಂಡು ಕುಳ್ಳುಮಣ್ಣುಗಳಲ್ಲಿ ಉರುಳಾಡಿದರೆ ಮತ್ತೊಮ್ಮೆ ಧೂಳಿ ಕೆಸರುಗಳಲ್ಲಿ ಹೊರಳಾಡಿಬರುತ್ತಿದ್ದರು. ಮಗದೊಮ್ಮೆ ದನಗಳ ಕೊಟ್ಟಿಗೆಯಲ್ಲಿ ಈಸಾಡಿ ಮೈಗೆಲ್ಲ ಗೋಮಯ ಗೋಮೂತ್ರಗಳು ಹತ್ತಿ ಮೆತ್ತಿ ಹೊಲಸಾದರೂ ಅವರು ಬಹಳೇ ಸುಂದರರೂ ಮೋಹಕರೂ ಆಗಿ ತೋರುತ್ತಿದ್ರ.

ಸಿಕ್ಕಕಡೆಗೆಲ್ಲ ಹರಿದುಹೋಗಿ ಬರುತ್ತಿದ್ದರು. ಅವರನ್ನು ತಡೆಯಲಿಕ್ಕೆ ನಂದಾದಿ ಗೋಪಾಲರು ಎಷ್ಟು ಪ್ರಯತ್ನಪಟ್ಟರೂ ಅವರು ಯಾವಾಗಲೋ ಎಲ್ಲರ ಕಣ್ಣು ತಪ್ಪಿಸಿ ನುಣುಚಿಕೊಂಡು ಹೋಗಿ ಕೆಟ್ಟಕೆಲಸ ಮಾಡಿಬರುತ್ತಿದ್ದರು.

## ಒರಳು ಎಳೆದು ಮರ ಉರುಳಿಸಿದ

ಒಂದುದಿನ ಕೃಷ್ಣನ ಈ ಕಿಡಿಗೇಡಿತನಕ್ಕೆ ಬೇಸತ್ತು ಯಶೋದೆಯ ಕೋಪದಿಂದ ಅವನನ್ನು ರಟ್ಟೆಹಿಡಿದು ಎಳೆದು ತಂದು ಚಕ್ಕಡಿಯ ಹತ್ತಿರ ನಿಲ್ಲಿಸಿ ಮನದಣಿ ಬೈದಳು. ಮತ್ತು ಅಲ್ಲಿಯೇ ಇದ್ದ ಹಗ್ಗವನ್ನು ತೆಗೆದುಕೊಂಡು ಅದರ ಒಂದು ತುದಿಯನ್ನು ಅವನ ಕೋಮಲವಾದ ಹೊಟ್ಟೆಗೆ ಬಿಗಿದು ಇನ್ನೊಂದು ತುದಿಯನ್ನು ಒರಳಿಗೆ ಸುತ್ತಿ ಕೃಷ್ಣನನ್ನು ಕಟ್ಟಿಹಾಕಿ ''ಇನ್ನು ಎಲ್ಲಿ ಹೋಗುತ್ತಿ? ಹೋಗು. ನಿನ್ನ ಶಕ್ತಿ ಎಷ್ಟಿದೆ ನೋಡಿ ಬಿಡುವೆ,'' ಎಂದು ನುಡಿದು ಒಳಗೆ ಕೆಲಸಕ್ಕೆ ಹೋದಳು. ಆಗ ಕೃಷ್ಣನ ಚಿಕ್ಕ ಬಾಲಕರಂತೆ ಚಾರುಚರಣಗಳಿಂದ ಚಂಕ್ರಮಣ ಮಾಡುತ್ತ ಒರಳನ್ನು ಜಗ್ಗಿಕೊಂಡೇ ಮುಂದೆ ನಡೆದನು. ಜನರೆಲ್ಲ ನಿಬ್ಬೆರಗಾಗಿ ನಿಟ್ಟಿಸುತ್ತ ನಿಂತುಕೊಂಡಾಗಲೇ ಮನೆಯ ಅಂಗಳವನ್ನು ದಾಟಿ ಬೀದಿಗಿಳಿದನು. ಹಾಗೆಯೇ ಆ ಕಲ್ಲಿನ ಒರಳನ್ನು ಎಳೆಯುತ್ತ ಮುಂಬರಿದು ಬೀದಿಯ

ವನಭೂಮಿಯಲ್ಲಿಯೇ ಅವಳಿ ಅರ್ಜುನ ವೃಕ್ಷಗಳ ನಡುವೆ ಹಾಯ್ದು ತಾನು ಪಾರಾಗಿ ಆಚೆಗೆ ನಿಂತು ಒರಳನ್ನೂ ಜಗ್ಗಹತ್ತಿದನು. ದೊಡ್ಡದಾದ ಆ ಒರಳು ಆ ಅವಳಿಗಿಡಗಳ ನಡುಸಂದಿಯಲ್ಲಿ ಹಿಡಿಸದೇ ಆ ಗಿಡಗಳ ಬಡ್ಡಿಗೆ ಅಡ್ಡಸಿಕ್ಕು ತಟ್ಟಿಸಿ ನಿಂತಾಗ ಆಚೆಗಿದ್ದ ಕೃಷ್ಣನು ಕಸುವಿನಿಂದ ಜಗ್ಗಿದನು. ಆಗ ಆ ಎರಡೂ ಗಿಡಗಳೂ ಬೊಡ್ಡಿಸಹಿತವಾಗಿ ಬುಡ ಮೇಲಾಗಿ ಉರುಳಿ ಕೃಷ್ಣನ ಎಡಕ್ಕೊಂದು ಬಲಕ್ಕೊಂದು ಬಿದ್ದವು. ಅವೆರಡರ ನಡುವೆ ಬಾಲಕೃಷ್ಣನು ಸುರಕ್ಷಿತವಾಗಿ ಸಿಕ್ಕು ನಗುತ್ತ ನಿಂತುಕೊಂಡಿದ್ದನು. ಜಗ್ಗಾಟದಲ್ಲಿ ಅವನ ಹೊಟ್ಟೆಗೆ ಕಟ್ಟಿದ ಹಗ್ಗವು ಮತ್ತಿಷ್ಟೂ ಬಿಗಿಯಾಗಿ ಪಟ್ಟಿಯಾಗಿ ಹುರಿಗೊಂಡಿತ್ತು.

ನದಿಗೆ ಹೋಗಿಬರುವ ಗೋಪಿಯರು ಅದನ್ನು ನೋಡಿ ಗಾಬರಿಯಾಗಿ ಚೀರುತ್ತ ಹಾರುತ್ತ ಹೋಗಿ ನದಿಯಲ್ಲಿದ್ದ ಯಶೋದೆಗೆ "ಬೇಗ ಬಾ ಯಶೋದೆ! ಎಷ್ಟು ತಡಮಾಡುವಿ! ನಮ್ಮ ಊರಹೊರಗೆ ಬೇಡಿದವರ ಬಯಕೆಗಳನ್ನೆಲ್ಲ ಪೂರ್ಣಮಾಡುವ, ಆದುದ ರಿಂದಲೇ ಊರ ಜನರೆಲ್ಲರೂ ಸೇವಾ ಸೂತ್ರಗಳಿಂದ ಪೂಜಿಸುವ ಪವಿತ್ರವಾದ ಆ ಎರಡೂ ಅರ್ಜುನ ವೃಕ್ಷಗಳು ಅಕಸ್ಮಾತ್ತಾಗಿ ನಿನ್ನ ಮಗನಾದ ಕೃಷ್ಣನ ಮೇಲೆ ಉರುಳಿ ಬಿದ್ದಿರುತ್ತವೆ.

ಕರುವಿನ ಕೊರಳಿಗೆ ಕಣ್ಣಿಯನ್ನು ಕಟ್ಟಿದಂತೆ ಕೃಷ್ಣನ ಹೊಟ್ಟೆಗೂ ಬಿಗಿಯಾದ ಒಂದು ಹುರಿಕಟ್ಟಾದ ಹಗ್ಗವನು ನೀನು ಬಿಗಿದದ್ದರಿಂದ ಎಲ್ಲಿಯೂ ಹೋಗಲಿಕ್ಕೆ ಬಾರದೆ ಅವನು ಅದೆರಡೂ ಗಿಡಗಳ ನಡುವೆಯೇ ನಗುತ್ತಲೇ ಇದ್ದಾನೆ.

ಏಳು ಮೂರ್ಖಳೆ! ಬಹಳ ಬುದ್ಧಿವಂತಳಿರವಿ. ಯಾರಾದರೂ ಇಂಥ ಬಿಗಿಯಾದ ಹಗ್ಗದಿಂದ ಒರಳಿಗೆ ಕೂಸನ್ನು ಕಟ್ಟುವರೇ! ಬೇಗ ಓಡು. ಮೂಢ ಮಹಿಳೆಯೇ! ಸಾವಿನ ಬಾಯಿಂದ ಪಾರಾದ ಮಗನನ್ನು ಮೊದಲು ಹಗ್ಗಬಿಚ್ಚಿ ಎತ್ತಿಕೋ ಹೋಗು" ಎಂದು ನೀರಿಗೆ ಬಂದ ನಾರಿಯರೆಲ್ಲರೂ ಬೈಯ್ಯು ಹತ್ತಿದರು.

ಆಗ ಅಂಜಿ ಗಾಬರಿಯಾಗಿ "ಅಯ್ಯೋ ಕೃಷ್ಣಯ್ಯ ಎಲ್ಲಿರುವಿ!" ಎಂದು ಒದರುತ್ತ ಓಡುತ್ತ ಯಶೋದೆಯು ಆ ಗಿಡಗಳಿದ್ದ ಸ್ಥಳಕ್ಕೆ ಬಂದಳು. ಅಲ್ಲಿ ಹೊರಳಿ ಬಿದ್ದ ಆ ಎರಡೂ ಹೆಮ್ಮರಗಳ ನಡುವೆ ಹೊಟ್ಟೆಗೆ ಕಟ್ಟಿದ ಹುರಿಗೊಂಡ ಹಗ್ಗದಿಂದ ಆ ಒರಳನ್ನು ಕೃಷ್ಣನು ಇನ್ನೂ ಜಗ್ಗುತ್ತಲೇ ಇದ್ದನು.

ಅಲ್ಲಿ ನೆರೆದ ಅನೇಕ ಗೋಪಾಲಕುಲದ ತರುಣ ವೃದ್ಧರೆಲ್ಲರೂ ಅದನ್ನು ಬೆಕ್ಕಸ ಬೆರಗಾಗಿ "ದೆವ್ವಗಾಳಿಯಿಲ್ಲ, ಜಡಿಮಳೆಯಿಲ್ಲ, ಮದ್ದಾನೆ ಬಂದು ತಿಕ್ಕಿಲ್ಲ. ಅಂದಬಳಿಕ ಇಂಥ ಗಗನಚುಂಬಿತವಾದ ಗಿಡಗಳು ಹೇಗೆ ಬಿದ್ದವು? ಮತ್ತು ಈ ಗಿಡಗಳು ನಮ್ಮ ವ್ರಜವಾಸಿಗಳಿಗೆಲ್ಲ ಕಲ್ಪವೃಕ್ಷದಂತೆ ಕಾಮಿತಾರ್ಥ ಪ್ರದಗಳಾಗಿದ್ದವು. ಇವುಗಳ ಸೇವೆಯಿಂದ ಜನರು ತಮಗೆ ಬೇಕಾದ ಫಲಗಳನ್ನು ಪಡೆಯುತ್ತಲಿದ್ದರು. ಆದುದರಿಂದ ಈ ಗ್ರಾಮದೇವತೆಯಂತಿರುವ ಈ ಅವಳಿ ವೃಕ್ಷಗಳು ಬಿದ್ದದ್ದು ಊರಿಗೇ ಅವಲಕ್ಷಣ ಎಂದು ತೋರುತ್ತದೆ. ಘೋರ ಪೂತನಾ ಶಕಟಭಂಗವಾದ ಬಳಿಕ ಇದುಮೂರನೆಯ ಉತ್ಪಾತವಾಗಿದೆ. ಆದುದರಿಂದ ನಾವಿನ್ನು ಇಲ್ಲಿರುವದು ಒಳ್ಳೆಯದಲ್ಲವೆಂದು ತೋರುವದು. ನಂದಗೋಪ ! ಇಷ್ಟಾದರೂ ಈ ಗಿಡಗಳು ನಿನ್ನ ಮಗನ ಮೇಲೆ ಪ್ರಸನ್ನವಾಗಿಯೇ ಇವೆಯೆಂದು ತೋರಿಬರುತ್ತದೆ. ಯಾಕೆಂದರೆ ಈ ಗಿಡಗಳು ಬೀಳುವಾಗ

ನಿನ್ನ ಮಗನು ಆಕಸ್ಮಾತ್ತಾಗಿ ಇವುಗಳ ಕೆಳಗೇ ಇದ್ದರೂ ಅವು ಇವನ ಮೇಲೆ ತಮ್ಮ ವಿಶಾಲವಾದ ವೃಕ್ಷಶರೀರದ ಒಂದು ಟಿಸಿಲು ಟೊಂಗೆಯೂ ಬೀಳದಂತೆ ಹೋಳಾಗಿ ಮಗ್ಗಲು ಬಿದ್ದು ನಿನ್ನ ಮಗನನ್ನು ಬದುಕಿಸಿವೆ. ಇದು ನಿನ್ನ ಮಗನ ಮೇಲೆ ಆ ವೃಕ್ಷದೇವತೆಯ ಪರಮ ಪ್ರಸಾದವೇ ಸರಿ'' ಎಂದು ಮಾತನಾಡುತ್ತಲಿದ್ದರು.

ಅದನ್ನು ಕೇಳಿ ನಂದಗೋಪನಾದರೂ ದುಃಖಾಶ್ರು ಹರ್ಷಾಶ್ರುಗಳಿಂದ ಕಣ್ಣು ಒತ್ತರಿಸಿ ಬಂದು ಧಾವಿಸಿ ಹೋಗಿ ಆ ಹಗ್ಗವನ್ನು ಬಿಚ್ಚಿ ಒರಳಿನ ಬಂಧನದಿಂದ ಕೃಷ್ಣನನ್ನು ಬಿಡಿಸಿಗೊಂಡು ತಂದು ಪ್ರೀತಿಯಿಂದ ತೊಡೆಯ ಮೇಲೆ ಕುಳ್ಳಿರಿಸಿಗೊಂಡು ಮೈದಡವಿ ಮುದ್ದಾಡಿದನು. ಮುಂಗುರುಳು ಮೂಸಿ ಮೃತ್ಯುಮುಖದಿಂದಲೇ ಮಗು ಪಾರಾಗಿ ಬಂದಂತಾಯಿತೆಂದು ಮೈಮೇಲೆಲ್ಲ ಸ್ನೇಹದಿಂದ ಕೈಯಾಡಿಸಿದನು. ಮತ್ತು ಇಂಥ ಮುದ್ದುಮಗನ ಹೊಟ್ಟೆಗೆ ಹಗ್ಗವನ್ನು ಕಟ್ಟಿದ ಹೆಂಡತಿಯನ್ನು ಹಳಿದು ಅವನನ್ನು ಕರೆದುಕೊಂಡು ಮನೆಗೆ ಹೋದನು.

ಮುಂದೆ ಆ ಕೃಷ್ಣನು ಆ ಗೋಕುಲದಲ್ಲಿ 'ದಾಮೋದರ'-ಹೊಟ್ಟೆಗೆ ಹಗ್ಗ ಕಟ್ಟಿದ ಹುಡುಗನೆಂದೇ ಪ್ರಸಿದ್ಧನಾದ್ದರಿಂದ ಗೋವಿಂದ-ದಾಮೋದರ ಎಂದು ಗೋಪಿಕೆಯರು. ಅವನ ಮೇಲೆ ಅನೇಕ ಹಾಡುಗಳನ್ನು ಹೊಸೆದು ಹೌಸಿನಿಂದ ಹಾಡಿ ಪಾಡುತ್ತಲಿದ್ದರು.

## ಗೋಕುಲ ತೊರೆದು ವೃಂದಾವನಕ್ಕೆ ಪ್ರಯಾಣ

ಹೀಗೆ ರಾಮ-ಕೃಷ್ಣರಿಬ್ಬರೂ ಆ ಗೋಕುಲದಲ್ಲಿಯೇ ತಮ್ಮ ಬಾಲ್ಯವನ್ನು ಕಳೆದು ಏಳುವರ್ಷದವರಾಗಿ ಬೆಳೆದರು. ಆಗ ದಾಮೋದರನು ಹಳದಿಬಣ್ಣದ (ಪೀತಾಂಬರ) ಬಟ್ಟೆಯನ್ನೂ ಸಂಕರ್ಷಣನು ಕರಿವಸ್ತ್ರವನ್ನೂ (ನೀಲಾಂಬರಿ) ಉಟ್ಟು ಇಬ್ಬರೂ ಜುಲುಪಿ ಬಿಟ್ಟು ಕೈಯಲ್ಲಿ ಕೊಳಲು ಪಿಡಿದು ಮಧುರ ಮಧುರವಾಗಿ ಅದನ್ನು ಬಾರಿಸುತ್ತ ಆಕಳು ಕರುಗಳನ್ನು ಕಾಯತೊಡಗಿದರು ದನಕಾಯಲಿಕ್ಕೆಂದು ಅವರು ಅಡವಿಗೆ ಹೋದಾಗ ಕಿವಿಯ ಸಂದಿಯಲ್ಲಿ ನವಿಲುಗರಿಯನ್ನು ಸಿಕ್ಕಿಸಿ ತಲೆಯ ಮೇಲೆ ಚಿಗುರೆಲೆಗಳನ್ನು ಧರಿಸಿ ವನಮಾಲೆಯನ್ನು ಕೊರಳಲ್ಲಿ ಹಾಕಿಕೊಂಡು ಎಲೆಗಿಡದಂತೆ ತೋರುತ್ತಿದ್ದರು. ಒಮ್ಮೊಮ್ಮೆ ಶಿರಸ್ಸಿನಲ್ಲಿ ಕಮಲಕುಸುಮಗಳನ್ನು ಧರಿಸಿ ಹಗ್ಗಗಳನ್ನೇ ಜನಿವಾರದಂತೆ ಹೆಗಲಿಗೆ ಹಾಕಿ ಕೊಳಲು ಊದಿ, ಆಟವಾಡಿ, ನಕ್ಕು ನಗಿಸಿ, ತಳಿರುತಲ್ಪದಲ್ಲಿ ಒರಗಿ, ಎಲ್ಲೆಡೆಗೂ ಓಡಾಡಿ, ಸಿಂಹದ ಮರಿಗಳಂತೆ ಜಗಿದಾಡಿ, ಇಡೀ ವನವೆಲ್ಲ ಚಾರುಚೈತನ್ಯಯುಕ್ತವಾಗಿ ಕಾಂತಿಮಯವಾಗುವಂತೆ ಮಾಡಿದರು. ಅವರು ಅವುಗಳನ್ನು ಕಾಯುವ ನೆವದಿಂದ ಅಲ್ಲಿಗೆ ಬಂದಾಗಿನಿಂದ ಆ ವನಕ್ಕೆ ಒಂದು ಕಳೆ ಬಂದು ಅದು ಜೀವತುಂಬಿದಂತಾಯಿತು.

ಒಂದು ದಿನ ದಾಮೋದರನು ಸಂಕರ್ಷನಿಗೆ ''ಅಣ್ಣ, ಇನ್ನು ಮೇಲೆ ನಾವಿಲ್ಲಿ ಇದೇ ವನದಲ್ಲಿ ಗೋ ಗೋಪಾಲಕರ ಜೊತೆಗೆ ವಿಹರಿಸುವದು ಶಕ್ಯವೆನಿಸುವುದಿಲ್ಲ. ಮೊದಲು ಗುತ್ತಾಗಿ ಬೆಳೆದ ಗಿಡಗುಂಪುಗಳಿಂದ ನಿಬಿಡವಾದ ಈ ವನವನ್ನು ಈಗ ಗೋಪಾಲಕರು ಕಟ್ಟಿಗೆಗಾಗಿ ಕಡಿದುಬಿಟ್ಟಿದ್ದರಿಂದ ಅದೆಲ್ಲವೂ ವನ ಹೋಗಿ ಬಯಲಾಗಿದೆ. ಉರುವಲಕ್ಕಾಗಿ ಕಟ್ಟಿಗೆ ತರಲು ನಾವು ದೂರ ದೂರ ಹೋಗಬೇಕಾಗಿ ಬಂದಿದೆ. ಹಿಂದೆ ಒಂದಾನೊಂದು ಕಾಲದಲ್ಲಿ ಹಚ್ಚ ಹಸಿರು ಮುರಿಯುವ ಹುಲ್ಲುಗಾವಲುಗಳೆಲ್ಲ ದನಮೇದು ಕರು ತುಳಿದು

ಗಟ್ಟಣೆ ಮಾಡಿದಂತೆ ಗಟ್ಟಿಯಾಗಿ ಬಿರಿಸು ಜಂಜರಭೂಮಿಯಾಗಿದೆ. ಅಲ್ಲಲ್ಲಿ ಇದ್ದ ತುಸು ಹುಲ್ಲು ಕೂಡ ಉಪ್ಪೊಡೆದು ಬಿಟ್ಟಿದ್ದರಿಂದ ತಿನ್ನಲು ಬಾರದಂತಾಗಿದೆ. ಈ ವನದಲ್ಲಿ ನೀರೂ ವಿಶೇಷವಾಗಿಲ್ಲ. ಆದುದರಿಂದ ನಮ್ಮ ದನಕರುಗಳಿಗೆ ಬಹಳೇ ತೊಂದರೆಯಾಗುವುದು. ಇಲ್ಲಿ ದವಸಧಾನ್ಯ, ಕಾಯಿಪಲ್ಲೆ, ಸೌದೆ, ಹೈನ ಎಲ್ಲವನ್ನೂ ಕೊಳ್ಳುವ ಪ್ರಸಂಗವು ಗೋಪಾಲಕರಿಗೆ ಬರಹತ್ತಿದ್ದರಿಂದ ಈ ಹಳ್ಳಿಯೂ ಬರಬರುತ್ತ ಪಟ್ಟಣವಾಗತೊಡಗಿದೆ. ಆದುದರಿಂದ ನಾವು ನಮ್ಮ ಮುಖ್ಯ ಧನವಾದ ದನಗಳಿಗೆ ಸಾಕಷ್ಟು ತಿನ್ನಲು ಹುಲ್ಲು, ಕುಡಿಯಲು ನೀರು ದೊರಕುವಂಥ ಬೇರೆ ಸ್ಥಳವನ್ನು ಶೋಧಮಾಡಿ ಅಲ್ಲಿಗೆ ಹೋಗುವದು ಒಳಿತು. ಇಲ್ಲಿಯಂತೂ ಹುಲ್ಲು ಇಲ್ಲ, ಗಿಡಗಳಿಲ್ಲ, ನೀರಿಲ್ಲ, ಅಡವಿಯಿಲ್ಲ, ಆದುದರಿಂದ ಇಲ್ಲಿ ಅನ್ನವೂ ಇಲ್ಲ, ಸವಿ ಇಲ್ಲ, ಶೋಭೆ ಇಲ್ಲ, ಆನಂದವಿಲ್ಲ, ಉತ್ಸಾಹವಿಲ್ಲ.

ಇಲ್ಲಿಯೇ ಸಮೀಪದಲ್ಲಿ ವೃಂದಾವನವೆಂಬ ಒಂದು ಸುಂದರವನವಿದ್ದು ಅಲ್ಲಿ ಸ್ವಚ್ಛ ನೀರು, ಹಚ್ಚ ಹಸಿರು, ಹೆಚ್ಚು ಹುಲ್ಲುಗಾವಲುಗಳಿವೆಯೆಂದು ಕೇಳಿದ್ದೇನೆ. ಅಲ್ಲಿ ಸೊಳ್ಳೆಗಳ ಕಾಟ ಕಡಿಮೆ ಇದ್ದು ಮುಳ್ಳುಕಂಟಿಗಳೂ ವಿಶೇಷವಾಗಿಲ್ಲವಂತೆ. ಅಲ್ಲಿ ಯಮುನಾತೀರದ ಕುಂಜನಿಕುಂಜಗಳೂ, ಕದಂಬ ವನಗಲೂ ಒಳ್ಳೇ ಮನೋಹರವಾಗಿರುವವು. ಅಲ್ಲಿ ತೀಡುವ ತಂಗಾಳಿಯು ತನ್ನ ಮಂದಸ್ಪಂದ ಹಾಗೂ ಸದಾ ಸೌಗಂಧದಿಂದ ಎಲ್ಲ ಋತುಗಳಲ್ಲಿಯೂ ಆನಂದದಾಯಕವಾಗಿರುವದು. ಚೆಲುವಿನ ನೆಲೆವೀಡಾದ ಅಲ್ಲಿಯ ನಿಸರ್ಗರಮ್ಯ ಶಾಂತ ಕಾಂತಾರಗಳಲ್ಲಿ ಗೋಪಕಾಂತೆಯರು ಸುಖವಾಗಿ ನಿರ್ಭಯವಾಗಿ ಸಂಚರಿಸಬಹುದು.

ಮತ್ತು ಆ ವೃಂದಾವನದ ಹತ್ತಿರದಲ್ಲಿಯೇ ಮಂದರಗಿರಿಯಂತೆ ಉಚ್ಚ ಶಿಖರವುಳ್ಳ ಹಾಗೂ ನಂದನವನದಂತೆ ಸುಮಸುಂದರವಾದ ಗೋವರ್ಧನ ಎಂದ ಒಂದು ಗಿರಿಯುಂಟು. ಅದರ ಮಧ್ಯಭಾಗದಲ್ಲಿ ಅನೇಕಶಾಖೋಪಶಾಖೆಗಳಿಂದ ಹೆಮ್ಮರವಾಗಿ ಬೆಳೆದು ಒಂದು ಯೋಜನದಷ್ಟು ಎತ್ತರವಾಗಿ ಮುಗಿಲೊಳಗೆ ನಿರಂತರ ನಿಂತುಕೊಂಡ ನೀಲ ನೀರ ಮೇಘದಂತೆ ಮೆರೆಯುವ ಭಾಂಡೀರ ಎಂಬ ಹೆಸರಿನ ಒಂದು ಆಲದಮರವುಂಟು.

ಮತ್ತು ನಂದನವನದ ನಡುವೆ ಮಂದಾಕಿನಿ ನದಿ ಹರಿದಂತೆ ಆ ವೃಂದಾವನ ಭೂಮಿಯ ಬೈತಲ ತೆಗೆದಂತೆ ನಟ್ಟನಡುವೆ ಕಾಲಿಂದೀ ನದಿ ಹರಿದಿರುವುದು. ನಾವು ಅಲ್ಲಿದ್ದು ಗೋವರ್ಧನ, ಭಾಂಡೀರವನ ಹಾಗೂ ಯಮುನೆ ಈ ಮೂರರ ಉಪಯೋಗವನ್ನೂ ಮಾಡಿಕೊಳ್ಳಬಹುದು. ಆದ್ದರಿಂದ ನಾವೀಗ ನಿಃಸ್ಸತ್ವವಾದ ಈ ಗೋಕುಲದ ರುಕ್ಷಾರಣ್ಯವನ್ನು ಬಿಟ್ಟು ವೃಂದಾವನಕ್ಕೆ ಹೊರಡೋಣ. ಆದರೆ ಗೋಪಾಲಕರು ಏನೂ ಕಾರಣವಿಲ್ಲದೇ ಈ ವ್ರಜಸ್ಥಳಿಯನ್ನು ಬಿಡಲು ಒಪ್ಪುವದಿಲ್ಲ. ಅದಕ್ಕಾಗಿ ನಾವು ಇಲ್ಲಿ ಏನಾದರೂ ಉಪದ್ರವವನ್ನು ಉಂಟು ಮಾಡಿದರೆ ತಾವಾಗಿ ಈ ಸ್ಥಾನವನ್ನು ಬಿಟ್ಟುಹೊರಡುವರು.

ಭಗವಂತನು ಹೀಗೆ ತನ್ನ ಅಭಿಪ್ರಾಯವನ್ನು ಅಣ್ಣ ಬಲರಾಮನ ಮುಂದೆ ಹೇಳುತ್ತಿರುವಂತೆಯೇ ಅವನ ಶರೀರದಿಂದ ಸಾವಿರಾರು ರಕ್ತಪಿಪಾಸುಗಳಾದ ಮಾಂಸಾ ಶನಿ ತೋಳಗಳು ಹೊರಬಿದ್ದವು. ಐದೈದು ಹತ್ತತ್ತು ಇಪ್ಪತ್ತು ಮೂವತ್ತರಂತೆ ಗುಂಪುಗಟ್ಟಿ ಹೊರ ಹೊರಟ ಅವು ಗೋಕುಲದಲ್ಲಿ ಹೊಕ್ಕು ಗೋಪ ಗೋಪಿಯರ ಮೈ ಮೇಲೆ ಏರಿ ಹೋಗಿ ಹಿಂಸೆಯನ್ನುಂಟುಮಾಡಿದವು. ಅವು ರಾತ್ರಿಯಲ್ಲಿ ದನದ ದಡ್ಡಿಗೆ ಹಾರಿ ಮಣಕುಗಳನ್ನು ಕೊಂದವು. ಕರುಗಳನ್ನು ತಿಂದವು. ಆಕಳುಗಳನ್ನು ಹೆದರಿಸಿದವು. ಎತ್ತುಗಳನ್ನು ಓಡಿಸಿದವು.

ಚಿಕ್ಕಮಕ್ಕಳನ್ನು ಕೂಡ ಬಾಯಲ್ಲಿ ಕಚ್ಚಿಕೊಂಡೊಯ್ದುವು. ಇದರಿಂದ ಯಾರೂ ಅಡವಿಗೆ ಹೋಗದಂತಾಯಿತು. ಆಕಳಗಳನ್ನು ಹೊರಗೆ ಬಿಡುವಂತಿಲ್ಲ. ಹೊರಗಿನಿಂದ ತರುವಂತಿಲ್ಲ. ನದಿಗೆ ಹೋಗುವಂತಿಲ್ಲ. ಒಟ್ಟಾರೆ ಯಾರೂ ಮನೆಬಿಟ್ಟು ಹೊರ ಬೀಳದಂತೆ ಮನೆಯಲ್ಲಿಯೇ ಬಾಗಿಲು ಹಾಕಿಕೊಂಡು ನಿರುದ್ಯೋಗ ನಿಷ್ಕ್ರಿಯರಾಗಿ ಎಲ್ಲರೂ ನಿಶ್ಚೇಷ್ಟರಂತೆ ಕುಳಿತುಕೊಳ್ಳುವ ಪ್ರಸಂಗವು ಬಂದಿತು. ಮನೆ ಮನೆಗೂ "ಅಯ್ಯೋ! ನನ್ನ ಕೂಸನ್ನೆ ಕಚ್ಚಿಕೊಂಡು ಹೋಯಿತು. ನನ್ನ ಅಣ್ಣನನ್ನು ತೋಳ ಹಿಡಿಯಿತು. ನನ್ನ ಮಗನು ವೃಕವೃಂದದಲ್ಲಿ ಸಿಕ್ಕು ಸತ್ತುಹೋದ" ಎಂಬ ಗೋಳಾಟ ನರಳಾಟಗಳ ಕರುಳು ಕೊರೆಯುವ ಕರುಣ ಸ್ವರವು ಕರ್ಣಕಠೋರವಾಗಿ ಕೇಳಿ ಬರುತ್ತಲಿತ್ತು. ಮೂಕ ಪ್ರಾಣಿಗಳಾದ ದನಕರುಗಳ ಹಂಬಾರುವವಂತೂ ಎಲ್ಲರ ಕಿವಿಯಲ್ಲಿ ಕಟ್ಟಿದಂತಾಗಿತ್ತು.

ಆಗ ಘೋಷದಲ್ಲಿರುವ ಹೆಣ್ಣು ಮಕ್ಕಳೂ ಗಂಡಸರೂ ಎಲ್ಲರೂ ಒಂದೆಡೆ ಸೇರಿ ಇನ್ನು "ನಾವು ಇಲ್ಲಿದ್ದು ಉಪಯೋಗವಿಲ್ಲ. ಈ ತೋಳಗಳ ಬಾಯಿಗೆ ನಾವೆಲ್ಲಬಿದ್ದು ಸಾಯುವದಕ್ಕಿಂತ ಮೊದಲು ಈ ಸ್ಥಳವನ್ನು ಬಿಟ್ಟು ಮತ್ತೆ ಬೇರೆ ಕಡೆಗೆ ಹೋಗೋಣ. ನಾವೂ ನಮ್ಮ ಜೀವಾಧಾರವಾದ ಈ ಹಸು ಶಿಶುಗಳೂ ಎಲ್ಲಿ ನಿರ್ಭಯವಾಗಿ ಇದ್ದು ಸುಖದಿಂದ ಬದುಕಬಲ್ಲೆವೊ ಅಂಥ ವೃಂದಾವನಕ್ಕೆ ಎಲ್ಲರೂ ಹೊರಟುಬಿಡೋಣ" ಎಂದು ವಿಚಾರ ಮಾಡಿದರು.

ಅವರ ನಿರ್ಧಾರವನ್ನು ಕೇಳಿ ನಂದಗೋಪನು "ಹೊರಡುವದೇ ಆದರೆ "ಶುಭಸ್ಯ ಶೀಘ್ರಮ್" ಎಂದು ಹೇಳಿದಂತೆ ಇಂದೇ ಹೊರಟುಬಿಡೋಣ" ಎಂದು ಹೇಳಿ ಘೋಷದಲ್ಲಿ ಎಲ್ಲ ಕಡೆಗೂ ಸಾಮಾನು ಕಟ್ಟಿ ಎಲ್ಲರೂ ಹೊರಡಬೇಕೆಂದು ಅಪ್ಪಣೆಮಾಡಿದನು.

ಅದರಂತೆ ಎಲ್ಲ ಗೋಪಗೋಪಿಯರೂ ಉತ್ಸಾಹದಿಂದ ತಮ್ಮ ತಮ್ಮ ಭಾಂಡಿ ಸಾಮಾನುಗಳನ್ನೆಲ್ಲ ಎತ್ತಿನ ಬಂಡಿಗಳಲ್ಲಿ ಹಾಕಿ ಅದರ ಹಿಂದೆ ಕರುಗಳ ಹಿಂಡನ್ನೂ ಅದರ ಹಿಂದೆ ದನಗಳ ದಂಡನ್ನೂ ಹೊರಡಿಸಿ ತಾವೂ ಹೊರಟರು. ಹಾಲು ಮೊಸರು ತುಂಬಿದ ಕೊಡಗಳನ್ನು ತಲೆಯಮೇಲಿಟ್ಟುಕೊಂಡು ಅವ್ಯಾಜ ಮನೋಹರಿಯರಾದ ಆ ಬಲ್ಲವ ನಾರಿಯರು ದಾರಿಯಲ್ಲಿ ನಡೆದಾಗ ಮುಗಿಲಿನಿಂದ ಇಳಿದು ತಾರೆಯರ ತಂಡವೇ ಪ್ರಯಾಣ ವನ್ನು ಕೈಕೊಂಡಂತೆ ತೋರುತ್ತಲಿತ್ತು. ಹಸಿರು, ಹಳದಿ, ಕಪ್ಪು, ಕೆಂಪು, ಬಣ್ಣದ ಬಗೆಬಗೆಯ ಬಟ್ಟೆಗಳನ್ನುಟ್ಟು ಬೀದಿಯಲ್ಲಿ ಬಳ್ಳಿಮೈಯನು ಬಳಕಿಸುತ್ತ ನಡೆದ ಆ ನಾರಿಯರು ದಾರಿಗುಂಟ ಕಾಮನಬಿಲ್ಲಿನ ಕಾಂತಿಯ ಕಮಾನುಗಳನ್ನು ಕಟ್ಟುತ್ತಲೇ ನಡೆದಿದ್ದರು. ನಡುವೆ ನಡೆದ ಬಂಡಿಗಳ ಗುಂಪಿನ ಸುತ್ತಲೂ ಸಾವಕಾಶವಾಗಿ ಸಾಗಿದ ಗೋಪಾಲಕರ ಗುಂಪು ಗಾಳಿಗೆ ಹೊಯ್ದಾಡುವ ಹಡಗುಗಳುಳ್ಳ ಕಡಲಿನಂತೆ ಶೋಭಿಸುತ್ತಿತ್ತು. ಇವರು ಬಿಟ್ಟಕೂಡಲೇ ಆ ವ್ರಜಸ್ಥಾನವು ಶೂನ್ಯವಾಗಿ ಕಾಗೆಗಳಿಂದ ಆಕೀರ್ಣವಾಗಿಹೋಯಿತು. ಅಲ್ಪಾವಕಾಶದಲ್ಲಿಯೇ ಅವರೆಲ್ಲರೂ ವೃಂದಾವನಕ್ಕೆ ಬಂದು ಮುಟ್ಟಿದರು.

ಅಲ್ಲಿ ಅವರು ಮನುಷ್ಯರಿಗೂ ಹಾಗೂ ದನಗಳಿಗೂ ಪ್ರಶಸ್ತವಾಗಿರಲು ಅನುಕೂಲ ವಾಗುವಂತೆ ವಿಶಾಲ ಸ್ಥಳವೊಂದನ್ನು ಆರಿಸಿ ಅದರ ಸುತ್ತಲೂ ಅರ್ಧ ಚಂದ್ರಾಕಾರವಾಗಿ ತಮ್ಮ ಎಲ್ಲ ಚಕ್ಕಡಿಗಳನ್ನು ನಿಲ್ಲಿಸಿದರು. ಅದರ ಪರಿಘವು ಎರಡು ಯೋಜನವಿದ್ದು ವ್ಯಾಸವು ಒಂದು ಯೋಜನದಷ್ಟು ವಿಸ್ತೀರ್ಣವಿದ್ದಿತು. ಅದರ ಸುತ್ತುಮುತ್ತು ಮುಳ್ಳುಬಳ್ಳಿ, ಕೆಟ್ಟಜಾಲಿ ಮೊದಲಾದ ಕಂಟಕಿ ವೃಕ್ಷಗಳು ಎತ್ತಲೂ ಎತ್ತರವಾಗಿ ಬೆಳೆದಿದ್ದರಿಂದ ಆ ಗೋಪಘೋಷಕ್ಕೆ

ನೈಸರ್ಗಿಕ ರಕ್ಷಣೆ ಒದಗಿದಂತಾಗಿತ್ತು. ಅದರ ಮಧ್ಯದಲ್ಲಿ ಗೋಪಾಲಕರೆಲ್ಲ ಗಿಡದ ಕಟ್ಟಿಗೆ ಬಂಜು ಬಿದಿರು ಗರಿಕೆಗಳಿಂದ ಬೇರೆ ಬೇರೆ ಯಾಗಿ ತಮ್ಮ ತಮ್ಮ ಮನೆಮಾರು, ಕಟ್ಟೆ, ಕೊಟ್ಟಿಗೆಗಳನ್ನು ಕಟ್ಟಿಕೊಳ್ಳತೊಡಗಿದರು. ಮನೆ ಕಟ್ಟಿ, ಮೇಲೆ ಎಲೆತೊಪ್ಪಲಗಳನ್ನು ಹೊದಿಸಿ, ಒಳಗೆ ಮೊಸರು ಕಡೆಯುವ ಕಂಬಗಳನ್ನು ನೆಟ್ಟು, ಹೈನ ವಿಡುವ ನೆಲವುಗಳನ್ನೂ ಅವನ್ನು ಜೋತುಬಿಡಲು ಗೂಟ, ನಾಗೊಂದಿಗಳನ್ನು ರಚಿಸಿದರು. ಒರಳುಗಳನ್ನು ಕೂಡಿಸಿದರು. ಪಕ್ಷಿಪಾರಾವತಗಳಿಗೆ ಕೂಡಲು ಜಾಳಿಗೆ ಮಾಳಿಗೆಗಳನ್ನು ತಯಾರಿಸಿದರು. ಗೋದಲೆಗಳಲ್ಲಿ ಹಸುಗಳನ್ನು ಕಟ್ಟಲು ಗಟ್ಟಿಗೂಟಗಳನ್ನು ನೆಡಿಸಿ ಅವುಗಳಿಗೆ ಕಣ್ಣಿಗಳನ್ನು ಬಿಗಿದು ಮತ್ತು ಕಡ ಗೋಲು ಕಂಬಗಳಿಗೆ ಹಗ್ಗಗಳನ್ನು ಕಟ್ಟಿದರು. ಉಳಿದೆಲ್ಲ ಹೊಸಮನೆ ಸಿದ್ಧತೆ ವೇದಿಕೆಯನ್ನು ಮಾಡಿದ ಬಳಿಕ ಗೋಪನಾರಿಯರು ಮನೆ, ಅಂಗಳ, ಗೋದಲೆ, ವೃಂದಾವನಗಳನ್ನು ಸಾರಿಸಿ, ರಂಗವಲ್ಲಿ ಹಾಕಿ ಪೂರ್ವಾಭಿಮುಖವಾಗಿ ದೀಪಹಚ್ಚಿ ಇಟ್ಟರು. ನದಿಯ ದಾರಿಯಲ್ಲಿ ಮಂಟಪಾಕಾರವಾಗಿ ಮುಂದೆ ಹಾಯ್ದ ಗಿಡದ ಶಾಖೆಗಳನ್ನು ಕೈಯಿಂದ ಓರೆಮಾಡಿ ನೀರು ತರತಕ್ಕ ಗೊಲ್ಲತಿಯರು ಮಿಂಚಿನ ಮಹಿಳೆಯರಂತೆ ಅತ್ತಿತ್ತ ಪ್ರಾದೇಶಿಕ ಸೌಂದರ್ಯವನ್ನು ನೋಡುತ್ತ ಸಂಚರಿಸುತ್ತಲಿದ್ದರು.

ಅಲ್ಲಿಯ ನೀರು ಶುಚಿ, ಅನ್ನ ರುಚಿ, ಧಾನ್ಯ ಸವಿ ಹುಲ್ಲು ಹಸಿರಾಗಿ ಸ್ವಾದಿಷ್ಟ ವಾಗಿದ್ದುದರಿಂದ ಆಕಳುಗಳು ಯಥೇಷ್ಟ ಹಿಂಡಹತ್ತಿದವು. ದಿವ್ಯವಾದ ಗವ್ಯರಸಾಯನದಿಂದ ಹೃಷ್ಟರಾದ ಗೋಪ್ಪಗೋಪಿಯರು ಪರಿಪುಷ್ಟರಾಗಿ ಸುಖದಿಂದ ಇದ್ದರು. ಅಲ್ಲಿ ಬೇಸಿಗೆ ಇದ್ದರೂ ವಂಸತ ಋತುವಿನ ಗಿಡಗುಂಪುಗಳ ತಂಪಿನಿಂದ ಬಿಸಿಲಿನ ಬೇಗೆ ಇರುತ್ತಿದ್ದಿಲ್ಲ. ಮಳೆಗಾಲದಲ್ಲಿಯಂತೂ ಅಮೃತವೃಷ್ಟಿಯೇ ಆಗಿ ಹಚ್ಚಹಸಿರು ಪಚ್ಚೆಪಯರಿನಂತೆ ಹುಚ್ಚೆದ್ದು ಬೆಳೆದು ಹೈನ ಹೆಚ್ಚಾಗಿ ಮನೆಮನೆಗೂ ನಿತ್ಯ ಗೋಪಾಲ ಕವಲಿಯಾಗುತ್ತಲಿತ್ತು. ಅಲ್ಲಿ ಕರುಗಳಿಗೆ ಸಾವಿಲ್ಲ. ಉಣ್ಣಲಿಕ್ಕೆ ಕೊರತೆಯಿಲ್ಲ. ಆಟಪಾಟಗಳಿಗೆ ಆತಂಕವಿಲ್ಲ. ಒಟ್ಟಿನ ಮೇಲೆ ನಂದ ನಂದನನಾದ ಗೋವಿಂದನ ಸಂಕಲ್ಪದ ಮೇರೆಗೆ ಜನರೆಲ್ಲರೂ ಅಲ್ಲಿ ನಂದನವನದಲ್ಲಿದ್ದಂತೆ ಅತ್ಯಂತ ಆನಂದದಿಂದ ನಿಶ್ಚಿಂತರಾಗಿ ವಾಸವಾಗಿದ್ದರು.

ಗವಳಿಗೆ ಕುಟುಂಬಗಳೆಲ್ಲ ಸುಖವಾಗಿ ಅಲ್ಲಿ ಇರಹತ್ತಿದಬಳಿಕ ರಾಮಕೃಷ್ಣರು ತಮ್ಮ ಗೆಳೆಯರಾದ ಗೋಪಾಲ ಬಾಲಕರಿಂದ ಕೂಡಿಕೊಂಡು ದಿನಾಲು ದನಕಾಯಲಿಕ್ಕೆಂದು ಅಡವಿಗೆ ಹೋಗಿ, ಆಟವಾಡಿ, ಯಮುನೆಯಲ್ಲಿ ಜಲಕೇಳಿಗಳನ್ನು ಮಾಡಿ, ವನವನ ತಿರುಗಾಡಿ, ಹಸು ಶಿಶುಗಳನ್ನು ಮೇಯಿಸಿಗೊಂಡು ಬರುತ್ತಲಿದ್ದರು. ಹೀಗೆ ಅವರು ಅಲ್ಲಿ ತರುಗಾಹಿಗಳಾಗಿ ಇದ್ದಾ ಬೇಸಿಗೆ ಕಳೆದು ಮಳೆಗಾಲ ಪ್ರಾರಂಭವಾಯಿತು.

ಮೋಡಗಳ ಮಡಲಿನಲ್ಲಿ ಮೂಡಿದ ಇಂದ್ರಚಾಪಗಳಇಂದ ಕಾಮೋದ್ದಿಪನವಾಗಿ ನವಿಲುಗಳು ಗರಿಗೆದರಿ ಕುಣಿಯುತ್ತಿದ್ದವು. ಮದನಮದಮುದಿತವಾದ ಮಯೂರಗಳ ಕೇಕಾರವ, ಮತ್ತು ಕದಂಬ ಕಾನನದ ಕಾದಂಬರಿಯನ್ನು ಹೀರಿದ ಮತ್ತ ಭೃಂಗಗಳ ಸಂಗೀತ, ತುಂಬಿ ಹರಿಯುವ ತೊರೆತೆರೆಗಳ ಮಂಜುಳನಾದ, ದರೀಮುಖಗಳಲ್ಲಿ ಧೀಂಕಿಡುವ ಝುರೀಪ್ರವಾಹಗಳ ಪ್ರಪಾತ ಘೋಷ ಮತ್ತು ಮೇಘ ಕದಂಬದ ವಜ್ರ ಘೋಷಗಳಿಂದ ಭೂಮ್ಯಾಕಾಶಗಳೆಲ್ಲ ದುಮುದುಮಿಸಿ ಹೋದವು. ಸೊಂಡೆಗಳನ್ನು ಮೇಲ್ಕೆಕ್ಕೆತ್ತಿ ಮೇಘಗರ್ಜನೆಯನ್ನು ಅನುಕರಿಸುವ ಆನೆಗಳ ಹಿಂಡುಗಳನ್ನು ಕಂಡಾಗ ಮೇಘಗಳೇ ನೆಲಕ್ಕಿಳಿದು ಓಡುತ್ತಲಿರುವಂತೆ ಭಾಸವಾಗುತ್ತಲಿತ್ತು. ಎತ್ತಲೂ ಕುಸುರೊಡೆ ದುನಿಂತ ಸಸ್ಯಶಾದ್ವಂಗಳಿಂದ ಶೋಭಿಸುವ ಭೂದೇವಿಯು ಹಸಿರು ಬಣ್ಣದ ವಸನವನ್ನುಟ್ಟು ಹರೆಯದ ಬಸುರಿ ಹೆಣ್ಣು ಮಗಳಂತೆ ಕಾಣುತ್ತಲಿದ್ದಳು.

## ಕಾಲಿಯ ಮರ್ದನ

ಬಲರಾಮನನ್ನು ಬಿಟ್ಟು ಒಂದು ಸಲ ಆ ಮುರಳೀಧರನು ಗೋಗಣವನ್ನು ಕಾಯುತ್ತ ತಿರುಗಾಡುತ್ತ ಶುಚಿರುಚಿಯಾದ ಸಲಿಲ ಪ್ರವಾಹವುಳ್ಳ ಯಮುನಾನದಿಗೆ ಬಂದನು. ಹಂಸಕಾರಂಡವಾದಿ ಹಕ್ಕಿಗಳ ಮಧುರಾಲಾಪದಿಂದ ಸುಸ್ವಾಗತವನ್ನು ನೀಡುತ್ತಲಿರುವ ಆ ಜಲಧಿ ಮಹಿಷಿಯ ತೀರಗುಂಟ ಅವನು ಸಂಚರಿಸುತ್ತಲಿರುವಾಗ ಒಂದು ಅಗಾಧವಾದ ಮಡುವು ಅವನ ಕಣ್ಣಿಗೆ ಬಿದ್ದಿತು. ಅದು ಒಂದು ಯೋಜನ ವಿಸ್ತೀರ್ಣವಾಗಿ ಪಾತಾಲ ಗಂಭೀರವಾಗಿ, ಸಾಗರದಂತೆ ಅಪಾರ ನೀರಿನಾಗರವಾಗಿ ಕಂಡರೂ ಕೃಷ್ಣನು ಹಣಿಕಿಹಾಕಿ ನೋಡಿದಾಗ ಅದರ ತೀರದಲ್ಲಿಯಾಗಲಿ, ನೀರಿನಲ್ಲಿಯಾಗಲಿ ಒಂದೂ ಮೀನವಿರಲಿಲ್ಲ. ಮೊಸಳೆಯಿರಲಿಲ್ಲ. ಏಡಿಯಿರಲಿಲ್ಲ. ಆಮೆಯಿರಲಿಲ್ಲ. ಉಳಿದಾವ ಜಲಚರಪ್ರಾಣಿಯೂ ಅದರ ನೀರಸೀಮೆಯಲ್ಲಾಗಲಿ ತೀರ ಭೂಮಿಯಲ್ಲಾಗಲಿ, ಹರಿಯುತ್ತಲೂ ಇರಲಿಲ್ಲ. ಸುಳಿಯುತ್ತಲೂ ಇರಲಿಲ್ಲ. ಸಂಚರಿಸಲೂ ಇಲ್ಲ. ಜಲಚರಪ್ರಾಣಿ, ಸ್ಥಲಚರ ಪ್ರಾಣಿಗಳೆರಡಕ್ಕೂ ಋಷ್ಯಮೂಕದಂತೆ, ಅಗಮ್ಯವಾದ ಶೂನ್ಯಸಂಚಾರದ ಆ ಚಕ್ರತೀರ್ಥ ವನ್ನು ಕಂಡು ಕೃಷ್ಣನಿಗೆ ಅಚ್ಚರಿಯಾಯಿತು.

ಆಗ ಸರ್ವಜ್ಞ ಚೂಡಾಮಣಿಯಾದ ಆ ನಂದಕುಮಾರನು "ಅಮೃತವಾಹಿನಿಯಾದ ಕಾಲಿಂದಿಯ ನೀರಿನಲ್ಲಿ ಇಂಥ ಹಾಲಾಹಲ ಕೋಲಾಹಲವನ್ನುಂಟು ಮಾಡುವ ವಿಷಾವರ್ತವು ನಿರ್ಮಾಣವಾಗಲು ಕಾರಣವೇನು? ಎಂದು ಕಿಂಚಿತ್ ಚಿಂತಿಸಲಾಗಿ ಅವನಿಗೆ ಎಲ್ಲ ವಿಷಯವೂ ನಿಚ್ಚಳವಾಗಿ ತಿಳಿದು ಬಂದಿತು.

ಗರುಡನ ಭಯದಿಂದ ಕಾಲಿಯ ಎಂಬ ಸರ್ಪವು ಸಮುದ್ರ ತಲವನ್ನು ಬಿಟ್ಟು ಈ ಯಮುನೆಯ ಮಡುವಿನಲ್ಲಿ ಪ್ರವೇಶ ಮಾಡಿತ್ತು. ಅತ್ಯಂತ ವಿಷಾರಿಯಾದ ಆ ನಾಗೇಶನು ಸಕುಟುಂಬ ಸಪರಿವಾರವಾಗಿ ಬಂದು ಈ ಆಳವಾದ ಜಲಾಶಯದ ತಳಪಾತಳಿಯಲ್ಲಿ ವಾಸವಾಗಿರುವದರಿಂದ ಅವನ ಸಚಿವ ಸೇನಾಪತಿಗಳು ಮೇಲೆ ತಮ್ಮ ಪೂತ್ಕಾರದಿಂದ ವಿಷಗಾಳಿಯನ್ನು ಹಬ್ಬಿಸಿ ವಾತಾವರಣವನ್ನೆಲ್ಲ ಕಲುಷೀಕರಿಸಿಬಿಟ್ಟಿದ್ದರು. ಅದರಿಂದ ಸುಧಾಸ್ಯಂದಿನಿಯಾದ ಕಾಲಿಂದಿಯು ವಿಷವಾಹಿನಿಯಾಗಿದ್ದಳು. ದೇವರ್ಷಿಗಳಿಗೂ ಕೂಡ ಪುಣ್ಯೋದಕವೆಂದು ಉಪೇಯಳಾದ ಅವಳೀಗ ಪಶುಪಕ್ಷಿಗಳಿಗೂ ಕೂಡ. ಅಪ್ರೇಯಳಾಗಿ ಅಪಾಯಳೂ ಆಗಿ, ಅನುಪಾದೇಯವಾಗಿದ್ದಾಳೆ. ಆದ್ದರಿಂದ ನಾನೀಗ ಈ ಕಾಲಿಯ ನಾಗನನ್ನು ಮರ್ದನಮಾಡಿ ಈ ವಿಷಚಕ್ರದಿಂದ ಕಾಲಿಂದಿಯನ್ನು ಉದ್ಧರಿಸಿ. ಜನ ಹಾಗೂ ದನಗಳು ಇದರ ಜಲಪಾನದಿಂದ ಸಾಯದಂತೆ ಮಾಡಬೇಕು. ನಾನು ಈ ವ್ರಜ ಭೂಮಿಗೆ ಬಂದದ್ದಾಗಲಿ ಗೋಪ ಜನ್ಮವನ್ನು ಹೊಂದಿದ್ದಾಗಲಿ ಇಧಕ್ಕಾಗಿಯೇ ಅಲ್ಲವೇ?" ಎಂದು ಎಲ್ಲವನ್ನೂ ಮನದಂದ ಅವನು ನಿರ್ಧರಿಸಿದನು. ಅದರಂತೆ ಅವನು ಟೊಂಕಕಟ್ಟಿ ಅದೇ ನದೀತಟಾಕದಲ್ಲಿರುವ ಉನ್ನತವಾದ ಒಂದು ಕದಂಬ ಗಿಡವನ್ನು ಸರಸರ ಏರಿದನು. ಕದಂಬ ಗಿಡದ ತುದಿಗೆ ಬಂದು ಕುಳಿತ ಕಪ್ಪು ಮೋಡದಂತೆ ಒಪ್ಪುವ ಚಪಲ ಚರಣನಾದ ಕೃಷ್ಣನು ಎತ್ತರವಾದ ತರುಶಿಖರಾಗ್ರದಿಂದ ಒಮ್ಮೆಲೇ ಧೈರ್ಯದಿಂದ ಧೀಂಕಿಟ್ಟು ಮಡುವಿನ ಮಡಿಲಲ್ಲಿ ಜಿಗಿದನು. ಅದರಿಂದ ಆ ಗಭೀರ ಜಲಾಶಯದ ನೀರೆಲ್ಲ ಅಲ್ಲೋಲಕಲ್ಲೋಲವಾಗಿ ಉದ್ವೇಲ ಊರ್ಮಿಗಳಿಂದ ಉಕ್ಕಿಮಿಕ್ಕಿ ಮೊರೆಯಿತು. ಹಾರಿದ ಸಪ್ಪಳಕ್ಕೆ ಸರ್ಪಗಳನ್ನೆಲ್ಲ ಬಡ್ಡಿದೆಬ್ಬಿಸಿದಂತಾಗಿ ಕಣ್ತುಂಬ ರಕುತದೋಕಳಿಯಾಡಿದಂತಾದ

ಕಾಲಿಯನು ಬುಸುಗುಟ್ಟುತ್ತ ಮೇಲೆ ಬಂದನು. ವೈರಿಯನ್ನು ಹೊಡೆಯಲೆಂದು ಎತ್ತಿ ಹಿಡಿದ ಐದು ಹೆಡೆಗಳಿಂದಲೂ ಉರಿನಾಲಿಗೆಗಳನ್ನೂ ಹೊರಗೆ ಹಾಕುತ್ತ ಅವನು ಪೂತ್ಕರಿಸಿ ಬಂದು ನಿಂತಾಗ ಯಮುನೆಯ ಪ್ರಹಾಹವೇ ಅಂಜಿ ತಿರುಗಿ ಹರಿಯಹತ್ತಿತ್ತು. ಅವನ ಮಕ್ಕಳು ಹಾಗೂ ಅಪ್ತೇಷ್ಟ ಸೇನಾಯಕರೂ ಎಲ್ಲರೂ ಸಾವಿನ ಬಾಯಂತಿದ್ದ ಆ ಮಡುವಿನಲ್ಲಿ ಧೈರ್ಯದಿಂದ ಧುಮುಕಿದ ಕುಮಾರ ಕೃಷ್ಣನನ್ನು ಕೆಕ್ಕರಿಸಿ ನೋಡಿ ಅವನನ್ನು ನೆಕ್ಕಿ ಕೊಲ್ಲಲು ತಿಕ್ಕಮುಕ್ಕಲು ಉತ್ಸುಕರಾಗಿ ನಿಂತುಕೊಂಡರು.

ಕಣ್ಣಿನಿಂದ ಹೊಗೆಯನ್ನು ಕಾರುತ್ತ ಬಾಯಿಂದ ಕಿಡಿಗಳನ್ನು ಕಕ್ಕುತ್ತ ಉಸುರಿನಿಂದ ಹಾಲಾಹಲದ ಜ್ವಾಲೆಗಳನ್ನೆ ಎಸೆಯುತ್ತ ಬಂದ ಆ ವಿಷಾರಿ ಸರ್ಪಗಳು ವೇಗದಿಂದ ಬಂದು ಕೃಷ್ಣನನ್ನು ಮುತ್ತಿ ಮೈಯೆಲ್ಲ ಬಿಗಿದು ನಂಜಿನ ಸೂಜಿಯಂತಿದ್ದ ಹಲ್ಲುಗಳಿಂದ ಬಲವಾಗಿ ಕಚ್ಚಿದವು. ಜೋರಿನಿಂದ ಚುಚ್ಚಿದವು. ತಮ್ಮ ದಂತ ನಳಿಕೆಗಳಿಂದ ಕಾಲುಕೂಟದ ಕಾರಂಜಿಗಳನ್ನೇ ಪುಟಿಸಿ ಕೃಷ್ಣನ ರಕ್ತವಾಹಿನಿಗಳಲ್ಲಿ ಹಾಲಾಹಲವನ್ನು ತುಂಬಲು ಪ್ರಯತ್ನಿಸಿದವು. ಹೀಗೆ ಅವನು ರೋಮರೋಮಕ್ಕೊಂದು ಹೆಬ್ಬಾವು ಹತ್ತಿ ಮುತ್ತಿ ಬಾಲಸುತ್ತಿ ಮೈಗೆ ಮೆತ್ತಿ ಹಲ್ಲು ಒತ್ತಿ ಕಚ್ಚಿ ಕೊಲ್ಲಬೇಕೆಂದು ಜಗಿದಾಡಿದರೂ ಕೃಷ್ಣನು ನಿರ್ವಿಕಾರವಾಗಿಯೇ ನಿಂತುಕೊಂಡಿದ್ದನು.

ಆಗ ಮೇಲೆ ನಿಂತ ಗೋಪಾಲಬಾಲಕರೆಲ್ಲ ದೂರ ನಿಂತೇ ಈ ದೃಶ್ಯವನ್ನು ನೋಡಿ ಊರಿಗೆ ಓಡಿ ನಂದನನಿಗೆ ಗಾಬರಿಯಾಗಿ ನಿವೇದಿಸಿದರು. "ಕೃಷ್ಣನು ಕಾಲಿಯ ಮಡುವಿನಲ್ಲಿ ಬಿದ್ದಿದ್ದು ಘೋರ ಸರ್ಪಗಳೆಲ್ಲ ಬಂದು ಅವನನ್ನು ಬಲವಾಗಿ ಬಿಗಿದು ಕಚ್ಚತೊಡಗಿವೆ ಎಂದು ತಿಳಿಸಿದರು. ಅದನ್ನು ಕೇಳಿ ಸಂಭ್ರಾಂತರಾದ ನಂದಗೋಪ ಯಶೋದೆಯರು ಬಲರಾಮ ಹಾಗೂ ಉಳಿದ ಗೋಪಗೋಪಿಯರಿಂದ ಕೂಡಿಕೊಂಡು ಹಾಹಾಕಾರ ಮಾಡುತ್ತ ಅಳುತ್ತ ಯಮುನೆಯ ದಂಡೆಗೆ ಬಂದರು.

ಆಗ ಹಾವುಗಳ ಹಿಂದಿಗೇ ಹಿಂಡೇ ಬಂದು ಕೃಷ್ಣನ ಕಲೇವರವನ್ನು ಬಲವಾಗಿ ಬಂಧಿಸಿ ಅವನ ಮೈಯಲ್ಲಿ ಹಲ್ಲುಊರಿ ಬಾಲ ಎತ್ತಿ ಶೀರ್ಷಾಸನದಲ್ಲಿ ನಿಂತು ಕಚ್ಚ ಹತ್ತಿದ್ದವು. ಫೂತ್ಕಾರ ಜ್ವಾಲೆಗಳಲ್ಲಿ ಮುಚ್ಚಹಾಕಿದ್ದವು. ಅದನ್ನು ಕಂಡು ನಂದಾದಿಗೋವಳಿರಿಗೆ ನಿರಾಶೆಯೇ ಆಗಿ ಅಳಹತ್ತಿದರು. ಯಶೋದೆಯಂತೂ ತನ್ನನ್ನು ಹಿಡಿದ ಜನರಿಂದ ಕೈ ಕೊಸರಿಕೊಂಡು ಆ ಮಡುವಿನಲ್ಲಿ ಧುಮುಕಲು ಹವಣಿಸಹತ್ತಿದಳು. ಉಳಿದೆಲ್ಲ ಗೋಪಿಕೆಯರೂ ಎದೆ ಎದೆ ಬಡಿದುಕೊಂಡು ಅಳುತ್ತ "ಅಯ್ಯೋ ಕೃಷ್ಣ ! ಹಾವು ಕಚ್ಚಿ ಸಾಯುವ ಪ್ರಸಂಗವು ನಿನಗೆ ಹೇಗೆ ಬಂದಿತು. ದುರ್ದೈವಿಯಾದ ಯಶೋದೆಯೇ! ಇಂಥ ಮುದ್ದು ಮಗು ಹಾವಿನ ಬಾಯಿಗೆ ಬಿದ್ದುದನ್ನು ನೋಡಿದರೂ ಇನ್ನೂ ಬದುಕಿರುವಿಯಲ್ಲ. ಎಂಥ ಕಠಿಣಹೆಣ್ಣೇ ನೀನು! ಇನ್ನು ಈ ಮಡುವಿನಲ್ಲಿ ಹಾರಿಕೊಂಡು ನೀನು ಪ್ರಾಣ ನೀಗುವದಾದರೆ ನಾವೂ ಧುಮುಕಿ ಬಿಡುವೆವು. ಚಂದ್ರನಿಲ್ಲದ ರಾತ್ರಿಯಂತೆ ಕೃಷ್ಣನಿಲ್ಲದೆ ಗಾಢಾಂಧಕಾರ ಮಯವಾದ ಆ ವ್ರಜಸ್ಥಳಿಯನ್ನು ಪ್ರವೇಶಿಸಲಾರೆವು" ಎಂದು ವಿಲಪಿಸಹತ್ತಿದರು. ಅದನ್ನು ಕೇಳಿ ಕೃಷ್ಣನ ಅಂಶಾವಿಷ್ಟನಾದ ಬಲರಾಮನು ಆ ಭಗವಂತನ ಅಚಿಂತ್ಯಾದ್ಭುತ ಶಕ್ತಿಯನ್ನು ಬಲ್ಲವನಾದುದರಿಂದ ಲೇಶತೋಪಿ ಖಿನ್ನ ವಿಷಣ್ಣನಾಗದೇ ಅವರಿಗೆಲ್ಲ "ನೀವೇನೂ ಗಾಬರಿಯಾಗಬೇಡಿರಿ. ಈ ಕಾಲಿಯನಾಗನನ್ನು ದಮನ ಮಾಡಿ ಕೃಷ್ಣನು ವಿಜಯಶಾಲಿಯಾಗಿ ಬರುವನು. ಅಪ್ರಾಕೃತಶರೀರಿಯಾದ ಅವನಿಗೇನೂ

ಆಗುವದಿಲ್ಲ'' ಎಂದು ಸಮಾಧಾನ ಹೇಳಿ ಕೃಷ್ಣನನ್ನು ಕುರಿತು ತುಸು ಸಿಟ್ಟಿನಿಂದಲೇ ''ಮಧುಸೂದನ! ಬೇಗ ಏಳು ಆ ಹಾವಿನ ಜೊತೆಗೆ ಎಷ್ಟು ಹುಡುಗಾಟ! ಸಾವಿನಜೊತೆಗೆ ಎಷ್ಟು ಸರಸಾಟ! ಸಾಕೇಳು, ಬೇಗನೇ ಆ ಕಾಳಸರ್ಪವನ್ನು ಮರ್ದಿಸಿ ಮೇಲೆ ಬಾ. ಇವರೆಲ್ಲ ನಿನ್ನ ಬಾಂಧವರು ನಿನ್ನನ್ನೂ ಓರ್ವ ಮಾನವನೆಂದು ಬಗೆದು ಗಾಬರಿಯಾಗಿ ಅಳುತ್ತಲಿದ್ದಾರೆ. ಬೇಗ ಎದ್ದು ಬಾ'' ಎಂದು ಒದರಿದನು.

ಆಗ ಕೃಷ್ಣನಾದರೂ ತಕ್ಷಣದಲ್ಲಿ ವಿಷಜ್ವಾಲೆಗಳಿಂದ ಘೂತ್ಕರಿಸುವ ಸೆಟೆದುನಿಂತ ಹಾವಿನ ಹೆಡೆಗಳ ಮೇಲೆ ಹೆಜ್ಜೆಯನ್ನಿಟ್ಟು ತುಳಿದು ಥಕಥೈ ಥೈ ಎಂದು ಕುಣಿದಾಡುತ್ತಲಿದ್ದನು. ಮತ್ತು ತನ್ನ ನೃತ್ಯದಿಂದ ಅವನ ಹೆಡೆ ನಿತ್ರಾಣವಾಗಿ ಹೆಡೆಮರಳಿ ಪುನಃ ತಲೆ ಎತ್ತದಂತೆ ಒತ್ತಿ ಬಿಡುತ್ತಲಿದ್ದನು. ಹೀಗೆ ಅತ್ಯುಲ್ಬಣ ವಿಷೋದಗ್ರನಾದ ಆ ದೈತ್ಯ ಸರ್ಪದ ಐದೂ ಹೆಡೆಗಳ ಮೇಲಿನ ರತ್ನಗಳನ್ನೆಲ್ಲ ಪುಡಿಮಾಡುತ್ತ ಕೃಷ್ಣನು ಸರ್ಪನೃತ್ಯವನ್ನು ನಡೆಯಿಸಲಾಗಿ ಕಾಲಿಯನ ವಿಷಗಳಿರುವ ಪಂಚಮುಖಗಳಿಂದಲೂ ರಕ್ತವಾಂತಿಯಾಗಿ ವಜ್ರಪಾತದಂತಿರುವ ಆ ಪುಟ್ಟ ಪಾದಗಳ ನೃತ್ಯಾಘಾತವನ್ನು ಸಹಿಸದೇ ಶರಣುಬಂದನು. ''ದೇವ ದೇವ ಕೃಷ್ಣ! ನಿನ್ನನ್ನು ಸಿಟ್ಟಿನಿಂದ ಕಚ್ಚಿಬಂದದ್ದು ತಪ್ಪಾಯಿತು. ಅಜ್ಞಾನಿಯಾದ ನನ್ನ ಅಪರಾಧವನ್ನು ಕ್ಷಮಿಸು. ನಾನೂ ನನ್ನ ಪರಿವಾರದವರೂ ಇಂದಿನಿಂದ ನಿನ್ನ ದಾಸಾನುದಾಸರು. ನನ್ನ ವಿಷದ ಮದವೆಲ್ಲ ಇಳಿದಿದೆ. ನೀನು ಹೇಳಿದಂತೆ ಕೇಳುವೆ. ಜೀವದಾನ ಮಾಡು ನನ್ನ ಹೆಡೆಯ ಮೇಲೆ ಥಕ ಥಕ ಕುಣಿದು ನಿನ್ನ ಚರಣ ಚಿನ್ಹ ಅಚ್ಚೊತ್ತುವಂತೆ ಮಾಡು'' ಎಂದು ಅಂಗಲಾಚಿ ಬೇಡಿಕೊಂಡನು.

ಆಗ ಕೃಷ್ಣನು ಅವನಿಗೆ ''ನೀನಿನ್ನು ಈ ಯಮುನೆಯ ಮಡುವಿನಲ್ಲಿ ಇರತಕ್ಕದ್ದಲ್ಲ. ಇದನ್ನು ಬಿಟ್ಟು ನಿನ್ನ ಮೊದಲಿನ ಸ್ಥಾನವಾದ ಸಮುದ್ರಕ್ಕೆ ಹೋಗು. ನೀನಾಗಲಿ ನಿನ್ನ ಪರಿವಾರದಲ್ಲಿ ಮತ್ತಾರೇ ಆಗಲಿ ಈ ಕಾಲಿಂದೀಪ್ರವಾಹದಲ್ಲಿ ಎಲ್ಲಿಯಾದರೂ ಕಣ್ಣಿಗೆ ಬಿದ್ದರೆ ತಕ್ಷಣದಲ್ಲಿ ಸಂಹರಿಸಿ ಬಿಡುವೆ. ಈ ನೀರು ತಿಳಿಯಾಗಲಿ. ಮೊದಲಿನಂತೆ ವಿಷ ಕುಲುಷದ ದೋಷವಿಲ್ಲದೆ ಶುಚಿರುಚಿಯಾಗಲಿ. ನೀನು ಈಗ ಸಮುದ್ರಕ್ಕೆ ಹೋದರೂ ನಿನ್ನ ಫಣಾ ಮಂಡಲದ ಮೇಲೆ ನನ್ನ ಪಾದಚಿನ್ಹಗಳನ್ನು ಕಂಡು ಗರುಡನು ಏನೂ ಮಾಡುವದಿಲ್ಲ. ಆದ್ದರಿಂದ ನಿರ್ಭಯವಾಗಿ ಸಾಗರವನ್ನು ಸೇರು,'' ಎಂದು ಆದೇಶವಿತ್ತನು. ಆಗ ಕಾಲಿಯ ನಾಗನು ಹಾಗೇ ಆಗಲಿ ಎಂದು ಹೇಳಿ ಕೃಷ್ಣನ ಚರಣಗಳನ್ನು ತನ್ನ ಫಣಾಮಣಿ ಮರೀಚಿಗಳಿಂದ ಬೆಳಗಿ ಅಪ್ಪಣೆಪಡೆದು ತನ್ನ ನಾಗಪತ್ನಿ ಪುತ್ರ ಮಿತ್ರ ಪರಿವಾರದೊಂದಿಗೆ ತಮ್ಮ ಜಾತಿಯ ಜನರ ಚಿರಂತನ ಆಗರವಾದ ಸಾಗರದ ಆಳವನ್ನು ಸಾರಿದನು.

ಕಾಲಿಯನು ಕಾಲಿಂದಿಯನ್ನು ಬಿಟ್ಟ ಬಳಿಕ ಆ ನದಿಯ ನೀರು ಮೊದಲಿನಂತೆ ಸವಿ ಶುಚಿಯಾದ ರುಚಿರುಚಿರವಾದ ರಸ ಪ್ರಚುರವಾಗಿ ಪಿಯೂಷಧಾರೆಯಂತೆ ಹರಿಯಹತ್ತಿತು. ಅದರ ನೀರು ಕುಡಿದು ತೀರದಲ್ಲಿ ಬೆಳೆದ ತೃಣಾಂಕುರವನ್ನು ಜಗಿದು ಗೋವತ್ಸಗಳು ಪರಿಪುಷ್ಟವಾದವು.

ಇದ್ದಕ್ಕೆಲ್ಲ ಕಾರಣನಾದ ಶ್ರೀಕೃಷ್ಣನ ಲೋಕೋತ್ತರವಾದ ಶಕ್ತಿ ಮಹಿಮೆ ಪ್ರಭಾವ ಪ್ರತಿಭೆಗಳನ್ನು ಕಂಡು ಗೋಪಾಲಕರಿಗೆ ಇವನು ನಮ್ಮಂತೆ ಸಾಮಾನ್ಯನಾದ ಮಾನವನಲ್ಲ ಎಂದು ನಿಶ್ಚಿತವಾಯಿತು. ಯಾವದೋ ಒಂದು ದೈವೀಶಕ್ತಿ ಅಥವಾ ವಿಭೂತಿರೂಪವು ಅರಣಿಯಲ್ಲಿ ಅಗ್ನಿಯಂತೆ ನಮ್ಮ ನಡುವೆ ಪ್ರಚ್ಛನ್ನವಾಗಿ ಇದ್ದು ನಮ್ಮ ಉದ್ಧಾರ

ಕಾರ್ಯವನ್ನು ಕೈಕೊಂಡಿದೆ. ''ನಂದ! ಪವಾಡ ಪುರುಷನನ್ನು ಮಗನನ್ನಾಗಿ ಪಡೆದ ನೀನೇ ಧನ್ಯ, ಯಶೋದೆಯೂ ಮಾನ್ಯಳು. ಇಂದಿನಿಂದ ನಮ್ಮ ಈ ಎಲ್ಲ ಗೋಗಳಿಗೂ ಗೋಪಾಲಕರಿಗೂ, ಈ ಶ್ರೀಕೃಷ್ಣ ಚಂದ್ರನೇ ಶರಣು, ಸಂರಕ್ಷಕ, ಮಾರ್ಗದರ್ಶಕ ನಾಯಕ, ರಾಜ'' ಎಂದುಹೇಳಿ ಅದೇ ಮಡುವಿನಿಂದ ಎದ್ದು ಬಂದ ಆ ಮುದ್ದು ಕೃಷ್ಣನನ್ನು ಅಲ್ಲಿಯೇ ಒಂದು ಗದ್ದುಗೆಯಮೇಲೆ ಕೂಡಿಸಿ ಎಲ್ಲ ಗವಳಿಗ ಗಂಡು ಹೆಣ್ಣು ಹುಡುಗರೂ ಪ್ರದಕ್ಷಿಣೆ ಹಾಕಿ ನಮಸ್ಕಾರ ಮಾಡಿ ಪೂಜೆಗೈದು ಪುರಸ್ಕರಿಸಿದರು.

## ಧೇನುಕಾಸುರ ಸಂಹಾರ

ಹೀಗೆ ಯಮುನೆಯ ಜಲೇಶಯಿಯಾದ ದುಷ್ಟ ಜಲೇಶಯನನ್ನು ನಿಗ್ರಹಿಸಿದ ಬಳಿಕ ರಾಮಕೃಷ್ಣರಿಬ್ಬರೂ ಯಮುನೆಯ ದಂಡೆಗುಂಟ ಇರುವ ಹುಲ್ಲುಗಾವಲುಗಳಲ್ಲಿಯೂ ಹಾಗೂ ಗೋವರ್ಧನಗಿರಿಯ ಹಸಿರು ಪಸರಿನಿಂತ ಶಾದ್ವಲಗಳಲ್ಲಿಯೂ ಗೋವತ್ಸಗಣಗಳನ್ನು ಮೇಯಿಸುತ್ತ ಗೆಳೆಯರೊಂದಿಗೆ ಸಂಚರಿಸುತ್ತಿದ್ದರು. ಮುಂದೆ ಒಂದು ದಿನ ಗೋವರ್ಧನ ಪರ್ವತದ ಉತ್ತರಕ್ಕೆ ಕರಿಬಣ್ಣದ ಎರೆಭೂಮಿಯಲ್ಲಿ ಕಲ್ಲು ಮುಳ್ಳುಗಳಿಲ್ಲದ ಸಮತಾಳನೆಲದಲ್ಲಿ ಒಂದು ದೊಡ್ಡ ತಾಲವನ ವಿದ್ದುದು ಅವರಿಗೆ ಕಂಡು ಬಂದಿತು. ಯಮುನೆಯ ದಂಡೆಗುಂಟ ಹಬ್ಬಿ ಬೆಳೆದ ಆ ರಮಣೀಯವಾದ ತಾಲತರುಗಳ ತೋಪಿನಲ್ಲಿಯ ಗಿಡಗಳೆಲ್ಲ ರಸದುಂಬಿದ ತಾಲ ಫಲಗಳನ್ನು ಎತ್ತರವಾದ ಟೊಂಗೆದೋಳುಗಳಲ್ಲಿ ಎತ್ತಿಹಿಡಿದು ನಿಂತುಕೊಂಡಿದ್ದವು.

ಆ ತಾಲಬನದಲ್ಲಿ ಮಿತ್ರಮಂಡಳಿಯಿಂದ ಒಡಗೂಡಿಕೊಂಡು ಸಂಕರ್ಷಣ ವಾಸುದೇವರಿಬ್ಬರೂ ಹರೆಯದ ಹೋರಿಗಳಂತೆ ಸ್ವಚ್ಛಂದವಾಗಿ ಆಟವಾಡಿದರು. ಅನಂತರ ದುರ್ದಾನವ ಮರ್ದನಕಾರ್ಯದಲ್ಲಿ ದತ್ತದೀಕ್ಷನಾದ ದಾಮೋದರನು ಬಲರಾಮನನ್ನು ಕುರಿತು ''ಅಣ್ಣ, ಇಲ್ಲಿ ನಾವು ಕಾಲಿರಿಸಿದಾಗಿನಿಂದ ಪರಿಪಕ್ವವಾದ ತಾಲೀಫಲಗಳ ಮಧುರವಾಸನೆಯು ಮೂಗಿಗೆ ಕಟ್ಟಿದಂತಾಗಿದೆ. ನೋಡಲಿಕ್ಕಂತೂ ಹಣ್ಣುಗಳು ಒಳ್ಳೇ ಸವಿ, ಸುಗಂಧ, ಸುಂದರ ಸ್ವಾದಿಷ್ಟವಾಗಿ ಕಾಣುತ್ತವೆ. ಇವುಗಳ ವಾಸನೆಯೇ ಇಷ್ಟ ಮಧುರವಿದ್ದ ಬಳಿಕ ಆ ಹಣ್ಣುಗಳ ರಸ ಎಷ್ಟು ರುಚಿ ಇರಬೇಡ! ನನಗಂತೂ ಇವುಗಳ ರಾಗ ರಂಗುಗಳನ್ನು ನೋಡಿ ಇದರ ರಸರುಚಿಗಳಾದರೂ ಅಮೃತೋಪಮವೇ ಇರಬಹುದೆನ್ನಿಸುವುದು. ಆದ್ದರಿಂದ ನಾವಿಬ್ಬರೂ ಕೂಡಿ ಈ ತಾಲಬನದ ಪಾಡಗಾಯಿ, ಹಣ್ಣುಗಾಯಿ ಎಲ್ಲವನ್ನೂ ಉದುರಿಸು ಬಿಡುವ. ಗೆಳೆಯರೆಲ್ಲರೂ ಯಥೇಚ್ಛವಾಗಿ ತಿನ್ನಲಿ'' ಎಂದು ಹೇಳಿದನು. ಕೃಷ್ಣನು ಈ ಮಾತನ್ನು ಹೇಳುತ್ತಲಿರುವಂತೆಯೇ ಬಲರಾಮನು ನಗುತ್ತ ಎದ್ದು ಆ ಗಿಡಗಳನ್ನು ಅಲುಗಾಡಿಸಿ ಹಣ್ಣುಗಳನ್ನು ಬಳಬಳ ಉದುರಿಸಹತ್ತಿದನು. ರಸಭಾರದಿಂದ ಬಾಗಿನಿಂತ ಕಾಂಡಕೋಟಿ ದೇಟುಗಳಿಂದ ಅಸಂಖ್ಯ ಹಣ್ಣುಗಳ ಮಳೆಗರೆದಂತಾಗತೊಡಗಿತು.

ಮಾನವರಾರೂ ಎಂದಿಗೂ ಪ್ರವೇಶಿಸಲಕ್ಕವಾದ ಆ ವಿಸ್ತೀರ್ಣ ತಾಲಬನವನ್ನು ಕತ್ತೆಯ ರೂಪವನ್ನು ಧರಿಸಿದ ಧೇನುಕ ಎಂಬ ದೈತ್ಯನು ತನ್ನ ಅನುಚರರಾದ ದೊಡ್ಡದೊಂದು ಕತ್ತೆಗಳ ಹಿಂಡಿನಿಂದ ಕೂಡಿಕೊಂಡು ರಕ್ಷಿಸುತ್ತಲಿದ್ದನು. ಅವನು ಒಮ್ಮೆಲೇ ಫಲಪಾತದ ದನಿಯಾದುದನ್ನು ಕೇಳಿ ವಜ್ರಪಾತವಾದವನಂತೆ ಬೆಚ್ಚಿಬಿದ್ದು ಕೋಪದ ಸಿಟ್ಟಿನಿಂದ ಹುಚ್ಚನಂತಾಗಿ ಓಡಿ ಬಂದನು. ಕೋಪೋದ್ರೇಕಗಳಿಂದ ಕೂದಲು ಸೆಟೆದು, ಕಿವಿ ನಿಮಿರಿ, ಕಣ್ಣು

ಕೆಂಪಡಿರಿ, ಬಾಲ ನೆಗಹಿ, ಖುರಪುಟದಿಂದ ಅಡಿಯಿಟ್ಟ ನೆಲವನ್ನು ಪುಡಿಗಟ್ಟುತ್ತ, ಹೂಂಕರಿಸುತ್ತ, ಹೇಕರಿಸುತ್ತ ಬಂದ ಆ ಮತ್ತ ದೃಪ್ತ ದೈತ್ಯ ಕತ್ತೆಯು ಮೊದಲು ಬಂದವನೇ ಆ ಗಿಡಗುಂಪನ್ನು ಅಲುಗಾಡಿಸುತ್ತಲಿರುವ ಬಲರಾಮನನ್ನು ರೌಸುರೊಟ್ಟೆನಿಂದ ಕಚ್ಚಿಬಿಟ್ಟನು. ಮುಂದೆ ಮರುಕ್ಷಣದಲ್ಲಿ ಅವನೆದುರೇ ತಿರುಗಿನಿಂತು ತನ್ನ ಎರಡೂ ಹಿಂಗಾಲುಗಳನ್ನು ಎತ್ತಿ ಹಾರಿಸಿ ಬಲರಾಮನ ಎದೆಗೆ ಬಲವಾಗಿ ಲತ್ತೆಯನ್ನು ಹಾಕಿದನು. ಸಮಯಜ್ಞನಾದ ಸಂಕರ್ಷಣನು ಆಗಲೇ ಅಲ್ಲಿಯೇ ತನ್ನ ಎದೆಗೆ ಹೊಡೆಯಲೆತ್ತಿದ್ದ ಕತ್ತೆಯ ಆ ಎರಡೂ ಹಿಂಗಾಲುಗಳನ್ನು ಗಟ್ಟಿಯಾಗಿ ಹಿಡಿದು ಎತ್ತಿ ಕೆಳಗೆ ಮುಖಮಾಡಿ ತೂಗಿ ತೂರಿ ಹಾರಿಸಿ ಆ ಗಿಡದ ಝಾಡಿನ ಮೇಲೆ ಒಗೆದುಬಿಟ್ಟನು. ಅದರಿಂದ ಕಲ್ಲೊಗೆದು ಕೆಡವಿದಂತೆ ಎಲ್ಲ ಹಣ್ಣುಗಳೂ ತಾವಾಗಿ ಪಳ ಪಳ ನೆಲಕ್ಕೆ ಉದುರಿದವು. ಅವುಗಳ ಜೊತೆಗೇ ನಡುಮುರಿದ ತೊಡೆಒಡೆದ ತಲೆಸಿಡಿದ ಬೆನ್ನು ಬಿಚ್ಚಿದ ಕಣ್ಣು ಕಿತ್ತಿದ ನಾಲಿಗೆ ಕಚ್ಚಿದ ಧೇನುಕಾಸುರನೂ ಸತ್ತು ನೆಲಕ್ಕೆ ಬಿದ್ದನು.

ಆಗ ಅವನ ಅನುಚರರು ವಿಕೃತ ಧ್ವನಿಯಿಂದ ಕರ್ಣ ಕಠೋರವಾಗಿ ಹೇಕರಿಸುತ್ತ ಹೊಡೆಯಬರಲು ರಾಮನು ಅವರೆಲ್ಲರನ್ನೂ ಇದೇರೀತಿಯಾಗಿ ಕಾಲುಹಿಡಿದು ಗಿಡಕ್ಕೆ ಬಡಿದು ತಲೆಬುರುಡೆ ಒಡೆದು ಹುಲ್ಲುಗಾವಲದಲ್ಲಿ ಬಿಸಾಕಿಬಿಟ್ಟನು. ಅದರಿಂದ ಆ ತಾಲವನದ ತುಂಬ ನೋಡಿದಲ್ಲೆಲ್ಲ ಉದುರಿ ಬಿದ್ದ ಹಣ್ಣುಗಳೂ ಮುದುರಿ ಮುದ್ದೆಯಾದ ದೈತ್ಯ ದೇಹಗಳೂ ಆಗಿ ತುಂಡು ಮೋಡದ ತಂಡದಿಂದ ತುಂಬಿದ ಆ ತಾಲ ಬನವು ಮಾಗಿಯ ಮುಗಿಲಿನಂತೆ ತೋರುತ್ತಿತ್ತು. ತಾಲವನವನ್ನು ಎಲ್ಲಿಗೂ ಮುಕ್ತದ್ವಾರ ಮಾಡಿ ಬಳಿಕ ದಾಮೋದರ ಸಂಕರ್ಷಣರು ಗೋವರ್ಧನ ಗಿರಿಯ ನಡುನೆತ್ತಿಯ ಮೇಲೆ ಕತ್ತೆತ್ತಿನಿಂತ ಭಾಂಡೀರವೆಂಬ ಆಲದ ಗಿಡದಡಿಗೆ ಬಂದರು. ಅದರ ಸುತ್ತ ಮುತ್ತಲಿನ ದಿನ್ನೆದಿಬ್ಬಗಳನ್ನೆಲ್ಲ ತಬ್ಬಿ ಹಬ್ಬಿದ ಹಸುರು ಹುಲ್ಲುಗರಿಕೆಗಳನ್ನು ದನಗಳಿಗೆ ಮೇಯಿಸುತ್ತ ಅವರು ಗೆಳೆಯರೊಂದಿಗೆ ಬಗೆ ಬಗೆಯ ಆಟ ಪಾಟಗಳನ್ನಾಡಿದರು.

## ಪ್ರಲಂಬಾಸುರ ವಧ

ಹೀಗೆ ಆಟದ ಭರದಲ್ಲಿ ಮೈಮರೆತ ಆ ಬಾಲಕರ ಗುಂಪನ್ನು ನೋಡಿ, ರಾಮಕೃಷ್ಣರನ್ನು ಮೋಸಮಾಡಿ ಹಿಂಸಿಸಲು ಇದೇ ಸರಿಯಾದ ವೇಳೆಯೆಂದು ವಿಚಾರಿಸಿ ಪ್ರಲಂಬನೆಂಬ ಪ್ರಬಲ ದೈತ್ಯನು ಆಗ ತುರುಗಾಹಿ ತರುಣ ಮಿತ್ರನ ವೇಷವನ್ನು ಧರಿಸಿ ತಾನೂ ಅವರೊಳಗೆ ಕೂಡಿಕೊಂಡು ಆಡಹತ್ತಿದನು. ಉಳಿದ ಗೋಪಕುಮಾರರಂತೆಯೇ ಕಾಡುಹೂ ಚಿಗುರು ಹಾರಭಾರಗಳಿಂದ ತಾನೂ ಅಲಂಕಾರಮಾಡಿಕೊಂಡು ಅವರೆಲ್ಲರನ್ನು ಅನೇಕ ನಗೆ ಮಾತುಗಳಿಂದ ನಗಿಸಿ ಸವಿಮಾತಿನಿಂದ ತಣಿಸಿ ಆಟಗಳಿಂದ ಆಡಿಸಿ ಮಾಟಗಳಿಂದ ಮರುಳುಮಾಡಿದನು. ಗವಳಿಗರ ವೇಷವನ್ನು ಧರಿಸಿದ ಇವನಾದರೂ ತಮ್ಮ ಗೆಳೆಯರ ಗುಂಪಿನಲ್ಲಿಯೇ ಒಬ್ಬ ಎಂದು ತಿಳಿದು ಎಲ್ಲ ಗೊಲ್ಲರೂ ನಿಶ್ಶಂಕವಾಗಿ ಆಡುತ್ತಲಿರುವಾಗ ಆ ದುಷ್ಟನಿಗೆ ಮಾತ್ರ ರಾಮಕೃಷ್ಣರ ಮೇಲೆಯೇ ಕಣ್ಣಿತ್ತು. ಹಿಂದೆ ನಡೆದ ಕೃಷ್ಣನ ಕತೆಯನ್ನೆಲ್ಲ ಕೇಳಿಬಲ್ಲ ಅವನು ಈ ಕೇಶವನು ತನ್ನ ತುತ್ತಲ್ಲ ಎಂದು ಅವನ ಉಸಾಬರಿಯನ್ನು ಬಿಟ್ಟು ಬಲರಾಮನನ್ನು ಹಿಡಿದು ಹಿಂಸಿಸಬೇಕೆಂದು ಹೊಂಚುಹಾಕಿದನು.

ಆ ಗೋಪಾಲ ಬಾಲಕರೆಲ್ಲರೂ ಹರಿಣಾಕ್ರೀಡನ ಎಂಬ ಚಿಗರೆಯ ಆಟವನ್ನು ಆಡಲು ಶುರುಮಾಡಿದರು. (ಅದರಲ್ಲಿ ಇಬ್ಬಿಬ್ಬರು ಕೂಡಿ ಚಿಗರೆಯಂತೆ ಸ್ಪರ್ಧೆಯಿಂದ ಜಿದ್ದು ಹಾಕಿ

ಜಗಿಯಬೇಕು. ಆ ಮೇಲೆ ಆ ಚಿಗರೆ ಜಗಿತದಲ್ಲಿ ಸೋತವರು ಗೆದ್ದವರನ್ನು ಬೆನ್ನಮೇಲೆ ಹೊತ್ತುಕೊಂಡು ನಿರ್ದಿಷ್ಟ ಸ್ಥಳದವರೆಗೆ ಓಡುತ್ತ ಹೋಗಿ ಕ್ಲಪ್ತಸಮಯದಲ್ಲಿ ಹೊರಟ ಸ್ಥಳಕ್ಕೆ ಮರಳಿ ಓಡುತ್ತ ಬಂದು ಮುಟ್ಟಬೇಕು.) ಆಗ ಕೃಷ್ಣ ಶ್ರೀದಾಮ, ಬಲರಾಮ, ಪ್ರಲಂಬ ವೃಷಭ ಭದ್ರಸೇನ, ಹೀಗೆ ಬೇರೆ ಬೇರೆ ಜೋಡಿಗಳನ್ನು ತಮ್ಮ ತಮ್ಮಲ್ಲಿ ಮಾಡಿಕೊಂಡು ಅವರು ಮೇಲಾಟದಿಂದ ಚಿಗರೆಯ ಜಗಿತಕ್ಕೆ ಮೊದಲು ಮಾಡಿದರು. ಚಪಲ ಚರಣನಾದ ಕೃಷ್ಣನು ಆ ಹರಿಣಪ್ಲುತಿಯಲ್ಲಿ ಚತುರತೆಯಿಂದ ಜಗಿದು ಶ್ರೀದಾಮನನ್ನು ಸೋಲಿಸಿದನು. ಅದರಂತೆ ಬಲರಾಮನಾದರೂ ತನ್ನ ಚರಣಲಾಘವದರಿಂದ ಪ್ರಲಂಬನನ್ನು ಸಹಜವಾಗಿ ಗೆದ್ದನು. ಆಗ ಆಟದ ರೀತಿಯಂತೆ ಶ್ರೀದಾಮನು ಕೃಷ್ಣದನ್ನು ಬೆನ್ನ ಮೇಲೆ ಹೊತ್ತನು ಬಲರಾಮ ಪ್ರಲಂಬನನ್ನು ಬಗ್ಗಿಸಿ ಹತ್ತಿದನು. ಅದರಂತೆ ಗೆದ್ದ ಉಳಿದವರೂ ತಮ್ಮ ತಮ್ಮ ಎದುರು ಹುದ್ದುರಿಗಳನ್ನು ಬಗ್ಗಿಸಿ ಏರಿ ಕುಳಿತರು. ಕೂಡಲೇ ಸೋತಪಕ್ಷದವರು ಅಲ್ಲಿಂದ ಓಡುತೋಡುತ್ತ ಭಾಂಡೀರಗಿಡದವರೆಗೆ ಬೇಗ ಬೇಗನೆ ಹೋಗಿ ಅದನ್ನು ಮುಟ್ಟಿ ಮತ್ತೆ ಬೇಗನೆ ಘಾಟೆಗಟ್ಟಿಗೆ ಬಂದು ಮುಟ್ಟನಿಂತರು.

ಆದರೆ ಸಂಕರ್ಷಣನನ್ನು ಹೊತ್ತು ಓಡುತ್ತಲಿರುವ ಪ್ರಲಂಬನು ಉಳಿದವರಂತೆ ಭಾಂಡೀರಗಿಡದ ಕಡೆಗೆ ಓಡದೆ ವಿರುದ್ಧ ದಿಕ್ಕನ್ನು ಹಿಡಿದೇ ಓಡಹತ್ತಿದನು. ಬಲಶಾಲಿಯಾದ ಬಲರಾಮನ ದೇಹಭಾರವನ್ನು ತಾಳದಂತಾಗಿ ಆ ದೈತ್ಯನು ತುಸು ಮುಂದೆ ಹೋಗಿ ತನ್ನ ದೈತ್ಯದೇಹವನ್ನು ಉಬ್ಬಿಸಿದನು. ಆಗ ಅವನ ದೆವ್ವಿನಂತೆ ದೊಡ್ಡದಾದ ಆ ದೀರ್ಘಾಯಾಮ ದೇಹವು ಭಾಂಡೀರದಷ್ಟು ದೊಡ್ಡದಾಗಿ ಸುಟ್ಟು ಕರಕಾದ ಗುಡ್ಡದಂತೆ ಕಾಣುತ್ತಿತ್ತು. ಚಕ್ಕಡಿಗಾಲಿಯಂಥ ಕಣ್ಣು, ಭಯಂಕರವಾದ ಮೂಗು, ಕರಾಳವಾದ ಕೊರಳು, ಉರಿಯುವ ಮೋರೆ ಜೋತಾಡುವ ಉದ್ದ ಅರಿವೆ, ನೇತಾಡುವ ಹಾರಾಭರಣ ಗಳಿಂದ ಯಮನಂತೆ ಕಾಣುವ ಆ ದುಷ್ಟದೈತ್ಯನು ಆ ಬಲರಾಮನನ್ನು 'ಹೊತ್ತೊಯ್ಯುವಾಗ ಕಪ್ಪು ಮೋಡ ಬಂದು ಚಂದ್ರನನ್ನು ಎತ್ತಿಕೊಂಡೊಯ್ಯುವಂತೆ ತೋರುತ್ತಿತ್ತು. ಅವನ ಧಾವನರಭಸಕ್ಕೆ ಆಗ ಸಾವುಬದುಕುಗಳ ತೂಗುಯ್ಯಾಲೆಯಲ್ಲಿ ಜೀಕಿದಂತೆ ಜೀವ ಕೆಳಗೆಮೇಲಾದ ಬಲರಾಮನು ಗಾಬರಿಯಾಗಿ "ಕೃಷ್ಣ! ಗಿರಿಕಾಯನಾದ ಈ ದುಷ್ಟನು ಮೋಸಮಾಡಿ ನನ್ನನ್ನು ಬಲಾತ್ಕಾರದಿಂದ ಕೊಂಡೊಯ್ಯುತ್ತಲಿದ್ದಾನೆ. ಇವನನ್ನು ಹೇಗೆ ಮರ್ದನಮಾಡುವುದು?" ಎಂದು ಕೇಳಿದನು. ಆಗ ಉಳಿದೆಲ್ಲ ಗೋಪಾಲಕರೂ ತಮ್ಮ ಆಟ ಸಂಕರ್ಷಣನಿಗೆ ಪ್ರಾಣ ಸಂಕಟವಾದುದನ್ನು ಕಂಡು ಗಾಬರಿಯಾಗಿ ಬೆದರುಗುಗಳಿಂದ ನೋಡುತ್ತ ನಿಂತರು. ಕೃಷ್ಣನಿಗೆ ಮಾತ್ರ ಅದರಿಂದ ಅಚ್ಚರಿಯೂ ಆಗಲಿಲ್ಲ. ಅಂಜಿಕೆಯೂ ಬರಲಿಲ್ಲ. ಅವನಿಗೆ ಮತ್ತಿಷ್ಟು ಆನಂದವಾಗಿ "ಅಣ್ಣ! ಇಷ್ಟೇಕೆ ಗಾಬರಿಯಾಗುವಿ? ಅಥವಾ ನೀನಾದರೂ ಈಗ ಹೆದರುವುದಿಲ್ಲವೆನ್ನುವುದು ನನಗೆ ಗೊತ್ತು. ಆದರೆ ಮಾನವ ದೇಹವನ್ನು ಧರಿಸಿದುದರಿಂದ ಇವನನ್ನು ನಿಗ್ರಹಿಸುವ ಬಗೆ ಹೇಗೆಂದು ಕೇಳುತ್ತಲಿರುವಿ. ಅಣ್ಣ! ಜಗದಂಡ ಮಂಡಲಕ್ಕೆಲ್ಲ ಛತ್ರದಂಡದಂತೆಯೂ ಬ್ರಹ್ಮಾಂಡ ಭವನಕ್ಕೆ ಮುಖ್ಯಾಧಾರ ಭೂತವಾದ ಸ್ತಂಭದಂತೆಯೂ ಇರುವ ಸಾವಿರ ಹೆಡೆ ಸಾವಿರಕಣ್ಣು ಸಾವಿರ ಚರಣಗಳುಳ್ಳ ವಿಶ್ವಾಧಾರನಾದ ನಂತ ನಾಮಕನಾದ ನಿನ್ನ ಆ ಆದಿಶೇಷರೂಪವನ್ನು ಸ್ಮರಿಸು. ಈ ಮೂಢ ದೈತ್ಯನನ್ನು ಮುಷ್ಟಿಯಿಂದ ಮರ್ದನಮಾಡಿ ಕ್ಷಣಾರ್ಧದಲ್ಲಿ ವಿಜಯಿಯಾಗಿ ಬಾ" ಎಂದು ಹುರಿದುಂಬಿಸಿದನು.

ಕೃಷ್ಣನ ಈ ಮಾತಿನಿಂದಲೇ ಮೈತುಂಬ ಬಲಬಂದಂತಾದ ಬಲರಾಮನು ತನ್ನ ನಿಜರೂಪದ ಸ್ಮರಣದಿಂದ ವೀರ್ಯವತ್ತರನಾಗಿ ಮುಷ್ಟಿಯನ್ನು ಬಿಗಿದು ಆ ನೀಚನ

ನಡುನೆತ್ತಿಯ ಮೇಲೆ ಒಂದು ಏಟವನ್ನು ಹಾಕಿದನು. ಆದರಿಂದ ಅವನ ಶಿರಃಪಿಂಡ ಕೆಳದೇಹದಲ್ಲಿಯೇ ಹುಗಿದುಹೋಗಿ ಅನಾರುಂಡವಾಯಿತು. ಬಳಿಕ ಆ ಸಂಕರ್ಷಣನು ಅವನ ಆ ನಿಷ್ಕಪಾಲನಿಷ್ಕಂಧರವಾದ ಕಬಂಧ ಶರೀರವನ್ನು ಮೊಣಕಾಲಿನಿಂದ ಒಮ್ಮೆ ಒದೆಯಲು ತತ್‌ಕ್ಷಣ ಆ ದೈತ್ಯನು ಪ್ರಾಣ ಬಿಟ್ಟು ಕೆಳಗುರುಳಿದನು. ಗಿರಿಶಿಖರದಿಂದ ಧಾತು ರಸಗಳಿಳಿದಂತೆ ಅವನ ಶರೀರದಿಂದ ರಕ್ತಝರಿಗಳೇ ಹರಿದು ಸುರಿದವು. ಹೀಗೆ ಅವನನ್ನು ಕೊಂದು ಆ ಹಲಧರನು ಬಂದು ಸಮಯೋಚಿತ ಸೂಚನೆಗೈದ ಶ್ರೀಕೃಷ್ಣನನ್ನು ಆನಂದದಿಂದ ಆಲಿಂಗಿಸಿದನು. ಅವನು ಈ ಅಸಮಸಾಹಸ ಹಾಗೂ ವೀರ ವಿಕ್ರಮಗಳನ್ನು ಕಂಡು ಸಂತಸಗೊಂಡ ದೇವತೆಗಳು ಹೂಮಳೆಗರೆದು ದೇವದುಂಬಿ ಗಳನ್ನುಪ್ಪಿರಿಸಿ ಹೊಗಳಿ ಹಾಡಿ ಪಾಡಿದರು. ಅವನ ಅದ್ಭುತವಾದ ಬಲವನ್ನು ಬಣ್ಣಿಸಿದರು. ಆದರಿಂದ ಅವನು ಬಲದೇವ ಬಲರಾಮ ಎಂದು ಜಗತ್ತಿನಲ್ಲಿ ಖ್ಯಾತನಾದನು.

## ಗೋವರ್ಧನ ಉದ್ಧಾರ

ಹೀಗೆ ರಾಮಕೃಷ್ಣರು ವನಚಾರಿಗಳಾಗಿ ವತ್ಸಪಾಲನ ವಿವಿಧ ಖೇಲನ-ದೈತ್ಯಭೇದನಗಳನ್ನು ಮಾಡುತ್ತ ವೃಂದಾವನದ ಪ್ರಾಂತಪರಿಸರದ ಪಾವನಕುಂಜನಿ ಕುಂಜಗಳಲ್ಲಿ ಮಂಜುವೇಣು ಗಾನಗೈಯ್ಯುತ್ತ ಗೋವರ್ಧನ ಗಿರಿಯ ಹಸಿರು ಮೈದಾನಗಳ ಹೊಸ ಹುಲ್ಲಿನ ರಸಗವಲಗಳ ಮೀಸಲು ಮುರಿದು ದನಕರುಗಳಿಗೆ ಎಡೆ ನೀಡುತ್ತ, ಹಾಡುತ್ತ ಆಡುತ್ತಲಿರುವಾಗ ಮಳೆಗಾಲ ಕಳೆದು ಶರದೃತುವು ವನಸ್ಥಲಿಯಲ್ಲಿ ಕಾಲಿರಿಸಿತು.

ಆಗ ಒಂದು ದಿನ ಅವರು ದನಗಳ ಹಿಂಡನ್ನು ಮೇಯಿಸಿಗೊಂಡು ಸಾಯಂಕಾಲದಲ್ಲಿ ಅಡವಿಯಿಂದ ಮರಳಿ ವೃಂದಾವನಕ್ಕೆ ಬಂದಾಗ ಜನರೆಲ್ಲರೂ ಉತ್ಸಾಹದಿಂದ ಇಂದ್ರೋತ್ಸವದ ಸಿದ್ಧತೆಯಲ್ಲಿ ತೊಡಗಿದ್ದರು. ಆಗ ಕೌಮಾರಸಹಜವಾದ ಕುತೂಹಲ ದಿಂದ ಕೃಷ್ಣನು "ನೀವೆಲ್ಲ ಇಷ್ಟು ಉತ್ಸಾಹದಿಂದ ಆಚರಿಸುತ್ತಲಿರುವ ಈ ಇಂದ್ರೋ ವತ್ಸವೆಂದರೆ ಏನು? ಅದನ್ನು ಏಕೆ ಆಚರಿಸಬೇಕು?" ಎಂದು ಹಿರಿಯರನ್ನು ಕೇಳಿದನು. ಆಗ ಓರ್ವ ಗೋಪವೃದ್ಧನು ಆದರದಿಂದ ಕೃಷ್ಣನಿಗೆ ಆ ಶಕ್ರೋತ್ಸವದ ಉದ್ದೇಶ ಫಲ ಪ್ರಯೋಜನ ಪ್ರಕಾರ ಪರಿಣಾಮಗಳನ್ನೆಲ್ಲ ವಿವರಿಸುತ್ತ.

"ಶತ್ರುಗಳನ್ನು ಸಂಹಾರಮಾಡಲು ಸಮರ್ಥನಾದ ಶ್ರೀಕೃಷ್ಣ! ನಾವು ಬಹುಕಾಲದಿಂದ ಈ ಇಂದ್ರೋತ್ಸವವನ್ನು ಆಚರಿಸುವ ಉದ್ದೇಶವೆಂದರೆ ಇಂದ್ರನು ದೇವತೆಗಳಿಗೆಲ್ಲ ಅಧಿನಾಯಕನು. ಮೋಡಗಳಿಗೆಲ್ಲ ನೀರನ್ನು ಪೂರೈಯಿಸುವವನು ಅವನೇ ಆದುದರಿಂದ ಅವನು ಅಪ್ಪಣೆ ಮಾಡಿದರೆ ಮೇಘ ಪಟಲಗಳು ನೀರು ತುಂಬಿಕೊಂಡು ಒಡೆಯನ ಬಾಣವಾದ ಇಂದ್ರಚಾಪ ಕಾಂತಿಯಿಂದ ರಂಗುರಂಗಾಗಿ ಕಂಗೊಳಿಸಿ ಬೆಟ್ಟಬಯಲುಗಳಲ್ಲಿ ಬೇಕಾದಷ್ಟು ಮಳೆಗರೆಯುತ್ತವೆ. ಆದರಿಂದ ತೆಗ್ಗುತವರು ದಿಬ್ಬ ದಿನ್ನೆ ಬೆಟ್ಟಬಯಲುಗಳಲ್ಲಿ ಹಚ್ಚಹಸಿರು ಕುಸುರೊಡೆದು ಎಲ್ಲೆಡೆಗೂ ಹುಲ್ಲು ಕಳಕಳಿಸಿ ನಿಲ್ಲುವುದು. ಸವಿಯಾದ ನೀರು ತುಂಬಿದ ಜಲಾಶಯಗಳಿಂದ ಜಗತ್ತೇ ಅಮೃತಮಯವಾದಂತೆ ತೋರುತ್ತದೆ. ಆ ಎಳೆ ಹುಲ್ಲು ತಿಂದು ಈ ತಿಳಿ ನೀರು ಕುಡಿದ ನಮ್ಮ ಗೋವುಗಳು ಯಥೇಷ್ಟವಾಗಿ ಹಾಲು ಕರೆಯುತ್ತವೆ. ಮತ್ತು ಭೂಮಿಯಲ್ಲಿ ಕಾಳುಕಡಿಗಳೂ ಸಮೃದ್ಧವಾಗಿ ಬೆಳೆಯುತ್ತವೆ. ಹೀಗೆ ಯಥೇಷ್ಟ ಧಾನ್ಯ, ಯಥೇಚ್ಛ ಹೈನ, ಎರಡರಿಂದ ಜಗತ್ತಿನಲ್ಲಿಯ ಜನರೆಲ್ಲ ಹೃಷ್ಟರಾಗಿ ಪುಷ್ಟರಾಗಿ ನಿಶ್ಚಿಂತರಾಗಿ ಇರುವರು. ಮೋಡ ಮಳೆಗರೆವ ದೇಶದಲ್ಲಿ ಬರದ ಭೀತಿಯಿಲ್ಲ, ಹಸಿವೆಯ

ಅಂಜಿಕೆಯಿಲ್ಲ. ತಿನ್ನಲಿಕ್ಕೆ ಸಾಕಷ್ಟು ಅನ್ನವಿದ್ದಲ್ಲಿ ಅನೀತಿಯಿಲ್ಲ, ಅತ್ಯಾಚಾರವಿಲ್ಲ. ಆದರಿಂದ ದೇಶದಲ್ಲಿ ಶಾಂತಿ ಸ್ಥಾಪಿತವಾಗಿ ಜನರೆಲ್ಲ ಸುಖದಿಂದಿರುವರು. ಇದಕ್ಕೆಲ್ಲ ಮೂಲು ಮಳೆ. ಆ ಮಳೆ ಮಾಡುವವು ಮೋಡಗಳು. ಆ ಮೋಡಗಳಿಗೆ ಪ್ರೇರಕನು ದೇವೇಂದ್ರ. ಆದುದರಿಂದ ಜಗತ್ತಿನಲ್ಲಿಯ ಜನರೆಲ್ಲರೂ ಇಂದ್ರನನ್ನು ಪೂಜಿಸುವ ಸಂಪ್ರದಾಯ ಬಂದಿದೆ. ಅದರಂತೆ ನಾವಾದರೂ ಸೂರ್ಯಕಿರಣ ರೂಪವಾದ ಆಕಳುಗಳನ್ನು ಹಿಂಡಿ ಅವುಗಳ ಮೋಡಗೆಚ್ಚಲದಿಂದ ಜಗದುದ್ದ ಹಾಲು ಸುರಿದು ಎಲ್ಲರಿಗೂ ಅಮೃತ ಪ್ರಾಶನ ಮಾಡಿಸುವ ಆ ಶಚೀಪತಿಯ ಮಹೋಪಕಾರವನ್ನು ನೆನೆದು ಈ ಮಹೋತ್ಸವವನ್ನು ಆಚರಿಸುತ್ತಲಿದ್ದೇವೆ'' ಎಂದು ಹೇಳಿದನು.

ತುರುಗಾಹಿ ಕುಲಕ್ಕೆ ಹಿರಿಯನಾದ ಆ ಗೋಪವೃದ್ಧನ ಮಾತು ಕೇಳಿ ಇಂದ್ರನ ಶಕ್ತಿ ಸಾಮರ್ಥ್ಯವನ್ನು ತಿಳಿದರೂ ನಿರ್ಭಯನಾದ ಆ ಕೃಷ್ಣನು ನಕ್ಕು ನುಡಿದನು. ''ತಾತ ! ನಾವು ವನಚಾರಿಗಳಾದ ಗೋಪಾಲಕರು. ನಮ್ಮ ದೇವತೆ ಗೋಮಾತೆ, ಆಕಳು ಹುಲ್ಲುಗಾವಲು ಮತ್ತು ಪರ್ವತ ಈ ಮೂರೂ ನಮ್ಮ ಆರ್ಚನೀಯವಾದ ತ್ರಿಮೂರ್ತಿಗಳು. ಒಕ್ಕಲಿಗರಿಗೆ ಒಕ್ಕಲುತನವು ವೃತ್ತಿ. ವೈಶ್ಯರಿಗೆ ವ್ಯಾಪಾರವೇ ಉಪಜೀವನ ಸಾಧನವಾದ ವೃತ್ತಿ. ನಮ್ಮಂಥವರಿಗೆ ಗೋಧನವೇ ಮುಖ್ಯವೃತ್ತಿ. ಯಾರಿಗೆ ಯಾವ ವೃತ್ತಿಯು ವಿಹಿತವಾಗಿದೆಯೋ ಅದೇ ಅವರಿಗೆ ದೈವ. ಪಶ್ವಾಜೀವಿಗಳಾದ ನಮಗೆ ಪಶುಪಾಲನೆಯೇ ಧರ್ಮ. ಅದೇ ಸ್ವಕರ್ಮ. ಸ್ವಜಾತಿಗುಚಿತವಾದ ಕರ್ಮಾನುಷ್ಠಾನದಿಂದಲೇ ದೇವರು ಪ್ರೀತನಾಗುವನು. ಅದನ್ನು ಬಿಟ್ಟು ಬೇರೊಂದು ಜಾತಿಯವರಿಗೆ ಹೇಳಿದ ಧರ್ಮವನ್ನು ಅನುಸರಿಸಿದರೆ ಅವನಿಗೆ ಇಲ್ಲಿಯೂ ಸುಖವಿಲ್ಲ. ಪರದಲ್ಲಿಯೂ ಸದ್ಗತಿಯಿಲ್ಲ. ಅದಕ್ಕಾಗಿ ನಾವು ಗೋಗಳನ್ನೂ ಆ ಗೋಗಣಗಳಿಗೆ ಉಪಜೀವನ ಸಾಧನವಾದ ಗೋವರ್ಧನ ಗಿರಿಯನ್ನೂ ಪೂಜಿಸೋಣ.

ಬ್ರಾಹ್ಮಣರಿಗೆ ಮಂತ್ರಯಜ್ಞ ಒಕ್ಕಲಿಗರಿಗೆ ಕೃಷಿಯಜ್ಞ ಗೋಪಾಲಕರಿಗೆ ಗಿರಿಯಜ್ಞವು ಕರ್ತವ್ಯವೆಂದು-

**''ಮಂತ್ರಯಜ್ಞಪರಾ ವಿಪ್ರಾಃ**
**ಸೀತಾಯಜ್ಞಾಶ್ಚ ಕರ್ಷಕಾಃ**
**ಗಿರಿಯಜ್ಞಾಸ್ತಥಾ ಗೋಪಾಃ**
**ಇಜ್ಯೋಽಸ್ಮಾಭಿರ್ಗಿರಿರ್ವನೇ''**

ಸಂಪ್ರದಾಯಾಭಿಜ್ಞರು ಹೇಳುವರು. ಆದ್ದರಿಂದ ನಾವೆಲ್ಲರೂ ಗಿರಿಯಜ್ಞವನ್ನು ಮಾಡುವುದೇ ನನಗೆ ಸಮಂಜಸವೆಂದು ತೋರುವುದು. ಆ ಗುಡ್ಡದ ಮೇಲೆ ಒಂದು ಪ್ರಶಸ್ತವಾದ ಗಿಡದ ಕೆಳಗಾಗಲಿ ಅಥವಾ ಬೇರೊಂದು ವಿಶಾಲವೇದಿಕೆಯ ಮೇಲಾಗಲಿ ಸ್ವಸ್ತಿವಾಚನಾದಿ ಶುಭಕರ್ಮಗಳನ್ನು ಮಾಡಿ ಗೋವರ್ಧನೋತ್ಸವವನ್ನು ಪ್ರಾರಂಭಿಸಿರಿ. ಅಲ್ಲಿ ಪಶುಬಲಿಯಿತ್ತು. ಕುಂಡ ಮಂಡಪಾದಿಗಳನ್ನು ಸ್ಥಾಪನಮಾಡಿ, ಗೋಪಾಲಕುಲದ ನರನಾರಿಯರೆಲ್ಲ ಕೂಡಿ, ದೊಡ್ಡ ಜಾತ್ರೆಯನ್ನು ಶುರುಮಾಡಿರಿ. ನಮ್ಮ ಕರು ಆಕಳು ಮತ್ತು ಹೋರಿಗಳಿಗೆಲ್ಲ ಇದೀಗ ಶರತ್ಕಾಲದಲ್ಲಿ ಅರಳಿದ ಹೊಸ ಹೂಗಳ ಹಾರ ತುರಾಯಿಗಳನ್ನು ಹಾಕಿ ಆ ಗೋವರ್ಧನಗಿರಿಯ ಪ್ರದಕ್ಷಿಣೆ ಹಾಕಿಸಿ ಸಡಗರದಿಂದ ಮೆರವಣಿಗೆ ಮಾಡಿಸಿ ಕರೆತನ್ನಿರಿ. ದನಕರುಗಳಿಗೆ ರುಚಿಯಾದ ಹುಲ್ಲು ಶುಚಿಯಾದ ನೀರುಗಳನ್ನೀಯುವ

ಸುಂದರವಾದ ಶರತ್ಕಾಲವು ಪ್ರಾಪ್ತವಾದಾಗ ಪೂಜೆ ಮಾಡಿರಿ. ಅದರಂತೆ ಗಿರಿಪೂಜೆಯ ಮಾಡಿರಿ. ಇಂದ್ರನ ಪೂಜೆಯನ್ನು ಬೇಕಾದರೆ ಅವನ ಲೋಕದಲ್ಲಿ ನಾಕದಲ್ಲಿ ಇರುವ ದೇವತೆಗಳು ಯಥೇಚ್ಛವಾಗಿ ಮಾಡಿಕೊಳ್ಳಲಿ. ನಮಗೆ ಗಿರಿಪೂಜೆಯೇ ಹರಿಪೂಜೆ. ಈ ಗೋಯಜ್ಞವನ್ನು ನೀವು ನನ್ನ ಸೌಮ್ಯ ಸೂಚನೆಯ ಮೇರೆಗೆ ಮಾಡದಿದ್ದರೆ ನಾನೇ ಬಲವಂತದಿಂದಾದರೂ ಮಾಡಿಸಲೇ ಬೇಕಾಗುವುದು. ನಿಮಗೆಲ್ಲ ನನ್ನ ಮೇಲೆ ನಿಜವಾದ ಪ್ರೇಮ ಭಕ್ತಿ ಶ್ರದ್ಧೆಗಳಿದ್ದರೆ ಕೂಡಲೇ ನಾನು ಹೇಳಿದಂತೆ ಗೋಪೂಜೆ ಗಿರಿಪೂಜೆಗಳಿಗೆ ಸಿದ್ಧರಾಗಿರಿ'' ಎಂದು ಹೇಳಿದನು. ಶ್ರೀಕೃಷ್ಣನ ಆ ಸ್ಪಷ್ಟ ಭಾಷಣವನ್ನು ಕೇಳಿ ಸಂತುಷ್ಟರಾದ ಗೋಪಾಲಕರು ನಿಶ್ಶಂಕೆಯಿಂದ ನುಡಿದರು. ''ಕೃಷ್ಣ, ಗ್ರಹಗಣಕ್ಕೆ ಸೂರ್ಯನಿದ್ದಂತೆ ನೀನೇ ನಮಗೆ ಪ್ರಮಾಣ. ಆ ಇಂದ್ರೋತ್ಸವವು ಇಲ್ಲಿಗೆ ನಿಲ್ಲಲಿ. ಇಂದಿನಿಂದ ಶ್ರೀಕೃಷ್ಣ ಪ್ರಣೀತ ಗೋಯಜ್ಞ ಹಾಗು ಗಿರಿಉತ್ಸವಗಳೇ ನಮಗೆ ಹಬ್ಬಗಳಾಗಿ ಮುಖ್ಯ ಕರ್ತವ್ಯಗಳಾಗುವವು.

ಹೀಗೆ ಅದರ ಅಭಿಮಾನದಿಂದ ನುಡಿದು ಎಲ್ಲ ಗೋಪರೂ ಉತ್ಸವದ ಸಿದ್ಧತೆಯನ್ನು ನಡೆಯಿಸಿದರು. ಸ್ನಾನಪಾನಾದಿಗಳಿಗಾಗಿ ಕೂಡ ಹಂಡೆಗಳಲ್ಲಿ ನೀರು ತುಂಬಿಟ್ಟರು. ಹಾಗೂ ದೊಡ್ಡ ದೊಡ್ಡ ಹೌದುಗಳಲ್ಲಿ ಹಾಲು ತುಂಬಿ ಡೋಣಿಗಳಲ್ಲಿ ಮೊಸರು ಹಾಕಿ ಹರಿವೆಗಳಲ್ಲಿ ತುಪ್ಪವನ್ನು ತಂದಿಟ್ಟು ಕೊಪ್ಪರಿಗೆಗಳಲ್ಲಿ ಬೆಣ್ಣೆಗಳನ್ನು ತುಂಬಿಟ್ಟರು. ಇದಲ್ಲವೇ ಬೇರೆ ಬೇರೆ ತರಹದ ಪಕ್ವಾನ್ನ, ಮೃಷ್ಟಾನ್ನ, ಭಕ್ಷ್ಯ, ಭೋಜ್ಯ, ಲೇಹ್ಯ, ಪೇಯ, ಚೋಷ್ಯ ಮೊದಲಾದ ಎಲ್ಲ ವಿಧವಾದ ಆಹಾರವನ್ನೂ ಹಲಕೆಲವರಿಗೆ ಆಮಿಷಾಹಾರನ್ನೂ ಕೂಡ ಮೂರು ದಿನಗಳ ಮಟ್ಟಿಗೆ ಸಾಕಾಗಿಮಿಕ್ಕುವಷ್ಟು ಸಿದ್ಧಮಾಡಿಟ್ಟರು. ಮಂಗಲವಾದ್ಯಗಳು ಭೋರ್ಗರೆಯ ತೊಡಗಿದವು. ಆ ಉತ್ಸವದ ಭೇರಿಯ ನಾದವನು ಕೇಳಿದ ಕೂಡಲೇ ಹೋರಿಗಳು ಹೂಂಕರಿಸಿದವು. ಆಕಳುಗಳು ಹಂಬಾರವಗೈದವು. ಘೂಳಿಗಳು ಹೂಂಕಾರ ಹಾಕಿದವು. ಕರುಗಳು ಕುಣಿದಾಡಿದವು. ಇಡೀ ವೃಂದಾವನದ ತುಂಬ ಉತ್ಸವದ ಉತ್ಸಾಹ ತುಂಬಿ ತುಳುಕಹತ್ತಿತು. ಗೋಪ ಗೋಪಿಯರು ಅನಂದ್ರೋಕದಿಂದ ಪ್ರಮತ್ತರಾಗಿ ಉತ್ಸವದ ಕ್ರೀಡೆಗಳಲ್ಲಿ ಮೈಮರೆತರು.

ಅಲ್ಲಿ ಉತ್ಸವದಲ್ಲಿ ಹಾಲಿನ ಕಾವಲಿಯೇ ಹರಿಯಿತು. ಮೊಸರಿನ ಮಡುಗಳು ಡಮಡಮಾಯಿಸಿದವು. ತುಪ್ಪದ ಪ್ರವಾಹವೇ ಹರಿಯಿತು. ಅನ್ನದ ಪರ್ವತವನ್ನೇ ಒಟ್ಟಿದರು. ಮಾಂಸದ ರಾಶಿಯನ್ನೇ ಹಾಕಿದರು. ಬೇಕಾದವರು ಬೇಕಾದಷ್ಟು ತಿಂದು ತೇಗಿದರು. ಉಂಡು ಉರುಳಾಡಿದರು. ಕುಡಿದು ಕುಣಿದಾಡಿದರು. ಒಳ್ಳೇ ಸುಮೂಹೂರ್ತದಲ್ಲಿ ಎಲ್ಲರೂ ಕೂಡಿ ಗಂಧಮಾಲ್ಯ ದೀಪ ಧೂಪ ನೈವೇದ್ಯ ಮುಂತಾದವುಗಳಿಂದ ಗಿರಿಪೂಜೆಯನ್ನು ಮಾಡಿದರು. ಆ ಗಿರಿಗಾಗಿ ಇತ್ತ ಉತ್ತಮೋತ್ತಮವಾದ ಹಾಲು ಮೊಸರು ಪಕ್ವಾನ್ನಗಳ ಸಾರವನ್ನೆಲ್ಲ ಗೋವರ್ಧನರೂಪಧಾರಿಯಾಗಿ ಶ್ರೀಹರಿಯೇ ಸ್ವೀಕರಿಸಿದನು. ಯಥೇಚ್ಛ ಭೋಜನ ಆಕಂಠಪಾನ ಪರ್ಯಾಪ್ತಪ್ರದಕ್ಷಿಣೆಗಳಿಂದ ಬ್ರಾಹ್ಮಣರೂ ಕೂಡ ಪರಿತೃಪ್ತರಾಗಿ ಆನಂದದಿಂದ ಆಶೀರ್ವದಿಸಿ ಸಂತುಷ್ಟರಾಗಿ ಹೋದರು. ಇದೇ ರೀತಿಯಾಗಿ ಗಿರಿಯಜ್ಞವು ಯಥಾಸಾಂಗವಾಗಿ ಅತ್ಯಂತ ವಿಜೃಂಭಣೆಯಿಂದ ಮೂರು ದಿನ ನಡೆದ ಬಳಿಕ ಕೊನೆಯ ದಿನ ಅವಭೃಥಸ್ನಾನದ ಸಮಯದಲ್ಲಿ ''ಯಥೇಷ್ಟ ಮೃಷ್ಟಾನ್ನ ತಿಂದು, ಸಾಕಾಗುವಷ್ಟು ಗೋರಸವನ್ನು ಕುಡಿದು ನಾನು ಅತ್ಯಂತ ತೃಪ್ತನಾಗಿದ್ದೇನೆ'' ಎಂದು ಕೃಷ್ಣನು ದಿವ್ಯರೂಪದಿಂದ ನುಡಿದು ಮಧುರ ಹಾಸ್ಯ ಮಾಡಿದನು.

ಆಗ ಗೋವರ್ಧನಗಿರಿಯ ಶಿಖರದ ತುಟ್ಟತುದಿಯ ಮೇಲೆ ಗಿರಿಯ ಆಕಾರದಿಂದಲೇ ನಿಂತುಕೊಂಡ, ದೇವಲೋಕದ ಮಂದಾರ ಕುಸುಮದ ಮಾಲೆಗಳನ್ನು ಧರಿಸಿದ ಕೃಷ್ಣನನ್ನು ಕಂಡು ಎಲ್ಲ ಗೋಪಾಲಕರೂ ಧಾವಿಸಿಹೋದರು. ಕೃಷ್ಣನಾದರೂ ತನ್ನ ಆ ರೂಪವನ್ನು ಗೋಪಕಲೇವರದಲ್ಲಿಯೇ ಮರೆಮಾಚಿ ಅವರೆಲ್ಲರ ಕೂಡ ತಾನೂ ಹೋಗಿ ತನ್ನ ರೂಪಕ್ಕೆ ತಾನೇ ವಂದಿಸಿದನು. ಎಲ್ಲ ಗೋಪಾಲಕರೂ ಆ ಮೂರ್ತಿಗೆ ವಂದಿಸಿ ಭಕ್ತಿಯಿಂದ ಬಾಗಿ "ಭಗವನ್ ನಾವೆಲ್ಲರೂ ನಿನ್ನ ದಾಸಾನುದಾಸರಂದ್ದು ನಿನ್ನ ಕೈಂಕರ್ಯಕ್ಕಾಗಿ ಸಿದ್ಧರಾಗಿದ್ದೇವೆ. ನಮಗೇನು ಅಪ್ಪಣೆ?" ಎಂದು ಕೇಳಿದರು.

ಆಗ ಭಗವಂತನು ಪರ್ವತದಿಂದಲೇ ಶಬ್ದವನ್ನು ಹೊರಡಿಸಿ ಅವರಿಗೆ ಉತ್ತರಕೊಟ್ಟನು. "ಇಂದಿನಿಂದ ನಿಮಗೆಲ್ಲ ಗೋಗಳಲ್ಲಿ ದಯೆಯಿದ್ದದ್ದೇ ನಿಜವಾದರೆ ನೀವೆಲ್ಲರೂ ಇದೇ ರೀತಿಯಾಗಿ ನನ್ನನ್ನೇ ಪೂಜಿಸತಕ್ಕದ್ದು. ನಿಮಗೆಲ್ಲ ನಾನೇ ಮುಖ್ಯ ದೇವತೆ ಇದ್ದು ನಿಮ್ಮ ಎಲ್ಲ ಮನೋಭೀಷ್ಟಗಳನ್ನು ನಾನು ಪೂರ್ಣಮಾಡುತ್ತೇನೆ. ಈ ನಂದಗೋಪಾದಿ ಸಕಲ ಗೋಪಾಲಕರಿಗೂ ಪ್ರೀತನಾದ ನಾನು ಸಹಸ್ರಾಧಿಕ ಹಸುಗಳ ಹೈನವನ್ನು ಭೋಗ ಮಾಡಲು ಬರುವಂತೆ ವಿಪುಲವಾದ ಗೋಧನವನ್ನು ಇತ್ತು ಸರ್ವರಿಗೂ ಕ್ಷೇಮಾರಾಮಗಳನ್ನು ಉಂಟುಮಾಡುವೆನು. ನೀವೆಲ್ಲರೂ ಈಗಲೇ ಕರುಸಹಿತವಾಗಿ ಎಲ್ಲ ಆಕಳುಗಳಿಂದ ನನಗೆ ಪ್ರದಕ್ಷಿಣೆಯನ್ನು ಹಾಕಿಸಿರಿ. ಈ ಧೇನುನೀರಾಜನದಿಂದ ನನಗೆ ನಿಜವಾಗಿಯೂ ಬಹಳೇ ಸಂತೋಷವಾಗವುದು."

ಗಿರಿರೂಪಿಯಾದ ಹರಿಯ ಈ ಮಾತನ್ನು ಕೇಳಿ ಆಕಳು, ಎತ್ತು, ಹೋರಿ, ಕರು, ಮಣಕ, ಘೂಳಿ ಮೊದಲಾದ ಎಲ್ಲ ಗೋಗಣಗಳು ಗುಂಪು ಗುಂಪಾಗಿ ಜೋರಿನಿಂದ ಗೋವರ್ಧನ ಗಿರಿಯ ಪ್ರದಕ್ಷಿಣೆಯನ್ನು ಹಾಕಲು ಮೊದಲು ಮಾಡಿದವು. ಹಾರ ತುರಾಯಿಗಳಿಂದ ಶೃಂಗಾರಿತವಾದ, ಕೋಡು ಗಿಲಗಿಲಿಸುವ ಕಂಠಗಂಟೆಗಳಿಂದ ಅಲಂಕೃತವಾದ ಕೊಡಗೆಚ್ಚಲಿನ ಗೋಮಾತೆಯರ ಹಿಂದಿನಿಂದ ವಿಧವಿಧವಾದ ಬಣ್ಣದ ನವಿಲಗಣ್ಣು ಬಟ್ಟೆ ಹೂ ಮಾಲೆ ಚಿಗುರು ಚಂದನಗಳನ್ನು ಧರಿಸಿದ ಗೋಪಾಲಕರು ಕೈಯಲ್ಲಿ ಬಡಿಗೆಯನ್ನು ಹಿಡಿದುಕೊಂಡು ಹಾಡುತ್ತ ಬಾರಿಸುತ್ತ ಕುಣಿಯುತ್ತ ಹೊರಟದ್ದರು. ಹೀಗೆ ಸಂಭ್ರಮದಿಂದ ಗಿರಿಪ್ರದಕ್ಷಿಣೆಯು ಮುಗಿದಬಳಿಕ ಪರ್ವತದ ಕೃಷ್ಣರೂಪವು ಅಂತರ್ಧಾನವನ್ನು ಹೊಂದಿತು. ಆಗ ಗೋಪ ಕೃಷ್ಣನಾದರೂ ಗೋಪಾಲಕ ಗೆಳೆಯರೊಂದಿಗೆ ಪುರಕ್ಕೆ ಮರಳಿದನು. ಗಿರಿಯಜ್ಞದಲ್ಲಿ ನಡೆದ ಈ ದೈವೀಘಟನೆಯ ಅದ್ಭುತವನ್ನು ನೋಡಿ ಅವರಿಗೆಲ್ಲ ಆಶ್ಚರ್ಯವಾಗಿ ಅವರೆಲ್ಲರೂ ಕೃಷ್ಣನನ್ನು ಕೊಂಡಾಡಿದರು.

ಹೀಗೆ ತನ್ನ ಉತ್ಸವವು ಪ್ರತಿಬದ್ಧವಾದುದನ್ನು ನೋಡಿ ಇಂದ್ರನಿಗೆ ಮಾತ್ರ ಬಹಳ ಸಿಟ್ಟು ಬಂದಿತು. ಅವನು ತಕ್ಷಣದಲ್ಲಿಯೇ ಸಂವರ್ತಕ ಎಂಬ ಮೇಘ ಗಣವನ್ನು ಕರೆದು-

"ಬಲಿಷ್ಠರಾದ ಮೇಘ ಮಾತಂಗಗಳೇ! ನೀವೆಲ್ಲರೂ ಈಗಲೇ ದಾಮೋದರನ, ಮಾತು ಕೇಳಿ ನನ್ನ ಉತ್ಸವ ಮಾಡುವುದನ್ನು ಬಿಟ್ಟಿರುವ ನಂದಗೋಪಾದಿಗಳಿರುವ ವೃಂದಾವನಕ್ಕೆ ಹೋಗಿರಿ. ಅಲ್ಲಿ ಏಳು ದಿನಗಳವರೆಗೆ ಅಖಂಡವಾಗಿ ಮುಸಲಾಕಾವಾಗಿ ಜಡಮಳೆಯನ್ನು ಸುರಿಸಿ ಗೋಗಳು ಹಾಗೂ ಗೋಪಾಲಕರೆಲ್ಲ ನೀರಿನಲ್ಲಿ ಕೊಚ್ಚಿಕೊಂಡು ಹೋಗುವಂತೆ ಮಾಡಿರಿ. ನಿಮ್ಮ ಜೊತೆಗೆ ನಾನೂ ಕೂಡ ಐರಾವತವನ್ನು ಏರಿಕೊಂಡು ಬಂದು ಬಿರುಗಾಳಿ ಗುಡುಗು ಮಿಂಚು ಸಿಡಿಲು ಆಣೆಕಲ್ಲು ಮರಮಳೆಗಳನ್ನು ನಿರ್ಮಿಸಿ ಅವರ ಮೇಲೆ ಪ್ರಯೋಗಿಸುವೆನು.

ನನ್ನ ಚಂಡಮಾರುತ ನಿಮ್ಮ ಅಖಂಡ ವೃಷ್ಟಿ ಇವುಗಳಿಂದ ಉಸಿರು ಗಟ್ಟಿದಂತಾಗಿ ದನ ಕರು ಸಹಿತವಾಗಿ ಗೋಪಾಲಕರೆಲ್ಲರೂ ಸತ್ತುಹೋಗಲಿ'' ಎಂದು ಆಜ್ಞೆ ಮಾಡಿ ಕಳಿಸಿದನು.

ಅವನ ಆದೇಶದಂತೆ ಕಪ್ಪು ಬಣ್ಣದ ಹೆಮ್ಮೋಡಗಳ ದೊಡ್ಡಪಡೆಯೊಂದು ಆಕಾಶವನ್ನೆಲ್ಲ ವ್ಯಾಪಿಸಿ ದಶದಿಕ್ಕುಗಳನ್ನೆಲ್ಲ ಅಂಧಕಾರಮಯವಾಗಿಸಿತು. ಅದರಲ್ಲಿ ಕೆಲವು ಹೆಬ್ಬಾವಿನಂತಿದ್ದರೆ ಹಲವು ಮದ್ದಾನೆಯಂತೆ, ಕೆಲವು ಕರಿ ಮೊಸಳೆಗಳಂತೆ ಇದ್ದು ಘೋರಗರ್ಜನೆ ಮಾಡಿ ಜಗತ್ತನ್ನೇ ದಿಕ್ಕೆಡಿಸುವಂತೆ ಮಿಂಚು ಚಮಕಿಸಿ ಒನಕೆಯಂಥ ಹನಿಗಳನ್ನುದುರಿಸಿ ಭಯಂಕರವಾದ ಮಳೆಗರೆಯ ಹತ್ತಿದವು. ಆನೆಯ ಸೊಂಡೆಗಡುತರವಾಗಿ ಮಳೆ ಒಂದೇಸಮನೆ ಸದ್ದಿಲ್ಲದೇ ಸುರಿಯತೊಡಗಿದಾಗ ಸಮುದ್ರವೇ ಮುಗಿಲಿಗೇರಿ ಡಬ್ಬಾಗಿದೆ ಎಂದು ಜನರಿಗೆ ತೋರಿತು. ಚಂದ್ರನಿಲ್ಲ, ಸೂರ್ಯನಿಲ್ಲ, ಚಿಕ್ಕೆ ಇಲ್ಲ, ಬಿಸಿಲಿಲ್ಲ ಬೆಳಕಿಲ್ಲ. ಬರಿ ಗುಡ್ಡದಂಥ ಮೇಘಗಳು ಗುಡುಗು ಸಿಡಿಲುಗಳಿಂದ ಅಬ್ಬರಿಸಿ ಧಾರಾಕಾರವಾಗಿ ನೀರು ಸುರಿಸಹತ್ತಿದವು. ನೆಲವೆಲ್ಲ ಜಲಮಯವಾಗಿ, ದಿನವೆಲ್ಲ ಕತ್ತಲೆಯಿಂದ ರಾತ್ರಿಯಂತಾಗಿ, ನದಿಗಳೆಲ್ಲ ತುಂಬಿ ಸಮುದ್ರದಂತಾಗಿ ''ಪ್ರಪಂಚಕ್ಕೆಲ್ಲ ಪ್ರಳಯಕಾಲವೇ ಸನ್ನಿಹಿತವಾಯಿತು.'' ಎಂದು ಗೋಪಾಲಕರು ಗಾಬರಿಯಾಗಿ ಮಾತಾಡಹತ್ತಿದರು.

ಈ ಭಯಂಕರವಾದ ಪ್ರಳಯ ವೃಷ್ಟಿಗೆ ಹಕ್ಕಿಗಳು ಹೆದರಿ, ಪಶುಗಳು ಬೆದರಿ, ಮೃಗಗಳು ಚೆದರಿ, ನವಿಲುಗಳು ಕೆಟ್ಟದನಿಯಿಂದ ಒದರಿ, ದನಕರುಗಳು ಹಂಬಾರವದಿಂದ ಚೀರಹತ್ತಿದವು. ಗೋಪಗೋಪಿಯರು ನೀರಲ್ಲಿ ನಿಂತು ನಡುಗುತ್ತ ಜಲಪ್ರಳಯವೇ ಬಂದಿತೆಂದು ಅಳಲಿಕ್ಕೂ ಅವಕಾಶವಿಲ್ಲದಂತೆ ದಿಗ್ಭ್ರಾಂತರಾಗಿ ಮುಗಿಲು ಕಡೆಗೆ ನೋಡುತ್ತ ನಿಂತುಕೊಂಡರು. ಹಸು ಶಿಶು ಗೋ ಗೋಪಗೋಪಿಯರ ಕಷ್ಟ ಕಾರ್ಪಣ್ಯಗಳನ್ನು ಕಂಡ ದಾಮೋದರನ ಮನಸ್ಸು ಕರಗಿತು. ಅಂತಃಕರಣ ಮರಗಿತು. ಅವನು ತಕ್ಷಣದಲ್ಲಿಯೇ ಗೋವರ್ಧನಗಿರಿಗೆ ಹೋಗಿ ಎರಡೂ ತೋಳುಗಳಿಂದ ಎತ್ತಿ ಶಿಖರವನ್ನು ಹಿಡಿದು ಆ ಗುಡ್ಡವನ್ನು ಕಿತ್ತಿದನು. ಮತ್ತು ತನ್ನ ಎಡಗೈಯಿಂದ ಮಹತ್ತಾದ ಛತ್ತರಿಯಂತೆ ಅದನ್ನು ಎತ್ತಿ ಹಿಡಿದನು. ಎಲ್ಲ ಗೋಪಗೋಪಿಯರೂ ಓಡಿಹೋಗಿ ಅದರ ಕೆಳಗೆ ನಿಂತರು. ಆ ಹಿರಿಗಿರಿಯ ಬುಡದಲ್ಲಿ ಸುರಕ್ಷಿತವಾಗಿ ಬೆಚ್ಚಗೆ ನಿಂತುಕೊಂಡ ಅವರಿಗೆ ಒಂದು ಹನಿಯೂ ಕೂಡ ನೀರು ಬಡೆಯುತ್ತಿದ್ದಿಲ್ಲ.

ಕೃಷ್ಣನು ಅವರಿಗೆಲ್ಲ ''ನಾನು ದೇವತೆಗಳಿಗೂ ಅಶಕ್ಯವಾದ ಇಂಥ ಉತ್ತಮ ಗಿರಿಗೃಹವನ್ನು ನಿರ್ಮಿಸಿದ್ದೇನೆ. ಇಲ್ಲಿ ಮಳೆಗಾಳಿಗಳ ದಾಳಿಯ ಅಂಜಿಕೆಯಿಲ್ಲ. ಇದು ಐದು ಹರದಾರಿ ಉದ್ದವಿದ್ದು ಒಂದು ಹರದಾರಿ ಅಗಲವಿದೆ. ಇದರಲ್ಲಿ ನಿಮ್ಮ ದನಕರುಗಳಿಗೂ ಬೇರೆ ನಿಲ್ಲುವ ವ್ಯವಸ್ಥೆಮಾಡಿ ನಿಮ್ಮ ನಿಮ್ಮ ಸ್ನಾನ, ಪಾನ, ಶಯನ, ಭೋಜನಾದಿಗಳಿಗೂ ಬೇರೆ ಬೇರೆ ಪ್ರಶಸ್ತವಾದ ಸ್ಥಳಗಳನ್ನು ಆಯ್ದುಕೊಳ್ಳಿರಿ. ಬೇಕೆಂದರೆ ಇದರಿಂದ ನಾನು ತ್ರಿಲೋಕವನ್ನೇ ರಕ್ಷಿಸಬಲ್ಲೆ. ಅತ್ಯಂತ ಚಿಕ್ಕದಾದ ನಮ್ಮ ವ್ರಜರಕ್ಷಣೆ ಏನು ಮಹಾ'' ಎಂದು ಹೇಳಿದನು.

ಅದರಂತೆ ಗೋಪಾಲಕರು ತಮ್ಮ ದನಕರು ಭಾಂಡಿ ಭಂಡಿ ಇತರ ಎಲ್ಲ ಸಾಮಾನುಗಳನ್ನು ಕೂಡ ತೆಗೆದುಕೊಂಡು ಬಂದು ಮನೆಮಾಡಿ ಸುಖವಾಗಿ ಬೆಚ್ಚಗಾಗಿ ಏಳುದಿನ ವಾಸಮಾಡಿದರು. ಅವರಿಗೆ ಹೊರಗೆ ಹೊಡೆಯುತ್ತಿರುವ ಮಳೆ, ಗುಡುಗುತ್ತಿರುವ ಮೋಡ, ನಡುಗುತ್ತಿರುವ ಜಗತ್ತು, ಹೊಳೆಯುವ ಮಿಂಚು, ಬೀಸುವ ಗಾಳಿಗಳ ಕಲ್ಪನೆಯೂ ಕೂಡ ಬರುತ್ತಲಿರಲಿಲ್ಲ. ಎತ್ತಿ ಹಿಡಿದ ಗೋವರ್ಧನ ಗಿರಿಯ ಮೇಲೆ ಒಂದೇಸವನೆ ಮಳೆ

ಸುರಿಯುತ್ತಲೇ ಇತ್ತು. ತನ್ನ ಗವ್ಹರಬಾಯಿ ಮುಚ್ಚಿ ಕೃಷ್ಣನ ತೋಳ ತಲೆದಿಂಬಿಗೆ ತಲೆ ಇಟ್ಟು ಆ ಗೋವರ್ಧನ ಗಿರಿಯು ಮಲಗಿದಂತೆ ಕಾಣುತ್ತಿತ್ತು. ಮಲಗಿದ ಅದಕ್ಕೆ ಬಿದ್ದ ಸ್ವಪ್ನಗಳಂತೆ ಮೋಡಗಳು ಮೇಲೆ ತೇಲುತ್ತಿದ್ದವು. ವರ್ಷಾಽವಾತಾಽಘಾತಕ್ಕೆ ಆ ಗಿರಿಯ ಶಿಖರ ಗಿಡಗಂಟಿಗಳೆಲ್ಲ ನಡುಗಿದಾಗ ಆ ಗುಡ್ಡಕ್ಕೆ ಶೀತವಾಗಿ ಛಳಿಜ್ವರ ಬಂದಂತೆ ತೋರುತ್ತಿತ್ತು.

ಹೀಗೆ ಏಳುದಿನಗಳವರೆಗೆ ಏಕಪ್ರಕಾರವಾಗಿ ಮಳೆ ಸುರಿದರೂ ಗಾಳಿ ಬೀಸಿದರೂ ಕೃಷ್ಣರಕ್ಷಿತರಾದ ಗೋಗಳಿಗಾಗಲಿ ಗೋಪಾಲಕರಿಗಾಗಲಿ ಏನೂ ಆಗಲಿಲ್ಲ. ಆಗ ಇಂದ್ರನು ದೇವತೆಗಳಿಗೂ ದುರವಗಮ್ಯವಾದ ದಾಮೋದರನ ಮಹಾಮಹಿಮೆಯನ್ನು ಕಂಡು, ತನ್ನ ಪ್ರತಿಜ್ಞೆ ಸುಳ್ಳಾದುದನ್ನೂ, ತನ್ನ ಅಲ್ಪತೆಯನ್ನೂ ಮನಗಂಡು ಮೇಘಗಳಿಗೆಲ್ಲ ಮಳೆಗರೆಯುವುದನ್ನು ಬಂದು ಮಾಡಲು ಆಜ್ಞೆಮಾಡಿದನು. ತಕ್ಷಣದಲ್ಲಿ ಮಳೆನಿಂತಿತು, ಮೋಡಗಳಡಗಿದವು, ಸೂರ್ಯ ಬೆಳಗಿದನು. ಬೆಳಕು ಬಂದಿತು. ಬಿಸಿಲು ಬಿದ್ದಿತು. ಮುಗಿಲು ಬೆಳ್ಳಗಾಯಿತು. ನೆಲವು ಒಣಗಿತು. ಆಮೇಲೆ ಗೋಪಾಲಕರೆಲ್ಲ ಆ ಗಿರಿಗೃಹದಿಂದ ಹೊರಬಿದ್ದು ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಆಗ ಭಗವಂತನ ಗಿರಿಧಾರಣ ಗೋಕುಲ ರಕ್ಷಣಾದಿರೂಪ ಅಲೋಕ ಸಾಮಾನ್ಯ ಕರ್ಮಗಳನ್ನು ನೋಡಿ ಇಂದ್ರನಿಗೆ ಭಕ್ತಿ ಹುಟ್ಟಿ ಆ ದಾಮೋದರನನ್ನು ಅಲ್ಲಿಯವರೆಗೆ ಹೋಗಿ ಕಂಡು ಬರಬೇಕೆಂದು ಬುದ್ಧಿ ಹುಟ್ಟಿತು. ಕುತೂಹಲ ಕೆರಳಿತು. ಆಗಲೇ ಅವನು ನೀರಿಲ್ಲದ ಶಾರದ ಸಮಯದ ನೀರದದಂತೆ ಅಚ್ಚಬಿಳಿ ಬಣ್ಣದ, ಮದೋದಕದಿಂದ ಮುಖ ತೊಳೆದ ಮತ್ತ ವಾರಣವಾದ ಐರಾವತವನ್ನು ಏರಿಕೊಂಡು ಭೂಲೋಕಕ್ಕೆ ಬಂದನು. ಗೋವರ್ಧನಗಿರಿಶೃಂಗದ ಹರವಾದ ಹಾಸುಗಲ್ಲೊಂದರ ಮೇಲೆ ನೀಲಕಮಲದಂತೆ ಕಪ್ಪುಬಣ್ಣದ ಕಾಂತಿಯಿಂದೊಪ್ಪುವ ಶ್ರೀವತ್ಸಲಾಂಛಿತನಾದ ಮಹಾವಿಷ್ಣುವು ದನಗಾಹಿ ಹುಡುಗನ ವೇಷದಿಂದ ಕುಳಿತುಕೊಂಡದ್ದನ್ನು ನೋಡಿ ಇಂದ್ರನಿಗೆ ಅವನ ಹತ್ತಿರ ಹೋಗಲು ನಾಚಿಕೆಯಾಯಿತು.

ಏಕಾಂತದಲ್ಲಿರುವ ಆ ಶ್ರೀಕಾಂತನಿಂದ ತುಸುದೂರದಲ್ಲಿಯೇ ತನ್ನ ಐರಾವತವನ್ನು ಬಿಟ್ಟು ಬಂದು ಇಂದ್ರನು ವಿನಯದಿಂದ ನುಡಿದನು. ''ಕೃಷ್ಣ! ಆಕಳುಗಳನ್ನು ರಕ್ಷಿಸುವ ಉದ್ದೇಶದಿಂದ ನೀನು ಮಾಡಿದ ಕೆಲಸವು ಅತಿ ದಿವ್ಯವಿದ್ದು ಲೋಕೋತ್ತರವಾಗಿದೆ. ನಾನು ಮೇಘಗಳ ಮುಖಾಂತರ ಗೋಹತ್ಯೆಯನ್ನು ಮಾಡಹೊರಟಾಗ ಈ ಗಿರಿಯನ್ನೇ ಎತ್ತಿ ಹಿಡಿದು ಆ ಆಕಳುಗಳನ್ನೆಲ್ಲ ಕಾಯ್ದು ನನಗೆ ಬರುವ ಪಾತಕವನ್ನು ತಪ್ಪಿಸಿದ್ದರಿಂದ ನನಗೂ ಬಹಳೇ ಸಂತೋಷವೇ ಆಗಿದೆ. ಗುಡ್ಡವನ್ನು ಕಿತ್ತಿ ಕಡ್ಡಿಯಂತೆ ಎತ್ತಿ ಏಳುದಿನಗಳವರೆಗೆ ನೆಗಹಿ ಹಿಡಿದ ನಿನ್ನ ಅದ್ಭುತ ಕೃತ್ಯವನ್ನು ಕಂಡರೆ ಯಾರಿಗೆ ಅಚ್ಚರಿಯಾಗಲಿಕ್ಕಿಲ್ಲ! ದಿವ್ಯವಾದ ಗೋಲೋಕದ ಹಸುಗಳೆಲ್ಲ ನಿನ್ನ ಸೇವೆಗೆಂದು ಭೂಮಿಯಲ್ಲಿ ಈ ಗೋಪಾಲಕರ ಮನೆಯ ಆಕಳುಗಳಾಗಿ ಅವತಾರಮಾಡಿದ್ದು ಅವುಗಳಿಗೆಲ್ಲ ನನ್ನ ಮಹಾವೃಷ್ಟಿಯಿಂದ ಪ್ರಾಣಸಂಕಟವೇ ಪ್ರಾಪ್ತವಾಗಿತ್ತು. ಆ ಮೃತ್ಯುಭಯದಿಂದ ಆ ಧೇನು ವೃಂದವನ್ನೆಲ್ಲ ನೀನು ಸಂರಕ್ಷಣೆಮಾಡಿದ್ದರಿಂದ ಅತ್ಯಂತ ಸಂತುಷ್ಟವಾದ ಅವುಗಳು ನನ್ನನ್ನು ನಿನ್ನ ಹತ್ತಿರ ಕಳುಹಿಸಿಕೊಟ್ಟಿರುತ್ತವೆ. ಅವುಗಳ ಶ್ರದ್ಧಾಪೂರ್ವಕವಾದ ಸಂದೇಶವನ್ನು ಆಲಿಸು. ''ಶ್ರೀಕೃಷ್ಣ! ನಮ್ಮನ್ನೆಲ್ಲ ಈ ಜಲಗಂಡಾಂತರದಿಂದ ನೀನು ಪಾರುಮಾಡಿದ್ದರಿಂದ ಎತ್ತು ಕರುಗಳ ಬಳಗದೊಂದಿಗೆ ನಾವು ಸುಖದಿಂದ ಮನಬಂದಲ್ಲಿ ಸಂಚಾರಮಾಡುವಂತಾಯಿತು.

ಎತ್ತುಗಳನ್ನಿತ್ತು ರೈತರನ್ನೂ, ಹವಿಸ್ಸುಗಳಿಂದ ದೇವತೆಗಳನ್ನೂ, ಗೋಮಯದಿಂದ ಲಕ್ಷ್ಮೀದೇವಿಯನ್ನೂ ಆನಂದಪಡಿಸುವ ನಮಗೆ ಇಂದಿನಿಂದ ನೀವೇ ಇಂದ್ರ. ಮಾದವರೆಲ್ಲರ ಪ್ರಾಣರಕ್ಷಣೆಮಾಡಿದ ನಿನ್ನನ್ನು ಗೋಗಣದ ಇಂದ್ರಾಧಿಪತ್ಯದಲ್ಲಿ ಅಭಿಷೇಕ ಗೈಯ್ಯಲೆಂದು ದೇವೇಂದ್ರನ ಕೈಯಿಂದಲೇ ಹಾಲಿನ ಕೊಡಗಳನ್ನು ಕಳಿಸಿದ್ದೇವೆ. ಅದರಿಂದ ಅಭಿಷಿಕ್ತನಾಗಿ ನಮ್ಮನ್ನು ಅನುಗ್ರಹಿಸು'' ಎಂದು ಗೋಲೋಕದ ಹಸುಗಳು ಸಂದೇಶಿಸಿವೆ. ಇದರಂತೆ ಬ್ರಹ್ಮದೇವರಾದರೂ ಅತ್ಯಂತ ಭಕ್ತಿಯಿಂದ ನಿನಗೆ ಈ ಧೇನುವೃಂದ ಪುರಂದರನಾಗಬೇಕೆಂದು ಬಿನ್ನವಿಸಿಗೊಂಡಿದ್ದಾರೆ.

ಆದುದರಿಂದ ಕೃಷ್ಣ! ಇಂದಿನಿಂದ ನಾನು ದೇವತೆಗಳಿಗೆ ಇಂದ್ರ. ನಾನು ಬರಿ ಇಂದ್ರನಾದರೆ ಗೋಗಳು ನಿನಗೇ ನನಗಿಂತಲೂ ಉನ್ನತವಾದ ಸ್ಥಾನಮಾನ ಕೊಟ್ಟು ಉಪೇಂದ್ರ ಎಂದು ಕರೆದಿವೆ. (ಇಂದ್ರಸ್ಯ ಉಪರಿ ಇಂದ್ರನ ಮೇಲೆ ಇರುವವನು ಉಪೇಂದ್ರ) ಮತ್ತು ಗೋಗಳನ್ನು ಮಹಾಸಂಕಟದಿಂದ ರಕ್ಷಿಸಿದ್ದರಿಂದ ಇನ್ನು ಮೇಲೆ ಜನರು ನಿನ್ನನ್ನು 'ಗೋವಿಂದ' ಎಂದು ಕರೆಯುವರು. ಮಳೆಗಾಲದ ನಾಲ್ಕು ತಿಂಗಳಲ್ಲಿ ಕೊನೆಯ ಎರಡು ತಿಂಗಳದ ಶರತ್ಕಾಲದ ಮಂಗಲ ಪ್ರಸಂಗವೆಲ್ಲ ಇಂದಿನಿಂದ ನಿನ್ನ ಪೂಜೆಗಾಗಿಯೇ ಮೀಸಲಾಗಿರಲಿ. ಈ ಇಂದ್ರೋಪೇಂದ್ರರನ್ನು ಧ್ವಜಾಕಾರದ ಯಷ್ಟಿಗಳಲ್ಲಿ ಪೂಜಿಸುವವರು ಸಕಲ ಇಷ್ಟಾರ್ಥಗಳನ್ನು ಹೊಂದುವರು'' ಎಂದು ಹೇಳಿ ಇಂದ್ರನು ತಾನು ಮಾಡಿದ ಅತಿವೃಷ್ಟಿರೂಪವಾದ ತಪ್ಪನ್ನು ಒಪ್ಪಿಕೊಂಡು **''ದೇವರೂಪೇಣ ತತ್ಸರ್ವಂ ಕ್ಷಂತುಮರ್ಹಸಿ ಮೇ ಪ್ರಭೋ''** ಎಂದಂದು ನನ್ನ ಸರ್ವಾಪರಾಧಗಳನ್ನು ಕೃಷ್ಣದೇವ! ದಯಮಾಡಿ ಕ್ಷಮಿಸು. ವಾಮನಾವತಾರಕಾಲದಲ್ಲಿ ಗುಣದಿಂದ ನಾನು ಕಿರಿಯನಾಗಿದ್ದರೂ ಅದಿತಿಯ ಹೊಟ್ಟೆಯಿಂದ ಹುಟ್ಟುವ ಗರ್ಭಕ್ರಮದಲ್ಲಿ ನಿನಗೆ ಹಿರಿಯನಾಗಿದ್ದೆ. ಒಂದಾನೊಂದು ಕಾಲದ ಸೋದರ ಎಂಬ ಭಾವದಿಂದಾಗಲಿ ನಿನ್ನ ಭಕ್ತರಾದ ದೇವಗಣದ ನಾಯಕ ಎಂಬ ದೃಷ್ಟಿಯಿಂದಾಗಲಿ ನನ್ನ ಅಪರಾಧವನ್ನೆಲ್ಲ ನೀನು ಕ್ಷಮಿಸಬೇಕು'' ಎಂದು ದೇವೇಂದ್ರನು ಬೇಡಿಕೊಂಡನು.

ಅವನ ಪ್ರೇಮಪೂರ್ವಕವಾದ ಕಳಕಳಿಯ ಈ ಮಾತುಗಳನ್ನು ಕೇಳಿ ಕ್ಷಮಾ ಮೂರ್ತಿಯಾದ ಶ್ರೀಕೃಷ್ಣನು ಅವನ ಅಪರಾಧವನ್ನು ಕ್ಷಮಿಸಿದನು. ಬಳಿಕ ಆ ಸ್ವರ್ಗಾಧಿತಿಯು ಗೋಲೋಕದ ದಿವ್ಯವಾದ ಗವ್ಯರಸದಿಂದ ಕೂಡಿದ ಮಂಗಲ ಕಲಶಗಳನ್ನು ಎತ್ತಿ ಮಂತ್ರದರ್ಶಿಗಳಾದ ಬ್ರಾಹ್ಮಣರೂ ಮುನೀಶ್ವರರೂ, ವೇದಸೂಕ್ತ ಗಳನ್ನು ಪಠಿಸುತ್ತಲಿರುವಾಗ ಕ್ಷೀರಾಭಿಷೇಕವನ್ನು ಮಾಡಲು ಪ್ರಾರಂಭಿಸಿದನು. ಗೋವರ್ಧನಗಿರಿಶಿಖರದಲ್ಲಿ ಇಂದ್ರನು ಗೋವಿಂದನಿಗೆ ಅಭಿಷೇಕ ಗೈಯಲು ಉಪಕ್ರಮಿಸಿದ ಕೂಡಲೇ ಸ್ವರ್ಗದಲ್ಲಿಯ ಆಕಳುಗಳೆಲ್ಲವೂ ತಮ್ಮ ತುಂಬುಗೆಚ್ಚಲಗಳನ್ನು ತೊರೆಬಿಡಿಸಿ ಅಲ್ಲಿಂದಲೇ ಹಾಲನ್ನು ಕರೆದವು. ಮೇಘಗಳಾದರೂ ತಾವು ಅಮೃತರಸದಿಂದ ಮಳೆಗರೆದು ಹಿಂದೆ ಇಂದ್ರನ ಆಜ್ಞೆಯಂತೆ ಅತಿವೃಷ್ಟಿಯ ಅನಾಹುತವೆಸಗಿದ್ದಕ್ಕೆ ಪ್ರಾಯಶ್ಚಿತ್ತಮಾಡಿದವು. ವನಸ್ಪತಿಗಳು ಮಕರಂದವನ್ನು ಸುರಿಸಿ ಹೂಹಾರಿಸಿದವು. ಚಂದ್ರಸೂರ್ಯ ನಕ್ಷತ್ರರಾಶಿಗಳು ಥಳಥಳ ಕಾಂತಿಯಿಂದ ಹೊಳೆದು ಆ ಗೋವಿಂದನಿಗೆ ದೀಪಾರಾಧನೆಗೈದವು. ಹೀಗೆ ದಿವ್ಯವಾದ ಗೋಕ್ಷೀರದಿಂದ ಕೃಷ್ಣನಿಗೆ ಅಮೃತಾಭಿಷೇಕಗೈದು ಮಂದಾರಾದಿ ಸುಗಂಧಮಾಲೆಗಳನ್ನು ಹಾಕಿ ಚಂದನಹಚ್ಚಿ ವಂದನೆಮಾಡಿ ದೇವೇಂದ್ರನು ಆ ಮುಕುಂದನನ್ನು ಕುರಿತು-

"ಗೋವಿಂದ! ನಾನು ಹಾಗೂ ಬ್ರಹ್ಮದೇವರು ಗೋಲೋಕದ ಧೇನು ವೃಂದದ ಸಂದೇಶದಂತೆ ನಿನಗೆ ಕ್ಷೀರಾಭಿಷೇಕವನ್ನು ಮಾಡಿದ್ದಾಯಿತು. ಈಗ ನನ್ನ ಸ್ವಂತ ಕೆಲಸವೂ ನಿನ್ನಿಂದಾಗಬೇಕಾಗಿದೆ. ಕಂಸ, ಕೇಶಿ, ಅರಿಷ್ಟ ಈ ತ್ರಿದೋಷವನ್ನು ಮೊದಲು ನೀನು ಸಂಹಾರಮಾಡು. ಆ ಮೇಲೆ ನಿನ್ನ ಸೋದರತ್ತೆಯಾದ ಕುಂತೀ ದೇವಿಯ ಹೊಟ್ಟೆಯಿಂದ ನನ್ನ ಅಂಶಭೂತನಾದ ಅರ್ಜುನನು ಜನಿಸಿದ್ದಾನೆ. ಅವನನ್ನು ನೀನು ನಿನ್ನ ಗೆಳೆಯನೆಂದು ಮನ್ನಿಸಿ, ಶಿಷ್ಯನೆಂದು ಗ್ರಹಿಸಿ, ಭೃತ್ಯನೆಂದು ಪ್ರೀತಿಸಿ, ಇಷ್ಟನೆಂದು ಕರುಣಿಸಿ, ಭಕ್ತನೆಂದು ಆದರಿಸಬೇಕು. ಮತ್ತು ಮುಂದೆ ಸಂಭವಿಸಲಿರುವ ಭೀಕರವಾದ ರಾಜನ್ಯರ ರಣಾಂಗಣದಲ್ಲಿ ಅವನ ಕಡೆಯಿಂದಲೇ ಪ್ರಬಲ ರಾಜರನ್ನೆಲ್ಲ ಸಂಹರಿಸಿ ಧನುರ್ಧಾರಿಗಳಲ್ಲಿ ಧನಂಜಯನೇ ಅಪ್ರತಿಮ ಎಂದು ಅವನಿಗೆ ಖ್ಯಾತಿ ಕೀರ್ತಿಗಳನ್ನು ತಂದುಕೊಡಬೇಕು. ಕೃಷ್ಣ! ನರನಾರಾಯಣ ರೂಪದಿಂದ ಹಿಂದೆ ನೀವು ಬದರಿಕಾಶ್ರಮದಲ್ಲಿ ತಪಗೈಯುತ್ತಲಿರುವಾಗ ನರರೂಪದಿಂದ ಆಪ್ತಮಿತ್ರನಾಗಿದ್ದು ಈಗ ನನ್ನ ಅವತಾರ ಭೂತನಾದ ಆ ಅರ್ಜುನನು ಭೂಭಾರಹರಣಕ್ಕಾಗಿ ನೀನು ಮಾಡಿಸಲಿರುವ ಮಹಾಯುದ್ಧದಲ್ಲಿ ನಿನಗೆ ಸಹಾಯಕ ಬಂಧುವಾಗಿ, ಶರಣು ಬಂದ ಶಿಷ್ಯನಾಗಿ ನಿಲ್ಲುವನು ಆಗ ಅವನಿಗೆ ನೀನು ವೇದವೇದಾಂತಗಳ ರಹಸ್ಯ ಭೂತವಾದ ಅಧ್ಯಾತ್ಮ ವಿದ್ಯೆಯನ್ನು ಉಪದೇಶಿಸಿ ಜ್ಞಾನಯೋಗ ಕರ್ಮಯೋಗ ಭಕ್ತಿಯೋಗಗಳ ರಹಸ್ಯವನ್ನು ತಿಳಿಸಿಕೊಡು. ಯುದ್ಧ ಭೂಮಿಯಲ್ಲಿಯಾಗಲಿ ಮನೆಯಲ್ಲಿಯಾಗಲಿ ವನದಲ್ಲಿಯಾಗಲಿ ಊರಲ್ಲಿ ಯಾಗಲೀ ಅರ್ಜುನನ್ನು ರಕ್ಷಿಸುವ ಭಾರ ನಿನ್ನದು. ರಣಾಂಗಣದಲ್ಲಿ ಅವನು ರಥಿಕನಾಗಿ ಜೈತ್ರಯಾತ್ರೆಗೆ ಹೊರಟರೆ ನೀನು ಸಾರಥಿಯಾಗಿ ಅವನನ್ನು ಬೆನ್ನಿಗೆ ಹಾಕಿಕೊಂಡು ರಕ್ಷಿಸು. ಆ ಮಹಾಯುದ್ಧವು ನೀನು ಕಂಸನನ್ನು ಸಂಹರಿಸಿದ ಬಳಿಕ ಕೆಲ ಸಮಯದ ನಂತರ ಪ್ರಾರಂಭವಾಗುವುದು. ಆ ಸಮಯದಲ್ಲಿ ಎಲ್ಲ ರಾಜ ಸಮೂಹವನ್ನು ನಿನ್ನ ಶಕ್ತಿಯಿಂದಲೇ ಪರಾಜಯಗೊಳಿಸಿ ವಿಜಯವನ್ನು ಮಾತ್ರ ನನ್ನ ಮಗನಾದ ಅರ್ಜುನನಿಗೆ ತಂದುಕೊಡು. ಅದರ ಶ್ರೇಯಸ್ಸು ನಿನಗೆ ಬರಲಿ" ಎಂದು ಭಕ್ತಿಯಿಂದ ಬೇಡಿಕೊಂಡನು. ಅದನ್ನು ಕೇಳಿ ಶ್ರೀಕೃಷ್ಣನು "ಇಂದ್ರ! ನೀನು ಹೇಳಿದಂತೆ ಭಾರತೀಯ ಯುದ್ಧದಲ್ಲಿ ಅರ್ಜುನನನ್ನು ರಕ್ಷಿಸುವ ಭಾರವು ನನ್ನದು. ನೀನೇನೂ ಚಿಂತೆಮಾಡುವ ಕಾರಣವಿಲ್ಲ. ಪಾಂಡವ ಕೌರವರ ಉತ್ಪತ್ತಿ, ಸ್ಥಿತಿ, ದ್ವೇಷ, ಸಂಘರ್ಷಗಳೆಲ್ಲವೂ ನನಗೆ ತಿಳಿದಿವೆ. ಆ ಅರ್ಜುನನ ಸಲುವಾಗಿ ಅವನ ಅಣ್ಣ ತಮ್ಮಂದಿರಾದ ಪಂಚಪಾಂಡವರನ್ನೆಲ್ಲ ನನ್ನ ಪಂಚಪ್ರಾಣದಂತೆ ಅಕ್ಷತವಾಗಿ ರಕ್ಷಿಸಿ ಭಾರತೀಯ ಯುದ್ಧದಲ್ಲಿ ವಿಜಯಶಾಲಿಗಳಾಗಿ ಮೆರೆಯುವಂತೆ ನೋಡಿಕೊಳ್ಳುವೆ. ನಿನ್ನ ಮಗನಾದ ಅರ್ಜುನನು ಹೇಳಿದ ಕೆಲಸವನ್ನು ಸಂಬಳ ಕೊಟ್ಟ ಸೂತನಂತೆ, ದಕ್ಷನಾದ ದೂತನಂತೆ ತಪ್ಪದೇ ಮಾಡುವೆ. ನಿನಗೆ ಅವನ ಚಿಂತೆಯೇ ಬೇಡ" ಎಂದು ಖಚಿತವಾಗಿ ಹೇಳಿದನು. ಅದನ್ನು ಕೇಳಿ ನಿಶ್ಚಿಂತನಾದ ದೇವೇಂದ್ರನು ಸಂತೋಷದಿಂದ ಸ್ವರ್ಗಕ್ಕೆ ಪ್ರಯಾಣ ಮಾಡಿದನು.

## ಕೃಷ್ಣ! ನೀನು ಯಾರು?

ಭಗವಂತನ ಇಂತೆಲ್ಲ ಅಲೌಕಿಕ ಕೃತ್ಯಗಳನ್ನು ಕಂಡು ಭಕ್ತಿಶ್ರದ್ಧೆಗಳಿಂದ ತುಂಬಿ ತುಳುಕಿದ ಗೋಪಾಲಕುಲದ ಹಿರಿಯರೆಲ್ಲರೂ ಕಿರಿಯ ಗವಳಿರೊಂದಿಗೆ ಕೂಡಿಕೊಂಡು ಕೃಷ್ಣನ ಹತ್ತಿರ ಬಂದು ವಂದಿಸಿ ನಿಂದು ನುಡಿದರು. "ದಾಮೋದರ! ನಿನ್ನ ಅನುಗ್ರಹಕ್ಕೆ ಪಾತ್ರರಾಗಿ ದುಸ್ತರವಾದ ಕುತ್ತು ವಿಪತ್ತುಗಳಿಂದ ಪಾರಾದ ನಾವು ಧನ್ಯರೇ ಸರಿ. ನಿನ್ನ ಕರುಣೆ ಹಾಗೂ ಯುಕ್ತಿ ಶಕ್ತಿಗಳಿಂದ ದನಕರುಗಳು ಮಹತ್ತರವಾದ ಆಪತ್ತಿನಿಂದ ಬದುಕಿ ಉಳಿದವು. ನಾವಂತೂ ಸಕಲ ವಿಧವಾದ ಭಯದಿಂದ ಮುಕ್ತರಾಗಿದ್ದೇವೆ.

ಕೃಷ್ಣ! ಮನುಷ್ಯಮಾತ್ರರಿಗೆ ಕನಸಿನಲ್ಲಿಯೂ ಮಾಡಲಶಕ್ಯವಾದ ನಿನ್ನ ಅನೇಕ ಕೃತ್ಯಗಳನ್ನು ಅದರಲ್ಲಿಯೂ ಒಂದೇ ಬೆಟ್ಟಿನಮೇಲೆ ಬೆಟ್ಟವನ್ನು ಧರಿಸಿದ್ದನ್ನು ಕಂಡ ಬಳಿಕಂತೂ ನೀನೊಬ್ಬ ದೈವೀಪುರುಷನೆಂದು ನಮಗೆ ಖಚಿತವಾಗಿ ತಿಳಿದಿದೆ. ಆದರೆ ನಿಶ್ಚಿತವಾಗಿ ನೀನು ಇಂಥ ದೇವತೆಯೆಂದು ಮಾತ್ರ ತಿಳಿದಿಲ್ಲ. ಆದರಿಂದು ನೀನು ಯಾರು? ನೀನೇನು ರುದ್ರಗಣದಲ್ಲಿ ಒಬ್ಬನೋ? ಅಥವಾ ಮರುದ್ಗಣದಲ್ಲಿಯ ಓರ್ವ ಮರುತ್ತನೋ ಅಥವಾ ಅಷ್ಟವಸುಗಳಲ್ಲಿ ಯಾವನಾದರೂ ವಸುವಿರುವಿಯೋ? ನಿನ್ನಂಥ ಅಪ್ರಾಕೃತ ಮನುಷ್ಯನಿಗೆ ನಮ್ಮಂತೆ ತುರುಗಾಹಿಯಾದ ವಸುದೇವನು ತಂದೆ ಹೇಗೆ? ನೀನಾದರೂ ಈ ಗೋಪಾಲಕ ವೇಷದಿಂದ ನಮ್ಮಂಥ ಕಾಡು ಜನರಲ್ಲಿ ಒಬ್ಬನಾಗಿ ಇರುವ ರಹಸ್ಯವೇನು? ಆಡುವ ಉದ್ದೇಶವೇನು? ಲೋಕಪಾಲನಾಗುವ ನೀನು ಪಶುಪಾಲನಾಗಿ ಬಂದುದೇಕೆ?

ಅಥವಾ ನೀನು ದೇವನೋ ಗಂಧರ್ವನೋ ಯಕ್ಷನೋ? ಯಾರೇ ಇರಲಿ, ಈಗಂತೂ ನಮಗೆ ಆಪ್ತನಾಗಿ ಬಂಧುವಾಗಿ ಸಂಕಟ ಸಮಯದಲ್ಲಿ ಸಂರಕ್ಷಕನಾಗಿ ಬಂದಿರುವಿಯಷ್ಟೇ! ಅಷ್ಟೇ ಸಾಕು. ನೀನು ಯಾರೇ ಇದ್ದರೂ ಏನೇ ಆದರೂ ನಿನಗೆ ನಮ್ಮ ಅನಂತ ವಂದನೆಗಳು. ನಾವೆಲ್ಲ ನಿನ್ನನ್ನೇ ನಂಬಿ ನಿಂತಿದ್ದೇವೆ. ನಾವೆಲ್ಲ ನಿನ್ನ ಆಜ್ಞಾಪಾಲಕರು'' ಎಂದು ಹಾರ್ದವನ್ನು ವ್ಯಕ್ತಪಡಿಸಿದರು.

ಅದನ್ನು ಕೇಳಿ ಪುಂಡರೀಕ ಪಕಳೆಗಳಂತೆ ಅರಳಿದ ಕಣ್ಣುಗಳುಳ್ಳ ಆ ಕೃಷ್ಣನು ತುಟಿಯ ತುದಿಗೆ ಮಂದಹಾಸದ ನಗೆಯನ್ನು ಅರಳಿಸಿ ''ಗೋಪಾಲರೇ! ನೀವು ನನ್ನನ್ನು ಅತ್ಯಂತ ಪರಾಕ್ರಮಿಯಾದ ಚಂಡವಿಕ್ರಮನಾದ ಮಹಾವ್ಯಕ್ತಿಯೆಂದು ಬಗೆದಿರುವಿರಿ. ಆದರೆ ನೀವು ಹಾಗೆ ತಿಳಿಯಬೇಡಿರಿ. ನಾನು ಅಂಥ ದೊಡ್ಡ ವ್ಯಕ್ತಿಯೂ ಅಲ್ಲ. ನನ್ನಲ್ಲಿ ಅಂಥ ಲೋಕೋತ್ತರ ಶಕ್ತಿಯೂ ಇಲ್ಲ. ನಾನೂ ನಿಮ್ಮಂತೆ ಓರ್ವ ಸಾಮಾನ್ಯ ಗೋಪಾಲನೆಂದೇ ನೀವೀಗ ತಿಳಿಯಿರಿ. ನಾನೊಬ್ಬ ನಿಮ್ಮ ಜಾತಿಯವನಾದ ಆಪ್ತ ಬಾಂಧವನೆಂದಿಷ್ಟು ತಿಳಿದರೆ ಸಾಕು. ಇನ್ನೂ ನಿಮಗೆ ನನ್ನ ನಿಜವಾದ ಸ್ವರೂಪ ಯೋಗ್ಯತೆಗಳನ್ನು ತಿಳಿಯಬೇಕೆಂದಿದ್ದರೆ ಕೆಲವು ಕಾಲ ಇನ್ನೂ ಪ್ರತೀಕ್ಷೆ ಮಾಡಿರಿ. ನಿಮಗೆಲ್ಲ ನನ್ನ ನಿಜ ಸ್ವರೂಪವನ್ನು ತೋರಿಸುವೆನು. ಈಗ ನನ್ನನ್ನು ನಿಮ್ಮ ನಿಜಬಂಧು ಎಂದಿಷ್ಟು ನೀವು ಭಾವಿಸಿದರೆ ಅದೇ ನನ್ನ ಮೇಲೆ ನೀವು ಉಪಕಾರ ಮಾಡಿದಂತೆ. ಹೆಚ್ಚಿನ ವಿಷಯವನ್ನೆಲ್ಲ ಈಗ ತೆಗೆದುಕೊಂಡು ನಿಮಗೆ ಏನಾಗಬೇಕಾಗಿದೆ?'' ಎಂದು ಆಕ್ಷೇಪ ಧ್ವನಿಯಿಂದ ನುಡಿದನು.

ಅದನ್ನು ಕೇಳಿ ಕೃಷ್ಣನನ್ನು ಪ್ರಶ್ನಿಸಬಂದ ಗೋಪವೃದ್ಧರು ಮೂಕರಾಗಿ ಮೌನದಿಂದ ಹೊರಟುಹೋದರು. ಮುಂದೆ ಆ ದಾಮೋದರನು ಶರತ್ಕಾಲದ ಚಂದ್ರಾವದಾತ ರಾತ್ರಿ ಸಮಯದ ರಮ್ಯತೆಯನ್ನೂ ಬೆಳದಿಂಗಳಿನ ಉನ್ಮಾದಕ ಕಾಂತಿಯನ್ನೂ ಕಂಡು ವಿನೋದ ವಿಲಾಸಗಳನ್ನು ಮಾಡಿಸಬೇಕೆಂದು ಉತ್ಸಾಹಿತನಾದನು. ಗೋಮಯ ಕೆಮ್ಮಣ್ಣುಗಳನ್ನು ಹಾಕಿಸಿ ಮೆತ್ತಗೆ ಮಾಡಿದ ಬೀದಿಯಲ್ಲಿ ಬಲಿಷ್ಠರಾದ ತರುಣ ಗೋಪಕುಮಾರರನ್ನು ಕರೆಯಿಸಿ ಕುಸ್ತಿ ದ್ವಂದ್ವ ಯುದ್ಧ ಅನೇಕ ಆಟಗಳನ್ನು ಆಡಿಸಿದನು. ಅದರಂತೆ ಮದೋನ್ಮತ್ತವಾದ ಘೋರಾಕಾರದ ಗರ್ವಿಷ್ಠ ಘೂಳಿಯ ಜೋಡಿಗಳನ್ನು ಕೂಡಿಸಿ ಪರಸ್ಪರ ಕಾದಾಡಿಸಿ ಎಲ್ಲ ಗೋಪಗೋಪಿಯರೊಂದಿಗೆ ನೋಡಿ ನಕ್ಕುನಲಿದನು.

ತನಗೆ ಇನ್ನೂ ಕಿಶೋರಾವಸ್ಥೆ ಮೀರಿಲ್ಲ. ಈಗ ಮಾಡಿದ ವಿಹಾರ ವಿನೋದಗಳು ದೋಷಾವಹವಲ್ಲ ಎಂದು ಭಾವಿಸಿ ಕೃಷ್ಣನು ರಮಣೀಯವಾದ ಆ ಶಾರದಯಾಮಿನಿಯ

ಮಧುರ ಪ್ರಸಂಗಗಳಲ್ಲಿ ಗೋಪಾಂಗನೆಯರಿಂದ ಕೂಡಿ ಲೀಲಾ ವಿಲಾಸಗಳನ್ನು ಮಾಡಿದನು. ತಿಳಿ ಮುಗಿಲಿನಲ್ಲಿ ತೊಳಗುವ ಚಂದಿರನಂತೆ ಅತ್ಯಂತ ಸುಂದರವಾದ ಆ ನಂದಕಂದನ ಮುಖವನ್ನು ಬೊಗಸೆಗಂಗಳಿಂದ ಕುಡಿಯುತ್ತಲಿದ್ದ ಬಲ್ಲವ ನಲ್ಲೆಯರ ಅಂತರಂಗದಲ್ಲಿ ಶೃಂಗಾರ ರಸವು ಉತ್ತರಂಗಿತವಾಯಿತು. ಅವರ ಆಪ್ತೇಷ್ಟರು ಬೇಡವೆಂದು ನಿಷೇಧಿಸಿದರೂ ಅವರು ಕೇಳದೆ ರಾತ್ರಿಯಲ್ಲಿ ಕೃಷ್ಣನನ್ನು ಹುಡುಕಿಕೊಂಡು ಬಂದು ರಾಗ ರಸೋದ್ರಿಕ್ತರಾಗಿ ಪ್ರೇಮದಿಂದ ಅವನೊಡನೆ ರಾಸಕ್ರೀಡೆಯಾಡಿದರು.

## ಅರಿಷ್ಟ ನಿವಾರಣೆ

ಒಂದು ದಿನ ಸಾಯಂಕಾಲದಲ್ಲಿ ಕೃಷ್ಣನು ಲೀಲಾವಿನೋದದಲ್ಲಿದ್ದಾಗ ಒಮ್ಮಿಂದೊಮ್ಮೆ ಅರಿಷ್ಟನೆಂಬ ಹೆಸರಿನ ದುಷ್ಟ ಹಾಗು ಬಲಿಷ್ಠನಾದ ಓರ್ವ ಅರಿಷ್ಟ ದೈತ್ಯನು ಎತ್ತಿನ ರೂಪದಂದ ವ್ರಜದಲ್ಲಿ ಹೊಕ್ಕನು. ಇದ್ದಲಿಯಬಣ್ಣ, ಕಾಲಮೇಘದಂತೆ ಕಪ್ಪ ದಪ್ಪಗಾದ ಮೈ, ಚೂಪಾಡ ಕೋಡು, ಕಿಡಿಯಿಡಿದ ಕಣ್ಣುಗಳಿಂದ ಭೀಕರವಾದ ಆ ದೈತ್ಯಎತ್ತು ತನ್ನ ಖರ ಖುರ ಪುಟದಿಂದ ನೆಲದೆದೆಯನ್ನು ಕೆದರುತ್ತ, ಜೋಲ್ನಾಲಿಗೆ ಯಿಂದ ತುಟಿಗಳನ್ನು ಸವರುತ್ತ, ನೆಗಹಿಡಿದ ಬಾಲವನ್ನು ಕೊಬ್ಬಿನಿಂದ ನೆಲಕ್ಕೆ ಅಪ್ಪಳಿಸುತ್ತ, ಅಬ್ಬರದಿಂದ ಸಾಕ್ಷಾತ್ ಮೃತ್ಯುವಿನಂತೆ ಗೋಷ್ಠದಲ್ಲಿ ಪ್ರವೇಶಿಸಿತು. ಮತ್ತು ಅಲ್ಲಿರುವ ತನ್ನ ಅರ್ಭಟೆಯನ್ನು ಕೇಳಿಯೇ ಬೆಚ್ಚಿ ಬೆದರಿ ನಿಂತಿರುವ, ಬೆದೆಬಾರದ ಹಸುಗಳನ್ನೂ, ಅದೇ ಈದ ತಾಯ್ಗೋಗಳನ್ನೂ ಸ್ವಚ್ಛಂದವಾಗಿ ಭೋಗಿಸಿತು. ಅದರಿಂದ ಎಷ್ಟೋ ಆಕಳುಗಳಿಗೆ ಗರ್ಭಪಾತವಾಗಿ ಅವು ಆರ್ತವಾಗಿ ಹಂಬಾರವವನ್ನು ಮಾಡಹತ್ತಿದವು. ಇರಕು ಕೋಡುಗಳಿಂದ ಅನೇಕ ದನಕರುಗಳನ್ನು ಇರಿದು, ಹೊಟ್ಟೆಹರಿದು, ಗೋಣುಮುರಿದು ಅನಾಹುತವನ್ನು ಉಂಟುಮಾಡಿದನು. ಗೋಗಣದಲ್ಲಿ ಇಷ್ಟೆಲ್ಲ ಅನರ್ಥ ಕೋಲಾಹಲ ಮಾಡಿದರೂ ಆ ಮದೋನ್ಮತ್ತನಾದ ಎತ್ತಿನಾಕಾರದ ದೈತ್ಯನಿಗೆ ಅತ್ಯಾಚಾರದ ತೃಪ್ತಿಯಾಗಿರಲಿಲ್ಲ. ಕಂಡವರನ್ನು ಹರಿತವಾದ ತನ್ನ ಕೋಡುಗತ್ತಿಯಿಂದ ತಿವಿದು ತುಳಿಯುತ್ತ ಅವನು ಕೃಷ್ಣನ ಸನಿಹದಲ್ಲಿರುವ ಗೋವೃಂದವನ್ನು ಕೊಂದೊಗೆಯಬೇಕೆಂದು ಧಾವಿಸಿ ಬಂದನು. ಗುಡುಗು ಮಿಂಚು ಸಿಡಿಲುಗಳಿಂದ ಅಬ್ಬರಿಸಿ ಬರುವ ಮುಂಗಾರು ಮೋಡದಂತೆ ಗರ್ಜನೆಗೈಯುತ್ತಲಿರುವ ಅವನನ್ನು ಕಂಡು ಕೃಷ್ಣನಾದರೂ ಪ್ರತಿಸಿಂಹನಾದ ಮಾಡಿ ಕೈ ತಟ್ಟಿ ಅವನೆಡೆಗೆ ಹೊರಳಿದನು.

ಮುರಾರಿಯ ಕೈಚಪ್ಪಾಳೆ ಹಾಗೂ ಸಿಂಹನಾದಗಳನ್ನು ಯುದ್ಧದ ಕರೆಯೆಂದು ತಿಳಿದು ಆ ದೈತ್ಯ ಋಷಭನು ಸಂಗ್ರಾಮ ಸಂಭ್ರಮದಿಂದ ಕಣ್ಣು ಕಿಸಿದು, ಬಾಲ ಸೆಟಿಸಿ ಕೃಷ್ಣನ ಮೇಲೆ

---

ಸೋಪಿ ಕೈ ಶೋರಕವಯಃ ಮಾನಯನ್ ಮಧುಸೂಧನಃ

ರೇಮೇ ತಾಭಿರಮೇಯಾತ್ಮಾ ಕ್ಷಪಾಸು ಕ್ಷಪಿತಾಹಿತಃ ॥ ಎಂಬ ಬ್ರಹ್ಮಪುರಾಣದ ವಚನದ ಭಾವವೇ ''ಕೈಶೋರಕಂ ಮಾನಯನ್ ವೈ ಸಹ ತಾಭಿರ್ಮುಮೋದ ಹ'' ಎಂಬ ಇಲ್ಲಿಯ ಪದ್ಯದಲ್ಲಿ ಪ್ರತಿಧ್ವನಿತವಾಗಿದೆ. ಇಲ್ಲಿ ಕೈಶೋರಕಂ ಎನ್ನುವದಕ್ಕೆ ನೀಲಕಂಥ ದೀಕ್ಷಿತರು ಕೈಶೋರವಯಸ್ಸು ಎಂದರೆ ಹತ್ತು ವರುಷಗಳ ವರೆಗೆ 'ಕ' ಅಂದರೆ ಅದರ ಮೇಲೆತುಸು ವಯಸ್ಸು ಅರ್ಥಾತ್ ಹನ್ನೊಂದು ವರ್ಷ ವಯಸ್ಸಿನವನಾದ ಕೃಷ್ಣನು ರಾಸಕ್ರೀಡೆಯಾಡಿದನು. ಉಪನಯನವಾಗುವದಕ್ಕಿಂತ ಮುಚತವಾಗಿಯೇ ಗೋಪಿಯರ ಜೊತೆಗೆ ವಿಹರಿಸಿದ್ದರಿಂದ ಕೃಷ್ಣನಿಗೆ ಪರದಾರಾಗಮನ ನಿಮಿತ್ತವಾದ ದೋಷವಿಲ್ಲ'' ಎಂದು ಬರೆದಿದ್ದಾರೆ.

ಎರಗುವ ಹುಮ್ಮಸದಿಂದ ಹಂಬಾರವಗೈದನು. ಆ ದುರ್ಮದದಾನವನು ತನ್ನ ಮೈ ಮೇಲೆ ಬರುವನೆಂದು ತಿಳಿದರೂ ಕೃಷ್ಣನು ಮಾತ್ರ ತಾನು ನಿಂತ ಸ್ಥಳಬಿಟ್ಟು ಕದಲಲಿಲ್ಲ. ಅಚಲದಂತೆ ಗಟ್ಟಿಯಾಗಿ ದಿಟ್ಟತನದಿಂದ ಆ ದುಷ್ಟ ವೃಷಭದ ಘಟಾಟೋಪವನ್ನು ದಿಟ್ಟಿಸುತ್ತ ನಿಂತುಕೊಂಡನು. ತನ್ನ ಚೂಪಾದ ಕೋಡುಗಳನ್ನು ಚುಚ್ಚಿ ಕೊಲ್ಲಬೇಕೆಂದು ಕೃಷ್ಣನ ಹೊಟ್ಟೆಯೆಡೆಗೆ ಗುರಿ ಇಟ್ಟು ಆ ದರ್ಪೋದ್ಧತನಾದ ದೈತ್ಯನು ಒಮ್ಮೆಲೆ ಅವನ ಮೇಲೆ ಏರಿಹೋದನು. ಆಗ ಪ್ರತಿ ಘೂಳಿಯಂತೆ ಅಧಿಕಬಲವುಳ್ಳ ಗೋವಿಂದನಾದರೂ ಆ ದೈತ್ಯನ ಮುಖವನ್ನು ಹಿಡಿದು ತಿರುವಿದನು. ಆ ಅದರಿಂದ ಎತ್ತಿನ ಬಾಯಿಂದ ಬುರುಗು ಬಂದು ಅದು ಮೂಗಿನ ಹೊರಳೆಗಳಿಂದಲೇ ಘುರಘುರಾಡಿಸುತ್ತ ಕೃಷ್ಣನನ್ನು ಹೊಡೆಯ ಬಂದಿತು. ಬಲವೇಗಗಳಿಂದ ಒಬ್ಬರ ಮೇಲೊಬ್ಬರು ಬಿದ್ದು ಅವರಿಬ್ಬರೂ ಕಾದಾಡುತ್ತಿರುವಾಗ ಮಳೆಗಾಲದಲ್ಲಿ ಎರಡು ಹೆಮ್ಮೋಡಗಳು ವಾಯುಮಂಡಲದಲ್ಲಿ ಡಿಕ್ಕಿಹೊಡೆದು ಸಂಘರ್ಷಿಸುವಂತೆ ತೋರುತ್ತಲಿತ್ತು.

ಹೀಗೆ ಯುದ್ಧವನ್ನು ಮಾಡಮಾಡುತ್ತಲೇ ಗೋವಿಂದನು ಆ ವೃಷಭಾಸುರನ ಎರಡೂ ಇರಿವಕೋಡುಗಳ ನಟ್ಟನಡುವೆ ತನ್ನ ಪುಟ್ಟ ಪಾದವನ್ನಿಟ್ಟು ಗಟ್ಟಿಯಾಗಿ ಒತ್ತಿ ತುಳಿದು ಅದರ ಸೊಕ್ಕು ಸಾಮರ್ಥ್ಯಗಳ ಮಸ್ತಿ ಇಳಿಯುವಂತೆ ಮಾಡಿದನು. ಮತ್ತು ಒದ್ದೆಯ ಅರಿವೆಯನ್ನು ಹಿಂಡುವಂತೆ ಹಿಂಡಿ ಬಿಟ್ಟನು. ಹಾಗೆಯೇ ಅವನ ಒಂದು ಕೋಡನ್ನು ಕಿತ್ತಿ ಅದರಿಂದಲೇ ಮೊಸಡಿಗೆ ಒಂದು ಬಲವಾದ ಏಟವನ್ನು ಹಾಕಿದನು. ಕೋಡು ಕಿತ್ತಿ, ಮೋರೆ ಒಡೆದು, ಟೊಂಕ ಮುರಿದು, ಕ್ಷತವಿಕ್ಷತನಾದ ಆ ದೈತ್ಯನ ದೇಹದಿಂದ ಮೋಡದಿಂದ ನೀರು ಸುರಿದಂತೆ ಧಾರಾಕಾರವಾಗಿ ರಕ್ತ ಬಸಿದು, ಕಾಲು ಕುಸಿದು, ನೆಲಕ್ಕೆ ಬಿದ್ದು ಅವನು ಪ್ರಾಣ ಬಿಟ್ಟನು. ಆಗ ಅಲ್ಲಿದ್ದವರೆಲ್ಲ ಭಲೆ ಭಾಪು ಎಂದು ಪ್ರಸಂಸೋದ್ಗಾರಗಳಿಂದ ಕೃಷ್ಣನನ್ನು ಹೊಗಳಿದರು. ಆಗ ಚಂದ್ರಜ್ಯೋತ್ಸ್ನೆಯಿಂದ ರಮಣೀಯವಾದ ಆ ರಾತ್ರಿಯ ಪ್ರಾರಂಭ ಕಾಲದಲ್ಲಿ ಹೊಂದಾವರೆಯಂತೆ ಸುಂದರ ಲೋಚನಗಳುಳ್ಳ ಆ ಶ್ರೀಕೃಷ್ಣನು ಮತ್ತೆ ತನ್ನ ಕೇಲೀ ವಿಲಾಸಗಳನ್ನು ಶುರು ಮಾಡಿದನು. ಎಲ್ಲ ಗೋಪಾಲಕರೂ ಆನಂದಿತರಾಗಿ ದೇವತೆಗಳು ಇಂದ್ರನನ್ನು ಅರ್ಚಿಸುವಂತೆ ಆ ದಾಮೋದರನನ್ನೇ ಭಕ್ತಿಯಿಂದ ಉಪಾಸಿಸ ಹತ್ತಿದರು.

## ಕಂಸಕಂಡ ಅಪಾಯ, ಅದಕ್ಕಾಗಿ ಕಪಟ ಉಪಾಯ

ಹೀಗೆ ವ್ರಜವಾಸಿಯಾದ ಕೃಷ್ಣನು ಪೂತನೆಯನ್ನು ಕೊಂದು, ಕಾಲಿಯನನ್ನು ಮರ್ದಿಸಿ, ಧೇನುಕಾಸುರನನ್ನು ಸಂಹರಿಸಿ, ಪ್ರಲಂಬನನ್ನು ಘಾತಿಸಿ, ಗೋವರ್ಧನಗಿರಿಯನ್ನು ಎತ್ತಿ, ಇಂದ್ರನ ದರ್ಪವನ್ನೂ ಕೂಡ ಅಳಿದು, ಗೋಗಳನ್ನು ರಕ್ಷಿಸಿ, ವೃಷಭಾಸುರನನ್ನು ವಿಧ್ವಂಸಗೈದು, ಕೂಸಿದ್ದಾಗಲೇ ಚಕ್ಕಡಿಯನ್ನು ಹೊರಳಿಸಿ, ಹೆಮ್ಮರಗಳನ್ನು ಉರುಳಿಸಿ, ಗೋಪ ಗೋಪಿಯರನ್ನು ರಕ್ಷಿಸಿ, ದಾನವರನ್ನೆಲ್ಲ ಶಿಕ್ಷಿಸಿದ ಸಮಾಚಾರವನ್ನೆಲ್ಲ ಕೇಳಿ ತಿಳಿದ ಕಂಸನಿಗೆ ತನ್ನ ಮೃತ್ಯುವೇ ಒದಗಿಬಂದಿತೆಂದು ಅನಿಸಿತು. ತನ್ನ ಮರಣ ಕಾರಣನಾದ ಕೃಷ್ಣನು ಅಗ್ನಿಯಂತೆ ವ್ರಜ ಭೂಮಿಯಲ್ಲಿ ಬೆಳೆಯುತ್ತಿರುವದನ್ನು ನೋಡಿ ಅವನ ಕೈಕಾಲುಗಳ ತ್ರಾಣವೇ ಹೋಗಿ ಪ್ರಾಣ ಕಂಠಕ್ಕೆ ಬಂದಂತಾಯಿತು. ಅವನು ಒಂದು ದಿನ ರಾತ್ರಿಯ ಭೀಕರ ಮೌನದ ಏಕಾಂತದಲ್ಲಿ ಮಥುರಾ ಪಟ್ಟಣದಲ್ಲಿರುವ ತನ್ನ ಆಪ್ತೇಷ್ಟರೆಲ್ಲರನ್ನೂ ಬರಮಾಡಿಕೊಂಡನು. ವಸುದೇವ, ಸತ್ಯಕ, ಧೀರುಕ, ವಿಪ್ರಥು, ಕೃತವರ್ಮ, ಭೂರಿಶ್ರವ, ಅಕ್ರೂರ, ವಿಕದ್ರು, ಮೊದಲಾದ ವಿಶಿಷ್ಟ ಯಾದವ ವೀರರನ್ನು ವಿಶೇಷ ಆಮಂತ್ರಣದ ಮೇರೆಗೆ ಕರಿಸಿಕೊಂಡನು.

ಎಲ್ಲ ಮುಖ್ಯ ಮುಖ್ಯ ಯಾದವರೆಲ್ಲರೂ ಬಂದ ಬಳಿಕ ಮಥುರಾ ನಾಯಕನಾದ ಉಗ್ರಸೇನಸುತ ಕಂಸನು ಅವರನ್ನು ಉದ್ದೇಶಿಸಿ ಗಂಭೀರವಾಗಿ ಮಾತನಾಡಿದನು.

''ವ್ರಜದಲ್ಲಿ ನಂದಗೋಪನ ಮಗನಾದ ಕೃಷ್ಣನೆಂಬುವವನು ಈಗ ದಿನೇ ದಿನೇ ಸಾಗರದಂತೆ ವರ್ಧಿಸುತ್ತಲಿದ್ದು ಅವನು ನನ್ನನ್ನೇ ಸಮೂಲ ನಾಶಮಾಡಲು ಹೊರಟಂತಿದೆ. ನನಗೆ ಹಿತಕಾರಕರಾದ ಮಂತ್ರಿಗಳಿಲ್ಲ. ದಕ್ಷರಾದ ಗುಪ್ತಚಾರರಿಲ್ಲ. ಇದರಿಂದ ನಾನು ಕಣ್ಣಿದ್ದು ಕುರುಡನಾಗಿದ್ದೇನೆ. ಉದಾಸೀನ ಮಾಡಿದ ಬೇನೆಯಂತೆ ನನ್ನ ವೈರಿಯು ನನ್ನ ಹಾಗೂ ನಮ್ಮ ಆಪ್ತ ಮಂತ್ರಿಗಳ ಉಪೇಕ್ಷೆಯಿಂದಲೇ ಇಂದಿನವರೆಗೆ ನಂದಮಂದಿರದಲ್ಲಿ ನಿರಾತಂಕನಾಗಿ ನಿಶ್ಚಿಂತೆಯಿಂದ ಬೆಳೆಯುತ್ತಲಿದ್ದಾನೆ. ಭರತಿಯಲ್ಲಿದ್ದ ಸಾಗರದಂತೆ, ಮಳೆಗಾಲದ ಮೋಡದಂತೆ ಬೆಳೆಯುತ್ತಲೇ ನಡೆದ ಆ ನಂದಕುಮಾರನ ಗತಿಶಕ್ತಿ, ಪರಾಕ್ರಮ, ಪ್ರಭಾವ, ಮಹಿಮೆ ಯಾವುದೂ ನನಗೆ ತಿಳಿಯದಂತಾಗಿದೆ. ಅದೇನು ಭೂತವೋ ಅಥವಾ ಪಂಚಮಹಾಭೂತಗಳಲ್ಲಿ ಅನ್ಯತಮವೋ ಅತವಾ ದೇವಸಂತಾನವೋ! ಇನ್ನೂವರೆಗೆ ನನಗೆ ಅದರ ಅಂತವೇ ಹತ್ತದಂತಾಗಿದೆ. ಆದರೆ ಅವನ ಅತಿಮಾನುಷ ವ್ಯಾಪಾರ ಅತಿದೈವಿಕ ಮಹಿಮೆಗಳನ್ನು ನೋಡಿದರೆ ಅವನು ಸಾಮಾನ್ಯನಾದ ಗವಳಿಗರ ಮಗ ಅಲ್ಲ ಎನ್ನುವುದು ಮಾತ್ರ ಗೊತ್ತಾಗುತ್ತದೆ.

ಅವನು ಎಳೆಕಂದಮ್ಮನಿರುವಾಗಲೇ ಪೂತನೆಯನ್ನು ಕೊಂದನು. ಚಿಕ್ಕವನಿರುವಾಗಲೇ ರಕ್ಕಸನಾಗನಾದ ಕಾಲಿಯನನ್ನು ಮರ್ದಿಸಿ ರಕ್ತವನ್ನು ಕಕ್ಕಿಸಿಬಿಟ್ಟನು. ಕಿರಿಬಟ್ಟಿನ ಮೇಲೆ ಹಿರಿಬೆಟ್ಟವನ್ನು ನಿಲ್ಲಿಸಿ ಇಂದ್ರನಿಗೂ ಬುದ್ಧಿಕಲಿಸಿದನು. ಮಹಾಬಲಿಷ್ಠನಾದ ಅರಿಷ್ಟಾಸುರನನ್ನಂತೂ ನೋಡನೋಡುವಷ್ಟರಲ್ಲಿಯೇ ಕೋಡು ಮುರಿದು ಗೋಣು ತಿರುವಿ ಪ್ರಾಣತೆಗೆದನು. ಇದನ್ನೆಲ್ಲ ನೋಡಿದರೆ ಕೇಶಿಗೂ ನನಗೂ ಇನ್ನು ಮರಣ ದೂರಿಲ್ಲವೆನಿಸುವುದು.

ನಾರದರಾದರೂ ಎರಡನೆಯ ಸಲ ಬಂದಾಗ ಖಟ್ವಾಂಗವನದಲ್ಲಿ ನನ್ನ ಭೆಟ್ಟಿಯಾದಾಗ ಮತ್ತೊಮ್ಮೆ ನನ್ನನ್ನು ಕುರಿತು ''ಕಂಸ! ನೀನು ನಿನಗೆ ಮೃತ್ಯುವಾಗ ಬಹುದಾದ ದೇವಕಿಯ ಗರ್ಭವನ್ನು ವಿನಾಶಮಾಡಲಿಕ್ಕಾಗಿ ಮಾಡಿದ ಯತ್ನವನ್ನೆಲ್ಲ ಒಂದು ರಾತ್ರಿಯಲ್ಲಿ ಈ ವಸುದೇವನು ವ್ಯರ್ಥ ಮಾಡಿಬಿಟ್ಟಿದ್ದಾನೆ. ಅಂದು ನೀನು ದೇವಕಿಯ ಮಗಳೆಂದು ತಿಳಿದು ಕೊಲ್ಲಬೇಕೆಂದು ಕಲ್ಲಿನ ಮೇಲೆ ಅಪ್ಪಳಿಸಿದ ಆ ಹೆಣ್ಣುಕೂಸು ದೇವಕಿಯದಲ್ಲ. ಅದು ಯಶೋದೆಯ ಮಗಳಿದ್ದು ಕೃಷ್ಣನೇ ದೇವಕಿಯ ಮಗನು. ನಿನ್ನ ಹಿತಶತ್ರುವಾಗಿ ಮಿತ್ರರೂಪದಿಂದಿರುವ ಈ ವಸುದೇವನು ನಿನ್ನನ್ನು ವಧಿಸಿಸುವ ಉದ್ದೇಶದಿಂದಲೇ ತನ್ನ ಹೆಂಡತಿಯಾದ ದೇವಕಿಯ ಹೊಟ್ಟೆಯಿಂದ ಎಂಟನೆಯ ಗರ್ಭವಾಗಿ ಹುಟ್ಟಿಬಂದ ಕೃಷ್ಣನನ್ನು ಅಂದೇ ಆ ಗಾಢಾಂಧಕಾರದ ಆ ಕಾಳ ರಾತ್ರಿಯಲ್ಲಿ ಕಾವಲುಗಾರರ ಕಣ್ಣಿಗೆಲ್ಲ ಇಂಗು ಹಚ್ಚಿ ತೆಗೆದುಕೊಂಡು ಗೋಕುಲಕ್ಕೆ ಹೋದನು. ಆದೇ ಹಡೆದು ಮಲಗಿದ ಯಶೋದೆಯ ಮಗ್ಗುಲಲ್ಲಿ ತನ್ನ ಗಂಡು ಮಗುವನ್ನು ಮಲಗಿಸಿ ಅವಳ ಹೆಣ್ಣುಕೂಸನ್ನು ತಂದು ನಿನ್ನ ಕೈಯಲ್ಲಿ ಕೊಟ್ಟನು. ಅದನ್ನು ನೀನು ಕೊಲ್ಲಬೇಕೆಂದು ಮಾಡಿದ್ದೆ. ಆದರೆ ಅದೂ ಕೂಡ ನಿನ್ನ ಕೈಯಿಂದ ಪಾರಾಗಿ ಮಹಾ ದುರ್ಗಾರೂಪವನ್ನು ಧರಿಸಿ ಈಗ ವಿಂಧ್ಯವಾಸಿನಿಯಾಗಿದ್ದಾಳೆ. ಅಲ್ಲಿ ಶುಂಭ ನಿಶುಂಭರೆಂಬ ಮಹಾಬಲಿಷ್ಠರಾದ ದೈತ್ಯರಿಬ್ಬರನ್ನು ಸಂಹರಿಸಿ ಸುರಾಸುರ ಮುನಿ ಮನುಜ ವಂದ್ಯಳಾಗಿ ಸರ್ವರಿಗೂ ಅಭಯ ಪ್ರದಳಾಗಿ ವರದ ಮಹಾದೇವಿಯೆಂದು ಪ್ರಖ್ಯಾತಳಾಗಿದ್ದಾಳೆ. ಈಗಿರುವ ನಂದಗೋಪನ

ಮಗನೇ ನಿನ್ನ ಆಪ್ತಬಂಧುವಾದ ವಸುದೇವನ ಮಗ ವಾಸುದೇವ. ಪೂತನಾವಧಾದಿಘೋರ ಕರ್ಮಗಳನ್ನೆಲ್ಲ ಮಾಡಿದವನು ಅವನೇ ಇದ್ದು ಅದೇ ವಾಸುದೇವರೂಪಿಯಾದ ನಿನ್ನ ಬಾಂಧವನಿಂದ ನಿನಗೆ ಮರಣ ಸಂಭವಿಸಲಿದೆ'' ಎಂದು ಆ ದೇವಮುನಿಗಳು ಎರಡು ಸಾರಿ ಹೇಳಿದ್ದಾರೆ'' ಎಂದು ನುಡಿದು ಅಕ್ರೂರನ ಕಡೆಗೆ ತಿರುಗಿ ಕಂಸನು ಹೇಳಿದನು.

''ಅಕ್ರೂರ! ನೀನೀಗಲೇ ವೃಂದಾವನಕ್ಕೆ ಹೋಗಿ ಆ ರಾಮ-ಕೃಷ್ಣರನ್ನು ಇಲ್ಲಿಗೆ ಕರಕೊಂಡು ಬಾ. ನಂದಗೋಪಾದಿ ಎಲ್ಲಗವಳಿಗರಿಗೂ ನಮಗೆ ಕೊಡತಕ್ಕ ವಾರ್ಷಿಕ ಕರವನ್ನು ತೆಗೆದುಕೊಂಡು ಬೇಗನೇ ಬರಲಿಕ್ಕೆ ತಿಳಿಸು. ಮತ್ತು ಆ ನಂದಗೋಪನಿಗೆ ಕಂಸಮಹಾರಾಜರು ಮತ್ತು ಅವರ ಪರಿವಾರದವರೂ ಯುದ್ಧ ಹಾಗೂ ಮಲ್ಲ ವಿದ್ಯೆಗಳಲ್ಲಿ ಪಳಗಿದ ರಾಮ-ಕೃಷ್ಣರ ಕೀರ್ತಿಯನ್ನು ಕೇಳಿ ಅವರನ್ನು ನೋಡಬೇಕೆಂದು ಅಪೇಕ್ಷೆ ಪಟ್ಟಿದ್ದಾರೆ. ಇಲ್ಲಿಯ ರಾಜಾಸ್ಥಾನದಲ್ಲಿಯೂ ಚಾಣೂರ ಮತ್ತು ಮುಷ್ಟಿಕ ಎಂಬಿಬ್ಬರು ಮಲ್ಲರಿದ್ದು ಅವರಿಗೂ ರಾಮಕೃಷ್ಣರಿಗೂ ಇಲ್ಲಿ ದ್ವಂದ್ವಯುದ್ಧವಾಗಲಿ. ದೇವತಾಸದೃಶರಾದ ನನ್ನ ಸೋದರತ್ತೆಯ ಮಕ್ಕಳು ಇಷ್ಟು ಪ್ರಬುದ್ಧರಾಗಿ ಯುದ್ಧ ವಿಶಾರದರೆಂದು ಪ್ರಸಿದ್ಧಿಯನ್ನು ಪಡೆದದ್ದರಿಂದ ನಾನು ಅವರನ್ನು ಮೊದಲು ನೋಡಬೇಕಾಗಿದೆ. ಆದ್ದರಿಂದ ಬೇಗನೇ ನಿನ್ನ ಆ ಇಬ್ಬರೂ ಮಕ್ಕಳನ್ನು ಕರೆದುಕೊಂಡು ಕರವನ್ನು ತೆಗೆದುಕೊಂಡು ಮಥುರೆಗೆ ಬಾ'' ಎಂದು ಹೇಳಿ ರಾಮ-ಕೃಷ್ಣ ಸಹಿತನಾಗಿ ಅವನನ್ನು ಕರೆದುಕೊಂಡು ಬಾ. ಮತ್ತು ಅಲ್ಲಿರುವ ಉಳಿದ ಗೋಪಾಲಕರಿಗಾದರೂ ''ನಮ್ಮ ಮಹಾರಾಜ ಕಂಸನು ಧನುರ್ಯಜ್ಞವನ್ನು ಮಾಡುತ್ತಲಿದ್ದು ಅದಕ್ಕಾಗಿ ಅನೇಕ ರಾಜ-ಮಹಾರಾಜರು ದೇಶ-ವಿದೇಶಗಳಿಂದ ಬರಲಿರುವರು. ಅವರಿಗಾಗಿ ಬೇಕಾಗುವ ದಿವ್ಯವಾದ ಗವ್ಯವಾದ ಹಾಲು, ಮೊಸರು, ಬೆಣ್ಣೆ, ತುಪ್ಪ ಕೆನೆ ಮುಂತಾದವುಗಳನ್ನು ಬೇಡಿದಷ್ಟು ಬೇಕಾದಷ್ಟು ಇಲ್ಲಿಯೇ ಮಥುರಾಪಟ್ಟಣದ ಸಮೀಪದ ವನದಲ್ಲಿ ಬಂದು ಇದ್ದು ನೀವು ಒದಗಿಸತಕ್ಕದ್ದು'' ಎಂದು ಹೇಳು. ನನ್ನ ಮಾತನ್ನು ಕೇಳಿಯೂ ರಾಮ-ಕೃಷ್ಣರು ಬರದಿದ್ದರೆ ಅವರಿಗೆ ನಾನು ಶಾಸನವನ್ನು ಮಾಡಬೇಕಾಗಿ ಬರುವುದು. ಆದರೆ ಹುಡುಗರನ್ನು ಮೊದಲು ಸಾಮೋಪಾಯಗಳಿಂದಲೇ ಸಂತೈಸಬೇಕಾದುದು ಹಿರಿಯರ ಕರ್ತವ್ಯವಾಗಿದೆ. ಆದ್ದರಿಂದ ಅಕ್ರೂರ! ಆ ಇಬ್ಬರೂ ಮಂದಮತಿಗಳನ್ನು ಸವಿಮಾತಿನಿಂದಲೇ ಮರುಳು ಮಾಡಿ ಇಲ್ಲಿಗೆ ಕರೆದುಕೊಂಡು ಬಾ. ನೀನು ಅವರನ್ನು ಕರೆದುಕೊಂಡು ಬಂದರೆ ನನಗೆ ನೀನು ಹಿತ ಬಗೆದಂತೆ. ವಸುದೇವನು ನಿನ್ನನ್ನು ಅಂತರಂಗದಲ್ಲಿ ಆಗಲೇ ಒಡಕೊಂಡಿರದಿದ್ದರೆ ಈ ಕೆಲಸವು ನಿನ್ನಿಂದ ಆಗುವುದರಲ್ಲಿ ಸಂದೇಹವಿಲ್ಲ. ಹೇಗಾದರೂ ಮಾಡಿ ಆ ಬಲರಾಮ-ದಾಮೋದರರನ್ನು ಇಲ್ಲಿಗೆ ಬರಮಾಡುವ ಹೊರೆ ನಿನ್ನ ತಲೆಯ ಮೇಲೆಯೇ ಇದೆ.'' ಎಂದು ಹೇಳಿದನು.

ಅದನ್ನು ಕೇಳಿ ದಿವ್ಯದೃಷ್ಟಿಯಿಂದ ಮುಂದಾಗಬಹುದನ್ನೆಲ್ಲ ನೋಡಿ ತಿಳಿದುಕೊಂಡ ಅಕ್ರೂರನಿಗೆ ಕೃಷ್ಣನನ್ನು ಕರೆತರಲಿಕ್ಕೆ ಹೋಗುವ ಪ್ರಸಂಗವು ಬಂದದ್ದರಿಂದ ಪರಮಾನಂದವಾಯಿತು. ಬಾಯಾರಿಕೆಯಿಂದ ಬಳಲಿ ಬಂಡಾದವನಿಗೆ ಬಾಂದೊರೆಯಲ್ಲಿ ಮಿಂದು ಬರಲಿಕ್ಕೆ ಹೇಳಿದಂತೆ ಕೃಷ್ಣನನ್ನು ಕಾಣಬೇಕೆಂದು ಹಂಬಲಿಸುವ ಅವನಿಗೆ ಸುವರ್ಣಸಂಧಿಯೇ ದೊರೆತಂತಾಯಿತು. ಅವನು ಆಗಿಂದಾಗಲೇ ಮನೆಗೆ ಕೂಡ ಹೋಗದೇ ಪರಭಾರೆಯಾಗಿ ಪುಂಡರೀಕಾಕ್ಷನನ್ನು ನೋಡಬೇಕೆಂಬ ತವಕದಿಂದ ತ್ವರಿತವಾಗಿ ವೃಂದಾವನಕ್ಕೆ ತೆರಳಿದನು.

## ಕೇಶಿಯನಾಶ

ಇದಕ್ಕೂ ಮೊದಲೇ ದುಷ್ಟ ದಾನವನಾದ ಕೇಶಿಯು ಕಂಸನ ಆಜ್ಞೆಯ ಮೇರೆಗೆ ವೃಂದಾವನಕ್ಕೆ ಬಂದು ಅಲ್ಲಿಯ ಜನರಿಗೆ ಉಪದ್ರವನನ್ನು ಕೊಡಲು ಶುರುಮಾಡಿದ್ದನು. ಘೋರವಾದ ಕುದುರೆಯ ರೂಪದಿಂದಿರುವ ಆ ದುಷ್ಟ ದಾನವನು ನರಮಾಂಸ ಲೋಲುಪನಾಗಿ ಗೋಪಾಲಕರನ್ನು ಹಿಂಸಿಸುತ್ತಿದ್ದನು. ಗೋಮಾಂಸದ ರುಚಿ ಹತ್ತಿದ್ದರಿಂದ ಆಕಳು ಕರುಗಳನ್ನೂ ಕೊಂದು ತಿಂದು ಹೋಗುತ್ತಲಿದ್ದನು. ಹೀಗಾಗಿ ಕೆಲವೇ ದಿನಗಳಲ್ಲಿ ದುರ್ಮದಾಂಧನಾದ ಆ ಕೇಶಿಯ ಹತ್ಯಾಕಾಂಡ ಅತ್ಯಾಚಾರಗಳಿಂದ ವೃಂದಾವನದ ಪುಣ್ಯಭೂಮಿಯೆಲ್ಲ ಸ್ಮಶಾನದಂತೆ ಎಲಬು ಮಾಂಸಗಳ ರಾಶಿಯಿಂದ ತುಂಬಿಹೋಯಿತು. ಕೃಷ್ಣನಿಗೆ ಕೂಡಲೇ ಆ ಕೇಶಿಯೊಡನೆ ಯುದ್ಧಮಾಡಬೇಕೆಂದೆನಿಸಿತು.

ಅಷ್ಟರಲ್ಲಿ ಆ ತುರಂಗದಾನವನು ಎಡದಿಂದ ಬಲಕ್ಕೂ ಬಲದಿಂದ ಎಡಕ್ಕೂ ಮಂಡಲಾಕಾರವಾಗಿ ತಿರುಗುತ್ತ ಎರಡೂ ಕಾಲುಗಳಿಂದ ಒದೆದು ಗಿಡಗಳನ್ನು ಬೀಳಿಸಿದನು. ಮತ್ತು ಮೈಯಿಂದ ಬೆವರು ಬಾಯಿಂದ ಬುರುಗು ಸುರಿಸುತ್ತ, ಖುರಪುಟದಿಂದ ಹುಡಿಯೆಬ್ಬಿಸುತ್ತ, ಹಲ್ಲು ಕಡಿಯುತ್ತ ಕೃಷ್ಣನ ಮೇಲೆ ಏರಿ ಹೋದನು.

ತನ್ನ ಎರಡೂ ಮುಂಗಾಲುಗಳನ್ನು ಎತ್ತಿ ಕೃಷ್ಣನ ಎದೆಗೆ ಹೊಡೆದು ತೀಕ್ಷ್ಣವಾದ ಹಲ್ಲುಗಳಿಂದ ಅವನ ಹೆಗಲನ್ನು ಬಲವಾಗಿ ಕಚ್ಚಿದನು. ಮತ್ತು ಸಂತಾಪದಿಂದ ದ್ವಿಗುಣಿತವಾದ ತನ್ನ ಶಕ್ತಿಯನ್ನೆಲ್ಲ ಕೇಂದ್ರೀಕರಿಸಿ ಮತ್ತೊಮ್ಮೆ ಕೃಷ್ಣನ ವಕ್ಷಸ್ಥಳದ ಮೇಲೆ ಹೊಡೆಯಲು ಹಾರಿ ಬರಬೇಕೆಂದು ಸಿದ್ಧತೆಯನ್ನು ನಡೆಯಿಸಿದನು. ಆಗ ಆ ಮಧುಸೂದನನು ತನ್ನ ನೀಳವಾದ ತೋಳನ್ನು ಉಬ್ಬಿಸಿ ಅವನ ಮುಖದಲ್ಲಿ ಇಟ್ಟನು. ಬಾಯಿತುಂಬ ಬಿಗಿಯಾದ ಬೆಣ್ಣೆಯಿಟ್ಟಂತಾದ ಕೇಶಿಗೆ ಕೃಷ್ಣನ ಆ ಉದ್ದಂಡ ಭುಜದಂಡವನ್ನು ಕಚ್ಚಲಿಕ್ಕೂ ಕಡಿಯಲಿಕ್ಕೂ ಅವಕಾಶವೇ ಆಗದೇ ಉಸಿರು ಗಟ್ಟಿದಂತಾಗಿ ನಿಂತುಕೊಂಡನು.

ಅವನ ಹಲ್ಲುಗಳಿಂದ ಜೊಲ್ಲು ಬುರಗಿನ ಜೊತೆಗೆ ರಕ್ತವೂ ಸೋರಹತ್ತಿತು. ಆದರಿಂದ ಅವನ ಕಟಬಾಯಿ ಹರಿದುಹೋಗಿ ಆದರಿಂದ ರಕ್ತವಾಂತಿಯಾಯಿತು. ಕಣ್ಣುಗಳು ನಿರಿಗೆಗಟ್ಟಿ ಬೆಳ್ಳಗಾದವು. ಶರೀರದ ಸಂಧಿ ಬಂಧಗಳೆಲ್ಲ ಲಟಲಟ ಮುರಿದು ಅವನು ನೆಲಕ್ಕೆ ಕುಕ್ಕರಿಬಿದ್ದನು. ಕಿವಿಗಳು ನಿಮಿರಿ ನಿಂತವು. ಏಳಬೇಕೆಂದು ಎಷ್ಟು ಪ್ರಯತ್ನಿಸಿದರೂ ಆಗದೇ ಇದ್ದಲ್ಲಿಯೇ ಒದ್ದಾಡಿದನು. ಬಿದ್ದಲ್ಲಿಯೇ ಮಲಮೂತ್ರ ಮಾಡಿದನು. ಕೊನೆಗೆ ಕೃಷ್ಣನು ತನ್ನ ಕೈಯನ್ನು ಇನ್ನೂ ಉಬ್ಬಿಸಿ ಅವನ ಮುಖವನ್ನು ಸೀಳಿದನು. ಆಗ ಆದ ವಿಚಿತ್ರವೇದನೆಯಿಂದ ಆ ದೈತ್ಯನು ಘೋರಾಕಾರವಾಗಿ ಕೂಗಿ ರಕ್ತ ಸುರಿಸಿ ಒಡೆದ ಗುಡ್ಡದಂತೆ ನಿಷ್ಪ್ರಾಣನಾಗಿ ನೆಲಕ್ಕೆ ಬಿದ್ದನು.

ಕೃಷ್ಣನ ಕೈಯಿಂದ ಅವನ ಮುಖವು ಇಬ್ಭಾಗವಾಗಿ ಮಾಡಲ್ಪಟ್ಟದ್ದರಿಂದ ಎರಡು ಹೋಳಾಗಿ ಸೀಳಿ ಒಗೆದ ಹೆಬ್ಬಾವಿನಂತೆ ಮದ್ದಾನೆಯಂತೆ ಅವನ ಶರೀರವು ಒದ್ದಾಡುತ್ತ ಬಿದ್ದುಕೊಂಡಿತು. ಮಹಾದೇವರು ವಧಿಸಿದ ಮಹಿಷಾಸುರನಂತೆ ಆ ಘೋರ ತುರಗ ದೈತ್ಯನ ದೇಹವಾದರೂ ಭಯಂಕರವಾಗಿ ತೋರುತ್ತಲಿತ್ತು. ಎರಡು ಹೋಳಾದ ಅವನ ಶರೀರದ ಪ್ರತಿಯೊಂದು ಭಾಗದಲ್ಲಿಯೂ ಒಂದು ಕಣ್ಣು ಒಂದು ಕಿವಿ, ಒಪ್ಪರೆ ಮೂಗು, ಎರಡು ಕಾಲು, ಅರ್ಧಬೆನ್ನು, ಅರ್ಧಬಾಲಗಳಿದ್ದುದರಿಂದ ಧರೆಯಲ್ಲಿ ಬಿದ್ದ ಆ ಎರಡೂ

ದೈತ್ಯದೇಹದ ಅರ್ಧಾಕಾರಗಳು ಚಮತ್ಕಾರವಾಗಿ ತೋರುತ್ತಲಿದ್ದವು. ಕೇಶಿ ಕಚ್ಚಿದ ಕೃಷ್ಣನ ತೋಳಿನಮೇಲಿನ ಕಲೆಗಳು ಅರಣ್ಯದಲ್ಲಿಯ ಸಾಲವೃಕ್ಷಕ್ಕೆ ಕಾಡಾನೆಯ ಕೋರೆದಾಡೆಯಿಂದ ತಿಕ್ಕಿದಾಗ ಬಿದ್ದ ಗೆರೆಗಳಂತೆ ಗಾಯವಿಲ್ಲದೇ ಶೋಭಿಸುತ್ತಲಿದ್ದವು.

ಹೀಗೆ ಆ ದೈತ್ಯನನ್ನು ಕೊಂದು ಅವನ ದೇಹವನ್ನು ತುಂಡುತುಣುಕಾಗಿ ಮಾಡಿ ಇಂದೀವರದಂತೆ ಸುಂದರ ನೇತ್ರವುಳ್ಳ ಆ ಶ್ರೀಕೃಷ್ಣನು ಮಂದಹಾಸಮಾಡುತ್ತ ಅಲ್ಲಿಯೇ ನಿಂತುಕೊಂಡನು. ಅದನ್ನು ಕಂಡು ಗೋಪಗೋಪಿಕೆಯರೆಲ್ಲರೂ ಆನಂದಪರವಶರಾಗಿ ಕೃಷ್ಣನನ್ನು ಹಾಡಿ ಹೊಗಳಿ ಪುನಃ ಪೂಜಿಸಿದರು.

ಆಗ ಆಕಾಶದಲ್ಲಿ ಅದೃಶ್ಯರೂಪದಿಂದಲೇ ನಿಂತುಕೊಂಡು ಭಗವಾನ್ ನಾರದರು ಆನಂದದಿಂದ "ಕೃಷ್ಣ ಕೃಷ್ಣ ಮಹಾಪ್ರಭೋ! ನಿನ್ನ ಈ ಕೇಶಿ ನಿಗ್ರಹರೂಪವಾದ ದುಷ್ಕರವಾದ ಕಾರ್ಯದಿಂದ ನಿಜವಾಗಿಯೂ ನನಗೆ ಪರಮಾನಂದವಾಯಿತು. ಸರ್ವದಾ ಕಲಹಪ್ರಿಯನಾದ ನಾನು ಈ ನರತುರಗಗಳ ಯುದ್ಧವನ್ನು ನೋಡಬೇಕೆಂದು ಸ್ವರ್ಗದಿಂದ ಇಲ್ಲಿಗೆ ಬಂದಿದ್ದೆ. ನಿನ್ನ ಪೂತನಾಘಾತನಾದಿ ಅನೇ ಲೀಲೆಗಳನ್ನು ಕಂಡ ನನಗೆ ಈ ಕೇಶಿ ವಿನಾಶವಾಗುವುದನ್ನು ನೋಡುವ ಬಯಕೆಯಿದ್ದಿತು. ಯಾಕೆಂದರೆ ಮಹಾ ಬಲಿಷ್ಠನಾದ ಈ ರಕ್ಕಸನಿಗೆ ದೇವೇಂದ್ರನೂ ಕೂಡ ಹೆದರುತ್ತಿದ್ದನು. ಇಂಥ ದುರ್ದಮ ದುಷ್ಟ ದೈತ್ಯನಾದ ಕೇಶಿಯನ್ನು ಶಾಸನಮಾಡಿದ್ದರಿಂದ ನಿನಗೆ ಈದಿನ ಕೇಶವ ಎಂದು ಸಾರ್ಥಕ ಹೆಸರು ಪ್ರಾಪ್ತವಾಗಿ ಭಕ್ತರು ನಿನ್ನನ್ನು ಆ ನಾಮದಿಂದ ಉಪಾಸಿಸಿ ಉದ್ಧೃತರಾಗಲಿ.

## ಅಕ್ರೂರನ ಆಗಮನ

ಕೃಷ್ಣನನ್ನು ಕಾಣಬೇಕೆಂಬ ಲವಲವಿಕೆಯಿಂದ ಅಕ್ರೂರನು ಮಥುರೆಯಿಂದ ಹೊರಟು ವೃಂದಾವನಕ್ಕೆ ಬಂದಾಗ ಸಾಯಂಕಾಲವಾಗಿತ್ತು. ಸಂಜೆಗೆಂಪಿನ ಮಾಂಜಿಷ್ಠ ರಾಗರಂಜಿತವಾದ ಮುಗಿಲಂಚಿನಲ್ಲಿ ಚಾರುಚಂದ್ರನು ತೊಳಗುತ್ತಲಿದ್ದನು. ವನವಾಸಿಗಳಾದ ವೈಖಾನಸರು ಸಾಯಂತನ ಔಪಾಸನ ನಿರತರಾಗಿ ಮಂತ್ರಘೋಷದಿಂದ ಅಗ್ನಿಯಲ್ಲಿ ಆಹುತಿಯನ್ನೀಯತ್ತಲಿದ್ದರು. ವ್ರಜದಲ್ಲಿ ವನದಿಂದ ತಿರುಗಿಬಂದ ಆಕಳುಗಳನ್ನು ಕಟ್ಟಿ ಅಲ್ಲಲ್ಲಿ ಉರಿಹಚ್ಚಿ ಬೆಳಕುಮಾಡಿದ್ದರು. ಮುಗಿಲಮೇಲೆ ಸೋಮ, ನೆಲದಲ್ಲಿ ದೀಪದ ಅಗ್ನಿಗಳಿಂದಲೇ ಎಲ್ಲ ಕಾರ್ಯವೂ ನಿರ್ವಾಹವಾಗುತ್ತಿರುವುದರಿಂದ ಜಗತ್ತೆಲ್ಲ ಅಗ್ನೀಷ್ಟೋಮಾತ್ಮಕವಾದ ಸಂಧಿಕಾಲದಲ್ಲಿದ್ದಿತು. ಇಂಥ ಸಂಧ್ಯಾಸಮಯದಲ್ಲಿ ಬಾಂಧವರ ಸಮಾಗಮಸುಖದ ಶಕುನವನ್ನು ನುಡಿಯುವ ಪಕ್ಷಿಗಳ ಕಿಲಕಿಲಾಟದಲ್ಲಿ ರಥಾರೂಢನಾದ ಅಕ್ರೂರನು ವೃಂದಾವನದ ವ್ರಜಮಂಡಲಕ್ಕೆ ಬಂದನು. ವೃಂದಾವನದೊಳಗೆ ಪ್ರವೇಶಿಸಿದ ಕೂಡಲೇ ಮೊದಲು ಅವನು ರಥದಿಂದ ಇಳಿದು ಅಲ್ಲಿದ್ದವರನ್ನು ಕರೆದು "ಕೃಷ್ಣನು ಊರಲ್ಲಿರುವನೋ ಇಲ್ಲವೋ? ಬಲರಾಮನು ಮನೆಯಲ್ಲಿರುವನೋ ಇಲ್ಲವೋ? ನಂದಗೋಪನ ಮನೆ ಯಾವುದು? ಮುಂತಾಗಿ ಕೇಳಿ ತಿಳಿದುಕೊಂಡು ನಂದನ ಮಂದಿರಕ್ಕೆ ಬಂದನು.

ಆಗ ಕೃಷ್ಣನು ಹಸುಗಳನ್ನು ಹಿಂಡುವ ಕಾರ್ಯದಲ್ಲಿ ಆಸಕ್ತನಾಗಿದ್ದು ಕರುಗಳ ನಡುವೆ ನಿಂತು ಕೊಂಡಿದ್ದನು. ದೂರದಿಂದ ಮನುಷ್ಯ ರೂಪಿಯಾದ ಆ ಪರಬ್ರಹ್ಮನನ್ನು ಕಂಡ ಕೂಡಲೇ ಅಕ್ರೂರನಿಗೆ ಹರ್ಷವಾಯುವಾದಂತಾಗಿ ಮೈ ಪುಳಕಿ, ಕಣ್ಣು ತುಳುಕಿ, ಕಂಠ ಗದ್ಗದವಾಗಿ, ಭಕ್ತಿ ಭರದಿಂದ ತುಂಬಿ 'ಕೃಷ್ಣ' ಎಂದು ವಂದಿಸಿ ತಾನು ಬಂದ ಕಾರ್ಯವನ್ನೂ ಕಂಸನ ದುರುದ್ದೇಶವನ್ನೂ ತಿಳಿಸಿದನು. ಅವನು ಬಂದ ಉದ್ದೇಶ ತಿಳಿದು ನಂದಗೋಪನು ಗೋಪಾಲಕರ ಸಭೆಯನ್ನು ಕರೆದನು.

"ಇಂದು ರಾತ್ರಿಯೆಲ್ಲ ಈ ಜಗದೀಶ್ವರನ ಜೊತೆಗೆ ನಾನು ಮಾತನಾಡುತ್ತೇನೆ. ಅವನು ನನ್ನ ಜೊತೆಗೆ ಬರಲು ಒಪ್ಪಿದರೆ ಅವನೊಟ್ಟಿಗೆ ಮಥುರೆಗೆ ನಾಳೆ ಪ್ರಯಾಣ ಮಾಡುವೆ" ಎಂದು ಮುಂತಾಗಿ ವಿಚಾರಿಸಿ ಆ ಶ್ರೀಕೃಷ್ಣನೊಡನೆ ಅಕ್ರೂರನು ಗೋಪಾಲಕರ ಸಭೆಯನ್ನು ಪ್ರವೇಶಿಸಿದನು. ಅಲ್ಲಿ ಅಕ್ರೂರನು ಗೋಪವೃದ್ಧರನ್ನೆಲ್ಲ ಕರೆತಂದು ಅವರಿಗೆಲ್ಲ ಕಂಸನ ಸಂದೇಶವನ್ನು ತಿಳಿಸಿ ಅಲ್ಲಿಯೇ ರಾಮಕೃಷ್ಣರಿಗೆ "ನೀವಿಬ್ಬರೂ ಕೂಡ ನಾಳೆ ಮಥುರಾ ಪಟ್ಟಣಕ್ಕೆ ಹೊರಟು ಬಿಡಿರಿ. ಹೇಗೂ ಈ ಗೋಪಾಲಕರೆಲ್ಲರೂ ಕಂಸನಿಗೆ ಕರಕೊಡಲಿರುವರು. ಅಲ್ಲಿ ಈಗ ಕಂಸನು ಒಂದು ದೊಡ್ಡದಾದ ಧನುರ್ಯಜ್ಞವನ್ನು ಮಾಡಲಿದ್ದು ನೀವೂ ಬಂದು ಆ ಉತ್ಸವವನ್ನು ನೋಡಬಹುದು." ಅಕ್ರೂರನ ಯುಕ್ತಿಯುಕ್ತವಾದ ಮಾತನ್ನು ಕೇಳಿ ಕೃಷ್ಣನಿಗೆ ಕೋಪಬಾರದೇ ಸಂತೋಷವೇ ಆಗಿ ಅದನ್ನು ಅಭಿನಂದಿಸಿ ಹಾಗೇ ಆಗಲಿ ಎಂದು ಹೇಳಿದನು.

## ದನಗಾಹಿಗಳ ಮಥುರಾಯಾತ್ರೆ

ಆಗ ನಂದಾದಿ ಗೋಪಾಲಕರೂ ತಮ್ಮ ತಮ್ಮಲ್ಲಿ ಮಾತಾಡಿ ವಿಚಾರ ಮಾಡಿ ಹೊರಡಬೇಕೆಂದು ನಿರ್ಧರಿಸಿ ಎಲ್ಲ ಸಿದ್ಧತೆಯನ್ನು ಮಾಡಿಕೊಂಡರು. ಕಂಸನಿಗೆ ಕೊಡಬೇಕಾದ ಕರ, ಬಿಲ್ಲಿನ ಉತ್ಸವಕ್ಕೆ ಬೇಕಾಗುವ ಹಾಲು ಮೊಸರು ಮೊದಲಾದ ಹೈನದ ಪದಾರ್ಥಗಳು, ಅವನಿಗೆ ಕಾಣಿಕೆಯಾಗಿ ಒಪ್ಪಿಸಬೇಕಾದ ಆಕಳ ಮತ್ತು ಎಮ್ಮೆಗಳ ಬೆಣ್ಣೆ ತುಪ್ಪ ಮೊದಲಾದವುಗಳನ್ನೆಲ್ಲ ತಯಾರು ಮಾಡಿಕೊಂಡು ಅವರೆಲ್ಲರೂ ಹೊರಡಲು ಸನ್ನದ್ಧರಾದರು.

ಇತ್ತ ಬಲರಾಮ ಕೃಷ್ಣರು ಅಕ್ರೂರನೊಡನೆ ಇಡೀ ರಾತ್ರಿಯೆಲ್ಲ ಕಣ್ಣಿಗೆ ಕಣ್ಣು ಹಚ್ಚದೆ ಮಾತನಾಡುತ್ತಲೇ ಕುಳಿತಿದ್ದರು. ಬೆಳಗಾಗುತ್ತ ಬರಲು ಕತ್ತಲೆಯೆಲ್ಲ ಕಳೆದು ರವಿಯ ಕಿರಣದ ಬತ್ತಿಗಳೆಲ್ಲ ಹೊತ್ತಿಕೊಂಡು ಜಗತ್ತನ್ನೆಲ್ಲ ಬೆಳಗಹತ್ತಲು ರಾಮಕೃಷ್ಣರು ಎದ್ದು ಅ ಕ್ರೂರನ ಜೊತೆಗೆ ರಥವನ್ನು ಏರಿದರು. ಗೋಪಿಕೆಯರು ಮೊಸರು ಕಡೆಯುವ ಸರಭರ ಶಬ್ದ ಕೇಳಿಬರುವ ಆ ಮಂಗಳ ಪ್ರಭಾತದಲ್ಲಿ ಹಾದಿ ಬೀದಿಗಳಲ್ಲಿ ತುಂಬಿನಿಂದ ಗೋಪಾಲಕರೆಲ್ಲರೂ ತಮ್ಮ ತಮ್ಮ ಸಾಮಾನುಗಳನ್ನು ಒಂದು ದೊಡ್ಡ ಚಕ್ಕಡಿಯಲ್ಲಿ ಹಾಕಿ ತಾವು ರಥಗಳನ್ನು ಏರಿದರು. ರಾಮಕೃಷ್ಣ ಅಕ್ರೂರ ಮೂವರೂ ಬೇರೆ ರಥದಲ್ಲಿ ಹೊರಟರು.

ರಥವು ಯಮುನೆಯ ದಂಡೆಗೆ ಬಂದ ಕೂಡಲೇ ಅಕ್ರೂರನು ಇಳಿದು "ಕೃಷ್ಣ! ರಥವನ್ನು ತುಸು ಇಲ್ಲಿ ನಿಲ್ಲಿಸು. ನಾನೀಗ ಈ ಯಮುನೆಯ ಮಡುವಿನಲ್ಲಿ ಮುಳುಗಿ ಬರುವೆನು. ಅಲ್ಲಿಯವರೆಗೆ ನೀವಿಬ್ಬರೂ ಇಲ್ಲಿಯೇ ರಥದಲ್ಲಿ ಕುಳಿತಿರಿ" ಎಂದು ಹೇಳಿ ಸ್ನಾನ ಮಾಡಿಕೊಂಡು ಬಂದನು. ಅದನ್ನು ನೋಡಿ ರಾಮಕೃಷ್ಣರು "ನಾವು ವಸುದೇವನ ಮನೆಗೆ ಹೋಗದೆ ಮೊದಲು ಊರು ನೋಡಲಿಕ್ಕೆಂದು ಹೊರ ಹೊರಟು ಅಕಸ್ಮಾತ್ತಾಗಿ ಕಂಸನ ಮನೆಗೇ ಹೋಗುತ್ತೇವೆ" ಎಂದು ಹೇಳಿದರು.

ಆಗ ಅಕ್ರೂರನಾದರೂ ಮನಃಪೂರ್ವಕವಾಗಿ ಕೃಷ್ಣನನ್ನು ವಂದಿಸಿ ತಾನೂ ಕಂಸನಿಗೆ ರಾಮಕೃಷ್ಣಾದಿಗಳನ್ನು ಕರೆದುಕೊಂಡು ಬಂದ ಸಮಾಚಾರವನ್ನು ತಿಳಿಸಲಿಕ್ಕಾಗಿ ರಾಜಭವನಕ್ಕೆ ಹೋದನು.

## ರಾಜಬೀದಿಯಲ್ಲಿ ರಾಮಕೃಷ್ಣರು

ಸಂಕರ್ಷಣ ಶ್ರೀಕೃಷ್ಣರು ಸರಪಳಿಯನ್ನು ಬಿಚ್ಚಿಬಿಟ್ಟ ಚಿಟ್ಟಾನೆಗಳಂತೆ ಮಥುರಾ ಪಟ್ಟಣವನ್ನು ನೋಡಬೇಕೆಂದು ರಾಜಬೀದಿಗೆ ಬಂದರು. ದಾರಿಯಲ್ಲಿ ಅರಮನೆಯ

ಅಗಸನು ರಾಜರ ಅಮೂಲ್ಯವಾದ ರೇಷಿಮೆ ಪಟ್ಟೆ ಪೀತಾಂಬರಾದಿ ಉತ್ತಮ ಬಟ್ಟೆಗಳನ್ನು ಮೊಟ್ಟೆಗಟ್ಟಿ ರಾಜಮಂದಿರಕ್ಕೆ ಒಯ್ಯುತ್ತಲಿದ್ದನು. ಅದನ್ನು ಕಂಡು ರಾಮಕೃಷ್ಣರು ಅವನಿಗೆ ತಮ್ಮ ದೇಹಕ್ಕೆ ಒಗ್ಗಬಹುದಾದ ಒಳ್ಳೆಯ ಬಟ್ಟೆಗಳನ್ನು ಕೊಡಲು ಕೇಳಿದರು. ಆಗ ಆ ಅರಸರ ಅಗಸನು ಉಪಹಾಸಗರ್ಭಿತಧ್ವನಿಯಲ್ಲಿ ''ಎಲೋ, ನೀವೆಲ್ಲಿಯ ಕಾಡು ಜನರು ಮಥುರೆಗೆ ಬಂದಿರಿ! ಬೇರೆ ಬೇರೆ ದೇಶಗಳಿಂದ ಕಂಸ ಮಹಾರಾಜರು ತಮಗಾಗಿ ತರಿಸಿದ ಬಗೆಬಗೆಯ ಬಟ್ಟೆಗಳನ್ನು ಬೇಡುವ ನೀವು ಅರಣ್ಯಮೂರ್ಖರಂತೆ ತೋರುವಿರಿ. ಅಡವಿಯಲ್ಲಿ ಕಾಡುಮಿಕಗಳ ಜೊತೆಗೆ ಪಶುವಿನಂತೆ ಬೆಳೆದ ನಿಮಗೆ ಜೀವ ಸಾಕಾಗಿ ಸಾಯಲಿಕ್ಕೇ ಇಲ್ಲಿಗೆ ಬಂದಂತೆ ಕಾಣುವದು. ನಾನು ಸಾಕ್ಷಾತ್ ಕಂಸ ಭೂಪನ ಬಟ್ಟೆಗಳಿಗೆ ಬಯಸಿದ ಬಣ್ಣಹಾಕಿ ಬೇಕಾದ ರಂಗರೂಪಗಳನ್ನು ತಂದುಕೊಡಬಲ್ಲ ರಾಜರಜಕನಿರುವೆನು. ಇನ್ನೊಮ್ಮೆ ನೀವು ಬಟ್ಟೆಗಳನ್ನು ಬೇಡಿದರೆ ಜೀವವನ್ನೇ ಬಿಟ್ಟು ಕೊಡಬೇಕಾಗುವದು. ಎಚ್ಚರ'' ಎಂದು ಬೆದರಿಸಿದನು.

ವಿಷವಿಷಮವಾದ ಮಾತುಗಳನ್ನಾಡುವ ಆ ರಜಕನನ್ನು ಕಂಡು ಗೋವಿಂದನಿಗೆ ಸಿಟ್ಟು ಬಂದು ಅವನು ಅವನನ್ನು ಎಳೆದು ತಂದು ಬಗ್ಗಿಸಿ ವಜ್ರಕಲ್ಪವಾದ ಅಂಗೈಯಿಂದ ನಡುತ್ತಿಯ ಮೇಲೆ ಒಂದೇಟವನ್ನು ಬಿಗಿದನು. ಅದರಿಂದ ಆ ಅರಮನೆಯ ಅಗಸನು ಅರೆಜೀವವಾಗಿ ಬಿದ್ದನು. ಎರಡು ನಿಮಿಷಗಳಲ್ಲಿ ನೆಲದ ಮೇಲೆ ಬಿದ್ದು ಒದ್ದಾಡಿ ಪ್ರಾಣಬಿಟ್ಟನು. ಆಗ ಅವನ ಹೆಂಡಂದಿರು ಹೆದರಿ ಒಮ್ಮೆಲೇ ಕೆಟ್ಟದನಿಯಿಂದ ಚೀರಿ ಅಳುತ್ತ ಕರೆಯುತ್ತ ಕೂದಲುಗಳನ್ನು ಕೆದರಿಕೊಂಡು ಕಂಸನ ಮನೆಯ ಕಡೆಗೆ ಓಡಿದರು. ಇತ್ತ ರಾಮಕೃಷ್ಣರು ಆ ಬಟ್ಟೆಯ ರಾಶಿಯಲ್ಲಿ ತಮಗೆ ಬೇಕಾದುದನ್ನು ಆರಿಸಿಗೊಂಡು ತಮ್ಮ ದೇಹಕ್ಕೆ ಒಪ್ಪುವಂತೆ ಧರಿಸಿ ಮುಂದೆ ನಡೆದರು. ಅವರು ಮಧುರಾಪಟ್ಟಣದ ಪೇಟೆಯೊಳಗೆ ಹೋಗಿ ಹೂವಿನಂಗಡಿಗಳ ಸಾಲಿನಲ್ಲಿ ಪುಷ್ಪಹಾರಗಳನ್ನು ಕೊಳ್ಳಬೇಕೆಂದು ನೋಡಹತ್ತಿದರು. ಅಲ್ಲಿ ತರತರಹದ ಸುಗಂಧಿ ಹೂಗಳ ಸೌರಭ ಸಾರವನ್ನು ಮೂಸುತ್ತ ಗಂಧಗಜಗಳಂತೆ ಅವರು ಮುನ್ನಡೆದಾಗ ಅಲ್ಲಿ ಒಂದು ದೊಡ್ಡ ಹೂವಿನಂಗಡಿಯಲ್ಲಿ ಹೊರೆಹೊರೆಯಾಗಿ ಹೂ ಹಾರಗಳನ್ನಿಟ್ಟುಕೊಂಡು ಗುಣಕನೆಂಬ ಹೂ ಮಾರುವವನು ಕುಳಿತುಕೊಂಡಿದ್ದನು. ಅವನ ಮುಖದ ಮೇಲಿನ ಸೌಮ್ಯ ಕಳೆ ಸವಿಮಾತು ಹಾಗೂ ಶಾಂತ ಸ್ವಭಾವಗಳನ್ನು ನೋಡಿ ಕೃಷ್ಣನು ಅವನಿಗೆ ಉತ್ತಮವಾದ ಮಾಲೆಗಳನ್ನು ಕೊಡು ಎಂದು ಕೇಳಿದನು. ಆಗ ಹರ್ಷಪುಲಕಿತನಾದ ಆ ಮಾಲಾಕಾರನು ಅವರನ್ನು ನೋಡಿ, ಅವರ ಆ ಅಪಾರ್ಥಿವವಾದ ದೈವಿಕ ವರ್ಚಸ್ಸನ್ನು ಕಂಡು ಭಕ್ತಿ ಭರದಿಂದ ಬಾಗಿ, ಸಂತಸದಿಂದ ಹಿಗ್ಗಿ, ಅತ್ಯಾದರದಿಂದ ಅವರ ಮುಂದೆ ರಾಶಿರಾಶಿಯಾಗಿ ಹಾರತುರಾಯಿಗಳನ್ನು ತಂದಿರಿಸಿ ''ಸ್ವಾಮಿ ಇದೆಲ್ಲವೂ, ತಮ್ಮದೇ, ತಮ್ಮದೇ ಆದ ಅಡಿದಾವರೆಗಳಲ್ಲಿ ಅರ್ಪಿತ. ಸ್ವೀಕರಿಸಿ ಅನುಗ್ರಹಿಸಬೇಕೆಂದು'' ಬೇಡಿಕೊಂಡನು.

ಅವನ ನಯವಿನಯಗಳನ್ನು ಕಂಡು ಸುಪ್ರಸನ್ನನಾದ ಗೋವಿಂದನು ಅವನಿಗೆ ''ನನ್ನನ್ನು ಹೂಹಾರಗಳಿಂದ ಸಂತೋಷಪಡಿಸಿದ ಪ್ರಯುಕ್ತ ಸಿರಿ ಸಂಪದಗಳಿಂದ ನಿನ್ನ ಮನೆ ತುಂಬಿಹೋಗುವುದು'' ಎಂದು ವರವನ್ನಿತ್ತು ಅನುಗ್ರಹಿಸಿದನು. ಆಕಸ್ಮಿಕವಾದ ಆ ವರಲಾಭದಿಂದ ಸಂತುಷ್ಟನಾದ ಆ ಮಾಲಾಕಾರನು ಕೂಡಲೇ ಅವರ ಪಾದಗಳಿಗೆ ಆನಂದದಿಂದ ವಂದಿಸಿದನು. ಮತ್ತು ಇವರಾರೋ ಯಕ್ಷದೇವತೆಗಳಿರಬಹುದೆಂದು ತಿಳಿದು ಉತ್ತರಹೇಳಲೂ ಕೂಡ ಬಾಯಿ ಬಾರದೇ ವಿಸ್ಮಯಮೂಢನಾಗಿ ಕೈಮುಗಿದು ನಿಂತುಕೊಂಡನು.

ರಾಮಕೃಷ್ಣರಿಬ್ಬರೂ ಆ ರಾಜಬೀದಿಯಲ್ಲಿ ಮುಂದೆ ನಡೆಯುವಷ್ಟರಲ್ಲಿ ಗಂಧದ ಕರಡಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ಹೊರಟಿರುವ ಓರ್ವ ಕುಬ್ಜೆಯನ್ನು ನೋಡಿದರು. ಮತ್ತು ಕೃಷ್ಣನು ಅವಳನ್ನು ಕರೆದು "ಕಮಲ ಲೋಚನೆಯಾದ ಕುಬ್ಜೆ! ನೀನು ಈ ಅನುಲೇಪನದ ಪಾತ್ರವನ್ನು ಹಿಡಿದುಕೊಂಡು ಎಲ್ಲಿಗೆ ಹೊರಟಿರುವೆ" ಎಂದು ಕೇಳಿದನು. ಆಗ ಮೂರಾರುಕಡೆ ಮೈಯೆಲ್ಲ ಮಣಿದು ಬಾಗಿ, ನಡುಗುವ ಗೂನುಬೆನ್ನಿನ ಕುಳ್ಳದೇಹದ, ಸೊಟ್ಟಗಾಲಿನ, ಆ ಕುಬ್ಜೆಯು ಕಮಲದಳಾಯತಾಕ್ಷನಾದ ಆ ಮೇಘಶ್ಯಾಮನನ್ನು ಕುರಿತು "ಅರವಿಂದಾಕ್ಷ! ನಾನು ಕಂಸ ಮಹಾರಾಜನ ಮನೆಗೆ ವೈಯ್ಯುವ ಈ ಗಂಧಾನುಲೇಪನವನ್ನು ನೀನೇ ಸ್ವೀಕರಿಸು. ನಿನ್ನನ್ನು ನೋಡಿಯೇ ನನಗೆ ಅಚ್ಚರಿಯಾಗಿದೆ. ಈ ಗಂಧಾನುಲೇಪನವನ್ನು ನಿನಗೇ ಕೊಡಬೇಕೆಂದೇ ಈಗ ನಾನು ನಿಂತಿದ್ದೇನೆ. ನಿನ್ನ ಸಿರಿಮೊಗದ ಸೊಬಗನ್ನು ಕಂಡೇ ನನ್ನ ಮನಸ್ಸು ನಿನಗೆ ಮಾರುಹೋಗಿದೆ. ನೀವೆಲ್ಲಿಂದ ಬಂದಿರಿ? ರಾಜದಾಸಿಯಾದ ನನ್ನನ್ನು ಅರಿಯದ ನೀವು ಇಲ್ಲಿಯವರಂತೂ ಅಲ್ಲವೆಂದಂತಾಯಿತು" ಎಂದು ನುಡಿದು ನಗುತ್ತ ನಿಂತುಕೊಂಡ ಆ ಕುಬ್ಜೆಗೆ ಕೃಷ್ಣನು "ನಾವು ಇಲ್ಲಿಯ ಬಿಲ್ಲಿನ ಉತ್ಸವವನ್ನು ನೋಡಲು ದೇಶಾಂತರದಿಂದ ಬಂದ ಮಲ್ಲರು. ನಮ್ಮ ದೇಹಕ್ಕೆ ಸಾಕಾಗುವಷ್ಟು ಚಂದನ ಶ್ರೀಗಂಧ ಲೇಪನವನ್ನು ನಮಗೆ ಕೊಡು" ಎಂದು ಕೇಳಿದನು.

ಆಗ ಅವಳು ಅತ್ಯಂತ ಆನಂದದಿಂದ ಕೊಟ್ಟ ರಾಜಯೋಗ್ಯವಾದ ಸುಗಂಧಿ ಲೇಪನವನ್ನು ಮೈಗೆಲ್ಲ ಸವರಿಕೊಂಡರು. ಮೊದಲೇ ಚಾರುಗಾತ್ರರಾದ ಅವರು ಮತ್ತಿಷ್ಟು ಚೆಲುವರಾಗಿ ತೋರಹತ್ತಿದರು. ಆಗ ಲೀಲಾ ವಿನೋದ ರಸಿಕನಾದ ಶ್ರೀಕೃಷ್ಣನು ಆ ಕುಬ್ಜೆಯ ಬೆನ್ನ ಮೇಲಿನ ಗೂನನ್ನು ತನ್ನ ಮುಂಗೈಯ ಎರಡು ಬೆರಳುಗಳಿಂದ ಮೆಲ್ಲನೆ ಒತ್ತಿ ಮೆತ್ತಗೆ ಹೊಡೆದನು. ಅದರಿಂದ ಅವಳ ಆ ಗೂನು ಮಾಯವಾಗಿ ಶರೀರವು ಸುಳಿಬಾಳೆಯಂತೆ ಸಬಳವಾಗಿ ಸುಂದರವಾಗಿ ಶೋಭಿಸಹತ್ತಿತು. ವನಲತೆಯಂತೆ ಉದ್ದವಾಗಿ ಎದ್ದು ನಿಲ್ಲಲಿಕ್ಕೂ, ಸರಳವಾಗಿ ಸೆಟೆದು ನಡೆಯಲಿಕ್ಕೂ ತನಗೆ ಈಗ ಬರಹತ್ತಿದ್ದನ್ನು ಕಂಡು ಆನಂದ ತುಂದಿಲಳಾದ ಅವಳು ಕೃಷ್ಣಕೃತವಾದ ಈ ಚಮತ್ಕಾರವನ್ನು ನೋಡಿ ಆಶ್ಚರ್ಯದಿಂದ ನಗತೊಡಗಿದಳು. ಮತ್ತು ವಿದ್ರೂಪವಾದ ತನ್ನ ವಕ್ರ ದೇಹದಲ್ಲಿ ಬೆರಳು ಸೋಕಿಸಿ ಚೆಲುವು ನಲಿವುಗಳನ್ನು ಅರಳಿಸಿಟ್ಟ ಕೃಷ್ಣನ ಶಾರೀರಿಕ ಸೌಂದರ್ಯವನ್ನು ಕಂಡು ಅವಳ ಹೃದಯದಲ್ಲಿ ಕಾಮ ಕೆರಳಿತು. ಪ್ರೇಮವರಳಿತು. ಆಗ ಅವಳು ಒಲವಿನ ಬಳ್ಳಿಯಂತೆ ಅನುರಾಗ ಭಾರದಿಂದ ಬಳುಕುತ್ತ, ಮುಗುಳು ನಗೆ ನಗುತ್ತ, ಕೃಷ್ಣನನ್ನು ಕಟಾಕ್ಷಿಸಿ "ಪ್ರಿಯಕರ! ಪ್ರಣಯಪಾಶದಿಂದ ನಾನು ನಿನ್ನನ್ನು ನನ್ನ ಹೃದಯದಲ್ಲಿ ಕಟ್ಟಿ ಹಾಕಿದ್ದೇನೆ. ಎಲ್ಲಿ ಹೋಗುವೆ ನಿಲ್ಲು. ನನ್ನನ್ನು ಸ್ವೀಕರಿಸು" ಎಂದು ವೈಯ್ಯಾರದಿಂದ ನುಡಿದಳು. ಮಾತನ್ನು ಕೇಳಿ ರಾಮಕೃಷ್ಣರಿಬ್ಬರೂ ಒಬ್ಬರಿಗೊಬ್ಬರು ಕೈ ಬಡಿದು ನಕ್ಕರು. ಅವಳ ಸದ್ಗುಣ ಭಕ್ತಿಭಾವಗಳನ್ನು ತಿಳಿದು ಕೃಷ್ಣನು ಮಂದ ಹಾಸದಿಂದ ಸಂಕೇತಗೈದು ಕೊಟ್ಟು ಕಳಿಸಿದನು.

ಬಳಿಕ ಗೋಪ ವೇಷಭೂಷಿತರಾದ ಅವರು ರಾಜಭವನದೆಡೆಗೆ ಹೊರಳಿದರು. ಹಿಮಗಿರಿಯ ಮಹಾದರಿಯಿಂದ ಎದ್ದು ಬಂದ ಸಿಂಹದ ಮರಿಗಳಂತಿದ್ದ ಅವರಿಬ್ಬರೂ ತಾವು ಬಂದ ಉದ್ದೇಶವನ್ನು ಪ್ರಕಟಗೊಳಿಸದೇ ಗೂಢ ರೂಪದಿಂದಲೇ ಅರಮನೆಯನ್ನು ಪ್ರವೇಶಿಸಿದರು. ಅಲ್ಲಿಂದ ಯಾರಿಗೂ ಗೊತ್ತಾಗದಂತೆ ಅವರು ಆಯುಧಾಗಾರವನ್ನು ಪ್ರವೇಶಿಸಿ ಅಲ್ಲಿರುವ ಶಸ್ತ್ರಾಗಾರ ರಕ್ಷಕನನ್ನು ಕುರಿತು "ಅಯ್ಯ! ಈ ಆಯುಧಾಗಾರದಲ್ಲಿ ಯಾವ ಬಿಲ್ಲಿನ ಸಲುವಾಗಿ ಈ ಧನುರುತ್ಸವವನ್ನು ಹೂಡಿರುವರೋ ಆ ಧನುಸ್ಸು ಎಲ್ಲಿದೆ! ಯಾವುದದು! ನಿನ್ನದೇನು ಆಕ್ಷೇಪಣೆ

ಇಲ್ಲದಿದ್ದರೆ, ನಿನಗೆ ಇಷ್ಟವಿದ್ದರೆ, ಅದನ್ನು ನಮಗೆ ತೋರಿಸು" ಎಂದು ಕೇಳಿದರು. ಆಗ ಆ ಶಸ್ತ್ರಾಗಾರಿಕನು ಅವರಿಬ್ಬರನ್ನೂ ಅದರ ಸಮೀಪಕ್ಕೆ ಕರೆದೊಯ್ದು ಅದ್ಭುತವಾದ ಬೃಹತ್‌ಸ್ತಂಭದಂತಿದ್ದ ಆ ಮಹದ್ಧನುವನ್ನು ಅವರಿಗೆ ತೋರಿಸಿದನು.

ಇಂದ್ರ ಚಂದ್ರಾದಿ ದೇವತೆಗಳಿಗೂ ಕೂಡ ಹೆದೆಯೇರಿಸಲಿಕ್ಕಾಗಲಿ ಬಾಣಹೂಡಲಿಕ್ಕಾಗಲಿ ಅಶಕ್ಯವಾದ ದೀರ್ಘದಂಡಂತಿರುವ ಆ ದೊಡ್ಡ ಧನುಸ್ಸನ್ನು ಹುಮ್ಮಸದಿಂದ ಜಗ್ಗಿ ಕೃಷ್ಣನು ತನ್ನ ಎರಡೂ ತೋಳುಗಳಿಂದ ಎತ್ತಿ ತೂಗಿದನು. ದೈತ್ಯಕುಲಪೂಜಿತವಾದ ಆ ದಾರುಣ ಧನುಸ್ಸನ್ನು ಲೀಲೆಯಿಂದ ಎತ್ತಿ ಬೇಕಾದತ್ತ ಬೇಕಾದ ಹಾಗೆ ತಿರುವ್ಯಾಡಿ ಅನಂತರ ನೆಲದ ಮೇಲಿಟ್ಟು ಅದನ್ನು ಪುನಃಪುನಃ ಬಗ್ಗಿಸಿದನು. ಗೋವಿಂದನು ಮತ್ತೊಮ್ಮೆ ಅದನ್ನು ಬಾಗಿಸಿ ಜಗ್ಗಿ ಜೋರಿನಿಂದ ಮಣಿಸಹತ್ತಲು ಹೆಬ್ಬಾವಿನಂಥ ಆ ಧನುಸ್ಸು ನಡುವೆ ಮುರಿದು ಎರಡು ತುಂಡಾಗಿ ಬಿದ್ದಿತು. ಇಂಥ ಘೋರಾಕಾರದ ಆ ದೈತ್ಯಧನುಸ್ಸನ್ನು ದಂಟಿನ ಬೆಂಡಿನ ಬಿಲ್ಲಿನಂತೆ ಲೀಲೆಯಿಂದ ನಿಮಿಷಾರ್ಧದಲ್ಲಿ ಮುರಿದು ಮುಟಿಗೆ ಮಾಡಿ ಒಗೆದು ಚಪಲನಾದ ಆ ಕೃಷ್ಣನು ಬಲರಾಮನೊಂದಿಗೆ ಅಲ್ಲಿಂದ ಬೇಗ ಹೊರಬಿದ್ದು ಪಾರಾಗಿ ತಮ್ಮ ದನಗಾಹಿಗಳ ಗುಂಪಿನಲ್ಲಿ ಬಂದು ಸೇರಿಕೊಂಡನು.

ಆ ಬಿಲ್ಲು ಮುರಿದು ಬೀಳುವಾಗ ಬ್ರಹ್ಮಾಂಡವೇ ಬಿರಿದಂತೆ ಭಯಂಕರವಾದ ಚಟ ಚಟ ಶಬ್ದವಾಗಿ ಅದರಿಂದ ಕಂಸನ ಅರಮನೆ ಅಂತಃಪುರಗಳೆಲ್ಲ ನಡುಗಿ ಹೋದವು. ಚತುರ್ದಿಕ್ತಟ ಭಿತ್ತಿಗಳಲ್ಲಿಯೂ ಆ ಶಬ್ದವು ಪ್ರತಿಧ್ವನಿತವಾಯಿತು. ಅದರಿಂದ ಕಂಸನ ಧೈರ್ಯೋತ್ಸಾಹಗಳೆಲ್ಲ ಉಡುಗಿ ಹೋದವು. ಆಗ ಆ ಆಯುಧಪಾಲನು ಓಡುತ್ತ ಕಂಸನ ಮನೆಗೆ ಹೋಗಿ ಕಂಸನಿಗೆ ಭಯ, ಕಾತರತೆಗೂಡಿ ಕಣ್ಣು ಮಿಟುಕಿಸುತ್ತ ಗದ್ಗದ ಕಂಠದಿಂದ ಹೇಳಿದನು.

"ಮಹಾರಾಜ! ಆಯುಧಗಾರದಲ್ಲಿ ಇದೀಗ ಜರುಗಿದ ಆಶ್ಚರ್ಯವೊಂದನ್ನು ಆಲಿಸು. ಕೆಲನಿಮಿಷಗಳ ಮುಂಚೆ ಕರಿಬಟ್ಟೆಯನ್ನುಟ್ಟ ಓರ್ವ ಬಿಳಿಮನುಷ್ಯ, ಹಳದಿ ಬಟ್ಟೆಯನ್ನುಟ್ಟ ಇನ್ನೊಬ್ಬ ಕಪ್ಪು ಮನುಷ್ಯ ಇಬ್ಬರು ಯಾರಿಗೂ ಗೊತ್ತಾಗದಂತೆ ಅಂತಃಪುರದಲ್ಲಿ ಪ್ರವೇಶಿಸಿದರು. ಅಲ್ಲಿಂದ ಕಾಮರೂಪರಾದ ಅವರು ಆಕಾಶದಿಂದ ಇಳಿದುಬಂದವರಂತೆ ಒಮ್ಮೆಲೆ ನಮ್ಮ ಆಯುಧಾಗಾರದಲ್ಲಿ ಬಂದು ನಿಂತರು. ಅವರಲ್ಲಿ ಹಳದಿಬಣ್ಣದ ಬಟ್ಟೆಯುಟ್ಟ ತಾವರೆಗಣ್ಣನ ತರುಣನು ದೇವದೈತ್ಯರಿಗೂ ಎತ್ತಲಸಾಧ್ಯವಾದ ಆ ದಿವ್ಯ ಧನುಸ್ಸನ್ನು ಆಡಾಡುತ್ತಲೇ ಎತ್ತಿ ಹೆದೆಯೇರಿಸಿ ಲೀಲೆಯಿಂದ ಜಗ್ಗಿ ಬಗ್ಗಿಸಿದನು. ಉಕ್ಕಿನ ಯಂತ್ರದಂತಿದ್ದ ಆ ದ್ರಾಘಿಷ್ಠ ಧನುಸ್ಸನ್ನು ಬಾಣಹೂಡದೆ ಸುಮ್ಮನೇ ಅವನು ಬಗ್ಗಿಸಿ ಮಣಿಸುತ್ತಲಿರುವಾಗಲೇ ಮಧ್ಯದಲ್ಲಿಯೇ ಅದು ಮುರಿದು ಎರಡು ತುಣಕಾಗಿ ಬಿದ್ದಿತು. ಅದರ ಭಂಗಪ್ರಸಂಗದ ಘೋರನಾದದಿಂದ ನೆಲ ನಡುಗಿ ಮುಗಿಲೆ ತಿರುಗಿದಂತಾಯಿತು. ಅದನ್ನು ಕಂಡು ಅಚ್ಚರಿಯಿಂದ ಹುಚ್ಚುನಂತಾದ ನಾನು ನಿಮ್ಮ ಸನ್ನಿಧಿಯಲ್ಲಿ ಆ ಸಮಾಚಾರವನ್ನು ತಿಳಿಸಲು ಓಡಿಬಂದೆನು. ಅವರಾರು ಎನ್ನುವುದು ನನಗೆ ಗೊತ್ತಿಲ್ಲ. ಅವರಲ್ಲಿ ಒಬ್ಬನು ಬೆಳ್ಳಿಯ ಬೆಟ್ಟದಂತೆ ಬೆಳ್ಳಗಿದ್ದರೆ ಇನ್ನೊಬ್ಬನು ಕಾಡಿಗೆಯಂತೆ ಕಪ್ಪಗಿದ್ದನು. ಆ ಅಂಜನಾ ಚಲದಂತಿದ್ದ ಮನುಷ್ಯನೇ ಮದ್ದಾನೆಯು ಬಾಳೆಕಂಬವನ್ನು ಮುರಿಯುವಂತೆ ಸಹಜವಾಗಿಯೇ ನಮ್ಮ ಹೆಮ್ಮೆಯಧನುಸ್ಸನ್ನು ಮುರಿದು ಆ ಸೋದರನೊಂದಿಗೆ ವಾಯುವೇಗದಿಂದ ಆಯುಧಾಗಾರದಿಂದ ಹೊರಟುಹೋದನು.

ಚಾಪಭಂಗದ ಅಪಮಾನಕಾರಕವಾದ ಸಮಾಚಾರವನ್ನು ಕೇಳಿ ಕಂಸನಿಗೆ ಕೋಪದಕಿಂತ ತಾಪ ಚಿಂತೆಗಳೇ ಹೆಚ್ಚಾದವು. ಚಿಕ್ಕಬಾಲಕನು ಪ್ರಬಲವಾದ ನನ್ನ ಬಲದಲಗಳನ್ನೆಲ್ಲ ಕಡೆಗಣಿಸಿ ಅಂತಃಪುರ-ಅಸ್ತ್ರಾಗಾರಗಳಲ್ಲಿ ನಿರಾಂತಕವಾಗಿ ಪ್ರವೇಶಿಸಿ, ನಮ್ಮ ಜನರು ನೋಡ ನೋಡುವಷ್ಟರಲ್ಲಿಯೇ ಹೇಗೆ ಧನುಸ್ಸನ್ನು ಮುರಿದೊಗೆದು ಹೋದನು? ಎಂದು ಚಿಂತಾಕ್ರಾಂತನಾದನು. ಮನೆಗೆ ಬಂದು ತನ್ನ ಆಸ್ಥಾನ ಮಲ್ಲರಾದ ಚಾಣೂರ ಮುಷ್ಟಿಕರೆಂಬ ಜಗಜಟ್ಟಿಗಳಿಬ್ಬರನ್ನೂ ಕರೆಯಿಸಿ ಮಲ್ಲಕಲೆಯಲ್ಲಿ ಅಪ್ರತಿಮರಾದ ಜಟ್ಟಿಗಳೇ! ಇಷ್ಟು ದಿನ ನಾನು ನಿಮಗೆ ಮಾಡಿದ ಉಪಕಾರ ಸಹಾಯಗಳನ್ನು ನೆನೆದು ನೀವೀಗ ಒಂದು ಕೆಲಸವನ್ನು ಮಾಡಬೇಕು.

''ನಾಳಿನ ಮಲ್ಲಯುದ್ಧಕ್ಕೆ ನನ್ನ ವೈರಿಗಳಾದ ರಾಮ-ಕೃಷ್ಣರು ಬರುವರು. ಅಡವಿಯಲ್ಲಿ ಬೆಳೆದ ಅವರಿಗೆ ರಂಗಸ್ಥಳದಲ್ಲಿ ಮಲ್ಲಯುದ್ಧವನ್ನಾಡಿ ಅಭ್ಯಾಸವಿಲ್ಲದ್ದರಿಂದ ನಿಮ್ಮಂಥ ಜಗಜಟ್ಟಿಗಳ ಜೊತೆಗೆ ಕಾದಾಡುವಾಗ ಅವರು ಕೆಳಗೆ ಬೀಳುವುದು ಖಂಡಿತ. ಅವರು ಬಿದ್ದಕೂಡಲೇ ನೀವು ಅಲ್ಲಿಂದಲ್ಲಿಯೇ ಅವರನ್ನು ಸಂಹರಿಸಿ ಬಿಡಬೇಕು. ಬಾಲಕರು ಎಂದಾಗಲಿ ಚಪಲರೆಂದಾಗಲಿ ಅವರ ಮೇಲೆ ದಯಾದಾಕ್ಷಿಣ್ಯ ತೋರಿಸಿ ಸರ್ವಥಾ ಉಪೇಕ್ಷೆಮಾಡಬೇಡಿರಿ. ಅವರನ್ನು ಕೊಂದರೆ ನನಗೆ ಅತ್ಯಂತ ಸಂತೋಷವಾಗುವುದು'' ಎಂದು ಹೇಳಿದನು.

ಅದಕ್ಕೆ ಆ ಇಬ್ಬರೂ ಮಲ್ಲರೂ 'ಮಹಾರಾಜ, ಅವರಿಬ್ಬರೂ ಈಗ ಸತ್ತುಶವ ವಾಗಿದ್ದಾರೆಂದು ತಿಳಿಯಿರಿ, ನಾಡಿಗೆ ಪ್ರಖ್ಯಾತರಾದ ನಮ್ಮೆದುರು ಆ ಕಾಡುಹುಡುಗರು ಎಷ್ಟು ಹೊತ್ತು ನಿಲ್ಲಬಲ್ಲವು!' ಎಂದು ಅಹಂಕಾರದಿಂದ ನುಡಿದು ಕಂಸನನ್ನು ಸಂತೈಸಿ ಅವರು ಹೋದಬಳಿಕ ಕಂಸನು ಮಹಾಮಾತ್ರನೆಂಬ ತನ್ನ ಮಾವುತನಿಗೆ ಹೇಳಿ ಕಳಿಸಿದನು. ಅವನು ಬಂದಕೂಡಲೇ ''ಮಾವುತ! ನಮ್ಮ ಮದೋನ್ಮತ್ತವಾದ ಕುವಲಯಾಪೀಡವೆಂಬ ಪ್ರಚಂಡಬಲದ ಆನೆಯನ್ನು ರಂಗಭೂಮಿಯ ಹೆಬ್ಬಾಗಿಲದ ಬಳಿಯಲ್ಲಿಯೇ ನಿಲ್ಲಿಸು. ಮೊದಲೇ ಮದೋನ್ಮತ್ತ ಚಿತ್ತದಿಂದ ಸರ್ವದಾ ದೃಪ್ತವಾಗಿಯೇ ಇರುವ ಚಂಡವಿಕ್ರಮದ ಆ ಗಂಡಾನೆಯನ್ನು ನಾಳೆ ಸಿಟ್ಟಿಗೆ ಬರಿಸಿ, ಮಸ್ತಿಗೆ ತರಿಸಿ ರಂಗಮಂದಿರಕ್ಕೆ ರಾಮಕೃಷ್ಣರು ಬರುವಾಗ ಅವರ ಮೇಲೆ ಬಿಟ್ಟು ಬಿಡು. ಮದೋದೀರ್ಣವಾದ ಆ ಮದ್ದಾನೆಯು ವನಚಾರಿಗಳಾದ ಅವರಿಬ್ಬರನ್ನೂ ಸೊಂಡೆಯಿಂದ ಸೀಳಿ ಒಗೆದು ಕೊಂದಬಳಿಕ ಅವರ ಶವಗಳನ್ನೂ ರಂಗಭೂಮಿಯಲ್ಲಿ ತಂದು ಒಗೆಯಲಿ. ಅದನ್ನು ನೋಡಿ ವಸುದೇವನು ತಾನಾಗಿ ಸಕುಟುಂಬವಾಗಿ ಸತ್ತು ಹೋಗುವನು. ಆಮೇಲೆ ಕೃಷ್ಣನನ್ನು ನಂಬಿ ನೆಚ್ಚಿದ ಯಾದವರೆಲ್ಲರೂ ತಾವಾಗಿ ನಾಶ ಹೊಂದುವರು. ಇಲ್ಲದಿದ್ದರೆ ಈ ಆನೆ ಮಲ್ಲರಿಂದ ರಾಮಕೃಷ್ಣರನ್ನು ಕೊಲ್ಲುವುದಾಗದಿದ್ದರೆ- ನಾನೇ ಸ್ವಯಂ ಶಕ್ತಿಯಿಂದ ಅವರಿಬ್ಬರನ್ನೂ ಕೊಂದು ಈ ಮಥುರೆಯಲ್ಲಿ ಯಾದವರ ಒಂದು ಪಿಳ್ಳೆಕೂಡ ಉಳಿಯದಂತೆ ಮಾಡುತ್ತೇನೆ.'' ನಮ್ಮ ತಂದೆ ಕೂಡ ಯಾದವ ಕುಲದ ಕೈವಾರಿಯೆಂದು ತಿಳಿದು ನಾನು ಅವನನ್ನೂ ಬಿಟ್ಟುಬಿಟ್ಟಿದ್ದೇನೆ.

## ಕಂಸನ ಜನ್ಮರಹಸ್ಯದ ಗೌಪ್ಯಸ್ಫೋಟ

''ಮಾವುತ! ನಿಜ ಹೇಳಬೇಕೆಂದರೆ ಇಂಥ ಅಲ್ಪ ವೀರ್ಯದ ಮಾನುಷನಾದ ಉಗ್ರಸೇನನಿಂದ ನನ್ನಂಥ ಮಹಾ ಪರಾಕ್ರಮಶಾಲಿಯಾದ ಮಗನು ಹುಟ್ಟುವುದೇ ಸಾಧ್ಯವಿಲ್ಲ. ನಾರದರು ಹೇಳಿದಂತೆ ನಾನು ಉಗ್ರಸೇನನ ಮಗನೇ ಅಲ್ಲ.''

ಅದನ್ನು ಕೇಳಿ ಬೆಚ್ಚಿಬಿದ್ದ ಮಹಾಮಾತ್ರನು ಉದ್ಭ್ರಾಂತನಂತಾಗಿ ''ಮಹಾರಾಜ! ಇದೇನು ವಿಚಿತ್ರವಾದ ವಾರ್ತೆಯನ್ನು ಹೇಳುತ್ತಲಿರುವೆ! ನೀನು ನಿನ್ನ ತಂದೆಯಿಂದ ಹುಟ್ಟಿಲ್ಲವೇ! ಕಂಸ ಎಂಥ ಮಾತನಾಡುವಿಯಲ್ಲ! ನಿನ್ನ ತಾಯಿಯು ಮಹಾಪತಿವ್ರತೆ. ಎಂಥ ದುಷ್ಟಭ್ರಷ್ಟರಾದ ಕುಲಟೆಯರೂ ಕೂಡ ಮಾಡದ ವ್ಯಭಿಚಾರವನ್ನು ನಿನ್ನ ತಾಯಿ ಹೇಗೆ ಮಾಡುವುದು ಶಕ್ಯ! ನನಗಂತೂ ಅತ್ಯಂತ ಕುತೂಹಲವಾಗಿದೆ. ನಾರದರು ಏನು ಹೇಳಿದರು? ಸ್ಪಷ್ಟವಾಗಿ ನನಗೆ ತಿಳಿಸು'' ಎಂದು ಲವಲವಿಕೆಯನ್ನು ಪ್ರದರ್ಶಿಸಿದನು.

ಆಗ ಕಂಸನು ನಾರದರು ಹಿಂದೆ ತನ್ನ ಮುಂದೆ ಹೇಳಿದ ತನ್ನ ಜನ್ಮಕಥೆಯನ್ನು ವಿವರಿಸಿದನು.

ಉಗ್ರಸೇನ ಮಹಾರಾಜನ ಪಟ್ಟದರಸಿಯು ಹಿಂದೊಮ್ಮೆ ರಜಸ್ವಲೆಯಾದಾಗ ಸುಯಾಮುನ ಎಂಬ ಪರ್ವತಕ್ಕೆ ಪ್ರಕೃತಿ ಸೌಂದರ್ಯವನ್ನು ನೋಡಿ ನಲಿಯಬೇಕೆಂದು ಬಂದಿದ್ದಳು. ಅಲ್ಲಿಯ ಗಿಡಬಳ್ಳಿಗಳಿಂದ ರಮಣೀಯವಾದ ಸರಸ್ತೀರದ ಕುಂಜನಿಕುಂಜಗಳಲ್ಲಿ ತನ್ನ ಗೆಳತಿಯರಿಂದ ಕೂಡಿಕೊಂಡು ತಿರುಗಾಡಿ ಸೃಷ್ಟಿ ಸೌಂದರ್ಯದ ಸಮೃದ್ಧಿಯನ್ನು ಕಣ್ತುಂಬ ನೋಡಿ ತಣಿದಳು.

ಆಗ ಅವಳ ಕಣ್ಣೆದುರಿಗಿರುವ ಹಸಿರು ಹಾಸಿಗೆಯ ಮೇಲೆ ಗರಿಗೆದರಿದ ಸೌಂದರ್ಯ ಮಯೂರಗಳು ಚೆಲುವಿನ ಕಣ್ಣಗಳನ್ನು ಅರಳಿಸಿಕುಣಿಯುತ್ತಲಿದ್ದವು. ಕೋಕಿಲೆಯ ಪಂಚಮರಾಗವನ್ನು ಕೇಳಿ ಆ ವನಭೂಮಿಯೆಲ್ಲ ರೋಮಾಂಚಿತವಾಗಿ ನಿಂತುಕೊಂಡಿತ್ತು. ಅದೇ ವೇಳೆಯಲ್ಲಿ ಗಂಧಮಕರಂಧಗಳ ಭಾರದಿಂದ ಮಂದಮಂದವಾಗಿ ಸಂಚರಿಸುವ ಶೀತಲ ಸಮೀರಣನು ವನಕುಸುಮಗಳ ಶ್ರೀಗಂಧ ಸಾರವನ್ನೆಲ್ಲ ತಂದು ಸರ್ವೇಂದ್ರಿಯ ಗಳಿಗೆ ಆನಂದವನ್ನುಂಟು ಮಾಡುತ್ತಲಿದ್ದನು. ಅದೇ ವೇಳೆಯಲ್ಲಿ ಸೌಭನಗರದ ಅಧಿಪತಿಯಾದ ದ್ರುಮಿಲನೆಂಬ ದಾನವ ರಾಜನು ಕಾಮಗಾಮಿಯಾದ ತನ್ನ ರಥವನ್ನು ಏರಿಕೊಂಡು ಅಲ್ಲಿಗೆ ದೈವಯೋಗದಿಂದ ಬಂದನು. ಅವನು ರಥದಿಂದ ಇಳಿದು ತನ್ನ ಸಾರಥಿಯೊಂದಿಗೆ ತಂಪಿಂಪುಗಳ ತವರುಮನೆಯಂತಿರುವ ಆ ಕಾನನದ ಕಂಪಿನ ಅರಮನೆಯಲ್ಲಿ ವನಶ್ರೀ ಸೌಂದರ್ಯವನ್ನು ನಿರುಕಿಸುತ್ತ ಬರುವಾಗ ಆಕಸ್ಮಾತ್ತಾಗಿ ಗೆಳತಿಯರೊಂದಿಗೆ ಬಳ್ಳಿವಾಡಗಳಲ್ಲಿ ಹೂ ಕೊಯ್ಯುತ್ತಲಿರುವ ತಾರುಣ್ಯವತಿ ಯಾದ ಆ ಲಾವಣ್ಯವತಿಯು ಅವನ ಕಣ್ಣಿಗೆ ಬಿದ್ದಳು.

ಒಂದು ಮುಹೂರ್ತ ಪ್ರಣಿಧಾನದಿಂದ ಧ್ಯಾನಮಾಡುವಷ್ಟರಲ್ಲಿ ಅವನಿಗೆ ಇವಳು ಉಗ್ರಸೇನ ಮಹಾರಾಜನ ಹೆಂಡತಿ ಎಂದು ತಿಳಿದು ಬಂದಿತು. ಆಗ ಅವನು ತಕ್ಷಣದಲ್ಲಿ ಉಗ್ರಸೇನನ ರೂಪವನ್ನು ಸ್ವೀಕರಿಸಿ ಅವಳ ಸಮೀಪಕ್ಕೆ ನಸುನಗುತ್ತ ಬಂದನು. ಸತೀಶಿರೋಮಣಿಯೂ ಪತಿಪ್ರಾಣಳೂ ಆದ ಅವಳು ವನಸ್ಥಲಿಯ ಉನ್ಮಾದಕ ಸೌಂದರ್ಯವನ್ನು ಕಂಡು ಚಂಚಲಳಾಗಿ ತನ್ನ ಚಿತ್ತವು ಭೋಗ ವಿಲಾಸಗಳಿಗಿಳಿದು ತುಡಿಯುತ್ತಲಿರುವಾಗ ಹೇಳಿ ಕಳಿಸಿದಂತೆ ತನ್ನ ಪತಿಯೇ ಬಂದುದನ್ನು ಕಂಡು ಅವಳಿಗೆ ಪರಮಾನಂದವಾಯಿತು. ಅವನು ತನ್ನ ಪತಿಯೆಂದೇ ತಿಳಿದು ರಾಗೋದ್ರಿಕ್ತವಾದ ತನ್ನ ದೇಹವನ್ನು ಭೋಗೋತ್ಸವಕ್ಕಾಗಿ ಆ ದೈತ್ಯಪತಿಗೆ ನೀಡಿದಳು. ಆದರೆ ಅಂದಿನ ವಿಲಾಸ ಕೇಲಿಯಲ್ಲಿ ಆ ದಾನವೇಂದ್ರನ ರತಿರಭಸ ಹಾಗೂ ದೇಹ ಗೌರವವನ್ನು ಕಂಡು ಅವಳಿಗೆ ಇವನು ನನ್ನ ಪತಿ ಅಲ್ಲವೆಂದು ಸಂಶಯ ಬಂದು ತಕ್ಷಣದಲ್ಲಿ ಎದ್ದು ಸಿಡಿದು ನಿಂತು

''ನೀಚ, ನೀನಾರು! ಪತಿವ್ರತೆಯಾದ ನನ್ನನ್ನು ಪತಿಯ ವೇಷದಿಂದ ಕೆಡಿಸಿ ನನ್ನ ಸತೀತ್ವವನ್ನು ಹಾಳು ಮಾಡಿದೆ. ಕುಲಕಲಂಕಿನಿಯಾದ ನನ್ನನ್ನು ಕಂಡು ಬಾಂಧವರು ಏನೆನ್ನುವರು! ಅಯ್ಯೋ? ದುಷ್ಟ ! ನನ್ನ ಬಾಳನ್ನೆಲ್ಲ ಗೋಳಿಗೀಡುಮಾಡಿ, ಹಾಳು ಮಾಡಿ, ನಾನು ಕುಲಟೆಯರಿಗಿಂತ ಕೀಳಾಗುವಂತೆ ಮಾಡಿದೆ. ಪರಸ್ತ್ರೀಯರನ್ನು ಬಲಾತ್ಕರಿಸುವ ನಿನಗೆ ಧಿಕ್ಕಾರವಿರಲಿ! ಅಕಟಕಟ ನನ್ನ ಪತಿ ಹಾಗೂ ಅವನ ಪಕ್ಷದವರೆಲ್ಲ ನನ್ನನ್ನು ಬಿಟ್ಟು ಬಿಟ್ಟರೆ ಎಲ್ಲರಿಂದ ತಿರಸ್ಕೃತಳಾಗಿ ಎಲ್ಲಿರಲಿ? ಹೇಗೆ ಇರಲಿ? ಏಕೆ ಇರಲಿ?''

ಎಂದು ತನ್ನ ಧಿಕ್ಕರಿಸಿ ಮಾತನಾಡುವ ಅವಳ ಅಕ್ಕಸತನದ ನುಡಿಗಳನ್ನು ಕೇಳಿ ಕ್ರುದ್ಧನಾದ ಆ ದೈತ್ಯನು 'ಮೂಢಮಹಿಳೆಯೇ! ನೀನೊಬ್ಬ ಪಂಡಿತಳೆಂದು ತಿಳಿದುಕೊಂಡು ನನ್ನನ್ನೇಕೆ ನಿಂದಿಸುವೆ? ನಾನು ದ್ರುಮಿಲ ಎಂಬ ಹೆಸರಿನ ಶ್ರೇಷ್ಠನಾದ ದೈತ್ಯರಾಜನು. ನೀನು ಮೃತ್ಯುವಶನಾಗುವ ಮಾನವನನ್ನು ಪತಿಯೆಂದು ನಂಬಿ ನಿಷ್ಕಾರಣವಾಗಿ ನನ್ನನ್ನು ಬೈಯುತ್ತಲಿರುವೆ. ಸ್ತ್ರೀಯರಿಗೆ ಅದರಲ್ಲಿಯೂ ಮಾನವಸ್ತ್ರೀಯರಿಗಂತೂ ವ್ಯಭಿಚಾರವು ಅಂಥ ದೋಷವಲ್ಲ. ಪೂರ್ವಕಾಲದಲ್ಲಿಯ ಕುಂತಿ ಮದಯಂತಿ ಮೊದಲಾದ ಸ್ತ್ರೀಯರು ದೇವತಾ ಪುರುಷರೊಡನೆ ಸ್ವೈರ ಸಂಭೋಗ ಸ್ವಚ್ಛಂದ ವ್ಯಭಿಚಾರಗಳನ್ನು ನಿಶ್ಶಂಕವಾಗಿ ಮಾಡಿ ದೇವಸಮಾನರಾದ ಸುಪ್ರಸಿದ್ಧ ಮಕ್ಕಳ್ನನು ಹಡೆದಿದ್ದು ನೀನು ಅವರ ಕಥೆ ಚರಿತ್ರೆಗಳನ್ನು ಕೇಳಿಲ್ಲವೇ? ನನ್ನಂಥ ಮಹಾ ಪುರುಷರ ಜೊತೆಗೆ ನಿನ್ನಂಥ ಮನುಷ್ಯ ಮಹಿಳೆಯು ಮಾಡಿದ ವ್ಯಭಿಚಾರ ದೋಷವಲ್ಲ. ಹಾಗೂ ನಿನಗೆ ನನ್ನ ಅನುಗ್ರಹದಿಂದ ಕಂಸ ಎಂಬ ಹೆಸರಿನ ವೈರಿಗಳನ್ನು ಧ್ವಂಸಮಾಡುವ ಪ್ರಚಂಡನಾದ ಮಗನು ಹುಟ್ಟುತ್ತಾನೆ'' ಎಂದು ಹೇಳಿದನು.

ಅದನ್ನು ಕೇಳಿ ಸಿಟ್ಟಿನ ಮೊಟ್ಟೆಗೆ ಸಿಡಿಮದ್ದನ್ನು ಇಟ್ಟಂತೆ ಕಿಡಿಕಿಡಿಯಾದ ಆ ರಾಜಾಂಗನೆಯು ಆ ದೈತ್ಯಾಧಮನಿಗೆ ನುಡಿದಳು. ''ಥೂ, ಪಾಪಾತ್ಮ! ದೂರಸರಿ, ಧಿಕ್ಕಾರವಿರಲಿ ನಿನ್ನ ಈ ದುರ್ವಿಚಾರಗಳಿಗೆ. ಬೆಂಕಿಯಿಡಲಿ ನಿನ್ನ ದುಶ್ಶೀಲ ದೌರಾತ್ಮ್ಯಗಳಿಗೆ. ನೀಚ! ಜಗತ್ತಿನಲ್ಲಿರುವ ಕೆಲವು ಹೆಣ್ಣುಮಕ್ಕಳು ದುಷ್ಟರಿರಬಹುದು. ಆದರೆ ಅರುಂಧತಿ ಮೊದಲಾದ ಪತಿವ್ರತಾ ಶಿಖಾಮಣಿಗಳಾದ ಸ್ತ್ರೀಯರು ಭೂಮಿಯಲ್ಲಿ ಎಷ್ಟು ಜನರಿಲ್ಲ! ಅಂಥ ಸತೀಕುಲಮಂಡನ ಮಣಿಯರಾದ ರಮಣಿಯರಿಂದಲೇ ನೆಲ ನಿಂತಿದೆ. ಬೈಗು ಬೆಳಗುಗಳಾಗುತ್ತಲಿವೆ. ಕುಂತಿ ದಮಯಂತಿಯರಾದರೂ ಆಪದ್ಧರ್ಮವೆಂದು ದೇವತಾ ಸ್ಪರ್ಶಮಾಡಿದ್ದಾರೆ. ಕಾಮವಾಸನೆಯಿಂದಲ್ಲ. ನೀನು ನನಗೆ ಮಹಾಬಲಿಷ್ಠನಾದ ಮಗವನ್ನು ಕೊಡುವೆನೆಂದು ಹೇಳಿ ಕೊಡಲಿರುವ ಕೆಟ್ಟದುಷ್ಟನಾದ ಆ ನಿನ್ನ ದುಸ್ಸಂತಾನವನ್ನು ಕೂಡ ನನ್ನ ಪತಿಯ ವಂಶದಲ್ಲಿ ಜನಿಸಲಿರುವ ಭಗವಂತನು ಬಂದು ಸಂಹರಿಸಲಿ'' ಹೀಗೆ ರೋಷಾವೇಶದಿಂದ ಶಪಿಸುತ್ತಲಿರುವ ಅವಳ ಕಿಡಿಯಂತಿರುವ ನುಡಿಗಳನ್ನು ಕೇಳಿ ಖಿನ್ನನಾದ ಸೌಭನು ಸಣ್ಣಮೋರೆಮಾಡಿಕೊಂಡು ತನ್ನ ಊರಿಗೆ ಹೋದನು.

ಆ ರಾಜಮಹಿಷಿಯಾದರೂ ದೀನಮುಖಿಯಾಗಿ ಪತಿಯ ಗೃಹಕ್ಕೆ ತೆರಳಿದಳು. ಮಾವುತ! ನನ್ನ ಅಮಾನುಷವಾದ ದೈತ್ಯಶಕ್ತಿ, ದಾರುಣವೀರ್ಯ, ದುಃಸ್ಸಹವಾದ ತೇಜಸ್ಸುಗಳನ್ನು ನೋಡಿದರೆ ನಾರದರು ಹೇಳಿದ್ದು ನಿಜವೇ ಎಂದು ಯಾರಿಗಾದರೂ ಅನಿಸಬಹುದು. ಆದುದರಿಂದಲೇ ನನ್ನ ತಂದೆತಾಯಂದಿರು ಚಿಕ್ಕವನಿದ್ದಾಗಲೇ ನನ್ನನ್ನು ಬಿಟ್ಟು ಬಿಟ್ಟಿದ್ದಾರೆ. ಆದರೂ ನಾನು ನನ್ನ ಸ್ವಯಂಶಕ್ತಿಯಿಂದಲೇ ಈಗ ಮುಂದೆ ಬಂದು ರಾಜ್ಯವನ್ನು ಆಳುತ್ತಿದ್ದೇನೆ. ನನ್ನ ತಾಯ್ತಂದೆಗಳೂ ಬಂಧುಗಳೂ ಆಪ್ತೇಷ್ಟರೆಲ್ಲರೂ ನಾನು

ದೈತ್ಯಜಾತನೆಂದು ನನ್ನನ್ನು ದ್ವೇಷಿಸುವರು. ಮತ್ತು ಕೃಷ್ಣನ ಪಕ್ಷವನ್ನು ಹಿಡಿದಿರುವರು. ಮೊದಲು ಈ ರಾಮಕೃಷ್ಣರನ್ನು ಬಳಿಕ ಅವರೆಲ್ಲರನ್ನೂ ಕೊಲ್ಲಬೇಕೆಂದು ನಾನು ಯೋಚಿಸಿದ್ದೇನೆ. ಅದಕ್ಕಾಗಿ ನೀನು ನಾಳೆ ಕುವಲಯಾಪೀಡವನ್ನು ಏರಿ ರಂಗಭೂಮಿಯ ಬಾಗಿಲಲ್ಲಿ ಸಿದ್ಧನಾಗಿ ನಿಲ್ಲು'' ಎಂದು ಹೇಳಿ ಕಂಸನು ಮಾವುತನನ್ನು ಕಳಿಸಿದನು.

ಮರುದಿನ ಬೆಳಗಾಗುವಷ್ಟರಲ್ಲಿ ಸಭಾರಂಗವೆಲ್ಲವೂ ದ್ವಂದ್ವ ಯುದ್ಧವನ್ನು ನಿರೀಕ್ಷಿಸಲಿಕ್ಕಾಗಿ ಬಂದ ಪ್ರೇಕ್ಷಕರಿಂದ ಕಿಕ್ಕಿರುದ ತುಂಬಿಹೋಯಿತು. ಕುಳಿತು ನೋಡಲಿಕ್ಕೆ ಎರಡು ಅಂತಸ್ತಿನ ಕೆಲವು ಪ್ರೇಕ್ಷಾಗ್ರಾರಗಳನ್ನು ಮಾಡಿ ಅವುಗಳ ಮುಂದೆ ಜಾಳಿಗೆಯುಳ್ಳ ತೆಳ್ಳನ ಪರದೆಗಳನ್ನು ತೇಲಿಸಿಬಿಟ್ಟಿದ್ದರು. (ಅದರಿಂದ ಪುರುಷರಿಗೆ ಸ್ತ್ರೀಯರು ಕಾಣದೆ ಸ್ತ್ರೀಯರಿಗೆ ಮಾತ್ರ ರಂಗಭೂಮಿಯಲ್ಲಿ ನಡೆಯುವ ಕುಸ್ತಿಯ ಕಾರ್ಯಕ್ರಮವೆಲ್ಲ ನಿಚ್ಚಳವಾಗಿ ಕಾಣುತ್ತಲಿತ್ತು). ಹೀಗೆ ನಾನಾದೇಶಗಳಿಂದ ಬಂದ ಭಿನ್ನಭಿನ್ನ ಜಾತಿ ಜನಾಂಗಗಳ ಬೇರೆ ಬೇರೆ ವೇಷ ಭೂಷಣಗಳುಳ್ಳ ಅನೇಕ ತರಹದ ಜನರಿಂದ ತುಂಬಿ ತುಳುಕಾಡುತ್ತಲಿತ್ತು ಆ ಪ್ರೇಕ್ಷಾಗೃಹ ಅಲ್ಲಿ ಕೂಡಿದ ಜನರ ಮಾತಿನ ಕಲಕಲಾಟದಿಂದ ಪೆರ್ದರೆಗಳ ಗರ್ಜನೆಯಿಂದ ಮೊರೆಯುವ ಸಾಗರದಂತೆ ತೋರುತ್ತಲಿತ್ತು. ಆ ಸಭಾಗೃಹ ಅದರ ಅಗ್ರ ಭಾಗದಲ್ಲಿ ಬಂಗಾರದ ಮಂಚವನ್ನು ಹಾಕಿ ಅದರ ಮೇಲೆ ಕಂಸ ಮಹಾರಾಜನಿಗೆ ಕೂಡಲಿಕ್ಕಾಗಿ ಒಂದು ಪ್ರತ್ಯೇಕ ಪ್ರೇಕ್ಷಾಗಾರವನ್ನೇ ಏರ್ಪಡಿಸಿದ್ದರು. ಸಕಲ ಸೌಂದರ್ಯಗಳಿಂದ ಒಡಗೂಡಿದ ಅದು ಒಂದು ತಾತ್ಪೂರ್ತಿಕ ರಾಜಗೃಹದಂತೆಯೇ ಇದ್ದು ಮೇರುಶೃಂಗದಂತೆ ಶೋಭಿಸುತ್ತಲಿತ್ತು.

ಅಷ್ಟರಲ್ಲಿ ಕಂಸನು 'ಕುವಲಯಾಪೀಡಗಜವು ಪ್ರೇಕ್ಷಾಗಾರದ ಬಾಗಿಲದಲ್ಲಿ ನಿಲ್ಲಲಿ'' ಎಂದು ಆಜ್ಞೆಯನ್ನಿತ್ತು ಪ್ರೇಕ್ಷಾಗಾರನ್ನು ಪ್ರವೇಶಿಸಿದನು. ಬೆಳ್ಳಗಿನ ಬಟ್ಟೆಯುಟ್ಟು ಶ್ವೇತಛತ್ರ, ಬೆಳ್ಳಿಯ ಚಾಮರ, ಬಿಳಿಯ ಬೀಸಣಿಕೆ, ಬಂಗಾರದ ಮುಕುಟಗಳಿಂದ ಅವನು ಬಿಳಿ ಮೋಡಗಳ ನಡುವೆ ನಿಂತ ಚಂದ್ರನಂತೆ ಕಾಣಿಸುತ್ತಲಿದ್ದನು. ಅವನು ಸಿಂಹಾಸನದ ಮೇಲೆ ಬಂದು ಕುಳಿತ ಕೂಡಲೇ ನಾಗರಿಕರೂ ಪ್ರೇಕ್ಷಕರೂ ಎಲ್ಲರೂ ಎದ್ದು ಜಯ ಶಬ್ದವನ್ನು ಉಚ್ಚರಿಸಿ ಕುಳಿತುಕೊಂಡರು. ಆ ಬಳಿಕ ರಂಗದ ಮೂರು ಭಾಗಗಳಿಂದ ಅತ್ಯಂತ ಬಲಿಷ್ಠರಾದ ಮೂವರು ಮಲ್ಲರು ಪ್ರೇಕ್ಷಾಗಾರವನ್ನು ಪ್ರವೇಶಿಸಿದರು. ಅನಂತರ ಮಂಗಳ ವಾದ್ಯಗಳ ಮಂಜುಘೋಷದೊಡನೆ ರಾಮಕೃಷ್ಣರು ಗೋಪಾಲ ವೇಷದಿಂದ ತಮ್ಮ ತಮ್ಮ ತೋಳುಗಳನ್ನು ತಟ್ಟುತ್ತ ಗರ್ಜಿಸುತ್ತ ಸಿಂಹನಾದ ಮಾಡುತ್ತ ಉಲ್ಲಾಸದಿಂದ ರಂಗದ್ವಾರಕ್ಕೆ ಬಂದರು. ಅವರು ತಮ್ಮ ಚಂಡಿಕೆಯನ್ನು ಮೇಲೆ ಪಿಂಡಿಕೆಯಾಕಾರ ವಾಗಿ ಕಟ್ಟಿ ಅದರ ಸುತ್ತಲೂ ಪುಷ್ಪಮಾಲೆಯನ್ನು ಸುತ್ತಿದ್ದರು. ತಮ್ಮ ಎರಡು ನೀಳ್ತೋಳುಗಳ ಹೊರತು ಬೇರೆ ಆಯುಧವನ್ನೇ ಪಿಡಿಯದ ಅವರು ಉತ್ಸಾಹೋದ್ರೇಕದಿಂದ ಅಗಳಿಯಂತಿರುವ ಒಬ್ಬರಿಗೊಬ್ಬರ ಬಾಹುಗಳನ್ನು ಛಪ್ಪಡಿಸುತ್ತ ರಂಗದೊಳಗೆ ಬರಬೇಕೆನ್ನು ವಷ್ಟರಲ್ಲಿ ಬಾಗಿಲದಲ್ಲಿ ನಿಂತ ಮದ್ದಾನೆಯನ್ನು ತಿವಿದು ಅವರ ಮೇಲೆ ನೂಕಲಾಯಿತು.

## ಆ ಮದ್ದಾನೆಗೆ ಕೃಷ್ಣನೇ ಮದ್ದು

ಮದ ತುಂಬಿ ತೂಗಾಡುತ್ತಲಿರುವ ಆನೆಯ ಮೇಲೆ ಕುಳಿತ ಮಾವುತನು ಅಂಕುಶದಿಂದ ತಿವಿಯಲು ಸಂಕೇತವನ್ನು ತಿಳಿದು ಗಜವು ತನ್ನ ಸೊಂಡೆಯನ್ನು ಎತ್ತಿ ಅವರಿಬ್ಬರನ್ನೂ

ಕಬಳಿಸಬೇಕೆಂದು ಅವರ ಮೇಲೆ ಏರಿಹೋಯಿತು. ಮದವೇರಿದ ಆನೆ ತನ್ನ ಮೇಲೆ ಬರುತ್ತಲಿದ್ದರೂ ಕೃಷ್ಣನು ನಗುತ್ತಲೇ ನಿಂತುಕೊಂಡು ಕಂಸನ ಕಪಟ ಕಾರಸ್ಥಾನವನ್ನು ಹಳಿದು "ಈ ದುರಾತ್ಮನು ಬಹುಬೇಗ ಯಮದೇವರ ಭೇಟಿಗೆ ಹೋಗಬೇಕೆಂದು ಗಡಿಬಿಡಿಸುತ್ತಾನೆ" ಎಂದು ನುಡಿದನು. ಆನೆಯು ತೀರ ಹತ್ತಿರಕ್ಕೆ ಬಂದ, ಬಳಿಕ ತಾನೇ ಜಿಗಿದು ನಿಂತು, ಅದರ ಮುಂದೆ ಚಪ್ಪಾಳೆಯಿಕ್ಕಿ ಗರ್ಜಿಸಿ ತೋಳುತಟ್ಟಿ ಅದರ ಸೊಂಡೆಯನ್ನು ಗಟ್ಟಿಯಾಗಿ ಹಿಡಿದನು. ಅದು ವೇಗದಿಂದ ಹಾಯಬಂದಾಗ ಅದರ ಗಂಡಸ್ಥಳದ ಒತ್ತಡಕ್ಕೆ ತನ್ನ ವಕ್ಷಸ್ಥಳವನ್ನು ನೀಡಿ ನಿಂತನು. ಅದು ತನ್ನ ಶಕ್ತಿಯನ್ನೆಲ್ಲ ಹಾಕಿ ಒತ್ತಿದರೂ ಹಿಂದೆ ಸರಿಯದೇ ಅದನ್ನೆ ತನ್ನ ಎದೆಯಿಂದ ಒತ್ತಿ ಸೊಂಡೆಯನ್ನು ಒಳಸರಿಸಿ ಅದರ ಕೋರೆದಾಡೆಗಳ ನಡುವೆ ಹೋಗಿ ನಿಂತನು. ಮರುಚಣದಲ್ಲಿ ಅದರ ಕಾಲಿನ ಕೆಳಗೆ ನುಸುಳಿದನು. ಆ ಮದಕರಿಯು ಕೃಷ್ಣನನ್ನು ಸೊಂಡೆಯಿಂದ ಹಿಡಿಯಬೇಕು, ಕೋರೆಯಿಂದ ಹೊಡೆಯಬೇಕು, ಕಾಲಿನಿಂದ ತುಳಿಯಬೇಕು ಎಂದು ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಬರೀ ಆಯಾಸ ಮಾತ್ರವಾಗಿ ಅದು ನಿತ್ರಾಣವಾಗಿ ನಿಂತಿತು. ಪ್ರಚಂಡಶರೀರದ ಆ ಪುನ್ನಾಗವು ಏನು ಮಾಡಬೇಕೆನ್ನುವದು ತಿಳಿಯದೇ ಕೃಷ್ಣನನ್ನು ಹಿಡಿಯಹೋಗಿ ಅವನು ಸಿಗದೇ ತಾನೇ ನಿಃಸ್ಸತ್ವವಾಗಿ ಮಳೆಗಾಲದ ಹೆಮ್ಮೋಡದಂತೆ ಮದವನ್ನು ಸುರಿಸಹತ್ತಿತು.

ಆಗ ಕೃಷ್ಣನು ಇದರ ಜೊತೆಗೆ ಇನ್ನು ಆಟಸಾಕು. ಎಂದು ಅದರ ಮೋರೆಯ ಮೇಲೆ ಒಂದು ಪಾದವನ್ನಿಟ್ಟು (ಜೂಟಗಾಲಕೊಟ್ಟು) ಎರಡೂ ಕೈಗಳಿಂದ ಅದರ ಕೋರೆಯನ್ನು ಕಿತ್ತಿದನು. ಮತ್ತು ವಜ್ರದಂತೆ ಬಿರಸಾದ ಅದೇ ಕೊರೆಯಿಂದ ಆ ಆನೆಗೆ ಚೆನ್ನಾಗಿ ಹೊಡೆಯಹತ್ತಿದನು. ಅದರಿಂದ ಜರ್ಜರಿತವಾದ ಆ ಮದ್ದಾನೆ ಕೆಟ್ಟದನಿಯಿಂದ ಒದರಿ, ಮಲಮೂತ್ರ ವಿಸರ್ಜನ ಮಾಡಿ, ಕಟಬಾಯಿಂದ ರಕ್ತವನ್ನು ಬಿಟ್ಟಿತು. ಆಗ ಬಲರಾಮನು ಜೋರಿನಿಂದ ಅದರ ಬಾಲವನ್ನು ಗರುಡನ್ನು ಕಲ್ಲು ಸಂದಿಯೊಳಗಿಂದ ಹಾವನ್ನು ಜಗ್ಗುವಂತೆ ಹಿಡಿದು ಜಗ್ಗಿದನು. ಮತ್ತೆ ಮೇಲೆ ಕೃಷ್ಣನು ಕೋರೆಯಿಂದ ಹೊಡೆಯಲು ಆ ಆನೆಯ ಸತ್ತಿತು. ಆಮೇಲೆ ಅದೇ ಕೋರೆಯಿಂದ ಮೇಲೆ ಕುಳಿತ ಮಾವುತನಿಗೆ ಒಂದೇ ಏಟವನ್ನು ಹಾಕಲು ಅವನೂ ಸತ್ತು ವಜ್ರಾಯುಧದಿಂದ ಗಿರಿಶಿಖರವುರುಳಿದಂತೆ ದಂತಹೀನವಾದ ಆನೆ ಮತ್ತು ಮಾವುತ ಇಬ್ಬರೂ ನೆಲಕ್ಕುರುಳಿ ಬಿದ್ದರು. ಆ ಬಳಿಕ ಸಭಾರಂಗದ ಬಾಗಿಲದಲ್ಲಿ ತೋರಣ ಕಟ್ಟಲಿಕ್ಕಾಗಿ ನಿಲ್ಲಿಸಿದ ಕಂಬವನ್ನು ಎತ್ತಿ ಆನೆಯ ರಕ್ಷಕರಾದ ಕಂಸನ ಸೈನಿಕರನ್ನೆಲ್ಲ ಹೊಡೆದು ಕೊಂದರು.

ಆಗ ರಾಮಲಕ್ಷ್ಮಣರಿಬ್ಬರೂ ಸ್ವರ್ಗದಿಂದಿಳಿದು ಬಂದು ಅಶ್ವಿನೀ ಕುಮಾರರಂತೆ ಸಭಾರಂಗವನ್ನು ಪ್ರವೇಶಿಸಿದರು. ರಂಗಭೂಮಿಯಲ್ಲಿ ಕಾಲಿಟ್ಟಕೂಡಲೇ ಸಿಂಹದ ಮರಿಗಳಂತೆ ಗುಡುಗುಹಾಕಿ. ಕೈ ತಟ್ಟಿ, ಬಾಹು ಚಪ್ಪರಿಸಿ, ಉಲ್ಲಸಿತವಾದ ಗೆಲುವಿನ ಮುಖದಿಂದ ನೆರೆದ ಪ್ರಚಂಡ ಜನಸ್ತೋಮದೆಡೆಗೆ ಗಂಭೀರವಾಗಿ ನೋಡಿದರು. ಆಗ ಜನರಾದರೂ ಪ್ರತಿ ಹರ್ಷೋದ್ಗಾರಗಳನ್ನು ತೆಗೆದು ಚಪ್ಪಾಳೆಯ ಕಡ ಕಡಾಟಗಳಿಂದ ಅವರಿಗೆ ಸ್ವಾಗತನೀಡಿದರು. ಅದನ್ನು ನೋಡಿ-ಅವರನ್ನು ಸ್ವಾಗತಿಸಲು ಜನರ ಉತ್ಸಾಹ ನೋಡಿ ಕಂಸನಿಗೆ ಕಸಿವಿಸಿಯಾಯಿತು.

## ಮಲ್ಲರ ಮರ್ದನ

ಆನೆಯ ಮರ್ದನದಿಂದ ಮೈಗೆಲ್ಲ ಚಂದನಲೇಪಿಸಿದಂತಾದ ಕೃಷ್ಣನು ಬಲರಾಮನನ್ನು ಮುಂದೆ ಮಾಡಿಕೊಂಡು ವೀರಾವೇಶದಿಂದ ಸಿಂಹದಂತೆ ಗುಡುಗುತ್ತ, ಮೇಘದಂತೆ ಗರಗರ

ತಿರುಗುತ್ತ, ಬಾಹುಗಳಿಂದ ಷಡ್ಡುಹೊಡೆದು, ಭೂಮಿಯನ್ನೆಲ್ಲ ನಡುಗಿಸುತ್ತ, ಕೈಯಲ್ಲಿ ಅದೇ ಕಿತ್ತಿದ ಆ ಕುವಲಯಾಪೀಡದ ಕೋರೆಯನ್ನು ಹಿಡಿದುಕೊಂಡು ರಂಗಭೂಮಿಯನ್ನು ಪ್ರವೇಶಿಸಿದರು. ಕೂಡಲೇ ಕಂಸನು ಚಾಣೂರನಿಗೆ ಅವನೊಡನೆ ದ್ವಂದ್ವ ಯುದ್ಧಮಾಡಲು ಆಜ್ಞಾಪಿಸಿದನು. ಅದರಂತೆ ಮುಷ್ಟಿಕನಿಗೆ ಬಲರಾಮನ ಜೊತೆಗೆ ಕುಸ್ತಿಯಾಡಲು ಹೇಳಿದನು. ಅದರಂತೆ ಅವರಿಬ್ಬರೂ ಮಲ್ಲರು ಕೋಪದಿಂದ ಕಣ್ಣು ಕಷಾಯಿತವಾಗಿ ನೀರು ತುಂಬಿದ ಮೋಡದಂತೆ ದ್ವಂದ್ವಕ್ಕೆ ಸನ್ನದ್ಧರಾಗಿ ನಿಂತುಕೊಂಡರು. ಆಗ ಕಂಸನು ಎಲ್ಲರಿಗೂ "ಶಾಂತರಾಗಿರಿ" ಎಂದು ಗದರಿಸಿ ಹೇಳಿದನು. ತಕ್ಷಣದಲ್ಲಿ ಸಭೆಯೆಲ್ಲ ನಿಸ್ತಬ್ಧ ಮೂಕವಾಗಿ ಎಲ್ಲೆಡೆಗೆ ಶಾಂತಿನೆಲಿಸಿತು. ಆಗ ಯಾದವರೆಲ್ಲರೂ ಕೂಡಿ ನುಡಿದರು. "ಈ ಮಲ್ಲಯುದ್ಧವು ವಿಷಮಯುದ್ಧವೆನಿಸುವದು. ಯಾಕೆಂದರೆ ಇದರಲ್ಲಿ ಚಾಣೂರನು ಪ್ರಬಲನೂ ಭೀಮಕಾಯನೂ ಇದ್ದು ಕೃಷ್ಣನು ಇನ್ನೂ ಬಹಳ ಚಿಕ್ಕವನಿರುವನು. ಮತ್ತು ಇಲ್ಲಿ ಮಧ್ಯಸ್ಥರಿಲ್ಲ. ಈ ಕುಸ್ತಿಯಲ್ಲಿ ಒಬ್ಬನು ಬಿದ್ದ ಬಳಿಕ ಅವರಿಗೆ ಗೆದ್ದವರು ಮುಂದೆ ಏನೂ ಅಪಾಯ ಮಾಡಬಾರದು. ಇವೆಲ್ಲ ಮಲ್ಲಯುದ್ಧದ ನಿಯಮಗಳುಂಟು. ಮತ್ತು ಈ ದ್ವಂದ್ವದಲ್ಲಿ ಪ್ರತಿಪಕ್ಷಿಗಳಿಬ್ಬರೂ ಸಮಾನ ವಯಸ್ಕರಿರ ಬೇಕಾದುದವಶ್ಯ" ಎಂದು ಮುಂತಾಗಿ ಮಾತನಾಡಲು ಸಭೆಯಲ್ಲಿ ಗೊಂದಲವೆದ್ದಿತು. ಆಗ ಕೃಷ್ಣನು ತಾನೇ ಎಲ್ಲರನ್ನೂ ಸಂತೈಸಲೆಂದು ಮಾತನಾಡಿದನು. "ನಾನು ಚಿಕ್ಕವನಿದ್ದರೂ ಈ ಚಾಣೂರನು ಪರ್ವತಾಕಾರನಾಗಿದ್ದರೂ ಚಿಂತೆಯಿಲ್ಲ. ನನಗೆ ಇಂಥ ಭೀಮಕಾಯರ ಜೊತೆಗೇ ದ್ವಂದ್ವಯುದ್ಧವು ಬಹಳ ಸೇರುತ್ತದೆ. ಎಂದು ನುಡಿದು ಕುಸ್ತಿಯ ಕಣಕ್ಕಿಳಿದನು.

ಕೃಷ್ಣಚಾಣೂರ ಇಬ್ಬರೂ ಮತ್ತವಾರಣಗಳಂತೆ ಭಯಂಕರವಾದ ಯುದ್ಧವನ್ನು ಪ್ರಾರಂಭ ಮಾಡಿದರು. ಒಬ್ಬನು ಒಂದು ಪೇಚು ಹಾಕಿದರೆ ಇನ್ನೊಬ್ಬನು ಅದನ್ನು ಬಿಡಿಸಿ ಕೊಂಡು ಎದುರಾಳಿಯನ್ನು ಎತ್ತಿ ಒಗೆಯುತ್ತಿದ್ದನು. ಇನ್ನೊಬ್ಬನು ಮೈಗೆ ಮಣ್ಣು ಹತ್ತದಂತೆ ಜಿಗಿದು ನಿಲ್ಲುತ್ತಿದ್ದನು. ಒಬ್ಬರಿಗೊಬ್ಬರು ಮುಷ್ಟಿಯಿಂದ ಬಲವಾಗಿ ಹೊಡೆದು ಹಣ್ಣು ಮಾಡುತ್ತಿದ್ದರು. ಹೀಗೆ ಅವರಿಬ್ಬರು ಎರಡು ಶೈಲಗಳಂತೆ ಘೋರವಾಗಿ ಕಾದುತ್ತಿರಲಾಗಿ ರಂಗದ ಸುತ್ತಲೂ ಕುಳಿತ ಜನರು ಆನಂದೋದ್ರೇಕದಿಂದ ಉತ್ಸಾಹ ಭರದಲ್ಲಿ ಧನ್ಯವಾದಗಳನ್ನು ತೆಗೆಯುತ್ತಿದ್ದರು. ಹರ್ಷೋದ್ಗಾರಗಳಿಂದ ಭಲೆ ಭಾಪು ಎಂದೆನ್ನುತ್ತ ಪ್ರೋತ್ಸಾಹಿಸುತ್ತಿದ್ದರು. ಅದನ್ನು ನೋಡಿ ಕಂಸನಿಗೆ ಸಂತಾಪವಾಗಿ ಮೈಯೆಲ್ಲ ಬೆವರುತ್ತ ಎಡಗೈಯನ್ನು ಎತ್ತಿ ಓಲಗದವರಿಗೆ ವಾದ್ಯಗಳನ್ನು ಬಾರಿಸಬೇಡಿರೆಂದು ಸನ್ನೆಮಾಡಿ ನಿಲ್ಲಿಸಿದನು.

ಆಗ ತಕ್ಷಣದಲ್ಲಿ ಆಕಾಶದಲ್ಲಿ ದೇವವಾದ್ಯಗಳು ಮಂದ್ರನಾದದೊಂದಿಗೆ ಮೊಳಗತೊಡಗಿದವು. ಆಕಾಶಮಾರ್ಗದಲ್ಲಿ ವಿಮಾನಾರೂಢರಾದ ದೇವಗಂಧರ್ವರೂ ಮುಗಿಲಮನೆಯಲ್ಲಿಯೇ ವಾಸಮಾಡಿರುವ ಸಪ್ತರ್ಷಿಗಳೂ ಶ್ರೀಕೃಷ್ಣನಿಗೆ ಜಯವಾಗಲಿ ಎಂದು ಆಶೆಯನ್ನು ಮಾಡಿದರು. ಹೀಗೆ ಚಾಣೂರನೊಂದಿಗೆ ಚಿರಕಾಲ ಪರ್ಯಂತ ವಿನೋದ ಮಾಡಿ ಇನ್ನು ಅವನನ್ನು ಸಂಹರಿಸಬೇಕೆಂದು ನಿಶ್ಚಯಿಸಿ ಎದ್ದನು. ಕೃಷ್ಣನ ಪಾದನ್ಯಾಸದ ವೇಗಕ್ಕೆ ಭೂಮಿ ಚಲಿಸಿ, ಸಭಾರಂಗ ಕಂಪಿಸಿ, ಕಂಸ ಕುಳಿತ ಮಂಚ ನಡುಗಿ, ಅವನ ತಲೆಯ ಮೇಲಿನ ಕಿರೀಟ ಅಲುಗಾಡಿ, ಅದರೊಳಗಿನ ಒಂದು ಉತ್ತಮವಾದ ರತ್ನವು ಕಳಚಿ ಕೆಳಗೆ ಬಿದ್ದಿತು.

ಆಗ ಕೃಷ್ಣನು ತನ್ನ ಎರಡೂ ತೋಳುಗಳಿಂದ ದೈತ್ಯಕಾಯನಾದ ಆ ಚಾಣೂರನನ್ನು ಬಗ್ಗಿಸಿ ನಡುನೆತ್ತಿಯ ಮೇಲೆ ಒಂದು ಮುಷ್ಟಿಯಿಂದ ಹೊಡೆದು ಎದೆಗೊಂದು ಏಟವನ್ನು

ಹಾಕಿದನು. ಆದರಿಂದ ಅವನ ಕಣ್ಣಿನಿಂದ ಕಣ್ಣೀರು ರಕ್ತ ಎರಡೂ ಹರಿದು, ಕಣ್ಣು ಗುಡ್ಡೆ ಹೊರಬಿದ್ದು, ಗೋಣು ಮುರಿದು, ಪ್ರಾಣಹೋಗಿ ಅದು ಹೆಗಲ ಮೇಲೆ ಜೋತಾಡಹತ್ತಿತು. ಅವನ ಅಕರಾಳವಾದ ದೇಹವು ರಂಗದ ತುಂಬ ಬಿದ್ದು ಕೊಂಡಿತು.

ಬಲದರ್ಪಿತನಾದ ಚಾಣೂರನು ಸತ್ತ ಬಳಿಕ ಬಲರಾಮನು ಮುಷ್ಟಿಕನನ್ನೂ ಕೃಷ್ಣನು ತೋಶಲ ಎಂಬ ದೈತ್ಯನನ್ನೂ ಕುಸ್ತಿಗೆ ಎಳೆದರು. ಅವರಾದರೂ ದರ್ಪಾಧ್ಮಾತರಾಗಿ ಸಿಂಹನಾದ ಮಾಡುತ್ತ ರಾಮಕೃಷ್ಣರನ್ನು ಎದುರಿಸಿದರು. ಆಗ ಕೃಷ್ಣನು ಗುಡ್ಡದ ಶಿಖರವನ್ನು ಎತ್ತುವಂತೆ ತೋಶಲನನ್ನು ಮೇಲೆ ಎತ್ತಿ ಮೂರುಸಲ ಗಿರಿಗಿರಿ ತಿರುಗಿಸಿ ನೆಲಕ್ಕೆ ಅಪ್ಪಳಿಸಿದನು. ಆದರಿಂದ ರಕ್ತವಮನವಾಗಿ ಆ ರಕ್ಕಸನು ಹತನಾದನು.

ಬಲರಾಮನಾದರೂ ಮುಷ್ಟಿಕನ ಜೊತೆಗೆ ಬಹಳ ಹೊತ್ತು ಯುದ್ಧಮಾಡಿ ಕೊನೆಗೆ ವಜ್ರಕಲ್ಪವಾದ ಮುಷ್ಟಿಯಿಂದ ಅವನ ತಲೆಗೆ ಹೊಡೆದನು. ಆದರಿಂದ ಅವನ ತಲೆಬುರುಡೆ ಒಡೆದು ಕಣ್ಣುಗುಡ್ಡೆಗಳು ಸಿಡಿದು ಸತ್ತುಬಿದ್ದನು.

ಚಾಣೂರ ಮುಷ್ಟಿಕ ತೋಶಲಕ ಮೊದಲಾದ ಜಗಜಟ್ಟಿಗಳನ್ನೆಲ್ಲ ಲೀಲೆಯಿಂದ ಸಂಹರಿಸಿ ಆ ಕೃಷ್ಣ ಸಂಕರ್ಷಣರು ಕ್ರೋಧದಿಂದ ಕಣ್ಣು ಕೆಂಪಗೆಮಾಡಿ ರಂಗ ಮಧ್ಯದಲ್ಲಿ ಸಿಂಹಶಾರ್ದೂಲಗಳಂತೆ ಗರ್ಜಿಸಿದರು. ನಂದಗೋಪ ಮೊದಲಾದ ಯಾದವರೂ ಉಳಿದೆಲ್ಲ ಪ್ರೇಕ್ಷಕರೂ ಕೃಷ್ಣನ ಆ ರುದ್ರರೂಪ ಮತ್ತು ಭೈರವನಾದಗಳನ್ನು ನೋಡಿ ಭಯ ಭ್ರಾಂತರಾಗಿ ನಡುಗುತ್ತ ಕುಳಿತಲ್ಲಿಯೇ ಕುಳಿತರು.

ದೇವಕಿಯ ಕಣ್ಣಿನಿಂದ ಆನಂದಬಾಷ್ಪಗಳು ಅವಿರತವಾಗಿ ಹರಿಯತೊಡಗಿದವು. ಅವಳ ಅಂತಃಕರಣ ಉಕ್ಕೇರಿ ವಾತ್ಸಲ್ಯರಸವು ಎದೆ ತೊರೆದುನಿಂತಿತು. ಎವೆಗೆ ಎವೆ ಬಡಿಯದೇ ತೆರೆದ ಕಣ್ಣುಗಳಿಂದಲೇ ಅವಳು ಕೃಷ್ಣನನ್ನು ನೋಡುತ್ತ ಕುಳಿತಳು. ವಸುದೇವ ನಿಗಂತೂ ಕಳೆದು ಹೋದ ಹರೆ ಮರಳಿಬಂದಂತಾಯಿತು. ಇತರ ಸ್ತ್ರೀಯರೂ ಆ ಮುದ್ದು ಕೃಷ್ಣನ ಮುಗ್ಧ ಮುಖಕಮಲವನ್ನು ಹಸಿದ ಕಂಗಳಿಂದ ಅನಿಮಿಷರಾಗಿ ನೋಡಹತ್ತಿದರು.

ಕೃಷ್ಣರಾಮರ ಈ ಉದ್ದಾಮ ಕೇಲಿಯನ್ನು ಕಂಡ ಕಂಸನಿಗೆ ಮಾತ್ರ ಮೈತುಂಬ ಬೆವರು, ಮುಖದಲ್ಲಿ ವಿಕಾರ, ಹುಬ್ಬುಗಳಲ್ಲಿ ಉರಿ, ತುಟಿಗಳಲ್ಲಿ ಅಂಟು, ಕಣ್ಣುಗಳಲ್ಲಿ ಕಿಡಿಗಳು, ಉಸುರಿನಲ್ಲಿ ಬೇಗೆ, ಮನಸ್ಸಿನಲ್ಲಿ ಉರಿ, ದೇಹದಲ್ಲಿ ಕಂಪ, ಹಣೆಯಲ್ಲಿ ನಿರಿಗೆಗಳೇ ಮೂಡಿದವು. ಅವನು ಅಲ್ಲಿಯೇ ನಿಂತ ತನ್ನ ಸೈನಿಕರಿಗೆ "ಈಗಿಂದೀಗಲೇ ದನ ಕಾಯುವ ಹುಡುಗರನ್ನು ಸಭಾರಂಗದಿಂದ ಹೊರಗೆ ಹಾಕಿರಿ. ಈ ಕಾಡು ಮನಜರನ್ನು ನೋಡಲಿಕ್ಕೂ ನನಗೆ ಅಸಹ್ಯವೆನಿಸುವದು. ನಂದಗೋಪನ ಕೈಕಾಲುಗಳಿಗೆ ಕಬ್ಬಿಣ ಬೇಡಿಗಳನ್ನು ಜಡಿಯಿರಿ. ನನ್ನ ಜನ್ಮ ದ್ವೇಷಿಯಾದ ವಸುದೇವನನ್ನೂ ಈಗಾಗಲೇ ಹಿಡಿದುಹಾಕಿರಿ. ಮತ್ತು ಕೃಷ್ಣನ ಅನುಚರರಾದ ಉಳಿದ ಗೋಪಾಲಕರ ಜನ, ದನ ಎಲ್ಲವನ್ನೂ ಅಪಹರಿಸಿರಿ," ಎಂದು ಆಜ್ಞಾಪಿಸಿದನು.

ತನ್ನ ತಂದೆಯಂತಿದ್ದ ನಂದಗೋಪನನ್ನು ನಿಂದಿಸಿದ್ದನ್ನು ಕೇಳಿ ಆ ನಂದಕಂದ ಗೋವಿಂದನಿಗೆ ಭಯಂಕರ ಸಿಟ್ಟು ಬಂದಿತು. ಅವನು ತಕ್ಷಣದಲ್ಲಿ ಸಿಂಹದಂತೆ ರಂಗಮಧ್ಯದಿಂದ ಹಾರಿ ಕಂಸನ ಮಂಚದ ಹತ್ತಿರ ಜಿಗಿದು ನಿಂತನು. ಜನರಿಗೆ ಕಣ್ಣು ಮುಚ್ಚಿ ಕಣ್ಣು ತೆರೆಯುವಷ್ಟರಲ್ಲಿ ರಂಗದಲ್ಲಿದ್ದ ಕೃಷ್ಣನು ಕಂಸನ ಬಳಿಗೆ ನಿಂತಿದ್ದೇ ಕಂಡಿತು. ಅದನ್ನು ನೋಡಿ ಕಂಸನಿಗೆ ಈ ಗೋವಿಂದನು ಮುಗಿಲಿನಿಂದಲೇ ಇಳಿದು ಬಂದಂತೆನಿಸಿತು.

## ಕಂಸ ವಿಧ್ವಂಸ

ರಂಗದಿಂದ ಹಾರಿಬಂದದ್ದೇ ಕೃಷ್ಣನು ತನ್ನ ನಿಡಿದೋಳಿನ ಹಿಡಿಚಾಚಿ ಕಂಸನ ಉದ್ದವಾದ ಕೂದಲುಗಳನ್ನು ಸಭೆಯಲ್ಲಿ ಹಿಡಿದು ಎಳೆದನು. ಅದರಿಂದ ಅವನ ತಲೆಯ ಮೇಲಿನ ರತ್ನ ಖಚಿತವಾದ ಸುವರ್ಣಮುಕುಟ ನೆಲದ ಮೇಲೆ ಉರುಳಿ ಬಿದ್ದಿತು.

ಕೇಶಪಾಶದಲ್ಲಿ ಕೃಷ್ಣನಿಂದ ಗಟ್ಟಿಯಾಗಿ ಹಿಡಿಯಲ್ಪಟ್ಟ ಕಂಸನ ಸರ್ವ ವ್ಯಾಪಾರಗಳು. ನಿಂತುಹೋದವು. ಅವನಿಗೆ ಅತ್ತಿತ್ತ ಸರಿದಾಡಲೂ ಕೂಡ ಬಾರದಂತಾಯಿತು. ಶ್ವಾಸಕೂಡ ತಡೆದಂತಾಗಿ ತೇಕುತ್ತಲಿದ್ದ ಅವನಿಗೆ ಕೃಷ್ಣನೆಡೆಗೆ ನೋಡಲಿಕ್ಕೂ ಕೂಡ ಆಗಲಿಲ್ಲ. ಅವನ ಎದೆಯ ಮೇಲಿನ ಹಾರವು ಹರಿದು ಬಿದ್ದಿತು. ತೋಳುಗಳೆರಡೂ ನಿತ್ರಾಣವಾಗಿ ಜೋತಾಡಹತ್ತಿದವು. ಕೃಷ್ಣನ ತೇಜಃಪ್ರಭಾವದಿಂದ ಧರ್ಷಿತನಾದ ಅವನು ಮೈಮೇಲಿನ ಅರಿವೆಯ ಪರಿವೆಯಿಲ್ಲದೆ ಗೋಣುಚೆಲ್ಲಿ ಮಂಚದಲ್ಲಿ ಹೊರಳಾಡಹತ್ತಿದನು.

ಆಗ ಕೃಷ್ಣನು ಅವನ ಕೂದಲ ಹಿಡಿದು ಆ ಪ್ರೇಕ್ಷಾಗಾರದ ಮಂಚದಿಂದ ಎಳೆದು ರಂಗಭೂಮಿಗೆ ಜಗ್ಗಿಕೊಂಡು ಬಂದನು. ಆ ದೈತ್ಯದೇಹವನ್ನುದಾಮೋದರನು ದರದರ ಎಳೆದುಕೊಂಡು ಹೋಗುವಾಗ ಆ ರಂಗಭೂಮಿಯ ಸುತ್ತಲೂ ಗೆರೆಕೊರೆದು ಮಂಡಲವನ್ನು ಹಾಕಿದಂತಾಗಿತ್ತು. ಅವನನ್ನು ರಂಗಭೂಮಿಗೆ ಎಳೆತಂದು ಅವನೊಡನೆ ತುಸು ಯುದ್ಧ ಕ್ರೀಡೆಯನ್ನು ಮಾಡಿ ಕೊನೆಗೆ ಅವನು ನಿತ್ರಾಣಕ್ಷೀಣನಾಗಿ ನಿಷ್ಪ್ರಾಣನಾದ ಬಳಿಕ ಅವನ ಕೈಬಿಟ್ಟ. ಬಾಣದಿಂದ ಯುದ್ಧ ಮಾಡಲಿಲ್ಲ. ಕೇವಲ ಕೈಯಿಂದ ಕೂದಲವನ್ನು ಹಿಡಿದು ಮಾತ್ರಕ್ಕೆ ಕಂಸನು ಕೃಷ್ಣನಿಂದ ಮರಣ ಹೊಂದಿದನು. ಅದುದರಿಂದ ಯುದ್ಧದಲ್ಲಿ ಶಸ್ತ್ರಾಸ್ತ್ರ ಹತರಾದವರಿಗೆ ದೊರೆಯುವ ವೀರ ಸ್ವರ್ಗವೂ ಕೂಡ ಅವಲ್ಲಿಯ ಪಾಪಿಜೀವಕ್ಕೆ ಸಿಕ್ಕದಂತಾಯಿತು. ಕಂಸನನ್ನು ಕೊಂದಬಳಿಕ ಆ ಪುಂಡರೀಕಾಕ್ಷನು ಆನಂದದಿಂದ ವಸುದೇವನ ಪಾದಗಳನ್ನು ಮುಟ್ಟಿ ಭಕ್ತಿಯಿಂದ ವಂದಿಸಿದನು. ಹಾಗೂ ತಾಯಿಯಾದ ದೇವಕೀ ದೇವಿಯ ಚರಣಗಳನ್ನಾದರೂ ಗಟ್ಟಿಯಾಗಿ ಹಿಡಿದು ಹಣೆ ಹಚ್ಚಿ ನಮಸ್ಕರಿಸಿದನು. ಹರ್ಷಾಶ್ರು ಗದ್ಗದಳಾದ ಆ ಮಹಾತಾಯಿಯ ಹೃದಯರಸವೇ ಹರಿದು ಕೃಷ್ಣನ ಶಿರಸ್ಸನ್ನು ತೋಯಿಸಿತ್ತು. ನೂರು ಜನ್ಮಗಳ ಆನಂದ ಅಂದು ಆ ತಾಯ್ಗರಳಿನಲ್ಲಿ ಮಡುಗಟ್ಟಿ ನಿಂತುಕೊಂಡಿತ್ತು.

ಆ ಬಳಿಕ ಕೃಷ್ಣನು ಉಳಿದ ಗೋಪಾಲಕರನ್ನೆಲ್ಲ ಯಥಾಯೋಗ್ಯವಾಗಿ ಅಭಿವಾದಿಸಿ ಕುಶಲ ಪ್ರಶ್ನೆಗಳನ್ನು ಮಾಡಿ ಮಾತನಾಡಿಸಿದನು. ಇತ್ತ ಬಲರಾಮನು ಕಂಸನ ತಮ್ಮನಾದ ಸುನಾಮ ಎನ್ನುವನನ್ನು ನಿಮಿಷಾರ್ಧದಲ್ಲಿ ಯಮಸದನಕ್ಕೆ ಅಟ್ಟಿದನು. ಕೊನೆಗೆ ಎಲ್ಲ ವೈರಿಗಳನ್ನು ಕೊಂದು ಕಂಸನನ್ನು ನಿಃಪಾತ ಮಾಡಿದ ಬಳಿಕ ಅವರ (ತೋರಿಕೆಯ) ಕೋಪವು ಶಾಂತವಾಯಿತು. ಹುಟ್ಟಿದ ಕ್ಷಣದಲ್ಲಿಯೇ ತಾಯಿ ತಂದೆಗಳನ್ನು ಬಿಟ್ಟು ಅಂದಿನವರೆಗೆ ಗೋಕುಲದಲ್ಲಿಯೇ ಇದ್ದು ಗೋಪಾಲಕ ಗೆಳೆಯರೊಡನೆ ತಾವು ಗವಳಿಗರೇ ಆಗಿ ಗೋಪವೇಷದಿಂದಲೇ ಬೆಳೆದ ಆ ರಾಮಕೃಷ್ಣರು ಅಂದು ಅತ್ಯಂತ ಆನಂದದಿಂದ ತಮ್ಮ ನಿಜವಾದ ತಂದೆಯ ಮನೆಗೆ ಮೊದಲು ಬಾರಿ ಹೋದರು.

ಪುತ್ರಶೋಕಸಂತಪ್ತನಾದ ಉಗ್ರಸೇನನು ವಿಷಣ್ಣನಾಗಿ ಗರ ಕುಡಿದವರಂತೆ ಬಿಸಿಯುಸಿರು ಬಿಡುತ್ತ ದುಃಖದಿಂದ ಕೃಷ್ಣನಹತ್ತಿರ ಬಂದನು. ಆ ಯಾದವರ ಸಭೆಯಲ್ಲಿ ಬಾಷ್ಪಗದ್ಗದವಾದ ರುದ್ಧಕಂಠದಿಂದ ದೀನನಾದ ಉಗ್ರಸೇನನು ಆ ಪುಂಡರೀಕಾಕ್ಷನನ್ನು ಕುರಿತು

"ಕೃಷ್ಣ! ನೀನು ಸಿಟ್ಟಿನಿಂದ ನನ್ನ ಮಗನನ್ನು ಯಮಪುರಕ್ಕೆ ಅಟ್ಟಿ ಕೀರ್ತಿವಂತನಾಗಿರುವಿ. ಯದುವಂಶವು ಮರಳಿ ಭೂಮಿಯಲ್ಲಿ ಸ್ಥಾಪಿತವಾಯಿತು. ಸ್ವಧರ್ಮ ರಕ್ಷಿತವಾಯಿತು. ರಾಜ ಮಹಾರಾಜರೆಲ್ಲರಿಗೂ ನಿನ್ನ ಶಕ್ತಿ ಸಾಮರ್ಥ್ಯಗಳು ಎಷ್ಟಿವೆಯೆನ್ನುವುದನ್ನು ತಿಳಿಸಿದಂತಾಯಿತು. ಇದರಿಂದ ನಿನ್ನ ವೈರಿಗಳಿಗೆಲ್ಲ ಮರಣಶಂಕೆ ಬಂದರೆ ನಿನ್ನ ಗೆಳೆಯರೂ ಬಾಂಧವರೂ ಅಭಿಮಾನದಿಂದ ತಲೆಯೆತ್ತಿ ತಿರುಗಾಡುವಂತಾಯಿತು.

ಆನೆ ಕುದುರೆ ಕಾಲಾಳು ರಥ ಮೊದಲಾದ ಚತುರಂಗ ಸೇನಾ ಸಹಿತವಾದ ಕಂಸನ ಧನ ಧಾನ್ಯ ಮತ್ತು ರತ್ನ ಹೆಣ್ಣು ಹೊನ್ನು ಇದಲ್ಲದೆ ಉಳಿದೆಲ್ಲ ನನ್ನ ಮಗನ ಸಿರಿಸೊತ್ತುಗಳೆಲ್ಲ ಇಂದಿನಿಂದ ನಿನ್ನ ಅಧೀನ. ನೀನೇ ಅವುಗಳನ್ನೆಲ್ಲ ಸ್ವೀಕರಿಸಿ ನಿನಗೆ ತೋಚಿದಂತೆ ಅದರ ವ್ಯವಸ್ಥೆಯನ್ನು ಮಾಡು. ಇಂದಿನಿಂದ ಯಾದವರಿಗೆಲ್ಲ ಕೃಷ್ಣ! ನೀನೇ ಗತಿ.

ಆದರೆ ಕೇಶವ! ದೀನರಾದ ನಾವೆಲ್ಲರೂ ನಿನ್ನಲ್ಲಿ ಕೇಳಿಕೊಳ್ಳುವುದೆಂದರೆ ನಿನ್ನ ಕೋಪದ ಕಿಡಿಯಿಂದ ದಗ್ಧನಾದ ಆ ಕಂಸನಿಗೆ ವಿಧಿಪೂರ್ವಕವಾಗಿ ಔರ್ಧ್ವದೇಹಿಕ ಕೃತ್ಯಗಳನ್ನು ಮಾಡಲು ನಮಗೆ ಅನುಮತಿಯನ್ನು ಕೊಡು. ಅದು ಮುಗಿದ ಬಳಿಕ ನಾನು ಹೆಂಡತಿ ಸೊಸೆಯರನ್ನು ಕರೆದುಕೊಂಡು ಅಡವಿಯನ್ನು ಸೇರಬೇಕೆಂದು ಮಾಡಿದ್ದೇನೆ. ಸತ್ತವರಿಗೆ ಸರಿಯಾಗಿ ವಿಧ್ಯುಕ್ತವಾದ ರೀತಿಯಿಂದ ಪ್ರೇತ ಸಂಸ್ಕಾರ ಮಾಡಿ ನೀರು ಬಿಟ್ಟರೆ ಬಂಧುಗಳ ಋಣ ಮುಟ್ಟಿದಂತಾಗುತ್ತದೆ. ಆದ್ದರಿಂದ ಕೃಷ್ಣ! ನನ್ನ ಮೇಲೆ ನಿನಗೆ ಸ್ನೇಹವಿದ್ದುದು ನಿಜವಾದರೆ ಪಾಪ ಪುರುಷನಾದ ನನ್ನ ಮಗನಿಗೆ ಸದ್ಗತಿಯಾಗುವಂತೆ ಪರತ್ರ ಶುಭಲೋಕಪ್ರಾಪ್ತಿಯಾಗುವಂತೆ ಕರುಣಿಸು" ಎಂದು ಬೇಡಿಕೊಂಡನು.

ಆ ಉಗ್ರಸೇನನ ಸೌಮ್ಯ ಮಾತುಗಳನ್ನು ಕೇಳಿ ದಾಮೋದರನಿಗೆ ಅಚ್ಚರಿಯಾಗಿ ಅವನನ್ನು ಸಂತೈಸುತ್ತ "ತಾತ! ನೀನು ಇದೀಗ ಆಡಿದ ಮಾತುಗಳು ಕಾಲೋಚಿತವಿದ್ದು ನಿನ್ನ ಕುಲಶೀಲಗಳಿಗೆ ಯೋಗ್ಯವಾಗಿವೆ. ನೀನು ಹೇಳಿದಂತೆ ಕಂಸನಿಗೆ ರಾಜೋಚಿತವಾದ ಪ್ರೇತಸಂಸ್ಕಾರಗಳು ನಿರಾಂತಕವಾಗಿ ನಡೆಯಲಿ.

ನಾನು ರಾಜ್ಯ ಭೋಗ ಅಧಿಕಾರಗಳ ಆಶೆಯಿಂದ ಕಂಸನನ್ನು ಕೊಲ್ಲಲಿಲ್ಲ. ಕೇವಲ ಲೋಕಕಲ್ಯಾಣಕ್ಕಾಗಿಯೂ ಧರ್ಮ ಸಂಸ್ಥಾಪನಾ ರೂಪವಾದ ಕೀರ್ತಿಯ ಕಾರ್ಯಕ್ಕಾಗಿಯೂ ಈ ಕುಲಕಲಂಕನಾದ ಕಂಸನನ್ನು ಸೋದರ ಸಹಿತವಾಗಿ ಸಂಹರಿಸಬೇಕಾಯಿತು. ಆದುದರಿಂದ ನನಗೇನು ಈ ರಾಜ್ಯವೂ ಬೇಡ. ಐಶ್ವರ್ಯವೂ ಬೇಡ. ಆದ್ದರಿಂದ ಹಿರಿಯರಾದ ತಾವು ನನ್ನದೊಂದು ವಿಜ್ಞಾಪನೆಯನ್ನು ನಡೆಸಿ ಕೊಡಬೇಕು.

ಯದುಕುಲ ಶ್ರೇಷ್ಠರಾದ ತಾವೇ ನಾಳೆ ಸಿಂಹಾಸನದಲ್ಲಿ ಕುಳಿತು ಅಭಿಷೇಕ ಮಾಡಿಸಿಗೊಳ್ಳಬೇಕು. ನಮಗೆಲ್ಲರಿಗೂ ಕುಲವೃದ್ಧರಾದ ತಾವು ನಮ್ಮ ಸ್ವರಾಜ್ಯಕ್ಕೆ ಅಧಿಪತಿಗಳಾಗಿ ಯದುಸಾರ್ವಭೌಮರಾಗಿ ಇರುವುದು ನಮಗೆ ಬೇಕಾಗಿದೆ. ಸರ್ವಸಮ್ಮತವಾಗಿದೆ. ಆದ್ದರಿಂದ ನಾನು ಕಂಸನನ್ನು ಕೊಂದ ಸಿಟ್ಟನ್ನು ನೀವು ನಿಜವಾಗಿಯೂ ಮನಸ್ಸಿನಲ್ಲಿ ಹಿಡಿಯದೆ ಇದ್ದರೆ ನನ್ನ ಮೇಲೆ ವಾಸ್ತವವಾಗಿ ನಿಮಗೆ ಪ್ರೀತಿ ಇದ್ದರೆ ನಾನಾಗಿ ಸಂತೋಷದಿಂದ ಕೈಯೆತ್ತಿ ಕೊಟ್ಟ ಈ ರಾಜ್ಯವನ್ನು ಪ್ರತಿ ಮಾತನಾಡದೆ ಸ್ವೀಕರಿಸಿರಿ."

ಕೃಷ್ಣನ ಈ ಕಳಕಳಿಯ ಮಾತುಗಳನ್ನು ಕೇಳಿ ಉಗ್ರಸೇನನಿಗೆ ಕಂಠ ತುಂಬಿ ಮಾತೇ ಹೊರಡಲಿಲ್ಲ. ಕೃತಜ್ಞತೆಯಿಂದ ತಲೆ ತಗ್ಗಿಸಿ ನಿಂತುಕೊಂಡ. ಆಗ ಉಗ್ರಸೇನನನ್ನು

ಗೋವಿಂದನು ಅತ್ಯಾದರದಿಂದ ಕರತಂದು ಸಿಂಹಾಸನದ ಮೇಲೆ ಕೂಡಿಸಿ ಎಲ್ಲ ಯಾದವರ ಸಮಕ್ಷವಾಗಿ ಅವನ ತಲೆಯ ಮೇಲೆ ಮಣಿ ಮುಕುಟವನ್ನಿಟ್ಟು ಪಟ್ಟಾಭಿಷೇಕ ಮಹೋತ್ಸವವನ್ನು ಜರುಗಿಸಿದನು.

ಆ ಮೇಲೆ ಉಗ್ರಸೇನ ಮಹಾರಾಜನು ಕೃಷ್ಣನ ಜೊತೆಗೆ ಕೂಡಿಯೇ ಕಂಸನ ಅಂತ್ಯ ಸಂಸ್ಕಾರ ಕ್ರಿಯೆಗಳನ್ನೆಲ್ಲ ಯಥಾಸಾಂಗವಾಗಿ ನೆರವೇರಿಸಿದನು. ಕೃಷ್ಣನ ಅಪ್ಪಣೆಯಂತೆ ಎಲ್ಲ ಯಾದವರೂ ಕೂಡಿ ಕಂಸನ ದೇಹವನ್ನು ಪಲ್ಲಕ್ಕಿಯಲ್ಲಿಟ್ಟು ಯಮುನೆಯ ದಂಡೆಗೆ ತಂದು ಅವನ ತಮ್ಮನೊಟ್ಟಿಗೆ ಅಗ್ನಿ ಸಂಸ್ಕಾರವನ್ನು ಶಾಸ್ತ್ರೋಕ್ತವಾಗಿ ನೆರವೇರಿಸಿದರು. ವೃಷ್ಣಿ ಅಂಧಕಾದಿ ಎಲ್ಲ ಯಾದವರೂ ನದಿಯಲ್ಲಿ ಸ್ನಾನ ಮಾಡಿ ನೀರು ಬಿಟ್ಟರು. ಹತ್ತು ಕೋಟಿ ಸುವರ್ಣ ನಾಣ್ಯಗಳನ್ನೂ ಆಕಳು ರತ್ನ ವಸ್ತ್ರ ಗ್ರಾಮ ಮುಂತಾದವುಗಳನ್ನೂ ಉಗ್ರಸೇನನಿಂದ ಬ್ರಾಹ್ಮಣರಿಗೆ ಕೃಷ್ಣನು ದಾನ ಕೊಡಿಸಿದನು. ಕಂಸನ ಔರ್ಧ್ವದೇಹಿಕ ಕೃತ್ಯಗಳನ್ನೆಲ್ಲ ಮುಗಿಸಿಗೊಂಡು ಯಾದವರೆಲ್ಲರೂ ಉಗ್ರಸೇನನನ್ನು ಮುಂದೆ ಮಾಡಿಕೊಂಡು ಮಧುರಾ ಪಟ್ಟಣವನ್ನು ಪ್ರವೇಶಿದರು.

ಬಲಶಾಲಿಯಾದ ಆ ದಾಮೋದರನು ಸಂಕರ್ಷಣನೊಂದಿಗೆ ಯಾದವರಿಂದ ತುಂಬಿದ ಆ ಮಥುರಾ ಪುರಿಯಲ್ಲಿ ಸುಖವಾಗಿ ವಾಸವಾಗಿದ್ದನು. ನವಯೌವ್ವನದಿಂದ ತುಂಬಿಕೊಂಡ ಅವನ ಅಂಗಾಂಗಗಳಲ್ಲಿ ರಾಜತೇಜ ಮಿಂಚಾಡತೊಡಗಿತ್ತು. ಅವನಿಂದ ಆ ಮಥುರಾ ಪಟ್ಟಣವೂ 'ರತ್ನಾಕರವಾಗಿ' ಶೋಭಿಸಿತ್ತು. ಮುಂದೆ ಒಂದುದಿನ ಪ್ರಾಕೃತರಂತೆ ಅವರಿಬ್ಬರೂ ಧನುರ್ವೇದದ ಅಧ್ಯಯನಕ್ಕೆಂದು ಕಾಶೀ ದೇಶದವರಾದರೂ ಅವಂತಿಯಲ್ಲಿರುವ ಸಾಂದೀಪನಿ ಎಂಬ ಗುರುಗಳ ಬಳಿಗೆ ಹೋದರು. ಅಲ್ಲಿ ತಮ್ಮ ಗೋತ್ರವನ್ನು ಅಂದಿನವರೆಗೆ ತಾವು ಕಲಿತ ವಿದ್ಯೆಯನ್ನೂ ಹೇಳಿ ಹೆಚ್ಚಿನ ವಿದ್ಯೆಯನ್ನು ಕಲಿಯಲಿಕ್ಕಾಗಿ ಅವರ ಶಿಷ್ಯತ್ವವನ್ನು ವಹಿಸಿದರು. ಮಧುರೆಯಲ್ಲಿ ರಾಜಮಾನ್ಯರಾಗಿ ರಾಜೈಶ್ವರ್ಯವನ್ನು ಭೋಗಿಸಿದರೂ ಇಲ್ಲಿಮಾತ್ರ ಗುರುಗಳ ಮನೆಯಲ್ಲಿ ತೀರಸಾಮಾನ್ಯ ಜನರಂತೆ ಇದ್ದು ಮಾನಾಭಿಮಾನಗಳನ್ನೆಲ್ಲ ಬಿಟ್ಟು ಗುರುಗಳ ಸೇವೆ ಶುಶ್ರೂಷೆಗಳನ್ನು ಭಕ್ತಿಯಿಂದ ಮಾಡುತ್ತಲಿದ್ದರು. ಅದರಿಂದ ಸುಪ್ರೀತರಾದ ಆ ಕಾಶೀಪಂಡಿತರು ನಿರಹಂಕಾರಿಗಳಾದ ಆ ರಾಮಕೃಷ್ಣರಿಗೆ ವಿಶ್ವಾಸ ಪೂರ್ವಕವಾಗಿ ವಿದ್ಯೆಯನ್ನು ಹೇಳಿಕೊಟ್ಟರು. ಒಳ್ಳೇ ಬುದ್ಧಿವಂತರಾದ ಅವರು ಏಕ ಪಾಠಿಗಳಾದುದರಿಂದ ಒಂದೇ ಸಲ ಹೇಳಿದ್ದನ್ನು ಕೂಡಲೇ ಗ್ರಹಣಮಾಡಿ ಬಿಡುತ್ತಲಿದ್ದರು. ಹೀಗಾಗಿ ಅರವತ್ತುನಾಲ್ಕು ದಿನಗಳಲ್ಲಿ ಹಗಲುರಾತ್ರಿ ಹೇಳಿಸಿಗೊಂಡು ಸಾಂಗೋಪಾಂಗವಾದ ವೇದವನ್ನೆಲ್ಲ ಅಧ್ಯಯನಮಾಡಿ ಬಿಟ್ಟರು.

ಆಗಲೆ ದೀಕ್ಷಾ, ಸಂಗ್ರಹ, ಸಿದ್ಧಿ, ಪ್ರಯೋಗ ಎಂದು ನಾಕುಬಗೆಯಾದ ಧನುರ್ವೇದ ವನ್ನೂ ಸರಹಸ್ಯವಾದ ಶಶ್ತ್ರಾಸ್ತ್ರ ವಿದ್ಯೆಯನ್ನೂ ಕೆಲವೇ ದಿನಗಳಲ್ಲಿ ಕಲಿತು ಬಿಟ್ಟರು. ಅವರ ಈ ಅತಿಮಾನುಷವಾದ ಮತಿ ವೈಭವವನ್ನು ನೋಡಿ ಗುರುಗಳಾದ ಸಾಂದೀಪನಿಗಳಿಗೆ ಚಂದ್ರಸೂರ್ಯರೇ ತಮ್ಮಲ್ಲಿ ಶಿಷ್ಯರಾಗಿ ಅಧ್ಯಯನಕ್ಕೆ ಬಂದಿದ್ದಾರೆ ಎನ್ನಿಸಿತು. ಆದರೆ ಕೂಡಲೇ ಅವರ ಭ್ರಮನಿರಸನವಾಯಿತು.

ಮುಂದೆ ಒಂದು ದಿನ ಮಹಾಪರ್ವಕಾಲ ಬಂದಿತು. ಅಂದು ಚಂದ್ರಸೂರ್ಯರಿಬ್ಬರೂ ಬಂದು ತಮ್ಮ ಶಿಷ್ಯನಾದ ಕೃಷ್ಣನನ್ನು ''ಸಾಕ್ಷಾತ್ ಮಹಾವಿಷ್ಣೋ ಮಹಾದೇವ'' ಎಂದು ನಾಮೋಚ್ಚಾರಣ ಪೂರ್ವಕವಾಗಿ ಪೂಜಿಸುತ್ತಿದ್ದರು. ಅದನ್ನು ನೋಡಿ ಬಳಿಕ ಗುರುಸಾಂದೀಪನಿಗಳಿಗೆ ತಮ್ಮಲ್ಲಿ ಅಧ್ಯಯನದ ನೆವದಿಂದ ಶಿಷ್ಯನಾಗಿ ಬಂದ ಕೃಷ್ಣನು ಯಾರೆಂಬುವದು ನಿಶ್ಚಿತವಾಗಿ ತಿಳಿದುಬಂದಿತು.

ಅಧ್ಯಯನವೆಲ್ಲ ಮುಗಿದಬಳಿಕ ರಾಮಕೃಷ್ಣರು ತಮ್ಮ ಊರಿಗೆ ಹೊರಟು ನಿಂತರು. ಆಗ ಆ ಕೃಷ್ಣನು ಗುರುಗಳಿಗೆ "ಸ್ವಾಮಿ, ಗುರುದಕ್ಷಿಣೆಯನ್ನು ಏನು ಕೊಡಬೇಕು" ಎಂದು ಕೇಳಿದರು. ಅಂದು ಆ ಪರ್ವಕಾಲದಲ್ಲಿ ಕೃಷ್ಣನ ಪ್ರಭಾವ; ಮಹಾ ಮಹಿಮೆಗಳನ್ನು ಪ್ರತ್ಯಕ್ಷ ಕಂಡುಕೊಂಡ ಸಾಂದೀಪನಿಗಳು ಆನಂದದಿಂದ ಹೇಳಿದರು. "ಕೃಷ್ಣ, ಹಿಂದಕ್ಕೊಮ್ಮೆ ನಾನು ತೀರ್ಥಯಾತ್ರೆಗೆಂದು ಪ್ರಭಾಸ ಪಟ್ಟಣಕ್ಕೆ ಹೋದಾಗ ಹೆಂಡತಿ ಮಕ್ಕಳು ಸಹಿತವಾಗಿ ಸಮುದ್ರಸ್ನಾನಕ್ಕೆ ಹೋಗಿದ್ದೆವು. ಆಗ ಅಕಸ್ಮಾತ್ತಾಗಿ ನನ್ನ ಮಗನನ್ನು ಒಂದು ಮೊಸಳೆ ಬಂದು ಹಿಡಿದುಕೊಂಡು ಹೋಗಿ ಬಿಟ್ಟಿತು. ಕೃಷ್ಣ ! ನನಗೆ ಇರುವವನೊಬ್ಬನೇ ಮಗ. ಅವನೂ ಕೂಡ ಮೃತನಾಗಿ ಬಿಟ್ಟಿದ್ದಾನೆ. ನೀನು ಅವನನ್ನು ತಂದುಕೊಟ್ಟರೆ ಅದು ನನಗೆ ನಿಜವಾದ ಗುರುದಕ್ಷಿಣೆಯಾಗಿ ಪರಮಾನಂದವಾಗುವುದು." ಎಂದು ಕೇಳಿಕೊಂಡರು.

ಆಗ ಕೃಷ್ಣನು ಬಲರಾಮನ ಕಡೆಗೆ ನೋಡಿದನು. ಅವನಾದರೂ ಆಗಬಹುದೆಂದು ಅಪ್ಪಣೆಯನ್ನಿತ್ತ ಕೂಡಲೇ ತಕ್ಷಣದಲ್ಲಿ ಆ ವಾಸುದೇವನು ಸಮುದ್ರ ನೀರಿನಲ್ಲಿ ಪ್ರವಾಸ ಮಾಡಿದನು. ಆಗ ಸಾಗರರಾಜನು ಕೃಷ್ಣ ಬಂದದ್ದನ್ನು ಕಂಡು ಭಕ್ತಿಯಿಂದ ಬಾಗಿ ನಮಸ್ಕರಿಸಿ ವಿನಯದಿಂದ ಎದುರಿಗೆ ಬಂದು ನಿಂತುಕೊಂಡನು. "ಸಾಂದೀಪನಿ ಮುನಿಗಳ ಮಗು ಎಲ್ಲಿ?" ಎಂದು ಕೃಷ್ಣನು ಸಮುದ್ರನಿಗೆ ಪ್ರಶ್ನೆ ಮಾಡಿದನು.

ಆಗ ನದೀನಾಥನು "ಆ ಸಾಂದೀಪನಿ ಪುತ್ರನನ್ನು ಪಂಚಜನನೆಂಬ ದೈತ್ಯನು ಮೊಸಳೆಯ ರೂಪವನ್ನು ಧರಿಸಿ ಬಂದು ನೀರಿನಲ್ಲಿ ಎಳೆದು ಹಿಡಿದುಕೊಂಡು ಹೋಗಿದ್ದಾನೆ" ಎಂದು ಹೇಳಿದನು.

ಆಗ ಆ ಪುರಷೋತ್ತಮನು ಆ ಪಂಚಜನ ದೈತ್ಯನನ್ನು ಹುಡುಕಿ ಇದ್ದಲ್ಲಿ ಎರಗಿ ಹೊಡೆದು ಹಾಕಿದನು. ಆದರಿಂದ ಗುರುಪುತ್ರನು ಎಲ್ಲಿಯೂ ದೊರಕಲಿಲ್ಲ. ಆದರೆ ಒಂದು ಉತ್ತಮವಾದ ಶಂಖವು ಮಾತ್ರ ದೊರಕಿತು. ಅದು ಪಂಚಜನನ ಹತ್ತಿರ ಇದ್ದುದರಿಂದ ಅದಕ್ಕೆ ಪಾಂಚಜನ್ಯ ಎಂದು ಜಗತ್ತಿನಲ್ಲಿ ಹೆಸರಾಯಿತು. ಅಲ್ಲಿ ಗುರುಪುತ್ರನು ಸಿಕ್ಕದಂತಾದ ಬಳಿಕ ಆ ಪುರುಷೋತ್ತಮನು ಯಮನ ಊರಾದ ಸಂಯಮನೀಪುರಕ್ಕೆ ಹೋದನು. ಅಲ್ಲಿ ಯಮಧರ್ಮ ರಾಜನು ಸಂಭ್ರಮದಿಂದ ಬಂದು ಶ್ರೀಕೃಷ್ಣನಿಗೆ ಸಾಷ್ಟಾಂಗ ವಂದಿಸಿದನು. ಆಗ ಕೃಷ್ಣನು ಅವನಿಗೆ "ನಮ್ಮ ಗುರುಗಳಾದ ಸಾಂದೀಪನಿಗಳ ಮಗನನ್ನು ಕೊಡು" ಎಂದು ಕೇಳಿದನು. ಸತ್ತವರನ್ನು ತಿರುಗಿಕೊಡುವುದು ಯಮಲೋಕದ ನಿಯಮಗಳಿಗೆ ವಿರುದ್ಧ ವಾದುದೆಂದು ತಿಳಿದು ಯಮನು ಕೊಡಲು ಒಪ್ಪಲಿಲ್ಲ. ಕೃಷ್ಣನು ಬಿಡಲಿಲ್ಲ ಇಬ್ಬರಲ್ಲಿಯೂ ಘನಘೋರವಾದ ಯುದ್ಧವಾದ ಬಳಿಕ ಯಮರಾಜನು ಸೋತನು. ಸೋತಬಳಿಕ ಅವನಿಗೆ ಬುದ್ಧಿಬಂದು ಕೃಷ್ಣನ ಕ್ಷಮೆ ಕೇಳಿಕೊಂಡು ಆ ಗುರುಪುತ್ರನನ್ನು ಅವನಿಗೆ ತಂದು ಒಪ್ಪಿಸಿದನು. ಮತ್ತು ಅದರ ಜೊತೆಗೆ ಅನರ್ಘ್ಯವಾದ ಅನೇಕ ಮುತ್ತು ರತ್ನಗಳನ್ನೂ ಕೂಡ ಭಗವಂತನಿಗೆ ಕಾಣಿಕೆಯಾಗಿ ತಂದು ಇತ್ತನು. ಅದನ್ನೆಲ್ಲ ನಿಮ್ಮ ದೂತರ ಕಡೆಯಿಂದಲೇ ಹೊರಿಸಿ ಕಳುಹಿಸೆಂದು ಕೃಷ್ಣನು ಹೇಳಿದನು. ಅದರಂತೆ ಯಮದೂತರು ಅವುಗಳನ್ನು ಹೊತ್ತು ಸಾಂದೀಪನಿಯ ಮುನಿಗಿತ್ತರು. ಯಮಧರ್ಮನನ್ನು ಗೆದ್ದು ಅಲ್ಲಿ ಇದ್ದ ಗುರುಪುತ್ರನನ್ನು ಕರೆದುಕೊಂಡು ಬಂದು ಗುರುಗಳಿಗೆ ಒಪ್ಪಿಸಿದನು. ಅದರ ಮೇಲೆ ದಕ್ಷಿಣೆಯೆಂದು ಯಮನು ಕೊಟ್ಟ ಅಮೂಲ್ಯ ರತ್ನದ ರಾಶಿಯನ್ನೆಲ್ಲ ಗುರುಗಳ ಮುಂದೆ ಸುರುವಿ ಸಮರ್ಪಿಸಿದನು. ಸತ್ತು ಎಷ್ಟೋ ದಿನಗಳಾಗಿ ಹೋಗಿದ್ದರೂ ಸಾಂದೀಪನಿ ಮುನಿಗಳ

ಮಗನು ಅಚಿಂತ್ಯಾದ್ಭುತ ಶಕ್ತಿಯುಳ್ಳ ಶ್ರೀಹರಿಯ ಅಘಟಿತ ಘಟನಾ ಸಾಮರ್ಥ್ಯದಿಂದ ದಿವ್ಯ ಶರೀರವನ್ನು ಹೊಂದಿ ಬಂದು ತನ್ನ ತಂದೆ ತಾಯಂದಿರಿಗೆ ವಂದಿಸಿದನು. ಅದನ್ನು ನೋಡಿ ಸಾಂದೀಪನಿ ದಂಪತಿಗಳಿಗೆ ಪರಮಾನಂದವಾಗಿ ಕೃಷ್ಣನು ಪರಮಾತ್ಮನೇ ಎಂದು ಗೊತ್ತಾಗಿ ಅವನಲ್ಲಿ ನಿರತಿಶಯವಾದ ಭಕ್ತಿ ಹುಟ್ಟಿತು.

ಸಕಲ ವಿದ್ಯಾ ಪರಿಣಿತರಾದ ರಾಮಕೃಷ್ಣರು ಗುರುಗಳನ್ನು ಸಂತೋಷಪಡಿಸಿ ಅವರ ಅನುಜ್ಞೆಯಿಂದ ಮಥುರಾಪಟ್ಟಣಕ್ಕೆ ಹಿಂದಿರುಗಿದರು. ಆಗ ಉಗ್ರಸೇನ ಮೊದಲಾದ ಎಲ್ಲ ಮಾಥುರೇಯರಾದ ನಾಗರಿಕರೂ ಮಂತ್ರಿ ಸೇನಾಪತಿ ಪುರೋಹಿತ ಪ್ರಜಾಪರಿಷದದ ಆಬಾಲ ವೃದ್ಧರೆಲ್ಲರೂ ಸಂಭ್ರಮದಿಂದ ಅವರಿಬ್ಬರನ್ನೂ ವಂದಿಸಿದರು.

ಹಾದಿ ಬೀದಿಗಳನ್ನೆಲ್ಲ ತಳಿರು ತೋರಣಗಳಿಂದ ಅಲಂಕರಿಸಿದ್ದರು. ಮನೆ ಮನೆಗೆ ಸುವಾಸಿನಿಯರು ಅವರಿಗೆ ಅರಳು ತೂರಿ ಆರತಿಯನ್ನು ಬೆಳಗಿ ಅವರ ಗುಣಗಾನ ಮಾಡಿದರು. ಮತ್ತು ರಾಜಮಾರ್ಗದಲ್ಲಿ ಮುದಿತರಾದ ಅನೇಕ ಗಾಯಕರು ಕೃಷ್ಣನ ಕಥೆಯನ್ನು ಸಂಗೀತ ಸ್ವರದಲ್ಲಿ ಹೇಳುತ್ತ ಹಾಡುತ್ತ ಹೊರಟಿದ್ದರು. ಆಗ ಅವರು ಹಾಡಿದ ಗೀತ ಕಾವ್ಯದ ಪ್ರಸಿದ್ಧ ಪಾದಪಲ್ಲವಿಯು-

**ಗೋವಿಂದ ರಾಮೌ ಸಂಪ್ರಾಪ್ತೌ ಭ್ರಾತರೌ ಲೋಕವಿಶ್ರುತೌ ।**
**ಸ್ವೇ ಪುರೇ ನಿರ್ಭಯಾಃ ಸರ್ವೇ ಕ್ರೀಡಧ್ವಂ ಸಹಬಾಂಧವೈಃ ॥**

ಎಂಬುದಾಗಿತ್ತು

(ಲೋಕ ಪ್ರಸಿದ್ಧರಾದ ಬಲರಾಮ ಕೃಷ್ಣರು ಈ ಊರು ಬಿಟ್ಟು ಹೋದವರು ಮತ್ತೆ ಇಲ್ಲಿಗೇ ಬಂದಿದ್ದಾರೆ. ಇನ್ನು ನಿಮಗೆ ಯಾವುದೇ ತರಹದ ಅಂಜಿಕೆ ಇಲ್ಲ. ನಿಮ್ಮ ನಿಮ್ಮ ಬಂಧು ಬಾಂಧವರ ಜೊತೆಗೆ ನಿಮ್ಮ ಊರಲ್ಲಿ ಸ್ವಚ್ಛಂದದಿಂದ ಇರಿ. ಆನಂದದಿಂದ ವಾಸಿಸಿರಿ.)

ಅಂದು ಆ ಮಥುರೆಯಲ್ಲಿ ದೀನನಾಗಲಿ ದರಿದ್ರನಾಗಲಿ ದುಃಖಿತನಾಗಲಿ ಒಬ್ಬನೂ ಇರಲಿಲ್ಲ. ಹಕ್ಕಿಪಕ್ಕಿಗಳೂ ಕೂಡ ಆನಂದದಿಂದ ಉಲಿಯುತ್ತಿದ್ದವು. ಹಸು ಶಿಶುಗಳು ಹೃಷ್ಟಪುಷ್ಟವಾಗಿ ನಲಿಯುತ್ತಿದ್ದವು. ನರನಾರಿಯರೆಲ್ಲರೂ ಉಲ್ಲಸಿತರಾಗಿದ್ದರು. ಗಾಳಿಯು ಹಿತವಾಗಿ ಬೀಸುತ್ತಿತ್ತು. ದಿಕ್ಕುಗಳು ಪ್ರಸನ್ನವಾಗಿದ್ದವು. ಒಟ್ಟಾರೆ ಕೃತಯುಗದ ಲಕ್ಷಣಗಳೆಲ್ಲ ಕೃಷ್ಣನ ಆಗಮನದಿಂದ ಅಂದು ಮಥುರೆಯಲ್ಲಿ ಪೂರ್ಣವಾಗಿ ಇದ್ದವು. ಸೂರ್ಯಚಂದ್ರರಂತೆ ವರ್ಚಸ್ವಿಗಳಾದ ಆ ಯದುನಂದನರಿಬ್ಬರೂ ಆನಂದದಿಂದ ವಸುದೇವನ ಮನೆಯಲ್ಲಿ ಪ್ರವೇಶಿಸಿ ತಮ್ಮ ಆಯುಧಗಳನ್ನು ತೆಗೆದಿಟ್ಟು ರೈವತಶೈಲದ ಸಮೀಪದಲ್ಲಿರುವ ಗಿರಿ-ಝರಿ, ತೊರೆ-ಕೆರೆ, ವನೋಪವನ, ಸುಂದರ ಕಂದರ, ಹಸಿರು-ಕುಸುರು, ಕುಂಜ-ನಿಕುಂಜ, ಕಾನನ ಕಾವಣಗಳಲ್ಲಿ ಅಲೆದುಲಿದು ನಲಿದರು.

## ಜರಾಸಂಧನ ಯುದ್ಧದ ಅಬ್ಬರ

ಮಗಧ ರಾಜನಾದ ಜರಾಸಂಧನಿಗೆ ಅಸ್ತಿ ಪ್ರಾಸ್ತಿ ಎಂಬ ಇಬ್ಬರು ಹೆಣ್ಣು ಮಕ್ಕಳಿದ್ದರು. ಅವರನ್ನು ಅವನು ಕಂಸನಿಗೆ ಕೊಟ್ಟು ಮದುವೆಮಾಡಿದ್ದನು. ಮದುವೆಯಾದ ಬಳಿಕ ಮಾವನಾದ ಮಗಧರಾಜನ ಬಲದಿಂದ ಕಂಸನು ತನ್ನ ತಂದೆಯಾದ ಉಗ್ರಸೇನ ಮಹಾರಾಜನನ್ನು ಸಿಂಹಾಸನದಿಂದ ತಳ್ಳಿ ಕಾರಾಗ್ರಹದಲ್ಲಿ ಬಂಧಿಸಿ ರಾಜ್ಯವನ್ನು ತಾನೇ

ಆಳಹತ್ತಿದ್ದನು. ಜ್ಞಾತಿವತ್ಸಲನಾದ ವಸುದೇವನು ಯಾವಾಗಲೂ ಉಗ್ರಸೇನನ ಪಕ್ಷಪಾತಿಯಾಗಿದ್ದನು. ಅದು ಕಂಸನಿಗೆ ಸಹನವಾಗದೇ ಅವನ ಮೇಲೆಯೂ ವಕ್ರಕಟಾಕ್ಷವಿಟ್ಟಿದ್ದನು.

ಮುಂದೆ ರಾಮಕೃಷ್ಣರು ಬಂದು ಕಂಸನನ್ನು ಕೊಂದ ಬಳಿಕ ಮತ್ತೆ ಉಗ್ರಸೇನನು ತನ್ನ ಭೋಜಕರು ವೃಷ್ಣಿಗಳೂ ಅಂಧಕರೂ ಮೊದಲಾದವರೊಂದಿಗೆ ಅಧಿಕಾರಕ್ಕೆ ಬಂದನು. ಆಗ ಕಂಸನ ಹೆಂಡಂದಿರಾದ ಆಸ್ತಿಪ್ರಾಸ್ತಿ ಇಬ್ಬರೂ ತಂದೆಯಾದ ಜರಾಸಂಧನ ಹತ್ತಿರ ಬಂದು ತಮ್ಮ ಗೋಳುಗಳನ್ನು ತೋಡಿಕೊಂಡು ರಾಮಕೃಷ್ಣರನ್ನು ಗೆದ್ದು ಯಾದವರನ್ನು ಸೋಲಿಸಿ ಮಥುರಾಪಟ್ಟಣವನ್ನು ವಶಪಡಿಸಿಕೊಳ್ಳಬೇಕೆಂದು ಒತ್ತಾಯ ಪಡಿಸಿದರು. ತನ್ನ ಕನ್ಯೆಯರ ಈ ದುರವಸ್ಥೆಯನ್ನು ಕಂಡು ಕನಲಿ ಕೆರಳಿ ಕೆಂಡವಾದ ಜರಾಸಂಧನು ಯುದ್ಧದ ತಯಾರಿಯನ್ನು ನಡೆಸಿದನು.

ಅವನು ತನ್ನ ಮಾಂಡಲಿಕರಿಗೂ ಮಿತ್ರರಿಗೂ ಆಪ್ತೇಷ್ಟರಿಗೂ ಸಹಾಯಕ್ಕಾಗಿ ಹೇಳಿ ಕಳಿಸಿದನು. ಮಹಾ ಪರಾಕ್ರಮಶಾಲಿಗಳಾದ ಅವರೆಲ್ಲರೂ ಅವನ ಕರೆಯನ್ನು ಮನ್ನಿಸಿ ತಮ್ಮ ತಮ್ಮ ಸೇನಾ ಸನ್ನಾಹದೊಂದಿಗೆ ಬಂದರು.

ಅವರಲ್ಲಿ ಕರೂಷ ದೇಶಾಧಿಪತಿಯಾದ ದಂತವಕ್ರ, ಚೇದಿರಾಜನಾದ ಶಿಶುಪಾಲ, ಕಲಿಂಗದರಸನಾದ ಪೌಂಡ್ರಕ, ಕಾಶೀ ರಾಜನಾದ ಸಾಂಕೃತಿ, ಭೀಷ್ಮಕಸುತನಾದ ರುಕ್ಮಿ, ಮೊದಲಾದವರು ಮುಖ್ಯರಾಗಿದ್ದರು. ಇದಲ್ಲದೆ ಬಲಿಷ್ಠರಾದ ವೇಣುದಾರಿ, ಶಂತರ್ವಾ, ಕ್ರಥ, ಅಂಶುಮಾನ್, ಅಂಗರಾಜ, ವಂಗರಾಜ, ಕಾಶಿರಾಜ, ದಶಾರ್ಣಾಧಿಪತಿ, ವಿದೇಹಾಧಿಪತಿ, ಮದ್ರರಾಜ, ತ್ರಿಗರ್ತೇಶ್ವರ, ಶಾಲ್ವಪತಿದರದ, ಭಗದತ್ತ, ಶೈಬ್ಯ, ಪಾಂಡ್ಯ, ನಗ್ನಜಿತ್, ಕಾಶೀನರೇಶ್ವರ, ಗೋನರ್ದ ಮತ್ತು ದೃತರಾಷ್ಟ್ರ ಪುತ್ರನಾದ ದುರ್ಯೋಧನಾದಿಗಳೂ ಇನ್ನೂ ಅನೇಕ ರಾಜರೂ ಕೃಷ್ಣನ ವಿರುದ್ಧವಾಗಿ ಜರಾಸಂಧನಿಗೆ ಸಹಾಯ ಮಾಡಬೇಕೆಂದು ಬಂದರು.

ಈ ಪ್ರಚಂಡವಾದ ಸೇನಾ ಸಾಗರದೊಂದಿಗೆ ಬಲಿಷ್ಠನಾದ ಜರಾಸಂಧನು ಶೂರ ರಾಜ್ಯದ ಗಡಿಯಲ್ಲಿ ಹೊಕ್ಕು ಮಥುರಾಪುರಿಗೆ ಬಲವಾದ ಮುತ್ತಿಗೆಯನ್ನು ಹಾಕಿದ. ಜರಾಸಂಧನು ಸಮಯ ಸಾಧಿಸಿ ತನ್ನ ಸೇನಾಪತಿಗಳಿಗೆ ಆಜ್ಞೆ ಮಾಡಿದ.

''ರಾಜರಾಜೇಶ್ವರರೇ! ನೀವಿನ್ನು ವಿಲಂಬಮಾಡದೇ ಮಥುರಾಪುರಿಯ ಮೇಲೆ ಏರಿ ಹೋಗಿರಿ. ಅಲ್ಲಲ್ಲಿ ಕಲ್ಲು ಒಗೆಯುವ ಯಂತ್ರಗಳನ್ನು ಇರಿಸಿರಿ. ಗುದ್ದಲಿ ಸಲಕಿಗಳಿಂದ ಆ ಪಟ್ಟಣವನ್ನೆಲ್ಲ ನೆಲಸಮಮಾಡಿರಿ. ಇಂದಿನಿಂದಲೇ ಮಥುರೆಗೆ ಲಗ್ಗೆ ಇಡಿರಿ. ನಾನು ಆ ರಾಮಕೃಷ್ಣರನ್ನು ಹದನವಾದ ಬಾಣಗಳಿಂದ ಕೊಂದು ಬರುವವರೆಗೆ ನೀವೆಲ್ಲರೂ ನಾನು ಹೇಳಿದ ಸ್ಥಳದಲ್ಲಿ ನಿಂತು ಯುದ್ಧಮಾಡುತ್ತಲೇ ಇರಿ.

ಮದ್ರರಾಜ, ಕಲಿಂಗಾಧಿಪತಿ, ಚೇಕಿತಾನ, ಬಾಲ್ಹೀಕ, ಕಾಶ್ಮೀರ ರಾಜನಾದ ಗೋನರ್ದ ಮೊದಲಾದ ರಾಜರು ಪಶ್ಚಿಮ ದಿಕ್ಕಿನಿಂದ ಮಥುರೆಯ ಮೇಲೆ ಏರಿ ಹೋಗಲಿ. ಪುರುಕುಲದ ವೇಣುದಾರಿ ವಿದರ್ಭಾಧಿಪತಿಯಾದ ಸೇವಕ. ಭೋಜೇಶ್ವರನಾದ ರುಕ್ಮಿ, ದಂತವಕ್ತ್ರ, ವಿಂದ, ಅನುವಿಂದ, ಭೂರಿಶ್ರವ, ವಿರಾಟ, ತ್ರಿಗರ್ತ, ಬಾಣ ಮೊದಲಾದ ದುರ್ಗ ಯುದ್ಧಕುಶಲರಾದ ರಾಜರು ಮಥುರೆಯ ಉತ್ತರಭಾಗದಲ್ಲಿ ನಿಂತು ದಾಳಿಯನ್ನು ಪ್ರಾರಂಭಿಸಲಿ. ಉಲೂಕ, ಕೇತವ, ಏಕಲವ್ಯ, ಬೃಹಕ್ಷತ್ರ, ಜಯದ್ರಥ, ಶಲ್ಯ, ಕೌರವ, ಸಾಂಕೃತಿ ಮೊದಲಾದವರು ಪೂರ್ವದ ನಿಟ್ಟಿನಿಂದ ಸೇನಾ ವ್ಯೂಹವನ್ನು ರಚಿಸಿ ವೈರಿಪುರಿಗೆ ಲಗ್ಗೆ ಇಡಲಿ. ರಾಜಾ ದರದ, ಚೇದಿರಾಜ

ಮತ್ತು ನಾನು ಮೂವರೂ ಕೂಡಿ ದಕ್ಷಿಣದಿಕ್ಕನ್ನು ನೋಡಿ ಕೊಳ್ಳುತ್ತೇವೆ. ಆದುದರಿಂದ ಇನ್ನು ಕ್ಷಣಮಾತ್ರವೂ ವಿಲಂಬಮಾಡದೇ ನಾಕೂ ನಿಟ್ಟಿನಿಂದ ಒಮ್ಮೆಲೆ ಮುತ್ತಿ ವಜ್ರಪಾತವಾದಂತೆ ವೈರಿಗಳಿಗೆ ಭೀತಿಯನ್ನು ಹುಟ್ಟಿಸುತ್ತ ಹೋರಾಡಿರಿ. ಗದೆಯುಳ್ಳವರು ಗದೆಗಳಿಂದಲೂ ಪರಿಘಗಳಿಂದಲೂ ಉಳಿದ ಆಯುಧವುಳ್ಳವರೂ ತಮ್ಮ ಕೈಯಲ್ಲಿಯ ಅಸ್ತ್ರಗಳಿಂದಲೂ ಇಂದೇ ಸಂಜೆಯಷ್ಟರಲ್ಲಿ ಈ ನಗರಿಯನ್ನು ನೆಲಸಮಮಾಡಿ ಬಿಡಬೇಕು, ಎಂದು ಹೇಳಿ ತನ್ನ ಚತುರಂಗ ಸೈನ್ಯವನ್ನು ತೆಗೆದುಕೊಂಡು ಕ್ರುದ್ಧರಾದ ರಾಜ ಪರಿವಾರದೊಂದಿಗೆ ಮಾಗಧೇಶ್ವರನು ಯುದ್ಧವನ್ನು ಪ್ರಾರಂಭಿಸಿದನು.

ಆಗ ಯಾದವರಾದರೂ ಯುದ್ಧ ಸಿದ್ಧತೆಯನ್ನು ಮಾಡಿಕೊಂಡು ಏರಿಬರುತ್ತಲಿರುವ ರಾಜ ಸಂಘದವರ ಸೇನಾಸಾಗರವನ್ನು ಸಮರ್ಥ ರೀತಿಯಿಂದ ಎದುರಿಸಿದರು. ಯಾದವ ಮಾಗಧರಲ್ಲಿ ಘನ ಘೋರವಾದ ಕದನವು ಭೀಕರವಾಗಿ ನಡೆಯಿತು. ಆಗ ಊರುಬಿಟ್ಟು ಹೊರಗೆಬಂದು ರಾಮಕೃಷ್ಣರು ಅಸಂಖ್ಯರಾದ ವೈರಿ ಸೇನೆಯೊಂದಿಗೆ ತಮ್ಮ ಅಲ್ಪ ಸಂಖ್ಯರಾದ ಸೈನಿಕರು ಕಲಿತನದಿಂದ ಕಾದಾಡುವುದನ್ನು ಕಂಡು ಕುಪಿತರಾಗಿ ರೊಚ್ಚಿಗೆದ್ದ ಮೊಸಳೆಯಂತೆ ವೈರಿಸೇನಾ ವ್ಯೂಹದಲ್ಲಿ ಸಾಗರಬಿದ್ದರು. ರಿಪುರಾಜರ ರುಂಡ ಮುಂಡಗಳಿಂದ ಚಂಡಾಡುತ್ತಲಿದ್ದ ಅವರಿಗೆ ತಮ್ಮ ಮೂಲರೂಪ ದಲ್ಲಿದ್ದ ಆಯುಧಗಳ ನೆನಪಾಯಿತು. ತಕ್ಷಣದಲ್ಲಿ ಆಕಾಶದಿಂದ ಒಂದು ಭಯಂಕರವಾದ ನೇಗಿಲ ಮತ್ತು ಒನಿಕೆಗಳು (ಹಲಮುಸಲ) ಇಳಿದು ಬಂದು ಬಲಾರಮನ ಕೈಯನ್ನು ಅಲಂಕರಿಸಿದವು. ಮತ್ತು ವಿಷ್ಣುವಿನ ಶಾಂರ್ಗಧನುಸ್ಸು ಮತ್ತು ಕೌಮೋದಕಿ ಎಂಬ ಗದೆ ಎರಡೂ ಬಂದು ಕೃಷ್ಣನ ಕರತಲವನ್ನು ಅಲಕಂರಿಸಿದವು. ಆಗ ಬಲರಾಮಕೃಷ್ಣ ಇಬ್ಬರೂ ವೈರಿಭಯಂಕರವಾದ ತಮ್ಮ ಆಯುಧಗಳನ್ನು ಪಿಡಿದು ವೈರಿ ಸಮೂಹವನ್ನು ಕಡಿದು ಕೊಚ್ಚಿಕೊಂದು ಬೀಳಿಸ ಹತ್ತಿದರು.

ಬಲರಾಮನು ತನ್ನ ನೇಗಿಲದ ಆಯುಧದಿಂದ ಗುಂಪು ಗುಂಪಾಗಿ ರಥಗಳನ್ನೂ, ಹಿಂಡು ಹಿಂಡಾಗಿ ಆನೆಗಳನ್ನೂ, ತಂಡ ತಂಡವಾಗಿ ಕುದುರೆಗಳನ್ನೂ ಕವರಿ ಎಳೆದುಕೊಂಡು ಮೇಲೆ ಒನಿಕೆಯ ಆಯುಧದಿಂದ ಥಳಿಸಿ ಬಿಡುತ್ತಿದ್ದನು. ಅದರಿಂದ ರಥಗಳೆಲ್ಲ ಪುಡಿ ಪುಡಿಯಾಗಿ ರಥಿಕರು ರಾಜರೂ ನುಚ್ಚುನೂರಾಗಿ ಹೋಗಹತ್ತಿದರು. ಒಂದು ಹೊಡತಕ್ಕೆ ಹಿಂಡುಗಟ್ಟಲೆ ಆನೆ ಕುದುರೆಗಳು ಸಾಯ ಹತ್ತಿದವು.

ಬಲರಾಮನ ಯುದ್ಧಮಾಡುವ ಈ ಹೊಸಗತ್ತನ್ನು ಕಂಡು ರಾಜರೆಲ್ಲ ತಲ್ಲಣಿಸಿ ತತ್ತರಿಸಿ ರಣರಂಗದಿಂದ ಓಡಹತ್ತಿದರು. ಆಗ ಜರಾಸಂಧನು ಸಿಟ್ಟಿನಿಂದ ಅವರಿಗೆ ''ಎಲ, ಕ್ಷತ್ರಜಾತಿಯವರೇ ! ಧಿಕ್ಕಾರವಿರಲಿ ನಿಮ್ಮ ಈ ಕಾತರ ವೃತ್ತಿಗೆ. ರಣಾಂಗಣದಲ್ಲಿ ಸೋತು ಓಡಿ ಹೋದವರಿಗೆ ಭ್ರೂಣಹತ್ಯೆಯನ್ನು ಮಾಡಿದ ಪಾಪಬರುವದೆಂದು ಶಾಸ್ತ್ರದಲ್ಲಿ ಹೇಳಿದೆ. ಥೂ ಧಿಕ್ಕಾರವಿರಲಿ ನಿಮ್ಮ ಕ್ಷಾತ್ರ ತೇಜಸ್ಸಿಗೆ. ನಿಮಗೆ ಯುದ್ಧಮಾಡುವ ಧೈರ್ಯವಿಲ್ಲದಿದ್ದರೆ ನಾನು ಯುದ್ಧಮಾಡುವದನ್ನು ನೋಡಿಯಾದರೂ ನೋಡಿರಿ. ಈಗಲೇ ಈ ಇಬ್ಬರೂ ದನಕಾಯುವವರನ್ನು ಯಮನ ಮನೆಗೆ ಸಾಗಿಸುವೆನು'' ಎಂದು ಆಯುಧಪಾಣಿಯಾಗಿ ಮುಂದೆ ಹೊರಟನು. ಆಗ ಅವನ ತರ್ಜನೆ ಗರ್ಜನೆಗಳಿಂದ ನಾಚಿ ರಾಜರೆಲ್ಲರೂ ಮತ್ತೆ ಮರಳಿ ಯಾದವರ ಮೇಲೆ ಒಮ್ಮೆಲೇ ಮುಗಿಬಿದ್ದರು. ಹೊಸಹುರುಪಿನಿಂದ ಬಾಣಖಡ್ಗ ಪರಶುಗಳನ್ನು ಬೀಸುತ್ತ ಭಲ್ಲೆಗಳನ್ನು ಎಸೆಯುತ್ತ ರಣರಂಗದಲ್ಲಿ ಧುಮುಕಿದರು.

ಇತ್ತ ಯಾದವರಾದರೂ ಗರುಡಕೇತನವಾದ ರಥವನ್ನು ಆರೋಹಣಮಾಡಿದ ಶ್ರೀಕೃಷ್ಣನ ನೇತೃತ್ವದಲ್ಲಿ ವಿಜಯದ ವಿಶ್ವಾಸದಿಂದ ಉತ್ಸಾಹಿತರಾಗಿ ಕಲಿತನದಿಂದ ಹೋರಾಡುತ್ತ ಮಹಾಯುದ್ಧವನ್ನು ಪ್ರಾರಂಭಿಸಿದರು. ಅವರಲ್ಲಿ ಶಿನಿ, ಅನಾಧೃಷ್ಟಿ, ಬಭ್ರು, ವಿಪ್ರಥು, ಮತ್ತು ಅಹುಕ ಮೊದಲಾದ ಯಾದವ ವೀರರು ಬಲರಾಮನನ್ನು ಮುಂದೆಮಾಡಿಕೊಂಡು ಸ್ವಯಂ ಜರಾಸಂಧನೇ ಚೇದಿರಾಜ ಶಲ್ಯ ಸಾಲ್ವರಿಂದ ಕೂಡಿಕೊಂಡು ದಾಳಿಮಾಡುತ್ತಲಿರುವ ದಕ್ಷಿಣದಿಕ್ಕಿಗೆ ಸಾಗಿ ಪ್ರತಿದಾಳಿಯನ್ನು ಪ್ರಾರಂಭಿಸಿದರು. ಅವರನ್ನು ಕಂಡು ಶತದ್ಯುಮ್ನ ವಿದೂರಥ ಮೊದಲಾದ ವೀರ ಸೇನಾಪತಿಗಳು ಸಾಕ್ಷಾತ್ ಶ್ರೀಕೃಷ್ಣನ ನೇತೃತ್ವದಲ್ಲಿ ರುಕ್ಮಿ ಭೀಷ್ಮಕ ಮದ್ರೇಶ್ವರ ಆಹುಕ ಮೊದಲಾದ ವೈರಿ ವೀರರಿಂದ ಮುನ್ನಡೆಯಿಸಲ್ಪಡುವ ಪೂರ್ವ ಹಾಗು ದಕ್ಷಿಣದಿಕ್ಕಿನ ದಾಳಿಗಾರರ ಮೇಲೆ ಏರಿಹೋದರು. ಸಾತ್ಯಕಿ, ಯುಯುಧಾನ, ಅಕ್ರೂರ, ಸತ್ರಾಜಿತ, ಪ್ರಸೇನ, ಮೊದಲಾದವರು ವೇಣುದಾರಿಪ್ರಭೃತಿ ಜರಾಸಂಧನ ಸೇನಾಪತಿಗಳ ದಂಡಿನ ಮೇಲೆ ವೇಗದಿಂದ ಬಿದ್ದು ರಿಪುಕುಲವನ್ನು ತುಂಡರಿಸಹತ್ತಿದರು.

ಎರಡೂ ಪಕ್ಷದ ವೀರರೂ ತಮ್ಮ ತಮ್ಮ ಅಮೋಘವಾದ ಭೀಕರ ಶಕ್ತಿ, ಪ್ರಾಸ, ಯಷ್ಟಿ ಬಾಣ, ಭಲ್ಲೆ, ಖಡ್ಗ ಮುಂತಾದ ವಜ್ರಸಮಾನವಾದ ಅಸಂಖ್ಯ ಆಯುಧಗಳನ್ನು ಬೀಸಿ ಬಿಟ್ಟು ಎಸೆದು ಹೊಸೆದು ಹೋರಾಡಿದರು. ರಾಜ ರಾಜರಿಗೂ ಮಂತ್ರಿ ಮಂತ್ರಿಗಳಿಗೂ ಮಾವುತ ಮಾವುತರಿಗೂ ಸಾದಿಸಾದಿಗಳಿಗೂ ಕಾಲಾಳು ಕಾಲಾಳುಗಳಿಗೂ ತುಮುಲ ಸಂಗರವು ನಡೆಯಿತು.

ಆದರಲ್ಲಿ ರುಕ್ಮಿಗೂ ವಾಸುದೇವನಿಗೂ, ಭೀಷ್ಮಕನಿಗೂ ಅಹುಕನಿಗೂ, ಕ್ರಥನಿಗೂ ವಸುದೇವನಿಗೂ, ಕೈಶಿಕನಿಗೂ ಬಭ್ರುವಿಗೂ, ಗದನಿಗೂ ಚೇದಿ ರಾಜನಿಗೂ ದಂತವಕ್ತ್ರನಿಗೂ ಶಂಕುವಿಗೂ ವೈಯ್ಯಕ್ತಿಕವಾಗಿ ನಿಕರದ ಹೋರಾಟಹತ್ತಿ ಯುದ್ಧ ಇನ್ನುಷ್ಟು ಭೀಕರವಾಯಿತು.

ಹೀಗೆಯೇ ಇಪ್ಪತ್ತೇಳು ದಿನ ಆ ಮಹಾಯುದ್ಧವು ನಡೆಯಿತು. ಎರಡೂ ಸೈನ್ಯದಲ್ಲಿಯೂ ರಕ್ತದ ಪ್ರವಾಹ ಹರಿದು ಸೈನಿಕರೆಲ್ಲ ರಕ್ತದ ಕೆಸರಿನಲ್ಲಿಯೇ ನಿಲ್ಲುವ ಪ್ರಸಂಗ ಬಂದಿತು. ಅನಾರುಂಡ ದೇಹಗಳು ಸುತ್ತೆಲ್ಲ ರಾಶಿರಾಶಿಯಾಗಿ ಬಿದ್ದವು. ಕತ್ತರಿಸಿ ಒಗೆದ ರುಂಡಗಳು ಚಂಡಿನಂತೆ ಕಾಲಲ್ಲಿ ಹೊರಳಾಡುತ್ತಲಿದ್ದವು.

ರುಕ್ಮಿಯು ಕೃಷ್ಣನ ಮೇಲೆ ಕೃಷ್ಣಸರ್ಪದಂತೆ ಕುಟಿಲವಾದ ಬೆಂಕಿಯ ಸಳಾಕೆಯಂತಿರುವ ಘೋರವಾದ ಬಾಣಗಳನ್ನು ಬಿಟ್ಟನು. ಆದರೆ ಕೃಷ್ಣನು ಅವನು ರುಕ್ಮಿಣಿಯ ಸೋದರನೆಂದು ತಿಳಿದು ತನ್ನ ಕೌಶಲ್ಯದಿಂದ ಅವುಗಳನ್ನೆಲ್ಲ ತಪ್ಪಿಸಿಗೊಂಡನು. ತನ್ನ ಕೈಯಲ್ಲಿ ಸಿಕ್ಕಿದರೂ ಅವನನ್ನು ಕರುಣೆಯಿಂದ ಬಿಟ್ಟುಬಿಟ್ಟನು.

ಆದರಂತೆ ಜರಾಸಂಧನಿಗೂ ಬಲರಾಮನಿಗೂ ಘನಘೋರವಾದ ಸಂಗ್ರಾಮವೆಸಗಿತು. ಇಬ್ಬರೂ ಎಲ್ಲ ವಿಧವಾದ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಿ ಪರಸ್ಪರ ಕೊಲ್ಲಲು ಹವಣಿಸಿದರು. ಆದರಿಂದ ಇಬ್ಬರ ಹತ್ತಿರವೂ ಇರುವ ಆಯುಧಗಳೆಲ್ಲ ತೀರಿಹೋದವು. ಆಗ ಅವರಿಬ್ಬರೂ ವೀರರು ಗದೆಗಳನ್ನು ಪಿಡಿದುಕೊಂಡು ಗಿರಿಶಿಖರಗಳಂತೆ ಗದಾಯುದ್ಧಕ್ಕಿಳಿದರು.

ಬಲರಾಮ ಜರಾಸಂಧ ಇಬ್ಬರೂ ಗದಾಯುದ್ಧದಲ್ಲಿ ಅಪ್ರತಿಮ ವೀರರು. ಗದಾವಿದ್ಯೆಯ ಪರಮಾಚಾರ್ಯರು ಎಂದು ಪ್ರಖ್ಯಾತರಾಗಿದ್ದರು. ಉನ್ಮತ್ತ ದಿಗ್ಗಜಗಳಂತೆ ಕಾದುವ ಅವರ ಪ್ರೇಕ್ಷಣೀಯವಾದ ಆ ಗದಾಯುದ್ಧವನ್ನು ಕಾಣಬೇಕೆಂದು ಕುತೂಹಲದಿಂದ ಗಗನಾಂಗಣದಲ್ಲಿ ಗಂಧರ್ವರು ದೇವಮುನಿಗಳು ನೆರೆದರು.

ಮದ ಕೆರಳಿದ ವನಕರಿಗಳು ತಮ್ಮ ಕೋರೆಗಳಿಂದ ಹೊಡೆದಾಡುವಂತೆ ಗದೆಯಿಂದ ಹಣಾಹಣಿ ಹೋರಾಡುವ ಅವರ ಗದೆಗಳು ಒಂದನ್ನೊಂದು ತಾಕಿ ಸಂಘಟ್ಟಿಸಿದಾಗ ವಜ್ರ ಸಂಘರ್ಷವಾದಂತೆ ಮಿಂಚಿನ ಗೊಂಚಲಗಳೇ ಚಮಕು ಹೊಡೆಯುತ್ತಿದ್ದವು. ಬಲರಾಮನು ತನ್ನ ಭೀಮಗದೆಯನ್ನು ಎತ್ತಿ ಜರಾಸಂಧನ ಕಾಲಿಗೆ ಅಪ್ಪಳಿಸಿದಾಗ ವಜ್ರದಿಂದ ಗಿರಿ ಬಿರಿಯುವಂತೆ ಸಪ್ಪಳವಾಯಿತು. ಅದರಂತೆ ಜರಾಸಂಧನು ಗದೆಯಿಂದ ರಾಮನನ್ನು ಹೊಡೆದಾಗ ವಿಂಧ್ಯಾಚಲದಂತೆ ಅವನಾದರೂ ಅಚಲನಾಗಿಯೇ ನಿಂತಿದ್ದನು. ಹೀಗೆ ಮಂಡಲಾಕಾರವಾಗಿ ಎಡದಿಂದ ಬಲಕ್ಕೂ ಬಲದಿಂದ ಎಡಕ್ಕೂ ತಿರುಗುತ್ತ ಅವರು ತಿರುತಿರುಗಿ ಕಾದಾಡಿದರು. ಬಹಳ ಆಯಾಸವಾದಾಗ ತುಸು ವಿಶ್ರಮಿಸಿ ಮತ್ತೆ ಯುದ್ಧಕ್ಕೆ ಬರುತ್ತಿದ್ದರು. ಹೀಗೆ ಸಮಾನವೀರ್ಯ ವಿಕ್ರಮಚಾತುರ್ಯವುಳ್ಳ ಅವರಿಬ್ಬರೂ ಸೋಲದೇ ಸರಿಯಾಗಿ ಬಹಳಹೊತ್ತು ಹೋರಾಡಿದರು. ಕೊನೆಗೆ ಜರಾಸಂಧನಿಗೆ ಗದಾಯುದ್ಧಲ್ಲಿ ಅಪ್ರತಿಮ ಪಾಂಡಿತ್ಯ ವಿಶೇಷ ಶಕ್ತಿ ಉಂಟೆಂದು ತಿಳಿದು ಬಲರಾಮನು ಗದೆಯನ್ನು ಬಿಟ್ಟು ತನ್ನ ಅಮೋಘ ಆಯುಧವಾದ ಮುಸಲಾಯುಧವನ್ನು ತೆಗೆದುಕೊಂಡನು. ಕೋಪಾಟೋಪದಿಂದ ಪರಿಸ್ಫುರಿಸುವ ರಾಮನು ಕಾಲಾಂತಕನಂತೆ ಕೈಯಲ್ಲಿ ನೇಗಿಲವನ್ನು ಎತ್ತಿಕೊಂಡು ನಿಂತದ್ದನ್ನು ನೋಡಿ ಒಮ್ಮೆಲೆ ಅಂತರಿಕ್ಷದಲ್ಲಿ ಅಶರೀರವಾಣಿ ಯಾಯಿತು.

''ಬಲರಾಮ! ನೀನು ಇವನನ್ನು ವಧಿಸತಕ್ಕದ್ದಲ್ಲ. ಇವನನ್ನು ಕೊಲ್ಲತಕ್ಕವನು ಬೇರೆಯಿರುವನು. ಅವರಾರೆನ್ನುವದು ನನಗೆ ಗೊತ್ತಿದೆ. ಆದುದರಿಂದ ನೀನು ಈಗ ವಿರಮಿಸು. ಜರಾಸಂಧನು ಬೇಗನೇ ಮರಣವನ್ನು ಹೊಂದಲಿರುವನು.''

ಆಕಾಶವಾಣಿಯನ್ನು ಕೇಳಿ ಜರಾಸಂಧನು ಖಿನ್ನನಾಗಿ ವಿಷಣ್ಣನಾಗಿ ಸಣ್ಣ ಮೋರೆ ಮಾಡಿಕೊಂಡು ನಿಂತನು. ಅವನ ದೈನ್ಯವನ್ನು ನೋಡಿ ಬಲರಾಮನಾದರೂ ಮುಂದೆ ಅವನ ಮೇಲೆ ಅಸ್ತ್ರವನ್ನು ಎತ್ತಲಿಲ್ಲ. ಪ್ರಹಾರವನ್ನು ಮಾಡಲಿಲ್ಲ. ಅವರಿಬ್ಬರೂ ಯುದ್ಧದಿಂದ ಉಪರತರಾಗಿ ರಣರಂಗದಿಂದ ಹಿಂದೆ ಸರಿದರು.

ಹೀಗೆ ಬಹುದಿನಗಳಿಂದ ನಡೆದ ಯುದ್ಧವು ಜರಾಸಂಧನು ಖಿನ್ನನಾಗಿ ಸೋತು ಹಿಂದಿರುಗಿದ ಬಳಿಕ ನಿಂತಂತಾಯಿತು. ಆಗ ಸೂರ್ಯನು ಅಸ್ತ ಹೊಂದಲು ಇತರ ರಾಜರಾದರೂ ಯುದ್ಧೋದ್ಯಮದಿಂದ ಉಪರತರಾಗಿ ತಮ್ಮ ಸೈನಿಕರನ್ನೆಲ್ಲ ರಣಾಂಗಣದಿಂದ ಹಿಂದಕ್ಕೆ ಕರೆಯಿಸಿಗೊಂಡರು. ಜರಾಸಂಧನು ತನ್ನ ರಾಜಧಾನಿಗೆ ಖಿನ್ನ ಮುಖಮುದ್ರೆಯಿಂದ ಮರಳಿದನು. ಉಳಿದ ರಾಜರು ತಮ್ಮ ರಾಷ್ಟ್ರಗಳಿಗೆ ತೆರಳಿದರು. ಕೇಶವನಿಂದ ರಕ್ಷಿತರಾದ ಯಾದವರು ವಿಜಯೋತ್ಸಾಹದಿಂದ ಜಯಘೋಷ ಮಾಡುತ್ತ ಉಬ್ಬಿನಿಂದ ಮಥರಾಪುರಿಯನ್ನು ಪ್ರವೇಶಿಸಿದರು.

ಆದರೂ ಯಾದವ ವೀರರಿಗೆ ಸಮಾಧಾನವಿರಲಿಲ್ಲ. ಮಗಧರಾಜನು ಮಹಾಬಲಿಷ್ಠನಿದ್ದುದರಿಂದ ಒಮ್ಮೆ ಪರಾಜಯ ಹೊಂದಿ ನಂತರ ಸುಮ್ಮನೆ ಕುಳಿತುಕೊಳ್ಳಲಾರನೆಂದು ಅವರಿಗೆ ಅನಿಸಿತ್ತು. ಎಣಿಕೆ ಸುಳ್ಳಾಗಲಿಲ್ಲ. ಮುಂದೆ ಕೆಲವೇ ದಿನಗಳಲ್ಲಿ ಮತ್ತೆ ಆ ಮಗಧರಾಜನು ಇಪ್ಪತ್ತು ಅಕ್ಷೌಹಿಣೀ ಸೈನ್ಯವನ್ನು ಕಟ್ಟಿಕೊಂಡು ಯಾದವರ ಮೇಲೆ ಸಾರಿ ಬಂದನು.

ಕೃಷ್ಣನ ಸಮರ್ಥವಾದ ನೇತೃತ್ವದಲ್ಲಿ ಅಕುತೋಭಯರಾದ ಯಾದವರು ಇಮ್ಮಡಿಸಿದ ಉತ್ಸಾಹದಿಂದ ಅವನ ಪ್ರಬಲವಾದ ಪ್ರಚಂಡದಾಳಿಯನ್ನು ಚೆನ್ನಾಗಿ ಪ್ರತಿಭಟಿಸಿದರು.

ಎರಡೂ ಸೈನಿಕರ ನಡುವೆ ಘನ ಘೋರವಾದ ಕದನ ನಡೆಯಿತು. ಹೆಣಗಳ ಬಣವೆ ಒಟ್ಟಿದರು. ರಕ್ತದ ಕಾಲುವೆ ಹರಿಸಿದರು. ರುಂಡಗಳ ಒಂಡು ಕಟ್ಟಿದರು. ಸಾವಿನೊಡನೆ ಸೆಣಸ್ಯಾಡಿದರು. ಕೊನೆಗೆ ಕೇಶವನ ಅನುಗ್ರಹದಿಂದ ಅಸಹ್ಯವೀರ್ಯರಾದ ಯದುಪುಂಗವರು ವೀರಾವೇಶದಿಂದ ಮೃತ್ಯುದೂತರಂತಿದ್ದ ಮಗಧೇಶ್ವರನ ಸೈನಿಕರ ಮೇಲೆ ಮುಗಿಬಿದ್ದು ಹೋರಾಡಿ ಹಿಮ್ಮೆಟ್ಟಿಸಿದರು.

ಹೀಗೆ ಛಲದಂಕನಾದ ಜರಾಸಂಧನು ಮತ್ತೆ ಮತ್ತೆ ಸೈನ್ಯವನ್ನು ಕೂಡಿಸಿಗೊಂಡು ಕೃಷ್ಣ ಗುಪ್ತರಾದ ಯಾದವರ ಮೇಲೆ ಸಾಗಿಬಂದನು. ಅಷ್ಟು ಸಲವೂ ವೀರವರೇಣ್ಯರಾದ ಯಾದವರು ತಮ್ಮ ಸಿಂಹಸತ್ವ ಪ್ರಚಂಡ ಶಕ್ತಿಗಳಿಂದ ಅವನನ್ನು ಸೋಲಿಸಿ ಓಡಿಸಿದರು.

ಹೀಗೆ ಹದಿನೇಳು ಸಲ ಮಾಗಧನು ಯದುವೀರರೊಂದಿಗೆ ಹೋರಾಡಿದನು. ಆದರೆ ಒಮ್ಮೆಯು ಅವನಿಗೆ ಯಾದವರನ್ನು ಗೆಲ್ಲುವುದಾಗಲಿಲ್ಲ. ಯಾದವರಿಗಾದರೂ ಹದಿನೆಂಟು ಸಲ ಪ್ರಯತ್ನಮಾಡಿದರೂ ಜರಾಸಂಧನನ್ನು ಕೊಲ್ಲುವುದಾಗಲಿಲ್ಲ. ಅಂತೂ ಅವರು ಸೋಲಲಿಲ್ಲ. ಇವನು ಸಾಯಲಿಲ್ಲ. ಬಿಡುವಿಲ್ಲದೆ ಇಬ್ಬರ ನಡುವೆ ಅವಿಶ್ರಾಂತ ಹೋರಾಟಗಳು ನಡದೇ ಇದ್ದವು. ಕೊನೆಗೊಮ್ಮೆ ಹದಿನೆಂಟನೆಯ ಸಲ ಮತ್ತೆ ಅವನು ಹೊಸರಕ್ತದ ರಥಿಕರಿಂದಲೂ, ಬಿಸಿರಕ್ತದ ಪದಾತಿಗಳಿಂದಲೂ, ತರುಣರಾದ ಸಾದಿಗಳಿಂದಲೂ, ಮದ್ದಾನೆಗಳ ದಂಡಿನಿಂದಲೂ ಒಡಗೂಡಿಕೊಂಡು ಜಿದ್ದಿಗೆ ಬಿದ್ದವರಂತೆ ಹೊಸ ಹುರುಪಿನಿಂದ ಜರಾಸಂಧನು ಯದುವೃಂದದ ಮೇಲೆ ಜೋರಿನಿಂದ ಯುದ್ಧಕ್ಕೆ ಬಂದನು.

ಯಾದವರು ಎಷ್ಟೇ ವೀರ ಶೂರರಾದರೂ ಸಿಂಹಸತ್ವರಾದರೂ ತೆರಪಿಲ್ಲದೆ ನಡೆದ ನಿರಂತರ ಹೋರಾಟಗಳಿಂದ ಹಣ್ಣಾಗಿದ್ದರು. ಸತ್ತು ಸುಣ್ಣಾಗಿದ್ದರು. ಸವೆದು ಸಣ್ಣಾಗಿದ್ದರು. ಹಿಂದಿನ ಹೋರಾಟದಿಂದ ಹೈರಾಣಾದ ಅವರು ತುಸು ಉಸುರಾಡಿಸಿ ಕೊಳ್ಳಬೇಕೆನ್ನುವಷ್ಟರಲ್ಲಿ ಜರಾಸಂಧನು ಮತ್ತೆ ಅಪರಂಪಾರವಾದ ಸೈನಿಕರ ತಂಡ ದಂಡುಗಳನ್ನು ತೆಗೆದುಕೊಂಡು ಮಥುರೆಯ ಹೆಬ್ಬಾಗಿಲಿಗೆ ಬಂದು ಸಂಗ್ರಾಮ ಕಾಳಿಯನ್ನು ಊದಿದನು. ಅವನ ಸಮರ ಭೇರಿಯನ್ನು ಕೇಳಿಯೇ ಯಾದವರೆಲ್ಲರೂ ಭಯಭ್ರಾಂತ ರಾದರು. ಮುಂದೇನು ಮಾಡಬೇಕೆನ್ನುವದು ತಿಳಿಯದೇ ಗುಪ್ತ ಸಭೆ ಕರೆದು ಮಂತ್ರಾಲೋಚನೆಯನ್ನು ನಡೆಯಿಸಿದರು.

ಆಗ ಆ ಸಭೆಯಲ್ಲಿ ನಯ ನೀತಿಗಳಲ್ಲಿ ನಿಷ್ಣಾತನೆಂದು ಖ್ಯಾತಿಪಡೆದ ವಿಕದ್ರು ಎಂಬ ಯಾದವನು ಮಾತನಾಡಿದನು. ''ಕೃಷ್ಣ! ನಾನು ತಿಳಿದ ಕೆಲವು ಸಲಹೆ ಸೂಚನೆಗಳನ್ನು ನಿಮ್ಮ ಮುಂದೆ ಇಡುವೆನು. ನಿಮಗೆ ಸರಿಕಂಡರೆ ಸ್ವೀಕರಿಸಬಹುದು. ಆದರೆ ಅದಕ್ಕೂ ಮೊದಲು ಈ ನಿಮ್ಮ ಕುಲವು ಹೇಗೆ ಪ್ರಾರಂಭವಾಯಿತೆನ್ನುವದನ್ನು ಈಗ ಪ್ರಾಸಂಗಿಕ ಸಂದರ್ಭವು ಬಂದಿದ್ದರಿಂದ ನಿರೂಪಿಸುತ್ತೇನೆ. ಕೇಳಿರಿ.

## 'ಯದುವಂಶದ ಮತ್ತೊಂದು ಮೂಲ'

ಹಿಂದೆ ಮನು ಮಹರ್ಷಿಯ ವಂಶದಲ್ಲಿ ಹುಟ್ಟಿದ ಇಕ್ಷ್ವಾಕುಮಹಾರಾಜನಿಗೆ ಇಂದ್ರನಂತೆ ವರ್ಚಸ್ವಿಯಾದ ಹರ್ಯಶ್ವನೆಂಬ ಓರ್ವ ಮಗನಿದ್ದನು. ಅವನಿಗೆ ಇಂದ್ರಾಣಿಯಂತೆ ಸುಂದರಿಯಾದ ಮಧುವತಿ ಎಂಬ ಹೆಸರಿನ ಒಬ್ಬ ಹೆಂಡತಿಯಿದ್ದಳು. ಅವಳು ಮಧು ಎಂಬ

ಹೆಸರಿನ ದಾನವರಾಜನ ಮಗಳಾಗಿದ್ದರೂ ಅವಳ ರೂಪವು ಅಪರೂಪ ಗುಣ ಅದಕ್ಕೆ ಅನುಗುಣವಾಗಿದ್ದಿತು. ಅವಳು ಗಂಧರ್ವಲೋಕದಲ್ಲಿಯೂ ದುರ್ಮಿಳವಾದ ತನ್ನ ಅನಿಂದ್ಯಸೌಂದರ್ಯ, ನವತಾರುಣ್ಯ, ಲಲಿತ ಲಾವಣ್ಯ ಮತ್ತು ಸೌಗುಣ್ಯ, ಸೌಜನ್ಯ, ಸೌಶೀಲ್ಯಗಳಿಂದ ದೈತ್ಯ ಪುತ್ರಿಯಾದರೂ ಇಕ್ಷ್ವಾಕುಕುವರನಾದ ಹರ್ಯಶ್ವನ ಮನವನ್ನು ಸೆರೆಹಿಡಿದು ಅವನನ್ನೆ ಮದುವೆಯಾಗಿದ್ದಳು. ಮುಗಿಲು ಮಂಟಪದಲ್ಲಿ ಮಿನುಗುವ ರೋಹಿಣೀನಕ್ಷತ್ರದಂತೆ ಕಾಂತಿ ಕಮನೀಯಳೂ ಶೀಲಸ್ಪೃಹಣೀಯಳೂ ಆದ ಆ ಮಧುಮತಿ ಯೊಂದಿಗೆ ರಸಿಕ ತರುಣನಾದ ಹರ್ಯಶ್ವನು ತನ್ನ ಹರೆಯದ ಹೊಂಗನಸುಗಳಿಗೆಲ್ಲ ರಾಜ್ಯಸಿರಿಯ ರಾಗಾನುರಾಗ ರಸಾನುಭೋಗಗಳಿಂದ ರಂಗು ತುಂಬುತ್ತ ಲಿದ್ದನು.

ಹೀಗೆ ಆ ನವದಂಪತಿಗಳು ಸಂಸಾರಸಾಗರದ ಸುಖದ್ವೀಪಗಳಗುಂಟ ತಮ್ಮ ಸ್ವಪ್ನನೌಕೆಯನ್ನು ತೇಲಿಸಿಬಿಟ್ಟು ನಕ್ಷತ್ರಗಾನವನ್ನು ಮಾಡುತ್ತ ನಡೆದಿರುವಾಗ ಒಮ್ಮೆಲೆ ಅವರ ಜೀವನ ಹೋಡಿಯು ಗಂಡಾಂತರದ ಬಂಡೆಗೆ ಬಡಿಯಿತು. ಅವರ ಕನಸಿನ ಕನ್ನಡಿ ಒಡೆಯಿತು. ಹರ್ಯಶ್ವನ ಹಿರಿಯಣ್ಣನು ದಾಯಾದದ್ವೇಷದಿಂದ ಸುಸ್ವಾಭಾವಿ ಮಹಾಪ್ರಭಾವಿಯಾದ ಆ ಹರ್ಯಶ್ವನನ್ನು ಮನೆ ಬಿಟ್ಟು ಹೊರಗೆ ಹಾಕಿ ರಾಜ್ಯದಿಂದಲೂ ಹೊರಗಟ್ಟಿದನು. ಆಗ ಹರ್ಯಶ್ವನು ತನ್ನ ಪ್ರೀತಿಯ ಹೆಂಡತಿ ಹಾಗೂ ಪ್ರಿಯವಾದ ಪರಿಮಿತ ಪರಿವಾರದೊಂದಿಗೆ ದೇಶ ಕೋಶ ಮನೆಮಾರು ರಾಜ್ಯ ಐಸಿರಿಗಳನ್ನೆಲ್ಲ ಬಿಟ್ಟು ಸುಂದರವಾದ ಹಾಗೂ ಸುರಕ್ಷಿತವಾದ ಅರಣ್ಯಕ್ಕೆ ಬಂದು ಅಲ್ಲಿಯೇ ಮನೆಮಾಡಿಕೊಂಡು ಇರಹತ್ತಿದನು. ದೇವರಿಟ್ಟಂತೆ ತುಷ್ಟರಾಗಿ ಇರುವುದು ಮಾನವರ ಕರ್ತವ್ಯವೆಂದು ತಿಳಿದ ಅವನು ಆ ವನಾಂತಕಾಂತಾರದಲ್ಲಿಯೂ ಶಾಂತ ಮನಸ್ಸಿನಿಂದ ತನ್ನ ಪತಿವ್ರತೆಯೂ ಪತಿಪ್ರಾಣಳೂ ಆದ ಕಾಂತೆ ಮಧುಮತಿಯೊಂದಿಗೆ ಅತ್ಯಂತ ಆನಂದದಿಂದ ಇದ್ದನು.

ಆದರೆ ರಾಜಕುಮಾರನಾಗಿ, ಅರಮನೆಯ ಅರಸನ ಅಂಗೈ ಅರಿಗಿಣಿಯಾಗಿ, ಪ್ರಜೆಗಳ ಹೃದಯದ ಸಿರಿಮಣಿಯಾಗಿ ಬೆಳೆದ ತನ್ನ ಪತಿಯು ಕಾಡುಬೇಡರಂತೆ ಅಡವೀಪಾಲಾಗಿ ವನವಾಸ ಅನುಭವಿಸುವದನ್ನು ನೋಡಿ ಅವನ ಗುಣವತಿ ಭಾರ್ಯೆಯಾದ ಮಧುಮತಿಗೆ ಮಾತ್ರ ಬಹಳ ದುಃಖವಾಯಿತು. ಆಗ ಅವಳ ಒಂದು ದಿನ ತನ್ನ ಪತಿಗೆ ವಿನಯದಿಂದ "ನಾಥ! ರಾಜಕುಮಾರರಾದ ತಾವು ವನೇಚರರಂತೆ ಹೀಗೆ ಅರಣ್ಯದಲ್ಲಿರುವುದನ್ನು ನೋಡಿ ನನಗೆ ಕೆಡುಕೆನಿಸಿದೆ. ಸ್ವಾರ್ಥಿಗಳಾದ ನಿಮ್ಮ ಅಣ್ಣಂದಿರು ನಿಮ್ಮನ್ನು ಹೊರಗೆ ಹಾಕಿದರೆ ಹಾಕಲಿ. ಆದರೆ ತಾವು ನಮ್ಮ ತವರು ಮನೆಯಾದ ಮಧುರಾಜನ ಮನೆಗೆ ಬಂದರೆ ಅವರು ಆನಂದದಿಂದ ನಿಮ್ಮನ್ನು ಸ್ವಾಗತಿಸಿ ಸತ್ಕಾರ ಮಾಡುವರು. ನಿಮ್ಮ ತಂದೆಯ ರಾಜ್ಯದ ಆಸೆಯನ್ನು ಬಿಟ್ಟು ಬಿಡಿ. ನಮ್ಮ ತಾಯಿಯ ಮನೆಗೆ ಹೋಗೋಣ ಬನ್ನಿರಿ. ನಮ್ಮ ತಂದೆಗೆ ನೀವು ಬಹಳೇ ಬೇಕಾದವರಿದ್ದು ನಮ್ಮ ತಾಯಿಗಂತೂ ನೀವೆಂದರೆ ಬಹಿಶ್ಚರ ಪ್ರಾಣ. ನನ್ನ ಸೋದರನಾದ ಲವಣಾಸುರನು ನನಗಾಗಿ ಜೀವಕೊಡಲಿಕ್ಕೂ ಹಿಂದೆ ಮುಂದೆ ನೋಡಲಾರ. ನಿಮ್ಮನ್ನು ಕಂಡರಂತೂ ಅವನಿಗೆ ಇನ್ನೆಲ್ಲಿಯೂ ಇಲ್ಲದ ಹಿಗ್ಗು, ಇಂಥ ಸ್ನೇಹಶೀತಲರಾದ ಬಂಧು ಮಿತ್ರರಿರುವಲ್ಲಿ ನಾವು ಹೋಗುವ. ಅಲ್ಲಿ ದೇವೇಂದ್ರನ ನಂದನವನದಂತೆ ನಾನಾವೃಕ್ಷ ವೃಂದದಿಂದ ಸುಂದರವಾದ ಕುಸುಮ ಗಂಧದಿಂದ ಬಂಧುರವಾದ, ಮದುವನ ಎಂಬ ರಮಣೀಯವಾದ ಉಪವನ ವುಂಟು. ಅಲ್ಲಿ ಹೋಗಿ ನಂದನದಲ್ಲಿ ದೇವದಂಪತಿಗಳು ವಿಹರಿಸುವಂತೆ ಯಾವುದೇ ಚಿಂತೆಯಿಲ್ಲದೆ ನಾವಿಬ್ಬರೂ ಆನಂದದಿಂದ ವಿಹಾರಮಾಡುವ. ಸ್ವಚ್ಛಂದದಿಂದ ವಿನೋದಗೈಯುವ.

ಚಕ್ಕಂದದಿಂದ ಜೀವನ ನಡೆಸುವ. ಮದೋನ್ಮತ್ತರಾದ ಮತ್ತು ನಮ್ಮನ್ನು ದ್ವೇಷಿಸುವ ಆ ನಿಮ್ಮ ದುರಭಿಮಾನಿಯಾದ ಅಣ್ಣನನ್ನೂ ಆ ಹಂಗಿನ ಅರಮನೆ, ದೊರಕದ ಸಿರಿಮನೆಗಳನ್ನೂ ಮರೆತುಬಿಡಿರಿ. ಸಾಕಿನ್ನು ಸೂತದೂತರಂತೆ ಪರಾಧೀನವಾದ ಈ ಬಾಳು, ಭಯಭ್ರಾಂತಿಗೀಡಾದ ಈ ಬದುಕಿನಗೋಳು, ಇಬ್ಬರೂ ಕೂಡಿ ನಮ್ಮ ತವರಿಗೆ ಹೋಗೋಣ ಬನ್ನಿರಿ'' ಎಂದು ವಿಜ್ಞಾಪನೆಯನ್ನು ಮಾಡಿಕೊಂಡಳು.

ಸೋದರ ಪ್ರೇಮಿಯಾದ ಹರ್ಯಶ್ವನಿಗೆ ಬೇಕಾದಷ್ಟು ಶಕ್ತಿಯಿದ್ದರೂ ಅಣ್ಣನ ಮೇಲೆ ಏರಿಹೋಗಿ ಅವನನ್ನು ಕೊಲ್ಲುವ ಇಚ್ಛೆ ಇದಿಲ್ಲ. ವನದಲ್ಲಿ ಕಾಡುಕಿರಾತದ್ದಿಂತೆ ಕೀಳ ಬಾಳನ್ನು ನಡೆಸುವ ಮನಸ್ಸೂ ಇದ್ದಿದ್ದಿಲ್ಲ. ಇವೆರಡರಿಂದ ಪಾರಾಗಬಹುದಾದ ಮಧ್ಯಮ ಮಾರ್ಗವನ್ನು, ಅದೂ ಸುಖದ ಹಾಗೂ ನಿಶ್ಚಿಂತೆಯ ಮಾರ್ಗವನ್ನು ತೋರಿಸಿದ ಮಧುಮತಿಯ ಮಾತುಗಳು ಅವನಿಗೆ ತಕ್ಷಣ ಹಿಡಿಸಿದವು. ಇದರಿಂದ ಕಾಮುಕ ಸ್ವಭಾವದವನಾದ ಅವನಿಗೆ ಅಣ್ಣಂದಿರ ವಿರೋಧ ಕಟ್ಟಿಕೊಳ್ಳದೇ ಮಧುಮತಿಯೊಡನೆ ಮಧುಚಂದ್ರ ವಿಹಾರವನ್ನು ನಿರಂತರವೂ ಕೈಕೊಂಡು ಅವಳ ಪ್ರಣಯಾಮೃತದ ಸವಿಯನ್ನುಉಣ್ಣಲು ಉತ್ತಮ ಅವಕಾಶ ದೊರೆತಂತಾಗಿತ್ತು. ಅವನು ಅದರಂತೆ ತನ್ನ ರತಿಯಾದ ಮಧುಮತಿಯೊಡನೆ ಮಾವನಾದ ಮಧು ದಾನವನ ಮನೆಗೆ ಬಂದನು. ಅಳಿಯನನ್ನು ಕಂಡ ಆ ದಾನವೇಂದ್ರನಿಗೆ ಅತ್ಯಂತ ಹರ್ಷವಾಗಿ ಆದರದಿಂದ ಸ್ವಾಗತವಿತು. ಪ್ರೀತಿಯಿಂದ ಬರಮಾಡಿಕೊಂಡನು. ''ತನಗೂ ತನ್ನ ಹೆಂಡತಿಗೂ ಹೊಟ್ಟೆಗೆ ಹಾಕಿ ಸುಖವಾಗಿ ಇಟ್ಟುಕೊಂಡರೆ ಸಾಕು'' ಎಂದುಕೊಂಡು ಬಂದ ಹರ್ಯಶ್ವನಿಗೆ ಆ ಮಾವನಮನೆಯಲ್ಲಿ ಇನ್ನೂ ಒಂದು ಆಶ್ಚರ್ಯ ಕಾದಿತ್ತು. ಪುತ್ರೀಪಕ್ಷಪಾತಿಯಾದ ಆ ದಾನವೇಶ್ವರನು ತನ್ನ ಅಳಿಯನು ರಾಜ್ಯ ಭ್ರಷ್ಟನಾದುದನ್ನು ಕಂಡು ಅವನಿಗೆ ತನ್ನ ರಾಜ್ಯವನ್ನೇ ಒಪ್ಪಿಸಿಬಿಟ್ಟನು.

''ವತ್ಸ ಹರ್ಯಶ್ವ! ನಿನ್ನನ್ನು ಕಂಡು ನನಗೆ ಬಹಳೇ ಸಂತೋಷವಾಯಿತು. ಈ ಮಧುವನ ಒಂದನ್ನು ಬಿಟ್ಟು ನನ್ನ ಸಮಗ್ರ ಸಾಮ್ರಾಜ್ಯವನ್ನೇ ನಿನಗೆ ಒಪ್ಪಿಸಿದ್ದೇನೆ. ನೀನೇ ರಾಜನಾಗು. ಸಮಗ್ರ ಸಾಮ್ರಾಜ್ಯವನ್ನೇ ನಿನಗೆ ಕೊಟ್ಟಿದ್ದೇನೆ. ನೀನೇ ಮಹಾರಾಜನಾಗಿ ಸಮುದ್ರ ಸೀಮೆಯುಳ್ಳ ಸಮೃದ್ಧಗೋಧನವುಳ್ಳ ಈ ವಿಶಾಲ ರಾಷ್ಟ್ರವನ್ನು ಆಳು. ನನ್ನ ಮಗನಾದ ಲವಣನು ನಿನಗೆ ಸಹಾಯಕನಾಗಿರುವನು. ಯುದ್ಧ ವೈರಿನಿಗ್ರಹಾದಿ ಕಾರ್ಯಗಳ ಭಾರವನ್ನೆಲ್ಲ ಅವನಿಗೆ ಒಪ್ಪಿಸಿಬಿಡು. ಪಟ್ಟಣಗಳನ್ನು ಕಟ್ಟಿ ರಾಷ್ಟ್ರವನ್ನು ಆಳುವುದರಲ್ಲಿ ಕುಶಲನಾದ ಇಕ್ಷ್ವಾಕುವಿನ ವಂಶದಲ್ಲಿ ಹುಟ್ಟಿದ ನೀನು ಈ ರಾಜ್ಯವನ್ನು ಆಳಹತ್ತಿದೆಯೆಂದರೆ ಇಂದಿನವರೆಗೆ ಕೆಟ್ಟ ಕಾಡಾದ ಈ ದುರ್ಗಮ ಅರಣ್ಯಗಳೆಲ್ಲ ಉತ್ತಮ ನಾಡಾಗಿ ಪುರಗ್ರಾಮಗಳು ಬೆಳೆದು ಆನರ್ತ ಎಂಬ ಹೊಸರಾಷ್ಟ್ರವೇ ತಲೆಯೆತ್ತಬಹುದು. ಸಮುದ್ರ ಪರ್ಯಂತದ ಈ ವಿಶಾಲ ಸಾಮ್ರಾಜ್ಯದ ಭೂಮಿಯಾದರೂ ಒಳ್ಳೇ ಸುಪೀಕವಾಗಿ ಉತ್ತಮ ಹವೆಯಿಂದ ಇದು ಮುಂದೆ ರಾಜಮಹಾರಾಜರ ವಾಸಕ್ಕೆ ಒಳ್ಳೇ ಯೋಗ್ಯವಾದ ಸ್ಥಳವೆನಿಸುವುದು. ನಿನ್ನ ವಂಶವು ಮುಂದೆ ಯಯಾತಿವಂಶದಲ್ಲಿ ಲೀನವಾಗಲಿದ್ದು ಆಗ ಸೂರ್ಯ ವಂಶವು ಚಂದ್ರವಂಶದ ಒಂದು ಶಾಖೆಯಾಗಿ ಪರಿಣಮಿಸುವುದು. ಆದುದರಿಂದ ನಾನು ನನ್ನ ಎಲ್ಲ ಐಶ್ವರ್ಯ ರಾಜ್ಯಗಳನ್ನು ನಿನಗೆ ಒಪ್ಪಿಸಿ ಲವಣ ಸಾಗರಕ್ಕೆ ತಪಸ್ಸಿಗೆ ಹೊರಡುವೆನು. ನನ್ನ ಮಗ ಲವಣನೊಂದಿಗೆ ಕೂಡಿಕೊಂಡು ನೀನು ನಿನ್ನ ವಂಶಾಭಿವೃದ್ಧಿಯನ್ನು ಮಾಡುತ್ತ ಈ ದೇಶವನ್ನು ಸುಖದಿಂದ ಆಳು' ಎಂದು ಪ್ರೀತಿಯಿಂದ ಹೇಳಿ ಅಳಿಯನಿಗೆ ರಾಜ್ಯಭಾರವನ್ನು ಒಪ್ಪಿಸಿ ಆದೈತ್ಯರಾಜನು ತಪಸ್ಸಿಗೆ ಹೋದನು.

ಅವನು ಹೋದ ಬಳಿಕ ಹರ್ಯಶ್ವನು ಉತ್ತುಂಗವಾದ ಒಂದು ಪರ್ವತದ ಶೃಂಗಾಂಗಣದಲ್ಲಿ ದಿವ್ಯವಾದ ನಗರವೊಂದನ್ನು ತನಗೆ ಇರಲು ನಿರ್ಮಿಸಿದನು. ಕೆಲವೇ ದಿನಗಳಲ್ಲಿ ಆ ಆನರ್ತ ರಾಷ್ಟ್ರದಲ್ಲಿ ಅನೇಕ ಪಟ್ಟಣಗಳು ತಲೆಯೆತ್ತಿ ವ್ಯಾಪಾರೋದ್ಯೋಗಗಳು ಬೆಳೆದವು. ಅದು ಸಮುದ್ರ ದಂಡೆಯಲ್ಲಿ ಇರುವದರಿಂದ ಎಲ್ಲ ಕಡೆಗೂ ನೀರಿನ ಸೌಕರ್ಯವಿತ್ತು. ಭೂಮಿಯೂ ಫಲವತ್ತದೇಶವಾದುದರಿಂದ ಸಮೃದ್ಧವಾಗಿ ಧಾನ್ಯಗಳು ಬೆಳೆದು ಅದು ಒಳ್ಳೇ ಸಂಪನ್ನರಾಷ್ಟ್ರವಾಗಿ ರೂಪುಗೊಂಡಿತು. ಅಲ್ಲಿ ಇದ್ದು ತನ್ನ ಕುಲಪರಂಪರಾ ಪ್ರಾಪ್ತವಾದ ಎಲ್ಲ ಸ್ಥಾನ, ಮಾನ, ಸಿರಿ, ಸಂಪದಗಳನ್ನು ಹೊಂದಿ ಸಂಪ್ರದಾಯ ಆಚಾರವಿಚಾರಗಳನ್ನೆಲ್ಲ ಯಥಾಪ್ರಕಾರವಾಗಿ ನಡೆಯಿಸುತ್ತ ಹರ್ಯಶ್ವ ಮಹಾರಾಜನು ತನ್ನ ರಾಷ್ಟ್ರವನ್ನು ರಾಷ್ಟ್ರಧರ್ಮಕ್ಕೆ ಅನುಸಾರವಾಗಿ ಆಳಿದ್ದರಿಂದ ಪ್ರಜೆಗಳಾದರೂ ಒಳ್ಳೇ ನೀತಿಸಂಪನ್ನರೂ ಧರ್ಮ ಕರ್ಮಧೌರೇಯರೂ ಆಗಿ ಶಾಂತಿ ಸುಖ ಸಮಾಧಾನಗಳಿಂದ ನಲಿದು ನಿಶ್ಚಿಂತರಾಗಿ ವಾಸಮಾಡಿದ್ದರು.

ಮಹಾರಾಣಿಯಾದ ಮಧುಮತಿಯಲ್ಲಿ ಹರ್ಯಶ್ವ ಮಹೀಪತಿಗೆ ಯದು ಎಂಬ ಗಂಡು ಮಗನು ಜನಿಸಿದನು. ಅವರ ಪೂರ್ವ ಪುರುಷನಾದ ಪೂರುಮಹಾರಾಜನಂತೆ ಯದು ರಾಜನಾದರೂ ಎಲ್ಲ ಸಾರ್ವಭೌಮ ಲಕ್ಷಣಗಳಿಂದ ಯುಕ್ತನಾಗಿ ವೈರಿ ಭಯಂಕರನಾಗಿ ಬೆಳೆದನು. ಯದುವು ಹರ್ಯಶ್ವನಿಗೆ ಒಬ್ಬನೇ ಮಗನಾದರೂ ಒಳ್ಳೇ ಸಚ್ಛೀಲನಾಗಿ ಎಲ್ಲ ರಾಜಲಕ್ಷಣ ಸಂಪನ್ನನಾಗಿದ್ದನು. ಹರ್ಯಶ್ವನು ಹತ್ತು ಸಾವಿರ ವರುಷ ಧರ್ಮದಿಂದ ರಾಜ್ಯವಾಳಿ ಧರ್ಮವೀರ ಧರಣೀಪತಿ ಎಂದು ಕೀರ್ತಿವಂತನಾಗಿ ಸ್ವರ್ಗವಾಸಿಯಾದನು.

ತಂದೆಯ ಅನಂತರ ಯದುರಾಜನು ಪ್ರಜೆಗಳಿಂದ ಸಿಂಹಾಸನದ ಮೇಲೆ ಕೂಡಿಸಿ ಅಭಿಷೇಕಿಸಲ್ಪಟ್ಟನು. ಸೂರ್ಯನಂತೆ ವರ್ಚಸ್ವಿಯೂ ಚಂದ್ರನಂತೆ ಶಾಂತಸುಂದರನೂ ಆದ ಆ ಯದುರಾಜನು ಬಹಳ ಉತ್ತಮ ರೀತಿಯಿಂದ ರಾಜ್ಯವಾಳಿ ಪ್ರಜೆಗಳ ಮೆಚ್ಚಿಕೆ, ಪರಿವಾರದವರ ನೆಚ್ಚಿಕೆಗಳನ್ನು ಗಳಿಸಿದನು. ಒಂದು ದಿನ ಅವನು ಗುಣವತಿಯರೂ ಶೀಲವತಿಯರೂ ಆದ ತನ್ನ ಸತಿಯರೊಂದಿಗೆ ಒಡಗೂಡಿ ಜಲ ವಿಹಾರಕ್ಕೆಂದು ಸಮುದ್ರಕ್ಕೆ ಹೋಗಿದ್ದನು. ಅಲ್ಲಿಯ ಸಮುದ್ರ ತರಂಗ ರಂಗದಲ್ಲಿ ಚಿಕ್ಕೆಗಳೊಡನೆ ಚಂದ್ರನು ಆಗಸದಲ್ಲಿ ವಿಹರಿಸುವಂತೆ ಪ್ರೇಯಸಿಯರ ಜೊತೆಗೆ ವಾರಿವಿಹಾರಗೈದನು.

ಆ ಸಮಯದಲ್ಲಿ ಆ ಜಲಧಿಜಲದಲ್ಲಿ ತುಸು ಈಸಬೇಕೆಂದು ನೀರಲ್ಲಿ ಬಿದ್ದ ಮಹಾರಾಜನನ್ನು ಧೂಮ್ರವರ್ಣದ ಒಂದು ಸರ್ಪವು ಬಂದು ಹಿಡಿದು ಜಲಗರ್ಭದದಲ್ಲಿರುವ ನಾಗಪುರಕ್ಕೆ ಎಳೆದೊಯ್ದಿತು.

ಆ ಸರ್ಪಪುರಿಯಲ್ಲಿಯ ಎಲ್ಲ ಮನೆಗಳ ಬಾಗಿಲು ಕಂಬಗಳೆಲ್ಲ ರತ್ನದವಿದ್ದು ಮುತ್ತಿನ ಮಾಲೆಗಳಿಂದ ಅವುಗಳಿಗೆ ವಿಶೇಷ ಶೋಭೆ ಬಂದಿತ್ತು. ಅಲ್ಲಲ್ಲಿ ರಾಶಿರಾಶಿಯಾಗಿ ಬಿದ್ದ ಬೆಳ್ಳಗಿನ ಶಂಖ ರತ್ನ ಮತ್ತು ಹವಳಗಳಿಂದಲೂ, ಫಲ ಪುಷ್ಪಪಲ್ಲವಗಳಿಂದ ಮನೋಹರವಾದ ಗಿಡಗಳಿಂದಲೂ, ಸಮುದ್ರವಾಸಿಗಳಾದ ಅನೇಕ ಹಾವಿನ ಕುಲದ ಹಿರಿಯರಿಂದಲೂ, ಅದು ತುಂಬಿ ತುಳುಕುತ್ತಿತ್ತು. ಚಂದ್ರನಂತೆ ಹೊಳೆಯುವ ಬಂಗಾರ ಬಣ್ಣದ ಸ್ವಸ್ತಿಕದಿಂದ ಆ ನಾಗನಗರಿಗೆ ವಿಶೇಷ ಶೋಭೆ ಬಂದಿತ್ತು. ಅದು ಒಂದು ದೊಡ್ಡ ಮೋಡದ ಮನೆಯಂತಿತ್ತು. ಅಲ್ಲಿ ಅಸಂಖ್ಯರಾದ ನಾಗಕನ್ನಿಕೆಯರು ಮಿಂಚುಗಳಂತೆ ಅತ್ತಿತ್ತ

ಸಂಚರಿಸುತ್ತಲಿದ್ದರು. ಅಲ್ಲಿ ನೀರಿನಲ್ಲಿಯೇ ನಿರ್ಮಿಸಿದ ಒಂದು ಉತ್ತಮವಾದ ರತ್ನ ಪೀಠವನ್ನು ಯದು ಮಹಾರಾಜನಿಗೆ ಕುಳಿತುಕೊಳ್ಳಲು ಕೊಟ್ಟರು. ಆ ಆಸನದ ಮೇಲೆ ಕಮಲದ ಪಕಳೆಗಳನ್ನು ಬಿಡಿಸಿ ಅರಳಿಸಿ ಹಾಸಿದ್ದರು.

ಯದುರಾಜನು ಆ ಆಸನದಮೇಲೆ ಕುಳಿತ ಬಳಿಕ ಅಲ್ಲಿಯ ನಾಗೇಶ್ವರನು ಅವನನ್ನು ಕುರಿತು ನುಡಿದನು. "ರಾಜನ್! ನಿನ್ನ ತಂದೆಯಾದ ಹರ್ಯಶ್ವ ಮಹಾರಾಜನು ನಿನ್ನಂಥ ತೇಜಃಪುಂಜನಾದ ಮಗನನ್ನು ಹಡೆದು ವಂಶವನ್ನು ಸ್ಥಾಪಿಸಿ ಸ್ವರ್ಗವಾಸಿಯಾದನು. ಈ ವಂಶವು ಮುಂದೆ ನಿನ್ನ ಹೆಸರಿನಿಂದಲೇ ಪ್ರಸಿದ್ಧವಾಗುವದು. ಈ ಯದುವಂಶವೆಂದರೆ ಶ್ರೇಷ್ಠರಾದ ರಾಜರತ್ನಗಳನ್ನು ನಿರ್ಮಿಸುವ ದೊಡ್ಡದಾದ ಒಂದು ಗಣಿಯೇ ಇದ್ದಂತೆ. ಮುಂದೆ ಈ ಮಹಾವಂಶದಲ್ಲಿ ಎಷ್ಟೋ ದೇವತೆಗಳೂ ಋಷಿಗಳೂ ಉರಗಗಳೂ ಮನುಷ್ಯರಾಗಿ ಜನಿಸಲಿರುವರು. ಆ ಕಾರಣದಿಂದಾಗಿ ಮಹಾರಾಜ! ಯೌವನಾಶ್ವನ ತಂಗಿಯಲ್ಲಿ ನನ್ನಿಂದ ಹುಟ್ಟಿದ ಸ್ಫುರದ್ರೂಪಿಣಿಯರಾದ ಪಂಚಕನ್ಯೆಯರನ್ನು ನಿನಗೆ ಕೊಡಬೇಕೆಂದು ನಾನು ಸಂಕಲ್ಪಿಸಿದ್ದೇನೆ. ಗುಣಶೀಲ ಸೌಂದರ್ಯಗಳಿಂದ ಒಡಗೂಡಿದ ಈ ನಾಗಕನ್ನಿಕೆಯರನ್ನು ನೀನು ವೈವಾಹಿಕ ವಿಧಿಯಿಂದ ಸ್ವೀಕರಿಸು. ಮುಂದೆ ನಿನ್ನ ವಂಶವು ಭೌಮ ಕಂಕುರ, ಭೋಜ, ಅಂಧಕ, ಯಾದವ, ದಾಶಾರ್ಹ ಮತ್ತು ವೃಷ್ಣಿ ಎಂದು ಏಳು ಶಾಖೆಗಳಿಂದ ಹಬ್ಬಿನಿಲ್ಲುವದು" ಎಂದು ಹೇಳಿ ಆ ಧೂಮ್ರವರ್ಣದ ನಾಗರಾಜನು ತನ್ನ ಐದು ಕನ್ಯೆಯರನ್ನು ಸಂಕಲ್ಪ ಪೂರ್ವಕವಾಗಿ ವಿಧ್ಯುಕ್ತವಾದ ರೀತಿಯಿಂದ ಇಂದ್ರಸಮಾನನಾದ ಆ ಯದುರಾಜನಿಗೆ ಧಾರೆಯೆರೆದುಕೊಟ್ಟನು. ಮತ್ತು ತನ್ನ ಹೆಣ್ಣು ಮಕ್ಕಳಿಗೆ ಕೇಳುವಂತೆ ಗಟ್ಟಿಯಾಗಿ "ರಾಜನ್! ನನ್ನ ಈ ಐದು ಕನ್ನಿಕೆಯರಲ್ಲಿ ನಿನಗೆ ತಂದೆಯ ಪರಾಕ್ರಮವನ್ನೂ ತಾಯಿಯ ಸದ್ಗುಣವನ್ನೂ ಪಡೆದುಕೊಂಡ ಐವರು ಸತ್ಪುತ್ರರು ಜನಿಸಲಿರುವರು. ಮುಂದೆ ನಿನ್ನ ವಂಶದಲ್ಲಿ ಹುಟ್ಟಿದವರೆಲ್ಲರೂ ಕಾಮರೂಪ-ಮನ ಬಂದ ರೂಪವನ್ನು ಧಾರಣ ಮಾಡುವ ಶಕ್ತಿವುಳ್ಳವರಾಗುವರು. ಮತ್ತು ಅವರೆಲ್ಲರಿಗೂ ಜಲಪ್ರಪಂಚದಲ್ಲಿ ಸ್ವಚ್ಛಂದ ಸಂಚಾರಮಾಡಲು ಸಾಮರ್ಥ್ಯಬರುವುದು" ಎಂದು ಹೇಳಿ ವರಪ್ರದಾನ ಮಾಡಿದನು.

ಹೀಗೆ ನೀರಿನಲ್ಲಿ ಮುಳುಗಿದ ಯದುರಾಜನು ಮೇಲೆ ಏಳುವಾಗ ಐದು ಜನ ಹೆಂಡಂದಿರನ್ನೂ ವರವನ್ನೂ ಪಡೆದುಕೊಂಡೇ ಎದ್ದುಬಂದನು. ಪಂಚನಕ್ಷತ್ರಗಳ ನಡುವೆ ನಿಂತ ನಿಶಾನಾಥನಂತೆ ಐದು ನಾಗಕನ್ಯೆಯರಿಂದ ಕೂಡಿಕೊಂಡು ಬಂದ, ಲಗ್ನದ ಗಂಧಮಾಲೆಗಳನ್ನು ಧರಿಸಿದ ತಮ್ಮ ಪತಿಯನ್ನು ಕಂಡು ಅವನ ಪೂರ್ವಪತ್ನಿಯರು ತಾವೂ ನಾಗಿಣಿಯರಂತೆ ಕಣ್ಣಿನಿಂದ ಕಿಡಿಕಾರಿ ಪೂತ್ಕರಿಸಹತ್ತಿದರು. ಆಗ ಮಹಾರಾಜನು ಶಾಂತಸ್ವರದಿಂದ ಅವರೆಲ್ಲರಿಗೂ ತಿಳಿಹೇಳಿ ಸಂತೈಸಿ ಎಲ್ಲರೊಡನೆಯೂ ಸಮನಾಗಿ ಸಂತೋಷದಿಂದ ಇದ್ದನು.

ಮುಂದೆ ಕಾಲಕ್ರಮದಿಂದ ಆ ಯದುಮಹಾರಾಜನಿಗೆ ಆ ಐದು ಹಾವಿನ ಜಾತಿಯ ಹೆಂಡಂದಿರಿಂದ ಮುಚಕುಂದ, ಪದ್ಮವರ್ಣ, ಮಾಧವ, ಸಾರಸ ಮತ್ತು ಹರಿತ ಎಂದು ಐವರು ಮಕ್ಕಳಾದರು. ತಮ್ಮ ತಂದೆಯಾದ ಆ ಯಾದವೇಂದ್ರನಿಂದ ಆದಿಷ್ಟರಾದ ಲೋಕಪಾಲರಂತಿರುವ ಆ ಪಂಚ ಕುಮಾರರು ರಮ್ಯ ಸ್ಥಲಗಳನ್ನು ನೋಡಿ ಹುಡುಕಿ ತಮ್ಮ ತಮ್ಮ ರಾಜಧಾನಿಗಳನ್ನು ಕಟ್ಟಿಕೊಂಡರು. ರಾಜರ್ಷಿಯಾದ ಮುಚುಕುಂದನು ವಿಂಧ್ಯಾದ್ರಿಯ ಮಧ್ಯಭಾಗದ ದೊಡ್ಡ ಶಿಲಾಖಂಡದಿಂದ ಆವೃತವಾದ ನರ್ಮದಾ ತೀರ ಪ್ರದೇಶದಲ್ಲಿ

ಅನೇಕ ದೇವಾಲಯ ರಾಜಮಾರ್ಗ, ಉಪವನ, ಪೇಟೆ, ಮನೆ, ಮಠಗಳಿಂದ ಶೋಭಿತವಾದ ಅಮರಾವತಿಯಂಥ ಒಂದು ಪಟ್ಟಣವನ್ನು ಕಟ್ಟಿಸಿಕೊಂಡನು. ಅದಕ್ಕೆ ಮಾಹಿಷ್ಮತಿ ಎಂದು ಹೆಸರಿಟ್ಟನು. ಮತ್ತು ವಿಂಧ್ಯಾದ್ರಿ ಋಕ್ಷವಂತ ಈ ಎರಡೂ ಶೈಲಗಳ ಪಾದ ಪ್ರತ್ಯಂತ ದೇಶದಲ್ಲಿ ನೂರಾರು ಉದ್ಯಾನವನಗಳುಳ್ಳ, ಸಮೃದ್ಧವಾದ ಅಂಗಡಿಮಾರ್ಗ ಮಾರುಕಟ್ಟೆಗಳುಳ್ಳ ದಿವ್ಯವಾದ ಪರಿಕಾ ಎಂಬ ಪಟ್ಟಣವನ್ನು ಕಟ್ಟಿಸಿದನು. ದೇವ ಭೋಗ್ಯವಾದ ಭೋಗ ಸಾಮಗ್ರಿಗಳಿಂದ ಒಡಗೂಡಿದ ಆ ಎರಡೂ ಪಟ್ಟಣಗಳನ್ನು ಧರ್ಮನಿಷ್ಠನಾದ ಆ ಮಹಾರಾಜನು ನೀತಿಯಿಂದ ಆಳುತ್ತಿದ್ದನು.

ಪದ್ಮವರ್ಣನು ಸಹ್ಯಾದ್ರಿ ಪರ್ವತದ ಮೇಲ್ಭಾಗದಲ್ಲಿ ಗಿಡಬಳ್ಳಿಗಳಿಂದ ನಿಬಿಡವಾದ ವನಪ್ರದೇಶದಲ್ಲಿ ವೇಣಾನದಿಯ ದಂಡೆಗೆ ಕರವೀರ ಎಂಬ ನಗರವನ್ನು ಕಟ್ಟಿಸಿದನು. ಅಲ್ಲಿ ಗಿಡಗುಂಪು ಹೆಚ್ಚಿಗಿದ್ದುದರಿಂದ ಸ್ಥಳವು ಸಂಕುಚಿತವಿದ್ದರೂ ಹತ್ತಿರ ಹತ್ತಿರ ಊರುಗಳನ್ನು ಕಟ್ಟಿಸಿ ವಿಶಿಷ್ಟಕದುರ್ಗಪ್ರಾಕಾರವುಳ್ಳ ಚಿಕ್ಕದಾದೊಂದು ರಾಷ್ಟ್ರವನ್ನೆ ಅಚ್ಚುಕಟ್ಟಾಗಿ ನಿರ್ಮಿಸಿದನು. ಅಷ್ಟು ಸಂಕುಚಿತವಾದ ಕ್ಷೇತ್ರದಲ್ಲಿಯೇ ವಿಶ್ವಕರ್ಮನಂತೆ ಬಹು ಕುಶಲತೆಯಿಂದ ಪದ್ಮಾವತ ಎಂಬ ಜನಪದವನ್ನು ರೂಪಗೊಳಿಸಿದನು. ಸುರಸನಾಗ ಚಂಪಕಾಶೋಕಗಿಡಗಳಿಂದ ಸಂದಟಿತವಾದ, ಕೆಮ್ಮಣ್ಣಿನಿಂದ ಪೊಳೆವ ಬನವಾಸಿ ಎಂಬ ಹೆಸರಿನ ಜನಸಂದಣಿಯಿಂದ ಕಿಕ್ಕಿರಿದು ತುಂಬಿದ ಮಹಾಪಟ್ಟಣವನ್ನು ರಚಿಸಿದನು.

ಅದರಂತೆ ಹರಿತನು ಅನರ್ಘ್ಯ ರತ್ನರಾಶಿಗಳಿಂದಲೂ ಅನೇಕ ಕನ್ಯಾ ರತ್ನಗಳಿಂದಲೂ ಮನೋಹರವಾದ ಸಮುದ್ರದ ನಡುವಿರುವ ನಡುಗಡ್ಡೆಗಳನ್ನು ಆಳುತ್ತಿದ್ದನು. ಅವನ ಕೈಯಲ್ಲಿ ಮದ್ಗುರ ಎಂಬ ಹೆಸರಿನ ಮೀನಗಾರರ ಒಂದು ದಂಡೇ ಇದ್ದು ಅವರು ಯಾವಾಗಲೂ ಸಾಗರದ ಸಲಿಲ ಗರ್ಭದಲ್ಲಿಯೇ ಸ್ವೈರವಾಗಿ ಸಂಚರಿಸಿ ಬೇಕಾದಷ್ಟು ಮುತ್ತು ರತ್ನ ಹವಳಗಳನ್ನು ಆರಿಸಿತಂದು ಕೊಡುತ್ತಿದ್ದರು. ಅದರಂತೆ ಅವನ ಅಧೀನದಲ್ಲಿರುವ ಕೆಲವು ಅಂಬಿಗರು ನೌಕೆಗಳಲ್ಲಿ ಕುಳಿತು ಕುಶಲತೆಯಿಂದ ರತ್ನಾಕರದ ರತ್ನಗಳನ್ನು ಹುಡುಕಿ ತಂದು ಸಂಗ್ರಹಿಸುತ್ತಿದ್ದರು. ಮತ್ಸ್ಯಾಹಾರಿಗಳಾದ ಅವರು ತಮ್ಮ ಚಿಕ್ಕ ಚಿಕ್ಕ ಹಡಗುಗಳಲ್ಲಿ ಆ ರತ್ನಗಳನ್ನು ದೇಶ ವಿದೇಶಗಳಿಗೆ ಹೋಗಿ ವ್ಯಾಪಾರ ಮಾಡಿಕೊಂಡು ಅಪರಿಮಿತ ದ್ರವ್ಯವನ್ನು ಸಂಪಾದಿಸಿ ಕುಬೇರನಂತಿರುವ ತಮ್ಮ ಸ್ವಾಮಿಯಾದ ಹರಿತನಿಗೆ ಒಪ್ಪಿಸುತ್ತಿದ್ದರು. ಹೀಗೆ ಇಕ್ಷ್ವಾಕುವಂಶದಿಂದ ಯದುವಂಶವು ಹೊರಟು ಮುಂದೆ ಯದು ಪುತ್ರರಿಂದ ನಾಕುಕಡೆ ಕವಲೊಡೆಯಿತು.

ಆ ಯದುರಾಜನು ಮಾಧವನಿಗೆ ತನ್ನ ರಾಜ್ಯವನ್ನು ಒಪ್ಪಿಸಿ ಸ್ವರ್ಗವಾಸಿಯಾದನು. ಆ ಮಾಧವನಿಗೆ ಸತ್ವಸಂಪನ್ನನೂ ರಾಜಲಕ್ಷಣ ಲಕ್ಷಿತನೂ ಆದ ಸತ್ವತ ಎಂಬ ಮಗನಿದ್ದನು. ಆ ಸತ್ವತನಿಗೆ ಭೀಮ ಎಂಬ ಮಗನಾದನು. ಆ ಭೀಮನಿಂದ ಮುಂದಿನವರೆಲ್ಲ ಭೈಮರೆಂದೂ, ಸತ್ವತನಿಂದ ಪ್ರವೃತ್ತರಾದುದರಿಂದ ಸಾತ್ವತರೆಂದೂ ಆ ವಂಶದವರು ಪ್ರಸಿದ್ಧರಾದರು.

ಆ ಭೀಮನು ಆ ರಾಜ್ಯವನ್ನು ಆಳುತ್ತಲಿರುವಾಗಲೇ ಅತ್ತ ಅಯೋಧ್ಯೆಯಲ್ಲಿ ಪ್ರಭು ಶ್ರೀರಾಮಚಂದ್ರನು ರಾಜ್ಯವಾಳುತ್ತಲಿದ್ದನು. ಅದೇ ವೇಳೆಯಲ್ಲಿ ಶತ್ರುಘ್ನನು ಬಂದು ಲವಣಾಸುರನನ್ನು ಸಂಹರಿಸಿ ಆ ಮಧುವನವನ್ನೆಲ್ಲ ಕಡಿದೊಗೆದು, ಅಲ್ಲಿ ಈ ಮಥುರಾ ಎಂಬ ಪಟ್ಟಣವನ್ನು ಕೂಡಿಸಿದನು. ಮುಂದೆ ರಾಮಲಕ್ಷ್ಮಣ ಭರತ ಶತ್ರುಘ್ನರು ಪರಂಧಾಮಕ್ಕೆ ಪ್ರಯಾಣಮಾಡಿದ ಬಳಿಕ ಲವಣನು ನಿಪುತ್ರಿಕನಾಗಿಯೇ ತೀರಿಕೊಂಡಿದ್ದರಿಂದ ಮಧು ದೈತ್ಯನ ದೌಹಿತ್ರ ಸಂಬಂಧಿಕನೆಂಬ ದೃಷ್ಟಿಯಿಂದ

ಭೀಮರಾಜನು ಆ ಮಥುರಾ ಪಟ್ಟಣವನ್ನು ತನ್ನ ಸ್ವಾಧೀನ ಪಡಿಸಿಕೊಂಡು ಅಲ್ಲಿಯೇ ವಾಸಮಾಡಿದನು. ಮುಂದೆ ರಾಮನ ಮಗನಾದ ಕುಶನು ಮಹಾರಾಜನಾಗಿ ಲವನು ಯುವರಾಜನಾಗಿ ರಾಜ್ಯವಾಳುವಾಗ ಈ ಮಥುರಾಪಟ್ಟಣದಲ್ಲಿ ಭೀಮ ಭೂಪನ ಮಗನಾದ ಅಂಧಕ ಎಂಬ ಪುತ್ರನು ರಾಜ್ಯವಾಳುತ್ತಲಿದ್ದನು. ಆ ಅಂಧಕನ ಅನಂತರ ರೈವತನೆಂಬ ಅವನ ಮಗನು ರಾಜ್ಯಭೋಗಮಾಡಿದನು. ಆ ರೈವತನಿಂದ ಋಕ್ಷನಾಮಕವಾದ ಪುತ್ರನು ಜನಿಸಿದನು. ರೈವತ ರಾಜನಿಗೆ ಗುಡ್ಡದಲ್ಲಿಯೇ ಮಗನು ಉತ್ಪನ್ನನಾದುದರಿಂದ ಆ ಗಿರಿಗೆ ರೈವತಕಗಿರಿ ಎಂಬ ಹೆಸರು ಬಂದಿತು.

ರೈವತನಿಗೆ ವಿಶ್ವಗರ್ಭನೆಂಬ ಮಗನು ಹುಟ್ಟಿದನು. ಆ ವಿಶ್ವಗರ್ಭನಿಗೆ ತನ್ನ ಮೂರುಮಂದಿ ಹೆಂಡಂದಿರಲ್ಲಿ ವಸು, ಬಭ್ರು, ಸುಕ್ಷೀಣ, ಸಭಾಕ್ಷ ಎಂಬ ಅತ್ಯಂತ ಬಲಿಷ್ಠರಾದ ನಾಕು ಜನ ಗಂಡುಮಕ್ಕಳಾದರು. ಅವರಿಂದ ಈ ಯಾದವ ವಂಶದ ಬಳ್ಳಿಯು ಚೆಲ್ವರಿದು ಬೆಳೆದು ಹಬ್ಬಿ ನಿಂತಿದೆ. ಶೂರ ಎಂಬ ಇನ್ನೊಂದು ಹೆಸರುಳ್ಳ ಈ ವಸುವಿಗೆ ವಸುದೇವನೆಂಬ ಗಂಡು ಮಗನೂ ಕುಂತಿ ಸುಪ್ರಭಾ ಎಂಬಿಬ್ಬರೂ ಹೆಣ್ಣುಮಕ್ಕಳೂ ಹುಟ್ಟಿದರು. ಕುಂತಿಯನ್ನು ಪಾಂಡುರಾಜನಿಗೂ ಸುಪ್ರಭೆಯನ್ನು ಚೇದಿರಾಜನಿಗೂ ಕೊಟ್ಟಿದ್ದು ನಿನಗೆ ವಿದಿತವೇ ಇದೆ.

ಕೃಷ್ಣ! ನಾನು ಭಗವಾನ್ ಬಾದರಾಯಣದಿಂದ ಕೇಳಿ ತಿಳಿದುಕೊಂಡ ನಿಮ್ಮ ವಂಶಾನುಕ್ರಮದ ಪೂರ್ವೇತಿಹಾಸವನ್ನು ತಿಳಿಸಿದೆ. ಪ್ರಣಾಶೋನ್ಮುಖವಾದ ಈ ವಂಶವನ್ನು ಪುನರುದ್ಧಾರ ಮಾಡುವದಕ್ಕಾಗಿ ಸಾಕ್ಷಾತ್ ಸ್ವಯಂಭುವನೇ ನಿನ್ನ ರೂಪದಿಂದ ಬಂದಂತಾಗಿದೆ. ಯದುಕುಲದ ಕಲ್ಯಾಣ ವಿಜಯಗಳಿಗಾಗಿಯೇ ಅವತಾರ ಮಾಡಿದ ನಿನ್ನನ್ನು ಸಾಮಾನ್ಯ ನಾಗರಿಕನೆಂದು ಮುಚ್ಚಿಡುವದು ಶಕ್ಯವಿಲ್ಲ. ದೇವರಹಸ್ಯವನ್ನು ಚೆನ್ನಾಗಿ ತಿಳಿದ ನೀನು ಜರಾಸಂಧನನ್ನೂ ಗೆಲ್ಲಬಲ್ಲೆ. ಆದುದರಿಂದಲೇ ನಾವೆಲ್ಲರೂ ನಿನ್ನ ಅಪ್ಪಣೆಯ ಪ್ರಕಾರ ಯುದ್ಧ ದೀಕ್ಷೆಯನ್ನು ಸ್ವೀಕರಿಸಿ ನಿಂತಿದ್ದೇವೆ.

ಕೃಷ್ಣ, ಈಗಿನ ನಮ್ಮ ನಗರದ ನಿಜಸ್ಥಿತಿಯನ್ನು ಹೇಳಬೇಕೆಂದರೆ ಇದು ಇನ್ನು ಮೇಲೆ ಜರಾಸಂಧನ ಒಂದು ದಿನದ ದಾಳಿಯನ್ನೂ ಕೂಡ ತಾಳಲಾರದು. ಜರಾಸಂಧನೆಂದರೆ ಸಾಧಾರಣ ರಾಜನಲ್ಲ. ರಾಜಚಕ್ರವರ್ತಿ. ನಮ್ಮ ನಗರದ ಅನ್ನ ಸೌದೆಗಳ ಸಂಗ್ರಹವು ಕರಗಿಹೋಗಿದೆ. ಅನೇಕ ಯುದ್ಧಗಳಲ್ಲಿ ಕೋಟೆ ಕೊತ್ತಲೆಗಳು ಬಿದ್ದು ದುರ್ಗದಂತಿದ್ದ ಪಟ್ಟಣವು ಈಗ ಎಲ್ಲ ವೈರಿಗಳಿಗೂ ಒಳ್ಳೇ ಸುಗಮವಾಗಿಬಿಟ್ಟಿದೆ. ಅಗಸಿಯ ಬಾಗಿಲುಗಳಲ್ಲಿ ಇರಿಸಲು ದ್ವಾರಯಂತ್ರಗಳಿಲ್ಲ. ಶಸ್ತ್ರಾಸ್ತ್ರಗಳೆಲ್ಲವೂ ಮೊಂಡವಾಗಿವೆ. ಕಂಸ ಸತ್ತ ಕೂಡಲೇ ಈ ಪಟ್ಟಣದಲ್ಲಿ ವಿಪರೀತ ಜನ ಬಂದು ಸೇರಿಬಿಟ್ಟಿದ್ದರಿಂದ ಆ ಜನಸಂದಣಿಯಿಂದ ಊರು ತುಂಬಿತುಳುಕಿಬಿರಿಯುವಂತೆ ತೋರುತ್ತಿದೆ. ಈಗ ವೈರಿಗಳ ಒಂದೇ ಹೊಡೆತ ಸಾಕು. ಇಡೀ ಪಟ್ಟಣವೆಲ್ಲ ಒಂದೇ ಪೆಟ್ಟಿಗೆ ವಿಧ್ವಂಸವಾಗಬಹುದು. ನಗರರಕ್ಷಣೆಗೆಂದು ಕಟ್ಟಿದ ಕೋಟೆಗಳು ಬಿದ್ದು ಹೋಗಿವೆ. ಕಂದಕಗಳೆಲ್ಲ ಹುಗಿದುಹೋಗಿ ಜಲಶೂನ್ಯವಾಗಿವೆ. ಆಯುಧಾಗಾರಗಳನ್ನು ಇನ್ನೂ ಸುಧಾರಿಸಬೇಕಾಗಿದೆ.

ಕಂಸನಿರುವವರೆಗೆ ಅವನ ಬಲ ದರ್ಪಗಳಿಂದ ಅಂಜಿ ಯಾರೂ ಈ ಪಟ್ಟಣದ ಮೇಲೆ ದಾಳಿಯನ್ನೇ ಮಾಡ ಬರುತ್ತಲಿರಲಿಲ್ಲ. ಆದುದರಿಂದ ಅವನಿದ್ದಾಗ ಈ ದುರ್ಗದ ಸಂರಕ್ಷಣೆಗಾಗಿ ಪ್ರಯತ್ನಿಸುವ ಕಾರಣವೇ ಇರಲಿಲ್ಲ. ಈಗ ನಾವು ಹೊಸದಾಗಿಯೇ ಈ ರಾಜ್ಯವನ್ನು ಕಟ್ಟಿದ್ದೇವೆ. ಭದ್ರವಾದ ತಳಹದಿ ಇಲ್ಲದ ಈ ನಮ್ಮ ನವೋದಿತ ರಾಜ್ಯವು

ಜರಾಸಂಧನ ನಿತ್ಯದಾಳಿಗಳನ್ನು ಎದುರಿಸುವ ಬಗೆ ಹೇಗೆ! ನಾವು ಇದಕ್ಕೂ ಮೊದಲು ನಮ್ಮ ಸಾಮ್ರಾಜ್ಯವನ್ನು ವಿಸ್ತರಿಸುವ ಇಚ್ಛೆಯಿಂದ ಯಾರು ಯಾರನ್ನು ಗೆದ್ದಿರುವವೋ ಅವರೆಲ್ಲರೂ ಈಗ ನಾವು ಸೋಲುವದನ್ನೇ ಬಯಸುತ್ತಿದ್ದಾರೆ. ನಮಗೆ ಅಧೀನರಾಗಿ ನಮ್ಮಲ್ಲಿಯೇ ಇದ್ದರೂ ಅವರು ನಮಗೆ ಘಾತಕರಾಗಿದ್ದಾರೆ. ಹೀಗೆ ಅಂತಃಶತ್ರುಗಳೂ ಬಹಿಃಶತ್ರುಗಳೂ ಕೂಡಿಯೇ ನಮ್ಮನ್ನು ಭೇದಿಸಬೇಕೆಂದೂ ಹೊಂಚುಹಾಕಿದ್ದಾರೆ. ಮತ್ತು ಜರಾಸಂಧನ ನಿರಂತರ ದಾಳಿಗಳಇಂದ ಜರ್ಜರಿತವಾದ ಪ್ರಜೆಗಳೂ ಕೂಡ ಯಾದವರ ಕಲಹ ಕುತೂಹಲವನ್ನು ಆಡಿಕೊಳ್ಳುತ್ತಲಿದ್ದಾರೆ. ಕಾರಣ ಈ ಸಂದರ್ಭದಲ್ಲಿ ಏನು ಮಾಡಬೇಕೆನ್ನುವದನ್ನು ನೀನೇ ವಿಚಾರಿಸು. ನನಗೆ ಎನಿಸಿದ್ದನ್ನು ವಿಶ್ವಾಸದಿಂದ ನಿನ್ನ ಮುಂದೆ ಇಟ್ಟಿದ್ದೇನೆ. ಯುಕ್ತಾಯುಕ್ತ ನಿರ್ಣಯ ಮಾಡುವದು ನಿನಗೇ ಸೇರಿದ್ದು. ನಾನು ಮಾಡಿದ್ದು ವಿಜ್ಞಾಪನೆಯೇ ಹೊರತು ನಿನಗೆ ಪ್ರಬೋಧನೆಯಲ್ಲ. ನಿನಗೆ ಸೂಕ್ತವೆನಿಸಿದಂತೆ ಮಾಡಿ ಯಾದವ ಕುಟುಂಬಕ್ಕೆ ಕಲ್ಯಾಣವನ್ನು ಕರುಣಿಸು. ನಮ್ಮೆಲ್ಲರಿಗೂ ನೀನೇ ನಾಯಕನಿದ್ದು ನಿನ್ನ ಅಪ್ಪಣೆಯಂತೆ ನಡೆಯಲು ಸಿದ್ಧರಿದ್ದೇವೆ. ನಿನ್ನಿಂದ ಬಂದ ಈ ವೈರಿ ಸಂಕಟದಿಂದ ನಮ್ಮನ್ನು ನೀನೇ ರಕ್ಷಿಸಬೇಕು.'' ಎಂದು ಬೇಡಿಕೊಂಡನು.

ವಿಕದ್ರುವಿನ ಮಾತು ಕೇಳಿ ಸಂತುಷ್ಟನಾದ ವಸುದೇವನು ಆಗ ಕೃಷ್ಣನನ್ನು ಕುರಿತು ''ಕೃಷ್ಣಾ! ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಆಶ್ರಯ ಎಂದು ಆರು ವಿಧವಾದ ರಾಜ ನೀತಿಯ ಗೂಡ ರಹಸ್ಯವನ್ನು ಚೆನ್ನಾಗಿ ಅರಿತು ರಾಜ್ಯದ ಕ್ಷೇಮಕ್ಕಾಗಿ ಕಾಲೋಚಿತವಾಗಿ ಸರಿಯಾದ ಸಲಹೆ ಸೂಚನೆಗಳನ್ನು ಕೊಡುವ ರಾಜಕಾರಣಿ ಮನುಷ್ಯನೂ ಕೂಡ ಪ್ರತಿ ರಾಜನೇ ಇದ್ದಂತೆ. ತಾದೃಶ ಗುಣಗಳಿಂದ ಯುಕ್ತನಾದ ಬುದ್ಧಿವಂತ ವಿಕ್ಕುದ್ರುವು ಇಷ್ಟು ಹೊತ್ತಿನವರೆಗೆ ರಾಜಧರ್ಮಕ್ಕೆ ಅನುಗುಣವಾದ ಯಥಾರ್ಥ ಭಾಷಣವನ್ನು ಮಾಡಿದ್ದಾನೆ. ಅದನ್ನು ಕೇಳಿಕೊಂಡು ಸರ್ವರಿಗೂ ಶ್ರೇಯಸ್ಕರ ವಾಗುವಂತೆಮಾಡು'' ಎಂದು ಹೇಳಿದನು.

ಆಗ ವಿಕದ್ರುವಿನ ಆ ತಥ್ಯವಾದ ಮಾತುಗಳನ್ನೂ ತನ್ನ ತಂದೆಯ ಪಥ್ಯವಾದ ನುಡಿಗಳನ್ನೂ ಆಲಿಸಿ ಆ ಸತ್ಯ ಸಂಕಲ್ಪನಾದ ಶ್ರೀಹರಿಯು ಮಾತನಾಡಿದನು.

''ನೀವು ಇಷ್ಟು ಹೊತ್ತಿನವರೆಗೆ ಈ ಜರಾಸಂಧನ ಜೊತೆಗೆ ಯಾದವರಿಗೆ ವೈರ ದ್ವೇಷಗಳು ಬಂದದ್ದು ನನ್ನ ಮೂಲಕ. ಆದುದರಿಂದ ನಾನೀಗ ಯುದ್ಧಮಾಡುವುದನ್ನು ಬಿಟ್ಟು ಹಿಂದೆಸರಿಯಬೇಕು'' ಎಂಬ ಅಭಿಪ್ರಾಯವು ಧ್ವನಿತವಾಗುವಂತೆ ಆಡಿದ ಗೂಢಾಶಯದ ಮಾತುಗಳನ್ನು ಕೇಳಿ ತಿಳಿದುಕೊಂಡೆ. ಅತ್ಯಂತ ಬಲಿಷ್ಠರಾದ ವೈರಿರಾಜರು ಒಮ್ಮೆಲೆ ಏರಿಬಂದಾಗ ಆಗಲೇ ಅಲ್ಲಿಯೇ ಅವರನ್ನು ಎದುರಿಸದೇ ತುಸು ಸರಿದಂತೆ ಮಾಡಿ ಬಲಸಂಗ್ರಹಮಾಡಿಕೊಂಡು ತನ್ನ ಪೂರ್ಣ ತಯಾರಿಯಾದ ಬಳಿಕ ಸಮಯನೋಡಿ ಶತ್ರುವಿನಮೇಲೆ ಬಿದ್ದು ಸೋಲಿಸಬೇಕಾದುದು ಸೂಕ್ಷ್ಮವಾದ ರಾಜನೀತಿ ಎಂಬ ನಿಮ್ಮ ತತ್ವವು ನನಗೂ ಮಾನ್ಯವಿದೆ.

ಆಗ ಕೃಷ್ಣನು ನಾವೀಗ ಬಲರಾಮನೊಂದಿಗೆ ಈ ಜರಾಸಂಧನಿಗೆ ಅಂಜಿದಂತೆ ನಟಿಸಿ ದಕ್ಷಿಣಾ ಪಥದಕಡೆಗೆ ಓಡಿಹೋಗಿ ಸಹ್ಯಾದ್ರಿಬೆಟ್ಟವನ್ನು ಸೇರಿ ಕೊಲ್ಹಾಪುರ ಕ್ರೌಂಚಪುರಗಳ ಹಾದಿಹಿಡಿದು ನಡೆದುಬಿಡುವೆವು. ನಾವು ಓಡಿಹೋದುದನ್ನು ಕಂಡು ಜರಾಸಂಧಾದಿರಾಜರೂ ನಮ್ಮನ್ನು ಹಿಡಿಯಬೇಕೆಂದು ಬೆನ್ನುಹತ್ತಿ ಬರುವರು. ಅಲ್ಲಿಯೇ ಬಂದಾಗ ಆ ದಂಡಕಾರಣ್ಯದ ಭೂಭಾಗದಲ್ಲಿ ನಾನು ಆ ಮಗಧರಾಜನ ಹಾಗೂ ಅನುಯಾಯಿಗಳಾದ ಅವನ ರಾಜಪರಿವಾರದವರ ಸಮಾಚಾರವನ್ನು ತೆಗೆದುಕೊಳ್ಳುವನು.

ಇದರಿಂದ ರಣಕ್ಷೇತ್ರ ಬದಲಾಗಿ ನಮ್ಮ ಊರು ಸುರಕ್ಷಿತ ಉಳಿಯುವುದು. ಯುದ್ಧದಿಂದ ಬೇಸತ್ತ ಮಾಥುರೇಯರಾದ ಪ್ರಜೆಗಳಿಗೂ ನಮ್ಮ ಅನುಚರರಾದ ಉಳಿದ ಸಾಮಂತ ರಾಜರಿಗೂ ನಮ್ಮ ಪರಿವಾರದವರಿಗೂ ಯುದ್ಧದ ಭಯವೇ ತಪ್ಪಿಹೋಗು ವದರಿಂದ ಎಲ್ಲರೂ ನಿಶ್ಚಿಂತರಾಗಿ ಇರಬಹುದು. ದಕ್ಷಿಣಾಪಥದ ಪುಣ್ಯಾರಣ್ಯಗಳನ್ನೂ ಪಾವನ ಕ್ಷೇತ್ರಗಳನ್ನೂ ಪವಿತ್ರ ತೀರ್ಥಗಲನ್ನೂ ಪುರ ಗ್ರಾಮಾರಾಮಗಳನ್ನೂ ನೋಡಬೇಕೆಂದು ನಮಗೂ ಇಚ್ಛೆಯುಂಟು. ಆದುದರಿಂದ ಸುಖವಾಗಿ ದೇಶಸಂಚಾರ ಮಾಡುತ್ತ ನಾವಿಬ್ಬರೂ ಅಣ್ಣ ತಮ್ಮಂದಿರು ಹೊರಡುವೆವು. ನೀವೆಲ್ಲರೂ ಇಲ್ಲಿ ಸುಖವಾಗಿ ಇರ್ರಿ. ಇದರಿಂದ ನಿಮಗೂ ನಾಡಿನ ಪ್ರಜೆಗಳಿಗೂ ಕಲ್ಯಾಣವಾಗುವದು'' ಎಂದು.

ಹೀಗೆ ಹೇಳಿ ರಾಮಕೃಷ್ಣರು ಮಥುರಾಪಟ್ಟಣದಿಂದ ಹೊರಬಿದ್ದು ನಿರ್ಭಯವಾಗಿ ದಕ್ಷಿಣ ದೇಶಕ್ಕೆ ಬಂದರು. ಕಾಮರೂಪರಾದ ಅವರು ಸ್ವಚ್ಛಂದವಾಗಿ ಸಂಚರಿಸುತ್ತ ದಾರಿಯಲ್ಲಿ ನೂರಾರು ದೇಶಗಳನ್ನೂ ನಗರಗಳನ್ನೂ ನೋಡುತ್ತ ನಿಸರ್ಗ ರಮಣೀಯವಾದ ಠಾವುಗಳಲ್ಲಿ ತಂಗಿ ವಿಶ್ರಾಂತಿಪಡೆದು ದಟ್ಟಕಾಡು ಬಟ್ಟಬಯಲು ಹೊಳೆಹಳ್ಳ ದರಿ ಕೊಳ್ಳಗಳನ್ನೆಲ್ಲ ದಾಟಿ ಸಹ್ಯಾದ್ರಿ ಘಟ್ಟಗಳನ್ನು ಏರಿಳಿಯುತ್ತ ಕೆಲವೇ ದಿನಗಳಲ್ಲಿ ಕೊಲ್ಹಾಪುರಕ್ಕೆ ಬಂದರು.

ಅದರ ಸಮೀಪದಲ್ಲಿಯೇ ಪ್ರವಹಿಸುತ್ತಲಿರುವ ವೇಣಾನದಿಯ ದಂಡೆಯ ಮೇಲೆ ಶಾಖೋಪ ಶಾಖೆಗಳಿಂದ ಮುಗಿಲಿನಗಲವನ್ನು ತುಂಬಿಕೊಂಡು ನಿಂತ ಒಂದು ಪುರಾತನವಾದ ಆಲದ ಗಿಡದಡಿಗೆ ಬಂದರು. ಆ ಮಹಾ ವಟವೃಕ್ಷದ ಕೆಳಗೆ ಅತ್ಯಂತ ತೇಜಸ್ವಿಯಾದ ಓರ್ವ ಮಹರ್ಷಿಯನ್ನು ಕಂಡರು. ಜಟಾಮಂಡಲಧಾರಿಯಾದ ಆ ಬ್ರಹ್ಮರ್ಷಿಯು ನಾರು ಬಟ್ಟೆಯನ್ನುಟ್ಟಿದ್ದು ಅಗ್ನಿಜ್ವಾಲೆಗಳಂತೆ ಅವನ ಶರೀರವು ಮಿಂಚುತ್ತಲಿತ್ತು. ಬಿಸಿಲಿನ ಬೇಗೆಗೆ ಬೇಸತ್ತ ಸೂರ್ಯನೇ ನೆರಳು ನೋಡಿಕೊಂಡು ಆ ಹೆಮ್ಮರದ ತಂಪಿನಲ್ಲಿ ಬಂದು ತಂಗಿದಂತೆ ತೋರುತ್ತಿತ್ತು. ಗಂಭೀರ ಸಾಗರವೇ ಶರೀರಧಾರಣೆ ಮಾಡಿ ಬಂದು ಕುಳಿತಂತಿರುವ ಆ ಮಹಾಮುನಿಯ ಹೆಗಲಮೇಲೆ ಮಿಂಚಿನಲ್ಲಿ ಮಸೆದು ತೆಗೆದಂತೆ ಹೊಳೆಯುವ ಕಠೋರವಾದ ಕೊಡಲಿಯೊಂದು ಶೋಭಿಸುತ್ತಿತ್ತು. ಅದನ್ನು ಕಂಡಕೂಡಲೇ ರಾಮಕೃಷ್ಣರಿಗೆ ಇವನು ಕ್ಷತ್ರಾಂತಕನಾದ ಪರಶುರಾಮನು ಎಂದು ಗೊತ್ತಾಯಿತು. ಆ ಕೊಡಲಿಯ ರಾಮನು ತನ್ನ ಹೋಮಹವನ ಕ್ರಿಯೆಗಳಿಗಾಗಿ ಹಾಲನೀಯುವ ಕರುಸಹಿತವಾದ ಕಾಮಧೇನುವನ್ನು ತಾನು ತಪಸ್ಸು ಮಾಡುವ ತಾಣವಾದ ಮಹೇಂದ್ರಗಿರಿಗೆ ಕರೆದುಕೊಂಡು ಹೊರಟಿದ್ದನು. ದಾರಿಯಲ್ಲಿ ಆ ವಟವೃಕ್ಷದಡಿಯಲ್ಲಿ ಮಂದರಾದ್ರಿಯ ಮೇಲ್ಭಾಗದಲ್ಲಿ ವಿಶ್ರಮಿಸಿದ ಸವಿತೃದೇವನಂತೆ ಸುಖಾಸೀನನಾದ ಸಾಕ್ಷಾದ್ಭಗವತ್ಸ್ವ ರೂಪಿಯಾದ ಆ ಜಾಮದಗ್ನ್ಯನ ದರ್ಶನವನ್ನು ತೆಗೆದುಕೊಂಡು ರಾಮಕೃಷ್ಣರು ಪರಶುರಾಮನ ಸಲಹೆಯಂತೆ ಮೂವರು ಅಲ್ಲಿಂದ ಹೊರಟು ವೇಣಾನದಿಯನ್ನು ದಾಟಿ ಯಜ್ಞಗಿರಿ, ಕ್ರೌಂಚಪುರಿ, ಖಟ್ವಾಂಗನದಿಯ ಜಲಪಾತಗಳ ಮಾರ್ಗವಾಗಿ ಗೋಮಂತ ಪರ್ವತಕ್ಕೆ ನಡೆದರು.

ಬಲರಾಮನು ಗೋಮಂತ ಪರ್ವತದಲ್ಲಿ ಕೃಷ್ಣನೊಡನೆ ಮಾತನಾಡುತ್ತ ಕುಳಿತಾಗ ಒಮ್ಮಿಂದೊಮ್ಮೆಲೆ ಆಕಾಶದಿಂದ ಒಂದು ದಿವ್ಯವಾದ ರತ್ನ ಕಿರೀಟವು ಬಂದು ಕೃಷ್ಣನ ತಲೆಯ ಮೇಲೆ ಬಿದ್ದಿತು. ಮತ್ತು ಅದು ಕೇಶವನ ತಲೆಗೆಂದೇ ಅಳತೆಕೊಟ್ಟು ಹೇಳಿ ಮಾಡಿಸಿದಂತೆ ಒಳ್ಳೇ ಸರಿಯಾಗಿ ಹೊಂದಿ ಕುಳಿತು ಮಸ್ತಕ ಮೌಲಿಯಾಗಿ ಶೋಭಿಸ ಹತ್ತಿತು. ಆಗ

ಆಶ್ಚರ್ಯಚಕಿತನಾದ ಬಲರಾಮನಿಗೆ ಕೃಷ್ಣನು "ಅಣ್ಣ! ವಿಷ್ಣುವು ತನ್ನ ಮೂಲರೂಪವಾದ ನಾರಾಯಣ ದೇಹದಿಂದ ಕ್ಷೀರಸಾಗರದಲ್ಲಿ ಪವಡಿಸಿದ್ದನು. ಆದಿಶೇಷನು ಮಣಿಪ್ರಭೆಯಿಂದ ಉಜ್ವಲವಾದ ಸಾವಿರ ಹೆಡೆಗಳನ್ನು ಛತ್ರಾಕಾರವಾಗಿ ಅರಳಿಸಿ ಅವನ ಮೇಲೆ ಹಿಡಿದಿದ್ದನು. ಆಗ ಪಾತಾಲ ಲೋಕದಿಂದ ಶ್ರೀಹರಿಯ ಸೇವೆಗೆಂದು ಬಲಿಚಕ್ರವರ್ತಿಯು ಬಂದು ಕೈಮುಗಿದುಕೊಂಡು ಬಳಿಗೆ ನಿಂತುಕೊಂಡಿದ್ದನು. ನಾರಾಯಣನ ತಲೆಯ ಮೇಲೆ ರತ್ನಖಚಿತವಾದ ಮಣಿಮುಕುಟವು ಶೋಭಿಸುತ್ತಿದ್ದು ಅದರ ದಿವ್ಯ ಕಾಂತಿಯಿಂದ ಆ ಶೇಷಪರ್ಯಂಕವೆಲ್ಲ ಪ್ರಭಾಪುಂಜಪಿಂಜರಿತವಾಗಿತ್ತು. ಆ ರತ್ನ ಕಿರೀಟದ ಕಣ್ಣು ಕುಕ್ಕಿಸುವ ರೋಚಿವೀಚಿಗಳನ್ನು ಕಂಡು ಬಲಿಚಕ್ರವರ್ತಿಯ ಬಾಯಲ್ಲಿ ನೀರು ಬಿಟ್ಟಿತು. ಅವನು ಸಮಯವನ್ನೇ ಕಾಯುತ್ತ ಕುಳಿತಿದ್ದು ಯೋಗ ನಿದ್ರೆಯಲ್ಲಿ ನಾರಾಯಣನು ತುಸು ಕಣ್ಣು ಮುಚ್ಚಿದ ಕೂಡಲೇ ಆ ದೈತ್ಯರಾಜನು ಮೆಲ್ಲನೇ ಆ ಕಿರೀಟವನ್ನು ವಿಷ್ಣುವಿನ ತಲೆಯಿಂದ ಎತ್ತಿಕೊಂಡು ಮೊಸಳೆಯ ರೂಪದಿಂದ ನೀರಿನಲ್ಲಿ ಈಸುತ್ತ ಪಾತಾಳಕ್ಕೆ ಓಡಿದನು. ಅದನ್ನು ನೋಡಿ ಗರುಡನು ಧಾವಿಸಿ ಪಾತಾಳಕ್ಕೆ ಹೋಗಿ ಭಗವಂತನ ಮಣಿ ಮುಕುಟವನ್ನು ಕೊಡಬೇಕೆಂದು ಕೇಳಿದನು. ಅವನು ಕೊಡದಂತಾಗಲು ಅಲ್ಲಿಯ ದೈತ್ಯರ ಜೊತೆಗೆ ಯುದ್ಧಮಾಡಿ ಗೆದ್ದು ಆ ಹರಿ ಮುಕುಟವನ್ನು ಮರಳಿ ಕ್ಷೀರಸಮುದ್ರಕ್ಕೆ ತೆಗೆದು ಕೊಂಡು ಹೊರಟಿದ್ದನು. ದಾರಿಯಲ್ಲಿ ಅವನ ಕಣ್ಣಿಗೆ ಗೋಮಂತ ಶಿಖರದ ಮೇಲ್ಭಾಗದಲ್ಲಿ (ನಾನು) ಕೃಷ್ಣನು ಕಿರೀಟವಿಲ್ಲದೇ ಬಕ್ಕ ನೆತ್ತಿಯಿಂದ ಕುಳಿತಿದ್ದು ಕಂಡಿತು. ಆ ವಿಷ್ಣುವೇ ಈ ಕೃಷ್ಣ ಎಂದು ತಿಳಿದ ಬುದ್ಧಿವಂತನಾದ ಆ ಗರುಡನು ಅಲ್ಲಿಯೇ ಆಕಾಶದಲ್ಲಿ ನಿಂತಲ್ಲಿಂದ ಆ ಕಿರೀಟವನ್ನು ಗುರಿಯಿಟ್ಟು ಮೇಲಿನಿಂದ ಕೈಬಿಟ್ಟನು. ಅದು ನನ್ನ ತಲೆಗೆ ಸರಿಯಾಗಿ 'ರಿಕ್' ಆಗಿ ಬಂದು ಕುಳಿತಿತು" ಎಂದು ತನ್ನ ತಲೆಯ ಮೇಲೆ ಆಕಸ್ಮಿಕವಾಗಿ ಬಂದು ಕುಳಿತು ಹೊಂದಿಕೊಂಡು ಒಪ್ಪುವ ಮಸ್ತಕದ ಮಾಣಿಕ್ಯ ಕಿರೀಟದ ಕಥೆಯನ್ನು ಹೇಳಿದನು.

ಆಗ ಬಲರಾಮನು ಮೇಲೆ ನೋಡುವಷ್ಟರಲ್ಲಿ ದೈತ್ಯಯುದ್ಧದಲ್ಲಿ ಶಸ್ತ್ರಾಘಾತದ ಕಚ್ಚುಗಳು ಇನ್ನೂ ಮೈಮೇಲೆಲ್ಲ ತೋರುವ ಗರುಡನು ತಾನು ಬಿಟ್ಟ ಕಿರೀಟವು ಕೃಷ್ಣನ ತಲೆಯ ಮೇಲೆ ಹೇಗೆ ಕಾಣುವದೆಂದು ನೋಡುತ್ತ ನಿಂತು ಕೊಂಡಿದ್ದನು. ಕೃಷ್ಣನೂ ತಲೆಯೆತ್ತಿ ನೋಡಲಾಗಿ ಅದರಿಂದ ಕೃತಕೃತ್ಯನಾಗಿ ಅಲ್ಲಿಂದಲೇ ಭಗವಂತನಿಗೆ ವಂದಿಸಿ ಗರುಡ ಮುಂದೆ ನಡೆದನು. ಈ ಅದ್ಭುತವಾದ ಕೃಷ್ಣನ ಮಹಿಮೆಯನ್ನು ಕಂಡು ಬಲದೇವನಿಗೆ ಆಶ್ಚರ್ಯವಾಯಿತು.

ರಾಮಕೃಷ್ಣರು ಹೀಗೆ ಮಾತನಾಡುತ್ತ ಕೂಡುವಷ್ಟರಲ್ಲಿ ತನ್ನ ಚತುರಂಗ ಬಲದ ಸೇನಾಸನ್ನಾಹದೊಂದಿಗೆ ಜರಾಸಂಧನು ಆ ಗೋಮಂತಗಿರಿಯ ಪಾದ ಮೂಲಕ್ಕೆ ಬಂದನು.

ಜರಾಸಂಧನೇ ಮೊದಲಾದ ದುಷ್ಟರಾಜರು ರಾಮಕೃಷ್ಣರು ಏರಿಹತ್ತಿ ಕುಳಿತ ಗೋಮಂತ ಪರ್ವತಕ್ಕೆ ಬೆಂಕಿಹಚ್ಚುವ ಯೋಚನೆಯನ್ನು ಮಾಡಿದರು. ಈ ವಿಚಾರ ಎಲ್ಲರಿಗೂ ಒಪ್ಪಿಸಿಯಾಯಿತು. ತಕ್ಷಣ ಆ ರಾಜ ಸೈನಿಕರು ಅಡವಿ ಅಡವಿ ತಿರುಗಾಡಿ ಹುಲ್ಲು ಕಟ್ಟಿಗೆ ಬಿದಿರು ಪೊದೆ ಗಿಡ ಟೊಂಗೆ ಮೊದಲಾದ ಒಣ ಉರುವಲನ್ನು ರಾಶಿ ರಾಶಿಯಾಗಿ ತಂದು ಆ ಪರ್ವತದ ಸುತ್ತಲೂ ಒಟ್ಟಿ ಕೊಳ್ಳಿಕೊಟ್ಟರು.

ಬೆಟ್ಟದ ಗಾಳಿಗೆ ಉರಿ ಹಬ್ಬಿ ಬೇಗೆ ಬೇಗಬೇಗ ಎಲ್ಲೆಡೆಗೆ ವ್ಯಾಪಿಸಹತ್ತಿತು. ಸ್ವಲ್ಪ ಸಮಯದಲ್ಲಿಯೇ ಬೆಂಕಿಯ ಜ್ವಾಲೆಗಳು ತಮ್ಮ ಕೆನ್ನಾಲಿಗೆಗಳನ್ನು ಚಾಚಿ ಹೊಗೆಗಾಳಿ

ಮುಗಿಲು ಮುಚ್ಚಿ ಲಕ್ಷಾವಧಿ ವೃಕ್ಷಗಳನ್ನು ಕಬಳಿಸಹತ್ತಿದವು. ಪರ್ವತದಲ್ಲಿಯ ಹೆಬ್ಬಂಡೆಗಳು ಕಾದು ವಿವಿಧ ಧಾತುಗಳು ಕರಗಿ ಬಿಸಿರಸವು ಲಾವಾರಸದಂತೆ ಸೋರಿ ಸುರಿಯಹತ್ತಿತು. ವನದಲ್ಲಿಯ ಮೃಗ ಪಕ್ಷಿ ಕ್ರೂರ ಶ್ವಾಪದಗಳು ಕೆಟ್ಟದನಿಯಿಂದ ಚೀರಿ ಕಾಡ್ಗಿಚ್ಚಿಗೆ ಆಹುತಿಯಾಗಹತ್ತಿದವು. ಬಂಡೆಗಲ್ಲುಗಳು ಕಾದು ಸಿಡಿಯಹತ್ತಿದವು. ಹಾವುಗಳು ಮೈಸುಟ್ಟು ಕರಗಿ ಹೋದವು. ಹುಲಿ ಸಿಂಹ ಚಿರತೆಗಳು ಎತ್ತ ಹೋದರೂ ಉರಿ ಹತ್ತಿ ಚೀರಿ ಮೇಲೆ ಮುಗಿಲಿಗೆ ಜಗಿದು ಕೊನೆಗೆ ಕಿಚ್ಚಿನಲ್ಲಿಯೇ ಬಿದ್ದವು. ಹಕ್ಕಿಪಕ್ಕಿಗಳು ಹಾರಿ ಗಗನಕ್ಕೆ ಏರಿಹೋಗಿದ್ದರೂ ಕಾಡ್ಗಿಚ್ಚಿನ ಜ್ವಾಲೆಗಳ ಝಳ ತಾಕಿ ಪಕ್ಕ ಸುಟ್ಟು ದಳ್ಳುರಿಯಲ್ಲಿ ಬಿದ್ದು ಬೂದಿಯಾಗುತ್ತಿದ್ದವು. ಆ ಉರಿಯ ತೆರೆಯಮೇಲೆ ಬೀಸಿ ಬರುವ ಗಾಳಿಯು ಸುತ್ತುಮುತ್ತಲೂ ಕಿಡಿ ಹುಡಿಗಳನ್ನು ತೂರಿ ಕಂಡದ ಮಳೆಯನ್ನೇ ಕರೆಯುತ್ತಲಿತ್ತು. ಮುಗಿಲು ತುಂಬ ಹೊಗೆ ತುಂಬಿ ಕರಿಮೋಡ ಪಡೆಯಂತೆ ಕಾಣುತ್ತಿತ್ತು.

ಉರಿಹಚ್ಚಿದ ಸೈನಿಕರೆಲ್ಲರೂ ಅದರ ಝಳದ ಬೇಗೆಯನ್ನು ತಾಳಲಾರದೆ ಆರು ಮೈಲು ದೂರ ಸರಿದು ನಿಂತರು. ಆಗ ರಾಮಕೃಷ್ಣರಿಬ್ಬರೂ ಕೆಳಗೆ ಹಾರಿ ಆ ರಾಜರನ್ನು ದಂಡಿಸಬೇಕು ಎಂದು ನಿರ್ಧರಿಸಿದರು. ಅದರಂತೆ ರಾಮನು ಆ ಪರ್ವತದ ಅತ್ಯಂತ ಎತ್ತರವಾದ ಶಿಖರವೊಂದನ್ನು ಏರಿ ಅಲ್ಲಿಂದಲೇ ಒಮ್ಮೆಲೇ ಕೆಳಗೆ ನಿಂತ ರಾಜರ ನಟ್ಟ ನಡುವೆ ಹಾರಿಕೊಂಡು ಬಿಟ್ಟನು. ಕಾದಂಬರೀ ಪಾನದಿಂದ ಮಧು ಮತ್ತನಾದ ಆ ಬಲರಾಮನು ಅಲ್ಲಿಂದ ಜಗಿದಾಗ ಮೇರು ಶೃಂಗದಿಂದ ಚಂದ್ರನು ಹಾರಿಕೊಂಡಂತೆ ಕಾಣಿಸಿತು.

ಅಣ್ಣನು ಗೋಮಂತದಿಂದ ಕೆಳಗೆ ಜಗಿದದ್ದನ್ನು ಕಂಡು ಕೃಷ್ಣನು ತಾನಾದರೂ ಆ ಗೋಮಂತಪರ್ವತದ ಉತ್ತುಂಗವಾದ ಶಿಖರವೊಂದನ್ನು ಹತ್ತಿಹಾರಬೇಕೆಂದು ಉಟಾಣಕಿಯನ್ನೀಯುವಾಗ ಕಾಲಿನಿಂದ ಗಿರಿಯನ್ನು ಒತ್ತಿದನು. ಅದರಿಂದ ಆ ಪರ್ವತವು ಭೂಗರ್ಭದಲ್ಲಿಯ ನೀರಿನಲ್ಲಿಳಿದು ಅಲ್ಲಿಂದ ನೀರು ಚಿಮ್ಮಿ, ಉರಿಯುವ ಹೆಬ್ಬಂಡೆ ಕಲ್ಲುಗಳೆಲ್ಲ ನೀರಿನಲ್ಲಿ ನಿಂತವು. ಅದರಿಂದ ಒಂದು ಕ್ಷಣದಲ್ಲಿ ಪ್ರಳಯ ಮೇಘಗಳಿಂದ ನೀರು ಸುರಿಸಿದಂತೆ ಉರಿಯೆಲ್ಲ ಆರಿ ಶಾಂತವಾಗಿ ಹೋಯಿತು.

ಆಗ ಶ್ರೀವತ್ಸದಿಂದ ಶೋಭಿಸುವ, ಪೀತಾಂಬರ ಧಾರಿಯಾದ ಆ ಶ್ರೀಕೃಷ್ಣನು ಅಲ್ಲಿಂದ ಹಾರಿಕೊಂಡು ರಾಜರ ಮಧ್ಯದಲ್ಲಿ ಜಗಿದನು. ಅವರಿಬ್ಬರೂ ಪಾದದಿಂದ ಗಿರಿಯನ್ನು ಒತ್ತಿ ಜಗಿದದ್ದರಿಂದ ಆ ಪರ್ವತದಿಂದ ಒಮ್ಮೆಲೇ ಸಾವಿರಾರು ನೀರಿನ ಕಾರಂಜಿಗಳು ಪುಟಿಯ ಹತ್ತಿದವು. ಆ ನೀರಿನ ಊಟೆಗಳನ್ನು ಕಂಡು ರಾಜರೆಲ್ಲರೂ ಗಾಬರಿಗಾಗಿ ನಿಂತರು.

ಹೀಗೆ ರಾಮಕೃಷ್ಣರಿಬ್ಬರೂ ಮೇಲಿನಿಂದ ಜಗಿದು ತಮ್ಮ ನಡುವೆ ಬಂದು ನಿಂತದ್ದನ್ನು ಕಂಡು ಆ ರಾಜರೂ ರಾಜಸೈನಿಕರೂ ಅತ್ಯಂತ ಕ್ಷುಬ್ಧಕ್ರುದ್ಧರಾಗಿ ಅವರ ಮೇಲೆ ಏರಿ ಹೋದರು. ಆಗ ಆ ಕೇಶವ ಸಂಕರ್ಷಣರಾದರೂ ಸಾಗರದ ನೀರವಿಸ್ತಾರದಲ್ಲಿ ಮೊಸಳೆಗಳು ನಿರ್ಭಯವಾಗಿ ಹೋಗುವಂತೆ ಆ ರಾಜ ಸೇನಾ ಸಾಗರವನ್ನು ಹೊಕ್ಕರು. ತಮ್ಮ ತಮ್ಮ ವೀರ ವಿಕ್ರಮದಿಂದ ವೈರಿ ಸೇನಾವ್ಯೂಹವನ್ನೇ ತರಿದೊಗೆಯಹತ್ತಿದರು. ಆಗ ನಿರಾಯುಧರಾದ ಆ ರಾಮಕೃಷ್ಣರಿಗೆ ತಮ್ಮ ಆಯುಧಗಳು ಬೇಕೆನ್ನಿಸಿನೆನಿಸಿದರು. ತಕ್ಷಣದಲ್ಲಿ ಸಾಂವರ್ತಕ ಎಂಬಹಲ (ನೇಗಿಲು) ಮತ್ತು ಸೌನಂದ ಎಂಬ ಮುಸಲ (ಒನಕೆ)ವೂ ಮತ್ತು ಸುದರ್ಶನ ಎಂಬ ಚಕ್ರ ಹಾಗೂ ಕೌಮೋದಕಿ ಎಂಬ ಗದೆ ಹೀಗೆ ನಾಲ್ಕು ಆಯುಧಗಳು ಅಂತರಿಕ್ಷದಿಂದ ಇಳಿದು ಬಂದವು. ಮೊದಲು ಬಲರಾಮನು ಆ ಶತ್ರು ಭಯಂಕರವಾದ ತನ್ನ ಹಲ

ಮುಸಲಗಳನ್ನು ಕೈಯಲ್ಲಿ ತೆಗೆದುಕೊಂಡನು. ಆಮೇಲೆ ಶ್ರೀಹರಿಯು ತನ್ನ ಸುದರ್ಶನ ಚಕ್ರ ಮತ್ತು ಕೌಮೋದಕಿ ಗದೆಗಳನ್ನು ಸ್ವೀಕರಿಸಿ ವೈರಿ ಭಯಂಕರನಾಗಿ ನಿಂತನು.

ಹಿಂದೆ ಮಥುರಾಪಟ್ಟಣದ ಮೇಲೆ ಈ ರಾಜಕುಲವೆಲ್ಲ ಏರಿಬಂದಾಗ ಕಾದಿದಂತೆ ಇಬ್ಬರೂ ಘೋರವಾಗಿ ಕಾದಿ ರಿಪುಗಣದಲ್ಲಿ ಕೊಲಾಹಲವನ್ನೆಬ್ಬಿಸಿದರು. ಅಂದಿನಂತೆ ಈಗಲಾದರೂ ಬಲರಾಮನು ತನ್ನ ನೇಗಿಲದಂತಿರುವ ಹಲಾಯುಧವನ್ನು ಚಾಚಿ ಶತ್ರು ರಾಜರ ರಥ ಕುದುರೆ ಆನೆಗಳನ್ನೆಲ್ಲ ಸರ್‍ರನೆ ಎಳೆದು ಒಂದು ಕಡೆ ರಾಶಿಯಾಗಿ ಒಟ್ಟಿ ಮೇಲೆ ಒನಕೆಯಿಂದ ಥಳಿಸಹತ್ತಿದನು. ಇದರಿಂದ ರಾಜವರ್ಗದ ನೂರಾರು ರಥಗಳು ಒಮ್ಮಿಂದೊಮ್ಮೆಲೆ ಪುಡಿ ಪುಡಿಯಾಗಿ ಬೀಳತೊಡಗಿದವು. ಆನೆಗಳ ಹಿಂಡಿಗೆ ಹಿಂಡೇ ಬಲರಾಮನ ಒನಿಕೆಯ ಪೆಟ್ಟಿಗೆ ಗುರಿಯಾಗಿ ಒದರಹತ್ತಿದವು. ಸಾಲು ಸಾಲಾಗಿ ಕುದುರೆಗಳು ಕೈಕಾಲು ಮುರಿದು ಛಿನ್ನ ವಿಚ್ಛಿನ್ನವಾದವು. ಒಂದು ಪೆಟ್ಟಿಗೆ ಸಾವಿರಾರು ಸೈನಿಕರು ಬಿದ್ದು ಜಜ್ಜಿ ಹೋಗುತ್ತಲಿದ್ದರು.

ಆದರಿಂದ ಬದುಕಿ ಉಳಿದವರನ್ನು ಸಿಡಿಯುವ ಜ್ವಾಲೆಯ ಮಾಲೆಗಳಿಂದ ಬೆಂಕಿಯ ವಂಕಿಗಳನ್ನು ನಿರ್ಮಿಸುತ್ತ ಬರುವ ಸುದರ್ಶನವು ಕತ್ತರಿಸಿ ಕೊಂದು ಬಗೆಯುತ್ತಿತ್ತು. ಕೌಮೋದಕಿಗದೆಯಂತೂ ಯಮದಂಡದಂತೆ ಸನಿಹದಲ್ಲಿ ಬಂದವರನ್ನು ತಕ್ಷಣದಲ್ಲಿ ಕೊಂದುಬಿಡುತ್ತಲಿತ್ತು. ಹೀಗೆ ಗದಾ ಲಾಂಗಲ, ಚಕ್ರ, ಮುಸಲಗಳಿಂದ ತಿರು ತಿರುವಿ ಹೊಡೆಯಲ್ಪಟ್ಟ ರಾಜಸೇನೆಯು ಬಿರು ಗಾಳಿಗೊಡ್ಡಿದ ಮೇಘ ಪಟಲದಂತೆ ಒಡೆದು ಸಿಡಿದು ಹೋಯಿತು. ಈ ಚಕ್ರ ಲಾಂಗಲಗಳು ನಡೆಯಿಸಿದ ಮೃತ್ಯು ಕೋಲಾಹಲದಲ್ಲಿ ಕೈಕಾಲು ಕಳೆದುಕೊಂಡು ವಿಕಲರಾದವರಿಗೆ ಲೆಕ್ಕವಿಲ್ಲ. ರಕ್ತರಂಜಿತವಾದ ಭೂಮಿಯು ನೆತ್ತರ ಮೆತ್ತಿದ ಮಾರಿಯಂತೆ ತೋರುತ್ತಿತ್ತು. ನರಿಗಳು ಅಮಂಗಳವಾಗಿ ಒದರುತ್ತಿದ್ದವು. ತಲೆಬುರುಡೆ ಎಲವು ಮಾಂಸ ಮಜ್ಜೆ ಹೆಣಗಳ ರಾಶಿಗಳು ಭೂಮಿಯನ್ನೆಲ್ಲ ತುಂಬಿಬಿಟ್ಟವು. ಯುದ್ಧ ಭೂಮಿಯ ಇಂಥ ರುದ್ರಭೀಷಣ ವಿನ್ಯಾಸದಲ್ಲಿ ಸಾಕ್ಷಾತ್ ಕಾಲಭೈರವನಂತೆ ರಕ್ಕಸರನ್ನು ಹುಡುಕುತ್ತ ಕೌಮೋದಕಿಯನ್ನು ಬೀಸುತ್ತ ಸುದರ್ಶನವನ್ನು ತಿರುವುತ್ತ ಕೃಷ್ಣನು ಸಂಚರಿಸುತ್ತಿದ್ದನು.

ಆದರಿಂದ ಎಲ್ಲ ರಾಜ ಮಹಾರಾಜರಾದರೂ ಹುಲಿ ಮೂಸಿದ ಚಿಗರೆಯಂತೆ ಹೆದರಿ ಓಡಿಹೋದರು. ಬಳಿಕ ಅವರು ನಡೆದು ಕರವೀರಪುರಕ್ಕೆ ಬಂದು ಮುಟ್ಟಿದರು.

ಆ ಕರವೀರಪುರ ರಾಜನಾದ ಶೃಗಾಲನು ತನ್ನ ಊರಿಗೆ ರಾಮಕೃಷ್ಣರು ಬಂದ ಸಮಾಚಾರವನ್ನು ಕೇಳಿ ಅವರು ತನ್ನ ಪಟ್ಟಣವನ್ನು ಆಕ್ರಮಿಸಬೇಕೆಂದೇ ಬಂದಿರುವರು ಎಂದು ತಿಳಿದು ಯುದ್ಧಮದಾಂಧನಾದ ಅವನು ಅವರ ಮೇಲೆ ಒಮ್ಮೆಲೇ ಏರಿ ಬಂದನು. ಚಪಲನಾದ ಶೃಗಾಲ ವಾಸುದೇವನು ಸಿಟ್ಟಿನಿಂದ ಸಿಡಿಲಿನಂತೆ ಸಿಡಿಯುತ್ತ ಭೀಕರವಾದ ಬಾಣಗಳನ್ನು ಸುರಿಸಿದನು. ಮತ್ತು ಅದಲ್ಲದೆ ಮುಸಲ ಮೊದಲಾದ ಬೇರೆ ಬೇರೆ ಆಯುಧಗಳನ್ನು ಬೀಸಿ ಒಗೆದನು. ಶೃಗಾಲನು ಬಿಟ್ಟ ಘೋರ ಶಸ್ತ್ರಾಸ್ತ್ರಗಳ ರಾಶಿ ರಾಶಿ ಬಂದು ಬಡಿದರೂ ನಿರ್ವಿಕಾರವಾದ ಬೆಟ್ಟದಂತೆ ಕೃಷ್ಣನು ಗಟ್ಟಿಯಾಗಿ ನಿಂತಿದ್ದನು.

ಕೊನೆಗೆ ಅವನ ಪ್ರಹಾರದಿಂದ ಕಿಂಚಿದ್ ಕುಪಿತನಾದಂತಾಗಿ ಕೃಷ್ಣನು ಮೆಲ್ಲನೆ ತನ್ನ ಚಕ್ರವನ್ನು ಎತ್ತಿ ರಥದಲ್ಲಿ ಕುಳಿತ ಶೃಗಾಲನ ಮೇಲೆ ಬಿಟ್ಟನು. ಅದು ವೇಗದಿಂದ ಬಂದು ರಥಾಂಗಣದಲ್ಲಿ ಕುಳಿತಲ್ಲಿಯೇ ಶೃಗಾಲನ ಕುತ್ತಿಗೆಯನ್ನು ಕತ್ತರಿಸಿ ಎದೆ ಸೀಳಿ ಕೊಂದೊಗೆದು ಬಂದು ಕೃಷ್ಣನ ಕೈಯನ್ನು ಅಲಂಕರಿಸಿತು. ತಮ್ಮ ರಾಜನು ಬಿದ್ದದ್ದನ್ನು

ಕಂಡಕೂಡಲೇ ಅವನ ಸೈನಿಕರೆಲ್ಲ ಕಾಲಿಗೆ ಬುದ್ಧಿಹೇಳಿದರು. ಕೇಲವರು ಊರಲ್ಲಿ ಓಡಿ ಹೋಗಿ ಅಡಗಿಕೊಂಡರು. ಹಲವರು ಅಲ್ಲಿಯೇ ಅಳುತ್ತ ಸತ್ತರಾ ಜನ ಹತ್ತಿರವೇ ಅವನ ಗುಣಗಳನ್ನು ನೆನೆಯುತ್ತ ಕಣ್ಣೀರು ಉದುರಿಸುತ್ತ ಕುಳಿತರು. ಆಗ ಕೃಷ್ಣನು ಬಿದ್ದದ್ದನ್ನು ಕಂಡಕೂಡಲೇ ಅವನ ಸೈನಿಕರೆಲ್ಲ ಕಾಲಿಗೆ ಬುದ್ಧಿ ಹೇಳಿದರು. ಕೇಲವರು ಊರಲ್ಲಿ ಓಡಿ ಹೋಗಿ ಅಡಗಿಕೊಂಡರು. ಹಲವರು ಅಲ್ಲಿಯೇ ಅಳುತ್ತ ಸತ್ತರಾಜನ ಹತ್ತಿರವೇ ಅವನ ಗುಣಗಳನ್ನು ನೆನೆಯುತ್ತ ಕಣ್ಣೀರು ಉದುರಿಸುತ್ತ ಕುಳಿತರು.

ಆಗ ಕೃಷ್ಣನು ತನ್ನ ಚಕ್ರಾಂಕಿತವಾದ ಕರವನ್ನು ಮೇಲಕ್ಕೆ ಎತ್ತಿ ಜನರಿಗೆಲ್ಲ ಅಭಯ ವನ್ನೀಯುತ್ತ ''ಅಂಜಬೇಡಿರಿ, ಹೆದರಬೇಡಿರಿ, ನಾನು ಯಾರನ್ನೂ ಹೊಡೆಯುವದಿಲ್ಲ. ಶೃಗಾಲನತಪ್ಪಿಗಾಗಿ ಅವನ ಪ್ರಜೆಗಳಿಗೆ ನಾನು ಶಾಸನ ಮಾಡುವುದಿಲ್ಲ. ನೀವು ನಿಶ್ಚಿಂತರಾಗಿ ಇರಿ'' ಎಂದು ಅಶ್ವಾಸನೆ ಕೊಟ್ಟನು.

ಆಗ ಆ ಶೃಂಗಾಲನ ಅಂತಃಪುರದ ಸ್ತ್ರೀಯರು ತಮ್ಮ ಪತಿಯ ಆಕಸ್ಮಿಕವಾದ ನಿಧನದಿಂದ ಸಿಡಿಲು ಬಡಿದಂತಾಗಿ ಆರ್ತ ಧ್ವನಿಯಿಂದ ಅವನ ಶವದ ಮೇಲೆ ಬಿದ್ದು ಹೊರಳಾಡಿ ಅಳಹತ್ತಿದರು. ಪೌರ ನರನಾರಿಯರೂ ಅವರೊಟ್ಟಿಗೆ ದೀನರಾಗಿ ತಮ್ಮ ರಾಜನ ಅಕಾಲಿಕ ಮರಣದಿಂದ ದುಃಖ ಸಂತಪ್ತರಾಗಿ ಶೋಕಿಸಿದರು. ರಾಜನ ಪಟ್ಟಮಹಿಷಿಯಾದ ಪದ್ಮಾವತಿ ಮಹಾರಾಣಿಯು ತನ್ನ ಮಗನಾದ ಶಕ್ರದೇವ ಎಂಬ ಹುಡುಗನನ್ನು ತಂದು ಕೃಷ್ಣನ ಪಾದದ ಮೇಲೆ ಹಾಕಿ ''ಸ್ವಾಮಿನ್! ಸಂಕಟ ಗ್ರಸ್ತನಾದ ಈ ನಿನ್ನ ಬಂಧುಪುತ್ರನನ್ನು ನಿನ್ನ ಪಾದದ ಮೇಲೆ ಹಾಕಿದ್ದೇನೆ. ಇಂದಿನಿಂದ ನೀನೇ ಅವನಿಗೆ ತಂದೆ ಅನನ್ನು ರಕ್ಷಿಸಬೇಕು'' ಎಂದು ಅಳುತ್ತ ಕೇಳಿ ಕೊಂಡಳು.

ಆಗ ಕರುಣಾಶಾಲಿಯಾದ ಶ್ರೀಕೃಷ್ಣನು ''ರಾಜಪತ್ನಿ! ಶೃಗಾಲನ ಮೇಲಿನ ನನ್ನ ರೋಷವು ಅವನ ಜೊತೆಗೇ ಹೋಯಿತು. ನಿನ್ನ ಕರುಣಾಜನಕವಾದ ಮಾತುಗಳಿಂದ ನನ್ನ ರೋಷ ದ್ವೇಷಗಳೆಲ್ಲ ತೊಳೆದು ಹೋಗಿದೆ. ನೀನು ಹೇಳಿದಂತೆ ಈ ಶಕ್ರದೇವನು ನನ್ನ ಮಗು, ನೀನು ಏನೂ ಚಿಂತಿಸುವ ಕಾರಣವಲ್ಲ. ಇವನಿಗೆ ಅಭಯವಿತ್ತು ಅಭಿಷೇಕ ಮಾಡಿ ತಂದೆಯ ಸಿಂಹಾಸನದಲ್ಲಿ ಇವನನ್ನು ಕುಳ್ಳಿರಿಸಿಯೇ ನಾನು ಹೋಗುವೆ'' ಎಂದು ಹೇಳಿ ಮಂತ್ರ ಪುರೋಹಿತರಿಗೆ ಹೇಳಿ ಕಳಿಸಿದನು.

ಆಗ ಮಂತ್ರಿ ಸೇನಾಪತಿ ಪ್ರಜಾಪರಾರದವರೆಲ್ಲರೂ ಸಂತೋಷ ಸಂಭ್ರಮದಿಂದ ಬಂದು ಕೃಷ್ಣನ ಅಣತಿಯಂತೆ ಆ ಪಟ್ಟಾಭಿಷೇಕಕ್ಕಾಗಿ ಎಲ್ಲವನ್ನೂ ಅಣಿಗೊಳಿಸಿದರು. ಕೃಷ್ಣನು ಅವರೆಲ್ಲರಿಂದ ಕೂಡಿಕೊಂಡು ಶೃಗಾಲ ಕುಮಾರನಾದ ಶಕ್ರದೇವನನ್ನು ಕರವೀರಪುರದ ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕ ಮಾಡಿದನು. ಅದರಿಂದ ರಾಣಿ ಹಾಗೂ ಪೌರ ಪ್ರಜಾ ಪ್ರಕೃತಿ ಪುರೋಹಿತ ಪ್ರಭೃತಿ ಸರ್ವಜನರಿಗೂ ಪರಮಾನಂದವಾಯಿತು.

ಆ ಬಳಿಕ ಕೃಷ್ಣನು ಅಂದೇ ಅಲ್ಲಿಂದ ಹೊರಟನು. ಅತ್ತ ಶಕ್ರದೇವನು ಪಟ್ಟಾಭಿಷೇಕನಾಗಿ ತನ್ನ ತಾಯಿ ಮೊದಲಾದ ಪರಿವಾರ ವರ್ಗದಿಂದ ಕೂಡಿಕೊಂಡು ತನ್ನ ತಂದೆಯಾದ ಶೃಗಾಲನಿಗೆ ಔರ್ಧ್ವದೇಹಿಕ ಸಂಸ್ಕಾರಗಳನ್ನೆಲ್ಲ ವಿಧಿಪೂರ್ವಕವಾಗಿ ಮಾಡಿ ನೀರು ಕೊಟ್ಟು ರಾಜಧಾನಿಗೆ ಮರಳಿದರು.

ಇತ್ತ ರಾಮಕೃಷ್ಣರು ಒಂದೇ ಸಮನೆ ಐದು ಹಗಲು ಐದು ರಾತ್ರಿ ಪ್ರಯಾಣ ಮಾಡಿ ಮಥುರಾಪಟ್ಟಣಕ್ಕೆ ಬಂದು ಮುಟ್ಟಿದರು. ರಾಮಕೃಷ್ಣರು ಊರಿಗೆ ಸುಖರೂಪವಾಗಿ

ಬಂದದ್ದನ್ನು ಕಂಡು ಇಡೀ ಮಥುರಾಪಟ್ಟಣವೇ ಆನಂದದಿಂದ ಕುಣಿಯಿತು. ತಳಿರು ತೋರಣಗಳಿಂದ ಹಾದಿ ಬೀದಿ ಮನೆಮಾರುಗಳನ್ನೆಲ್ಲ ಅಲಂಕರಿಸಿ ಊದುತ್ತ ಬಾರಿಸುತ್ತ ಮೆರವಣಿಗೆಯೊಂದಿಗೆ ಅವರನ್ನು ನಗರದಲ್ಲಿ ಕರೆದುಕೊಂಡು ಬಂದರು. ಜನರೆಲ್ಲ ಶ್ರೀಕೃಷ್ಣ ಮಹಿಮೆಯನ್ನು ಹಾಡಿಪಾಡಿ ಕುಣಿದು ನಲಿದು ನರ್ತಿಸಿದರು. ಬಳಿಕ ರಾಮಕೃಷ್ಣರು ವಸುದೇವ ದೇವಕಿಯರ ಪಾದಗಳಿಗೆ ಎರಗಿ ಭಕ್ತಿಯಿಂದ ವಂದಿಸಿದರು. ಉಗ್ರಸೇನ ಮೊದಲಾದ ಹಿರಿಯ[illegible] ಸತ್ಕರಿಸಿ ಎಲ್ಲರಿಗೂ ಗೌರವಿಸಿ ಸುಖದಿಂದ ಇರಹತ್ತಿದರು.

ಹೀಗೆ ರಾಮಕೃಷ್ಣನು ಮಥುರೆಯಲ್ಲಿ ಸುಖದಿಂದ ಇರುತ್ತಿರಲಾಗಿ ಒಂದು ದಿನ ದೇಶ ವಿದೇಶಗಳ ಸುದ್ದಿ ಸಮಾಚಾರಗಳನ್ನೆಲ್ಲ ತಿಳಿದುಕೊಂಡು ಬಂದ ವಾರ್ತಾವಾಹಕರು- ''ಜನಾರ್ದನ! ಭೀಷ್ಮಕರಾಜನಿಗೆ ರುಕ್ಮಿಣಿ ಎಂಬ ತ್ರಿಭುವನ ಸುಂದರಿಯಾದ ಓರ್ವ ಮಗಳಿದ್ದು ಇಂದಿಗೆ ಮೂರನೆಯದಿನ ಅವಳ ಸ್ವಯಂವರವಾಗಲಿರುವುದು. ಅದಕ್ಕಾಗಿ ಭೂಮಂಡಲದಲ್ಲಿಯು ರಾಜ ಮಹಾರಾಜರೆಲ್ಲರೂ ತಮ್ಮ ತಮ್ಮ ಸೇನಾಪರಿವಾರದೊಂದಿಗೆ ಭೋಜಕುಮಾರನ ಆಮಂತ್ರಣದ ಮೇರೆಗೆ ಕುಂಡಿನಪುರಕ್ಕೆ ಬಂದಿದ್ದಾರೆ'' ಎಂದು ತಿಳಿಸಿದರು.

ಇದನ್ನು ಕೇಳಿ ಗರುಡಾರೂಢನಾಗಿ ಗೋವಿಂದನು ವಿದರ್ಭನಗರಿಗೆ ಬಂದು ಕೈಶಿಕನ ಅತಿಥ್ಯದಲ್ಲಿ ಉಳಿದುಕೊಂಡನು. ಆಗ ಜರಾಸಂಧಾದಿಗಳು ಅವನು ಈ ಸ್ವಯಂವರದಿಂದ ತಾನಾಗಿ ತಿರುಗಿ ಹೋಗಬೇಕೆಂದು ಒಂದು ಯುಕ್ತಿಯನ್ನು ಮಾಡಿದರು. ''ಸ್ವಯಂವರಕ್ಕಾಗಿ ಕೂಡಿದ ರಾಜರ ಸಭೆಗೆ ಕೃಷ್ಣನು ಬಂದಾಗ ಅಲ್ಲಿ ಆ ಸ್ವಯಂವರ ಮಂಟಪದಲ್ಲಿ ರಾಜರಿಗಾಗಿ ಮಾತ್ರ ಸಿಂಹಾಸನಗಳನ್ನು ಹಾಕಿಸಬೇಕು. ಕೃಷ್ಣನಂತೂ ರಾಜನಲ್ಲ. ಅವನಿಗೆ ಎಂದೂ ಯಾವರಾಜ್ಯದಲ್ಲಿಯೂ ಸಿಂಹಾಸನದ ಅಭಿಷೇಕವಾಗಿಲ್ಲ. ರಾಜಾಸನದಲ್ಲಿ ಕೂಡಲು ಅವನಿಗೆ ಅಧಿಕಾರವೇ ಇಲ್ಲ. (ಮಥುರೆಗೆ ಉಗ್ರಸೇನನೇ ಪಟ್ಟಾಭಿಷಿಕ್ತರಾಜ) ಆದ್ದರಿಂದ ಅವನು ಸಿಂಹಾಸನದ ಮೇಲೆ ರಾಜಸಭೆಯಲ್ಲಿ ಕೂಡಲು ಅರ್ಹನಲ್ಲವೆಂದು ಸಾರಿ ರಾಜರಾದವರೆಲ್ಲರೂ ತಮ್ಮ ತಮ್ಮ ಸಿಂಹಾಸನಗಳ ಮೇಲೆ ಬಂದು ಕುಳಿತುಕೊಂಡು ಬಿಡಲಿ. ಅದನ್ನು ನೋಡಿ ಮಹಾಸ್ವಾಭಿಮಾನಿಯಾದ ಕೃಷ್ಣನು ಆ ಸಭೆಗೆ ಕನ್ಯಾರ್ಥವಾಗಿ ಬರುವುದೇ ಇಲ್ಲ. ಎಲ್ಲ ರಾಜರೂ ತಮ್ಮ ತಮ್ಮ ಸಿಂಹಾಸನಗಳ ಮೇಲೆ ಕುಳಿತಬಳಿಕ ತೀರ ಸಾಮಾನ್ಯ ಜನರಂತೆ ಪ್ರೇಕ್ಷಕರ ಸ್ಥಳದಲ್ಲಿ ತೇಜಸ್ವಿ ಪುರುಷನಾದ ಅವನು ಎಂದಿಗೂ ಕೂಡಲಾರ. ಇಂಥ ಅವಮಾನವಾಗತಕ್ಕ ಸ್ಥಳಕ್ಕೆ ಬಾರದೇ ಅವನು ತಾನಾಗಿಯೇ ಮರಳಿ ಮಥುರೆಗೆ ತೆರಳುವನು.'' ಎಂದು.

ಇದನ್ನು ಕೇಳಿ ತಿಳಿದ ಭೀಷ್ಮಕ ರಾಜನ ತಂದೆಯಾದ ಕೈಶಿಕ ಹಾಗೂ ಅವನ ಸೋದರ ಕ್ರಥ ಇಬ್ಬರಿಗೂ ಬಹಳ ಮನೋವ್ಯಥೆಯಾಯಿತು. ಅದರಿಂದ ನೊಂದುಕೊಂಡು ಆ ಇಬ್ಬರು ರಾಜರೂ ಕೂಡಿ ಆಲೋಚನೆಯನ್ನು ಮಾಡಿ ತಮ್ಮ ಅತಿಥಿಯಾಗಿ ಬಂದ ದೇವದೇವೋತ್ತಮನಾದ ಕೃಷ್ಣನಿಗೆ ಸ್ವಲ್ಪವಾದರೂ ಅವಮಾನವಾಗಗೊಡಬಾರದೆಂದು ಸಂಕಲ್ಪಿಸಿದರು. ಅದಕ್ಕಾಗಿ ಅವರೂ ಒಂದು ಹಂಚಿಕೆಯನ್ನು ಮಾಡಿದರು. ''ಇನ್ನು ನಮ್ಮ ಜನ್ಮದಲ್ಲಿ ಕೃಷ್ಣನಂಥ ಸತ್ಪಾತ್ರವು ನಮಗೆ ಎಂದಿಗೂ ಸಿಗಲು ಸಾಧ್ಯವೇ ಇಲ್ಲ. ಮನೆಗೆ ಬಂದ ಆ ಭಗವಂತನಿಗೆ ನಾವು ಏನು ಕೊಟ್ಟರೂ ಕಡಿಮೆಯೇ. ಆದುದರಿಂದ ನಾವಿಬ್ಬರೂ ಕೃಷ್ಣನಿಗೆ ನಮ್ಮ ನಮ್ಮ ಪಾಲಿನ ರಾಜ್ಯವನ್ನು ಕೊಟ್ಟು ಇಂದೇ ಅವನನ್ನು ನಮ್ಮ ಸಿಂಹಾಸನದಲ್ಲಿ ಕೂಡಿಸಿ

ಅಭಿಷೇಕ ಮಾಡಿ ಬಿಡುವ. ಆದರಿಂದ ಕೃಷ್ಣನು ರಾಜನಾಗಿ ಸ್ವಯಂವರ ಮಂಟಪದಲ್ಲಿ ರಾಜರ ಸಿಂಹಾಸನದಲ್ಲಿ ಅವನನ್ನು ಒಯ್ದು ಕೂಡಿಸಲು ಯಾವ ಅಭ್ಯಂತರವೂ ಬರಲಾರದು'' ಎಂದು. ಹೀಗೆ ಅವರಿಬ್ಬರೂ ನಿರ್ಧರಿಸಿ ಗೋವಿಂದನ ಹತ್ತಿರ ಬಂದು ಭಕ್ತಿಯಿಂದ ಅವನ ಚರಣಾರವಿಂದಗಳಿಂದ ವಂದಿಸಿ ''ಭಗವನ್! ಇಂದು ನಮ್ಮ ಜನ್ಮ ಸಫಲ. ಬದುಕು ಸಾರ್ಥಕ. ಪಿತೃಗಳು ಇಂದು ತೃಪ್ತರಾದರು. ನೀವು ನಮ್ಮ ಮನೆಗೆ ಬಂದುದು ನಮ್ಮ ಉದ್ಧಾರಕ್ಕಾಗಿಯೇ. ಉಪೇಂದ್ರ! ದೇವೇಂದ್ರನು ನಿನಗೆ ಅಭಿಷೇಕಮಾಡಿ ಪುನೀತನಾಗಿದ್ದಾನೆ. ಇಂದು ನಾವು ನಮ್ಮ ಶ್ವೇತಛತ್ರ, ಸುವರ್ಣಚಾಮರ, ರತ್ನಸಿಂಹಾಸನ, ಸಮಗ್ರ ರಾಜ್ಯ, ಸಕಲ ಸೈನ್ಯ, ಮತ್ತು ಈ ನಮ್ಮ ಪಟ್ಟಣ ಇಷ್ಟೆಲ್ಲವನ್ನೂ ನಿನ್ನ ಅಡಿದಾವರೆಗಳಲ್ಲಿ ಅರ್ಪಿಸಿ ನಮ್ಮ ಸಾಮ್ರಾಜ್ಯ ಸಿಂಹಾಸನದಲ್ಲಿ ನಿನಗೆ ಪಟ್ಟಾಭಿಷೇಕ ಗೈಯಬೇಕೆಂದು ಮಾಡಿದ್ದೇವೆ. ನಾವಿಬ್ಬರೂ ಕೂಡಿ ಮಾಡಿದ ಯೋಜನೆಗೆ ಜರಾಸಂಧಾದಿ ಯಾವ ರಾಜರಿಗೂ ವಿರೋಧ ಮಾಡುವುದು ಸಾಧ್ಯವಿಲ್ಲ. ನೀನು ನಾವಿಬ್ಬರೂ ಕೊಡುವ ಈ ವಿಶಾಲವಾದ ಕ್ರಥಕೈಶಿಕರ ಸಮಗ್ರವಾದ ರಾಜ್ಯವನ್ನು ಸ್ವೀಕರಿಸಿ ನಾವು ಮಾಡುವ ನಿನ್ನ ಪಟ್ಟಾಭಿಷೇಕಕ್ಕೆ ಅನುಮತಿಯನ್ನು ಕೊಡು. ಅಂದರೆ ನಾಳಿನ ಸ್ವಯಂವರದ ರಾಜಸಭೆಯಲ್ಲಿ ಉಚ್ಚಸ್ಥಾನದಲ್ಲಿ ಮಹಾರಾಜ ಸಿಂಹಾಸನದಲ್ಲಿ ರಾಜೇಂದ್ರನಾಗಿ ಕುಳಿತುಕೊಳ್ಳಲಿಕ್ಕೆ ನಿನಗೆ ಅವಕಾಶವಾಗುವುದು'' ಎಂದು ಬೇಡಿಕೊಂಡರು.

ಅಷ್ಟರಲ್ಲಿ ಸ್ವರ್ಗದಿಂದ ಓರ್ವ ದೇವದೂತನು ಅದೃಶ್ಯರೂಪದಿಂದ ದಿವ್ಯವಾದ ನವರತ್ನಖಚಿತವಾದ, ಸಿಂಹಲಕ್ಷಣದಿಂದ ಕೂಡಿದ, ವಿಶ್ವಕರ್ಮ ನಿರ್ಮಿತವಾದ, ಒಂದು ಅತ್ಯುತ್ತಮ ಸುವರ್ಣಸಿಂಹಾಸನವನ್ನು ಹೊತ್ತುಕೊಂಡು ತಂದನು. ಅದನ್ನಿಳಿಸಿ ಆ ದೇವದೂತನು ಕ್ರಥಕೈಶಿಕರನ್ನು ಉದ್ದೇಶಿಸಿ ''ನೀವು ಕುಳಿತುಬಿಟ್ಟ ಸಿಂಹಾಸನದಲ್ಲಿ ದೇವದೇವನಾದ ಶ್ರೀಕೃಷ್ಣನು ಕೂಡುವುದು ಸರಿಯಲ್ಲ. ಅದಕ್ಕಾಗಿ ದೇವೇಂದ್ರನು ಈ ದಿವ್ಯವಾದ ವಿಮಾನವನ್ನು ನನ್ನ ಕೂಡ ಕಳಿಸಿಕೊಟ್ಟಿದ್ದಾನೆ. ಈ ಸ್ವರ್ಣಮಯ ಸಿಂಹಾಸನದಲ್ಲಿ ಚರಾಚರ ಪ್ರಪಂಚ ವಂದ್ಯನೂ ದೇವ ದೇವೋತ್ತಮನೂ ಆದ ಈ ಕೃಷ್ಣನನ್ನು ಕೂಡಿಸಿ ನೀವೆಲ್ಲ ರಾಜರೂ ಅಬಿಷೇಕ ಮಾಡಿರಿ. ಎಂದು ಇಂದ್ರನು ಹೇಳಿದ್ದಾನೆ. ಎಲ್ಲ ರಾಜರಿಗೂ ಈ ಸಂದೇಶವನ್ನು ಲೇಖ ಮುಖಾಂತರ ತಿಳಿಸಿರಿ'' ಎಂದು ಹೇಳಿ ಕುಬೇರನು ಕೃಷ್ಣಾಭಿಷೇಕಕ್ಕಾಗಿ ಕಳಿಸಿದ ಎಂಟು ರತ್ನ ಕಲಶಗಳನ್ನೂ ಆ ಇಂದ್ರನ ಲೇಖಾಂಶದ ಸಂದೇಶವನ್ನೂ ಕೊಟ್ಟು ಆ ದೇವದೂತನು ಸ್ವರ್ಗಕ್ಕೆ ಹೋದನು.

ಆ ಬಳಿಕ ಕ್ರಥಕೈಶಿಕರು ಕೃಷ್ಣನನ್ನು ಆ ದೇವ ಸಿಂಹಾಸನದ ಮೇಲೆ ಕೂಡಿಸಿ ಇಂದ್ರನ ಸಂದೇಶವನ್ನೂ ಬರೆದ ಆ ಪತ್ರವನ್ನೂ ತೆಗೆದುಕೊಂಡು ರಾಜಸಭೆಗೆ ಬಂದು ಅವನೇ ಅವರಿಗೆಲ್ಲ ತಿಳಿಯುವಂತೆ ಓದಿಹೇಳಿ ''ರಾಜೋತ್ತಮರೇ! ಈ ಇಂದ್ರನ ಸಂದೇಶವು ದುರ್ಲಂಘ್ಯವಿದೆ. ಮತ್ತು ಮನುಷ್ಯ ಜನ್ಮದಲ್ಲಿಯೇ ಎಲ್ಲಿಯೂ ನೋಡಲಿಕ್ಕೆ ಸಿಗದ ದೃಶ್ಯವನ್ನು ನೀವೀಗ ಕಾಣುವಿರಿ. ಅಂತರಿಕ್ಷದಿಂದ ಸ್ವಯಂ ಇಂದ್ರನು ಕೈಯಲ್ಲಿ ಕಲಶವಿಡಿದು ಅಲ್ಲಿಂದಲೇ ಅಭಿಷೇಕ ಗೈಯ್ಯುವ ದೃಶ್ಯವು ನಿಮ್ಮ ಕಣ್ಣಿಗೆ ಬೀಳುವುದು.

ಅದಕ್ಕಾಗಿ ನೀವೆಲ್ಲರೂ ಶ್ರೀಕೃಷ್ಣ ಪಟ್ಟಾಭಿಷೇಕಕ್ಕೆ ಬೇಗನೇ ದಯಮಾಡಿಸಿರಿ. ನಿಮ್ಮ ಸಲುವಾಗಿ ನಾವು ಕೃಷ್ಣನಿಗೆ ಹೇಳಿ ಸಮಾಧಾನ ಮಾಡಿದ್ದೇವೆ. ಅಲ್ಲಿಗೆ ಬಂದವರಿಗೆ ಕರುಣಾಳು ವಾದ ಅವನು ಅಭಯ ಪ್ರದಾನ ಮಾಡುವನು. ಮತ್ತು ಅದರಿಂದ ನಿಮ್ಮ ಪಾಪಗಳೆಲ್ಲ ಪರಿಹಾರವಾಗುವವು. ವಾಸ್ತವಿಕವಾಗಿ ನಿನ್ನೆ ರಾತ್ರಿಯ ನಮ್ಮ ಗುಪ್ತ ಸಭೆಯಲ್ಲಿ ನಡೆದ

ಮಾತುಗಳನ್ನು ಕೇಳಿದರೆ ಯಾವರಾಜರಿಗೂ ಕೃಷ್ಣನಮೇಲೆ ಅಂಥ ವೈರ ವಿರೋಧಗಳಿದ್ದಂತೆ ಕಾಣಲಿಲ್ಲ' ಎಂದು ಮಾತಾಡಿ ಎಲ್ಲ ರಾಜರನ್ನೂ ಕೃಷ್ಣಾಭಿಷೇಕಕ್ಕಾಗಿ ಆಹ್ವಾನಿಸಿದರು.

ಆಗ ಇಂದ್ರನ ಶಾಪ ಭಯದಿಂದ ಗಾಬರಿಯಾದ ರಾಜರೆಲ್ಲ ಏನುಮಾಡಬೇಕೆಂದು ಯೋಚಿಸುತ್ತಲಿರುವಷ್ಟರಲ್ಲಿ ಮತ್ತೊಮ್ಮೆ ಆಕಾಶವಾಣಿಯಾಗಿ ''ಕೃಷ್ಣನು ಸರ್ವ ದೇವೋತ್ತಮನಿದ್ದು ಅವನ ಅಭಿಷೇಕಕ್ಕಾಗಿ ನೀವೆಲ್ಲ ರಾಜರೂ ಹೋಗಿ ಅವನಿಗೆ ಗೌರವಸಲ್ಲಿಸಿ ಅವನ ಅನುಗ್ರಹ ಪಡೆದು ಬನ್ನಿರಿ. ಇಲ್ಲಿಯ ಸ್ವಯಂವರ ಮಂಟಪವನ್ನು ಕಾಯಲು ಜರಾಸಂಧ ಸುನೀಥ, ರುಕ್ಮಿ, ಶಾಲ್ವ, ಈ ನಾಲ್ಕು ರಾಜರು ಇಲ್ಲಿಯೇ ನಿಲ್ಲಲಿ ಉಳಿದವರೆಲ್ಲರೂ ಹೊರಡಿರಿ'' ಎಂದು ತಿರುಗಿ ಇಂದ್ರನ ಸಂದೇಶವನ್ನು ತಿಳಿಸಿತು. ಆಗ ಜರಾಸಂಧನ ಅಪ್ಪಣೆಪಡೆದು ಎಲ್ಲ ರಾಜಮಹಾರಾಜರೂ ಭೀಷ್ಮಕನನ್ನು ಮುಂದೆಮಾಡಿಕೊಂಡು ಕೈಶಿಕನ ನಿವಾಸಕ್ಕೆ ಹೋದರು. ಅಲ್ಲಿ ದಿವ್ಯವಾದ ಮಣಿ ಮಾಣಿಕ್ಯ ಮುತ್ತುಗಳಿಂದ ದೇವಸಭೆಯ ಆ ರತ್ನ ಸಿಂಹಾಸನವು ಶೋಭಿಸುತ್ತಿತ್ತು. ಅದರ ಮೇಲೆ ನಂದನಂದನದ ಮಂದಾರ ಕುಸುಮಗಳ ಮಾಲೆಗಳನ್ನು ಹಾಕಿ, ಮೇಲೆ ದಿವ್ಯ ಧ್ವಜವನ್ನು ಚುಚ್ಚಿ, ದಿವ್ಯ ಪತಾಕೆಗಳನ್ನು ಹಚ್ಚಿ ದಿವ್ಯವಾದ ಆಭರಣಗಳ ಗೊಂಚಲುಗಳನ್ನು ಸುತ್ತಲೂ ತೂಗುಬಿಟ್ಟಿದ್ದರು. ಮಂದಾರ ಪುಷ್ಪಗಳ ದಿವ್ಯಗಂಧದಿಂದಲೇ ಆ ಸುಂದರವಾದ ಸಿಂಹಾಸನವು ಸುರಲೋಕದ್ದೆಂದು ಗೊತ್ತಾಗುತ್ತಲಿತ್ತು.

ಮೇಲೆ ಅಂತರಿಕ್ಷದಲ್ಲಿ ಗಂಧರ್ವ ಅಪ್ಸರೆಯರು ನಿಂತು ಗೋವಿಂದನ ಗುಣಗಳನ್ನು ಬಣ್ಣಿಸಿ ಹಾಡುತ್ತಲಿದ್ದರು. ಮುನಿಗಳು ಮಂತ್ರವರ್ಣಗಳಿಂದ ಸ್ತುತಿಸುತ್ತಿದ್ದರು. ದೇವದುಂದುಭಿಗಳು ಮೊಳಗಹತ್ತಿದವು. ಸ್ವರ್ಗದಿಂದಲೇ ಗಂಧ ಚಂದನ ಕಸ್ತೂರಿ ಮೊದಲಾದ ಪರಿಮಳ ಚೂರ್ಣಗಳನ್ನೂ, ಮಂದಾರ ಪಾರಿಜಾತ ಸಂತಾನ ಕಲ್ಪವೃಕ್ಷ ಮತ್ತು ಹರಿಚಂದನ ಎಂಬ ಐದು ದೇವವೃಕ್ಷಗಳ ಸುವಾಸಿತ ಪುಷ್ಪ ಪರಾಗವನ್ನೂ ಸ್ವಯಂ ದೇವತೆಗಳೇ ಆಕಾಶದಿಂದ ನೆಲದ ಮೇಲಿನ ಎಲ್ಲ ರಾಜರ ಮೇಲೆಯೂ ದಶದಿಕ್ಕುಗಳಲ್ಲಿಯೂ ಉತ್ಸಾಹದಿಂದ ಚಿಮುಕಿಸ ಹತ್ತಿದರು. ಸ್ವಯಂ ದೇವೇಂದ್ರನು ಶಚೀರಾಣಿಯೊಂದಿಗೆ ವಿಮಾನದಲ್ಲಿ ಬಂದು ಆಕಾಶದಲ್ಲಿ ನಿಂತು ಕೊಂಡನು. ಅಷ್ಟ ದಿಕ್ಪಾಲಕರು ಹಾಡಿ ಪಾಡಿ ಕೃಷ್ಣನನ್ನು ಹೊಗಳುತ್ತ ನಿಂತರು. ಆ ಮಂಗಲೋತ್ಸವದ ಸಂಭ್ರಮವನ್ನು ಕಂಡು ಆಶ್ಚರ್ಯದಿಂದ ಕಣ್ಣುಗಳನ್ನು ಅರಳಿಸಿ ರಾಜರೆಲ್ಲರೂ ಸಭಾಭವನವನ್ನು ಪ್ರವೇಶಿಸಿದರು. ಅವರೆಲ್ಲರನ್ನೂ ಕೈಶಿಕ ಮಹಾರಾಜನು ಸ್ವಾಗತಿಸಿ ಯೋಗ್ಯ ಸ್ಥಳದಲ್ಲಿ ಕೂಡಿಸಿದನು.

''ಎಲ್ಲ ರಾಜರೂ ಬಂದಿದ್ದಾರೆ ಅಭಿಷೇಕಕ್ಕೆ ದಯಮಾಡಿಸಬೇಕು'' ಎಂದು ಬಿನ್ನವಿಸಿದ ಕೂಡಲೇ ಶ್ರೀಕೃಷ್ಣನು ಎದ್ದು ಅಭಿಷೇಕ ಸ್ಥಾನದಲ್ಲಿ ಬಂದು ಕುಳಿತನು. ಆಗ ತಕ್ಷಣದಲ್ಲಿ ಮುಗಿಲುಮಂಟಪದಲ್ಲಿ ನಿಂತ ದೇವತಾಪುರುಷರು ಮುತ್ತು ರತ್ನ ದಿವ್ಯಪುಷ್ಪ ಗಂಧ ಚೂರ್ಣಗಳಿಂದ ತುಂಬಿದ ಸುವರ್ಣ ಕಲಶಗಳಿಂದ ಮೊದಲು ಅಭಿಷೇಕ ಗೈದರು. ಮುಂದೆ ಶಾಸ್ತ್ರೋಕ್ತವಾದ ರೀತಿಯಲ್ಲಿ ರಾಜೇಂದ್ರಪದದಲ್ಲಿ ಶ್ರೀಕೃಷ್ಣಾಭಿಷೇಕವು ಯಥಾಸಾಂಗವಾಗಿ ನೆರವೇರಿತು. ಬಳಿಕ ಕೂಡಿದ ರಾಜರೆಲ್ಲರೂ ಆ ಭಗವಂತನಿಗೆ ಉತ್ತಮೋತ್ತಮ ವಸ್ತ್ರ ಅಭೂಷಣಾದಿಗಳನ್ನೂ ಗಂಧ ಹಾರತುರಾಯಿಗಳನ್ನೂ ಕೊಟ್ಟು ಗೌರವಿಸಿದರು. ಆಮೇಲೆ ಕೃಷ್ಣನಾದರೂ ಬಂದ ರಾಜರಿಗೆಲ್ಲ ಗಂಧ ಮಾಲ್ಯಾದಿಗಳನ್ನಿತ್ತು ಸತ್ಕರಿಸಿದನು. ಅಭಿಷೇಕ ವಿಧಿಯೆಲ್ಲ ಮುಗಿದ ಬಳಿಕ ಗೋವಿಂದನು ತನಗಾಗಿ ಸ್ವರ್ಗಲೋಕದಿಂದ ಬಂದ ಆ ದಿವ್ಯ

ಸ್ವರ್ಣ ಸಿಂಹಾಸನವನ್ನೇರಿದನು. ಗರುಡನು ದಿವ್ಯಮಾನುಷ ದೇಹವನ್ನು ಧಾರಣ ಮಾಡಿಕೊಂಡು ಭಗವಂತನ ಬಲಭಾಗದ ಆಸನದ ಮೇಲೆ ಆಸೀನನಾದನು. ಕ್ರಥ ಕೈಶಿಕರು ಎಡಭಾಗದಲ್ಲಿ ಆಸನಗಳ ಮೇಲೆ ಕುಳಿತರು. ಅಲ್ಲಿಯೇ ಎಡಕ್ಕೆ ಸಾತ್ಯಕಿ ಮೊದಲಾದ ಯಾದವ ಪ್ರಮುಖರು ಉಪವಿಷ್ಟರಾದರು.

ಹೀಗೆ ಶಚೀಪತಿಯಂತೆ ಸ್ವರ್ಗೀಯಸಿಂಹಾಸನದಲ್ಲಿ ಆ ಶ್ರೀಹರಿಯು ಸುಖವಾಗಿ ಕುಳಿತುಕೊಂಡ ಬಳಿಕ ಮಂತ್ರಿಗಳು ಎದ್ದು ಆ ನವನಾಥನಿಗೆ ಎಲ್ಲ ರಾಜರ ಹೆಸರು ಹೇಳಿ ಪರಿಚಯಮಾಡಿಕೊಟ್ಟರು ಅವರೆಲ್ಲರೂ ಪಾಳಿಯಂತೆ ಬಂದು ತಮ್ಮ ಯೋಗ್ಯತೆಗೆ ಅನುಸಾರವಾಗಿ ಕಪ್ಪು ಕಾಣಿಕೆ ಒಪ್ಪಿಸಿ ತಮ್ಮ ತಮ್ಮ ಆಸನಗಳಲ್ಲಿ ಕುಳಿತರು. ಎಲ್ಲ ರಾಜರೂ ಪೂಜೆ ಮಾಡಿಯಾದ ಬಳಿಕ ಕೈಶಿಕನು ಕೃಷ್ಣನ ಪೂಜೆಮಾಡಿ ''ಭಗವನ್! ನೀನೂ ನಮ್ಮಂತೆ ಒಬ್ಬ ಮಾನವ ಎಂದು ತಿಳಿದು ನಾವು ತಪ್ಪು ಮಾಡಿದ್ದೇವೆ. ಅದೆಲ್ಲವನ್ನೂ ಕ್ಷಮಿಸಬೇಕು'' ಎಂದು ಬೇಡಿಕೊಂಡನು. ಆಗ ಕೃಷ್ಣನು-

''ನೀನು ನಿಜವಾದ ಅಂತಃಕರಣದಿಂದ ನನ್ನನ್ನು ಕ್ಷಮಿಸೆಂದು ಕೇಳಿಕೊಂಡಿದ್ದರಿಂದ ನಾನು ನಿನ್ನನ್ನು ಕ್ಷಮಿಸಿದ್ದೇನೆ. ನನ್ನ ತಂದೆಯ ವಯಸ್ಸಿನವನಾದ ನಿನ್ನಲ್ಲಿ ನನಗೆ ಗೌರವ ಬುದ್ಧಿಯಿದೆ. ಈ ಕ್ರಥಕೈಶಿಕರು ತಮ್ಮ ರಾಜ್ಯ ಸರ್ವಸ್ವವನ್ನೇ ನನಗೆ ಕೊಟ್ಟು ಅತಿಥಿ ಸತ್ಕಾರವನ್ನು ಮಾಡಿದ್ದರಿಂದ ಇವರ ಹಿಂದಿನ ಹತ್ತು ತಲೆಯ ಮುಂದಿನ ಹತ್ತು ತಲೆಮಾರಿನ ಸಂಬಂಧಿಕರು ಸ್ವರ್ಗಕ್ಕೆ ಹೋಗಿದ್ದಾರೆ. ಮತ್ತು ಇವರಾದರೂ ಬಹುಕಾಲ ಸುಖದಿಂದ ಇಲ್ಲಿ ರಾಜ್ಯವಾಳುತ್ತ ಇದ್ದು ಬಯಸಿದಾಗ ಮೋಕ್ಷಕ್ಕೆ ಹೋಗಬಲ್ಲರು. ನನ್ನನ್ನು ಈ ಪಟ್ಟಾಭಿಷೇಕ ಸಮಯದಲ್ಲಿ ಬಂದು ಪೂಜೆ ಮಾಡಿದ ರಾಜರಾದರೂ ದಿವ್ಯಗತಿಯನ್ನು ಹೊಂದುವರು. ನಿಮ್ಮೆಲ್ಲರಿಗೂ ಕಲ್ಯಾಣವಾಗಲಿ'' ಎಂದು ಹೇಳಿ ಅಲ್ಲಿ ನೆರೆದ ರಾಜರಿಗೆಲ್ಲ ಹೋಗಿ ಬರುತ್ತೇನೆಂದು ಹೇಳಿ ಸಭೆಯಿಂದ ಹೊರಬಿದ್ದನು.

ಭಗವಂತನು ಹೊರಟಿದ್ದನ್ನು ಕಂಡು ಭೀಷ್ಮಕನೂ ಉಳಿದ ಯೋಗ್ಯ ರಾಜರೂ ವಿಷಣ್ಣರಾದರು. ಮತ್ತು ಭೀಷ್ಮಕನು ಮತ್ತೊಮ್ಮೆ ಭಗವಂತನನ್ನು ಕೊಂಡಾಡಿ ಪ್ರಸನ್ನನಾಗು ಎಂದು ಬೇಡಿಕೊಂಡು ಎಲ್ಲ ರಾಜರೆದುರೇ ಅವನಿಗೆ ಸುವರ್ಣ ರಾಶಿಯನ್ನಿತ್ತು ನಮಸ್ಕರಿಸಿದನು.

ಅದರಂತೆ ಗರುಡನಿಗಾದರೂ ಅನೇಕ ಆಭರಣಗಳನ್ನಿತ್ತು ಸತ್ಕರಿಸಿ ''ನಮಸ್ತಸ್ಮೈ ಖಗೇಂದ್ರಾಯ ನಮೋ ಮಾರುತರಂಹಸೇ॥ ಕಾಮರೂಪಾಯ ದಿವ್ಯಾಯ ಕಾಶ್ಯಪಾಯ ನಮೋನಮಃ'' ಎಂಬುದು ನಮಸ್ಕರಿಸಿದನು. ಎಲ್ಲರಿಂದ ಬೀಳ್ಕೊಳ್ಳಲ್ಪಟ್ಟು ಗರುಡನ ಮೇಲೆ ಏರಿ ಕುಳಿತು ಭಗವಂತನು ಮಥುರೆಗೆ ಹೊರಟನು. ರಾಜಮಹಾರಾಜರೆಲ್ಲರೂ ತಮ್ಮ ತಮ್ಮ ರಥ ಆನೆ ಕುದುರೆಗಳನ್ನು ಏರಿ ಕೃಷ್ಣನನ್ನು ಕಳಿಸಲಿಕ್ಕೆ ಬೆನ್ನುಹತ್ತಿದರು. ಭೇರೀ ಪಟಹ ಶಂಖದುಂಧುಬಿಗಳನ್ನು ಬಾರಿಸುತ್ತ ಕೃಷ್ಣನ ಸುತ್ತಲೂ ಚತುರಂಗ ಸೇನೆಯಿಂದ ಸಹಿತರಾಗಿ ರಾಜಮಂಡಲದವರು ಮೂರು ಮೈಲುಗಳವರೆಗೆ ಮೆರವಣಿಗೆಯಿಂದ ಕಳಿಸಿ ತಿರುಗಿ ಸ್ವಯಂವರ ಮಂಟಪಕ್ಕೆ ಮರಳಿದರು.

ದೇವತೆಗಳೆಲ್ಲರೂ ತಮ್ಮ ಸ್ವರ್ಗದ ಸುವರ್ಣ ಸಿಂಹಾಸನವನ್ನು ತೆಗೆದುಕೊಂಡು ಸುರಲೋಕಕ್ಕೆ ಹೊರಟುಹೋದರು.

ಕೃಷ್ಣನು ಮಥುರೆಗೆ ಪ್ರಯಾಣ ಮಾಡಿದ ಬಳಿಕ ರಾಜರೆಲ್ಲರೂ ಸ್ವಯಂವರ ಮಂಟಪಕ್ಕೆ ಬಂದರು. ಆಗ ಭೀಷ್ಮಕನು ಅವರನ್ನು ಸಂತೈಸುತ್ತ ''ದಂತವಕ್ತ್ರಾದಿ ರಾಜರೆಲ್ಲರೂ ಸೂಚಿಸಿದಂತೆ ನಾನು ಕೃಷ್ಣನನ್ನು ಪೂಜಿಸದೇ ಸ್ವಯಂವರವನ್ನು ಮಾಡಿದರೆ

ನನ್ನ ಮಗಳು ಕೃಷ್ಣನನ್ನೇ ವರಿಸುತ್ತಿದ್ದಳು. ಆದರೆ ಅದನ್ನು ನನ್ನ ಮಗನಾದ ರುಕ್ಮಿಯು ಸಹಿಸದೆ ಯುದ್ಧ ಹೂಡುತ್ತಿದ್ದನು. ಅದರಿಂದ ಕಲ್ಯಾಣ ಮಂಟಪ ಕದನರಂಗವಾಗುತ್ತಿತ್ತು. ಇದೆಲ್ಲವನ್ನೂ ತಿಳಿದು ನಾನು ಸ್ವಯಂವರವನ್ನೇ ರಹಿತಮಾಡಿಬಿಟ್ಟಿದ್ದೇನೆ'' ಎಂದು ಹೇಳಿ ರಾಜರನ್ನೆಲ್ಲ ಅವರವರ ಊರಿಗೆ ಕಳಿಸಿಕೊಟ್ಟನು. ಜರಾಸಂಧ ಮೊದಲಾದ ರಾಜರೆಲ್ಲರೂ ಭೀಷ್ಮಕ ರಾಜನನ್ನು ಪೂಜಿಸಿ ತಮ್ಮ ತಮ್ಮ ಊರುಗಳಿಗೆ ಪ್ರಯಾಣ ಬೆಳೆಸಿದರು.

ಇತ್ತ ಅಂತಃಪುರದಲ್ಲಿ ರುಕ್ಮಿಣಿಯು ಕೃಷ್ಣನು ಬಂದುದರಿಂದ ರಾಜರೆಲ್ಲರೂ ಹೆದರಿ ಸ್ವಯಂವರವನ್ನೇ ಬಿಟ್ಟುದನ್ನು ಕೇಳಿ ಬಹಳ ಸಂತೋಷಪಟ್ಟಳು ಮತ್ತು ಸಖಿಯರೆದುರಿಗೆ ನಾಚುತ್ತ ''ಕಮಲಾಕ್ಷನಾದ ಆ ಶ್ರೀಕೃಷ್ಣನ ಹೊರತು ನಾನು ಯಾವ ರಾಜೇಂದ್ರನನ್ನೂ ಕನಸಿನಲ್ಲಿ ಕೂಡ ಒರಿಸಲಾರೆ'' ಎಂದು ತನ್ನ ಅಚಲ ನಿರ್ಧಾರವನ್ನು ಸಾರಿ ''ಈ ನನ್ನ ಮಾತು ಎಂದಿಗೂ ಸುಳ್ಳಾಗುವದಿಲ್ಲ. ನಾನು ಇನ್ನೊಬ್ಬರ ಪತ್ನಿ ಆಗುವುದಿಲ್ಲ. ಕೃಷ್ಣನನ್ನೇ ಮದುವೆಯಾಗುವೆ'' ಎಂದು ಆತ್ಮವಿಶ್ವಾಸದಿಂದ ನುಡಿದಳು.

ಒಂದು ದಿನ ಜರಾಸಂಧ ಶಿಶುಪಾಲ ಮುಂತಾದ ರಾಜರೆಲ್ಲರೂ ಕೂಡಿ ಶಾಲ್ವರಾಜನನ್ನು ಕಾಲಯವನನ ಕಡೆಗೆ ಒಂದು ಸಂದೇಶವನ್ನು ಮುಟ್ಟಿಸಲು ಕಳಿಸಿಕೊಟ್ಟರು. ಅವನು ಅವರ ಶಬ್ದಗಳಲ್ಲಿಯೇ ಕಾಲಯವನನಿಗೆ ರಾಜರ ಸಂದೇಶವನ್ನು ತಿಳಿಸಿದನು. ''ಯವನ ರಾಜ! ಪರಮ ದುರ್ಜಯನಾದ ಈ ಕೃಷ್ಣನೀಗ ಜಗತ್ತಿಗೇ ಬಾಧಕನಾಗಿ ಕೂತಿದ್ದಾನೆ. ಇವನನ್ನು ಕೊಲ್ಲಬೇಕೆಂದು ನಾನು ಪ್ರಚಂಡ ರಾಜಸೇನೆಯನ್ನು ಕೂಡಿಸಿ ಅವನ ಮೇಲೆ ಏರಿ ಹೋಗಿದ್ದೆ. ಅವನು ಓಡಿ ಗೋಮಂತ ಪರ್ವತಕ್ಕೆ ಹೋದನು. ನಾವೂ ಅಲ್ಲಿಯವರೆಗೆ ಬೆನ್ನಟ್ಟಿ ಹೋಗಿ ದಂತವಕ್ರನ ಸಲಹೆಯಂತೆ ಆ ಗಿರಿಗೆ ಉರಿಹಚ್ಚಿ ಅವನನ್ನು ಸುಡಲು ಯತ್ನಿಸಿದೆವು. ಆದರೆ ಆ ರಾಮಕೃಷ್ಣರಿಬ್ಬರೂ ಆ ಗಿರಿಯಿಂದ ನಮ್ಮ ಸೇನೆಯಲ್ಲಿ ಹಾರಿ ಇಬ್ಬರೇ ಇದ್ದರೂ ಚಕ್ರ, ಕೌಮೋದಕಿ, ಹಲ, ಮುಸಲಗಳೆಂಬ ಆಯುಧಗಳಿಂದ ನಮ್ಮನ್ನೆಲ್ಲ ಸೋಲಿಸಿ ಓಡಿಸಿದರು. ಆದ್ದರಿಂದ ನಮಗೆಲ್ಲರಿಗೂ ಮೀರಿ ನಿಂತ, ಮನುಷ್ಯ ಮಾತ್ರರರಿಗೆ ಅಜೇಯರಾದ ಈ ರಾಮಕೃಷ್ಣರನ್ನು ರುದ್ರ ದೇವರ ಪ್ರಸಾದದಿಂದ ಹುಟ್ಟಿದ ನೀನೇ ವಧಿಸಲಿಕ್ಕೆ ಸಮರ್ಥನು. ಈ ಮಾಥುರೇಯರನ್ನು ಕೊಲ್ಲುವ ಮಗನುಬೇಕೆಂದೇ ನಿಮ್ಮ ತಂದೆಯು ಹನ್ನೆರಡು ವರುಷ, ಉಕ್ಕಿನ ಉಸುಕು ತಿಂದು ತಪಸ್ಸು ಮಾಡಿ ಮಹಾದೇವರಿಂದ ವರ ಪಡೆದುಕೊಂಡು ನಿನ್ನನ್ನು ಹಡೆದಿದ್ದಾನೆ. ಆದರಿಂದ ನಿನ್ನನ್ನು ಕಂಡ ಕೂಡಲೇ ಮರೀಚಿಮಾಲಿಯನ್ನು ಕಂಡ ಮಂಜಿನ ಗಡ್ಡೆಯಂತೆ ಕೃಷ್ಣನು ಕರಗಿ ಹೋಗುವನು. ಕೃಷ್ಣನು ಮಾಥುರೇಯನೇ ಆದುದರಿಂದ ಅವನನ್ನೂ ಬಲದೇವ ವಸುದೇವ ಮೊದಲಾದ ಉಳಿದೆಲ್ಲ ಯಾದವರನ್ನೂ ನೀನು ಸ್ವಯಂ ಮಥುರಾ ಪುರಿಗೆ ಹೋಗಿ ಗೆಲ್ಲು ಇಲ್ಲವೇ ಕೊಲ್ಲು. ಈ ಕೃಷ್ಣಹತ್ಯೆಯಿಂದಲೂ ಯಾದವ ವಿಜಯದಿಂದಲೂ ನಿನ್ನ ಕೀರ್ತಿಯು ದಿಗಂತಂರಾಲದಲ್ಲೆಲ್ಲ ಪಸರಿಸುವುದು.''

ಆಗ ಕಾಲಯವನನು ಅಭಿಮಾನದಿಂದ ಉಬ್ಬಿ ''ನಾನಿಂದು ಧನ್ಯನಾದೆ. ಅನುಗ್ರಹೀತನಾದೆ. ಇಷ್ಟೆಲ್ಲ ಪ್ರಬಲ ರಾಜರು ಕೂಡಿ ಜರಾಸಂಧನಂಥ ರಾಜರಾಜೇಶ್ವರನು ಕೂತು ನನಗೆ ''ಕೃಷ್ಣನ ನಿಗ್ರಹ ಮಾಡು'' ಎಂದು ಹೇಳಿ ಕಳಿಸಿದ್ದರಿಂದ ಇಂದು ನಾನು ಹುಟ್ಟಿದ್ದು ಸಾರ್ಥಕವಾಯಿತು. ಆ ರಾಜರೆಲ್ಲರೂ ಕೂಡಿ ನನಗೆ ಜಯವಾಗಲಿ ಎಂದು ಆಶಂಸೆಯನ್ನು ಮಾಡಿ ಕೃಷ್ಣನನ್ನು ಗೆದ್ದುಕೊಂಡು ಬರಲು ನಿಯಮಿಸಿದ ಬಳಿಕ ಅವರ

ವಾಕ್‌ಶಕ್ತಿಯಿಂದ ನಾನು ವಿಜಯಿಯಾಗಿಯೇ ಬರುವೆ. ಇಷ್ಟು ರಾಜರ ಇಚ್ಚೆಯನ್ನು ಪೂರ್ಣಮಾಡ ಹೊರಟ ನನಗೆ ಕದಾಚಿತ್ ಅಪಜಯವಾದರೂ ಅದು ಜಯವೆಂದೇ ತಿಳಿಯುತ್ತೇನೆ. ಇಂದಿನ ದಿನವೇ ಶುಭದಿನ. ಇಂದಿನ ನಕ್ಷತ್ರವೇ ಶುಭನಕ್ಷತ್ರ. ಇಂದಿನ ಮುಹೂರ್ತವೇ ಕೃಷ್ಣನ ಮೇಲೆ ದಾಳಿಮಾಡಲು ಒಳ್ಳೆಯ ಮುಹೂರ್ತ. ಆದ್ದರಿಂದ ನಾನು ಈಗಲೇ ಹೊರಟು ಕೃಷ್ಣನನ್ನು ಗೆಲ್ಲಲು ಮಥುರೆಗೆ ಹೋಗುವೆ'' ಎಂದು ಹೇಳಿದನು.

ಹಾಗೂ ಶಾಲ್ವ ರಾಜನನ್ನು ಬೆಲೆಬಾಳುವ ಮಣಿ ಮುತ್ತು ರತ್ನಾಭರಣಗಳಿಂದ ಯಥಾಯೋಗ್ಯವಾಗಿ ಗೌರವಿಸಿ ಕಳಿಸಿದನು. ಕೈತುಂಬ ದಕ್ಷಿಣೆಕೊಟ್ಟು ಬ್ರಾಹ್ಮಣರ ಕಡೆಯಿಂದ ಜಯಾಶೀರ್ವಾದ ಪಡೆದುಕೊಂಡು ಯಾದವರನ್ನು ಗೆಲ್ಲಲು ಹೊರಟನು.

ಕೃಷ್ಣನು ವಿದರ್ಭ ನಗರದಿಂದ ಹೊರಟು ಮಥುರೆಗೆ ಬರುವುದಕ್ಕಿಂತ ಮುಂಚಿತವಾಗಿ ಗರುಡನು ಕೃಷ್ಣನ ನಿವಾಸಕ್ಕಾಗಿ ರೈವತಕ ಪರ್ವತದ ಬಳಿಯಿರುವ ಕುಶಸ್ಥಲಿಯನ್ನು ನೋಡಿಕೊಂಡು ಬರುವೆನೆಂದು ಹೇಳಿ ಹೋಗಿ ನೋಡಿ ಬಂದು ದಾರಿಯಲ್ಲಿಯೇ ಕೃಷ್ಣನಿಗೆ ವರದಿ ಒಪ್ಪಿದನು.

ಇತ್ತ ಕೃಷ್ಣನು ಯುವಕ ಯಾದವರೊಂದಿಗೆ ಮಥುರಾಪುರಿಯನ್ನು ಪ್ರವೇಶಿಸಿದನು. ಅವನು ಊರಿಗೆ ಬರುವುದಕ್ಕಿಂತ ಮುಂಚಿತವಾಗಿ ಅವನ ಸಮಾಚಾರವೆಲ್ಲ ರಾಜಧಾನಿಗೆ ಬಂದಿತ್ತು. ದೇವೇಂದ್ರನು ಚಿತ್ರಾಂಗದನೆಂಬ ದೂತನನ್ನು ಕಳುಹಿಸಿ ಸ್ವರ್ಗಸಿಂಹಾಸನವನ್ನೂ ಕಳಿಸಿದ್ದೂ, ಅವನ ಮುಖಾಂತರ ರಾಜರೆಲ್ಲರೂ ಕೃಷ್ಣನ ಅಭಿಷೇಕಕ್ಕೆ ಬರುವಂತೆ ಮಾಡಿ ಕೈಶಿಕರಾಜ್ಯದಲ್ಲಿ ರಾಜೇಂದ್ರನೆಂದು ಪಟ್ಟಾಭಿಷೇಕ ಮಾಡಿಸಿದೇ ಮೊದಲಾದ ಸುದ್ದಿಯನ್ನು ಕೇಳಿ ಯಾದವರ ಮಹಾರಾಜನಾದ ಉಗ್ರಸೇನನಿಗೆ ಪರಮಾನಂದವಾಗಿತ್ತು. ಮತ್ತು ಆ ಮಂಗಲಾಭಿಷೇಕದ ನಿಮಿತ್ತವಾಗಿ ಕೃಷ್ಣನ ಅಭಿಪ್ರಾಯದಂತೆ ಶಂಖನೆಂಬ ನಿಧಿಪತಿಯು ಪ್ರತಿಯೊಬ್ಬ ಮಾಂಡಲಿಕ ರಾಜರಿಗೆ ಒಂದು ಲಕ್ಷ, ಸಾಮಾನ್ಯ ಜನರಿಗೆಲ್ಲ ಹತ್ತು ಸಾವಿರ, ರಾಜೇಂದ್ರರಿಗೆ ಕೋಟಿ, ಮಹಾರಾಜರಿಗೆ ಹತ್ತುಕೋಟಿ ಹೀಗೆ ಸುವರ್ಣನಾಣ್ಯಗಳನ್ನು ಕೊಟ್ಟನೆಂಬ ಸುದ್ದಿಯನ್ನು ಕೇಳಿಯಂತೂ ಅವರಿಗೆಲ್ಲ ಅತ್ಯಾಶ್ಚರ್ಯವಾಗಿತ್ತು.

ಉಗ್ರಸೇನನು ಅಂದು ದೇವಾಲಯಗಳಲ್ಲೆಲ್ಲ ಮಹಾಪೂಜೆಗಳನ್ನು ಮಾಡಿಸಿ ಊರನ್ನೆಲ್ಲ ಸಿಂಗರಿಸಿ ವಸುದೇವನ ಮನೆಗೆ ತಳಿರು ತೋರಣ ಕಟ್ಟಿಸಿ ಸಾರಣೆ ಕಾರಣೆಗಳನ್ನು ಮಾಡಿಸಿ ಊರಲ್ಲೆಲ್ಲ ವಾದ್ಯ ವೈಭವ ನೃತ್ಯ ಗೀತಾದಿಗಳಿಂದ ಮಹೋತ್ಸವವನ್ನು ಆಚರಿಸಿದ್ದನು. ಇಂದು ಆ ಕೃಷ್ಣನು ರಾಜೇಂದ್ರನಾಗಿ ಬಂದುದನ್ನು ನೋಡಿ ಉಗ್ರಸೇನ ಮಹಾರಾಜನು ಎಲ್ಲ ಯಾದವರೊಂದಿಗೆ ಬಲರಾಮ ವಸುದೇವರನ್ನೂ ಕರೆದುಕೊಂಡು ಅವನ ಸ್ವಾಗತಕ್ಕಾಗಿ ರಥವನ್ನೇರಿ ಹೊರಟನು. ದಿವ್ಯವಾದ ರಥದಲ್ಲಿ ಕುಳಿತು ಅನರ್ಘ್ಯವಾದ ರತ್ನಾಭರಣಗಳನ್ನಿಟ್ಟು ವನಮಾಲೆಯಿಂದ ಶೋಭಿಸುವ ಕೃಷ್ಣನು ಸೂರ್ಯನಂತೆ ಹೊಳೆಯುತ್ತ ಛತ್ರಚಾಮರ ಗರುಡ ಧ್ವಜ ಮೊದಲಾದ, ರಾಜಲಕ್ಷಣಗಳಿಂದ, ಕೂಡಿ ಬರುತ್ತಿದ್ದನು.

ದೂರದಿಂದ ಅವನನ್ನು ನೋಡಿ ಕೂಡಲೇ ಉಗ್ರಸೇನನು ರಥದಿಂದ ಇಳಿದು ''ಬಲರಾಮ! ನೀನು ರಥದಲ್ಲಿಯೇ ಕೂಡು. ಕೃಷ್ಣನು ರಾಜಾಧಿರಾಜನಾಗಿ ಬರುವಾಗ ನಾವು ರಥಾರೂಢರಾಗಿ ಎದುರಿಗೆ ಹೋಗುವುದು ಸರಿಯಲ್ಲ, ಕೆಳಗಿಳಿದು ಅವನನ್ನು ಸ್ತುತಿಸುತ್ತ ಹೋಗುವೆನು'' ಎಂದು ಪಾದಚಾರಿಯಾಗಿ ನಡೆದನು. ಅದನ್ನು ಕಂಡು ಬಲರಾಮನು ''ಮಹಾರಾಜ! ಕೃಷ್ಣನು ನಿನ್ನಲ್ಲಿ ಸರ್ವದಾ ಪ್ರೀತಿ ಪ್ರಸನ್ನನೇ ಇರುವನು. ನೀನು ಅವನನ್ನು

ಹೊಗಳುವ ಕಾರಣವೇ ಇಲ್ಲ'' ಎಂದು ಅವರು ಮಾತನಾಡುತ್ತಿರುವಷ್ಟರಲ್ಲಿ ಕೃಷ್ಣನ ರಥವು ಬಂದಿತು. ಆಗ ಉಗ್ರಸೇನ ಮಹಾರಾಜನು ಕೈಯಲ್ಲಿ ಅರ್ಘ್ಯ ಪಾದ್ಯಾದಿಪೂಜಾ ದ್ರವ್ಯಗಳನ್ನು ಹಿಡಿದುಕೊಂಡು ಗಡಿಬಿಡಿಯಿಂದ ಕೃಷ್ಣನನ್ನು ಪೂಜಿಸಬೇಕೆಂದು ಬಂದನು.

ಆಗ ಕೃಷ್ಣನು ಅವನನ್ನು ತಡೆದು ''ಮಥುರಾನಾಥ! ನೀನೇ ಮಥುರೆಗೆ ಒಡೆಯನಾಗು'' ಎಂದು ಹೇಳಿ ''ನಾನು ಮಾಡಿದ ಪಟ್ಟಾಭಿಷೇಕವನ್ನು ವ್ಯರ್ಥಗೊಳಿಸಬೇಡ. ನಮ್ಮೆಲ್ಲರಿಗೂ ನೀನೇ ಅಧಿರಾಜ. ನನಗಾಗಿ ತಂದ ಈ ಅರ್ಘ್ಯಪಾದ್ಯಾದಿಗಳನ್ನೆಲ್ಲ ನಾನು ತಿರುಗಿ ಕೊಟ್ಟುಬಿಡುತ್ತೇನೆ. ಇದಲ್ಲದೇ ವಿದರ್ಭ ನಗರದಲ್ಲಿ ನನ್ನ ರಾಜೇಂದ್ರ ಪಟ್ಟಾಭಿಷೇಕದ ಕಾಲದಲ್ಲಿ ಎಲ್ಲ ರಾಜರಿಗೂ ದಾನ ದಕ್ಷಿಣೆಗಳನ್ನು ಕೊಡುವಾಗ ಎಲ್ಲರಿಗಿಂತ ಮೊದಲು ನಿನ್ನ ಸಲುವಾಗಿ ಎಂದು ಒಂದು ಲಕ್ಷ ಸುವರ್ಣ ನಾಣ್ಯಗಳನ್ನೂ ಅದಲ್ಲದೆ ಅನೇಕ ವಸ್ತ್ರಾಭರಣಗಳನ್ನೂ ತೆಗೆಯಿಸಿ ಇಡಿಸಿದ್ದೇನೆ. ಅದರಂತೆ ಮಥುರೆಯಲ್ಲಿರುವ ನಾಗರಿಕರಿಗೆಲ್ಲ ತಲೆಗೆಹತ್ತು ಸಾವಿರದಂತೆ, ಸೂತಮಾಗಧ ಬಂದಿಗಳಿಗೆ ಇದಲ್ಲದೆ ಮೇಲೆ ಸಾವಿರ ನಾಣ್ಯಗಳು, ಮುದುಕರು ಸ್ತ್ರೀಯರು ವೇಶ್ಯೆಯರು ಮೊದಲಾದವರಿಗೆಲ್ಲ ಇವುಗಳ ಮೇಲೆ ಮತ್ತೆ ನೂರು ನಾಣ್ಯಗಳನ್ನೂ ಮತ್ತು ದಿವ್ಯವಾದ ವಸ್ತು ಒಡವೆಗಳನ್ನೂ ಮಥುರಾಪುರ ನಿವಾಸಿಗಳಿಗೆ ಕೊಡಲಿಕ್ಕೆಂದು ದೇವೇಂದ್ರನು ಕಳಿಸಿಕೊಟ್ಟಿದ್ದಾನೆ. ಅದೆಲ್ಲವನ್ನೂ ಅವರವರಿಗೆ ಮುಟ್ಟಿಸಬೇಕು'' ಎಂದು ಹೇಳಿ ಆ ಸೇನಾಸಮೂಹದ ಎದುರಿಗೇ ದಿವ್ಯಾಭರಣ ಗಂಧಮಾಲ್ಯಗಳಿಂದ ಉಗ್ರಸೇನನನ್ನು ಸಂಭ್ರಮದಿಂದ ಪೂಜಿಸಿದನು.

ಆ ಬಳಿಕ ಮಾಥುರೇಯರಾದ ನರನಾರಿಯರೆಲ್ಲರೂ ಬಂದು ಭಗವಂತನಿಗೆ ವಂದಿಸಿದರು. ಅವರಿಗೆಲ್ಲ ವಿಪುಲವಾಗಿ ಕೃಷ್ಣನು ದಾನ ಪ್ರದಾನ ಮಾಡಿದನು. ಅವನ ಅದ್ಭುತವಾದ ಔದಾರ್ಯ ವೀರ್ಯ ಶೌರ್ಯ ಚಾತುರ್ಯಧೈರ್ಯ ಸಾಕ್ಷಾತ್ ಬ್ರಹ್ಮಸ್ವರೂಪತ್ವ ಮೊದಲಾದ ಗುಣಗಳನ್ನು ಪೌರ ಜನರೆಲ್ಲ ಹೊಗಳುತ್ತಲಿದ್ದರು. ಅವರ ಆ ಬಣ್ಣನೆಯ ಮಾತುಗಳನ್ನು ಕೇಳುತ್ತ ಮೆರವಣಿಗೆಯಿಂದ ರಾಮಕೃಷ್ಣರು ಆ ಪಟ್ಟಣಕ್ಕೆ ಬಂದು ಎಲ್ಲರೊಡನೆ ಸುಖದಿಂದ ಅಲ್ಲಿ ವಾಸಿಸಿದರು.

ಒಂದು ದಿನ ಶ್ರೀಕೃಷ್ಣನು ಯಾದವರ ಒಂದು ದೊಡ್ಡ ಸಭೆಯನ್ನು ಕರೆದು ತನ್ನ ಅಭಿಪ್ರಾಯವನ್ನು ಅವರಿಗೆ ತಿಳಿಸುತ್ತ ''ಯದುಪುಂಗವರೇ! ನಾವು ನೀವು ಎಲ್ಲರೂ ಈ ಮಥುರೆಯಲ್ಲಿಯೇ ಹುಟ್ಟಿ ದೊಡ್ಡವರಾಗಿದ್ದೇವೆ. ಈಗ ಎಲ್ಲ ರಾಜರ ಹಾಗೂ ಪ್ರಬಲನಾದ ಜರಾಸಂಧನ ಜೊತೆಗೆ ನಮಗೆ ವಿರೋಧವಾಗಿದ್ದು ಇಲ್ಲಿದ್ದುಕೊಂಡು ನಾವು ಸಂಪಾದಿಸಿದ ಈ ಅನರ್ಘ್ಯವಾದ ಮುತ್ತು ರತ್ನ ಹಾಗೂ ಅಪಾರವಾದ ಐಶ್ವರ್ಯವನ್ನು ರಕ್ಷಿಸುವುದು ದುಸ್ತರವಾಗಿದೆ. ಹಾಗೂ ನಮ್ಮ ಮಿತ್ರಪರಿವಾರ ಬಾಂಧವರು, ಸೇನಾ ಸನ್ನಾಹ, ಕೋಟ್ಯಾವಧಿ ಚಿಕ್ಕ ಚಿಕ್ಕ ಮಕ್ಕಳು ಇವರಿಂದ ಈ ಪಟ್ಟಣವು ಈಗಲೇ ಕಿಕ್ಕಿರಿದು ತುಂಬಿದ್ದು ಜನರಿಗೆ ಸಾಲದಂತಾಗಿದೆ. ಇನ್ನೂ ದಿನೇ ದಿನೇ ಬೆಳೆಯುತ್ತಿರುವ ಈ ಪಟ್ಟಣದಲ್ಲಿ ಯಾವುದಕ್ಕೂ ಸ್ಥಳವೇ ಇಲ್ಲದಂತಾಗಿದೆ. ಜನರು ಮನೆಯಲ್ಲಿದ್ದರೂ ಸಭೆಯಲ್ಲಿಯೇ ಇದ್ದಂತೆ ಸರ್ವದಾ ಗದ್ದಲದಲ್ಲಿಯೇ ಇರುವಂತಾಗಿದೆ. ಅದುದರಿಂದ ಇಲ್ಲಿಂದ ಬಿಟ್ಟು ಬೇರೆ ಒಂದು ಉತ್ತಮವಾದ ಪಟ್ಟಣವನ್ನು ನಿರ್ಮಿಸಬೇಕೆಂದು ನನ್ನ ವಿಚಾರವಿದೆ. ನಿಮ್ಮ ಅಭಿಪ್ರಾಯವೇನು? ಎಂದು ಕೇಳಿದನು.

ಆಗ ಎಲ್ಲ ಯಾದವರೂ ಅತ್ಯಂತ ಸಂತೋಷದಿಂದ "ಜನರ ಕಲ್ಯಾಣಕ್ಕಾಗಿ ಕೃಷ್ಣ! ನೀನೇನು ಮಾಡಿದರೂ ನಮಗದು ಸಮ್ಮತ" ಎಂದು ಹೇಳಿದರು.

ಅಷ್ಟರಲ್ಲಿ ಕಾಲಯವನನು ಮಥುರೆಯ ಮೇಲೆ ದಾಳಿಮಾಡಲು ಹೊರಟಿದ್ದಾನೆಂದು ಸಮಾಚಾರ ಬಂದಿತು. ಆಗ ಕೃಷ್ಣನು ಯಾದವರಿಗೆ "ಇಂದೇ ಮುಹೂರ್ತ ಒಳ್ಳೆಯದಿದೆ. ಆದುದರಿಂದ ಈ ದಿವಸವೇ ಹೊರಟು ಬಿಡುವ" ಎಂದು ಹೇಳಿದನು. ಕೃಷ್ಣನ ಆಜ್ಞೆಯನ್ನು ಕೇಳಿ ಯಾದವರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋಗಿ ಬೇಗ ಬೇಗ ಸಾಮಾನು ಕಟ್ಟಿ ಹೆಂಡಿರು ಮಕ್ಕಳು ಪರಿವಾರದೊಂದಿಗೆ ಹೊರಟುಬಿಟ್ಟರು. ವಸುದೇವ ಮುಂತಾದ ಯಾದವರೆಲ್ಲ ಆನೆ ಕುದುರೆ ರಥಗಳನ್ನು ಏರಿಕೊಂಡು ಪ್ರಯಾಣ ದುಂದುಭಿಗಳನ್ನು ಮೊಳಗಿಸುತ್ತ ಪಶ್ಚಿಮಾಭಿ ಮುಖವಾಗಿ ಸೇನೆಯೊಂದಿಗೆ ಮಥುರಾಪಟ್ಟಣವನ್ನು ಬಿಟ್ಟು ನಡೆದರು. ಕೆಲಹೊತ್ತಿನಲ್ಲಿಯೇ ಅವರೆಲ್ಲರೂ ಸಮುದ್ರದ ಜಲಪ್ರಾಯ ಪ್ರದೇಶದಲ್ಲಿ ತೆಂಗುಬಾಳೆ ತಾಳೆ ಬಕುಲ ದ್ರಾಕ್ಷಿಯ ತೋಟಗಳಿಂದಲೂ, ಕೇದಗೆಯ ಬನಗಳಿಂದಲೂ, ಬಗೆ ಬಗೆಯ ಹೂ ಬಳ್ಳಿಗಳಿಂದಲೂ, ತಂಪಿಂಪು ಕಂಪುಗಳ ಸೊಂಪಿನಿಂದ ನಳನಳಿಸುವ ರಮ್ಯಸ್ಥಳವಾದ ಕುಶಸ್ಥಲಿಗೆ ಬಂದರು. ಅದನ್ನು ಕಂಡ ಕೂಡಲೇ ಯಾದವರಿಗೆ ಸ್ವರ್ಗವನ್ನುಕಂಡಂತೆ ಪರಮಾನಂದವಾಯಿತು.

ಆಗ ಕೃಷ್ಣನು ಎಲ್ಲಿ ಊರನ್ನು ನಿರ್ಮಿಸಿದರೆ ಸುರಕ್ಷಿತವಾಗಿ ಜನರಿಗೆ ಸೌಕರ್ಯವಾಗ ಬಹುದೆಂದು ಎಲ್ಲ ಕಡೆಗೆ ಹೋಗಿ ನೋಡಿಕೊಂಡು ಬಂದನು.

ಆಗ ರಥಗಳಿಗೆ ಹಿತಕರವಾದ ಮತ್ತು ಸಣ್ಣ ಉಸುಕು ಕೆಂಪು ಮಣ್ಣಿನಿಂದ ಕೂಡಿದ ಸಾಗರವೇಷ್ಟಿತವಾದ ಒಂದು ಉತ್ತಮ ಸ್ಥಳವು ಅವನ ಕಣ್ಣಿಗೆ ಬಿದ್ದಿತು. ಅದರ ಸಮೀಪದಲ್ಲಿಯೇ ರೈವತ ಪರ್ವತವಿದ್ದು ಸರ್ವರತ್ನಗಳಿಂದಲೂ ಅದು ತುಂಬಿದ್ದಿತು. ಅದು ಲಕ್ಷ್ಮಿಯ ನಿವಾಸಸ್ಥಾನದಂತೆ ತೋರುತ್ತಿತ್ತು. ಆ ರೈವತಕ ಗಿರಿಯಲ್ಲಿ ಏಕಲವ್ಯ ದ್ರೋಣ ಎಂಬಿಬ್ಬರು ಬಹುಕಾಲ ತಪಸ್ಸು ಮಾಡಿದ್ದರಿಂದ ಅದಕ್ಕೊಂದು ತೀರ್ಥದ ಶೋಭೆ ಬಂದಂತಾಗಿತ್ತು. ಅವರು ಅಲ್ಲಿಯೇ ವಿಸ್ತೀರ್ಣವಾದ ದ್ವಾರಾವತಿಯೆಂಬ ವಿಹಾರ ಭೂಮಿಯನ್ನು ರಚಿಸಿಟ್ಟಿದ್ದರು. ಅದೇ ಸ್ಥಾನದಲ್ಲಿ ಕೃಷ್ಣನು ಹೊಸ ಪಟ್ಟಣವೊಂದನ್ನು ಕೂಡಿಸಬೇಕೆಂದು ಸಂಕಲ್ಪಿಸಿದ್ದನು. ಅದು ಯಾದವರಿಗೂ ಸಮ್ಮತವಾಗಿ ಶಿಬಿರಗಳನ್ನು ನಿರ್ಮಿಸಿದರು. ಯಾದವೇಂದ್ರನಾದ ಕೃಷ್ಣನು ಅಲ್ಲಿಯೇ ದ್ವಾರಕಾ ಎಂಬ ನವೀನ ನಗರವೊಂದನ್ನು ನಿರ್ಮಿಸಿ ಅದರಲ್ಲಿ ದಿವ್ಯಭವ್ಯವಾದ ಅನೇಕ ಭವನಗಳನ್ನಾದರೂ ತನ್ನ ಸಂಕಲ್ಪಮಾತ್ರದಿಂದ ರಚಿಸಿ ಯಾದವರೊಂದಿಗೆ ಸುಖವಾಗಿ ವಾಸಮಾಡಿದನು.

ಜರಾಸಂಧನಿಂದ ಆಜ್ಞಪ್ತನಾದ ಕಾಲಯವನನು ಮಥುರಾ ಪಟ್ಟಣದ ಮೇಲೆ ದಾಳಿ ಮಾಡಿ ಕೃಷ್ಣನನ್ನು ಬಲರಾಮ ಸಹಿತವಾಗಿ ಸಂಹರಿಸಬೇಕೆಂದು ಹೊರಟಿದ್ದನು.

ಈ ಕಾಲಯವನನ ಚರಿತ್ರೆ ಅತ್ಯಂತ ವಿಚಿತ್ರವಿದ್ದು ಜಾತಿಸಾಂಕರ್ಯದ ಒಂದು ಸಂಕೇತ ದಂತಿದೆ. ವೃಷ್ಣಿ ಅಂಧಕರಿಗೆಲ್ಲ ಗುರುವಾದ ಮಹಾಮತಿ ಗಾರ್ಗ್ಯನು ಮದುವೆಮಾಡಿ ಕೊಂಡ ಬಳಿಕಾದರೂ ಹೆಂಡತಿಯನ್ನು ಮುಟ್ಟದೇ ಬ್ರಹ್ಮಚಾರಿಯಾಗಿಯೇ ಇದ್ದನು. ವಿವಾಹವಾದ ಬಳಿಕವೂ ಊರ್ಧ್ವರೇತಸ್ಕನಾಗಿಯೇ ಇದ್ದುದನ್ನು ನೋಡಿ ಶಾಲ ಎಂಬ ಹೆಸರಿನ ಯಾದವನು "ಗಾರ್ಗ್ಯನು ಷಂಢ"ನಿರುವನೆಂದು ಜನರಲ್ಲೆಲ್ಲ ಅಪಪ್ರಚಾರ ಮಾಡಿದನು. ಅದರಿಂದ ಅತ್ಯಂತ ಕ್ರುದ್ಧನಾದ ಆ ಗಾರ್ಗ್ಯ ಮುನಿಯು ಅಜಿತಂಜಯ ಪರ್ವತಕ್ಕೆ ಹೋಗಿ

ಹನ್ನೆರಡು ವರುಷ ಲೋಹಪಿಷ್ಟವನ್ನು ತಿಂದಿದ್ದು ಮಹಾದೇವರನ್ನು ಕುರಿತು ತಪಸ್ಸು ಮಾಡಿದನು. ಅದರಿಂದ ಪ್ರಸನ್ನನಾದ ಪರಶಿವನು ಏನು ವರಬೇಕೆಂದು ಕೇಳಿದಾಗ ''ವೃಷ್ಣಿ ಅಂಧಕರನ್ನು ಸಂಹಾರ ಮಾಡಲು ಸಮರ್ಥನಾದ ಓರ್ವ ತೇಜಸ್ವೀ ಪುತ್ರನನ್ನು ನನಗೆ ಕೊಡು'' ಎಂದು ವರಕೇಳಿದನು. ಅದರಂತೆ ರುದ್ರದೇವರು ಅವನಿಗೆ ವರಕೊಟ್ಟರು.

ನಿಪುತ್ರಿಕನಾದ ಯವನರಾಜನಿಗೆ ಈ ಸಮಾಚಾರ ತಿಳಿದು ಬರಲು ಅವನು ಆ ಗಾರ್ಗ್ಯಮುನಿಯನ್ನು ಸವಿಮಾತು ಹಾಗೂ ಆದರಸತ್ಕಾರಗಳಿಂದ ಮನ ಒಲಿಸಿ ತನ್ನ ಹತ್ತಿರ ತಂದು ಇಟ್ಟುಕೊಂಡನು.

ಅವನ ಊರಲ್ಲಿಯ ಗವಳಿಗರ ವಸತಿಯಲ್ಲಿ ಗೋಪಾಲೀ ಎಂಬ ಅಪ್ಸರೆಯು ಗೋಪಿಕಾ ಸ್ತ್ರೀಯರ ವೇಷದಿಂದಲೇ ವಾಸಮಾಡಿದ್ದಳು. ಒಂದು ದಿನ ಮುನಿಯು ಮನುಷ್ಯಲೋಕದುರ್ಲಭವಾದ ಆ ಗವಳಿಗ ಲಲನೆಯ ಲಲಿತ ಲಾವಣ್ಯ ತರಲತಾರುಣ್ಯಗಳನ್ನು ಕಂಡು ಮುಗ್ಧನಾಗಿ ಅವಳೊಡನೆ ರಮಿಸಿದನು. ಹೀಗೆ ರುದ್ರದೇವರ ವರದಿಂದ ದುಸ್ಸಹವಾದ ಆ ಗಾರ್ಗ್ಯನ ಗರ್ಭವು ತುರುಗಾಹಿಗಳ ತಂಡದಲ್ಲಿರುವ ಗೋಪಾಲೀ ಅಪ್ಸರೆಯಿಂದ ಧರಿಸಲ್ಪಟ್ಟಿತು. ಅದರಿಂದ ಹುಟ್ಟಿದವನೇ ಕಾಲಯವನ. ಇದನ್ನೆಲ್ಲ ತಿಳಿದ ಯವನರಾಜನು ಆ ಗೋಪಾಲಿಯ ಮಗನಾದ ಈ ಕಾಲಯವನನು ರುದ್ರದೇವರ ವರದಿಂದ ಮಹಾ ಪರಾಕ್ರಮಶಾಲಿಯಾಗುವನೆಂದು ತಿಳಿದು ತನ್ನ ಅಂತಃಪುರದಲ್ಲಿಯೇ ಅವನನ್ನು ತಂದಿಟ್ಟು ಬೆಳೆಸಿ ದೊಡ್ಡವನನ್ನಾಗಿ ಮಾಡಿದನು. ಅದರಿಂದ ಆ ಯವನ ರಾಜನು ಸತ್ತಬಳಿಕ ಅವನಿಗೆ ಸ್ವಂತ ಮಕ್ಕಳಿಲ್ಲದ್ದರಿಂದ ಸಾಕು ಮಗನಾದ ಈ ಕಾಲಯವನನೇ ಪಟ್ಟವನ್ನೇರಿದನು. ಹೀಗೆ ಕಾಲಯವನನು ಓರ್ವ ಬ್ರಹ್ಮರ್ಷಿಯ ಮಗನಾದರೂ ಗೊಲ್ಲತಿಯಲ್ಲಿ ಹುಟ್ಟಿ ಯವನನ ಮನೆಯಲ್ಲಿ ಬೆಳೆದು ಯವನ ರಾಜನಾಗಿದ್ದನು.

ಅವನು ಪ್ರಬುದ್ಧನಾದ ಬಳಿಕ ನಾರದರಿಂದ ತನ್ನ ಜನ್ಮ ವೈರಿಗಳಾದ ಅಂಧಕ ವೃಷ್ಣಿ ಮೊದಲಾದ ಯಾದವರ ಹಾಗೂ ಕೃಷ್ಣನ ಬಗೆಗೆ ಎಲ್ಲ ಮಾಹಿತಿಯನ್ನು ತಿಳಿದುಕೊಂಡು ಯುದ್ಧಸಿದ್ಧತೆಯನ್ನು ನಡೆಸಿದನು. ಅವನು ದಿನೇದಿನೇ ಪ್ರಬಲನಾಗುತ್ತ ನಡೆದುದನ್ನು ಕಂಡು ಶಕ, ತುರುಷ್ಕ, ಪಾರದ, ಪಲ್ಹವ, ಖಸ, ಶೃಂಗಲ ಮೊದಲಾದ ಮ್ಲೇಂಛ ರಾಜರೆಲ್ಲರ ಸಾವಿರಾರು ಗುಂಪುಗಳು ಬಂದು ಅವನನ್ನು ಕೂಡಿಕೊಂಡವು.

ಆಗ ಆ ಕಾಲಯವನನು ಇಂಥ ಅಸಂಖ್ಯ ಮ್ಲೇಂಛ ರಾಜರಿಂದಲೂ ತುಡುಗರ ತಂಡಗಳಿಂದಲೂ ದರೋಡೆಖೋರರ ದಂಡುಗಳಿಂದಲೂ ಕೂಡಿಕೊಂಡು ಮಥುರೆಯ ಮೇಲೆ ದಂಡೆತ್ತಿ ಬಂದನು. ಲೆಕ್ಕವಿಲ್ಲದ ಆನೆ ಕುದುರೆ ಕತ್ತೆ ಒಂಟೆಗಳಿಂದ ಕೂಡಿದ ಅವನ ಅಪರಂಪಾರ ಸೇನಾಸಾಗರದ ತೊತ್ತುಳಿದಾಟಕ್ಕೆ ಭೂಮಿ ತತ್ತರಿಸಿ ಹೋಯಿತು, ಅವನ ಸೈನ್ಯದ ಕಾಲ್ತುಳಿದಾಟದಿಂದ ಎದ್ದ ಕೆಂಧೂಳಿಯು ಸೂರ್ಯಮಂಡಲವನ್ನೇ ಮುಚ್ಚಿಹಾಕಿತು. ಅವನ ಸೇನೆಯಲ್ಲಿಯ ಕುದುರೆ ಕತ್ತೆ ಒಂಟಿ ಆನೆಗಳ ಮಲಮೂತ್ರಗಳಿಂದ ಒಂದು ನದಿಯೇ ಹೋಯಿತು. ಅದಕ್ಕೆ ಇಂದಿಗೂ 'ಅಶ್ವಶಕೃತ್' ಎಂದು ಕರೆಯುವರು. ಅದನ್ನು ನೋಡಿ ಕೃಷ್ಣನು ''ಇವನಿಗೂ ಮರಣಕಾಲ ಒದಗಿಬಂದಿದೆ'' ಎಂದು ಮನಸ್ಸಿನಲ್ಲಿ ಯೋಚಿಸಿ ದ್ವಾರಕಾ ಎಂಬ ನವ್ಯ ನಗರವನ್ನು ನಿರ್ಮಿಸಿ ಯಾದವರನ್ನೆಲ್ಲ ಮಥುರಾ ಪಟ್ಟಣವನ್ನು ಬಿಡಿಸಿ ಅಲ್ಲಿ ಒಯ್ದಿಟ್ಟು ಬರಿಗಾಲಿನಿಂದ ಯಾವ ಶಸ್ತ್ರಾಸ್ತ್ರವನ್ನೂ ಕೈಯ್ಯಲ್ಲಿ ಪಿಡಿಯದೇ ಮತ್ತೆ ತಾನೊಬ್ಬನೇ ಮಥುರೆಗೆ ಬಂದನು.

ಮಥುರೆಯಲ್ಲಿ ಕೃಷ್ಣ ಇರುವುದನ್ನು ಕಂಡು ಕಾಲಯವನನು ಅವನನ್ನು ಹಿಡಿಯಬೇಕೆಂದು ಮಥುರೆಗೆ ಧಾವಿಸಿದನು. ಅವನಿಗೆ ಅಂಜಿದಂತೆ ಮಾಡಿ ಕೃಷ್ಣನು ಆ ಮಥುರಾ ಪಟ್ಟಣವನ್ನು ಬಿಟ್ಟು ಓಡಹತ್ತಿದನು. ಆ ಯವನರಾಜನಾದರೂ ಅವನನ್ನು ಹಿಡಿದು ಹೊಡೆದು ಇಂದು ಕೊಂದೇಬಿಡಬೇಕೆಂದು ಬೆನ್ನಟ್ಟಿ ಓಡತೊಡಗಿದನು. ಕೇಶವನು ಹಿಂದೆನೋಡುವುದು ಮುಂದೆ ಓಡುವುದು ಹೀಗೆ ಮಾಡುತ್ತ ಆ ಕಾಲಯವನನನ್ನು ಬಹುದೂರ ಎಳೆದುಕೊಂಡು ಹೋದನು. ಎಷ್ಟು ಓಡಿದರೂ ಆ ಯವನೇಶ್ವರನಿಗೆ ಆ ಯೋಗೇಶ್ವರನು ಸಿಗಲಿಲ್ಲ. ಅಪೌರುಷೇಯವಾದ ನುಡಿಗಳಿಗ ನಿಲುಕದ ಆ ಮನೋವಾಚಾಮ್ ಅಗೋಚರ ವಸ್ತುವನ್ನು ಹಿಡಿಯುವ ಹವ್ಯಾಸದಿಂದ ಯವನನರಪತಿಯು ಏದುತ್ತ ಉಬ್ಬಸ ಪಡುತ್ತ ಓಡುತ್ತಲೇ ಇದ್ದನು.

ಹಿಂದೆ ಒಮ್ಮೆ ನಡೆದ ದೇವಾಸುರ ಯುದ್ಧದಲ್ಲಿ ಮಾಂಧಾತ ಮಹಾರಾಜನ ಮಗನಾದ ಮುಚುಕುಂದನು ದೈತ್ಯರೊಡನೆ ಕಲಿತನದಿಂದ ಕಾದಿ ದೇವತೆಗಳಿಗೆ ವಿಜಯವನ್ನು ತಂದಕೊಟ್ಟನು. ಆಗ ಸಂತುಷ್ಟರಾದ ದೇವತೆಗಳು ಅವನಿಗೆ ''ಬೇಕಾದ ವರವನ್ನು ಬೇಡಿಕೋ'' ಎಂದು ಹೇಳಿದಾಗ ಹೋರಾಟದ ಹಗರಣದಿಂದ ಬಸವಳಿದು ನಿತ್ರಾಣ ನಂತಾದ ಅವನು ಗಾಢ ನಿದ್ರೆಯನ್ನು ಬೇಡಿಕೊಂಡನು. ಮತ್ತು ''ನಾನು ನಿದ್ರೆಹತ್ತಿ ಮಲಗಿಕೊಂಡಾಗ ಯಾರಾದರೂ ಎಬ್ಬಿಸಿದರೆ ನನ್ನ ಕಣ್ಣಿನ ಕೆಂಗಿಡಿಯಿಂದ ಅವರ ಕೂಡಲೇ ಸತ್ತು ಬೆಂದು ಬೂದಿಯಾಗಿ ಹೋಗಬೇಕು'' ಎಂದು ಪುನಃ ಕೇಳಿಕೊಂಡನು.

''ತಥಾಸ್ತು'' ಎಂದು ದೇವತೆಗಳು ಅವನಿಗೆ ಬಯಸಿದ ವರವನ್ನು ಕೊಟ್ಟು ಮಲಗಿ ವಿಶ್ರಾಂತಿಹೊಂದಲಿಕ್ಕೆ ಅನುಮತಿಯನ್ನಿತ್ತರು. ಆಗ ರಣರಂಗದಲ್ಲಿ ದಣಿದು ಶರೀರವೆಲ್ಲ ಆಯಾಸದಿಂದ ಸೋತುಹೋದಂತಾದ ಆ ಮಹಾರಾಜನು ಒಂದು ಗಿರಿಗರ್ಭದಲ್ಲಿರುವ ಗಹನ ಗುಹೆಯಲ್ಲಿ ಪ್ರವೇಶಿಸಿ ಪ್ರಯಾಸ ಪರಿಹಾರಕ್ಕೆಂದು ನಿಶ್ಚಿಂತೆಯಿಂದ ಮಲಗಿದನು. ಅಂದು ತ್ರೇತಾಯುಗದ ಆರಂಭದಲ್ಲಿ ಗುಹಾಂಪ್ರವಿಷ್ಟನಾದ ಆ ಮಹಾರಾಯನು ತ್ರೇತಾಯುಗ ಮುಗಿದು ದ್ವಾಪರವೂ ಮುಗಿದು ಕಲಿಯುಗ ಪ್ರಾರಂಭವಾಗುವ ಹೊತ್ತು ಬಂದರೂ ಇನ್ನೂ ಎದ್ದಿರಲೇ ಇಲ್ಲ. ಎಚ್ಚರಿಕೆಯ ಕಾಟವಿಲ್ಲದೇ ಶಾಂತರೀತಿಯಿಂದ ಸುಖನಿದ್ರೆಯನ್ನು ಮಾಡುತ್ತಲೇ ಇದ್ದನು.

ಕಾಲಯನನ ಭಯದಿಂದೆಂಬಂತೆ ನಾಗಾಲೋಟ ಬಿಟ್ಟ ಕೃಷ್ಣನು ಓಡಿಓಡಿ ಮಂಚಕುಂದ ರಾಜನು ಮಲಗಿದ ಸ್ಥಲವನ್ನು ಹುಡುಕದೇ ತಿಳಿದು ಗೊಂಡಾರಣ್ಯದ ಆ ಗುಹಾಗರ್ಭವನ್ನು ಪ್ರವೇಶಿಸಿದನು. ಕೃಷ್ಣನ ಬೆನ್ನ ಹಿಂದೆಯೇ ಕಾಲಯವನನಾದರೂ ಆ ಗಹನಗಹ್ವರದೊಳಗೆ ಪ್ರವೇಶಿಸಿ ಅತ್ತಿತ್ತ ನೋಡುವಷ್ಟರಲ್ಲಿ ಯಾರೋ ಅಲ್ಲಿ ಮಲಗಿದಂತೆ ಕಂಡಿತು.

ಕೃಷ್ಣನೇ ಕಪಟವೇಷದಿಂದ ನಿದ್ದೆಯ ಸೋಗು ಹಾಕಿ ಮಲಗಿದ್ದಾನೆಂದು ಭಾವಿಸಿ ಆಯುಷ್ಯತುಂಬಿ ಬಂದ ಆ ಮೂರ್ಖನು ಶಲಭವು ದೀಪದ ಕುಡಿಯನ್ನು ಒದ್ದಂತೆ ಕಾಲಿನಿಂದ ಮಲಗಿದ ಮುಚಕುಂದನನ್ನು ಕೃಷ್ಣನೆಂದು ಬಗೆದು ಒದ್ದನು.

ಅದರಿಂದ ಎಚ್ಚರಾದ ಆ ರಾಜರ್ಷಿಯು ಎದ್ದು ತನ್ನ ಗಾಢನಿದ್ರಾಭಂಗದಿಂದ ಸಿಟ್ಟಾಗಿ ಕಾಲಿನಿಂದ ಹೊಡೆದದ್ದಕ್ಕೆ ಮತ್ತಿಷ್ಟು ಕಿಡಿಕಿಡಿಯಾಗಿ ಇಂದ್ರನ ವರವನ್ನು ನೆನೆದು ತನ್ನನ್ನು ಒದ್ದ ದೈತ್ಯನನ್ನು ಕೆಕ್ಕರಿಸಿ ನೋಡಿದನು.

ಅದರಿಂದ ಸಿಡಿಲು ಬಡೆದ ಮೋಟಮರದಂತೆ ಕಾಲಯವನನ ಮೈಗೆಲ್ಲ ಭಯಂಕರವಾದ ಉರಿಹತ್ತಿ ಒಂದು ಕ್ಷಣದಲ್ಲಿ ಅವನು ಸತ್ತು ಸುಟ್ಟು ಬೂದಿಯಾಗಿ ಹೋದನು.

ತನನ್ನು ಕಾಲಿನಿಂದ ಕೆಣಕಿದ ಮೂರ್ಖನು ತನ್ನ ಕಣ್ಣಿನ ಕಿಡಿಯಿಂದ ಕಮರಿ ಹೋದುದನ್ನು ಕಂಡು ಶಾಂತನಾದ ಮುಚುಕುಂದನು ಶಾಂತಕಾಂತವಾದ ದಿವ್ಯದೀಧಿಯಿತಿಂದ ಒಪ್ಪುವ ಶ್ರೀಕೃಷ್ಣನ ಶಾಮಸುಂದರ ವಿಗ್ರಹವು ತನ್ನ ತಲೆದಿಂಬಿನ ಹತ್ತಿರವೇ ನಿಂತಿದ್ದನ್ನು ನೋಡಿದನು. ಆಗ ಮುಂಚಕುಂದ ಮಹಾರಾಜನು ಕೃಷ್ಣನ ಪ್ರಮಾಣ, ಎತ್ತರ, ನಿಲುವುಗಳೆಲ್ಲ ತಾನಿದ್ದ ತ್ರೇತಾಯುಗದ ಮನುಷ್ಯ ಪ್ರಮಾಣಕ್ಕಿಂತ ತೀರ ಚಿಕ್ಕದಿದ್ದುದನ್ನು ಕಂಡ. ಅವನಿಗೆ ಯುಗ ಬದಲಾಗಿದೆ ಎಂದೆನ್ನಿಸಿತು. ಮತ್ತು ಅವನು ಗೋವಿಂದನಿಗೆ ''ನೀನು ಯಾರು ಇಲ್ಲಿಗೇಕೆ ಬಂದೆ? ನಾನು ಮಲಗಿ ಎಷ್ಟು ದಿನವಾಯಿತು? ನಿನಗೆ ತಿಳಿದಿದ್ದರೆ ಹೇಳು'' ಎಂದು ವಿಜ್ಞಾಪಿಸಿಗೊಂಡನು. ಆಗ ಕೃಷ್ಣನು ತನ್ನ ವಂಶದ ಮೂಲನಾಲಗಳನ್ನೆಲ್ಲ ಸಂಕ್ಷಿಪ್ತವಾಗಿ ತಿಳಿಯಾಗಿ ತಿಳಿಸುತ್ತ ''ಚಂದ್ರವಂಶದ ನಹುಷರಾಜನಿಗೆ ಯಯಾತಿಯೆಂಬ ಮಗನಿದ್ದನು. ಆ ಯಯಾತಿ ಮಹಾರಾಜನಿಗೆ ಯದು ಮೊದಲಾದ ನಾಲ್ಕು ಜನ ಮಕ್ಕಳಿದ್ದರು. ಆ ಯದುವಿನ ವಂಶದಲ್ಲಿ ಹುಟ್ಟಿದ ವಸುದೇವನ ಮಗನಾದ ನನಗೆ ವಾಸುದೇವ ಎಂದು ಕರೆಯುವರು. ನೀನು ತ್ರೇತಾಯುಗದಲ್ಲಿ ಮಲಗಿದ್ದಿ ಎಂದು ನನಗೆ ನಾರದರು ತಿಳಿಸಿದ್ದರು. ಈಗ ಕಲಿಯುಗವು ಪ್ರಾಪ್ತವಾಗುತ್ತಲಿದ್ದು ಈ ನನ್ನ ವೈರಿಯಾದ ಕಾಲಯವನನು ರುದ್ರದೇವರಿಂದ ಅವಧ್ಯತ್ವವರವನ್ನು ಪಡೆದದ್ದರಿಂದ ನೂರು ವರುಷ ಯುದ್ಧ ಮಾಡಿದರೂ ಯಾದವರಿಗೆ ಅವನನ್ನು ಕೊಲ್ಲವದಾಗುತ್ತಲಿರಲ್ಲ. ಅಂಥ ದುಷ್ಟನನ್ನು ನೀನು ಇಂದು ಭಸ್ಮಮಾಡಿ ಬಿಟ್ಟಿದ್ದರಿಂದ ನೀನೊಂದು ದೊಡ್ಡ ಕಾರ್ಯಮಾಡಿದಂತಾಯಿತು'' ಎಂದು ಎಲ್ಲವನ್ನೂ ಅವನಿಗೆ ವಿವರಿಸಿ ಹೇಳಿದನು. ಅದನ್ನು ಕೇಳಿ ಶ್ರೀಕೃಷ್ಣನೇ ತಾನು ಜಪತಪ ಸಮಾಧಿಗಳಿಂದ ಕಾಣಬಯಸಿದ ಪರಮ ಪುರುಷ ಎಂದು ತಿಳಿದು ಕೊಂಡನು. ಧನ್ಯತೆಯ ಭಾವಭಕ್ತಿಯಿಂದ ಅವನ ಅಡಿದಾವರೆಗೆ ನಮಸಿದ ಆ ಮುಚಕುಂದನು ಮತ್ತೊಮ್ಮೆ ವಂದಿಸಿ ಗೋವಿಂದನಿಗೆ ಹೋಗಿ ಬರುತ್ತೇನೆಂದು ಹೇಳಿ ಮತ್ತೂ ಮತ್ತೂ ವಂದಿಸಿ ತಪವನಾಚರಿಸಬೇಕೆಂದು ನಿರ್ಧರಿಸಿ ಹೈಮಾಚಲದ ಸಾನುಶ್ರೇಣಿಗಳ ಸೋಪಾನಗಳನೇರಿದನು.

ಅಲ್ಲಿ ಹಿಮಗಿರಿಯ ಉತ್ತುಂಗ ಶೃಂಗದ ಮಂಗಲಾಂಗಣದಲ್ಲಿ ನಿಂತು ಘೋರ ತಪವನಾಚರಿಸಿ ಪಾಂಚಭೌತಿಕವಾದ ನಶ್ವರ ನರ ದೇಹವನ್ನು ಬಿಟ್ಟು ತನ್ನ ಶುಭಕರ್ಮಗಳಿಂದ ಸ್ವರ್ಗವನ್ನು ಹೊಂದಿದನು.

ಕೃಷ್ಣನಾದರೂ ಹೀಗೆ ಉಪಾಯದಿಂದ ತನ್ನ ವೈರಿಯನ್ನು ಕೊಲ್ಲಿಸಿ ಗುಹೆಯ ಹೊರಗೆ ನಿಂತ ಅವನ ಅಪರಂಪರಾವಾದ ಪ್ರಚಂಡ ಸೇನೆಯ ಮೇಲೆ ಬಿದ್ದನು. ದಿಕ್ಕುಗುಣದ ಆ ಸೇನೆ ಕೃಷ್ಣನ ವೇಗವನ್ನು ತಾಳಲಾರದೆ ಓಡಿಹೋಯಿತು. ಅವರು ಬಿಟ್ಟು ಹೋದ ಧನ ಕನಕಗಳನ್ನೆಲ್ಲ ತೆಗೆದುಕೊಂಡು ಕೃಷ್ಣನು ದ್ವಾರಕೆಗೆ ಬಂದು ಅದರಿಂದ ತನ್ನ ಹೊಸ ರಾಜಧಾನಿಯನ್ನು ಅಲಂಕರಿಸಿದನು. ಇಂದ್ರಪುರಿಯಂತೆ ಸುಂದರವಾದ ಆ ದ್ವಾರಕಾ ಪಟ್ಟಣವನ್ನು ಭಗವಂತನ ಅಪ್ಪಣೆಯಂತೆ ನಿರ್ಮಿಸಿ ಅವನ ಅನುಮತಿಪಡೆದು ವಿಶ್ವಕರ್ಮನು ಸ್ವರ್ಗಕ್ಕೆ ಹೋದನು.

ಅನಂತರ ಜಗದೀಶನು ವಾಯುವನ್ನು ಕರೆದು ಸ್ವರ್ಗಲೋಕದಿಂದ ದಿವ್ಯವಾದ ಸುಧರ್ಮಸಭೆಯನ್ನು ಹೊತ್ತುಕೊಂಡು ಬರುವಂತೆ ಆಜ್ಞೈಸಿದನು. ಅದರಂತೆ ಆ ವಾತದೂತನು ದೇವಲೋಕಕ್ಕೆ ಹೋಗಿ ಅಲ್ಲಿಯ ದೇವತೆಗಳಿಗೆಲ್ಲ ಕೃಷ್ಣನ ಆಜ್ಞೆಯನ್ನು ತಿಳಿಸಿ ಅದನ್ನು ದ್ವಾರಕೆಗೆ

ತೆಗೆದುಕೊಂಡು ಬಂದನು. ಅದನ್ನು ಕೃಷ್ಣನ ಅಪ್ಪಣೆಯಂತೆ ದ್ವಾರಕೆಯ ಮಧ್ಯಭಾಗದಲ್ಲಿ ತಂದಿರಿಸಿದನು. ಕಾಮಗಾಮಿ ಹಾಗೂ ಕಾಮರೂಪಿಯೂ ಆದ ಆ ದೇವಸಭೆಯಲ್ಲಿ ಅಸಂಖ್ಯರಾದ ಯಾದವರೆಲ್ಲರೂ ಏಕಕಾಲಕ್ಕೆ ಪ್ರಶಸ್ತವಾಗಿ ಕುಳಿತು ಶ್ರೀಕೃಷ್ಣನ ಅಧ್ಯಕ್ಷತೆಯಲ್ಲಿ ಸಭೆ ಸಂಗೀತ ಮಂತ್ರಾಲೋಚನೆ ಮೊದಲಾದವುಗಳನ್ನು ನಡೆಯಿಸುತ್ತಲಿದ್ದರು.

ಹೀಗೆ ಶ್ರೀಕೃಷ್ಣನು ಅನೇಕ ದಿವ್ಯವಾದ ಭೋಗಸಾಮಾಗ್ರಿಗಳಿಂದಲೂ, ಧನ ಧಾನ್ಯ ಕನಕ ರತ್ನ ಮುತ್ತುಗಳಿಂದಲೂ ಫಲಪುಷ್ಪ ಪಲ್ಲವ ರಾಶಿಗಳಿಂದಲೂ ಆ ಪಟ್ಟಣವನ್ನು ತನ್ನ ಕೈ ಹಿಡಿದ ಕಾಂತೆಯನ್ನು ಅಲಂಕರಿಸುವಂತೆ ಶೃಂಗಾರ ಮಾಡಿದನು. ಮತ್ತು ಅಲ್ಲಿ ಚಾತುರ್ವರ್ಣ್ಯದ ವ್ಯವಸ್ಥೆಯನ್ನು ಮಾಡಿ ಸಚಿವ ಸೇನಾಧ್ಯಕ್ಷ ಶಿಲ್ಪಿ ಸೂತ ಮೊದಲಾದವರನ್ನೂ ನಿಯಮಿಸಿದನು.

ಉಗ್ರಸೇನನನ್ನು ಮಹಾರಾಜನೆಂದು ನಿಯಮಿಸಿ ತನ್ನ ಗುರುಗಳಾದ ಸಾಂದೀಪನಿ ಮುನಿಗಳನ್ನು ಪುರೋಹಿತರೆಂದು ಯೋಜಿಸಿದನು. ಅನಾಧೃಷ್ಟಿಯನ್ನು ಸೇನಾಪತಿ ಯೆಂದೂ ವಿಕದ್ರುವನ್ನು ಮುಖ್ಯ ಮಂತ್ರಿಯೆಂದೂ ನಿಯಮಿಸಿದನು. ಮತ್ತು ಯಾದವ ಕುಲದಲ್ಲಿಯೇ ಅತ್ಯಂತ ಬುದ್ಧಿವಂತರಾದ ಹತ್ತು ಜ್ಞಾನವೃದ್ಧರನ್ನು ಆರಿಸಿ ಸರ್ವಕಾರ್ಯ ಗಳನ್ನೂ ನಿರ್ವಾಹಮಾಡಿಕೊಂಡು ಹೋಗಲಿಕ್ಕೆಂದು ಒಂದು ಮಂತ್ರಿ ಮಂಡಳವನ್ನು ರಚಿಸಿದನು. ರಥ ವಿಭಾಗಕ್ಕೆ ದಾರುಕನನ್ನು ಮುಖ್ಯನನ್ನಾಗಿ ಮಾಡಿ ಅವನನ್ನು ತನ್ನ ಸಾರಥಿಯನ್ನಾಗಿ ನಿಯಮಿಸಿದನು. ಮತ್ತು ಸಮರಭಟರಲ್ಲಿ ಶ್ರೇಷ್ಠನಾದ ಸಾತ್ಯಕಿಯನ್ನು ಯೋಧಮುಖ್ಯನೆಂದು ನಿಯೋಜಿಸಿದನು. ಹೀಗೆಲ್ಲ ವ್ಯವಸ್ಥೆಯನ್ನು ಮಾಡಿ ವಿಶ್ವಸೃಷ್ಟಾರನಾದ ಕೃಷ್ಣನು ಯಾದವರೊಂದಿಗೆ ಸುಖದಿಂದ ಇದ್ದನು.

## ರುಕ್ಮಿಣೀ ಸ್ವಯಂವರ

ಆ ಬಳಿಕ ಕೃಷ್ಣನ ಅಭಿಪ್ರಾಯದಂತೆ ಬಲರಾಮನು ರೇವತ ರಾಜನ ಮಗಳಾದ ರೇವತಿಯನ್ನು ವಿವಾಹ ವಿಧಿಯಿಂದ ಸ್ವೀಕರಿಸಿದನು. ರಾಜರ್ಷಿ ಯಾದವನ ಮಗನಾದ ವಿದರ್ಭರಾಜನು ವಿಂಧ್ಯಾದ್ರಿಯ ದಕ್ಷಿಣಭಾಗದಲ್ಲಿ ವಿದರ್ಭ ಎಂಬ ನಗರವನ್ನು ಪೂರ್ವಕಾಲದಲ್ಲಿ ಸ್ಥಾಪಿಸಿದ್ದನು. ಅವನ ಮಕ್ಕಳಾದ ಕ್ರಥಕ್ಕೆ ಶಿಕರಿಂದ ಮುಂದೆ ಬೇರೆ ಬೇರೆ ರಾಜವಂಶಗಳು ಪ್ರವೃತ್ತವಾದವು. ಭೀಮನ ವಂಶದಲ್ಲಿ ವೃಷ್ಣಿರಾಜನು ಜನಿಸಿದಂತೆ ಕ್ರಥನಿಂದ ಅಂಶುಮಂತನೂ ಕೈಶಿಕನ ವಂಶದಲ್ಲಿ ಭೀಷ್ಮಕ ಮಹಾರಾಜನೂ ಹುಟ್ಟಿದರು. ಅಗಸ್ತ್ಯ ಋಷಿಯಿಂದ ರಕ್ಷಿತವಾದ ದಕ್ಷಿಣದಿಕ್ಕಿನಲ್ಲಿ ಕುಂಡಿನ ಪುರದಲ್ಲಿದ್ದು ಭೀಷ್ಮಕನು ರಾಜ್ಯವನ್ನಾಳುತ್ತಿದ್ದನು. ಅವನಿಗೆ ರುಕ್ಮಿ ಎಂಬ ಒಬ್ಬ ಗಂಡುಮಗನೂ ರುಕ್ಮಿಣಿ ಎಂಬ ಓರ್ವ ಕನ್ಯೆಯೂ ಇದ್ದರು.

ಮಹಾಬಲಿಷ್ಠನಾದ ರುಕ್ಮಿಯು ದ್ರುಮ ಎಂಬ ಋಷಿಯಿಂದ ದಿವ್ಯಾಸ್ತ್ರಗಳನ್ನೂ ಪರಶುರಾಮನಿಂದ ಬ್ರಹ್ಮಾಸ್ತ್ರವನ್ನೂ ಪಡೆದುಕೊಂಡು ಅದ್ಭುತ ಕರ್ಮಗಳನ್ನು ಮಾಡಿ ತೋರಿಸಿದ ಕೃಷ್ಣನೊಡನೆ ಸ್ಪರ್ಧಿಸುತ್ತಿದ್ದನು.

ರುಕ್ಮಿಣಿಯು ರೂಪದಿಂದ ತ್ರಿಭುವನತಲದಲ್ಲಿಯೇ ಅಪ್ರತಿಮಳಿದ್ದು ಅನೇಕ ಜನರ ಬಾಯಿಂದ ಕೃಷ್ಣನ ಗುಣಗಳನ್ನು ಕೇಳಿ ಅವನನ್ನೇ ಮದುವೆಯಾಗಬೇಕೆಂದು ಸಂಕಲ್ಪಿಸಿದ್ದಳು. ಆದರೆ ಜನ್ಮತ ಏವ ಕೃಷ್ಣದ್ವೇಷಿಯಾದ ರುಕ್ಮಿಯು ಅವನು ಕಂಸನನ್ನು ಕೊಂದ ಬಳಿಕಂತೂ ಅತ್ಯಂತ ಸಂತಪ್ತನಾದನು. ಮತ್ತು ಸ್ವಯಂ ಕೃಷ್ಣನು ರುಕ್ಮಿಣಿಯನ್ನು

ತನಗೆ ಕೊಡಬೇಕೆಂದು ಕೇಳಿದರೂ ಕೊಡಲೊಪ್ಪಲಿಲ್ಲ. ಮುಂದೆ ಜರಾಸಂಧನು ಚೇದಿದೇಶದ ಸುನೀಥ ರಾಜನ (ಧಮಘೋಷ) ಮಗನಾದ ಶಿಶುಪಾಲನಿಗೆ ರುಕ್ಮಿಣಿಯನ್ನು ಕೊಡಬೇಕೆಂದು ಭೀಷ್ಮಕನ ಹತ್ತಿರ ವಿನಂತಿ ಮಾಡಿಕೊಂಡನು.

ಯಾಕೆಂದರೆ ದಮಘೋಷನು ವಸುದೇವನ ತಂಗಿಯಾದ ಶ್ರುತಶ್ರವೆಯಲ್ಲಿ ತನಗೆ ಹುಟ್ಟಿದ ಶಿಶುಪಾಲ, ದಶಗ್ರೀವ, ರೈಭ್ಯ, ಉಪದಿಸ, ಬಲಿ, ಎಂಬ ಪಂಚಪುತ್ರರಲ್ಲಿ ಜ್ಯೇಷ್ಠನಾದ ಶಿಶುಪಾಲನನ್ನು ಜರಾಸಂಧನಿಗೆ ಸಂರಕ್ಷಣೆ ಮಾಡಲಿಕ್ಕೆ ಕೊಟ್ಟಿದ್ದನು. ಚೇದಿರಾಜನಾದ ವಸುವಿನ ಮಗ ಬೃಹದ್ರಥನ ವಂಶದಲ್ಲಿಯೇ ಜರಾಸಂಧನು ಹುಟ್ಟಿದನು. ಅದೇ ವಸುವಿನ ವಂಶದಲ್ಲಿಯೇ ದಮಘೋಷನಾದರೂ ಜನಿಸಿದ್ದರಿಂದ ಅವರಲ್ಲಿ ಸಂಬಂಧ ಸಾಮೀಪ್ಯವೂ ಇತ್ತು.

ಆದುದರಿಂದ ಜರಾಸಂಧನು ತನ್ನ ಜ್ಞಾತಿಯ ಮಗನಾದ ಶಿಶುಪಾಲನನ್ನು ತನ್ನ ಹೊಟ್ಟೆಯ ಮಗನಂತೆಯೇ ಬೆಳೆಸಿ ಸಂರಕ್ಷಿಸಿದ್ದನು. ತನ್ನ ಅಳಿಯನನ್ನು ಕೊಂದಿದ್ದರಿಂದ ಕೃಷ್ಣನ ಮೇಲೆ ಸಿಟ್ಟಾದ ಜರಾಸಂಧನು ರುಕ್ಮಿಣಿಯನ್ನು ತನ್ನ ವೈರಿಯಾದ ಕೃಷ್ಣನಿಗೆ ಕೊಡದೇ ತನ್ನ ರಕ್ಷಿತ ಮಗನಾದ ಶಿಶುಪಾಲನಿಗೆ ಕೊಡು ಎಂದು ಕೇಳಿದನು.

ಭೀಷ್ಮಕನಾದರೂ ಜರಾಸಂಧನ ಮಾತಿಗೆ ಬೆಲೆಕೊಟ್ಟು ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಡಲು ಸಮ್ಮತಿಸಿದನು. ಅದರಿಂದ ಸಂತುಷ್ಟನಾದ ಮಗಧರಾಜನು ಶಿಶುಪಾಲನನ್ನು ಕರೆದುಕೊಂಡು ತನ್ನ ಅನುಯಾಯಿಗಳಾದ ದಂತವಕ್ತ್ರ ಶೃಗಾಲವಾಸುದೇವ ಮೊದಲಾದವರನ್ನು ಕರೆದುಕೊಂಡು ವಿದರ್ಭದೇಶಕ್ಕೆ ಬಂದನು. ಇದಲ್ಲವೇ ಅಂಗ ವಂಗ ಕಲಿಂಗ ಕಾಶ್ಮೀರ ಮುಂತಾದ ದೂರದೂರ ದೇಶದ ರಾಜಕುಮಾರರು ರುಕ್ಮಿಣೀ ಸ್ವಯಂವರಕ್ಕೆಂದು ಬಂದರು. ಅವರೆಲ್ಲರನ್ನೂ ರುಕ್ಮಿಯು ಆನಂದದಿಂದ ಸ್ವಾಗತ ನೀಡಿ ಆದರದಿಂದ ಸತ್ಕರಿಸಿ ವಿದರ್ಭನಗರಕ್ಕೆ ಕರೆದುಕೊಂಡು ಹೋದನು. ತನ್ನ ಸೋದರತ್ತೆಯ ತೃಪ್ತಿಗಾಗಿ ರಾಮಕೃಷ್ಣರಾದರೂ ಅಲ್ಲಿಗೆ ತಮ್ಮ ಸೈನ್ಯದೊಂದಿಗೆ ಪ್ರಯಾಣ ಮಾಡಿದರು. ಆಗ ಕ್ರಥಕೈಶಿಕರು ಕೃಷ್ಣನ ಸ್ವಾಗತ ಸತ್ಕಾರಗಳನ್ನು ಮಾಡಿ ಅವನನ್ನು ಊರ ಹೊರಗೇ ಒಂದು ಮನೆಯಲ್ಲಿ ಇಳಿಸಿದರು.

ಮರುದಿನ ವಿವಾಹವಾಗುವ ಮುನ್ನ ರುಕ್ಮಿಣಿಯು ಮುಂಜಾವು ಮಂಗಳ ಸ್ನಾನ ಮಾಡಿ ಕುಲಸ್ವಾಮಿನಿಯಾದ ಶಚೀದೇವಿಯನ್ನು ಪೂಜಿಸಿ ಬರಲಿಕ್ಕೆಂದು ಊರ ಹೊರಗಿರುವ ಇಂದ್ರಾಣಿಯ ಮಂದಿರಕ್ಕೆ ಹೊರಟಳು. ದೇಹದಿಂದಲೂ ದೀಪ್ತಿಯಿಂದಲೂ ಥಳಥಳ ಮಿಂಚುವ ಸೌಂದರ್ಯದ ಪುತ್ಥಳಿಯಂತಿರುವ ಆ ರಾಜಕನ್ಯೆಯು ನಾಲ್ಕು ಗಾಲಿಯ ದಿವ್ಯವಾದ ರಥದಲ್ಲಿ ಕುಳಿತು ಊರ ಹೊರಗೆ ಬರುವದನ್ನು ನೋಡಿ ಕೃಷ್ಣನಿಗೆ ಸಾಕ್ಷಾತ್ ಲಕ್ಷ್ಮೀದೇವಿಯೇ ತನ್ನೆಡೆಗೆ ಬರುತ್ತಿರುವಂತೆ ಕಂಡಿತು.

ಆಗ ಕೃಷ್ಣನು ಬಲರಾಮ ಹಾಗೂ ಉಳಿದ ಯದು ವೀರರೊಡನೆ ವಿಚಾರವಿನಿಮಯ ಮಾಡಿ ಆ ಸೌಂದರ್ಯ ಪುತ್ಥಳಿಯನ್ನು ಅಪಹರಿಸಬೇಕೆಂದು ನಿರ್ಧಾರ ಮಾಡಿದನು. ಅಷ್ಟರಲ್ಲಿ ಮೆರವಣಿಗೆಯೊಂದಿಗೆ ಬಂದ ಆ ಮದುಮಗಳು ಶಚೀಮಂದಿರದೊಳಗೆ ಹೋಗಿ ಅಲ್ಲಿಯ ದೇವತಾಕಾರ್ಯಗಳನ್ನೆಲ್ಲ ಮುಗಿಸಿಗೊಂಡು ಹೊರಗೆ ಬಂದಳು. ತಕ್ಷಣದಲ್ಲಿ ಕೃಷ್ಣನು ಅಲ್ಲಿಗೆ ಬಂದು ಅವಳನ್ನು ಎತ್ತಿಕೊಂಡು ತನ್ನ ರಥಕ್ಕೆ ತಂದು ಅವಳೊಡನೆ ರಥಾರೋಹಣ

ಮಾಡಿದನು. ಒಮ್ಮೆಲೆ ಕನ್ಯೆಯನ್ನು ಅಪಹಾರ ಮಾಡಿದ್ದನ್ನು ಕಂಡು ರುಕ್ಮಿಯ ಸೈನಿಕರೆಲ್ಲರೂ ಕೃಷ್ಣನ ಮೇಲೆ ಮುಗಿಬೀಳಬೇಕೆನ್ನುವಷ್ಟರಲ್ಲಿ ಬಲರಾಮನು ಅಲ್ಲಿಯೇ ಸನಿಹದಲ್ಲಿರುವ ಹೆಮ್ಮರವೊಂದನ್ನು ಕಿತ್ತಿ ಏರಿಬರುವವರನ್ನೆಲ್ಲ ಥಳಿಸಹತ್ತಿದನು.

ಆನೆ ಕುದುರೆ ರಥಗಳನ್ನು ಏರಿಕೊಂಡು ಉಳಿದ ಯಾದವರೂ ಬಲರಾಮನೂ ಸುತ್ತಲೂ ನಿಂತ ವೈರಿಗಳನ್ನು ಪ್ರಹರಿಸಹತ್ತಿದರು. ಇತ್ತ ಕೃಷ್ಣನು ಅಣ್ಣ ಬಲರಾಮನಿಗೆ ಯುದ್ಧದ ಭಾರವನ್ನೆಲ್ಲ ಒಪ್ಪಿಸಿ ತಾನು ರುಕ್ಮಿಣಿಯನ್ನು ಕರೆದುಕೊಂಡು ರಥಾರೂಢನಾಗಿ ದ್ವಾರಕೆಗೆ ಹೊರಟನು. ಅಕ್ರೂರ, ವಿಪ್ರಥು, ಗದ, ಕೃತವರ್ಮ, ಸಾತ್ಯಕಿ ಮೊದಲಾದ ಯದುವೀರರು ಕೃಷ್ಣನು ಕನ್ಯಾಸಹಿತವಾಗಿ ಸುರಕ್ಷಿತ ಊರು ಮುಟ್ಟಲೆಂದು ತಾವು ರುಕ್ಮಿಯ ಸೈನಿಕರೊಂದಿಗೆ ಯುದ್ಧ ಮಾಡುತ್ತ ನಿಂತುಕೊಂಡರು.

ಕನ್ಯಾಪಹಾರದ ಸಮಾಚಾರವನ್ನು ಕೇಳಿ ಕಿಚ್ಚು ಕುಡಿದವರಂತೆ ರೋಸುರೊಚ್ಚು ಕಾವು ಕೆಚ್ಚುಗಳಿಂದ ಹುಚ್ಚರಂತಾದ ಅಂಗ ವಂಗ ಕಲಿಂಗ ದೇಶಗಳ ರಾಜರೂ, ಪೌಂಡ್ರಕ ವಾಸುದೇವನೂ ಎಲ್ಲರೂ ಕೂಡಿ ಕೃಷ್ಣನನ್ನು ಕೊಂದು ಆ ಕನ್ಯೆಯನ್ನು ಬಿಡಿಸಿಗೊಂಡು ಬರಬೇಕೆಂದು ಬಿರುಗಾಳಿಯಂತೆ ಯಾದವರ ಮೇಲೆ ಎರಗಿದರು.

ಕನ್ಯಾಲಾಭದ ಗೆಲುವಿನ ಉತ್ಸಾಹದಿಂದ ಉಬ್ಬಿಹೋದ ಯಾದವರು ಸಂಕರ್ಷಣನನ್ನು ಮುಂದೆ ಮಾಡಿಕೊಂಡು ಒಳ್ಳೇ ವೀರಾವೇಶದಿಂದ ಆ ರಾಜಮಂಡಲವನ್ನು ಎದುರಿಸಿದರು. ಕಾಳಭೈರವನಂತೆ ಪ್ರಳಯಾಗ್ನಿಯಂತೆ ಪ್ರಕ್ಷುಬ್ಧನಾಗಿ ನಿಂತುಕೊಂಡು ಬಲರಾಮನು ಸಮೀಪಕ್ಕೆ ಬಂದವರನ್ನೆಲ್ಲ ಹೆಮ್ಮರದಿಂದ ಹೊಡೆದು ಹುಡಿಗಟ್ಟುತ್ತಿದ್ದನು. ಹೀಗೆ ಭಯಂಕರ ಯುದ್ಧವು ನಡೆದಾಗ ರುಕ್ಮಿಯು ಮುಖ್ಯ ಕನ್ಯೆಯನ್ನೆ ಅಪಹರಿಸಿದ ಕೃಷ್ಣನು ರುಕ್ಮಿಣಿಯೊಂದಿಗೆ ರಣಾಂಗಣದಿಂದ ಪಾರಾಗಿ ಊರ ಕಡೆಗೆ ತೆರಳಿದ್ದಾನೆಂಬ ಸಮಾಚಾರ ಕೇಳಿ ಕಿಡಿ ಕಿಡಿಯಾದನು. ಕೃಷ್ಣನನ್ನು ಕೊಂದು ರುಕ್ಮಿಣಿಯನ್ನು ತಿರುಗಿ ತರುವವರೆಗೆ ನಾನು ಕುಂಡಿನಪುರವನ್ನು ಪ್ರವೇಶಿಸುವುದಿಲ್ಲ ಎಂದು ಭೀಷ್ಮಕನ ಎದುರಿಗೆ ಪ್ರತಿಜ್ಞೆಗೈದು ರಥಾರೂಢನಾಗಿ ಹೊರಟನು. ಅತ್ಯಂತ ವೇಗಗಾಮಿಯಾದ ರಥದಿಂದ ಕೃಷ್ಣನನ್ನು ಬೆನ್ನಟ್ಟಬೇಕೆಂದು ಓಡಿದ ರುಕ್ಮಿಯನ್ನು ಅನುಸರಿಸಿ ಅಂಶುಮಾನ್, ಶ್ರುತರ್ವ, ವೇಣುದಾರಿ ಹಾಗೂ ಭೀಷ್ಮಕನ ಇತರ ಮಕ್ಕಳು ಕ್ರಥಕೈಶಿಕ ಮೊದಲಾದ ಅನೇಕ ರಾಜರೂ ಕೃಷ್ಣನನ್ನು ಹಿಡಿಯಲಿಕ್ಕೆಂದು ತಮ್ಮ ರಥಗಳನ್ನು ಓಡಿಸಿದರು. ಅವರೆಲ್ಲರೂ ದ್ರುತಗತಿಯಿಂದ ಓಡುತ್ತ, ಹೋಗುವಷ್ಟರಲ್ಲಿ ಕೃಷ್ಣನು ನರ್ಮದೆಯ ತೀರದಲ್ಲಿ ತನ್ನ ಪ್ರೇಯಸಿಯಾದ ರುಕ್ಮಿಣಿಯೊಂದಿಗೆ ನಿಂತು ಕೊಂಡಿದ್ದನು. ಅವನನ್ನು ಕಂಡು ಅಡಿಯಿಂದ ಮುಡಿಯವರೆಗೆ ಕಿಡಿಯಿಡಿದಂತಾದ ರುಕ್ಮಿಯು ಉಳಿದ ಸೈನಿಕರಿಗೆಲ್ಲ ಅಲ್ಲಿಯೇ ನಿಲ್ಲ ಹೇಳಿ ಯುದ್ಧಮದದಿಂದ ಉನ್ಮತ್ತನಾಗಿ ತಾನೊಬ್ಬನೇ ಕೃಷ್ಣನ ಮೇಲೆ ಏರಿಹೋದನು.

ಗರುಡನಂತೆ ತನ್ನ ಮೇಲೆ ಎರಗಬೇಕೆಂದು ಬರುವ ಅವನನ್ನು ನೋಡಿ ಶೌರಿಯು ತಕ್ಷಣದಲ್ಲಿ ಒಂದು ಬಾಣಬಿಟ್ಟು ಅವನ ಖಡ್ಗವನ್ನು ತುಂಡರಿಸಿ ಮತ್ತೆ ಮೂರು ಬಾಣಗಳಿಂದ ಅವನ ಎದೆಗೆ ಪ್ರಹಾರಮಾಡಿದನು. ಅದರಿಂದ ರುಕ್ಮಿಯು ಎಚ್ಚರದಪ್ಪಿ ನೆಲಕ್ಕುರುಳಿದನು. ಅದೇ ಕಾಲಕ್ಕೆ ಉಳಿದ ರಾಜರಿಗೂ ಗುರಿಯಿಟ್ಟು ಕೃಷ್ಣನು ಬಾಣಬಿಡಲು ಅವರೆಲ್ಲರೂ ಮೂರ್ಛಿತನಾದ ರುಕ್ಮಿಯನ್ನು ಅಲ್ಲಿಯೇಬಿಟ್ಟು ಓಡಿಹೋದರು.

ಏಕಾಕಿಯಾಗಿ ನೆಲದಮೇಲೆ ಬಿದ್ದು ಮೈಯೆಲ್ಲ ನೆತ್ತರ ಮೆತ್ತಿದ ಸೋದರನನ್ನು ಕಂಡು ರುಕ್ಮಿಣಿಯು ಕರಳು ಕರಗಿ ಅವಳು ಕೃಷ್ಣನ ಪಾದದ ಮೇಲೆ ತಲೆಯಿಟ್ಟು ಸೋದರನಿಗೆ ಜೀವದಾನ

ಮಾಡಿಬೇಕೆಂದು ಬೇಡಿಕೊಂಡಳು. ತನ್ನ ನಲ್ಲೆಯ ನಲುಮೆಯ ಬಯಕೆಯನ್ನು ಮನ್ನಿಸಿ ಆ ಮುರಾರಿಯು ರುಕ್ಮಿಯನ್ನು ಹೊಡೆಯದೆ ಅವನಿಗೆ ಅಭಯ ದಾನ ಮಾಡಿ ತನ್ನ ಪ್ರೇಯಸಿಯನ್ನು ಸವಿನುಡಿಗಳಿಂದ ಸಂತೈಸಿ ಅವಳೊಂದಿಗೆ ಸಂತೋಷದಿಂದ ದ್ವಾರಕೆಗೆ ದಯಮಾಡಿಸಿದನು.

ಇತ್ತ ಯದುವೀರರೆಲ್ಲರೂ ಜರಾಸಂಧನನ್ನೂ ಹಾಗೂ ಅವನ ಅನುಚರರಾದ ರಾಜರ ಗುಂಪನ್ನೂ ಹೊಡೆದು ಹಣ್ಣು ಮಾಡಿ ಓಡಿಸಿ ಜಯಘೋಷಮಾಡುತ್ತ ಬಲರಾಮನನ್ನು ಮುಂದೆಮಾಡಿಕೊಂಡು ದ್ವಾರಕೆಗೆ ತೆರಳಿದರು. ನರ್ಮದೆಯ ತೀರದಿಂದ ಕೃಷ್ಣನು ದೂರಹೋದುದನ್ನು ಕಂಡ ಬಳಿಕ ಶ್ರುತರ್ವ ಎಂಬ ರಾಜನು ಆ ರಣಭೂಮಿಗೆ ಬಂದು ಹೆಣದಂತೆ ಬಿದ್ದಿರುವ ರುಕ್ಮಿಯನ್ನು ತನ್ನ ರಥದಲ್ಲಿ ಹಾಕಿಕೊಂಡು ಊರಿಗೆ ಮರಳಿದನು. ಆದರೆ ದುರಭಿಮಾನಿಯಾದ ರುಕ್ಮಿಯು ತನ್ನ ಪ್ರತಿಜ್ಞೆಯಂತೆ ಕೃಷ್ಣನನ್ನು ಹೊಡೆದು ರುಕ್ಮಿಣಿಯನ್ನು ಮರಳಿ ಕರೆತರುವುದು ತನ್ನ ಕೈಲಾಗದ್ದರಿಂದ ಕುಂಡಿನಪುರದಲ್ಲಿ ಹೋಗಲು ಇಚ್ಛೆಯಿಲ್ಲದೆ ಜನರಿಗೆ ತೋರಿಸಲು ಮೋರೆಯಿಲ್ಲದೆ, ವಿದರ್ಭದೇಶದಲ್ಲಿ ಭೋಜಕಟ ಎಂಬ ಹೊಸ ಊರನ್ನೇ ಕಟ್ಟಿಸಿ ಅಲ್ಲಿ ಇರಹತ್ತಿದನು. ರುಕ್ಮಿಯು ಆ ಭೋಜಕಟದಲ್ಲಿಯೇ ಇದ್ದು ದಕ್ಷಿಣದೇಶವನ್ನೆಲ್ಲ ಆಳುತ್ತಿದ್ದನು. ಅವನ ತಂದೆಯಾದ ಭೀಷ್ಮಕನು ಮಾತ್ರ ಕುಂಡಿನಪುರದಲ್ಲಿಯೇ ವಾಸಮಾಡಿದ್ದನು.

## "ಸುಮುಹೂರ್ತೇ ಸಾವಧಾನ"

ಇತ್ತ ಕೃಷ್ಣನು ದ್ವಾರಕೆಗೆ ಬಂದಬಳಿಕ ವಿಧಿಪೂರ್ವಕವಾಗಿ ರುಕ್ಮಿಣಿಯನ್ನು ವಿವಾಹಮಾಡಿಕೊಂಡು ಸೀತೆಯ ಜೊತೆಗೆ ಶ್ರೀರಾಮನಂತೆ ಶಚಿಯೊಂದಿಗೆ ಸುರೇಂದ್ರನಂತೆ ಸಂತಸದಿಂದಿದ್ದನು. ಕೃಷ್ಣನಿಗೆ ರುಕ್ಮಿಣಿಯೇ ಜ್ಯೇಷ್ಠಪತ್ನಿಯೂ ಪಟ್ಟದರಸಿಯೂ ಪ್ರಾಣ ಪ್ರೇಯಸಿಯೂ ಆದಳು. ಅವಳ ರೂಪದಲ್ಲಿ ಮೋದಕತೆಯಿತ್ತು. ಗುಣದಲ್ಲಿ ಮೋಹಕತೆಯಿತ್ತು, ಅವಳ ಶೀಲದಲ್ಲಿ ಪತಿಪ್ರಾವಣ್ಯವಿತ್ತು. ನುಡಿಯಲ್ಲಿ ಮಾರ್ದವವಿತ್ತು. ನಡೆಯಲ್ಲಿ ಆರ್ಜವವಿತ್ತು. ಒಟ್ಟಾರೆ ಅವಳಿಗೆ ಕೃಷ್ಣನಲ್ಲಿ ನಿರತಿಶಯವಾದ ಪ್ರೇಮವಿತ್ತು. ಅವನಿಗೂ ಅವಳಲ್ಲಿ ಪರಾಕಾಷ್ಠ ಪ್ರೀತಿಯಿತ್ತು. ಅಂತೆಯೇ ಅವರಿಬ್ಬರ ದಾಂಪತ್ಯ ಜೀವನದಲ್ಲಿ ಜಗತ್ತಿಗೇ ಒಂದು ಆದರ್ಶ ಪಾಠವಿತ್ತು. ಯಥಾರ್ಥ ಪ್ರಣಯದ ನಿರಾಡಂಬರ ನಿದರ್ಶನವಿತ್ತು.

ಆ ಸತೀಮಣಿಯಲ್ಲಿ ಶ್ರೀಕೃಷ್ಣನಿಗೆ ಚಾರುದೇಷ್ಣ, ಸುದೇಷ್ಣ, ಪ್ರದ್ಯುಮ್ನ, ಸುಷೇಣ, ಚಾರುಗುಪ್ತ, ಚಾರುಬಾಹು, ಚಾರುವಿಂದ, ಸುಚಾರು, ಭದ್ರಚಾರು, ಚಾರು ಎಂಬ ಹತ್ತು ಜನ ಮುತ್ತಿನಂಥ ತೇಜಸ್ವಿಗಳೂ ಪರಾಕ್ರಮಶಾಲಿಗಳೂ ಆದ ಮಕ್ಕಳು ಹುಟ್ಟಿದರು. ಮತ್ತು ಚಾರುಮತಿ ಎಂಬ ಅನ್ವರ್ಥಕ ಹೆಸರಿನ ಚೆಲುವೆಯಾದ ಕನ್ಯಾಮಣಿಯು ಒಬ್ಬಳು ಹುಟ್ಟಿದಳು.

ಗೋವಿಂದನು ರುಕ್ಮಿಣಿಯನ್ನಲ್ಲದೆ ಬೇರೆ ಸತ್ಕುಲ ಪ್ರಸೂತರಾದ ಏಳುಜನ ಕನ್ನೆಯರನ್ನು ಮದುವೆಯಾದನು. ಅವರೆಲ್ಲರೂ ವಿದ್ಯಾ, ಶೀಲ, ಗುಣ, ರೂಪ, ಸೌಜನ್ಯಗಳಿಂದ ಕೃಷ್ಣಕಾಂತೆ ಯರಾಗಲು ಸರ್ವಥಾ ಯೋಗ್ಯರಿದ್ದು ಕಾಲಿಂದಿ. ಮಿತ್ರವಿಂದಾ, ಸತ್ಯಭಾಮಾ, ಜಾಂಬವತೀ, ರೋಹಿಣೀ, ಸತ್ಯಾ, ಲಕ್ಷ್ಮಣಾ, ಶೈಬ್ಯಾ ಎಂಬ ಹೆಸರಿನಿಂದ ಅವರು ಪ್ರಸಿದ್ಧರಾಗಿದ್ದರು. ಇವರಲ್ಲದೇ ಮತ್ತೆ ಹದಿನಾರು ಸಾವಿರ ಸ್ತ್ರೀಯರನ್ನು ಕೃಷ್ಣನು ಮದುವೆಯಾದನು. ಇವರೆಲ್ಲರಿಂದ ಶಸ್ತ್ರಶಾಸ್ತ್ರ ಕಲಾಕೋವಿದರೂ ಬಲಿಷ್ಠರೂ ಯೋಗಿಗಳೂ ಆದ ಸಾವಿರಾರು ಜನ ಮಕ್ಕಳಾದರು.

## ಇತಿಹಾಸದ ಪುನರಾವೃತ್ತಿ

ಹೀಗೆ ಎಷ್ಟೋವರ್ಷ ಕಳೆದ ಬಳಿಕ ಮುಂದೆ ರುಕ್ಮಿಯ ಮಗಳಾದ ಶುಭಾಂಗೀ ಎಂಬ ಕನ್ಯೆಯು ಉಪವರಳಾದಳು. ರುಕ್ಮಿಣಿಯಂತೆ ಶುಭಾಂಗಿಯಾದರೂ ವಿಶ್ವವಿಮೋಹಕವಾದ ಅಪ್ರತಿಮ ಸೌಂದರ್ಯ, ಕಾಂತಕಾಂತಿ, ಸದ್ಗುಣ ಶಾಂತಿ, ಶೀಲಸೌಜನ್ಯಗಳಿಂದ ಪ್ರಖ್ಯಾತಳಾಗಿದ್ದಳು. ಸೌಂದರ್ಯದ ತವನಿಧಿಯಂತಿದ್ದ ತನ್ನ ಮಗಳನ್ನು ಕುಲಶೀಲ ವಿದ್ಯಾವಯೋನು ರೂಪನಾದ ಯೋಗ್ಯವರನಿಗೆ ಕೊಡಬೇಕೆಂದು ರುಕ್ಮಿಯು ಅವಳ ಸ್ವಯಂವರವನ್ನು ಏರ್ಪಡಿಸಿದನು. ಅದಕ್ಕಾಗಿ ದಿಗ್ದೇಶಗಳಿಂದ ಶ್ರೀಮಂತರೂ ಧೀಮಂತರೂ ಬಲವಂತರೂ ಆದ ಅನೇಕ ರಾಜಕುಮಾರರು ಆಗಮಿಸಿದ್ದರು. ರುಕ್ಮಿಣಿಯ ಮಗನಾದ ಪ್ರದ್ಯುಮ್ನನಾದರೂ ತನ್ನ ಮಿತ್ರರಾದ ಯದುಕುಮಾರರೊಂದಿಗೆ ಒಡಗೂಡಿ ಸ್ವಯಂವರಕ್ಕಾಗಿ ಬಂದಿದ್ದನು.

ರಾಜಕುಮಾರಿಯಾದ ಶುಭಾಂಗಿಯು ಸ್ವಯಂವರದ ಮಾಲೆಯನ್ನು ಪಿಡಿದುಕೊಂಡು ರಾಜಶ್ರೇಣಿಯಲ್ಲಿ ರಾಜಹಂಸಿಯಂತೆ ಮೆಲ್ಲನೆ ಮುಂಬರುತ್ತಲಿರುವಾಗ ಸಿಂಹ ಕೃತಿಯ ಚೆಲುವಿನ ಚೈತನ್ಯವೇ ಸ್ಫುರಣಗೊಂಡಂತಿರುವ ಪ್ರದ್ಯುಮ್ನನ ಕಾಂತ ಕಮನೀಯವಾದ ಮನ್ಮಥಮೂರ್ತಿಯು ಅವಳ ಕಣ್ಣಿಗೆ ಬಿದ್ದಿತು. ಅವನ ವೀರವಿಕ್ರಮದ ವಾರ್ತೆಗಳಂತೂ ಅನೇಕ ಜನರ ಬಾಯಿಂದ ಬಾಯಿಗೆ ಎಷ್ಟೋ ಸಲ ಅವಳ ಕಿವಿಗೂ ಬಿದ್ದಿದ್ದವು. ಅವನನ್ನೇ ಮದುವೆಯಾಗಬೇಕೆಂದು ಅವಳು ಮೊದಲೇಮನಸಾ ಸಂಕಲ್ಪಿಸಿದ್ದಳು. ಆದುದರಿಂದ ರತಿರೂಪಿಣಿಯೂ ಸತಿಶೀಲಿನಿಯೂ ಗುಣಮಾಲಿನಿಯೂ ಆದ ಆ ಶುಭಾಂಗಿಯು ಅನಂಗ ರೂಪನಾದ ಪ್ರದ್ಯುಮ್ನನ ಕೊರಳಿಗೆ ಮಾಲೆಯನ್ನು ಹಾಕಿದಳು. ಇಂದ್ರಸೇನೆಯು ಮೌದ್ಗಲ್ಯನನ್ನು ಕಾಮಿಸಿದಂತೆ ಶುಭಾಂಗಿಯಾದರೂ ಪ್ರದ್ಯುಮ್ನನನ್ನು ಪ್ರೇಮಿಸಿ ಒಲಿದು ಮದುವೆಯಾದಳು. ನಿರಾಶರಾದ ಇತರ ರಾಜರೆಲ್ಲ ನಿರುತ್ಸಾಹರಾಗಿ ತಮ್ಮ ತಮ್ಮ ಸ್ಥಾನಗಳಿಗೆ ಮರಳಿದರು.

ಕಳೆಕಾಂತಿ ಶೌರ್ಯಸೌಂದರ್ಯಗಳಿಂದ ಕೃಷ್ಣನ ಪ್ರತಿರೂಪದಂತಿರುವ ಪ್ರದ್ಯುಮ್ನನು ಶುಭಾಂಗಿಯನ್ನು ಕರೆದುಕೊಂಡು ಯದುಪುಂಗವರೊಡನೆ ದ್ವಾರಕೆಗೆ ಬಂದನು. ದಮಯಂತಿಯ ಜೊತೆಗೆ ನಲರಾಜನಿದ್ದಂತೆ ಗುಣವಂತಿಯೂ ರಸವಂತಿಯೂ ಆದ ಆ ಚಾರ್ವಂಗಿ ಶುಭಾಂಗಿಯೊಂದಿಗೆ ಕೃಷ್ಣ ಕುಮಾರನು ಸುಖದಿಂದಿದ್ದನು. ಅವನಿಗೆ ಆ ಶುಭಾಂಗಿಯಲ್ಲಿ ದೇವಗರ್ಭದಂತೆ ಸರ್ವಾಂಗ ಸುಂದರನಾದ ಅನಿರುದ್ಧ ಎಂಬ ಸುಕುಮಾರನು ಜನಿಸಿದನು. ಧನುರ್ವೇದ, ವೇದ ನೀತಿಶಾಸ್ತ್ರಗಳಲ್ಲಿ ಅನಿರುದ್ಧನು ಅಪ್ರತಿಮನಾಗಿ ಜಗತ್ತಿನಲ್ಲಿಯೇ ಅದ್ವಿತೀಯ ಶೂರನೆಂದು ಪ್ರಸಿದ್ಧನಾದನು. ಅವನಾದರೂ ಪ್ರಾಯಕ್ಕೆ ಬಂದಬಳಿಕ ರುಕ್ಮಿಯಮೊಮ್ಮಗಳಾದ, ಚೇತನ ಚಿಗುರಿದ ಚೆಲುವಿನ ಚಿತ್ತಾರದಂತಿದ್ದ ರುಕ್ಮವತಿ ಎಂಬ ಕನ್ಯೆಯನ್ನು ಒಲಿದು ತನಗೆ ಕೊಡಬೇಕೆಂದು ರುಕ್ಮಿಗೆ ಹೇಳಿಕಳಿಸಿದನು.

ರುಕ್ಮಿಯು ಜಾತ್ಯಾ ಕೃಷ್ಣನೊಂದಿಗೆ ವೈರಭಾವದಿಂದ ಸ್ಪರ್ಧಿಸುತ್ತಲಿದ್ದರೂ ಅನಿರುದ್ಧನ ಸದ್ಗುಣ ಸೌಂದರ್ಯಗಳಿಂದ ಲುಬ್ಧನಾದುದರಿಂದಲೂ ರುಕ್ಮಿಣಿಯ ಆಗ್ರಹ ವಿಶೇಷವಾದುದರಿಂದಲೂ ರುಕ್ಮವತಿಯನ್ನು ಆ ಪ್ರದ್ಯುಮ್ನಕುಮಾರನಿಗೆ ಧಾರೆಯೆರೆದು ಕೊಡಲು ಸಮ್ಮತಿಸಿ ಕೃಷ್ಣನಿಗೆ ಹೇಳಿಕಳಿಸಿದನು. ಆಗ ಕೇಶವನಾದರೂ ಸಂಭ್ರಮದಿಂದ ತನ್ನ ಮೊಮ್ಮಗನ ಮದುವೆಗೆ ರುಕ್ಮಿಣಿ ಬಲರಾಮ ತನ್ನ ಎಲ್ಲ ಮಕ್ಕಳು ಹಾಗೂ ಇತರ ಅಪ್ತೇಷ್ಟ ಪರಿವಾರದೊಂದಿಗೆ ಸೇನಾಸಮೂಹ ಸಮೇತರಾಗಿ ವಿದರ್ಭ ನಗರಿಗೆ ಬಂದನು.

ರುಕ್ಮಿಯಾದರೂ ಹಿಂದಿನ ದ್ವೇಷ ಅಸೂಯಾದಿಗಳನ್ನೆಲ್ಲ ಮರೆತು ಮೊಮ್ಮಗಳ ವಿವಾಹಕ್ಕೆ ಸಂಭ್ರಮದಿಂದ ತನ್ನ ಗೆಳೆಯರ ಹಾಗೂ ಬಂಧು ಬಾಂಧವರನ್ನೆಲ್ಲ ಕರೆಯಿಸಿ ಯಾದವ ವೀರರಿಗೆಲ್ಲ ಆದರದಿಂದ ಸ್ವಾಗತಸತ್ಕಾರಗಳನ್ನು ನೀಡಿದನು. ಆ ಪ್ರಚಂಡ ಜನಸ್ತೋಮದಲ್ಲಿ ಶುಭ ಮುಹೂರ್ತದಲ್ಲಿ ಅನಿರುದ್ಧನು ವಿಧಿಪೂರ್ವಕವಾಗಿ ರುಕ್ಮವತಿಯ ಪಾಣಿಗ್ರಹಣವನ್ನು ಮಾಡಿದನು. ಒಂದಾನೊಂದು ಕಾಲಕ್ಕೆ ವೈರಿಗಳಾಗಿ ಹಣಾಹಣಿ ಹೋರಾಡಿದ ವೈದರ್ಭರೂ ಯಾದವರೂ ಈಗ ಪರಮ ಸ್ನೇಹಿತರಾಗಿ ಅನ್ಯೋನ್ಯ ಅನುರಾಗದಿಂದ ಒಬ್ಬರಿಗೊಬ್ಬರನ್ನು ಗೌರವಿಸಿ ಒಳ್ಳೇ ಸಂಭ್ರಮದಿಂದ ಆ ಸಮಾರಂಭದಲ್ಲಿ ಕಲೆತು ಒಲಿದು ಉಲಿದು ನಕ್ಕು ನಲಿದರು. ವೈದರ್ಭರು ವೃಷ್ಣಿಗಳನ್ನು ದೇವರಂತೆ ಪೂಜಿಸಿದರು.

ಮುಂದೆ ಒಂದು ದಿನ ಅಶ್ಮಕಾಧಿಪತಿ, ವೇಣುದಾರಿ, ಶ್ರುತರ್ವಾ, ಚಾಣೂರ, ಕ್ರಾಥ, ಅಂಶುವಲಾನ್, ಜಯತ್ಸೇನ ಮೊದಲಾದ ದಾಕ್ಷಿಣಾತ್ಯ ರಾಜರೆಲ್ಲರೂ ತಮ್ಮ ತಮ್ಮಲ್ಲಿ ಒಂದು ದುರಾಲೋಚನೆಯನ್ನು ಮಾಡಿಕೊಂಡು ರುಕ್ಮಿಯ ಹತ್ತಿರ ಬಂದು ಏಕಾಂತದಲ್ಲಿ "ಪ್ರಭೋ! ನೀನು ಅಕ್ಷವಿದ್ಯೆಯಲ್ಲಿ ಅಪ್ರತಿಮ ಪಂಡಿತನಿರುವಿ. ಆದರೆ ಈ ಬಲರಾಮನಿಗೆ ಮಾತ್ರ ಆ ಆಟದಲ್ಲಿ ಗತಿ ಇಲ್ಲ. ಆಡುವ ಹವ್ಯಾಸ ಮಾತ್ರ ಬಹಳಷ್ಟಿದೆ. ಆದುದರಿಂದ ನಿನ್ನನ್ನು ಮುಂದೆ ಮಾಡಿ ಅವನೊಡನೆ ಲೆತ್ತವಾಡಿ ಅವನನ್ನು ಸೋಲಿಸಬೇಕೆಂದು ಮಾಡಿದ್ದೇವೆ. ಈ ನಮ್ಮ ಇಚ್ಛೆಯನ್ನು ನೀನು ಪೂರೈಸಬೇಕು" ಎಂದು ಬೇಡಿಕೊಂಡರು.

ರುಕ್ಮಿಗಾದರೂ ಅವರ ಈ ಕಪಟ ಯುಕ್ತಿಯು ಮನಸ್ಸಿಗೆ ಬಂದು ಉತ್ಕೃಷ್ಟವಾದ ಒಂದು ಕ್ರೀಡಾಮಂಟಪವನ್ನು ನಿರ್ಮಿಸಲು ಆಜ್ಞೆಯಿತ್ತನು. ಕೂಡಲೇ ಬಂಗಾರಕಂಬಗಳಿಂದ ಒಂದು ದಿವ್ಯವಾದ ದ್ಯೂತಗೃಹವನ್ನು ಕಟ್ಟಿಸಿ, ಶ್ರೀಗಂಧ ಸಲಿಲದಿಂದ ಥಳ ಹಾಕಿಸಿ, ಪನ್ನೀರು ಚಿಮುಕಿಸಿ, ನೆಲದ ತುಂಬ ಹೂಗಳನ್ನು ಹಾಸಿ, ಹಾರಗಳನ್ನು ಹರವಿ, ಬಳ್ಳಿವಾಡಗಳನ್ನು ತಿರುವಿ, ತಳಿರುತೋರಗಳನ್ನು ಕಟ್ಟಿ ಬಂಗಾರದ ಆಸನಗಳನ್ನಿಟ್ಟು ತಾವು ಶೃಂಗಾರ ಮಾಡಿಕೊಂಡು ಬಂದು ಕುಳಿತರು ರುಕ್ಮಿಯ ಪರಿವಾರದವರು.

ರುಕ್ಮಿಯ ಆಮಂತ್ರಣದ ಮೇರೆಗೆ ಬಲದೇವನಾದರೂ ದ್ಯೂತಮಂಟಪದಲ್ಲಿ ಬಂದು "ಆಗಲಿ, ನಾವೆಲ್ಲರೂ ಕೂಡಿ ಲೆತ್ತವನ್ನಾಡೋಣ, ಬನ್ನಿರಿ. ಪಣ ಹಚ್ಚಿರಿ" ಎಂದು ಹೇಳಿ ತನಗಾಗಿ ರಚಿಸಿದ ಆಸನದ ಮೇಲೆ ಬಂದು ಕುಳಿತನು. ಕಪಟದಿಂದ ಬಲರಾಮನನ್ನು ಗೆಲ್ಲಬೇಕೆಂದು ಕುತಂತ್ರ ಹೂಡಿದ ಆ ದಕ್ಷಿಣದ ರಾಜರೆಲ್ಲರೂ ಸಾವಿರಾರು ಬಂಗಾರದ ನಾಣ್ಯಗಳನ್ನೂ ಅನೇಕ ಮುತ್ತುರತ್ನಗಳನ್ನೂ ಅಲ್ಲಿಗೆ ಕೂಡಲೇ ತೆಗೆದುಕೊಂಡು ಬಂದರು. ಆಗ ಅವರಲ್ಲಿ ಸರ್ವಸ್ವವನ್ನು ಕಸಿಯುವ, ಶಾಂತಿಸಂತಸಗಳನ್ನು ಕೆದಡುವ, ನಂತರ ಕಲಹಕಾರಣವಾದ ಲೆತ್ತದಾಟ ಸುರುವಾಯಿತು. ರುಕ್ಮಿಯೊಂದಿಗೆ ಆಡುವಾಗ ಬಲದೇವನು ಮೊದಲು ಸಾವಿರ ನಿಷ್ಕ ಹಾಗೂ ರನ್ನ ಹೊನ್ನುಗಳನ್ನು ಪಣಕ್ಕೆ ಇಟ್ಟನು. ಅದೆಲ್ಲವನ್ನೂ ರುಕ್ಮಿಯು ಗೆದ್ದನು. ಮತ್ತೆ ಅಷ್ಟು ಹಣವನ್ನೆ ಬಲದೇವನು ಪಣಕ್ಕೊಡ್ಡಿದನು ಮತ್ತೆ ಸೋತನು.

ಹೀಗೆ ಅನೇಕ ಸಲ ಬಲರಾಮನನ್ನು ಗೆದ್ದು ಬಳಿಕ ನಡುವೆ ಒಮ್ಮೆ ರುಕ್ಮಿಯು ತಾನು ಹತ್ತು ಕೋಟಿ ಹೊನ್ನುಗಳನ್ನು ಪಣಕ್ಕೆ ಹಚ್ಚಿದನು. ಅದರಲ್ಲಿಯೂ ಮಹಾತ್ಮನಾದ ಬಲರಾಮನನ್ನು ಸೋಲಿಸಿ "ಯುದ್ಧದಲ್ಲಿ ಅಜಿಂಕ್ಯನಾದರೂ ಬಲರಾಮನು ಲೆತ್ತದಾಟದ ವಿದ್ಯೆಯಲ್ಲಿ ಮಾತ್ರ ಸಂಪೂರ್ಣದುರ್ಬಲನೂ ಬುದ್ಧಿಗೇಡಿಯೂ ಇರುವನು. ಆದುದರಿಂದ ನಾನು ಇವನನ್ನು

ಸಹಜವಾಗಿ ಸೋಲಿಸುವೆ'' ಎಂದು ನಿಂದಿಸಿ ಉಪಹಾಸದ ನಗೆ ನಕ್ಕು ಅವನನ್ನು ಅವಮಾನಗೊಳಿಸಿದನು. ರುಕ್ಮಿಯ ಈ ಅಹಂಕಾರದ ಮಾತಿನ ಹಿಂದಿರುವ ಬಲರಾಮನ ಉಪಹಾಸ ಧ್ವನಿಯನ್ನು ಗುರುತಿಸಿ ಕಲಿಂಗರಾಜನು ಹಲ್ಲು ಕಿರಿದು ಗಹಗಹಿಸಿ ನಕ್ಕನು.

ರುಕ್ಮಿಯ ಮರ್ಮಭೇದಕವಾದ ಈ ಅವಮಾನದ ನುಡಿಗಳನ್ನು ಕೇಳಿ ಬಲರಾಮನಿಗೆ ನಖಶಿಖಾಂತ ರೋಷದ ರೊಚ್ಚು ತುಂಬಿತು. ಅವನು ಜಿತಕ್ರೋಧನಾಗಿದ್ದರೂ ರುಕ್ಮಿಯ ವಾಗ್ಬಾಣಗಳು ಕರಳುಗಳಲ್ಲೆಲ್ಲ ಕೋಪದಕಿಚ್ಚು ಕೆರಳುವಂತೆ ಮಾಡಿದ್ದವು. ಆದರೂ ಅವನು ಒಳ್ಳೇಧೈರ್ಯ ಹಾಗೂ ಸಂಯಮಗಳಿಂದ ಮನಸ್ಸನ್ನು ನಿಗ್ರಹಿಸಿ ''ನಾನೀಸಲ ಒಂದು ನಿಖರ್ವ ಸುವರ್ಣಮುದ್ರೆಗಳನ್ನು ಪಣವಿಡುವೆ. ಇವುಗಳನ್ನು ಗೆಲ್ಲು ನೋಡುವ. ಈ ಧೂಲಿಧೂಸರವಾದ ದ್ಯೂತರಂಗದಲ್ಲಿ ಕರಿ ಬಿಳಿ ಬಣ್ಣದ ಆ ದಾಳಗಳನ್ನು ಇತ್ತ ನನ್ನೆಡೆಗೆ ಒಗೆ'' ಎಂದು ಆಹ್ವಾನಿಸಿದನು. ಅವನ ರಭಸ ರೌಸುಗಳನ್ನು ಕಂಡು ರುಕ್ಮಿಯು ಏನೂ ಮಾತನಾಡದೆ ''ಹಾಗೆಯೇ ಆಗಲಿ'' ಎಂದು ಹೇಳಿ ದಾಳಗಳನ್ನು ಅವನ ಕಡೆಗೆ ಒಗೆದನು.

ಆಗ ಬಲದೇವನು ಕೈಯ್ಯಲ್ಲಿ ಆ ದಾಳಗಳನ್ನು ಹಿಡಿದು ದ್ಯೂತಪಟ್ಟದಲ್ಲಿ ಉರುಳಿಸಿದನು. ಅವನಿಗೆ ಬೇಕಾದ ಘಾಸಿ ಬಿದ್ದು ನಾಲ್ಕೂ ದಾಳಗಳೂ ತಿರುವಿ ಬಿದ್ದಿದ್ದರೂ ರುಕ್ಮಿಯು ತಾನು ಸೋತಿದ್ದನ್ನು ಅಂಗೀಕಾರ ಮಾಡಲಿಲ್ಲ. ಇಷ್ಟೆ ಅಲ್ಲದೆ ನಾನೇ ಗೆದ್ದೆನು ಎಂದು ಮೆಲ್ಲನೆ ಅನ್ನುತ್ತ ಗಲ್ಲದಲ್ಲಿಯೆ ನಗಹತ್ತಿದನು.

ಅವನ ಈ ಮೋಸದ ಕಪಟಹಾಸ ಮತ್ತು ವಂಚನೆಯ ಸುಳ್ಳು ಮಾತುಗಳನ್ನು ಕೇಳಿ ಸಂತಪ್ತನಾದರೂ ಬಲರಾಮನು ಚಕಾರ ಶಬ್ದವನ್ನೂ ಎತ್ತದೆ ಉತ್ತರಿಸದೆ ಸುಮ್ಮನಿದ್ದನು.

ಅಷ್ಟರಲ್ಲಿ ''ಬಲರಾಮನೇ ಇದರಲ್ಲಿ ಗೆದ್ದಿದ್ದು ರುಕ್ಮಿಯು ಪೂರ್ಣ ಪರಾಜಿತನಾಗಿದ್ದಾನೆ. ಇದು ರುಕ್ಮಿಯ ಮನಸ್ಸಿಗೆ ಪೂರ್ಣ ಖಾತ್ರಿಯಾಗಿದ್ದರೂ ಅವನು ಮೋಸದಿಂದ ಸುಳ್ಳಾಡುತ್ತಾನೆ'' ಎಂದು ಗಂಭೀರವಾದ ಆಕಾಶವಾಣಿಯಾಯಿತು. ಅದನ್ನು ಕೇಳಿದ ಕೂಡಲೇ ಬಲರಾಮನಿಗೆ ರುಕ್ಮಿಯ ದೌಷ್ಟ್ಯ ಕಾಪಟ್ಯಗಳ ಬಗ್ಗೆ ನಿಶ್ಚಯವಾಗಿ ಕೋಪದ ಕಿಚ್ಚು ಕೆದರಿದಂತಾಯಿತು. ಅವನು ಮಹಾಕೋಪಾಟೋಪದಿಂದ ಎದ್ದು ಅಲ್ಲಿಯೇ ದ್ಯೂತಗ್ರಹದಲ್ಲಿರುವ ಬಂಗಾರದ ಸಳಿಯೊಂದನ್ನು ಎತ್ತಿ ರುಕ್ಮಿಯ ಮೇಲೆ ಅಪ್ಪಳಿಸಿ ಹೊಡೆದು ಬಳಿಕ ಅವನನ್ನೆ ಎತ್ತಿ ನೆಲಕ್ಕೆ ಕುಕ್ಕರಬಡಿದನು. ಮತ್ತು ನೆಲದ ಮೇಲೆ ಉರುಳಾಡಿಸಿ ಅವನನ್ನು ಥಳಿಸಿ ಕೊನೆಗೆ ಪ್ರಾಣ ತೆಗೆದುಕೊಂಡು ಬಿಟ್ಟನು.

ತನ್ನನ್ನು ನೋಡಿ ಹುಲ್ಲುಕಿರಿದ ಕಲಿಂಗರಾಜನನ್ನಾದರೂ ಬಲರಾಮನು ಹಿಡಿದು ಹಲ್ಲು ಮುರಿದು ಸಿಂಹದಂತೆ ಗರ್ಜಿಸಿದನು. ಆ ಮೋಸದ ಆಟದಲ್ಲಿ ಕುಯುಕ್ತಿಯಿಂದ ತನ್ನನ್ನು ವಂಚಿಸ ಬಂದ ಉಳಿದ ರಾಜರೆಲ್ಲರನ್ನು ಖಡ್ಗದಿಂದ ಹೊಡೆದು ಓಡಿಸಿದನು. ಆಮೇಲೆ ಆ ಸಭಾರಂಗದ ಬಂಗಾರದ ಕಂಬವನ್ನು ಕಿತ್ತಿ ಎತ್ತಿ ಹಿಡಿದುಕೊಂಡು ಹೊರಗೆ ಬಂದು ಕೈಶಿಕ ಸೈನ್ಯವನ್ನೆಲ್ಲ ಕಾಲಾಂತಕನಂತೆ ನಿಂತು ಸಂಹರಿಸಿದನು. ಅಳಿದುಳಿದವರೆಲ್ಲ ಬಲಭದ್ರನ ಆ ವೀರಭದ್ರಾವತಾರವನ್ನು ಕಂಡು ದಿಕ್ಕೆಟ್ಟು ಓಡಿ ಹೋಗಲು ಅವನು ಶಿಬಿರಕ್ಕೆ ಬಂದು ಕೃಷ್ಣನ ಮುಂದೆ ಜರುಗಿದ ಸಂಗತಿಯನ್ನೆಲ್ಲ ನಿವೇದಿಸಿದನು. ಅದನ್ನು ಕೇಳಿ ಕೃಷ್ಣನಿಗೆ ಬಹಳ ಖೇದವೆನಿಸಿದರೂ ತನ್ನ ದುಃಖವನ್ನು ನುಂಗಿಕೊಂಡು ಮನಸ್ಸು ಬಿಗಿಹಿಡಿದು ಮೌನವಾಗಿ ಕಣ್ಣೀರನ್ನು ಉದುರಿಸಿದನು.

ರುಕ್ಮಿಣಿಯ ಸ್ವಯಂವರ ಕಾಲದಲ್ಲಿ ತನ್ನ ನೆಚ್ಚಿನ ಮಡದಿಯ ಮನಸ್ಸಿಗೆ ನೋವಾಗಬಾರದೆಂದು ಯಾರನ್ನು ಕೃಷ್ಣನು ಕೊಲ್ಲದೇ ಹಾಗೆಯೇ ಬಿಟ್ಟಿದ್ದನೋ ಅಂಥ ರುಕ್ಮಿಣಿಯ ಜ್ಯೇಷ್ಠ ಬಂಧುವನ್ನು ಪಗಡೆಯಾಟದಲ್ಲಿ ಬಲದೇವನು ಸಂಹರಿಸಿದ್ದನ್ನು ನೋಡಿ ಯಾದವರಿಗೆಲ್ಲ ಬಹಳ ಖೇದವೆನಿಸಿತು.

ರುಕ್ಮಿಣೀ ದೇವಿಯಂತೂ ಆರ್ತಳಾಗಿ ಅಣ್ಣನ ಅಕಾಲಿಕ ನಿಧನಕ್ಕಾಗಿ ಶೋಕಮಾಡ ಹತ್ತಿದಳು. ಆಗ ಕೃಷ್ಣನೇ ಬಂದು ಅವಳಿಗೆ ಸಮಾಧಾನ ಹೇಳಿ ಸಂತೈಸಿದನು. ಮುಂದೆ ಯಾದವರೆಲ್ಲರೂ ವಿಷಣ್ಣ ಮುಖಮುದ್ರೆಯಿಂದಲೇ ದ್ವಾರಕೆಗೆ ಮರಳಿದರು.

## ಬಲರಾಮನ ಮಹಿಮೆ

ಪೃಥ್ವೀವಲಯವನ್ನೆ ತನ್ನ ಫಣಾಮಂಡಲದಲ್ಲಿ ಧರಿಸಿ ಪುರಾಣಗಳಲ್ಲಿ ಆದಿಶೇಷನೆಂದು ಪ್ರಸಿದ್ಧನಾದ ಯೋಗಾಚಾರ್ಯ ಬಲರಾಮನ ಬಲವೀರ್ಯಗಳು ಮಹಾಮಹಿಮೆಗಳು ಅನಂತ ಇರುತ್ತವೆ.

ಭೂತಲದಲ್ಲಿ ವೀರ್ಯ ವಿಕ್ರಮಗಳಿಂದ ವಿಖ್ಯಾತರಾದ ರಾಜರನ್ನು ಅವನು ಅನೇಕಸಲ ಯುದ್ಧದಲ್ಲಿ ಸೋಲಿಸಿದ್ದಲ್ಲದೇ ಮಹಾ ಪರಾಕ್ರಮಿಯಾದ ಜರಾಸಂಧನನ್ನು ಕೂಡ ಎಷ್ಟೋಬಾರಿ ಪರಾಜಯಗೊಳಿಸಿ ಆಕಾಶವಾಣಿಯಾದುದರಿಂದ ಕೊಲ್ಲದೇ ಹಾಗೆಯೇ ಬಿಟ್ಟಿದ್ದಾನೆ. ಹತ್ತು ಸಾವಿರ ಆನೆಗಳ ಬಲವುಳ್ಳ ಬಲಭೀಮನೊಡನಾದರೂ ಬಲದೇವನು ಬಾಹುಯುದ್ಧದಲ್ಲಿ ಅನೇಕಸಲ ಸೆಣೆಸಿದ್ದುಂಟು. ಇಂತು ಅನಂತಾವತಾರನಾದ ಆ ಬಲರಾಮನ ಶಕ್ತಿ ಸಾಮರ್ಥ್ಯಗಳೂ ಅನಂತವಿದ್ದು ಅವನ ಲೀಲಾವತಾರ ಚರಿತೆಗಳು ಅಸಂಖ್ಯವಿರುತ್ತವೆ.

ಒಂದು ದಿನ ಕೃಷ್ಣನ ಅಷ್ಟ ಮಹಿಷಿಯರಲ್ಲಿ ಒಬ್ಬಳಾದ ಜಾಂಬವತಿದೇವಿಯ ಮಗನಾದ ಸಾಂಬನು ಹಸ್ತಿನಾವತಿಯಲ್ಲಿ ದುರ್ಯೋಧನನ ಮಗಳಾದ ಲಕ್ಷಣಾ ಎಂಬ ರಾಜಕನ್ಯೆಯ ಸ್ವಯಂವರಕ್ಕೆ ಹೋಗಿದ್ದನು. ಅಲ್ಲಿ ಅವನು ಆ ದುರ್ಯೋಧನನ ದುಹಿತೆಯನ್ನು ಅಪಹರಿಸಿ ಕರೆದೊಯ್ಯಬೇಕೆನ್ನುವಷ್ಟರಲ್ಲಿ ಕೌರವರೆಲ್ಲರೂ ಕೂಡಿ ಅವನನ್ನು ಸೋಲಿಸಿ ಸೆರೆ ಹಿಡಿದು ಕಾರಾಗೃಹದಲ್ಲಿ ಬಂಧನದಲ್ಲಿಟ್ಟರು. ಅದನ್ನು ಕೇಳಿ ಯುದ್ಧೋದ್ಯತರಾದ ಯಾದವರನ್ನೆಲ್ಲ ಸುಮ್ಮನಿರಹೇಳಿ ಸಾಂಬನನ್ನು ಬಿಡಿಸಿಕೊಂಡು ಬರಲು ಬಲರಾಮನು ತಾನೇ ಹಸ್ತಿನಾವತಿಗೆ ಬಂದು ದುರ್ಯೋಧನನಿಗೆ ಹೇಳಿ ಕಳುಹಿಸಿದನು. ಆದರೆ ಉನ್ಮತ್ತರಾದ ಕೌರವರು ಸಾಂಬನನ್ನು ಬಿಡದಿರಲು ಸಿಟ್ಟಿಗೆದ್ದ ಸಂಕರ್ಷಣನು ತನ್ನ ವೈರಿಭಯಂಕರವಾದ ಲಾಂಗಲ (ನೇಗಿಲು)ವನ್ನು ಬ್ರಹ್ಮಾಸ್ತ್ರದ ಮಂತ್ರದಿಂದ ಅಭಿಮಂತ್ರಣಗೈದು ಎತ್ತಿದನು. ಮತ್ತು ಹಸ್ತಿನಾವತಿಯ ಪ್ರಾಕಾರ ಸೀಮೆಯ ಅಂಚಿಗೆ ತನ್ನ ಆ ನೇಗಿಲವನ್ನು ಹಾಕಿ ಇಡೀ ಕೌರವ ರಾಜಧಾನಿಯನ್ನೆ ಗಂಗೆಯಲ್ಲಿ ಮುಳಗಿಸಿ ಬಿಡಬೇಕೆಂದು ಜಗ್ಗಹತ್ತಿದನು. ಆದರಿಂದ ಊರೆಲ್ಲ ಸೊಟ್ಟವಾಗಿ ಹೊಯ್ದಾಡಹತ್ತಲು ದುರ್ಯೋಧನನು ಹೆದರಿ ಹೌಹಾರಿ ಹುಚ್ಚೆದ್ದು ಓಡಿ ಬಲರಾಮನ ಬಳಿಗೆ ಬಂದು ''ಶಿಷ್ಯಸ್ತೇಹಂ ಶಾಧಿ, ಮಾಂ ತ್ವಾಂ ಪ್ರಪನ್ನಂ'' ಎಂದು ಬೇಡಿಕೊಂಡನು. ಮತ್ತು ತನ್ನ ಮಗಳಾದ ಲಕ್ಷಣೆಯೊಂದಿಗೆ ಸಾಂಬನನ್ನು ಬಂಧನದಿಂದ ಬಿಡಿಸಿ ತಂದು ವಸ್ತ್ರಾಲಂಕಾರ ವರದಕ್ಷಿಣೆ ವರೋಪಚಾರ ಸಹಿತವಾಗಿ ಕ್ರುದ್ಧನಾದ ತನ್ನ ಗುರುವಿನ ಎದುರಿಗೆ ತಂದು ನಿಲ್ಲಿಸಿ ನಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡನು.

ಆಗ ಕರುಣಾಳುವಾದ ಸಂಕರ್ಷಣನು ಸುಯೋಧನನ ಅಪರಾಧವನ್ನು ಕ್ಷಮಿಸಿ ಅವನ ಪ್ರಾರ್ಥನೆಯ ಮೇರೆಗೆ ಅವನಿಗೆ ಗದಾವಿದ್ಯೆಯ ಸೂಕ್ಷ್ಮ ರಹಸ್ಯಚಾಪಲ್ಯ ಚಮತ್ಕಾರ ಪ್ರಯೋಗ ಪರಿಷ್ಕಾರಗಳನ್ನೂ ತಿಳಿಹೇಳಿ ತನ್ನ ಶಿಷ್ಯನೆಂದು ಸ್ವೀಕರಿಸಿದನು.

ಹಸ್ತಿನಾವತಿ ಪಟ್ಟಣವು ಅಂದಿನಿಂದ ಗಂಗೆಯ ಪ್ರವಾಹದೆಡೆಗೆ ಇಂದಿಗೂ ವಾಲಿದಂತೆಯೇ ತೋರುವದು. ಬಲದೇವನು ಸಾಂಬನನ್ನೂ ದುರ್ಯೋದನ ಕುಮಾರಿಯಾದ ಲಕ್ಷಣೆಯನ್ನೂ ಕರೆದುಕೊಂಡು ವಿಜಯ ಘೋಷದೊಂದಿಗೆ ದ್ವಾರಕೆಯನ್ನು ಪ್ರವೇಶಿಸಿದನು.

## ''ನರಕಾಸುರ ಸಂಹಾರ''

ಒಮ್ಮೆ ಯಾದವನಂದನನಾದ ಆ ಗೋವಿಂದನು ಯದುವೃಂದದೊಂದಿಗೆ ಕೂಡಿಕೊಂಡು ಸಕಲ ಸಂಪತ್ಸಮೃದ್ಧವಾದ ದ್ವಾರಕೆಯನ್ನುರಕ್ಷಿಸಿಗೊಂಡು ಬರುತ್ತಿದ್ದನು. ಮತ್ತು ಆ ದ್ವಾರಕೆಯ ಶೋಭಾಸೌಭಗವನ್ನು ಅಭಿವರ್ಧಿಸುವದಕ್ಕಾಗಿ ತಾನು ಗೆದ್ದು ಸಂಪಾದಿಸಿದ ವಿಪುಲ ಮುತ್ತು ಮಣಿ ಮಾಣಿಕ್ಯ, ಧನ ಕನಕಗಳನ್ನೆಲ್ಲ ದೈತ್ಯರಮೇಲೆಯೇ ಹೊರಿಸಿಗೊಂಡು ಬಂದು ತನ್ನ ರಾಜಧಾನಿಯಲ್ಲಿ ಇರಿಸುತ್ತಿದ್ದನು. ಅದಕ್ಕೆ ಪ್ರತಿಬಂಧ ಮಾಡುವ ದುಷ್ಟ ದೈತ್ಯರನ್ನೆಲ್ಲ ವಧಿಸಿಬಿಡುತ್ತಿದ್ದನು.

ಇಂದ್ರನ ವೈರಿಯಾದ ಉನ್ಮತ್ತ ನರಕಾಸುರನು ದೈತ್ಯರ ಕಡೆಯಿಂದಲೇ ದ್ವಾರಕೆಗೆ ಕೃಷ್ಣನು ಐಶ್ವರ್ಯವನ್ನೆಲ್ಲ ಹೊರಿಸಿಕೊಂಡು ಹೋಗುವುದನ್ನು ಕಂಡು ಸಿಟ್ಟಿನಿಂದ ತಾನೇ ಅದಕ್ಕೆ ಪ್ರತಿಬಂಧ ಮಾಡಹತ್ತಿದನು. ಪ್ರಾಗ್ಜ್ಯೋತಿಷ ಪುರದಲ್ಲಿರುವ ಆ ದುಷ್ಟ ದಾನವನು ದೇವತೆಗಳಿಗೂ ಹಾಗೂ ಋಷಿಗಳಿಗೂ ಪೀಡಾಪ್ರದನಾಗಿದ್ದನು.

ಒಂದು ದಿನ ಆ ದೃಪ್ತ ದಾನವನು ವಿಶ್ವಕರ್ಮನ ಮಗಳಾದ ಕಶೇರು ಎಂಬ ಹದಿನಾಲ್ಕು ವರ್ಷ ವಯಸ್ಸಿನ ಕನ್ಯೆಯನ್ನು ಆನೆಯ ರೂಪದಿಂದ ಅಪಹರಿಸಿಕೊಂಡು ಹೋದನು. ಮತ್ತು ''ಇಂದಿನಿಂದ ದೇವ-ದಾನವ-ಮಾನವ ಮೊದಲಾದ ಸರ್ವಜೀವಿಗಳೂ ತಮ್ಮ ತಮ್ಮ ಹತ್ತಿರ ಇರುವ ಧನ ಕನಕ ಮಣಿ ಮಾಣಿಕ್ಯ ಮೊದಲಾದ ಬೆಲೆಯುಳ್ಳ ವಸ್ತುಗಳನ್ನೆಲ್ಲ ನನಗೆ ತಂದು ಒಪ್ಪಿಸಬೇಕು. ಸಮುದ್ರ ಗರ್ಭದ ಮುತ್ತುಗಳನ್ನೂ ಭೂಗರ್ಭದಲ್ಲಿರುವ ಅನರ್ಘ್ಯರತ್ನಗಳನ್ನೂ ಹಾಗೂ ಸರ್ವ ಜಾತೀಯ ಉತ್ತಮ ಕನ್ಯಾರತ್ನಗಳನ್ನೂ ಹುಡುಕಿ ತಂದು ನನಗೆ ಒಪ್ಪಿಸಬೇಕು.'' ಎಂದು ಅವನು ದೈತ್ಯರಿಗೆ ಅಪ್ಪಣೆಮಾಡಿದನು. ಇದರಿಂದ ಅವನ ಭಾಂಡಾಗಾರದಲ್ಲಿ ರಾಶಿರಾಶಿಯಾಗಿ ಮುತ್ತುರತ್ನ ವಸ್ತ್ರಾಲಂಕಾರಗಳು ಬಂದು ಬಿದ್ದರೂ ಅದಾವದನ್ನೂ ಅವನು ಮೀಸಲು ಮುರಿದಿದ್ದಿಲ್ಲ. ಮುಟ್ಟಿ ಭೋಗಿಸಿದ್ದಿಲ್ಲ.

ಇದರಂತೆ ಅವನು ದೇವ ಗಂಧರ್ವ ಮನುಷ್ಯಜಾತಿಗಳಲ್ಲಿರುವ ಉತ್ತಮೋತ್ತಮ ವಾದ ಕನ್ಯಾಮಣಿಗಳನ್ನು ಅಪಹರಿಸಿ ತಂದದ್ದಲ್ಲದೆ ಅಪ್ಸರೆಯರ ಏಳೂ ಕುಲಗಳಿಂದಲೂ ಸುರಸುಂದರಿಯರನ್ನು ಅಪಹರಿಸಿ ತಂದಿದ್ದನು. ಹೀಗೆ ನರಕನು ಬಲಾತ್ಕಾರದಿಂದ ಓಡಿಸಿ ತಂದು ತನ್ನ ಬಳಿಯಲ್ಲಿ ಇಟ್ಟುಕೊಂಡ ಕುಲಕನ್ಯೆಯರ ಸಂಖ್ಯೆ ಹದಿನಾರು ಸಾವಿರಕ್ಕೂ ಮಿಕ್ಕಿ ಮೇಲೆ ಒಂದುನೂರಾಗಿತ್ತು. ದುರಾಶೆಯಿಂದ ಇಷ್ಟು ಜನ ಕನ್ಯೆಯರನ್ನು ಅವನು ಅಪಹರಿಸಿ ಗೊಂಡು ಬಂದರೂ ಅವನು ಯಾರನ್ನೂ ಮುಟ್ಟಿರಲಿಲ್ಲ. ಆದುದರಿಂದ ಅವರೆಲ್ಲರೂ ಅನಾಘ್ರಾತ ಪುಷ್ಪಗಳಂತೆ ಪರಮ ಪವಿತ್ರರಾಗಿ ಸತೀಮಾರ್ಗದರ್ಶಿಗಳಾಗಿಯೇ ಇದ್ದರು.

ಈ ಹದಿನಾರು ಸಾವಿರದ ಒಂದು ನೂರರಷ್ಟು ಕನ್ಯೆಯರನ್ನೆಲ್ಲ ನರಕಾಸುರನು ಮುರದೈತ್ಯನ ರಾಜಧಾನಿಯಾದ ಅಲಕಾಪುರಿಯ ಸಮೀಪದಲ್ಲಿರುವ ಮಣಿಪರ್ವತವೆಂಬ ರಮ್ಯಸ್ಥಳದಲ್ಲಿ ಇಟ್ಟಿದ್ದನು. ಅವರ ಮೇಲೆಲ್ಲ ಮುರದೈತ್ಯನ ಹತ್ತು ಜನದಕ್ಷ ಹೆಣ್ಣುಮಕ್ಕಳೂ ಅಸಂಖ್ಯ ದೈತ್ಯರೂ ಸರ್ಪಗಾವಲವಿಟ್ಟು ಸಂರಕ್ಷಿಸುತ್ತಲಿದ್ದರು.

ಹಿಂದೆ ಎಲ್ಲ ದೈತ್ಯವೀರರೂ ಕೂಡಿ ಮಾಡಲಾಗದ ಕಾರ್ಯವನ್ನು ಈಗ ನರಕಾಸುರನೊಬ್ಬನೆ ಮಾಡಿದ್ದನು. ಭೂಮಿಸುತನಾದ ಆ ದೈತ್ಯನು ಕರ್ಣಕುಂಡಲಗಳನ್ನು ಅಪಹರಿಸಿ ದೇವಮಾತೆಯಾದ ಅದಿತಿದೇವಿಗೂ ಕೂಡ ಅವಮಾನ ಮಾಡಿದ್ದನು. ಹಯಗ್ರೀವ ನಿಸುಂದ ಪಂಚಜನ ಮುರ ಎಂಬ ರಣದುರ್ಜಯರಾದ ನಾಲ್ಕು ಜನ ದೈತ್ಯವೀರರೂ ನರಕನ ಅಪ್ಪಣೆಯಂತೆ ಅಲ್ಲಿ ದ್ವಾರಪಾಲಕರಾಗಿದ್ದರು. ಈ ದುಷ್ಟ ದಾನವನನ್ನು ಸಂಹರಿಸಲಿಕ್ಕಾಗಿಯೇ ಜನಾರ್ದನನು, ಯದು ಕುಲದಲ್ಲಿ ಹುಟ್ಟಿ ತೇಜಸ್ವಿಗಳಾದ ಯಾದವರಿಗೆ ಇರಲಿಕ್ಕೆಂದು ದ್ವಾರಕಾ ಎಂಬ ಪಟ್ಟಣವನ್ನು ರಚಿಸಿದ್ದನು.

ಸಾಮುದ್ರಸಲಿಲದಿಂದ ಸಂರಕ್ಷಿಸಲ್ಪಟ್ಟ ಮತ್ತು ಪರಿತಃ ಪಂಚಪರ್ವತ ಶ್ರೇಣಿಗಳಿಂದ ಸುತ್ತುವರೆಯಲ್ಪಟ್ಟ ಅಮರಾವತಿಗಿಂತ ಮಿಗಿಲಾದ ಆ ಸುಂದರ ನಗರಿಯಲ್ಲಿ ಬಂಗಾರತೋರಣದ ಯೋಜನ ವಿಸ್ತೀರ್ಣವಾದ ದಾಶಾರ್ಹೀ ಎಂಬ ಸಭಾಮಂದಿರವಿತ್ತು. ಅಲ್ಲಿ ಒಂದು ದಿನ ಬಲರಾಮ-ಶ್ರೀಕೃಷ್ಣ ಮೊದಲಾದ ಎಲ್ಲ ವೃಷ್ಣಿಗಳೂ ಅಂಧಕರೂ ಕೂಡಿ ಕುಳಿತು ಲೋಕಾಭಿರಾಮವಾಗಿ ಮಾತನಾಡುತ್ತಲಿರುವಾಗ ಒಮ್ಮೆಲೇ ಮುಗಿಲಿನಿಂದ ಅರಳು ಮೊಗ್ಗುಗಳು ಉರುಳಿದವು. ದಿವ್ಯಗಂಧವುಳ್ಳ ಮಂದಗಾಳಿ ಬಂದು ಘ್ರಾಣೇಂದ್ರಿಯಕ್ಕೆ ಸೌಗಂಧ ಸಂದೇಶವನ್ನು ತಂದಿತು. ಒಮ್ಮೆಲೇ ಕಲ ಕಲ ಶಬ್ದವು ಕೇಳಿಸಿ ಇದೇನು ಎನ್ನುವಷ್ಟರಲ್ಲಿ ಬೆಳಕಿನ ಬುಗ್ಗೆಯೇ ನುಗ್ಗಿ ಬರುತ್ತಿರುವಂತೆ ಕಂಡಿತು.

ಆಗ ಬೇಗನೇ ಆ ಸುರೇಶನು ಐರಾವತದಿಂದ ಇಳಿದು ಕೆಳಗೆ ಬಂದು ಕೃಷ್ಣ ರಾಮರನ್ನು ಆಲಿಂಗಿಸಿಗೊಂಡನು. ಯದುವೀರರಾದರೂ ಆ ಕೃಷ್ಣ ಸಂಕರ್ಷಣರನ್ನೆ ಮುಂದೆ ಮಾಡಿ ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದರು. ಅಂದು ದ್ವಾರಕೆಗೆ ಬಂದು ದೇವೇಂದ್ರನು ಶ್ರೀಕೃಷ್ಣನಿಗೆ "ದೇವಕೀ ನಂದನ! ನರಕಾಸುರನು ಬ್ರಹ್ಮದೇವರ ವರದಿಂದ ಮತ್ತನಾಗಿ ನಮ್ಮ ತಾಯಿಯಾದ ಅದಿತಿದೇವಿಯ ಕರ್ಣಕುಂಡಲಗಳನ್ನು ಅಪಹರಿಸಿದ್ದಾನೆ. ದೇವತೆಗಳನ್ನು ಕಾಡುತ್ತಾನೆ. ಋಷಿಗಳನ್ನು ಪೀಡಿಸುತ್ತಾನೆ. ಕನ್ಯೆಯರನ್ನು ಅಪಹರಿಸುತ್ತಾನೆ. ಆದುದರಿಂದ ಇಂಥ ಪಾಪಪುರುಷನನ್ನು ಬೇಗನೇ ನೀನು ಸಂಹಾರಮಾಡು. ಗಗನಗಾಮಿಯಾದ ಈ ಗರುಡನು ನಿನ್ನನ್ನು ಅಲ್ಲಿಗೆ ಕರೆದೊಯ್ಯುವನು." ಎಂದು ಹೇಳಿ ಐರಾವತವನ್ನು ಆರೋಹಣ ಮಾಡಿದನು.

ಆಗ ಶ್ರೀಹರಿಯೂ ಕೂಡ ಆ ದುಷ್ಟನನ್ನು ಬೇಗ ಸಂಹರಿಸಿ ಬರಬೇಕೆಂದು ಸತ್ಯಭಾಮೆಯೊಂದಿಗೆ ಗರುಡನನ್ನು ಏರಿ ಇಂದ್ರನ ಜೊತೆಗೇ ಹೊರಟು ಬಿಟ್ಟನು. ಆಗ ಅವರಿಬ್ಬರೂ ಕೂಡಿ ವಾಯುಮಂಡಲದಲ್ಲಿ ನಡೆದಾಗ ಸೂರ್ಯಚಂದ್ರರಿಬ್ಬರೂ ಕೂಡಿ ಸಂಚಾರಕ್ಕೆ ಹೊರಟಂತೆ ಕಾಣುತ್ತಿತ್ತು. ತುಸು ಹೊತ್ತು ಇಬ್ಬರೂ ಕೂಡಿ ಸಾಗಿದ ಬಳಿಕ ಇಂದ್ರನು ಸ್ವರ್ಗಾಭಿಮುಖನಾಗಿ ಮೇಲಕ್ಕೇರಿ ಕಾಣದಂತಾದನು. ಕೃಷ್ಣನು ಪ್ರಾಗ್ಜೋತಿಷದೆಡೆಗೆ ತಿರುಗಿದನು. ಆ ಊರ ಸಮೀಪಕ್ಕೆ ಬಂದಬಳಿಕ ಅವನಿಗೆ ಕಾಯಲು ನಿಂತ ಮುರದೈತ್ಯನ ಅಪರಂಪಾರ ಸೇನಾಸಮುದ್ರವೂ ಹಾಗೂ ಆ ಊರಿನ ಸುತ್ತ ಮುತ್ತ ಭದ್ರವಾದ ಬೇಲಿಯಂತೆ ಬಿಗಿದ ಆರುಸಾವಿರ ಮುರಪಾಶಗಳೂ ಗೋಚರಿಸಿದವು.

ಗರುಡಾರೂಢನಾಗಿ ಶಂಖ ಚಕ್ರ ಗದಾಪಾಣಿಯಾದ ಕೃಷ್ಣನು ಬರುವುದನ್ನು ದೂರದಿಂದ ನೋಡಿದ ಮುರದೈತ್ಯನಾದರೂ ಇವನು ಸಾಕ್ಷಾತ್ ವಿಷ್ಣುವೇ ಎಂದು ತಿಳಿದು ಅವನನ್ನು ಹೊಡೆಯಲಿಕ್ಕೆಂದು ಶಕ್ತ್ಯಾಯುಧವನ್ನು ಎತ್ತಿಕೊಂಡು ಬಂದನು. ಕೇಶವನು ಅದನ್ನು ತನ್ನ ಖಡ್ಗದಿಂದ ಇಬ್ಭಾಗಮಾಡಿ ಒಗೆದನು. ಆಗ ಆ ದೈತ್ಯನು ಮತ್ತೆ ಒಂದು ಭಯಂಕರವಾದ ಉಗ್ರಗದೆಯನ್ನು ಬೀಸಿ ಕೃಷ್ಣನ ಮೇಲೆ ಒಗೆದನು. ಅದನ್ನು ಒಂದು ಅರ್ಧಚಂದ್ರಬಾಣದಿಂದ ದಾರಿಯಲ್ಲಿಯೇ ಸೀಳಿ ಅವನ ಶಿರಸ್ಸನ್ನು ಕತ್ತರಿಸಿ ಒಗೆದನು. ಮತ್ತು ಆ ಮುರಪಾಶಗಳನ್ನೆಲ್ಲ ಹರಿದನು. ಹಾಗೂ ಇನ್ನುಳಿದ ಮುರಾಸುರನ ಸೈನ್ಯಪರಿವಾರ ಬಂಧು ಬಾಂಧವರನ್ನು ಕೊಂದು ಹಾಕಿದನು.

ಕಣ್ಣು ಕೆಂಪಗೆ ಮಾಡಿಕೊಂಡು ಕಾರ್ಗಾಲದ ಕರಿಮೋಡದಂತೆ ನರಕಾಸುರನು ಇಂದ್ರಚಾಪದಂತಿರುವ ಭೀಕರವಾದ ಬಿಲ್ಲೊಂದನ್ನು ಹಿಡಿದುಕೊಂಡು ಅನೇಕ ದಿವ್ಯಾಸ್ತ್ರಗಳನ್ನು ರಥದಲ್ಲಿ ತುಂಬಿಕೊಂಡು ಯುದ್ಧಕ್ಕೆ ಅಣಿಯಾದನು. ಮತ್ತು ಕೃಷ್ಣನ ಮೇಲೆ ಅಮೋಘವಾದ ಬಾಣಗಳನ್ನು ಬಿಡಹತ್ತಿದನು. ಆಗ ಆ ಗೋಪಕಿಶೋರನು ತನ್ನ ಚಕ್ರಾಯುಧದಿಂದ ಅವನು ಬಿಟ್ಟ ಘೋರಾಸ್ತ್ರಗಳನ್ನೆಲ್ಲ ನಿವಾರಣೆ ಮಾಡಿ ತಾನೂ ಹತ್ತು ಬಾಣಗಳನ್ನು ಬಿಟ್ಟು ಅವನ ರಥದ ಧ್ವಜವನ್ನು ಕೆಡವಿ, ಕುದುರೆಗಳನ್ನು ಕೊಂದು, ರಥವನ್ನು ಪುಡಿಗಟ್ಟಿ ನರಕನ ಮೈ ಮೇಲಿರುವ ಕವಚವನ್ನೂ ಕೂಡ ಸೀಳಿ ಒಗೆದನು. ಆಗ ವಿರಥನಾದ ಆ ದೈತ್ಯನು ವಜ್ರಾಯುಧದಂತಿರುವ ತ್ರಿಶೂಲವೊಂದನ್ನು ಎತ್ತಿ ಕೃಷ್ಣನೆಡೆಗೆ ತೂರಿದನು. ಅದನ್ನಾದರೂ ಆ ಮುರಾರಿ ತನ್ನ ಖಡ್ಗದಿಂದ ತುಂಡರಿಸಿ ಚೆಲ್ಲಿ ತನ್ನ ಚಕ್ರಾಯುಧವನ್ನು ನರಕನ ಮೇಲೆ ಬಿಟ್ಟನು. ಅದರಿಂದ ಆ ದೈತ್ಯನ ದಾರುಣವಾದ ಶರೀರವು ಎರಡು ಹೋಳಾಗಿ ನೆಲದ ಮೇಲೆ ಬಿದ್ದಿತು.

ನರಕಾಸುರನು ಹತನಾಗಿ ಬಿದ್ದುದನ್ನು ನೋಡಿ ಅವನ ತಾಯಿಯಾದ ಭೂದೇವಿಯು ದೇವಮಾತೆಯ ಕರ್ಣಕುಂಡಲಗಳನ್ನು ತೆಗೆದುಕೊಂಡುಬಂದು ಗೋವಿಂದನ ಎದುರಿಗೆ ಇಟ್ಟಳು. "ಜಗದೀಶ! ನನಗೆ ಈ ಮಗನನ್ನು ಆಗ ಕೊಟ್ಟವನೂ ನೀನೇ. ಈಗ ಕೊಂದವನೂ ನೀನೇ. ಇಕೋ, ಈ ದೈತ್ಯನು ತಂದ ಅದಿತಿಯ ಕರ್ಣಕುಂಡಲಗಳು ಇಲ್ಲಿವೆ. ನಿನ್ನ ಮನಸ್ಸಿಗೆ ಬಂದಂತೆ ಮಾಡು. ನರಕನ ಪ್ರಜೆಗಳನ್ನು ರಕ್ಷಿಸು" ಎಂದು ಪರಮಾತ್ಮನನ್ನು ಪ್ರಾರ್ಥಿಸಿಗೊಂಡಳು. ಆ ಬಳಿಕ ಭಗವಂತನು ಅವುಗಳನ್ನು ಕೊಂಡು ನರಕಾಸುರನ ಮನೆಗೆ ಬಂದನು. ಅವನ ಕೋಶಾಗಾರದಲ್ಲಿ ಅಪರಿಮಿತವಾದ ಐಶ್ವರ್ಯವು ಶೇಖರಿಸಲ್ಪಟ್ಟಿತ್ತು. ಅವನ ಭಾಂಡಾರದ ತುಂಬೆಲ್ಲ ಮುತ್ತು ರತ್ನ ವಜ್ರ ವೈಡೂರ್ಯ ಮಣಿಹಾರಗಳು ರಾಶಿ ರಾಶಿಯಾಗಿ ಬಿದ್ದಿದ್ದವು. ಬಂಗಾರದ ಪರ್ಯಂಕಗಳೂ ರತ್ನದ ಸಿಂಹಾಸನಗಳೂ ಎಷ್ಟೋ ಅಲ್ಲಿ ಹೊಳೆಯುತ್ತಿದ್ದವು. ಪ್ರತಿ ಚಂದ್ರ ಮಂಡಲದಂತಿರುವ ಬಂಗಾರ ಕೋಲಿನ ವರುಣನ ಶ್ವೇತ ಛತ್ರವೂ ಅಲ್ಲಿಯೇ ಇದ್ದಿತು. ಕೋಶಾಗಾರ ರಕ್ಷಕರಾದ ರಾಕ್ಷಸರು ಭಯದಿಂದ ಬಂದು ಭಗವಂತನಿಗೆ ನಮಸ್ಕರಿಸಿ "ಸ್ವಾಮಿ! ಇದೆಲ್ಲವೂ ನಿನ್ನ ಅಧೀನ. ಅಪ್ಪಣೆಯಾದರೆ ಈ ಎಲ್ಲ ಮುತ್ತು ರತ್ನಗಳನ್ನೂ ಉಳಿದೆಲ್ಲ ಧನ ಕನಕಾದಿ ಅಪರಿಮಿತ ಐಶ್ವರ್ಯವನ್ನೂ ನಿಮ್ಮ ಮನೆಗೆ ಹೊತ್ತು ತಂದು ಒಪ್ಪಿಸುವೆವು. ಮತ್ತು ಬಂಗಾರ ಸರಪಳಿಯ ಇಪ್ಪತ್ತು ಸಾವಿರ ಗಂಡಾನೆ, ನಲವತ್ತು ಸಾವಿರ ಹೆಣ್ಣಾನೆ, ಹದಿನೆಂಟು ಸಾವಿರ ಉತ್ತಮ ಜಾತಿಕುದುರೆಗಳು, ಅಸಂಖ್ಯ ಹಸುಗಳು ನರಕಾಸುರನ ಅಧೀನದಲ್ಲಿವೆ. ಮತ್ತು ಉಣ್ಣೆಯ ಮೆತ್ತಗಿನ ಆಸನ, ಮೃದುವಾದ ಹಾಸಿಗೆಗಳು ಹಾಗೂ ಮಧುರ ಭಾಷಿಗಳಾದ ಸುಂದರ ಪಕ್ಷಿಗಳು, ಸುಗಂಧಿಯಾದ ಅಗರು

ಚಂದನಾದಿ ಕಟ್ಟಿಗೆಗಳು, ಇವಲ್ಲದೆ ದೇವಗಂಧರ್ವ ಲೋಕದ ಐಶ್ವರ್ಯ ನಾಗಲೋಕದ ರತ್ನಪುಂಜ-ಹೆಜ್ಜೇನು-ನರಕಾಸುರನು ಗೆದ್ದು ತಂದ ಮೂರುಲೋಕದ ಐಶ್ವರ್ಯವೆಲ್ಲವೂ ನಿನ್ನ ಅಡಿದಾವರೆಗೆ ಸಮರ್ಪಿತ.'' ಎಂದು ಹೇಳಿ ಕೈಂಕರ್ಯದ ಭಾವದಿಂದ ಕೈಮುಗಿದು ನಿಂತುಕೊಂಡರು. ಅದನ್ನೆಲ್ಲ ನೋಡಿ ಪರೀಕ್ಷಿಸಿ ಶ್ರೀಕೃಷ್ಣನು ಉತ್ತಮವಾದುದನ್ನೆಲ್ಲ ಆ ದಾನವರ ಕೈಯಿಂದಲೇ ಹೊರಿಸಿ ದ್ವಾರಕೆಗೆ ಕಳಿಸಿದನು.

ವರುಣನ ಬಂಗಾರದ ಮಳೆಗರೆಯುವ ಶ್ವೇತಛತ್ರವನ್ನು ಮಾತ್ರ ಆ ಮಾಧವನು ಸ್ವಯಂ ತಾನೇ ಹಿಡಿದುಕೊಂಡು ಮೂರ್ತಿಮಂತ ಮೋಡದಂತಿರುವ ಗರುಡನನ್ನು ಆರೋಹಣಮಾಡಿ ಮಣಿಪರ್ವತಕ್ಕೆ ಬಂದನು. ಅಲ್ಲಿಯ ಮಣಿಕಾಂಚನ ಮಂಡಿತವಾದ ರತ್ನಮಂದಿರದಂತಿರುವ ಗಿರಿಕಂದರಗಳಲ್ಲಿ ಕಾಷಾಯ ವಸ್ತ್ರಧಾರಿಣಿಯರಾದ, ವ್ರತೋಪವಾಸಗಳಿಂದ ಸೊರಗಿದ, ಚಿಂತೆಯಿಂದ ಕೊರಗಿದ, ಅನೇಕ ಸಹಸ್ರ ದೇವಗಂಧರ್ವ ಕನ್ಯೆಯರು ಕೃಷ್ಣನ ಕಣ್ಣಿಗೆ ಬಿದ್ದರು. ಅವರೆಲ್ಲರೂ ಕಾಮವಿಕಾರರಹಿತರೂ ಅವ್ಯಭಿಚಾರಿಗಳೂ ಜಿತೇಂದ್ರಿಯರೂ ಪರಮ ಪವಿತ್ರರೂ ಇದ್ದರು. ಅವರೆಲ್ಲರೂ ತಮ್ಮನ್ನು ಬಲಾತ್ಕಾರದಿಂದ ಈ ಬಂಧನದಲ್ಲಿ ತಂದಿರಿಸಿದ ದುಷ್ಟದಾನವ ನರಕನನ್ನೂ ಅವನ ಅನುಯಾಯಿಗಳಾದ ಮುರ, ನಿಸುಂದ, ಹಯಗ್ರೀವ, ಮೊದಲಾದ ದರ್ಪಿಷ್ಠ ದೈತ್ಯರನ್ನೂ ಹೊಡೆದು ಕೊಂದು ಕೃಷ್ಣನು ತಮ್ಮ ಬಳಿಗೆ ಬಂದಿದ್ದಾನೆಂದು ತಿಳಿದು ಅವನನ್ನು ಕಾಣಲು ಉತ್ಸುಕರಾಗಿದ್ದರು. ದೇವೇಶನು ಅಲ್ಲಿಗೆ ಬಂದ್ದದನ್ನು ನೋಡಿ ಅತ್ಯಂತ ಆದರ ಶ್ರದ್ಧೆಗಳಿಂದ ಕೈ ಮುಗಿದು ಭಗವಂತನಿಗೆ ನಮಸ್ಕರಿಸಿ ಅವನ ಸುತ್ತಲೂ ನಿಂತುಕೊಂಡರು.

ಆ ನಂದಕಂದ ಮುಕುಂದನ ಸುಂದರರೂಪ, ಅರವಿಂದನೇತ್ರ, ಚಂದ್ರನಂಥ ಮುಖ, ಕಂದರ್ಪ ಕಮನೀಯವಾದ ಶರೀರವನ್ನು ಕಂಡಕೂಡಲೇ ಆ ಕನ್ಯಾಮಣಿಗಳಿಗೆಲ್ಲ ಅವನಲ್ಲಿ ಪತಿಯ ಭಾವನೆಯು ಅಂಕುರಿತವಾಯಿತು. ಮತ್ತು ಆಗ ಅವರು ತಮ್ಮ ಮನಸ್ಸಿನಲ್ಲಿ ''ತ್ರಿಕಾಲಜ್ಞಾನಿಗಳಾದ ನಾರದರೂ ಹಾಗೂ ಜೀವೋತ್ತಮರಾದ ವಾಯುದೇವರೂ ನಮಗೆ ಶಂಖಚಕ್ರ ಗದಾಪಾಣಿಯಾದ ಶ್ರೀಮನ್ನಾರಾಯಣನು ನರಕಾಸುರನನ್ನು ಕೊಂದು ನಿಮ್ಮನ್ನೆಲ್ಲ ಮದುವೆಯಾಗುವನು.'' ಎಂದು ಹೇಳಿದ ಮಾತು ಇಂದು ನಿಜವಾಗುವ ಕಾಲ ಬಂದಿದೆ. ನಾವಿಂದು ಭಗವಂತನ ಈ ದಿವ್ಯ ರೂಪವನ್ನು ಕಂಡು ಕೃತಾರ್ಥರಾದೆವೆಂದು'' ಆನಂದ ತುಂದಿಲರಾಗಿ ಅಂಜಲಿ ಬದ್ಧರಾಗಿ ನಿಂತುಕೊಂಡರು.

ಅನಂತರ ಉಪೇಂದ್ರನು ಆ ಎಲ್ಲ ಕಮಲಾಕ್ಷಿಯರನ್ನೂ ಪ್ರೀತಿಯಿಂದ ಮಾತನಾಡಿಸಿ ಸಂತೈಸಿದನು. ಮತ್ತು ಅವರೆಲ್ಲರಿಗೂ ಯಥಾಯೋಗ್ಯ ಮರ್ಯಾದೆಯನ್ನು ಮಾಡಿ, ಯೋಗಕ್ಷೇಮಗಳನ್ನು ವಿಚಾರಿಸಿ, ಅವರೆಲ್ಲರನ್ನೂ ಪಲ್ಲಕ್ಕಿಯಲ್ಲಿ ಕೂಡಿಸಿ ದ್ವಾರಕೆಗೆ ಕೊಟ್ಟು ಕಳಿಸಿದನು. ಅವರ ಮೇಣೆಗಳನ್ನು ಕಾಯಲು ಸಾವಿರಾರು ಜನ ಸೇವಕರನ್ನು ಜೊತೆಗೆ ಕಳಿಸಿದನು.

ಆಮೇಲೆ ಮುಕುಂದನು ಆ ಮಣಿಪರ್ವತದ ಅತ್ಯುನ್ನತವಾದ, ಸೂರ್ಯಚಂದ್ರರಂತೆ ಹೊಳೆಯುವ, ಕನಕ ತೋರಣವುಳ್ಳ, ವಿವಿಧ ಪಶುಪಕ್ಷಿ ಸಂಕುಲವಾದ ದಿವ್ಯ ಶಿಖರವನ್ನು ಕಿತ್ತಿ ಎತ್ತಿ ಗರುಡನ ಮೇಲಿಟ್ಟನು. ಸರ್ವ ಸಮರ್ಥನಾದ ಗರುಡನು ಅತ್ಯುಚ್ಚವಾದ ಆ ಮಣಿ ಪರ್ವತದ ತುಂಗ ಶೃಂಗವನ್ನೂ ಮೇಲೆ ಕೃಷ್ಣ ಸತ್ಯಭಾಮೆಯರನ್ನೂ ನಿರಾಯಾಸವಾಗಿ ಲೀಲೆಯಿಂದ ಹೊತ್ತುಕೊಂಡು ವಾಯುಮಂಡಲದಲ್ಲಿ ಹಾರಾಡುತ್ತ ನಡೆದನು. ಅವನು ರೆಕ್ಕೆಬೀಸಿದ ಗಾಳಿಗೆ ಎಷ್ಟೋ ಗಿಡಗಳು ಉರುಳಿಬಿದ್ದವು. ಗಿರಿಶಿಖರಗಳು ಚಲ ವಿಚಲವಾದವು.

ಹೀಗೆ ಮೇಘ ಮಂಡಲವನ್ನು ಭಿನ್ನ ವಿಚ್ಛಿನ್ನಗೊಳಿಸುತ್ತ ಆ ಕೃಷ್ಣ ಕೇತನನು ಹಾರುತ್ತ ಮೇಲೆ ಮೇಲೆ ಏರುತ್ತ ಸೂರ್ಯಚಂದ್ರ ಮಂಡಲಗಳನ್ನು ದಾಟಿ ದೇವಗಂಧರ್ವರ ಆವಾಸವಾದ ಮೇರುಪರ್ವತಕ್ಕೆ ಬಂದನು. ಅಲ್ಲಿ ಅನೇಕ ದೇವಮಂದಿರಗಳನ್ನು ಕೃಷ್ಣನು ನೋಡಿದನು.

ಅಲ್ಲಿರುವ ದೇವಮಂದಿರಗಳ ದಿವ್ಯ ಶ್ರೇಣಿಗಳನ್ನೂ ವಿಶ್ವೇದೇವತೆಗಳ ಸಾಧ್ಯರ ಹಾಗೂ ಅಶ್ವಿನೀದೇವತೆ ಮೊದಲಾದವರ ದೇದೀಪ್ಯಮಾನವಾದ ಗೃಹಮಂಡಲಗಳನ್ನೂ ದಾಟಿ ಎಲ್ಲ ಪುಣ್ಯಲೋಕಗಳ ಮೇಲಿರುವ ದೇವಲೋಕಕ್ಕೆ ಬಂದು ಹರಿಯ ವಾಹನವು ನಿಂತಿತು. ಅಲ್ಲಿ ಪುರಂದರನ ಅತ್ಯಂತ ಸುಂದರವಾದ ದಿವ್ಯ ಮಂದಿರವನ್ನು ಕಂಡು ಗೋವಿಂದನು ಗರುಡನಮೇಲಿಂದ ಕೆಳಗಿಳಿದು ಒಳಗೆ ಹೋದನು.

ಸುರರಾಜನಾದ ದೇವೇಂದ್ರನು ಆಕಸ್ಮಾತ್ತಾಗಿ ಬಂದ ಉಪೇಂದ್ರನನ್ನು ನೋಡಿ ಪರಮಾನಂದಭರಿತನಾಗಿ ಸ್ವಾಗತ ಸತ್ಕಾರಗಳನ್ನು ನೀಡಿದನು. ಆಗ ಕೃಷ್ಣನಾದರೂ ತಾನು ನರಕಾಸುರನನ್ನು ಕೊಂದು ತಂದ ಅದಿತಿದೇವಿಯ ಕರ್ಣಕುಂಡಲಗಳನ್ನು ಇತ್ತು ಅಣ್ಣನೆಂದೂ ಇಂದ್ರನಿಗೆ ವಂದಿಸಿದನು. ಆಗ ಆ ಸ್ವರ್ಗಾಧಿಪತಿಯು ಅನೇಕ ರತ್ನಗಳನ್ನು ಇತ್ತು ಕೃಷ್ಣನನ್ನು ಪೂಜಿಸಿದನು. ಶಚೀದೇವಿಯಾದರೂ ಸತ್ಯಭಾಮೆಯನ್ನು ವಸ್ತ್ರಾಭರಣ ರತ್ನಾಲಂಕಾರಗಳಿಂದ ಪೂಜಿಸಿದಳು.

ಬಳಿಕ ವಾಸವ ವಾಸುದೇವರಿಬ್ಬರೂ ಕೂಡಿ ದೇವಮಾತೆಯಾದ ಅದಿತಿದೇವಿಯ ಸಕಲ ಸಂಪತ್ ಸಮೃದ್ಧವಾದ ದಿವ್ಯಮಂದಿರಕ್ಕೆ ಹೋಗಿ ಅವಳ ಕರ್ಣಕುಂಡಲಗಳನ್ನು ಸಮರ್ಪಿಸಿ ವಂದಿಸಿದರು. ಅಲ್ಲಿ ಅಪ್ಸರೆಯರಿಂದ ಪೂಜಿಸಲ್ಪಡತಕ್ಕ, ತಪೋನಿರತಳಾದ ಆ ದೇವಮಾತೆಯು ಕೃಷ್ಣನನ್ನು ಕುರಿತು "ಜನಾರ್ದನ! ಸುರಲೋಕದಲ್ಲಿ ಈ ಶಚೀ ಪತಿಯಂತೆ ನೀನು ಭೂಲೋಕದಲ್ಲಿ ಸರ್ವರಿಂದಲೂ ಪೂಜಿಸಲ್ಪಡುವಿ. ಮತ್ತು ನಿನ್ನನ್ನು ಜಗತ್ತಿನಲ್ಲಿ ಯಾರೂ ಗೆಲ್ಲಲಾರರು. ಮತ್ತು ಪ್ರಿಯದರ್ಶಿನಿಯಾದ ಈ ಸತ್ಯಭಾಮೆಯಾದರೂ ಇನ್ನು ಮೇಲೆ ದಿವ್ಯ ಗಂಧಿನಿಯಾಗುವಳು. ಹಾಗೂ ಕೃಷ್ಣ! ನೀನು ಭೂಲೋಕದಲ್ಲಿ ಇರುವವರೆಗೆ ಇವಳಿಗೆ ಮುಪ್ಪು ಆವರಿಸುವುದಿಲ್ಲ. ಕಾಂತಿ ಕಂದುವುದಿಲ್ಲ. ಕಳೆ ಕುಂದುವುದಿಲ್ಲ. ನಿತ್ಯ ನೂತನೆಯಾಗಿ ತನ್ನ ಚಿರಯೌವನ ಚಾರುರೂಪಗಳಿಂದ ನಿನ್ನನ್ನು ನಿರಂತರವೂ ಆನಂದಗೊಳಿಸುವಳು" ಎಂದು ಹೇಳಿ ಇಬ್ಬರನ್ನೂ ಆಶೀರ್ವದಿಸಿದಳು. ಹೀಗೆ ದೇವ ಜನನಿಯ ಶುಭಾಶೀವಾದವನ್ನು ಪಡೆದುಕೊಂಡು, ಸೋದರನಾದ ದೇವರಾಜನ ರತ್ನಪೂಜೆಯನ್ನು ಸ್ವೀಕರಿಸಿ, ಅಲ್ಲಿಯ ಸುರಸಮೂಹದ ನಿರೋಪ ತೆಗೆದುಕೊಂಡು ಸತ್ಯಭಾಮೆಯೊಂದಿಗೆ ಕೃಷ್ಣನು ಗರುಡನನ್ನು ಏರಿದನು.

ಬರುವಾಗ ದಾರಿಯಲ್ಲಿ ದೇವಸುಂದರಿಯರ ಆಡುಂಬೊಲವಾದ ನಂದನ ವನದಲ್ಲಿ "ಗಂಧಾಢ್ಯಂ ಸುಮನೋಹರಂ" ಆದ ಕಲ್ಪವೃಕ್ಷವು ಅವರ ಕಣ್ಣಿಗೆ ಬಿದ್ದಿತು. ಸರ್ವೇಂದ್ರಿಯಾಹ್ಲಾದಕಾರಿಯಾದ ಅದರ ಸುಗಂಧವು ಕೃಷ್ಣ ಸತ್ಯಭಾಮೆಯರಿಬ್ಬರ ಮನಸ್ಸನ್ನೂ ಅರಳಿಸಿತು. ಇಬ್ಬರ ಕುತೂಹಲವನ್ನೂ ಕೆರಳಿಸಿತು.

ಹನ್ನೆರಡು ತಿಂಗಳವೂ ಅದು ಹೂತು ಕಾತು ಪರಿಮಳ ಬೀರುತ್ತಿತ್ತು. ಬೇಡಿದುದನ್ನು ನೀಡುತ್ತಿತ್ತು. ಅದರ ಬಳಿಬಂದು ಯಾರೇ ನಿಂತರೂ ಅವರಿಗೆ ತಮ್ಮ ತಮ್ಮ ಹಿಂದಿನ ಜನ್ಮದ ಸಮಾಚಾರವೆಲ್ಲ ಸ್ಮರಣೆಗೆ ಬರುತ್ತಿತ್ತು. ಆದುದರಿಂದಲೇ ಇಂಥ ಅಭೂತಪೂರ್ವವಾದ ವೃಕ್ಷ ರಾಜನನ್ನು ರಕ್ಷಿಸಲು ಸಹಸ್ರಾಕ್ಷನು ಸಹಸ್ರಾಧಿಕ ದಕ್ಷರಾದ ಕಾವಲುಗಾರರನ್ನು ನಿಯಮಿಸಿದ್ದನು.

ಆ ಭಾಮೆಯ ಅಪೇಕ್ಷೆಯಂತೆ ಆ ಕಲ್ಪವೃಕ್ಷವನ್ನು ಲೀಲೆಯಿಂದ ಕಿತ್ತಿ ಕೃಷ್ಣನು ಗರುಡನ ಮೇಲೆ ಹೊರಿಸಿದನು. ಅಲ್ಲಿರುವ ಅಪ್ಸರಾ ಸ್ತ್ರೀಯರು ಬೆಕ್ಕಸ ಬೆರಗಾಗಿ ನೋಡುತ್ತ ನಿಂತುಕೊಂಡಿದ್ದರು. ಸತ್ಯಭಾಮೆಯನ್ನೂ ಅದರ ಹಿಂದೆ ಗರುಡನ ಮೇಲೆ ಕೂಡಿಸಿಗೊಂಡು ದ್ವಾರಕೆಯ ಕಡೆಗೆ ಕೃಷ್ಣನು ಪ್ರಯಾಣ ಮಾಡಿದನು. ಬಳಿಕ ಈ ಸಮಾಚಾರವು ಇಂದ್ರನಿಗೆ ತಿಳಿದರೂ ಅವನು ''ಉಪೇಂದ್ರನು ಮಾಡಿದ್ದೆಲ್ಲ ಒಳ್ಳೆಯದೇ'' ಎಂದು ಸುಮ್ಮನಾದನು.

ನರಕಾಸುರನ ಅಂತಃಪುರದಿಂದ ಕರೆದುಕೊಂಡು ಬಂದ ಗುಣವತಿಯರೂ ಶೀಲವತಿಯರೂ ಪರಮಪವಿತ್ರರೂ ಭಗವನ್ನಿಷ್ಠರೂ ಆದ ಹದಿನಾರು ಸಾವಿರದ ಒಂದು ನೂರು ಸತಿಯರನ್ನು ಅವರ ಅವರ ಶೀಲ ಸೌಂದರ್ಯ ಹಾಗೂ ಭಕ್ತಿ ಪಾರಮ್ಯಗಳಿಗೆ ಮೆಚ್ಚಿದ ಅಚ್ಯುತನು ದ್ವಾರಕೆಯಲ್ಲಿ ವಿಧಿಪೂರ್ವಕವಾಗಿ ವಿವಾಹವಾದನು.ಇಷ್ಟೆಲ್ಲ ಯೋಗ್ಯ ಯುವತಿಯರೊಂದಿಗೆ ಆನಂದದಿಂದ ಆ ಮುಕುಂದನು ಆ ದ್ವಾರಾವತಿಯಲ್ಲಿ ಇರುವಾಗ ಅನೇಕ ರುಚಿರಾವತಾರದ ಲೀಲಾ ಚಾರು ಚರಿತ್ರೆಗಳು ಜರುಗಿದವು.

ಒಂದು ದಿನ ತನ್ನ ಅಚ್ಚು ಮೆಚ್ಚಿನ ಸದ್ಗುಣಿ ಸತಿಯಾದ ರುಕ್ಮಿಣಿಯ ಒಂದು ವ್ರತದ ಉಪೋಷಣೆಯ ಪಾರಣೆಗಾಗಿ ಭಗವಂತನು ಅವಳೊಂದಿಗೆ ರೈವತಕ ಪರ್ವತಕ್ಕೆ ಹೋದನು. ಪಾರಣೆಯ ದಿನ ಎಲ್ಲ ಬ್ರಾಹ್ಮಣರಿಗೆ ಅನ್ನ ಸಂತರ್ಪಣೆ ದಾನ ದಕ್ಷಿಣೆಗಳ ವ್ಯವಸ್ಥೆಯನ್ನು ಸರಿಯಾಗಿ ಮಾಡಲಿಕ್ಕೆ ಸ್ವಯಂ ತಾನೆ ಟೊಂಕಕಟ್ಟಿ ನಿಂತುಕೊಂಡು ನಾರದರ ಅಪ್ಪಣೆಯಂತೆ ಎಲ್ಲ ಯದುಕುಮಾರರಿಗೂ ತನ್ನ ಮಕ್ಕಳು ಹಾಗೂ ಅಣ್ಣ ತಮ್ಮಂದಿರಿಗೂ ಬರಲಿಕ್ಕೆ ಹೇಳಿ ಕಳಿಸಿದನು. ತಮ್ಮ ಗುಣ ಗೌರವ ಹಾಗೂ ಮುಖಶ್ರೀಗಳಿಂದ ಶ್ರೀಕೃಷ್ಣನಿಗೆ ಮಾತ್ರ ಗೃಹಿಣಿಯರಾಗಲು ತಕ್ಕವರಾದ ಹದಿನಾರು ಸಾವಿರ ಸತೀಕುಲ ಮಂಡನ ಮಣಿಯರಾದ ರಮಣಿಯರೆಲ್ಲರೂ ಪಟ್ಟದರಸಿಯಾದ ಆ ಭೈಷ್ಮಿಯ ಉಪವಾಸ ಪಾರಣೆಯ ಮಹೋತ್ಸವಕ್ಕೆ ಪ್ರಾಪ್ತರಾಗಿದ್ದರು.

ಅನಂತರ ಆ ಅಧೋಕ್ಷಜನು ಅಲ್ಲಿಗೆ ಬಂದ ಎಲ್ಲ ಬ್ರಾಹ್ಮಣರಿಗೆ ಇಚ್ಛಾ ಭೋಜನವನ್ನು ಮಾಡಿಸಿ ಅವರ ಮನೋರಥಗಳನ್ನು ಪೂರ್ಣಮಾಡಿದನು. ಮತ್ತು ಆಪ್ತೇಷ್ಟಪುತ್ರ ಪರಿವಾರದೊಂದಿಗೆ ತಾನೂ ಭೋಜನ ಮಾಡಿದನು.

ಈ ರೀತಿಯಿಂದ ಉಪವಾಸದ ಪಾರಣೆಯನ್ನು ಯಥಾಸಾಂಗವಾಗಿ ನೆರವೇರಿಸಿದ ಬಳಿಕ ಶ್ರೀಕೃಷ್ಣನು ತನ್ನ ಪ್ರಿಯಭಾರ್ಯೆಯಾದ ರುಕ್ಮಿಣಿಯನ್ನು ಬಹುಮಾನಿಸಿದನು.

ಹೀಗೆ ತನ್ನ ನೆಚ್ಚಿನ ಮಡದಿಯೊಂದಿಗೆ ನಲುವೆಯಿಂದ ಕೇಶವನು ಅಲ್ಲಿ ವಾಸಮಾಡುತ್ತಲಿದ್ದಾಗ ದೇವಮುನಿಗಳಾದ ನಾರದರು ಅಲ್ಲಿಗೆ ದಯಮಾಡಿಸಿದರು. ರುಕ್ಮಿಣೀದೇವಿಯ ಜೊತೆಗೆ ಏಕಾಸನದಲ್ಲಿ ಕುಳಿತುಕೊಂಡ ಆ ಉಪೇಂದ್ರನು ನಾರದರು ಬಂದದ್ದನ್ನು ನೋಡಿ ಎದ್ದು ಅರ್ಘ್ಯ ಪಾದ್ಯಾದಿಗಳನ್ನಿತ್ತು ಆದರದಿಂದ ಉಪಚರಿಸಿದನು.

ಭಗವಂತನ ಆದರ ಸತ್ಕಾರಗಳಿಂದ ಸುಪ್ರೀತರಾದ ನಾರದರು ಅವನಿಗೆ ತಾವು ತಂದ ಪಾರಿಜಾತ ವೃಕ್ಷದ ಸುಗಂಧಿ ಕುಸುಮವೊಂದನ್ನು ಕೊಟ್ಟರು. ಕೃಷ್ಣನು ಆ ಗಂಧ ಬಂಧುರವಾದ ಆ ಪಾರಿಜಾತ ಪುಷ್ಪವನ್ನು ಅಲ್ಲಯೇ ತನ್ನ ಪಕ್ಕದಲ್ಲಿ ಮಂಡಿಸಿದ ರುಕ್ಮಿಣಿಗೆ ಪ್ರೇಮದಿಂದ ಇತ್ತನು. ಆ ದೇವಮಂದಾರದ ಕಮನೀಯ ಕುಸುಮವನ್ನು ತನ್ನ ರಸಿಕ ರಮಣನ ಸಂಕೇತದಿಂದ ನಿಡಿಗೂದಲಿನ ಸಿಡಿಮುಡಿಯಲ್ಲಿ ಮುಡಿದುಕೊಂಡು ಮೊದಲೇ ಸುರಸುಂದರಿಯಾದ ರುಕ್ಮಿಣಿಯು ಮತ್ತಿಷ್ಟು ರಮಣೀಯಳಾಗಿ ಶೋಭಿಸಿದಳು.

ತಾನು ತಂದಿತ್ತ ಆ ದೇವಪುಷ್ಪವು ಸಿರಿರಮಣಿಯ ಚೂಡಾಮಣಿಯ ಸ್ಥಾನವನ್ನು ಪಡೆದದ್ದನ್ನು ಕಂಡು ಸಂತೋಷದಿಂದ ನಾರದರು ತೃಪ್ತಿಯ ಉಸಿರನ್ನು ಬಿಟ್ಟು ಆನಂದ ದಿಂದ- "ದೇವಿ! ಈ ಪುಷ್ಪವು ನಿನಗಾಗಿಯೇ ಹುಟ್ಟಿದೆ. ಈ ಜಗತ್ತಿನಲ್ಲಿ ನಿನಗೊಬ್ಬಳಿಗೇ ಒಪ್ಪುತ್ತದೆ. ನಿಜವಾಗಿ ಹೇಳಬೇಕೆಂದರೆ ನಿನ್ನ ಈ ಚವರಿಕೂದಲಿನ ಚಾರುಚೂಡಾಮಣಿಯ ಸ್ಥಾನದಲ್ಲಿ ಇಟ್ಟಾಗ ಈ ಹೂವಿಗೇ ಒಂದು ಅಲಂಕಾರ ಇಡಿಸಿದಂತಾಗಿದೆ. ಹಿಮವತ್ಕನ್ಯೆಯಾದ ಸತೀದೇವಿಯು ಈ ದೇವತರುವಿನ ಕುಸುಮಗಳನ್ನು ನಿತ್ಯವೂ ಧರಿಸುವದರಿಂದ ಅವಳು ಪರಮೇಶ್ವರನಿಗೆ ಪರಮ ಪ್ರೀತ್ಯಾಸ್ಪದಳಾದ ಪ್ರೇಯಸಿಯಾಗಿದ್ದಾಳೆ. ಅದರಂತೆ ದೇವತೆಯಾದ ಆದಿತಿ ಶಚಿದೇವಿ ಸಾವಿತ್ರಿ ಶ್ರೀದೇವಿ ಮತ್ತು ಇತರ ವೃಂದಾರಕ ಸುಂದರಿಯರೂ ಒಂದೊಂದು ಸಂವತ್ಸರ ಕಾಲ ಈ ಕುಸುಮಗಳನ್ನು ಧಾರಣ ಮಾಡುವರು.

ರುಕ್ಮಿಣಿಯೇ! ಈ ಮುರಾರಿಯ ಹದಿನಾರು ಸಾವಿರದನೂರೆಂಟು ಸತಿಯರಲ್ಲಿ ನೀನೊಬ್ಬಳೇ ಅವನಿಗೆ ಅತ್ಯಂತ ಮೆಚ್ಚಿನ ಮಡದಿಯೆಂದು ನನಗೆ ಇಂದು ನಿಶ್ಚಿತವಾಯಿತು. ತಾವೇ ಭಾಗ್ಯದ ರಾಣಿಯರೆಂದು ತಿಳಿದುಕೊಂಡ ಸತ್ಯಭಾಮೆ ಜಾಂಬವತಿ ಗಾಂಧಾರಿ ಮೊದಲಾದ ನಿನ್ನ ಎಲ್ಲ ಸವತಿಯರ ಅಭಿಮಾನೋತ್ಸಾಹಗಳ ಮೇಲೆ ಇದರಿಂದ ತಣ್ಣೀರನ್ನು ಎರಚಿದಂತಾಗುವುದು. ತ್ರಿಭುವನ ರತ್ನದಂತಿರುವ ಕಮನೀಯ ಕುಸುಮವನ್ನು ಈ ಕೇಶವನು ಎಲ್ಲರನ್ನೂ ಬಿಟ್ಟು ನಿನಗೆ ಕೊಟ್ಟದ್ದರಿಂದ ಭೈಷ್ಮೀ ಎಂದರೆ ಭಗವಂತನ ಬಹಿಶ್ಚರಪ್ರಾಣ ಎಂದು ಸಿದ್ಧವಾದಂತಾಯಿತು."

ನಾರದರ ಈ ಪ್ರಶಂಸಾಪರ ಉದ್ಗಾರಗಳನ್ನೆಲ್ಲ ಸತ್ಯಭಾಮೆಯು ಗುಪ್ತವಾಗಿ ಅಲ್ಲಿಗೆ ಕಳಿಸಿದ ಗೂಢಚಾರಿಣಿಯರಾದ ದೂತಿಯರು ಕೇಳಿಕೊಂಡು ಬಂದು ಅಂತಃಪುರ ಪರಿವಾರಕ್ಕೆ ಉಪ್ಪುಕಾರ ಹಚ್ಚಿ ಪರಿಷ್ಕಾರಮಾಡಿ ಬಿತ್ತರಿಸಿದರು. ರುಕ್ಮಿಣಿಯ ಎಲ್ಲ ಸವತಿಯರ ಕಿವಿಗೂ ಕರ್ಣೋಪಕರ್ಣವಾಗಿ ಈ ಸಮಾಚಾರ ಮುಟ್ಟಿತ್ತು. ಅವರೆಲ್ಲ ಅಲ್ಲಲ್ಲಿ ಗುಂಪುಗೂಡಿ ಅದರ ಬಗೆಗೆ ಗುಜು ಗುಜು ಮಾತನಾಡಿದರು. ಬಹುಶಃ ಎಲ್ಲ ಕೃಷ್ಣ ಸ್ತ್ರೀಯರೂ ಆ ಪಟ್ಟದರಸಿಯ ಗುಣಶೀಲ ಸೌಹಾರ್ದಗಳನ್ನು ಬಲ್ಲದವರಾದ್ದರಿಂದ ಜ್ಯೇಷ್ಠ ಪತ್ನಿಯೂ ಪುತ್ರವತಿಯೂ ಆದ ಅವಳಿಗೆ ಈ ಗೌರವವಾದದ್ದು ಯೋಗ್ಯವೇ ಎಂದು ಅಭಿಪ್ರಾಯಪಟ್ಟರು.

ಆದರೆ ಸೌಂದರ್ಯ ಶಾಲಿನಿಯೂ ಸ್ವಾಭಿಮಾನಿಯೂ ಆದ ಸತ್ಯಭಾಮೆಗೆ ಮಾತ್ರ ತನ್ನ ಸವತಿಯ ಈ ಸೌಭಾಗ್ಯೋತ್ಕರ್ಷ ಹಾಗೂ ಕೃಷ್ಣನ ಪ್ರೇಮ ಪಕ್ಷಪಾತಗಳು ಎಷ್ಟು ಮಾತ್ರಕ್ಕೂ ಸಹನವಾಗಲಿಲ್ಲ. ಇದರಿಂದ ತನ್ನ ರೂಪ ಸಿರಿ ಸೌಭಾಗ್ಯಗಳಿಗೆ ಅವಮಾನವಾದಂತಾಯಿತೆಂದು ಬಗೆದು, ಈರ್ಷ್ಯಾಕುಲಳಾದ ಅವಳು ತಾನುಟ್ಟ ಕೇಸರೀಬಣ್ಣದ ರೇಶಿಮೆಯ ವಸನವನ್ನು ಬಿಸುಟೊಗೆದು, ಬರಿ ಬಿಳಿಯ ಬಟ್ಟೆಯೊಂದನ್ನು ಧರಿಸಿ, ಸಿಟ್ಟಿನಿಂದ ಉರಿಯುವ ಉಲ್ಕೆಯಂತೆ, ದಹಿಸುವ ಜ್ವಾಲೆಯಂತೆ, ಕ್ರೋಧಾಗಾರವನ್ನು ಮೋಡದ ಮನೆಯನ್ನು ಪ್ರವೇಶಿಸುವ ಉರುಳು ಚಿಕ್ಕೆಯಂತೆ ರಭಸದಿಂದ ಪ್ರವೇಶಿಸಿದಳು. ಅಲ್ಲಿ ಹಣೆತುಂಬ ಕೆಂಪು ಗಂಧವನ್ನು ಬಡೆದು, ಮೇಲೆ ಒಂದು ಬೆಳ್ಳಗಿನ ಹಣೆಪಟ್ಟಿಯನ್ನು ಬಿಗಿದುಕೊಂಡು ಕೋಪದಿಂದ ಕಿಡಿ ಕಿಡಿಯಾಗಿ ನಿಟ್ಟುಸಿರಿಡುತ್ತ ದಿಂಬುಗಳ ಮೇಲೆ ಅತ್ತಿತ್ತ ಒಲೆಯುತ್ತ ಹಾಸಿಗೆಯಮೇಲೆ ಕುಳಿತಳು.

ಇತ್ತ ಸರ್ವಜ್ಞನಾದ ಶ್ರೀಕೃಷ್ಣನು ನಾರದ ಹಾಗೂ ರುಕ್ಮಿಣಿ ಇಬ್ಬರೂ ಮಾತನಾಡುತ್ತ ಕುಳಿತದ್ದನ್ನು ನೋಡಿ ತಾನೂ ಮೆಲ್ಲನೇ ಅಲ್ಲಿಂದ ಎದ್ದು ಗಡಿಬಿಡಿಯಿಂದ ಸತ್ಯಭಾಮೆಯ ಮನೆಗೆ ಬಂದನು. ಆಗ ತನ್ನ ಪ್ರಿಯಕರನ ಪೀತಾಂಬರದ ಸೆರಗನ್ನು ತನ್ನ ಮುಖಕ್ಕೆ ಹಾಕಿಕೊಂಡು ಭಾಮೆಯು ಬಿಕಿಬಿಕ್ಕಿ ಅಳಹತ್ತಿದಳು. ಆಗ ಆ ನಾರಾಯಣನು ತನ್ನ ಪ್ರಾಣಕಾಂತೆಯಾದ ಭಾಮೆಯನ್ನು ಸಂತೈಸುತ್ತ "ಕಮಲಮುಖಿ! ನಿನ್ನ ದುಃಖ ನನ್ನ ಅಂಗಾಂಗಳಲ್ಲೆಲ್ಲ ಉರಿ ತುಂಬುತ್ತಲಿದೆ. ನಿನ್ನ ಭಕ್ತನಾದ ನಾನು ನಿನ್ನ ದುಃಖದ ಕಾರಣವನ್ನು ಕೇಳಲು ಅರ್ಹ. ಅದನ್ನು ನೀನು ನನಗೆ ಹೇಳದಿದ್ದರೆ ನಿನಗೆ ನನ್ನ ಪಂಚಪ್ರಾಣಗಳ ಆಣೆಯಾಗಿದೆ" ಎಂದು ಅಂತಃಕರಣ ಪೂರ್ವಕವಾಗಿ ಕೇಳಿದನು.

ಆಗ ಅಭಿಮಾನಧನಳಾದ ಆ ಕೃಷ್ಣಕಾಂತೆಯು ಬಾಷ್ಪ ಗದ್ಗದಿತವಾದ ದನಿಯಿಂದ ಮುಖ ಕೆಳಗೆ ಮಾಡಿಯೇ ಹೇಳಹತ್ತಿದಳು. "ಸ್ವಾಮಿ! ನನಗೆ ಗೌರವ ಸೌಭಾಗ್ಯಗಳನ್ನು ತಂದುಕೊಟ್ಟವ ನೀನೇ. ಜಗತ್ತಿನಲ್ಲೆಲ್ಲ "ಸತ್ಯಭಾಮೆಯೇ ಕೃಷ್ಣ ಪರಮಾತ್ಮನ ಮೆಚ್ಚಿನ ಮಡದಿ" ಎಂದು ಕೀರ್ತಿಯನ್ನು ಬೆಳಗಿಸಿದೆ. ಅದರಿಂದ ನಾನು ಎಲ್ಲ ಮುತ್ತೈದೆಯರಲ್ಲಿ ನಿನ್ನ ದಯೆಯಿಂದ ತಲೆಎತ್ತಿ ಮೆರೆದಾಡುತ್ತಲಿದ್ದೆ. ಕೃಷ್ಣನ ಅತ್ಯಂತ ಪ್ರೀತಿಯ ಹೆಂಡತಿಯೆಂದು ತಿಳಿದೇ ಕಾಮಿನೀ ಕದಂಬದಲ್ಲಿ ನನಗೆ ಇಂದಿನವರೆಗೆ ವಿಚಿತ್ರ ಗೌರವಾದರ ಮನ್ನಣೆಗಳು ದೊರೆಯುತ್ತಲಿದ್ದವು. ಆದರೆ ಪ್ರಭು! ಇಂದು ನನ್ನ ದಾಸಿಯರು ಹೇಳಿದ ಸಮಾಚಾರವನ್ನು ಕೇಳಿ ನನ್ನನ್ನು ನೋಡಿ ಎಲ್ಲರೂ ನಗುವಂತಾಗಿದೆ.

ದೇವಮುನಿ ನಾರದರು ತಂದುಕೊಟ್ಟ ಪಾರಿಜಾತ ಪುಷ್ಪವನ್ನು ನನ್ನನ್ನು ಬಿಟ್ಟು ರುಕ್ಮಿಣಿಗೆ ಕೊಟ್ಟದ್ದರಿಂದ ನಿನ್ನ ನಿಜವಾದ ಪ್ರೇಮ ಆದರಗಳಿಗೆ ಯಾರು ಪಾತ್ರರುನ್ನುವುದನ್ನು ಎಲ್ಲರಿಗೂ ತೋರಿಸಿದಂತಾಯಿತು. ನಿನ್ನ ನೆಚ್ಚಿನ ನಲ್ಲೆಯಾದ ಅವಳನ್ನು ನಾರದನು ಬಾಯಿತುಂಬ ಹೊಗಳಹತ್ತಿದಾಗ ನೀನು ಅದನ್ನು ಎದೆತುಂಬಿ ಕೇಳಿ ಆನಂದಪಟ್ಟೆ. ನಿನ್ನನ್ನು ಸಂತೋಷಪಡಿಸಲಿಕ್ಕಾಗಿ ನಾರದನು ನಿನ್ನ ಆ ಪ್ರೀತಿಯ ಪತ್ನಿಯನ್ನು ಹೊಗಳಿದರೆ ಹೊಗಳಲಿ. ಆದರೆ ಅವಳ ಪ್ರಶಂಸೆಯ ಭರದಲ್ಲಿ ಬಡಪಾಯಿಯಾದ ಈ ದುರ್ದೈವಿ ಸತ್ಯಭಾಮೆಯ ಹೆಸರನ್ನು ಏಕೆ ಅವನು ಎತ್ತಬೇಕಾಗಿತ್ತು? "ಭಾಮೆ! ನನಗೆ ನಿನ್ನಷ್ಟು ಪ್ರೀತಿಯ ಹೆಂಡತಿ ಬೇರೊಬ್ಬಳಿಲ್ಲ" ಎಂದು ಪ್ರೇಮದಿಂದಾಡಿದ ಆ ನಿನ್ನ ಮಾತುಗಳೆಲ್ಲ ಎಲ್ಲಿ ಹೋದವು? ನಿನ್ನ ಮಿಥ್ಯಾ ಪ್ರೇಮದ ಬಣ್ಣವೆಲ್ಲ ಬಯಲಾದಂತಾಯಿತು. ಈ ನಿನ್ನ ಪ್ರೇಮಾಭಿನಯದಿಂದ ವಂಚಿತಳಾದ ನನಗೆ ಮಹಾ ಅಪಮಾನವಾಗಿದೆ. ಇಷ್ಟು ನಗೇಗೇಡಿಯಾಗಿ ಅವಮಾನಿತಳಾದ ನನಗೆ ಬದುಕುವ ಇಚ್ಛೆಯೇ ಇಲ್ಲದಂತಾಗಿದೆ. ಯಾರಿಂದ ಅಭಯ ಪ್ರಾಪ್ತಿಯಾಗಿದೆಯೇ ಅವರೇ ಭಯಜನಕರಾಗಿ ನನ್ನನ್ನು ಅಪಮಾನಮೃತ್ಯುವಿನಿಂದ ರಕ್ಷಿಸದಿದ್ದರೆ ಅಯ್ಯೋ! ನನ್ನ ಗತಿ ಏನು" ಎಂದಂದು ಶೋಕಿಸಹತ್ತಿದಳು.

ಪ್ರಿಯಾರಾಧನ ಕುಶಲನಾದ ಶ್ರೀಕೃಷ್ಣನು ಸೌಮ್ಯವಾದ ಶಬ್ದಗಳಿಂದಲೇ ಅವಳನ್ನು ಸಂತೈಸುತ್ತ -

"ಕೋಪಸಿಯಾದ ಪ್ರೇಯಸಿಯೇ! ನಿನಗೆ ಪಾರಿಜಾತ ಹೂಗಳೇ ಬೇಕಾಗಿದ್ದರೆ ಹೇಳು. ಸ್ವರ್ಗದಿಂದ ಆ ಪಾರಿಜಾತ ಗಿಡವನ್ನೇ ಕಿತ್ತಿತಂದು ನಿನಗೆ ಬೇಕಾದಷ್ಟು ದಿನ ನಿನ್ನ ಮನೆಯಲ್ಲಿ ಇಟ್ಟು ಬಿಡುವೆನು. ಬರಿ ಒಂದು ಹೂವಿಗಾಗಿ ಇಷ್ಟೇಕೆ ಅನುತಾಪ ಪಡುವಿ?"

"ಹಾಗಾದರೆ..." ದುಃಖ ದುಮ್ಮಾನಗಳೆಲ್ಲ ಕೃಷ್ಣನ ಮಾತಿನಿಂದ ಕುಗ್ಗಿ ಭಾಮೆಯು

ಉಲ್ಲಾಸದಿಂದ ಉಬ್ಬಿ ಉತ್ಸಾಹದಿಂದ ಮುಂದಾಗಿ ಮಾತನಾಡ ಹತ್ತಿದಳು. ''ಪ್ರಭೋ! ದೇವಲೋಕದ ಆ ಮಂದಾರ ಗಿಡವನ್ನೇ ಕಿತ್ತಿ ತಂದು ನನ್ನ ಮನೆಯ ಅಂಗಳದಲ್ಲಿ ನೆಡುವುದಾದರೆ, ನೆಡುವದಾದರೆ ನನಗೆ ಪರಮ ಸಂತೋಷ ವಾಗುವುದು. ನನ್ನ ಕೋಪತಾಪಗಳೆಲ್ಲ ಪರಿಹಾರವಾಗಿ ನಾನು ಲಲನಾಕುಲಲಲಾಮಳಾಗಿ ಮೆರೆಯಬಹುದು. ಶ್ರೀಕೃಷ್ಣನ ಸೀಮಂತಿನಿಯರಲ್ಲಿ ಭಾಮೆಯೇ ಸರ್ವ ಶ್ರೇಷ್ಠಳೆಂದು ಅತ್ಯಂತ ಗೌರವವನ್ನೂ ನಾನು ಹೊಂದುವೆನು.'' ಸಂತುಷ್ಟಳಾದ ಸತ್ಯಭಾಮೆಯ ಮಾತಿಗೆ ಆ ಅಚ್ಯುತನು ''ತಥಾಸ್ತು'' ಹಾಗೇ ಆಗಲಿ ಎಂದು ಹೇಳಿ ಅವಳನ್ನು ಸಂತೈಸಿದ. ನಾರದರು ಕೃಷ್ಣ ಸತ್ಯಭಾಮೆಯರಿಗೆ ಪಾರಿಜಾತದ ಮಹತ್ವವನ್ನು ತಿಳಿಸಿ ಹೇಳಿದರು.

''ಈ ಗಿಡವನ್ನು ಕಶ್ಯಪರು ಮಂದಾರ ಎಂಬ ಕಲ್ಪವೃಕ್ಷದ ಸಾರವನ್ನು ತೆಗೆದೇ ನಿರ್ಮಿಸಿದ್ದರಿಂದ ಇದು ವೃಕ್ಷಗಳಲೆಲ್ಲ ಅತ್ಯಂತ ಶ್ರೇಷ್ಠ ಎಂದು ಪರಿಗಣಿಸಲ್ಪಟ್ಟಿದೆ. ಮಹಾಸತಿಯಾದ ಆದಿತಿದೇವಿಯು ಪುಣ್ಯ ಹಾಗೂ ಸೌಭಾಗ್ಯ ಪ್ರಾಪ್ತಿಗಾಗಿ ತನ್ನ ಪತಿಯಾದ ಕಶ್ಯಪರನ್ನು ಈ ಪಾರಿಜಾತ ತರುವಿಗೆ ಹೂವಿನಮಾಲೆಯನ್ನು ಕೊರಳಲ್ಲಿ ಹಾಕಿ ಕಟ್ಟಿ ನನಗೆ ದಾನಕೊಟ್ಟಳು. ಆಮೇಲೆ ತಪೋಧನರಾದ ಅವರನ್ನು ನಾನು ಉಚಿತವಾದ ಪ್ರತಿಫಲವನ್ನು ತೆಗೆದುಕೊಂಡು ತಿರುಗಿಕೊಟ್ಟೆ. ಇದರಂತೆ ಶಚೀದೇವಿಯು ಇಂದ್ರನನ್ನೂ, ರೋಹಿಣಿಯು ಚಂದ್ರನನ್ನೂ, ಋದ್ಧಿಯು ಕುಬೇರನನ್ನೂ, ಈ ಗಿಡಕ್ಕೆ ಕಟ್ಟಿ ದಾನಕೊಟ್ಟು ನಿತ್ಯ ಸೌಭಾಗ್ಯವನ್ನು ಪಡೆದಿದ್ದಾರೆ. ಗಂಗಾನದಿಯ ಆಚೆಯ ದಂಡೆಯಲ್ಲಿ (''ಪರಿಜಾತೋ ವಿಷ್ಣು ಪದ್ಯಾಃ ಪಾರಿಜಾತೇತಿ ಶಬ್ದಿತಃ'') ಹುಟ್ಟಿದ್ದರಿಂದ ಅದಕ್ಕೆ ಪಾರಿಜಾತ ಎಂದೂ, ಮಂದಾರ ಕುಸುಮಗಳಿಂದ ಮಂಡಿತವಾದುದರಿಂದ ಮಂದಾರ ಎಂದೂ ಅದನ್ನು ಕರೆಯುವರು. ಇದರೆ ಈ ನಾಮ ಮಹಿಮೆಗಳನ್ನು ತಿಳಿಯದ ಅಜ್ಞ ಜನರು ಇದು ಯಾವುದೊ ಒಂದುಜಾತಿಯಗಿಡ (ಕೋಷ್ಯಯಂ ದಾರುರಿತ್ಯಾಹುಃ...) ಎಂದು ಹೇಳಿದ್ದರಿಂದ ಅದಕ್ಕೆ ಕೋವಿದಾರ ಎಂತಲೂ ಹೆಸರು ಬಂದಿದೆ. ನಾನು ನಿನಗೆ ನಿನ್ನೆ ತಂದುಕೊಟ್ಟ ಒಂದು ಹೂವಿನ ಗಂಧ ಮಕರಂದ ಹಾಗೂ ಅಂದ ಚಂದಗಳಿಂದ ಆ ಮೂಲ ಮಂದಾರದ ಸೌಗಂಧ ಸೌಂದರ್ಯ ಮತ್ತು ದಿವ್ಯತೆಗಳ ಕಲ್ಪನ ನಿಮಗಾಗಿರಬಹುದು.'' ಎಂದು ಹೇಳಿ ನಾರದರು ಸುಮ್ಮನಾದರು.

ಶ್ರೀಕೃಷ್ಣನು ನಾರದರ ಮುಖಾಂತರವೇ ಇಂದ್ರನಿಗೆ ಒಂದು ವರ್ಷದ ಮಟ್ಟಿಗೆ ಪಾರಿಜಾತವನ್ನು ದ್ವಾರಕೆಗೆ ಕಳಿಸಬೇಕೆಂದು ಹೇಳಿಕಳಿಸಿದನು. ಅವನ ಮಾತನ್ನು ಇಂದ್ರನು ತಿರಸ್ಕರಿಸಿದಾಗ ಶ್ರೀಕೃಷ್ಣನು ಗರುಡಾರೂಢನಾಗಿ ಆಗಸ ಪಯಣವನ್ನು ಮಾಡಿ ಪುತ್ರ ಪ್ರದ್ಯುಮ್ನನೊಡನೆ ಇಂದ್ರಪುರಿಯ ನಂದನವನ್ನು ತಲುಪಿದರು. ಅಲ್ಲಿ ಘೋರವಾದ ನಾನಾ ಆಯುಧಗಳನ್ನು ಹಿಡಿದುಕೊಂಡು ಅಸಂಖ್ಯ ಜನರು ಆ ನಂದನ ಬನ ಮತ್ತು ಮಂದಾರ ಗಿಡಗಳನ್ನು ಕಾಯುತ್ತಲಿದ್ದರು. ಅವರೆಲ್ಲ ನೋಡ ನೋಡುತ್ತಿರುವಷ್ಟರಲ್ಲಿಯೇ ಶ್ರೀಕೃಷ್ಣನು ಆ ಪಾರಿಜಾತ ವೃಕ್ಷವನ್ನು ಸಹಜವಾಗಿ ಕಿತ್ತಿ ಗರುಡನಮೇಲೆ ಇಟ್ಟನು. ಮತ್ತು ಆ ಪಾರಿಜಾತ ಸಹಿತವಾಗಿಯೇ ಗರುಡಾರೂಢನಾಗಿ ಅಮರಾವತಿಗೆ ಗ್ರಾಮ ಪ್ರದಕ್ಷಿಣೆಯನ್ನು ಹಾಕಹತ್ತಿದನು. ಅದನ್ನು ಕಂಡು ಗಾಬರಿಯಾದ ನಂದನವನ ಪಾಲಕರು ಓಡುತ್ತಹೋಗಿ ಸುರೇಂದ್ರನಿಗೆ ಈ ಸಮಾಚಾರವನ್ನು ತಿಳಿಸಿದರು. ಆಗ ತಕ್ಷಣದಲ್ಲಿ ಅವನಾದರೂ ಐರಾವತವನ್ನು ಏರಿಕೊಂಡು ಬಂದನು.

ಆಗ ಇಂದ್ರ, ಉಪೇಂದ್ರರಿಗೂ ಘನ ಘೋರವಾದ ಸಂಗ್ರಾಮವು ನಡೆಯಿತು. ಕೃಷ್ಣ ಪಕ್ಷಪಾತಿಗಳಾದ ದೇವತೆಗಳಾರೂ ಇಂದ್ರನ ಸಹಾಯಕ್ಕೆ ಬಂದಿರಲಿಲ್ಲ. ತನ್ನ ಮಗನಾದ ಜಯಂತ ಹಾಗೂ ಅತ್ಯಂತ ಆಪ್ತಮಿತ್ರನಾದ ಪ್ರವರನೆಂಬ ಬ್ರಾಹ್ಮಣ ಇವರಿಬ್ಬರನ್ನೇ ಕರೆದುಕೊಂಡು ಸಂಗ್ರಾಮ ರಂಗದಲ್ಲಿ ಸುನಾಸೀರನು ಇಳಿದ್ದನು. ಇಂದ್ರ ಉಪೇಂದ್ರರಲ್ಲಿ ಘನಘೋರವಾದ ಕದನವು ಭೀಕರವಾಗಿ ನಡೆಯಿತು. ಅವರೀರ್ವರ ಘೋರಾಸ್ತ್ರಗಳಿಂದ ದಶದಿಕ್ಕುಗಳಿಗೆಲ್ಲ ಉರಿಹತ್ತಿದಂತೆ ತೋರುತ್ತಿತ್ತು. ಗುಡ್ಡಗಳೆಲ್ಲ ಗದುಗುಟ್ಟಿದ್ದವು. ನೆಲವೆಲ್ಲ ನಡುಗಿಹೋಯಿತು. ಮುಗಿಲೆಲ್ಲ ಹೊಗೆ ಬಾಣಗಳಿಂದ ಮುಚ್ಚಿಹೋಯಿತು. ನೀರಿನಲ್ಲಿಯೂ ಉರಿಹತ್ತಿ ಜಗತ್ತನೆಲ್ಲ ಸುಡಹತ್ತಿತು. ಗ್ರಹ ನಕ್ಷತ್ರಗಳೂ ಪರಸ್ಪರ ಯುದ್ಧಮಾಡುವವರಂತೆ ಒಂದುಕ್ಕೊಂದು ಡಿಕ್ಕಿ ಹೊಡೆದು ನೆಲಕ್ಕುರುಳಿದವು. ಜ್ಯೋತಿರ್ಮಂಡಲಗಳೆಲ್ಲ ಒಂದಕ್ಕೊಂದು ತಿಕ್ಕಾಡಿ ತಾಕಲಾಡಿ ಕಿಡಿಕಾರಿದವು. ಗಗನದೊಡಲಿನಲ್ಲೆಲ್ಲ ಸಿಡಿಲುತುಂಬಿ ಆ ಮದ್ದಿನ ಕಡಲಿಗೇ ಕೊಳ್ಳಿ ಕೊಟ್ಟಂತಾಗಿತ್ತು. ರೋಷ ತುಂಬಿದ ಅವರಿಬ್ಬರೂ ಸುರೋತ್ತಮರು ಕಲಿತನದಿಂದ ಘೋರವಾಗಿ ಕಾದುತ್ತಲೇ ಇದ್ದರು. ಆದರಿಂದ ಪ್ರಳಯಕಾಲವು, ಸನ್ನಿಹಿತವಾಗಿ ಪ್ರಪಂಚವೆಲ್ಲವೂ ದಗ್ಧವಾಗಿ ಹೋಗುವಂತೆ ತೋರುತ್ತಿತ್ತು. ಲೋಕಕಲ್ಯಾಣಕಾಂಕ್ಷಿಗಳಾದ ಸುರಮುನಿಗಳೆಲ್ಲ ಶಾಂತಿ ಪಾಠದ ಮಂತ್ರಗಳನ್ನು ಜಪಿಸಹತ್ತಿದರು. ಬ್ರಹ್ಮದೇವರು ಬಂದು ಕಶ್ಯಪರಿಗೆ "ನೀವು ಅದಿತಿದೇವಿಯ ಜೊತೆಗೆ ಹೋಗಿ ಅವರಿಬ್ಬರ ಸಮರ ವಿಪ್ಲವವನ್ನು ನಿಲ್ಲಿಸಿರಿ" ಎಂದು ಆಜ್ಞೆಗೈದರು.

ಆಗ ಅದಿತಿ ಕಶ್ಯಪರಿಬ್ಬರೂ ಬಂದು ಕೋಪಾಂಧರಾಗಿ ಕಾದುತ್ತಲಿರುವ ಇಂದ್ರ ಉಪೇಂದ್ರರ ರಥಗಳ ನಟ್ಟ ನಡುವೆ ಬಂದು ನಿಂತರು. ಆ ತಾಯಿ ತಂದೆಗಳನ್ನು ಕಂಡಕೂಡಲೇ ಇಬ್ಬರೂ ರಥದಿಂದ ಇಳಿದುಬಂದು ಅವರ ಪಾದಗಳನ್ನು ಹಿಡಿದು ವಂದನೆಗೈದರು. ಆಗ ಅಂತಃಕರಣದ ತುಂಬಿ ಬಂದ ದೇವಮಾತೆಯಾದ ಅದಿತಿಯು ಇಬ್ಬರೂ ಮಕ್ಕಳನ್ನು ಎತ್ತಿ ಹಿಡಿದು ಎದೆ ತುಂಬಿ "ಮಕ್ಕಳೇ! ನೀವಿಬ್ಬರೂ ನನ್ನ ಪ್ರೀತಿಯ ಮಕ್ಕಳಿದ್ದು ವೈರಿಗಳಂತೆ ಏಕೆ ಬಡೆದಾಡುವಿರಿ! ಅಣ್ಣ-ತಮ್ಮಂದಿರಲ್ಲಿ ಕ್ಷುದ್ರ ಕಾರಣಕ್ಕಾಗಿ ಇಂಥ ದಾರುಣ ಸಂಗ್ರಾಮವಾಗುವುದು ಲಾಂಛನಾಸ್ಪದ. ನೀವೀಗ ತಾಯಿ ತಂದೆಗಳ ಮಾತನ್ನು ಕೇಳುತ್ತಿದ್ದರೆ ಇಬ್ಬರೂ ಮೊದಲು ನಿಮ್ಮ ನಿಮ್ಮ ಕೈಯಲ್ಲಿಯ ಅಸ್ತ್ರಗಳನ್ನು ಕೆಳಗಿಟ್ಟು ನಾನು ಹೇಳಿದಂತೆ ಕೇಳಿರಿ" ಎಂದು ಅಪ್ಪಣೆ ಗೈದಳು. ತಾಯಿಯ ಮಾತಿಗೆ ಇಂದ್ರೋಪೇಂದ್ರರಿಬ್ಬರೂ ಒಪ್ಪಿ ತಕ್ಷಣ ಯುದ್ಧ ನಿಲ್ಲಿಸಿದರು.

ಅನಂತರ ದೇವಮಾತೆಯು "ಕೃಷ್ಣ! ನೀನೀಗ ಈ ಪಾರಿಜಾತವನ್ನು ದ್ವಾರಕೆಗೆ ಒಯ್ದು ಬಿಡು. ಅಲ್ಲಿ ನನ್ನ ಪ್ರೀತಿಯ ಸೊಸೆಯಾದ ಸತ್ಯಭಾಮೆಯು ಈ ವೃಕ್ಷದಿಂದ ಅವಳ ಮನಸ್ಸಿನಲ್ಲಿ ಸಂಕಲ್ಪಿಸಿದಂತೆ ಪುಣ್ಯಕವ್ರತವನ್ನು ಮಾಡಿ ಸೌಭಾಗ್ಯ ಸಂಪದಗಳನ್ನು ಪಡೆಯಲಿ. ಅವಳ ವ್ರತಾನುಷ್ಠಾನಗಳೆಲ್ಲ ಮುಗಿದ ಬಳಿಕ ಮತ್ತೆ ಇದನ್ನು ಸ್ವರ್ಗಲೋಕಕ್ಕೆ ತಂದು ನಂದನದಲ್ಲಿ ಅದರ ಸ್ಥಳದಲ್ಲಿ ಮೊದಲಿನಂತೆ ಇಟ್ಟುಬಿಡಿರಿ" ಎಂದು ಹೇಳಿದಳು. ಅದಕ್ಕೆ ಸುರರಾಜನಾದರೂ ಸಮ್ಮತಿಯನ್ನು ಸೂಚಿಸಲು ಶ್ರೀಕೃಷ್ಣನು ಹಾಗೇ ಆಗಲಿ ಎಂದು ಹೇಳಿ ಪಾರಿಜಾತ ವೃಕ್ಷವನ್ನು ಗರುಡನ ಮೇಲೆ ಇಟ್ಟುಕೊಂಡು ಭೂಮಿಗೆ ಬಂದು ದ್ವಾರಕೆಗೆ ತಂದನು.

ಕೃಷ್ಣನು ಆ ಪಾರಿಜಾತ ವೃಕ್ಷವನ್ನು ದ್ವಾರಕೆಯ ತುಂಬ ಮೆರೆಸಿ ತನ್ನ ತಾಯಿ ತಂದೆ ಅಣ್ಣ ಬಲರಾಮರ ಮನೆಗೆ ಬಂದಾಗ ಇಳಿದು ಅವರಿಗೆ ವಂದಿಸಿ ಕೊನೆಗೆ ಸತ್ಯಭಾಮೆಯ ಮನೆಗೆ

ಅದನ್ನು ಕರೆತಂದನು. ಹೃದಯತುಂಬಿ ಹರ್ಷೋತ್ಕರ್ಷದಿಂದ ಉಲ್ಲಸಿತಳಾಗಿ ನಿಂತ ಭಾಮೆಯು ಪತಿಯನ್ನೂ ಆ ಪಾರಿಜಾತವನ್ನೂ ಬಾಗಿಲಲ್ಲಿಯೇ ಸ್ವಾಗತಿಸಿ ಆರತಿ ಅಕ್ಷತೆ ಗಳಿಂದ ಪೂಜಿಸಿದಳು. ಗದ ಸಾಂಬ ಪ್ರದ್ಯುಮ್ನಾದಿ ಕುಮಾರರನ್ನು ಮುಂದೆ ಮಾಡಿಕೊಂಡು ಭಗವಂತನು ಅವಳ ಮನೆಯೊಳಗೆ ಬಂದು ಆ ಮಂದಾರವನ್ನು ಸ್ಥಾಪಿಸಿದನು. ಅವಳ ಮನೆಯಲ್ಲಿದ್ದ ಅದು ಬೇಕೆಂದರೆ ದ್ವಾರಕೆಯ ತುಂಬ ಬೆಳೆದು ನಿಲ್ಲುತ್ತಿತ್ತು. ಚಿಕ್ಕದಾಗಲೆಂದು ಭಾಮೆಯು ಅಪೇಕ್ಷಿಪಟ್ಟರೆ ಅದು ಹೆಬ್ಬಟ್ಟಿನ ಅಳತೆಯದೂ ಆಗುತ್ತಿತ್ತು. ಅದರಿಂದ ಭಾಮೆಯ ನೂರು ಜನುಮದ ಬಯಕೆಗಳೆಲ್ಲ ತೃಪ್ತಿಯನ್ನು ಹೊಂದಿ ಅವಳ ಮನಸ್ಸು ಗೆಲುವಿನ ಗೋಪುರದಲ್ಲಿ ನಲಿದಾಡಿತು. ಅವಳು ಕೂಡಲೇ ವ್ರತದ ತಯ್ಯಾರಿಯನ್ನೆಲ್ಲ ಮಾಡಿದಳು. ಕೃಷ್ಣನಾದರೂ ಜಂಬೂ ದ್ವೀಪದಲ್ಲಿ ಸಿಗುವ ಪದಾರ್ಥಗಳನ್ನೆಲ್ಲ ತರಿಸಿ ಪುಣ್ಯಕದ ಸಮಾರಂಭದ ಸಿದ್ಧತೆಯನ್ನು ಮಾಡಿ ನಾರದರನ್ನು ನೆನೆಸಿದನು.

ಭಗವಂತನು ನೆನೆದ ತಕ್ಷಣ ನಾರದರು ಬಂದರು. ಯಥಾ ಸಾಂಗವಾಗಿ ಪುಣ್ಯಕ ವ್ರತವನ್ನು ನಡೆಯಿಸಿಕೊಡಬೇಕೆಂದು ಕೃಷ್ಣನು ಅವರನ್ನು ಕೇಳಿಕೊಂಡನು. ಮುಂದೆ ಒಂದು ಒಳ್ಳೇ ಸುಮುಹೂರ್ತದಲ್ಲಿ ಸ್ನಾನಮಾಡಿ ಶುಚಿರ್ಭೂತರಾಗಿ ನಿಂತುಕೊಂಡ ನಾರದರನ್ನು ಶ್ರೀಹರಿಯು ವಿಧಿಪೂರ್ವಕವಾಗಿ ಪೂಜೆಮಾಡಿ ಆ ವ್ರತದಲ್ಲಿ ಪ್ರಧಾನವಾದ ದಾನವನ್ನು ಸ್ವೀಕರಿಸಲು ಆಮಂತ್ರಿಸಿದನು. ಅದರಂತೆ ಅವರ ಆಮಂತ್ರಣವನ್ನು ಮನ್ನಿಸಿಬಂದ ಆ ದೇವಮುನಿಗಳನ್ನು ಗಂಧ ಮಾಲ್ಯಗಳಿಂದ ಭಾಮೆಯ ಒಡಗೂಡಿ ಪೂಜಿಸಿ ಬಗೆಬಗೆಯ ಭಕ್ಷ್ಯ ಭೋಜ್ಯಗಳಿಂದ ಭೋಜನಮಾಡಿಸಿದನು. ಅನಂತರ ಭಾಮೆಯು ಕೃಷ್ಣನ ಕೊರಳಲ್ಲಿ ಹೂವಿನ ಹಾರವನ್ನು ಹಾಕಿ ಅದರಿಂದ ಅವನನ್ನು ಪಾರಿಜಾತ ಗಿಡಕ್ಕೆ ಕಟ್ಟಿದಳು. ಮತ್ತು ವಿಧಿಪೂರ್ವಕವಾಗಿ ಸಂಕಲ್ಪಮಾಡಿ ಭಗವಂತನ ಆಜ್ಞೆಯನ್ನು ಪಡೆದುಕೊಡು ಅವನನ್ನು ನಾರದರಿಗೆ ದಾನವಿತ್ತು ''ಕೃಷ್ಣಾರ್ಪಣ'' ಎಂದಂದು ನೀರುಬಿಟ್ಟಳು. ಅದರ ಜೊತೆಗೆ ಸಾವಿರ ಹಸುಗಳನ್ನೂ ಒಂದು ಸ್ವರ್ಣಗಿರಿಯನ್ನೂ ಮತ್ತೊಂದು ರಜತಾದ್ರಿಯನ್ನೂ ಬೇರೊಂದೂ ಮಣಿಪರ್ವತವನ್ನೂ ನಾರದರಿಗೆ ದಾನವಿತ್ತಳು. ಅದನ್ನೆಲ್ಲ ಆನಂದದಿಂದ ಸ್ವೀಕರಿಸಿ ಪರಿತೃಪ್ತರಾದ ನಾರದರು ವಿನೋದದಿಂದ ಕೇಶವನಿಗೆ ''ಕೃಷ್ಣ! ಭಾಮೆಯು ನಿನ್ನನ್ನು ವಿಧಿಪೂರ್ವಕವಾಗಿ ಸಂಕಲ್ಪಮಾಡಿ ನೀರುಬಿಟ್ಟು ನನಗೆ ದಾನಕೊಟ್ಟಿದ್ದಾಳೆ. ನೀನು ಇನ್ನು ನನ್ನ ದಾಸ. ನಾನು ಹೇಳಿದಂತೆ ಕೇಳಬೇಕು'' ಎಂದು ಅಪ್ಪಣೆಗೈದರು. ಆಗ ಕೇಶವನಾದರೂ ಕೈಮುಗಿದು ನಾರದರಿಗೆ ''ಆಗಲಿ ಸ್ವಾಮಿ! ಈ ದಾಸನು ಪ್ರಭುಗಳ ಸೇವೆಗಾಗಿ ಸದಾ ಸಿದ್ಧನಿದ್ದಾನೆ'' ಎಂದು ಹೇಳಿ ಅವರ ಬೆನ್ನುಹತ್ತಿದನು.

ಹೀಗೆ ಪರಿಹಾಸಕಲಾ ಕುಶಲರೂ ಲೀಲಾ ವಿನೋದ ರಸಿಕರೂ ಆದ ನಾರದರು ಕೃಷ್ಣನೊಂದಿಗೆ ಎಷ್ಟೋ ಹೊತ್ತಿನವರೆಗೆ ನಗೆ ಚೇಷ್ಟೆ ವಿನೋದ ವಿಲಾಸಗಳನ್ನು ಮಾಡಿ ಕೊನೆಗೆ ಅವನ ಕೊರಳಲ್ಲಿ ಕಟ್ಟಿರುವ ಹೂವಿನ ಸರವನ್ನು ಬಿಚ್ಚಿ ''ಕೃಷ್ಣ ನಿನ್ನ ಬದಲಾಗಿ ನನಗೆ ಒಂದು ಕರು ಸಹಿತವಾದ ಕಪಿಲಾ ಹಸುವನ್ನು ಕೊಟ್ಟರೆ ನಿನ್ನನ್ನು ಬಿಡುತ್ತೇನೆ. ನೀನು ದಾಸ್ಯಮುಕ್ತನಾಗುವಿ'' ಎಂದು ಹೇಳಿದರು. ಆಗ ಮುರಾರಿಯು ಅವರು ಹೇಳಿದಂತೆ ಒಂದು ಕಪಿಲೆ ಹಸು, ಕೃಷ್ಣಾಜಿನ, ತಿಲಕಾಂಚನ ಗಳನ್ನು ಕೊಟ್ಟು ತನ್ನನ್ನು ಬಿಡಿಸಿಕೊಂಡನು. ಮತ್ತು ನಾರದರ ಮೇಲೆ ಅತ್ಯಂತ ಪ್ರಸನ್ನನಾಗಿ ವರ ಬೇಡಲು ಹೇಳಿದನು. ಆಗ ನಾರದರು ಜನ್ಮ ಜನ್ಮಾಂತರದಲ್ಲಿಯೂ ನಾನು ಬ್ರಹ್ಮಜ್ಞಾನಿಯಾಗಿಯೇ ಹುಟ್ಟಿ ಕೊನೆಗೆ ನಿನ್ನ ಸಾಯುಜ್ಯ

ಮೋಕ್ಷವನ್ನು ಹೊಂದುವಂತಾಗಬೇಕೆಂದು ಬೇಡಿಕೊಂಡರು. ಅದರಂತೆ ಭಗವಂತನು ಅವರಿಗೆ ವರವನ್ನಿತ್ತ ಬಳಿಕ ಪರಮ ಪ್ರೀತಳಾದ ಸತ್ಯಭಾಮೆಯು ತನ್ನ ಸವತಿಯಾದ ಹದಿನಾರು ಸಾವಿರ ಕೃಷ್ಣ ಕಾಮಿನಿಯರನ್ನು ಕರೆದು ಸತ್ಕಾರಮಾಡಿ ಆದರದ ಆತಿಥ್ಯ ನೀಡಿ ಅವರೆಲ್ಲರಿಗೂ ಶಚೀದೇವಿಯು ಸ್ವರ್ಗದಿಂದ ಕಳಿಸಿದ ಪಟ್ಟೆ ಪೀತಾಂಬರ ವಸ್ತ್ರ ವಡವೆ ಮುತ್ತು ರತ್ನಗಳನ್ನೆಲ್ಲ ಸರಿಯಾಗಿ ಹಂಚಿಕೊಟ್ಟಳು.

ಕೃಷ್ಣನು ''ನೆಲಕ್ಕಿಳಿದ'' ಬಂದ ಸ್ವರ್ಗಸೀಮೆಯ ಅಚ್ಚರಿಯ ಗಿಡವನ್ನು ಬಂದು ನೋಡಿಕೊಂಡು ಹೋಗಬೇಕೆಂದು ಪಂಚಪಾಂಡವರಿಗೂ ಹಾಗೂ ದ್ರೌಪದಿ ಸುಭದ್ರಾ ಕುಂತೀದೇವಿ ಶ್ರುತಶ್ರವಾ ಮೊದಲಾದ ಹೆಣ್ಣು ಮಕ್ಕಳಿಗೂ ಮತ್ತು ಭೀಷ್ಮಕ ಮೊದಲಾದ ಇತರ ಎಲ್ಲ ಬಂಧು ಬಾಂಧವರಿಗೂ ಮಿತ್ರ ಪರಿವಾರವರಿಗೂ ಹೇಳಿಕಳಿಸಿದನು. ಎಲ್ಲರೂ ಬಂದು ಆ ಮಂದಾರ ಕುಸುಮದ ದಿವ್ಯಗಂಧ ಮತ್ತು ಮಹಾಮಹಿಮೆಗಳನ್ನು ಕಣ್ಣಾರೆ ಕಂಡು ಆಶ್ಚರ್ಯಚಕಿತರಾಗಿ, ಆನಂದ ಸಹಿತರಾಗಿ, ಭಕ್ತಿ ಭರಿತರಾಗಿ ಉಲ್ಲಸಿತ ಮಾನಸರಾಗಿ ತೆರಳುತ್ತಿದ್ದರು. ಅರ್ಜುನನು ಮಾತ್ರ ದ್ರೌಪದಿ ಸುಭದ್ರಾ ಮೊದಲಾದ ತನ್ನ ಅಂತಃಪುರದ ಪರಿವಾರದೊಂದಿಗೆ ಕೇಶವನ ಜೊತೆಗೆ ಕೇಲೀ ವಿಲಾಸ ಲೀಲಾ ವಿನೋದಗಳನ್ನಾಡುತ್ತ ವರ್ಷದವರೆಗೆ ಇದ್ದನು. ಶ್ರೀಕೃಷ್ಣನಾದರೂ ಪುತ್ರಕಲತ್ರ ಪರಿವಾರದೊಂದಿಗೆ ಪಾರಿಜಾತ ಪ್ರಸೂತವಾದ ಭೋಗ ಭಾಗ್ಯ ಸಿರಿಸಂಪದಗಳನ್ನೆಲ್ಲ ಅನುಭೋಗಿಸುತ್ತ ಹರುಷದಿಂದ ಒಂದು ವರುಷವನ್ನು ಕಳೆದನು.

ಒಂದು ಸಂವತ್ಸರವಾದ ಬಳಿಕ ಮೊದಲೇ ಹೇಳಿದಂತೆ ಆ ಪಾರಿಜಾತ ವೃಕ್ಷವನ್ನು ತಿರುಗಿ ಸ್ವರ್ಗಕ್ಕೆ ತಂದು ಇಂದ್ರನಿಗೆ ಒಪ್ಪಿಸಿ ಅವನೊಟ್ಟಿಗೆ ತನ್ನ ತಾಯಿಯಾದ ಆದಿತಿ ದೇವಿಯನ್ನು ಕಂಡನು. ಪಾದಪ್ರಣತನಾದ ಆ ಸತ್ಯಸಂಧನಾದ ಸತ್ಪುತ್ರನಿಗೆ ಆದಿತಿಯು ನಿಮ್ಮಿಬ್ಬರಲ್ಲಿ ಈಗಿನಂತೆ ಬಂಧುಪ್ರೇಮವು ಅಚ್ಛಿನ್ನವಾಗಿ ಉಳಿಯಲಿ ಮತ್ತೆ ಅದು ದಿನೇ ದಿನೇ ಬೆಳೆಯಲಿ ಎಂದು ಆಶೀರ್ವದಿಸಿದಳು. ನಂತರ ಕೃಷ್ಣನು ತಿರುಗಿ ಬರುವಾಗ ಇಂದ್ರನನ್ನು ಕರೆದು ಮಹಾದೇವನ ಸಂದೇಶಾನುಸಾರವಾಗಿ ನಾನು ಇಂದಿನಿಂದ ಹತ್ತುದಿನಗಳೊಳಗಾಗಿ ಭೂಗರ್ಭದಲ್ಲಿ ಅಡಗಿ ಕುಳಿತಿರುವ ದೈತ್ಯರನ್ನು ಸಂಹಾರ ಮಾಡಲಿರುವೆನು. ಬ್ರಹ್ಮದೇವರು ಅವರಿಗೆ ದೇವತೆಗಳಿಂದ ಅವಧ್ಯತ್ವವನ್ನು ವರವಾಗಿ ಕೊಟ್ಟಿದ್ದಾರೆ ಆದಕ್ಕಾಗಿ ನಿನ್ನ ಗೆಳೆಯನಾದ ಬ್ರಾಹ್ಮಣ ಪ್ರವರನನ್ನೂ ಹಾಗೂ ನಿನ್ನ ಮಗನಾದ ಜಯಂತನನ್ನೂ ಕಳಿಸು. ಅವರಿಬ್ಬರೂ ಸಾಕ್ಷಾತ್ ದೇವತೆಗಳಲ್ಲ. ಅವರ ಸಹಾಯದಿಂದ ನಾನು ಆ ದೈತ್ಯ ವಿಧ್ವಂಸ ಮಾಡುತ್ತೇನೆ'' ಎಂದು ಹೇಳಿದನು. ಆದಕ್ಕೆ ಇಂದ್ರನು ಹಾಗೇ ಆಗಲಿ ಎಂದು ನುಡಿದ ಬಳಿಕ ಒಬ್ಬರಿಗೊಬ್ಬರು ಸ್ನೇಹಾತಿರೇಕದಿಂದ ಅಪ್ಪಿಕೊಂಡು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

ಮುಂದೆ ಒಂದು ದಿನ ನಾರದರು ದ್ವಾರಕೆಗೆ ಬಂದಾಗ ರುಕ್ಮಿಣಿ ಸತ್ಯಭಾಮಾ ಜಾಂಬವತೀ ಗಾಂಧಾರ ರಾಜಕುಮಾರಿ ಮೊದಲಾದ ಅಷ್ಟಮಹಿಷಿಯರೂ ಶ್ರೀಕೃಷ್ಣನೊಂದಿಗೆ ಆ ಮಹಾಮುನಿಗೆ ವಂದಿಸಿ ಪೂಜೆಮಾಡಿದರು. ಬಳಿಕ ಶ್ರೀಹರಿ ಸಹಿತನಾಗಿ ಉಚ್ಚತರವಾದ ಆಸನದಲ್ಲಿ ಸುಖಾಸೀನರಾದ ಆ ದೇವಮುನಿಗಳನ್ನು ಮಹಾಸಾಧ್ವಿ ರುಕ್ಮಿಣೀದೇವಿಯು ಈ ಪುಣ್ಯಕ ವ್ರತದ ವಿಧಿ ವಿಧಾನ ಫಲ ಪರಿಣಾಮ ಹುಟ್ಟು ಹಬ್ಬುಗೆಗಳ ಬಗೆಗೆ ಪ್ರಶ್ನೆ ಮಾಡಿದಳು.

ಆಗ ನಾರದರು ''ಅಮ್ಮ, ಸೌಭಾಗ್ಯಲಕ್ಷ್ಮಿ! ಜಗತ್ತಿನಲ್ಲಿ ಮೊಟ್ಟ ಮೊದಲು ಈ ಪುಣ್ಯಕ ವ್ರತವನ್ನು ಆಚರಿಸಿದವಳು ಮಹಾಸತಿಯಾದ ಪಾರ್ವತೀದೇವಿಯು.

ಸದಾಶುಚಿಯಾದ ಆ ಸತೀದೇವಿಯು ಪರಮ ಪುಣ್ಯಕರವಾದ ಈ ಪುಣ್ಯಕ ವ್ರತವನ್ನು ಮಾಡಿ ಆ ವ್ರತ ಸಮಾಪ್ತಿಯ ವೇಳೆಯಲ್ಲಿ ತನ್ನ ಮೈತ್ರಿಣಿಯರಾದ ಮುತ್ತೈದೆಯರನ್ನೆಲ್ಲ ಆಮಂತ್ರಿಸಿದ್ದಳು. ಆದುದರಿಂದ ಆ ಸಮಾರಂಭಕ್ಕೆ ಪತಿವ್ರತಾ ಶಿರೋಮಣಿಯರಾದ ಆದಿತಿ, ಶಚೀ, ರೋಹಿಣೀ, ರೇವತೀ, ಗಂಗಾ, ಗೋದಾ, ಸರಸ್ವತೀ, ಲೋಪಾಮುದ್ರಾ, ಸ್ವಾಹಾ, ಸಾವಿತ್ರೀ ಮೊದಲಾದವರೆಲ್ಲರೂ ದಯಮಾಡಿಸಿದ್ದರು. ಅವರೆಲ್ಲರೂ ಉಮಾದೇವಿಯು ಕೊಟ್ಟ ವಸ್ತ್ರಾಲಂಕಾರ ಮಂಗಳ ದ್ರವ್ಯಗಳನ್ನು ಸ್ವೀಕರಿಸಿ ಪುಣ್ಯಕ ವ್ರತದ ಬಗೆಗೆ ಮಾತನಾಡುತ್ತ ಕುಳಿತಾಗ ಪತಿವ್ರತಾರತ್ನಗಳಾದ ಆರುಂಧತೀದೇವಿಯು ಪುಣ್ಯದ ವ್ರತದ ವಿಧಿವಿಧಾನಗಳ ಬಗೆಗೆ ಕೇಳಿದಳು. ಆ ವ್ರತದಲ್ಲಿ ದೇವೀ ಭವಾನಿಯು ನನ್ನನ್ನೇ ಸದ್ಬ್ರಾಹ್ಮಣನೆಂದು ರತ್ನ ಪರ್ವತವನ್ನು ಕೊಡಲಿಕ್ಕಾಗಿ ಆಮಂತ್ರಿಸಿದ್ದರಿಂದ ಆಗ ನಾನು ಅಲ್ಲಿಯೇ ಇದ್ದೆ. ಅವಳು ಹೇಳಿದ್ದನ್ನು ಚೆನ್ನಾಗಿ ಕೇಳಿದೆ. ವಿದರ್ಭರಾಜ ಕುಮಾರಿಯಾದ ರುಕ್ಮಿಣೀದೇವಿ! ಅದನ್ನೆ ನಾನು ಈಗ ನಿನಗೂ ಸೋದರಿಯರಾದ ಈ ಕೃಷ್ಣ ಕುಟುಂಬಿನಿಯರಿಗೂ ಹೇಳುತ್ತೇನೆ. ಸಾವಧಾನ ಚಿತ್ತದಿಂದ ಆಲಿಸಿರಿ. ಮಹಾಸತಿಯಾದ ಸತೀದೇವಿಯು ಅಲ್ಲಿ ನೆರೆದ ಪತಿವ್ರತೆಯರಾದ ಪ್ರಮದಾ ಮಣಿಗಳಲ್ಲಿ ಅಖಂಡ ಸೌಭಾಗ್ಯವತಿಯಾದ ವಶಿಷ್ಠ ಪತ್ನಿಯನ್ನು ಕುರಿತು-ಆರುಂಧತಿ! ನನ್ನ ಪತಿಯಾದ ಪರಮೇಶ್ವರನ ಅನುಜ್ಞೆಯಿಂದಲೇ ನಾನೆಲ್ಲ ಪುಣ್ಯಕ ವ್ರತಗಳನ್ನೂ ಆಚರಿಸಿದ್ದೇನೆ. ಯಾಕೆಂದರೆ ಪತಿಯ ಸಮ್ಮತಿಯಿಲ್ಲದಿದ್ದರೆ ಸತಿಯರು ಮಾಡಿದ ವ್ರತ ಉಪವಾಸ ದಾನಧರ್ಮ ಪುಣ್ಯ ಕರ್ಮ ಎಲ್ಲವೂ ವಿಫಲವಾಗುತ್ತವೆ. ಎಲ್ಲ ವ್ರತಗಳಿಗಿಂತ ಪತಿವ್ರತೆಯಾಗಿರುವುದು ದೊಡ್ಡವ್ರತ. ಪತಿವ್ರತೆಯಲ್ಲದವರು ಮಾಡಿದ ಯಾವ ಕಾರ್ಯವೂ ಸಫಲವಾಗವುದಿಲ್ಲ.

ಆದುದರಿಂದ ಪತಿವ್ರತೆಯಾದ, ಪುಣ್ಯಕವ್ರತವನ್ನು ಮಾಡಬಯಸುವ ಮುತ್ತೈದೆಯು ಮೊದಲು ಪ್ರಾತಃಕಾಲದಲ್ಲಿ ಎದ್ದು ತಾನು ಮಾಡಲಿರುವ ಪುಣ್ಯಕ ವ್ರತಕ್ಕೆ ಅನುಜ್ಞೆ ಕೊಡಬೇಕು ಎಂದು ಪತಿಯನ್ನು ಪ್ರಾರ್ಥಿಸಿ ಅವನ ಅಪ್ಪಣೆಯನ್ನು ಸ್ವೀಕರಿಸಬೇಕು. ಬಳಿಕ ಅತ್ತೆ ಮಾವ ಗುರುಹಿರಿಯರಿಗೆಲ್ಲ ವಂದಿಸಿ ಅವರ ಅಪ್ಪಣೆಪಡೆದು ದರ್ಭ ಅಕ್ಷತೆಗಳಿಂದ ಯುಕ್ತವಾದ ತಾಮ್ರದ ಪಾತ್ರವನ್ನು ತೆಗದುಕೊಂಡು ಗೋಶೃಂಗವನ್ನು ತೇದು ತೀರ್ಥಪ್ರಾಶನ ಮಾಡಬೇಕು. ಮತ್ತು ಅದೇ ನೀರಿನಿಂದ ಸ್ನಾನಮಾಡಿ ತನ್ನ ಪತಿಗಾದರೂ ಅದನ್ನು ಕೊಡಬೇಕು. ಉಪೋಷಣದ ದಿನಗಳಲ್ಲಿ ಈ ಗೋಶೃಂಗ ಸ್ನಾನದಿಂದ ಸರ್ವತೀರ್ಥ ಸ್ನಾನ ಮಾಡಿದ ಪುಣ್ಯ ಪ್ರಾಪ್ತಿಯಾಗುವುದು.

ಮತ್ತು ಈ ವ್ರತವನ್ನು ಮಾಡುವಾಗ ಹೊಲಿಗೆ ಹಾಕಿದ ಹಾಸಿಗೆ ಆಸನಗಳನ್ನು ಉಪಯೋಗಿಸತಕ್ಕದ್ದಲ್ಲ. ಮತ್ತು ಈ ಸಮಯದಲ್ಲಿ ಹೆಣ್ಣುಮಕ್ಕಳು ಕಣ್ಣೀರು ಕರೆಯಬಾರದು. ಕಲಹ ಮಾಡಬಾರದು. ಸಿಟ್ಟಿಗೇಳಬಾರದು. ಎರಕೊಳ್ಳಬಾರದು. ಗಂಧ ಕಾಡಿಗೆ ಹಚ್ಚಿಕೊಳ್ಳಬಾರದು. ಹೂವಿನ ಮಾಲೆಗಳನ್ನು ಧರಿಸಬಾರದು. ಬೆಳ್ಳಗಿನ ಎರಡು ವಸ್ತ್ರಗಳನ್ನು ಧಾರಣ ಮಾಡಬೇಕು. ಬಿಲ್ವಪತ್ರಿ ಮತ್ತು ನೆಲ್ಲಿಕಾಯಿ ಮಿಶ್ರಿತವಾದ ನೀರಿನಿಂದ ಸ್ನಾನಮಾಡಬೇಕು. ಆಗ ಎತ್ತಿನ ಮೇಲೆ ಹತ್ತಬಾರದು. ಒಂಟಿಯ ಮೇಲೆ

ಏರಬಾರದು. ಕುದುರೆಯ ಮೇಲೆ ಕೂಡಬಾರದು. ನಗ್ನಸ್ನಾನ ಮಾಡಬಾರದು. ನದೀ ಕೆರೆ ಹಳ್ಳಗಳಲ್ಲಿ ಸ್ನಾನ ಮಾಡುವದು ಉತ್ತಮಪಕ್ಷ. ಅದು ಸಾಧ್ಯವಿಲ್ಲದ ಪಕ್ಷದಲ್ಲಿ ಹೊಸಮಣ್ಣಿನ ಕೊಡಗಳಲ್ಲಿ ನೀರು ತುಂಬಿ ಮನೆಯಲ್ಲಿಯೇ ಮೇಲೆ ಸ್ನಾನ ಮಾಡಬೇಕು.

ಹೀಗೆ ಜಿತೇಂದ್ರಿಯಳಾಗಿ ಒಂದು ವರುಷ ಅಥವಾ ಆರು ತಿಂಗಳು ಕೊನೆಗೆ ಒಂದು ತಿಂಗಳವಾಗಲಿ ನಿಯಮಸ್ಥಳಾಗಿ ಈ ವ್ರತವನ್ನು ಪಾಲನ ಮಾಡಬೇಕು. ಆಮೇಲೆ ಕೊನೆಗೆ ಹನ್ನೊಂದು ಜನ ಮುತ್ತೈದೆಯರನ್ನು ಕರೆದು ಅವರವರ ಗಂಡಂದಿರಿಗೆ ಹೇಳಿ ಅವರು ಕೇಳಿದಷ್ಟು ಹಣವನ್ನು ಕೊಟ್ಟು ಆ ಸ್ತ್ರೀಯರನ್ನು ತಾನು ಕೊಂಡುಕೊಂಡಂತೆ ಮಾಡಿ ತಂದು ಅವರನ್ನೆಲ್ಲ ಆಚಾರ್ಯರಿಗೆ ಸಂಕಲ್ಪ ಪೂರ್ವವಾಗಿ ನೀರು ಬಿಟ್ಟು ದಾನ ಕೊಡಬೇಕು. ಅನಂತರ ದೇಶ ಕಾಲಾನುರೂಪವಾಗಿ ಅವರೆಲ್ಲರ ಬದಲು ನಿಷ್ಕ್ರಯ ಹಣ (ಅವರ ಕಿಮ್ಮತ್ತಿನಷ್ಟು ಹಣಕೊಟ್ಟು ಬಿಡಿಸಿಕೊಂಡಂತೆ) ವನ್ನು ಕೊಟ್ಟು ಆಚಾರ್ಯರಿಂದ ಬಿಡಿಸಿ ಅವರವರ ಜನರಿಗೆ ಪತಿಗಳಿಗೆ ತಿರುಗಿ ಒಪ್ಪಿಸಬೇಕು.

ಮತ್ತು ಯಾವುದಾದರೂ ಶುಕ್ಲಪಕ್ಷದ ನವಮಿಯ ದಿನ ಆ ವ್ರತದ ಉದ್ಯಾಪನೆಯನ್ನು ಮಾಡಬೇಕು. ಈ ವ್ರತದಿಂದ ಸ್ತ್ರೀಯರಿಗೆ ಒಳ್ಳೆ ಸಂತಾನ, ವಿಪುಲ ಸಂಪತ್ತು, ವಿಶೇಷ ಸೌಭಾಗ್ಯ, ಪತಿಯ ಪೂರ್ಣಪ್ರೇಮ, ವಿಶಿಷ್ಟ ಸೌಂದರ್ಯ, ಪ್ರಚುರ ಆನಂದಗಳು ಪ್ರಾಪ್ತವಾಗುತ್ತವೆ. ಉತ್ತಮ ಸಂತಾನವನ್ನು ಕೊಡುವ ಈ ಪುಣ್ಯಕ ವ್ರತವನ್ನು ಮೊದಲು ನಾನೇ ಮಾಡಿದ್ದರಿಂದ ಇದಕ್ಕೆ ಉಮಾವ್ರತ ಎಂದು ಜಗತ್ತಿನಲ್ಲಿ ಹೆಸರಾಯಿತು. ಈ ವ್ರತದಲ್ಲಿ ಬ್ರಾಹ್ಮಣರಿಗೆ ಇಚ್ಛಾ ಭೋಜನವನ್ನು ಮಾಡಿಸಬೇಕು. ಅದರಲ್ಲಿಯೂ ಖೀರು ಪಾಯಸಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಿ ಯಥಾಶಕ್ತಿ ದಕ್ಷಿಣೆಯನ್ನು ಕೊಡಬೇಕು. ಈ ವ್ರತದಲ್ಲಿ ಪ್ರಾಣಿವಧವನ್ನು ಮಾತ್ರ ಎಂದಿಗೂ ಮಾಡತಕ್ಕದ್ದಲ್ಲ.

ಸೋಮಸುತೆ! ಹೆಣ್ಣಿನ ಬಾಳಿನ ಬಳ್ಳಿಗೆ ಬಿಡುವ ಅಮೃತ ಫಲವೆಂದರೆ ಪುತ್ರ. ಇಂಥ ಒಳ್ಳೆಯ ಸಂತಾನವಾಗಬೇಕಿದ್ದರೆ ಒಂದು ವ್ರತವನ್ನು ಹೇಳುತ್ತೇನೆ ಕೇಳು. ಇದನ್ನು ನಾನು ಶ್ರೀಹರಿಯ ಪ್ರಸಾದದಿಂದ ತಿಳಿದುಕೊಂಡೆನು.

## ಮಕ್ಕಳನ್ನು ಬಯಸುವ ಮುತ್ತೈದೆಯರಿಗಾಗಿ ಒಂದು ವಿಶೇಷ ವ್ರತ

ಮಕ್ಕಳಾಗಬೇಕೆಂದು ಬಯಸುವ ಮುತ್ತೈದೆಯರು ಜ್ಯೇಷ್ಠ ಆಷಾಢ ಮಾಸಗಳಲ್ಲಿ ಈ ವ್ರತವನ್ನು ಮಾಡಬೇಕು. ಈ ಎರಡು ತಿಂಗಳಲ್ಲಿ ಶುಚಿರ್ಭೂತನಾದ, ಸದಾಚಾರ ಸಂಪನ್ನನಾದ ಜ್ಞಾನವೃದ್ಧ ಜಿತೇಂದ್ರಿಯ ಬ್ರಾಹ್ಮಣನಿಗೆ ಹಾಲು ಮೊಸರು ಪಾಯಸ ಜೇನುತುಪ್ಪ ಪಾನಕ ಮೊದಲಾದವುಗಳಿಂದ ತುಂಬಿದ ಪೂರ್ಣ ಪಾತ್ರೆಗಳನ್ನು ತನಗೆ ಸಾಧ್ಯವಿದ್ದಷ್ಟು ದಾನಕೊಡಬೇಕು. ದಕ್ಷಿಣೆಯ ಬದಲಾಗಿ ಆಕಳು ಅಥವಾ ಸುವರ್ಣವನ್ನು ಕೊಟ್ಟು ಮೇಲೆ ವಸ್ತ್ರಯಜ್ಞೋಪವೀತಗಳನ್ನೂ ಅವಶ್ಯವಾಗಿ ಕೊಡಬೇಕು. ಗಂಡು ಮಗು ಆಗಬೇಕೆಂದು ಇಚ್ಛೆಯಿದ್ದವಳು ಪುಷ್ಯ ಮೊದಲಾದ ಪುಲ್ಲಿಂಗ ನಕ್ಷತ್ರಗಳಲ್ಲಿಯೂ ಹೆಣ್ಣುಮಗಳು ಹುಟ್ಟಬೇಕೆಂದು ಬಯಸುವವರು ರೋಹಿಣೀ ಮೊದಲಾದ ಸ್ತ್ರೀಲಿಂಗಿ ನಕ್ಷತ್ರ ದಿನಗಳಲ್ಲಿಯೂ ಈ ದಾನಗಳನ್ನು ಕೊಡಬೇಕು. ಪತಿಯ ಅಪ್ಪಣೆಯ ಮೇರೆಗೆ ಒಂದು ವರ್ಷದವರೆಗೆ ದ್ವಿದಲಧಾನ್ಯ ಫಲಗಳನ್ನೂ ಬಿಟ್ಟು, ಬ್ರಾಹ್ಮಣ ಸಂತರ್ಪಣವನ್ನು ಮಾಡಿಸಿ, ಭಕ್ತಿಯಿಂದ ಈ ವ್ರತವನ್ನು ಮಾಡಿದರೆ ಆ ಸ್ತ್ರೀಯರಿಗೆ ಸತ್ಸಂತಾನ ಮತ್ತು ಅಖಂಡ ಸೌಭಾಗ್ಯ ಪ್ರಾಪ್ತಿಯಾಗುವುದು.

ಇದರಂತೆ ಗಂಡನಿಗೆ ಸುಖವಾಗಲಿ ಎಂದು ಬಯಸುವ ಹೆಂಗಸು ಕುಂಬಳಕಾಯಿ ಮೊದಲಾದ ಕಾಯಿಪಲ್ಲೆಗಳನ್ನು ಒಂದುವರುಷದವರೆಗೆ ತಿನ್ನುವುದನ್ನು ಬಿಟ್ಟು ವರ್ಷದ ಕೊನೆಗೆ ಉದ್ಯಾಪನೆ ಮಾಡಿ ಬಂಗಾರದ ಕುಂಬಳಕಾಯಿ ಮುಂತಾದನ್ನು ಮಾಡಿಸಿ ಬ್ರಾಹ್ಮಣರಿಗೆ ದಾನಮಾಡಬೇಕು. ಮತ್ತು ತಾನು ಬಿಟ್ಟ ಎಲ್ಲ ಕಾಯಿಪಲ್ಲೆಗಳನ್ನು ಕೊನೆಗೆ ಬ್ರಾಹ್ಮಣರಿಗೆ ಮಾಡಿಸಿ ಹಾಕಿಸಬೇಕು. ಮತ್ತು ದಕ್ಷಿಣೆಯಿಂದ ಸಹಿತವಾಗಿ ಅವರಿಗೆ ಶಾಕದಾನ ಮಾಡಬೇಕು.

## ಅಖಂಡ ಸೌಭಾಗ್ಯ ಪ್ರಾಪ್ತವಾಗಬೇಕಾದರೆ

ಮಕ್ಕಳು ದೀರ್ಘಾಯುಗಳಾಗಿ ತನಗೆ ಅವಿಚ್ಛಿನ್ನ ಮುತ್ತೈದೆತನವು ಪ್ರಾಪ್ತವಾಗ ಬೇಕೆಂದು ಬಯಸುವ ಸ್ತ್ರೀಯರು ಒಂದು ವರ್ಷದವರೆಗೆ ಸೂರ್ಯಪೂತವಾದ ಅನ್ನವನ್ನೆ ಭಕ್ಷಿಸಬೇಕು. ಅಂದರೆ ಏನೇ ತಿಂದರೂ ಉಂಡರೂ ಸೂರ್ಯಾಸ್ತವಾಗುವದರೊಳಗಾಗಿ ತಿನ್ನಬೇಕು. ಸೂರ್ಯ ಮುಳುಗಿದಬಳಿಕ ಏನೂ ತಿನ್ನಕೂಡದು. ಹೀಗೆ ಒಂದು ವರ್ಷಮಾಡಿ ವರ್ಷಾಂತದ ದಿನಗಳಲ್ಲಿ ಬಂಗಾರದ ಸೂರ್ಯನ ಪ್ರತಿಮೆಯನ್ನು ಮಾಡಿಸಿ ಸದಾಚಾರಿ ಯಾದ ದರಿದ್ರ ಬ್ರಾಹ್ಮಣನಿಗೆ ದಾನಕೊಡಬೇಕು.

## ಚಂದ್ರಮುಖಿಯಾಗಲು

ಇದರಂತೆ ಚಂದ್ರಪೂತ ವ್ರತವೂ ಉಂಟು. ಈ ವ್ರತವನ್ನು ಮಾಡತಕ್ಕ ಸ್ತ್ರೀಯರು ಸೂರ್ಯಾಸ್ತವಾಗುವವರೆಗೆ ಏನನ್ನೂ ತಿನ್ನದೇ ಚಂದ್ರದರ್ಶನ ಅಥವಾ ನಕ್ಷತ್ರದ ದರ್ಶನವಾದ ಬಳಿಕವೇ ಊಟವನ್ನು ಮಾಡತಕ್ಕದ್ದು. ಮತ್ತು ಪ್ರತಿ ಪೌರ್ಣಿಮೆಯ ದಿನ ಚಂದ್ರೋದಯದ ಸಮಯದಲ್ಲಿ ದೇವತೆಗಳಿಗೆ ಕುಶ ಅಕ್ಷತೆಗಳಿಂದ ಕೂಡಿದ ಪುಷ್ಪಗಳ ಅರ್ಘ್ಯವನ್ನು ಇತ್ತು ಹಾಲು ಹಾಕಿದ ಗೋದಿ ಕಟ್ಟಿದ ಪರಮಾನ್ನವನ್ನು ನೈವೇದ್ಯಕ್ಕೆ ಇಟ್ಟು. ಬ್ರಾಹ್ಮಣರಿಗೆ ಉಣಿಸಬೇಕು. ಈ ಚಂದ್ರ ಶೀತ ತಾರಕಪೂತವಾದ ಆಹಾರವನ್ನು ಒಂದು ವರ್ಷದವರೆಗೆ ಭೋಜನ ಮಾಡಿದ ವ್ರತಿನಿಯಾದ ಹೆಣ್ಣು ಮಗಳು ಕೊನೆಯದಿನ ಬಂಗಾರದ ಚಂದ್ರ ಕನಕ ನಕ್ಷತ್ರಗಳನ್ನು ಮಾಡಿಸಿ ಯೋಗ್ಯನಾದ ಬ್ರಾಹ್ಮಣನಿಗೆ ದಾನಕೊಡಬೇಕು. ಮತ್ತು ಉಪ್ಪು ವಸ್ತ್ರಗಳಾನ್ನಾದರೂ ದಾನವೀಯಬೇಕು. ಇದರಿಂದ ಈ ವ್ರತಾಚರಣೆಯನ್ನು ಮಾಡಿದ ಮಹಿಳೆಯು ಚಂದ್ರನಂತೆ ಸುಂದರಮುಖಿಯೂ ನಕ್ಷತ್ರದಂತೆ ಕಾಂತಿಮತಿಯೂ ಸೌಭಾಗ್ಯವತಿಯೂ ಪುತ್ರವತಿಯೂ ಆಗುವಳು.

ಇದರಂತೆ ಸೂರ್ಯದರ್ಶನದ ವ್ರತ (ಎಂದರೆ ಯಾವಕಾಲದಲ್ಲಿಯಾದರೂ ಬಿಸಿಲು ಬೀಳದೇ ಊಟ ಮಾಡದೇ ಇರುವ)ವನ್ನು ಆಚರಿಸುವವರು ಕೊನೆಯದಿನ ಬ್ರಾಹ್ಮಣರಿಗೆ ಸುವರ್ಣ ದಾನವನ್ನು ಮಾಡಬೇಕು. ಈ ವ್ರತವನ್ನು ಹಿಡಿದ ಬಳಿಕ ಮಳೆಗಾಲದಲ್ಲಿ ಹಗಲು ಮೋಡಹಾಕಿ ಸೂರ್ಯದರ್ಶನವಾಗದಿದ್ದರೆ ಊಟ ಮಾಡತಕ್ಕದಲ್ಲ. ಎಷ್ಟೇ ದಿನ ಗಳಾದರೂ ಚಿಂತೆಯಿಲ್ಲ. ಮೋಡಗಳೆಲ್ಲ ಬಯಲಾಗಿ ಬಿಸಿಲು ಬಿದ್ದು ಈ ಸೂರ್ಯನನ್ನು ಕಂಡ ಬಳಿಕವೇ ಅವರು ಭೋಜನವನ್ನು ಮಾಡಬೇಕಾಗುವುದು. ಈ ವ್ರತದಿಂದ ಸ್ತ್ರೀಯರಿಗೆ ಸೌಭಾಗ್ಯ ಸೌಂದರ್ಯ ಎರಡೂ ಪ್ರಾಪ್ತವಾಗಿ ಅವರು ಗಂಡಂದಿರಗೆ ಅತ್ಯಂತ ಆಕರ್ಷಕರಾಗಿ ತೋರುವರು. ತನ್ನ ಆಪ್ತೇಷ್ಟರೂ ಹಾಗೂ ಬಂಧು ಬಾಂಧವರೆಲ್ಲರೂ ಸದ್ಗುಣಶಾಲಿಗಳಾಗಿ ಜನಪ್ರಿಯರಾಗಲಿ ಎಂದು ಅಭಿಲಾಷೆಯುಳ್ಳ ಸತಿಯರು ಪ್ರತಿಸಪ್ತಮಿ ತಿಥಿಯಲ್ಲಿ ಒಂದೇ ಹೊತ್ತು ಭೋಜನ ಮಾಡಿ ಅಬ್ದಾಂತ್ಯದಲ್ಲಿ ಬಂಗಾರದ ಗಿಡವನ್ನು

ಮಾಡಿಸಿ ದಕ್ಷಿಣೆ ಸಹಿತವಾಗಿ ದಾನ ಮಾಡಬೇಕು. ಗಂಡನಿಗೆ ಅತ್ಯಂತ ಇಷ್ಟಳಾಗಿ ಪುತ್ರವತಿಯಾಗಬೇಕೆಂದು ಆಕಾಂಕ್ಷೆಯಿದ್ದ ಸ್ತ್ರೀಯು ರಂಡಕದಲ್ಲಿ ದೀಪವನ್ನು ನಿತ್ಯವೂ ಹಚ್ಚಿ ಕೊನೆಗೆ ಸುವರ್ಣದೀಪವನ್ನು ದಾನವೀಯಬೇಕು.

ಅರುಂಧತಿ! ನಿಜವಾಗಿ ವಿಚಾರಿಸಿ ನೋಡಿದರೆ ಪತಿಯನ್ನೇ ಪರದೇವತೆಯೆಂದು ಭಾವಿಸಿ ಸೇವೆ ಮಾಡತಕ್ಕ ಮತ್ತು ಅತ್ತೆ ಮಾವಂದಿರನ್ನು ಸೇವಿಸುವ, ಎಂದೂ ಯಾರಿಗೂ ಮರ್ಮಭೇದಕವಾದ ಮಾತುಗಳನ್ನು ಆಡದ, ಉಳಿದದ್ದನ್ನು ಉಂಡು, ಹೇಳಿದಂತೆ ಕೇಳಿಕೊಂಡು ಸೌಮ್ಯಳಾಗಿ ಶಾಂತಳಾಗಿ ಸಂತೋಷದಿಂದ ಇರುವ ಪತಿವ್ರತೆಗೆ ಯಾವ ವ್ರತವೂ ಕಾರಣವಿಲ್ಲ. ಯಾವುದೇ ತರಹದ ಉಪವಾಸದ ಆವಶ್ಯಕತೆಯೂ ಇಲ್ಲ. ದುರ್ದೈವದಿಂದ ವಿಧವೆಯಾದ ಸತೀ ಸ್ತ್ರೀಯರು ಮಾಡಬೇಕಾದ ಧರ್ಮ, ಕರ್ಮ, ಕರ್ತವ್ಯಗಳನ್ನು ಹೇಳುತ್ತೇನೆ ಕೇಳಿರಿ.

## ವಿಧವೆಯರ ವ್ರತಗಳು

ಅಂಥ ಹೆಣ್ಣು ಮಕ್ಕಳು ಗುರುಹಿರಿಯರ ಸೇವಾಶುಶ್ರೂಷೆಗಳನ್ನು ಮಾಡುತ್ತ ಚಿತ್ರದಿಂದ ತನ್ನ ಪತಿಯ ಮೂರ್ತಿಯನ್ನು ಕಾಗದದ ಮೇಲೆ ಬರೆದು ಅಥವಾ ಗೋಡೆಯ ಮೇಲೆ ಕೊರೆದು ಇಲ್ಲವೇ ಮಣ್ಣಿನ ಮೂರ್ತಿಯನ್ನು ಮಾಡಿ ಪತಿಯನ್ನು ಭಕ್ತಿಯಿಂದ ಪೂಜಿಸಬೇಕು. ಮತ್ತು ತಾನು ಮಾಡಬೇಕಾದ ವ್ರತ ಉಪವಾಸ ಅನುಷ್ಠಾನಗಳಿಗೆಲ್ಲ ಆ ತನ್ನ ಪತಿಯ ಪ್ರತಿಮೆಯಿಂದಲೇ ಅಪ್ಪಣೆಯನ್ನು ಪಡೆದುಕೊಂಡು ಸದಾ ಪುಣ್ಯಕಾರ್ಯ ಪರೋಪಕಾರ ದಾನಧರ್ಮಾದಿಗಳನ್ನು ಮಾಡುತ್ತಲಿರಬೇಕು. ಪತಿಯನ್ನೇ ಪರಮೇಶ್ವರ ನೆಂದು ತಿಳಿದು ವಿಧವೆಯಾದರೂ ಪತಿಯ ಪ್ರತಿಮಾ ಅಥವಾ ಪ್ರತಿಕೃತಿಗಳನ್ನು ಪೂಜಿಸುತ್ತ ಪಾತಿವ್ರತ್ಯ ದಿಂದಿರಬೇಕು. ಸತ್ಕರ್ಮಾನುಷ್ಠಾನ ತತ್ಪರಳಾದ ಇಂಥಸಾಧ್ವೀಮಣಿಯು ಸೂರ್ಯಮಂಡಲ ದಂತೆ ತೇಜಸ್ವಿನಿಯೂ ಪವಿತ್ರಳೂ ಪೂಜ್ಯಳೂ ದುಷ್ಪ್ರಧರ್ಷಳೂ ಆಗುವಳು.

## ಮಾನನೀಯರಾದ ಮೂವರು ಮುತ್ತೈದೆಯರು

ಅರುಂಧತಿ! ನಾರದನು ತಿಳಿದುಕೊಂಡು ನಿರೂಪಿಸಿದ ಈ ವಿವಿಧ ಪುಣ್ಯವ್ರತಗಳ ವಿಧಿವಿಧಾನಗಳ ಪ್ರವರ್ತಕರಾದ ಪ್ರಾತಃಸ್ಮರಣೀಯ ಪತಿವ್ರತೆಯರಲ್ಲಿ ಅದಿತಿ ಶಚೀದೇವಿ ಹಾಗೂ ನೀನು ಈ ಮೂವರು ಪ್ರಶಂಸಾ ಪಾತ್ರರಾಗಿ ಪ್ರಸಿದ್ಧಿಯನ್ನು ಪಡೆಯುವಿರಿ. ಎಲ್ಲ ಅವತಾರಗಳಲ್ಲಿಯೂ ವಿಷ್ಣುಪತ್ನಿಯಾದ ಮಹಾಲಕ್ಷ್ಮಿಯು ಮಾತ್ರ ಈ ವ್ರತವಿಧಿಗಳ ಯಥಾರ್ಥ ಸ್ವರೂಪವನ್ನು ಪೂರ್ಣವಾಗಿ ತಿಳಿದುಕೊಂಡಿರುವವಳು. ಪಾರ್ವತಿಯು ಹೀಗೆಲ್ಲ ಹೇಳಿದ ಬಳಿಕ ಆ ಮಹಾಸಾಧ್ವಿಯರೆಲ್ಲ ಪರಮಾನಂದ ಭರಿತರಾಗಿ ಅವಳಿಗೆ ವಂದನೆ ಮಾಡಿ ತಮ್ಮ ಸ್ಥಾನಗಳಿಗೆ ತೆರಳಿದರು.

## ಅತ್ತ ಕ್ರೀಡೆ, ಇತ್ತ ಪೀಡೆ

ಇತ್ತ ಕೃಷ್ಣಪರಮಾತ್ಮನು ಬಲರಾಮ ಮೊದಲಾದ ಯಾದವರೊಂದಿಗೆ ಕೂಡಿಕೊಂಡು ಸಾಗರ ಸಲಿಲದಲ್ಲಿ ಸುಂದರಿಯರ ವೃಂದದೊಡನೆ ಜಲಕ್ರೀಡೆಯನ್ನಾಡಿದನು. ಆಗ ಸಮುದ್ರದ ಉಪ್ಪುನೀರು ಕೂಡ ಸವಿಯಾಗಿ ಸಿಹಿಯಾಗಿ ಗಂಧಾಢ್ಯವಾಗಿತ್ತು. ಕೃಷ್ಣನ ಅಪ್ಪಣೆಯಂತೆ ಕುಬೇರ ಭವನದಿಂದ ಹಾಗು ಇಂದ್ರಲೋಕದಿಂದ ಅನೇಕ ಅಪ್ಸರೆಯರ ಜೊತೆಗೆ ಯಾದವರೆಲ್ಲರೂ ಸ್ವಚ್ಛಂದದಿಂದ ಸುಗಂಧಿಯಾದ ಸಾಮುದ್ರ ಸಲಿಲದಲ್ಲಿ

ಸ್ವಚ್ಛಂದವಾಗಿ ವಿಹರಿಸಿ ಜಲಕ್ರೀಡೆಯನ್ನಾಡಿದರು. ಕೃಷ್ಣನು ತನ್ನ ಹದಿನಾರು ಸಾವಿರ ಒಂದು ನೂರಾ ಎಂಟುಜನ ಹೆಂಡಂದಿರೊಂದಿಗೆ ಜಲಕೇಲಿಗೆ ಇಳಿದನು. ರೇವತಿಯೊಂದಿಗೆ ಸುರಾಪಾನ ಮದ ಮುದಿತನಾದ ಬಲರಾಮನೂ ಜಲಕ್ರೀಡೆಯನ್ನಾಡಿದ. ಹಂಸದಂತೆ ತೇಲುತ್ತಲಿರುವ ದೊಡ್ಡ ನೌಕೆಯಲ್ಲಿ ಯಾದವರೂ ಅಪ್ಸರೆಯರೂ ಕೂಡಿ ರಾಮಕೃಷ್ಣರ ಸುತ್ತಲೂ ನೆರೆದು ತಮ್ಮ ಗಾನ ತಾನಗಳಿಂದ ಎಲ್ಲರನ್ನೂ ತಣಿಸಿದರು. ನೆಲದಲ್ಲಿಯಂತೆ ಆ ಜಲದಲ್ಲಿಯೂ ಅವರು ಕುಣಿದು ನಲಿದು ನರ್ತಿಸಿದರು. ಕೃಷ್ಣನ ಬಾಲಲೀಲೆಗಳನ್ನೆಲ್ಲ ಗೀತಬದ್ಧವಾಗಿ ಹಾಡಿ ಗೇಯ ನೃತ್ಯರೂಪದಿಂದ ಅಂದು ಕುಣಿದು ತೋರಿಸಿದರು. ಕಂಸ, ಚಾಣೂರ, ಕೇಶಿ, ಪ್ರಲಂಬಾದಿ ವಧದ ಪ್ರಕರಣಗಳನ್ನೂ, ಸುಭದ್ರಾ ಹರಣದ ಪ್ರಸಂಗವನ್ನೂ, ಗೋವರ್ಧನೋದ್ಧರಣದ ದೃಶ್ಯವನ್ನೂ, ಕಾಲಿಯಾ ಮರ್ದನದ ಸನ್ನಿವೇಶವ್ನನೂ ಅಭಿನಯಸಹಿತವಾಗಿ ನಾಟಕವಾಡಿ ತೋರಿಸಿದರು.

ಹೀಗೆ ಯಾದವರೆಲ್ಲರೂ ಜಲಕ್ರೀಡೆಯಲ್ಲಿ ಆಸಕ್ತರಾದ ಅವಕಾಶವನ್ನು ನೋಡಿ ನಿಕುಂಭನೆಂಬ ದುರ್ಬುದ್ಧಿಯ ದೈತ್ಯನು ದ್ವಾರಕೆಗೆ ಬಂದನು. ಮತ್ತು ಮಹಾಮಾಯಾವಿಯಾದ ಆ ದುರುಳ ದಾನವನು ಕೆಲ ದಿನಕಪಟವೇಷದಿಂದ ದ್ವಾರಕೆಯ ಉಪವನದಲ್ಲಿಯೇ ಇದ್ದು ಈಗ ಸಂಧಿ ಸಾಧಿಸಿ ಬಂದು ತನ್ನ ಮಾಯೆಯಿಂದ ಯಾದವ ವನಿತೆಯರನ್ನೆಲ್ಲ ವಂಚಿಸಿ, ಭಾನು ಎಂಬ ರೂಪರಂಜನಿಯಾದ ಕನ್ಯಾಮಣಿಯನ್ನು ಅಪಹರಿಸಿದನು. ರಕ್ಷಕರಾದ ಗಂಡಸರು ಯಾರೂ ಇಲ್ಲದ ಭಾನುವಿನ ಕನ್ಯಾಂತಃಪುರದಲ್ಲಿ ಆಕಸ್ಮಿಕವಾದ ಈ ಕನ್ಯಾಪಹರಣದಿಂದ ಮಹಾ ಕೋಲಾಹಲವುಂಟಾಗಿ ಹೆಣ್ಣುಮಕ್ಕಳೆಲ್ಲರೂ ಚೀತ್ಕಾರಮಾಡಿ ಅಳಹತ್ತಿದರು.

ಅದನ್ನು ಕೇಳಿ ಆಗ ಜಲಕ್ರೀಡೆಗೆ ಹೋಗದೆ ದ್ವಾರಕೆಯಲ್ಲಿ ಉಳಿದುಕೊಂಡ ಗಂಡಸರಾದ ವಸುದೇವ ಹಾಗೂ ಆಹುಕ ಇಬ್ಬರೂ ಭಾನುವಿನ ಕನ್ಯಾಂತಃಪುರಕ್ಕೆ ಧಾವಿಸಿ ಬಂದರು. ಆದರೆ ಅಷ್ಟರಲ್ಲಿ ಮಾಯಾವಿ ದಾನವನು ಭಾನುಮತಿಯನ್ನು ಎತ್ತಿಕೊಂಡು ಓಡಿಹೋಗಿ ಬಿಟ್ಟದ್ದರಿಂದ ಅವರ ಕಣ್ಣಿಗೆ ಬೀಳಲಿಲ್ಲ.

ಆಗ ಅವರಿಬ್ಬರೂ ಓಡಿ ಬಂದು ವಾರಿವಿಹಾರ ವಿಲೋಲನಾದ ಕೃಷ್ಣನಿಗೆ ಈ ಸಮಾಚಾರವನ್ನು ತಿಳಿಸಿದರು. ಅದನ್ನು ಕೇಳಿ ಕೃಷ್ಣನು ಅರ್ಜುನನೊಂದಿಗೆ ತಾನು ಗರುಡನನ್ನು ಏರಿ ಪ್ರದ್ಯುಮ್ನನಿಗೆ ರಥವೇರಿ ಕೊಂಡು ತಮ್ಮನ್ನು ಹಿಂಬಾಲಿಸಲಿಕ್ಕೆ ಹೇಳಿ ದೈತ್ಯನನ್ನು ಬೆನ್ನಟ್ಟಿದನು. ಗರುಡನ ಗಾಳಿವೇಗದ ಗತಿಯಿಂದ ಕೃಷ್ಣಾರ್ಜುನರು ತ್ವರಿತದಲ್ಲಿಯೇ ವಜ್ರಪುರಿಯೆಡೆಗೆ ಧಾವಿಸುತ್ತಲಿರುವ ನಿಕುಂಭನ ಸಮೀಪಕ್ಕೆ ಬಂದರು. ತನ್ನ ಮೇಲೆ ಏರಿಬರುವ ಕೃಷ್ಣ ಅರ್ಜುನ ಹಾಗೂ ಪ್ರದ್ಯುಮ್ನ ಮೂವರನ್ನು ಕಂಡು ಆ ದುರ್ಮರ್ಷಿ ದಾನವನು ತಾನೂ ಮೂರು ರೂಪಗಳನ್ನು ಧಾರಣಮಾಡಿಕೊಂಡು ಅವರೊಂದಿಗೆ ಯುದ್ಧ ಮಾಡಹತ್ತಿದನು.

ಆದರೆ ಕೃಷ್ಣಾರ್ಜುನರಿಗಾಗಲೇ ಆ ದೈತ್ಯಾಪಸದನೊಂದಿಗೆ ರೊಚ್ಚಿನಿಂದ ಕಾದಲಿಕ್ಕೆ ಬಾರದಂತಾಗಿತ್ತು. ಯಾಕೆಂದರೆ ಕಪಟ ಕುತಂತ್ರಗಳಲ್ಲಿ ಕುಶಲನಾದ ಆ ಮಾಯಾವಿ ದಾನವನು ಒಂದು ಕೈಯಿಂದ ಗದೆಯನ್ನು ಬೀಸಿದರೂ ಇನ್ನೊಂದು ಕೈಯಲ್ಲಿ ಭಾನುಮತಿಯನ್ನು ಹಿಡಿದಿದ್ದನು. ಪಾರ್ಥ ಪ್ರದ್ಯುಮ್ನರು ಆವೇಶದಿಂದ ಹೊಡೆಯ ಬಂದಾಗಲೆಲ್ಲ ಆ ಕನ್ಯೆಯನ್ನು ಅವನು ಢಾಲಿನಂತೆ ಉಪಯೋಗಿಸಿ ಮುಂದೆ

ಮಾಡುತ್ತಲಿದ್ದನು. ಅದರಿಂದ ಕೃಷ್ಣಾರ್ಜುನ ಪ್ರದ್ಯುಮ್ನಾದಿಗಳು ಆ ದೈತ್ಯನ ಮೇಲೆ ನಿರ್ದಯರಾಗಿ ಜೋರಿನಿಂದ ಅಸ್ತ್ರಪ್ರಯೋಗ ಮಾಡುವಂತಿರಲಿಲ್ಲ.

ಆದರೂ ಕುಶಲಧನುರ್ಧಾರಿಧೌರೇಯನಾದ ಧನಂಜಯನು ಒಂಟೆಯನ್ನು ಸುತ್ತಿಕೊಂಡ ಅಜಗರವನ್ನು ಅಸ್ತ್ರಕೋವಿದರು ಒಂಟೆಯ ಮೈಗೆ ಪೆಟ್ಟು ಹತ್ತದಹಾಗೆ ಜಾಗರೂಕತೆಯಿಂದಲೇ ಕಡಿದು ಕತ್ತರಿಸಿ ಕೊಲ್ಲುವಂತೆ ಪಾರ್ಥನು ನಿಕುಂಭನಮೇಲೆ ಭಾನುಮತಿಗೆ ತಾಕದಂತೆ ಬಾಣಗಳನ್ನು ಸುರಿಸಹತ್ತಿದನು. ಅರ್ಜುನನ ಈ ಶರಸಂಧಾನ ಕೌಶಲ್ಯದಿಂದ ಜರ್ಜರಿತನಾದ ಆ ದುರ್ದಾನವನು ಕೂಡಲೇ ಆ ಕನ್ಯೆಯೊಂದಿಗೆ ಅದೃಶ್ಯನಾಗಿ ಓಡಹತ್ತಿದನು. ಆಗ ಕೃಷ್ಣಪ್ರದ್ಯುಮ್ನರು ಅವನನ್ನು ಬಿಡದೇ ಬೆನ್ನಟ್ಟಿದರು. ಆಗ ಅವನು ತನ್ನ ಮಾಯೆಯಿಂದ ಹಾರೀತ ಪಕ್ಷಿಯ ವೇಷವನ್ನು ಸ್ವೀಕರಿಸಿ ನಿಂದನು. ಆಗಲೂ ಅರ್ಜುನನು ಭಾನುಮತಿಗೆ ಬಡೆಯದಂತೆ ಅವನ ಮೇಲೆ ಬಾಣಪ್ರಯೋಗ ಮಾಡತೊಡಗಿದನು.

ಆಗ ಪಕ್ಷಿಯ ರೂಪವನ್ನು ಧರಿಸಿದ ಆ ರಾಕ್ಷಸನು ಉದ್ಭ್ರಾಂತನಾಗಿ ದಿಕ್ಕೆಟ್ಟು ಸಿಕ್ಕದಿಕ್ಕಿಗೆ ಓಡಹತ್ತಿದನು. ಶಸ್ತ್ರಪಾಣಿಗಳಾದ ಈ ಮೂವರೂ ಅವನ ಬೆನ್ನಹತ್ತಿದರು. ಕೊನೆಗೆ ಸಪ್ತದ್ವೀಪವತಿಯಾದ ಭೂಮಿಯನ್ನೆಲ್ಲ ಸುತ್ತಾಡಿ ಅವನು ಗೋಕರ್ಣ ಕ್ಷೇತ್ರದ ಮೇಲೆ ಬಂದಾಗ ಪರ್ವತದ ಮೇಲೆ ಬಿದ್ದು ಕನ್ಯೆಯೊಂದಿಗೆ ಗಂಗಾನದಿಯ ದಂಡೆಯ ಮೇಲಿನ ಉಸುಕಿನ ಮೇಲೆ ಉರುಳಿದನು. ಮಹಾದೇವರ ತೇಜಸ್ಸಿನಿಂದ ಸುರಕ್ಷಿತವಾದ ಆ ಗೋಕರ್ಣ ಕ್ಷೇತ್ರವನ್ನು ದೇವಾಸುರರಲ್ಲಿ ಯಾರೂ ಆಕಾಶಮಾರ್ಗದಿಂದ ಲಂಘಿಸಲಾರರು. ಅದನ್ನು ನೋಡಿ ಇದೇ ಸಮಯವೆಂದು ಅರಿತು ಚಪಲನಾದ ಪ್ರದ್ಯುಮ್ನನು ಶೀಘ್ರವಾಗಿ ಇಳಿದು ಬಂದು, ಬಿದ್ದ ರಾಕ್ಷನು ಸಾವರಿಸಿಕೊಂಡು ಎದ್ದು ನಿಲ್ಲುವಷ್ಟರಲ್ಲಿ ಆ ಭಾನುಮತಿಯನ್ನು ಎತ್ತಿಕೊಂಡು ಹೊರಟನು.

ಕೃಷ್ಣಾರ್ಜುನರಿಬ್ಬರೂ ಬಾಣಪಾಣಿಗಳಾಗಿ ಆ ರಾಕ್ಷಸನ ಬೆನ್ನುಹತ್ತಿದರು. ಆಗ ದೈತ್ಯನು ಆ ಕನ್ಯೆಯ ಆಶೆಯನ್ನು ಬಿಟ್ಟು ಗೋಕರ್ಣ ಕ್ಷೇತ್ರವಿದ್ದ ಉತ್ತರದಿಕ್ಕಿಗೇ ಶರಣುಹೊಡೆದು ದಕ್ಷಿಣಕ್ಕೆ ತಿರುಗಿ ತನ್ನ ಜ್ಞಾತಿಗಳ ಆಲಯವಾದ ಷಟ್ಪುರ ಪಟ್ಟಣದಲ್ಲಿ ಪ್ರವೇಶಮಾಡಿದನು. ಇತ್ತ ಪ್ರದ್ಯುಮ್ನನು ಕೃಷ್ಣನ ಅಣತಿಯಂತೆ ಭಾನುಮತಿಯನ್ನು ಕರೆದುಕೊಂಡು ಆನಂದದಿಂದ ದ್ವಾರಕೆಗೆ ತಂದು ತಂದೆಯ ವಶಕ್ಕೆ ಕೊಟ್ಟು ಮತ್ತೆ ತಾನುಮರಳಿ ಕೃಷ್ಣಾರ್ಜುನರಿದ್ದಲ್ಲಿಗೆ ಬಂದನು.

ಅಷ್ಟರಲ್ಲಿ ನಿಕುಂಭನಾದರೂ ಷಟ್ಪುರದಿಂದ ಹೊರಗೆ ಬಂದು ಯುದ್ಧಕ್ಕಾಗಿ ನಿಂತುಕೊಂಡನು. ಮತ್ತು ನನ್ನ ಘೋರವಾದ ಗದೆಯನ್ನು ಅಪ್ಪಳಿಸಿದನು. ಅದರಿಂದ ರಕ್ತವಾಂತಿಯಾಗಿ ಅರ್ಜುನನು ಮೂರ್ಛಿತನಾಗಿ ಬೀಳುವಂತಾಯಿತು. ದಾನವನ ಅಟ್ಟಹಾಸಮಾಡುತ್ತ ಪ್ರದ್ಯುಮ್ನನ ಹತ್ತಿರ ಬಂದು ಅವನಿಗೂ ಗೊತ್ತಾಗದಂತೆ, ಅದೃಶ್ಯ ರೂಪದಿಂದ ಮರೆಯಲ್ಲಿ ನಿಂತು ತಲೆಯ ಮೇಲೆ ಗದೆಯಿಂದ ಕುಟ್ಟಿದನು. ಈ ಅಲಕ್ಷಿತವಾದ ಗದಾ ಪ್ರಹಾರದಿಂದ ಪ್ರದ್ಯುಮ್ನನಾದರೂ ಮೂರ್ಛಾಕ್ರಾಂತನಾಗಿ ಬಿದ್ದನು. ಅದನ್ನು ಕಂಡು ಕುಪಿತನಾದ ಕೇಶವನು ತನ್ನ ಕೌಮೋದಕೀ ಗದೆಯನ್ನು ಬೀಸುತ್ತ ನಿಕುಂಭನೆಡೆಗೆ ಧಾವಿಸಿದನು. ಆಗ ನಿಕುಂಭಮ ಮೂರ್ಛಿತನಾದ ಅರ್ಜುನನ್ನು ಎತ್ತಿಕೊಂಡು ಓಡಿದನು.

ಕೆಲಹೊತ್ತು ಕೃಷ್ಣನು ಆ ದುಷ್ಟದಾನವನೊಂದಿಗೆ ಗದಾ ಯುದ್ಧದ ಕ್ರೀಡೆಯನ್ನಾಡಿ ಕೊನೆಗೆ ತನ್ನ ಸುದರ್ಶನ ಚಕ್ರವನ್ನು ಬಿಟ್ಟು ಆ ದುಷ್ಟ ದೈತ್ಯನ ತಲೆಯನ್ನು ಕತ್ತರಿಸಿದನು. ಅದರಿಂದ ಆ ದೈತ್ಯನು ಆಕಾಶದಲ್ಲಿ ಇದ್ದಲ್ಲಿಂದಲೇ ಎತ್ತಿಕೊಂಡ ಅರ್ಜುನನ್ನು ಬಿಟ್ಟು ತಾನೂ

ರಣರಂಗದಲ್ಲಿ ಹೆಣವಾಗಿ ಬಿದ್ದನು. ದೈತ್ಯನು ಬಿದ್ದಕೂಡಲೇ ಆಕಾಶದಿಂದ ಒಮ್ಮೆಲೇ ಕೆಳಗೆ ಬೀಳುತ್ತಲಿರುವ ಅರ್ಜುನನನ್ನು ಕೃಷ್ಣನ ನಿರ್ದೇಶನದಂತೆ ಪ್ರದ್ಯುಮ್ನನು ತಡೆದುಹಿಡಿದು ಬಿದ್ದ ಪೆಟ್ಟು ಹತ್ತದಂತೆ ಮಾಡಿದನು. ಬಳಿಕ ಅರ್ಜುನನನ್ನು ಸಂತೈಸಿ ನಿಕುಂಭನನ್ನು ಸಂಹರಿಸಿ ಅರ್ಜುನ ಪ್ರದ್ಯುಮ್ನರೊಂದಿಗೆ ಪರಮಾತ್ಮನು ದ್ವಾರಕೆಗೆ ದಯಮಾಡಿಸಿದನು.

## ದುರ್ವಾಸ ರೂಪದಲಿ ದುರ್ದೈವ ಕಾಡಿತ್ತು

ದುರ್ಧರ್ಷನಾದ ದೈತ್ಯನಿಂದ ಅಪಹರಿಸಲ್ಪಟ್ಟ ಭಾನುಮತಿಯು ಭಗವಂತನ ಕೃಪೆಯಿಂದ ಸುರಕ್ಷಿತವಾಗಿ ಮರಳಿ ಬಂದುದನ್ನು ಕಂಡು ಭಯ ಭಕ್ತಿ ಕೃತಜ್ಞತೆಗಳಿಂದ ತುಂಬಿ ಬಾಗಿ ನಿಂದಿರುವ ಭಾನುವನ್ನು ಕುರಿತು ನಾರದರು ''ಭಾನು! ಇದಕ್ಕಾಗಿ ನೀನು ಬಹಳ ಬೇಜಾರು ಪಟ್ಟುಕೊಳ್ಳುವ ಕಾರಣವಿಲ್ಲ. ಚಿಕ್ಕಹುಡುಗಿಯಾಗಿದ್ದಾಗ ನಿನ್ನ ಮಗಳಾದ ಈ ಭಾನುಮತಿಯು ರೈವತ ಪರ್ವತದಲ್ಲಿ ಆಟದ ಭರದಲ್ಲಿದ್ದಾಗ ದೂರ್ವಾಸ ಮುನಿಗಳನ್ನು ರೇಗಿಸಿ ಬಿಟ್ಟಿದ್ದಳು. ಅದರಿಂದ ಪರಿಕುಪಿತರಾದ ಅವರು ಇವಳಿಗೆ ''ನೀನು ಮುಂದೆ ದೊಡ್ಡವಳಾದ ಬಳಿಕ ವೈರಿವಶಳಾಗಿ ಈ ಹುಡುಗಾಟಿಕೆಯ ಫಲವನ್ನು ಅನುಭವಿಸುವಿ'' ಎಂದು ಶಾಪವಿತ್ತಿದ್ದರು. ಅದನ್ನು ಕೇಳಿ ನಾನು ಹಾಗೂ ಅಲ್ಲಿರುವ ಇತರ ಮುನಿಗಳೂ ''ಏನೂ ತಿಳಿಯದ ಇಂಥ ಚಿಕ್ಕ ಮಗುವಿಗೆ ಇಷ್ಟು ಕಠೋರ ಶಾಪವೀಯುವದೇ! ಸ್ವಾಮಿ ಅನುಗ್ರಹಮಾಡಿರಿ'' ಎಂದು ಬಿನ್ನವಿಸಿದೆವು. ಆಗ ಶಾಂತರಾದ ಅವರು ''ನನ್ನ ಮಾತು ಬದಲಾಗುವದಿಲ್ಲ. ಆದರೆ ಇವಳು ಶತ್ರುಗಳ ಕೈಗೆ ಬಿದ್ದರೂ ಅವರ ಬಲಾತ್ಕಾರಕ್ಕೆ ಬಲಿಯಾಗದೇ ಸುರಕ್ಷಿತವಾಗಿ ಪವಿತ್ರಳಾಗಿ ಮರಳಿ ಬರುವಳು. ಮತ್ತು ಉತ್ತಮನಾದ ಪತಿಯನ್ನು ಪಡೆದು ಸಂತಾನ ಸಂಪತ್ತು ಸೌಭಾಗ್ಯಗಳನ್ನೆಲ್ಲ ಹೊಂದಿ ನಿತ್ಯ ಸೌಂದರ್ಯ ಸದಾ ಸುಗಂಧಗಳಿಂದ ಬಂಧು ಬಾಂಧವ ವೃಂದದವರಿಗೆಲ್ಲ ಆನಂದದಾಯಕಳಾಗುವಳು.''ಎಂದು ಉಶ್ಶಾಪವಿತ್ತರು. ಹೀಗೆ ಭಾನುಮತಿಯು ಶೈಶವದ ಶಾಪ ವೃತ್ತಾಂತವನ್ನು ಆರುಹಿ ಅವನನ್ನು ಸಂತೈಸಿದರು. ಮತ್ತು ಅವಳನ್ನು ಕೊನೆಯ ಪಾಂಡುಪುತ್ರನಾದ ಸಹದೇವನಿಗೆ ಧಾರೆಯೆರೆದು ಕೊಡಲು ತಿಳಿಸಿದರು.

## ಸಹದೇವನ ಸಹದೇವಿಯಾದಯಾದವಿ

ಅದನ್ನು ಕೇಳಿ ಭಾನುವು ಪರಮಸಂತೋಷ ಭರಿತನಾಗಿ ಕೃಷ್ಣನ ದ್ವಾರಾ ಪಾಂಡವರನ್ನು ಕರೆಯಿಸಿ ಸಹದೇವನಿಗೆ ವಿಧಿಪೂರ್ವಕವಾಗಿ ಲಾವಣ್ಯ ಲತಿಕೆಯಂತಿರುವ ಭಾನುಮತಿಯನ್ನು ಇತ್ತು ವಿವಾಹ ಮಹೋತ್ಸವವನ್ನು ಒಳ್ಳೆ ವಿಜೃಂಭಣೆಯಿಂದ ದ್ವಾರಕೆಯಲ್ಲಿ ನೆರವೇರಿಸಿಕೊಟ್ಟನು. ಭಗವಂತನ ಅಪ್ಪಣೆಯಂತೆ ಸಹದೇವನಾದರೂ ಅತ್ಯಂತ ರೂಪವತಿಯೂ ಶೀಲವತಿಯೂ ಆದ ಭಾನುಮತಿಯ ಪಾಣಿಗ್ರಹಣವನ್ನು ಮಾಡಿಕೊಂಡು ಸಂತಸದಿಂದ ಸತೀಮಣಿಯೊಡನೆ ಸ್ವನಗರಿಗೆ ತೆರಳಿದನು.

## ವಜ್ರನಾಭ ವೃತ್ತಾಂತ

ವಜ್ರನಾಭ ದೈತ್ಯನು ಹಿಂದಕ್ಕೆ ಬ್ರಹ್ಮದೇವರನ್ನು ಕುರಿತು ಉಗ್ರ ತಪವನಾಚರಿಸಿ ದೇವತೆಗಳಿಂದ ಅವಧ್ಯತ್ವವನ್ನೂ ರತ್ನಪೂರ್ಣವಾದ ವಜ್ರಪುರ ಎಂಬ ಪಟ್ಟಣವನ್ನೂ ಪಡೆದಿದ್ದನು. ಅದಕ್ಕೆ ಅನೇಕ ಉಪನಗರಗಳಿದ್ದು ಆ ಮೂಲ ಪಟ್ಟಣದಲ್ಲಿ ಮಾತ್ರ

ಅನುಮತಿ ಇಲ್ಲದೇ ಗಾಳಿಗೂ ಕೂಡ ಪ್ರವೇಶವಿದ್ದಿರಲಿಲ್ಲ. ಸುಭದ್ರ ಹಾಗೂ ಸುಸಂಪನ್ನವಾದ ಈ ದುರ್ಗಮದುರ್ಗಕ್ಕೆ ಅನೇಕ ಜನ ದೈತ್ಯ ದಾನವರು ಬಂದು ಅದರ ಉಪನಗರಗಳಲ್ಲಿ ವಾಸಮಾಡಿಕೊಂಡಿದ್ದರು.

ಅವಧ್ಯತ್ವ ವರವನ್ನು ಪಡೆದು ಗರ್ವಭಾರದಿಂದ ಅಂಧನಾದ ವಜ್ರನಾಭನು ಜಗತ್ತಿನಲ್ಲಿಯ ಜನರನ್ನೆಲ್ಲ ಕಾಡಹತ್ತಿದನು. ಅವನು ಸ್ವರ್ಗಲೋಕಕ್ಕೆ ಹೋಗಿ ಇಂದ್ರನನ್ನು ಕುರಿತು ''ದೇವೇಂದ್ರ! ನಾವಿಬ್ಬರೂ-ಅದೇಕೆ ದೇವದಾನವರೆಲ್ಲರೂ ಕಶ್ಯಪಮುನಿಯ ಮಕ್ಕಳು. ಅಂದ ಬಳಿಕ ಇಡೀ ಸ್ವರ್ಗವನ್ನೆಲ್ಲ ಕೊನೆಯವರೆಗೆ ನೀನೇ ಏಕೆ ಆಳಬೇಕು? ಇಷ್ಟು ದಿನ ನೀನು ಆಳಿದ್ದಾಯಿತು. ಇನ್ನು ಮೇಲೆ ನಾನಾಳುವೆ. ಸ್ವರ್ಗ ಸಿಂಹಾಸನವನ್ನು ನನಗೆ ಬಿಟ್ಟುಕೊಡು. ಇಲ್ಲದಿದ್ದರೆ ಯುದ್ಧಕ್ಕೆ ಸಿದ್ಧನಾಗು'' ಎಂದು ಆಹ್ವಾನಿಸಿದನು. ಆಗ ಇಂದ್ರನು ಯುಕ್ತಿಯಿಂದ ''ಸೋದರ! ನೀನು ಹೇಳಿದ ಮಾತು ನಿಜ, ಆದರೆ ಈಗ ನಮ್ಮಿಬ್ಬರ ತಂದೆಯಾದ ಕಶ್ಯಪರು ಯಜ್ಞದೀಕ್ಷೆಯಲ್ಲಿ ಇರುವರು. ಈ ಯಾಗವು ಮುಗಿಯಲಿ, ಆ ಬಳಿಕ ಅವರು ಹೇಗೆ ಹೇಳುವರೋ ಅದರಂತೆ ನಡೆಯುವ'' ಎಂದು ಹೇಳಿ ನಡೆದನು.

ಅಲ್ಲಿಂದ ಆ ದೈತ್ಯನು ನೇರವಾಗಿ ಯಜ್ಞದಲ್ಲಿ ದೀಕ್ಷಿತರಾಗಿ ಕುಳಿತ ಕಶ್ಯಪರ ಹತ್ತಿರ ಬಂದು ನನಗೆ ಸ್ವರ್ಗಾಧಿಪತ್ಯವನ್ನು ಕೊಡಿಸಬೇಕೆಂದು ಕೇಳಿಕೊಂಡನು ಅವರಾದರೂ ಇಂದ್ರನದಂತೆ 'ಯಾಗ ಮುಗಿಯಲಿ. ಅಲ್ಲಿಯವರೆಗೆ ತಾಳು, ನಿನ್ನ ಊರಲ್ಲಿಯೇ ಸುಖವಾಗಿ ಇರು ಹೋಗು' ಎಂದು ಹೇಳಿ ಕಳಿಸಿದರು.

ಅವರ ಮಾತು ಕೇಳಿ ವಜ್ರನಾಭನು ತನ್ನ ವಜ್ರಪುರಕ್ಕೆ ಮರಳಿಹೋದ ಕೂಡಲೇ ದೇವರಾಜನು ದ್ವಾರಕೆಗೆ ಬಂದು ಕೃಷ್ಣನಿಗೆ ಸಮಾಚಾರವನ್ನು ತಿಳಿಸಿ ಹೇಗಾದರೂ ಮಾಡಿ ವಜ್ರನಾಭನನ್ನು ಸಂಹರಿಸಬೇಕೆಂದು ಕೇಳಿಕೊಂಡನು. ಆಗ ವಸುದೇವನು ಅಶ್ವಮೇಧಯಾಗವನ್ನು ಪ್ರಾರಂಭಿಸಿದನು. ಆ ಯಜ್ಞದ ಸಮಾಪ್ತಿಯಾದ ನಂತರ ನಾನು ಆ ದುಷ್ಟದೈತ್ಯನನ್ನು ಸಂಹಾರ ಮಾಡುವೆ ಎಂದು ಆಶ್ವಾಸನೆಯನ್ನು ಇತ್ತು ದೇವರಾಜನನ್ನು ಸಂತೈಸಿದನು. ವಸುದೇವನ ಆ ಅಶ್ವಮೇಧಯಾಗಕ್ಕಾಗಿ ಅಸಂಖ್ಯ ಋಷಿಗಳು ಮುನಿಯೋಗಿಗಳೂ ಬಂದಿದ್ದರು. ಅವರೆಲ್ಲರ ಮನೋರಂಜನೆಗಾಗಿ ಭದ್ರ ಎಂಬ ಪಟುನಟನು ಅತ್ಯುತ್ತಮ ರೀತಿಯಿಂದ ನಾಟ್ಯವನ್ನು ಅಭಿನಯಿಸಿದನು. ಅವನ ಶಾಸ್ತ್ರೋಕ್ತವಾದ ಭರತನಾಟ್ಯದ ಕಾರ್ಯಕ್ರಮವನ್ನು ಕಂಡು ಪ್ರೀತರಾದ ಋಷಿಮುನಿಗಳು ಅವನಿಗೆ ಆಕಾಶಗಮನ, ಅವಧ್ಯತ್ವ,ಕಾಮರೂಪ, ಸ್ವೈರ ಸಂಚಾರಾದಿ ವರಗಳನ್ನು ಇತ್ತು ಕರುಣಿಸಿದರು.

ಅವರ ವರದ ಬಲದಿಂದ ಆ ಭದ್ರನು ದೇವದಾನವರ ಪುರಗಳಲ್ಲಿ ಎಲ್ಲೆಡೆಗೆ ಸಂಚರಿಸಿ ತನ್ನ ನಾಟ್ಯಕೌಶಲ್ಯದಿಂದ ಜನರನ್ನೆಲ್ಲ ಸಂತೋಷ ಪಡಿಸುತ್ತಲಿದ್ದನು, ಮತ್ತು ಹಬ್ಬ ಹುಣ್ಣಿಮೆಗಳಿಗೊಮ್ಮೆ ದ್ವಾರಕೆಗೆ ಬಂದು ನಾಟ್ಯದಿಂದ ಆನಂದವನ್ನು ಉಂಟು ಮಾಡುತ್ತಿದ್ದನು.

ಇತ್ತ ದೇವೇಂದ್ರನು ಸ್ವರ್ಗಲೋಕದಲ್ಲಿ ಇರುವ ದಿವ್ಯಹಂಸಗಳನ್ನು ಕರೆದು ವಜ್ರನಾಭಪುರಕ್ಕೆ ಹೋಗಿ ಅಲ್ಲಿಯ ರಾಜಕುಮಾರಿ ಪ್ರಭಾವತಿಯ ಮುಂದೆ ಪ್ರದ್ಯುಮ್ನನ ಗುಣಗಾಯನ ಮಾಡಲಿಕ್ಕೆ ಹೇಳಿದನು.

ಆದರಂತೆ ನಾಕಲೋಕದ ಬಿಳಿಬಣ್ಣದ ಆ ಅರಸಂಚೆಗಳು ಹಾರಾಡುತ್ತ ವಜ್ರನಾಭಪುರದ ಅಂತಃಪುರದ ಉದ್ಯಾನಕ್ಕೆ ಬಂದಿಳಿದವು. ಅಲ್ಲಿಯ ತಿಳಿಗೊಳದಲ್ಲಿ ಅಚ್ಚ ಬಿಳಿಬಣ್ಣದಿಂದ ಕಣ್ಣಿಗೆ ಎಸೆಯುತ್ತಿರುವ ಆ ರಾಜಹಂಸಗಳ ಮಧುರ ಮಧುರವಾದ

ಮಾತಿನ ಮೋಡಿಯನ್ನು ನೋಡಿ ದೈತ್ಯರಾಜನಿಗೆ ಅತ್ಯಂತ ಆಶ್ಚರ್ಯವಾಯಿತು. ಮಾನವರಿಗಿಂತ ಮಧುರಾಲಾಪಿಗಳಾದ ಆ ಹಕ್ಕಿಗಳನ್ನು ಆ ದಾನವನು ಸ್ವಾಗತಿಸಿ ತನ್ನ ಅಂತಃಪುರಕ್ಕೆ ಬರಬೇಕೆಂದು ಕೇಳಿಕೊಂಡನು. ಅವನ ಆಮಂತ್ರಣದಿಂದ ಒಳಗೆ ಪ್ರವೇಶಮಾಡಿದ, ಆ ಹಂಸಗಳು ಅಂತಪುರ ರಾಜಭವನಗಳಲ್ಲಿ ರಾಜರಾಣಿಯರೆದುರು ವಿಚಿತ್ರವಾದ ವಿವಿಧ ಕೌತುಕದ ಕತೆಗಳನ್ನೂ ದೇಶ ವಿದೇಶಗಳ ಸುದ್ದಿ ಸಮಾಚಾರಗಳನ್ನೂ ಹೇಳಿ ಮನರಂಜನೆಯನ್ನು ಉಂಟುಮಾಡುತ್ತಲಿದ್ದವು. ಚತುರಮತಿಯ ಆ ಚಾರುಮರಾಳಗಳ ಕರ್ಪೂರವರ್ಣ ಸ್ಪಷ್ಟಭಾಷಣ ಸಂಭಾಷಣಚಾತುರ್ಯಗಳನ್ನು ಕಂಡ ರಾಜಕುಮಾರಿ ಪ್ರಭಾವತಿಯಂತೂ ಮುಗ್ಧಳಾಗಿ ಹೋಗಿದ್ದಳು. ಅದರಲ್ಲಿಯೂ ಶುಚಿಮುಖಿ ಎಂದು ಹಂಸಿಯಂತೂ ಪ್ರಭಾವತಿಯ ಜೀವಸಖಿಯಂತಾಗಿದ್ದಳು.

ಆ ಶುಚಿಮುಖಿಯು ಒಂದು ದಿನ ಪ್ರಭಾವತಿಗೆ "ಜೀವಸಖಿ! ನಿನ್ನ ಯೌವನದ ಚೆಲುವು ದಿನೇ ದಿನೇ ಕ್ಷೀಣಿಸುತ್ತಲಿದೆ ಕಳೆದ ದಿನ ತಿರುಗಿ ಬಾರದು. ನಿಮ್ಮ ತಂದೆಯು ಸ್ವಯಂವರಕ್ಕಾಗಿ ದೇಶ ವಿದೇಶಗಳಲ್ಲಿಯ ರಾಜಕುಮಾರರನ್ನೆಲ್ಲ ಕರೆಕಳಿಸಿ ತೋರಿಸಿದರೂ ನಿನಗೆ ಯಾರೂ ಮನಸ್ಸು ಬಾರದೇ ಅವಿವಾಹಿತಳಾಗಿಯೇ ಉಳಿದಿರುವಿ. ಇಲ್ಲಿ ಬಂದವರಲ್ಲಿ ಯಾರೂ ಅಂಥ ರೂಪವಂತರಿಲ್ಲ. ಜಗತ್ತಿನಲ್ಲಿಯೇ ಅಪರೂಪ ರೂಪವುಳ್ಳವರು ಇಲ್ಲಿಗೆ ಬರುವಂತಿಲ್ಲ. ಅಂದ ಬಳಿಕ ನಿನ್ನ ಮದುವೆಯಾಗುವ ಬಗೆ ಹೇಗೆ ಎಂದು ಕೇಳಿದಳು.

ಅದಕ್ಕೆ ಪ್ರಭಾವತಿಯು "ಅಂಥ ಕಾಮಕಮನೀಯವಾದ ಕಾಯಕಾಂತಿಯುಳ್ಳ ಸುಕುಮಾರ ರಾಜಕುಮಾರರಾದರೂ ಜಗತ್ತಿನಲ್ಲಿ ಈಗ ಯಾರು ಉಂಟು? ಎಂದು ಕೇಳಿದಳು. ಅದಕ್ಕೆ ರಾಜಹಂಸಿಯು ನಕ್ಕು ಕೃಷ್ಣಕುಮಾರ ಪ್ರದ್ಯುಮ್ನನ ಗುಣ ಶೀಲ ವಯಸ್ಸು ವಿದ್ಯಾ ಮತ್ತು ಶೌರ್ಯಧೈರ್ಯ ಗಾಂಭೀರ್ಯ ಸೌಂದರ್ಯಗಳನ್ನು ಪ್ರಶಂಸಿಸಿ "ಸಕಲ ಶ್ರೇಷ್ಠ ಸೌಂದರ್ಯ ಪ್ರತೀಕವೆಂದರೇ ಪ್ರದ್ಯುಮ್ನ. ಅವನನ್ನು ನೀನು ಒರಿಸು" ಎಂದು ಹೇಳಿದವು.

ಅದರಿಂದ ಆ ರಾಜಕನ್ಯೆಗೆ ಪ್ರದ್ಯುಮ್ನನಲ್ಲಿ ಅನುರಾಗಾತಿಶಯವುಂಟಾಗಿ "ಹೇಗಾದರೂ ಮಾಡಿ ಪ್ರದ್ಯುಮ್ನನು ನನಗೆ ಪತಿಯಾಗಿ ದೊರಕುವಂತೆ ಮಾಡಿರಿ. ನಾನಾದರೂ ಬಹುದಿನಗಳಿಂದ ಶಂಬರಾಸುರನನ್ನು ಸಂಹಾರಮಾಡಿದ ಕಾಮರೂಪಿಯಾದ ಆ ಪ್ರದ್ಯುಮ್ನ ಹಾಗೂ ಅವನ ತಂದೆಯಾದ ಶ್ರೀಷ್ಣವ ಗುಣಗೌರವ ಪ್ರತಾಪ ಪ್ರಭಾವ ಗಳನ್ನು ನಾರದರೇ ಮೊದಲಾದವರ ಬಾಯಿಂದ ಕೇಳಿದ್ದೇನೆ. ಆದರೆ ನಮ್ಮ ತಂದೆಗೂ ಅವರಿಗೂ ಬದ್ಧದ್ವೇಷವಿದ್ದುದರಿಂದ ಅವರೊಡನೆ ಸಂಬಂಧ ಹೇಗೆ ಆಗಬೇಕು? ದೇವಪಕ್ಷಿಗಳೇ! ಏನಾದರೂ ಯುಕ್ತಿ ಹುಡುಕಿ ಈ ಸಂಬಂಧ ಕುದುರುವಂತೆ ಹಂಚಿಕೆಯನ್ನು ಹಾಕಿರಿ" ಎಂದು ಕೇಳಿಕೊಂಡಳು.

ಅದಕ್ಕೆ ಆ ಶುಚಿಮುಚಿ ಎಂಬ ಹಂಸಸಖಿಯು "ರಾಜಕುಮಾರಿ! ನೀನು ಏನೂ ಚಿಂತೆ ಮಾಡಬೇಡ. ನಾವೆಲ್ಲರೂ ಪ್ರಯತ್ನಮಾಡಿ ಸ್ವಯಂ ಪ್ರದ್ಯುಮ್ನನನ್ನೇ ನೀನಿದ್ದಲ್ಲಿ ತಂದು ನಿನ್ನ ಅಭೀಷ್ಟವು ಪೂರ್ಣವಂತೆ ಏರ್ಪಾಡು ಮಾಡುತ್ತೇವೆ. ನೀನು ನಿಮ್ಮ ತಂದೆಯ ಹತ್ತಿರ ನಮ್ಮ ಕಥಾ ಕಥನ ಕೌಶಲ್ಯವನ್ನು ತಿಳಿಸಿ ನಮ್ಮಿಂದ ಅವರು ಸುದ್ದಿಯನ್ನು ಕೇಳುವಂತೆ ಮಾಡು" ಎಂದು ಹೇಳಿದವು.

ಅದರಂತೆ ಪ್ರಭಾವತಿಯು ತನ್ನ ತಂದೆಯ ಎದುರಿಗೆ ಆ ಬೆಳ್ಳಕ್ಕಿಗಳ ಕಥಾಕಥನ ಕೋವಿದತ್ವವನ್ನು ಬಣ್ಣಿಸಿ ಹೇಳಿದಳು. ಅದರಿಂದ ಕುತೂಹಲ ಭರಿತನಾಗಿ ಅವನು

ಹಂಸಗಳ ಹತ್ತಿರ ಬಂದು ಜಗತ್ತಿನ ಚಮತ್ಕಾರ ಮತ್ತು ಅದ್ಭುತಗಳ ಬಗೆಗೆ ಕೇಳಿದನು. ಆಗ ಹಂಸವಂಶಾವತಂಸಿಯಾದ ಶುಚಿಮುಖಿಯು "ರಾಜನ್! ಜಗತ್ತಿನಲ್ಲಿ ಅತ್ಯಂತ ಆಶ್ಚರ್ಯದ ವ್ಯಕ್ತಿಯೆಂದರೆ ಭದ್ರನಟ. ಅವನು ಇಂದು ಇಲ್ಲಿ ಇದ್ದರೆ ನಾಳೆ ದೇವಲೋಕ. ಅವನು ಹೋಗದ ದೇಶವಿಲ್ಲ. ಹಾಡದ ಹಾಡು ಇಲ್ಲ, ಆಡದ ನಾಟ್ಯವಿಲ್ಲ, ಮಾಡದ ಮನರಂಜನೆಯಿಲ್ಲ. ಅವನು ಕಾಮ ರೂಪಿ, ಕಾಮ ಗಾಮಿ ಇದ್ದು ತನ್ನ ಕಾರ್ಯಕ್ರಮ ಗಳಿಂದ ದೇವತೆಗಳನ್ನೂ ಕೂಡ ಬೆರಗುಗೊಳಿಸುತ್ತಾನೆ." ಎಂದು ಬಣ್ಣಿಸಿ ಹೇಳಿದವು.

ಅದನ್ನು ಕೇಳಿ ಕುತೂಹಲಾವಿಷ್ಟನಾದ ಆ ದಾನವೇಂದ್ರನು ಶುಚಿಮುಖಿಗೆ "ಹಂಸಸಖಿ! ನಾನೂ ಅವನು ಹೆಸರನ್ನು ಕೇಳಿದ್ದೇನೆ. ಆದರೆ ನನಗೆ ಅವನ ಪರಿಚಯವಿಲ್ಲ. ಕಾರಣ ಹೇಗಾದರೂ ಮಾಡಿ ಅವನು ಇಲ್ಲಿ ಬರುವಂತೆ ಮಾಡು" ಎಂದು ಕೌತುಕದಿಂದ ಕೇಳಿಕೊಂಡನು. ಹಾಗೇ ಆಗಲಿ ಎಂದು ಹೇಳಿ ಆ ಹಕ್ಕಿಗಳು ದ್ವಾರಕೆಗೆ ಬಂದು ಕೃಷ್ಣನಿಗೂ ಇಂದ್ರನಿಗೂ ಸಮಾಚಾರವನ್ನೆಲ್ಲ ತಿಳಿಸಿದವು. ಅದನ್ನೆಲ್ಲ ಕೇಳಿ ತಿಳಿದುಕೊಂಡ ಕೃಷ್ಣನು ವಜ್ರನಾಭನನ್ನು ಕೊಂದು ಪ್ರಭಾವತಿಯನ್ನು ಮದುವೆಮಾಡಿಕೊಂಡು ಬರಲು ಪ್ರದ್ಯುಮ್ನನನ್ನು ನಿಯಮಿಸಿದನು. ಮತ್ತು ಅವನಿಗೆ ದಿವ್ಯವಾದ ನಟವೇಷವನ್ನು ತೊಡಿಸಿ ಸಾಂಬನಿಗೆ ವಿದೂಷಕ ಪಾತ್ರವನ್ನೂ ಗದನಿಗೆ ಸಹಾಯಕ ನಟನ ಪಾತ್ರವನ್ನೂ ವಹಿಸಿಕೊಟ್ಟನು. ಇವರಲ್ಲದೇ ಇನ್ನೂ ಅನೇಕ ಯದುವೀರರು ಭದ್ರ ಹಾಗೂ ಭದ್ರನ ಸಹಾಯಕರಾದ ನಟ ನಟಿಯರ ವೇಷವನ್ನು ತೊಟ್ಟುಕೊಂಡು ಪ್ರದ್ಯುಮ್ನನ ಜೊತೆಗೆ ವಜ್ರನಾಭಪುರಕ್ಕೆ ಹೊರಟರು. ಅಲ್ಲಿಂದ ಈ ಯಾದವರ ಭದ್ರನಾಟಕ ಮಂಡಳಿಯು ಮೊದಲು ಅಸಂಖ್ಯ ದೈತ್ಯದಾನವರಿಂದ ತುಂಬಿ ತುಳುಕುತ್ತಲಿರುವ ವಜ್ರನಾಭಪುರದ ಉಪನಗರವಾದ ಸುಪುರ ಎಂಬ ಪಟ್ಟಣದಲ್ಲಿ ಬಂದಿಳಿಯಿತು.

ಜಗದ್ವಿಖ್ಯಾತರಾದ ಈ ನಾಟ್ಯವಿಲಾಸಿಗಳಿಗೆ ಸ್ವಾಗತ ಸತ್ಕಾರಗಳನ್ನು ನೀಡಿ ಸರ್ವ ರೀತಿಯಿಂದಲೂ ಸಹಕರಿಸಬೇಕು ಎಂದು ವಜ್ರನಾಭನು ಆಜ್ಞೆ ಹೊರಡಿಸಿದನು. ಅದರಂತೆ ಆಪುರದ ಪೌರರು ಅವರಿಗೆಲ್ಲ ಸಂಭ್ರಮದ ಆತಿಥ್ಯ ನೀಡಿ ವಸ್ತ್ರಾಭರಣ ರತ್ನಾದಿಗಳನ್ನು ಸ್ನೇಹದ ಕಾಣಿಕೆಯಾಗಿ ಸಮರ್ಪಿಸಿದರು. ಬಹುದಿನದಿಂದ ನಾವು ಯಾವನ ಹೆಸರನ್ನು ಕೇಳುತ್ತಿದ್ದೆವೋ ಅಂಥ ಭದ್ರನಟನು ಇಂದು ತಾನಾಗಿ ತನ್ನ ಪರಿವಾರದೊಂದಿಗೆ ನಮ್ಮ ಊರಿಗೆ ಬಂದಿದ್ದಾನೆಂದು ತಿಳಿದು ದೈತ್ಯರೆಲ್ಲರೂ ಅವನ ನಾಟಕ ನೋಡಲು ನೆರೆದರು. ನಾಟಕ ಪ್ರಾರಂಭದ ಮೊದಲು ಅಭಿನಯಿಸಿದ ಶ್ರೇಷ್ಠನೃತ್ಯವೇ ಎಲ್ಲ ದೈತ್ಯದಾನವರ ಚಿತ್ತವನ್ನು ಸೆರೆಹಿಡಿಯಿತು. ಮುಂದೆ ರಾಮಾಯಣದ ರಮಣೀಯವಾದ ಸನ್ನಿವೇಶಗಳನಾಡಿ ಒಂದು ಉತ್ತಮವಾದ ಗೀತ ನೃತ್ಯವನ್ನು ಅವರು ಅಭಿನಯಿಸಿದರು. ಅವರ ನಾಟ್ಯಕೌಶಲ್ಯವನ್ನು ಕಂಡು ಆನಂದಿತರಾದ ದೈತ್ಯಪ್ರೇಕ್ಷಕರು ನಡು ನಡುವೆ ಎದ್ದು ಭಲೆ ಭಾಪು ಎಂದು ಚಪ್ಪಳಿಕ್ಕಿ ಹರ್ಷೋದ್ಗಾರ ತೆಗೆದರು. ತಲೆಯಲ್ಲಾಡಿಸಿ ತಮ್ಮ ಸಂತೋಷಾತಿಶಯವನ್ನು ಸೂಚಿಸಿದರು. ಎಷ್ಟೋ ಜನರು ತಮ್ಮ ಆಭರಣ ರತ್ನದ ಪದಕ ಕಡಗ ಹಾರ ಕುಂಡಲಗಳ ಕೂಡ ನಟನಟಿಯರಿಗೆ ಕೊಟ್ಟರು.

ಉಪನಗರಗಳಲ್ಲಿ ನಡೆದ ಈ ಸಂಭ್ರಮದ ನಾಟ್ಯೋತ್ಸವದ ಸಂತಸದ ಸಮಾಚಾರ ವನ್ನು ಕೇಳಿ ವಜ್ರನಾಭನು ಆ ನಟವರ್ಯರಿಗೆಲ್ಲ ತನ್ನ ರಾಜಧಾನಿಗೆ ಬರಹೇಳಿದನು. ದೈತ್ಯೇಂದ್ರನ ಆದೇಶದಂತೆ ಸುಸಜ್ಜಿತವಾದ ಪ್ರೇಕ್ಷಾಗಾರದಲ್ಲಿ ಯಾದವನಟರು "ಗಂಗಾವತರಣ" ಎಂಬ

ಗೇಯ ನಾಟಕವನ್ನು ಛಾಲಿಕ್ಯಗಾಯನದೊಂದಿಗೆ ಅಭಿನಯಿಸಿದರು. ಈ ನಾಟಕವು ನಡೆದಾಗ ರಾಕ್ಷಸರು ನಡುನಡುವೆ ಎದ್ದು ಕುಳಿತು ನಕ್ಕು ಕೂಗಿ ತಾಳಬಡೆದು ಹರ್ಷವಾಯು ಆದವರಂತೆ ಕುಣಿದಾಡಿದರು. ಬಳಿಕ ಆ ಭದ್ರನಾಟಕ ಕಂಪನಿಯವರಿಂದ ''ರಂಭೆಯ ಅಭಿಸಾರ'' ಎಂಬ ಮತ್ತೊಂದು ಶೃಂಗಾರರಸ ತರಂಗಿತವಾದ ನಾಟಕವು ಆಡಲ್ಪಟ್ಟಿತು. ಅದನ್ನು ನೋಡಿಯಂತೂ ಆ ನಟನಟಿಯರಿಗೆ ಏನು ಕೊಟ್ಟರೂ ಕಡಿಮೆಯೇ ಎಂದು ಮುತ್ತುರತ್ನಗಳ ರಾಶಿರಾಶಿಯನ್ನೇ ದೈತ್ಯನಾಗರಿಕರು ಅರ್ಪಿಸಿದರು.

ಇತ್ತ ಪ್ರಭಾವತಿಯ ಪ್ರಣಯದೂತಿಯಾದ ಶುಚಿಮುಖಿ ಹಂಸಿಯು ಅವಳ ಹತ್ತಿರಬಂದು ''ರಾಜಕುಮಾರಿ ಇಂದು ಸಾಯಂಕಾಲ ನಿನ್ನ ಮನದನ್ನನು ಅರಮನೆಯ ಮೇಲುಪ್ಪರಿಗೆಯ ಚಂದ್ರಶಾಲೆಗೆ ಬರುವನು. ಮಧುರ ಮಿಲನಕ್ಕಾಗಿ ಸಿದ್ಧಳಾಗಿರು'' ಎಂದು ತಿಳಿಸಿತು. ಅಲ್ಲಿಂದ ಆ ಶುಚಿಮುಖಿ ಹಂಸಿಯಸೂಚನೆ ನಟವೇಷಧರನಾದ ಪ್ರದ್ಯುಮ್ನನು ಸಾಯಂಕಾಲದಲ್ಲಿ ಪ್ರೇಯಸಿಯಾದ ಪ್ರಭಾವತಿಯ ಪ್ರಥಮ ದರ್ಶನದ ಕುತೂಹಲದಿಂದ ಉತ್ಕಂಠಿತನಾಗಿ ಅರಮನೆಯೆಡೆಗೆ ನಡೆದನು. ಪ್ರದ್ಯುಮ್ನನು ಹೂವಿನಹಾರದಲ್ಲಿ ದುಂಬಿಯಾಗಿ ಕುಳಿತು ಪ್ರಭಾವತಿಯ ಅಂತಃಪುರದಲ್ಲಿ ಪ್ರವೇಶಿಸಿ ತನ್ನ ದಿವ್ಯರೂಪವನಾಂತು ಅವಳೆದುರಿಗೆ ನಿಂತನು. ನೂರು ಚಂದ್ರಕಾಂತಿ ಕಾಂತನಾದ ಆ ತನ್ನ ಪ್ರಾಣಕಾಂತನ ಸುಮನೋಹರವಾದ ದಿವ್ಯ ದೇಹದ ದೀಪ್ತಿ ದೀಧಿತಿಗಳನ್ನು ಕಂಡು ಚಕಿತ ಮುದಿತಳಾದ ಪ್ರಭಾವತಿಯು ನಾಚಿಕೆಯಿಂದ ನಸುಗೆಂಪಾದ ಮುಖವನ್ನು ಕೆಳಗೆ ಮಾಡಿದಳು.

ಆಗ ಪ್ರದ್ಯುಮ್ನನು ಅವಳ ಭಾವವನ್ನು ತಿಳಿದುಕೊಂಡು ತನ್ನ ಉಂಗುರದಲ್ಲಿದ್ದ ರತ್ನವನ್ನು ಕೊಟ್ಟನು. ಆಗ ಮಂದಹಾಸಸುಂದರವಾದ ಅವಳ ಮುಖದ ಲಜ್ಜಾ ಲಾಲಿಮೆಯಿಂದಲೇ ಅವಳ ಮನೋಭಿಪ್ರಾಯವನ್ನು ತಿಳಿದ ಪ್ರದ್ಯುಮ್ನನು ಆಚಮನ ಮಾಡಿ ತನ್ನ ಉಂಗುರದಲ್ಲಿರುವ ರತ್ನ ಶಕಲದ ಜ್ಯೋತಿರ್ವಲಯದಲ್ಲಿಯೇ ಅಗ್ನಿಯನ್ನು ಆವಾಹನ ಮಾಡಿ ವೈವಾಹಿಕ ವೇದ ಮಂತ್ರಗಳನ್ನು ಉಚ್ಚರಿಸಿ ಪುಷ್ಪಾಂಜಲಿಗಳಿಂದಲೇ ಆಹುತಿಯನ್ನಿತ್ತನು. ಅನಂತರ ಆ ಕೃಷ್ಣಕುಮಾರನು ರತ್ನಾಭರಣಗಳಿಂದ ಅಲಂಕೃತಳಾದ ಪ್ರಭಾವತಿಯ ಕನಕಕಂಕಣ ಭೂಷಿತವಾದ ಕರಪಂಕಜವನ್ನು ಪಿಡಿದುಕೊಂಡು ಉಂಗುರದ ಅಗ್ನಿಯನ್ನೆ ಪ್ರದಕ್ಷಿಣೆಹಾಕಿ ಬ್ರಾಹ್ಮಣರಿಗೆ ಮನಸಾ ದಾನ ದಕ್ಷಿಣೆಗಳನ್ನು ಸಂಕಲ್ಪ ಮಾಡಿದನು. ವಿಧಿಪೂರ್ವಕವಾಗಿ ಅವಳನ್ನು ಮದುವೆಯಾದನು.

ಆ ಬಳಿಕ ಶುಚಿಮುಖಿಹಂಸಿಗೆ ಬಾಗಿಲದಲ್ಲಿ ನಿಲ್ಲಹೇಳಿ ನವರಸರುಗಿಣಿಯಾದ ಶೃಂಗಾರ ತರಂಗಿಣಿಯಂತಿದ್ದ ಆ ಸುಂದರಾಂಗನೆಯನ್ನು ಸಜ್ಜಿವನೆಯ ಕಾಮಕೇಲಿಗೆ ಕರೆದೊಯ್ದನು. ಅಲ್ಲಿ ಆ ರಸಿಕರಮಣಿಯಾದ ಪ್ರಬಾವತಿಯೊಂದಿಗೆ ರಮಣೀಯವಾದ ರಾರಾರಜನಿಯನ್ನು ವಿಲಾಸ ಲೀಲೆಗಳಿಂದ ಒಂದು ರಸ ನಿಮಿಷದಂತೆ ಕಳೆದನು. ಮತ್ತೆ ಅರುಣೋದಯ ಸಮಯದಲ್ಲಿ ಹೇಗೋ ಪ್ರಭಾವತಿಯಿಂದ ಬಿಡಿಸಿಗೊಂಡು ತಮ್ಮ ನಟನಿವಾಸಕ್ಕೆ ಬಂದನು. ಅಲ್ಲಿ ಹಗಲಿನಲ್ಲಿ ಎಲ್ಲರೊಡನೆ ಇದ್ದು ರಾತ್ರಿಯಾದ ಕೂಡಲೇ ರಾಜಕುಮಾರಿಯ ಮಧುಸಂಗಮಕ್ಕಾಗಿ ಅಂತಃಪುರದ ಚಂದ್ರಶಾಲೆಗೆ ಪ್ರಯಾಣ ಮಾಡುತ್ತಲಿದ್ದನು. ಹೀಗೆ ಎಷ್ಟೋದಿನ ಪ್ರದ್ಯುಮ್ನ ಪ್ರಭಾವತಿಯರು ರತಿಕ್ರೀಡಾಲೋಲರಾಗಿ ರಸೋಲ್ಲಾಸಗಳಿಂದ ಶೃಂಗಾರಕೇಲೀ ಕಲಾಪಗಳಲ್ಲಿ ಕಾಲಕಳೆಯುತ್ತಿದ್ದರು. ಹಂಸದೂತಿಗಳ ದಕ್ಷತೆಯಿಂದ ಈ ಸಮಾಚಾರವು ದೈತ್ಯಪರಿಚಾರಕರಿಗಾರಿಗೂ ಗೊತ್ತೇ ಆಗಲಿಲ್ಲ.

ಆದರೆ ವಜ್ರನಾಭನ ತಮ್ಮನಾದ ಸುನಾಭನಿಗೆ ಚಂದ್ರವತಿ ಗುಣವತಿ ಎಂಬ ಇಬ್ಬರು ಹೆಣ್ಣುಮಕ್ಕಳಿದ್ದರು. ಪ್ರಭಾವತಿಯ ಜೀವದ ಗೆಳತಿಯರಾದ ಅವರಿಗೆ ಮಾತ್ರ ಅವಳ ರಹಸ್ಯರತಿಯ ಬಗ್ಗೆ ಸಂದೇಹ ಬಂದು ಅವಳನ್ನು ವಿಚಾರಿಸಿದರು. ಆಗ ಪ್ರಭಾವತಿಯು ದೈತ್ಯರ ದುಸ್ವಭಾವವನ್ನು ಬಣ್ಣಿಸಿ ಅಮಾನುಷ ಸೌಂದರ್ಯಸಂಪನ್ನನಾದ ಪತಿ ಪ್ರದ್ಯುಮ್ನನನ್ನು ಅವರಿಗೆ ತೋರಿಸಿದಳು. ಮತ್ತು ಅವರಿಗಾದರೂ ದೈತ್ಯವೀರರನ್ನು ಮದುವೆಯಾಗದೆ ಪ್ರದ್ಯುಮ್ನನಂಥ ಸುಕುಮಾರ ದೇವಕುಮಾರರನ್ನೇ ಮದುವೆಯಾಗಲು ಉಪದೇಶಗೈದಳು. ಆಗ ಅವಳ ಆದೇಶದಂತೆ ಚಂದ್ರವತಿ ಗುಣವತಿಯರಾದರೂ ಪ್ರದ್ಯುಮ್ನನಿಂದ ಗುಟ್ಟಾಗಿ ಅಂತಃಪುರಕ್ಕೆ ಕರತರಲ್ಪಟ್ಟ ಗದ ಮತ್ತು ಸಾಂಬರನ್ನು ಗೂಢವಾಗಿಯೇ ಗಾಂಧರ್ವ ವಿಧಿಯಿಂದ ವಿವಾಹವಾದರು. ಹೀಗೆ ಕೃಷ್ಣಕುಮಾರರಾದ ಮೂವರೂ ಯದುಪುಂಗವರು ತಮ್ಮ ಮನಸ್ಸಿಗೆ ತಕ್ಕಂಥ ರೂಪರಾಣಿಯರಾದ ದೈತ್ಯಕುಮಾರಿಯರನ್ನು ಮೆಚ್ಚಿ ಮದುವೆಯಾಗಿ ರತಿರಸಾಕರದಲ್ಲಿ ರಮಣರೊಂದಿಗೆ ರಮಮಾಣರಾದರು. ದೇವ ಹಂಸಗಳು ಅಲ್ಲಿ ನಡೆದ ಗುಪ್ತ ಸಮಾಚಾರಗಳನ್ನೆಲ್ಲ ಪ್ರತಿದಿನ ಬಂದು ಇಂದ್ರ ಉಪೇಂದ್ರರಿಗೆ ತಿಳಿಸುತ್ತಲಿದ್ದವು. ವಜ್ರನಾಭಪುರದ ನಾಗರಿಕರಂತೂ ಯಾದವ ನಾಟಕ ರೋಮಹರ್ಷಣವಾದ ನಾಟ್ಯ ಸಂವಿಧಾನಗಳಿಂದ ಪ್ರಮೋದ ಪರವಶರಾಗಿ ಆತ್ಮವಿಸ್ಮರಣೆಯಲ್ಲಿದ್ದರು. ಯದುಕನ್ನಿಕೆಯರ ರೂಪರಾಗ ರಸರಂಗ ಹಾವಭಾವಗಳು ಮೊದಲೇ ಕಾಮುಕರಾದ ರಾಕ್ಷಸರಿಗೆ ಹುಚ್ಚನ್ನು ಹಿಡಿಸಿದ್ದವು.

ಮುಂದೆ ಕಶ್ಯಪರ ಯಜ್ಞವು ಮುಗಿದ ಬಳಿಕ ವಜ್ರನಾಭನು ಕಶ್ಯಪರ ಹತ್ತಿರ ಹೋಗಿ ಇಂದ್ರನಿಂದ ಸ್ವರ್ಗರಾಜ್ಯವನ್ನು ಕೊಡಿಸಲು ಕೇಳಿದನು. ಆಗ ಆ ಮುನಿಗಳು ದೇವರಾಜ್ಯವು ಇಂದ್ರನಿಗೇ ಸೇರಿದ್ದು. ಅದರ ಆಶೆಮಾಡಿ ಆತ್ಮಘಾತ ಮಾಡಿಕೊಳ್ಳಬೇಡ ಎಂದು ಉಪದೇಶಿಸಿದರು. ಆದರೆ ಆ ದುಷ್ಟ ದೈತ್ಯನಿಗೆ ಬ್ರಹ್ಮರ್ಷಿ ಕಶ್ಯಪರ ಒಳ್ಳೆಯ ಮಾತುಗಳು ಹಿಡಿಸದೆ ಅವನು ಯುದ್ಧದ ಸಿದ್ಧತೆಯನ್ನು ನಡೆಯಿಸಿದನು.

ಇತ್ತ ಅರಮನೆಯ ಇಂದ್ರ ಮಹಲುಗಳ ಚಂದ್ರಶಾಲೆಗಳಲ್ಲಿಯೇ ರಾಕ್ಷಸರಮಣಿಯರೊಂದಿಗೆ ಮಧು ಚಂದ್ರವಿಹಾರದ ಸ್ವರ್ಗಸುಖವನ್ನು ಯದುವೀರರು ಭೋಗಿಸುತ್ತಲಿರುವಾಗ ಆ ಮೂವರೂ ರಾಜಕುಮಾರಿಯರು ಗರ್ಭಿಣಿಯರಾದರು. ಇನ್ನು ಮುಂದೆ ಇದು ತಮ್ಮ ತಂದೆಗೆ ಗೊತ್ತಾದರೆ ಏನುಗತಿ ಎಂದು ಅವರು ಯೋಚಿಸುತ್ತಲಿರುವಾಗಲೇ ''ಏನೂ ಗಾಬರಿಯಾಗಬೇಡಿರಿ'' ಎಂದು ಕೃಷ್ಣನು ಹಂಸಗಳ ಮುಖಾಂತರ ಸಂದೇಶ ಕಳಿಸಿದನು. ಭಗವಂತನ ಅನುಗ್ರಹದಿಂದ ಯದುಕುಮಾರರ ಮೂವರು ಮಡದಿಯರೂ ಬಂಗಾರ ಮತ್ತು ರತ್ನದಂತಹ ಹಂಸಕೇತು ಚಂದ್ರಪ್ರಭ ಗುಣವಂತ ಎಂಬ ಹೆಸರಿನ ಮೂರು ಮಕ್ಕಳನ್ನು ಹೆತ್ತರು. ಆ ಮಗುಗಳು ಅಲ್ಲಿಯೇ ದೈತ್ಯನ ಅಂತಃಪುರದಲ್ಲಿ ನಿರಾತಂಕವಾಗಿ ಬೆಳೆಯಹತ್ತಿದವು.

ಮೂವರೂ ಮಕ್ಕಳೂ ಜೋಡಾಗಿ ಅರಮನೆಯ ಮೇಲ್ಮಾಳಿಗೆಯಲ್ಲಿ ಆಡುವುದನ್ನು ಕಂಡು ಗಗನಚಾರಿಗಳಾದ ದೈತ್ಯಚಾರರು ಬಂದು ವಜ್ರನಾಭನಿಗೆ ಸಮಾಚಾರವನ್ನೆಲ್ಲ ಸಾದ್ಯಂತ ತಿಳಿಸಿದರು. ಆಗ ಬೆಂಕಿಯ ಬಣಿವೆಯಂತೆ ಕಣ್ಣಿನಿಂದ ಕಿಡಿ ರಾಶಿಯನ್ನೇ ತೂರುತ್ತ ವಜ್ರನಾಭನು ಯಾದವ ನಟ ನಟಿಯರನ್ನೆಲ್ಲ ಅದರಲ್ಲಿಯೂ ಗುಪ್ತವಾಗಿ ತನ್ನ ಗೃಹಪ್ರವೇಶ ಮಾಡಿದ ಆ ಮೂವರನ್ನಂತೂ ಮೊದಲು ಕೊಲ್ಲಿರಿ ಎಂದು ಅಪ್ಪಣೆಗೈದನು.

ಅದನ್ನುಕೇಳಿ ಗಾಬರಿಯಾದ ಪ್ರಭಾವತಿ ಚಂದ್ರವತಿ ಗುಣವತಿಯರು ದೊಡ್ಡ

ಧನಿಯಿಂದ ಚೀರಿ ಅಳಹತ್ತಿದರು. ಇದರಲ್ಲಿ ಯಾರು ಸತ್ತರೂ ಅವರ ಕರುಳಿಗೆ ಕಿಚ್ಚನ್ನೆ ಹಚ್ಚಿದಂತಾಗುತ್ತಿತ್ತು. ಅವರ ಅಂತಃಕರಣದ ಉಭಯ ಸಂಕಟವನ್ನು ಅನುಲಕ್ಷಿಸಿ ಪ್ರದ್ಯುಮ್ನನು "ಪ್ರಿಯೆ! ಈಗಂತೂ ನಿನ್ನ ತಂದೆಯು ನಮ್ಮನ್ನು ಕೊಲ್ಲಲು ಬಂದಿದ್ದಾನೆ. ನಾವು ಯುದ್ಧಮಾಡಿದರೆ ಅವನು ಸಾಯುವನು. ನಮ್ಮಿಬ್ಬರಲ್ಲಿ ನಾವು ಸುಮ್ಮನಿದ್ದರೆ ನಮ್ಮನ್ನು ಅವನು ಕೊಲ್ಲುವನು. ಒಬ್ಬರು ಸಾಯುವದಂತೂ ನಿಶ್ಚಿತ. ಇದರಲ್ಲಿ ನಿಮಗೆ ಪತಿ ಉಳಿಯಬೇಕೋ ಪಿತನು ಉಳಿಯಬೇಕೋ? ನಿಶ್ಚಿತ ನಿಮ್ಮ ಅಭಿಪ್ರಾಯವನ್ನು ಮೂವರೂ ಸೋದರಿಯರೂ ವಿಚಾರಿಸಿ ತಿಳಿಸಿರಿ" ಎಂದನು. ಆಗ ಚಂದ್ರವತಿ ಗುಣವತಿ ಪ್ರಭಾವತಿಯರು ತಮ್ಮ ಗಂಡಂದಿರಿಗೆ "ನಿಮ್ಮ ಮನೆತನದ ಹಿರಿಯನಾದ ಕೃಷ್ಣನಂತೆ ನೀವಾದರೂ ನಿಮ್ಮ ಶಕ್ತಿಯಿಂದ ವೈರಿಗಳನ್ನೆಲ್ಲ ಕೊಂದು ನಿಮ್ಮ ಪತ್ನಿಯರನ್ನು ಗೆದ್ದು ಕೊಂಡು ಹೋಗಿರಿ" ಎಂದು ಹೇಳಿ ಅವರ ಕೈಯಲ್ಲಿ ಖಡ್ಗವನ್ನಿತ್ತು ಪ್ರೋತ್ಸಾಹಿಸಿದರು.

ಹೀಗೆ ಪತ್ನಿಯರಿಂದ ಪ್ರಚೋದಿತರಾದ ಆ ಮೂವರೂ ಯದುನಾಯಕರು ತಮ್ಮನ್ನು ಹಿಡಿಯಲು ಬಂದ ದೈತ್ಯಸೇನೆಯನ್ನು ಎದುರಿಸಿ ಯುದ್ಧಮಾಡತೊಡಗಿದರು. ಪ್ರದ್ಯುಮ್ನನು ತನ್ನ ಮಾಯೆಯಿಂದ ಒಂದು ಅದ್ಭುತವಾದ ರಥವನ್ನು ನಿರ್ಮಿಸಿ ಸಾವಿರ ಹೆಡೆಯ ನಾಗನನ್ನು ಅದಕ್ಕೆ ಸಾರಥಿಯನ್ನಾಗಿ ಮಾಡಿಕೊಂಡು ಅದರಲ್ಲಿ ಕುಳಿತು ವೈರಿಗಳೊಡನೆ ಭೀಕರವಾಗಿ ಕಾದಹತ್ತಿದನು. ದೈತ್ಯರಾಜನ ಚತುರಂಗ ಸೇನೆಯೊಂದಿಗೆ ಪಾದಚಾರಿಗಳಾಗಿಯೇ ಯುದ್ಧಮಾಡುತ್ತಲಿರುವ ಸಾಂಬಗದರನ್ನು ಕಂಡು ಇದು ವಿಷಮ ಯುದ್ಧವಾಗವುದೆಂದು ತಿಳಿದು ದೇವೇಂದ್ರನು ಅವರಿಗಾಗಿ ತನ್ನ ಸ್ವಂತ ರಥ ಹಾಗೂ ಐರಾವತಗಳನ್ನು ಕೊಟ್ಟು ಕಳಿಸಿದನು. ಆಗ ಗದನು ಇಂದ್ರನ ಸ್ಯಂದನವನ್ನೂ ಸಾಂಬನು ಐರಾವತವನ್ನೂ ಏರಿಕೊಂಡು ರಣಾಂಗಣದಲ್ಲಿ ವೈರಿಭಯಂಕರರಾಗಿ ಸಂಚರಿಸಹತ್ತಿದರು. ಆ ಮೂವರೂ ಯಾದವತರುಣರು ತಮ್ಮ ಹೆಂಡಂದಿರನ್ನು ರಕ್ಷಣೆ ಮಾಡುತ್ತ ವಜ್ರನಾಭನ ಅರಮನೆಯವರೆಗೆ ಹೋಗಿ ಅಲ್ಲಿರುವ ದೈತ್ಯರನ್ನೆಲ್ಲ ಸಂಹರಿಸಿದರು. ಅಂದು ಸಂಜೆಯೊಳಗಾಗಿ ವಜ್ರನಾಭನ ಒಂದು ಮೂರಾಂಶ ಸೈನ್ಯವನ್ನೆಲ್ಲ ಆ ಮೂವರೂ ಕೂಡಿ ಸಂಹಾರ ಮಾಡಿದ್ದರು.

ಮರುದಿನ ಸೂರ್ಯೋದಯದ ಸಮಯಕ್ಕೆ ಸರಿಯಾಗಿ ಶ್ರೀಕೃಷ್ಣನು ಗರುಡಾರೂಢನಾಗಿ ರಣಭೂಮಿಗೆ ಬಂದು ಪಾಂಚಜನ್ಯವನ್ನು ಊದಿದನು. ತನ್ನ ತಂದೆಯ ಶಂಖಧ್ವನಿಯನ್ನು ಕೇಳಿ ಹರ್ಷನಿರ್ಭರನಾದ ಪ್ರದ್ಯುಮ್ನನು ಬಂದು ಭಗವಂತನಿಗೆ ವಂದಿಸಿದರು. ಆಗ ಅವನ ಶೌರ್ಯ ವಿಕ್ರಮಗಳಿಂದ ಸುಪ್ರೀತನಾದ ಶ್ರೀಹರಿಯು ಅವನಿಗೆ ತನ್ನ ಗರುಡ ಹಾಗೂ ಶ್ರೀಚಕ್ರಗಳನ್ನು ಕೊಟ್ಟು ವಜ್ರನಾಭನನ್ನು ವಧೆಗೈಯಲು ಆದೇಶವಿತ್ತನು. ಸಾಂಬಗದರನ್ನೂ "ದೈತ್ಯನಿಗ್ರಹ ಮಾಡಿ ವಿಜಯಶಾಲಿಗಳಾಗಿ ಬನ್ನಿರಿ" ಎಂದು ಆಶೀರ್ವದಿಸಿದನು. ಆಗ ಪ್ರದ್ಯುಮ್ನನು ಎದುರುನಿಂತ ವಜ್ರನಾಭನ ಮೇಲೆ ಕೃಷ್ಣ ಪ್ರದತ್ತವಾದ ಸುದರ್ಶನ ಚಕ್ರವನ್ನು ಇಂದ್ರೋಪೇಂದ್ರರಿಗೆ ವಂದಿಸಿ ಪ್ರಯೋಗಿಸಿದನು. ಉರಿಯುತ್ತಲಿರುವ ಸಾವಿರಾರು ಕೆನ್ನಾಲಿಗೆಗಳಿಂದ ಸಿಡಿಲು ಮಾಲೆಗಳನ್ನೆ ಸಿಡಿಸುತ್ತ ಬರುತ್ತಲಿರುವ ಆ ದೇವಚಕ್ರವು ನಿಮಿಷಾರ್ಧದಲ್ಲಿ ವಜ್ರನಾಭನ ಶಿರಸ್ಸನ್ನು ಕತ್ತರಿಸಿ ಒಗೆಯಿತು. ಆಗ ದೇವತೆಗಳು ಹೂಮಳೆಗರೆದರು. ಗದನಾದರೂ ವಜ್ರನಾಭನ ಸೋದರನಾದ ಸುನಾಭನನ್ನು ಸಂಹರಿಸಿದನು ಸಾಂಬನು ಉಳಿದೆಲ್ಲ ದೈತ್ಯಸೇನಾಪತಿಗಳನ್ನು ವಧಿಸಿ ಸೈನಿಕರನ್ನು ಹೊಡೆದೋಡಿಸಿದನು. ಆಗ ಇಂದ್ರ ಕೃಷ್ಣರು ಅದರ ಸಾಹಸವನ್ನು ಮೆಚ್ಚಿ ಅಲ್ಲಿಗೆ ಬಂದು ಅವರಿಗೆ ಆಶೀರ್ವಾದ ಮಾಡಿದರು.

## ''ಧನ್ಯ ಧನ್ಯೋ ಹರಿಃ ಕೃಷ್ಣಃ''
## ಒಂದು ಒಗಟಿನ ಕಥೆ

ಒಮ್ಮೆ ದುರ್ಯೋಧನನು ಹಸ್ತಿನಾವತಿಯಲ್ಲಿ ಯಜ್ಞ ಮಾಡಿದಾಗ ಅಲ್ಲಿ ಕೂಡಿದ ರಾಜಮಹಾರಾಜರೆಲ್ಲರೂ ಶ್ರೀಕೃಷ್ಣನ ಅಪರಂಪಾರವಾದ ಐಶ್ವರ್ಯ, ಅದ್ಭುತವಾದ ಪಟ್ಟಣ, ಅಲ್ಲಿಯ ಜನರ ವೈಭವ, ಸಮುದ್ರದ ನಡುನೀರಲ್ಲಿ ಹರಿದು ಹೋಗದೆ ತೊಯ್ಯದೆ ನಿಂತ ದ್ವಾರಕೆಯ ಪೌರಸೌಂದರ್ಯ, ಮತ್ತು ದೇವೋತ್ತಮನಾದ ಶ್ರೀಕೃಷ್ಣನ ಶಕ್ತಿಸಾಮರ್ಥ್ಯಗಳ ಪವಾಡಪ್ರಭಾವಗಳನ್ನು ಕೇಳಿ ಆಶ್ಚರ್ಯಚಕಿತರಾಗಿ ಒಮ್ಮೆ ಹೋಗಿ ಕಣ್ಣಾರೆ ನೋಡಿ ಬರಬೇಕೆಂದು ಹೊರಟು ದ್ವಾರಾವತಿಗೆ ಬಂದರು. ಅದರಲ್ಲಿ ಪಂಚಪಾಂಡವರು ದೃಷ್ಟದ್ಯುಮ್ನಾದಿ ಪಾಂಚಾಲ ರಾಜರೂ ದುರ್ಯೋಧನಾದಿ ಕೌರವರೂ ಇದ್ದು ಪಾಂಡ್ಯ, ಚೋಲ, ಕಲಿಂಗ, ಬಾಲ್ಹೀಕ, ದ್ರಾವಿಡ ಮೊದಲಾದ ದೇಶಗಳ ಹದಿನೆಂಟು ಅಕ್ಷೋಹಿಣೀ ಜನ ರಾಜ ಮಹಾರಾಜರ ಪರಿವಾರವೆಲ್ಲವೂ ಆಗಮಿಸಿತ್ತು. ಅವರೆಲ್ಲರೂ ಇನ್ನೂ ರೈವತಕಗಿರಿಯ ಸಮೀಪಕ್ಕೆ ಬರುತ್ತಲಿರುವಾಗಲೇ ಕೃಷ್ಣನು ಸ್ವಯಂ ಅಲ್ಲಿಗೆ ಹೋಗಿ ಅವರೆಲ್ಲರಿಗೂ ಸುಸ್ವಾಗತವನ್ನು ನೀಡಿ ತನ್ನ ಊರಿಗೆ ಕರೆತಂದನು. ಹಾಗು ಅವರೆಲ್ಲರಿಗೂ ಆದರಾತಿಥ್ಯ ಮಾಡಿ ಯಥಾಯೋಗ್ಯವಾದ ಆಸನಗಳಲ್ಲಿ ಕೂಡಿಸಿದ ಬಳಿಕ ತಾನೂ ಒಂದು ದಿವ್ಯವಾದ ರತ್ನಸಿಂಹಾಸನದಲ್ಲಿ ಕುಳಿತುಕೊಂಡನು. ಆಗ ಅಸಂಖ್ಯ ರಾಜಮಹಾರಾಜರಿಂದ ಮಂಡಿತವಾದ ಆ ಮಹಾಸಭೆಯಲ್ಲಿ ಇತಿಹಾಸ ಕಥಾಸಾಹಿತ್ಯಾದಿ ವಿಷಯಗಳ ಬಗೆಗೆ ಊಹಾಪೋಹ ನಡೆಯುತ್ತಲಿತ್ತು.

ಆ ಸಮಯದಲ್ಲಿ ಆಕಾಶದ ತುಂಬ ಕಪ್ಪು ಹೆಮ್ಮೋಡಗಳ ಪಡೆ ಹಬ್ಬಿ ಬಿಟ್ಟು ಹಗಲಾದರೂ ಎಲ್ಲೆಡೆಗೂ ಕತ್ತಲೆ ಕವಿದಂತಾಗಿತ್ತು. ನಡನಡುವೆ ಮಿಂಚಿನ ಗೊಂಚಲು ಮಿಂಚಿ ಬೆಳಕಿನ ಸೆಳಕುಗಳನ್ನು ಚಿಮಕಿಸುತ್ತಿದ್ದವು. ಗುಡುಗು ಮಿಂಚು ಮಳೆ ಮುಗಿಲುಗಳ ಆರ್ಭಟೆಯಿಂದ ಗಗನಾಂಗಣವೆಲ್ಲ ದುಮುದುಮಿಸುತ್ತಲಿರುವಾಗ ಒಮ್ಮಿಂದೊಮ್ಮೆಲೆ ಮೇಘ ಮಂಡಲದಿಂದ ತಂಬೂರಿ ಸಹಿತವಾಗಿ ನಾರದರು ಸಭೆಯ ನಟ್ಟನಡುವೆ ಇಳಿದು ಬಂದು ಬಿಟ್ಟರು. ಆಗ ಅವರು ಸಾವರಿಸಿಕೊಂಡು ಎದ್ದುನಿಂತ ಕೂಡಲೇ ಮುಗಿಲ ಮಂಟಪದಲ್ಲಿಯ ಮೇಘಾಟೋಪವೆಲ್ಲ ಶಾಂತವಾಯಿತು. ಆಗ ಶ್ರೀಕೃಷ್ಣನಿಂದ ಆದರಿಸಿ ಉಪಚರಿಸಿ ಆಸನದ ಮೇಲೆ ಕುಳ್ಳಿರಸಲ್ಪಟ್ಟ ನಾರದರು ರಾಜಮಹಾರಾಜ ಸಾಮಂತ ಚಕ್ರಚೂಡಾಮಣಿಗಳ ಮಹಾಮಂಡಳದ ಆ ಬೃಹತ್ಸಭೆಯ ಮಧ್ಯದಲ್ಲಿ ಎದ್ದುನಿಂತು ಶ್ರೀಕೃಷ್ಣನ ಕಡೆಗೆ ಮುಖಮಾಡಿ ಕೈಮುಗಿದು ''ದೇವ! ದೇವಾಧಿದೇವತೆಗಳಲ್ಲೆಲ್ಲ ಅತ್ಯಂತ ಆಶ್ಚರ್ಯನೂ ಧನ್ಯನೂ ನೀನೇ ಇರುವಿ'' ಎಂದರು. ಅದನ್ನು ಕೇಳಿ ಆ ಜಗದೀಶನು ನಸು ನಕ್ಕು ''ದಕ್ಷಿಣೆಯೊಂದಿಗೆ ಕೂಡಿ'' ಎಂದು ಹೇಳಿದನು.

ಆಗ ನಾರದ ಮುನಿಗಳು ''ಸರಿ ಉತ್ತರ ಬಂದಿತು'' ಎಂದು ಹೇಳಿದವರೇ ಮೇಲೆ ಮುಖಮಾಡಿ ವಾಯುಮಂಡಲದ ಸುದೂರ ನೀಲಾಂಬರದ ಆಚೆಗೆ ನಿರುಕಿಸ ಹತ್ತಿದರು. ಆಗ ಅಲ್ಲಿ ಕುಳಿತ ರಾಜರಾರಿಗೂ ಇವರಿಬ್ಬರ ಸಂಭಾಷಣೆಯ ಅರ್ಥವೇ ಆಗದೆ ಅವರು ನಾರದರನ್ನು ಕುರಿತು ''ಋಷಿ ಪುಂಗವರೇ! ಆಶ್ಚರ್ಯ ಧನ್ಯ ಎಂದು ಎರಡು ಶಬ್ದ ಹೇಳಿದಿರಿ. ಅದಕ್ಕೆ ಕೃಷ್ಣನು ದಕ್ಷಿಣೆಯೊಂದಿಗೆ ಎಂದು ಉತ್ತರ ಹೇಳಿದನು. ನೀವು ''ನನ್ನ ಶಂಕೆಗೆ ಸಮಾದಾನ ಬಂದಿತು'' ಎಂದು ಹೇಳಿದಿರಿ. ಇದೇನು ನಿಮ್ಮ ಗೂಢ ಸಂಕೇತ? ಇದೆಂಥ ಗುಹ್ಯ ಭಾಷಣ ಅಥವಾ ಸಾಂಕೇತಿಕ ಸಂವಾದ? ಎಂದು ಕೇಳಿದರು.

ಆಗ ನಾರದರು ತಿರುಗಿ ಆಸನಾಸೀನರಾಗಿ ಹೇಳಹತ್ತಿದರು. ''ಭೂಪಾಲ ಕುಲಲಾಮರೇ! ನಾನೀಗ ನಿಮಗೆ ಒಂದು ಕೌತುಕದ ಘಟನೆಯೊಂದನ್ನು ಹೇಳುತ್ತೇನೆ ಕೇಳಿರಿ. ನಾನು ಒಂದು ದಿನ ಗಂಗಾ ನದಿಯ ಸ್ನಾನಕ್ಕೆ ಹೋದಾಗ ಪ್ರಾತಃಕಾಲದಲ್ಲಿ ಅಲ್ಲಿ ಗಂಗಾ ತರಂಗದಲ್ಲಿ ಒಂದು ಅದ್ಭುತ ಆಮೆಯನ್ನು ಕಂಡೆನು. ಅದರ ದೇಹವು ಗಿರಿಶಿಖರ ದಂತಿತ್ತು. ಅದರ ಹರವು ಮೂರು ಮೈಲು ಅಗಲವಿದ್ದು ಉದ್ದಳತೆ ಆರು ಮೈಲು ಇತ್ತು. ಅದರ ಮೈಗೆ ಹತ್ತಿದಂತಿದ್ದ ನಾಕೂ ಕಾಲುಗಳೂ ಕೆಸರಿನಲ್ಲಿ ಸಿಗಬಿದ್ದಿದ್ದವು. ನನ್ನ ತಂಬೂರೆಯಂತಿರುವ ಆನೆಯ ಚರ್ಮದಂತೆ ಕಾಣುವ ಆ ಆಮೆಯನ್ನು ನೋಡಿ ಚಕಿತನಾಗಿ ನಾನು ಅದನ್ನು ಮುಟ್ಟಿ ''ನೀನು ಅತ್ಯಂತ ಆಶ್ಚರ್ಯಕಾರಕ ಮತ್ತು ಧನ್ಯನೂ'' ಇರುವಿ ಎಂದು ಹೇಳಿದೆ. ಅದಕ್ಕೆ ಆ ಕೂರ್ಮವು ''ನನ್ನದೇನು ಅಂಥ ಆಶ್ಚರ್ಯ! ನನ್ನನ್ನೂ ನನ್ನಂಥ ಲಕ್ಷಾವಧಿ ಜಲಚರ ಪ್ರಾಣಿಗಳನ್ನೂ ಸಲೀಲವಾಗಿ ಹೊತ್ತಿರುವ ಈ ಗಂಗಾಮಾತೆಯೇ ಧನ್ಯಳೂ ಆಶ್ಚರ್ಯಳೂ ಇರುವಳು'' ಎಂದು ಹೇಳಿತು. ಆಗ ನಾನು ಗಂಗೆಯ ಹತ್ತಿರ ಹೋಗಿ ''ಮೀನ ಮಕರ ಮೊದಲಾದ ಮಹಾಸತ್ವಗಳಿಗೆಲ್ಲ ಆಶ್ರಯಸ್ಥಾನಳಾದ ತಾಯಿ! ನೀನೇ ಧನ್ಯಳು ಮತ್ತು ಆಶ್ಚರ್ಯಳೂ ಇರುವಿ'' ಎಂದು ಹೇಳಿದೆ. ಆಗ ಗಂಗೆಯು ''ನಾನು ಆಶ್ಚರ್ಯಳೂ ಅಲ್ಲ. ಧನ್ಯಳೂ ಅಲ್ಲ. ನನಗಿಂತ ನನ್ನಂಥ ಸಾವಿರಾರು ನದಿಗಳ ಸಂಗಮಸ್ಥಾನವಾದ ಸಮುದ್ರವೇ ಆಶ್ಚರ್ಯ ಹಾಗೂ ಧನ್ಯ'' ಎಂದು ಉತ್ತರಿಸಿದಳು. ಸಮುದ್ರವನ್ನು ಹೋಗಿ ಕೇಳಿದರೆ ಅದು ''ನಾನು ಯಾರ ಮೇಲೆ ಇರುವೆನೋ ಆ ಪೃಥ್ವೀದೇವಿಯೇ ನನಗಿಂತ ಧನ್ಯ'' ಎಂದಿತು. ಪೃಥ್ವಿಯನ್ನೂ ಹೋಗಿ ಕೇಳಲು ಅವಳಾದರೂ ''ನನ್ನನ್ನು ಧರಿಸಿದಂಥ ಪರ್ವತಗಳು ನನಗಿಂತ ಧನ್ಯ ಆಶ್ಚರ್ಯ'' ಎಂದಳು. ಆಗ ನಾರದರು ಪರ್ವತಗಳನ್ನು ಹೋಗಿ ಕೇಳಲಾಗಿ ಆ ಶೈಲಗಳು 'ನಾವೇನು ಧನ್ಯರೂ ಅಲ್ಲ. ಆಶ್ಚರ್ಯವೂ ಅಲ್ಲ. ಆದರೆ ಇಂಥ ಸಾವಿರಾರು ಗುಡ್ಡ ಗಿಡ ಸಹಿತ ಸರೋವರಾದಿ ಸಹಸ್ರ ವಸ್ತುಗಳನ್ನು ನಿರ್ಮಿಸಿದ ಬ್ರಹ್ಮದೇವರು ಧನ್ಯ ಮತ್ತು ಆಶ್ಚರ್ಯಕರ'' ಎಂದವು.

ಆಗ ನಾನು ಜಗತ್ತಿನ ಸೃಷ್ಟಿಯನ್ನು ಮಾಡುವ, ಚತುರ್ಮುಖಗಳಿಂದ ಒಪ್ಪುವ ಬ್ರಹ್ಮದೇವರ ಹತ್ತಿರ ಹೋಗಿ ''ಬ್ರಹ್ಮನ್! ಜಗತ್ತಿನಲ್ಲಿ ನೀವೇ ಧನ್ಯ ಹಾಗೂ ಆಶ್ಚರ್ಯ! ಎಂದು ಹೇಳಿದೆ ಆಗ ಪರಮೇಷ್ಠಿಯು 'ನನಗಿಂತಲೂ ನಾನು ಯಾವಾಗಲೂ ಪಾರಾಯಣ ಮಾಡುವ ಚತುರ್ವೇದಗಳು ಎಲ್ಲರಗಿಂತ ಧನ್ಯ ಆಶ್ಚರ್ಯವೆಂದು' ಹೇಳಿದರು. ಆಗ ನಾನು ಕ್ಷತ್ ವೇದಗಳನ್ನೇ ಹೋಗಿ ಕೇಳಲಾಗಿ ''ನಾವು ಧನ್ಯರೂ ಅಲ್ಲ ಆಶ್ಚರ್ಯವೂ ಅಲ್ಲ. ಜಗತ್ತನಲ್ಲಿ ಇರುವ ಆಶ್ಚರ್ಯಗಳಲ್ಲೆಲ್ಲ ಅತ್ಯಂತ ಆಶ್ಚರ್ಯವೆಂದರೆ ಶ್ರೀವಿಷ್ಣುವು. ಅವನೇ ನಮ್ಮೆಲ್ಲ ಯಜ್ಞಮಂತ್ರಗಳ ಗುರಿ, ಗಮ್ಯ, ಅರ್ಥ, ಪ್ರಯೋಜನವಾಗಿದ್ದಾನೆ. ಮತ್ತು ಅಗ್ನಿಯಲ್ಲಿ ಹೋಮದ್ವಾರಾ ಹಾಕಿದ ಪವಿತ್ರವಾದ ಆಜ್ಯವನ್ನು ಸುರರು ತಿನ್ನುವುದೂ ಕೂಡ ಆ ಪುಂಡರೀಕಾಕ್ಷನ ಪರಮ ಪ್ರಸಾದದಿಂದಲೇ. ಆದ್ದರಿಂದ ಅವನೇ ಧನ್ಯ'' ಎಂದು ಹೇಳಿದವು. ಅದನ್ನು ಕೇಳಿ ಆ ವಿಷ್ಣುವೇ ಈ ಕೃಷ್ಣನೆಂದು ತಿಳಿದ ನಾನು ಇದೀಗ ಈ ವಿಷಯವನ್ನು ತಿಳಿದುಕೊಂಡು ಬಿಡಬೇಕೆಂದು ಮೇಘಮಂಡಲದಿಂದ ಒಮ್ಮೆಲೆ ನೆಲಕ್ಕೆ ಧುಮುಕಿ ಕೃಷ್ಣನಿಗೆ ''ನೀನೇ ಧನ್ಯ ಆಶ್ಚರ್ಯ'' ಎಂದೆನು. ಸರ್ವಜ್ಞನಾದ ಅವನು ಅದನ್ನು ಕೇಳಿ ''ದಕ್ಷಿಣೆಯೊಂದಿಗೆ'' ಎಂದನು. ದಕ್ಷಿಣೆ ಎಂದರೆ ಲಕ್ಷ್ಮೀದೇವಿ. ಅವಳ ಸಹಿತವಾಗಿಯೇ ನಾನು ಧನ್ಯನಾಗಿದ್ದೇನೆ ಮತ್ತು ಎಲ್ಲ ಯಜ್ಞಗಳೂ ದಕ್ಷಿಣೆಯಿಲ್ಲದೇ ಸಫಲವಾಗಲಾರವು ಮತ್ತು ಯಜ್ಞ ದಕ್ಷಣೆಗಳಿಗೆ ಆ ಭಗವಂತನೇ ಉದ್ದೇಶವಿದ್ದುದರಿಂದ ಅವನ ಉತ್ತರದಿಂದ ನನಗೆ

ಸಮಾಧಾನವಾಗಿ ಜಗತ್ತಿನಲ್ಲಿ ಧನ್ಯನೂ ಆಶ್ಚರ್ಯನೂ ಇವನೇ ಎಂದು ನಿಶ್ಚಯವೂ ಆದದ್ದರಿಂದ ತೃಪ್ತಿಗೊಂಡು ಹೊರಟಿದ್ದೆ. ನೀವೀಗ ಇದರ ಗೂಢೋದ್ಘಾಟನೆಮಾಡಿ ಸಂವಾದದ ರಹಸ್ಯವನ್ನು ಹೇಳಿರಿ ಎಂದು ಕೇಳಿದ್ದರಿಂದ ತಿಳಿಸಿದ್ದೇನೆ ನಾನಿನ್ನು ಬರುತ್ತೇನೆ'' ಎಂದು ಹೇಳಿ ನಾರದರು ಗಗನಾಂಗಣದ ಘನನೀಲದಲ್ಲಿ ಅದೃಶ್ಯರಾದರು. ಆಗ ರಾಜಮಹಾರಾಜರೆಲ್ಲರೂ ಈ ಅದ್ಭುತವನ್ನು ಕಂಡು ಮುರಾರಿಯ ಮಹಾ ಮಹಿಮೆಯನ್ನು ಮನಗಂಡು ಆ ಕೃಷ್ಣಪುರಿಯ ವೈಭವ ವೈಶಾಲ್ಯ ವೈಶಿಷ್ಟ್ಯಗಳನ್ನು ಕಣ್ಣಾರೆ ನೋಡಿ ವಿಸ್ಮಯಭರಿತರಾಗಿ ತಮ್ಮ ಸ್ಥಾನಗಳಿಗೆ ತೆರಳಿದರು.

## ಅರ್ಜುನ ಗರ್ವಭಂಗ

ಯಜ್ಞಪುರುಷನಾದ ಶ್ರೀಕೃಷ್ಣನು ಒಂದು ದಿನ ಏಕಾಹ ಯಜ್ಞವನ್ನು ಮಾಡಿದನು. ಈ ಸೋಮಯಾಗದಲ್ಲಿ ದೀಕ್ಷಿತನಾಗಿ ಕೃಷ್ಣನು ಕುಳಿತ ಸಂದರ್ಭದಲ್ಲಿ ಒಬ್ಬ ಬ್ರಾಹ್ಮಣನು ಆರ್ತನಾಗಿ ಧಾವಿಸಿ ಬಂದು ''ರಕ್ಷಿಸಿರಿ ರಕ್ಷಿಸಿರಿ'' ಎಂದು ಮೊರೆ ಇಟ್ಟನು. ಆಗ ಅವನಿಗೆ ಸಂರಕ್ಷಣೆಯ ಅಭಯ ಆಶ್ವಾಸನೆಯನ್ನು ನೀಡಿ ಮುರಾರಿಯು ''ಏನು ಭಯ? ಇಷ್ಟೇಕೆ ಗಾಬರಿಯಾಗಿರುವಿರಿ? ನಿಮಗೆ ಬಂದ ಸಂಕಟವೇನು? ನಾನು ಪರಿಹಾರ ಮಾಡುವೆ ಹೇಳಿರಿ'' ಎಂದು ಸಂತೈಸಿ ಕೇಳಿದನು.

ಅದಕ್ಕೆ ಆ ವಿಪ್ರನು ''ಯದುವೀರ! ನನ್ನ ಮಕ್ಕಳನ್ನು ಹುಟ್ಟಿದ ಕೂಡಲೇ ಯಾರೋ ಅಪಹರಿಸಿಗೊಂಡು ವೈಯ್ದುಬಿಡುವರು. ಹೀಗೆ ನನ್ನ ಮೂರು ಮಕ್ಕಳು ಯಾವುದೋ ಪಿಶಾಚಿಯ ಪಾಲಾಗಿವೆ. ಈಗ ನನ್ನ ಹೆಂಡತಿಯು ನಾಲ್ಕನೇ ಮಗುವನ್ನು ಹೆರುವ ಸಮಯ ಬಂದಿದೆ. ಈ ಒಂದು ಮಗುವನ್ನಾದರೂ ಯಾವುದೇ ದೆವ್ವ ಭೂತಗಳು ಅಪಹರಿಸಿ ವೈಯ್ಯ ದಂತೆ ಕಾಪಾಡಿ ಈ ಬಡಬ್ರಾಹ್ಮಣನ ಮನೆತನ ನಿಲ್ಲಿಸಬೇಕು'' ಎಂದು ಬೇಡಿಕೊಂಡನು.

ಅದಕ್ಕೆ ಅರ್ಜುನನು ತಾನೇ ಮುಂದೆ ಬಂದು ''ಕೃಷ್ಣ! ನೀನು ಈಗ ಯಜ್ಞದೀಕ್ಷಿತ ನಾಗಿರುವಿ. ಆದುದರಿಂದ ನಾನೇ ಹೋಗಿ ಈ ಬ್ರಾಹ್ಮಣ ಪುತ್ರನನ್ನು ರಕ್ಷಿಸುತ್ತೇನೆ.'' ಎಂದು ಹೇಳಿದನು. ಅದನ್ನು ಕೇಳಿ ಗೋವಿಂದನು ನಕ್ಕು ''ನೀನು ರಕ್ಷಿಸುವಿಯೋ? ಆಗಲಿ ಹಾಗಾದರೆ'' ಎಂದು ಹೇಳಿ ಬಲರಾಮ ಪ್ರದ್ಯುಮ್ನ ಇಬ್ಬರನ್ನು ಬಿಟ್ಟು ಉಳಿದ ಯಾದವ ಸೇನೆಯನ್ನೂ ಅರ್ಜುನನ ಸಹಾಯಕ್ಕೆ ಕೊಟ್ಟು ಕಳಿಸಿದನು. ಆಗ ಅರ್ಜುನನು ಆ ಬ್ರಾಹ್ಮಣನನ್ನು ಮುಂದೆ ಮಾಡಿಕೊಂಡು ಸೇನಾಪರಿವಾರದೊಂದಿಗೆ ಹೊರಟು ಅವನ ಊರಿಗೆ ಬಂದು ಇಳಿದನು. ಮತ್ತು ಆ ಊರಿನ ಸುತ್ತುಮುತ್ತು ಹೆಚ್ಚಾಗಿ ಆ ವಿಪ್ರನ ಮನೆಯ ಸುತ್ತು ಎಲ್ಲಕಡೆಗೂ ಬಿಗಿಯಾದ ಕಾವಲವಿರಿಸಿದನು.

ಸಂಜೆಯಾದಂತೆ ಕ್ರೂರ ಪಶುಪಕ್ಷಿಗಳ ಅಮಂಗಳ ದನಿ ಕೇಳಿ ಬರಹತ್ತಿತು. ಕಿರಣಗಳ ಕೆನ್ನಾಲಿಗೆಗಳಿಂದ ಜಗದ ಅಂಚಿನಲ್ಲಿ ರಕುತ ಇಳಿಯುತ್ತಿತ್ತು. ಉರಿಯುವ ಉಲ್ಕಾಪಾತಗಳಿಂದ ಭೂಮಂಡಲವೆಲ್ಲ ನಡುಗಹತ್ತಿತ್ತು. ಈ ಎಲ್ಲ ಅಪಶಕುನಗಳನ್ನು ಕಂಡು ಅನಿಷ್ಟ ಸನ್ನಿಹಿತವಾಗಿದೆ ಜಾಗರೂಕರಾಗಿರಿ ಎಂದು ಅರ್ಜುನನು ಯುಯುಧಾನ ಮೊದಲಾದ ವೃಷ್ಣಿ ವೀರರಿಗೆ ತಿಳಿಸಿದ. ಅವರೆಲ್ಲರೂ ಮೈತುಂಬ ಕಣ್ಣು ಮಾಡಿಕೊಂಡು ಅನಾಹುತದ ಆಗಮನವನ್ನು ಕಾಯುತ್ತ ಕುಳಿತರು. ರಾತ್ರಿಯ ಸರಿ ಹನ್ನೆರಡು ಗಂಟೆಗೆ ಹೆದರಿಕೆಯಿಂದ ಹುಚ್ಚನಂತಾಗಿ ಹೌಹಾರಿ ಹೋದ ಆ ಬ್ರಾಹ್ಮಣನು ಓಡಿ ಬಂದು ''ವೀರರೆ, ನನ್ನ ಹೆಂಡತಿ ಹೆರಿಗೆಯ ಕಾಲ ಬಂದಿದೆ. ಮಗು ಜನಿಸಲಿದೆ. ನೀವು ಜಾಗರೂಕರಾಗಿ ಇದ್ದು ಆ ಕೂಸನ್ನು ಯಾರೂ ವೈಯ್ಯದಂತೆ ನೋಡಿಕೊಳ್ಳಿರಿ'' ಎಂದು ಬಿನ್ನವಿಸಿ ಹೊರಟು ಹೋದನು.

ಆಗ ಅರ್ಜುನನು ಆ ಗರ್ಭಾಗಾರದ ಸುತ್ತುಮುತ್ತಲೂ ಬಾಣ ಪೂಗಗಳಿಂದ ಒಂದು ಶರಪಂಜರವನ್ನೆ ಕಟ್ಟಿ ಗಾಳಿ ಬೆಳಕು ಕೂಡ ಒಳಗೆ ಹೋಗದಂತೆ ನಿರ್ಬಂಧಿಸಿ ಧನುಷ್ಪಾಣಿಯಾಗಿ ನಿಂತನು. ಕೂಡಲೇ ''ಹುಟ್ಟಿತು ಹುಟ್ಟಿತು ಮಗು ಹುಟ್ಟಿತು.'' ಎಂಬ ಸಂತೋಷದ ದನಿ ಕೇಳಿ ಬಂದಿತು. ಅದರೊಟ್ಟಿಗೇ 'ಟ್ಯಾಂ ಟ್ಯಾಂ' ಎಂಬ ಕಂದಮ್ಮನ ರೋದನಲಾಲಿಯೂ ಅರ್ಜುನನ ಕಿವಿಗಿ ಬಡೆಯಿತು. ಆಗ ಆ ಪಾಂಡುಕುಮಾರನು ಇದೇ ಗಂಡಾಂತರದ ಸಮಯ ಎಂದು ಇನ್ನೂ ಜಾಗರೂಕನಾಗಿ ಗಾಂಡೀವಧನುಸ್ಸನ್ನು ಠೇಂಕರಿಸಹತ್ತಿದನು.

ಆದರೆ ಅಷ್ಟರಲ್ಲಿ ''ಅಯ್ಯೋ ಘಾತವಾಯಿತು. ಕೂಸು ಹೋಯಿತು. ಹಾ ಮಗನೇ ಯಾವ ಪಾಪಿ ವೈಯ್ಯದನೋ! ಅಕಟಕಟ!'' ಎಂಬ ವಿಲಾಪಧ್ವನಿ ಪ್ರಲಾಪದ ಆಕ್ರೋಶಗಳು ವಾತಾವರಣದಲ್ಲಿ ಅಳುವಿನ ತೆರೆಗಳನ್ನು ಹಬ್ಬಿಸಿದವು.

ಕೂಡಲೇ ಆ ಬ್ರಾಹ್ಮಣನು ಎದೆಎದೆ ಒಡೆದುಕೊಳ್ಳುತ್ತ ಅರ್ಜುನನ ಹತ್ತಿರ ಬಂದು ''ಎಲವೋ ಹೇಡಿ ಪಾರ್ಥ! ಕೃಷ್ಣನನ್ನು ಬಿಡಿಸಿ ನಾನು ರಕ್ಷಿಸುವೆ ಎಂದು ನೀನೇಕೆ ಇಲ್ಲಿಗೆ ಬಂದೆ? ನನ್ನ ಮಗನನ್ನು ಕೊಂದೆ! ಬೆಂಡಿನ ಬಿಲ್ಲಿನಂತಿದ್ದ ಆ ನಿನ್ನ ಗಾಂಡೀವಧನಸ್ಸನ್ನು ಸುಮ್ಮನೇ ಹೊತ್ತು ಏಕೆ ತಿರುಗುವಿ? ಮೂರ್ಖ, ಕೃಷ್ಣನ ಜೊತೆಗೆ ಸ್ಪರ್ಧಿಸ ಹೊರಟು ಇಂದು ಎಂಥ ಪಾಪವನ್ನು ಪದರಿನಲ್ಲಿ ಕಟ್ಟಿಕೊಂಡಿಯಲ್ಲ! 'ವಿಜಯ', ಮೂರು ಲೋಕದ ಗಂಡ ಮುಂತಾದ ಹೆಸರುಗಳೆಲ್ಲ ನಿನಗೆ ವ್ಯರ್ಥವೇ ಸರಿ'' ಎಂದು ಬಾಯಿಗೆ ಬಂದಂತೆ ಬೈಯ್ಯಹತ್ತಿದನು. ತಪ್ಪಿತಸ್ಥನಾದ ಅರ್ಜುನನು ಆ ಬ್ರಾಹ್ಮಣನ ಬೈಗಳನ್ನೆಲ್ಲ ಮೌನವಾಗಿ ಸಹಿಸಿ ನಾಚಿಕೆಯಿಂದ ತಲೆ ತಗ್ಗಿಸಿ ಕೃಷ್ಣನಿದ್ದಲ್ಲಿಗೆ ಬಂದನು. ಅವನ ಬೆನ್ನ ಹಿಂದೆಯೇ ಬಂದ ಬ್ರಾಹ್ಮಣ ಕೃಷ್ಣನ ಎದುರಿಗೆ ಮತ್ತೆ ಅರ್ಜುನನಿಗೆ ಪುಷ್ಪಗಳನ್ನು ಎರಿಸಹತ್ತಿದನು. ''ಬಲರಾಮನಲ್ಲ, ಕೃಷ್ಣನಲ್ಲ, ಪ್ರದ್ಯುಮ್ನನಲ್ಲ, ಅನಿರುದ್ಧನಲ್ಲ. ಅಂದ ಬಳಿಕ ಈ ಷಂಢ ಅರ್ಜುನನನ್ನು ನಾನೇಕೆ ನಂಬಬೇಕಾಗಿತ್ತು! ಕರೆಯದೇ ತಾನಾಗಿ ಬಂದು ಸುಳ್ಳು ಪ್ರತಿಜ್ಞೆ ಮಾಡಿ ಶೂರತನದ ಜಂಭ ಕೊಚ್ಚಿಕೊಂಡ ಈ ಹೇಡಿ ಪಾರ್ಥನಿಗೆ ಧಿಕ್ಕಾರವಿರಲಿ. ಇವನನ್ನು ನಂಬಿ ನಾನು ಕೆಟ್ಟೆ. ಮೂಢನಾದೆ ಮಗನನ್ನು ಕಳೆದುಕೊಂಡೆ'' ಎಂದು ಬಗೆಬಗೆಯಿಂದ ತೆಗಳಿ ಹಳಿದನು.

ಅವನ ಮಾತಿನಿಂದ ಅವಮಾನಿತನಾದ ಅರ್ಜುನನು ದಶದಿಕ್ಕುಗಳಲ್ಲೆಲ್ಲ ತಿರುಗಾಡಿ ಹುಡುಕಾಡಿ ಬಂದನು. ಸ್ವರ್ಗ ಪಾತಾಳಗಳಲ್ಲಿಯೂ ಸಂಶೋಧನೆ ಮಾಡಿದ್ದಾಯಿತು. ಎಲ್ಲಿಯೂ ಆ ಮಗು ಕಣ್ಣಿಗೆ ಬೀಳಲಿಲ್ಲ. ಆಗ ಪ್ರತಿಜ್ಞಾಭಂಗ ಮುಖಭಂಗ ಎರಡೂ ಆದ ಅರ್ಜುನನು ಅಗ್ನಿಪ್ರವೇಶ ಮಾಡುವೆನೆಂದು ಹೇಳಿ ಬೆಂಕಿಯಲ್ಲಿ ಬೀಳಹೊರಟನು. ಆಗ ಕೃಷ್ಣನು ಚಿತೆಯಲ್ಲಿ ಹಾರಹೊರಟ ವಿಜಯನನ್ನು ಪ್ರದ್ಯುಮ್ನನಿಗೆ ಹೇಳಿ ನಿಲ್ಲಿಸಿದನು. ''ಅರ್ಜುನ, ಆ ಬ್ರಾಹ್ಮಣ ಕುಮಾರನನ್ನು ನಾನು ತೋರಿಸುತ್ತೇನೆ. ಇಲ್ಲಿಗೇ ತರಿಸುತ್ತೇನೆ ತುಸು ತಡೆ''ಎಂದು ಹೇಳಿದನು. ಮತ್ತು ಸಾರಥಿಯಾದ ದಾರುಕನಿಗೆ ಶೈಬ್ಯ, ಸುಗ್ರೀವ, ಮೇಘಪುಷ್ಪ, ಬಲಾಹಕ ಎಂಬ ನಾಲ್ಕು ಕುದುರೆಗಳನ್ನು ಹೂಡಿ ತನ್ನ ರಥವನ್ನು ಸಿದ್ಧಗೊಳಿಸಲು ಆದೇಶಗೈದನು. ಆ ರಥದಲ್ಲಿ ಮೊದಲು ಆ ಬ್ರಾಹ್ಮಣನನ್ನು ಕೂಡಿಸಿ ದಾರುಕನನ್ನು ಇಳಿಸಿ ಅರ್ಜುನನಿಗೇ ಕೈಯಲ್ಲಿ ಕುದುರೆಗಳ ಕಡಿವಾಣವನ್ನು ಹಿಡಿದು ರಥ ಹೊಡೆಯಲು ಅಪ್ಪಣೆ ಮಾಡಿದನು. ಕೃಷ್ಣನ ಅಪ್ಪಣೆಯಂತೆ ಅರ್ಜುನನು ಸಾರಥಿಯಾಗಿ ಉತ್ತರದಿಕ್ಕಿಗೆ ರಥವನ್ನು ಓಡಿಸಿದನು. ದಾರಿಯಲ್ಲಿ ಅನೇಕ ನದ-ನದೀ ಗಿರಿ-ದರೀ ಶೈಲ-ಸಾನು ಸಪ್ತದ್ವೀಪ ಸಪ್ತಸಿಂಧು ಸಪ್ತ ಕುಲಾಚಲಗಳನ್ನೆಲ್ಲ ವಾಯುವೇಗದಿಂದ ಉಲ್ಲಂಘಿಸಿ ಲೋಕಾಲೋಕ ಪರ್ವತವನ್ನೂ ದಾಟಿ ತಮೋಲೋಕಕ್ಕೆ ಬಂದರು.

ಅಲ್ಲಿಂದ ಮುಂದೆ ಕತ್ತಲೆಯು ಕೆಸರಿನಂತೆ ರಥದ ಗಾಲಿಗಳಿಗೆ ಹತ್ತಿ ಕುದುರೆಗಳ ಕಾಲಿಗೆ ಮೆತ್ತ ಹತ್ತಿದ್ದರಿಂದ ಆ ಅಶ್ವಗಳಿಗೆ ಅಲ್ಲಿ ಮುಂದುವರಿಯುವದೇ ಕಠಿಣವೆನಿಸ ಹತ್ತಿತು. ಕೈಚಾಚಿದರೆ ಕತ್ತಲೆ ಹತ್ತುತ್ತಿತ್ತು. ಹೇಗೋ ಒದ್ದಾಡುತ್ತ ಮುನ್ನಡೆಯು ವಷ್ಪರಲ್ಲಿ ಕತ್ತಲೆಯ ಮೊತ್ತವು ಗುಡ್ಡವಾಗಿ ಅಡ್ಡನಿಂತಿತು. ಆಗ ಕುದುರೆಗಳು ಮುಂದೆ ಹೆಜ್ಜೆಯಿಡಲಾರದೆ ನಿಂತು ಬಿಟ್ಟವು. ಆಗ ಕೃಷ್ಣನು ತನ್ನ ಸುದರ್ಶನಚಕ್ರದಿಂದ ಕತ್ತಲೆಯನ್ನೆಲ್ಲ ಕತ್ತರಿಸಿ ತರಿದೊಗೆದು ಆಕಾಶದಲ್ಲಿ ಸುಗಮವಾದ ದಾರಿತೋರಿದನು. ಆ ಬೆಳಕಿನಲ್ಲಿ ರಥವು ಮುಂದುವರೆಯಿತು. ಆ ಬೆಳಕಿನ ಮೋರೆಯನ್ನು ಕಂಡಬಳಿಕ ಕತ್ತಲೆಯ ಕುತ್ತದಿಂದ ಪಾರಾದಂತೆನಿಸಿ ಆ ಬ್ರಾಹ್ಮಣ ಮತ್ತು ಅರ್ಜುನರಿಗೆ "ಅಬ್ಬ! ಅಂತೂ ಬದುಕಿ ಬಂದೆವು" ಎನ್ನಿಸಿತು.

ಅಲ್ಲಿ ಮುಂದೆ ಆಕಾಶದಲ್ಲಿ ಸರ್ವಲೋಕವನ್ನು ವ್ಯಾಪಿಸಿ ನಿಂತುಕೊಂಡ ಪ್ರಕಾಶ ಪುಂಜರೂಪವಾದ ತೇಜೋಮೂರ್ತಿಯೊಂದು ಕಾಣಿಸಿತು. ಆ ಜ್ಯೋತಿರ್ಮಯ ಪುರುಷನನ್ನು ವಿಪ್ರಾರ್ಜುನರು ನಿಬ್ಬೆರಗಿನಿಂದ ನಿರುಕಿಸುತ್ತಲಿರುವಾಗಲೇ ಕೃಷ್ಣನು ಆ ತೇಜೋನಿಧಿಯ ಜ್ಯೋತಿಃಶ್ಶರೀರದಲ್ಲಿ ಪ್ರವೇಶಿಸಿದನು. ಮತ್ತು ಒಂದೆರಡು ಗಳಿಗೆಗಳಲ್ಲಿಯೇ ಬ್ರಾಹ್ಮಣನ ಆ ನಾಲ್ಕೂ ಮಕ್ಕಳನ್ನು ಕರೆದುಕೊಂಡು ಕೃಷ್ಣನು ಆ ತೇಜಃಪುಂಜ ಪ್ರಕಾಶ ಪುರುಷನ ದೀಪ್ತಶರೀರದಿಂದ ಹೊರಬಿದ್ದನು. ಮತ್ತು ಆ ಬ್ರಾಹ್ಮಣನ ಹಿಂದೆ ಸತ್ತ ಮೂರು ಮಕ್ಕಳನ್ನು ಮತ್ತು ಮುನ್ನ ದಿನವೇ ಅರ್ಜುನನು ರಕ್ಷಿಸಲಿಕ್ಕೆ ಹೋದಾಗ ಸತ್ತ ಸಣ್ಣ ಕೂಸನ್ನೂ ಕೂಡ ತಂದು ರಥದಲ್ಲಿ ಕುಳಿತ ವಿಪ್ರನಿಗೆ ಇತ್ತನು. ಅದನ್ನು ಕಂಡು ಬ್ರಾಹ್ಮಣನಿಗೆ ಹೃದಯದಲ್ಲಿ ಆಶ್ಚರ್ಯ ಆನಂದ ಉಲ್ಲಾಸ, ಆದರ, ಭಕ್ತಿ, ಕರುಣೆ, ಮಮತೆ, ವಾತ್ಸಲ್ಯ ಮುಂತಾದ ಭಾವಗಳ ತುಮುಲ ನಡೆದು ಕಣ್ಣಿನಲ್ಲಿ ನೀರು ತುಳುಕಿತು. ಅರ್ಜುನನು ವಿಸ್ಮಯಸ್ತಿಮಿತನಾಗಿ ಆಶ್ಚರ್ಯ ಮೂಢನಾಗಿ ಕೃಷ್ಣನನ್ನು ನೋಡುತ್ತ ಕುಳಿತನು. ಮುಂದೆ ಅವರೆಲ್ಲರೂ ಅದೇ ರಥದಿಂದ ಮಧ್ಯಾಹ್ನದ ಹೊತ್ತಿಗೆ ದ್ವಾರಕೆಗೆ ಮರಳಿ ಬಂದರು. ಅಲ್ಲಿ ಕೃಷ್ಣನು ತನ್ನ ಮನೆಯಲ್ಲಿ ಆ ಬ್ರಾಹ್ಮಣನಿಗೂ ಅವನ ಸತ್ತು ಹುಟ್ಟಿದ ನಾಲ್ಕು ಮಕ್ಕಳಿಗೂ ಮೃಷ್ಟಾನ್ನ ಭೋಜನ ಮಾಡಿಸಿ ಬೇಕಾದಷ್ಟು ಧನ, ಸಾಕಾಗುವಷ್ಟು ವಸ್ತ್ರಾಭರಣಾದಿಗಳನ್ನೆಲ್ಲ ಕೊಟ್ಟು ಆದರದಿಂದ ಉಪಚರಿಸಿ ಅವರ ಊರಿಗೆ ಕಳಿಸಿದನು.

## ಉಷಾಸ್ವಯಂವರ

ಶಿವಭಕ್ತ ಬಾಣಾಸುರನಿಗೆ ಉಷಾ ಎಂಬ ಒಬ್ಬ ಮಗಳಿದ್ದಳು. ವೈಶಾಖ ಶುದ್ಧ ದ್ವಾದಶಿಯದಿನ ಅರಮನೆಯ ಮೇಲುಪ್ಪರಿಗೆಯ ಚಂದ್ರಶಾಲೆಯಲ್ಲಿ ಗೆಳತಿಯರ ಗುಂಪಿನಲ್ಲಿ ಆ ಉಷಾಕುಮಾರಿಯು ಮಲಗಿ ನಿದ್ರಿಸುತ್ತಲಿರುವಾಗ ಒಮ್ಮೆಲೆ ಅವಳ ಕನಸಿನಲ್ಲಿ ರಮಣೀಯಾಕೃತಿಯ ಸುಂದರ ಸುಕುಮಾರನಾದ ತರುಣ ರಾಜಕುಮಾರನೊಬ್ಬನು ಬಂದು ರೋದಿಸುತ್ತಲಿರುವ ಅವಳನ್ನು ರಂಬಿಸಿ ಚುಂಬಿಸಿ ರಮಿಸಿದನು. ಕುಲೀನತೆಯ ಸಂಸ್ಕಾರ ಬಲದಿಂದ ಸ್ವಪ್ನದಲ್ಲಿಯೂ ಅವಳು ರತಿ ಕೇಲಿಗೆ ಪ್ರತಿಷೇಧ ಮಾಡಿದರೂ ಆ ಕನಸಿನ ಕಾಂತನು ಕೇಳದೇ ದೇವಿಯ ವಚನದಂತೆ ಅವಳನ್ನು ಹಿಡಿದು ಸಂತೈಸಿ ಆ ವಿರೋಧಿನೀವನಿತೆಯೊಂದಿಗೇ ಕಾಮಕಲಾ ಕೌಶಲ್ಯದಿಂದ ವಿಹಾರಗೈಯ್ದನು. ಅವನ ರಾಗರತಿಯ ವಿಲಾಸರಭಸಕ್ಕೆ ಸಂಭ್ರಾಂತಳಾಗಿ ಎಚ್ಚರವಾದ ಉಷೆಯು ರಾಗರಂಜಿತವಾದ ತನ್ನ ಶರೀರವನ್ನು ಕಂಡು ನಿಜವಾಗಿಯೂ ನಾನು ಭುಕ್ತಮುಕ್ತಳಾಗಿದ್ದೇನೆ ಎಂದು ತಿಳಿದು ಅಳಹತ್ತಿದಳು. ಅವಳ ರೋದನ ಧ್ವನಿಗೆ ಎಚ್ಚರಾದ ಸಖಿ ಚಿತ್ರಲೇಖೆಯು ಗಾಬರಿಯಾಗಿ ಏನಾಯಿತು? ಎಂದು ಕೇಳಿದಳು.

ಆಗ ಉಷೆಯು ಸ್ವಪ್ನ ಸಮಾಚಾರವನ್ನೆಲ್ಲ ಅವಳಿಗೆ ತಿಳಿಸಿ 'ಸಖಿ, ನನ್ನ ಕನ್ಯಾವ್ರತವೆಲ್ಲ ಈ ಸ್ವಪ್ನದಿಂದ ನಷ್ಟವಾಯಿತು. ನಾನಿನ್ನು ತಾಯಿತಂದೆಗಳಿಗೆ ಹೇಗೆ ಮುಖ ತೋರಿಸಲಿ? ನನ್ನಿಂದ ನಮ್ಮ ವಂಶಕ್ಕೆ ಕಲಂಕ ಬರುವಂತಾಯಿತು. ನಾನು ಎಚ್ಚರಿದ್ದಾಗ ಹೇಳಿ ಕಳಿಸಿದಂತೆ ಇವನಾರೋ ಅಪರಿಚಿತ ಪುರುಷನು ಬಂದು ಇಂದಿನ ವರೆಗೆ ಪವಿತ್ರಳಾಗಿದ್ದ ನನ್ನನ್ನು ಕನಸಿನಲ್ಲಿ ಕೆಡಿಸಿ ಜಾಗೃತಾವಸ್ಥೆಯಲ್ಲಿಯೂ ಅಪವಿತ್ರಳಾಗುವಂತೆ ಮಾಡಿದ್ದಾನೆ. ಕುಲಾಂಗಾರಳಾದ ನಾನಿನ್ನು ಬದುಕುವದಕ್ಕಿಂತ ಸಾಯುವದೇ ಮೇಲು' ಎಂದು ದುಃಖಿಸಿ ಅಳಹತ್ತಿದಳು.

ಆಗ ಚಿತ್ರಲೇಖೆಯು ಅವಳನ್ನು ಸಂತೈಸುತ್ತ ''ಸಖೀ ಉಷೆ! ಅಂದು ನೀನು ನದೀ ಸ್ನಾನಕ್ಕೆ ಹೋದಾಗ ಪಾರ್ವತಿದೇವಿಯು ಹೇಳಿದ ಮಾತನ್ನು ನೆನಿಸಿಕೋ. ವೈಶಾಖ ಶುಕ್ಲ ದ್ವಾದಶಿ ದಿನ ನಿನ್ನ ಕನಸಿನಲ್ಲಿ ಬಂದವನೇ ನಿನ್ನ ಕೈ ಹಿಡಿಯುವ ಕಾಂತ ಎಂದು ಜಗದಂಬೆ ಹೇಳಿದ್ದಳು. ಇಂದು ವೈಶಾಖ ಶುದ್ಧ ದ್ವಾದಶಿಯಲ್ಲವೇ? ಆದುದರಿಂದ ನಿನ್ನ ಕನಸಿನಲ್ಲಿ ಮೈದೋರಿದ ಸುಕುಮಾರನು ಮಹಾದೇವಿಯಿಂದ ಪ್ರೇಷಿತನಾದ ನಿನ್ನ ಮನದನ್ನನೇ ಸರಿ. ಸರ್ವಮಂಗಲೆಯ ಆಜ್ಞೆಯಂತೆ ನಿನ್ನ ನಿರ್ದಿಷ್ಟ ಕ್ಲಪ್ತಕಾಂತನೊಂದಿಗೇ ಆದ ಈ ಸ್ವಪ್ನ ಸಮಾಗಮಕ್ಕಾಗಿ ನೀನೇಕೆ ಇಷ್ಟು ಪರಿತಾಪ ಬಡುವಿ? ಎಂದು ಕೇಳಿದಳು.

ಚಿತ್ರಲೇಖೆಯ ಮಾತಿನಿಂದ ಉಷೆಗೆ ಪಾರ್ವತಿಯ ವರ ವಚನಗಳು ನೆನಪಾಗಿ 'ಜೀವಗೆಳತಿ! ನೀನಂದಂತೆ ಅವನು ನನ್ನ ದೇವೀದತ್ತನಾದ ಪ್ರಾಣಕಾಂತನೇ ಸರಿ. ಆದರೆ ನಾನು ಕನಸಿನಲ್ಲಿ ಅವನ ಕುಲಗೋತ್ರ ನಾಮಧಾಮ ಒಂದೂ ಕೇಳಲಿಲ್ಲ. ಈಗ ಅವನನ್ನು ಗೊತ್ತು ಹಚ್ಚುವುದು ಹೇಗೆ? ಆದಕ್ಕಾಗಿ ಏನಾದರೂ ಉಪಾಯಮಾಡು'' ಎಂದಳು.

ಅದಕ್ಕೆ ಚಿತ್ರಲೇಖೆ ನಸುನಕ್ಕು ''ಜೀವ ಸಖಿ, ಕುಲನಾಮ ಗೊತ್ತಿಲ್ಲದ ನಿನ್ನ ಚೋರ ಜಾರ ರತಿರಮಣನನ್ನು ಗೊತ್ತು ಹಚ್ಚುವ ಬಗೆ ಹೇಗೆ? ಆದರೆ ನಿನ್ನ ಆ ಸ್ವಪ್ನಸುಂದರ ಕಾಂತನನ್ನು ಗೊತ್ತು ಹಚ್ಚಲಿಕ್ಕೆ ಮೊದಲು ಸಂಧಿ ವಿಗ್ರಹಗಳಲ್ಲಿ ನಿಪುಣಳಾದ ನಿನ್ನ ಗೆಳತಿ ಚಿತ್ರರೇಖಾ ಎಂಬ ಅಪ್ಸರೆಯನ್ನು ಬರಮಾಡಿಕೋ. ಅವಳಿಗೆ ತ್ರಿಲೋಕದಲ್ಲಿ ಅಪರಿಚಿತರಾರೂ ಇಲ್ಲ'' ಎಂದು ಹೇಳಿದಳು. ಅದನ್ನು ಕೇಳಿ ಉಲ್ಲಸಿತಳಾದ ಉಷೆಯು ಆ ಅಪ್ಸರಸಮೈತ್ರಿಣಿಯನ್ನು ಬರಮಾಡಿಕೊಂಡು ''ನನ್ನ ಕನಸಿನ ಕಾಂತನನ್ನು ಶೋಧಮಾಡಿ ನೀನು ಕರೆತರದಿದ್ದರೆ ನಾನು ಬದುಕಲಾರೆ'' ಎಂದು ಹೇಳಿದಳು.

ಅದಕ್ಕೆ ಆ ಅಪ್ಸರೆಯು ಸಾಂತ್ವನದ ದನಿಯಲ್ಲಿ ''ಪ್ರಾಣಸಖಿ, ದೇಶ ವಂಶ ಹೆಸರು ರೂಪ ಗುಣ ಯಾವುದೂ ಗೊತ್ತಿಲ್ಲದ ವರನನ್ನು ನಾನು ಹೇಗೆ ತಂದು ಕೊಡಬಲ್ಲೆ? ಆದರೂ ನಾವೀಗ ಒಂದು ಹಂಚಿಕೆ ಮಾಡೋಣ. ನಾನು ನಿನ್ನೆದುರು ಇಂದು ಜಗತ್ತಿನಲ್ಲಿರುವ ದೇವ, ಗಂಧರ್ವ, ಮಾನ, ದಾನವ, ಯಕ್ಷ, ರಕ್ಷ ಮೊದಲಾದ ವಿವಿಧ ಜಾತಿಯ ಶೂರ ಧೀರ, ಶೀಲ ಸುಂದರ ಗುಣ ಬಂಧುರ, ರೂಪರಸಿಕ, ತರುಣರೆಲ್ಲರ ಚಿತ್ರಗಳನ್ನು ಈಗಲೇ ಬರೆದು ತೋರಿಸುವೆನು ಅವುಗಳನ್ನು ನೋಡಿ ನೀನು ನಿನ್ನ ಸ್ವಪ್ನ ಪ್ರಾಪ್ತ ಪ್ರಿಯಕರನನ್ನು ಗುರುತಿಸು'' ಎಂದು ಹೇಳಿ

ಚಿತ್ರರೇಖೆಯು ಮಾನವ ಜಾತಿಯ ಕುಲ ಜ್ಯೇಷ್ಠ ಶೌರ್ಯ ಶ್ರೇಷ್ಠ ಸೌಂದರ್ಯ ಪ್ರೇಷ್ಠರಾದ ವಿಶಿಷ್ಟ ತರುಣರ ತೂಲಿಕಾ ಚಿತ್ರಗಳನ್ನು ತೋರಹತ್ತಿದಳು. ಕ್ರಮೇಣ ಯದು ಯುವಕರ ಚಿತ್ರಾವಲಿಗಳನ್ನು ತೋರಿಸುತ್ತ ಅನಿರುದ್ಧನ ಚಿತ್ರದ ಕಡೆ ಬೆರಳು ಮಾಡಿದಾಗ

ಉಷೆಯು ಒಮ್ಮಿಂದೊಮ್ಮೆಲೇ! "ಹಾ! ಇವನೇ ನೋಡು, ನನ್ನನ್ನು ಕನಸಿನಲ್ಲಿ ಕೆಡಿಸಿ ಕಳುವಿನಿಂದ ಕಾಮಕೇಲಿಯನ್ನಾಡಿದ ಚಾರುಚೋರನಾದ ಕನಸಿನ ಕಾಂತ. ಚಿತ್ರರೇಖೆ, ನಿಜವಾಗಿ ಇವನ ಕುಲ ಶೀಲ ಹೆಸರುಗಳೇನು ಹೇಳು" ಎಂದು ತವಕದಿಂದ ಕೇಳಿದಳು.

ಆಗ ಚಿತ್ರರೇಖೆಯು ಗೆಳತಿ ಉಷೆಯನ್ನು ಮೊದಲು ಆನಂದದಿಂದ ಆಲಿಂಗಿಸಿ ಗೊಂಡು "ಸಖಿ, ಧನ್ಯಳಿರುವಿ. ಈ ನಿನ್ನ ಚಾರಚೋರನಾದ ಪತಿ ವೀರವರೇಣ್ಯನಿರುವನು. ಅಷ್ಟೇ ಅಲ್ಲದೇ ಇವನು ಸಾಕ್ಷಾತ್ ಶ್ರೀಕೃಷ್ಣ ಪರಮಾತ್ಮನ ಮೊಮ್ಮಗನು. ಅರ್ಥಾತ್ ರುಕ್ಮಿಣೀದೇವಿಯ ಮಗ ಪ್ರದ್ಯುಮ್ನನ ಮಗನು. ಇವನು ಸಾಮಾನ್ಯನಲ್ಲ." ಎಂದು ನುಡಿದಳು.

ಅದನ್ನು ಕೇಳಿ ತನ್ನ ಮನೋವಲ್ಲಭನ ನಾಮಧಾಮ, ಕುಲ, ಶೀಲ, ಗುಣ ಗಣಗಳನ್ನೆಲ್ಲ ತಿಳಿದು ಉಷೆಯ ಮನಸ್ಸಿಗೆ ಪೂರ್ಣ ಸಮಾಧಾನವಾಯಿತು. ಅವಳು ಚಿತ್ರರೇಖೆಗೆ 'ಸಖಿ' ಇಷ್ಟಾದರೂ ನಿನ್ನ ಕಾರ್ಯ ಮುಗಿಯಲಿಲ್ಲ. ನನ್ನ ಚಿತ್ತಾಪಹಾರಕನಾದ ಆ ಚೆಲುವಿನ ಚಂದ್ರಮನನ್ನು ಈ ಚಕೋರಿಯ ಬಳಿಗೆ ಬರುವಂತೆ ಮಾಡುವದು ನಿನ್ನನ್ನೇ ಕೂಡಿದೆ. ಯೋಗಿನಿಯೂ ಕಾಮರೂಪಿಣಿಯೂ ಆದ ನೀನು ನೆಲದಲ್ಲಿ ನಡೆಯಬಲ್ಲೆ, ನಭದಲ್ಲಿ ಹಾರಬಲ್ಲೆ, ನೀರಲ್ಲಿ ಈಸಬಲ್ಲೆ. ನಿನ್ನ ಹೊರತು ನನಗೆ ಈ ನಮ್ಮ ಕಾರ್ಯಗಳಲ್ಲಿ ಬೇರೆ ಸಹಾಯಕರಿಲ್ಲ. ಬೇಗನೇ ನನ್ನ ಹೃದಯವನ್ನು ಕದ್ದು ಮನವನ್ನು ಮುಗ್ಧ ಮಾಡಿಹೋದ ಆ ನಲ್ಲನನ್ನು ಕರೆಕೊಂಡು ಬಾ" ಎಂದು ಹೇಳಿದಳು.

ಚತುರಮತಿಯಾದ ಚಿತ್ರಲೇಖೆಯು ದ್ವಾರಕೆಯಲ್ಲಿರುವ ಅನಿರುದ್ಧನ ಮನೆಗೆ ಆಕಾಶಮಾರ್ಗದಿಂದಲೇ ಸಾರಿದಳು. ಬಂಗಾರಗಂಬ, ವೈಡೂರ್ಯ ತೋರಣ, ಮುತ್ತಿನಮಾಲೆ, ಇಂದ್ರನೀಲ ಕುಟ್ಟಿಮ, ಮಣಿಪ್ರವಾಳಮಯ ಮಂಡಪ, ಸ್ವರ್ಣಪೂರ್ಣ ಸಲಿಲಕಲಶಗಳಿಂದ ಪರಿಶೋಭಿತವಾದ ಆ ದಿವ್ಯಭವ್ಯ ಪ್ರಾಸಾದದಲ್ಲಿ ಪ್ರದ್ಯುಮ್ನ, ಪುತ್ರನಾದ ಅನಿರುದ್ಧನನ್ನು ಕಂಡು ಅವನಿಗೆ ಬಾಣಪುತ್ರಿ ಉಷಾಕನ್ನಿಕೆಯ ಸ್ವಪ್ನ ಸಮಾಗಮದ ಸಮಾಚಾರವನ್ನೆಲ್ಲ ತಿಳಿಸಿ "ಮದನಕುಮಾರ, ನೀನು ಕನಸಿಲ್ಲಿ ಬಂದು ಬಲವಂತದಿಂದ ಅವಳನ್ನು ಕಾಮಕೇಲಿಗೆ ಎಳೆದಂದಿನಿಂದ ಅವಳು ತ್ವದ್ಗತ ಪ್ರಾಣಳಾಗಿದ್ದಾಳೆ. ನಿನ್ನನ್ನೆ ಪತಿಯೆಂದು ನಂಬಿ ನಿನ್ನವಿರಹ ವೇದನೆಯನ್ನು ತಾಳಲಾರದೆ ಗೋಳಿಟ್ಟು ವಿಲಪಿಸುತ್ತಿದ್ದಾಳೆ. ಹಗಲಿರುಳು ನಿದ್ರಾಹಾರ ಸ್ನಾನ ಪಾನಾದಿಗಳನ್ನೆಲ್ಲ ಬಿಟ್ಟು ಸದಾ ಸರ್ವದಾ ನಿನ್ನನ್ನೆ ನೆನೆಯುತ್ತ ನಿಟ್ಟುಸುರಿಡುತ್ತ ಕಾಮಾಗ್ನಿಯಿಂದ ಬಳಲಿ ಬೆಂಡಾಗಿ ಬೆಂದು ಹೋಗಿದ್ದಾಳೆ. ನೀನು ಬಂದು ಅವಳಿಗೆ ದರ್ಶನವನ್ನೀಯದೆ ಹೋದರೆ ಅವಳು ಬದುಕುವಂತಿಲ್ಲ. ಮರಣವನ್ನೆ ಶರಣುಹೋಗಬೇಕಾಗುವದು" ಎಂದು ಹೇಳಿದಳು.

ಆ ಮನ್ಮಥನಂದನನಾದ ಅನಿರುದ್ಧನು ತನ್ನ ಪ್ರಾಣ ಪ್ರೇಯಸಿಯಾದ ಬಾಣಕುಮಾರಿಯು ತನಗಾಗಿ ತನ್ನಂತೆಯೇ ಪರಿತಪಿಸುತ್ತಲಿರುವಳೆಂಬ ಸಮಾಚಾರವನ್ನೂ ಮತ್ತು ಅವಳ ಕುಲಶೀಲ ವಿದ್ಯಾವಿನಯ ಸೌಜನ್ಯ ಸೌಂದರ್ಯ ಮುಂತಾದ ಸಲ್ಲಕ್ಷಣ ಗಳನ್ನೂ ಚಿತ್ರಲೇಖೆಯ ಬಾಯಿಂದ ಕೇಳಿ ತಿಳಿದುಕೊಂಡು ಅವಳ ಪ್ರಿಯಸಂಗಮಕ್ಕಾಗಿ ಕಾತರಿಸಿ ಉತ್ಕಂಠಿತನಾಗಿ ಉತ್ಸಾಹಿತನಾಗಿ ತವಕದಿಂದ "ಚಿತ್ರಲೇಖೆ ನೀನು ಸರ್ವಸಮರ್ಥಳಾದ ಗಂಧರ್ವ ಕನ್ಯೆ, ನನ್ನ ಮೇಲೆ ಅನುಗ್ರಹ ಮಾಡಬೇಕೆಂದು ಇಚ್ಛೆ ಇದ್ದರೆ ಈ ಕ್ಷಣದಲ್ಲಿ ನನ್ನನ್ನು ನನ್ನ ಪ್ರೇಯಸಿ ಇದ್ದಲ್ಲಿ ಕರೆದೊಯ್ದು ಬಿಡು" ಎಂದು ಕೈಮುಗಿದು ಕೇಳಿಕೊಂಡನು.

ಆಗ ಆ ದೇವಾಂಗನೆಯು ನನ್ನ ಶ್ರಮ ಸಾರ್ಥಕವಾಯಿತೆಂದು ಮನದಲ್ಲಿಯೇ ಅಂದು ಕೊಂಡು ಅನಿರುದ್ಧನಿಗೆ ''ಹಾಗಿದ್ದರೆ ಸಿದ್ಧನಾಗು'' ಎಂದು ಹೇಳಿದಳು. 'ಇದೋ ಸಿದ್ಧ ' ಎಂದು ಅವನನ್ನು ಅಂತಃಪುರದ ಮಹಿಳಾಮಂಡಳ ಮಧ್ಯದಿಂದ ಹಗುರಾಗಿ ಹಾರಿಸಿಕೊಂಡು, ಅದೃಶ್ಯರೂಪದಿಂದ ಎತ್ತಿಕೊಂಡು ಆಕಾಶಮಾರ್ಗದಿಂದ ಹೊರಟಳು. ಸಿದ್ಧಗಂಧರ್ವದೇವ ಮುನಿಗಳಿಂದ ತುಂಬಿದ ಮುಗಿಲಿನ ಅಗಲವನ್ನೆಲ್ಲ ಹಾಯಾಗಿ ಹಾರಿ ಹಾಯಿಯಾಗಿ ತೇಲಿಸಿಗೊಂಡು ರಹಸ್ಯವಾಗಿ ಶೋಣಿತಪುರಕ್ಕೆ ಬಾಣನರಮನೆಯಲ್ಲಿಯ ಉಷೆಯ ಮಂದಿರಕ್ಕೆ ತಂದು ಇಳಿಸಿದಳು.

ಕನಸಿನಲ್ಲಿ ಕೊನರಿ, ಮನಸಿನಲ್ಲಿ ಬೆಳೆದು, ಹೃದಯ ತುಂಬಿ ನಿಂತ ತನ್ನ ನಲ್ಲ ಒಮ್ಮೆಲೆ ಕಣ್ಣೆದುರೇ ಬಂದು ನಿಂತದ್ದನ್ನು ನೋಡಿ ಉಷೆಗೆ ತನ್ನ ಕಣ್ಣನ್ನು ತಾನೇ ನಂಬದಂತಾಯಿತು. ಆದರೆ ಅವನ ಅದೇ ರೂಪ, ಅದೇ ಕಾಂತಿ, ಅದೇ ಮಂದಹಾಸ ಸುಂದರವಾದ ಮುಖ, ಅದೇ ನಿಲವು, ಅದೇ ಚೆಲುವು, ಕನಸಿನಿಂದ ಎದ್ದು ಬಂದಂತೆ, ಚಿತ್ರದಿಂದ ಚೈತನ್ಯಗೂಡಿ ಚಿಮ್ಮಿದಂತೆ ಮುಂದೆನಿಂತಾಗ ಅವಳ ಕಣ್ಣಲ್ಲಿ ಕೌತುಕ, ಮುಖದಲ್ಲಿ ಮುಗುಳು, ಎದೆಯಲ್ಲಿ ದುಗುಡ, ಹಣೆಯಲ್ಲಿ ಬೆವುರು, ಗಲ್ಲದಲ್ಲಿ ಲಾಲಿಮೆ, ನೋಟದಲ್ಲಿ ಸೆಳಕು, ಅಂಗದಲ್ಲಿ ವೈಯ್ಯಾರ, ಭಂಗಿಯಲ್ಲಿ ಒನಪು, ಸರ್ವಾಂಗದಲ್ಲಿ ಸಂಭ್ರಮಗಳು ಮೂಡಿ ನಿಂತವು. ಏನು ಮಾತನಾಡಬೇಕೋ ತಿಳಿಯದೇ ಮೂಕ ಸ್ವಾಗತವಿತ್ತು, ಕುಡಿನೋಟದದ ಆತಿಥ್ಯ ನೀಡಿ, ಮಂದಹಾಸದ ಮಧುಪರ್ಕವಿತ್ತು. ತನ್ನ ಶರೀರಸೌಂದರ್ಯವನ್ನು ಅವನ ದೃಷ್ಟಿ ಪ್ರಸಾದಕ್ಕೆ ಎಡೆ ನೀಡಿದಳು. ಅನಿರುದ್ಧನಾದರೂ ಅಪ್ರಾಕೃತ ಅಮಾನುಷ ಅಪಾರ್ಥಿವ ಅಸಾಮಾನ್ಯವಾದ ಅವಳ ಸೌಂದರ್ಯ ಸಾರಸ್ವಾರಸ್ಯವನ್ನು ಅಪಲಕವಾದ ಕಣ್ಣಿನ ಕುಡಿಕೆಗಳಿಂದ ಕುಡಿಕುಡಿದು ತೃಪ್ತಿ ತಣಿವುಗಳಿಲ್ಲದೇ ಮನಃಕೋಶದಲ್ಲಿಯೂ ತುಂಬಹತ್ತಿದನು. ಅವನ ಈ ಅನಿಮಿಷ ನಯನ ನಿರೀಕ್ಷಣೆಯಿಂದ ನಸುನಾಚಿದಂತಾದ ಉಷೆ ಅಲ್ಲಿಯೇ ಪಕ್ಕದಲ್ಲಿದ್ದ ಮತ್ತು ಮನದನ್ನನ ಮಧುರಮಿಲಕ್ಕೆ ಮುಖ್ಯ ಕಾರಣೀಭೂತಳಾದ ಚಿತ್ರಲೇಖೆಯನ್ನು ಭರದಿಂದ ಬಂದು ಬಿಗಿಯಾಗಿ ಅಪ್ಪಿಕೊಂಡಳು.

ಮತ್ತು 'ಸಖಿ, ನನ್ನ ಪ್ರಾಣಕಾಂತನು ಇಲ್ಲಿಗೆ ಬಂದ ಸಮಾಚಾರ ಮಾತ್ರ ಇಲ್ಲಿ ಯಾರಿಗೂ ಗೊತ್ತಾಗದಂತೆ ನಾವು ಎಚ್ಚರ ವಹಿಸಬೇಕು. ಗುಟ್ಟು ರಟ್ಟಾದರೆ ಎಲ್ಲವೂ ಘಾತವಾಗಿ ಹೋಗುವದು'' ಎಂದು ತನ್ನ ಭಯವನ್ನು ಪ್ರದರ್ಶಿಸಿದಳು.

ಅದಕ್ಕೆ ಚಿತ್ರರೇಖೆಯು ''ನಿಮ್ಮೀರ್ವರ ಈ ಮೇಲನ ದೇವೀ ಪ್ರಸಾದದಿಂದ ನಡೆಯಲಿದೆ. ಇದಕ್ಕೆ ಯಾವ ತೊಂದರೆಯೂ ಬರುವುದಿಲ್ಲ'' ಎಂದು ಆಶ್ವಾಸನೆಯನ್ನಿತ್ತು ಉಷೆಯನ್ನು ಸಂತೈಸಿದಳು. ಮುಂದೆ ಉಷಾಕುಮಾರಿಯು ಏಕಾಂತದಲ್ಲಿ ತನ್ನ ಮನಃಕಾಂತನಾದ ಕಾಮಕುಮಾರನಿಗೆ ಮೃದು ಮಧುರವಾದ ಮಾತಿನಿಂದ ''ಪ್ರಭು! ಕನಸಿನ ಕಳ್ಳರಾದ ನೀವು ಇಂದು ನನ್ನ ಕೈಯಲ್ಲಿ ಸಿಕ್ಕಂತಾಯಿತು. ತಮಗೆ ಮಾರ್ಗಾಯಾಸದಿಂದ ಬಳಲಿಕೆ ಯಾಗಿದ್ದರೆ ಈ ದಾಸಿಯು ತಮ್ಮ ಸೇವೆಗೆ ಸದಾ ಸಿದ್ಧಳು. ಅಪ್ಪಣೆ ಕೊಡಬೇಕು'' ಎಂದು ವಂದಿಸಿ ನಿಂತಳು. ಅವಳ ನಯ, ವಿನಯ, ಸೌಜನ್ಯ, ಶಾಲೀನತೆಗಳು ಮೊದಲೇ ಅವಳ ಸೌಂದರ್ಯ ಮುಗ್ಧನಾದ ಅನಿರುದ್ಧನ ಹೃದಯದಲ್ಲಿ ರಾಗರಸವನ್ನು ಉಕ್ಕಿಸಿ ಸ್ನೇಹ ಪಾಶದಿಂದ ಬಂಧಿಸಿದ್ದವು. ಆಗ ಅವನು ಮೆಲ್ಲನೆ ಅವಳ ಹತ್ತಿರ ಬಂದು ತನ್ನ ಮೃದುಳ ತರಳವಾದ ಬೆರಳುಗಳಿಂದ ಅವಳ ಕಣ್ಣಿನಂಚಿನಲ್ಲಿ ತುಳುಕಿನಿಂದ ಆನಂದ ಬಾಷ್ಪದ

ತಂಪನಿಗಳನ್ನು ಮೃದುವಾಗಿ ಒರಿಸಿ ''ಪ್ರಿಯೆ, ಮಹಾದೇವಿಯ ಅನುಗ್ರಹದಿಂದ ನನ್ನ ಕನಸು ಇಂದು ನನಸಾಗಿದೆ. ನನ್ನ ಕಲ್ಪನೆಯ ಕನ್ನೆ ಇಂದು ಮನದನ್ನೆಯಾಗಿ ಮುಂದೆ ಬಂದು ನಿಂತದ್ದು ನನ್ನ ಸುದೈವವೇ ಸರಿ. ನಿನ್ನ ಪ್ರೀತಿಗಾಗಿ ನಾನು ನನ್ನ ದೇಶ ಮನೆ ಮಾರುಗಳನ್ನೆಲ್ಲ ತೊರೆದು ಬಂದಿದ್ದೇನೆ'' ಎಂದು ಹೇಳಿದನು.

ಆ ಬಳಿಕ ಅವರಿಬ್ಬರೂ ಗುಪ್ತವಾದ ಒಂದು ಸಂಕೇತ ಸ್ಥಾನಕ್ಕೆ ಹೋಗಿ ಗಾಂಧರ್ವ ವಿಧಿಯಿಂದ ವಿವಾಹವಾಗಿ ಚಕ್ರವಾಕ ಮಿಥುನಗಳಂತೆ ಶೃಂಗಾರಿತವಾದ ಸಜ್ಜೆಮನೆಯಲ್ಲಿ ಸುಖ ಸಂಗಮವನ್ನು ಹೊಂದಿದರು. ಅಂದಿನ ರಸರಾತ್ರಿಯಲ್ಲಿ ಅವರ ಸ್ವಪ್ನಾಲೋಕದ ಕಲ್ಪನಾ ಕುಂಜಗಳಲ್ಲೆಲ್ಲ ಸತ್ಯ ಸಾಕಾರಸೌಂದರ್ಯದಿಂದ ತಾನೇ ತಾನಾಗಿ ವಿಜೃಂಭಿಸುತ್ತಿತ್ತು.

ಅಂತಃಪುರದಲ್ಲಿ ದಿವ್ಯವಾದ ದೀಪ್ತಕಾಂತಿ, ಅಮಾನುಷ ಸೌಂದರ್ಯಗಳಿಂದ ಕಂಗೊಳಿಸುವ ತರುಣ ಯದುಕುಮಾರನೊಬ್ಬ ಉಷೆಯೊಂದಿಗೆ ರಹಸ್ಯವಾಗಿ ವಿಹರಿಸುತ್ತಲಿದ್ದಾನೆಂಬ ಸಮಾಚಾರ ಗುಪ್ತಚಾರರ ಮುಖಾಂತರ ಬಾಣಾಸುರನಿಗೆ ತಿಳಿದು ಬಂದಿತು. ತಕ್ಷಣದಲ್ಲಿ ಕೋಪೋತ್ತಾಪಗಳಿಂದ ಕುದಿದ ಹೋದ ಬಾಣೇಶ್ವರನು ''ಕೂಡಲೇ ಆ ಯದುಕುಲಾಂಗಾರನನ್ನು ಹಿಡಿಯಿರಿ ಹಿಡಿಯಿರಿ ಬಡೆಯಿರಿ. ಕಡಿಯಿರಿ ಕೊಲ್ಲಿರಿ'' ಎಂದು ಆಕ್ರೋಶಮಾಡುತ್ತ ಆದೇಶಗೈದನು.

ಆಗ ಭೀಕರ ಶಸ್ತ್ರಾಸ್ತ್ರಗಳನ್ನು ಧರಿಸಿದ ಭೀಷಣ ರಾಕ್ಷಸರು ಕನ್ಯಾಂತಃಪುರದಲ್ಲಿ ತನ್ನ ರಮಣೀಮಣಿಯಾದ ರಾಜಕುಮಾರಿಯೊಂದಿಗೆ ಸ್ವಚ್ಛಂದ ಮಧುಚಂದ್ರದ ಆನಂದವನ್ನು ಭೋಗಿಸುತ್ತಲಿರುವ ಯಾದವ ವೀರನ ಮೇಲೆ ಏರಿ ಹೋದರು. ಆಗ ಪತಿಪ್ರಾಣಳಾದ ಸುಕುಮಾರಾಂಗಿ ಉಷೆಯು ತನ್ನ ಪ್ರಿಯಕರನ ಮೇಲೆ ಬಂದ ಪ್ರಾಣ ಸಂಕಟವನ್ನು ಕಂಡು ಶೋಕವಿಪ್ಲವಳಾಗಿ ವಿಲಪಿಸಹತ್ತಿದಳು. ಆಗ ಉತ್ಸಾಹಭರಿತನಾದ ಅನಿರುದ್ಧನು 'ಪ್ರಿಯೆ, ಕ್ಷತ್ರಿಯಾಣಿಯರಾದ ವೀರವನಿತೆಯರು ಇಂಥ ಸಂಗ್ರಾಮ ಸಂದರ್ಭ ಬಂದಾಗ ಸುವರ್ಣಸಂಧಿ ಬಂದಂತೆ ಹುರುಪಿನಿಂದ ಹಿಗ್ಗಿ ನಲಿಯಬೇಕು. ನೀನು ರಾಜಕನ್ಯೆ ಇದ್ದು ಈಗ ರಾಜರಮಣಿಯಾಗಿ ಹೀಗೇಕೆ ಶೋಚಿಸುವಿ? ಈ ಬಾಣಾಸುರನ ಸಕಲ ಸೇನೆಯು ನನ್ನ ಮೇಲೆ ಏಕಕಾಲಕ್ಕೆ ಏರಿಬಂದರೂ ನನಗೇನೂ ಭಯವಿಲ್ಲ'' ಎಂದು ಹೇಳಿ ಶಸ್ತ್ರಹಿರಿದು ಬದ್ಧ ಭ್ರುಕುಟೀಭಂಗ ಭೀಷಣನಾಗಿ ಭೈರವನಂತೆ ಕೆರಳಿ ನಿಂತನು.

ಸಾವಿರದೋಳುಗಳಿಂದ ಬಾಣನು ಬಿಟ್ಟ ಸಾವಿರ ಬಾಣಗಳ ಧಾರಾಸಂಪಾತವನ್ನು ಬರೀ ಖಡ್ಗಪಾಣಿಯಾದ ಅನಿರುದ್ಧನು ಢಾಲು ಮುಂದೆ ಮಾಡಿ ನಿವಾರಿಸಿದನು. ಖಂಬೀರ ವೀರನಂತೆ ಸಿಂಹನಾದ ಮಾಡುತ್ತ ವೈರಿಯ ಮೇಲೆ ಬಿಟ್ಟ ಬಾಣದಂತೆ ಬಿರುಸಿನಿಂದ ಏರಿಹೋದನು. ಆಗ ಅಭಿಭೂತನಂತಾದ ಆ ದೈತ್ಯಯೂಥಪತಿಯು ಖಡ್ಗಮಾತ್ರ ಸಹಾಯನಾದ ಆ ಸುಕುಮಾರ ಕುಮಾರನ ಮೇಲೆ ಬಾಣ ಬರ್ಚಿ, ಖಡ್ಗ, ಶೂಲ, ಗದಾ, ಪರಿಘ, ಪಟ್ಟಿಶ, ಮುಸಲ ಮೊದಲಾದ ಎಲ್ಲ ಬಗೆಯ ಆಯುಧಗಳನ್ನು ಪ್ರಯೋಗಿಸಿ ಹೊಡೆಯಹತ್ತಿದನು. ಇಷ್ಟೆಲ್ಲ ಘೋರಾಸ್ತ್ರಗಳನ್ನು ಬಿಟ್ಟು ಮೇಲೆ ಬಾಣಗಳ ಮಳೆಗರೆದರೂ ಆ ಭೂಪ ಚಲಿಸಲಿಲ್ಲ. ಚಪಲತನದಿಂದ ಅವೆಲ್ಲವುಗಳನ್ನು ನಿವಾರಿಸಿ ಮತ್ತೆ ಚಿಗರೆಯಂತೆ ಜಿಗಿದು, ಸಿಂಹದಂತೆ ಗರ್ಜಿಸಿ, ಬಾಣಾಸುರನ ರಥಕ್ಕೆ ಹಾರಿ, ಅವನ ಸಾರಥಿಯನ್ನು ಕೊಂದು, ಕುದುರೆಗಳನ್ನು ಕಡಿದು ಹಾಕಿ ಧ್ವಜವನ್ನು ಕತ್ತರಿಸಿ ರಥವನ್ನು ಪುಡಿಗಟ್ಟಿ, ಬಾಣನ ನಡುನೆತ್ತಿಗೆ ಏಟಹಾಕಿದನು. ಆಗ ಕ್ರೋಧ ಮೂರ್ಛಿತನಾದಂತಾದ

ಬಾಣನು ಎದ್ದು ಸಾವರಿಸಿಗೊಂಡು ತನ್ನ ಶಕ್ತಿ ಸಾಮರ್ಥ್ಯಗಳನ್ನೆಲ್ಲ ಕೇಂದ್ರೀಕರಿಸಿ ಉರಿಯುವ ಶಕ್ತ್ಯಾಯುಧವನ್ನು ಪ್ರಯೋಗಿಸಿದನು. ಆಗ ಅನಿರುದ್ಧನು ಪ್ರಜ್ವಲಿಸುತ್ತ ಬರುತ್ತಲಿರುವ ಆ ಶಕ್ತಿಯನ್ನು ಎರಡೂ ಕೈಯಿಂದ ಹಿಡಿದು ತಿರುಗಿ ಬಾಣಾಸುರನ ಮೇಲೆಯೇ ಪ್ರಯೋಗಿಸಿದನು. ಆಗ ಅದು ಜ್ವಾಲಾಮಾಲಾಗಳನ್ನೆ ಉಗುಳುತ್ತ ಜೋರಿನಿಂದ ತಿರುಗಿಬಂದು ಬಡೆದಿದ್ದರಿಂದ ಬಾಣನು ಮೂರ್ಛಿತನಾಗಿ ಬಿದ್ದನು.

ಆಗ ಅನಿರುದ್ಧನು ಸಿಂಹನಾದ ಮಾಡಹತ್ತಿದಾಗ ಬಾಣಾಸುರನ ಮಂತ್ರಿಯಾದ ಕುಭಾಂಡನು ತನ್ನ ರಾಜನಿಗೆ ಶೈತ್ಯೋಪಚಾರ ಮಾಡಿ ಎದ್ದು ಕೂಡಿಸಿ ಬಳಿಕ "ರಾಜನ್, ಇವನು ಸಾಮಾನ್ಯ ಮಾನವನಲ್ಲ. ಹೀಗೆ ನೀನು ಸರಳ ಯುದ್ಧ ಮಾಡುತ್ತ ನಿಂತುಕೊಂಡರೆ ಇವನು ಎಲ್ಲರನ್ನೂ ಸಂಹರಿಸಿ ಬಿಡುವನು. ಆದುದರಿಂದ ಮಾಯಾಯುದ್ಧವನ್ನು ಹೂಡಿ ಇವನನ್ನು ಗೆಲ್ಲು" ಎಂದು ಸಲಹೆಯನ್ನು ನೀಡಿದನು. ಅದನ್ನು ಮನ್ನಿಸಿ ಆ ದೈತ್ಯರಾಜನು ಮಾಯಾ ಯುದ್ಧವನ್ನು ಮಾಡಬೇಕೆಂದು ನಿರ್ಧರಿಸಿ ರಣದಿಂದ ರಥ ಕುದುರೆ ಸಾರಥಿ ಸಹಿತವಾಗಿ ಅಂತರ್ಹಿತನಾಗಿ ನಿಂತುಕೊಂಡು ಮಾಯೆಯಿಂದ ಸರ್ಪಾಸ್ತ್ರವನ್ನು ಬಿಟ್ಟುಬಿಟ್ಟನು. ಅದರಿಂದ ಸರ್ಪಭೂತವಾದ ಸಾವಿರಾರು ಬಾಣಗಳು ಬಂದು ಅನಿರುದ್ಧನ ಶರೀರವನ್ನು ಸುತ್ತುಮುತ್ತು ಮುತ್ತಿ ನಾಗಪಾಶದಿಂದ ಬಲವಾಗಿ ಬಿಗಿದು ಬಿಟ್ಟವು. ಅದರಿಂದ ಅನಿರುದ್ಧನು ಬದ್ಧನಾಗಿ ನಿಶ್ಚೇಷ್ಟನಾಗಿ ನಿರುಪಾಯನಾಗಿ ನಿರ್ವಿಣ್ಣನಾಗಿ ನಿಂತುಕೊಂಡನು. ಆಗ ಗೆಲುವಿನ ನಗೆಯನ್ನು ತುಟಿಯಮೇಲೆ ತೇಲಿಸಿ ಪೌರುಷದ ಆಢ್ಯತೆಯಿಂದ ಬಾಣನು ನುಡಿದನು. "ಕುಭಾಂಡ! ಈ ನಮ್ಮ ಅಪಕಾರಿ ಅಪಚಾರಿ ವ್ಯಭಿಚಾರಿಯಾದ ವೈರಿಯನ್ನು ಈಗಲೇ ಸಂಹರಿಸಿ ಬಿಡು" ಎಂದು.

ಅದಕ್ಕೆ ವಿಚಾರ ವಿಚಕ್ಷಣನಾದ ಕುಭಾಂಡನು ಇಂತೆಂದನು. "ಪ್ರಭು, ಇವನನ್ನು ಕೊಲ್ಲುವುದಕ್ಕಿಂತ ಮೊದಲು "ಇವನಾರು? ಇವನ ಕುಲಗೋತ್ರಗಳೇನು? ವಿಚಾರಿಸು. ದೇವಕುಮಾರನಂತೆ ಅತ್ಯಂತ ಶೂರನೂ ಸುಂದರನೂ ವಿದ್ಯಾವಂತನೂ ಆದ ಇವನು ನಿನ್ನ ಮಗಳೊಂದಿಗೆ ಅವಳ ಸಮ್ಮತಿಯಿಂದಲೇ ಗಾಂಧರ್ವವಿಧಿಯಿಂದ ಮದುವೆಮಾಡಿಕೊಂಡದ್ದರಿಂದ ನಿನ್ನ ಅಳಿಯನಾದ. ಇವನನ್ನು ಕೊಲ್ಲುವುದು ಹೇಗೆ? ಒಮ್ಮೆ ಇವನೊಂದಿಗೆ ವಿಧಿಬದ್ಧವಾಗಿ ಅವಳ ವಿವಾಹವಾದ ಬಳಿಕ ಅವಳನೆಂದೂ ಬೇರೆಯವರಿಗೆ ಕೊಡಲಿಕ್ಕೂ ಬರುವುದಿಲ್ಲ. ಇವನನ್ನು ಬಿಡಲಿಕ್ಕೂ ಬರುವುದಿಲ್ಲ. ಇದೆಲ್ಲವನ್ನು ವಿಚಾರಿಸಿ ಬೇಕಾದರೆ ವಧಿಸು. ಇಲ್ಲವೆ ಪೂಜಿಸು. ನನಗಂತೂ ಇಂಥ ಶೂರ ಧೀರ ವೀರವಿಕ್ರಾಂತನಾದ ವಿದ್ವತ್ ಪ್ರವರನಾದ ವರನನ್ನು ಕೊಂದು, ನಿನ್ನ ಮಗಳ ಸುಖವನ್ನು ಮಣ್ಣುಗೂಡಿಸಿ, ನಿನ್ನ ಬಾಳನ್ನೂ ಗೋಳೀಗೀಡು ಮಾಡುವದಕ್ಕಿಂತ ಇವನಿಗೇ ನಿನ್ನ ಮಗಳನ್ನು ಕೊಟ್ಟು ಮನೆಯಳಿಯನನ್ನು ಮಾಡಿಕೊಂಡು ಅಂತಃಪುರದ ಅತಿಥಿಯನ್ನಾಗಿ ಇಟ್ಟುಕೊಂಡು, ವರಪೂಜೆ ಮಾಡುವದೇ ವಿಹಿತವೆನಿಸುವದು" ಎಂದು ಹೇಳಿದನು. ಆಗ ಬಾಣಾಸುರನು ಅವನ ಯುಕ್ತಿಯುಕ್ತವಾದ ಸೂಕ್ತಸಲಹೆಯನ್ನು ಕೇಳಿ 'ಸರಿ' ಎಂದು ಇಷ್ಟೇ ಹೇಳಿ ಅವನನ್ನು ಕಾಯಲಿಕ್ಕೆ ಜನರನ್ನು ನಿಯಮಿಸಿ ತನ್ನ ಮನೆಗೆ ಹೊರಟು ಹೋದನು. ಆಗ ನಾರದರು ಧಾವಿಸಿ ದ್ವಾರಕೆಗೆ ಬಂದು ಶ್ರೀಕೃಷ್ಣನಿಗೆ ಸಮಾಚಾರವನ್ನು ತಿಳಿಸಹೋದರು. ಇತ್ತ ಉಷೆಯು ನಾಗಪಾಶದಿಂದ ಬಂಧಿತನಾದ ತನ್ನ ಪತಿಯನ್ನು ಕಂಡು ಕಡು ದುಃಖದಿಂದ ಆರ್ತಳಾಗಿ ದೀನಧ್ವನಿಯಿಂದ ರೋದನಮಾಡಹತ್ತಿದಳು. ಆಗ ಪ್ರದ್ಯುಮ್ನ ಕುಮಾರನು

ಅವಳಿಗೆ ''ನೀನೇಕೆ ಇಷ್ಟು ಗಾಬರಿಯಾಗುವಿ, ನಾರದರು ದ್ವಾರಕೆಗೆ ಹೋಗಿದ್ದಾರೆ. ಸುದ್ದಿ ತಿಳಿದ ಕೂಡಲೇ ನನ್ನ ಅಜ್ಜ ಕೃಷ್ಣಪರಮಾತ್ಮನು ಬಂದು ಇವರೆಲ್ಲರನ್ನು ಮರ್ದಿಸಿ ನನ್ನ ಬಂಧ ಮೋಚನಮಾಡುವನು'' ಎಂದು ಸಮಾಧಾನ ಮಾಡಿದನು.

ಮತ್ತು ಇದೇ ವೇಳೆಯಲ್ಲಿ ಅನಿರುದ್ಧನಾದರೂ ಸಕಲ ವಿಧವಾದ ಕುತ್ತು ಆಪತ್ತುಗಳಿಂದ ಭಕ್ತರನ್ನು ಪಾರುಮಾಡಿ ಉದ್ಧಾರಮಾಡತಕ್ಕ ದುರ್ಗಾದೇವಿಗೆ ಶರಣು ಹೋಗಿ ಅನನ್ಯ ಭಕ್ತಿಯಿಂದ ಅವಳನ್ನು ಸ್ತೋತ್ರ ಮಾಡಹತ್ತಿದನು. ಈ ದುರ್ಗಾಸ್ತೋತ್ರದ ಮೊದಲು ಅವನು ಶ್ರೀಮನ್ನಾರಾಯಣನನ್ನು ವಿನಂತಿಸಿ ಆರ್ಯಾಸ್ತವವನ್ನು ಪುರಶ್ಚರಣ ಕ್ರಮದಿಂದ ಪಠಿಸಹತ್ತಿದನು.

**''ಮಹೇಂದ್ರ ವಿಷ್ಣು ಭಗಿನೀಂ ನಮಸ್ಯಾಮಿ ಹಿತಾಯ ವೈ।**
**ಮನಸಾ ಶುದ್ಧ ಭಾವೇನ ಶುಚಿಃ ಸ್ತೋತ್ರೈಕೃತಾಂಜಲಿಃ ॥**
**ಗೌತಮೀಂ ಕಂಸಭಯದಾಂ ಯಶೋದಾನಂದವರ್ಧಿನೀಮ್।**
**ಮೇಧ್ಯಾಂ ಗೋಕುಲಸಂಭೂತಾಂ ನಂದಗೋಪಸ್ಯ ನಂದಿನೀಮ್ ॥**
**ಪ್ರಾಜ್ಞಾಂ ದಕ್ಷಾಂ ಶಿವಾಂ ಸೌಮ್ಯಾಂ ದನು ಪುತ್ರವಿಮರ್ದಿನೀಂ।**
**ತಾಂ ದೇವೀಂ ಸರ್ವದೇಹಸ್ಥಾಂ ಸರ್ವಭೂತ ನಮಸ್ಕೃತಾಮ್ ॥**

ಎಂದು ಮುಂತಾಗಿ ಸ್ತೋತ್ರ ಮಾಡಿದನು. (ಈ ಗ್ರಂಥದ ಕೊನೆಯಲ್ಲಿ ಅನಿರುದ್ಧ ಕೃತ ದುರ್ಗಾಸ್ತೋತ್ರದ ಪೂರ್ತಿಪಾಠವನ್ನು ಕೊಡಲಾಗಿದೆ)

ಅನಿರುದ್ಧನ ಈ ಭಕ್ತಿ ಭಾವಭರಿತವಾದ ಈ ಪ್ರಸ್ತುತ ಸಂಸ್ತುತಿಯಿಂದ ದುರ್ಗಾದೇವಿಯು ಅತ್ಯಂತ ಪ್ರಸನ್ನಳಾಗಿ ಅನಿರುದ್ಧನ ಕಣ್ಣಿಗೆ ಪ್ರತ್ಯಕ್ಷಳಾದಳು. ಮಗು ಅನಿರುದ್ಧನ ನಾಗಪಾಶ ಬಂಧನದ ಬಿಗಿಯನ್ನು ಕಂಡು ಅವಳ ತಾಯ್ತಿರುಳು ಕರಗಿ ಹೋಗಿ ಸ್ವಯಂ ಆ ದೇವಿಯೇ ಧಾವಿಸಿ ಬಂದು ಅವನ ಮೈಗೆ ಕಟ್ಟಿದ ಆ ಪಾಶಗಳನ್ನೆಲ್ಲ ಸ್ವತಃ ತಾನೇ ತನ್ನ ಬೆರಳುಗುರಿನಿಂದ ಬಿಡಿಸಿ ಚಟ ಚಟ ಹರಿದು ಬಂಧಮುಕ್ತನನ್ನಾಗಿ ಮಾಡಿದಳು. ಆದರಿಂದ ಮುಕ್ತನಾದ ಅನಿರುದ್ಧನು ಎದ್ದುನಿಂತು ದೇವಿಯನ್ನು ನಮಿಸಿ ಪೂಜಿಸಿ ಪ್ರಾರ್ಥನೆಯನ್ನು ಸಲ್ಲಿಸಿದನು. ಆಗ ದೇವದೇವಿಯು ಕೈಮುಗಿದು ಕೊಂಡು ನಿಂತ ಆ ಯದುಕುಮಾರನಿಗೆ ''ವತ್ಸ! ಶ್ರೀಕೃಷ್ಣನು ಬೇಗನೆ ಬಂದು ಬಾಣನನ್ನು ಗೆದ್ದು ನಿನ್ನನ್ನು ಬಂಧನದಿಂದ ಬಿಡುಗಡೆ ಮಾಡುವನು'' ಎಂದು ಹೇಳಿ ಅನುಗ್ರಹಿಸಿ ಅದೃಶ್ಯಳಾದಳು.

ಇತ್ತ ಅನಿರುದ್ಧನನ್ನು ಅಂತಃಪುರದ ಚಂದ್ರಶಾಲೆಯಿಂದ ಚತುರಳಾದ ಚಿತ್ರರೇಖೆಯು ಚೌರ್ಯ ಚಾತುರ್ಯದಿಂದ ಒಮ್ಮೆಲೆ ರಾತ್ರಿಯಲ್ಲಿಯೇ ಅಪಹರಿಸಿಗೊಂಡು ಹೋದಕೂಡಲೇ ರುಕ್ಮಿಣಿಯ ಅರಮನೆಯಲ್ಲಿ ಸ್ತ್ರೀರೋದನದ ಕೋಲಾಹಲವೆದ್ದಿತು. ಆಗ ಕೇಶವನು ಅನಿರುದ್ಧನನ್ನು ಹುಡುಕಲಿಕ್ಕೆ ಗುಪ್ತಚಾರರನ್ನು ದಶದಿಕ್ಕುಗಳಿಗೂ ಕಳಿಸಿದನು. ಎಲ್ಲಿಯೂ ಪತ್ತೆಯಾಗದೇ ಚಾರರೆಲ್ಲರೂ ವಿಷಣ್ಣವದನರಾಗಿ ತಿರುಗಿ ಬಂದರು.

ಹೀಗೆಲ್ಲ ಯಾದವರು ನಿರಾಶರಾಗಿ ಗಲಿತಗರ್ವರಾಗಿ ನಿರ್ವಿಣ್ಣರಾಗಿ ಖಿನ್ನವಿಷಣ್ಣ ವದನದಿಂದ ಜೋಲು ಮಾರಿ ಹಾಕಿಕೊಂಡು ಕುಳಿತುಕೊಂಡಾಗ ಒಂದು ದಿನ ಪ್ರಾತಃಕಾಲದಲ್ಲಿ ನಾರದರು ನಗುನಗುತ್ತ ದ್ವಾರಕೆಯನ್ನು ಪ್ರವೇಶಿಸಿದರು. ಆಗ ಸೋತ

ಸಪ್ಪಗಿನ ಮುಖದಿಂದ ಕೃಷ್ಣನು ಬಂದು ನಾರದರನ್ನು ಪೂಜಿಸಲಾಗಿ ನಾರದರು ಯಾದವರ ವಿಷಾದದ ಕಾರಣವನ್ನು ಕೇಳಿದರು. ಆಗ ಕೃಷ್ಣನು ಅನಿರುದ್ಧಾಪಹರಣದ ಸಮಾಚಾರವನ್ನು ತಿಳಿಸಿ ''ದಿಗ್ದೇಶಗಳನ್ನೆಲ್ಲ ಹುಡುಕಾಡಿದರೂ ಅವನ ಸುದ್ಧಿಯೇ ಇಲ್ಲ. ನಿಮಗೇನಾದರೂ ಗೊತ್ತುಂಟೇ? ಎಂದು ಕೇಳಿದನು. ಆಗ ನಾರದರು ಶೋಣಿತ ಪುರದಲ್ಲಿ ನಡೆದ ಸಮಾಚಾರವನ್ನೆಲ್ಲ ಸಾದ್ಯಂತ ವಿವರಿಸಿ ಈಗ ಸಕುಟುಂಬನಾದ ಅನಿರುದ್ಧನು ಕಾರಾಗೃಹ ನಿರುದ್ಧನಾಗಿ ಕುಳಿತಿರುವನು ಎಂದು ಹೇಳಿದರು.

ಅದನ್ನು ಕೇಳಿ ಶ್ರೀಕೃಷ್ಣನು ಸೇನಾ ಸನ್ನಾಹದೊಂದಿಗೆ ಸಿದ್ಧನಾಗಿ ಗರುಡನನ್ನು ಕರೆಯಿಸಿಕೊಂಡು ಅವನ ಮೇಲೆ ಕುಳಿತು ಬಾಣಾಸುರನ ರಾಜಧಾನಿಗೆ ಬಂದನು. ಮತ್ತು ಶೋಣಿತಪುರದ ಹೆಬ್ಬಾಗಿಲದಲ್ಲಿ ನಿಂತು ಪಾಂಚಜನ್ಯವನ್ನು ಊದಿದಾಗ ಬಾಣಾಸುರನು ತನ್ನ ಪ್ರಚಂಡ ಸೇನೆಯೊಂದಿಗೆ ಯುದ್ಧಕ್ಕೆ ಅಣಿಯಾಗಿ ಬಂದನು. ಇದಕ್ಕೂ ಮೊದಲು ಉರಿಯುವ ಜ್ವಾಲೆಗಳಿಂದ ಯಾದವರನ್ನೆಲ್ಲ ಕಬಳಿಸ ಬಂದ ಆಹವನೀಯಾಗ್ನಿಯ ಕೆನ್ನಾಲಿಗೆಗಳನ್ನು ಗರುಡನು ಆಕಾಶ ಗಂಗೆಯ ನೀರನ್ನು ಕುಡಿದು ಬಂದು ಉಗುಳಿ ಶಾಂತ ಪಡಿಸಿದನು. ಆ ಬಳಿಕ ಕೃಷ್ಣಪಕ್ಷೀಯರಾದ ಬಲರಾಮ ಮೊದಲಾದವರನ್ನು ಸುಡಲು ಬಂದ ಮಾಹೇಶ್ವರಜ್ವರವನ್ನು ಭಗವಾನ್ ಮುಕುಂದನು ಸೋಲಿಸಿ ಕೊನೆಗೆ ಕರುಣಿಸಿ ಕಳಿಸಿದನು. ಹೀಗೆ ಮಹಾಪ್ರಚಂಡವಾದ ಜ್ವರವು ಪರಾಭೂತವಾದದ್ದನ್ನು ಕಂಡು ಬಾಣಾಸುರನ ಸೈನ್ಯವೆಲ್ಲ ದಿಕ್ಕೆಟ್ಟು ಓಡಹತ್ತಿತು. ಅದನ್ನು ಕಂಡು ಕುಭಾಂಡನು ''ಎಲೋ ಸೈನಿಕರೇ! ಬಾಣನ ಪಕ್ಷದಲ್ಲಿ ಸಾಕ್ಷಾತ್ ಮಹಾರುದ್ರದೇವರು ಹಾಗೂ ಸ್ಕಂದ ಇರುವಾಗ ನೀವೇಕೆ ಇಷ್ಟು ಗಾಬರಿಯಾಗಿ ಓಡಿ ಹೋಗುತ್ತಲಿರುವಿರಿ'' ಎಂದು ಹೇಳಿ ತಡೆದು ನಿಲ್ಲಿಸಿ ಹುರುಪು ತುಂಬಲು ಪ್ರಯತ್ನಿಸಿದನು. ಅದರಂತೆ ಸ್ವಯಂ ಬಾಣನಾದರೂ ತನ್ನ ಸೈನಿಕರಿಗೆ ಪ್ರಶಂಸಾಪಾರಿತೋಷಿಕಗಳ ಆಮಿಷ ತೋರಿಸಿ ಯುದ್ಧದಲ್ಲಿ ನಿಲ್ಲಿಸಲು ಪ್ರಯತ್ನಿಸಿದನು. ಆದರೆ ಕೃಷ್ಣ ಪ್ರದ್ಯುಮ್ನ ಬಲರಾಮ ಮೊದಲಾದ ಯದುವೀರರ ರೌದ್ರ ರೂಪವನ್ನು ಕಂಡು ಏನು ಹೇಳಿದರೂ ಕೇಳದೇ ದೈತ್ಯರು ದಿಕ್ಕೆಟ್ಟು ಪಲಾಯನ ಪ್ರವಣರಾದರು. ಹೀಗೆ ತನ್ನ ಶಿಷ್ಯನ ಸೇನಾಪರಿವಾರವೆಲ್ಲ ದಿಕ್ಕಾಪಾಲಾಗಿ ಓಡಹತ್ತಿದ್ದನ್ನು ಕಂಡು ಮಹಾದೇವರಿಗೆ ಶ್ರೀಕೃಷ್ಣನ ಮೇಲೆಯೇ ಕೋಪ ಬಂದು ಕೆರಳಿ ನಿಂತು ಯುದ್ಧಕ್ಕೆ ಇಳಿದು ಬಿಟ್ಟರು. ಆಗ ಶಿವ ವಿಷ್ಣುಗಳ ಮಧ್ಯದಲ್ಲಿ ಘನಘೋರವಾದ ಸಂಗ್ರಾಮ ಏರ್ಪಟ್ಟಿತು.

ಆಗ ಬ್ರಹ್ಮದೇವರು ನಡುವೆ ಬಂದು ರುದ್ರದೇವರಿಗೆ ಹೇಳಿ ಭಗವಂತನ ವಿರುದ್ಧ ಹೋದರೆ ಕ್ಷೇಮವಾಗುವದಿಲ್ಲವೆಂದು ಉಪದೇಶಿಸಿದರು. ಅದನ್ನು ಕೇಳಿ ರುದ್ರದೇವರು ಬಂದು ಭಗವಂತನನ್ನು ವಂದಿಸಿದರು. ಆಗ ಪರಮಾತ್ಮನು ಅವರನ್ನು ಸ್ನೇಹದಿಂದ ಆಲಿಂಗಿಸಿಗೊಂಡು ಪ್ರೇಮದಿಂದ ಬೀಳ್ಕೊಟ್ಟನು.

ಮುಂದೆ ಬಾಣಾಸುರನಿಗೂ ಕೃಷ್ಣನಿಗೂ ಯುದ್ಧ ಪ್ರಾರಂಭವಾಯಿತು. ದರ್ಪೋದ್ರಿಕ್ತನಾದ ಆ ದುಷ್ಟದೈತ್ಯನು ಭಯಂಕರವಾದ ರೀತಿಯಿಂದ ಕಾದಹತ್ತಲು ಕುಪಿತನಾದ ಶ್ರೀಕೃಷ್ಣನು ಸುದರ್ಶನ ಚಕ್ರವನ್ನು ಬಿಡಲು ಎತ್ತಿದನು. ಆಗ ಪಾರ್ವತೀದೇವಿಯು ಪರಮೇಶ್ವರನ ಹತ್ತಿರಹೋಗಿ ''ನಿಮ್ಮ ಭೃತ್ಯನು ವಿಷ್ಣುಚಕ್ರದಿಂದ ಸಾಯಲಿರುವನು. ಹೇಗಾದರೂ ಮಾಡಿ ಅವನನ್ನು ರಕ್ಷಿಸಿರಿ'' ಎಂದು ಹೇಳಿದಳು. ಆಗ ಶಿವನು ಬಾಣನ ತಾಯಿ ಲಂಬಾದೇವಿಯನ್ನು ಕರೆದು ಬಾಣನನ್ನು ರಕ್ಷಿಸೆಂದು ಕಳಿಸಿಕೊಟ್ಟನು. ಆಗ ಅವಳು ಬಾಣನ

ಮೇಲೆ ಚಕ್ರಬಿಡಹೊರಟ ಶ್ರೀಕೃಷ್ಣನ ಎದುರು ನಗ್ನಳಾಗಿ ಬಂದು ನಿಂತು ಪುತ್ರ ಭಿಕ್ಷೆಯನ್ನು ಕೊಡಬೇಕೆಂದು ಕೇಳಿಕೊಂಡಳು. ಆ ತಾಯ್ಗುರುಳಿನ ಕರುಣೆಯ ಪ್ರಾರ್ಥನೆಯನ್ನು ಕೇಳಿ ಶ್ರೀಕೃಷ್ಣನು "ಅಮ್ಮ, ನಿನ್ನ ಮಾತಿನಂತೆ ಬಾಣಾಸುರನನ್ನು ನಾನು ಕೊಲ್ಲದಿದ್ದರೂ ಮದೋನ್ಮತ್ತನಾದ ಅವನ ತೋಳುಗಳು ಮಾತ್ರ ಜಗಭಾರವಾದದ್ದರಿಂದ ಅವುಗಳನ್ನು ಕತ್ತರಿಸದೆ ಬಿಡುವದಿಲ್ಲ. ಎರಡು ಕೈಗಳುಳ್ಳ ನಿನ್ನ ಮಗನನ್ನು ಮಾತ್ರ ಉಳಿಸಿ ಬಿಡುತ್ತೇನೆ ಹೋಗು" ಎಂದು ಹೇಳಿ ಕಳಿಸಿದನು. ಮತ್ತು ಬಾಣನನ್ನು ಕುರಿತು "ಹೆಣ್ಣಿನ ಪುಣ್ಯದಿಂದ ಬದುಕಿ ಉಳಿದ ನಿನ್ನ ಶೌರ್ಯಕ್ಕೆ ಧಿಕ್ಕಾರವಿರಲಿ" ಎಂದು ಹೇಳಿ ಸುದರ್ಶನ ಚಕ್ರವನ್ನು ಬಿಟ್ಟನು. ಕ್ಷಣಾರ್ಧದಲ್ಲಿ ಅದು ಉರಿಯುತ್ತ ಬಂದು ಪರ್ಯಾಯವಾಗಿ ಬಾಣಾಸುರನ ಸಾವಿರ ನೀಳ್ದೋಳುಗಳನ್ನೆಲ್ಲ ಸವರಿ ಕಡಿದು ಕತ್ತರಿಸಿ ಒಗೆದು ಎರಡು ತೋಳುಗಳನ್ನು ಮಾತ್ರ ಇಟ್ಟು ಮತ್ತೆ ಕೃಷ್ಣನ ಕೈಯನ್ನು ಅಲಂಕರಿಸಿತು. ಇಷ್ಟಾದರೂ ಅವನ ಮದೋನ್ಮಾದಗಳು ಕಡಿಮೆಯಾಗದೇ ಮತ್ತೂ ದೌಷ್ಟ್ಯದಿಂದ ಗುರು ಗುರಾಡಿಸುವುದನ್ನು ಕಂಡು ಅವನನ್ನು ಸಂಪೂರ್ಣ ಚಕ್ರದಿಂದ ಕೊಂದೇ ಬಿಡಬೇಕೆಂದು ಸುದರ್ಶನವನ್ನೆತ್ತಿದ್ದನು.

ಆದರೆ ಮಹಾದೇವರು ನಡುವೆ ಬಂದು ಭಗವಂತನಿಗೆ "ಪ್ರಭೋ! ಮಧುಕೈಟಭರನ್ನು ಸಂಹರಿಸಿದ ನೀನೇ ಆದಿ ದೇವನಿದ್ದು ನಿನ್ನಿಂದಲೇ ಈ ಚರಾ ಚರ ಪ್ರಪಂಚವು ಸೃಷ್ಟವಾಗಿದೆ. ಕರುಣಾಸಾಗರನಾದ ನೀನು ನನ್ನ ಭೃತ್ಯನಾದ ಈ ಬಾಣನನ್ನು ಕ್ಷಮಿಸಿ ಜೀವದಾನ ಮಾಡು" ಎಂದು ಬೇಡಿಕೊಂಡು ಬಾಣನನ್ನು ಜೀವಂತ ಬಿಡಿಸಿದರು. ಮತ್ತು ಬಾಣಾಸುರನಿಗೆ ಬೇಕಾದ ವರವನ್ನಿತ್ತು ಕರುಣಿಸಿದರು. ಇತ್ತ ಶ್ರೀಕೃಷ್ಣನು ಗರುಡ ನಾರದರೊಂದಿಗೆ ಅನಿರುದ್ಧನನ್ನು ಬಂಧಿಸಿಟ್ಟ ಕಾರಾಗೃಹಕ್ಕೆ ಬಂದನು. ಅಲ್ಲಿ ಗರುಡನು ಪ್ರವೇಶವಾದ ತಕ್ಷಣ ಅನಿರುದ್ಧನ ಮೈಗೆ ಹತ್ತಿದ ನಾಗಪಾಶಗಳೆಲ್ಲ ತಾವಾಗಿ ಕಳಚಿ ಹೋದವು. ಆಗ ಅನಿರುದ್ಧನು ಬಂಧಮುಕ್ತನಾಗಿ ಬಂದು ಭಗವಂತನಿಗೆ ವಂದಿಸಿದನು. ಮತ್ತು ಉಷಾದೇವಿಯೂ ಕೂಡ ವಿನಯದಿಂದ ಬಂದು ಭಗವಂತನಿಗೂ ಹಾಗೂ ಪ್ರದ್ಯುಮ್ನ ಗರುಡರಿಗೂ ಬಾಗಿ ವಂದಿಸಿದಳು.

## ಸುಮುಹೂರ್ತೇ ಸಾವಧಾನ

ಆಗ ಕುಭಾಂಡನು ಎಲ್ಲ ಮದುವೆಯ ಸಿದ್ಧತೆಯನ್ನು ಮಾಡಿಕೊಂಡು ಬಂದನು. ನಾರದರು "ಭಗವನ್, ಉಷಾ ಅನಿರುದ್ಧರ ವಿವಾಹವು ಇಲ್ಲಿಯೇ ವೈಭವದಿಂದ ಜರುಗಲಿ" ಎಂದು ಹೇಳಿದರು. ಅದರಂತೆ ಶೋಣಿತ ಪುರದಲ್ಲಿ ಕುಭಾಂಡನ ನೇತೃತ್ವದಲ್ಲಿ ಅನಿರುದ್ಧ ಉಷಾಪರಿಣಯದ ಸಮಾರಂಭವು ಒಳ್ಳೇ ವಿಜೃಂಭಣೆಯಿಂದ ನೆರವೇರಿತು. ಕೃಷ್ಣನ ಆಜ್ಞೆಯಂತೆ ಇಂದ್ರಾದಿ ದೇವತೆಗಳೂ ಗಂಧರ್ವ ಅಪ್ಸರೆಯರೂ ಬಂದು ಎಲ್ಲ ವ್ಯವಸ್ಥೆ ಮಾಡಿದ್ದರಿಂದ ಮದುವೆಗೆ ಕಳೆಕಟ್ಟಿ ಅಭೂತಪೂರ್ವ ಉತ್ಸವವಾಯಿತು. ಮದುವೆಯು ಮುಗಿದ ಬಳಿಕ ಕೃಷ್ಣ ಬಲರಾಮ ಪ್ರದ್ಯುಮ್ನ ಅನಿರುದ್ಧ ಮೊದಲಾದವರೆಲ್ಲರೂ ಗರುಡನನ್ನು ಏರಿಕೊಂಡು ದ್ವಾರಕೆಗೆ ಹೊರಟರು. ಪಾರ್ವತೀ ದೇವಿಯು ಮಯೂರ ವಾಹನವಾದ ರಥವನ್ನು ಕೊಟ್ಟು ಕುಂಭಾಂಡನ ಮಗಳಾದ ರಾಮಾಳನ್ನೂ ಕೂಡ ಜೋಡುಮಾಡಿ ಉಷೆಯನ್ನು ಗೆಳತಿಯರೊಂದಿಗೆ ದ್ವಾರಕೆಗೆ ಕಳಿಸಿದಳು. ಅನಿರುದ್ಧನು ಸುಖರೂಪವಾಗಿ ಮರಳಿ ದ್ವಾರಕೆಗೆ ಬಂದದ್ದಕ್ಕಾಗಿ ಅಹುಕನು ಮಹೋತ್ಸವವನ್ನು ಆಚರಿಸಲು ಯಾದವರಿಗೆಲ್ಲ ಅಪ್ಪಣೆ ಮಾಡಿದನು. ಅದರಂತೆ ಉಷಾ ಅನಿರುದ್ಧರ ಸ್ವಾಗತಕ್ಕಾಗಿ ಇಡೀ ದ್ವಾರಕಾಪಟ್ಟಣವೇ ಸಾರಣೆ-ಕಾರಣೆ ತೋರಣಗಳಿಂದ ಶೃಂಗಾರಿತವಾಗಿತ್ತು.

## ಗೃಹಿಣಿಯ ಗೃಹಪ್ರವೇಶ

ಮಹಾದೇವಿಯು ಕೊಟ್ಟ ಮಯೂರರಥವನ್ನೇರಿ ಬಂದ ಉಷಾದೇವಿಯನ್ನು ರುಕ್ಮಿಣೀ ಮೊದಲಾದ ಕೃಷ್ಣಕಾಮಿನಿಯರು ಸಂಭ್ರಮದಿಂದ ಸ್ವಾಗತಿಸಿ ಪುರಪ್ರವೇಶ ಮಾಡಿಸಿಗೊಂಡರು. ದೇವಕೀ, ರೋಹಿಣೀ, ಸತ್ಯಭಾಮೆ ಮೊದಲಾದವರು ಅನಿರುದ್ಧನನ್ನು ನೋಡಿ ದುಃಖ-ಸಂತೋಷಗಳು ಎರಡೂ ಉಕ್ಕೇರಿ ಆನಂದ ಬಾಷ್ಪಗಳನ್ನು ಉದುರಿಸುತ್ತ ಅವನನ್ನು ಆಲಿಂಗಿಸಿಕೊಂಡರು. ವಧೂವರರನ್ನು ಪರಮಸಂಭ್ರಮದಿಂದ ಬರಮಾಡಿ ಕೊಂಡು ಉಷಾದೇವಿಯನ್ನು ಇಂದ್ರನ ಅರಮನೆಯಂತಿರುವ ಅನಿರುದ್ಧನ ಭವ್ಯ ದಿವ್ಯವಾದ ಸುಂದರ ಮಂದಿರದಲ್ಲಿ ಪ್ರವೇಶಮಾಡಿಸಿದರು. ಆ ದಿವ್ಯ ಪ್ರಾಸಾದದಲ್ಲಿ ಮನದನ್ನನ ಜೊತೆಗೆ ತನ್ನ ಮನೋನ್ನೀತವಾದ ಮನೋರಥಗಳನ್ನೆಲ್ಲ ಸತ್ಯಸೃಷ್ಟಿಯಲ್ಲಿ ಅನುಭವಿಸುತ್ತ ಉಷೆಯು ಸುಖದಿಂದ ಇರಹತ್ತಿದಳು. ಚಿತ್ರಲೇಖೆಯಾದರೂ ಅಪ್ಸರೋರೂಪವನ್ನು ಧರಿಸಿ ಉಭಯರ ನಿರೋಪ ತೆಗೆದುಕೊಂಡು ಸ್ವರ್ಗಕ್ಕೆ ತೆರಳಿದಳು. ಗೆಳತಿಯರೆಲ್ಲರೂ ಒಬ್ಬೊಬ್ಬರಾಗಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದ ನಂತರ ಉಷೆಯ ಅತ್ತೆಯಾದ ಮಾಯಾವತಿಯು ಮುದ್ದು ಸೊಸೆಯನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಅನ್ನಪಾನ ವಿವಿಧ ವಸ್ತ್ರಾಲಂಕಾರಗಳಿಂದ ಸತ್ಕರಿಸಿದಳು. ನಂತರ ದಿನಕ್ಕೊಬ್ಬ ಯಾದವ ಸ್ತ್ರೀಯರು ಉಷಾದೇವಿಯನ್ನು ತಮ್ಮ ಮನೆಗೆ ಆವ್ಹಾನಿಸಿ ಗೌರವ ಸತ್ಕಾರ ಮಾಡಹತ್ತಿದರು. ಹೀಗೆ ದ್ವಾರಕಾ ಪಟ್ಟಣದ ಸರ್ವಜನ ಪ್ರಿಯಳಾದ ಸುವಾಸಿನಿಯರ ಕಣ್ಮಣಿಯಾಗಿ ನಲ್ಲನ ನೆಚ್ಚಿನ ನಲ್ಲೆಯಾಗಿ ಉಷೆಯು ದ್ವಾರಕೆಯಲ್ಲಿ ವಾಸಮಾಡಿದಳು.

## ಮಂಗಲಾನಾಂ ಚ ಮಂಗಲಂ

ಕೇಶವನ ಈ ದಿವ್ಯವಾದ ಕತೆಯನ್ನೂ ಹಾಗೂ ಅವನ ಮಕ್ಕಳು ಮೊಮ್ಮಕ್ಕಳ ವೈವಾಹಿಕ ಮಂಗಳ ಪ್ರಸಂಗಗಳ ಶುಭ ಸಂದರ್ಭಗಳನ್ನೂ ಕೇಳಿದವರಿಗೆ ಸಂತಾನ ಅಭಿವೃದ್ಧಿಯಾಗಿ ಪುತ್ರ, ಪೌತ್ರ, ಸೌಭಾಗ್ಯ ಪ್ರಾಪ್ತವಾಗುವುದು. ಇಹಲೋಕದಲ್ಲಿ ಸಕಲ ವಿಧವಾದ ಸಂತಾನ ಸಂಪತ್ತು ಸುಖ ಸಮಾಧಾನ ಶಾಂತಿ ತುಷ್ಟಿ ಪುಷ್ಟಿಗಳು ಲಾಭವಾಗುತ್ತವೆ. ಮತ್ತು ಪರಲೋಕದಲ್ಲಿಯೂ ಭಗವದನುಗ್ರಹದಿಂದ ಸರ್ವ ಪಾಪ ಪರಿಹಾರವಾಗಿ ಮೋಕ್ಷ ಪ್ರಾಪ್ತಿಯಾಗುವುದು. ಇದನ್ನು ಓದುವ ಕೇಳುವ ಅಥವಾ ಹೇಳುವ ಬ್ರಾಹ್ಮಣರಿಗೆ ಜ್ಞಾನೋದಯವಾಗುವುದು. ಕ್ಷತ್ರಿಯರಿಗೆ ವಿಜಯ ಸಿಗುವುದು. ವೈಶ್ಯರಿಗೆ ಧನ ಸಮೃದ್ಧಿ ಯಾಗುವದು. ಶೂದ್ರನಿಗೆ ಸಲ ಕಾಮನಾ ಪೂರ್ತಿಯಾಗುವುದು. ಇದನ್ನು ಪಠಿಸಿದವರಿಗೂ ಓದಿದವರಿಗೂ ಅಶುಭ ಅಕಲ್ಯಾಣ ಎಂದಿಗೂ ಆಗದೇ ದೀರ್ಘಾಯುಷ್ಯ, ಆರೋಗ್ಯ, ಐಶ್ವರ್ಯ, ಜ್ಞಾನಭಕ್ತಿ, ವೈರಾಗ್ಯ ಭಗವಂತನ ಪ್ರಸಾದಗಳು ಪ್ರಾಪ್ತವಾಗುವವು.

*ಇಲ್ಲಿಗೆ ಪ್ರಭಾಸ ಖಂಡ ಪೂರ್ಣವಾಗುವುದರೊಂದಿಗೆ*
*ಸ್ಕಂದಮಹಾಪುರಾಣ ಭಾಗ-3 ಸಂಪೂರ್ಣವಾಯಿತು*
*ಸರ್ವೇಜನಾಃ ಸುಖಿನೋ ಭವಂತು*
*ಓಂ ಶಾಂತಿಃ ಶಾಂತಿಃ ಶಾಂತಿಃ*

—o—